ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ–68

ಷಡಕ್ಷರದೇವ ವಿರಚಿತ

# ರಾಜಶೇಖರ ವಿಳಾಸಂ

ಗದ್ಯಾನುವಾದ :

ಪಂಡಿತ ಚನ್ನಪ್ಪ ಎರೇಸೀಮೆ

ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು–18.

1976

**ವಜ್ರಮಹೋತ್ಸವ ವರ್ಷ**

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ–೬೪

## ಷಡಕ್ಷರದೇವ ವಿರಚಿತ

# ರಾಜಶೇಖರ ವಿಳಾಸಂ

ಗದ್ಯಾನುವಾದ :

**ಪಂಡಿತ ಚನ್ನಪ್ಪ ಎರೇಸೀಮೆ**

**ಕನ್ನಡ ಸಾಹಿತ್ಯ ಪರಿಷತ್ತು**

**ಚಾಮರಾಜಪೇಟೆ : : ಬೆಂಗಳೂರು–18.**

**1976**

*Shadaksharadeva Virachita RAJASEKHARA VILASAM*
*Original with Prose rendering by Pandita Channappa Eresime*
*First Published in 1976 by the Kannada Sahitya Parishat,*
*Bangalore-560018 in Commemoration of its Diamond Jubilee,*
*Demy Octavo Pages xiv+873, Price Rs. 15-00*



ಮೊದಲನೆಯ ಮುದ್ರಣ : 1976

ಬೆಲೆ : ಹದಿನೈದು ರೂಪಾಯಿಗಳು



ಪ್ರತಿ ಸಂಪುಟಕ್ಕೆ ಹತ್ತು ರೂಪಾಯಿ ಬೆಲೆಯಂತೆ ಎರಡು ಸಂಪುಟಗಳಲ್ಲಿ ತರಬೇಕಾದ ಈ ಗ್ರಂಥವನ್ನು ಕಡಮೆ ಬೆಲೆಗೆ ಕೊಡುವ ದೃಷ್ಟಿಯಿಂದ 15-00 ರೂ. ಗಳ ಒಂದು ಸಂಪುಟ ದಲ್ಲಿ ಹೊರತರಲಾಗಿದೆ.



ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-560018

ಮುದ್ರಣ : ಶ್ರೀ ಮೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು-570001

# ಪ್ರಸ್ತಾವನೆ

ಕನ್ನಡದ ಪ್ರಾಚೀನ ಕಾವ್ಯ ಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ.ಎ., ಎಂ.ಎ. ಪದವಿ ಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗಲಂತು ಮೂಲಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕ ರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದಮಟ್ಟಿಗೆ ಸುಲಭ ಬೆಲೆ ಯಲ್ಲಿ ದೊರೆಯುವಂತೆ ಮಾಡುವುದು, ಇವು ಆ ಯೋಜನೆಯ ಮುಖ್ಯ ಅಂಶಗಳು.

ಈ ಯೋಜನೆಯ ಕಾರ್ಯನಿರ್ವಹಣೆಗಾಗಿ ಪರಿಷತ್ತು ಮೊದಲು ಅನೇಕ ವಿದ್ವಾಂಸರಿಗೆ ಪ್ರಾರ್ಥನಾ ಪತ್ರಗಳನ್ನು ಕಳಿಸಿ ಯಾವ ಯಾವ ಕಾವ್ಯಗಳನ್ನು ಹೊಸ ಗನ್ನಡಾನುವಾದಕ್ಕೆ ತೆಗೆದುಕೊಳ್ಳಬಹುದು ಎಂದು ತಿಳಿಸುವಂತೆ ಕೇಳಿಕೊಳ್ಳಲಾಯಿತು. ಆ ಪಂಡಿತರ ಸಹಾನುಭೂತಿಯುತವಾದ ಮತ್ತು ಮೆಚ್ಚುಗೆಯ ಸೂಚನೆಗಳು ಬಂದ ಮೇಲೆ ಅನುವಾದಗ್ರಂಥಗಳ ಪಟ್ಟಿಯೊಂದನ್ನು ಪರಿಷತ್ತು ಸಿದ್ಧಪಡಿಸಿತು. ಆ ಪಟ್ಟಿ ಯಲ್ಲಿ ಸುಮಾರು ಅರುವತ್ತಕ್ಕೂ ಮಿಕ್ಕು ಕಾವ್ಯಗಳು ಇದ್ದುವು.

ತರುವಾಯ ಆ ವಿದ್ವಜ್ಜನರ ಒಂದು ಸಭೆಯನ್ನು ದಿನಾಂಕ 23-9-73ನೆಯ ಭಾನುವಾರ ಬೆಳಗ್ಗೆ 10 ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರೆಯಲಾಯಿತು. ಆ ಸಭೆ ಬೆಳಗ್ಗೆಯಿಂದ ಸಂಜೆಯವರೆಗೆ ನಡೆದು ಅನುವಾದ ಕಾರ್ಯದ ವಿಷಯವನ್ನು

ಕುರಿತು ಕೂಲಂಕಷವಾಗಿ ಸಮಾಲೋಚಿಸಿ ಈ ಕೆಳಕಂಡ ತೀರ್ಮಾನಗಳನ್ನು ಕೈ ಗೊಂಡಿತು.

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಅಗತ್ಯ ಕಂಡ ಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳ ತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯ ದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

**ಹಳಗನ್ನಡ :** ವಿಕ್ರಮಾರ್ಜುನವಿಜಯ, ಆದಿಪುರಾಣ, ಗದಾಯುದ್ಧ, ನೇಮಿ ನಾಥಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರಚರಿತೆ, ಅನಂತನಾಥ ಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾಧನೆ, ಗಿರಿಜಾ ಕಲ್ಯಾಣ, ಜಗನ್ನಾಥವಿಜಯ, ಕಬ್ಬಿಗರಕಾವ, ಶಬರಶಂಕರವಿಲಾಸ, ಹರಿಹರನ ರಗಳೆ ಗಳು, ಕೆಳದಿನೃಪವಿಜಯ, ದಮಯಂತೀಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭ ಪುರಾಣ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ, ಅಭಿನವ ದಶಕುಮಾರಚರಿತೆ, ಮಲ್ಲಿ ನಾಥಪುರಾಣ, ರಾಜಶೇಖರ ವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯಸೂರಿಚರಿತೆ.

**ನಡುಗನ್ನಡ :** ಸಿದ್ಧರಾಮಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥಚರಿತೆ, ಭರತೇಶವೈಭವ, ಅನುಭವಾಮೃತ, ಗೀತಗೋಪಾಲ, ಹದಿಬದೆಯಧರ್ಮ, ನಳಚರಿತ್ರೆ, ಅದ್ಭುತರಾಮಾಯಣ, ಚನ್ನಬಸವಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನಚರಿತೆ, ಮೋಹನತರಂಗಿಣಿ.

4. ಅನುವಾದ ಕಾರ್ಯವನ್ನು ನಡೆಸಲು ಪರಿಷತ್ತಿನ ಪ್ರಕಟಣಾ ಸಮಿತಿ ಆಶ್ರಯ ದಲ್ಲಿ ಎರಡು ಅನುವಾದಕ ಮಂಡಲಿಗಳು ಇರತಕ್ಕದ್ದು ; ಒಂದು ಬೆಂಗಳೂರಿನಲ್ಲಿ, ಇನ್ನೊಂದು ಮೈಸೂರಿನಲ್ಲಿ. ಅನುವಾದ ಕಾರ್ಯವನ್ನು ನಡೆಸಿಕೊಡಲು ಒಪ್ಪಿರುವ ಪಂಡಿತರು ಈ ಎರಡು ಅನುವಾದಕ ಮಂಡಲಿಗಳ ಪೈಕಿ ತಮಗೆ ಹತ್ತಿರವಿರುವ ಮಂಡಲಿಯ ಸದಸ್ಯರಾಗಬಹುದು.

5. ಮಂಡಲಿಯ ಸದಸ್ಯರಾದ ಅನುವಾದಕರು ಕನ್ನಡದಲ್ಲಿ ವಿದ್ವಾಂಸರಾಗಿದ್ದು ಆಧುನಿಕರಿಗೆ ಹಿತಕರವಾದ ಹೊಸಗನ್ನಡ ಶೈಲಿಯನ್ನು ಚೆನ್ನಾಗಿ ಬಲ್ಲವರಾಗಿರಬೇಕು. ಅವರಿಗೆ ಹಳಗನ್ನಡ ಮತ್ತು ಸಂಸ್ಕೃತ ಸಾಹಿತ್ಯ ವಾಙ್ಮಯದಲ್ಲಿ ಉತ್ತಮವಾದ ಪರಿಣತಿ

ಇರಬೇಕು. ಒಂದೊಂದು ಅನುವಾದಕ ಮಂಡಲಿಗೂ ಒಬ್ಬೊಬ್ಬ ಅಧ್ಯಕ್ಷರಿದ್ದು ಆ ಮಂಡಲಿಯ ಸಲಹೆಯಂತೆ ಅನುವಾದ ಕಾರ್ಯವು ನಡೆಯತಕ್ಕದ್ದು.

6. ಮೈಸೂರಿನ ಅನುವಾದಕ ಮಂಡಲಿಗೆ ಶ್ರೀ ಕೆ. ವೆಂಕಟರಾಮಪ್ಪ ಅವರು ಅಧ್ಯಕ್ಷರಾಗಿರಬೇಕೆಂದೂ ಬೆಂಗಳೂರಿನ ಅನುವಾದಕ ಮಂಡಲಿಗೆ ವಿದ್ವಾನ್ ಎನ್. ರಂಗನಾಥಶರ್ಮಾ ಅವರು ಅಧ್ಯಕ್ಷರಾಗಿರಬೇಕೆಂದೂ ಪರಿಷತ್ತಿನ ಅಧ್ಯಕ್ಷರು ನೀಡಿದ ಸೂಚನೆಗೆ ಸಭೆ ತನ್ನ ಸಮ್ಮತಿ ನೀಡಿತು.

7. ಒಂದು ತಿಂಗಳಿಗೆ ಕನಿಷ್ಠಪಕ್ಷದಲ್ಲಿ ಮೂರು ಸಲವಾದರೂ ಈ ಅನುವಾದಕ ಮಂಡಲಿಯು ಆಯಾ ಊರಿನಲ್ಲಿ ಸಭೆ ಸೇರಿ ಕಾರ್ಯವಿಧಾನವನ್ನೂ ಕಾರ್ಯಪ್ರಗತಿ ಯನ್ನೂ ಪರಿಶೀಲಿಸತಕ್ಕದ್ದು. ಅನುವಾದ ಕಾರ್ಯದಲ್ಲಿ ಸಂಭವಿಸಬಹುದಾದ ಎಡರು-ತೊಡರು, ಸಂದೇಹಗಳನ್ನು ಪರಸ್ಪರವಾಗಿ ಚರ್ಚಿಸಿ ಪರಿಹರಿಸಿಕೊಳ್ಳತಕ್ಕದ್ದು.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು, ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕತೆಗಳು ಮುಂತಾದವುಗಳ ವಿವರಣೆ ಅನುಬಂಧದಲ್ಲಿ ಇರಬೇಕು. ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಿಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

(ಋ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದನಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯ ಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕಮಂಡಲಿ ಅಧ್ಯಕ್ಷ ಪರಿಷತ್ತಿನ ಅಧ್ಯಕ್ಷರಿಗಾಗಲೀ ಅಥವಾ ಪರಿಷತ್ತಿನ ಪ್ರಕಟಣಾ ಸಮಿತಿ ಪ್ರಧಾನ ಸಂಪಾದಕರಿಗಾಗಲೀ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನ್ನು ಗೊತ್ತುಮಾಡಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಅಥವಾ ಪ್ರಕಟಣಾ ಸಮಿತಿಯ ಪ್ರಧಾನ ಸಂಪಾದಕರು ಪರಿಹರಿಸತಕ್ಕದ್ದು.

(ಏ) ನಿಯಮದಂತೆ ಗ್ರಂಥದ ಅನುವಾದಕಾರ್ಯ ಮುಗಿದಕೂಡಲೆ ಮಂಡಲಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಿಕೊಡತಕ್ಕದ್ದು.

8. ಹೀಗೆ ಅನುವಾದ ಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ. ನಂತೆ ಸಂಭಾವನೆ ನೀಡಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15ರಷ್ಟನ್ನು ಸಂಭಾವನೆಯಾಗಿ ಕೊಡತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು ಮೂಲಪಾಠ ಪರಿಷ್ಕರಣ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಹಸ್ತಪ್ರತಿಯನ್ನು ಸಿದ್ಧಮಾಡಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

9. ಅನುವಾದಕರಿಗೆ ಅನುವಾದ ಕಾರ್ಯಕ್ಕಾಗಿ ಹಣ ಸಂದಾಯವಾದಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ. ಪುಸ್ತಕ ಪ್ರಕಟಣೆಯಾದಮೇಲೆ ಅನುವಾದಕರಿಗೆ ಗೌರವಧನ ನೀಡುವ ಪ್ರಶ್ನೆ ಬರುವುದಿಲ್ಲ. ಪುಸ್ತಕ ಅಚ್ಚಾದಮೇಲೆ ಅನುವಾದಕರಿಗೆ ಆ ಗ್ರಂಥದ ಹತ್ತು ಪ್ರತಿಗಳನ್ನು, ಮಂಡಲಿಯ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನು ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅದಕ್ಕೆ

ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ ಕಾರ್ಯ ಎರಡು ಕಡೆಯೂ ನಡೆಯುತ್ತದೆ. ವಿದ್ವಾಂಸರು ಅನುವಾದಕ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿ ವಹಿಸಿ ಅನುವಾದಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ ಪರಿಷತ್ತಿನ ಪ್ರಕಟಣಸಮಿತಿಯ ಪ್ರಧಾನ ಸಂಪಾದಕರಾದ ಡಾ|| ರಂ. ಶ್ರೀ. ಮುಗಳಿಯವರು ಅಷ್ಟೇ ಮುತುವರ್ಜಿಯಿಂದ ಅನುವಾದಕರಿಗೆ, ಮಂಡಲಿ ಅಧ್ಯಕ್ಷರಿಗೆ, ತಮ್ಮ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸುತ್ತಿದ್ದಾರೆ. ಒಟ್ಟಿನಲ್ಲಿ ಈ ಎಲ್ಲ ವಿದ್ವನ್ಮಣಿಗಳೂ ಇದೊಂದು ಕನ್ನಡ ನುಡಿಯ ಮಹತ್ತರವಾದ ಸೇವೆ ಎಂಬ ಭಾವನೆಯಿಂದ ದುಡಿಯುತ್ತಿದ್ದಾರೆ. ಇವರೆಲ್ಲರಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈಗ 20 ಗ್ರಂಥಗಳ ಅನುವಾದಕಾರ್ಯ ಮುಗಿದು ಅವು ಅಚ್ಚಿಗೆ ಹೋಗಿವೆ. 1977ನೆಯ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಸಂದರ್ಭದಲ್ಲಿ ಈ ಗ್ರಂಥಗಳು ಹೊರಬಿದ್ದು ಸಾರ್ವಜನಿಕರ ಕೈಗೆ ಸೇರುವಂತೆ ಮಾಡಬೇಕೆಂದು ಪರಿಷತ್ತು ನಿಶ್ಚಯಿಸಿದೆ. ಆ ವೇಳೆಗೆ ಈ ಎಲ್ಲ ಗ್ರಂಥಗಳನ್ನು ಮುದ್ರಿಸಿ ಕೊಡುವ ಜವಾಬ್ದಾರಿಯನ್ನು ಮೈಸೂರಿನ ಶ್ರೀ ಮೀರಾ ಪ್ರಿಂಟರ್ಸ್ ಮಾಲಿಕರಾದ ಶ್ರೀ ಕೆ. ಪಿ. ಪುಟ್ಟಸ್ವಾಮಿಯವರು ವಹಿಸಿಕೊಂಡಿದ್ದಾರೆ. ಅದಕ್ಕಾಗಿ ಅವರು ಈ ವರ್ಷ ಬೇರೆ ಯಾವ ಮುದ್ರಣ ಕೆಲಸಗಳನ್ನೂ ತೆಗೆದುಕೊಳ್ಳದೆ ಪರಿಷತ್ತಿನ ಈ ಅನುವಾದ ಗ್ರಂಥಗಳ ಮುದ್ರಣಕ್ಕೇ ವಿಶೇಷ ಗಮನಕೊಟ್ಟಿದ್ದಾರೆ. ಇವರಿಗೆ ಪರಿಷತ್ತು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ಸಾಲದು. ಇಂಥ ಗ್ರಂಥಗಳ ಕರಡಚ್ಚು ತಿದ್ದುವ ಕಾರ್ಯ ಎಷ್ಟು ಕಷ್ಟಕರವಾದುದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇದರ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಉಪನಿರ್ದೇಶಕರಾದ ಶ್ರೀ ಆರ್. ಎಲ್. ಅನಂತರಾಮಯ್ಯನವರು ಮತ್ತು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಹೊತ್ತುಕೊಂಡು ತಮಗಾಗುವ ಅಪಾರ ಶ್ರಮವನ್ನು ಲೆಕ್ಕಿಸದೆ ಪ್ರೀತಿಯಿಂದ ದುಡಿಯುತ್ತಿದ್ದಾರೆ. ಈ ಮಹನೀಯರಿಗೆ ಪರಿಷತ್ತು ತುಂಬಾ ಆಭಾರಿಯಾಗಿದೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಪರಿಷತ್ತಿನ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ. ವಜ್ರಮಹೋತ್ಸವದ ವೇಳೆಗೆ ಬಿಡುಗಡೆಯಾಗಲಿರುವ 20 ಅನುವಾದ ಗ್ರಂಥಗಳಿಗೆ ತಗಲುವ ವೆಚ್ಚ ಸುಮಾರು 4 ಲಕ್ಷ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಅಂದಾಜಿನಂತೆ ಅನುವಾದ ಕೃತಿಗಳ ಬೆಲೆಯನ್ನು ಗೊತ್ತು ಮಾಡುವುದಾದರೆ ಈಗ ಇಟ್ಟಿರುವ ಬೆಲೆಯ ಮೂರು ಅಥವಾ ನಾಲ್ಕುಪಟ್ಟು ಹೆಚ್ಚಾಗು

ತ್ತದೆ. ಅನುವಾದ ಕೃತಿ ಎಷ್ಟೇ ಪುಟವಿರಲಿ 10 ರೂಪಾಯಿಗಳಿಗಿಂತ ಹೆಚ್ಚು ಬೆಲೆ ಇಡಕೂಡದು, ಪುಸ್ತಕದ ಬೆಲೆಯನ್ನು ನೋಡಿಯಾದರೂ ಜನರು ಈ ಗ್ರಂಥಗಳನ್ನು ಕೊಂಡು ಓದಲಿ ಎನ್ನುವ ದೃಷ್ಟಿಯಿಂದ ಉದಾರ ಧನಸಹಾಯಕ್ಕಾಗಿ ಈ ಯೋಜನೆಯನ್ನು ರಾಜ್ಯ ಸರ್ಕಾರದ ಮುಂದಿಡಲಾಯಿತು. ರಾಜ್ಯ ಸರ್ಕಾರ ಅನುವಾದ ಕೃತಿಗಳ ಮಹತ್ವವನ್ನರಿತು ಪರಿಷತ್ತಿನ ಕೋರಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಉಚಿತ ಪ್ರಮಾಣದಲ್ಲಿ ಧನಸಹಾಯ ನೀಡಲು ಒಪ್ಪಿದೆ. ಇದರಿಂದ ಈ ಪುಸ್ತಕಗಳನ್ನು ಸುಲಭ ಬೆಲೆಗೆ ಕೊಡಲು ಸಾಧ್ಯವಾಗಿದೆ. ಈ ಸಹಾಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ನಾಡಿನ ಜನತೆಯ ಪರವಾಗಿ ರಾಜ್ಯ ಸರ್ಕಾರಕ್ಕೆ ತನ್ನ ಅಪಾರ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕನ್ನಡಿಗರು ಈ ಅಮೂಲ್ಯವಾದ ಕೃತಿಗಳನ್ನು ಉತ್ಸಾಹದಿಂದ ಬರಮಾಡಿಕೊಂಡು ಇವುಗಳ ಪೂರ್ಣ ಪ್ರಯೋಜನ ಪಡೆಯಬೇಕೆಂದು ಪರಿಷತ್ತು ಬಯಸುತ್ತದೆ.

ಬೆಂಗಳೂರು

ದಿನಾಂಕ : 2–10–1976

ಗಾಂಧಿ ಜಯಂತಿ

ದೇಶಹಳ್ಳಿ ಜಿ. ನಾರಾಯಣ

ಅಧ್ಯಕ್ಷ

ಕನ್ನಡ ಸಾಹಿತ್ಯ ಪರಿಷತ್ತು

# ಮುನ್ನುಡಿ

ಕನ್ನಡ ಸಾಹಿತ್ಯದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯದ ಸಂರಕ್ಷಣೆಗಾಗಿಯೂ ಕೆಲಸ ಮಾಡಬೇಕಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಭ್ಯಾಸ ಮಾಡಿದವರಿಗೆ ಸಾಹಿತ್ಯದಲ್ಲಿ ವಿವಿಧ ರೀತಿಯ ಆಂದೋಳನಗಳು ನಡೆದಿರುವುದು ಗೋಚರವಾಗದೆ ಇರದು. ಚಂಪೂರೂಪದಲ್ಲಿ ಬರವಣಿಗೆ ಕೆಲವು ಕಾಲ ನಡೆದು ವಚನ, ರಗಳೆ, ಷಟ್ಪದಿ, ಸಾಂಗತ್ಯ ಈ ಮುಂತಾದ ಪ್ರಕಾರಗಳು ತರುವಾಯ ಬಳಕೆಗೆ ಬಂದುದನ್ನು ನಾವು ಖಚಿತವಾಗಿ ಗುರುತಿಸಬಹುದು. ಅಲ್ಲಿಂದ ನವೋದಯದ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಹೊಸ ಛಂದಸ್ಸು 'ಭಾವಗೀತೆ' ಗಳ ಧಾಟಿಯಲ್ಲಿ ಬಂದದ್ದನ್ನೂ ನಾವು ನೋಡುತ್ತೇವೆ. ಈಚೆಗೆ ಮುಕ್ತ ಛಂದಸ್ಸೂ, 'ನವ್ಯ ಕಾವ್ಯ' ದ ಧಾಟಿಯ ಗದ್ಯ ಛಂದಸ್ಸೂ ಬಳಕೆಯಲ್ಲಿವೆ. ಈ ರೀತಿಯ ಮಾರ್ಪಾಡು ಸಾಹಿತ್ಯ ರಚನೆಯಲ್ಲಿ ಅನಿವಾರ್ಯ ಮತ್ತು ಅವಶ್ಯ. ಇದು ಸಾಹಿತಿಗಳ, ಕವಿಗಳ ಪ್ರಗತಿಪರ ಮನೋಭಾವವನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಪ್ರದರ್ಶಿಸುತ್ತದೆ. ಈ ಹೊಸ ದೃಷ್ಟಿ ಮೂಡಿದಂತೆ ಹಳೆಯದರ ಕಡೆ ಜನ ದೃಷ್ಟಿ ಹರಿಸುವುದು ಅಪರೂಪ. ಛಂದಸ್ಸಿನ ಬಗ್ಗೆ ಈ ಮಾತು ಹೇಗೆ ಅನ್ವಯಿಸುತ್ತದೆಯೋ ಹಾಗೆಯೇ ಕಾವ್ಯ ವಸ್ತುವಿಗೂ ಅನ್ವಯಿಸುತ್ತದೆ. ದೇವರು, ಪುರಾಣ, ಶ್ಲೀಲ, ಅಶ್ಲೀಲ, ಈ ವಿಷಯಗಳಲ್ಲಿಯೂ ಜನತೆಯ ಕಲ್ಪನೆ ಮತ್ತು ಅವುಗಳಿಗೆ ನೀಡುವ ಮೌಲ್ಯ ವ್ಯತ್ಯಾಸವಾಗುತ್ತಲೇ ಹೋಗುತ್ತವೆ. ಆ ಹಳೆಯ ಸಾಹಿತ್ಯ ಪ್ರಕಾರಗಳು ಮತ್ತು ವಿಷಯಗಳು ಇಂದಿನ ದೃಷ್ಟಿಗೆ ದಾರಿ ಮಾಡಿಕೊಟ್ಟಿವೆ ಎಂಬುದನ್ನು ನಾವು ಮರೆಯಬಾರದು. ಹೊಸ ಸಾಹಿತ್ಯ ಸೃಷ್ಟಿಯ ಮೋಹದಲ್ಲಿ ಹಳೆಯದು ನಮ್ಮ ಕೈಬಿಟ್ಟು ಹೋಗಬಾರದು ಎಂಬುದನ್ನು ನಾವು ಅರಿಯಬೇಕು. ಏಕೆಂದರೆ ಈಚೆಗೆ ಪಂಪಾದಿ ಕವಿಗಳ ಕಾವ್ಯಾಭ್ಯಾಸ ಪದವಿ ಪರೀಕ್ಷೆಗಳಲ್ಲಿ ಬಿಟ್ಟರೆ ಉಳಿದ ಕಡೆ ಕಡಮೆ ಆಗುತ್ತಿದೆ. ಅದನ್ನು ಉಳಿಸಿಕೊಳ್ಳಬೇಕು, ನಮ್ಮ ಜನಕ್ಕೆ ಅದು ಎಟುಕುವಂತಿರಬೇಕು ಎಂಬ ಉದ್ದೇಶದಿಂದ ಪರಿಷತ್ತು ಹಳಗನ್ನಡ ಕಾವ್ಯಗಳನ್ನು ಹೊಸಗನ್ನಡಕ್ಕೆ ಅನುವಾದಿಸಿ ಮೂಲಪಾಠಗಳೊಡನೆ ಸುಲಭ ಬೆಲೆಗೆ ಕೊಡಲು ಯೋಜನೆಯೊಂದನ್ನು ಹಾಕಿಕೊಂಡಿದೆ. ಇದರ ವಿವರ ಪರಿಷತ್ತಿನ ಅಧ್ಯಕ್ಷರ ಪ್ರಸ್ತಾವನೆಯಲ್ಲಿ ವಿವರವಾಗಿ ಬಂದಿದೆ.

ಹಳಗನ್ನಡ ಕಾವ್ಯಗಳನ್ನು ಹಳೆಯ ಮಾದರಿಯಲ್ಲಿ ಓದಿ, ವ್ಯಾಸಂಗ ಮಾಡಿ ಅದರಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುವ ಜನ ನಮ್ಮಲ್ಲಿ ಈಗ ಕಡಮೆ. ಆದರೂ ಆ ರೀತಿಯ ಪಾಂಡಿತ್ಯವುಳ್ಳವರನ್ನು ಪರಿಷತ್ತು ಆರಿಸಿ ಅವರಿಂದ ಈ ಅನುವಾದ ಕಾರ್ಯ

ಗಳನ್ನು ಮಾಡಿಸಿದೆ. ಕಾವ್ಯವನ್ನು ಅಭ್ಯಾಸ ಮಾಡಿದವರು, ಪಾಠ ಹೇಳಿದವರು, ಕವಿಯ ಮನೋಭಾವವನ್ನು ಅರಿತವರು, ಹೊಸಗನ್ನಡವನ್ನು ಬಲ್ಲವರು ನಮಗೆ ಈ ಅನುವಾದ ಕಾರ್ಯವನ್ನು ಮಾಡಿಕೊಟ್ಟಿದ್ದಾರೆ. ಅವರೆಲ್ಲರಿಗೆ ಪರಿಷತ್ತು ತನ್ನ ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತದೆ.

ವಿದ್ವಾಂಸರಿಂದ ಆದ ಕಾವ್ಯಾನುವಾದವನ್ನು ನಿಷ್ಣಾತ ಪಂಡಿತರು ನೋಡಿ, ಅವಶ್ಯವಾದ ಕಡೆಗಳಲ್ಲಿ ತಿದ್ದಿ ಪರಿಷತ್ತಿನ ಪ್ರಕಟಣೆಗಾಗಿ ಕೊಟ್ಟಿದ್ದಾರೆ. ಹೀಗೆ ಘನ ವಿದ್ವಾಂಸರಿಬ್ಬರು ತಮ್ಮ ಪೂರ್ಣ ಪಾಂಡಿತ್ಯದಿಂದ ಈ ಅನುವಾದ ಕಾರ್ಯವನ್ನು ನೆರವೇರಿಸಿ ಕೊಟ್ಟಿದ್ದಾರೆ. ಹೀಗಿದ್ದರೂ ಆ ಕಾವ್ಯಗಳ ಕೆಲವು ಘಟ್ಟಗಳಲ್ಲಿ, ಸಂದರ್ಭಗಳಲ್ಲಿ ಅರ್ಥ ಕ್ಲಿಷ್ಟವಾಗಿ ಅಭಿಪ್ರಾಯ ಚರ್ಚೆಗೆ ಅವಕಾಶವನ್ನು ಒದಗಿಸಬಹುದು. ಅಂಥ ಸ್ಥಿತಿ ಅನಿವಾರ್ಯ. ಆದ್ದರಿಂದ ಅಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯ ಪರಿಷತ್ತಿನದೆಂದು ಯಾರೂ ಭಾವಿಸಬಾರದು. ಅದು ಪಂಡಿತರ ಅಭಿಪ್ರಾಯ. ಅದರಲ್ಲಿ ಭಿನ್ನಾಭಿಪ್ರಾಯವಿದ್ದರೆ ವಿದ್ವಾಂಸರು ಸೂಚಿಸಬಹುದು. ಏಕೆಂದರೆ 'ಜಗನ್ನಾಥ ವಿಜಯ' 'ರಾಜಶೇಖರ ವಿಳಾಸ' 'ಪಂಪಭಾರತ' ಮುಂತಾದ ಕಾವ್ಯಗಳ ಅಭಿಪ್ರಾಯವನ್ನು ಇಂದು ಖಚಿತವಾಗಿ ಹೇಳು ವುದು ಕಷ್ಟಕರವಾದುದೇ.

'ರಾಜಶೇಖರ ವಿಳಾಸ' ಕಾವ್ಯವನ್ನು ಪಂಡಿತ ಶ್ರೀ ಎರೇಸಿಮೆ ಚನ್ನಪ್ಪ ಅವರು ಅನುವಾದ ಮಾಡಿಕೊಟ್ಟಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರಾದ ವಿದ್ವಾನ್ ಶ್ರೀ ಎನ್. ರಂಗನಾಥಶರ್ಮಾ ಅವರು ಪರಿಶೀಲಿಸಿ ಕೊಟ್ಟಿದ್ದಾರೆ. ಅನುವಾದಕರು ಉಭಯ ಭಾಷಾ ಪಂಡಿತರು. ಪ್ರೌಢಶಾಲೆಯಲ್ಲಿ, ಟಿ. ಸಿ. ಎಚ್. ಕಾಲೇಜಿನಲ್ಲಿ ಕನ್ನಡದ ಉಪಾಧ್ಯಾಯರಾಗಿ ಅನೇಕ ವರ್ಷ ಸೇವೆ ಮಾಡಿ ನಿವೃತ್ತಿ ಹೊಂದಿದ್ದಾರೆ. ಪ್ರಿಯೂನಿವರ್ಸಿಟಿ ಪ್ರೌಢಶಾಲೆ ಪ್ರಾಥಮಿಕಶಾಲೆ ಪಠ್ಯಪುಸ್ತಕ ಸಮಿತಿಗಳ ಸದಸ್ಯ ರಾಗಿಯೂ ಅರ್ಹ ಸೇವೆ ಸಲ್ಲಿಸಿದ್ದಾರೆ. 'ರಾಜಶೇಖರ ವಿಳಾಸ' ದಂಥ ಕ್ಲಿಷ್ಟ ಮತ್ತು ಪಂಡಿತ ಪ್ರೌಢ ಕಾವ್ಯವನ್ನು ಅರ್ಥಮಾಡಿಕೊಂಡು ಸುಲಭ ಕನ್ನಡದಲ್ಲಿ ವಿವರಿಸುವಂಥ ಅಪರೂಪದ ವಿದ್ವಾಂಸರ ಗುಂಪಿಗೆ ಸೇರಿದವರು. ಇವರು ಒಳ್ಳೆಯ ಬರಹಗಾರರು. ಈ ಕೃತಿ ಅವರ ವಿಶಿಷ್ಟ ಅಭ್ಯಾಸದ ಕಾವ್ಯಗಳ ಗುಂಪಿಗೆ ಸೇರಿದ್ದು.

ಅನುವಾದವನ್ನು ಮಾಡಿಕೊಟ್ಟ ಅನುವಾದಕರಿಗೂ, ಅನುವಾದ ನೋಡಿ ಪರಿಶೀಲಿಸಿ ಕೊಟ್ಟ ಶ್ರೀ ರಂಗನಾಥಶರ್ಮಾ ಅವರಿಗೂ ನಮ್ಮ ಅಭಿನಂದನೆಗಳು. ಕನ್ನಡಿಗರು ಇದರ ಉಪಯೋಗವನ್ನು ಪಡೆಯುತ್ತಾರೆಂದು ನಂಬಿದ್ದೇನೆ.

ಬೆಂಗಳೂರು
2–10–76

ರಂ. ಶ್ರೀ. ಮುಗಳಿ
ಪ್ರಧಾನ ಸಂಪಾದಕ

# ಬಿನ್ನಹ

ಹಳಗನ್ನಡ ಕಾವ್ಯಗಳನ್ನು ಪ್ರಚಲಿತವಾದ ಕನ್ನಡದಲ್ಲಿ ಗದ್ಯಾನುವಾದ ಮಾಡಿ ಜನತೆಗೆ ಒದಗಿಸಬೇಕೆಂಬ ಉದ್ದೇಶದಿಂದ ಕನ್ನಡ ಸಾಹಿತ್ಯ ಪರಿಷತ್ತು ಎರಡು ಅನುವಾದಕ ಮಂಡಲಿಗಳನ್ನು ರಚಿಸಿತು. ಒಂದು ಬೆಂಗಳೂರಿನಲ್ಲಿಯೂ ಇನ್ನೊಂದು ಮೈಸೂರಿನಲ್ಲಿಯೂ ಅನುವಾದ ಕಾರ್ಯವನ್ನು ನಡೆಸಬೇಕೆಂದು ನಿರ್ಣಯವಾಯಿತು. ಬೆಂಗಳೂರಿನ ಅನುವಾದಕ ಮಂಡಲಿಗೆ ನಾನು ಅಧ್ಯಕ್ಷನಾಗಿರಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತು ಗೊತ್ತುಮಾಡಿತು. ಈ ಮಂಡಲಿಗೆ ಅನುವಾದಕ ಸದಸ್ಯರಾಗಿರಬೇಕೆಂದು ಕೆಲವು ವಿದ್ವಾಂಸರನ್ನು ಪರಿಷತ್ತು ಕೇಳಿಕೊಂಡಿತು. ಇದನ್ನು ಅಂಗೀಕರಿಸಿದ ವಿದ್ವಾಂಸರು ಅನುವಾದಕ ಮಂಡಲಿಯ ಸದಸ್ಯರಾಗಿ ತಮ್ಮ ಕಾರ್ಯವನ್ನು ನಡೆಸಿಕೊಡಲು ಒಪ್ಪಿದರು.

ಅನಂತರ ತಿಂಗಳಿಗೊಂದು ಸಲ ಸಭೆ ಸೇರಿ ಆ ತಿಂಗಳು ಮಾಡಿದ ಅನುವಾದ ಭಾಗವನ್ನು ಪರಿಶೀಲಿಸಿ ನ್ಯೂನಾತಿರೇಕಗಳನ್ನು ತಿದ್ದುವ ಕ್ರಮ ನಡೆಯುತ್ತಾ ಬಂದಿತು. ಅನೇಕಾರ್ಥಗಳನ್ನು ಕೊಡುವ ಶ್ಲೇಷವಾಕ್ಯವಿದ್ದರೆ ಪ್ರಕೃತವಾದ ಅರ್ಥವನ್ನು ಮೊದಲು ಬರೆದು ಅನಂತರ ಉಳಿದ ಅರ್ಥವನ್ನು ಬರೆಯಬೇಕು—ಎಂದು ನಿಶ್ಚಯಿಸಿಕೊಳ್ಳಲಾಯಿತು. ಅನುವಾದಕ್ರಮದಲ್ಲಿ ಬರುವ ತೊಡಕನ್ನು ಬಿಡಿಸುವುದು, ಕಠಿಣವಾದ ಗ್ರಂಥಭಾಗಕ್ಕೆ ಅರ್ಥವನ್ನು ನಿರ್ಣಯಿಸುವುದು ಮುಂತಾದ ಕಾರ್ಯಗಳು ನಡೆದವು.

ಹೀಗೆ ಹಂತಹಂತವಾಗಿ ಅನುವಾದ ಕಾರ್ಯ ನಡೆಯುವಾಗ ನಾನು ಅವನ್ನು ಪರಿಶೀಲಿಸಿ ಯಥಾಮತಿಯಾಗಿ ಮಾರ್ಗದರ್ಶನವನ್ನು ಮಾಡಿದ್ದೇನೆ. ಮೇಲೆ ಕಾಣಿಸಿದ ನಿರ್ಣಯಗಳಿಗೆ ಅನುಸಾರವಾಗಿ ಅನುವಾದವು ಇರಬೇಕೆಂದು ನನ್ನ ಸಂಕಲ್ಪವಾಗಿತ್ತು.

ಹಸ್ತಪ್ರತಿಗಳು ಕೈಸೇರುತ್ತಾ ಬಂದಂತೆ ಅವನ್ನು ಪರಿಶೀಲಿಸಿ ಅಲ್ಲಲ್ಲಿ ತಿದ್ದಿರುತ್ತೇನೆ. ತಿದ್ದಿರುವುದನ್ನು ಅನುವಾದಕರ ಗಮನಕ್ಕೆ ತಂದು ಅವರ ಒಪ್ಪಿಗೆಯನ್ನು ಪಡೆದಿರುತ್ತೇನೆ. ಹೆಚ್ಚಿನ ವಿಶೇಷವನ್ನು ಅಡಿಟಿಪ್ಪಣಿಯಲ್ಲಿ (ರಂ) ಎಂಬ ಸಂಕೇತದಿಂದ ಸೂಚಿಸಿದ್ದೇನೆ.

ಪ್ರತಿಯೊಂದು ವಾಕ್ಯವನ್ನೂ ತಿದ್ದಿ ಮಾರ್ಪಡಿಸುವುದು ಕಾರ್ಯಸಾಧ್ಯವಲ್ಲ; ಅಪೇಕ್ಷಣೀಯವೂ ಅಲ್ಲ. ಅನುವಾದಕರು ವಿದ್ವಾಂಸರಾದ್ದರಿಂದ ಹೆಚ್ಚಿನ ಹಸ್ತಕ್ಷೇಪ ನನಗೆ ಸರಿಯೆನಿಸಲಿಲ್ಲ. ಮೂಲವನ್ನೂ ಅನುವಾದವನ್ನೂ ಅಕ್ಷರಶಃ ತಾಳೆನೋಡುವುದು ಕಠಿಣವೇ, ಅದೆಲ್ಲವನ್ನೂ ಅನುವಾದಕರು ಸರಿಯಾಗಿ ಗಮನಿಸಿಯೇ ಇರುತ್ತಾರೆಂಬ ವಿಶ್ವಾಸವನ್ನು ತಳೆದು, ಮೇಲ್ನೋಟದಲ್ಲಿ ಕಾಣುವ ಕೆಲವು ದೋಷಗಳನ್ನು ಅಲ್ಲಲ್ಲಿ ತಿದ್ದುವ ಪ್ರಯತ್ನಮಾಡಿದ್ದೇನೆ. ಅನುವಾದದಲ್ಲಿರುವ ಗುಣಗಳಿಗೆ ಆಯಾ ವಿದ್ವಾಂಸರೇ ಭಾಗಿಗಳು.

ಈ ಕಾರ್ಯದಲ್ಲಿ ನನಗೆ ಪೂರ್ಣ ಸಹಕಾರವನ್ನಿತ್ತು ತಮ್ಮ ಕಾರ್ಯವನ್ನು ಯಶಸ್ವಿಯಾಗಿ ನಡೆಸಿಕೊಟ್ಟಿರುವ ಎಲ್ಲ ವಿದ್ವಾಂಸರನ್ನು ಅಭಿನಂದಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ನನ್ನಲ್ಲಿ ವಿಶ್ವಾಸವಿಟ್ಟು ಅಭಿಮಾನದಿಂದ ಪ್ರೋತ್ಸಾಹಿಸಿದ್ದಾರೆ. ಈ ಮಂಡಲಿಯ ಅಧ್ಯಕ್ಷನಾಗಿ ಕೆಲಸಮಾಡಲು ಸಕಲ ಸೌಕರ್ಯಗಳನ್ನೂ ಒದಗಿಸಿಕೊಟ್ಟಿದ್ದಾರೆ. ಆ ಮಹನೀಯರಿಗೆ ಕೃತಜ್ಞತೆಯ ವಂದನೆಗಳನ್ನು ಅರ್ಪಿಸುತ್ತೇನೆ. ಎಲ್ಲ ನೆರವಿತ್ತು ಸಹಕರಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರ ವರ್ಗದವರ ಉಪಕಾರವನ್ನು ಸ್ಮರಿಸಿಕೊಳ್ಳುತ್ತೇನೆ.

ಎಸ್. ರಂಗನಾಥಶರ್ಮಾ

ಅಧ್ಯಕ್ಷ

ಬೆಂಗಳೂರು ಅನುವಾದಕ ಮಂಡಲಿ

ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು

5–10–76

# ವಿಷಯ ಸೂಚಿ


೧. ಉಪೋದ್ಘಾತ ೧

೨. ಪ್ರಥಮಾಶ್ವಾಸಂ–ಪೀಠಿಕಾರಚನಾ ಸಮುದ್ರ ಗಿರಿ ವರ್ಣನಂ ೫೧

೩. ದ್ವಿತೀಯಾಶ್ವಾಸಂ–ದ್ರಾವಿಡದೇಶಾದಿ ವರ್ಣನಂ ೧೦೫

೪. ತೃತೀಯಾಶ್ವಾಸಂ–ಕಥಾವತರಣ ಶಿವಲೀಲಾ ವರ್ಣನಂ ೧೬೩

೫. ಚತುರ್ಥಾಶ್ವಾಸಂ–ರಾಜಶೇಖರಾಭ್ಯುದಯ ವ್ಯಾವರ್ಣನಂ ೨೧೭

೬. ಪಂಚಮಾಶ್ವಾಸಂ–ಕಿರಾತ ದೂತಾಗಮನ ಮೃಗಯಾ ವರ್ಣನಂ ೨೬೩

೭. ಷಷ್ಠಾಶ್ವಾಸಂ–ರಾಜಶೇಖರ ವಿಜಯ ವರ್ಣನಂ ೩೨೧

೮. ಸಪ್ತಮಾಶ್ವಾಸಂ–ಸರ್ವಮಂಗಳ ದರ್ಶನ ವರ್ಣನಂ ೩೮೧

೯. ಅಷ್ಟಮಾಶ್ವಾಸಂ–ಸರ್ವಮಂಗಳ ವಿವಾಹಾದಿ ವರ್ಣನಂ ೪೨೨

೧೦. ನವಮಾಶ್ವಾಸಂ–ಹೇಮಂತ ವಸಂತ ಋತು ವರ್ಣನಂ ೪೬೯

೧೧. ದಶಮಾಶ್ವಾಸಂ–ರಾಜಶೇಖರ ವನವಿಹಾರಾದಿ ವರ್ಣನಂ ೪೯೮

೧೨. ಏಕಾದಶಾಶ್ವಾಸಂ–ರಾಜಶೇಖರ ನರೇಂದ್ರ ಚಂದ್ರಿಕಾ ವಿಹರಣ ವರ್ಣನಂ ೫೪೦

೧೩. ದ್ವಾದಶಾಶ್ವಾಸಂ–ರಾಜಶೇಖರ ಸಭಾ ವರ್ಣನಂ ೬೧೮

೧೪. ತ್ರಯೋದಶಾಶ್ವಾಸಂ–ತಿರುಕೊಳವಿನಾಚಿ ಪ್ರಳಾಪ ವರ್ಣನಂ ೬೬೨

೧೫. ಚತುರ್ದಶಾಶ್ವಾಸಂ–ರಾಜಶೇಖರ ವಿಳಾಸ ವಿಪುಳ ಪ್ರಬಂಧ ವರ್ಣನ ೭೨೩

ಅನುಬಂಧ

೧. ಪೂರ್ವಕಥೆಗಳು ೮೦೩

೨. ಲೋಕೋಕ್ತಿಗಳು ೮೩೮

೩. ಪಾರಿಭಾಷಿಕ ವಿಶೇಷಾರ್ಥಗಳು ೮೪೦

೪. ಅರ್ಥಕೋಶ ೮೪೬

# ಉಪೋದ್ಘಾತ

ಈಶ್ವರದತ್ತ ಅತ್ಯದ್ಭುತ ಪ್ರತಿಭಾವರಪ್ರಸಾದ ಲಭ್ಯವಾದ ಮಹಾಕವಿಯೊಬ್ಬ ನನ್ನು ಯಾವ ಪ್ರವೃತ್ತಿಯು ನಿರತಿಶಯಾನಂದದಲ್ಲಿ ಮುಳುಗಿಸಿಬಿಡುವುದೋ ಆ ಪ್ರವೃತ್ತಿಯು ಉಗ್ರವಾದಂತೆ ಹೋದಂತೆಲ್ಲ ಅದೇ ಬಿಂದುವಿನಿಂದ ನಿಸ್ತರಂಗ ಕಾಸಾರದಲ್ಲಿ ಬಿದ್ದ ಕಲ್ಲಿನಿಂದ ಆ ಬಿದ್ದ ಸ್ಥಲದ ಮಧ್ಯಬಿಂದುವಿನಿಂದಲೇ ವೃತ್ತಾಕಾರವಾದ ಕಲ್ಲೋಲ ಪರಂಪರೆಗಳೆದ್ದು ಕಾಸಾರದ ಕೊನೆಯವರೆಗೂ ಹಬ್ಬಿ, ದಡಕ್ಕಪ್ಪಳಿಸಿ ವಿಶ್ರಾಂತವಾಗುವ ಹಾಗೆ ಮಾಡುತ್ತವೆ. ರಾಜಶೇಖರ ವಿಳಾಸ ಕೃತಿಯ ಮೂಲಬಿಂದು 'ಪಂಚಾಕ್ಷರಿಮಂತ್ರ' ಮಹಿಮೆ. ಆ ಮಹಿಮೆಯೆಂಬ ಮೂಲವಿಗ್ರಹ ಪ್ರತಿಷ್ಠಾಪನೆಗೆ ಭವ್ಯವಾದ ಒಂದು ದೇವಾಲಯ ನಿರ್ಮಾಣ ಮಾಡುವ ಸಂಕಲ್ಪದ ಅದ್ಭುತ ಶಿಲ್ಪಿಯಾಗಿ ಕಟ್ಟಿದ 'ಕಾವ್ಯಸೌಧ' ವಿಚಿತ್ರ ಕುಸುರಿಯದು. ಒಂದೊಂದು ಕಡೆಯಲ್ಲಿ ಒಂದೊಂದು ಚಿತ್ರ ; ಒಂದೊಂದು ದೃಶ್ಯ ; ಒಂದೊಂದು ಸನ್ನಿವೇಶ ನಿರ್ಮಾಣ. ಒಟ್ಟಾರೆ ಸಮಗ್ರ ದೇವಾಲಯದ ಮೂಲ ಗುರಿ ಪಂಚಾಕ್ಷರಿಮಂತ್ರಮಹಿಮಾ ಮೂರ್ತಿಯ ಬಗೆಗೆ ಲೋಕದ ಆಕರ್ಷಣೆಯೇ ಎಂಬುದು ಸ್ಪಷ್ಟವಾಗುವುದು.* ಸೌಧ ನಿರ್ಮಾಣದಲ್ಲಿ ಮಾತ್ರ ಉಪಯೋಗಿಸಿರುವ ಸಾಮಗ್ರಿಯೆಂದರೆ ಶೃಂಗಾರರಸದ ಕಲ್ಲು ಇಟ್ಟಿಗೆ ಗಾರೆ ಬಣ್ಣ ಸುಣ್ಣಗಳು. ಎಂಥ ಸನ್ನಿವೇಶವೇ ಬರಲಿ ಅಲ್ಲಿ ಶೃಂಗಾರದ ಹೊಯ್ಮಳೆ, ಬಿರುಮಳೆಯನ್ನೇ ಸುರಿಸಿ ಅದರಿಂದ ನಿರ್ಮಾಣಗೊಂಡ ಮಹಾಸರೋವರದಲ್ಲಿ ಶಾಂತರಸದ ದೋಣಿಯನ್ನು ಪ್ರಚ್ಛನ್ನವಾಗಿಯೇ ಸಾಗಿಸಿ ರಸಾಸ್ವಾದ ಪರಿಣತಮತಿಗಳನ್ನು ದಡಕ್ಕೆ ತಲುಪಿಸುತ್ತಾನೆ. ಉಳಿದ ಅಲಂಕಾರ ಗಳು ಎಡೆಯರಿತು ಶೃಂಗಾರಕ್ಕೆ ಪೋಷಕವಾಗಿ ಅಲ್ಲಲ್ಲಿ ಯಥೋಚಿತವಾಗಿ ಬಳಕೆಗೊಂಡಿವೆ. ಸರಸವಾದ ಅಲಂಕೃತಿ, ಜಾತಿ, ರೀತಿ, ಗಮಕ, ಸೊಂಪು, ಇಂಪು, ನುಣ್ಪು, ಒಳ್ಪು, ಭಾಸುರ ಭಾವಗಳಿಂದ ರಸಗಾನದ ಹಾಗೆ ಮನೋಹರವಾದ ಈ ಕಾವ್ಯವನ್ನು ಎಂಥ ಖಲ ಸರ್ಪಗಳಾದರೂ ಕೇಳಬೇಕೆನ್ನುವಾಗ ಸಹೃದಯರ ಬಗೆಗೆ ಹೇಳುವುದೇನಿದೆ?†. ವಿಸ್ತಾರ ವಾದ ಅಲಂಕಾರಪ್ರಪಂಚವೆಂಬ ಭವ್ಯಸ್ರಾಕಾರ, ಪ್ರಸಾದಾದಿ ಗುಣಗಳ ಕಂಬ ತೊಲೆ ಬೋದುಗೆಗಳು, ಕೈಶಿಕ್ಯಾದಿ ವೃತ್ತಿಗಳ ಸಭಾಭವನ, ಮೃದುವಾದ ವಿನ್ಯಾಸಗಳ ಕುಸುರಿ ಕಾರ್ಯ, ಭಾವಾಭಿವ್ಯಕ್ತಿಯ ಒಳ್ಳೆಯ ಬಣ್ಣಬರೆಗಳು, ವೈದರ್ಭ್ಯಾದಿ ರೀತಿರೇಖೆಗಳ

---

*ರಾ. ಶೇ. ವಿ. ೧೪–೧೭೭.

† ಅದೇ ೧೭೭

ವೈಶಾಲ್ಯಗಳು೧ ಇವುಗಳಿಂದ ಕೂಡಿ ಕೇವಲ ಒಂದೇ ವರ್ಷದ ಅವಧಿಯಲ್ಲಿ ಮೂಡಿ ಬಂದ ಚೋಳಮಂಡಲದ ದೊಡ್ಡ ಶೈವದೇವಾಲಯ, ರಾಜಶೇಖರವಿಳಾಸ.

ಈಗಿನಂತೆ ವಿಶ್ವವಿದ್ಯಾನಿಲಯಗಳ ಪದವಿಗಳ ಪ್ರಾಚುರ್ಯ ಪ್ರಕರ್ಷಗಳಿಲ್ಲದ ಸುಮಾರು ವರ್ಷಗಳಹಿಂದೆ ಒಬ್ಬವ್ಯಕ್ತಿ ಅಕ್ಕರಿಗನೆಂದು ಗೌರವಿಸಲು ಸಾಮಾನ್ಯ ಜನತೆ ಯಲ್ಲಿ ರಾಜಶೇಖರವಿಳಾಸ, ಜೈಮಿನಿಭಾರತಗಳೇ ಮಾನದಂಡಗಳಾಗಿದ್ದುವು. 'ಈ ಮನುಷ್ಯ ವಿದ್ಯಾವಂತ ! ಜೈಮಿನಿ, ರಾಜಶೇಖರ ಇವನಿಗೆ ಕರತಲಾಮಲಕ'. ಹೀಗೆನ್ನುವ ನಾಣ್ಣುಡಿಯೊಂದಿತ್ತು. ಈ ನಾಣ್ಣುಡಿಯ ಬಗೆಗೆ ವಿಚಾರಹರಿಸಿದಾಗ ಈ ಎರಡು ಕಾವ್ಯ ಗಳು ಜನತೆಯಲ್ಲಿ ಅದೆಷ್ಟರಮಟ್ಟಿಗಿನ ತಮ್ಮ ಪ್ರಭಾವಮುದ್ರೆಯನ್ನೊತ್ತಿದ್ದುವೆಂಬುದರ ಅರಿವಾಗದಿರದು. ರಾಜಶೇಖರ ವಿಳಾಸ ಹುಟ್ಟಿ ಇಂದಿಗೆ ಸುಮಾರು ಮೂರುನೂರ ಇಪ್ಪತ್ತು ವರ್ಷಗಳಾದವು, ಅಷ್ಟೆ! ಆದರೆ ಈ ಕಾಲಾವಧಿಯು ಒಂದುನಾಡಿನ ಸಾಹಿತ್ಯೇತಿ ಹಾಸದಲ್ಲಾಗಲಿ, ರಾಜಕೀಯ ಇತಿಹಾಸದಲ್ಲಾಗಲಿ ಬಹುದೊಡ್ಡ ಮೊತ್ತದ ಕಾಲ ವಿಶೇಷವೇನೂ ಅಲ್ಲದಿರಬಹುದು. ಅಂದಿನಿಂದ ಸುಮಾರು ಮೂರು ಶತಮಾನಗಳು ಹಳ್ಳಿ ಹಳ್ಳಿಗಳಲ್ಲೂ ಹಣತಿಯ ಸ್ನಿಗ್ಧ ಮಧುರ ಮಂದ ಪ್ರಕಾಶದಲ್ಲಿ ಅನೇಕ ಶ್ರೋತೃಗಳಾದ ಭಾವುಕರ, ಶೃಂಗಾರಪ್ರಿಯರ, ಭಾಷಾಕೋವಿದರ ಮನಸ್ಸನ್ನು ಸೂರೆಗೊಳ್ಳುವ ಅಂತಸ್ಸ ತ್ವವನ್ನು ಹೊಂದಿದ್ದ ರಾಜಶೇಖರವಿಳಾಸವು ತನ್ನನ್ನು ರಚಿಸಿದ ಕವಿಯ ಹೆಸರನ್ನು ಮರೆಯಿಸಿ ಮೆರೆಯಿತು. ಕವಿಯ ಹೆಸರನ್ನು ಹಿಂದೆಮಾಡಿ ಕಾವ್ಯದ ಹೆಸರು ಜನಜೀವನ ದೊಡನೆ ಬೆರೆತುಹೋದಾಗಲೇ ಕವಿ ಕೃತಾರ್ಥನಾಗುತ್ತಾನೆ. ಈ ಕಾರಣದಿಂದ ರಾಜ ಶೇಖರವಿಳಾಸಕರ್ತೃವು ನಿಜವಾಗಿಯೂ ಭಾಗ್ಯಶಾಲಿಯಲ್ಲದೆ ಮತ್ತಿನ್ನೇನು ? ಹುಟ್ಟುವ ಕೃತಿಗಳು ಲೆಕ್ಕವಿಲ್ಲದಷ್ಟು. ಹುಟ್ಟಿದವುಗಳೆಲ್ಲ ವಿಶಾಲ ವಿಟಪಿಯಂತೆ ಫಲಛಾಯಾ ಸಮನ್ವಿತಗೊಂಡು ಬೆಳೆದು ಆಶ್ರಯಿಸಿ ಬಂದವರಿಗೆ ಫಲಛಾಯಾ ಸಂಪತ್ತನ್ನೀಯಲಾರವು. ಅನೇಕ ಕಾವ್ಯಗಳು ಹುಟ್ಟಿದುವು; ಆದರೆ ಬೆಳೆಯಲಿಲ್ಲ; ಕಳೆಗಟ್ಟಿಸಲಿಲ್ಲ. ಸಹೃದಯ ಹೃದಯೋಲ್ಲಾಸಿನಿಯೆನಿಸಿ ಕಳೆಗಟ್ಟಿಸಬಲ್ಲ ಸತ್ವವುಳ್ಳ ಕಾವ್ಯವೇ ಕಾವ್ಯದ ಆಕಲ್ಪಾಂತ ಚಿರಾಸ್ಥಾಯಿತ್ವಕ್ಕೆ ಒರೆಗಲ್ಲು.

ರಾಜಶೇಖರ ವಿಳಾಸ ಓದಿತಿಳಿದುಕೊಳ್ಳಲು ಸರ್ವರಿಗೂ ಸುಲಭವಾದ ಗ್ರಂಥವೇ ನಲ್ಲ. ಆದರೆ ಅಂದಿನ ಜನವನ್ನು ಇಂದಿನ ತಲೆಮಾರಿನ ಜನರೊಂದಿಗೆ ಹೋಲಿಸಿ ತೂಕ ಹಾಕುವ ಸಾಹಸಮಾಡಬಾರದು. ಜನತೆಯ ಅಭಿರುಚಿ ಎಲ್ಲ ಕಾಲದಲ್ಲೂ ಒಂದೇ ತೆರನಾಗಿರುವುದಿಲ್ಲ. ಅಂದಿನಜನ ಈ ಕಾವ್ಯವನ್ನು ಓದಿ ಅಥವಾ ಓದಿಸಿ ಜೀರ್ಣಿಸಿಕೊಳ್ಳುವ ಜೀರಕರಸವನ್ನು ಜಠರದಲ್ಲಿ ಹೊಂದಿದ್ದರು. ಸದ್ಯಃಪರ ನಿರ್ವೃತಿಯನ್ನು ಪಡೆಯುತ್ತಿದ್ದರು. ಹೀಗೆನ್ನುವಾಗ ಅಂದಿನ ಜನರ ಭಾಷಾಭಿರುಚಿ, ಕಾವ್ಯಗತ ಸೌಂದರ್ಯ, ಚಿತ್ರಣದ ಸೊಬ

೧ ಅದೇ ೧೭೬.

ಗನ್ನು ಪರಿಭಾವಿಸಿ ಪಡುವ ಆನಂದ, ಧಾರ್ಮಿಕಮನೋಭಾವದ ಬಗೆಗಿರುವ ಶ್ರದ್ಧಾದಿಗಳನ್ನು ಅಳತೆಮಾಡಿದಂತಾಗುತ್ತದೆ. ಇಂದಿನ ಪರಿಸರದ ಮಧ್ಯದಲ್ಲಿದ್ದು ಅಂದಿನ ಜನಜೀವನದ ಪರಿಸರವನ್ನು ಊಹಿಸಿ ಆ ವಿಷಯವನ್ನು ಅರಿಯಬೇಕಲ್ಲದೆ, ಟೀಕಿಸುವ ಗೋಜಿಗೆ ಹೋಗುವವನನ್ನು ಮೂರ್ಖನೆನ್ನಬೇಕಾಗುತ್ತದೆ. ಇದೇನೇ ಇರಲಿ. "ಈ ಗಂಥ್ರದ ಹಸ್ತಪ್ರತಿಗಳು ಇಂದಿಗೂ ದೇಶದ ಮೂಲೆ ಮೂಲೆಗಳಲ್ಲಿ ದೊರೆಯುತ್ತವೆ. ಅಂದು ಅಚ್ಚುಕೂಟವಿರಲಿಲ್ಲ, ಕಾಗದವಿರಲಿಲ್ಲ, ಪ್ರತಿಯೆತ್ತತಕ್ಕ ವಿದ್ಯಾವಂತರ ಸಂಖ್ಯೆಯೂ ಕಡಿಮೆಯಾಗಿತ್ತು, ಸುವ್ಯವಸ್ಥಿತ ಸಾಹಿತ್ಯಪ್ರಚಾರವೂ ನಡೆಯುತ್ತಿರಲಿಲ್ಲ"[1] ಅಂಥಕಾಲದಲ್ಲಿ ಈ ಗ್ರಂಥದ ಹಸ್ತಪ್ರತಿಗಳು ಅಧಿಕಸಂಖ್ಯೆಯಲ್ಲಿ ಹುಟ್ಟಿದುದು ಗ್ರಂಥಾಂತರ್ಗತ ಕಾವ್ಯದ ಸೊಬಗಲ್ಲದೆ ಬೇರೆ ಯೋಚಿಸುವುದರ ಅಗತ್ಯವೇ ಇಲ್ಲ. ಮೇಲಿನ ಅಂಶಗಳನ್ನು ಗಮನಿಸಿದಾಗ ಈ ಕೃತಿಯನ್ನು ರಚಿಸಿದ ಕವಿಯ ಬಗೆಗೆ ಕುತೂಹಲ ಕೆರಳುತ್ತದೆ. 'ಸರಸಜನಮಾನಿತೋಭಯಕವಿತಾವಿಶಾರದ'[2] 'ಉತ್ತಮ ಜನಾನಂದಾಬ್ಧಿ ರಾಕಾಸುಧಾಕರ' 'ಉದ್ಯತ್ಕವಿತಾಲತಾರ್ಜಿತ ಯಶಃಪುಷ್ಪೋದಯ' 'ಸುಕವಿವೃಂದ ಸ್ತೋತ್ರಪಾತ್ರ' 'ಸರಸ ಪ್ರಬಂಧ ಸುಭಗಾಂಭೋಜಪ್ರಭಾವಲ್ಲಭ'[3] ಎಂದು ತನ್ನನ್ನು ಹೇಳಿಕೊಂಡ ಮಾತಿನ ಸಾರ್ಥಕ್ಯವನ್ನು ಪ್ರಶ್ನಿಸುವವನಿಗೆ ಎಂಟೆರ್ದೆಯೆ? ಎನಿಸುತ್ತದೆ. ಕವಿಯ ಅದ್ಭುತ ಪಾಂಡಿತ್ಯ ಮತ್ತು ಪ್ರತಿಭೆಗಳಿಂದ ಕೂಡಿದ ಕವಿತಾಸಾಮರ್ಥ್ಯ ವಿಶಿಷ್ಟವಾದ ರಾಜಶೇಖರವಿಳಾಸವು ಅಂದಿನ ವಿದ್ವಾಂಸರ ರಸಾಸ್ವಾದನಪರಿಣತಮತಿ ಗಳ ಮನಸ್ಸನ್ನು ಸೂರೆಗೊಂಡಿತು; ಆ ಜನ ಮನಮುಟ್ಟಿ

> "ಜಿಹ್ವಾಂತರ್ನಟದಂಬುಜಾಸನವಧೂ ಪಾರಪ್ರವಾಳಸ್ಫುರ
> ನ್ಮಂಜೀರದ್ವಯ ಮಂಜುನಾದ ವಿಭವ ಶ್ರೀಗರ್ವ ಸರ್ವಂಕಷಾಃ
> ಜೀಯಾಸುರ್ಭಗವತ ಷಡಕ್ಷರವಿಭೋ ಕುಂದಾರಮಂದಾವಳೀ
> ಮಂದಾರದ್ರುಮಮಂಜರೀ ಮಧುರಝುರೀ ಮಾಧುರ್ಯಧುರ್ಯಾಗಿರಃ"[4]

—ಹೀಗೆಂದು ಹಾಡಿ, ಷಡಕ್ಷರಮಹಾಕವಿಯು, ಆತನ ರಾಜಶೇಖರ ವಿಳಾಸ ಮಹಾ ಪ್ರಬಂಧದ ಶ್ರೇಷ್ಠತೆಯ ಬಗೆಗೆ ಹರ್ಷೋದ್ಗಾರಮಾಡಿದ್ದರೆ ಆಶ್ಚರ್ಯವೇನಿಲ್ಲ. ವಸ್ತುವಿನ ಉದಾತ್ತತೆ, ಪಾಂಡಿತ್ಯ, ಪ್ರತಿಭೆ, ರಸಿಕತೆಗಳಿಂದ ತುಂಬಿಬಂದ ಮಾಮರದಂತೆ, ಉಕ್ಕಿ ಬಂದ ಕಡಲಿನಂತೆ, ಷೋಡಶಕಲಾಪ್ರಪೂರ್ಣಚಂದ್ರನ ಸಿರಿಯಂತೆ ಹೃದಯೋಲ್ಲಾಸಿನಿ

---

1. ಹೆಚ್. ದೇವೀರಪ್ಪ: ಅಭಿನಂದನೆ. ಪು. ೨೬೪.
2. ರಾಜಶೇಖರ ವಿಳಾಸದ ಪ್ರತಿ ಆಶ್ವಾಸಾಂತ್ಯದ ಗದ್ಯ.
3. ರಾ. ಶೇ. ವಿ. ಆ. ೧. ಪ. ೬೮.
4. ರಾ. ಶೇ. ವಿಳಾಸದ ಅನೇಕ ಹಸ್ತಪ್ರತಿಗಳ ಅಂತ್ಯದಲ್ಲಿ ಸಿಗುವ ಪದ್ಯ.

ಯೆನಿಸಿದ ಈ ಕಾವ್ಯವನ್ನು ಕನ್ನಡಿಗರಿಗೊದಗಿಸಿ ಕವಿ ಧನ್ಯತೆ ಪಡೆದಿದ್ದಾನೆ. ಒಂದು ಮಾತು : ೧೪ ಆಶ್ವಾಸಗಳಲ್ಲಿ ಒಟ್ಟು ರಗಳೆಗಳೂ ಸೇರಿದಂತೆ ಸಾವಿರದ ಎಂಟನೂರ ಅರವತ್ತೊಂಬತ್ತು ವೃತ್ತ ಕಂದಗಳಿಂದಲೂ, ನೂರಾರು ಪುಟಗಳ ಹೃದ್ಯವಾದ ಗದ್ಯ ದಿಂದಲೂ ಕೂಡಿದ ಈ ಮಹಾಕಾವ್ಯವನ್ನು ಒಲ್ದು ಕೇಳಿದ ಬುಧಜನರು ಮೈವೆರ್ಚಿ ಕೊಂಡಾಡುವ ಹಾಗೆ ತಾನೊರ್ವನೇ ಶಂಭುಕೃಪೆಯಿಂದ ಏಕಾಬ್ದದಲ್ಲಿಯೇ ಹೇಳಿ ಮುಗಿಸಿದೆನೆಂದು[5] ಕವಿ ಹೇಳಿಕೊಂಡ ಮಾತು ವಿಸ್ಮಯಕಾರಿ ಎಂಬುದನ್ನು ಮರೆಯ ಲಾಗದು. ಬರೆಬರೆದು ತೊಡೆದು ತೊಟ್ಟನೆ ನಿಟ್ಟಿಸಿ ಯಾವುದೇ ಒಂದು ಸರಸ ಪದಾರ್ಥ ವನ್ನು ತಡಕಿ ಅಂಥ ಶಬ್ದವು ಸಿಕ್ಕದಿದ್ದಾಗ ತಲೆತುರಿಸಿಕೊಳ್ಳುತ್ತ ಪರೋಕ್ತವಾದ ಶಬ್ದ ವನ್ನು ಕದ್ದು, ಅಂತು ಇಂತು ಒಂದು ಕಾವ್ಯವನ್ನು ಹೇಗೆಹೇಗೋ ಹೊಸೆದು ಬರೆದು ಬಿಸಾಡಿದ್ದಲ್ಲ, ರಾಜಶೇಖರ ವಿಳಾಸ.[6] ಜನ್ಮದತ್ತವಾಗಿ ಬಂದ ಪ್ರತಿಭೆ, ನೈಪುಣ್ಯ, ಲೋಕಶಾಸ್ತ್ರ ಕಾವ್ಯಾದ್ಯವೇಕ್ಷಣ, ಕಾವ್ಯಜ್ಞ ಶಿಕ್ಷೆ. ಅಭ್ಯಾಸ[7] ಇವುಗಳಿಂದ ಕವಿ ಮೈವೆತ್ತುನಿಂತು ಈ ಕಾವ್ಯನಿರ್ಮಾಣ ಮಾಡಿದ್ದಾನೆ. ಕಾವ್ಯನಿರ್ವಹಣೆಗೆ ಪ್ರತಿಭೆ ಯೊಂದೇ ಸಾಲದು. ಕವಿಯೇ ಹೇಳುವಂತೆ ತನ್ನ ಈ ಕಾವ್ಯವು 'ಎರವಿನ ಪಚ್ಚ'ವಲ್ಲ.[8] 'ಪರರರ್ಥಕೆ ಕೈದುಡುಕಿ'ದ್ದಲ್ಲ.[9] ಪರಮಾತ್ಮನ ಕೃಪೆಯಿಂದ ಶಾಸ್ತ್ರಪಾಂಡಿತ್ಯವೆಂಬ ಶ್ರೀರೋಹಣಗಿರಿಯನ್ನೇರಿ ಅಲ್ಲಿನ ನವಕವಿತಾಚಿಂತಾರತ್ನವನ್ನು ಪಡೆದು,[10] ಬಾಲ್ಯ ದಲ್ಲಿಯೇ ಅಂದರೆ ಹನ್ನೊಂದನೆಯ ವಯಸ್ಸಿನಲ್ಲಿಯೇ ಸಹಜ ಕವಿತಾಶಕ್ತಿಯನ್ನು ಪಡೆದಿದ್ದ ದೈವದತ್ತ ಪ್ರತಿಭಾಸಂಪನ್ನನೀತ.[11] ನಿಸರ್ಗಸುಭಗವಾದ ಕವಿತಾಶಕ್ತಿ

---

5. ಇಂತೀ ಕಾವ್ಯಮನೊಲ್ದು ಕೇಳ್ದ ವಿಬುಧರ್ ಮೈವೆರ್ಚಿ ಕೊಂಡಾಡೆ ಪೇ
ಳ್ದಂ ತಾನೊರ್ವನೆ ಸಾಂಬ ಶಂಭುಕೃಪೆಯಿಂದೇಕಾಬ್ದದೊಳ್ ಪೂರ್ಣಮ
ಪ್ಪಂತೋರಂತೆ ಷಡಕ್ಷರಾರ್ಯನನಘಂ ಸಾಹಿತ್ಯ ಶಾಸ್ತ್ರಜ್ಞನ
ಶ್ರಾಂತ ಶ್ರೀ ಶಿವಲಿಂಗಸಂಗತ ಮಹಾಮಾಹೇಶ್ವರಂ ಭಕ್ತಿಯಿಂ

—ರಾ. ಶೇ. ವಿ. ಆ. ೧೪. ಪ. ೧೭೨.

6. ರಾ. ಶೇ. ವಿ. ಆ ೧. ಪ. ೨೩.

7. ಶಕ್ತಿರ್ನಿಪುಣತಾ ಲೋಕಶಾಸ್ತ್ರ ಕಾವ್ಯಾದ್ಯವೇಕ್ಷಣಾತ್ |
ಕಾವ್ಯಜ್ಞ ಶಿಕ್ಷಯಾಭ್ಯಾಸಃ ಇತಿ ಹೇತುಸ್ತದುದ್ಭವೇ ||

—ಕಾವ್ಯಪ್ರಕಾಶ, ಮಮ್ಮಟ, ೧–೩.

8. ರಾ. ಶೇ. ವಿ. ಆ ೧–೩೬.

9. ಅದೇ. ೩೨.

10. ಅದೇ. ೨೯.

11. ಶ. ಶ. ವಿ. ಆ. ೫ ಪ. ೬೦.

ತನಗೆ ಆಳವಟ್ಟಿತ್ತಲ್ಲದೆ ಕಲಿವಿನಿಂದ ಬಂದದ್ದಲ್ಲ[12] ಎಂದು ತಾನೇ ಹೇಳಿಕೊಂಡ ಮಾತಿನಲ್ಲಿ ಕೆಚ್ಚಿದೆ. ಇಂಥ ಸೇವ್ಯವಾದ ಸತ್ಕಾವ್ಯವನ್ನು ಬರೆಯಲು "ಷಡಕ್ಷರದೇವನು ತನ್ನೆಲ್ಲಾ ಚಾತುರ್ಯವನ್ನೂ ಬುದ್ಧಿಶಕ್ತಿಯನ್ನೂ ವಿನಿಯೋಗಿಸಿ ಹಳೆಯ ಸಾಮಗ್ರಿಯಲ್ಲಿ ನೂತನ ಕಥಾಕಲ್ಪವನ್ನು ರಚಿಸಿದ್ದಾನೆ. ಅವನು ಕಥಾವಸ್ತುವನ್ನಾರಿಸಿಕೊಂಡಿರುವುದು ಷಟ್ಪದಿಕಾವ್ಯದಿಂದ ವರ್ಣಕದ ನಾರುಡಿಗೆಯನ್ನುಟ್ಟಿದ್ದ ಕಾವ್ಯಕನ್ನಿಕೆಗೆ ವಸ್ತುಕದ 'ದೇಶಾವರಿ' ವೇಷಭೂಷಣಗಳನ್ನು ತೊಡಿಸಿದ್ದಾನೆ."[13] ಈ ಕಾವ್ಯವನ್ನು ಬರೆದು ಭವ್ಯರೆದುರಿನಲ್ಲಿಟ್ಟು 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂಬ ಅವರ ಅಭಿಪ್ರಾಯವನ್ನೇ ಪುನರ್ವಿಮರ್ಶಿಸುವಂತೆ ಮಾಡಿದನು.[14] ಆದುದರಿಂದಲೇ ಕವಿ ಕೃತಾರ್ಥತೆಯನ್ನು ಪಡೆದನು. ತನ್ನ ಕಾವ್ಯವನ್ನು ಆಕಲ್ಪಾಂತ ಚಿರಸ್ಥಾಯಿಗೊಳಿಸಿದನು. ಇಂಥ ಮಹಾಕಾವ್ಯವಾದ ರಾಜಶೇಖರ ವಿಳಾಸದ ಬಗೆಗೆ ಮತ್ತು ಕವಿಯ ಬಗೆಗೆ ತುಸು ವಿಚಾರಮಾಡುವುದವಶ್ಯವೆನಿಸಿದೆ.

**ಕವಿಯ ದೇಶಕಾಲ ಕಾವ್ಯಾದಿ ವಿಚಾರ:** ಷಡಕ್ಷರಿ, ಷಡಕ್ಷರದೇವ— ಇತ್ಯಾದಿ ಹೆಸರಿನ ಕವಿಗಳು ಒಟ್ಟು ಐಸುಜನಗಳು ನಮಗೆ ಸಾಹಿತ್ಯ ಕ್ಷೇತ್ರದಲ್ಲಿ ದೊರಕುತ್ತಾರೆ. ಅವರೆಲ್ಲ ಬೇರೆ ಬೇರೆ ಕಾಲದಲ್ಲಿದ್ದು ಬೇರೆ ಬೇರೆ ಸಾಹಿತ್ಯಕೃತಿ ರಚನೆಮಾಡಿದ್ದಾರೆ. ಕ್ರಿ. ಶ. ಸುಮಾರು ೧೫೦೦ ರಲ್ಲಿದ್ದ ನಿಜಗುಣಶಿವಯೋಗಿಗಳವರ ಸಮಕಾಲೀನರಾಗಿ[15] ಶಂಭುಲಿಂಗನ ಬೆಟ್ಟದಲ್ಲಿದ್ದು ಸುಬೋಧಸಾರವನ್ನು ಬರೆದ ಮುಪ್ಪಿನ ಷಡಕ್ಷರಿಗಳೊಬ್ಬರು. ಕ್ರಿ. ಶ. ೧೬೫೦ ರ ಸುಮಾರಿನಲ್ಲಿ ಹಾಡು ಮತ್ತು ವಚನಗಳನ್ನು ಬರೆದ ದೊಡ್ಡ ಷಡಕ್ಷರಸ್ವಾಮಿಯೊಬ್ಬರು. ಕ್ರಿ. ಶ. ಸು. ೧೬೫೦ರ ಸುಮಾರಿನಲ್ಲಿದ್ದು ಶಿವಯೋಗಾಷ್ಟಕ, ಶಿವಪೂಜಾಷ್ಟಕಗಳನ್ನು ಬರೆದ 'ವಿರಕ್ತ ಷಡಕ್ಷರಿ' ಎಂಬ ಹೆಸರಿನವರೊಬ್ಬರು. ಕೆಳದಿ ರಾಜರುಗಳ ಆಸ್ಥಾನದಲ್ಲಿದ್ದು, ಹಿರಿಯಬಸಪ್ಪನಾಯಕ (ಕ್ರಿ. ಶ.

---

12. ರಾ. ಶೇ. ವಿ. ೧–೩೦.

13. ಹೆಚ್. ದೇವೀರಪ್ಪ : ಅಭಿನಂದನೆ, ಪು. ७೫೬.

14. ರಾ. ಶೇ. ವಿ. ಆ. ೧–೩೪.

15. ನಿಜಗುಣಶಿವಯೋಗಿಗಳವರ ಕಾಲದ ವಿಚಾರವಾಗಿ ಭಿನ್ನಾಭಿಪ್ರಾಯಗಳಿವೆ. ಕ್ರಿ. ಶ. ೧೩೦೦ ರಿಂದ ೧೫೦೦ ರವರೆಗೆ ಇವರ ಕಾಲ ತೂಗುಯ್ಯಾಲೆಯಾಡುತ್ತಿದೆ. ಅಂತು ಇವರು ೧೩ನೆಯ ಶತಮಾನದ ಅನಂತರದವರು ಎಂಬ ಮಾತನ್ನಂತೂ ಎಲ್ಲ ವಿದ್ವಾಂಸರೂ ಒಪ್ಪುತ್ತಾರೆ. ಈ ಬಗೆಗೆ ಪ್ರೊ|| ಉಮಾಪತಿಶಾಸ್ತ್ರಿಯವರು ತಾವು ಸಂಗ್ರಹಿಸಿ ಪ್ರಕಟಿಸಿದ 'ವಿವೇಕಾ ಚಿಂತಾಮಣಿ' ಎಂಬ ಗ್ರಂಥದ ಪ್ರಥಮಮುದ್ರಣ (೧೯೬೯)ದ ಪ್ರಸ್ತಾವನೆಯಲ್ಲಿ ಪು. ೭೩ ರಿಂದ ೧೦೫ ರವರೆಗೆ ವಿಸ್ತಾರವಾಗಿಯೇ ಈ ಬಗೆಗೆ ಚರ್ಚಿಸಿದ್ದಾರೆ. ಸದ್ಯದಲ್ಲಿ ನಾವು ಕವಿಚರಿತ್ರೆಕಾರರು ಹೇಳಿದ ಕ್ರಿ. ಶ. ೧೫೦೦ ಎಂಬುದನ್ನೇ ಅಂಗೀಕರಿಸಿ ಇಲ್ಲಿ ಕೊಟ್ಟಿದ್ದೇವೆ.

೧೬೯೭–೧೭೧೪)ನ ಪ್ರೋತ್ಸಾಹದಿಂದ 'ವೀರಶೈವ ಧರ್ಮಶಿರೋಮಣಿ' ಎಂಬ ಗ್ರಂಥ ವನ್ನು ರಚನೆಮಾಡಿದ ಅಮಾತ್ಯನಾದ ಷಡಕ್ಷರಯ್ಯನೊಬ್ಬನು.[16] ಈ ನಾಲ್ವರೂ ಅಲ್ಲದೆ ಮೈಸೂರಿನ ಚಿಕ್ಕದೇವರಾಯ (ಕ್ರಿ. ಶ. ೧೬೭೨–೧೭೦೪) ಭೂಪಾಲನ ಮಂತ್ರಾಲೋಚನಾ ಸದಸ್ಯರಲ್ಲಿ ಷಡಕ್ಷರಯ್ಯನೆಂಬುವನೊಬ್ಬನಿದ್ದನು.[17] ಇವನು ಯಾವ ಕಾವ್ಯಾದಿಗಳನ್ನೂ ಬರೆದವನಲ್ಲ. ಇವರೆಲ್ಲ ನಮ್ಮ ಪ್ರಕೃತದ ಮಹಾಕವಿ 'ಷಡಕ್ಷರದೇವ' ನಿಂದ ಭಿನ್ನರು.[18]

ಷಡಕ್ಷರದೇವನು ಜನ್ಮ ತಾಳಿದ ದಿವಸವಾಗಲಿ, ಅವನು ಲಿಂಗೈಕ್ಯವಾದ ದಿವಸ ವಾಗಲಿ ಗೊತ್ತಾಗಲು ಎಲ್ಲಿಯೂ ಸುಳುವು ಸಿಗುವುದಿಲ್ಲ. ಆದರೆ ತಾನು ಬರೆದ ಗ್ರಂಥ ಗಳ ಪರಿಸಮಾಪ್ತಿಯ ಬಗೆಗೆ ಹೇಳಿಕೊಂಡಿರುವುದರ ಮೇಲಿಂದ ಊಹಿಸಿ ಅವನ ಜನನ ವರ್ಷವನ್ನು ವಿದ್ವಾಂಸರು ಕಂಡುಹಿಡಿಯಲು ಪ್ರಯತ್ನಿಸಿದ್ದಾರೆ. ಕವಿಯು ತನ್ನ ಮೊದಲ ಕಾವ್ಯವಾದ ರಾಜಶೇಖರವಿಳಾಸವನ್ನು ಶಾ. ಶ. ೧೫೭೬ನೆಯ ಜಯನಾಮ ಸಂವತ್ಸರ ಮಾಘ ಶುಕ್ಲ ತದಿಗೆ ಬುಧವಾರದಲ್ಲೂ,[19] ಅನಂತರ ಸುಮಾರು ೨೪ ವರ್ಷಗಳ

---

16. ಹಿರಿಯ ಬಸವಪ್ಪನಾಯಕನ ಮಗನಾದ ಕೆಳದಿಯ ೨ನೆಯ ಸೋಮಶೇಖರ ನಾಯಕ (ಕ್ರಿ. ಶ. ೧೭೧೪–೧೭೩೯)ನು ಪರಶುರಾಮಕ್ಷೇತ್ರದಿಂದ ಇಬ್ಬರು ಬ್ರಾಹ್ಮಣ ಕುಮಾರ ರನ್ನು ಕರೆಸಿ, ಅವರಿಗೆ ಷಡಕ್ಷರಿ, ಪಂಚಾಕ್ಷರಿ ಎಂಬ ಹೆಸರನ್ನಿಟ್ಟು, ಲಿಂಗಧಾರಣೆ ಮಾಡಿಸಿದ ನೆಂದೂ, ಅನಂತರ ೨ನೆಯ (ಕಿರಿಯ) ಬಸವಪ್ಪನಾಯಕನು (ಕ್ರಿ. ಶ. ೧೭೩೯–೧೭೫೪) ಪರಶು ರಾಮಕ್ಷೇತ್ರದ ಸಿದ್ಧಾಪುರಪೇಟೆಯ ಸಮೀಪದಲ್ಲಿ ಮಂತ್ರರಾಜಪುರವೆಂಬ ಊರನ್ನು ಸ್ಥಾಪಿಸಿ, ಅಲ್ಲಿ ಷಡಕ್ಷರಯ್ಯನ ಮುಖದಿಂದ ಒಂದು ಮಠವನ್ನು ಕಟ್ಟಿಸಿದನೆಂದೂ ಹೇಳಿರುವಲ್ಲಿಯ 'ಷಡಕ್ಷರಯ್ಯ'ನೆಂಬುವನೂ ಬೇರೆಯವನೇ.

—ಗೋವಿಂದಪೈ : ಷಡಕ್ಷರದೇವನ ಕಾಲನಿರ್ಣಯ, ಶ. ಸಾ. ಸಂ. ೮ ಸಂಚಿಕೆ ೭. ಪು. ೩೬೧-೬೨ ರ ಅಡಿಟಿಪ್ಪಣಿ

17. ಶ್ರೀಮನ್ಮಹಾರಾಜರ ವಂಶಾವಳಿ (೧೯೧೬ರ ಮುದ್ರಣ), ಭಾಗ ೧, ಅಧ್ಯಾಯ, ೮, ಪು. ೧೦೫.

18. ಇವನನ್ನು ಷಡಕ್ಷರದೇವ, ಷಡಕ್ಷರಿ, ಷಡಕ್ಷರಸ್ವಾಮಿ–ಇತ್ಯಾದಿ ನಾಮಾಂತರ ಗಳಿಂದಲೂ ಕರೆಯಲಾಗಿದೆ. ಇವಾವುವೂ ಅಸಾಧುರೂಪಗಳಲ್ಲ.

19. ಸುರುಚಿರ ಶಾಲಿವಾಹನ ಶಕಾನ್ವಿತ ರತ್ನ ಸಮುದ್ರ ಬಾಣ ಭೂ
ಪರಿಗಣನಾಂಕ ಬಂಧುರ ಜಯಾಬ್ದದ ಮಾಘದ ಶುಕ್ಲಪಕ್ಷ ವಿ
ಸ್ಫುರಿತ ತೃತೀಯೆಯಲ್ಲಿ ಬುಧವಾರದೊಳೀಕೃತಿ ಪೂರ್ಣಮಾಯ್ತು ಶಂ
ಕರ ಶಿವಲಿಂಗದಂಘ್ರಿಕೃಪೆಯಿಂದೆ ಷಡಕ್ಷರಿದೇವ ನಿರ್ಮಿತಂ

—ರಾ. ಶೇ. ವಿ. ೪. ೧೪. ಪ-೧೪೪

ಮೇಲೆ ವೃಷಭೇಂದ್ರವಿಜಯವನ್ನು ಶಾ. ಶ. ೧೫೫೩ನೆಯ ನಳನಾಮ ಸಂವತ್ಸರ ಮಾಘ ಶುಕ್ಲ ಪಕ್ಷ ಪಂಚಮಿಾ ಶುಕ್ರವಾರದಲ್ಲೂ[20] ಮುಗಿಸಿದಂತೆ ಹೇಳಿಕೊಂಡಿದ್ದಾನೆ. ಆಮೇಲೆ ಸಂಸ್ಕೃತದಲ್ಲಿ ಕವಿಕರ್ಣರಸಾಯನವನ್ನೂ[21] ಬಹುಶಃ ಅವನ ಅರವತ್ತು ವರ್ಷಗಳು ದಾಟಿದ ಮೇಲೆ ಶಬರಶಂಕರ ವಿಳಾಸನನ್ನೂ ಬರೆದಿರಬೇಕೆಂದು ಶ್ರೀಮಾನ್ ಗೋವಿಂದ ಪೈಯವರು ದೀರ್ಘವಾಗಿ ಚರ್ಚಿಸಿ ಹೀಗೆ ಹೇಳುತ್ತಾರೆ : "ಏಕಾಬ್ದದೊಳ್ ಪೂರ್ಣಮಪ್ಪಂತೆ"[22] ಬರೆದು ಮುಗಿಸಿದ ರಾಜಶೇಖರದಂಥ ಪ್ರೌಢಕಾವ್ಯವನ್ನು ರಚಿಸಿದ ಕ್ರಿ. ಶ. ೧೬೩೩-೩೪ರಲ್ಲಿ ಷಡಕ್ಷರಿಯ ವಯಸ್ಸು, ಕಡಿಮೆ ಅಂದರೆ ೫೦ ವರ್ಷವಾಗಿರಬಹುದಲ್ಲದೆ ಅದಕ್ಕೂ ಕಡಿಮೆಯಾಗಿರಲಾರದೆಂದು ತೋರುವುದರಿಂದ ಆತನು ಕ್ರಿ. ಶ. ೧೫೮೩ರಲ್ಲಿ ಹುಟ್ಟಿರಬೇಕೆಂದೂ, ಹಾಗಾದರೆ ಅಲ್ಲಿಂದ ಮುಂದೆ ೪೮ವರ್ಷಗಳ ಬಳಿಕ ಕ್ರಿ. ಶ. ೧೬೩೧ರಲ್ಲಿ ಅಂದರೆ ತನ್ನ ಸುಮಾರು ೪೭-೪೮ನೆಯ ವರ್ಷದಲ್ಲಿ ವೃಷಭೇಂದ್ರ ವಿಜಯವನ್ನೂ ಇನ್ನು ಬಳಿಕ ಪ್ರಾಯಶಃ ತನ್ನ ಷಷ್ಠಿ ಪೂರ್ತಿಯಾದಮೇಲೇನೋ ಕವಿಕರ್ಣರಸಾಯನವನ್ನೂ, ಆ ಬಳಿಕ ಶಬರ ಶಂಕರ ವಿಳಾಸವನ್ನು ರಚಿಸಿದ, ಹಾಗೂ ಮುಂದೆ ತಿಳಿವಂತೆ ನೈಷ್ಠಿಕ ಬ್ರಹ್ಮಚಾರಿಯಾಗಿದ್ದ ಷಡಕ್ಷರದೇವನು ೭೫ನ್ನಾದರೂ ವರ್ಷ ಬದುಕಿರಬೇಕೆಂದು ಅನುಮಾನಿಸಲಾಗುವುದರಿಂದ, ಆತನು ಕ್ರಿ. ಶ. ೧೬೫೮ರಲ್ಲಿ ಶಿವೈಕ್ಯನಾಗಿರಬಹುದೆಂದು ತೀರ್ಮಾನಿಸಬಹುದು.[23] ಶ್ರೀ ಗೋವಿಂದಪೈಯವರ ಈ ಹೇಳಿಕೆಗೆ

---

20. ಒದವಿದ ಚಂದ್ರಬಾಣನಿಧಿ ಭೂಧರ ಸಂಖ್ಯೆಯನಪ್ಪು ಸಂದ ಸಂ
ಮದಕರ ಶಾಲಿವಾಹನ ಶಕಾಬ್ದದ ಸಾಧು ನಳಾಬ್ದ ಮಾಘಮಾ
ಸದ ಸಿತಪಕ್ಷ ಪಂಚಮಿಯ ಭಾರ್ಗವವಾರದೊಳೀ ಪುರಾಣಮಾ
ದುದು ಪರಿಪೂರ್ಣಮಿಾಶಕೃಪೆಯಿಂದ ಷಡಕ್ಷರಿದೇವ ನಿರ್ಮಿತಂ

ವೃ. ವಿ. ಆ. ೪೨. ಪ. ೧೧೨.

21. ಶ. ಶ. ವಿಳಾಸದ ಆ-೫, ಪ. ೬೩ರಲ್ಲಿ ಕವಿಯು ತಾನು ಬರೆದ ಪದ್ಯಗ್ರಂಥಗಳ ಪರಿವಿಡಿಯನ್ನು ಕ್ರಮವಾಗಿ ಹೇಳಿರುವುದರಿಂದ ಅವನ ಮೊದಲ ಕಾವ್ಯವಾವುದು ಅನಂತರದ ಕಾವ್ಯವಾವುದು ಎಂಬುದು ಸ್ಪಷ್ಟಪಡುವುದು. ಆ ಪದ್ಯ ಹೀಗಿದೆ :

ಪ್ರವಿಮಳ ರಾಜಶೇಖರವಿಲಾಸ ಮಹಾಕೃತಿಯುಂ ವೃಷಾಧಿರಾ
ಜ ವಿಜಯ ಸತ್ಪ್ರಬಂಧಮುಮನೊಪ್ಪುವ ಕನ್ನಡದಿಂ ನಿಮಿರ್ಚಿದಂ
ಭುವನ ವಿನುತ್ಯಮಾಗೆ ಕವಿಕರ್ಣರಸಾಯನಮೆಂಬ ಕಬ್ಬಮಂ
ಪ್ರವಿತತ ಸಂಸ್ಕೃತೋಕ್ತಿಯೊಳಮರ್ಚಿದನಲ್ತೆ ಷಡಕ್ಷರಾಹ್ವಯಂ

22. ರಾ. ಶೇ. ವಿ. ೧೪-೧೭೨.

23. ಗೋವಿಂದಪೈ: ಷಡಕ್ಷರಿದೇವನ ಕಾಲ ನಿರ್ಣಯ : ಶ. ಸಾ: ಸಂ, ೪ ಸಂಚಿಕೆ ೪, ಪು: ೩೫೬.

ಅವರು ಕೊಟ್ಟ ತರ್ಕಬದ್ಧವಾದ ಅನೇಕ ವಿವರಣೆಗಳು ಸರಿಯೆಂದು ನಾವೂ ಒಪ್ಪಿದ್ದೇವೆ. ಈ ಅವಧಿಯಲ್ಲಿಯೇ ಕವಿ ಮೇಲೆ ಹೇಳಿದ ಕನ್ನಡ ಸಂಸ್ಕೃತ ಕಾವ್ಯಗಳಲ್ಲದೆ ಇನ್ನೂ ಅನೇಕ ಚಿಕ್ಕ ಪುಟ್ಟ ಕಾವ್ಯಗಳನ್ನು ಬರೆದಿದ್ದಾನೆ. ಅವು ಹೀಗೆ ಇವೆ :

(೧) ಶಿವಸ್ತೋತ್ರಮಂಜರಿ (೨) ಶಿವಸ್ತವಮಂಜರಿ (೩) ನಮಶ್ಶಿವಾಯಾಷ್ಟಕ (೪) ಶ್ರೀಮದನಾದಿಸಿದ್ಧಲಿಂಗಸ್ತವನ (೫) ವೀರಭದ್ರೋದಾಹರಣಗದ್ಯ (೬) ವೀರಭದ್ರದಂಡಕ (೭) ಇಂದುಧರಸ್ತೋತ್ರ (೮) ಶಿವಮಾನಸಸ್ತೋತ್ರ (೯) ಇಷ್ಟಲಿಂಗಸ್ತವನ (೧೦, ಬಸವಾಷ್ಟಕ (೧೧) ನೀಲಾಂಬಿಕಾ ಸ್ತೋತ್ರ (೧೨) ತತ್ತ್ವತ್ರಯ ಮಂಜರಿ (೧೩) ಶಿವಾಧಿಕ್ಯರತ್ನಾವಳಿ (೧೪) ಮಂಗಲಾಷ್ಟಕ (೧೫) ಲಿಂಗಾಷ್ಟಕ (೧೬) ಮಾತಿನಮಾಲಿಕೆ (೧೭) ಭಕ್ತಾಧಿಕ್ಯ ರತ್ನಾವಳಿ–ಇತ್ಯಾದಿ. ಈ ಚಿಕ್ಕಪುಟ್ಟ ಕೃತಿಗಳೆಲ್ಲ ಸಂಸ್ಕೃತದಲ್ಲಿ ರಚಿಸಿದವುಗಳೆಂದು ತೋರುತ್ತದೆ. ಇವುಗಳಲ್ಲಿ ಅನೇಕ ಗ್ರಂಥಗಳು ಪ್ರಚುರಗೊಂಡಿಲ್ಲ.

ಷಡಕ್ಷರದೇವನು ಸಂಸ್ಕೃತದಲ್ಲಿ ಬರೆದ ಕವಿಕರ್ಣರಸಾಯನ ಗ್ರಂಥವು ಮಾತ್ರ ಉತ್ತಮವಟ್ಟದ ೧೪ ಅಧ್ಯಾಯಗಳ ಕಾವ್ಯವಾಗಿದ್ದು ದೀರ್ಘವಾಗಿಯೇ ಇದೆ.[24] ಇದರಲ್ಲಿ ತಮಿಳುನಾಡಿನ ೯೩ ಜನ ಪುರಾತನರಲ್ಲಿ ಒಬ್ಬನಾದ ಮಾನಕಂಜರನ ಕಥೆ ಉಕ್ತವಾಗಿದೆ. "ಹರಿಹರನ ಉದಿತಮಾರ್ಗ"ದಿಂದಲೇ ರಚಿಸಿದ್ದಾಗಿ ಕವಿ ಇದರಲ್ಲಿ ಹೇಳಿರುವುದರಿಂದ ಈ ಸಂಪ್ರದಾಯ ಕನ್ನಡಕ್ಕೆ ಸಾಮಾನ್ಯವೆನಿಸುತ್ತಿದ್ದರೂ ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಇದು ವಿಶಿಷ್ಟ. ಸಂಸ್ಕೃತ ಕಾವ್ಯಪ್ರಪಂಚದಲ್ಲಿನ ಶ್ರೀಹರ್ಷನ 'ನೈಷಧೀಯ ಚರಿತೆ'ಗೆ ಸರಿದೊರೆಯಾಗಿ ನಿಲ್ಲುವ ಕಾವ್ಯಗುಣ ಇದರಲ್ಲಿ ಇದೆ ಎಂದು ಪಂಡಿತರು ತರ್ಕಿಸಿದ್ದಾರೆ.[25] ಮೇಲೆ ಹೇಳಿದ ಇನ್ನುಳಿದ ಯಾವತ್ತೂ ಚಿಕ್ಕ ಪುಟ್ಟ

---

24. ಪ್ರಥಮತಃ ಈ ಕಾವ್ಯದ ಎರಡು ಸರ್ಗಗಳನ್ನು ಶ್ರೀಯುತ ಕಾಡದೇವರ ಮಠರವರು ದೀರ್ಘವಾದ ಉಪೋದ್ಘಾತದೊಡನೆ ಪ್ರಕಟಿಸಿದರು. ಇತ್ತೀಚೆಗೆ ಖ್ಯಾತ ವಿದ್ವಾಂಸರಾದ ಡಾ. ಎಸ್. ಸಿ. ನಂದೀಮಠರವರು ಈ ಗ್ರಂಥವನ್ನು ಹೊರತರಲು ಪ್ರಯತ್ನಿಸಿ ನಾಲ್ಕು ಸರ್ಗಗಳನ್ನು ಮಾತ್ರ ಅಚ್ಚುಹಾಕಿಸಿದರು. ಪೂರ್ಣ ಗ್ರಂಥ ದೊರೆಯದುದರಿಂದಲೂ, ದೊರೆತಿರುವ ಭಾಗದಲ್ಲಿ ಅನೇಕ ಕಡೆಗೆ ಗ್ರಂಥಪಾತವಾಗಿರುವುದರಿಂದಲೂ ಆ ಗ್ರಂಥದ ಪ್ರಕಟನಾಕಾರ್ಯ ಸ್ಥಗಿತಗೊಂಡಿರುವಂತೆ ತಿಳಿದುಬರುವುದು. ಷಡಕ್ಷರ ಕವಿಯಾದರೋ ಈ ಗ್ರಂಥವನ್ನೂ ಪೂರ್ತಿ ಮಾಡಿದ ಹಾಗೆ ಶಬರ ಶಂಕರವಿಳಾಸದ ಆ. ೫. ಪ ೬೩ ರಲ್ಲಿ ಹೇಳಿದ–"ಭುವನವಿನುತ್ಯಮಾಗೆ ಕವಿಕರ್ಣರಸಾಯನಮೆಂಬ ಕಬ್ಬಮಂ ಪ್ರವಿತತ ಸಂಸ್ಕೃತೋಕ್ತಿಯೊಳೊಡರ್ಚಿದನಲ್ತೆ ಷಡಕ್ಷರಾಹ್ವಯಂ"–ಈ ಮಾತಿನಿಂದ ಸುವ್ಯಕ್ತವಾದರೂ ದುರ್ದೈವದಿಂದ ಈ ಗ್ರಂಥ ಪೂರ್ಣವಾಗಿ ದೊರೆಯದಿದ್ದುದೊಂದು ಕೊರತೆಯೇ ಆಗಿದೆ.

25. ವಿ. ಶಿವಾನಂದ ; ಸೀ. ಪು. ಷ. ದೇವ–ಪು. ೧೫ (ಪ್ರ. ಮು. ೧೯೬೭).

ಸಂಸ್ಕೃತ ಸ್ತೋತ್ರ, ಸ್ತವಾದಿ ಗ್ರಂಥಗಳು ಗಾತ್ರದಲ್ಲಿ ಚಿಕ್ಕವಾಗಿದ್ದರೂ ಸತ್ವದಿಂದ ಹಿರಿದಾಗಿವೆ. 'ಈ ಕಾವ್ಯಗಳ ಹೆಸರೇ ಸೂಚಿಸುವಂತೆ ಕವಿಯು ಶಿವ, ಭಕ್ತ, ವೀರಭದ್ರ, ನೀಲಾಂಬಿಕೆ, ಬಸವೇಶ್ವರಾದಿಗಳ ಆಧಿಕ್ಯವನ್ನು ಎತ್ತಿತೋರಿಸಿದ್ದಾನೆ. ಅಲ್ಲಿ ಆತನ ಭಕ್ತಿ ಪಾಂಡಿತ್ಯಗಳು ಇತಿಮಿತಿಯಿಲ್ಲದೆ ಗೋಚರವಾಗುತ್ತವೆ. ಶಿವಾಧಿಕ್ಯದಲ್ಲಿ ಆತನ ವೇದಾಗಮ ಪುರಾಣಗಳ ಆಧಾರದಿಂದ ಶಿವಾಧಿಕ್ಯವನ್ನು ಪ್ರತಿಷ್ಠಾಪನೆ ಮಾಡುವ ಅದ್ಭುತ ಜಾಣ್ಮೆಯನ್ನು ನೋಡಬೇಕು. ಅಲ್ಲಿ ಕವಿಯು ತರ್ಕಸರಣಿ ಬಹು ಸೂಕ್ಷ್ಮವಾಗಿ ಗೋಚರವಾಗುತ್ತದೆ. ಇದರಲ್ಲಿ ೧೦೧ ವೃತ್ತಗಳಿವೆ.[26] ವೀರಭದ್ರೋದಾಹರಣ ಗದ್ಯವು ಅತ್ಯಂತ ಕ್ಲಿಷ್ಟವಾಗಿದ್ದು ವಿವಿಧ ವೃತ್ತಗಳಿಂದ ಕೂಡಿ ಕವಿಯ ಸಂಸ್ಕೃತ ಪಾಂಡಿತ್ಯಕ್ಕೆ ಒರೆಗಲ್ಲಾಗಿ ನಿಲ್ಲುತ್ತದೆ. ಶಿವಸ್ತವ ಮಂಜರಿಯು ೧೦೧ ವೃತ್ತಗಳಲ್ಲಿದೆ..... ಭಕ್ತಾಧಿಕ್ಯ ರತ್ನಾವಳಿಯು ಭಕ್ತನ ಆಧಿಕ್ಯವನ್ನು ಪ್ರತಿಪಾದಿಸುತ್ತದೆ.[27]

**ಕವಿಯ ಜೀವನ ಪರಿಚಯ :** ಕವಿಯು ಮೊತ್ತಮೊದಲ ಗ್ರಂಥವಾದ ರಾಜಶೇಖರ ವಿಳಾಸವನ್ನು ರಚಿಸುವ ಪೂರ್ವದಲ್ಲಿ ಇವನು ಇದ್ದುದು ಧನುಗೂರಿನಲ್ಲಿ. ಅದೇ ಅವನ ಜನ್ಮಸ್ಥಳ.[28] ಅಲ್ಲಿನ ವೀರಶೈವ ಮಠವೊಂದರ ಪಟ್ಟಾಧ್ಯಕ್ಷ. ಆದರೆ ತಂದೆ ತಾಯಿ ಯಾರು ? ಎಂಬುದನ್ನು ಮಾತ್ರ ಹೇಳಿಕೊಂಡಿಲ್ಲ. ಸ್ವಾಮಿಗಳಾದ ಮೇಲೆ ತಮ್ಮ ಪೂರ್ವಾಶ್ರಮದ ತಂದೆ ತಾಯಿಗಳ ಹೆಸರನ್ನು ಹೇಳದೆ ಗುರುಪರಂಪರೆಯನ್ನು ಹೇಳುವುದು ಸಂಪ್ರದಾಯ. ಅದರಂತೆ ರೇಣುಕಾಚಾರ್ಯರು ಮೊದಲ್ಗೊಂಡು ಚಿಕ್ಕವೀರ ದೇಶಿಕನವರೆಗೆ ಗುರುಪರಂಪರೆಯನ್ನು ಹೇಳಿ, ಚಿಕ್ಕವೀರದೇಶಿಕನ ಕರಕಂಜಸಂಜಾತನೆನ್ನುವನು. ಆ ಪರಂಪರೆ ಹೀಗೆ : 'ಶಿವವಕ್ಷೋಭಸ್ಮರೇಣುಪ್ರಭವನೆನಿಸಿ ಅವನೀರಕ್ಷಣಾರ್ಥವಾಗಿ ಕೊಲ್ಲಿಪಾಕಿಯ ಈಶ್ವರನಲ್ಲಿ ಸಂಭವಿಸಿ ಜಂಗಮಾಕಾರದಿಂದ ಸುಳಿದು ಕುಂಭಜನೇ ಮೊದಲಾದ ಮುನಿಗಳಿಗೆ ಬೋಧಿಸುತ್ತ ಲಂಕೆಗೆ ಹೋಗಿ ವಿಭೀಷಣನಿಗೆ ಇಷ್ಟಾರ್ಥವಿತ್ತ ರೇವಣಪ್ರಭು.[29] ಆ ರೇವಣಪ್ರಭುವಿನ ಪುತ್ರನೂ ನಿಗ

---

26. ಪ್ರೊ. ಆರ್. ಸಿ. ಹಿರೇಮಠ, ಡಾ। ಎಂ. ಎಸ್. ಸುಂಕಾಪುರ ; ರಾ. ಶೇ. ವಿಳಾಸ, ಪ್ರಸ್ತಾವನೆ ಪು ೩೨–೩೩ (ಪ್ರ. ಮು. ೧೯೬೨.)

27. ವಿ. ಶಿವಾನಂದ : ಸೀ. ಪು. ಷ. ದೇವ, ಪು. ೧೫ (ಪ್ರ. ಮು. ೧೯೬೬).

28. (i) ಧನುಃಪುರೋದ್ಯಾನ ಯತೀಂದ್ರ ವಂಶ್ಯಃ । ಶ್ರೀ ಚಿಕ್ಕವೀರೇಶ್ವರಪಾಣಿಜಾತಃ ।
ಷಡಕ್ಷರೀಶಾಖ್ಯತಯಾ ಪ್ರಸಿದ್ಧಃ । ಕಲಾವಿದಾಸ್ತೇ ಕವಿತಾಪ್ರಗಲ್ಭಃ ॥
ಕ. ಕ. ರ. ಸ. ೧–ಶ್ಲೋ ೫೪

29. ರಾ. ಶೇ. ವಿ. ೧ನೆಯ ಅಧ್ಯಾಯದ ೫೩, ೫೪, ೫೫, ೫೬ರಲ್ಲಿ ರೇಣುಕಾಚಾರ್ಯರ ಎಲ್ಲ ವೃತ್ತಾಂತವನ್ನೂ ಸಂಕ್ಷೇಪವಾಗಿ ಹೇಳುವನು.

ಮಾಗಮಶಾಸ್ತ್ರಪಾರಗನೂ ಚತಸ್ವರೂಪನೂ ಆದ ರುದ್ರಮುನೀಶ್ವರನ[30] ಪರಂಪರೆಯಲ್ಲಿ ಅಖರ್ವಸರ್ವ ಶೈವಾಗಮವೇದಿಯೂ, ಅಗಣ್ಯಪುಣ್ಯ ಶೋಭಾಗತ ವಿಗ್ರಹನೂ, ಮುನೀಶ್ವರ ಚಕ್ರವರ್ತಿಯೂ ಆದ ಉದ್ದಾನಯತೀಶ್ವರ.[31] ಈ ಉದ್ದಾನಯತೀಶ್ವರನ ಪರಂಪರೆಯಲ್ಲಿ ಅನ್ನದಾನೀಶನೆಂಬುವನು.[32] ಈ ಅನ್ನದಾನೀಶನ ಶಿಷ್ಯನೇ ಶಿವನ ಸಮಸ್ತ ಕಳೆಗಳು ಬೊಬ್ಬುಳಿಗೂಡಿ ಬಂದಂತಿದ್ದ ರೇವಣಸಿದ್ಧದೇಶಿಕ.[33] ಈ ರೇವಣಸಿದ್ಧದೇಶಿಕನೇ 'ಧರಣೀರಮಣಿಯ ಹೃದಯಾಂಬುರುಹದವೊಲ್ ಮೆರೆದು ತೋರ್ಪ, ದನುಗೂರಿನಲ್ಲಿ ಆ ಕಮಲದ ಕರ್ಣಿಕೆಯ ಹಾಗೆ ಪ್ರಕಾಶಿಸುವ ಪ್ರಸಿದ್ಧಮಠದಲ್ಲಿ ಪರಮಹಂಸನಂತೆ ಶೋಭಿಸುತ್ತಿದ್ದವನು.[34] ಈ ರೇವಣಸಿದ್ಧದೇಶಿಕನ ಶಿಷ್ಯನೇ ಎಣ್ದೆಸೆಗಳಲ್ಲಿ ಹಬ್ಬಿದ ಚಿಕವೀರದೇಶಿಕೇಂದ್ರ.[35] ಈ ಚಿಕವೀರದೇಶಿಕೇಂದ್ರನ ಕರಕಂಜಸುಜಾತನಾದ ಷಡಕ್ಷರದೇವನು ದನುಗೂರು ಮಠದ ಪಟ್ಟಾಧಿಕಾರಿಯಾಗಿದ್ದನು. ಆ ಮಠವು ಈಗಿನ ಮಳವಳ್ಳಿ ತಾಲೂಕು ದನುಗೂರಿನಲ್ಲಿ ಇಂದಿಗೂ ಇದೆ. ಈ ಮಠದಿಂದ ಅನತಿದೂರದಲ್ಲಿ ಪೂರ್ವದಿಗ್ಭಾಗದಲ್ಲಿ ಒಂದು ಚಿಕ್ಕಬೆಟ್ಟವಿದೆ. ಅದರಲ್ಲಿರುವ ಒಂದು ಚಿಕ್ಕಗವಿಗೆ ಷಡಕ್ಷರಿ ಗವಿ ಎಂದು ಹೇಳಲಾಗುತ್ತಿದೆ. ಅನಂತರ ಬಾಲೇಂದುಪುರ (ಎಳಂದೂರು) ವರಾಧೀಶ ಮುದ್ದುಭೂಪಾಲನ ಕುಲಗುರುವಾಗಿ[36] ಎಳಂದೂರಿನಲ್ಲಿರತೊಡಗಿದನು. ಇವನ ಅನೇಕ ಕಾವ್ಯಗಳು ಈ ಎಳಂದೂರಿನಲ್ಲಿಯೇ ರಚಿತವಾದುವು.

---

30 ಅದೇ. ಪ. ೫೭.

31 ಅದೇ. ೫೮–೫೯.

32 ಅದೇ. ೬೦.

33 ಅದೇ. ೬೧.

34 ಅದೇ. ೬೨. ದನುಗೂರಿನ ಮಠದ ಸ್ವಾಮಿಗಳ ಪರಂಪರೆಗೆ ಮೊದಲಿನವರೇ ಈ ರೇವಣಸಿದ್ಧ ದೇಶಿಕರೆಂಬಂತೆ ತಿಳಿದುಬರುವುದು. ಏತತ್ಪೂರ್ವದವರಾದ ರುದ್ರಮುನಿ ಅನ್ನದಾನೀಶ, ಉದ್ದಾನೇಶ ಇವರು ಧನಗೂರು ಮಠಕ್ಕೆ ಸಂಬಂಧವಿಲ್ಲದವರೇ ? ಅವರು ಎಲ್ಲಿದ್ದರು ? ಯಾವ ಮಠಾಧಿಕಾರಿಗಳಾಗಿದ್ದರು? ಎಂಬುದು ಇಲ್ಲಿ ಕವಿಯ ಹೇಳಿಕೆಯಿಂದ ಇತ್ಯರ್ಥಗೊಳ್ಳುವುದಿಲ್ಲ. ಆದರೆ ಕ. ಕ. ರಸಾಯನದ ಸ. ೧, ಪ ೫೪ರಲ್ಲಿ 'ಧನುಪುರೋದ್ದಾನಯತೀಂದ್ರ' ಎಂಬ ಮಾತಿನಿಂದ ಉದ್ದಾನಯತೀಂದ್ರನೇ ದನುಗೂರು ಮಠದ ಮೂಲಪುರುಷನೆಂದು ಹೇಳಬಹುದಾಗಿದೆ.

35 ಅದೇ. ೬೬.

36 ಶಿವಾಧಿಕ್ಯರತ್ನಾವಳಿ—ಕೊನೆಯ ಗದ್ಯ : ಗೀರ್ವಾಣ ಕರ್ಣಾಟ ಭಾಷಾಮಯ ಸರಸ ಪ್ರಬಂಧ ರಚನಾಚಾತುರೀಧುರೀಣ ಶ್ರೀ ಬಾಲೇಂದು ಪುರವರಾಧೀಶ ಮುದ್ದುಭೂಮಿಪ ಕುಲಗುರು ಶ್ರೀ ಷಡಕ್ಷರಸ್ವಾಮಿ ರಚಿತಾ ಶಿವಾಧಿಕ್ಯರತ್ನಾವಳಿಃ ಸಂಪೂರ್ಣಾ.

ಪ್ರೊ. ಆರ್. ಸಿ. ಹಿ. ಡಾ. ಎಂ. ಎನ್. ಸು. ರಾ. ಶೇ. ವಿ. ಪ್ರಸ್ತಾವನೆ, ಪು. xviii

ದನುಗೂರುಮಠದ ಸ್ವಾಮಿಯಾಗಿ ಆಮೇಲೆ ಎಳಂದೂರಿನಲ್ಲಿ ಕವಿ ಏಕೆ ವಾಸ ಮಾಡಿದನು ? ಎಂಬುದು ಸಹಜವಾಗಿ ಉದ್ಭವಿಸುವ ಪ್ರಶ್ನೆ. ಈ ಪ್ರಶ್ನೆಗೆ ಉತ್ತರವನ್ನು ನಮಗೆ ಬಹುಮಟ್ಟಿಗೆ, ಈಗಿನ ಚಾಮರಾಜನಗರ ತಾಲೂಕಿನ ಮಲೆಯೂರು ಗ್ರಾಮದ ಕರಣಿಕಾಗ್ರಣಿಯಾದ ದೇವಚಂದ್ರನು (ಕ್ರಿ. ಶ. ೧೭೭೦) ಬರೆದ 'ರಾಜಾವಳಿ ಕಥೆ' ಎಂಬ ಗ್ರಂಥವು ಒದಗಿಸುತ್ತದೆ. ಅದರ ೧೩ನೆಯ ಅಧಿಕಾರದಲ್ಲಿ ನಮ್ಮ ಷಡಕ್ಷರಿಗೆ ಸಂಬಂಧಿಸಿದ ಕಥೆಯು ಬರುತ್ತದೆ: ಷಡಕ್ಷರದೇವನು ಎಳಂದೂರಿನ ಅಮೃತಾಂಬಿಕೆ (ಮೈಸೂರಿನ ದೊಡ್ಡ ದೇವರಾಜ ಒಡೆಯರ ಪತ್ನಿ)[37] ಯ: ತವರುಮನೆಯ ಗುರುವಾದ ಆರಾಧ್ಯಪುತ್ರನು. ಈ ಆರಾಧ್ಯಮನೆತನವು ಪ್ರಸಿದ್ಧವಾದ ವಿದ್ವಾಂಸರ ಪರಂಪರೆಯದಾಗಿತ್ತು. ಆಗ ಎಳಂದೂರು ಸುಪ್ರಸಿದ್ಧ ವಿದ್ಯಾಕೇಂದ್ರವೂ ಆಗಿತ್ತು. ಅಮೃತಾಂಬಿಕೆಯು ತನ್ನ ತವರುಮನೆಯ ಗುರುಪುತ್ರನೂ, ಪ್ರತ್ಯುತ್ಪನ್ನಮತಿಯೂ, ಮಹಾ ವಿದ್ವಾಂಸನೂ, ಬಾಲ್ಯದಲ್ಲಿಯೇ ಅಂದರೆ ೧೧ನೆಯ ವಯಸ್ಸಿನಲ್ಲಿಯೇ ಕವಿತ್ವಶಕ್ತಿಯನ್ನು ಪಡೆದವನೂ ಆದ ಷಡಕ್ಷರದೇವನನ್ನು ತಮ್ಮ ಊರಿಗೆ ಬರಮಾಡಿಕೊಂಡು, ಪ್ರೌಢ ವಿದ್ಯಾಭ್ಯಾಸಮಾಡಿಸಿ, ಅಲ್ಲಿಯೇ ಒಂದು ಮಠವನ್ನು ಕಟ್ಟಿಸಿಕೊಟ್ಟು, (ದನುಗೂರು ಮಠದ ಶಾಖಾಮಠವನ್ನಾಗಿಸಿ?), ಅದೇ ಊರಿನಲ್ಲಿ ಎಂದರೆ ಎಳಂದೂರಿನಲ್ಲಿ ಆ ಸ್ವತಂತ್ರ ಮತಿಯೂ ಮಹಾವಿದ್ವಾಂಸನೂ ಆದ ಷಡಕ್ಷರಿಯು ನಿಲ್ಲುವಂತೆ ಮಾಡಲು ಅದೆಷ್ಟು ಭಯಭಕ್ತಿ ಪ್ರೀತಿವಾತ್ಸಲ್ಯಗಳನ್ನು ತೋರಿಸಿರಬಹುದೆಂಬುದನ್ನು ಊಹಿಸಬಹುದಾಗಿದೆ.[38] ಈ ಅಮೃತಾಂಬೆಯೇ ಮೈಸೂರಿನ ಸುಪ್ರಸಿದ್ಧ ದೊರೆಯಾದ ಚಿಕ್ಕದೇವರಾಜ ಒಡೆಯರ ತಾಯಿ; ದೊಡ್ಡ ದೇವರಾಜ ಒಡೆಯರ ಪತ್ನಿ; ಮುದ್ದು ಭೂಪಾಲನ ಮಗಳು. ಈ ಕಾರಣ ದಿಂದ ಹರಿನಾಡಿನ ದೊರೆಯಾದ ಎಳಂದೂರಿನ ಮುದ್ದುಭೂಪಾಲನ ಮನೆತನಕ್ಕೂ, ಮೈಸೂರಿನ ರಾಜಮನೆತನಕ್ಕೂ ಅತ್ಯಂತ ಸಮೀಪದ ಗುರುತ್ವವನ್ನು ಪಡೆದ ವ್ಯಕ್ತಿ. ಮೇಲಾಗಿ ದೊಡ್ಡದೇವರಾಯ, ಮುದ್ದುಭೂಪಾಲ, ಅಮೃತಾಂಬೆ, ಇವರೆಲ್ಲ ವೀರಶೈವ

---

37 ಈ ಅಮೃತಾಂಬಿಕೆಯು ಎಳಂದೂರಿನ ಅಮೃತಾಂಬಿಕೆಯೆಂದೇ ಮೈಸೂರರಸರ ಧರ್ಮ ಪತ್ನಿಯಾಗಿ ಬಂದಮೇಲೂ ಕರೆಯಿಸಿಕೊಳ್ಳಲ್ಪಡುತ್ತಿದ್ದಳೆಂದು ತೋರುತ್ತದೆ.

38 ಈಯಂಶದ ಮೇಲಿಂದ ದನುಗೂರುಮಠವೇ ಎಳಂದೂರು ಮುದ್ದುಭೂಪಾಲನ ಗುರುಮಠ. ಈ ಗುರುಮನೆತನದ ಪುತ್ರನಾದ ಷಡಕ್ಷರದೇವನನ್ನು ಉದಾರಮತಿಯೂ, ಮೈಸೂರಿನ ಮಹಾರಾಣಿಯೂ ಆದ ಅಮೃತಾಂಬೆಯು ತನ್ನ ತವರೂರಿಗೆ ಅಂದರೆ ಎಳಂದೂರಿಗೆ ಕಳುಹಿಸಿ, ಅಲ್ಲಿ ಪ್ರೌಢವಿದ್ಯಾಭ್ಯಾಸಮಾಡಿಸಲು ಅನುಕೂಲತೆಯನ್ನೊದಗಿಸಿರಬೇಕು. ತನ್ನ ಮಗನಾದ ಚಿಕ್ಕದೇವರಾಜ ಒಡೆಯನೂ ಷಡಕ್ಷರದೇವನೂ ಕೂಡಿಯೇ ವಿದ್ಯಾಭ್ಯಾಸ ಮಾಡಿದರೆ ನ್ನುವುದಕ್ಕೆ 'ರಾಜಾವಳಿಕಥೆ' ಆಧಾರಗಳನ್ನೊದಗಿಸುತ್ತದೆ.

ನಿಷ್ಠಾಗರಿಷ್ಠರೆಂದೂ ತಿಳಿಯಲವಕಾಶವಿದೆ.[39] ಈ ಎರಡು ರಾಜಮನೆತನಗಳಲ್ಲದೆ ಷಡಕ್ಷರದೇವನಿಗೆ ಇನ್ನೊಂದು ರಾಜಮನೆತನದ ಸಂಬಂಧವೂ ಇತ್ತು ; ಅದೇ ಕೆಳದಿಯ ಅರಸರ ರಾಜಮನೆತನ.[40] ಹೀಗೆ ಮೂರು ರಾಜಮನೆತನಗಳ ಗೌರವಾದರಗಳಿಗೆ ಪಾತ್ರನಾಗಿದ್ದ ಷಡಕ್ಷರದೇವನ ಕೀರ್ತಿ ಆಗ ಸಾಕಷ್ಟು ಪ್ರಸಾರವಾಗಿತ್ತು. ಇವನು ರಚಿಸಿದ ಶಿವಾಧಿಕ್ಯರತ್ನಾವಳಿ, ಭಕ್ತಾಧಿಕ್ಯ ರತ್ನಾವಳಿಗಳ ಕೊನೆಯ ಗದ್ಯದಲ್ಲಿ "....ಶ್ರೀಬಾಲೇಂದು ಪುರವರಾಧೀಶ ಮುದ್ದುಭೂಮಿಪ ಕುಲಗುರು ಶ್ರೀಷಡಕ್ಷರದೇವ ವಿರಚಿತಾ....ಸಂಪೂರ್ಣಾ"

---

39 ದೊಡ್ಡದೇವರಾಜರು ಕಗ್ಗೆರೆಯ ತೋಂಟದ ಸಿದ್ಧಲಿಂಗೇಶ್ವರರಲ್ಲಿ ವಿಶೇಷ ಭಕ್ತಿಭಾವವನ್ನು ಹೊಂದಿದವರಾಗಿದ್ದು, ಆ ಮಠಕ್ಕೆ ದತ್ತಿಯನ್ನು ಬಿಟ್ಟಿದ್ದಾರೆ. ಮುದ್ದುರಾಜನು ಎಳಂದೂರು ಗೌರೀಶ್ವರ ದೇವಾಲಯಕ್ಕೆ ದತ್ತಿಯನ್ನು ಬಿಟ್ಟ ಬಗ್ಗೆ ಶಾಸನವಿದೆ.

—ಪ್ರೊ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ, ರಾ. ಶೇ. ವಿ. ಪ್ರಸ್ತಾ viii

40 ಕೆಳದಿಯ ಅರಸರು ಷಡಕ್ಷರದೇವನನ್ನು ಅವನ ಪ್ರವರ್ಧಮಾನಾವಸ್ಥೆಯಲ್ಲಿ ಕರೆಯಿಸಿ ಗೌರವಿಸಿ ಕಳುಹಿಸಿರಬಹುದೆಂದು ಊಹಿಸಲು ಅನೇಕ ಆಧಾರಗಳುಂಟು. ಇವನ ವೀರಭದ್ರೋದಾಹರಣಾ ಗದ್ಯವೆಂಬ ಸಂಸ್ಕೃತದ ಚಿಕ್ಕ ಗ್ರಂಥದ ಕೊನೆಯಲ್ಲಿ ಬರುವ ಸ್ರಗ್ಧರಾವೃತ್ತದಲ್ಲಿಯ "....ಗದ್ಯಂ ಹೃದ್ಯಂ ವ್ಯಧತ್ತ ಪ್ರಣವ ಪರಿಮಳತ್ಪಂಚ ವರ್ಣಾಖ್ಯದೇವಃ । ಕ್ಷಿಪ್ರಂ ಪ್ರದಾತುಃ ಬುಧನುತ ಕೆಳದೀವೀರಭದ್ರೇಶ್ವರಸ್ಯ"—ಎಂದಿರುವುದರಿಂದ ಈ ಚಿಕ್ಕ ಗ್ರಂಥವು ಕ್ರಿ. ಶ. ೧೫೪೫ ರಿಂದ ೧೫೫೮ರ ವರೆಗೆ ಆಳಿದ ದೊಡ್ಡ ಸಂಕಣ್ಣನಾಯಕನಿಂದ ಪ್ರತಿಷ್ಠಿತನಾದ ವೀರಭದ್ರಮೂರ್ತಿಯ ಸ್ತವವೇ ಆಗಿದೆ. ಇದರಲ್ಲಿ ಕೆಳದಿಯ ಆ ವೀರಭದ್ರನನ್ನು 'ಭದ್ರಪ್ರದಾತಾ' (೧. ಮಂಗಲದಾತಾರನು, ೨. ಭದ್ರ ಎಂಬುವನ ದಾತಾರನು) ಎಂದಿರುವಲ್ಲಿ 'ಭದ್ರ'ದಲ್ಲಿ ಶ್ಲೇಷೆಯನ್ನು ಹೂಡಿ ಕ್ರಿ. ಶ. ೧೬೬೧ ರಿಂದ ೧೬೬೪ರ ವರೆಗೆ ಕೆಳದಿಯಲ್ಲಿ ಆಳಿದ ಭದ್ರಪ್ಪನಾಯಕನ (ಕೆಳದಿನೃಪವಿಜಯ viii) ಹೆಸರನ್ನು ಧ್ವನಿಸಿರಬಹುದೇ ? ಎಂದು ತೋರುವುದರಿಂದ ಇದನ್ನು ಒಪ್ಪಿದರೆ, ವೀರಶೈವಯತಿಶ್ರೇಷ್ಠನೂ, ಕವಿಶ್ರೇಷ್ಠನೂ ಆದ ಷಡಕ್ಷರಿಯನ್ನು ಭದ್ರಪ್ಪನಾಯಕನು ಕೆಳದಿಗೆ ಕರೆಯಿಸಿಕೊಂಡಿರಬೇಕೆಂದೂ, ಹಾಗಾದರೆ ಅಲ್ಲಿ ವೀರಭದ್ರಸ್ತವವನ್ನು ಷಡಕ್ಷರಿ ರಚಿಸಿರಬೇಕೆಂದೂ, ಆ ಭದ್ರಪ್ಪನಾಯಕನ ಕಾಲಾನಂತರ ತನ್ನ ವೃಷಭೇಂದ್ರವಿಜಯದಲ್ಲಿ (ಕ್ರಿ. ಶ. ೧೬೭೮) ವೀರಭದ್ರನನ್ನು 'ಭದ್ರಶ್ರೀದಾನಿ' (ಅ. ೧. ಪ. ೭) ಎಂದು ನುತಿಸಿರುವಲ್ಲಿಯೂ ಅದೇ ಪ್ರಕಾರ ಶ್ಲೇಷೆಯಿಂದ ತನ್ನನ್ನು ಗೌರವಿಸಿದ ಭದ್ರಪ್ಪನಾಯಕನನ್ನು ನೆನವರಿಸಿ ಆತನಿಗೆ ಸೌಭಾಗ್ಯವನ್ನು ನೀಡಿದಾತನು ಎಂದು ಭೂತಕಾಲಾರ್ಥದಲ್ಲಿ ಸೂಚಿಸಿರಬಹುದೆಂದೂ ಅನುಮಾನಿಸಲಾಗುತ್ತದೆ;

—ಗೋವಿಂದ ಪೈ ; ಷ. ದೇ, ಕಾಲನಿರ್ಣಯ ಶರಣ ಸ್ಸಾ, ೪-೬ ಪು. ೩೪೯-೬೦

ಹೀಗೆ ಸ್ವತಃ ತಾನೇ ಮುದ್ದುಭೂಪಾಲನ ಕುಲಗುರು ಎಂದು ಹೇಳಿಕೊಂಡಿದ್ದಾನೆ.[41] ರಾಜಾವಳಿ ಕಥೆಯು–ಷಡಕ್ಷರಿಯನ್ನು ಎಳಂದೂರಿಗೆ ಬರಮಾಡಿಕೊಂಡ ಅಮೃತಾಂಬೆ, ನೇಮಿಚಂದ್ರನ ಲೀಲಾವತಿ, ನಾಗವರ್ಮನ ಕಾದಂಬರಿಯೇ ಮೊದಲಾದ ವಸ್ತುಕಕಾವ್ಯಗಳಲ್ಲಿ ನಿಪುಣನೆನಿಸಿದ ಇವನಿಂದ ರಾಜಶೇಖರವಿಳಾಸವೆಂಬ ಹೊಸದೊಂದು ಕಾವ್ಯವನ್ನು ಮಾಡಿಸಿದಳೆಂದು ಸಾಕ್ಷ್ಯವನ್ನೊದಗಿಸುವುದು.[42]

ರಾಜಶೇಖರ ವಿಳಾಸ ಕಾವ್ಯ ಹುಟ್ಟಲು ಕಾರಣವನ್ನು ಹೇಳುವ ಜನಜನಿತವಾದ ಒಂದು ಕಥೆ ಪ್ರಸಿದ್ಧವಿದೆ. ಅದಕ್ಕೆ ಚಾರಿತ್ರಿಕವಾಗಿ ಎಷ್ಟರಮಟ್ಟಿಗಿನ ಬೆಲೆಕೊಡಬೇಕೋ ತಿಳಿಯದು. ಆ ಕಥೆ ಹೀಗೆ :

"ಎಳಂದೂರಿನಲ್ಲಿ ಒಂದುರಾತ್ರಿ ಕಾವ್ಯದ ಮೆರವಣಿಗೆ ನಡೆಯಿತು. ನೇಮಿಚಂದ್ರನ ಲೀಲಾವತಿಯನ್ನು ಆನೆಯಮೇಲೆ ಅಂಬಾರಿಯಲ್ಲಿಟ್ಟು, ಆನೆಯ ಹೊಟ್ಟೆಯ ಕೆಳಗೆ ಒಂದು ತೊಟ್ಟಿಲನ್ನು ಕಟ್ಟಿದ್ದರು. ಮೆರವಣಿಗೆ ಷಡಕ್ಷರದೇವನ ಮಠದ ಮುಂದೆಯೇ ಬಂದಿತು. ಭಕ್ತರು ತೊಟ್ಟಿಲನ್ನೇಕೆ ಕಟ್ಟಿರುವಿರೆಂದು ಕೇಳಲು, ಲೀಲಾವತಿಕೃತಿರಸವು ಕೆಳಗೆ ಬೀಳಬಾರದೆಂಬ ಉದ್ದೇಶದಿಂದ ಕಟ್ಟಲಾಗಿದೆ, ಎಂದು ತಿಳಿದುಬಂದಿತು. ಷಡಕ್ಷರದೇವನಿಗೆ ಈ ವಿಷಯ ವಿದಿತವಾಗಲು ಲೀಲಾವತಿಗಿಂತಲೂ ಹೆಚ್ಚು ರಸಭರಿತವಾದ ಒಂದು ಕಾವ್ಯ ತಮ್ಮಲ್ಲಿರುವುದೆಂದು ಹೇಳಿ, ಈ ವಿಷಯ ನಿಷ್ಕರ್ಷೆಯಾಗುವವರೆಗೆ ಮೆರವಣಿಗೆಯನ್ನು ನಿಲ್ಲಿಸಲು ತಿಳಿಸಿದನು. ಮುಂದೆ ಒಂದು ವರ್ಷದೊಳಗಾಗಿ, ರಾಜಶೇಖರ ವಿಳಾಸವನ್ನು ರಚಿಸಿ ತೋರಿಸಿದನು. ಈ ಕಾವ್ಯ ಲೀಲಾವತಿ ಮೊದಲಾದ ಗ್ರಂಥಗಳಿಗಿಂತ ಹೆಚ್ಚು ರಸಭರಿತವಾದುದೆಂದು ವಿದ್ವಜ್ಜನರು ಅಭಿಮತವಿತ್ತರು."[43]

ಈ ಕಥೆ ಹೇಗೇ ಇರಲಿ. ಕವಿ ವಿದ್ಯಾಭ್ಯಾಸಮಾಡಿ, ಪಾಂಡಿತ್ಯ ಸಂಪಾದಿಸಿ, ಅನೇಕ ಕಾವ್ಯಾದಿಗಳ ಜ್ಞಾನವನ್ನು ಎಳಂದೂರಿನಲ್ಲಿಯೇ ಮಾಡಿಕೊಂಡು, ಹೊಸ ಶೃಂಗಾರರಸಭರಿತವಾದ ಕಾವ್ಯವೊಂದನ್ನು ಎಳಂದೂರಿನಲ್ಲಿಯೇ ರಚಿಸಿದನೆಂಬುದು ಮುಖ್ಯಅಂಶ. ಆದರೆ ಇಲ್ಲಿ ತೋರುವ ಇನ್ನೊಂದು ಸಂಶಯವೆಂದರೆ ಈ ಕಾವ್ಯದಲ್ಲಿ (ರಾಜಶೇಖರ ವಿಳಾಸದಲ್ಲಿ) ಎಲ್ಲಿಯೂ ಎಳಂದೂರಿನ ಹೆಸರನ್ನಾಗಲಿ, ಮೇಲಿನ ಕಥೆಯನ್ನು ಪುಷ್ಟೀಕರಿಸುವ ಯಾವ ಅಂಶವನ್ನಾಗಲಿ ಸೂಚಿಸಿಲ್ಲ. ಇದರಲ್ಲಿ ಕವಿ ದನುಗೂರಿನ ಬಗೆಗೆ ದನುಗೂರು ಮಠದ ಗುರುಪರಂಪರೆಯ ಬಗೆಗೆ ಹೇಳಿಕೊಂಡುದು ಮಾತ್ರ ಕಂಡು ಬರುತ್ತದೆ. ಆದರೆ ಕುಕವಿನಿಂದೆಯನ್ನು ಮಾತ್ರ ಒಂದನೆಯ ಆಶ್ವಾಸದಲ್ಲಿ ಧಾರಾಳ

---

41 ಅದೇ. ಪು. ೩೫. 42 ಅದೇ. ಕ. ಕ. ಚ. ಭಾ ii ಪು. ೪೪೨.

43 ಪ್ರೊ. ಆರ್. ಸಿ. ಹಿರೇಮಠ, ಡಾ. ಸುಂಕಪುರ : ರಾ. ಶೇ. ವಿ. ಪ್ರಸ್ತಾ–ಪು xvii (ಪ್ರ. ಮು-೧೯೬೨).

ವಾಗಿಯೇ ಮಾಡಿ, ಸ್ವಕಾವ್ಯೋತ್ಕರ್ಷ ಆತ್ಮಶ್ಲಾಘನೆಯನ್ನು ಪ್ರತಿಷ್ಠಾಪಿಸಿಕೊಂಡಿದ್ದಾನೆ.[44] ಆದುದರಿಂದ ಈ ವಿಷಯದಲ್ಲಿ ಹೀಗೆ ಹೇಳಬಹುದು : ರಾಜಶೇಖರ ವಿಳಾಸವನ್ನು ಹಳೆಯ ದನುಗೂರಿನ ಮಠದ ಸಂಬಂಧ, ಹೊಸದಾಗಿ ಆದ ಎಳಂದೂರು ಮಠದ ಸಂಬಂಧದ ಕಾಲದಲ್ಲಿ ಈ ಮೊದಲೇ ತಿಳಿಸಿದಂತೆ ಕವಿಯ ೩೫ನೆಯ ವಯಸ್ಸಿನ ಸುಮಾರಿನಲ್ಲಿ ರಚಿಸಿರಬೇಕು. ಅಲ್ಲದೆ ಷಡಕ್ಷರದೇವನು ಎಳಂದೂರು ಮಠದ ಸ್ವಾಮಿಯಾದ ಮೇಲೆ ದನುಗೂರು ಮಠದ ಸಂಬಂಧವನ್ನು ತ್ಯಜಿಸಿದನೆಂದಲ್ಲ. ಈ ಎರಡೂ ಮಠಗಳ ಅಧ್ಯಕ್ಷನಾಗಿದ್ದುಕೊಂಡೇ ತನ್ನ ಸ್ವಾಮಿತ್ವಕಾರ್ಯವನ್ನು ಮುಂದುವರಿಸಿಕೊಂಡಿರಬೇಕು. ವೀರಶೈವ ಪಟ್ಟಾಧ್ಯಕ್ಷ ಸ್ವಾಮಿಗಳಾಗಲಿ, ಜಂಗಮ (ವಿರಕ್ತ) ಮೂರ್ತಿಗಳಾಗಲಿ ಒಂದಾಗಲಿ ಒಂದಕ್ಕಿಂತ ಹೆಚ್ಚಾಗಲಿ ಮಠಗಳ ಸ್ವಾಮಿಗಳಾಗಿ ಮುಂದುವರಿಯುವುದು ಇಂದಿಗೂ ನಡೆದು ಬಂದ ಪದ್ಧತಿಯೇ ಆಗಿದೆ. ದನುಗೂರು ಮಠಕ್ಕೂ ಎಳಂದೂರು ಮಠಕ್ಕೂ ಬಹಳ ದೂರವೇನೂ ಅಲ್ಲ ; ಒಂದು ದಿನದ ದಾರಿ. ರಾಜಗುರುವಾದ ಷಡಕ್ಷರದೇವನಿಗೆ ಆ ಕಾಲದಲ್ಲಿ ಈ ಹಾದಿಯನ್ನೇನು ನಡೆದೇ ಕಳೆಯಬೇಕಾದ ಪ್ರಮೇಯವೂ ಇದ್ದಿರಲಿಕ್ಕಿಲ್ಲವೆಂಬುದು ಯೋಚಿಸುವ ಅಂಶ. ಅಂತೂ ಷಡಕ್ಷರದೇವನ ಜೀವನದ ಮೇಲೆ ಎಳಂದೂರಿನ ಪ್ರಭಾವನೇ ಹೆಚ್ಚು. ಅವನ ಕೊನೆಯ ದಿನಗಳೆಲ್ಲ ಎಳಂದೂರಿನಲ್ಲಿಯೇ ಕಳೆದಿವೆ ; ಅವನ ಸಮಾಧಿಯಿರುವುದೂ ಅಲ್ಲಿಯೇ.

ಕವಿ ಎಳಂದೂರಿನಲ್ಲಿದ್ದಾಗ ಅಲ್ಲಿಗೆ ಅನತಿದೂರದಲ್ಲಿಯೇ ಇರುವ ನಿಜಗುಣಶಿವಯೋಗಿ ಮತ್ತು ಮುಪ್ಪಿನ ಷಡಕ್ಷರಿಗಳ ತಪೋಭೂಮಿಯೂ, ಪ್ರಕೃತಿಯ ಸೊಬಗಿನ ಸೂರೆಯೂ ಆದ ಶಂಭುಲಿಂಗನ ಬೆಟ್ಟಕ್ಕೆ ವಿಶೇಷವಾಗಿ ಹೋಗಿಬರುತ್ತಿದ್ದನೆಂದು ಪ್ರತೀತಿಯಿದೆ. ಈ ಬೆಟ್ಟದಲ್ಲಿರುವ ಒಂದು ಗುಹೆಗೆ 'ಷಡಕ್ಷರಿ ಗುಹೆ' ಎಂದು ಈಗಲೂ ಜನರು ಕರೆಯುತ್ತಿರುವರು. ಆದರೆ ಈ ಗುಹೆಗೆ ಈ ಹೆಸರು ಬರಲು ಮುಪ್ಪಿನ ಷಡಕ್ಷರಿಯ ಸಂಬಂಧದಿಂದುಂಟಾಯಿತೋ, ಅಥವಾ ಷಡಕ್ಷರದೇವನ ಸಂಬಂಧದಿಂದ ಆಯಿತೋ ಹೇಳುವುದು ಕಷ್ಟ. ಅಂತೂ ಜನರು ಮಾತ್ರ ರಾಜಶೇಖರ ವಿಳಾಸ ಕರ್ತೃವಾದ ನಮ್ಮ ಷಡಕ್ಷರದೇವನ ಗುಹೆಯೆಂದೇ ಹೇಳುತ್ತಿರುವುದು ಯೋಚಿಸುವ ವಿಷಯ. ದನುಗೂರಿನ ಹತ್ತಿರವೂ 'ಷಡಕ್ಷರಿ ಗುಹೆ'ಯಿದೆ ಯೆಂದು ಈ ಹಿಂದೆಯೇ ತಿಳಿಸಿದೆ. ಕಾವ್ಯಸಮಾಧಿಗೆ ಗುಹೆಯ ಅವಶ್ಯಕತೆ ಷಡಕ್ಷರದೇವನಿಗೆ ಇದ್ದಿತೆಂದು ಊಹಿಸಬಹುದು.

**ಕವಿಯ ಮೇಲೆ ಇತರರ ಪ್ರಭಾವ :** ಕವಿಯು ರಾಜಶೇಖರ ವಿಳಾಸದಲ್ಲಿ ಹಿಂದಿನ ಅನೇಕ ಕವಿಗಳನ್ನು ಹೆಸರಿಸಿದ್ದರೂ ಗುಬ್ಬಿಯಮಲ್ಲಣಾರ್ಯ, ಹರಿಹರ ಇವರಿಬ್ಬರ ಪ್ರಭಾವ ಇವನ ಮೇಲೆ ಅಧಿಕ. ಅವರಲ್ಲೂ ಅಚ್ಚಳಿಯದ ಪ್ರಭಾವ ಬೀರಿದ ಏಕೈಕ

---

44 ಸ್ವಕೃತಿ ಶ್ಲಾಘನೆಗೆ :–ಆ. ೧ ಪ. ೭೯ರಿಂದ ೮೯ರ ವರೆಗೆ ಮತ್ತು ಆ-೧೪. ಪ.೭೨, ಮತ್ತು ೧೭೩. ನೋಡಬಹುದು. ಕುಕವಿನಿಂದೆ-ಆ-೧, ಪ. ೧೯ರಿಂದ ೩೬ರವರೆಗೆ.

ವ್ಯಕ್ತಿ ಹರಿಹರ. 'ಹರಿಹರನ ಉದಿತಮಾರ್ಗ'ವೇ ಷಡಕ್ಷರದೇವನ ಮಾರ್ಗ. ಕರ್ನಾಟಕ ಭಾಷಾಕವಿತ್ವದಲ್ಲಿ ಅವನೊಬ್ಬನೇ ಹೆಸರಾಂತ ವ್ಯಕ್ತಿ. ಅವನ ಮೃದುಮಧುರಪದ ವಿಲಾಸಾಸ್ಪದವಾದ ರಸವಿಸರ ಪ್ರಕಾಶ[45] ಷಡಕ್ಷರದೇವನ ಭಾವಮನಗಳನ್ನೆಲ್ಲ ಸೂರೆಗೊಂಡಿದೆ. ಅಷ್ಟೇ ಅಲ್ಲ, ಈತನು ಅನೇಕ ರಾಜಮನೆತನಗಳ ಸಂಪರ್ಕ ಪಡೆದವನಾದರೂ ಹುಟ್ಟುಸಾವಿನ ಕೋಟಲೆಗೊಳಗಾದ ಆ ರಾಜಾದಿಗಳನ್ನು ಹೊಗಳಲಿಲ್ಲ. ಯಾರು 'ಇಂದ್ರ ಚಂದ್ರ ರವಿ ಕರ್ಣ ದಧೀಚಿ...[46] ಇತ್ಯಾದಿಯಾಗಿ ರಾಜರನ್ನು ಹೊಗಳಲು ತನ್ನ ನಾಲಿಗೆಯನ್ನು ಮಾರಲಿಲ್ಲವೋ, 'ತೃಣದಹಾಹೆ' ಗಳಂತೆ, 'ಕಪ್ಪಿನ ಶರೀರಿ'ಗಳಂತೆ ಇರುವ ನರರನ್ನು ಓಲೈಸದೆ, ಜೀಯಾ ಎನ್ನದೆ ಯಾರು ಅಕ್ಷಯಸಂಪತ್ತನ್ನೂ ಕೆಡದಕೀರ್ತಿಯನ್ನೂ ಕೊಡುವ ಶಿವನನ್ನೂ ಅವನ ಭಕ್ತಿ ಗುಣಗಳನ್ನೂ ಕೊಂಡಾಡಿ ಕೃತಾರ್ಥರಾದರೋ ಅಂಥ ಹರಿಹರನ ಉದಿತಮಾರ್ಗ ಷಡಕ್ಷರದೇವಮಾರ್ಗ. ಅದರಂತೆಯೇ ತಾನು ಶಿವ ಮತ್ತು ಅವನ ಭಕ್ತವೃಂದವನ್ನು ಮಾತ್ರ ಕೊಂಡಾಡುತ್ತೇನೆ[47] ಎಂದು ಪೂಣ್ದು ಕಾವ್ಯನಿರ್ಮಾಣಕ್ಕೆ ತೊಡಗುವನು. ಇಂಥ ಕೆಚ್ಚು ನೆಚ್ಚುಗಳಿಂದ ಕೂಡಿದವನು ಕಾವ್ಯಧರ್ಮವನ್ನೆತ್ತಿ ಹಿಡಿದಾನಲ್ಲದೆ, ಅಭವಪ್ರಸಾದಬಲದಿಂದ ಲಭ್ಯವಾದ ಅದನ್ನು ಅಭವನ ವೈಶಿಷ್ಟ್ಯವನ್ನು ಜನಮನದಲ್ಲಿ ಬಿತ್ತಲು ಪ್ರಯೋಗಿಸಿಯಾನಲ್ಲದೆ ಧನಕನಕದ ಆಸೆಗಾಗಲಿ, ಇನ್ನಾವುದೋ ಆಮಿಷಕ್ಕಾಗಲಿ ಮಾರಿಕೊಳ್ಳಲಾರ. ವೀರಶೈವ ಕಾವ್ಯಧರ್ಮದ ಮಾರ್ಗವನ್ನೂ ಹರಿಹರ ೧೨ನೆಯ ಶತಮಾನದಲ್ಲಿ ಹಾಕಿಕೊಟ್ಟ. ಅವನ ಮಾರ್ಗ ತರ್ಕಬದ್ಧವೂ ಹೌದು. ವೈರಾಗ್ಯಶಾಲಿಗಳು ಅದೇ ಮಾರ್ಗದಲ್ಲೇ ಹೋಗಬೇಕು. ಹಾಗಿಲ್ಲದಿದ್ದರೆ ಕಾವ್ಯಧರ್ಮವನ್ನೇ ಮಾರಿಕೊಂಡಂತಾಗುತ್ತದೆ. ರತ್ನಾಕರವರ್ಣಿ ತನ್ನ ರತ್ನಾಕರ ಶತಕದಲ್ಲಿ ಹೇಳುವಂತೆ—ಕವಿತಾಶಕ್ತಿಯೊಂದು

---

45 ಮೃದು ಮಧುರ ಪದವಿಳಾಸಾ । ಸ್ಪದರಸವಿಸರ ಪ್ರಕಾಶ ಕರ್ಣಾಟ ಕವಿ । ತ್ವದೊಳೊರ್ವನೆ ಪೆಸರ್ವಡೆದ । ಗ್ಗದ ಹರಿಹರನುದಿತ ಮಾರ್ಗದಿಂದಿದನೊರೆವೆಂ ॥ (ರಾ. ಶೇ. ವಿ. ಅ. ೧-೭೯.)

46 ಮನುಜರ ಮೇಲೆ ಸಾವವರ ಮೇಲೆ ಕನಿಷ್ಟರ ಮೇಲೆ ಪದ್ಯಮಂ
ತನತನಗಿಂದ್ರ ಚಂದ್ರರ ವಿಕರ್ಣ ದಧೀಚಿ ಬಲೀಂದ್ರರೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ

ಹರಿಹರ : ಪಂ. ಶತಕ ಪ-೮೨.

47 "....ಮಹಿತ ಮಹಿಮಾಸ್ಪದನಂ, ಶಿವನಂ, ತದೀಯ ಶರಣಪ್ರಜಮಂ ಪಡೆದು ಮುದಮೊದವೆ ಬಲ್ಲಂದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ"—ರಾ. ಶೇ. ವಿ. ಅ. ೧, ಪ. ೨೨.

ಕಲ್ಪವಲ್ಲರಿ. ಅದನ್ನು ಸದ್ಧರ್ಮವೆಂದೆಂಬ ಮೇರುವಿನಲ್ಲಿ ಬಿತ್ತಿ ಮನೋವಿಶುದ್ಧಿಯನ್ನೂ ಬಲ ವಿದ್ಯಾದಿಗಳನ್ನೂ ಕವಿಯು ಪಡೆಯಬೇಕು ; ಅದನ್ನು ಓದುವವರೂ ಪಡೆಯ ಬೇಕಲ್ಲವೆ ! ಹಾಗಲ್ಲದಿದ್ದರೂ ಕಾವ್ಯ ಕಲ್ಪಾಂತಚಿರಸ್ಥಾಯಿ ಎಂಬ ನುಡಿಗೇ ಭಂಗ. ಹರಿದೇವನು ಹುಟ್ಟಿಹುಟ್ಟಿ ಉರುಳುವ ನರರ ಮೇಲೆ ಉಬ್ಬುಬ್ಬಿ ಕಬ್ಬಗಳನ್ನು ಬರೆದು ವೃಥಾಹಾಳಾದ ಕಬ್ಬಿಗನಲ್ಲ. ಅವನು ಕೈವಲ್ಯಲಕ್ಷ್ಮೀಪತಿಯಾದದ್ದು ದೇವದೇವೋತ್ತ ಮನನ್ನೂ ಮತ್ತು ಆ ದೇವದೇವೋತ್ತಮನ ಶರಣರನ್ನೂ ಹಾಡಿದುದರ ಫಲವಾಗಿ ಎಂದು ಷಡಕ್ಷರದೇವನ ಪೂರ್ಣವಿಶ್ವಾಸ. ಆದ್ದರಿಂದ ಅಂಥ ಶಿವಕವಿಯಾದ ಹರೀಶ್ವರನಿಗೆ ಸಾಟಿ ಯಾದವನು ಯಾವನಿದ್ದಾನೆ ? ಎಂದೇ ಸವಾಲು ಹಾಕುತ್ತಾನೆ, ಕಾವ್ಯಪ್ರಪಂಚಕ್ಕೆ.[48] ಈ ಮಾರ್ಗ ರುಚಿಸಿದಷ್ಟು ಇನ್ನಾವ ಮಾರ್ಗವೂ ಷಡಕ್ಷರದೇವನಿಗೆ ರುಚಿಸಲಿಲ್ಲ. ವೀರ ಸಂನ್ಯಾಸಿಯಾದ ಇವನಿಗೆ ಧನಕನಕದಾಸೆಯಾಗಲಿ, ಮೆರೆಯಬೇಕೆಂಬಾಸೆಯಾಗಲಿ, ಬಿರುದು ಬಾವುಲಿಗಳ ಆಸೆಯಾಗಲಿ ದೂರವೆ. 'ಇಳಾಪತಿ ಪೂಜಿತ ಪಾದಪಂಕಜ'[49] ನಾದ ತಾನು ಇಳಾಪತಿಗಳನ್ನು ಆಸೆ ಆಮಿಷಗಳಿಂದ ಹೊಗಳುವುದೊಂದು ಕುಂದು. ಆದುದರಿಂದ ಕವಿ ತನ್ನ ಸರ್ವಶಕ್ತಿಗಳನ್ನೂ ಶಿವನ ವರ್ಣನೆಗೆ, ಶಿವನುಂತ್ರ ಮಾಹಾತ್ಮ್ಯೆಗೆ, ಶಿವಶರಣರ ವರ್ಣನೆಗೆ, ಶಿವಲೀಲಾಕಥನಕ್ಕೆ, ಶಿವನ ಮತ್ತು ಶಿವಶರಣರ ಸ್ತೋತ್ರಸ್ತವ ನಾದಿಗಳಿಗೆ ಮೀಸಲುಗೊಳಿಸಿ ರಾಜಶೇಖರ ವಿಳಾಸ, ವೃಷಭೇಂದ್ರವಿಜಯ, ಶಬರಶಂಕರ ವಿಳಾಸಗಳೆಂಬ ಪ್ರೌಢ ಕನ್ನಡ ಚಂಪೂಪ್ರಬಂಧಗಳನ್ನೂ, ಕವಿಕರ್ಣರಸಾಯನವೆಂಬ ಸಂಸ್ಕೃತದ ಮಹಾಕೃತಿಯನ್ನೂ, ಸುಮಾರು ೧೬೦ರಷ್ಟು ಸ್ತೋತ್ರ ಸ್ತವನಾದಿ ಲಘು ಕಾವ್ಯಗಳನ್ನೂ ಬರೆದು ೧೭ನೆಯ ಶತಮಾನದುದ್ದಗಲಕ್ಕೂ ಬಹು ಎತ್ತರವಾಗಿ ಕಾಣುತ್ತ, ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿದ್ದ ಆಗಿನ ಸಮಸ್ತ ಪಂಡಿತ ಪ್ರಕಾಂಡರಲ್ಲಿ ಮಹಾಪ್ರಕಾಂಡನೆನಿಸಿದ್ದನೆಂದು ಹೇಳಬಹುದಾಗಿದೆ.

---

48 i ಧರೆಯೊಳ್ ಮೇಣ್ ಪುಟ್ಟಿ ಪುಟ್ಟುತ್ತುರುಳ್ವ ನರರ ಮೇಲುರ್ಬಿ ಕಬ್ಬಂಗಳಂ ಬಿ
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್
ಹರಿದೇವಂ ದೇವರದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ
ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್

(ರಾ. ಶೇ. ವಿ. ೧-೧೯)

ii ಶಿವಸ್ಯ ತದ್ಭಕ್ತ ತದ್ಭಕ್ತ ತತೋರ್ವಿಧಾಯ । ಕೃತೀರನೇಕಾ ಸುಕವಿಪ್ರಣುತ್ಯಾಃ।
ಶಿವಸ್ಯಸಾಯುಜ್ಯಮಿಹಪ್ರಪನ್ನೋ । ಹರೀಶ್ವರಸ್ತೇನ ಸುಮಃ ಕವಿಃ ಕಃ ॥

(ಕ. ಕ. ರ. ೧–೧೪)

49. ರಾ. ಶೇ. ವಿ. ೧-೭೨

**ರಾಜಶೇಖರ ವಿಳಾಸದ ಕಥಾವಸ್ತು :** ಷಡಕ್ಷರದೇವನ ರಾಜಶೇಖರ ವಿಳಾಸದ ಕಥಾವಸ್ತುವು ವೀರಶೈವಮಹಾಪುರಾಣವೆಂಬ ಬೃಹತ್ಪುರಾಣವನ್ನು ಬರೆದ ಗುಬ್ಬಿಯ ಮಲ್ಲಣಾರ್ಯ (ಕ್ರಿ. ಶ. ೧೫೧೩)ರ ಭಾವಚಿಂತಾರತ್ನವೆಂಬ ವಾರ್ಧಕ ಷಟ್ಪದಿ ಕಾವ್ಯದ್ದು. ಸಾಮಾನ್ಯವಾಗಿ ಕನ್ನಡ ಸಾಹಿತ್ಯಕ್ಕೆ ತಮಿಳುನಾಡಿನ ಚೋಳವಂಶೀಯನೆಂದು ಹೇಳುವ ಸತ್ಯೇಂದ್ರಚೋಳನ ಕಥೆ ಕಂಡುಬಂದಿರುವುದು ಭಾವಚಿಂತಾರತ್ನದಲ್ಲಿ. ತಿರುಜ್ಞಾನ ಸಂಬಂಧರು ಕುಲಚ್ಚರೆಯಗೆ ಪಂಚಾಕ್ಷರಿ ಮಂತ್ರ ಮಹಿಮೆಯನ್ನು ತಿಳಿಸಲು ದ್ರಾವಿಡ ಭಾಷೆಯಲ್ಲಿ ಹೇಳಿದ ಸತ್ಯೇಂದ್ರಚೋಳನ ಕಥೆಯನ್ನು ತಾನು ಹೇಳುವುದಾಗಿ ಮಲ್ಲಣಾರ್ಯ ಹೇಳುತ್ತಾನೆ.[50] ಷಡಕ್ಷರದೇವನು, ಮಲ್ಲಣಾರ್ಯರು ವರ್ಣಕದಿಂದ ಭಾವರತ್ನಾಕರವಾಗಿ ಹೇಳಿದ ಆ ಕಥೆಯನ್ನೇ ವಸ್ತುಕದಿಂದ ಆಲೋಕಿತ ಕಾವ್ಯಬೃಂದದೊಳಗಿಲ್ಲದ ಮಂಜುಳ ವಾದ ಮಾತಿನ ಸಮೂಹದಿಂದ ಹೇಳಿದೆನೆನ್ನುತ್ತಾನೆ.[51] "ಇಲ್ಲಿ ಹೇಳುವ ಸತ್ಯೇಂದ್ರ ಚೋಳನ ಹೆಸರು ಚೋಳರ ಇತಿಹಾಸದಲ್ಲಿ ಬರುವುದೇ ಇಲ್ಲ. ಗುಬ್ಬಿ ಮಲ್ಲಣಾರ್ಯರ ಪ್ರಕಾರ ಸಂಬಂಧರೇ ಇದನ್ನು ಬರೆದರೆಂಬ ಮಾತು ಸತ್ಯ. ಆದರೆ ಅವರು ರಚಿಸಿದ 'ತೇವಾರ'ಗಳಲ್ಲಿ ಕುಲಚ್ಚರೆಯಗೆ ಪಂಚಾಕ್ಷರಿ ಮಂತ್ರದ ಮಹಿಮೆಯನ್ನು ವರ್ಣಿಸಿದ ಸಂಗತಿ ಮಾತ್ರವಿದ್ದು ಅಲ್ಲಿ ಸತ್ಯೇಂದ್ರಚೋಳನ ಕಥೆಯ ಯಾವ ಉಲ್ಲೇಖವೂ ಬರು ವುದಿಲ್ಲ. ಒಂದುವೇಳೆ ಅವರೇ ಅದನ್ನು ಬರೆದರೆಂದು ಊಹಿಸಿದರೂ ಆ ಕಥೆಯಲ್ಲಿ ತಿರುಜ್ಞಾನ ಸಂಬಂಧರ ಇತ್ತೀಚಿನ ಕೆಲವು ಸಂಗತಿಗಳು ಸೇರಿವೆ".[52] ಆದರೆ ಇಂಥ ರಾಜನಿಷ್ಠೆಯ, ಧರ್ಮನಿಷ್ಠೆಯ ಅನೇಕ ಕಥೆಗಳು ಜನಜನಿತಗೊಂಡು ಮೊದಲು ಹುಟ್ಟಿ ಮಹಾಕವಿಯ ಕೈಯಲ್ಲಿ ಸಿಕ್ಕು ಪ್ರೌಢಸಾಹಿತ್ಯದ ಗದ್ದುಗೆಯೇರಿ ಚರಿತ್ರೆಯ ಸಂಶೋಧಕರಿಗೆ ದಿಕ್ಕುತಪ್ಪಿಸುತ್ತವೆ. ಇದೇ ಕಥೆಯನ್ನು ಹೋಲುವ ಒಂದು ಕಥೆ

---

50 ಪ್ರೊ. ಸಿ. ಮಹದೇವಪ್ಪ ಅವರಿಂದ ಸಂಪಾದಿಸಲ್ಪಟ್ಟ 'ಭಾವಚಿಂತಾರತ್ನ'-೧-೧೧. (೧೯೭೧).

ತ್ರಿಣಯನಣುಗಂ ತಿರುಜ್ಞಾನಿ ಸಂಬಂಧೀಶ । ನಣೆಯರದಿ ಜಿನಮತವಿದಾರಣಂಗೈದು ಧಾ
ರಿಣಿಯಲ್ಲಿ ತಿರುಪಾಟು ಪದಿನಾರು ಸಾವಿರವನೊರೆಯುತ ಕುಲಚ್ಚಟಿಯಂಗೆ
ಪ್ರಣವ ಪಂಚಾಕ್ಷರಿಯ ಮಹಿಮೆಯಂ ತಿಳಿಪೆ ಸ । ದ್ಗುಣಿಯಪ್ಪ ಸತ್ಯೇಂದ್ರಚೋಳಭೂಪನ ಕಥಾ
ಭಣಿತೆಯಂ ದ್ರಾವಿಡದೊಳೊರೆದುದಂ ಕನ್ನಡದಿ ಪೇಳ್ವೆನಾಲಿಸಿ ಸುಜನರು ॥.

51 ಆ ಕಥೆಯಂ ಕೃತಾರ್ಥಸುಮನೋಲತೆಯಂ ವರಮಲ್ಲಣಾರ್ಯರು । ರ್ವೀಕವಿರಾಜರಾಜ ನುತಮಾಗಿರೆ ವರ್ಣಕದಿಂದೆ ಭಾವರ । ತ್ನಾಕರಮಾಗೆ ಪೇಳ್ದರದನೊಪ್ಪಿರೆ ವಸ್ತುಕಮಾಗಿ ಪೇಳ್ವು ದಾ। ಲೋಕಿತ ಕಾವ್ಯಬೃಂದದೊಳಗಿಲ್ಲದ ಮಂಜುಳಯುಕ್ತಿಪುಂಜದಿಂ॥ ರಾ. ಶೇ. ವಿ. ೧-೭೮

52 ವಿ. ಶಿವಾನಂದ : ಸೀ. ಪು. ಷ. ದೇವ : ಪು ೬೭-೬೮. (ಪ್ರ. ಮು. ೧೯೬೬)

ಅದೃಶ್ಯಕವಿಯ (ಕ್ರಿ. ಶ. ೧೫೩೫) ಪ್ರೌಢರಾಯಕಾವ್ಯದ ಮೂರನೆಯ ಸಂಧಿಯಲ್ಲಿ ಬರುವ ಮಾಧವರಾಯನ ಕಥೆಯ ಉಪಕಥೆಯಾಗಿ ಬಂದಿದೆ. ಇದೇನಿದ್ದರೂ ಜಾನಪದ ಕಥೆಯೋ. ಐತಿಹಾಸಿಕ ಮೌಲ್ಯದ ದೃಷ್ಟಿಯಿಂದ ಇವಕ್ಕೆ ಬೆಲೆ ಕೊಡುವ ಅವಶ್ಯಕತೆ ಅಷ್ಟೊಂದು ತೋರದು. ಆದರೆ ಆ ಉಪಕಥೆ ಸತ್ಯೇಂದ್ರಚೋಳನ ಈ ಕಥೆಗೆ (ಭಾವ ಚಿಂತಾರತ್ನದ ಮತ್ತು ರಾಜಶೇಖರವಿಳಾಸದ ಕಥೆಗೆ) ಸ್ಥೂಲವಾಗಿ ಹೊಂದಿಕೊಳ್ಳುತ್ತದೆ, ಅಷ್ಟೆ. ಹೀಗಿರುವ ಉತ್ತಮ ನೀತಿಯುಕ್ತ ಕಥೆಗಳು ಮಹಾಕವಿಯ ಕೈಗೆ ಕೆಲವು ಸಲ ಸಿಕ್ಕು ಹೇಮಂತ ಶಿಶಿರ ಋತುಗಳಲ್ಲಿ ಎಲೆಯುದುರಿ ನಿಂತ ಗಿಡಗಂಟೆಗಳು ಚೈತ್ರಮಾಸ ದಲ್ಲಿ ವಿವಿಧವಾಗಿ ಅಂದಗೊಂಡು ಕಂಗೊಳಿಸುವಂತಾಗುತ್ತವೆ. ಅಂಥ ಸಮಯದಲ್ಲಿ ಚರಿತ್ರೆಯ ಸತ್ಯವನ್ನು ನೋಡುವ ಅವಶ್ಯಕತೆಯೂ ಉಳಿಯುವುದಿಲ್ಲ. ಮೇಲಾಗಿ ಹೇಳುವ ಕವಿಚರಿತ್ರೆ ಹೇಳಬೇಕೆಂದು ಹೊರಟವನೂ ಅಲ್ಲ. ಚರಿತ್ರೆ ಅವನಿಗೆ ಪೂರ್ಣ ವಾಗಿ ಗೌಣವೇ. ಒಂದು ವಿಚಾರ : ರಾಜಶೇಖರವಿಳಾಸವನ್ನು ಶ್ರದ್ಧೆಯಿಂದ ಕೇಳಿ ತಲೆದೂಗಬೇಕು. ಆದರೆ ವೈಜ್ಞಾನಿಕ ಒರೆಗಲ್ಲಿಗೆ ಅಲ್ಲಿನ ಅಂಶಗಳನ್ನು ತಿಕ್ಕಿ ನೋಡಿ ದಾಗ ನಿರಾಶೆಯಾಗಬಹುದು. ಸಾಹಿತ್ಯದಲ್ಲಿ ಅನೇಕಾಂಶಗಳನ್ನು ಈ ದೃಷ್ಟಿಯಿಂದ ನೋಡಿ, ಕವಿಯ ಪ್ರತಿಭೆ, ಪಾಂಡಿತ್ಯ, ರಮಣೀಯಾರ್ಥಪ್ರತಿಪಾದಕ ಶಬ್ದಸಂಪದ, ರೀತಿ, ಶಯ್ಯೆ, ಬೆಡಗುಬಿನ್ನಾಣಗಳ ಆಳಕ್ಕೆ ಮುಳುಗಿ 'ಸದ್ಯಃಪರನಿರ್ವೃತಿ'ಗೊಂಡರೆ ಸಾಕು. ಅದಕ್ಕಿಂತ ಬೇರೆ ಇನ್ನಾವುದನ್ನು ನಿರೀಕ್ಷಿಸಲಾದೀತು ?

ರಾಜನ ಧರ್ಮನಿಷ್ಠೆ, ಮಂತ್ರಮಹಿಮೆ, ಅದ್ಭುತ ಪವಾಡದ ಕಥೆಗಳೇ ಮೊದಲಾ ದುವು ಸಾಮಾನ್ಯವಾಗಿ ಎಲ್ಲ ಭಾಷಾಸಾಹಿತ್ಯದಲ್ಲಿಯೂ ಬರುತ್ತವೆ. ಅವು ತಮ್ಮ ತಮ್ಮ ಧರ್ಮದ ಬಣ್ಣದಿಂದ ಕೂಡಿ ಜನತೆಯಲ್ಲಿ ಒಂದು ಬಗೆಯ ಧಾರ್ಮಿಕ ಸಾಮಾಜಿಕ ನೈತಿಕಪ್ರಜ್ಞೆಗಳನ್ನು ಬಡಿದೆಬ್ಬಿಸಲು ಸಹಕಾರಿಗಳಾಗಿ ವರ್ತಿಸುತ್ತವೆ. ತಮಿಳು ಸಾಹಿತ್ಯ ದಲ್ಲಂತೂ ಇಂಥ ಕಥನಸಾಹಿತ್ಯವು ವೈವಿಧ್ಯಮಯವಾಗಿ ಬಹುಕಾಲದಿಂದಲೂ ಬೆಳೆದು ಬಂದಿದೆ. ಕೆಲವು ರಾಜಧರ್ಮವನ್ನು ಎತ್ತಿಹಿಡಿದು ಅಪೂರ್ವಾದರ್ಶವನ್ನೇ ಅಲೋಕ ಸಾಮಾನ್ಯಗೊಳಿಸಿ ಕಂಗೊಳಿಸುತ್ತವೆ. ಸತ್ಯೇಂದ್ರಚೋಳನ ಈ ಕಥೆಯಲ್ಲಿ ರಾಜ ಧರ್ಮದ ಉನ್ನತಾದರ್ಶದ ಜೊತೆಗೆ ಮಂತ್ರಮಹಾತ್ಮೆಯ ತಂತ್ರವು ಹಾಸುಹೊಕ್ಕಾಗಿ ಸೇರಿ ಕಥೆ ಬೆಳೆದು ಬಂದಿದೆ. ಇದು ಧರ್ಮಶ್ರದ್ಧೆಯನ್ನು ಜನತೆಯಲ್ಲಿ ಬೆಳೆಸುವ ಒಂದು ತಂತ್ರವೇ ಆಗಿದೆ. ಇದರ ಹಾಗೆ ಉದಾಹರಣೆಗೆ ಮನುಚೋಳನ ಕಥೆಯನ್ನು ಹೇಳ ಬಹುದು. ಅಲ್ಲಿ ಮುಖ್ಯವಾಗಿ ಕಾಣುವುದು ರಾಜನ ಉನ್ನತಾದರ್ಶ, ಊಹೆಗೂ ನಿಲುಕದ ಆದರ್ಶ! 'ಮಗನ ರಥದ ಚಕ್ರ ಹರಿದು ಸತ್ತ ಹಸುವಿನ ಕರುವನ್ನು ಕಂಡು ತಾಯಿಹಸು ಸಂಕಟದಿಂದ ದೂರನ್ನು ಸೂಚಿಸುವ ಗಂಟೆಯನ್ನು ಬಾರಿಸುತ್ತದೆ. ತಾಯಿಹಸು ವನ್ನು ರಾಜನು ಕರೆಯಿಸಿ ವೃತ್ತಾಂತವನ್ನರಿತು ತನ್ನ ಮಗನನ್ನು ಮನುಚೋಳನು ಅದರ ಹಾಗೆಯೆ ತನ್ನ ರಥದಗಾಲಿಯ ಕೆಳಗೆ ಹಾಕಿಸಿ ರಥ ಹಾಯಿಸಿ ಕೊಲ್ಲುತ್ತಾನೆ.'

ಚಾರಿತ್ರಿಕವಾಗಿ ಈ ಕಥೆ ಏನೇ ಇರಲಿ. ಇದ್ದುದಕ್ಕಿಂತ ಇರಬೇಕಾದುದಕ್ಕೆ ಮಹತ್ವ ಕೊಡುವುದೇ ಮಹಾಕವಿಯ ಸೌಂದರ್ಯದೃಷ್ಟಿ. ಇದು ಶೆಕ್ಕಿಳಾರರ ಪೆರಿಯ ಪುರಾಣ (ಕ್ರಿ. ಶ. ೭ ನೆಯ ಶತಮಾನ)ದಲ್ಲಿ ಬರುವ ಕಥೆ. ಇದೂ ಷಡಕ್ಷರಿಗೆ ಗೊತ್ತು. ಈ ಕಥೆಯನ್ನು ಒಂದು ದೃಷ್ಟಾಂತಕ್ಕಾಗಿ ಒಂದೇ ಒಂದು ಉತ್ಪಲಮಾಲಾವೃತ್ತದಲ್ಲಿ ಮುಗಿಸುತ್ತಾನೆ. ಮನುಚೋಳನೆಂದು ಕರೆಯುವುದಿಲ್ಲ ; ಧರ್ಮೇಂದ್ರಚೋಳ ಎನ್ನುತ್ತಾನೆ.[53] ಈ ಕಥೆಯನ್ನು ಹರಿಹರ ಚಿಕ್ಕ ರಘಟಾಪ್ರಬಂಧದಲ್ಲಿ ಹೇಳುತ್ತಾನೆ. ಸೋಮರಾಜ ತನ್ನ ಉದ್ಭಟ ಕಾವ್ಯದಲ್ಲಿ (ಕ್ರಿ. ಶ. ೧೨೨೫) ಇದ್ದಕ್ಕಿದ್ದ ಹಾಗೆ ತರುತ್ತಾನೆ.[54] ಇವೆಲ್ಲವುಗಳಿಗೂ ಮೂಲ ಕ್ರಿ. ಶ. ೨ನೆಯ ಶತಮಾನದ ತಮಿಳಿನ ಶಿಲಪ್ಪದಿಗಾರಂ.[55] ಇವಾವುವೂ ರಾಜಶೇಖರ ವಿಳಾಸದ ಕಥೆಗೆ ಸಂಬಂಧವಿಲ್ಲದವು. ಇಂಥ ಯಾವುದೋ ಒಂದು ಕಥೆ ಪ್ರಸಿದ್ಧ ಶೈವದೊರೆಗಳಾದ ಚೋಳರ ಹೆಸರಿನಲ್ಲಿ 'ಸತ್ಯೇಂದ್ರಚೋಳ' ಎಂಬ ಹೆಸರನ್ನು ಮುಂದೆ ಮಾಡಿಕೊಂಡು ಪಂಚಾಕ್ಷರಿಮಂತ್ರ ಮಹಿಮೆಯನ್ನು ವ್ಯಕ್ತಪಡಿಸುವ ಪ್ರಧಾನೋದ್ದೇಶದೊಡನೆ ಉನ್ನತ ರಾಜಾದರ್ಶವನ್ನು ಎತ್ತಿ ತೋರಿಸುವ ಕಥೆಯನ್ನಾಗಿ ಮಾಡಿ ಬೆಳೆಸಿಕೊಂಡು ಗುಬ್ಬಿಮಲ್ಲಣಾರ್ಯರು ರಚಿಸಿರಬಹುದು. ಷಡಕ್ಷರದೇವನು ಅವನ್ನೇ ಅಲ್ಪಸ್ವಲ್ಪ ವ್ಯತ್ಯಾಸದೊಡನೆ 'ರಾಜಶೇಖರ ವಿಳಾಸ'ವೆಂದು ಆ ಹೆಸರಿನಲ್ಲಿಯೇ ಶ್ಲೇಷೆಯನ್ನು ತುಂಬಿ ' ಶಿವನಂ ತದೀಯ ಶರಣವ್ರಜಮುಂ ಮನಬಂದಂತೆ ನುತಿಸಿರ' ಬಹುದು. ಪ್ರಕೃತ ರಾಜಶೇಖರ ವಿಳಾಸಕ್ಕೆ ಭಾವಚಿಂತಾರತ್ನದ ಕಥೆಯೇ ಮೂಲವಾಗಿರುವುದರಿಂದ ಪ್ರಥಮತಃ ಭಾವಚಿಂತಾರತ್ನದ ಕಥಾಸಾರವನ್ನು ತಿಳಿಯುವುದು ಅವಶ್ಯಕ. ತದನಂತರ ರಾಜಶೇಖರ ವಿಳಾಸದ ಕಥಾಸಾರವನ್ನು ತಿಳಿದರೆ ಕಥೆಯ ಸುಸ್ಪಷ್ಟ ಚಿತ್ರ, ಮಾರ್ಪಾಟು ಔಚಿತ್ಯಗಳ ಅರಿವಾಗುವುದು.

**ಭಾವಚಿಂತಾರತ್ನದ ಕಥಾಸಾರ :** ಚೋಳದೇಶದಲ್ಲಿ ಧರ್ಮವತಿಯೆಂಬ ಪಟ್ಟಣವುಂಟು. ಅದರ ಅರಸು ಸತ್ಯೇಂದ್ರಚೋಳ. ಆತನ ಪತ್ನಿ ಅಮೃತವತಿದೇವಿ. ಸತಿಪತಿಗಳಿಬ್ಬರೂ ಪರಮ ಶಿವಭಕ್ತಿನಿಷ್ಠರು. ಅವರಿಗೆ ಮಕ್ಕಳಿಲ್ಲವಾಗಿ ಮಂತ್ರಿಯಾದ ಪತಿಮೋಹಿಯ ಮಗ ' ಮಿತವಚನ ' ಎಂಬುವನನ್ನು ಸಾಕಿಕೊಂಡಿದ್ದರು. ಕೆಲವು ದಿನಗಳಾದ ಮೇಲೆ ಅವರ ಕುಲಗುರುಗಳಾದ ಚಿದ್ಘನಶಿವಾಚಾರ್ಯರೆಂಬ ಮಹಾ

---

53. ರಾ. ಶೇ. ವಿ. ೧೩-೭

54. (i) ಆ. ೧೨-ಪದ್ಯ ೬೯-೮೮. (ii) ಇಷ್ಟೇ ಅಲ್ಲ. ಮುಂದೆ ಬಂದ ಅನೇಕ ವೀರಶೈವಕವಿಗಳು ಮನುಚೋಳ, ಸತ್ಯೇಂದ್ರಚೋಳರ ಕಥೆಗಳನ್ನು ತಮ್ಮ ಕಾವ್ಯದಲ್ಲಿ ತಂದಿದ್ದಾರೆ. (ವಿ. ಶಿವಾನಂದ : ಸೀ. ಪು. ಷ. ಪು. ೭೦. (೧೯೬೭).

55. ಪ್ರೊ. ಸಿ. ಮಹದೇವಪ್ಪ : ಭಾ. ಚಿಂ. ರ. ಪ್ರಸ್ತಾವನೆ XXXVI ೧೯೭೧

ಮಹಿಮರ ಆಶೀರ್ವಾದಬಲದಿಂದ ಪುತ್ರಸಂತಾನವಾಯಿತು. ಅವನ ಹೆಸರು ಮಂತ್ರಲಕ್ಷ. ಸಾಕಲ್ಪಟ್ಟ ಮಗ ಮಿತವಚನನೂ ತಮ್ಮ ಔರಸಪುತ್ರ ಮಂತ್ರಲಕ್ಷನೂ ಪರಸ್ಪರ ಪ್ರೀತಿ ವಿಶ್ವಾಸಗಳಿಂದ ಒಡನುಂಡು ಒಡನಾಡಿ ಬೆಳೆದರು. ವಸಂತಾಗ ಮನವಾಯಿತು. ರಾಜ ರಾಣಿಯರ ಜಲಕೇಳಿ, ವನವಿಹಾರಕೇಳಿಯೂ ಸಾಂಗವಾಗಿ ಬೆಳೆದವು. ವಸಂತೋತ್ಸವವನ್ನು ಮುಗಿಸಿಕೊಂಡು ರಾಜಧಾನಿಗೆ ಸತ್ಯೇಂದ್ರಚೋಳ ಹಿಂದಿರುಗಿದನು. ಅಷ್ಟರಲ್ಲಿ ಅನಿರೀಕ್ಷಿತ ಸಮಾಚಾರವೊಂದು ರಾಜನಿಗೆ ಬಂದಿತು. ಸಿಂಹಳೇಂದ್ರನು ಸತ್ಯೇಂದ್ರಚೋಳನ ಸಾಮಂತರಾಜನಾದ ಕಾಳಮೇಘನೊಂದಿಗೆ ಸೆಣಸಿ, ಕಾಳಗ ಮಾಡುತ್ತಿದ್ದಾನೆ. ಔದ್ಧತ್ಯದಿಂದ ಕೂಡಿದ ಸಿಂಹಳನನ್ನು ಗೆಲ್ಲಲು ರಾಜನೇ ರಣರಂಗಕ್ಕೆ ಹೋಗಲು ಸಿದ್ಧತೆ ಮಾಡತೊಡಗಿದನು. ಸಂಬಂಧಪಟ್ಟವರಿಗೆಲ್ಲ ಈ ವಿಷಯ ತಿಳಿಸಿದನು. ಆಗ ಸ್ವಾಮಿನಿಷ್ಠನಾದ ಪತಿ ಮೋಹಿಯು 'ಪಕ್ಷಿಗೇತಕ್ಕೆ ಪಾಶುಪತಾಸ್ತ್ರ' ಎಂದು ದೊರೆಯನ್ನು ರಾಜಧಾನಿಯಲ್ಲೇ ನಿಲ್ಲಿಸಿ, ತಾನೇ ಯುದ್ಧರಂಗಕ್ಕೆ ಹೋಗಿ ಸಿಂಹಳೇಂದ್ರನನ್ನು ಪರಾಭವಗೊಳಿಸಿ, ಅವನ ಇಬ್ಬರು ಹೆಣ್ಣುಮಕ್ಕಳನ್ನು ತಂದು ಒಬ್ಬಳನ್ನು ಮಂತ್ರಲಕ್ಷನಿಗೂ, ಇನ್ನೊಬ್ಬಳನ್ನು ತನ್ನ ಮಗ ಮಿತವಚನನಿಗೂ ಲಗ್ನಮಾಡಿಸುವನು.

ಒಂದು ದಿನ ಮಂತ್ರಲಕ್ಷನು ಮಿತವಚನನು ಹೇಳಿದ ಹಿತವಚನಗಳಿಗೆ ಲಕ್ಷ್ಯ ಗೊಡದೆ ನೂತನವಾದ ಎರಡು ಕುದುರೆಗಳನ್ನೇರಿ ವೈಹಾಳಿಗೆ ಹೋಗಿ ಹಿಂದಿರುಗುವಾಗ ಶಿವಭಕ್ತೆಯಾದ ತಿರುಕೋಳವಿನಾಚಿ ಎಂಬುವಳ ಮಗ 'ಶಂಕರ' ಎಂಬ ಹುಡುಗನು ಮಿತವಚನನ ಕುದುರೆಯ ಕಾಲಿಗೆ ಸಿಕ್ಕು ಸಾಯುತ್ತಾನೆ. ಅವಳು ದೊರೆಯವರಿಗೆ ದೂರನ್ನು ತಂದಳು. ರಾಜಕುಮಾರನ ದೆಸೆಯಿಂದ ಶಿವಭಕ್ತರಿಗೆ ನೋವಾಯಿತೆಂದು ಸತ್ಯೇಂದ್ರಚೋಳನಿಗೆ ತಿಳಿಯುತ್ತದೆ. ವೈಹಾಳಿಗೆ ಹೋಗಲು ಮನಸ್ಸಿಲ್ಲದ ಮಿತವಚನ ನಿಗೆ 'ನಿನ್ನಿಂದಾದ ತಪ್ಪು ನನ್ನದು' ಎಂದು ವಾಗ್ದಾನಮಾಡಿ ಕರೆದುಕೊಂಡು ಹೋಗಿದ್ದ ಮಂತ್ರಲಕ್ಷನು ತಾನೇ ತಂದೆಯ ಸನ್ನಿಧಿಗೆ ಬಂದು ತಪ್ಪು ನನ್ನದೇ ಎಂದೂ, ತಲೆಗೆ ತಲೆ ಕೊಡುವುದಕ್ಕೆ ತಾನು ಸಿದ್ಧನಾಗಿರುವೆನೆಂದೂ ಹೇಳುವನು. ದೊರೆ ಮಂತ್ರಲಕ್ಷನ ತಲೆಯನ್ನು ತೆಗೆಯಬೇಕೆಂದು ಆಜ್ಞೆಮಾಡಿಬಿಡುವನು. ದೊರೆಯ ಈ ಆಜ್ಞೆ ಪತಿ ಮೋಹಿಯನ್ನು ಧರ್ಮಸಂಕಟಕ್ಕೀಡುಮಾಡುವುದು. ತಾನೇ ಎಲ್ಲಕ್ಕೂ ಮೊದಲು ತನ್ನ ತಲೆಯನ್ನು ಕತ್ತರಿಸಿಕೊಂಡು ಮುಂದೆ ಒದಗುವ ಸಂಕಟದಿಂದ ತಪ್ಪಿಸಿಕೊಳ್ಳು ವನು. ಈ ಸಮಾಚಾರವನ್ನು ಕೇಳಿದ ಸತ್ಯೇಂದ್ರಮಹಾರಾಜನು ಸಂದಾಯಿ ಎಂಬ ಭೃತ್ಯನನ್ನು ಕರೆದು ಮಂತ್ರಲಕ್ಷನನ್ನು ಸಂಹರಿಸಬೇಕೆಂದು ಆಜ್ಞೆಮಾಡುವನು. ರಾಜಾಜ್ಞೆ ನೆರವೇರಿತು. ಆದರೆ ಮಂತ್ರಲಕ್ಷನ ಶಿರಸ್ಸು ಪಂಚಾಕ್ಷರಿ ಮಂತ್ರೋಚ್ಚಾರವನ್ನು ಆಶ್ಚರ್ಯಕರ ರೀತಿಯಲ್ಲಿ ಮಾಡುತ್ತಿತ್ತು. ತಲೆಯನ್ನು ರಾಜಾಸ್ಥಾನಕ್ಕೆ ತಂದ ಸಂದಾಯಿ ಯನ್ನು ಸತ್ಯೇಂದ್ರಚೋಳನು ಇವನ ತಲೆಯನ್ನು ಕಡಿದ ರೀತಿ ಏನೆಂದು ಪ್ರಶ್ನಿಸುವನು.

ಆ ಸಂದಾಯಿಯು ಮಂತ್ರಲಕ್ಷನ ಶಿರಸ್ಸನ್ನು ಕಡಿದ ರೀತಿಯನ್ನು ತೋರಿಸುವ ನೆಪದಲ್ಲಿ ತನ್ನ ತಲೆಯನ್ನೇ ಕಡಿದು ಎಡಗೈಯಲ್ಲಿ ಹಿಡಿದುಕೊಂಡಿರಲು ಆ ಶಿರಸ್ಸೂ ಪಂಚಾಕ್ಷರಿಯನ್ನು ಜಪಿಸತೊಡಗಿತು. ಸಂದಾಯಿ ಮತ್ತು ಮಂತ್ರಲಕ್ಷನ ತಲೆಗಳೆರಡರ ಮಧ್ಯದಲ್ಲಿ ಶಂಕರನ ತಲೆಯನ್ನು ತಂದಿರಿಸಲು ಅದೂ ಕೂಡ ಪಂಚಾಕ್ಷರಿಯನ್ನು ಜಪಿಸತೊಡಗಿತು. ಇದನ್ನು ಕಂಡ ತಿರುಕೊಳನಿನಾಚಿ ಭೃತ್ಯನ ತಲೆಗೆ ಪ್ರತಿಯಾಗಿ ತನ್ನ ತಲೆಯನ್ನು ಕಡಿದು ಇಡಲು ಅದೂ ಪಂಚಾಕ್ಷರಿಯ ಜಪವನ್ನು ಮಾಡಲುದ್ಯುಕ್ತವಾಯಿತು. ಅದೇ ಸಮಯಕ್ಕೆ ಮಂತ್ರಿಯ ತಲೆಯನ್ನು ತಂದಿಡಲು ಅದೂ ಜಪಿಸತೊಡಗಿತು. ಶಂಕರನ ತಲೆ ಗುರುಕಲಶದಂತೆ ಕಂಗೊಳಿಸುತ್ತಿತ್ತು. ಉಳಿದ ತಲೆಗಳು ನಾಲ್ಕು ನಿಟ್ಟಿನಲ್ಲಿಟ್ಟ ನಾಲ್ಕು ಕಲಶಗಳಂತೆ ಶೋಭಿಸುತ್ತಿದ್ದವು. ಆಗ ಸತ್ಯೇಂದ್ರಚೋಳ ಮಹಾರಾಜನು ಗುರುಕಲಶಕ್ಕೆ ಕಾಣಿಕೆಯೆಂದು ತನ್ನ ಶಿರಸ್ಸನ್ನು ಕಡಿದು ಅರ್ಪಿಸಲು ಆ ಶಿರವೂ ಶಿವಮಂತ್ರೋಚ್ಚಾರ ಮಾಡಲುದ್ಯುಕ್ತವಾಯಿತು. ಇದನ್ನು ನೋಡುತ್ತ ನಿಂತಿದ್ದ ಮಿತವಚನನು ಈ ಎಲ್ಲ ಅನಾಹುತವೂ ತನ್ನಿಂದಲೇ ಆಯಿತೆಂದು ತನ್ನ ತಲೆಯನ್ನು ಕಡಿದಿಳುಹುವನು. ಆ ತಲೆಯ ಬಾಯಲ್ಲೂ ಪಂಚಾಕ್ಷರಿ ಮಂತ್ರೋಚ್ಚಾರ. ಈ ಸುದ್ದಿಯನ್ನು ಕೇಳಿ ತಿಳಿದ ಅಮೃತವತಿದೇವಿಯು ಅಲ್ಲಿಗೆ ಬಂದು ತಾನೂ ತನ್ನ ಕೊರಳನ್ನು ಕತ್ತಿಗೊಡ್ಡುವಷ್ಟರಲ್ಲಿ ಶಿವಪಾರ್ವತಿಯರು ಪ್ರತ್ಯಕ್ಷರಾಗುವರು, ಪುಷ್ಪವೃಷ್ಟಿಯಾಯಿತು, ದೇವದುಂದುಭಿಗಳು ಮೊಳಗಿದವು. ಶಿವನ ಕೃಪೆಯಿಂದ ಎಲ್ಲರೂ ಬದುಕಿದರು. ಧರ್ಮವತೀನಗರದ ಈ ಶಿವಭಕ್ತರೆಲ್ಲರೂ ಕೈಲಾಸಕ್ಕೆ ತೆರಳುವರು.'

ಇಷ್ಟು ಕಥೆಯು ಹಂದರವೇ ರಾಜಶೇಖರವಿಳಾಸದ ಕಥೆಗೆ ಭಂಡವಾಳ. ಇದರಲ್ಲಿ ಬಹು ದೊಡ್ಡ ವ್ಯತ್ಯಾಸವೇನೂ ಇಲ್ಲದಂತೆ ಅಲ್ಪಸ್ವಲ್ಪ ಹೊಂದಾಣಿಕೆಯ ರಾಜಶೇಖರ ವಿಳಾಸದ ಕಥಾಸಾರ ಮುಂದಿನಂತೆ ಇದೆ.

### ರಾಜಶೇಖರವಿಳಾಸದ ಕಥಾಸಾರ :

**೧ ನೆಯ ಆಶ್ವಾಸ :** ಇಷ್ಟದೈವವಾದ ಮಹೇಶ್ವರನ ಸ್ತೋತ್ರ. ಪಾರ್ವತಿಯ ಸ್ತೋತ್ರ, ಯತಿತತಿ ಚಕ್ರವರ್ತಿಯಾದ ತನ್ನ ಗುರು ಚಿಕವೀರದೇಶಿಕನ ಸ್ತೋತ್ರ. ಅನಂತರ ಕ್ರಮವಾಗಿ ಗಣಪತಿ, ಷಣ್ಮುಖ, ವೃಷಭೇಂದ್ರ, ವೀರಭದ್ರ, ಬಸವೇಶ್ವರ, ಚೆನ್ನಬಸವೇಶ್ವರ, ಅಲ್ಲಮಪ್ರಭು, ತೋಂಟದ ಸಿದ್ಧಲಿಂಗೇಶ್ವರ, ಶಿವನ ಒಲವನ್ನು ಪಡೆದ ಸರ್ವಪುರಾತನರು, ನಿಜಗುಣಶಿವಯೋಗಿ, ರೇಣುಕಾದಿ ಪೀಠಾಚಾರ್ಯರು, ಮಾಯಿದೇವ, ಜಕ್ಕಣ್ಣ, ಮಲ್ಲಣ್ಣ, ಮಲ್ಲಣಾರ್ಯ, ಕಂಚಿಯ ಶಂಕರ, ಹರಿಹರ, ರಾಘವಾಂಕ, ಕೇಶಿರಾಜ, ಸೋಮನಾಥಾದಿ ಕವೀಶ್ವರರನ್ನು ಹೊಗಳಿದ್ದಾನೆ. ತದನಂತರ ಶಿವಕವಿ ಹರೀಶ್ವರನಿಗೆ ಸಮಾನರಾರಿದ್ದಾರೆಂದು ಪ್ರಶ್ನಿಸಿ, ಕುಕವಿನಿಂದೆ, ಸ್ವಕಾವ್ಯೋತ್ಕರ್ಷ, ರೇಣುಕನೆಂಬ ಹೆಸರಿನಿಂದ ಅವನೀರಕ್ಷಣಾರ್ಥವಾಗಿ ಹುಟ್ಟಿದ ತನ್ನ ಗೋತ್ರದ ಮೂಲಪುರುಷನ

ಹೊಗಳಿಕೆ, ಆತನ ವಂಶಸಂಭವನಾದ ತನ್ನ ಗುರು ಚಿಕವೀರದೇಶಿಕನ ಮಹತ್ತು ಬೃಹತ್ತುಗಳನ್ನು ಹೇಳಿಕೊಂಡು, ತಾನು ಅಂಥ ಮಹಾತ್ಮನ ಕರಕಂಜಸಂಜಾತನೆಂದೂ 'ಸರಸಪ್ರಬಂಧ ಸುಭಗಾಂಭೋಜಪ್ರಭಾವಲ್ಲಭ' ಎಂದೂ ಸುಕವಿಗಳ ಸ್ತೋತ್ರಕ್ಕೆ ಪಾತ್ರನೆಂದೂ ಶ್ಲಾಘಿಸಿಕೊಂಡಿದ್ದಾನೆ. (೧-೭೨).

ಪಿಳ್ಳೈನೈನಾರರಿಂದ ದ್ರಾವಿಡಭಾಷಾಭೇದದಲ್ಲಿ ಹೇಳಲ್ಪಟ್ಟ ಒಂದು ಇತಿಹಾಸವು ಮಲ್ಲಣಾರ್ಯರಿಂದ ವರ್ಣಕವಾಗಿ ಹೇಳಲ್ಪಟ್ಟಿತು. ಅದೇ ಕಥೆಯನ್ನು ತಾನು ವಸ್ತುಕವಾಗಿ ಮಂಜುಳವಾದ ಮಾತುಗಳ ಸಮೂಹದಿಂದ ಹೇಳುತ್ತೇನೆಂದು ಕಥೆಗೆ ಪ್ರಾರಂಭಿಸುತ್ತಾನೆ.

ಪ್ರಥಮದಲ್ಲಿ ಸಮುದ್ರವನ್ನು ವಿಸ್ತಾರವಾಗಿ ವರ್ಣಿಸಿ, ಅನಂತರ ಈಶ್ವರಾವಾಸಸ್ಥಾನವಾದ ಸ್ವರ್ಣಾಚಲ, ಆ ಪರ್ವತದ ತಪ್ಪಲಿನಲ್ಲಿರುವ ಋಷಿಗಳು, ಅವರ ತಪಸ್ಸೇ ಮೊದಲಾದ ದೀರ್ಘವಾದ ವರ್ಣನೆಯೊಡನೆ ಪ್ರಥಮಾಶ್ವಾಸ ಸಮಾಪ್ತವಾಗುವುದು. (೭೩-೧೩೬).

೨ನೆಯ ಆಶ್ವಾಸ : ಮೇರುಗಿರಿಯ ದಕ್ಷಿಣದಿಗ್ಭಾಗದಲ್ಲಿ ಧರಣೀಕಾಂತೆಯ ಸೀಮಂತರತ್ನದಂತೆ ಚೋಳಮಂಡಲ ವಿರಾಜಿಸುತ್ತಿದೆ. ಅಲ್ಲಿ ಅನೇಕ ನದಿಗಳನ್ನು ಕೆಳೆಗೊಂಡು ವಿಳಾಸದಿಂ ಕವೇರಕನ್ಯೆಯಾದ ಕಾವೇರಿಯು ಧರಾಮರ ಕಾಮಧೇನುವಿನಂತೆ ಹರಿಯುತ್ತಿದ್ದಾಳೆ, ಎಂದು ಹೇಳುತ್ತ ವಿಸ್ತಾರವಾಗಿ ಕಾವೇರಿ ಮತ್ತು ಚೋಳಮಂಡಲದ ವರ್ಣನೆ ಸಾಗುತ್ತದೆ. (೧-೩೦).

ಹೀಗೆ ಸಮಸ್ತ ವೈಭವದಿಂದ ಕೂಡಿದ ಚೋಳದೇಶದ ಮಧ್ಯದಲ್ಲಿ ವಿತತಪ್ರಭಾವದಿಂದ ಧರ್ಮವತಿಯೆಂಬ ಪಟ್ಟಣವಿದೆ. ಆ ಪಟ್ಟಣವು ಶಿವಭಕ್ತರಿಂದ ತುಂಬಿದೆ. ಆ ಪಟ್ಟಣವನ್ನಾಳುವವನು ಅಭವಪದಭಕ್ತನಾದ ಸತ್ಯೇಂದ್ರಚೋಳ ಮಹಾರಾಜ. (ಪಟ್ಟಣ ಮತ್ತು ರಾಜನ ವರ್ಣನೆ.) (೩೧-೧೮೫)

೩ ನೇಯ ಆಶ್ವಾಸ : ಮಹಾಪರಾಕ್ರಮಶಾಲಿಯಾದ ಸತ್ಯೇಂದ್ರಚೋಳನಿಗೆ ಅನುಪಮಳಾದ ಅಮೃತಮತಿದೇವಿ ಧರ್ಮಪತ್ನಿ ; ಇವಳೊಡನೆ ಕಲ್ಪದ್ರುಮಸದೃಶನಾದ ಆ ಸತ್ಯೇಂದ್ರಚೋಳನು ಬಾಳುತ್ತಿದ್ದನು. ಇಂಥ ಸತ್ಯೇಂದ್ರಚೋಳನಿಗೆ ಶಿವಲಿಂಗಾರ್ಚಕನೂ ರಾಜನೀತಿವಿದನೂ ಆದ 'ಪತಿಮೋಹಿ' ಎಂಬ ಮಂತ್ರೀಶ್ವರನಿದ್ದನು. ಈ ಪತಿಮೋಹಿಯು ಚಿದ್ಘನಶಿವಾಚಾರ್ಯರೆಂಬ ಗುರೂತ್ತಮರ ಮಂತ್ರಬಲದಿಂದ ಮಿತವಚನನೆಂಬ ಮಗನನ್ನು ಪಡೆದಿದ್ದನು.

ಹೀಗಿರುವಾಗ ಒಂದುದಿನ ಸತ್ಯೇಂದ್ರಚೋಳಮಹಾರಾಜನು ಮಂತ್ರಿಗೆ ಕಾಶಿಗೆ ಹೋಗಿ ಗಂಗಾಜಲದಿಂದ ಸಹಸ್ರಕುಂಭಾಭಿಷೇಕ ಮಾಡಿ ಬರಬೇಕೆಂಬ ತನ್ನ ಬಯಕೆಯನ್ನು ತಿಳಿಸಿದನು. ಮಂತ್ರಿಯು 'ದೇವಾ, ನಿಮ್ಮೊಡನೆ ಮೃಡನು ಸದಾ ನೆಲೆಸಿರುವಾಗ ನೀವಿರ್ದ ಎಡೆಯೇ ಕಾಶಿಯಲ್ಲವೆ ? ಕಾಶಿಯ ಗಂಗಾಜಲವನ್ನು ಸ್ವಾಲಾಗಿ ಭೂವರರನ್ನು

ನಿಲ್ಲಿಸಿ ತರಿಸಿಕೊಡುತ್ತೇನೆ' ಎಂದು ಹೇಳಿ ಸಹಸ್ರ ಕುಂಭಜಲವನ್ನು ತರಿಸಲು ರಾಜನು ಸಂತೋಷದಿಂದ ಮಂಗಳಲಿಂಗಕ್ಕೆ ಅಭಿಷೇಕಮಾಡಿದನು ; ಶ್ರೀಶೈಲವಲ್ಲಭನನ್ನು ಅನಂತ ಭಕ್ತಿ ಭಾವದಿಂದ ಭಜಿಸಿದನು.

ಒಂದು ದಿನ ಅಮೃತಮತಿದೇವಿಯು ಪುರಾಣವನ್ನು ಕೇಳುತ್ತಿದ್ದಾಳೆ. ಆ ಪುರಾಣ ದಲ್ಲಿ ಬರುವ ಮಾರ್ಕಂಡೇಯನ ಬಾಲಲೀಲೆಯನ್ನು ಕೇಳಿ ತಾನೂ ಸತ್ಪುತ್ರನೊಬ್ಬನನ್ನು ಪಡೆಯುವ ಬಯಕೆ ಹೊಂದಿ ಚಿಂತಾಕ್ರಾಂತಳಾಗಿದ್ದಾಳೆ. ತನ್ನ ಮನದಿಷ್ಟವನ್ನು ಪತಿಗೆ ತಿಳಿಸಲಾಗಿ ರಾಜನು ಗುರುವಿನ ಪ್ರಸಾದಬಲವಿದ್ದರೆ ಮನೋಭೀಷ್ಟವು ಫಲಿಸು ವಲ್ಲಿ ಸಂಶಯವಿಲ್ಲವೆಂದು ಸಮಾಧಾನಮಾಡುವನು. ಅಷ್ಟರಲ್ಲಿ ಅವರ ಮನದಿಚ್ಛೆಯನ್ನು ಈಡೇರಿಸಲೋ ಎಂಬಂತೆ, ಇವರ ಪುಣ್ಯವೇ ಸಾಕಾರಗೊಂಡಂತೆ ಚಿದ್ಘನ ಶಿವಾಚಾರ್ಯರು ಬರುವರು. ದಂಪತಿಗಳ ಮುಖವು ಬಾಡಿರುವುದನ್ನು ಕಂಡ ಶಿವಾಚಾರ್ಯರು ನಿಮ್ಮ ಮನದಭೀಷ್ಟವೇನೆಂದು ಕೇಳುವರು. ಅದಕ್ಕೆ ದಂಪತಿಗಳು ಶಿವನ ಪಂಚವಿಂಶತಿಲೀಲೆ ಗಳನ್ನು ಕೇಳುವ ಬಯಕೆ ತಮ್ಮದೆನ್ನುವರು. ಆಗ ಚಿದ್ಘನರು ವಿವರವಾಗಿ ಶಿವನ ಪಂಚ ವಿಂಶತಿಲೀಲೆಗಳನ್ನು ಹೇಳುವರು. ರಾಜದಂಪತಿಗಳು ಸಂತೋಷಗೊಳ್ಳುವರು. (೧-೧೧೪).

೪ನೆಯ ಆಶ್ವಾಸ : ಚಿದ್ಘನರು ಜ್ಞಾನದೃಷ್ಟಿಯಿಂದ ಅಮೃತಮತಿಯ ಮನ ದಿಷ್ಟವನ್ನು ಅರಿತವರಾಗಿ ಅವಳಿಗೆ ಪಂಚಾಕ್ಷರಿ ಮಂತ್ರೋಪದೇಶ ಮಾಡಿದರು. 'ಮಗಳೇ, ಈ ಮಹಾಮಂತ್ರವನ್ನು ಜಪಿಸು. ನಿನ್ನ ಪುಣ್ಯಗರ್ಭದಲ್ಲಿ ಸತ್ಪುತ್ರನು ಜನಿಸುವನು' ಎಂದು ಹೇಳಿ ಆಶೀರ್ವಾದ ಮಾಡಿ ಅವರು ಹೊರಟುಹೋಗುವರು. ಇತ್ತ ದಂಪತಿ ಗಳೀರ್ವರು ಶಿವಲಿಂಗಾರ್ಚನೆ ಮಾಡುತ್ತ, ಶಿವಕಥಾಪೀಯೂಷವನ್ನು ಕರ್ಣದಿಂದ ಕುಡಿ ಯುತ್ತ ಇರುವಷ್ಟರಲ್ಲಿ ಕೆಲವೇ ದಿನಗಳಲ್ಲಿ ಅಮೃತಮತಿದೇವಿ ಗರ್ಭವತಿಯಾಗಿ ಪುತ್ರ ರತ್ನವೊಂದರ ತಾಯಿಯೆನಿಸಿದಳು. ಗುರುಗಳು ಬಂದು ಮಗುವಿಗೆ ಲಿಂಗಧಾರಣಮಾಡಿ ಮಹೋತ್ಸವದಿಂದ ಜಾತಕರ್ಮಕ್ರಿಯೆಯನ್ನು ಮಾಡಿಸಿದರು. ಮಗುವಿಗೆ 'ರಾಜಶೇಖರ' ನೆಂದು ನಾಮಕರಣವಾಯಿತು. 'ಮಂತ್ರಲಕ್ಷ' ಎಂಬುದೂ ಇನ್ನೊಂದು ಹೆಸರು. ಅನೇಕ ಬಾಲಲೀಲೆಗಳಿಂದ ಮಗು ಮಾತಾಪಿತೃಗಳ ಕಣ್ಮಣಿಯಾಗಿ ಬೆಳೆದು ದೊಡ್ಡ ದಾಯಿತು. ಮಂತ್ರಿಕುಮಾರನಾದ ಮಿತವಚನನೂ ದೊಡ್ಡವನಾದನು. ಮಿತವಚನನಿಗೆ ಸತ್ಕುಲಪ್ರಸೂತೆಯಾದ ಕಮಳಲೋಚನೆಯೆಂಬ ಕನ್ಯೆಯನ್ನು ತಂದು ಮದುವೆಯನ್ನು ಮಹಾರಾಜನು ಮಾಡಿದನು. ರಾಜಶೇಖರನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡಿ, ತಾನು ಲಿಂಗಪೂಜಾ ಸುಖದಲ್ಲಿ ಕಾಲಕಳೆಯಲು ನಿಶ್ಚಯಿಸಿ, ಪಟ್ಟಾಭಿಷೇಕ ವನ್ನು ಮಾಡಿದನು. (೧-೨೫)

೫ನೆಯ ಆಶ್ವಾಸ : ಒಂದು ದಿನ ರಾಜಶೇಖರ ಮಹಾರಾಜನು ಸಭಾಸ್ಥಾನದಲ್ಲಿ ಸಕಲ ವೈಭವದಿಂದ ಕೂಡಿ ಕುಳಿತಿದ್ದಾನೆ. ಒಬ್ಬ ಬೇಡನು ಸಭಾಸ್ಥಾನಕ್ಕೆ ಬಂದು ಅಸಘ್ಯ ರತ್ನವೊಂದನ್ನು ದೊರೆಯ ಪಾದಪೀಠದಲ್ಲಿಟ್ಟು "ದೇವಾ, ದಕ್ಷಿಣ ಸಮುದ್ರದ ತೀರದಲ್ಲಿ

ಪುಳಿಂದಪುರವಿರುವುದು ಅಲ್ಲಿ 'ಕಲಿಕಾಲಮೇಘ'ನೆಂಬುವನು ನಿನ್ನ ಚರಣಕಿಂಕರನೆನಿಸಿ ರಾಜ್ಯಭಾರಮಾಡುತ್ತಿದ್ದಾನೆ. ಅವನು ತನ್ನ ಬೇಡರ ಸೈನ್ಯದೊಡನೆ ಬೇಸಿಗೆಯ ಕಾಲದ ಒಂದುದಿವಸ ಬೇಟೆಗೆ ಹೋಗಿದ್ದನು. ಆಗ ಪ್ರಲಯಕಾಲದ ಕಠೋರ ಗರ್ಜನೆಯನ್ನು ಮಾಡುತ್ತಿದ್ದ ಭಯಂಕರ ಸಿಂಹವೊಂದನ್ನು ಕೊಂದನು. ಅದರ ತಲೆಯನ್ನು ಸೀಳಿ ಅಲ್ಲಿರುವ ಅನರ್ಘ್ಯ ಮಾಣಿಕವನ್ನು ತೆಗೆಯುವಷ್ಟರಲ್ಲಿ ಸಿಂಹಳರಾಜನ ಭಂಟರು ಬಂದು 'ಈ ಸಿಂಹವು ನಮ್ಮ ದೇಶದಿಂದ ಬಂದದ್ದು, ಆದುದರಿಂದ ಈ ರತ್ನವು ನಮಗೆ ಸಲ್ಲತಕ್ಕದ್ದು, ಎನ್ನುತ್ತ ಯುದ್ಧವನ್ನು ಪ್ರಾರಂಭಿಸಿದರು. ಆ ಕಾಳಗವು ನಡೆಯುತ್ತಿರುವಾಗಲೇ ಕಾಲಮೇಘನು ನನ್ನನ್ನು ಕರೆದು ಈ ಅನರ್ಘ್ಯರತ್ನವನ್ನು ನನ್ನ ಕೈಯಲ್ಲಿ ಕೊಟ್ಟು 'ಇದನ್ನು ನಮ್ಮ ಭೂಮಿಾಶ್ವರನಾದ ರಾಜಶೇಖರಮಹಾರಾಜನಿಗೆ ಒಪ್ಪಿಸು; ಈ ಸಿಂಹಳ ರಾಜನ ಔದ್ಧತ್ಯವನ್ನು ಪ್ರಭುವಿಗೆ ತಿಳಿಸು' ಎಂದು ಹೇಳಿ, ನನ್ನನ್ನು ಕಳುಹಿಸಿಕೊಟ್ಟು 'ಅವನಿನ್ನೂ ಅವರೊಡನೆ ಯುದ್ಧ ಮಾಡುತ್ತಲೇ ಇದ್ದಾನೆ.' ಇತ್ಯಾದಿಯಾಗಿ ತಿಳಿಸಿದನು. ಈ ಮಾತನ್ನು ಕೇಳಿದ ರಾಜಶೇಖರ ಮಹಾರಾಜನು ಕೋಪಗೊಂಡು ಕರಣಿಕರಿಂದ ಸಿಂಹಳೇಂದ್ರನು ನಮಗೆ ಕಪ್ಪವನ್ನು ಕೊಡುತ್ತಿಲ್ಲನೆಂಬುದನ್ನರಿತು ಅವನ ಮೇಲೆ ಯುದ್ಧಕ್ಕೆ ಹೊರಡುವನು.

**೩ನೆಯ ಆಶ್ವಾಸ :** ಆಗ ಶರತ್ಕಾಲವೂ ಬಂತು. ಶರತ್ಕಾಲದ ಆ ಸಂಗ್ರಾಮಯೋಗ್ಯ ಸಮಯದಲ್ಲಿ ಮಹಾಸೈನ್ಯಸಮೇತನಾಗಿ ಯುದ್ಧಕ್ಕೆ ಹೊರಟ ರಾಜಶೇಖರನು ಸಿಂಹಳೇಂದ್ರನ ಸೈನ್ಯದಮೇಲೆ ಬಿದ್ದು ಸೋಲಿಸುವನು. ಸೋತ ಆ ಸೈನ್ಯದ ಕಳೆದುಳಿದವರು ಸಿಂಹಳ ದ್ವೀಪಕ್ಕೆ ಓಡುವರು. ರಾಜಶೇಖರನ ಸೈನ್ಯವು ಬೆನ್ನಟ್ಟುವುದು. ಮಾರ್ಗಮಧ್ಯದಲ್ಲಿ ಬಂದ ಸಮುದ್ರವು ಇವನ ಸೈನ್ಯಕ್ಕೆ ದಾರಿಯನ್ನು ಕೊಡುವುದು. ಕೋಪಗೊಂಡಿದ್ದ ಸಿಂಹಳಭೂಮಿಾಪಾಲನು ತನ್ನ ಕೋಟೆಕೊತ್ತಲುಗಳನ್ನು ಭದ್ರಪಡಿಸಿಕೊಂಡು ಪುನಃ ಯುದ್ಧಸನ್ನದ್ಧನಾಗುವನು. ಆ ಸಮಯದಲ್ಲಿ 'ನೀತಿಭೂಷಣ' ನೆಂಬ ಸಿಂಹಳೇಂದ್ರನ ಮಂತ್ರಿಯು ಸಿಂಹಳೇಂದ್ರನಿಗೆ ಕೈಮುಗಿದು 'ದೇವಾ, ಈಗ ಯುದ್ಧಕ್ಕೆ ಬಂದಿರುವ ರಾಜಶೇಖರ ಮಹಾರಾಜನು ಸಾಮಾನ್ಯಮಾನವನೆಂದು ಭಾವಿಸಬೇಡ. ಶಿವಮಂತ್ರಸಂಭೂತನೂ, ಮಹಾಮಹಿಮಾಸ್ಪದನೂ, ಶೂರನೂ ಆಗಿದ್ದಾನೆ. ಈತನೊಡನೆ ಯುದ್ಧಮಾಡಿ ಗೆಲ್ಲುವುದು ಸಾಧ್ಯವಿಲ್ಲದ ಮಾತು. ಆದ್ದರಿಂದ ಇವನೊಡನೆ ವಿರೋಧವನ್ನು ಬಿಟ್ಟು ಸಂಧಿಯನ್ನು ಮಾಡಿಕೊಳ್ಳುವುದೇ ಮೇಲಾದ ಕಾರ್ಯ' ಎಂದು ಬಿನ್ನವಿಸಿಕೊಂಡನು. ಸಿಂಹಳೇಂದ್ರನು ಮಂತ್ರಿಯ ಮಾತಿಗೆ ಒಡಂಬಟ್ಟು ಸಂಧಿಗಾಗಿ ನೀತಿಭೂಷಣನನ್ನು ಕಳಿಸಿಕೊಡುವನು. ನೀತಿಭೂಷಣನು ರಾಜಶೇಖರನಲ್ಲಿಗೆ ಬಂದು ಸಂಧಿಗೆ ಒಡಂಬಡಬೇಕೆಂದು ಪ್ರಾರ್ಥಿಸಿಕೊಳ್ಳುವನು. ನೀತಿವಿದನಾದ ರಾಜಶೇಖರನು ಒಪ್ಪಿಗೆಯಿೀಯಲು ತ್ವರಿತವಾಗಿ ಬಂದು ಸಿಂಹಳೇಂದ್ರನಿಗೆ ಈ ವಿಷಯ ತಿಳಿಸಲು ಅವನು ಸಂತೋಷಗೊಂಡು ರಾಜಶೇಖರ ಮಹಾರಾಜನನ್ನು ಎದುರ್ಗೊಳ್ಳಲು ಕಮಳಾನತಿ

ಪಟ್ಟಣವನ್ನು ಸಿಂಗರಿಸಿದನು. ರಾಜಶೇಖರ ಮಹಾರಾಜನು ತನ್ನ ಸಕಲ ವೈಭವದೊಡನೆ ಸಿಂಹಳೇಂದ್ರನ ಕಮಳಾವತಿ ನಗರವನ್ನು ಪ್ರವೇಶಿಸಿದನು (೧–೧೩೮).

೭ನೆಯ ಆಶ್ವಾಸ: ರಾಜಶೇಖರನನ್ನು ಸಿಂಹಳೇಂದ್ರನು ಎದುರ್ಗೊಂಡು ಕರೆತರುತ್ತಿರುವಾಗ ಪುರಜನರೆಲ್ಲ ಕಿಕ್ಕಿರಿದು ನೆರೆದು ನಿರೀಕ್ಷಿಸುತ್ತಿದ್ದರು. ಅರಮನೆಯ ಮೇಲ್ಭಾಗದಲ್ಲಿ ಸಖೀಜನಸಮೇತಳಾಗಿ ರಾಜಶೇಖರನನ್ನು ಸಿಂಹಳೇಂದ್ರನ ಕುಮಾರಿ ಸರ್ವಮಂಗಳಾದೇವಿಯೂ ನೋಡುವಳು. ಅವಳು ನೋಡುತ್ತಿದ್ದಂತೆಯೇ ರಾಜಶೇಖರನೂ ಅವಳನ್ನು ಅನಿಮಿಷದೃಷ್ಟಿಯಿಂದ ಸ್ನೇಹರಸಭರಿತವಾದ ಕಟಾಕ್ಷಕಾಂತಿಯನ್ನು ಬೀರಿ ನೋಡುವನು. ಅವಳ ಸೌಂದರ್ಯಾತಿಶಯದ ಫಲವಾಗಿ ಚಲ್ಲಿದ ಕರಣಗಳನ್ನು ಮೆಲ್ಲನೆ ಸಂತೈಸಿಕೊಂಡು ಧೀರೋದಾತ್ತ ಸಾರ್ವಭೌಮನಾದ ರಾಜಶೇಖರನು ಮುಂದಕ್ಕೆ ನಡೆತರುತ್ತಿರಲು ಸರ್ವಮಂಗಳೆಯ ಎದೆ ಹಾರಿತು ; ಮೈ ಜುಮ್ಮೆಂದಿತು; ರೋಮಾಂಚನಗೊಂಡ ಅವಳು ಮೂರ್ಛೆಗೊಳ್ಳುವಳು ; ಸಖಿಯರ ಶೈತ್ಯೋಪಚಾರದಿಂದ ಎಚ್ಚರಗೊಳ್ಳುವಳು. ಈ ವಿಚಾರವನ್ನು ಅವಳ ಮಾತಾಪಿತೃಗಳಿಗೆ ತಿಳಿಸುವರು. ಸಿಂಹಳೇಂದ್ರನು ಈ ವಿಚಾರವನ್ನು ತಿಳಿದು ಹರ್ಷಗೊಳ್ಳುವನು. ರಾಜಶೇಖರನಿಗೆ ತನ್ನ ಮಗಳಾದ ಸರ್ವಮಂಗಳೆಯನ್ನು ಕೊಟ್ಟು ವಿವಾಹವಿಧಿಯನ್ನು ಮಾಡುವ ಸಿದ್ಧತೆಯಲ್ಲಿ ತೊಡಗುವನು. (೧–೧೦೬).

೮ನೆಯ ಆಶ್ವಾಸ : ಅತ್ಯಂತ ವೈಭವೋಪೇತವಾಗಿ ಲಗ್ನಮಂಟಪವನ್ನು ರಚಿಸಿದರು. ವಧೂವರರನ್ನು ಸಿಂಗರಿಸಿದರು. ಶೃಂಗಾರಗೊಂಡ ವಿವಾಹಮಂಟಪಕ್ಕೆ ವಧೂವರರನ್ನುಕರೆತಂದರು. ಸಿಂಹಳೇಂದ್ರನು ಸುವರ್ಣಕುಂಭಾಂಬುವಿನಿಂದ ಧಾರೆಯೆರೆದು ಮಗಳನ್ನು ಒಪ್ಪಿಸಿದನು. ಕಮಳಾಕ್ಷಿಯರು ಶೋಭನವನ್ನು ಹಾಡಿದರು. ಸಪ್ತಪದಿಯ ಶಾಸ್ತ್ರವೂ ಮುಗಿಯಿತು. ಸಿಂಹಳೇಂದ್ರನ ಹೆಂಡತಿ ಕಳಾಧರೆಯು ಪದೇ ಪದೇ ಅಳಿಯನನ್ನೂ ಮಗಳನ್ನೂ ನೋಡಿ ಸಂತೋಷಗೊಂಡಳು. ನೂತನ ದಂಪತಿಗಳಿಬ್ಬರೂ ಕಂತುಸಾಮ್ರಾಜ್ಯಸುಖವನ್ನು ಮಾಸಗಳು ದಿವಸಗಳಾಗಿ, ದಿವಸಗಳು ನಿಮಿಷಗಳಾಗಿ ಉರುಳುತ್ತಿರಲು ಅನುಭವಿಸಿದರು. ಅನಿತರಲ್ಲಿ ಮೇಘೋದಯವಾಗಿ ಮುಂಗಾರುಕಾಲ ಪ್ರಾರಂಭವಾಯಿತು. ಕೆಲವು ದಿನ ರಾಜಶೇಖರನು ಅಲ್ಲಿಯೇ ಸಂತೋಷವಾಗಿ ತನ್ನ ಹೆಂಡತಿಯೊಡನೆ ಕಾಲ ಕಳೆಯುತ್ತ ಇದ್ದನು. (೧–೧೨೭)

೯ನೆಯ ಆಶ್ವಾಸ : ಕಮಳಾವತಿನಗರದಲ್ಲಿ ರಾಜಶೇಖರನು ತನ್ನ ಶ್ವಶುರಗೃಹದಲ್ಲಿ ನೂತನ ದಾಂಪತ್ಯಸುಖವನ್ನನುಭವಿಸುತ್ತಿರುವಷ್ಟರಲ್ಲಿ ಮಳೆಗಾಲ ಕಳೆದು ಮಾಗಿಯಕಾಲ ಬಂತು. ಆ ಹೇಮಂತಋತುವಿನ ಸಮಯವನ್ನು ತನ್ನ ಹೆಂಡತಿಯ ಸಹಚರ್ಯೆಯಲ್ಲಿ ಕಳೆದ ರಾಜಶೇಖರನು ತನ್ನ ಪಟ್ಟಣಕ್ಕೆ ಹೊರಡುವ ಬಯಕೆಯನ್ನು ತನ್ನ ಅತ್ತೆಮಾವಂದಿರಿಗೆ ತಿಳಿಸಲು ಅವರು ಮಗಳಿಗೆ ಹೇಳುವ ಬುದ್ಧಿವಾದಗಳನ್ನು ಹೇಳಿ, ಅನೇಕ ವಸ್ತುವಾಹನಗಳನ್ನು ಅವಳಿಗೆ ಬಳುವಳಿಯಾಗಿ ಕೊಟ್ಟು

ಕಳುಹಿಸಿಕೊಡುವರು. ಇತ್ತ ರಾಜಶೇಖರನು ಪ್ರಯಾಣ ಬೆಳೆಸಿ ತನ್ನ ಪಟ್ಟಣಕ್ಕೆ ಬಂದನು. ದಿಗ್ವಿಜಯದಿಂದ ಹಿಂದಿರುಗಿ ಬರುತ್ತಿರುವ ರಾಜಶೇಖರನನ್ನು ಇದಿರ್ಗೊಳ್ಳಲು ಪಟ್ಟಣವನ್ನು ಶೃಂಗಾರಗೊಳಿಸಲಾಗಿತ್ತು. ಸಮಸ್ತರೂ ವೈಭವದಿಂದ ತಮ್ಮ ಮಹಾ ರಾಜನನ್ನು ಎದುರ್ಗೊಂಡರು. ಸತ್ಯೇಂದ್ರಚೋಳ ಅಮೃತಮತಿದೇವಿಯರು ಆನಂದ ಭರಿತರಾದರು. ಅನಿತರಲ್ಲಿ ವಸಂತಮಾಸ ಬಂತು. ವನವೆಲ್ಲ ಶೋಭೆಗೊಂಡಿತು. ಮನ್ಮಥನು ತನ್ನ ದಿಗ್ವಿಜಯಯಾತ್ರೆಯನ್ನು ಪ್ರಾರಂಭಮಾಡಿದನು. ಹೀಗೆ ಬಂದ ವಸಂತಮಾಸದ ಪ್ರಾತಃಕಾಲದಲ್ಲಿ ರಾಜಶೇಖರನು ಪರಮೇಶ್ವರನನ್ನು ಪೂಜೆಮಾಡಿ ಆಸ್ಥಾನದಲ್ಲಿ ಕುಳಿತಿದ್ದನು. (೧-೭೮)

**೧೦ನೆಯ ಆಶ್ವಾಸ :** ರಾಜಶೇಖರನು ಸಭಾಸ್ಥಾನದಲ್ಲಿ ಕುಳಿತಿದ್ದ ಸಮಯ ದಲ್ಲಿ ವನಪಾಲನೊಬ್ಬನು ಬಂದು ವಿಚಕಿಲಪುಷ್ಪ, ಪಚ್ಚೆ, ಬಾಳೆವಣ್ಣೊನೆಯನ್ನು ಕಾಣಿಕೆಗೊಟ್ಟು ವನದ ಸೊಗಸನ್ನು ನೋಡಲು ಬರಬೇಕೆಂದು ಬಿನ್ನವಿಸಿಕೊಳ್ಳುವನು. ರಾಜಶೇಖರನು ತನ್ನ ಮಡದಿಯಾದ ಸರ್ವಮಂಗಳೆಯೊಡನೆ ಚೈತ್ರೋದ್ಯಾನ ಕೇಳೀ ಪ್ರಸ್ಥಾನಭೇರಿಯನ್ನು ಮೊಳಗಿಸಿ ಉದ್ಯಾನವನ ಶೋಭೆಯನ್ನು ನೋಡಲು ಬಂದನು. ನಾನಾವಿಧವಾಗಿ ಅಲಂಕಾರಗೊಂಡ ವಸಂತಮಾಸದ ವನಶೋಭೆಗೆ ಮಾರುಹೋದನು. ಜಲಕ್ರೀಡೆಯನ್ನು ಮಾಡಿದನು. ವನಪಾಲನಿಗೆ ಅನೇಕ ವಿಧವಾದ ಭೂಷಣಾಂಬರ ಗಳನ್ನು ಬಹುಮಾನವಾಗಿ ಕೊಟ್ಟು ಅಂತಃಪುರಕ್ಕೆ ಬಂದನು. (೧-೧೧೧)

**೧೧ನೆಯ ಆಶ್ವಾಸ :** ರಾಜಶೇಖರಮಹಾರಾಜನು ಒಂದು ದಿನ ಒಡ್ಡೋ ಲಗಂಗೊಟ್ಟು ಕುಳಿತಿರುವ ಸಮಯದಲ್ಲಿ ಸಾಯಂಕಾಲವಾಯಿತು. ಸಂಧ್ಯಾರುಣ ಕಾಂತಿ ಎಲ್ಲೆಡೆ ಹಬ್ಬಿತು. ವಿಟವಿದೂಷಕ ನಾಗರಿಕಾದಿ ಶೃಂಗಾರಸಖರೊಡನೆ ರಾತ್ರೀ ವಿಹಾರಕ್ಕೆಂದು ಹೊರಟು ವೇಶ್ಯಾವಾಟಕೆಯೊಳಗೆ ಪ್ರವೇಶಿಸಿದನು. ವೇಶ್ಯಾವಿಟರ ಅನೇಕ ಕ್ರೀಡಾವಿನೋದಗಳನ್ನು, ಅವರ ಗುಣಸ್ವಭಾವ. ಮಾತುಕತೆಗಳನ್ನು ಕೇಳಿದನು. ಅನಿತರಲ್ಲಿ ಬೆಳಗು ಹರಿಯುವ ಸಮಯವಾಗಲು ಎಲ್ಲರನ್ನೂ ಅವರವರ ಮನೆಗೆ ಕಳುಹಿಸಿ ರಾಜಶೇಖರನು ಅಂತಃಪುರವನ್ನು ಸೇರಿದನು. (೧-೯೪)

**೧೨ನೆಯ ಆಶ್ವಾಸ :** ಆ ಬ್ರಾಹ್ಮೀಮುಹೂರ್ತದಲ್ಲಿ ಪರಮೇಶ್ವರಪಾದವೂ ಪೂಜಾವೈಭವವನ್ನು ನೆರವೇರಿಸಿದನು. ಪ್ರಾತಃಕಾಲದ ಸೃಷ್ಟಿಯ ಸೌಂದರ್ಯವೆತ್ತಲೂ ಶೋಭಾಯಮಾನವಾಗಿತ್ತು. ಅಂಥ ಸುಂದರವಾದ ಪ್ರಾತಃಕಾಲದಲ್ಲಿ ಸಿಂಹಾಸನದ ಮೇಲೆ ಕುಳಿತು ರಾಜಕಾರ್ಯನಿರತನಾದನು. ಸಭೆಯಲ್ಲಿ ವಿವಿಧ ಕಲಾಪರಿಣತರು ತಮ್ಮ ಕಲಾಚಾತುರಿಯನ್ನು ವ್ಯಕ್ತಪಡಿಸಿದರು. ಅಪೂರ್ವ ನೃತ್ಯಕಾರ್ಯಕ್ರಮವಾ ಯಿತು. ಅಷ್ಟರಲ್ಲಿ ಗಂಭೀರಾನ್ವಿತನಾದ ಸಿಂಧುರಾಜನು ಸಭಾಸ್ಥಾನವನ್ನು ಪ್ರವೇಶಿಸಿ ಎರಡು ಜಾತ್ಯಶ್ವಗಳನ್ನು ಕಾಣಿಕೆಯಾಗಿ ಅರ್ಪಿಸುವನು. ಕುದುರೆಗಳನ್ನು ಕಂಡು

ಎಲ್ಲರೂ ಆಶ್ಚರ್ಯಚಕಿತರಾಗಿ ಹೊಗಳುವರು. ಎಲ್ಲ ಕಲಾವಿದರಿಗೆ ಬಹುಮಾನ ಕೊಟ್ಟು ರಾಜನು ಸಭೆಯನ್ನು ವಿಸರ್ಜಿಸಿದನು. (೧-೧೮೮)

೧೩ನೆಯ ಆಶ್ವಾಸ : ಸಿಂಧುರಾಜನು ತಂದಿತ್ತ ಕುದುರೆಗಳನ್ನು ಅಶ್ವ ಪರೀಕ್ಷಕರು ಪರೀಕ್ಷಿಸಿ ಜಾತ್ಯಶ್ವಗಳೆಂದು ತೀರ್ಮಾನಿಸಿದರು. ಅಶ್ವಾರೋಹಣ ಚತುರ ನಾದ ರಾಜಶೇಖರನು ಆ ಕುದುರೆಗಳನ್ನೇರಿ ವಿಹಾರ ಮಾಡಿಬರಬೇಕೆಂಬ ಇಚ್ಛೆಯುಂಟಾ ಗುವುದು. ಈ ವಿಚಾರವನ್ನು ಮಂತ್ರಿಪುತ್ರನಾದ ಮಿತವಚನನಿಗೆ ತಿಳಿಸುವನು. ಮಿತ ವಚನನು ಕುದುರೆಗಳನ್ನು ಪಳಗಿಸದೆ ಏರುವುದು ವಿಹಿತವಲ್ಲವೆಂದೂ, ಶಿವಭಕ್ತರಿಂದ ತುಂಬಿದ ಈ ನಗರದಲ್ಲಿ ಈ ಕುದುರೆಗಳ ಏರಾಟದಿಂದ ಏನಾದರೂ ಅಚಾತುರ್ಯ ನಡೆದರೆ ಮಹಾರಾಜನು ಸಹಿಸುವುದಿಲ್ಲವೆಂದೂ ತಿಳಿಸುವನು. ರಾಜಶೇಖರನಿಗೆ ಮಿತವಚನನ ಈ ಮಾತುಗಳು ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಅವನು ಮಿತವಚನ ನಿಗೆ ಈ ವೈಹಾಳಿಯಲ್ಲಿ ಸಂಭವಿಸಬಹುದಾದ ಯಾವುದೇ ಅಹಿತಕರ ಘಟನೆಗೂ ತಾನು ಹೊಣೆ ಎಂದು ಹೇಳಿ ಮಿತವಚನನನ್ನು ಒಡಂಬಡಿಸಿ ಚತುರಂಗಬಲ ಸಮೇತನಾಗಿ ಸಕಲ ವೈಭವದೊಡನೆ ಅಶ್ವಾರೋಹಣ ಮಾಡಿ ವಿಹಾರಕ್ಕೆ ಹೊರಟೇಬಿಡುವನು. ನಗರದ ಹೊರವಲಯದಲ್ಲಿ ಚತುರಂಗಬಲದವರ ವಿವಿಧ ಸ್ಪರ್ಧೆಗಳೂ ನೆರವೇರಿದುವು. ಹೀಗೆ ವೈಹಾಳಿಯನ್ನು ಮುಗಿಸಿಕೊಂಡು ಚತುರಂಗಬಲ ಸಮೇತನಾಗಿ ರಾಜಶೇಖರನು ಹಿಂತಿರುಗಿ ನಗರವನ್ನು ಪ್ರವೇಶಿಸುತ್ತಿದ್ದನು. ಆಗ ಮಿತವಚನನ ಕುದುರೆಯ ಕಾಲ ತಳಕ್ಕೆ ಸಿಕ್ಕಿ 'ತಿರುಕೊಳವಿನಾಚಿ' ಎಂಬ ಶಿವಭಕ್ತೆಯ ಮಗ, ಐದು ವರ್ಷದ 'ಶಂಕರ' ಎಂಬ ಹುಡುಗನ ಶಿರಸ್ಸು ಕತ್ತರಿಸಿ ಹೋಗುವುದು. ಇದ್ದ ಏಕಮಾತ್ರ ಪುತ್ರ ನನ್ನು ಕಳೆದುಕೊಂಡು ಸಂಕಟಪಡುವ ತಿರುಕೊಳವಿನಾಚಿ ಮಗುವಿನ ರುಂಡಮುಂಡ ಗಳನ್ನು ತೆಗೆದುಕೊಂಡು ಬಂದು ಮಹಾರಾಜನ ಮುಂದಿಟ್ಟು 'ಕಲ್ಪಭೂಜದ ಸಸಿಯನ್ನು ಬೆಳಸಿದಂತೆ ಬೆಳಸಿದ್ದ ನನ್ನ ಮಗನನ್ನು ನಿನ್ನೆಯ ದಿನ ನಿನ್ನ ಮಗನು ವೈಹಾಳಿಯಿಂದ ಬರುವಾಗ ಅವನ ಕುದುರೆಯು ತುಳಿದು ಕೊಂದಿತು.' ಎಂದು ದೂರುವಳು. ಕೋಪಾ ವಿಷ್ಟನಾದ ರಾಜನು ಮಂತ್ರಿಯನ್ನು ಕರೆಯಿಸೆಂದು ವೃದ್ಧ ಕಂಚುಕಿಗೆ ಹೇಳುವನು. (೧-೧೬೧)

೧೪ನೆಯ ಆಶ್ವಾಸ : ವೃದ್ಧ ಕಂಚುಕಿಯು ಬಂದು ಸತಿಮೋಹಿಗೆ ತಿಳಿಸಲು ಅವನು ಹೊರಟುಬಂದು ಪ್ರಭುವಿಗೆ ನಮಸ್ಕರಿಸಿ ನಿಲ್ಲಲು ರಾಜನು ಕೃತಾಪರಾಧನನ್ನೂ ಕರೆಯಿಸೆಂದು ಹೇಳಿ ರಾಜಶೇಖರನನ್ನೂ ಮಿತವಚನನನ್ನೂ ಬರಮಾಡುವರು. ಸತ್ಯ ನಿಷ್ಠನಾದ ಸತ್ಯೇಂದ್ರಚೋಳನು ಕೊಂದವನನ್ನು ಕೊಲ್ಲುವುದೇ ರಾಜಧರ್ಮವೆಂದು ನಿರ್ಧರಿಸುವನು. ವಿಚಾರಣೆ ನಡೆಯುವುದು. ಮಿತವಚನನು ಈ ಶಿಶುವನ್ನು ಕೊಂದವನು ತಾನೇ ಎಂದೂ ಅದಕ್ಕಾಗಿ ತನಗೆ ಮರಣದಂಡನೆಯಾಗಬೇಕೆಂದೂ ಬಿನ್ನವಿಸುವನು. ಆ ಕೂಡಲೇ ರಾಜಶೇಖರನು ಮುಂದೆ ಬಂದು, ಈ ಮಗುವಿನ ಸಾವಿಗೆ ಮಿತವಚನನ

ಕಾರಣನಾದರೂ ಈ ತಪ್ಪಿಗೆ ಹೊಣೆ ನನ್ನದು. ಪ್ರಾರಂಭದಲ್ಲಿ ಮಿತವಚನನು ಹೇಳಿದ ಬುದ್ಧಿವಾದಕ್ಕೆ ಕಿವಿಗೊಡದೆ ಏನಾದರೂ ಅಚಾತುರ್ಯವಾದರೆ ಅದಕ್ಕೆ ಹೊಣೆ ನಾನೆಂದು ಅಭಿವಚನವಿತ್ತು ಹಾಳಾಗಿ ಹೋಗಿದ್ದುದರಿಂದ ಈ ಶಿಶುಹತ್ಯೆಗೆ ಕೊಡಬೇಕಾದ ಮರಣ ದಂಡನೆಯು ಶಿಕ್ಷೆ ತನಗಾಗಬೇಕೆಂದು ಬಿನ್ನವಿಸಿಕೊಳ್ಳುವನು. ಸತ್ಯೇಂದ್ರಚೋಳನು ಮಗನ ಈ ವಾದವನ್ನು ಒಪ್ಪಿ, ಇವನಿಗೇ ಮರಣದಂಡನೆಯಾಗಬೇಕೆಂದು ಆಜ್ಞೆ ಮಾಡಿ, ಈ ಕಾರ್ಯವನ್ನು ನೆರವೇರಿಸಲು ಪತಿಮೋಹಿಗೆ ಅಪ್ಪಣೆ ಮಾಡುವನು. ಪತಿಮೋಹಿಯು ರಾಜಾಜ್ಞೆಯಿಂದ ಉಭಯಸಂಕಟಕ್ಕೊಳಗಾಗುವನು. ಏನು ಮಾಡಬೇಕೆಂಬುದು ತೋಚದೆ ತಾನೇ ತನ್ನ ಶಿರಚ್ಛೇದನ ಮಾಡಿಕೊಳ್ಳುವನು.

ಈ ವಾರ್ತೆಯನ್ನು ಕೇಳಿದ ರಾಜನು 'ಸಂದಾಯಿ' ಎಂಬ ಆಪ್ತಸೇವಕನನ್ನು ಬರಮಾಡಿಕೊಂಡು ರಾಜಶೇಖರನ ಶಿರಚ್ಛೇದನ ಮಾಡಲು ಆಜ್ಞಾಪಿಸುವನು. ವಧ್ಯ ಸ್ಥಾನಕ್ಕೆ ರಾಜಶೇಖರನು ಹೋದನು. ಸಂದಾಯಿಯು ರಾಜಶೇಖರನಿಗೆ 'ಪಂಚಾಕ್ಷರೀ ಮಂತ್ರವನ್ನು ಮರೆತೆಯೋ' ಎಂದು ಕೇಳುವನು. ಅದಕ್ಕೆ ರಾಜಶೇಖರನು 'ನಾನು ಆ ಮಂತ್ರವನ್ನು ಮರೆತು ಮೌನದಿಂದಿರುವೆನೆಂದು ತಿಳಿಯಬೇಡ. ನಾನು ಈಗ ಆ ಮಂತ್ರೋಚ್ಚಾರಮಾಡಿದರೆ ರಾಜಾಜ್ಞೆಗೂ, ನಿನ್ನ ಭೃತ್ಯತ್ವಕ್ಕೂ ಭಂಗಬಂದೀತೆಂದು ಸುಮ್ಮನೆ ಇದ್ದೇನೆ' ಎಂದನು. ಆಗ ಸಂದಾಯಿಯು 'ರಾಜಾಜ್ಞೆಗೆ ಭಂಗಬಂದರೂ ಬರಲಿ ; ನನ್ನ ಭೃತ್ಯತ್ವಕ್ಕೆ ಚ್ಯುತಿಬಂದರೂ ಬರಲಿ ; ಕೊನೆಯ ಗಳಿಗೆಯಲ್ಲಿ ಮೋಕ್ಷ ಪ್ರದವಾದ ಪಂಚಾಕ್ಷರಿಯನ್ನು ಮರೆಯುವುದೇ ದೇವ ? ಅದೇನೇ ಆಗಲಿ, ನೀನು ಮಂತ್ರೋಚ್ಚಾರ ಮಾಡುತ್ತಿರಲೇಬೇಕು' ಎನ್ನುವನು. ಸಂದಾಯಿಯ ಉದಾತ್ತ ವೃತ್ತಿಗೆ ಮೆಚ್ಚಿ ರಾಜಶೇಖರನು ಅವನ ಭೃತ್ಯತ್ವಕ್ಕೆ ಭಂಗಬರದ ಹಾಗೆ ಮಂತ್ರೋಚ್ಚಾರ ಮಾಡುತ್ತ ತನ್ನ ಶಿರಸ್ಸನ್ನು ತಾನೇ ಕತ್ತರಿಸಿ ಸಂದಾಯಿಯ ಕೈಗೆ ಕೊಟ್ಟನು. ಸಂದಾಯಿಯು ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಲೇ ಇದ್ದ ಶಿರಸ್ಸನ್ನು ತಂದು ರಾಜನ ಮುಂದೆ ಇಳುಹುವನು. ರಾಜನು ಆಶ್ಚರ್ಯ ಹೊಂದಿ ಇದರ ರಹಸ್ಯವೇನೆಂದು ಸಂದಾಯಿ ಯನ್ನು ಕೇಳಿದನು. ಸಂದಾಯಿಯು ವಧ್ಯಸ್ಥಾನದಲ್ಲಿ ನಡೆದ ವೃತ್ತಾಂತವನ್ನು ತಿಳಿಸಿ ಆವೇಶಗೊಂಡು ತಾನೂ ತನ್ನ ತಲೆಯನ್ನು ಕತ್ತರಿಸಿಕೊಂಡು ರಾಜನ ಮುಂದೆ ಇಡು ವನು. ಅವನ ತಲೆಯೂ ಪಂಚಾಕ್ಷರಿಯನ್ನುಚ್ಚರಿಸತೊಡಗಿತು. ಆಗ ರಾಜನು ಕಿರುಕೊಳವಿನಾಚಿಯ ಕಡೆಗೆ ನೋಡುತ್ತ, 'ನಿನ್ನ ಮಗನ ತಲೆಗೆ ಪ್ರತಿಯಾಗಿ ಎರಡು ತಲೆಗಳು ಅರ್ಪಿತವಾಗಿವೆ ನೋಡು' ಎನ್ನುತ್ತ ಈ ಎರಡು ತಲೆಗಳನ್ನು ಶಂಕರನ ತಲೆಯ ಎಡಬಲಗಳಲ್ಲಿ ಇಡಿಸುವನು. ಇವು ಉಚ್ಚಾರ ಮಾಡುವ ಪಂಚಾಕ್ಷರಿಯ ಪ್ರಭಾವ ದಿಂದ ಶಂಕರನ ತಲೆಯೂ ಮಂತ್ರೋಚ್ಚಾರ ಮಾಡಲಾರಂಭಿಸಿತು. ಪ್ರಭುವೇ ನನ್ನ ಮಗನ ತಲೆಗೆ ಲೋಕಪಾಲನೆ ಮಾಡುವ ನಿನ್ನ ಮಗನ ತಲೆಯನ್ನೇ ಕತ್ತರಿಸಿಡಿಸಿದೆ. ನಿನ್ನ ಭೃತ್ಯನಾದ ಸಂದಾಯಿಯ ತಲೆಗೆ ಪ್ರತಿಯಾಗಿ ಇಗೋ ನನ್ನ ತಲೆಯನ್ನೇ ಕೊಡು

ತ್ತೇನೆಂದು ಸಂದಾಯಿಯ ಕಯ್ಯಲ್ಲಿದ್ದ ಖಡ್ಗವನ್ನು ಸೆಳೆದು ತನ್ನ ತಲೆಯನ್ನು ಕತ್ತರಿಸಿ ಅದರ ಪಕ್ಕದಲ್ಲಿಟ್ಟಳು. ತಿರುಕೊಳವಿನಾಚಿಯ ತಲೆಯೂ ಮಂತ್ರೋಚ್ಚಾರ ಮಾಡಲಾರಂಭಿಸಿತು. ತಿರುಕೊಳವಿನಾಚಿಯ ಈ ಕಾರ್ಯಕ್ಕೆ ಆಶ್ಚರ್ಯಚಕಿತನಾದ ರಾಜನು ಎಲ್ಲಕ್ಕೂ ಮೊದಲು ಶಿರಸ್ಸನ್ನು ಕತ್ತರಿಸಿಕೊಂಡಿದ್ದ ಪತಿಮೋಹಿ ಮಂತ್ರಿಯ ತಲೆಯನ್ನು ತರಿಸಿ, ಈ ಎಲ್ಲ ತಲೆಗಳ ಪಕ್ಕದಲ್ಲಿಡಲು ಅದೂ ಪಂಚಾಕ್ಷರಿಯನ್ನು ಉಸುರತೊಡಗಿತು. ಆಗ ಸತೇಂದ್ರಚೋಳನು ಪಂಚಾಕ್ಷರಿಯ ಪಂಚವರ್ಣೋಚ್ಚಾರ ಮಾಡುತ್ತಿರುವ ಈ ಐದು ತಲೆಗಳಿಗೆ ತನ್ನ ಶಿರಸ್ಸೆಂಬ ಓಂಕಾರ ಪ್ರಣವವನ್ನು ಅರ್ಪಿಸಿ ಅಲಂಕಾರಗೊಳಿಸುವೆನೆಂದು ಕೈಯ ಖಡ್ಗದಿಂದ ತನ್ನ ತಲೆಯನ್ನು ಕೊರೆದಿಡುವನು. ಅದೂ ಪಂಚಾಕ್ಷರಿಯನ್ನು ಹೇಳತೊಡಗುವುದು. ಈ ಎಲ್ಲ ದೃಶ್ಯವನ್ನು ಕಂಡ ಮಿತವಚನನು 'ನಿಜವಾಗಿ ಶಂಕರ ಕುಮಾರನ ಶಿರಸ್ಸಿನ ಛೇದನಕ್ಕೆ ಕಾರಣನು ನಾನು ; ನಿರ್ನಿಮಿತ್ತವಾಗಿ ರಾಜಶೇಖರನು ತನ್ನ ಶಿರಸ್ಸನ್ನರ್ಪಿಸಿದನು. ಅವನನ್ನು ಆಗಲಿ ಇರಲಾರೆನು' ಎಂದು ನಿಶ್ಚಯಿಸಿ ತನ್ನ ಶಿರಸ್ಸನ್ನು ಕತ್ತರಿಸಿಕೊಂಡನು. ಅದೂ ಪಂಚಾಕ್ಷರಿಯನ್ನು ಅನ್ನತೊಡಗಿತು.

ಈ ವಾರ್ತೆಯನ್ನು ಸಖೀಜನಗಳ ಮುಖಾಂತರ ಅರಿತ ಅಮೃತಮತಿದೇವಿಯು ರಾಜಶೇಖರ ಮಿತವಚನ ಪತ್ನೀಸಮೇತಳಾಗಿ ಸಭೆಗೆ ಬಂದು ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿರುವ ಆರೂ ತಲೆಗಳನ್ನು ಕಂಡಳು. ಅವಳ ನಿಷ್ಠೆ ಒಲಿಯಿತು. ಆ ಕೂಡಲೇ ಪತಿಯ ಖಡ್ಗವನ್ನು ಹಿಡಿದು ತನ್ನ ಶಿರಸ್ಸನ್ನು ಕತ್ತರಿಸಿಕೊಳ್ಳಲು ಸಿದ್ಧಳಾದಳು. ಇದರ ಹಾಗೆಯೇ ರಾಜಶೇಖರ ಮಿತವಚನರ ಹೆಂಡತಿಯರೂ ಸಿದ್ಧರಾದರು. ಅಷ್ಟರಲ್ಲಿ ಪರ ಶಿವನು ಪ್ರತ್ಯಕ್ಷನಾಗಿ ಅವರನ್ನೆಲ್ಲ ತಡೆದು ಇಚ್ಛಿತವರವನ್ನು ಬೇಡೆಂದು ಅಮೃತಮತಿಗೆ ಹೇಳುವನು. ಆಕೆಯು ಶಂಕರಕುಮಾರನು ಬದುಕಲಿ ಎನ್ನುವಳು. ಶಿವನು ತಥಾಸ್ತು ಎನ್ನುತ್ತ, ಅವಳ ಸದ್ಭಾವನೆಗೆ ಮೆಚ್ಚಿ ಎರಡನೆಯ ವರವನ್ನು ಬೇಡೆನ್ನುವನು. ಆಗಲೂ ಅವಳು ತನ್ನ ಪತಿ ಮತ್ತು ಮಗನು ಬದುಕಲಿ ಎನ್ನದೆ ಈ ಬಡಶಿವಭಕ್ತೆ ತಿರುಕೊಳವಿನಾಚಿ ಬದುಕಲಿ ಎನ್ನುವಳು. ಇವಳ ರೀತಿಯ ಧರ್ಮಭಾವನೆಗೆ ಮೆಚ್ಚಿದ ಪರಮೇಶ್ವರನು ಎಲ್ಲರಿಗೂ ಜೀವದಾನಮಾಡುವನು. ದೇವದುಂದುಭಿ ಮೊಳಗುವುದು ; ಪುಷ್ಪವೃಷ್ಟಿ ಸುರಿಯುವುದು. ಶಿವನು ಎಲ್ಲರನ್ನೂ ಕೈಲಾಸಕ್ಕೆ ಕರೆದೊಯ್ದು ತನ್ನ ಗಣಸಂದೋಹದ ಮಧ್ಯದಲ್ಲಿರಿಸಿಕೊಳ್ಳುವನು. (೧-೧೮೪).

### ಭಾವಚಿಂತಾರತ್ನ-ರಾಜಶೇಖರ ವಿಳಾಸಗಳಲ್ಲಿ ಹೋಲಿಕೆ ವ್ಯತ್ಯಾಸಗಳು :

ಭಾವಚಿಂತಾರತ್ನ ಮತ್ತು ರಾಜಶೇಖರ ವಿಳಾಸಗಳ ಕಥೆಗಳಲ್ಲಿ ಒಟ್ಟಾರೆ ದೊಡ್ಡ ವ್ಯತ್ಯಾಸಗಳೇನೂ ಕಾಣದಿದ್ದರೂ ಅಲ್ಪಸ್ವಲ್ಪ ವ್ಯತ್ಯಾಸಗಳು ಸಾಮಾನ್ಯವಾಗಿ ಕಂಡು ಬರುತ್ತವೆ. ಷಡಕ್ಷರಿಯ ಮೂಲ ಉದ್ದೇಶ-'ನರನೊರ್ಮೆ ನೆನೆಯ ಸಲೆ ಶಂಕರನಂ ಮಾಳ್ಪ

ಮಹಿಮೆಯನ್ನು ತಿಳಿದಂತಹ ಷಡಕ್ಷರಮಂತ್ರದ ಅಮಳಕಥನವನ್ನು ಹೇಳಿ ಧನ್ಯತೆಯನ್ನು ಪಡೆಯಬೇಕಾದುದು[56] ಈ ಮುಖ್ಯ ಉದ್ದೇಶಕ್ಕಾಗಿಯೇ ಮಲ್ಲಣಾರ್ಯರ ಸತ್ಯೇಂದ್ರ ಚೋಳನ ಕಥೆ 'ರಾಜಶೇಖರ ವಿಳಾಸ' ಕಥೆಯಾಗಿ ಬೆಳೆಯುತ್ತದೆ. ಷಡಕ್ಷರದೇವನು ಇಂಥ ತನ್ನ ಧನ್ಯತೆಯನ್ನು ಪಡೆಯಬೇಕೆನ್ನುವ ಹಂಬಲವನ್ನು ಈಡೇರಿಸಿಕೊಳ್ಳಲು, ಹೇಗೋ ಸಂತೆಯ ಹೊತ್ತಿಗೆ ಮೂರುಮೊಳನೆಯ್ದು ಹಾಕಿದ ಜಾಳಬಟ್ಟೆಯಂತಾಗಬಾರ ದೆಂಬ ಬಯಕೆಯುಳ್ಳವನು. ಕಥೆ ಹೇಳಿದರೆ ಕವಿಗಳ ವಿಬುಧರ ಕಿವಿಯಲ್ಲಿ ನವರಸವಿಳಿದು ಅವರ ತನುಮನಗಳನ್ನು ತುಂಬಿ ಹೊರಸೂಸಿತೋ ಎನ್ನುವಂತೆ ಕಣ್ಣುಗಳಲ್ಲಿ ಆನಂದ ಬಾಷ್ಪಗಳು ತುಳುಂಕುವ ಹಾಗೆ ಹೇಳಬೇಕೆಂದು[57] ಸಂಕಲ್ಪಮಾಡಿಕೊಂಡು ತನ್ನೆಲ್ಲ ಚಾತುರ್ಯಗಳನ್ನೂ, ವಿದ್ವತ್ತನ್ನೂ, ಪ್ರತಿಭೆಯನ್ನೂ ಉಪಯೋಗಿಸಿದವನು. ತನ್ನ ಉದ್ದೇಶಕ್ಕೆ ಅನುಗುಣವಾಗಿ ಔಚಿತ್ಯವರಿತು ಮೂಲದಲ್ಲಿ ಸ್ವಲ್ಪಮಾರ್ಪಾಟುಗೊಳಿಸಿ ಹೇಳುವುದು ಅವಶ್ಯಕವಾಯಿತು.

ರಾಜಶೇಖರ ವಿಳಾಸದಲ್ಲಿ ಕಥಾನಾಯಕ ರಾಜಶೇಖರ. ಭಾ. ಚಿಂ. ರತ್ನದಲ್ಲಿ ಕಥಾನಾಯಕ ಸತ್ಯೇಂದ್ರಚೋಳಮಹಾರಾಜ. ಷಡಕ್ಷರದೇವನ ದೃಷ್ಟಿಯೆಲ್ಲ ರಾ. ಶೇ. ವಿ. ದಲ್ಲಿ ಭೂಪಾಲನ ಕುಮಾರನಾದ ರಾಜಶೇಖರನ ಮೇಲೆಯೇ ಕೇಂದ್ರೀಕೃತವಾಗಿದೆ. ರಾಜಶೇಖರನು ಹುಟ್ಟಿ ದೊಡ್ಡವನಾಗುವವರೆಗಿನ ಕಥೆ ಪ್ರಚ್ಛನ್ನವೇ. ದೊಡ್ಡವನಾದ ರಾಜಶೇಖರನನ್ನು ಯುವರಾಜ್ಯಾಭಿಷೇಕಗೊಳಿಸಿ ಚೋಳಮಹಾರಾಜನು ಮಹಾರಾಣಿಯೊಡನೆ ಲಿಂಗಪೂಜೆಯಲ್ಲಿ ನಿರತನಾಗುವನು. ಕಥೆಯ ಉದ್ದಗಲಕ್ಕೂ ರಾಜಶೇಖರನ ವಿಳಾಸವೇ ಮೆರೆದಿದೆ. ೧೩ನೆಯ ಆಶ್ವಾಸದ ಕೊನೆ ಮತ್ತು ೧೪ನೆಯ ಆಶ್ವಾಸದಲ್ಲಿ ಸತ್ಯೇಂದ್ರಚೋಳ ಪುನಃ ಕಾಣಿಸಿಕೊಂಡು ತನ್ನ ರಾಜಧರ್ಮದ ಔನ್ನತ್ಯವನ್ನು ಮೆರೆಯುತ್ತಾನೆ. ಭಾವಚಿಂತಾರತ್ನದಲ್ಲಿ ಹಾಗಲ್ಲ. ಎಲ್ಲ ಕ್ರಿಯೆಗಳೂ ಸತ್ಯೇಂದ್ರಚೋಳನ ಮೇಲೆಯೇ ನಿಂತಿವೆ. ಜಲಕ್ರೀಡೆ, ವನವಿಹಾರ, ಸಿಂಹಳನ ಮೇಲೆ ಯುದ್ಧಕ್ಕೆ ಹೋಗುವಿಕೆ ಎಲ್ಲ ಸಂಗತಿಗಳೂ ಸತ್ಯೇಂದ್ರಚೋಳನವೇ ಆಗಿವೆ. ರಾ. ಶೇ. ವಿ. ದಲ್ಲಿ ಯುದ್ಧ, ಸಿಂಹಳನ ಸೋಲು, ಜಲಕ್ರೀಡೆ, ವನವಿಹಾರ, ವೇಶ್ಯಾವಾಟಿಕೆ ಇವೆಲ್ಲ ರಾಜಶೇಖರನಿಂದಲೇ ನಡೆದುಹೋಗುತ್ತವೆ. ಸೋತ ಸಿಂಹಳ ರಾಜಶೇಖರನ ಶೌರ್ಯ ವೀರ್ಯ ಗಾಂಭೀರ್ಯಾದಿಗಳಿಗೆ ಮಾರುಹೋಗಿ ತನ್ನ ಮಗಳನ್ನೇ ಕೊಟ್ಟು ಲಗ್ನಮಾಡಿ ಕಳುಹಿಸಿಕೊಡುತ್ತಾನೆ. ಭಾ. ಚಿಂ. ರತ್ನದಲ್ಲಿ ಸಿಂಹಳನ ಮೇಲೆ ಯುದ್ಧಕ್ಕೆ ಹೋದ ಮಂತ್ರಿಯಾದ ಮತಿಮೋಹಿಯು ಸಿಂಹಳನನ್ನು ಗೆದ್ದು ಅವನ ಇಬ್ಬರು ಪುತ್ರಿಯರನ್ನು ತಂದು ತನ್ನ ಮಗನಾದ ಮಿತವಚನನಿಗೆ ಕಮಳೆ ಎಂಬುವಳನ್ನೂ, ಮಂತ್ರಲಕ್ಷನಿಗೆ

56. ರಾ. ಶೇ. ವಿ. ೧–೮೯.

57. ಅದೇ ೧–೫೨.

ಕುಮುದಿನಿಯನ್ನೂ ಲಗ್ನಮಾಡಿಸುವನು. ಚಿಂತಾರತ್ನದಲ್ಲಿ ಮಕ್ಕಳಿಲ್ಲದ ಸತ್ಯೇಂದ್ರ ಚೋಳ ಅಮೃತಮತಿಯರು ಮಂತ್ರಿಯ ಮಗನಾದ ಮಿತವಚನನನ್ನು ತಮ್ಮ ಮಗನೆಂದೇ ತಿಳಿದುಕೊಂಡಿರುತ್ತಾರೆ. ಮುಂದೆ ತಮ್ಮ ಮಗ ಹುಟ್ಟಿದ ಮೇಲೆ ರಾಜಶೇಖರ ಮಿತವಚನ ಕೂಡಿ ಉಂಡು, ಕೂಡಿ ಆಡಿ ಬೆಳೆಯುವರು. 'ರಾಜಶೇಖರ–ಸರ್ವಮಂಗಳೆ' ಎಂಬ ಹೆಸರು ಇಲ್ಲಿ ಇಲ್ಲವೇ ಇಲ್ಲ. ಷಡಕ್ಷರಿಯು ತನ್ನ ಮಂತ್ರಮಹಾತ್ಮೆಯ ಕಥೆಗೆ ಶಿವ ಪಾರ್ವತಿಯರ ಪರ್ಯಾಯ ನಾಮಗಳೇ ಆದ ಈ ಹೆಸರುಗಳನ್ನು ಕಲ್ಪಿಸಿಕೊಂಡಿದ್ದಾನೆ.

ರಾಜಶೇಖರ ವಿಳಾಸವು ಶೃಂಗಾರರಸದ ಪ್ರಾಧಾನ್ಯವುಳ್ಳ ಕಾವ್ಯ. ಕವಿಯ ಉದ್ದಿಷ್ಟ ಶೃಂಗಾರರಸ ಪ್ರಕಟನೆಗೆ ಬೇಕಾಗುವ ಸನ್ನಿವೇಶಗಳನ್ನೆಲ್ಲ ಕಾವ್ಯದುದ್ದಕ್ಕೂ ಹುಟ್ಟು ಹಾಕಿಕೊಂಡು ಬೆಳಸಿದ್ದಾನೆ. ಕಥೆಯನ್ನು ಬೆಳಸುವುದಾಗಲಿ ಕಥೆಯಲ್ಲಿ ವೈಚಿತ್ರ್ಯ ತೋರಿಸುವುದಾಗಲಿ ಕವಿಗೆ ಇಚ್ಛೆಯೇ ಇಲ್ಲದ ಅಂಶ. ಕಥೆ ಅವನ ಶೃಂಗಾರರಸ ಪ್ರಾಧಾನ್ಯತೆಯನ್ನು ವ್ಯಕ್ತಪಡಿಸುವ ಸನ್ನಿವೇಶಗಳ ನಿರ್ಮಾಣಗಳ ತುಮುಲದಲ್ಲಿ ಮುಚ್ಚಿ ಹೋಗಿದೆ ; ವಿಷಯಾಂತರವೆನ್ನುವಷ್ಟರ ಮಟ್ಟಿಗೆ ಪ್ರಚ್ಛನ್ನತೆಗೊಂಡಿದೆ. ಆದರೆ ಭಾವ ಚಿಂತಾರತ್ನದಲ್ಲಿ ಈ ಉದ್ದೇಶ ಆ ಕವಿಗೆ ಇರಲಿಲ್ಲವಾಗಿ ಕಥೆಗೆ ಪ್ರಾಧಾನ್ಯತೆಯಿದೆ. ಮಹಾಕಾವ್ಯದಲ್ಲಿರಬೇಕಾದ ೧೮ ವರ್ಣನೆಗಳನ್ನು ತರುವುದಕ್ಕೆ ಕವಿ ಕೃತಕಮಾರ್ಗ ವನ್ನನುಸರಿಸಿದ್ದಾನೆ. ಆದರೆ ಚಿಕ್ಕದೊಂದು ಜಾನಪದ ಕಥೆಯಲ್ಲಿ ತನ್ನ ಉದ್ದೇಶ ಸಾಫಲ್ಯಕ್ಕೆ ಅಂದರೆ 'ನುತಿಸೆನಲಿದ ಸುರರಂ ನರರಂ' ಎಂಬುದನ್ನು ರಕ್ಷಿಸಿಕೊಳ್ಳಬೇಕು, ಶೃಂಗಾರವನ್ನು ಪ್ರಧಾನವನ್ನಾಗಿ ಮಾಡಿ ಉಳಿದ ರಸಗಳು ಅಂಗರಸಗಳಾಗಿ ಬರುವಂತೆ, ನೋಡಿಕೊಳ್ಳಬೇಕು, ಮಹಾಕಾವ್ಯವನ್ನಾಗಿಸಬೇಕು. ಇವಕ್ಕೆಲ್ಲ ಷಡಕ್ಷರಿಯ ಈ ಮಾರ್ಗವಲ್ಲದೆ ಬೇರೊಂದು ಮಾರ್ಗ ಹುಡುಕಬೇಕಾದುದು ಶಕ್ಯವೇ ಇಲ್ಲ. ಕಥೆಯು ೧೩–೧೮ ನೆಯ ಆಶ್ವಾಸಗಳಲ್ಲಿ ಮಾತ್ರ ನಿರರ್ಗಳವಾಗಿ ಸಾಗುತ್ತದೆ, ಅಷ್ಟೆ. ಭಾವ ಚಿಂತಾರತ್ನದ ದೃಷ್ಟಿಯೇ ಬೇರೆ. ಕವಿಗೆ ಅದನ್ನು ಹದಿನೆಂಟು ವರ್ಣನೆಗಳ ಮಹಾಕಾವ್ಯ ವನ್ನಾಗಿಸಬೇಕೆಂಬ ಇಚ್ಛೆ ಇಲ್ಲ. ಇನ್ನುಳಿದ ಕಥೆಯೆಲ್ಲ ಸಾಮಾನ್ಯವಾಗಿ ಎರಡೂ ಗ್ರಂಥಗಳಲ್ಲಿ ಒಂದೇತೆರನಾಗಿದೆ. ಆದರೆ ಒಂದು ಮಾತನ್ನು ಮುಖ್ಯವಾಗಿ ನೆನಪಿನಲ್ಲಿಡ ಬೇಕು : ಷಡಕ್ಷರ ಕವಿಗೆ ಮಲ್ಲಣಾರ್ಯರ ಕೃತಿಯ ಕಥೆ ಮೂಲವಾದರೂ ಅದರ ನಕಲು ಮಾತ್ರ ಅಲ್ಲವೇ ಅಲ್ಲ.

**ರಾಜಶೇಖರವಿಳಾಸ ಕೃತಿ ವಿಮರ್ಶೆ :** ಕವಿಯೇ ಹೇಳುವಂತೆ ಈ ಕೃತಿ ನುತರಸ ಸಂಪದದಿಂದ, ಪದವು ಅರ್ಥಸಮನ್ವಿತವಾಗಿ, ಅರ್ಥವಾದರೂ ಆರ್ಯಸಮ್ಮತ ಗುಣರಂಜಿತವಾಗಿ, ಕಾವ್ಯಗುಣವು ಉದಾತ್ತವಾದ ಅಂದರೆ ಮಹಾಕಾವ್ಯದ ಗುಣ ವುಳ್ಳುದಾಗಿ, ಕೈಶಿಕ್ಯಾದಿವೃತ್ತಿ, ರೀತಿ, ವಿಶ್ರುತವಾದ ಅಲಂಕಾರ[58] ಇವುಗಳಿಂದ

---

58. ರಾ. ಶೇ. ವಿ. ೧–೮೫.

ಕೂಡಿ ಓದಿದವನು ಸೈ ಸೈ ಎನ್ನುವಂತಿರಬೇಕೆಂಬುದೇ ಮುಖ್ಯಬಯಕೆ. ಅದು ಕಾವ್ಯದಲ್ಲಿ ಎಷ್ಟರಮಟ್ಟಿಗೆ ಸಾರ್ಥಕ್ಯವನ್ನು ಪಡೆದಿದೆ ಎಂಬುದು ಪ್ರಕೃತ ಸಮಾಲೋಚನೆ ಮಾಡಬೇಕಾದ ಅಂಶವಾಗಿದೆ. ವರ್ಣತತಿ ಮಾತ್ರ ಜನಕರಾದ ಅಪರ್ಣಾ ಪರಮೇಶ್ವರ ರನ್ನು . ನುತಿಗೆಯ್ಯದ ಕಾವ್ಯ ಕಾವ್ಯವೇ ಅಲ್ಲ, ಷಡಕ್ಷರದೇವನ ದೃಷ್ಟಿಯಲ್ಲಿ.[೫೯] ಆದ್ದರಿಂದಲೇ ಅವನ ಪ್ರತಿಜ್ಞೆ : 'ಶಿವನಂ ತದೀಯ ಶರಣವ್ರಜಮಂ ಮನ ಬಂದಂತೆ ನುತಿಸುತ್ತೇನೆಂಬುದು.[೬೦] ಈ ಪ್ರತಿಜ್ಞಾವಿಧಿಯಿಂದಲೇ ಕಾವ್ಯವನ್ನು ರಸಜ್ಞ ಸುಮನೋಜ್ಞಗೊಳಿಸಿದ್ದಾನೆ. ಆದರೆ ಈ ಕೃತಿ ಕೇವಲ ಶಿವನನ್ನೂ ಅವನ ಶರಣವ್ರಜ ವನ್ನೂ ಹೊಗಳಲಿಕ್ಕೆಂದೇ ಹುಟ್ಟಿದ್ದಲ್ಲ. ಆ ಕೆಲಸವನ್ನು ಸಂಪೂರ್ಣವಾಗಿ ವೃಷಭೇಂದ್ರ ವಿಜಯ, ಶಬರಶಂಕರವಿಳಾಸಗಳಲ್ಲಿ ಕವಿ ಮಾಡಿದ್ದಾನೆ. ರಾಜಶೇಖರ ವಿಳಾಸದ ಮುಖ್ಯರಸ ಓದುಗರಿಗೆ ಶೃಂಗಾರವೇ ಎಂಬುದು ಭಾಸವಾಗದೆ ಇರದು. ಶಿವನ ಮತ್ತು ಅವನ ಶರಣವ್ರಜದ ಕಥೆ ತೀರಾ ಪ್ರಚ್ಛನ್ನ. ಶೈವಭಕ್ತಿಯ ಕಿರುಗತೆಯನ್ನು ವೀರಶೈವ ದರ್ಶನಕ್ಕೆ ಪೂರ್ಣವಲ್ಲದಿದ್ದರೂ ಸಮಿಸಪಕ್ಕೆ ತಂದು ಹೊಂದಿಕೆಗೊಳ್ಳುವಂತೆ ಮಾಡಿ ಕೊಂಡು, ಅದನ್ನು ಅಲ್ಲಲ್ಲಿ ಸಂಕ್ಷೇಪವಾಗಿ ಹೇಳುತ್ತ ಕವಿ ತನ್ನ ಅಪಾರವಾದ ಪ್ರಕೃತಿ ವೀಕ್ಷಣ ದೃಷ್ಟಿ, ಉಭಯ ಭಾಷೆಗಳ ಮೇಲಿರುವ ಅಪ್ರತಿಹತ ಭಾಷಾಪಾಂಡಿತ್ಯ, ಅಲಂಕಾರ, ಶಾಸ್ತ್ರಜ್ಞಾನ, ಚಿತ್ರಕವಿತ್ವದ ಬಗೆಗಿರುವ ಕ್ವಚಿತ್‌ವ್ಯಾಮೋಹ, ಶೃಂಗಾರ ರಸಪ್ರತಿಪಾದಕ ಸನ್ನಿವೇಶಗಳ ಕಲ್ಪನೆ, ಇವುಗಳನ್ನು ವಿಸ್ತೃತ ವಿವರಗಳೊಂದಿಗೆ ಕಾವ್ಯ ರಚಿಸಿ ಹಿಂದೆಬಿದ್ದ ಮಾರ್ಗಕಾವ್ಯದ ಸೊಬಗು ಸೌಂದರ್ಯಗಳು ಮತ್ತೊಮ್ಮೆ ಕನ್ನಡ ಸಾಹಿತ್ಯಸರಸ್ವತಿಯ ಗದ್ದುಗೆಯೇರಿ ಕುಳಿತುಕೊಳ್ಳಬೇಕೆಂಬ ವಿಶೇಷಾತುರ, ಕಾತರ ಗಳನ್ನು ವ್ಯಕ್ತಪಡಿಸಿರುವುದು ಕಂಡುಬರುವುದು. ಅಂತೆಯೇ ಕಾವ್ಯದುದ್ದಕ್ಕೂ ಕಥೆಗಿಂತ ಮಹಾಕಾವ್ಯದಲ್ಲಿರಬೇಕಾದ ಅಷ್ಟಾದಶವರ್ಣನೆಗಳೇ ಅಧಿಕವಾಗಿವೆ. ಶಿವನ ಮತ್ತು ಅವನ ಶರಣವ್ರಜದ ಕಥೆಯೆಂಬ ಹಂದರಕ್ಕೆ ಈ ವರ್ಣನೆಗಳ ಬಳ್ಳಿ ಹಬ್ಬಿ ಹಂದರವೇ ಕಾಣದಂತಾಗಿದೆ. ಬಳ್ಳಿ ಮಾತ್ರ ಸೊಂಪಾಗಿ ಬೆಳೆದು ವಿವಿಧ ಎಲೆ ಚಿಗುರು ಹೀಚು ಹೂ ಕಾಯಿಗಳ ಬಾಹುಳ್ಯದಿಂದ ಬೀಗಿಹೋಗಿದೆ. ಹೀಗೆ ಬೀಗಿ ಹೋದ ಬಳ್ಳಿಯಲ್ಲಿ ಹಂದರದ ಕಂಬ ತೊಲೆಗಳನ್ನು ಹುಡುಕುವುದೇ ಕಷ್ಟ. ಆ ಬಳ್ಳಿಯಲ್ಲಿ ಕೈಯಿಟ್ಟಲ್ಲೆಲ್ಲ ಸಿಗುವುದು ಶೃಂಗಾರರಸದ ಫಲ ; ಸ್ತ್ರೀವರ್ಣನೆಯ ಸೊಬಗಿನ ಹೂವು ; ಪ್ರಕೃತಿಚಿತ್ರಣದ ಮನೋ ಹರವಾದ ಚಿಗುರು, ಹೀಚು. ಸಂನ್ಯಾಸಿಯಾಗಿ, ಮಠದ ಸ್ವಾಮಿಯಾಗಿ ಇಷ್ಟೊಂದು ಶೃಂಗಾರಕ್ಕೆ ಪ್ರಾಶಸ್ತ್ಯವನ್ನು ಕವಿ ಕೊಡಬಹುದೇ ? ಎಂಬುದೇ ಅನೇಕರ ಪ್ರಶ್ನೆ.

---

59. ಅದೇ ೧–೨೦.

60. ಅದೇ–೧–೨೦.

ಕವಿಯೂ ತನಗೆ ತಾನೇ ಆ ಪ್ರಶ್ನೆಯನ್ನು ಹಾಕಿಕೊಳ್ಳದೆ ಬಿಟ್ಟಿಲ್ಲ. ಜನರು ಹೀಗೆನ್ನು ವುದಕ್ಕೆ ಸಾಧ್ಯವಿದೆ ಎಂಬುದೇ ಅವನ ಊಹೆ. ಆದರೆ ಅದಕ್ಕೆ ಅವನೇ ಸಮಾಧಾನ ಹೇಳಿರುವುದರಿಂದ ನಾವು ತೆಪ್ಪಗಾಗಬೇಕಾಗಿದೆ. ಇಲ್ಲದಿದ್ದರೆ ವಿಮರ್ಶಕ ಏನೇನೋ ಹೇಳಬೇಕಾಗಿತ್ತು. ಈ ಬಗೆಗೆ ಕವಿ ಹೇಳಿರುವುದು ಹೀಗೆ :

> ಅನುಚಿತಮಲ್ತೆ ಯೋಗಿಜನಮಂಡನ ನೀಂ ಕೃತಿವೇಳ್ವುದಿಲ್ಲಿ ಕೇ
> ಳ್ಮನಸಿಜಕೇಳಿ ಮುಖ್ಯ ಜನರಂಜನ ವರ್ಣನೆಗೈವುದೆಂದು ಸ
> ಜ್ಜನರಿದನೆನ್ನದಿರ್ಕೆ ಶಿವಯೋಗಿ ಹರೀಶ್ವರ ಮಲ್ಲಣಾರ್ಯರಿಂ
> ಪಿನ ಪೊಸಕಬ್ಬಮಂ ನೆಗಳ್ದರಾನವರಂತಿರೆ ಪೇಳ್ವೆನಿಂತಿದಂ[61]

ಮನ್ಮಥಕೇಳಿಯೇ ಮೊದಲಾದ ಜನರಂಜನೆಯ ವರ್ಣನೆ ಅನುಚಿತವೆಂದು ಸಜ್ಜನ ರಾದವರು ಅನ್ನದೆ ಇರಲಿ. ಹರಿಹರ ಮಲ್ಲಣಾರ್ಯರು ಶಿವಯೋಗಿಗಳು. ಅವರು ತಮ್ಮ ಕಾವ್ಯಗಳಲ್ಲಿ ಶೃಂಗಾರ ಹೇಳಿರುವುದರಿಂದ ನಾನು ಹೇಳಿದರೆ ತಪ್ಪೇನು? ಅದು ಕಾವ್ಯ ಧರ್ಮ. ಅವರು ದೊಡ್ಡವರು. ಯೋಚಿಸಿಯೇ ತಮ್ಮ ಕಾವ್ಯಗಳಲ್ಲಿ ಶೃಂಗಾರಕ್ಕೆ ಎಡೆ ಕೊಟ್ಟಿದ್ದಾರೆ. ಹರೀಶ್ವರನಿಗೆ ಸಮಾನ ಕವಿ ಯಾವನಿದ್ದಾನೆ![62] ಮಲ್ಲಣಾರ್ಯರೇನು ಸಾಮಾನ್ಯರೇ? ಅವರ ವೀರಶೈವಾಮೃತ ಪುರಾಣದ ಘನತೆಯೇನು? ಅಲ್ಲಿ ಅವರು ತೋರಿ ರುವ ವಿದ್ವತ್ತು ಪ್ರತಿಭೆ ಬಹುಶ್ರುತತ್ವಗಳನ್ನು ಅಳೆಯಲಾದೀತೆ ? ಅಂಥ ಮಹಾಮಹಿ ಮರು ಶೃಂಗಾರಕ್ಕೆ ಸ್ಥಾನ ಕೊಟ್ಟಿದ್ದಾರೆ. ಅವರ ಪರಂಪರೆಯವನಾದ, ಅವರನ್ನು ಪೂಜ್ಯರೆಂದು ತಿಳಿದ ನಾನು ಶೃಂಗಾರವನ್ನು ಹೇಳಿದ್ದರೆ ತಪ್ಪೇನು? ಎಂದೇ ಕವಿಯ ಸಮಾಧಾನ. ಮಹಾಕಾವ್ಯವನ್ನು ಹೇಳಬೇಕಾದರೆ ಅದಕ್ಕಿರುವ ಲಕ್ಷಣಗಳು ಬರದಿದ್ದರೆ ಹೇಗೆ ? ಅದು ಹೇಗೆ ಪೊಸಕಬ್ಬವೆನಿಸೀತು? ನೋಡಿದವರೇನೆಂದಾರು? ಎಂದು ನಮ್ಮನ್ನೇ ಕೇಳುವಂತಿದೆ, ಕವಿಯ ಈ ಸಮಾಧಾನ. ಅದೇನೇ ಇರಲಿ. ಮಹಾಕವಿ, ಮಹಾಕಾವ್ಯ- ಈ ಬಗೆಗೆ ಪ್ರಾಚೀನ ಕನ್ನಡಕವಿಗಳ ಅಭಿಪ್ರಾಯಕ್ಕೆ ಅನುಸಾರವಾಗಿ ರಾಜಶೇಖರ ವಿಳಾಸ ಕೃತಿ ಕವಿಯ ಅನಂತ ಅನುಭವಗಳ ಸಾರವನ್ನೊಳಗೊಂಡು ನಿಸರ್ಗಸುಭಗವೆನಿಸಿ ಹೊರಬಂದಿದೆ.

ಕಥೆಯ ಓಟದ ವಿಚಾರದಲ್ಲಿ ಮಮತೆಯುಳ್ಳವರು ರಾಜಶೇಖರವಿಳಾಸದಲ್ಲಿ ಸಂಪೂರ್ಣ ನಿರಾಸೆಗೊಳ್ಳಬೇಕಾಗುತ್ತದೆ. ಕವಿಗೆ ಎಲ್ಲಿಯೂ ಕಥೆಯ ಮೇಲೆ ಮಮತೆ

---

61. ರಾ. ಶೇ. ವಿ. ೧–೮೮.

62. ಹರೀಶ್ವರನ ಗಿರಿಜಾಕಲ್ಯಾಣದಲ್ಲಿ ಮತ್ತು ಮಲ್ಲಣಾರ್ಯರ ಭಾವಚಿಂತಾರತ್ನದಲ್ಲಿ ವೇಶ್ಯಾವಾಟಿಕೆಯ ವರ್ಣನೆಯಿದೆ. ಈ ವೇಶ್ಯಾವಾಟಿಕೆಯ ವರ್ಣನೆಯನ್ನು ಷಡಕ್ಷರದೇವ ಪೊಸ ಕಬ್ಬವೆಂದರೆ ವೇಶ್ಯಾವಾಟಿಕೆಯ ಸ್ವರೂಪದರ್ಶನ ಮಾಡಿಸುವ ವಿಧಾನದಿಂದ ಕೂಡಿರಬೇಕೆಂದು ಭಾವಿಸಿದಂತಿದೆ.

ಇದ್ದ ಹಾಗೆ ತೋರುವುದಿಲ್ಲ. ಕಥೆ ಏನಾದರೂ ಸ್ವಲ್ಪ ಸಾಗಿ ಓದುಗರ ಬೇಸರ ಕಳೆದಿದ್ದರೆ ೧೩-೧೪ನೆಯ ಆಶ್ವಾಸಗಳಲ್ಲಿ ಮಾತ್ರ. ಉಳಿದ ಕಡೆ ಪ್ರಕೃತಿಯ ಅದ್ಭುತ ಚಿತ್ರಣ ವನ್ನು ಮಾಡುವ ಹೆಬ್ಬಯಕೆಯಿಂದ ಸಂದುಸಂದನ್ನೂ 'ಭೂತಗನ್ನಡಿ'ಯಿಟ್ಟು ಇಣಿಕಿ ನೋಡಿ ರಹಸ್ಯವನ್ನು ಬೈಲಿಗೆಳೆದಿರುವುದನ್ನು ಕಾಣುತ್ತೇವೆ. ಬಾಣನ ಗದ್ಯಶೈಲಿ ಕನ್ನಡ ದಲ್ಲಿ ಎಲ್ಲಿಯಾದರೂ ಇದ್ದರೆ ಅದು ಷಡಕ್ಷರಿಯಲ್ಲಿ ಮಾತ್ರ. ಉತ್ಪ್ರೇಕ್ಷೆಯನ್ನಂತೂ ಷಡಕ್ಷ ರಿಯ ಬಾಯಿಂದಲೇ ಕೇಳಬೇಕೆನ್ನುವಷ್ಟರಮಟ್ಟಿಗೆ ಕಲ್ಪನಾವೈಭವ ಮೆರೆಯಿಸಿದ್ದಾನೆ. ಅವನ ತೀಕ್ಷ್ಣವಾದ ರವಿಕಿರಣದೃಷ್ಟಿ ಅತಿಸೂಕ್ಷ್ಮದೃಶ್ಯಗಳ ಬಗೆಗೂ ಅನಂತ ಶಬ್ದಜಾಲ ಗಳ ಮೋಡಿಯಿಂದ ಕಣ್ಣಿಗೆ ಕಟ್ಟಿದಂತೆ ಮಾಡಿವೆ. ಎಷ್ಟೋಸಮಯದಲ್ಲಿ ಕವಿಕಂಡ ಚಿತ್ರದ ಅರ್ಥಮಾಡಿಕೊಳ್ಳುವುದಕ್ಕೂ ಶಕ್ಯವಿಲ್ಲದ ನವಿರುಭಾವಗಳಿಂದ ಬಿಗಿವೆ.[63] ಯಾವ ಒಂದು ಸನ್ನಿವೇಶದ ವರ್ಣನೆಯೇ ಬರಲಿ, ಅಲ್ಲಿ ಸ್ವಲ್ಪಹೊತ್ತು ನಿಂತು, ಸುತ್ತ ಮುತ್ತ ನೋಡಿ, ಆಳಕ್ಕಿಳಿದು ವಿಸ್ತಾರವಾಗಿ ಹೇಳುವ ಪ್ರವೃತ್ತಿಯನ್ನು ಷಡಕ್ಷರಿಯಲ್ಲಿ ಕಾಣುತ್ತೇವೆ.

**ವೇಶ್ಯಾವಾಟಿಕೆಯ ವರ್ಣನೆಯ ಔಚಿತ್ಯವಿಚಾರ :** ವೇಶ್ಯಾವೃತ್ತಿ ಜಗತ್ತಿನ ಜನಜೀವನದೊಡನೆ ಬೆಳೆದು ಬಂದ ಅಭಿಶಾಪವೆನಿಸಿರುವುದೇನೋ. ಇದು ಯೋಚಿಸುವ ಅಂಶ. ಸಂಸ್ಕಾರಜೀವಿಯು ಆ ಬಗೆಯ ಜೀವನಕ್ಕೆ ಜಿಗುಪ್ಸೆಗೊಳ್ಳುತ್ತದೇನೋ ನಿಜ. ಆದರೆ ನಮ್ಮ ಪ್ರಾಚೀನ ಜನಜೀವನದ ಅಂಗವಾಗಿಯೇ ಅದು ಬೆಳೆದುಕೊಂಡುಬಂದಿರು ವುದನ್ನು ಕಾಣುತ್ತೇವೆ. ಅದರ ಬಗೆಗೂ ನಮ್ಮ ಪವಿತ್ರವೆನಿಸಿದ ಪುರಾಣಕಾವ್ಯಗಳು ಸಾಕಷ್ಟು ಸ್ಥಾನವನ್ನು ಮೀಸಲುಗೊಳಿಸಿವೆ.[64] ಅವರಿಗೆ ಮೋಕ್ಷಾದಿ ಪುರಸ್ಕಾರವೂ ಸಿಕ್ಕಿದೆ. ಈ ವೃತ್ತಿಯ ಬಗೆಗೆ ಭಾರತೀಯ ಸಾಹಿತ್ಯದಲ್ಲಿ ಅಷ್ಟೇಏಕೆ ಜಗತ್ಸಾಹಿತ್ಯ ದಲ್ಲೂ ಸ್ಥಾನಸಿಕ್ಕಿದೆ. ಇತ್ತೀಚೆಗೆ ಇದು ಅನಿಷ್ಟವೃತ್ತಿಯೆಂದು ತೊಡೆದುಹಾಕಲು ಪ್ರಯತ್ನಿಸಿರಬಹುದು. ಶಾಸನಗಳನ್ನು ಮಾಡಿರಬಹುದು. ಆದರೆ ಅದನ್ನು ತೊಡೆದು ಹಾಕಲಾಗಿದೆಯೆ ? ಶಾಸನಗಳ ಕಣ್ಣಿಗೆ ಮಣ್ಣೆರಚಿ ಅದು ಬೇರೊಂದು ಮಾರ್ಗ ದಲ್ಲಿ ಪ್ರಚ್ಛನ್ನವಾಗಿಯೇ ತನ್ನ ಅದೃಶ್ಯ ಕರಾಳಹಸ್ತವನ್ನು ಚಾಚಿದೆ. ಕಲೆಯ ಹೆಸರನ್ನು ಮುಂದೆ ಮಾಡಿ ಬದುಕುತ್ತಿದೆ. ಹೇಗೆ ಹೇಗೋ ಜೀವ ಹಿಡಿದೇ ಇದೆ. ಒಂದು

---

63. ಆಶ್ವಾಸ ೧೨ರಲ್ಲಿ ೬೯ನೆಯ ಪದ್ಯ ಮುಗಿದಮೇಲೆ ಬರುವ ಗದ್ಯಭಾಗವನ್ನು ನೋಡಿರಿ. ಅಲ್ಲಿ ಪ್ರಕೃತಿವೀಕ್ಷಣೆಯಲ್ಲಿ ಕವಿಗಿರುವ ತೀಕ್ಷ್ಣದೃಷ್ಟಿಯ ಅರಿವಾಗುವಂತಿದೆ.

64. ಪುರಾಣಗಳಲ್ಲಿ ಬರುವ ರಂಭಾದಿ ದೇವಲೋಕ ವೇಶ್ಯೆಯರ ಕಥೆಗಳು, ಶೂದ್ರಕನ ಮೃಚ್ಛಕಟಿಕದಲ್ಲಿ ಬರುವ ವೇಶ್ಯಾಜೀವನ ಕಥೆಗಳು, ಚೋಳಿಯಕ್ಕನೇ ಮೊದಲಾದವರ ಕಥೆಗಳು ಇದಕ್ಕೆ ನಿದರ್ಶನಗಳು.

ಕಾಲದಲ್ಲಿ ಬಂದು ವಿಶಿಷ್ಟ ವಿಭಾಗದಲ್ಲಿದ್ದ ಆ ವೃತ್ತಿ ಸಾಂಕ್ರಾಮಿಕದಂತೆ ಎಲ್ಲೆಲ್ಲೂ ಹರಡಿ ಹೋಗಿರುವುದನ್ನು ಅಲ್ಲಗಳೆಯಲಾಗುವುದಿಲ್ಲ. ಆ ವೃತ್ತಿ ಪರಿಶುದ್ಧ ಸಾಮಾಜಿಕ ಜೀವನಕ್ಕೆ ಆತಂಕಕಾರಿಯೆನ್ನೋಣ, ಅಶ್ಲೀಲವೆನ್ನೋಣ, ಜಗತ್ತಿನ ವಿಚಾರವಾದಿಗಳ ಅಪಹಾಸ್ಯಕ್ಕೆ ಕಾರಣವಾಗಿದೆ ಎನ್ನೋಣ. ಆದರೆ ಅದನ್ನು ತೊಡೆದು ಹಾಕುವಲ್ಲಿ ಶಾಸನಗಳೆಲ್ಲ ಸೋತಿವೆ ಎನ್ನಲಡ್ಡಿಯಿಲ್ಲ.

ಷಡಕ್ಷರದೇವನ ಕಾವ್ಯದಲ್ಲಿ ಈ ವೃತ್ತಿಯ ಅಶ್ಲೀಲ ವರ್ಣನೆಯಿದೆಯೆಂದು ಮೂಗು ಮುರಿಯುವವರೂ ಇದ್ದಾರೆ. ಆದರೆ ಅಲ್ಲಿ ಪ್ರಣಯಿಗಳಾದ ಜನರ ವಿವಿಧ ಮುಖದರ್ಶನ ಮಾಡಿಕೊಡುವಾಗ, ವ್ಯಕ್ತಿ ವ್ಯಕ್ತಿಗಳಿಗಿರುವ ಮಾನಸಿಕ ಭಿನ್ನತೆಗಳು, ಗುಣತ್ವಭಾವಗಳು, ಜೀವನಾನುಭವಗಳ ರೂಪರೇಖೆಗಳ ವಿರಾಡ್ದರ್ಶನ ಮಾಡಿಸುವ ಕವಿಯ ಶಕ್ತಿ, ನಿಪುಣತೆಗಳಿಗೆ ತಲೆದೂಗದವರಿಲ್ಲ. ಕೆಲವು ದೊಡ್ಡ ಕವಿಗಳ ಕಾವ್ಯದಲ್ಲಿ ಈ ವರ್ಣನೆ ಹಿಡಿತದಲ್ಲಿದ್ದರೆ ಷಡಕ್ಷರದೇವನ ರಾಜಶೇಖರ ವಿಳಾಸದಲ್ಲಿ ಉಚ್ಛೃಂಖಲಗೊಂಡು ಎರಡು ಆಶ್ವಾಸಗಳ ವ್ಯಾಪ್ತಿಯಲ್ಲಿ ವಿಸ್ತಾರವಾಗಿ ಹರಡಿದೆ ; ಕಟ್ಟೊಡೆದು ಹೊರಹೊಮ್ಮಿದೆ. ಇಲ್ಲಿ ಈ ಸನ್ನಿವೇಶನನ್ನು ನೋಡುವ ದೃಷ್ಟಿಯಲ್ಲಿ ಓದುಗರು ಸಂಯಮಿಗಳಾಗಬೇಕು. ವಾತ್ಸ್ಯಾಯನನ ಕಾಮಶಾಸ್ತ್ರಾದಿಗಳಲ್ಲಿ ಬರುವ ಸ್ತ್ರೀಯರ ಅನೇಕ ಮುಖಗಳ ಪರಿಚಯ ಮಾಡಿಕೊಡುವುದೇ ಕವಿಯ ಉದ್ದೇಶವಾಗಿದೆ. ಸ್ವಾಧೀನಪತ್ನಿಕೆ, ಖಂಡಿತೆ, ಕಲಹಾಂತರಿತೆ, ವಾಸಕಸಜ್ಜಿಕೆ, ಕಿಲಕಿಂಚಿತೆ ಮೊದಲಾದ ಎಂಟು ತರದ ಸ್ತ್ರೀಲಕ್ಷಣಗಳನ್ನು ಹೇಳುವಿಕೆಯೂ ಕವಿಯ ವಿಸ್ತಾರವಾದ ಈ ವರ್ಣನೆಯ ಮುಖ್ಯ ಉದ್ದೇಶ.

ಚಾಣಕ್ಯನ ಅರ್ಥಶಾಸ್ತ್ರವು ವೇಶ್ಯಾಪದ್ಧತಿಯನ್ನು ಶಾಸನಬದ್ಧಗೊಳಿಸಿದೆ. ವೀತರಾಗನಾದ ಚಾಣಕ್ಯನು ಈ ಪದ್ಧತಿಯನ್ನು ತೊಡೆದುಹಾಕುವುದು ಸಾಧ್ಯವಿಲ್ಲವೆಂದೇ ಶಾಸನಬದ್ಧಗೊಳಿಸಿರಲು ಸಾಕು. ಆತನು ತನ್ನ ಅರ್ಥಶಾಸ್ತ್ರದಲ್ಲಿ ಹೇಳಿರುವ ಅಭಿಪ್ರಾಯಗಳು ಹೀಗೆ :

ಗಣಿಕಾಧ್ಯಕ್ಷನು ಗಣಿಕೆಯರ ಕುಲದಲ್ಲಿಯೇ ಆಗಲಿ ಬೇರೆ ಕುಲದಲ್ಲಿಯೇ ಆಗಲಿ ಹುಟ್ಟಿದ ರೂಪಸಂಪನ್ನರೂ, ಕಲಾಪ್ರೌಢರೂ ಎನಿಸಿದ ಸ್ತ್ರೀಯರನ್ನು ಒಂದುಸಾವಿರ ಪಣಗಳ ವರ್ಷಾಶನದ ಮೇಲೆ ಗಣಿಕಾಸ್ಥಾನದಲ್ಲಿ ನೇಮಿಸಿಕೊಳ್ಳಬೇಕು. ಅವರ ರೂಪ ಯೌವನ ಅಲಂಕಾರ ವಸ್ತುಗಳಿಗನುಗುಣವಾಗಿ, ಉತ್ತಮ, ಮಧ್ಯಮ ಅಧಮವೆಂದು ವಿಂಗಡಿಸಬೇಕು. ಅವರ ಉಸ್ತುವಾರಿಯನ್ನು ಗಣಿಕಾಧ್ಯಕ್ಷ ನೋಡಿಕೊಳ್ಳಬೇಕು. ಈ ಸ್ತ್ರೀಯರನ್ನು ಶ್ವೇತಚ್ಛತ್ರಿ, ಚಿನ್ನದಕಲಶ, ಚಾಮರ ಹಿಡಿಯಲಿಕ್ಕೆ, ಪಲ್ಲಕ್ಕಿ, ಸಿಂಹಾಸನಗಳಲ್ಲಿ ಮಂಡಿಸಿರುವ ರಾಜನನ್ನು ಸೇವಿಸುವುದಕ್ಕೆ ನೇಮಿಸಿಕೊಳ್ಳಬೇಕೆನ್ನುವನು. ರೂಪ ಯೌವನ ಕಳೆದುಕೊಂಡ ವೇಶ್ಯೆಯರನ್ನು 'ಮಾತೃಕೆ' ಎಂದು ನೇಮಿಸಿಕೊಳ್ಳಬೇಕು. ರಾಜದಾಸ್ಯದಿಂದ ಬಿಡುಗಡೆ ಬಯಸಿದ ಸ್ತ್ರೀಯು ೨೪ ಸಾವಿರ ಪಣಗಳನ್ನು ತೆರಬೇಕು. ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಗನು ರಾಜದಾಸ್ಯದಿಂದ ಬಿಡುಗಡೆ ಹೊಂದಲು ೧೨

ಸಾವಿರ ಪಣ ಕೊಡಬೇಕು. ಮುಕ್ತನಾಗದವನು ತನ್ನ ಎಂಟನೆಯ ವರ್ಷದಿಂದ ರಾಜನ ಕುಶೀಲವನಾಗಿ (ನಾಟ್ಯ, ಸಂಗೀತಗಾರನಾಗಿ) ಉಳಿಯಬೇಕು. ಇವೇ ಮೊದಲಾದ ಅನೇಕ ಶಾಸನಗಳನ್ನು ಚಾಣಕ್ಯ ಮಾಡುತ್ತಾನೆ. ಅವರ ತಪ್ಪುಗಳಿಗೆ ಶಿಕ್ಷೆ. ಅವರ ಮೇಲಿನ ಕರ, ಅವರು ಸಾಮಾಜಿಕವಾಗಿ ಮಾಡುವ, ರಾಜನಿಗಾಗಿ ಮಾಡುವ ಕರ್ತವ್ಯ ಇವೆಲ್ಲವು ಗಳ ಬಗೆಗೂ ಹೇಳುವುದನ್ನು ನೋಡಿದರೆ ವೇಶ್ಯಾವೃತ್ತಿ ಬಹುಪ್ರಾಚೀನಕಾಲದಿಂದಲೂ ಭಾರತದಲ್ಲಿ ಶಾಸನಬದ್ಧವಾಗಿತ್ತೆಂದು ತಿಳಿಯಲನುಮಾನವೇ ಇಲ್ಲ. ಮೇಲಾಗಿ ಪ್ರಾಚೀನ ಭಾರತದ ಲಲಿತಕಲೆಗಳು ಬೆಳೆದುಬಂದುದು ವಿಶೇಷವಾಗಿ ವೇಶ್ಯಾಜನಾಂಗದಿಂದಲೇ ಎಂಬಂಶವೂ ಹೊಳೆಯುತ್ತದೆ. ನಟರು, ನರ್ತಕರು, ಗಾಯಕರು, ವಾದ್ಯಗಾರರು, ಹಾಸ್ಯಗಾರರು, ಪ್ಲವಗ (ಹಗ್ಗವನ್ನೇರಿ ಕುಣಿಯುವವರು–ಅಂದರೆ ಡೊಂಬರು), ಐಂದ್ರ ಜಾಲಿಕರು, ಚಾರಣರು, ಕುಲಟಿಯರು–ವೇಶ್ಯಾಜನಾಂಗದಲ್ಲಿಯೇ ಹೆಚ್ಚಾಗಿ ಬೆಳೆದು ಬಂದವರು. . ಶತ್ರುಪಕ್ಷದಲ್ಲಿನ ಪ್ರಮುಖ ಜಿತೇಂದ್ರಿಯರಲ್ಲದ ಗೂಢಪುರುಷರನ್ನು ಕೊಲ್ಲು ವುದಕ್ಕಾಗಿ ಮತ್ತು ಸ್ವರ ಕಣವ್ಯದಲ್ಲಿ ಪರಾಜ್ಮುಖಗೊಳಿಸುವುದಕ್ಕಾಗಿ ಸುಂದರಿಯರಾದ ವೇಶ್ಯಾಸ್ತ್ರೀಯರನ್ನು ನೇಮಿಸಬೇಕೆನ್ನುವನು.[65] ಇವರ ಸಹಾಯದಿಂದ ರಾಜನು ಕೋಶದ ಅಭಿವೃದ್ಧಿಯನ್ನೂ ಮಾಡಿಕೊಳ್ಳಬೇಕೆಂದು ಚಾಣಕ್ಯ ಹೇಳುತ್ತಾನೆ. ಈ ವೇಶ್ಯೆಯರು ಸಾಧ್ವಿಯರ ವೇಷದಿಂದ ರಾಜದ್ವೇಷಿಗಳಾದ ಜನರನ್ನು ಹಿಡಿದು ರಾಜನಿಗೆ ಒಪ್ಪಿಸ ಬೇಕೆಂಬ ನಿಬಂಧನೆಯೂ ಇತ್ತು. ಸಂಧಿಗಾಗಿ ಒಲುಗೊಟ್ಟ ರಾಜಪುತ್ರರ ಬಿಡುಗಡೆಯ ವಿಷಯದಲ್ಲಿ, ೧೮ ವಿಧವಾದ ಉಪಾಯಗಳಲ್ಲಿ ವೇಶ್ಯೆಯರ ಪಾತ್ರವೂ ಉಂಟು. ನಟ, ನರ್ತಕ, ಸಂಗೀತಗಾರ, ವಾದ್ಯಗಾರ, ನರ್ತಕಿ–ಮೊದಲಾದವರು ತಮ್ಮ ಕಲಾಪ್ರದರ್ಶನದ ನೆಪದಲ್ಲಿ ಮಹರಾಜರನ್ನು ಮರುಳುಗೊಳಿಸಿ ಸೆರೆಸಿಕ್ಕ ರಾಜಕುಮಾರರನ್ನು ಓಡಿಸಿಕೊಂಡು ಬರಬೇಕು. ಹೀಗೆ ಚಾಣಕ್ಯನ ಅಭಿಪ್ರಾಯದಲ್ಲಿ ವೇಶ್ಯಾಜನಾಂಗದ ಸ್ಥಾನಮಾನಗಳು ಸಾಮಾಜಿಕವಾಗಿ ಹಿಂದೆ ಹೀಗಿದ್ದುವೆಂಬುದರ ಕಲ್ಪನೆಯಾಗುವುದು. ಕ್ರಿ. ಶ. ೪೦೦ ರಿಂದ ೪೧೧ರ ವರೆಗೆ ಭಾರತದಲ್ಲಿ ಪ್ರವಾಸಮಾಡಿದ ಫಾಹಿಯಾನ್, ಕ್ರಿ. ಶ. ೧೦೩೦ ರಲ್ಲಿ ಪ್ರವಾಸಮಾಡಿದ ಆಲ್ಬೆರೋನಿ, ಸೆಬಾಸ್ಟಿಯನ್ ಮೆನ್ರಿಕ್ (ಕ್ರಿ. ಶ. ೧೬೨೯ ರಿಂದ ೧೬೪೩) ಅವರ ಬರವಣಿಗೆಗಳಲ್ಲಿ ಭಾರತದ ವೇಶ್ಯಾವಾಟಿಕೆಗಳ ಪ್ರಸ್ತಾಪ ಬಂದಿದೆ. ವಿಜಯನಗರದ ಅತ್ಯುಚ್ಛ್ರಾಯ ಕಾಲದಲ್ಲಿ ಈ ಸಾಮ್ರಾಜ್ಯದಲ್ಲಿ ಪ್ರವಾಸಮಾಡಿದ

---

65. (i) ಸಂಜ್ಞಾಭಾಷಾಂತರಜ್ಞಾಶ್ಚ । ಸ್ತ್ರೀಯಸ್ತೇಷಾಮನಾತ್ಮಸು ।
ಚಾರಘಾತಪ್ರಮಾದರ್ಥಂ । ಪ್ರಯೋಜ್ಯಾ ಬಂಧುವಾಹನಾಃ ॥
—ಕೌ. ಅ. ಶಾಸ್ತ್ರ, ಪು. ೪೪. ಕ. ಅನುವಾದ ಪು. ೧೩೨ ರಿಂದ ೭೬.

(ii) ಪರ್ವತರಾಜನ ಮೇಲೆ ಚಾಣಕ್ಯನು ಪ್ರಯೋಗಿಸಿದ ವಿಷಕನ್ಯಾ ಪ್ರಯೋಗ ವನ್ನಿಲ್ಲಿ ಜ್ಞಾಪಿಸಿಕೊಳ್ಳಬಹುದು.

ಅಬ್ದುಲ್‌ರಜಾಕನು ೧೨ ಸಾವಿರ ನಗರರಕ್ಷಕರಿಗೆ ಸಂಬಳ ಕೊಡುವಷ್ಟು ಹಣ ವೇಶ್ಯೆಯರ ತಲೆಗಂದಾಯದಿಂದ ಸಂದಾಯವಾಗುತ್ತಿತ್ತೆಂದು ವರ್ಣಿಸಿದ್ದಾನೆ. ಈ ಎಲ್ಲ ವಿಷಯದ ಸಿಂಹಾವಲೋಕನ ಮಾಡಿದುದರ ಅಂಶ ಇಷ್ಟೆ: ಹಿಂದಿನ ಜನಜೀವನದಲ್ಲಿ ವೇಶ್ಯಾಪದ್ಧತಿ ಇಂದು ನಾವು ತಿಳಿದಿರುವಷ್ಟರಮಟ್ಟಿನ ಅನಿಷ್ಟವೆನಿಸಿರಲಿಲ್ಲ. ವೇಶ್ಯೆಯರೂ ತಮ್ಮದೇ ಆದ ವಿಶಿಷ್ಟ ನಾಗರಿಕತೆಯಿಂದ ಬಾಳಿ ಬದುಕಿದ್ದರು, ಕ್ರಿ. ಶ. ೧೬೮೫ ರ ಸುಮಾರಿನಲ್ಲಿದ್ದ ಷಡಕ್ಷರದೇವನು ಹಿಂದಿನ ವೇಶ್ಯಾವಾಟಕೆಗಳ ಕಥೆಗಳನ್ನು ತಿಳಿದವನು. ಅಲ್ಲದೆ ಕಾವ್ಯಾದಿ ಜ್ಞಾನಾನುಭವ ಪಡೆದವನು. ಆ ಎಲ್ಲ ಕಥೆಗಳ ಆಧಾರದ ಮೇಲೆ ತನ್ನ ರಾ. ಶೇ. ವಿಳಾಸದಲ್ಲಿ ಅನೇಕ ಕಥೆಗಳನ್ನು ಪ್ರಸಂಗಗಳನ್ನು ಸನ್ನಿವೇಶಗಳನ್ನು ಚಿತ್ರಿಸುತ್ತ ವೇಶ್ಯೆಯರೂ ಸಂಗೀತ, ಸಾಹಿತ್ಯ, ಕಲಾನಿಪುಣರೆನಿಸಿದ್ದರೆಂಬಂಶವನ್ನು ಹೇಳುವ ಉದ್ದೇಶಸಾಧನೆಗಾಗಿ ೧೧-೧೨ನೆಯ ಆಶ್ವಾಸದ ತುಂಬೆಲ್ಲ ಅದರ ವಿಸ್ತಾರ ವರ್ಣನೆಮಾಡಿದ್ದಾನೆ, ಔಚಿತ್ಯಮೀರಿರಬಹುದು, ಐಶ್ವರ್ಯಾದಿಗಳು ಅಧಿಕಗೊಂಡಾಗ ವಿಲಾಸವೃತ್ತಿ ತಿಳಿಯುವುದು ಸಹಜವೇ. ಐಶ್ವರ್ಯಪ್ರಮತ್ತರಾದವರಿಂದ ಸ್ತ್ರ್ಯಂತರಾಸಕ್ತಿಯನ್ನು ದೂರೀಕರಿಸುವುದು ಶಾಸನವೂ ಅಲ್ಲ, ಇನ್ನಾವುದೂ ಅಲ್ಲ, ಸಂಸ್ಕಾರ ಮಾತ್ರ. ಈ ವರ್ಣನೆಯನ್ನು ಕಲಾದೃಷ್ಟಿಯಿಂದ, ಆ ಜೀವನದ ವಿಸ್ತಾರಪರಿಚಯ ದೃಷ್ಟಿಯಿಂದ ನೋಡಿದರೆ ಸಾಕು.

**ಸನ್ನಿವೇಶ ನಿರ್ಮಾಣದ ಬಗೆಗೆ:** ಷಡಕ್ಷರಕವಿ ತಾನು ಎತ್ತಿಕೊಂಡ ಕಥೆಯ ಸನ್ನಿವೇಶ ನಿರ್ಮಾಣ ವಿಷಯದಲ್ಲಿ ಕೃತಕವಾಗಿ ಹೇಳುವುದರಲ್ಲಿ ಬಹುದೂರ ಹೋಗುತ್ತಾನೆಂಬುದು ನಿಜವೆಂದು ಒಪ್ಪಿಕೊಳ್ಳಬೇಕು. ಹಾಗೆ ಹೇಳುವಲ್ಲಿ ಕವಿಗೆ ಉದ್ದೇಶವಿದೆ ಎನ್ನುವುದನ್ನು ಒಪ್ಪಲೇಬೇಕು. ಆ ಕೃತಕತೆ ಕವಿಯ ಉದ್ದೇಶಕ್ಕೆ ಪೋಷಕವಾಗಿದೆ. ಕವಿಗೆ ಕೆಲವು ಸ್ವಂತದ ಪ್ರತಿಜ್ಞೆಗಳು ಬಯಕೆಗಳು ಆಸೆ ಆಕಾಂಕ್ಷೆಗಳು ಇರುತ್ತವೆ. ಆ ಕಕ್ಷ್ಯೆಯಲ್ಲಿಯೇ ನಾವೂ ಅವನ ಕಾವ್ಯವನ್ನು ಓದಬೇಕು. ಒಬ್ಬ ಕವಿಯ ಕಾವ್ಯವನ್ನು ಅವನ ಉದ್ದೇಶಕ್ಕೆ ಅನುಗುಣವಾಗಿ ನೋಡಿ ಅವನ ಕಲಾಪರಿಣತಿಗೆ ತಲೆದೂಗಬೇಕಲ್ಲದೆ, ನಮ್ಮ ಉದ್ದೇಶಕ್ಕೆ ಅದರಲ್ಲಿ ಇರಬೇಕಾದುದನ್ನು ಕಲ್ಪಿಸಿ ಹೇಳಿಕೊಂಡು ತೆಗಳುವುದು ಸರಿಯಲ್ಲವೆಂದು ನನ್ನ ಭಾವನೆ. ಕವಿ ಎತ್ತಿಕೊಂಡ ವಸ್ತು ಚಿಕ್ಕ ಒಂದು ಜಾನಪದ ಕಥೆ ಅಥವಾ ಐತಿಹಾಸಿಕ ಕಥೆಯೇ ಎನ್ನೋಣ.[66] ಅದೇನೇ ಇರಲಿ. ಶಿವನನ್ನು ಅವನ ಶರಣವ್ರಜವನ್ನು ಹೊಗಳುವ ಕವಿಗೆ ಪ್ರಸಿದ್ಧವಾದ ಹಿಂದಿನ ಕಥೆಗಳನ್ನು ಕೈಗೆತ್ತಿಕೊಳ್ಳುವುದು ಆಗಲಿಲ್ಲ.

---

66. ಈ ಕಥೆ ಐತಿಹಾಸಿಕ ಎನ್ನುವುದಕ್ಕಿಂತ ಜಾನಪದದ ಭಕ್ತಿವಿಶೇಷ ಪ್ರಕಟನೆಯ ಉದ್ದೇಶವಿದ್ದ ಕಥೆಯೆಂದು ತಿಳಿಯುವುದೇ ಹೆಚ್ಚು ಸಮಂಜಸ.

ಮಲ್ಲಣಾರ್ಯರು ಬರೆದ ಈ ಕಥೆ ಕವಿಗೆ ಹಿಡಿಸಿತು. ಆ ಕಥೆಯನ್ನೇ ಕೈಗೆತ್ತಿಕೊಂಡು ಅದರಲ್ಲಿ ೧೮ ವರ್ಣನೆಗಳನ್ನು ತುಂಬಬೇಕೆಂಬ ಸಂಕಲ್ಪ ಮಾಡಿದನು. ೧೮ ವರ್ಣನೆಗಳನ್ನು ತುಂಬುವ ಭರದಲ್ಲಿ ಕೃತಕತೆ ಅವಶ್ಯವೇ ಆಯಿತು. ಆದರೆ ಆ ಹದಿನೆಂಟು ವರ್ಣನೆಗಳು ಹೇಗೆ ಬಂದಿವೆ ? ಅವುಗಳ ಮೌಲ್ಯವನ್ನು ವಿಮರ್ಶಕರು ಮಾಡಬೇಕು ಅಷ್ಟೆ. ಇಂದಿನ ನಮ್ಮದ ಭಾವನೆಗೂ ಹಿಂದಿನವರ ಭಾವನೆಗೂ ಕಾವ್ಯನಿರ್ಮಿತಿಯಲ್ಲಿ ವ್ಯತ್ಯಾಸಗಳಿವೆ. ಇಂದಿನ ಜಗತ್ತಿನಲ್ಲಿ ಕುಳಿತು ಹಿಂದಿನ ಜಗತ್ತೂ ಕೂಡ ಇಂದಿನಂತೆಯೇ ಇರಬೇಕಾಗಿತ್ತೆನ್ನುವುದು ಅಸಮಂಜಸ. ಷಡಕ್ಷರದೇವನದು ತಾನು ಕಂಡ ಲೋಕಾನುಭವ, ಪಡೆದ ಶಾಸ್ತ್ರಜ್ಞಾನ, ಕಂಡ ಪ್ರಕೃತಿಯ ಸೂಕ್ಷ್ಮ ದೃಶ್ಯಗಳನ್ನು ಗ್ರಂಥಸ್ಥಗೊಳಿಸಿ ಶಾಶ್ವತಗೊಳಿಸಬೇಕೆಂಬ ಉತ್ಕಟೇಚ್ಛೆಯುಳ್ಳವನು. ಪ್ರಕೃತಿಯ ಗರ್ಭದಲ್ಲಿ ಹೊಕ್ಕು ಉತ್ಪ್ರೇಕ್ಷಿಸಿ, ಹೋಲಿಸಿ ಇನ್ನು ಬೇರೆ ಕಲ್ಪನೆಗೆ, ಹೋಲಿಕೆಗೆ ವಸ್ತುವೇ ಇಲ್ಲನೆನ್ನುವಷ್ಟರ ಮಟ್ಟಿನ ಅಳಕ್ಕಿಳಿದು ಹೇಳಹೊರಟವನು. ಕಥೆ ಅವನ ದೃಷ್ಟಿಯಲ್ಲಿ ಉಪಲಕ್ಷ್ಯ ಮಾತ್ರ. ಅಲ್ಲಿ ಅವನಿಗೆ ಔತ್ಸುಕ್ಯವಿಲ್ಲ. ಸಂದರ್ಭ ಬಂದಾಗಲೆಲ್ಲ ಶೃಂಗಾರವನ್ನು ಪ್ರಧಾನ ಕೇಂದ್ರ ಬಿಂದುವನ್ನಾಗಿಟ್ಟುಕೊಂಡು ಯಾವ ಸನ್ನಿವೇಶವನ್ನೂ ಅಲ್ಲಿಗೆ ಎಳೆದುತಂದು ಜೋಡಿಸುವ ಅವನ ಪ್ರವೃತ್ತಿಗೆ ಏನೋ ಕಾರಣವಿರಬೇಕು. ಭಕ್ತಿಪ್ರಧಾನವಾದ ಶಿವ ಪಂಚಾಕ್ಷರೀ ಮಂತ್ರಮಹಿಮೆಯನ್ನು ಹೇಳ ಹೊರಟು ಹೀಗೆ ಮಾಡುವಲ್ಲಿ ಕವಿಗೆ ಸ್ಪರ್ಧಾಮನೋಭಾವದ ಆಂತರಿಕ ಪ್ರಜ್ಞೆಯೊಂದು ಕೆರಳಿದಂತೆ ಕಾಣುತ್ತದೆ. ಆದರೆ ಹಾಗೆಲ್ಲೂ ಹೇಳಿಕೊಂಡಿಲ್ಲ.

**ಕವಿಯ ವರ್ಣನಾವೈಖರಿಗೆ ಕೆಲವು ದೃಷ್ಟಾಂತಗಳು :** ಈ ಪೂರ್ವದಲ್ಲಿ ಪ್ರಕೃತಿಯ ವರ್ಣನೆ ಷಡಕ್ಷರಿಯ ಪ್ರಧಾನಾಂಶವೆಂದು ಹೇಳಲಾಗಿದೆ. ಆ ವಿಷಯದಲ್ಲಿ ಅವನ ಮಮತೆ ಎಷ್ಟೆಂಬುದನ್ನು ಕೆಲವು ದೃಷ್ಟಾಂತಗಳಿಂದ ಕಂಡುಕೊಳ್ಳಬಹುದು. ರಾಜಶೇಖರನು ನಿಜರಾಜಧಾನಿಯನ್ನು ತನ್ನ ಹೆಂಡತಿ ಸರ್ವಮಂಗಳೆಯೊಡನೆ ಪ್ರವೇಶಿಸಿದ ನಂತರ ಕೇವಲ ಕೆಲವು ಸಾಲುಗಳಲ್ಲಿ ಮನೆದುಂಬಿಸುವ ಕಾರ್ಯಮಾಡಿದ್ದಾನೆ. ಇಲ್ಲಿ ಕವಿ ಅನೇಕ ವಿಷಯಗಳನ್ನು ಹೇಳಬಹುದೆಂಬ ಬಯಕೆ ಓದುಗರಲ್ಲಿ ಉಂಟಾಗುವ ಹೊತ್ತಿಗೇ ಅದರ ಮೇಲೊಂದು ಬಂಡೆಗಲ್ಲಿಟ್ಟು ಚೈತ್ರಮಾಸದ ಪ್ರಸಂಗವನ್ನು ಎಳೆತಂದು ಮನದಣೀವರ್ಣನೆ ಮಾಡುವುದಕ್ಕೆ ಪ್ರವೃತ್ತನಾಗುವನು. ಆಗ ಒಂದು ಮಾವಿನ ಮರದ ವರ್ಣನೆಗೇ ಒಂಬತ್ತು ವೃತ್ತಗಳೂ ಎರಡು ಕಂದ ಪದ್ಯಗಳೂ ಮೀಸಲು.[67] ಮಾಮರದ ವರ್ಣನೆ ಹಿಂದೆ ಅಡೆಷ್ಟೋಸಲ ಬಂದಿದೆ.[68] ಅಲ್ಲಿನ

---

67. ಆ. ೯. ಪ. ೫೨ ರಿಂದ ೬೨.

68. ಆ. ೨. ೭೪–೭೫ ನೆಯ ಪದ್ಯ ಮತ್ತು ಮುಂದಿನ ಗದ್ಯದಲ್ಲಿ ಮಾಮರದ ವರ್ಣನೆ ಬರುತ್ತದೆ.

ದೃಶ್ಯವೇ ಬೇರೆ, ಇಲ್ಲಿನ ದೃಶ್ಯವೇ ಬೇರೆ. ಮಾಮರವನ್ನು ವರ್ಣಿಸುವಾಗಿನ ಕವಿಯ ಪ್ರಜ್ಞೆಗೆ ಎಲ್ಲಿಲ್ಲದ ಗರಿ ಮೂಡಿ ಬಾನೆತ್ತರಕ್ಕೆ ಹಾರುತ್ತದೆ. ಷಡಕ್ಷರಿಯಂತೆ ಮಾಮರ ವರ್ಣನೆಯಲ್ಲಿ ಕೃತ್ಯರಾದ ಬೇರೊಬ್ಬ ಕವಿ ಇರುವನೆಂಬ ಬಗೆಗೆ ನನಗೆ ನಂಬಿಕೆಯಿಲ್ಲ. ಕವಿಯ ಒಲವಿನ ವಸ್ತುವನ್ನು ಈ ವಸಂತದ ವರ್ಣನೆಯಲ್ಲಿ ಗುರುತಿಸಬಹುದಾಗಿದೆ. ಈ ವಸಂತಮಾಸದ ವರ್ಣನೆ ಮುಗಿದ ಮೇಲೆ ಕೇವಲ ಕೆಲವೇ ಸಾಲುಗಳಲ್ಲಿ ರಾಜ ಶೇಖರನ ಶಿವಪೂಜೆ ಮಾಡಿದ ಶಾಸ್ತ್ರ ಮುಗಿಸಿ ಪುನಃ ೧೧ ನೆಯ ಆಶ್ವಾಸದಲ್ಲಿ ನಂದನವನಕ್ಕೆ ಹೆಂಡತಿಯೊಡನೆ ರಾಜಶೇಖರನನ್ನು ಬರಮಾಡಿಕೊಂಡು, ನಂದನವನದ ಗಿಡಮರ ಬಳ್ಳಿಯ ವಿಸ್ತೃತ ವರ್ಣನೆಯಲ್ಲಿ ಜಲಕೇಳೀ ಪ್ರಸಂಗದಲ್ಲಿ ಆ ಆಶ್ವಾಸವನ್ನೇ ಮುಗಿಸುತ್ತಾನೆ. ಇಲ್ಲೆಲ್ಲ ಕಥೆಯ ಘಟನಾವಳಿಗಳೇ ಇಲ್ಲ. ಕೇವಲ ವರ್ಣನೆಗಾಗಿ ಕಲ್ಪಿಸಿಕೊಂಡುದೇ ಅಧಿಕ.

ಷಡಕ್ಷರಿಯ ಕಲ್ಪನೆ ಅದ್ಭುತ. ಕೇವಲ ಕಾವ್ಯವಿದ್ಯಾಪ್ರಚಯ ಪರಿಚಯ, ಶಾಸ್ತ್ರಾತ್ಯವೇ ಕ್ಷಣಬುದ್ಧಿಗಳಷ್ಟೇ ಅವನನ್ನು ಮಹಾಕವಿ ಪಟ್ಟಕ್ಕೇರಿಸಿಲ್ಲ. ಈಶ್ವರದತ್ತವಾದ ಸಹಜ ಪ್ರತಿಭಾಶಕ್ತಿ ಅವನಿಗೆ ಲಭ್ಯವಾಗಿದೆ. ಅವನು ಕಲ್ಪಿಸುವ ಚಿತ್ರಗಳು ಸಾಮಾನ್ಯರಿಗೆ ಅನೂಹ್ಯವಾದುವೇ ಸರಿ. ತನ್ನ ಮನಸ್ಸಿನಲ್ಲುಂಟಾದ ಸೂಕ್ಷ್ಮಭಾವಗಳ ಬೆಡಗನ್ನು ವ್ಯಕ್ತರೂಪಗೊಳಿಸಿ ತೋರಿಸಲು ಅವನಿಗೆ ವರವಾಗಿಬಂದ ಉಭಯ ಭಾಷಾ ಪಾಂಡಿತ್ಯವು ವಿಶೇಷ ಸಹಕಾರ ನೀಡಿದೆ.

'ಇಡಿದ ತಮಮೆಂಬ ಜಗುನೆಯ ಮಡುವಿನ ಮಧ್ಯದೊಳೆ ಸುಳಿವ ಮೀಂಗಳ ವೆಂಬಂತೆ' ತಾರಗೆಗಳು ಕಡುಸೊಗಸನ್ನು ಪಡೆದುವು. ಹೇಗೆ ಎಂಬುದರ ವಿಸ್ತಾರವಾದ ವರ್ಣನೆ ಮಾಡಿದಮೇಲೆ ಚಂದ್ರೋದಯವಾಯಿತು. ಚಂದ್ರನ ಮತ್ತು ಅವನ ಬೆಳದಿಂಗಳ ತಾರಗೆಗಳ ಈ ವರ್ಣನೆಗೆ ೩೯ ಪದ್ಯಗಳು ೧೭ ಸಾಲುಗಳ ಹೃದ್ಯವಾದ ಗದ್ಯ ಮೀಸಲಾಗಿವೆ.[69] ಇಲ್ಲಿನ ಉಪಮೋತ್ಪ್ರೇಕ್ಷಾದಿ ಅಲಂಕಾರ ಸಂಯೋಜನೆ ಅನ್ಯಾದೃಶ. ವರ್ಣನೆಯ ಸಮಯದಲ್ಲಿ ಕವಿಯ 'ಮೂಡು' ವಿಚಿತ್ರವೆನಿಸುತ್ತದೆ. ಒಮ್ಮೆ ಸಂಸ್ಕೃತದ ದೀರ್ಘದೀರ್ಘತರ ಸಮಸ್ತಪದಗಳ ಬಿಡಿಸಲಾಗದ ಗೋಣಸಿನ ಕೊಂಡಿಗಳ ಸರಪಳಿಯೇ ಪಡಿಮೂಡಿ ಬೆಳೆದುಬಂದರೆ, ಮತ್ತೊಮ್ಮೆ ದೇಸಿಯ ಬೆಡಗು ಬಿನ್ನಾಣಗಳನ್ನು ಹೊಂದಿ ಕನ್ನಡದ ಇಂಪು ಸೊಂಪು ಕಂಪುಗಳ ಮುಪ್ಪುರಿಯ ತೇರಿನ ಸೆಳ್ಳೇ ಮೈವೆತ್ತುಬರುತ್ತದೆ. ದೇಸಿಯ ಬೆಡಗಿಗೆ ಈ ಕೆಳಗಿನ ಗದ್ಯದ ತುಣುಕನ್ನು ನೋಡಿ : "ಮುಡಿಗಂಪಿಂಗೆ ಪಱಿ ಮೆವಱಗಳೆಱಗಿ ನೇವರಿಸಿದಳಕಮುಂ ಕೆದಱದಂತೆ ಕೆಳದಿ ಪಿಡಿದ ಕೆಂಡಸಂಪಿಗೆಯ ಬಿಱಿಮುಗುಳಾಲವಟ್ಟಂ ಬಟ್ಟಮೊಗಕ್ಕೆ ಕಟ್ಟದಿರೊಳೆಸೆವ ಬಟ್ಟವೆಱೆಯ ದಿಟ್ಟ ತಾಗ ದಂತೆ ಮಱಿಗೆಯ್ದಂತೆ ಮೆಱಿಯೆ, ಮಿಱುಪ ಸುಲಿಪಲ್ಲ ನುಣ್ಬೆಳಗು ಕಿಱುನೆಳ್ದಿಂಗಳಂ

---

69. ಆ. ೧೧, ಪದ್ಯ ೩೮ ರಿಂದ ೬೬;

ಕಱತಿಯೆ...."[70] ಇಲ್ಲಿ ಸಂಸ್ಕೃತದ ಗಂಧವೇ ಹೊಗದು ; ತದ್ಭವಪದಗಳು ನಾಲ್ಕಾರು ಇರಬಹುದು. ಇನ್ನೊಂಡೆಡೆಯಲ್ಲಿ ಕನ್ನಡದ ಗಂಧವೇ ಹೊಗದ ಸಂಸ್ಕೃತದ ಸರಮಾಲೆಗೆ ನೋಡಿ :

"....ಸಂತತ ಸಮುಧಿಗತ ಭರ್ಮ ಕೂರ್ಮಸಶರ್ಮ ಪರಿಚಲತ್ ಪೃಥುಳತರ ಶಫರ ಸಲಿಲಕರಿನಿಕರ ಮಕರ ,ಸುಕರ ಹಿತಕರಧನಳನು ಮರಾಳ ಮಂಜುಳ ಮದಮಧುಕರ ಪ್ರಕರ ಮಧುರರವ ಪರಿಗತ ನಿಜರಜಃಪುಂಜ ಪಿಂಜರಿತ ಜಳ ಕನಕ ಕಮಳ ಕುಮುದ ಕಲ್ಹಾ ರವಿಸರ ಸರಳತರತರಂಗ ರಂಗದಭಂಗ ಶೈವಲಲತಾವಿತಾನ ವಿಳಸಿತ..."[71] ಹೀಗೆಯೇ ಬೆಳೆದು ಹೋಗುತ್ತದೆ, ವಾಗ್ಜಾಲದ ಅಜಾಂಡ ಶಬ್ದಮಾಲೆ.

ಹೀಗೆ ಷಡಕ್ಷರ ಮಹಾಕವಿಯ ವಿಶಿಷ್ಟರೀತಿಯ ನಿರರ್ಗಳ ಶಬ್ದಭಂಡಾರದ ಬಗೆಗೆ ಯೋಚಿಸಿದಾಗ ವಿದ್ವಜ್ಜನರ ಮೈ ಜುಮ್ಮೆನ್ನುವಂತಾದೀತು. ಇಂಥ ಕಡೆಗಳಲ್ಲೆಲ್ಲ ಸಾಮಾನ್ಯವಾಗಿ ಧ್ವನಿಯಿಲ್ಲವೆಂದೂ ಶುಷ್ಕಪಾಂಡಿತ್ಯವೆಂದೂ ಕೆಲ ವಿಮರ್ಶಕರು ಹೇಳುವುದುಂಟು. ಶುಷ್ಕಪಾಂಡಿತ್ಯ ಷಡಕ್ಷರಿಯ ಕಾವ್ಯಗಳಲ್ಲಿ ಇರಬಹುದು. ಆದರೆ ಸಮಗ್ರ ಕಾವ್ಯವನ್ನೇ ಶುಷ್ಕವೆಂದು ಹೇಳುವುದು ಧಾರ್ಷ್ಟ್ಯವೆನಿಸೀತು. ಕುಸ್ತಿಮಾಡಲು 'ಅಖಾಡ'ಕ್ಕೆ ಇಳಿದ ಜಟ್ಟಿಗೆ ಉತ್ತಮವಾದ ಒಂದೆರಡು ಪಟ್ಟುಗಳು ಸಾಕಾಗವು. ಎಲ್ಲ ಪಟ್ಟುಗಳ ಪರಿಚಯವೂ ಅವನಿಗೆ ಅವಶ್ಯಕ. ಆಗಲೇ ಅವನು ಜಟ್ಟಿಯೆನಿಸಿಕೊಂಡಾನು. ಸಂಗೀತದಲ್ಲಿ ನಾದಮಾಧುರ್ಯಕ್ಕೆ ಬೆಲೆಕೊಟ್ಟು ಸಾಹಿತ್ಯವನ್ನು ಕಡೆಗಣಿಸುವುದೂ ಉಂಟು. ಗವಾಯಿ (ಸಂಗೀತಗಾರ)ಯೊರ್ವನು 'ಚಲಕ...ಚಲಕ...' ಎಂದು ಪ್ರಾರಂಭಿಸಿ ಆರೋಹಣಾವರೋಹಣ ಪಲಕುಮಲಕುಗಳನ್ನೆತ್ತಿ ಇಳುಹಿಸಿ ಹಾಡುತ್ತಿರುವಾಗ ಶ್ರೋತೃಗಳಿಗೆ ಚಲಕ....ದ ಕಡೆಗೆ ಲಕ್ಷ್ಯವೇ ಹೋಗಿ ನಾದಮಾಧುರ್ಯದ ಹೊಯ್ನಳೆ ಸುರಿಯಲಿ! ಇನ್ನು ಸುರಿಯಲಿ ! ಎಂಬ ಶ್ರದ್ಧೆಯಲ್ಲಿ ಮುಳುಗಿಬಿಡುತ್ತಾನೆ. ಆಗ ಅವನಿಗೆ ಆ ಹಾಡಿನ ಸಾಹಿತ್ಯ ಅದರ ಅರ್ಥದ ದೆಸೆಯಿಂದ ತಿರೋಧಾನನಾಗಿ ಬಿಡುತ್ತಾನೆ. ಮಹಾಕಾವ್ಯದ ಸಾಹಿತ್ಯದಲ್ಲೂ ಒಮ್ಮೊಮ್ಮೆ ಹೀಗೆ ಕೇವಲ ಶಬ್ದಗಳ ಜೋಡಣೆಯು ಕಸರತ್ತನ್ನು ತೋರಿಸಿ ಅವುಗಳ ಶಯ್ಯೆಯ ಬೆಡಗಿನ ನಾದಮಾಧುರ್ಯದಲ್ಲಿ ಲೋಕವನ್ನು ಮುಳುಗಿಸಿಬಿಡುತ್ತಾನೆ. ಆದರೆ ಮಹಾಕವಿ ಕೇವಲ ಇಂಥ ಪ್ರಯೋಗಗಳಿಗಾಗಿಯೇ ಕಾವ್ಯಾರಂಭ ಮಾಡುತ್ತಾನೆಂದು ತಿಳಿಯಬಾರದು. ಅಲ್ಲಲ್ಲಿ ದಿಗ್ದರ್ಶನಾರ್ಥವಾಗಿ ಇಂಥ ಪ್ರಯೋಗಗಳ ತನ್ನ ಶಕ್ತಿ ಸಾಮರ್ಥ್ಯ ಪ್ರಕಟಿಸುತ್ತಾನಷ್ಟೆ. ಷಡಕ್ಷರ ಮಹಾಕವಿ ಕನ್ನಡ ಸಾಹಿತ್ಯಲೋಕದ ವಿದ್ವದ್ವರ. ಅವನ ಸಮಗ್ರ ಕಾವ್ಯಗಳ ಸಂದಿಗೊಂದಿಗಳನ್ನು ದೀಪಹಚ್ಚಿ ಹುಡುಕಿ ಅವನ ಗುಟ್ಟನ್ನೆಲ್ಲ ಬೆಳ್ಳಂಬೆಳಕುಗೊಳಿಸಬೇಕು. ಆ ಪಾಂಡಿತ್ಯ, ಕವಿತಾಶಕ್ತಿ, ಭಾವ

---

70. ಆ. ೪. ಪದ್ಯ ೧೪ರ ಮುಂದಿನ ಗದ್ಯ.

71. ಆ. ೧೪. ಪದ್ಯ ೧೦೬ ರ ಮುಂದಿನ ರಗಳೆಯ ಮುಂದಿನ ಗದ್ಯಭಾಗ.

ಸಾಮ್ರಾಜ್ಯದ ಬೆಡಗುಬಿನ್ನಾಣ, ಮಾರ್ಗಕಾವ್ಯ ನಿರ್ಮಾಣದಲ್ಲಿನ ಪ್ರೌಢಿಮೆ, ಪ್ರಸನ್ನತೆ ಇನ್ನೆಲ್ಲಿ. ಅವನಿಗೆ ಇವು ವರವಾಗಿ ಬಂದಿವೆಯೆಂದು ಕೈಕಟ್ಟಿ ಕುಳಿತುಕೊಳ್ಳುವಲ್ಲಿ ಅರ್ಥ ವಿಲ್ಲ. ಇಷ್ಟೊಂದು ಪಾಂಡಿತ್ಯಸಂಪಾದನೆಯಲ್ಲಿ, ಸಂಪಾದಿಸಿದ ಪಾಂಡಿತ್ಯವನ್ನು ಕಾವ್ಯ ಮುಖಗೊಳಿಸುವಲ್ಲಿ ಅವನೆಷ್ಟು ಕಷ್ಟಪಟ್ಟಿರಬೇಕೆಂಬುದರತ್ತ ಕಲ್ಪನೆಯ ಕಣ್ಣನ್ನು ಇಂದಿನ ವಿದ್ವಾಂಸರು ಹರಿಸಬೇಕೆಂಬುದರಲ್ಲಿ ತಥ್ಯಾಂಶವಿದೆ. ಇಂಥ ಮಹಾಕಾವ್ಯ ಗಳನ್ನು ಇಂದಿನ ವಿದ್ವಾಂಸರು ರಚಿಸಬೇಕೆಂದಲ್ಲ. ಅವುಗಳ ಅರ್ಥವನ್ನಾದರೂ ಸಂದಿ ಗೊಂದಿಗಳಲ್ಲಿ ಹುಡುಕಿ ಬೈಲಿಗೆಳೆದು ತಾವು ಅದರಿಂದ ದಷ್ಟಪುಷ್ಟಿಗೊಂಡು ಇಂದಿನ ಪ್ರಪಂಚಕ್ಕೆ ಬೇಕಾದುದನ್ನು ಕೊಡುವುದರತ್ತ ಹೊರಳಬೇಕು. ನವ್ಯತೆಯ ಬಗೆಗೆ ಹೊಸದರ ಬಗೆಗೆ ಗೌರವಭಾವ ಇಂದಿನ ಪೀಳಿಗೆಗೆ ಇದೆ. ಆದರೆ ಆ ನವ್ಯವೆನ್ನುವುದು ಭವ್ಯವಾಗಿರದಿದ್ದರೆ ಇಂದಿನ ಪೀಳಿಗೆಗೆ ನಮ್ಮ ಸಾಹಿತ್ಯದ ಗಂಧವಿಷ್ಟೆಯೇ ! ಎಂದು ಕೊಂಡಾರು. ಪದ್ಯ ಬರೆಯಬಹುದು, ಕವಿಯಾಗುವುದು ಸುಲಭವಲ್ಲ. ಕವಿಯಾದರೆ ಕಾವ್ಯ ಕಲ್ಪಾಂತ ಚಿರಸ್ಥಾಯಿತ್ವ ಪಡೆಯಬೇಕು. ಇಂದು ಹುಟ್ಟಿ ನಾಳೆ ಸಾಯುವ ಅಲ್ಪಸತ್ವದ ಸಾಹಿತ್ಯ ಸಾಹಿತ್ಯವೆನಿಸದು. ಕೇವಲ ವಿಸ್ತಾರದಲ್ಲಿ ಬೆಲೆಯಿಲ್ಲ ; ಆಳವೂ ಆಗಿರಬೇಕು. ಆಳವಾಗಿ ಬೇರುಬಿಟ್ಟು ಎತ್ತರವಾಗಿ ಬೆಳೆದದ್ದು ಬೀಳುವುದಿಲ್ಲ.

**ಷಡಕ್ಷರದೇವನ ಚಿತ್ರಕವಿತೆಯ ಬಗೆಗೆ ಒಂದೆರಡು ಮಾತು :** ನೃತ್ಯದಲ್ಲಿ ನೋಟಕರಿಗೆ ರಸಾನುಭೂತಿಯನ್ನುಂಟುಮಾಡುವ ಶಕ್ತಿ ಕಾಲಿಗೆ ಕಟ್ಟಿದ ಗೆಜ್ಜೆಗೆ ಅಲಂಕಾರಕ್ಕೆ ಇರುವುದಿಲ್ಲವೆಂಬುದೇನೋ ನಿಜ. ಆದರೆ ಆ ಗೆಜ್ಜೆಯ ಧ್ವನಿಯೂ ಅಲಂಕಾರವೂ ಒಂದು ರೀತಿಯಲ್ಲಿ ಸಮಗ್ರ ನೃತ್ಯದ ತುಂಬೆಲ್ಲ ತನ್ನ ಗತ್ತು ಗಾರಿಕೆಯ ನಿನಾದದಿಂದ ರೂಪದಿಂದ ಭಾವಬೋಧಕವಾಗಿ ಕಣ್ಣಿಗೆ ಕಾಣದಂತೆ ತನ್ನ ಪಾಲಿನ ಕೆಲಸ ಮಾಡುತ್ತದೆಂಬುದನ್ನು ಒಪ್ಪಬೇಕು. ಷಡಕ್ಷರಕವಿಯ ಶಬ್ದಾಲಂಕಾರ ಚಿತ್ರಕವಿತೆಗಳ ವಿಚಾರವಾಗಿಯೂ ಈ ಮಾತನ್ನು ಒಪ್ಪಬೇಕು. ಅದ್ಭುತ ಶಬ್ದಾರ್ಥ ಜ್ಞಾನಿಯಾಗಿ 'ವಶ್ಯಾವಾಕ್' ಎನಿಸಿದವನು ತನ್ನ ಕಾವ್ಯದಲ್ಲಿ ತನಗಿರುವ ಶಬ್ದಶಕ್ತಿಯ ಚಮತ್ಕಾರಜ್ಞಾನವನ್ನು ಪ್ರಯೋಗಿಸಿದೆ ಬಿಡುವುದಿಲ್ಲ. ಅವನಿಗೂ ಗೊತ್ತು, ಶಬ್ದ ಚಮತ್ಕೃತಿ ರಸಾನುಭೂತಿಗೆ ಪ್ರಧಾನ ಹೇತುವಾಗದೆಂದು. ಅಂತೆಯೇ ಅಲ್ಲಲ್ಲಿ ಎಡೆಯರಿತು ತನ್ನ ಪಾಂಡಿತ್ಯಪ್ರದರ್ಶನ ಮಾಡುತ್ತಾನೆಂದು ಹಿಂದೆ ವಿವರಿಸಿದೆ. ಹಾಗೆ ಹೇಳುವುದರಲ್ಲಿ ಕವಿಯ ಆತ್ಮಪ್ರತ್ಯಯದ ಬಗೆಗೆ ತನಗಿದ್ದ ನಂಬುಗೆಯ ಪ್ರದರ್ಶನವೂ ಆಗುತ್ತದೆ. ಆಗ ಅವನು ಸಮಾಧಾನಪಟ್ಟುಕೊಳ್ಳುತ್ತಾನೆ.

ಹೀಗೆ ಶಬ್ದದಲ್ಲಿ ಅಲಂಕಾರವೈಚಿತ್ರವಿಟ್ಟು ಪ್ರಯತ್ನಪೂರ್ವಕವಾಗಿ ರಚಿಸಿದ ಕವಿಯ ರಚನೆಗಳು ಶಬ್ದಾಲಂಕಾರಗಳೆನಿಸುವುವು. ಸಾಮಾನ್ಯವಾಗಿ 'ವಕ್ರೋಕ್ತಿ, ಅನು ಪ್ರಾಸ, ಯಮಕ, ಶ್ಲೇಷೆ, ಚಿತ್ರ, ಪುನರುಕ್ತಾವಭಾಸ' ಗಳು ಶಬ್ದಾಲಂಕಾರಗಳಲ್ಲಿ

ಮುಖ್ಯವಾದುವು[81]. ಯಾವ ಶಬ್ದದಲ್ಲಿ ಅಲಂಕಾರವೈಚಿತ್ರವುಂಟೋ ಆ ಶಬ್ದವನ್ನು ಸಮಾನಾರ್ಥಕವಾದ ಶಬ್ದಾಂತರದಿಂದ ಪರಿವರ್ತನೆಮಾಡಿದಾಗ ಅಲಂಕಾರದ ಸೊಬಗು ಮಾಯವಾಗುವಂತಿದ್ದರೆ ಮಾತ್ರ ಶಬ್ದಾಲಂಕಾರವೆನಿಸುವುದು[82]. ಇಂಥ ಶಬ್ದಾಲಂಕಾರದ ಒಂದು ಭೇದವೇ 'ಚಿತ್ರಕಾವ್ಯ' ಅಥವಾ 'ಚಿತ್ರಕವಿತೆ' ಎಂಬುದು. ಷಡಕ್ಷರದೇವನು ತನ್ನ ಕಾವ್ಯಗಳಲ್ಲಿ ಇಂಥ ಚಿತ್ರಕವಿತೆಗಳ ಅನೇಕ ಪ್ರಯೋಗಗಳನ್ನು ತೋರಿಸಿದ್ದಾನೆ. ಶಬ್ದಚಿತ್ರಗಳಾದ ಶ್ಲೇಷೆ, ಅನುಪ್ರಾಸ, ವಕ್ರೋಕ್ತಿ–ಇತ್ಯಾದಿಗಳನ್ನು ಸುಲಭವಾಗಿ ಕಂಡುಹಿಡಿಯಬಹುದು. ಆದರೆ ದುಷ್ಕರಗಳಾದ ಖಡ್ಗಾದ್ಯಾಕೃತಿ ಚಿತ್ರಕಾವ್ಯಗಳನ್ನು ರಾಜಶೇಖರವಿಳಾಸದಲ್ಲಿ ಕಂಡುಹಿಡಿಯುವುದು ಕಷ್ಟವೆನಿಸಿದೆ. ಗೋಮೂತ್ರಿಕಾಬಂಧ, ಬಹಿರ್ಲಾಪಿ, ಪ್ರಹೇಳಿಕೆ[83]ಗಳೇ ಮೊದಲಾದ ಗೂಡಾರ್ಥಕ ಚಿತ್ರಕವಿತೆಗಳು ರಾಜ ಶೇಖರ ವಿಳಾಸದಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತಿವೆ. ನಿರೋಷ್ಠ್ಯ, ಮೂರ್ಧನ್ಯಾಕ್ಷರ ರಾಹಿತ್ಯ, ಅಚಲ ಜಿಹ್ವಾಬಂಧ, ಅನುಸ್ವಾರ, ವಿಸರ್ಗ ರಾಹಿತ್ಯಾದಿ ಉಕ್ತಿಚಮತ್ಕಾರ ಪದ್ಯಗಳನ್ನು ವೃಷಭೇಂದ್ರವಿಜಯದಲ್ಲಿ ನೋಡಬಹುದು.[84] ಪ್ರಾಚೀನ ಕಾವ್ಯ ಪ್ರಕಾರ ಗಳಲ್ಲೆಲ್ಲ ಕೈಯಾಡಿಸಿದ ಷಡಕ್ಷರಿಯ ಕಾವ್ಯಗಳಲ್ಲಿನ ಚಿತ್ರಕವಿತೆಗಳ ಬಗೆಗೆ ವಿದ್ವಾಂಸರು ಶೋಧನೆ ನಡೆಯಿಸುವ ಅವಶ್ಯಕತೆಯಿದೆ.

**ಛಂದಸ್ಸಿನ ವಿಚಾರ :** ಕನ್ನಡ ಸಾಹಿತ್ಯದಲ್ಲಿ ಪಂಪನಿಂದ ಮೊದಲ್ಗೊಂಡು ಚಂಪೂಕಾವ್ಯಗಳು ಹುಟ್ಟಿ ಬೆಳೆದುಬಂದಿವೆ. ಚಂಪೂಕಾವ್ಯಗಳಲ್ಲಿ ಮುಖ್ಯವಾಗಿ ಕಂದಪದ್ಯ ಸಮವೃತ್ತಗಳ ಗದ್ಯಭಾಗಗಳು ಬಳಸಲ್ಪಡುತ್ತವೆ. ವೃತ್ತದಲ್ಲಿ ಮುಖ್ಯವಾಗಿ ಖ್ಯಾತವಾದ ಚಂಪಕಮಾಲಾ, ಉತ್ಪಲಮಾಲಾ, ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಸ್ರಗ್ಧರಾ, ಮಹಾಸ್ರಗ್ಧರಾವೃತ್ತಗಳ ಬಳಕೆ ಹೆಚ್ಚು. ಉಳಿದ ವೃತ್ತಗಳ ಸಂಖ್ಯೆ ಕಡಿಮೆ. ಅಲ್ಲಲ್ಲಿ ರಗಳೆಗಳು ತ್ರಿಪದಿಗಳನ್ನು ಬಳಸಿರುವುದು ಕಂಡುಬರುತ್ತದೆ. ಷಡಕ್ಷರಿಯು ಛಂದೋ ಪ್ರಕಾರಗಳ ಬಳಕೆಯಲ್ಲಿ ಕನ್ನಡದ ಎಲ್ಲ ಕವಿಗಳನ್ನು ಮಿಕ್ಕಿಸಿದ್ದಾನೆ. ೧೧ಅಕ್ಷರಗಳ ತ್ರಿಷ್ಟುಪ್ ಛಂದಸ್ಸು ಮೊದಲುಗೊಂಡು ೨೬ಅಕ್ಷರಗಳ ಉತ್ಕೃತಿಯವರೆಗೆ ಬೇರೆ ಬೇರೆ ವೃತ್ತಪ್ರಕಾರಗಳನ್ನು ರಾಜಶೇಖರ ವಿಳಾಸದಲ್ಲಿ ನೋಡುತ್ತೇವೆ. ಕಂದಪದ್ಯಗಳ ವೈಶಿಷ್ಟ್ಯವಂತೂ ರಾಜಶೇಖರ ವಿಳಾಸದಲ್ಲಿ ಅನ್ಯಾದೃಶ. ಇವಲ್ಲದೆ ಲಲಿತಪದ ವೃತ್ತ,

---

81. 'ಕಾವ್ಯಪ್ರಕಾಶಕಾರನಾದ ಮಮ್ಮಟನು ಈ ಆರು ಶಬ್ದಾಲಂಕಾರ ಭೇದಗಳನ್ನು ಒಪ್ಪುತ್ತಾನೆ.' –ಡಾ. ಕೃಷ್ಣಮೂರ್ತಿ : ಕನ್ನಡ ಕಾವ್ಯಪ್ರಕಾಶ ಪು. ೧೩೩ (ಅಡಿ.ಟಿ)
82. ಅದೇ.
83. ಆ. ೧೧. ಪದ್ಯ ಕ್ರಮವಾಗಿ ೭೫, ೧೭೨, ೧೭೩.
84. ವೃ. ವಿ. ಕ್ರಮವಾಗಿ ೪೨–೬೦, ೫೯–೬೦, ೪೨–೬೧, ೩–೫೮ ಪದ್ಯ ನೋಡಿರಿ.

ತ್ರಿಪದಿ, ಶ್ಲೋಕ, ತ್ರಿವುಡೆ, ಲಲಿತರಗಳೆ, ಮಂದಾನಿಲರಗಳೆಯೇ ಮೊದಲಾದ ೨೯ ಬಗೆಯ ಛಂದೋಪ್ರಕಾರಗಳನ್ನು ಬಳಸಿ ವಿಕ್ರಮ ಸಾಧಿಸಿದ್ದಾನೆನ್ನಬಹುದು. ಇಷ್ಟೊಂದು ಛಂದೋರೀತಿಗಳ ಬಳಕೆಯನ್ನು ಕನ್ನಡ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಇನ್ನಾರೂ ಮಾಡಿದಂತೆ ತಿಳಿದುಬಂದಿಲ್ಲ. ಜಗನ್ನಾಥ ವಿಜಯದಲ್ಲಿ ರುದ್ರಭಟ್ಟ ಕೇವಲ ೧೨ಪ್ರಕಾರಗಳನ್ನು ಬಳಸಿದ್ದಾನೆ. ಉದ್ಭಟ ಕಾವ್ಯದಲ್ಲಿ ಸೋಮರಾಜನು ೨೫ಪ್ರಕಾರದ ಛಂದೋಬಳಕೆ ಮಾಡಿದ್ದಾನೆ. ಪಂಪಕವಿಯ ಛಂದೋಪ್ರಕಾರಗಳ ಬಳಕೆ ಷಡಕ್ಷರಿಯನ್ನು ಮಿಕ್ಕಿಸಿಲ್ಲ.

**ಷಡಕ್ಷರಕವಿಯ ಮತ್ತು ಕಾವ್ಯದ ಬಗೆಗೆ ಅಭಿಪ್ರಾಯಗಳು :**

(೧) ಆತನ ಪ್ರಥಮ ಕೃತಿಯಾದ ರಾಜಶೇಖರ ವಿಳಾಸದ ಮೇಲೆಯೇ ಆತನ ಖ್ಯಾತಿಯೆಲ್ಲ ಕನ್ನಡ ಕಾವ್ಯಗಳಲ್ಲಿ ಪ್ರಸಿದ್ಧವಾದ ಜೈಮಿನಿಭಾರತದಂತೆ ಅದಕ್ಕಿಂತಲೂ ಮಿಗಿಲಾದ ಶ್ರೇಷ್ಠಕೃತಿಯೆಂದು ಇದು ಜನತೆಯಿಂದ ಪರಿಗಣಿಸಲ್ಪಟ್ಟಿದೆ. ಬಹು ಮುಖ್ಯವಾದ ಕಾಲದಲ್ಲಿ ಚಂಪೂಶೈಲಿಯಲ್ಲಿ ಇದು ರಚಿಸಲ್ಪಟ್ಟಿದೆ.

—E. P. Rice : History of Karnataka Literature 1921. p. 48.

(೨) ಈತನು ಆಧುನಿಕ ಕವಿಯಾದರೂ ಇವನ ಶೈಲಿ ನಿರರ್ಗಳವಾಗಿಯೂ ಮನೋಹರವಾಗಿಯೂ ಇರುವುದಲ್ಲದೆ ಇವನ ವರ್ಣನೆಗಳು ಚಮತ್ಕಾರವಾಗಿವೆ. ಮುಖ್ಯವಾಗಿ ಇವನ ಕಂದಪದ್ಯಗಳು ರಮಣೀಯವಾಗಿವೆ.

—ಆರ್. ನರಸಿಂಹಾಚಾರ್ : ಕ. ಕ. ಚರಿತೆ. ಭಾ. ೨. ಪು. ೪೪೩.

(೩) ರಾಜಶೇಖರವಿಳಾಸದೊಳಗಿನ ಕೆಲವು ಪದ್ಯಗಳು ಪ್ರಾಚೀನಗಳಾದ ಉದ್ದಾಮ ಗ್ರಂಥಗಳ ಪದ್ಯಗಳಿಗೆ ಸಮಾನವಾದ ಶೈಲಿಗಳುಳ್ಳವಾಗಿಯೂ, ಕೆಲವು ಪದ್ಯಗಳು ಪೂರ್ವಗ್ರಂಥಗಳ ಶೈಲಿಗಿಂತ ರಮಣೀಯವಾದ ಶೈಲಿಯುಳ್ಳವುಗಳಾಗಿಯೂ ಲಲಿತವಾದ ಪದಬಂಧವುಳ್ಳವುಗಳಾಗಿಯೂ ಇವೆ. ಈ ಗ್ರಂಥದಲ್ಲಿ ಸಂಸ್ಕೃತ ಶಬ್ದಗಳು ಕನ್ನಡ ಶಬ್ದಗಳು ಪ್ರಾಯಃ ಸಮ ಸಮವಾಗಿಯೇ ಪ್ರಯೋಗಿಸಲ್ಪಟ್ಟಿವೆ. ಕವಿತಾ ಪಾಕದಲ್ಲಿ ಕದಳೀಪಾಕವೆಂದು ಹೇಳಬಹುದು. ಈ ಕಾಲದಲ್ಲಿ ಚಂಪೂ ಪ್ರಬಂಧವನ್ನಾಗಲಿ, ಇತರ ಗ್ರಂಥಗಳನ್ನಾಗಲಿ, ರಚಿಸಲಪೇಕ್ಷೆಯುಳ್ಳವರು ರಾ. ಶೇ. ವಿಳಾಸದ ಸರಣಿಯನ್ನು ಹಿಡಿದು ರಚಿಸಿದರೆ ಗ್ರಂಥವು ಶ್ಲಾಘನೀಯವಾಗುವುದು. ಮತ್ತು ಕರ್ನಾಟಕ ಭಾಷಾಭ್ಯಾಸಿಗಳು ಈ ಗ್ರಂಥವನ್ನು ಅರ್ಥವತ್ತಾಗಿ ಓದಿದರೆ ವ್ಯುತ್ಪತ್ತಿಯುಂಟಾಗುವುದು.

—ವಿದ್ವಾನ್ ಕರಿಬಸವಶಾಸ್ತ್ರಿಗಳು : ರಾ. ಶೇ. ವಿ. ಉಪೋದ್ಘಾತ. ಪು. ೪.

(೪) ಇಪ್ಪತ್ತೈದು ಮೂವತ್ತು ವರ್ಷಗಳ ಹಿಂದೆ ಷಡಕ್ಷರದೇವನ ಕೃತಿಗಳು ಜನಾನುರಾಗ್ಗದಲ್ಲಿ ಮೇಲ್ಮಟ್ಟದಲ್ಲಿದ್ದುವು. ಈತನ ರಾಜಶೇಖರ ವಿಳಾಸವು ಲೋಕಪ್ರಿಯ

ತೆಯಲ್ಲಿ ಅಗ್ರಸ್ಥಾನ ಪಡೆದಿತ್ತು. ಆ ಹಿರಿಮೆ ಈಗ ಇಲ್ಲದಾಗಿದೆ. ಈ ಪರಿಸ್ಥಿತಿಯುಂಟಾಗಲು ಓದುಗರ ಅಭಿರುಚಿಯಲ್ಲಿ ಕಾಲಕಾಲಕ್ಕೆ ವ್ಯಕ್ತವಾಗುವ ಮಾರ್ಪಾಟೊಂದೇ ಕಾರಣವೆಂದು ಹೇಳಲಾಗುವುದಿಲ್ಲ. ಆದರೆ ಪರಿಸ್ಥಿತಿ ಈಗ ಮತ್ತೆ ಮಾರ್ಪಾಟಾಗಲಾರಂಭಿಸಿರುವುದು. ಸಾವಿರಾರು ವರ್ಷಗಳಿಂದ ಬೆಳೆಯುತ್ತ ಬಂದಿರುವ ನಮ್ಮ ನಾಡಿನ ಸಾಹಿತ್ಯದಲ್ಲಿಯ ಉತ್ತಮೋತ್ತಮ ಕೃತಿಗಳನ್ನು ಕುರಿತು ಅಭಿಮಾನವನ್ನು ನಾವು ಎಲ್ಲಿಯವರೆಗೆ ತಾಳು ವೆವೋ, ಎಲ್ಲಿಯವರೆಗೆ ನಾವು ಶ್ರೇಷ್ಠ ವರ್ಗದ ಉದ್ಯಮರಾದ ಕನ್ನಡ ಕವಿಗಳನ್ನು ಹೆಸರಿಸುವೆವೋ ಅಲ್ಲಿಯವರೆಗೆ ಷಡಕ್ಷರದೇವನನ್ನು ಮರೆಯುವುದು ಸಾಧುವಲ್ಲ ; ಸಾಧ್ಯವಿಲ್ಲ.

—S. S. ಬಸವನಾಳ : ಶಬರಶಂಕರ ವಿಲಾಸ. ಪೀಠಿಕೆ. ಪು. ೩೩-೩೪.

(೫) ಷಡಕ್ಷರದೇವ-ಈತನು ೧೩ನೆಯ ಶತಮಾನದಿಂದ ೧೯ನೆಯ ಶತಮಾನದ ವರೆಗಿನ ಚಂಪೂಕವಿಗಳಲ್ಲಿ ಮಹಾಕವಿಯೆನಿಸಿಕೊಳ್ಳುವ ಯೋಗ್ಯತೆಯನ್ನು ಪಡೆದ ಏಕ ಮಾತ್ರ ಕವಿ. ಈತನು ಶ್ರೇಷಕ್ಠವಿ ಮಾತ್ರವಲ್ಲ, ಧಾರ್ಮಿಕ ಗುರುವೂ ಆಗಿದ್ದನು. ತನ್ನ ಅಸಾಮಾನ್ಯ ಪ್ರತಿಭೆ ಮತ್ತು ಪಾಂಡಿತ್ಯಗಳಿಂದ ಮತ್ತೊಮ್ಮೆ ಚಂಪೂಕಾವ್ಯಕ್ಕೆ ಒಂದು ಅಪೂರ್ವ ಕಳೆಕಟ್ಟಿ ತನ್ನ ಕೃತಿರತ್ನಗಳಾದ ರಾಜಶೇಖರ ವಿಳಾಸ, ಶಬರಶಂಕರ ವಿಳಾಸ, ವೃಷಭೇಂದ್ರವಿಜಯದ ಮೂಲಕ ಧರ್ಮವನ್ನೂ ಕಾವ್ಯಧರ್ಮವನ್ನೂ ಬೆಳಗಿದನು.

—ಪ್ರೊ. ಮರಿಯಪ್ಪ ಭಟ್ಟ : ಸಂಕ್ಷಿಪ್ತ ಕನ್ನಡ ಸಾ. ಚ. ಪು. ೧೩೩.

(೬) ಹರಿಹರದೇವನ ಮಾರ್ಗವೇ ತನ್ನ ಮಾರ್ಗವೆಂದು ಷಡಕ್ಷರದೇವನು ಹೇಳಿ ಕೊಂಡಿದ್ದರೂ, ಅವನ ರೀತಿಯೇ ಬೇರೆ ; ಇವನ ರೀತಿಯೇ ಬೇರೆ. ಅವನದು ಭಕ್ತವಾಣಿ ; ಇವನದು ಪಂಡಿತವಾಣಿ. ಹರಿಹರನ ಕಾವ್ಯಗಳಲ್ಲಿ ನಿಸರ್ಗ ಶಿವಭಕ್ತಿ ರಸದ ಲಹರಿಯು ನಿರರ್ಗಳವಾದರೂ ಶಾಂತವಾಗಿ ಹರಿಯುತ್ತದೆ. ಅದೇ ಷಡಕ್ಷರದೇವನ ಕಾವ್ಯದಲ್ಲಿ ಪ್ರೌಢಪಾಂಡಿತ್ಯಪ್ರವಾಹವು ಪರ್ವತಧಾರೆಯಾಗಿ ಪ್ರವಹಿಸುತ್ತದೆ. ಹರಿಹರನು ಪಾಂಡಿತ್ಯವನ್ನು ಅಡಗಿಸಿಕೊಂಡು ಕವಿತ್ವ ತೋರಿಸಿದ್ದಾನೆ. ಷಡಕ್ಷರದೇವನು ತನ್ನ ಕಾವ್ಯಮೂರ್ತಿಯ ಸುತ್ತಲೂ ಅಭೇದ್ಯವಾದ ವಜ್ರದ ಕೋಟೆಯನ್ನೇ ಕಟ್ಟಿದ್ದಾನೆ. ಆ ಮಂಗಲಮೂರ್ತಿಯ ದರ್ಶನ ಪಾಮರರಿಗೆ ಸುಲಭಸಾಧ್ಯವಲ್ಲ. ರಾಜಶೇಖರ ವಿಲಾಸವು ಕವಿಯ ಇತರ ಕಾವ್ಯಗಳಂತೆ ನವರಸಭರಿತವಾದ ಕಾವ್ಯ. ಅಧಿಕವಾಗಿ ಲೋಕಪ್ರಿಯವಾಗಿರುವ ಕಾವ್ಯ. ಇಲ್ಲಿ ಶೃಂಗಾರರಸತರಂಗಿಣಿಯು ವಿವಿಧ ಭಂಗಿ ಗಳಿಂದ ಹರಿದಿದೆ.

—ಕೋಡಿ ಕೊಪ್ಪಮಠದ ಬಸವರಾಜಶಾಸ್ತ್ರೀ: ರಾ. ಶೇ. ವಿ. ತಿರುಳು ಪ್ರಸ್ತಾ. ಪು. ೩.

(೭) ಈ ಯುಗದ ವೀರಶೈವ ಚಂಪೂಕವಿಗಳಲ್ಲಿ ಷಡಕ್ಷರದೇವನೇ ಶ್ರೇಷ್ಠನು. ಕನ್ನಡ ಸಾಹಿತ್ಯಕ್ಕೆ ಬಂದ ಹೊಸ ಸುಗ್ಗಿಯಲ್ಲಿ ಷಡಕ್ಷರಿ ತನ್ನ ರಸಗಾನವನ್ನು ಬೆರೆಸಿದನು,

ಚಂಪೂಶೈಲಿಗೆ ಮತ್ತೆ ಕಳೆಬಂದಿತು. 'ಗಿಡಕ್ಕೆ ಎಲೆಗಳು, ಹೂಗಳು ಬರುವಂತೆ ಕವಿಗೆ ಕವಿತೆ ಬರಬೇಕು.' ಎಂಬ ಕೀಟ್ಸ್‌ಕವಿಯ ಉಕ್ತಿ ಇವನಿಗೆ ಬಹಳ ಚೆನ್ನಾಗಿ ಅನ್ವಯಿಸುತ್ತದೆ. ಷಡಕ್ಷರಿಯ ಕೃತಿಗಳಲ್ಲಿ ಆಶ್ಚರ್ಯವಾದ ಪ್ರತಿಭೆ, ಆಳವಾದ ಹೃದಯವನ್ನು ಸ್ಪರ್ಶಿಸಿದ ವೈಶಿಷ್ಟ್ಯದ ಇಲ್ಲವೆ ಚಮತ್ಕೃತಿಯ ರೂಪ ತಾಳಿರುವುದು ಹೆಚ್ಚು....ಷಡಕ್ಷರಿ ನಮ್ಮ ನಾಡಿನ ಅಸಾಮಾನ್ಯ ಪ್ರತಿಭಾಶಾಲಿಗಳಲ್ಲಿ ಒಬ್ಬನೆಂಬುದು ನಿಶ್ಚಿತ.

—ಪ್ರೊ. ರಂ. ಶ್ರೀ. ಮುಗಳಿ: ಕನ್ನಡ ಸಾ. ಚ. ಪ್ರ. ಮು. ಪು. ೩೪೪.

(೮) ಷಡಕ್ಷರದೇವ ಪ್ರಥಮತಃ ಪಂಡಿತ; ಅನಂತರ ಕವಿ. ಅವನ ದರ್ಶನ ಪ್ರತಿಭೆಗಳು ಪಾಂಡಿತ್ಯದ ಕಾವನ್ನು ಧರಿಸಿ ಹೊರಬರುತ್ತವೆ. ಉತ್ತಮ ಕಾವ್ಯದ ಲಕ್ಷಣವನ್ನು ಅವನು ಚೆನ್ನಾಗಿ ಬಲ್ಲ. ಕಾವ್ಯದ ಆತ್ಮ 'ರಸ' ಎಂಬುದನ್ನು ಅವನು ಮನಗಂಡಿದ್ದನು. ಅಲಂಕಾರಗಳಂತೂ ಪುಂಖಾನುಪುಂಖವಾಗಿ ಅನೈಚ್ಛಿಕವಾಗಿ ಅವನ ಮೂಡಿಗೆಯಿಂದ ಹೊರಹೊಮ್ಮುತ್ತವೆ. ಕಲ್ಪನಾಚಮತ್ಕಾರದಲ್ಲಿ ಅವನು ಯಾರಿಗಿಂತಲೂ ಕಡಿಮೆಯಿಲ್ಲ. ಅವನ ಶಬ್ದಭಾಂಡಾರ ಅತ್ಯಂತ ಶ್ರೀಮಂತವಾದುದು ; ಆದರೆ ಸಂಸ್ಕೃತ ಭೂಯಿಷ್ಠ. ಸಂಸ್ಕೃತ ಕನ್ನಡಗಳೆರಡನ್ನು ಬೆರಸಿ ಚಿತ್ತಾಕರ್ಷಕವಾದ ಮಧುರ ಶೈಲಿಯಲ್ಲಿ, ಮನಸ್ಸುಮಾಡಿದ ಅಚ್ಚಗನ್ನಡದೇಶೀಯ ಶೈಲಿಯಲ್ಲಿ ಕಾವ್ಯರಚಿಸಬಲ್ಲನು.... ರಾಜಶೇಖರ ವಿಳಾಸ ಜನಪ್ರಿಯ ಕಾವ್ಯವಾಗಿ, ಕವಿ ಕನ್ನಡಿಗರ ಹೃನ್ಮಂದಿರದಲ್ಲಿ ನೆಲಸುವಂತಾಯಿತು ; ೧೭ನೆಯ ಶತಮಾನದ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆಯುವಂತಾಯಿತು ; ಸಮಕಾಲೀನ ಪಂಡಿತರ ಮಾತ್ರವಲ್ಲ ; ಸರ್ವಕಾಲದ ವಿದ್ವಾಂಸರ ಆದರಕ್ಕೆ ಪಾತ್ರನಾಗುವಂತಾಯಿತು.

—ಪ್ರೊ. ದೇ. ಜವರೇಗೌಡ : ಷಡಕ್ಷರದೇವ ಪು. ೫೧, ೫೩.

(೯) ಷಡಕ್ಷರದೇವನು ಬಹುಶ್ರುತ ಕವಿ; ಕನ್ನಡ ಸಂಸ್ಕೃತ ಈ ಉಭಯಭಾಷೆಗಳ ಮೇಲೆ ಅವನಿಗೆ ಅಪಾರ ಪ್ರಭುತ್ವವಿದೆ. ಕನ್ನಡ, ಸಂಸ್ಕೃತ, ಪ್ರಾಕೃತ ಮುಂತಾದ ಭಾಷೆಗಳ ವಿಪುಲ ಶಬ್ದಸಂಪತ್ತಿಯನ್ನು ಪಡೆದ ಕೆಲವೇ ಜನ ಕವಿಗಳಲ್ಲಿ ಷಡಕ್ಷರದೇವನೂ ಒಬ್ಬ; ಅಗ್ರಗಣ್ಯನೆಂದರೂ ಸಲ್ಲುವುದು. ಆತನು ವಿವಿಧ ರಸಭಾವಗಳಿಗನುಗುಣವಾಗುವಂತೆ ತನ್ನ ಶೈಲಿಯನ್ನು ಅಳವಡಿಸಿಕೊಂಡಿದ್ದಾನೆ. ಲಾಲಿತ್ಯ, ಮಾಧುರ್ಯ, ಮಾರ್ದವ, ಅರ್ಥವ್ಯಕ್ತಿತ್ವ ಈ ಗುಣಗಳಿಗೆ ಈತನ ಶೈಲಿ ಆದರ್ಶವಾಗಿದೆ. ವಿಪುಲ ಶಬ್ದಸಂಪತ್ತಿಗೂ ಭಾವಸಂಪತ್ತಿಗೂ ಇರಬೇಕಾದ ಅನ್ಯೋನ್ಯ ಮೈತ್ರಿ ಈತನ ಶೈಲಿಯಲ್ಲಿದೆ. ಆತನ ಕಂದಗಳು ಕನ್ನಡ ಸಾಹಿತ್ಯದಲ್ಲಿಯೇ ಹೆಸರಾಗಿವೆ. ಉಪಮೆಗೆ ಕಾಳಿದಾಸ ; ಉತ್ಪ್ರೇಕ್ಷೆಗೆ ಷಡಕ್ಷರದೇವ. ಅಷ್ಟರಮಟ್ಟಿಗೆ ಪರಿಪೂರ್ಣವಾಗಿವೆ ಷ. ದೇ. ನ ಉತ್ಪ್ರೇಕ್ಷೆಗಳು. ಉತ್ಪ್ರೇಕ್ಷೆಗಳಷ್ಟೇ ಏಕೆ ಉಳಿದ ಅಲಂಕಾರಗಳೂ ಮನೋಹರವಾಗಿವೆ. ಅಲಂಕಾರವೇ ಅವನ ಶೈಲಿಯ ಹೆಗ್ಗುರುತೆಂದರೂ ಸಲ್ಲುವುದು. ಅಲಂಕಾರಗಳು ಕಾವ್ಯದಲ್ಲಿ ಬರುವುದು

ಕೃತಕನಲ್ಲ, ಕೃತಕವಲ್ಲ ಸಹಜ. ಏಕೆಂದರೆ ಕಾವ್ಯಕ್ಕೆ ಮಾತೃಕೆಯಾದ ಅಲಂಕಾರ ಜೀವನದಲ್ಲಿ ಸಹಜವಾಗಿ ಉದ್ಭವಿಸುತ್ತದೆ. ನಮ್ಮ ನಿತ್ಯಜೀವನದ ಮಾತುಗಳಲ್ಲಿ ಇದನ್ನು ಸ್ಪಷ್ಟವಾಗಿ ಕಾಣಬಹುದು. ಇದರ ಮರ್ಮವನ್ನರಿತ ಷಡಕ್ಷರದೇವ ತನ್ನ ಕಲ್ಪನೆಯ ರೆಕ್ಕೆಯನ್ನು ಬಹುದೂರದವರೆಗೆ ಪಸರಿಸಿ, ಸುಂದರವಾದ ಅಲಂಕಾರವನ್ನು ಹೆಣೆದಿರುವನು. ಒಳಗೆ ದರ್ಶನ ಸೌಂದರ್ಯ ಹೊರಗೆ ಶೈಲಿಯ ಸೌಂದರ್ಯ ಹೀಗೆ ಎರಡೂ ಒಂದುಗೂಡಿ ನಡೆಯುವುದರಿಂದ ಕವಿಯ ಅಗ್ಗಳಿಕೆ ಅಧಿಕವಾಗಿದೆ. ಕನ್ನಡ ಚಂಪೂ ಸಂಪ್ರದಾಯಕ್ಕೆ ಪಂಪ ಆದಿ ; ಷಡಕ್ಷರದೇವ ಕೊನೆ.

—ಡಾ. ಆರ್. ಸಿ. ಹಿರೇಮಠ, ಎಸ್.ಎಸ್. ಸುಂಕಾಪುರ: ರಾ. ಶೇ. ವಿಳಾಸ, ಪೀಠಿಕೆ ಪು. ೪೭–೪೮. (ಪ್ರ. ಮು)

(೧೦) ರಾಜಶೇಖರ ವಿಳಾಸವು ಪ್ರಾಮುಖ್ಯವಾಗಿ ಒಂದು ಶೃಂಗಾರ ಕಾವ್ಯ. ಆದುದರಿಂದ ವರ್ಣನೆಗಳಿಗೆ ಇಲ್ಲಿ ಸ್ಥಾನ ಹೆಚ್ಚು. ಸಾಮಾನ್ಯವಾಗಿ ಕವಿಯು ವರ್ಣನೆಗಳನ್ನು ಸುಂದರವಾಗಿ ನಿರೂಪಿಸಿ ಕಾವ್ಯಮಹತಿಯನ್ನು ಹೆಚ್ಚಿಸಿದ್ದಾನೆ. ಉತ್ತಮ ಕಾವ್ಯಲಕ್ಷಣಗಳನ್ನು ಬಲ್ಲವನಾಗಿದ್ದಾನೆ. ಕಲ್ಪನಾಚಮತ್ಕಾರಗಳನ್ನು ರೂಪಿಸುವಲ್ಲಿ ಅವನದು ಮೇಲುಗೈ. ಕಾವ್ಯದ ಆತ್ಮ ರಸ ಎಂಬುದನ್ನು ಮನಗಂಡಿದ್ದಾನೆ. ಆತನಲ್ಲಿ ವಿಪುಲ ಶಬ್ದಸಂಪತ್ತಿ ಇದೆ. ಅವನ ವರ್ಣನೆಗಳು ಕೆಲವುಸಲ ಭಾರವಾಗಿ ತೋರುತ್ತಿದ್ದರೂ ಅವು ಪಾತ್ರಪೋಷಣೆಗೆ ಹಾಗೂ ಸನ್ನಿವೇಶ ರಚನೆಗೆ ಪೋಷಕವಾಗಿವೆ. ರಸಮಯ ಸನ್ನಿವೇಶಗಳನ್ನು ಅವನು ಸರಳ ಹಾಗು ಸುಂದರವಾಗಿ ಬರೆಯಬಲ್ಲನು. ೧೭ನೆಯ ಶತಮಾನದ ಈ ಕಾವ್ಯವು ಸಾಹಿತ್ಯದಲ್ಲಿ ಎಂದೂ ಆರದ ನಂದಾದೀಪವಾಗಿದೆ ; ನಮ್ಮ ಸಂಸ್ಕೃತಿಗೆ ಹಿಡಿದ ಕನ್ನಡಿಯಾಗಿದೆ.

–ಪ್ರೊ. ಎಂ. ಎನ್. ವಾಲಿ. ಷ. ದೇ. ಕವಿಯ ರಾ. ಶೇ. ವಿಳಾಸ ಪುಟ ೫೩, ೮೩.

(೧೧) ಷಡಕ್ಷರಿ ೧೭ನೆಯ ಶತಮಾನದ ಕನ್ನಡ ಸಾಹಿತ್ಯದ ಮೇಲೆಲ್ಲಾ ತನ್ನ ಪ್ರಭಾವವನ್ನು ಬೀರಿ ದೊಡ್ಡ ಸ್ಥಾನವನ್ನು ಗಳಿಸಿಕೊಂಡಿರುವ ಕವಿಯೆಂದು ಧಾರಾಳವಾಗಿ ಹೇಳಬಹುದು. ಷಡಕ್ಷರಿಯ ಕಾವ್ಯದ ಹೊರಮೈ ಚಂಪೂ ಆಕಾರವನ್ನು ತಳೆದರೂ ಅದರ ಒಳಗಿನ ಆತ್ಮ ಹರಿಹರ ರಾಘವಾಂಕ ಚಾಮರಸಾದಿಗಳನ್ನು ಬೆಳೆಸಿಕೊಂಡು ಬಂದ ಅವಿನಾಶಿಯಾದ ತತ್ತ್ವದರ್ಶನದಿಂದ ಪ್ರೇರಿತವಾದದ್ದು. ಈ ಮಾತು ರಾಜಶೇಖರ ವಿಳಾಸಕ್ಕೆ ಕೆಲವಂಶಗಳಲ್ಲಿ ಹೊಂದಿಕೆಯಾದರೂ ಎಲ್ಲ ವಿಷಯಗಳಲ್ಲಲ್ಲ.

—ಡಾ. ತಿಪ್ಪೇರುದ್ರಸ್ವಾಮಿ : ಶರಣಚರಿತ ಮಾನಸ. ಪೀಠಿಕೆ.

ಈ ಮೇಲೆ ಅನೇಕ ಮಹನೀಯರ ಅಭಿಪ್ರಾಯದೊಂದಿಗೆ ಈ ಪ್ರಸ್ತಾವನೆಯನ್ನು ಮುಗಿಸುವ ಮುನ್ನ 'ರಾಜಶೇಖರವಿಳಾಸ' ಕೃತಿಯನ್ನು ಗದ್ಯಾನುವಾದಮಾಡಲು ಕನ್ನಡ

ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀಮಾನ್ ಜಿ. ನಾರಾಯಣ ಅವರು ಮೊದಲು ನನಗೆ ಕೊಟ್ಟಾಗ ನಡುಕಬಂದಿತು. ಷಡಕ್ಷರದೇವನ ಈ ಮಹಾಕಾವ್ಯವನ್ನು ಜೀರ್ಣಿಸಿ ಕೊಂಡು ಗದ್ಯಾನುವಾದ ಮಾಡುವ ಕಾರ್ಯವೇನು ಸುಲಭಸಾಧ್ಯವಾದುದಲ್ಲ. ಧೈರ್ಯ ದಿಂದ ಕಾರ್ಯವನ್ನು ಒಪ್ಪಿ ಒಂದುವರ್ಷ ಪರ್ಯಂತ ಸತತ ಪ್ರಯತ್ನ ಮಾಡಿ ಮುಗಿಸಿದು ದಾಯಿತು. ಆದರೆ ಈ ನನ್ನ ಗದ್ಯಾನುವಾದ ನಿರ್ದುಷ್ಟವಾದುದೆಂದು ಹೇಳಲಾರೆ. ದೋಷಗಳು ತಲೆಹಾಕಿರುವ ಸಂಭವವಿದೆ. ಈ ಗದ್ಯಾನುವಾದ ಕಾರ್ಯದಲ್ಲಿ ಬಂದ ಅನೇಕ ಚರ್ಚಾಸ್ಪದ ವಿಷಯಗಳು ಡಿಕ್ಕುಗೆಡಿಸಿದಾಗ ಗದ್ಯಾನುವಾದ ಮಂಡಲಿಯ ಅಧ್ಯಕ್ಷ ರಾಗಿರುವ ವಿದ್ವಾನ್ ರಂಗನಾಥಶರ್ಮಾ, ಸಂಸ್ಕೃತ ಮಹಾಮಹೋಪಾಧ್ಯಾಯರು, ಚಾಮರಾಜೇಂದ್ರ ಸಂಸ್ಕೃತಕಾಲೇಜು, ಬೆಂಗಳೂರು, ಅವರೊಡನೆ ಸಮಾಲೋಚನೆ ಮಾಡಿ ಸಂಶಯ ನಿವಾರಣೆ ಮಾಡಿಕೊಂಡಿದ್ದೇನೆ. ಅವರ ಸಹಕಾರಕ್ಕೆ ಕೃತಜ್ಞತೆಗಳು. ಕನ್ನಡದ ಉದ್ದಾಮ ಸಾಹಿತ್ಯ ಗ್ರಂಥಗಳ ಗದ್ಯಾನುವಾದ ಕಾರ್ಯವನ್ನು ಕೈಗೆತ್ತಿಕೊಂಡು ವಿದ್ವಾಂಸರಿಗೆ ಪ್ರೋತ್ಸಾಹ ಕೊಡುವುದರ ಜೊತೆಗೆ ಆ ಕಾವ್ಯಗಳ ಅರ್ಥ ಸಾಮಾನ್ಯ ಜನಕ್ಕೂ ಆಗಬೇಕೆಂಬ ಸದುದ್ದೇಶಭರಿತ ಮನಸ್ಸಿನಿಂದ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರ ಸ್ತುತ್ಯಕಾರ್ಯಕ್ಕೆ ಧನ್ಯವಾದಗಳನ್ನು ಅರ್ಪಿಸದೆ ಈ ಲೆಕ್ಕಣಿಕೆಗೆ ವಿರಾಮ ಕೊಡಲಾರೆ. ಅವರು ಅತ್ಯಂತ ಶ್ರೇಷ್ಠ ಸಂಘಟನಾ ಕಾರ್ಯ ಚತುರರು. ಅವರ ಸ್ತುತ್ಯವಾದ ಕಾರ್ಯವು ಯಶಸ್ವಿಗೊಳ್ಳಲೆಂದು ಹಾರೈಸುವೆನು.

ಪಂಡಿತ ಚನ್ನಪ್ಪ ಎರೇಸೀಮೆ.
೫೭, ವಿಜಯನಗರ, ಬೆಂಗಳೂರು-40

# ರಾಜಶೇಖರ ವಿಳಾಸಂ

## ಪ್ರಥಮಾಶ್ವಾಸಂ

### (ಗದ್ಯಾನುವಾದ ಸಹಿತ)

ಪ್ರ॥ ಶ್ರೀಶೈಲಾದಿಪ್ರಸಿದ್ಧಂ ಸುರುಚಿರ ವಿಜಯಸ್ತುತ್ಯನುದ್ರಿಕ್ತಸತ್ವಾ
ವೇಶಂ ಕಲ್ಯಾಣಭೂಭೃತ್ಸದನ ಧನದಮಿತ್ರಂ ಧರಾಧಾರಧರ್ಮಂ
ವೈಶದ್ಯದ್ಯೋತಿ ಚಂದ್ರೋಪಲ ಸಿತಭಸಿತಾನಂತಕಾಂತೋತ್ತಮಾಂಗಂ
ಶ್ರೀಶೈವಶ್ರೇಯಮಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ ೧

೧. ಶ್ರೀಶೈಲ ಮೊದಲಾದುವು (ಶಿವಕ್ಷೇತ್ರ) ಗಳಲ್ಲಿ (ನೆಲಸಿ) ಪ್ರಸಿದ್ಧನಾಗಿರುವವನೂ, ಅರ್ಜುನನಿಂದ ಮನೋಹರವಾಗಿ ಸ್ತುತಿಸಲ್ಪಟ್ಟವನೂ, ಸತ್ವಾಧಿಕ್ಯದಿಂದ ಕೂಡಿ ಮಂಗಳಕರ ಮೇರುಪರ್ವತದಲ್ಲಿ ವಾಸಿಸುತ್ತ ಕುಬೇರಮಿತ್ರನಾಗಿರುವವನೂ, ಧರೆಗೆ ಆಧಾರಭೂತವಾದ ಸದ್ಧರ್ಮಸ್ವರೂಪನೂ, ವಿಶದ ಪ್ರಕಾಶದಿಂದ ಕೂಡಿ, ಚಂದ್ರಕಾಂತಶಿಲೆಯಂತೆ ಭಸ್ಮಲೇಪದ ಅನಂತಕಾಂತಿಯಿಂದ ಶೋಭಿಸುವ ಉತ್ತಮಾಂಗನಾದ ನಂದೀಶ್ವರ ಸಮೇತನಾದ ಪರಶಿವನು ಶಿವಸಂಬಂಧವಾದ ಶ್ರೇಯಸ್ಸನ್ನು ಸತತವೂ ನಮಗೆ ಉಂಟುಮಾಡಲಿ.

(ಬಸವೇಶ್ವರ ಪರವಾದ_ಅರ್ಥ) ಮಂಗಳಕರನಾದ ಶಿಲಾದಪುತ್ರನೆಂದು ಪ್ರಸಿದ್ಧನಾದವನೂ, ಸದಾ ಜಯಶೀಲನೂ, ಸ್ತೋತ್ರಾರ್ಹನೂ, ಸತ್ವಗುಣಾಧಿಕ್ಯನೂ ಕಲ್ಯಾಣದ ಅರಸನಾದ ಬಿಜ್ಜಳನ ಮನೆಯ ಗುಪ್ತಧನವನ್ನು ಅವನಿಗೆ ದೊರಕಿಸಿ ಕೊಟ್ಟು ಅವನ ಮೈತ್ರಿಯನ್ನು ಪಡೆದವನೂ ಧರೆಗೆ ಆಧಾರಭೂತ ಧರ್ಮ ಮೂರ್ತಿಯಾದ ವೃಷಭಸ್ವರೂಪನೂ ಚಂದ್ರಕಾಂತಶಿಲೆಯಂತೆ ಶುಭ್ರವಾದ ಭಸ್ಮಲೇಪನದಿಂದ ಸ್ಪಷ್ಟವಾಗಿ ಶೋಭಿಸುವ ಲಲಾಟವುಳ್ಳವನೂ, ಪ್ರಮಥ ಗಣಪ್ರಮುಖನೂ ಆದ ನಂದೀಶ್ವರಾವತಾರಿ ಬಸವೇಶ್ವರನು ಶಿವಸಂಬಂಧವಾದ ಶ್ರೇಯಸ್ಸನ್ನು ನಮಗೆ ಸದಾ ಉಂಟುಮಾಡಲಿ.* ೨. ಯಾರ ನೇತ್ರಗಳಾದ ಸೂರ್ಯ

---

*ಅನುಬಂಧ II ನೋಡಿ. (ಪೂರ್ವಕಥೆಗಳು)

ಮ॥ ಸ್ರ॥ ನಿಜನೇತ್ರಂ ಲೋಕನೇತ್ರಂ ನಿಜಭರಣವಿಳಾಚಕ್ರಭಾರಾವಹಂ ಮೇಣ್
ನಿಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ
ನಿಜರೋಪಂ ವಿಶ್ವರೂಪಂ ನಿಜರಮಣಿ ಜಗನ್ಮಂಡಳೀಮಾತೆ ನಿಚ್ಚಂ
ನಿಜಮೋದಂ ಸುಪ್ರಮೋದಂ ಕುಡುಗೆಮಗತುಳಶ್ರೇಯಮಂ ಶೈಲಜೇಶಂ* ೨

ಮ॥ ಪರಮುಕ್ತಿಪ್ರಮದಾಮುಖೈಕಮುಕುರಂ ಮೋಹಾಂಧಕಾರೌಘ ಭಾ
ಸ್ಕರಬಿಂಬಂ ಮುನಿಮುಖ್ಯಮಾನಸಗೃಹಾಂತರ್ಜ್ಯೋತಿ ಚಿದ್ವ್ಯೋಮವಿ
ಸ್ಫುರದಬ್ಜಾಹಿತಮಂಡಳಂ ಶ್ರುತಿಸತೀಸೀಮಂತರತ್ನಂ ಮಹೇ
ಶ್ವರಪಾದಾಬ್ಜನಖಂ ಸುಖೋದಯಕರಂ ತಾನಿರ್ಕೆ ಮಚ್ಚಿತ್ತದೊಳ್ ೩

ಕ್ಷಿತಿಯಂ ಪಾಲಿಪಗಣ್ಯಪುಣ್ಯಮತಿಯಂ ಪ್ರಖ್ಯಾತ ಸೌಂದರ್ಯಸಂ
ಗತೆಯಂ ಶೈವಮತೈಕಕಲ್ಪಲತೆಯಂ ಶ್ರೀವಾಗ್ವಧೂಸಂತತ
ಸ್ತುತೆಯಂ ಚಂದ್ರಧರಾರ್ಧದೇಹಯುತೆಯಂ ಬಾಲಾಬ್ಜಿನೀಕಾಂತಸ
ದ್ಯುತಿಯಂ ಪಾರ್ವತಿಯಂ ಕೃಪಾಪತಿಯನಾಗಳ್ ಬಣ್ಣಿಪೆಂ ಭಕ್ತಿಯಿಂ ೪

ಚಂದ್ರಾಗ್ನಿಗಳು ಲೋಕದ ನೇತ್ರಗಳೋ, ಯಾರ ಆಭರಣವು ಸಮಸ್ತ ಭೂಭಾರವನ್ನು ಹೊತ್ತುನಿಂತ ಆದಿಶೇಷನೋ, ಯಾರ ವಾಹನವಾದ ವೃಷಭನು ಧರ್ಮದ (ತವರು) ಮನೆಯೋ, ಯಾರ ಧನುಸ್ಸು ರಾಕ್ಷಸವೈರಿಗಳಾದ ದೇವತೆಗಳ ವಾಸಸ್ಥಾನವಾದ ಮೇರುಪರ್ವತವೋ, ಯಾರ ಬಾಣವು ವಿಶ್ವರೂಪನಾದ ವಿಷ್ಣುವೋ, ಯಾರ ಧರ್ಮಪತ್ನಿಯು ಸಕಲ ಬ್ರಹ್ಮಾಂಡಗಳ ಜನನಿಯೋ, ಯಾರ ಮುದದಿಂದ ಕೂಡಿದ ತಾಂಡವನೃತ್ಯವು (ಸಕಲ ಜಗತ್ತಿಗೆ) ಆಮೋದದಾಯಕವೋ ಅಂಥ ಪಾರ್ವತೀಪತಿಯು ನಿತ್ಯವೂ ನಮಗೆ ಅತುಳ ಶ್ರೇಯಸ್ಸನ್ನು ಕೊಡಲಿ. ೩. ಸುಖೋದಯಕರಗಳಾದ ಪರಮೇಶ್ವರನ ಪಾದಕಮಲ ನಖಗಳು ಪರತರಮುಕ್ತಿಯೆಂಬ ಸ್ತ್ರೀಯ ಮುಖ ನೋಡಿಕೊಳ್ಳುವ ಕನ್ನಡಿಗಳು. ಅಜ್ಞಾನವೆಂಬ ಅಂಧಕಾರಕ್ಕೆ ಸೂರ್ಯಮಂಡಲ. ಮುನಿಮುಖ್ಯರ ಚಿತ್ತವೆಂಬ ಮನೆಯ ಅಂತರ್ಜ್ಯೋತಿ ಸ್ವರೂಪಗಳು. ಜ್ಞಾನಾಕಾಶದ ಪ್ರಕಾಶಮಾನವಾದ ಚಂದ್ರಮಂಡಳ. ವೇದಗಳೆಂಬ ಸ್ತ್ರೀಯರ ಸೀಮಂತಮಣಿ. (ಅಂಥ ಪಾದನಖಗಳು) ಸದಾ ನನ್ನ ಚಿತ್ತದಲ್ಲಿ ನೆಲಸಲಿ. ೪. (ಸಮಸ್ತ) ಭೂಮಂಡಲವನ್ನು ರಕ್ಷಿಸುವ ಅಗಣಿತ ಪುಣ್ಯಮತಿಯುಳ್ಳವಳೂ, ಪ್ರಖ್ಯಾತವಾದ ಸೌಂದರ್ಯದಿಂದ ಕೂಡಿದವಳೂ, ಶೈವ ಧರ್ಮದ ಕಲ್ಪಲತೆಯೋಪಾದಿಯಲ್ಲಿರುವವಳೂ, ಲಕ್ಷ್ಮೀಸರಸ್ವತಿಯರಿಂದ ಸ್ತೋತ್ರ ಮಾಡಿಸಿಕೊಳ್ಳುವವಳೂ, ಸೋಮಶೇಖರನ ಅರ್ಧಾಂಗಿಯೆಂದೆನಿಸಿರುವವಳೂ, ಬಾಲ ಸೂರ್ಯನ ಕಾಂತಿಗೆ ಸಮಾನಕಾಂತಿಯುಳ್ಳವಳೂ ಆದ ಪಾರ್ವತೀದೇವಿಯು (ನನಗೆ) ಕೃಪೆ

---

*ಮೇರುಪರ್ವತವು ಶಿವನ ಬಿಲ್ಲಾಗಿ, ವಿಷ್ಣುವು ಬಾಣವಾದ ಕಥೆಗೆ ಅನುಬಂಧ II ನೋ.

ಚಂ॥ ಮುರಹರಪದ್ಮಸದ್ಮಮುಖನಿರ್ಜರಕೋಟಿಯುಮೊಕ್ಕಲಿಕ್ಕಿ ಸ
ಚ್ಚರಿತ ಜಿತಾಕ್ಷಸಂಚಯಮುಮಂಜಿಸಿ ಭಂಜಿಸಿ ಮೂಜಗಂಗಳೊಳ್
ಸರಿದೊರೆಯಿಲ್ಲೆವಂಗೆನಿಪ ಶೌರ್ಯಮನಾಂತ ಮನೋಜನಂ ಕನ
ಲ್ದುರುಪಿದ ಶಂಭುವರ್ಧಾಂಗಮಂ ಸೆಳೆದಂಬಿಕೆಗೆಯ್ದೆ ವಂದಿಪೆಂ* ೫

ಯತಿತತಿ ಚಕ್ರವರ್ತಿ ರುಚಿರಾಮಳಮೂರ್ತಿ ವಿಶಾಲಕೀರ್ತಿ ಪೂ
ರಿತ ಹರಿದಂತನುಜ್ವಳಗುಣಾವಳಿಕಾಂತನತೀವಶಾಂತನಾ
ಶ್ರಿತಜನರಕ್ಷನನ್ವಿತ ಜಿತಾಕ್ಷನಮೋಘ ಕೃಪಾಕಟಾಕ್ಷನೂ
ರ್ಜಿತ ಚಿಕವೀರದೇಶಿಕಶಿಖಾಮಣಿ ಮಾಳ್ಕೆಮಗಿಷ್ಟಸಿದ್ಧಿಯಂ ೬

ರದನದ ಕಾಂತಿ ನಿರ್ಜರಮಹಾದಗ್ರ ಕಿರೀಟಮಣಿಪ್ರಕಾಶಮೊಂ
ದಿದ ನವಧಾತು ಬದ್ಧಫಣಿಯೆಂದಮರರ್ ಕಡೆಯಲ್ಕೆ ಕಟ್ಟಿದ
ಗ್ಗದ ಫಣಿ ಗಂಡಮಂಡಳಮದಾಂಬುಗೆ ಪಾರ್ದಳಿಪ್ರನ್ಮದಾಳಿ ನೀ
ರದಮೆನೆ ಮಂದರಂಬೊಲೆಸೆವಾನೆಮೊಗಂ ಮಿಗೆ ಮಾಳ್ಕವಿಘ್ನಮಂ ೭

ದೋರಲೆಂದು ಭಕ್ತಿಯಿಂದ ಸ್ತುತಿಸುತ್ತೇನೆ. ೫. ವಿಷ್ಣು ಬ್ರಹ್ಮರೇ ಮೊದಲಾದ ದೇವತಾ ಸಮೂಹವನ್ನು ಒಕ್ಕಲಿಕ್ಕಿ, ಸಚ್ಚರಿತ್ರರೂ ಇಂದ್ರಿಯಗಳನ್ನು ಜಯಿಸಿದವರೂ (ಆದ ಮುನಿಗಳ ಸಮೂಹವನ್ನು) ಅಂಜಿಸಿ, ಭಂಗಗೊಳಿಸಿ, ಮೂಲೋಕದಲ್ಲಿ ತನಗೆ ಸರಿಸಮಾನ ರಿಲ್ಲವೆನ್ನುವ ಶೌರ್ಯವನ್ನು ಹೊಂದಿದ ಮನ್ಮಥನನ್ನು ಕೋಪಗೊಂಡು ಸುಟ್ಟು (ಬೂದಿ ಯನ್ನಾಗಿ) ಮಾಡಿದ ಪರಮೇಶ್ವರನ ದೇಹಾರ್ಧವನ್ನೇ ಸೆಳೆದುಕೊಂಡ ಅಂಬಿಕೆಗೆ (ನಾನು) ನಮಸ್ಕರಿಸುತ್ತೇನೆ. ೬. ಚಿಕವೀರದೇಶಿಕ ಶಿಖಾಮಣಿಯು ನಮಗೆ ಇಷ್ಟ ಸಿದ್ಧಿಯನ್ನುಂಟುಮಾಡಲಿ. (ಅವನು) ಯತಿಸಮೂಹಕ್ಕೆಲ್ಲ ಚಕ್ರವರ್ತಿ. ಮನೋಹರ ವಾದ ಪರಿಶುದ್ಧ ಶರೀರಿ. ವಿಶಾಲ ಕೀರ್ತಿಯಿಂದ ದಿಗಂತವನ್ನು ತುಂಬಿದವನು. ಉಜ್ವಲ ಗುಣ ಸಮೂಹಗಳಿಂದ ಪ್ರಕಾಶಮಾನನಾದವನು. ಅತ್ಯಂತ ಶಾಂತಸ್ವರೂಪನು. ಆಶ್ರಿತರಾದವರನ್ನು ರಕ್ಷಿಸುವವನು. ಜ್ಞಾನ ಮತ್ತು ಕರ್ಮೇಂದ್ರಿಯಗಳನ್ನು ಗೆದ್ದವನು. ಅಮೋಘವಾದ ಕೃಪಾಕಟಾಕ್ಷಗಳಿಂದ ಕೂಡಿದವನು. ೭. ಯಾರ ಹಲ್ಲುಗಳ ಕಾಂತಿಯೇ ದೇವಗಂಗಾನದಿಯೋ, ಯಾರ ಕಿರೀಟದಲ್ಲಿರುವ ರತ್ನಗಳ ಪ್ರಕಾಶವು ನವವಿಧ ಗೈರಿಕಾದಿ ಧಾತುಗಳೋ, ಯಾರ ಸೊಂಟಕ್ಕೆ ಬಿಗಿದ ಹಾವು ಸಮುದ್ರಮಥನಕಾಲದಲ್ಲಿ ದೇವತೆ ಗಳು ಕಟ್ಟಿದ ಹಗ್ಗವೊ, ಯಾರ ಗಂಡಸ್ಥಳದಲ್ಲಿ ಸೋರುವ ಮದೋದಕಕ್ಕೆ ಎರಗುವ ದುಂಬಿಗಳು ಮೇಘಮಾಲೆಗಳೋ. (ಹೀಗೆ) ಮಂದರಪರ್ವತದಂತೆ ಶೋಭಿಸುವ

---

*ಮನೋಜನಂ ಕನಲ್ದುರುಪಿದ ಶಂಭುವಿನ ಕಥೆ, ಅನುಬಂಧ ೧ ನೋ.

ಅಹಿತತಮೋಪಹಂ ದನುಜಸಂಹೃತಿ ಶಕ್ತಿಧರಂ ಪ್ರಭಾಕರಂ
ಮಹಿತಮಹೋದಯಂ ಕಮಳಬಂಧುರ ಸಸ್ಮಿತವಕ್ತ್ರಭಾಸುರಂ
ಬಹುಕರರಂಜಿತಂ ವಿಹೃತದೋಷನನಾರತಮೆನ್ನ ಹೃತ್ಸರೋ
ರುಹಕುಟಿ ತಾರಕಾರಿ ಮಿಗೆ ಮಾಡುಗೆ ಭವ್ಯತರಪ್ರಮೋದಮಂ ೮

ಮ॥ ಸ್ರ॥ ಸ್ಥಿರಕಾಯಂ ಸತ್ಸಹಾಯಂ ಶಮಿತ ವಿತತಮಾಯಂ ಸುರವ್ರಾತಗೇಯಂ
ಗುರುಶೃಂಗಂ ಸಾಧುಸಂಗಂ ಮದನಮದವಿಭಂಗಂ ಮಹೇಶಾಂತರಂಗಂ
ವರವೇಷಂ ಚಿತ್ರಭೂಷಂ ಪದವಲಯಿತಶೇಷಂ ಸದಾಸತ್ಯಭಾಷಂ
ಪರಿರುಂದ್ರಂ ಭೂತಿಸಾಂದ್ರಂ ಕುಡುಗೆಮಗೆ ವಿತಂದ್ರತ್ವಮಂ ಶ್ರೀವೃಷೇಂದ್ರಂ ೯

ಗಣಪತಿಯು ನಮಗೆ ನಿರ್ವಿಘ್ನವನ್ನುಂಟುಮಾಡಲಿ.* ೮. ನನ್ನ ಹೃದಯಕಮಲಕ್ಕೆ ತಾರಕವೈರಿಯಾದ ಷಣ್ಮುಖಸ್ವಾಮಿಯು ಶುಭಕರವಾದ ಆನಂದವನ್ನುಂಟುಮಾಡಲಿ. (ಅವನು) ಅಹಿತವಾದ ತಮೋಗುಣವನ್ನು ನಾಶಮಾಡುವವನು ; ರಾಕ್ಷಸನಾದ ತಾರಕಾಸುರಸಂಹಾರಕ್ಕೆ ಶಕ್ತ್ಯಾಯುಧವನ್ನು ಧರಿಸಿದವನು ; (ಭಕ್ತರಲ್ಲಿ) ಜ್ಞಾನಪ್ರಭೆಯನ್ನುಂಟುಮಾಡುವವನು ; ಮಹಿಮಾಪೂರ್ಣವಾದ ಜನ್ಮವುಳ್ಳವನು ; ಕಮಲಪುಷ್ಪದಂತೆ ಇರುವ ಕಿರುನಗೆಯ ಮುಖವುಳ್ಳವನು ; ಅನೇಕ ಹಸ್ತಗಳಿಂದ ರಂಜಿಸುವವನು ; ದೋಷ ಪರಿಹಾರಕನು ; (ಸೂರ್ಯಪರ ಅರ್ಥ) ಅಹಿತವಾದ ಕತ್ತಲೆಯನ್ನೋಡಿಸುವವನೂ, ಮಂದೇಹನೆಂಬ ರಾಕ್ಷಸನನ್ನು ಸಂಹರಿಸಲು (ಬ್ರಹ್ಮತೇಜೋರೂಪವಾದ ಗಾಯತ್ರಿ) ಶಕ್ತಿಯನ್ನು ಧರಿಸಿದವನೂ, ಪ್ರಕಾಶಕನೂ, ಪೂಜಾರ್ಹ ಉದಯಸಮಯವುಳ್ಳವನೂ, ಕಮಲಸಖನೆನಿಸಿ ಅವನ್ನು ನಗಿಸುವವನೂ, ಸಹಸ್ರಕಿರಣನೂ, ದೋಷರಹಿತನೂ, ನಕ್ಷತ್ರವೈರಿಯೂ ಎನಿಸಿದ ಸೂರ್ಯನು ನನ್ನ ಹೃದಯಕಮಲಕ್ಕೆ ಶ್ರೇಷ್ಠವಾದ ಆನಂದವನ್ನುಂಟುಮಾಡಲಿ. ೯. ವೃಷಭೇಶ್ವರನು ನಮಗೆ ಸದಾ ಜಾಗ್ರತಜ್ಞಾನವನ್ನುಂಟುಮಾಡಲಿ. (ಅವನು) ಶಾಶ್ವತಕಾಯನು (ಅಂದರೆ ಚಿರಂಜೀವಿಯು) ; ಸಜ್ಜನ ಸಹಾಯಕನು ; ವಿಸ್ತಾರ ಮಾಯೆಯನ್ನು ತನ್ನ ಶಮಾಗುಣದಿಂದ ಗೆದ್ದವನು ; ಸಮಸ್ತ ದೇವತೆಗಳಿಗೆ ದೇಹದಲ್ಲಿ ಆಶ್ರಯವಿತ್ತವನು ; ಎತ್ತರವಾದ ಕೋಡುಗಳಿಂದ ಶೋಭಿಸುವವನು ; ಸತ್ಸಂಗನು ; ಮನ್ಮಥನ ಮದವನ್ನು ಭಂಗಗೊಳಿಸಿದವನು ; ಪರಮೇಶ್ವರನನ್ನು ಅಂತರಂಗದಲ್ಲಿ ನೆಲೆಗೊಳಿಸಿಕೊಂಡವನು ; ಸುಂದರವೇಷನು ; ಜ್ಞಾನಾಭರಣನು ; ಆದಿಶೇಷನನ್ನು ಪಾದದಬಳೆಯಾಗಿ ಉಳ್ಳವನು ; ಸತ್ಯಭಾಷಿಯು ; ಸಮಸ್ತವನ್ನೂ

*ಇಲ್ಲಿ ಕವಿ ಗಣಪತಿಯನ್ನು ಮಂದರಪರ್ವತಕ್ಕೆ ಹೋಲಿಸಿ ವರ್ಣಿಸಿದ್ದಾನೆ. ದೇವಗಂಗಾ, ಗೈರಿಕಾದಿ ಧಾತುವಿಶೇಷ, ಸಮುದ್ರಮಥನಕ್ಕೆ ಆ ಪರ್ವತವನ್ನು ಬಳಸಿದರೆಂಬ ಪುರಾಣೋಕ್ತಿ, ಮೇಘಮಾಲೆ-ಇವೆಲ್ಲ ಮಂದರಪರ್ವತದ ವಿಶೇಷಗಳು.

ಉ॥ ಸಕ್ಷಮ ದಕ್ಷಶಿಕ್ಷಣ ವಿಚಕ್ಷಣ ಸುಕ್ಷಣ ಲಕ್ಷಣೇಕ್ಷಣಾ
ರಕ್ಷಿತ ಲಕ್ಷಿತೇಶ್ವರ ಮುಮುಕ್ಷು ಜಿತಾಕ್ಷ ಮಹೋಕ್ಷಲಕ್ಷ ಫಾ
ಲಾಕ್ಷ ತರಕ್ಷುರಾಕ್ಷಸವಿಪಕ್ಷ ವಳಕ್ಷ ಸರಕ್ಷ ದೇಹ ಮೋ
ಹಕ್ಷಯದಕ್ಷ ರಕ್ಷಿಪುದಧೋಕ್ಷಜಪಕ್ಷ ಶಿವಾಕ್ಷಿಸಂಭವಾ ೧೦

ಚಂ॥ ಸದಮಳ ಧರ್ಮರೂಪನಭವಾಗಮಸಾರ ಕಳಾಕಳಾಪನು
ನ್ಮದ ಮದನಪ್ರಲೋಪನಕಳಂಕ ಸದದ್ವಯ ತತ್ತ್ವದೀಪನ
ಭ್ಯುದಯವಹ ಪ್ರತಾಪನತಿಭಕ್ತ ವಶೀಕೃತ ಶೈಲಚಾಪನಾ
ತ್ತದಯ ಜಿತತ್ರಿತಾಪ ಬಸವೇಶ್ವರನೀಗೆಮಗೀಶಭಕ್ತಿಯಂ ೧೧

ಮ॥ ವೃಜಿನವ್ರಾತಮನೊಕ್ಕಲಿಕ್ಕಿ ಮದಮಾತಂಗಂಗಳಂ ಸೀಳ್ದು ತಾ
ಳ್ದು ಜಗದ್ವಿಶ್ರುತವರ್ತಿ ಕೀರ್ತಿಯನನಂಗೋದ್ರೇಕಮಂ ಮೆಟ್ಟಿ ಮು
ಟ್ಟ ಜಡಂ ಪೊರ್ದದ ಸಾಧುಬೋಧಮನಶೇಷತ್ಯಾಗಮಂ ಯೋಗಮಂ
ಸುಜನರ್ಗಾಗಿಪಭಿನ್ನ ಚೆನ್ನಬಸವೇಶಂ ಮಾಳ್ಕೆ ಸುಜ್ಞಾನಮಂ ೧೨

ಅರಿತು ದಟ್ಟವಾದ ಭಸ್ಮಲೇಪನದಿಂದ ಕೂಡಿದವನು. ೧೦. ಶಿವನ ನೇತ್ರದಿಂದ ಜನಿಸಿದ ಹೇ ವೀರಭದ್ರ, ಶಾಂತಿಗುಣದಿಂದ ಕೂಡಿದವನೂ, ದಕ್ಷಬ್ರಹ್ಮನ ದಂಡನೆಯಲ್ಲಿ ಸಮರ್ಥನೂ, ಶಿವಧ್ಯಾನಾಸಕ್ತರಾದ ಮುಮುಕ್ಷುಗಳನ್ನು ಪವಿತ್ರವಾದ ದೃಷ್ಟಿಯಿಂದ ರಕ್ಷಿಸುವವನೂ, ಗೂಳಿಗಳಂತಿರುವ ಸಮಸ್ತೇಂದ್ರಿಯಗಳನ್ನು ಜಯಿಸಿದವನೂ, ಲಲಾಟ ನೇತ್ರನಾದ ಶಿವನ ಧ್ಯಾನದಲ್ಲಿ ನಿರತನೂ, ವ್ಯಾಘ್ರಾಸುರನಿಗೆ ವೈರಿಯೆನಿಸಿ ಶುಕ್ಲವರ್ಣ ದಿಂದ ಕೂಡಿದ ದೇಹಸೌಂದರ್ಯವುಳ್ಳವನೂ, ಅಜ್ಞಾನಾಂಧಕಾರ ಪರಿಹಾರಕನೂ, ವಿಷ್ಣು ಪಕ್ಷನೂ ಆದ ನೀನು ನನ್ನನ್ನು ರಕ್ಷಿಸು. ೧೧. ಶ್ರೇಷ್ಠವಾದ ಧರ್ಮಸ್ವರೂಪನೆನಿಸಿ, ಶಿವಾಗಮೋಕ್ತ ಸಮಸ್ತ ನಿಷ್ಕೃಷ್ಟಜ್ಞಾನಸಂಪನ್ನನೂ, ಮದೋನ್ಮತ್ತ ಮನ್ಮಥನ ದರ್ಪವನ್ನು ಮುರಿದವನೂ, ಕಲಂಕರಹಿತನೂ, ಶಿವಾದ್ವೈತ ತತ್ತ್ವ ಪ್ರಕಾಶಕನೂ, ಅಭ್ಯುದಯಶೀಲ ಪ್ರತಾಪವುಳ್ಳವನೂ, ಶಿವನಲ್ಲಿಟ್ಟ ಅತಿಶಯ ಭಕ್ತಿಭಾವದಿಂದ ಅವನನ್ನು ವಶಪಡಿಸಿಕೊಂಡವನೂ, ಶಿವಕೃಪೆಯಿಂದ ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕಗಳೆಂಬ ತಾಪತ್ರಯದೂರನೂ ಆದ ಕೃಪಾಶಾಲಿ ಬಸವೇಶ್ವರನು ನಮಗೆ ಭಕ್ತಿಯನ್ನುಂಟು ಮಾಡಲಿ. ೧೨. ಶಿವಾಭಿನ್ನಜ್ಞಾನನಿಧಿಯಾದ ಚೆನ್ನಬಸವೇಶ್ವರನು ನಮಗೆ ಸುಜ್ಞಾನ ವನ್ನುಂಟುಮಾಡಲಿ. (ಅವನು) ಪಾಪರಾಶಿಯನ್ನು ನಾಶಮಾಡಿದವನು ; ಮದ್ದಾನೆ ಗಳಂತಿರುವ ಅಷ್ಟಮದಗಳನ್ನು ದೂರಮಾಡಿದವನು ; ದಿಗಂತ ವಿಶ್ರಾಂತ ಕೀರ್ತಿಯನ್ನು ಹೊಂದಿ ಮನ್ಮಥಸಂಬಂಧವಾದ ಉದ್ರೇಕಗಳನ್ನು ಮೆಟ್ಟಿಹಾಕಿದವನು ; ಅಜ್ಞಾನದ ಸ್ಸೋಂಕೇ ಇಲ್ಲದೆ, ಸಮ್ಯಕ್‌ಜ್ಞಾನಸಂಪನ್ನನಾಗಿ, ಸಮಸ್ತ ತ್ಯಾಗದಿಂದ ಶಿವಯೋಗ

ಮ॥ ಸ್ರ॥ ಅರಿವರ್ಗಧ್ವಂಸಮಂ ಪೂಣ್ದೆಸಗಿ ತಳೆದು ಪಂಚಾಂಗ ಸನ್ಮಂತ್ರಮಂ ಪೊ
ರ್ದಿರೆ ಸತ್ವಂ ಸತ್ರುಜಾಪಾಲನೆಯು ನೆಗಳ್ದುಪಾಯಂಗಳಂ ಸಾರ್ದು ಶಕ್ತಿ
ಸ್ಫುರಣಂ ಕೈಗಣ್ಮೆ ತಂತ್ರೋದಿತ ಗುಣಗಣಮಂ ತಾಳ್ದಮೋಘಂ ಪ್ರಭುತ್ವಂ
ದೊರೆಕೊಂಡೆಮ್ಮಾಳ್ದನಾದಲ್ಲಮವಿಭು ವಿರತಿಶ್ರೀಯುಮಂ ಮಾಳ್ಪುದೆಮ್ಮೊಳ್ ೧೩

ಚಂ॥ ದುರಿತತಮಃಪತಂಗನಮಳಾರ್ಥ ವಿವೇಚನ ಸತ್ರುಸಂಗನೀ
ತ್ವರಲಸದಂತರಂಗನಭವಾಗಮ ವಾರಿಜ ದಿವ್ಯಭೃಂಗನ
ಕ್ಷರಪರಲಿಂಗಸಂಗನತಿಶಾಂತಿ ನಿರಸ್ತ ಜಡಾನುಷಂಗನೊ
ಲ್ದುರುತರ ಸಿದ್ಧಲಿಂಗಯತಿತುಂಗನೊಡರ್ಚುಗೆ ಸಜ್ಜನೇಷ್ಟಮಂ ೧೪

ರಹಸ್ಯವನ್ನು ಶರಣ ಸಮೂಹಕ್ಕೆ ಉಂಟುಮಾಡುವಂಥವನು ೧೩. ಕಾಮಕ್ರೋಧಾದಿ ಅರಿಷಡ್ವರ್ಗವನ್ನು ಪ್ರತಿಜ್ಞೆಮಾಡಿ ಧ್ವಂಸಗೊಳಿಸಿ, ಐದಂಗಗಳ ಪಂಚಾಕ್ಷರೀ ಮಂತ್ರ ವಿಧಾನವನ್ನು (ಐದು ಅಂಗಗಳಲ್ಲಿ) ಹೊಂದಿ, ಸತ್ರುಜಾವರ್ಗದ ಪಾಲನೆಮಾಡಿ, ಉಪಾಯಜ್ಞನಾಗಿ, (ಮಂತ್ರ) ಶಕ್ತಿಯು ಕೈಗೂಡಲಾಗಿ, ಶಿವಾಗಮಗಳಲ್ಲಿ ಹೇಳಲ್ಪಟ್ಟ ಸಮಸ್ತ ಗುಣಸಮೂಹವನ್ನು ಹೊಂದಿದವನಾಗಿ ಅಮೋಘ ಪ್ರಭುತ್ವಶಕ್ತಿಯನ್ನು ಪಡೆದುಕೊಂಡು ನಮ್ಮೆಲ್ಲರಿಗೂ ಪ್ರಭುವೆನಿಸಿದ ಅಲ್ಲಮಪ್ರಭುವು ನಮ್ಮಲ್ಲಿ ವೈರಾಗ್ಯಭಾವವನ್ನುಂಟು ಮಾಡಲಿ* ೧೪. ಪಾಪವೆಂಬ ಕತ್ತಲೆಗೆ ಸೂರ್ಯನೋಪಾದಿಯಲ್ಲಿರುವವನೂ, ಪರಿಶುದ್ಧ ಶಾಸ್ತ್ರಾರ್ಥಗಳ ಸತ್ರುಸಂಗವುಳ್ಳವನೂ, ಚಿತ್ತದಲ್ಲಿ (ಸದಾ) ಶ್ರೇಷ್ಠನಾದ ಈಶ್ವರ ಧ್ಯಾನಾಸಕ್ತನಾದವನೂ, ಶಿವಾಗಮಗಳೆಂಬ ಕಮಲಗಳಲ್ಲಿ ಶ್ರೇಷ್ಠ ಭೃಂಗಸ್ವರೂಪನೆನಿಸಿದವನೂ, ಅಂದರೆ ಶಿವಾಗಮಗಳ ಸಾರವನ್ನು ಹೀರಿದವನೂ, ಅಕ್ಷಯನಾದ ಶಿವಲಿಂಗ ಸಂಗದಲ್ಲಿರುವವನೂ, ಶಾಂತ (ಸ್ವರೂಪ)ನಾಗಿ ಅಜ್ಞಾನಿಗಳ ಸಂಸರ್ಗದಿಂದ ದೂರವಿರುವವನಾಗಿಯೂ ಆದ ಸಿದ್ಧಲಿಂಗ ಯತಿಶ್ರೇಷ್ಠನು ಒಲಿದು ಸಜ್ಜನರ ಇಷ್ಟವನ್ನು ನೆರವೇರಿ

---

*(i) ಪಂಚಾಕ್ಷರಿ ಮಂತ್ರದ ಐದಂಗಗಳು = ನ, ಮಃ, ಶಿ, ವಾ, ಯ ಎಂಬುವು. ಇವು ದೇಹದಲ್ಲಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗಗಳೆಂಬ ಐದಂಗಗಳಿಗೆ ಅಳವಡುತ್ತವೆಂಬುದು ವೀರಶೈವ ಸಿದ್ಧಾಂತ.

(ii) ಉಪಾಯ = ಸಾಮ, ದಾನ, ಭೇದ, ದಂಡಗಳು

ಶಿವನೊಡನುಂಡು ಶಂಕರನನಂಗನೆಯಂಗಣಕಟ್ಟಿ ಶಂಭುವಿಂ
ಗವಯುವವಿತ್ತು ಶರ್ವನೊಡನಕ್ಷವನಾಡಿ ಭವಂಗವರ್ಚಿ ಚ
ಕ್ಷುವನಭವಂಗೆ ಪಾಲೆಱೆದು ಭರ್ಗನೊಳರ್ಪಿಸಿ ಸರ್ವಮಂ ಶಿವಾ
ಧವನೊಲವೆತ್ತರಿಂದೆಮಗೆ ವಂದ್ಯರನಿಂದ್ಯರವದ್ಯ ವರ್ಜಿತರ್ ೧೫

ಕಂ॥ ಸುಜನವರನತಪದನ ಸದ
ಸುಜನವರದನತುಳನಾದ ರಸಿಕನ ವಿಳಸ
ನ್ನಿಜಗುಣಯೋಗಿಯ ನಿರುಪಮ
ನಿಜಗುಣಯೋಗಿಯ ಪದಾಬ್ಜಕಾನತನಪ್ಪೆಂ ೧೬

ಉ॥ ರೇಣುಕ ರಾಮಪಂಡಿತ ಮಹಾಮರುಳಾರ್ಯ ಮಾಯಿದೇವರಂ
ಜಾಣನ ಜಕ್ಕಣಾರ್ಯನ ಜಗನ್ನುತ ಮಲ್ಲಣ ಮಲ್ಲಣಾರ್ಯರಂ
ಪ್ರೀಣಿತ ಶಂಭು ಶಂಕರ ಹರೀಶ್ವರ ರಾಘವ ಕೇಶಿರಾಜರಂ
ಮಾಣದೆ ಬಣ್ಣಿಸುತ್ತೆಱಗಿ ಮೇಣ್ಪಡೆವೆಂ ಪರಮಾರ್ಥಸಿದ್ಧಿಯಂ ೧೭

ಸಲಿ. ೧೫. ಶಿವನೊಡನೆ (ಅಂಬಲಿಯನ್ನು) ಊಟಮಾಡಿದ ಮಾದಾರ ಚೆನ್ನಯ್ಯ, ಅಂಗನೆಯಲ್ಲಿಗೆ ಶಿವನನ್ನು ಕಳುಹಿಸಿದ ಸಿಂಧುಬಲ್ಲಾಳ, ಅಂಗಾಂಗಗಳನ್ನು ಶಿವನಿಗೆ ಸಮರ್ಪಿಸಿದ ಸಿಂಧುಮರಾಳ, ಶಿವನೊಡನೆ ದ್ಯೂತವನ್ನಾಡಿ ಗೆದ್ದ ಮೂರ್ಖ ನೈನಾರ, ತನ್ನ ಕಣ್ಣನ್ನು ಶಿವನಿಗರ್ಪಿಸಿದ ಕಣ್ಣಪ್ಪ, ಶಿವನಿಗೆ ಹಾಲನ್ನರ್ಪಿಸಿದ ಕೋಳೂರ ಕೊಡ ಗೂಸು, ಶಿವನಿಗೆ (ಬಾಧೆಯಾಗಬಾರದೆಂದು ಅವನ ಸುತ್ತಲೂ ಕೋಟೆಯನ್ನು ಕಟ್ಟಲು) ಸರ್ವಸ್ವವನ್ನು ಸಮರ್ಪಿಸಿದ ದೀಪದಕಲಿ ಇವರೇ ಮೊದಲಾದ ಪರಮೇಶ್ವರನ ಒಲವಿಗೆ ಪಾತ್ರರಾಗಿ ನಿರ್ಮಲರೂ, ನಾಶರಹಿತರೂ ಉತ್ತಮರೂ ಆದ ಶಿವಭಕ್ತರು ಇಂದು ನಮಗೆ ಪೂಜ್ಯರು.* ೧೬. ಸಜ್ಜನರಿಂದ ವಂದಿಸಲ್ಪಡುವ ಪಾದವುಳ್ಳವನಾಗಿಯೂ ಸತ್ಯವೇ ಪ್ರಾಣವಾಗಿರುವವರಿಗೆ ಇಚ್ಛಿಸಿದುದನ್ನು ಕೊಡುವವನಾಗಿಯೂ ಅತುಳ ರಸಜ್ಞನಾ ಗಿಯೂ ಶೋಭಿಸುವ ಸತ್ಯಗುಣಗಳಿಂದ ಕೂಡಿದ ಯೋಗಿಯಾಗಿಯೂ ಇರುವ ನಿರುಪಮ ನಾದ ನಿಜಗುಣ ಶಿವಯೋಗಿಯ ಪಾದಾಬ್ಜಗಳಿಗೆ ನಮಸ್ಕರಿಸುವೆನು. ೧೭. ರೇಣುಕ, ಏಕೋರಾಮಪಂಡಿತ, ಮರುಳಸಿದ್ಧೇಶ, ಮಾಯಿದೇವ, ಜಾಣನಾದ ಜಕ್ಕಣ್ಣಾಚಾರ್ಯ, ಜಗದ್ವಿಖ್ಯಾತ ಮಲ್ಲಣ, (ಗುಬ್ಬಿಯ) ಮಲ್ಲಣ್ಣಾರ್ಯ, ಶಂಭುವನ್ನು ಪ್ರೀತಿಗೊಳಿಸಿದ ಹರೀಶ್ವರ, ರಾಘವಾಂಕ, ಕೇಶಿರಾಜರುಗಳನ್ನು ತಪ್ಪದೆ ವರ್ಣಿಸಿ ನಮಸ್ಕರಿಸಿ ಪರಮಾರ್ಥ

---

* ಪದ್ಯ ೧೫ರಲ್ಲಿ ಬಂದ ಶಿವಶರಣರ ಕಥೆಗಳಿಗಾಗಿ ಅನುಬಂಧ II ನೋಡಿ.

ಮ॥ ನುತಿಪೆಂ ವಿಶ್ರುತ ವೀರಶೈವಶರಧಿಶ್ರೀಸೋಮನಂ ಸೋಮನಂ
ಜಿತವಾದಿವ್ರಜಸದ್ಬುಧಸ್ತುತಲಸತ್ ಸತ್ಪದ್ಮನಂ ಪದ್ಮನಂ
ತತಗರ್ವೋದ್ಧತ ದುರ್ವಿದಗ್ಧ ಜನತಾಹೃದ್ಭೀಮನಂ ಭೀಮನಂ
ಸತತಾರಾಧಿತ ಶಾಂಕರೀರಮಣ ಪಾದಾಂಭೋಜನಂ ಭೋಜನಂ † ೧೮

ಮ॥ ಸ್ರ॥ ಧರೆಯೊಳ್ಮೇಣ್ಪುಟ್ಟಿಪುಟ್ಟುತ್ತುರುಳ್ವ ನರರಮೇಲುರ್ಬಿ ಕಬ್ಬಂಗಳಂ ಬಿ
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ
ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್ ೧೯

ಕಂ॥ ವರ್ಣತತಿ ಮಾತೃಜನಕರ
ಪರ್ಣಾಪರಮೇಶರೆಂಬ ನಿಗಮೋಕ್ತಿಯನಾ
ಕರ್ಣಿಸಿ ತನ್ನುತಿಗೆಯ್ಯದ
ದುರ್ಣರಕೃತಿಕರನೆ ಲಬ್ಧವರ್ಣವರಾಕಂ ೨೦

ಸಿದ್ಧಿಯನ್ನು ಪಡೆಯುವೆನು. ೧೮. ವೀರಶೈವವೆಂಬ ಸಮುದ್ರಕ್ಕೆ ಚಂದ್ರನಂತಿರುವ (ಪಾಲ್ಕುರಿಕೆ) ಸೋಮನಾಥ, ಪ್ರತಿವಾದಿ ಸಮೂಹವನ್ನು ಗೆದ್ದ (ಮತ್ತು), ವಿದ್ವಾಂಸರಿಂದ ಸ್ತುತಿಸಲ್ಪಟ್ಟ ಶ್ರೇಷ್ಠವಾದ ಪದ್ಮನಾದ ಪದ್ಮಣಾಂಕ, ವಿಶೇಷ ಗರ್ವೋದ್ಧತರಾದ ದುಷ್ಟವಿದ್ವಾಂಸ ಸಮೂಹದ ಹೃದಯಕ್ಕೆ ಭಯಂಕರನೆನಿಸಿದ ಭೀಮಕವಿ, ಸತತವೂ ಪರಮೇಶ್ವರನ ಚರಣಕಮಲಗಳನ್ನರ್ಚಿಸಿದ ಭೋಜಕವಿ–ಇವರನ್ನು ಸ್ತೋತ್ರ ಮಾಡುತ್ತೇನೆ. ೧೯. ಭೂಮಿಯಲ್ಲಿ ಹುಟ್ಟಿ ಹುಟ್ಟಿ ಸಾಯುವ ಮನುಷ್ಯರ ಮೇಲೆ ಕಾವ್ಯಗಳನ್ನು ಉತ್ಸಾಹದಿಂದ ಬರೆದು ವ್ಯಥಾಯಾಸಗೊಂಡು ಕೆಲಕೆಲವು ಕವಿಗಳು ಕೆಟ್ಟುಹೋದರು. ಹರೀಶ್ವರದೇವನು ದೇವದೇವೋತ್ತಮನಾದ ಶಿವನ ಶರಣರ ಬಗೆಗೆ ಹಾಡಿ ಕೈವಲ್ಯಲಕ್ಷ್ಮೀಪತಿಯಾದನು. ಅಂಥ ಅತ್ಯಧಿಕ ಶಿವಕವಿಗೆ ಯಾರುತಾನೆ ಸಮನಾದಾರು ? ೨೦. ಸಮಸ್ತಾಕ್ಷರ ಸಮೂಹಕ್ಕೆ ತಾಯಿ ತಂದೆಯರು ಪಾರ್ವತೀ ಪರಮೇಶ್ವರರೆಂಬ ವೇದೋಕ್ತಿಯನ್ನು ಕೇಳಿ ಅವರನ್ನೇ ಸ್ತುತಿಸದೆ ದುಷ್ಟನರರ ಮೇಲೆ ಕೃತಿ ರಚಿಸುವವನೇ ಅಧಮ

† ಪದ್ಯ ೧೬–೧೭ ಮತ್ತು ೧೮ರಲ್ಲಿ ಹೇಳಿದ ಆಚಾರ್ಯರ ಮತ್ತು ಪೂಜ್ಯಕವಿಗಳ ಬಗೆಗೆ ಅನುಬಂಧ II ನೋಡಿ.

ರಸೆಯೊಳ್ ರಸವತ್ಕವಿತೆಯ
ನುಸುರಲ್ಪಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸವನಾಂತವೊಲಕ್ಕುಂ ೨೧

ಅದಱಿಂದೆ ಮಹಿತಮಹಿಮಾ
ಸ್ಪದನಂ ಶಿವನಂ ತದೀಯ ಶರಣವ್ರಜಮಂ
ಪದೆದು ಮುದವೊದವೆ ಬಲ್ಲಂ
ದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ ೨೨

ಚಂ॥ ಬರೆಬರೆದಂತದಂ ತೊಡೆದು ತೊಟ್ಟನೆ ನಿಟ್ಟಿಸಿ ಮೆಲ್ಲನೊಂದುಮಂ
ಸರಸಪದಾರ್ಥಮಂ ತಡಕಿ ಕಾಣದೆ ಕಳ್ದು ಪರೋಕ್ತಿಯುಕ್ತಿಯಂ
ವಿರಚಿಸುತಂತುಮಿಂತುಮಳಿಗಬ್ಬಮನಾಗಿಸಿ ಕೇಳಿಸುತ್ತೆ ಕಾ
ಲುರಿಚರ ತೋರ್ಪ ದುಷ್ಕವಿ ಮಹಾಕವಿಮಧ್ಯದೊಳೊಪ್ಪಲಾರ್ಪನೇ ೨೩

ಕಂ॥ ಅಳಿಗಬ್ಬಿಗನೊರ್ವಂ ಮಂ
ಜುಳಯುಕ್ತಿಯನೊಂದನೊಂದಿ ಸರಿವರ್ಪನೆಯ
ಗ್ಗಳಕವಿಗೆ ರನ್ನವೊಂದಂ
ತಳೆದಹಿರತ್ನಾಕರಕ್ಕೆ ಸರಿವಂದಪುದೇ ೨೪

ವಿದ್ವಾಂಸನು. ೨೧. ಈ ಭೂಮಿಯಲ್ಲಿ ರಸವತ್ತಾದ ಕವಿತೆಯನ್ನು ಬರೆಯಲು ಯೋಗ್ಯತೆಯನ್ನು ಹೊಂದಿ, ಪರಮೇಶ್ವರನನ್ನು ಹೊಗಳದೆ ಮನುಷ್ಯರನ್ನೂ (ಇತರ) ದೇವತೆಗಳನ್ನೂ ಹೊಗಳುವುದು ಬಂಗಾರವನ್ನು ಹೊರಹಾಕಿ ಕಸವನ್ನು ತುಂಬಿಕೊಂಡಂತಾಗುವುದು. ೨೨. ಆದ್ದರಿಂದ ಪೂಜಿತ ಮಹಿಮಾಸ್ಪದನಾದ ಶಿವನನ್ನೂ, ಅವನ ಶರಣ ಸಮೂಹವನ್ನೂ ಎನ್ನ ಮನಸಿಗೆ ಹೊಳೆದಂತೆ ಸ್ತೋತ್ರಮಾಡುತ್ತೇನೆ. ಉಳಿದ ಸುರರನ್ನೂ, ನರರನ್ನೂ ಹೊಗಳುವುದಿಲ್ಲ. ೨೩. ಬರೆದು ಬರೆದು ಅದನ್ನು ತೊಡೆಯುತ್ತ, ದಿಟ್ಟಿಸಿನೋಡುತ್ತ, ಮೆಲ್ಲನೆ ಒಂದು ರಸಾಭಿವ್ಯಂಜಕ ಪದಾರ್ಥವನ್ನು ತಡಕಿ ಸ್ಫುರಿಸದೆ, ಪರರು ಹೇಳಿದ ಚಮತ್ಕಾರೋಕ್ತಿಯನ್ನು ಕದ್ದು ಹೇಗೆ ಹೇಗೋ ಒಂದು ಅಧಮಕಾವ್ಯವನ್ನು ರಚಿಸಿ, ಜನರೆದುರಿನಲ್ಲಿ ಹೇಳಿಕೊಂಡು, ಗಾಂಪರಂತೆ ತೋರುವ ಕವಿಯು ಮಹಾಕವೀಶ್ವರರ ಮಧ್ಯದಲ್ಲಿ ಒಪ್ಪಲು ಸಮರ್ಥನೇ ? ೨೪. ಒಂದು ರತ್ನವನ್ನು ಧರಿಸಿದ ಸರ್ಪವು ರತ್ನಾಕರಕ್ಕೆ ಹೇಗೆ ಸರಿಯಾಗಲಾರದೋ ಹಾಗೆ ಅಲ್ಪನಾದ ಒಬ್ಬ ಕವಿಯು ಒಂದಾನೊಂದು ಮಂಜುಳಯುಕ್ತಿಯ ಕವಿತೆಯಿಂದ (ಶಿವಾನುಗ್ರಹ

ಸಕಳ ಕಳಾನಿಧಿನಿಕಟದೆ
ಸುಕರರಸಪ್ರಕಟ ಕಾವ್ಯಮೆಂಬಮೃತಪಯೋ
ಧಿ ಕರಂ ಪೆರ್ಚುಗುಮಲ್ಲದೆ
ಕುಕವಿ ಬುಧಪ್ರಭೃತಿಯಿದಿರೊಳೇಂ ಪೆರ್ಚುಗುಮೋ ೨೫

ಕೃತಿಕೃತ ಕೃತಿಯಂ ಕ್ಷಿತಿಯೊಳ್
ಮತಿರಹಿತರ್ತಿಳಿಯರೆಂದು ಪಳಿಯೆಂ ಮುಳಿಯೆಂ
ರತಿಲಾಲಸರಮಣೀ ಸಮು
ರತಿಯಂ ಕ್ಲೀಬರ್ಕಳೆಂತುಮೇನಱಿದಪರೇ ೨೬

ಬೇಱನಿಸಿ ಮಿಸುಗುವಲರ್ಗಳ್
ಬೀಱುವ ನಱುಗಂಪಿನೊಳ್ವಿಶೇಷಮನಱಿವಂ
ತಾಱಡಿ ನಾನಾಕೃತಿಯೊಳ್
ತೋಱುವ ನವಭಾವಭೇದಮಂ ಬುಧನಱಿವಂ ೨೭

ಚಂ॥ ಭುವನದೆ ಭೋಜರಾಜನ ಮಹಾಸಭೆಯೊಳ್ ಬಹುಶಾಸ್ತ್ರಕೋವಿದರ್
ಸವಿಸಲೆ ಪೊಣ್ಮೆ ಪಾಡುವವರೇನಿರರೇ ತೆಗೆ ಕಾಳಿದಾಸಮು
ಖ್ಯ ವಿವಿಧ ಸತ್ಕವೀಂದ್ರರ ಜಸಂ ಬಿಡದಿನ್ನುಮಿರುತ್ತೆ ತೋರ್ಪವೋ
ಲವರ ಜಸಂ ವಿರಾಜಿಪುದೆ ಸತ್ಕವಿಯೊಳ್ ಸರಿವರ್ಪನಾವನೋ ೨೮

ಸಂಪನ್ನನಾದ) ಶ್ರೇಷ್ಠಕವಿಗೆ ಸರಿಯಾಗುತ್ತಾನೆಯೆ ? ೨೫. ಷೋಡಶಕಲಾ ಪ್ರಪೂರ್ಣನಾದ ಚಂದ್ರನಿಲ್ಲದೆ, ಸಮುದ್ರವು ಶುಕ್ರ ಬುಧಾದಿ ಗ್ರಹಗಳು ಉದಯವಾದಾಗ ಹೆಚ್ಚೀತೇ ? (ಅದರ ಹಾಗೆ) ಸಕಲ ಕಲೆಗಳಿಗೆ ಆಶ್ರಯನಾದ ವಿದ್ವತ್‌ಕವಿಯಿಂದಲೇ ಲೇಸನ್ನುಂಟುಮಾಡುವ ನವರಸಭರಿತ ಕಾವ್ಯವೆಂಬ ಅಮೃತ ಸಮುದ್ರವು ಉಕ್ಕಿಬರುತ್ತದೆ. ೨೬. ಭೂಮಿಯಲ್ಲಿ ಬುದ್ಧಿಹೀನರಾದವರು ಮಹಾಕವಿ ವಿರಚಿತ ಕಾವ್ಯವನ್ನು ತಿಳಿಯ ಲಾರರೆಂದು ನಾನು ದೂಷಿಸುವುದಿಲ್ಲ (ಮತ್ತು) ಕೋಪಿಸಿಕೊಳ್ಳುವುದಿಲ್ಲ. (ಏಕೆಂದರೆ) ರತಿಕ್ರೀಡೆಯಲ್ಲಿ ಆಸೆಗೊಂಡ ರಮಣಿಯಲ್ಲಿ ಸಮರತಿಯನ್ನು ನಪುಂಸಕನಾದವನು ತಿಳಿಯಲು ಶಕ್ಯವೆ ? ೨೭. ಬೇರೆ ಬೇರೆಯಾದ (ಅನೇಕ) ಪುಷ್ಪಗಳಲ್ಲಿ ಹೊರ ಸೂಸುವ ನರುಗಂಪಿನಲ್ಲಿರುವ ವಿಶೇಷಗುಣವನ್ನು ಭೃಂಗವು ತಿಳಿಯುವ ಹಾಗೆ ನಾನಾ ಪ್ರಕಾರದ ಕಾವ್ಯಗಳಲ್ಲಿರುವ ನೂತನ ಭಾವಭೇದಗಳನ್ನು ಜ್ಞಾನಿಯಾದವನು ಮಾತ್ರ ತಿಳಿಯಲು ಸಮರ್ಥನಾಗುವನು. ೨೮. ಭೂಮಿಯಲ್ಲಿ (ಪ್ರಸಿದ್ಧವಾದ) ಭೋಜರಾಜನ ಆಸ್ಥಾನದಲ್ಲಿ ಅನೇಕ ಶಾಸ್ತ್ರಗಳಲ್ಲಿ ಪ್ರಾವಿಣ್ಯ ಪಡೆದವರು (ಮತ್ತು) ಇಂಪಾಗಿ ಹಾಡುವ (ಗಾಯಕರೇ ಮೊದಲಾದವರು) ಇದ್ದಿಲ್ಲವೇನು ? (ಆದರೆ) ಕಾಳಿದಾಸ ಮುಖ್ಯರಾದ ವಿವಿಧ ಕವೀಂದ್ರರ ಯಶಸ್ಸು ಇಂದಿಗೂ ತಪ್ಪದೆ ಉಳಿದಿರುವ ಹಾಗೆ ಉಳಿದವರ ಕೀರ್ತಿ ಉಳಿದಿದೆಯೆ ? (ಆದುದರಿಂದ) ಸತ್ಕವಿಗೆ ಸಮಾನನಾದ ಕೀರ್ತಿಶಾಲಿಯು ಯಾವನ್ನ

ಕಂ॥ ಆರಾರೇಱರ್ ಶಾಸ್ತ್ರ
ಶ್ರೀರೋಹಣಗಿರಿಯನಲ್ಲಿ ನವಕವಿತಾ ಚಿಂ
ತಾರತ್ನಂ ದೊರೆಗುಮ್ಮೆ ಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್ ೨೯

ಕಲಿಸಿದೊಡಂ ಬರ್ಕುಮೆ ಸ
ಲ್ಲಲಿತ ಕವಿತ್ವಂ ನಿಸರ್ಗಸುಭಗಂ ರಮಣೀ
ವಿಲಸಿತ ರತಿರಸರಸಿಕತೆ
ತಲೆದೋರ್ಪುದು ತಾನೆ ಕಲಿಸಲೇಂ ಬಂದಪ್ಪುದೇ ೩೦

ನಿಂದಿಸುವರ್ ದುರ್ಜನರೆಂ
ಬೊಂದು ಭಯಂಬೆತ್ತು ಸುಕವಿ ರಚಿಸನೆ ಕೃತಿಯಂ
ಮಂದೇಹರ ಭಯದಿಂದರ
ವಿಂದಸಖಂ ನಿಜಮಯೂಖನಂ ಪಸರಿಸನೇ ೩೧

ಕಿಱಿಯ ಕೃತಿ ಪಿರಿದೆನಿಕ್ಕುಂ
ಪೆಱರರ್ಥಕೆ ಕೈದುಡುಂಕದಿರೆ ಸತ್ಕವಿಗಂ
ಕಿಱಿಯ ಸಿರಿ ಪಿರಿದೆನಿಕ್ಕುಂ
ಪೆಱರರ್ಥಕೆ ಕೈದುಡುಂಕದಿರೆ ಮನುಜಂಗಂ ೩೨

ನಿದ್ದಾನೆ ? ೨೯. ಶಾಸ್ತ್ರಾದಿಗಳೆಂಬ ಮೇರುಪರ್ವತವನ್ನು ಯಾರು ಯಾರು ಏರುವು ದಿಲ್ಲ ? ಅವರೆಲ್ಲರಿಗೂ ಅಲ್ಲಿರುವ ನೂತನ ಕವಿತ್ವವೆಂಬ ಚಿಂತಾರತ್ನಗಳು ದೊರೆಯು ತ್ತವೆಯೇ ? ಶಿವಾನುಗ್ರಹವಿಲ್ಲದವನಿಗೆ ಕವಿತಾಶಕ್ತಿಯೆಂಬುದು ದೊರೆಕೊಳ್ಳಲಾರದು. ೩೦. ಸಹಜ ಸುಭಗವಾದ ಲಾಲಿತ್ಯಪೂರ್ಣ ಕವಿತಾಶಕ್ತಿಯು ಕಲಿಸಿದರೆ ಬರುವುದೆ ? ಮನೋಹರವಾದ ರತಿವಿಷಯಕ ರಸಿಕತೆಯು (ನಿಸರ್ಗದತ್ತವಾಗಿ ಅಂದರೆ) ಸಹಜವಾಗಿ ಬರಬೇಕಲ್ಲದೆ ಕಲಿಸಿದರೆ ಬಂದೀತೇ ? ೩೧. ದುರ್ಜನರು ದೂಷಿಸುತ್ತಾರೆಂಬ ಭಯ ದಿಂದ ಸತ್ಕವಿಯಾದವನು ಕಾವ್ಯವನ್ನು ರಚಿಸದೆ ಬಿಡುವನೆ ? ಮಂದೇಹರೆಂಬ ರಾಕ್ಷಸರ ಭಯದಿಂದ ಸೂರ್ಯನು ತನ್ನ ಕಿರಣ ಪ್ರಸಾರ ಮಾಡದಿರಲು ಸಾಧ್ಯವೆ ? ೩೨. ಇನ್ನೊಬ್ಬರ ಕೃತಿಯಲ್ಲಿರುವ ಪದಾರ್ಥಾದಿಗಳಿಗೆ ಕೈದುಡುಕದ ಸತ್ಕವಿಯಾದವನ ಕಾವ್ಯ ಕಿರಿದಾದರೂ ಹಿರಿದೆನ್ನಿಸುವುದು. ಹೇಗೆ ಇನ್ನೊಬ್ಬರ ಐಶ್ವರ್ಯಕ್ಕೆ ಕೈಚಾಚದಿದ್ದ ಮಾನವನ ಐಶ್ವರ್ಯ

ಮಿಸುನಿಯುದೊಂದಾದೊಡದೇಂ
ಪೊಸತೊಡವೆನಿಸುತ್ತೆ ಬೇಱ ಬೇಱನಿಸುವವೊಲ್
ರಸವತ್ಕವಿತಾಮಾರ್ಗಂ
ರಸೆಯಲ್ಲಿ ವಿಚಕ್ಷಣರ್ಕಳಿಂ ಪೊಸತೆನಿಕುಂ ೩೩

ಭವ್ಯರ್ ಸತ್ಕೃತಿವೇಳ್ದರ್
ಕಾವ್ಯಾಲಾಪಾಂಶ್ಚ ವರ್ಜಯೇದೆಂಬುದಸ
ತ್ಕಾವ್ಯ ನಿಬಂಧನಮದಱಿಂ
ಸೇವ್ಯಂ ಸತ್ಕಾವ್ಯಮವನಿಯೊಳ್ ಬುಧಜನದಿಂ ೩೪

ಚಂ॥ ಮೊದಲ ಕವೀಂದ್ರರೊಲ್ದೊರೆದ ಸತ್ಕೃತಿಸಂಚಯಮೀ ಧರಿತ್ರಿಯೊಳ್
ಪುದಿದಿರೆ ನೋಡಿ ತುಷ್ಟಿವಡಲೊಲ್ಲದೆ ಕಬ್ಬಿಗರೇಕೆ ಕಬ್ಬಮಂ
ಗದಿಪರೊ ಬೇಱನುತ್ತೆ ನುಡಿವಳ್ಕಜಕಾಱನವಂಗೆ ಪುತ್ರಸಂ
ಪದಮೆ ದಲೇಕೆ ಬೇಱ ಪರಪುತ್ರರನೀಕ್ಷಿಪ ತುಷ್ಟಿ ಸಾಲದೇ ೩೫

ಎರವಿನ ಪಚ್ಚಮಂ ತಳೆದಿದಕ್ಕೆಣೆವಾರದಿದೆಂದು ಲೋಗರಾ
ಭರಣಮನೇಳಪಂತೆ ತನಗಿಲ್ಲದೆ ಸಾರಕವಿತ್ವಮನ್ಯಕಾ
ವ್ಯರುಚಿರ ಪದ್ಯಮಂ ಪಠಿಸಿ ಸತ್ಕವಿನಿರ್ಮಿತ ಪದ್ಯಮಿಂತಿದ
ಕ್ಕೊರೆಯೆಯೆನುತ್ತೆ ಕಾಳ್ಗೆಡೆವನಂ ನಗದಿರ್ಪರೆ ಬಲ್ಲ ಕಬ್ಬಿಗರ್ ೩೬

ಕಿರಿದಾಗಿದ್ದರೂ ಅದು ದೊಡ್ಡ ಐಶ್ವರ್ಯವೆಂದೆನಿಸುವುದೊ (ಹಾಗೆ). ೩೩. ಸುವರ್ಣವು ಒಂದೇ ಆದರೂ, ಅದು ಹೊಸ ಹೊಸ ಆಭರಣಗಳ ರೂಪಧರಿಸಿ ಬೇರೆ ಬೇರೆ ಹೆಸರುಗಳನ್ನು ಪಡೆಯುವಂತೆ, ನವರಸ ವಿಶಿಷ್ಟ ಕವಿತಾಮಾರ್ಗವು ಒಂದೇ ಆದರೂ ವಿದ್ವಾಂಸರಿಂದ (ಪ್ರತಿಭೆಯಿಂದ) ಬೇರೆ ಬೇರೆಯಾಗಿ (ರೂಪವನ್ನು ತಳೆದು) ಹೊಸದೆನಿಸುವುದು. ೩೪. ಜ್ಞಾನಿಗಳಾದವರು ಸತ್ಕೃತಿಗಳನ್ನು ರಚಿಸಿದರು. ಕಾವ್ಯಾಲಾಪವನ್ನು ವರ್ಜಿಸಬೇಕೆಂದು ಹೇಳಿದುದು ಅಸತ್ಕಾವ್ಯವಿಷಯಕವಾದ ಮಾತು. ಆದ್ದರಿಂದ ಸತ್ಕಾವ್ಯವೆಂಬುದು ಭೂಮಿಯಲ್ಲಿ ವಿದ್ವಾಂಸರಿಂದ ಸೇವ್ಯವೇ ಆಗಿದೆ. ೩೫. ಪೂರ್ವದ ಕವಿಶ್ರೇಷ್ಠರಿಂದ ಬರೆಯಲ್ಪಟ್ಟ ಸತ್ಕೃತಿ ಸಮೂಹವು ಈ ಭೂಮಂಡಲದಲ್ಲಿ ತುಂಬಿರುವಾಗ ಅದನ್ನು ನೋಡಿ ತುಷ್ಟಿಪಡದೆ ಕವಿಗಳು ಬೇರೆ ಕಾವ್ಯಗಳನ್ನೇಕೆ ಹೇಳುವರೋ ! ಎಂದು ಹೇಳುವ ಮಾತ್ಸರ್ಯಪರನಿಗೆ 'ಪುತ್ರ ಸಂಪತ್ತು ತನಗೇಕೆ ? ಬೇರೆಯವರ ಮಕ್ಕಳನ್ನು ಕಾಣುವ ತುಷ್ಟಿಯು ಸಾಲದೆ ?' (ಎನ್ನಬೇಕಾಗುತ್ತದೆ). ೩೬. ಎರವಲು ತಂದ ಆಭರಣಗಳನ್ನು ಧರಿಸಿ, ಬೇರೆಯವರ ಆಭರಣಗಳು ಇವಕ್ಕೆ ಸರಿಬಾರವೆಂದು ಹೀಯಾಳಿಸುವಂತೆ ತನಗೆ ಶ್ರೇಷ್ಠವಾದ ಕವಿತ್ವಶಕ್ತಿಯಿಲ್ಲದೆ ತನ್ನ ಕಾವ್ಯವೇ ಶ್ರೇಷ್ಠವೆಂದು ತಾನೇ ಭಾವಿಸಿಕೊಂಡು, ಅದರ ಒಂದು ರುಚಿರ ಪದ್ಯಪಠಣಮಾಡಿ, ಸತ್ಕವಿ ನಿರ್ಮಿತ ಪದ್ಯವು ಇದಕ್ಕೆ ಸಮವೆ ! ಎಂದು ಧಿಕ್ಕರಿಸುವವನನ್ನು ಕಂಡು ಬಲ್ಲಿದರಾದ ಕವಿಗಳು

ಕಂ|| ಕೃತಿ ಕಾದಂಬಿನಿರಸಮಂ
ಕ್ಷಿತಿಪಸಭಾಕ್ಷಿತಿಗೆ ಸುರಿವ ಸಮಯದೆ ಖಲಗ
ರ್ಜಿತ ಘನಘರ್ಜಿತಮೊದವಿದೊ
ಡತಿ ರಸವಿಸರಪ್ರಸಾರ ಕಾರಣಮಲ್ತೇ ೩೭

ಅಜನಜಗರ ಗರದಿಂದ
ಭ್ರಜಶಿಖಿರವದಿಂದೆ ಪುಲಿಯ ಕಾಯ್ಪಿಂ ನಿಸದಂ
ವೃಜಿನ ಘನ ಕುಜನ ಜನಮಂ
ಸೃಜಿಸಿದನಲ್ಲದೊಡವಂಗೆ ಜಗಮಂಜುವುದೇ ೩೮

ಸ್ಥಿತಿಯೊಳ್ ಸುಜನಂ ಸುಖದಂ
ಮೃತಿಯೊಳ್ ಕುಜನಂ ಜಗಜ್ಜನೌಘಕ್ಕಾದ್ಯಂ
ಮೃತಿಯೊಳ್ ದುಃಖದನಂತ್ಯಂ
ಸ್ಥಿತಿಯೊಳ್ ಪರಿಕಿಪ್ಪೊಡಿರ್ವರುಂ ಸರಿಯಲ್ತೇ ೩೯

ಚಂ|| ಪರಪರಿವಾದಮಂ ನೆಗಳ್ವುದೇ ಜಪಮನ್ಯಮನಃಪ್ರಸೂನಮಂ
ಕೊರಗಿಪುದೇ ತಪಂ ಪೆಱರ ಜೀವಿತಮಂ ಪರಿದಿಕ್ಕುವಂದಮೇ
ಪರತರ ಶೀಲಮಾದರಿಸಿ ಲೋಗರ ಮರ್ಮಮನೆಯ್ದೆ ಭೇದಿಪೊಂ
ದಿರದೆ ಪೊದಳ್ದ ಜಾನಮೆನೆ ದುರ್ಜನತಾಪಸನೇಂ ಕೃತಾರ್ಥನೋ ೪೦

ನಗದೆ ಇರುವರೆ ? ೩೭. ಸತ್ಕೃತಿಯೆಂಬ ಮೇಘಮಾಲೆಗಳು ರಾಜಸಭೆಯೆಂಬ ಭೂಮಿಗೆ ಸುರಿಯುತ್ತಿರುವ ಸಮಯದಲ್ಲಿ ದುಷ್ಟರ ದೂಷಣೆಯೆಂಬ ಗುಡುಗು ಗರ್ಜಿಸಿದರೆ ಆಗ ನವರಸವು (ಇನ್ನೂ) ವಿಶೇಷವಾಗಿ ಸುರಿಯಲು ಕಾರಣವಾಗುವುದಿಲ್ಲವೆ ? ೩೮. ಮಹಾಪಾಪಿಗಳಾದ ದುಷ್ಟಜನರನ್ನು ಬ್ರಹ್ಮನು ಮಹಾಸರ್ಪದ ವಿಷದಿಂದಲೂ ಮೇಘೋತ್ಪನ್ನ ಬೆಂಕಿಯ (ಸಿಡಿಲಿನ) ಧ್ವನಿಯಿಂದಲೂ ಹುಲಿಯ ಸಿಟ್ಟಿನಿಂದಲೂ ನಿಜ ವಾಗಿ ಸೃಷ್ಟಿಸಿದನು ; ಇಲ್ಲದಿದ್ದರೆ ಅವರನ್ನು ಕಂಡು ಜಗದ ಜನ ಅಂಜುತ್ತಿತ್ತೇ ? ೩೯. ಸಜ್ಜನನು ತಾನು ಬದುಕಿರುವಾಗ ಜಗಜ್ಜನಸಮೂಹಕ್ಕೆ ಸುಖವುಂಟುಮಾಡು ವನು. ದುಷ್ಟನು ಆ ಸುಖನನ್ನು ಸತ್ತಮೇಲುಂಟುಮಾಡುವನು. ಸತ್ಪುರುಷನು ಸತ್ತ ಮೇಲೆ ದುಃಖವನ್ನು ಜಗಜ್ಜನಕ್ಕುಂಟುಮಾಡುವನು ; ದುಷ್ಟನು ಜೀವದಿಂದಿರುವಾಗಲೇ ಮಾಡುವನು. ವಿಚಾರಿಸಿ ನೋಡಿದಾಗ ಈರ್ವರೂ ಸರಿಯೇ ಅಲ್ಲವೆ ! ೪೦. ದುರ್ಜನ ನೆಂಬ ತಾಪಸ ಕೃತಾರ್ಥನೇ. (ಏಕೆಂದರೆ ಅವನಿಗೆ) ಪರಾಪವಾದ ಮಾಡುವುದೇ ಜಪ ; ಪರರ ಮನಸ್ಸೆಂಬ ಹೂವನ್ನು ಬಾಡುವಂತೆ ಮಾಡುವುದೇ ತಪ ; ಇನ್ನೊಬ್ಬರ ಜೀವಿತ ವನ್ನು ಹಾಳುಮಾಡುವುದೇ ಶ್ರೇಷ್ಠಶೀಲ ; ಆದರಿಸಿ ಪರರ ಮರ್ಮ ಭೇದಿಸುವ ರೀತಿಯೇ

ಕಂ|| ಕಡಿವಡೆದುದೊ ನಂಜಿನ ಮು
ಳ್ಳುಡಿದುದೊ ಕಬ್ಬೊನ್ನ ಸರಳೆ ಕೀಲಿಸಿದುದೊ ಮೇ
ಣಡರ್ದುದೊ ಮೂಕಗ್ರಹಮೆನೆ
ಮಿಡುಕದು ಖಳರಸನೆ ಸುಕವಿಕಾವ್ಯಸ್ತವದೊಳ್ ೪೧

ಇಲ್ಲದ ದೋಷಮನಲ್ಲಿಯೆ
ಸೊಲ್ಲಿಪನದನೆಲ್ಲಿ ತರ್ಪನೋ ಖಳನಿದನೆ
ನ್ನಲ್ಲಿ ನೆಱೆ ತಿಳಿದೆನಬ್ಧಿಯೊ
ಳಿಲ್ಲದ ವಿಷಮಂ ಮಹಾಹಿಯೇಂ ತೋಱದೆ ಪೇಳ್ ೪೨

ಖಲ ಕರ್ಣವಿಲದೊಳಿಳಿದು
ಜ್ವಲಕೃತಿರಸದಿಂದೆ ನಂದಿತಕ್ಕುಂ ದ್ವೇಷ
ಜ್ವಲದಗ್ನಿಯಲ್ಲದೊಡೆ ಮುಖ
ವಲಯಮನಾವರಿಸಿ ಪೊಗೆಯುದೇಂ ತೋಱುಗುಮೇ ೪೩

ಘನಮಾರ್ಗ ಸುಭಗ ಸತ್ಕಾಂ
ತಿನಿಯುಕ್ತಂ ವಿಗತದೋಷಮಮೃತರುಚಿಸ್ಪ
ರ್ಧಿ ನವಕವಿ ಕಾವ್ಯರವಿ ದು
ರ್ಜನಘೂಕವ್ರಜಕಸಹ್ಯಮಂ ಪುಟ್ಟಿಸುಗುಂ ೪೪

ಉತ್ಕೃಷ್ಟಧ್ಯಾನ ! ೪೧. ಸತ್ಕವಿನಿರ್ಮಿತ ಕಾವ್ಯದ ಪ್ರಶಂಸಾವಿಷಯದಲ್ಲಿ ದುರ್ಜನನ ನಾಲಗೆ ಕತ್ತರಿಸಿಡೆಯೋ, ವಿಷದ ಮುಳ್ಳು ನಟ್ಟಿದೆಯೋ, ಕಬ್ಬಿಣ ಸಲಾಕೆ ನಟ್ಟಿದೆಯೋ ಎಂಬಂತೆ ಅದು ಮಿಡುಕುವುದೇ ಇಲ್ಲ ! ೪೨. (ಮಹಾಕಾವ್ಯದಲ್ಲಿ) ಇಲ್ಲದ ದೋಷ ವನ್ನು ದುಷ್ಟನು ಹೇಳುವನು. ಅದನ್ನು ಎಲ್ಲಿ ತರುವನೋ, ಓಹೋ ! ತಿಳಿಯಿತು ! ಸಮುದ್ರದಲ್ಲಿಲ್ಲದ ವಿಷವನ್ನು ಮಹಾಸರ್ಪವು ತೋರಿಸುವುದಿಲ್ಲವೆ ? ೪೩. ಉಜ್ವಲ ವಾದ ಕೃತಿ ದುಷ್ಟನ ಕಿವಿಯ ಮೂಲಕ ಇಳಿದು ಅವನ ಹೃದಯದ ದ್ವೇಷವೆಂಬ ಉರಿ ಯುವ ಬೆಂಕಿಯನ್ನು ನಂದಿಸುತ್ತದೆ. ಹಾಗೆ ನಂದಿಸದೆ ಹೋಗಿದ್ದರೆ ಅವನ ಮುಖ ಮಂಡಲವನ್ನಾವರಿಸಿದ ಹೊಗೆಯು ತೋರುತ್ತಿತ್ತೇ, ? ೪೪. ನಭೋಮಾರ್ಗದಲ್ಲಿ ಸಂಚರಿಸುವ ಸೂರ್ಯನು ಒಳ್ಳೆಯ ಕಾಂತಿಯಿಂದ ಕೂಡಿ, ಕತ್ತಲೆಯನ್ನು ದೂರೀಕರಿಸಿ, ಚಂದ್ರಕಿರಣ ಸ್ಪರ್ಧಿಯೆನಿಸಿ ಗೂಬೆಗಳಿಗೆ ಅಸಹ್ಯವನ್ನುಂಟುಮಾಡುವಂತೆ ಶ್ರೇಷ್ಠ ಕವಿತಾ ಮಾರ್ಗದಿಂದಲೂ, ಕಾಂತಿಗುಣದಿಂದಲೂ, ದೋಷರಾಹಿತ್ಯದಿಂದಲೂ, ಅಮೃತರುಚಿ ಸಮಾನರಸಾಭಿವ್ಯಂಜಕ ಗದ್ಯ ಪದ್ಯಗಳಿಂದ ಕೂಡಿದ ನೂತನ ಕಾವ್ಯವು ದುರ್ಜನರಿಗೆ

ತಿಳಿದನಿತನನುಭವಿಸಿ ನೆಱೆ
ತಿಳಿಯದುದಂ ತಿಳಿದಱಿಂದೆ ತಿಳಿವುದು ಕೃತಿಯೊಳ್
ಪೊಳೆವರ್ಥಮನದನೆ ಖಳಂ
ತಿಳಿಯದೆ ತಾಂ ಪಳಿಯೆ ಪಳಿಗೆ ಪಕ್ಕಾಗಿರನೇ ೪೫

ಸಲೆ ಸತ್ಕೃತಿಯೊಳ್ ದೋಷಮ
ನಲಸದೆ ನಡೆನೋಡಿ ನೋಡಿ ಕಾಣದೆ ಮನದೊಳ್
ಮಲಮಲನೆ ಮಱುಗುವೀ ಕೋ
ಟಲೆಯಿಂ ಖಳನೆಂತು ಬರ್ದುಕುವಂ ಭೂತಳದೊಳ್ ೪೬

ಆದಱಿಂ ದೋಷಾಭಾಸಮ
ನೊದವಿಪರೊಂದೆಡೆಗೆ ದುರ್ಜನಸ್ತುಪ್ಯತುಯೆಂ
ಬುದನನುಕರಿಸಿ ಕವೀಂದ್ರರ್
ಪದಪಿಂ ಕೃತಿಯೊಳ್ ಪರೋಪಕೃತಿಪರತಂತ್ರರ್ ೪೭

ಪಳಿಯಲ್ ಬಲ್ಲಂ ನೆಗಳಲ್
ಖಳನೇಂ ಬಲ್ಲನೆ ನವೀನಕಾವ್ಯಮನಿಳೆಯೊಳ್
ತೊಳಗುವ ರವಿಯುಂ ಮಸುಳಿಪ
ಜಳಧರಮದಱಂತೆ ಜಗಮನೇಂ ಬೆಳಗುಗುಮೇ ೪೮

ಅಸಹ್ಯವನ್ನುಂಟುಮಾಡುತ್ತದೆ. ೪೫. ಈ ಕೃತಿಯಲ್ಲಿ ತಿಳಿದಷ್ಟನ್ನು ಓದಿ ಅನುಭವಿಸಿ, ತಿಳಿಯದುದನ್ನು ತಿಳಿದವರಿಂದ ಕೇಳಿ ತಿಳಿಯಬೇಕು. ಸ್ಪಷ್ಟವಾಗಿ ಹೊಳೆಯುವ ಅರ್ಥವನ್ನು ದುಷ್ಟರು ತಿಳಿಯದೆ ನಿಂದಿಸಿದರೆ ಲೋಗರ ನಿಂದೆಗೆ ಪಾತ್ರನಾಗನೇ? ೪೬. ಸತ್ಕಾವ್ಯದಲ್ಲಿ ದೋಷವನ್ನು ಬೇಸರವಿಲ್ಲದೆ ಹುಡುಕಿ ಹುಡುಕಿ ಕಾಣದೆ, ಮನದಲ್ಲಿ ಮಮ್ಮಲ ಮರುಗುವ ದುಷ್ಟನು ಈ ಕೋಟಲೆಯಿಂದ ಈ ಭೂಮಿಯಲ್ಲಿ ಹೇಗೆ ಬದುಕುವನೋ ! ೪೭. ಆದುದರಿಂದ ಪರೋಪಕಾರಬುದ್ಧಿಯ ಕವೀಶ್ವರರು ದುರ್ಜನರೂ ತುಷ್ಟಿ ಹೊಂದಲಿ ಎಂಬುದನ್ನು ಅನುಸರಿಸಿ ದೋಷದಂತೆ ಕಾಣುವ ನುಡಿಯನ್ನು ತಮ್ಮ ಕಾವ್ಯದಲ್ಲಿ ಒಂದೊಂದು ಕಡೆ ಹೇಳುತ್ತಾರೆ ೪೮. ದುಷ್ಟನಾದವನು ನವೀನಕಾವ್ಯವನ್ನು ದೂಷಿಸಲು ಬಲ್ಲನಲ್ಲದೆ ರಚಿಸಲು ಬಲ್ಲನೇ ? ಪ್ರಕಾಶಮಾನವಾದ ಸೂರ್ಯನ ಬೆಳಕನ್ನು ಕಡಿಮೆ ಮಾಡಲು ಮೋಡವು ಸಮರ್ಥವಾಗುವುದೇ ವಿನಾ ಸೂರ್ಯನಂತೆ ಸ್ವತಃ ಪ್ರಕಾಶವನ್ನುಂಟು

ಸುಕವಿ ಗುಣರಚಿತಕೃತಿ ಚಂ
ಪಕಮಾಲಿಕೆಗಕಟ ಮಳಿನನವಮಳಿನ ಸುಮನಃ
ಪ್ರಕರಮನಲೆದೆಱಗುವ ಧೂ
ರ್ತಕದಂಬಭ್ರಮರ ನಿವಹವೇಸೆಱಗುಗುಮೇ ೪೯

ರಸಿಕಕವಿ ರಚಿತಕೃತಿ ಮಾ
ನಸಸರೊಳ್ವಿಹರಿಪ ವಿದಗ್ಧ ವಿಮಳಮರಾಳಂ
ವಸಿಯಿಕುಮೆ ಕುಕವಿಕೃತಕೃತಿ
ವಿಸರತ್ಪಲ್ವಲದೊಳಬುಧಬಕಸೇವಿತದೊಳ್ ೫೦

ಚಂ॥ ಒರೆಯೆ ಸುವರ್ಣರೇಖೆ ಮಿಗೆ ಬಾರದೊಡಂ ಪೊಸಚಿನ್ನದಂತೆ ಕಂ
ಡರಸಿದೊಡಿಕ್ಷುಕಾಂಡಮೆನೆ ಸೀಯನೆ ಸದ್ರುಸಮುಣ್ಮದಿರ್ದೊಡಂ
ಸರಗೊಳಿಸುತ್ತೆ ತಾಳೆ ಮಣಿಮಾಲಿಕೆಯಂತೆ ಕೊರಳ್ಗೆ ಕಾಂತಿಯಂ
ನೆರಪದೊಡಂ ರಸಜ್ಞ ಸುಮನೋಜ್ಞಮೆ ಕಾವ್ಯಮದುಂ ಧರಿತ್ರಿಯೊಳ್ ೫೧

ಕಂ॥ ಕವಿ ವಿಬುಧರ ಕಿವಿಯೊಳ್ ಸೂ
ಸುವ ನವರಸಮಿಳಿದು ತೀವಿ ತನುವಂ ಮನಮಂ
ಕವಿದು ಪೊಱಸೂಸಿತೆನೆ ಪೊ
ಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯಂ ೫೨

ಮಾಡಲು ಸಮರ್ಥವಾಗುವುದಿಲ್ಲ. ೪೯. ಮಲಿನವಾದ ಹೂಗಳಲ್ಲಿ ಮತ್ತು ದೋಷ ಯುಕ್ತ ಕವಿಗಳ ರಚನೆಯಲ್ಲಿ ಅಲೆಯುವ ಖಳಸಮುದಾಯವೆಂಬ ಭ್ರಮರಸಮೂಹವು ಸತ್ಕವಿಯಿಂದ ರಚಿತವಾದ ಉತ್ತಮ ಗುಣಗಳಿಂದ ಕೂಡಿದ ಕೃತಿಯೆಂಬ ಸಂಪಿಗೆ ಹೂವಿನ ಮಾಲೆಗೆ ಅಕ್ಕಟಾ ! ಎರಗುತ್ತದೆಯೆ ? ೫೦. ರಸಿಕನಾದ ಕವಿಯಿಂದ ರಚಿಸ ಲ್ಪಟ್ಟ ಕೃತಿಯೆಂಬ ಮಾನಸಸರೋವರದಲ್ಲಿ ವಿಹರಿಸುವ ಪಂಡಿತನೆಂಬ ನಿರ್ಮಲ ಹಂಸ ಪಕ್ಷಿಯು ದುಷ್ಕವಿ ನಿರ್ಮಿತ ಅಜ್ಞಾನಿಗಳೆಂಬ ಬಕಪಕ್ಷಿಗಳಿಂದ ಕೂಡಿದ ಚಿಕ್ಕಕೆರೆಯೆಂಬ ಕೃತಿಯಲ್ಲಿ ವಿಹರಿಸುವುದೇ ? ೫೧. ಪರೀಕ್ಷಿಸಿ ನೋಡಿದಾಗ ಹೊಸ ಚಿನ್ನದಂತೆ ಕಂಡು ಒರೆಗೆ ಹಚ್ಚಿದಾಗ ಸುವರ್ಣದ ಬಣ್ಣ ಬಾರದಿದ್ದರೆ, ಹಿಂಡಿದಾಗ ಕಬ್ಬಿನ ಕೋಲಿನಂತೆ ಚಿಲ್ಲೆಂದು ಸಿಹಿರಸವು ಹೊರಹೊಮ್ಮದಿದ್ದರೆ, ಸರವನ್ನಾಗಿ ಮಾಡಿ ಧರಿಸಿದಾಗ ಮಣಿಸರ ದಂತೆ ಕೊರಳಿಗೆ ಕಾಂತಿಯನ್ನುಂಟುಮಾಡದಿದ್ದರೆ ಅಂಥ ಕಾವ್ಯವು ಭೂಮಿಯಲ್ಲಿ ರಸಾ ಸ್ವಾದನ ಪರಿಣತಮತಿಗಳಿಗೆ ಮನೋಹರವೆನಿಸೀತೇ ? ೫೨. ಕವೀಶ್ವರರ ಜ್ಞಾನಿಗಳ ಕಿವಿಯಲ್ಲಿ ನವರಸವು ತುಂಬಿ ಅದು ಅವರ ತನುವಿಗೂ ಮನಕ್ಕೂ ಇಳಿದು ತುಂಬಿ ಹೊರ ಸೂಸಿತೋ ಎನ್ನುವಂತೆ ಆನಂದಬಾಷ್ಪಗಳು ತುಳುಕುವಂತೆ ಕಾವ್ಯವನ್ನು ರಚಿಸಬೇಕು.

ಮ॥ ಸ್ರ॥ ಶಿವವಕ್ಷೋಭಸ್ಮರೇಣುಪ್ರಭವನೆನಿಸಿ ಮುಂ ರೇಣುಕೇಶಾಖ್ಯೆಯಂ ತಾ
ಳ್ದವನೀರಕ್ಷಾರ್ಥಮೀಶಂ ಬೆಸಸೆ ಧರಣಿಯೊಳ್ ಕೊಲ್ಲಿಪಾಕೀಶನೊಳ್ ಸಂ
ಭವಿಸುತ್ತುಂ ಜಂಗಮಾಕಾರದೆ ಸುಳಿದಖಿಳಕ್ಷೇತ್ರಮಂ ಪಾವನಂಗೆ
ಯ್ವು ವಿಶೇಷೌನ್ನತ್ಯದಿಂ ಕುಂಭಜಮುಖಮುನಿಪವ್ರಾತಮಂ ಬೋಧಿಸುತ್ತುಂ ೫೩

ಚಂ॥ ಖಗತಿಯೊಳೆಯ್ದಿ ಲಂಕೆಗೆ ವಿಭೀಷಣನಿಷ್ಟಮನಿತ್ತು ಸಿದ್ಧರಂ
ಬಗೆಗೆಡಿಸುತ್ತೆ ಬಿಜ್ಜಳನನಳ್ಕಿಸಿ ನೇತ್ರಮನಿತ್ತು ತೆಲ್ಲಿಗಂ
ಗೆ ಗರುಡವಾಹಕಂಪನಮನಿಲ್ಲೆನಿಸುತ್ತೆ ನಿಜೋರುತೇಜದಿಂ
ದಗಣಿತಮಾದ ಪೆಣ್ಸೆಱೆಗಳಂ ಬಿಡಿಸುತ್ತುರುವಿಕ್ರಮಾರ್ಕನಾ ೫೪

ಅಭಿಮತಮಿತ್ತು ಖರ್ಪರನ ಭಂಗಿಸಿ ಯಕ್ಷನ ರಕ್ಷಿಸುತ್ತೆ ಬಂ
ದಭವನನುಜ್ಞೆಯಿಂ ಮದುವೆನಿಂದು ಮಹೀಶ್ವರಪುತ್ರಿಯರ್ಕಳೊಳ್
ವಿಭವದೆ ತದ್ವಧೂತತಿಯೊಳಗ್ಗಳ ಭೋಗಮನಾಂತು ರೇವಣ
ಪ್ರಭು ಪಡೆದಂ ಮಹೋತ್ಸವದೆ ರುದ್ರಮುನೀಶ್ವರನೆಂಬ ಪುತ್ರನಂ ೫೫

ಸ್ರ॥ ಕಾರುಣ್ಯಂಗೆಯ್ದು ಸದ್ದೀಕ್ಷೆಯನೆಸಗಿ ಲಸಚ್ಛಿವಕ್ರಿಯಾಮಾರ್ಗಮಂ ಪೇ
ಳ್ದಾ ರಾಜತ್ಸೂನುಗಾಚಾರ್ಯತೆಯನೊಸೆದು ತಾನಿತ್ತುಮೇಶಾಜ್ಞೆಯಿಂದಿಂ
ತೀರೇಳ್ನೂರ್ವತ್ಸರಂಗಳ್ಕಿಱಿಯೆ ಭರದೊಳಾ ಕೊಲ್ಲಿಪಾಕೀಶನೊಳ್ಪೊ
ಕ್ಕಾರಾಧ್ಯಂ ಮುಕ್ತಿರಾಮಾರಮಣನೆನಿಸಿದಂ ರೇಣುಕಾಚಾರ್ಯವರ್ಯಂ ೫೬

೫೩. ಶಿವನ ವಕ್ಷಸ್ಥಳದ ಭಸ್ಮರೇಣುವಿನಿಂದ ಹುಟ್ಟಿ, ರೇಣುಕೇಶ್ವರನೆಂಬ ಹೆಸರನ್ನು ಹೊಂದಿ, ಭೂರಕ್ಷಣಾರ್ಥವಾಗಿ ಈಶ್ವರಾಜ್ಞೆಯಂತೆ ಕೊಲ್ಲಿಪಾಕಿಯೆಂಬ ಊರಿನಲ್ಲಿರುವ ಲಿಂಗದಿಂದ ಉದ್ಭವಿಸಿ, ಜಂಗಮಾಕಾರದಿಂದ ಸಂಚರಿಸಿ, ಸಮಸ್ತ ಕ್ಷೇತ್ರಗಳನ್ನು ಪವಿತ್ರಗೊಳಿಸಿ, ಔನ್ನತ್ಯದಿಂದ ಕೂಡಿದ ಅಗಸ್ತ್ಯನೇ ಮೊದಲಾದ ಮುನಿಗಳಿಗೆ ಬೋಧೆ ಮಾಡುತ್ತ ೫೪. ಆಕಾಶಮಾರ್ಗದಿಂದ ಲಂಕೆಗೆ ಹೋಗಿ, ಅಲ್ಲಿ ವಿಭೀಷಣನ ಇಷ್ಟಾರ್ಥವನ್ನು ಸಲ್ಲಿಸಿ, ಸಿದ್ಧರನ್ನು ದಿಕ್ಕುಗೆಡಿಸಿ, ಬಿಜ್ಜಳನೆಂಬ ರಾಜನನ್ನಂಜಿಸಿ, (ಹುಟ್ಟು ಗುರುಡನಾದ) ಗಾಣಿಗನಿಗೆ ಕಣ್ಣಿತ್ತು, ವಿಷ್ಣುವಿನ ಶಿರದ ಆಲ್ಲಾಟವನ್ನು ನಿಲ್ಲಿಸಿ, ಸ್ವತೇಜದಿಂದ ಅಗಣಿತ ಸ್ತ್ರೀಯರ ಸೆರೆಬಿಡಿಸಿ, ವಿಕ್ರಮಾಂಕ ಮಹಾರಾಜನ ಅಭೀಷ್ಟವನ್ನು ನೆರವೇರಿಸಿ ೫೫. ಖರ್ಪರನೆಂಬ ಯೋಗಿಯನ್ನು ಭಂಗಪಡಿಸಿ, ಯಕ್ಷನನ್ನು ಕಾಪಾಡಿ, ಪರಮಾತ್ಮನ ಆಜ್ಞಾನುಸಾರ ರಾಜಪುತ್ರಿಯರನ್ನು ವೈಭವದಿಂದ ವಿವಾಹವಾಗಿ ಆ ವಧೂಸುಖವನ್ನು ಅನುಭವಿಸಿ ರೇವಣಪ್ರಭುವು ಮಹೋತ್ಸವದಿಂದ ರುದ್ರಮುನೀಶ್ವರನೆಂಬ ಪುತ್ರನನ್ನು ಪಡೆದನು. ೫೬. ಆ ತೇಜಸ್ವಿಯಾದ ಮಗನಿಗೆ ಕಾರುಣ್ಯದೋರಿ ದೀಕ್ಷೆಯಿತ್ತು ಶ್ರೇಷ್ಠವಾದ ಶಿವಯೋಗಕ್ರಿಯಾಚಾರ ಮಾರ್ಗವನ್ನು ತಿಳಿಸಿ, ಆಚಾರ್ಯತ್ವವನ್ನು ಪ್ರೀತಿಯಿಂದ ಕೊಟ್ಟು ಪರಮೇಶ್ವರಾಜ್ಞಾನುಸಾರೇಣ ಹದಿನಾಲ್ಕುನೂರು ವರ್ಷಗಳು ಸಾಗಲು ಕೊಲ್ಲಿಪಾಕಿಯ ಶಿವಲಿಂಗದಲ್ಲಿ ಹೊಕ್ಕು ಆರಾಧ್ಯವರ್ಯನಾದ ರೇಣುಕಾಚಾರ್ಯನು

ಉ॥ ರುದ್ರಮುನೀಂದ್ರನಾಮ ಮುನಿಮುಖ್ಯನಿಳಾತಳದಲ್ಲಿ ಪೆರ್ಮೆವೆ
ತ್ತದ್ರಿಜೆಯಾಣ್ಮನರ್ಗಳ ಮಹತ್ವಮನೆಲ್ಲೆಡೆಯಲ್ಲಿ ತೋಱುತಂ
ಕ್ಷುದ್ರಮತಂಗಳಂ ಜಯಿಸಿ ಬೆಳ್ಪಸಮೆಣ್ದೆಸೆದೀವೆ ಸಂತತಂ
ಭದ್ರಚರಸ್ವರೂಪನೆಸೆದಂ ನಿಗಮಾಗಮಶಾಸ್ತ್ರಪಾರಗಂ ೫೭

ಆ ಗುರುನಾಥವಂಶದೊಳೆ ಪುಟ್ಟಿದನೊರ್ವನಖರ್ವ ಸರ್ವಶೈ
ವಾಗಮವೇದಿ ನಿರ್ಜಿತಮನೋಜನಿಳಾತಳರುದ್ರಮೂರ್ತಿ ಸ
ದ್ಯೋಗಿವರೇಣ್ಯನಾನತಸುರಾಗನರಾಗನಗಣ್ಯಪುಣ್ಯಶೋ
ಭಾಗತವಿಗ್ರಹಂ ವಿಪುಳಶೈವಸುಧಾಂಬುಧಿ ಶರ್ವರೀಶ್ವರಂ ೫೮

ಜ್ಞಾನನಿಧಾನನಾನತಜನಪ್ರಸರಾಮರಭೂರುಹಂ ಸುಧಾ
ಭಾನುಸಮಾನಕೀರ್ತಿ ಶಿವಮೂರ್ತಿ ಮುನೀಶ್ವರ ಚಕ್ರವರ್ತಿ ಧಾ
ತ್ರೀನ ವಿತಾನಮಾನಿತಪದಂ ಪದೆದೊಪ್ಪಿದನುತ್ತಮಭಾವನು
ದ್ಧಾನ ನವೀನನಾಮಚರಪುಂಗವನಂಗಜಮಾನಮರ್ದನಂ ೫೯

ಆ ಶಿವಯೋಗಿಯ ಹಸ್ತಕಮಳೋದರದೊಳ್ ಮಿಗೆ ಪುಟ್ಟಿ ಭಕ್ತಿಯಿಂ
ಶ್ರೀ ಶಿವನಂಘ್ರಿಯಂ ಭಜಿಸಿ ತತ್ಕೃಪೆಯಿಂ ಘನಶಿಷ್ಯವೃಂದಮಂ
ದೇಶಿಕ ಶೇಖರಂ ಪಡೆವುತಾತ್ಮಸಮಾನರನುರ್ವಿಗನ್ನದಾ
ನೀಶನೆನಿಪ್ಪ ನಾಮಮಭಿರಾಮತೆವೆತ್ತಿರೆ ತೋರ್ದನೂರ್ಜಿತಂ ೬೦

ಮುಕ್ತಿಕಾಂತೆಯ ರಮಣನೆನಿಸಿದನು. ೫೭. ವೇದಾಗಮಶಾಸ್ತ್ರಪಾರಂಗತನೂ ಜಂಗಮ ವರೇಣ್ಯನೂ ಆದ ರುದ್ರಮುನೀಂದ್ರನಾಮದ ಮುನಿಶ್ರೇಷ್ಠನು ಭೂಮಂಡಲದಲ್ಲಿ ಅತ್ಯಂತ ಘನತೆಯನ್ನು ಹೊಂದಿ, ಶಿವಮಾಹಾತ್ಮೆಯನ್ನೆಲ್ಲೆಡೆಯಲ್ಲಿ ತೋರಿಸಿ, ಕ್ಷುದ್ರಮತಗಳನ್ನು ಜಯಿಸಿ, ಧವಳಕೀರ್ತಿಯನ್ನು ಅಷ್ಟದಿಕ್ಕುಗಳಲ್ಲಿ ತುಂಬಿ ಸಂತತ ಮಂಗಳ ಚರಮೂರ್ತಿ ಯೆನಿಸಿದನು. ೫೮. ಆ ರುದ್ರಮುನೀಶ್ವರ ಗುರುನಾಥನ ವಂಶದಲ್ಲಿ ಒಬ್ಬ ಶ್ರೇಷ್ಠನೂ, ಸರ್ವಶಿವಾಗಮಜ್ಞನೂ, ಮನ್ಮಥವಿಜಯಿಯೂ, ಭೂರುದ್ರನೂ, ಶಿವಯೋಗ ಶ್ರೇಷ್ಠನೂ, ಆನತರಾದವರಲ್ಲಿ ಅನುರಾಗವುಳ್ಳವನೂ, ರಾಗರಹಿತನೂ, ಅಗಣಿತ ಪುಣ್ಯದಿಂದ ಶೋಭಾ ವಹಮೂರ್ತಿಯೂ ಎನಿಸಿ ವಿಶಾಲವಾದ ಶೈವವೆಂಬ ಕ್ಷೀರಸಾಗರಕ್ಕೆ ಚಂದ್ರನಂತಿರು ವವನು ಹುಟ್ಟಿದನು. ೫೯. ಜ್ಞಾನನಿಧಿಯೂ ಆನತರಾದ ಜನಸಮೂಹಕ್ಕೆ ಕಲ್ಪವೃಕ್ಷ ಸಮನೂ, ಚಂದ್ರಸಮಾನ ಯಶಸ್ಸುಳ್ಳವನೂ, ಶಿವಸ್ವರೂಪನೂ, ಮುನೀಶ್ವರ ಚಕ್ರವರ್ತಿಯೂ, ಭೂಮೀಶ್ವರ ಸಮೂಹದಿಂದ ಮನ್ನಣೆಗೊಂಡ ಪಾದವುಳ್ಳವನೂ, ಅತ್ಯಂತ ಪ್ರಭಾವಶಾಲಿಯಾದವನೂ, ಮನ್ಮಥನ ಅಹಂಕಾರವನ್ನು ಹೋಗಲಾಡಿಸಿ ದವನೂ, ಉದ್ಧಾನನೆಂಬ ನವೀನನಾಮಕ ಚರವರೇಣ್ಯನೂ ಪ್ರಖ್ಯಾತನಾಗಿ ಶೋಭಿಸಿ ದನು. ೬೦. ಆ ಶಿವಯೋಗಿಯ ಹಸ್ತಕಮಲ ಗರ್ಭದಲ್ಲಿ ದೇಶಿಕವರೇಣ್ಯನಾದ ಅನ್ನದಾ ನೀಶನೆಂಬ ಹೆಸರಿನ ಶಿವಯೋಗಿಯು ಹುಟ್ಟಿ, ಭಕ್ತಿಯಿಂದ ಶಿವಾಂಘ್ರಿಯನ್ನು ಭಜಿಸಿ, ಆ

ಚಂ॥ ಶಿವನ ಗುಣಂ ಪುರಾಂತಕನ ವಿಕ್ರಮಮಿಂದುಕಳಾಕಪರ್ದನು
ತ್ಸವಮಹಿರಾಜಭೂಷಣನ ಮೈಮೆ ಮಹೇಶನ ಭಾಗ್ಯಮಂಬಿಕಾ
ಧವನ ಜಸಂ ಗಿರೀಶ್ವರನ ಗೌರವಮೊರ್ಬುಳಿಗೊಂಡು ಪುಟ್ಟಿದಂ
ತೆವೊಲೊಗೆದಂ ತದೀಯ ಕರಕಂಜದ ರೇವಣಸಿದ್ಧದೇಶಿಕಂ ೬೧

ಕಂ॥ ಧರಣೀರಮಣಿಯ ಹೃದಯಾಂ
ಬುರುಹದವೊಲ್ ಮೆಱೆದುತೋರ್ಪ ದನುಗೂರೊಳ್ ಭಾ
ಸುರಕರ್ಣಿಕೆವೊಲ್ ರಾಜಿಪ
ವರಮಠದೊಳ್ ಪರಮಹಂಸನೆನೆ ರಂಜಿಸಿದಂ ೬೨

ಮ॥ ಶಿವಪೂಜಾರತಿಯಿಂ ರತೀಶ್ವರಜಯಪ್ರಾಗಲ್ಭ್ಯ ಸದ್ವೃತ್ತಿಯಿಂ
ವಿವಿಧಾಮ್ನಾಯವಿಚಾರದಿಂ ಶರಣಗೋಷ್ಠೀಸಾರಸಲ್ಲಾಪದಿಂ
ಭುವನಸ್ತುತ್ಯನಶೇಷ ಶಿಷ್ಯತತಿಯಿಂ ತಾನೊಪ್ಪಿದಂ ಶಂಭುಸಂ
ಭವತದ್ರೇಣುಕರೂಪ ರೇವಣಮಹಾಯೋಗೀಂದ್ರಪಂಚಾನನಂ ೬೩

ಕೃಪೆಯಿಂದ ತನಗೆ ಸಮಾನರಾದ ಶ್ರೇಷ್ಠ ಶಿಷ್ಯಸಮೂಹವನ್ನು ಪಡೆದು ಖ್ಯಾತನಾಮ ನಾಗಿ ಊರ್ಜಿತಗೊಂಡು ಭೂಮಿಯಲ್ಲಿ ತೋರಿದನು. ೬೧. ಆತನ ಕರಕಮಲದಲ್ಲಿ ಶಿವನ ಗುಣ, ತ್ರಿಪುರಾಂತಕನ ಪರಾಕ್ರಮ, ಚಂದ್ರಕಳೆಯನ್ನು ಜಡೆಯಲ್ಲಿ ಧರಿಸಿದ ಈಶ್ವರನ ಸೌಂದರ್ಯ, ಆದಿಶೇಷಭೂಷಣನ ಮಹಿಮೆ, ಮಹೇಶ್ವರನ ಭಾಗ್ಯ, ಪಾರ್ವತೀಶನ ಯಶಸ್ಸು, ಗಿರೀಶ್ವರನ ಗೌರವ-ಇವೆಲ್ಲ ಒಟ್ಟಾಗಿ ಸೇರಿ ಹುಟ್ಟಿದಹಾಗೆ ರೇವಣಸಿದ್ಧ ದೇಶಿಕನು ಹುಟ್ಟಿದನು. ೬೨. ಆ ಯತೀಶ್ವರನು ಭೂದೇವಿಯ ಹೃದಯಕಮಲದಂತೆ ಮೆರೆದುತೋರುವ ದನುಗೂರಿನಲ್ಲಿ ಪ್ರಕಾಶಿಸುವ ಕರ್ಣಿಕೆಯಂತೆ ಶೋಭಿಸುವ ಶ್ರೇಷ್ಠ ಮಠದಲ್ಲಿ ಪರಮಯೋಗೀಶ್ವರನಾಗಿ ರಂಜಿಸಿದನು. ೬೩. ಶಂಭುವಿನ ಉರಸ್ಥಲದ ಭಸ್ಮ ರೇಣು ಪ್ರಭುವೆನಿಸಿದ ರೇಣುಕರೂಪದ ರೇವಣ ಮಹಾಯೋಗಿಸಿಂಹನು ಶಿವಪೂಜಾ ಸಕ್ತಿಯಿಂದಲೂ, ಮನ್ಮಥವಿಜಯದ ಪ್ರಗಲ್ಭತೆಯಿಂದಲೂ, ಸದ್ವೃತ್ತಿಯಿಂದಲೂ, ವಿವಿಧ ವೇದವಿಚಾರಗಳಿಂದಲೂ, ಶಿವಶರಣಸಮೂಹದಲ್ಲಿ ಸಾರವತ್ತಾದ ಸಲ್ಲಾಪ ದಿಂದಲೂ, ಭೂಮಿಯ ಜನರಿಂದ ಸ್ತುತ್ಯರಾದಂಥ ಸಮಸ್ತ ಶಿಷ್ಯಸಮೂಹದಿಂದಲೂ

ಕಂ॥ ವರವಾಣಿ ವಿಬುಧಸೇವಿತ
ಚರಣಂ ಕಲ್ಯಾಣಗರ್ಭನಾಗಿಯುಮಜನಂ
ತಿರೆ ಜಡಜಜನೆನಿಸದೆ ತ
ದ್ಗುರುಕರಕಂಜಾತಜಾತನೆನಿಸಿದನೀತಂ ೬೪

ಚಂ॥ ಮಣಿಯದ ಮಾನ್ಯರಿಲ್ಲ ತಲೆವಾಗದ ವಾದಿಗಳಿಲ್ಲ ಬಂದು ಸಂ
ದಣಿಸದ ಸಂತರಿಲ್ಲ ನಡೆನೋಳ್ಪೊಡೆ ಬಾರದ ರಾಜರಿಲ್ಲ ಕೂ
ರ್ತೆಣಿಸದ ಧೀರರಿಲ್ಲ ನುತಿಗೆಯ್ಯದ ಕಬ್ಬಿಗರಿಲ್ಲ ಸಾರಸ
ದ್ಗುಣಮನೆನಲ್ ಧರಾತಳದೊಳೊಪ್ಪಿದನಾ ಚಿಕವೀರದೇಶಿಕಂ ೬೫

ಉ॥ ಕ್ಷೀರಪಟೀರ ಹೀರಘನಸಾರ ಸುಶಾರದನೀರದೋರುಮಂ
ದಾರ ತುಷಾರವಾರ ವರಹಾರ ಸರೋರುಹಸಾರ ಸಾರಿಬ್ಬಂ
ದಾರಕವಾರಣಾರುಚಿರ ನಾರದತಾರ ಸಮಾರಭುಗ್ವರೋ
ದ್ಗಾರಯಶಂ ವಿರಾಜಿಸಿದುದೆಣ್ದೆಸೆಯೊಳ್ ಚಿಕವೀರದೇವನಾ ೬೬

ಶೋಭಿಸುತ್ತಿದ್ದನು. ೬೪. ರೇವಣಯತಿಯು ಶ್ರೇಷ್ಠವಾಕ್ಕಿನಿಂದ ಕೂಡಿದ ವಿದ್ವಾಂಸರಿಂದ ಸ್ತುತಿಸಲ್ಪಡುವ ಚರಣವುಳ್ಳವನೂ, ಮಂಗಳಕರ ಗರ್ಭವುಳ್ಳವನೂ, ಶ್ರೇಷ್ಠಳಾದ ಸರಸ್ವತಿಯಿಂದ ಮತ್ತು ಇಂದ್ರಾದಿ ದೇವತೆಗಳಿಂದ ವಂದಿಸಲ್ಪಡುವ ಚರಣವುಳ್ಳವನೂ, ಹಿರಣ್ಯಗರ್ಭನೂ ಆದವನು ಬ್ರಹ್ಮನು ; (ಹೀಗೆ ಆ ಯತಿಯು ಬ್ರಹ್ಮನಂತಿರೆ) ಕಮಲದಲ್ಲಿ ಜನಿಸಿದವನೆನಿಸದೆ ತನ್ನ ಗುರುವಿನ ಕರಕಮಲದಲ್ಲಿ ಜನಿಸಿದವನಾಗಿದ್ದನು.[1] ೬೫. ನಮಸ್ಕರಿಸದ ಮಾನ್ಯರಿರಲಿಲ್ಲ ; ತಲೆಬಗ್ಗಿಸದ ತಾರ್ಕಿಕರಿರಲಿಲ್ಲ ; ಗುಂಪು ಗುಂಪಾಗಿ ಬಾರದ ಸಂತರಿರಲಿಲ್ಲ ; ಚೆನ್ನಾಗಿ ವಿಚಾರಿಸಿ ನೋಡಿದರೆ (ಹತ್ತಿರಕ್ಕೆ) ಬಾರದ ರಾಜರೇ ಇಲ್ಲ ; ಸ್ನೇಹದಿಂದ ಗಣನೆಗೆ ತಾರದ ಧೀರರೇ ಇರಲಿಲ್ಲ ; ಸಾರಸದ್ಗುಣ ಸಮೂಹವನ್ನು ಸ್ತುತಿಮಾಡದಿರುವ ಕವಿಗಳೇ ಇರಲಿಲ್ಲ – ಎನ್ನುವಂತೆ ಚಿಕ್ಕವೀರದೇಶಿಕನು ಧರಾತಳದಲ್ಲಿ ಶೋಭಿಸುತ್ತಿದ್ದನು. ೬೬. ಹಾಲು, ಶ್ರೀಗಂಧ, ವಜ್ರಮಣಿ, ಪಚ್ಚಕರ್ಪೂರ, ಶರದೃತುವಿನ ಮೇಘ, ಶ್ರೇಷ್ಠ ಮಂದಾರ ಪುಷ್ಪ, ಮಂಜಿನ ಸಮೂಹ, ಶ್ರೇಷ್ಠ ಮುತ್ತಿನಸರ, ಬೆಳ್ದಾವರೆ, ಚಂದ್ರ, ಐರಾವತ, ಮನೋಹರ ನಾರದ, ಬೆಳ್ಳಿ, ಆದಿಶೇಷ ಇವುಗಳ ಬಿಳುಪಿನಂತೆ ಆ ಚಿಕ್ಕವೀರದೇಶಿಕನ ಅತಿಯಾದ ಶುಭ್ರಯಶಸ್ಸು ಅಷ್ಟ

1. ಕಲ್ಯಾಣ = ಮಂಗಳ; ಚಿನ್ನ. ಜಡಜಜ = ಕಮಲಜ–ಜಡನಿಂದ ಹುಟ್ಟಿದವನ ಮಗ. ವ್ಯತಿರೇಕಾಲಂಕಾರ (ರಂ)

ಚಂ॥ ಜನನುತ ಶಾಂತಿಭೂಷನ ಜಗಜ್ಜನವಂದ್ಯನ ಧರ್ಮಪೂರ್ಣಕೋ
ಶನ ಧರಣೀಶಪೂಜ್ಯನ ಶುಭಾವಹಭಾವನ ಶೈವಪಾರಿಜಾ
ತನ ಮಧುರಸ್ವಭಾವನ ಮಹಾಮಹಚಿತ್ತನ ಮನ್ಮಥಾರಿರೂ
ಪನ ಚಿಕವೀರದೇವನ ಚಿದಂಬರಶಂಬರಜಾತಮಿತ್ರನಾ ೬೭

ಮ॥ ಕರಕಂಜಾತಸುಜಾತನುತ್ತಮಜನಾನಂದಾಬ್ಧಿರಾಕಾಸುಧಾ
ಕರನುದ್ಯತ್ಕವಿತಾಲತಾರ್ಜಿತ ಯಶಃಪುಷ್ಪೋದಯಂ ಸಾಂಬಶಂ
ಕರಪಾದಾಬ್ಜಮಧುವ್ರತಂ ಸುಕವಿವೃಂದಸ್ತೋತ್ರಪಾತ್ರಂ ಷಡ
ಕ್ಷರಿದೇವಂ ಸರಸಪ್ರಬಂಧ ಸುಭಗಾಂಭೋಜಪ್ರಭಾವಲ್ಲಭಂ ೬೮

ಕಂ॥ ಜಸವೆತ್ತು ಪೆರ್ಮೆ ಮಿಗೆ ರಂ
ಜಿಸೆ ವಸುಧಾತಳದೊಳಖಿಳ ಕಳೆಗಳನೊಳಕೊಂ
ಡೆಸೆವ ಬುಧರಾಜರಾಸಂ
ದಿಸಿ ಸಲೆ ಕೊಂಡಾಡಿ ಕೂರ್ಮೆಯಿಂದಿಂತೆಂದರ್ ೬೯

ಎಳವರೆಯದೊಳಖಿಳಕಳಾ
ವಿಳಾಸಮಂ ಕಂಡು ಮಚ್ಚಿ ಬರೆ ಕವಿತಾಕೋ
ಮಳೆಯವಳ್ಗೆರ್ದೆಯಿತ್ತುಂ ಯತಿ
ತಿಳಕಂ ನೀನೆನಿಪುದಿಳೆಗಿದಚ್ಚರಿಯಲ್ತೇ ೭೦

ದಿಕ್ಕುಗಳಲ್ಲೂ ಪ್ರಕಾಶಿಸುತ್ತಿತ್ತು. ೬೭. ಜನಸಮೂಹದಿಂದ ಸ್ತೋತ್ರಮಾಡಲ್ಪಡುವ ಶಾಂತಿಭೂಷಣನ, ಜಗಜ್ಜನರಿಂದ ವಂದಿಸಲ್ಪಡುವವನ, ಧರ್ಮಬುದ್ಧಿಯಿಂದ ತುಂಬಿದ ಕೋಶವುಳ್ಳವನ, ರಾಜಪೂಜಿತನ, ಶುಭವಾದ ಭಾವನಾವಿಶಿಷ್ಟನ, ಶಿವಸಿದ್ಧಾಂತ ಕಲ್ಪ ವೃಕ್ಷ ಸಮಾನನ, ಮಧುರಸ್ವಭಾವವುಳ್ಳವನ, ಮಹತ್ತರವಾದ ಚಿತ್ತವುಳ್ಳವನ, ಶಿವ ಸ್ವರೂಪನ, ಜ್ಞಾನವೆಂಬ ಆಕಾಶಕ್ಕೆ ಸೂರ್ಯಪ್ರಾಯನ ಆ ಚಿಕವೀರದೇಶಿಕೇಂದ್ರನ ೬೮. (ಆ ಚಿಕವೀರದೇಶಿಕೇಂದ್ರನ) ಕರಕಮಲದಲ್ಲಿ ಹುಟ್ಟಿದವನೂ, ಉತ್ತಮರಾದ ಜನರ ಆನಂದವೆಂಬ ಸಮುದ್ರಕ್ಕೆ ಹುಣ್ಣಿಮೆಯ ಚಂದ್ರನಂತಿರುವವನೂ, ಶ್ರೇಷ್ಠಕವಿತಾವಲ್ಲಿ ಯಿಂದ ಸಂಪಾದಿಸಿದ ಯಶಸ್ಸೆಂಬ ಪುಷ್ಪೋದಯಸದೃಶನೂ, ಪಾರ್ವತೀಶನಾದ ಶಂಕರನ ಪಾದಕಮಲಗಳಲ್ಲಿ ಭೃಂಗದೋಪಾದಿಯಲ್ಲಿರುವವನೂ, ಸತ್ಕವಿಸಮೂಹದ ಸ್ತೋತ್ರಕ್ಕೆ ಪಾತ್ರನೂ (ಆದ) ಷಡಕ್ಷರಿದೇವನು ರಸವಿಶೇಷದಿಂದ ಕೂಡಿದ ಪ್ರಬಂಧಗಳೆಂಬ ತೇಜೋವಿಶಿಷ್ಟಕಮಲಗಳಿಗೆ ಸೂರ್ಯನೋಪಾದಿಯಲ್ಲಿರುವವನಾಗಿದ್ದಾನೆ. ೬೯. (ಅವನು) ಭೂಮಿಯಲ್ಲಿ ಯಶಸ್ಸನ್ನು ಪಡೆದು ಅತ್ಯಂತ ಹಿರಿಮೆಯಿಂದ ಶೋಭಿಸುತ್ತಿರಲು, ಅಖಿಲ ಕಲೆಗಳಿಂದ ಕೂಡಿ ಶೋಭಿಸುವ ಜ್ಞಾನಿಗಳು ಆನಂದಿಸಿ ಕೊಂಡಾಡಿ ಪ್ರೀತಿಯಿಂದ ಹೀಗೆ ಹೇಳಿದರು: ೭೦. ಚಿಕ್ಕಪ್ರಾಯದಲ್ಲಿಯೇ ಸಮಸ್ತ ಕಲೆಗಳ ಪ್ರಾವೀಣ್ಯವನ್ನು ಕಂಡು ಕವಿತಾಕೋಮಲೆಯು ಮೆಚ್ಚಿಬರೆ ಅವಳಿಗೆ ಎದೆಯಿತ್ತು ಯತಿಶ್ರೇಷ್ಠನೆನಿಸಿರುವುದು

ಇಂಗಡಲೊಡನಾಡಿಯೊ ನಿಜ
ದಿಂಗಳ ಸೋದರವೊ ಸುದತಿಯಧರಾಮೃತದಿಂ
ಪಿಂಗಿದು ಗುರುವೊ ಸುಧಾರಸ
ಮಂ ಗೆಲ್ದಂಕವೊ ಭವದ್ವಚಸ್ಸಮುದಯವೋ ೭೧

ಚಂ॥ ನಿನಗೆ ನಿಸರ್ಗಮಲ್ತೆ ನಿರಹಂಕೃತಿ ನಿರ್ಮಳಬುದ್ಧಿ ಶುದ್ಧವ
ರ್ತನೆ ಶಿವಯೋಗಮಾಗಮ ವಿಚಾರತೆ ಸದ್ಗುರುಭಕ್ತಿ ಶೈವಕಾ
ವ್ಯನಿವಹ ಸತ್ಪುರಾಣತತಿ ತರ್ಕಸಮುಂಚಿತ ಷಟ್‌ಸ್ಥಲಾಂಕಶಾ
ಸ್ತ್ರನಿಚಯ ಸಾರದರ್ಶನಮಿಳಾಪತಿಪೂಜಿತಪಾದಪಂಕಜಾ ೭೨

ವ॥ ಎಂದು ಮನಂದಂದು ಕೀರ್ತಿಸಿ ಮತ್ತಮಿಂತೆಂದರ್

ಸ್ರ॥ ಶ್ರೀಮತ್ಕೈಲಾಸದೊಳ್ ಶಂಕರನಿರೆ ಸಭೆಯೊಳ್ ಬಂದು ಮೆಯ್ಯಿಕ್ಕಿ ಬೊಮ್ಮಂ
ಸ್ವಾಮಿ ಶ್ರೀಕಂಠ ನಿಮ್ಮಾಜ್ಞೆಯೊಳೆ ಗುಹನನೊಲ್ದೋದಿಸಲ್ಕೆಂದು ಮುನ್ನಾಂ
ಪ್ರೇಮಂಬೆತ್ತೊಪ್ಪುವೋಂಕಾರಮನೆ ಬರೆಯೆ ಕೋರ್ಥೋಸ್ಯಮೇ ಬ್ರೂಹಿಯೆಂದೆಂ
ಬೀ ಮಾತಂ ಪೇಳೆ ಮುಂ ಕೇಳ್ವುದೆ ಲಘುವೆನೆ ಪೊಯ್ದಂ ಕಶಾದಂಡದಿಂದಂ ೭೩

ಕಂ॥ ವೇದಾಂಗವದನನಿವನೊಳ್
ವಾದಿಸುವುದಯುಕ್ತಮೆಂದು ತತ್ಪ್ರಣವಕ್ಕಾ
ನೋದಿದೆನುಚಿತಗ್ರಂಥಮ
ನಾದರದಿಂ ದೇವ ಪನ್ನೆರಳ್ಪಾಸಿರಮಂ ೭೪

ಭೂಮಿಯಲ್ಲಿ ಆಶ್ಚರ್ಯವಲ್ಲವೆ ! ೭೧. (ಹೇ ಷಡಕ್ಷರಕವಿಯೇ,) ನಿನ್ನ ಮಾತಿನ ಸಮುದಯವಾದರೊ ಕ್ಷೀರಸಮುದ್ರದ ಒಡನಾಡಿಯೊ ! ಪೂರ್ಣಚಂದ್ರನೊಡನೆ ಹುಟ್ಟಿದುದೊ ! ಕಾಂತೆಯ ಅಧರಾಮೃತದ ಮೂಲಸ್ಥಾನವೊ ! ಅಮೃತರಸವನ್ನು ಗೆದ್ದ ಕುರುಹೋ ! (ಎನ್ನುವಂತಿವೆ.) ೭೨. ನಿರಹಂಕಾರ ನಿರ್ಮಳವಾದ ಬುದ್ಧಿ, ಶುದ್ಧನಡೆ, ಶಿವಯೋಗ, ಆಗಮವಿಷಯಕ ವಿಚಾರ, ಸದ್ಗುರುವಿಷಯಕಭಕ್ತಿ, ಶಿವಸಂಬಂಧದ ಕಾವ್ಯ ಸಮೂಹ, ಪುರಾಣತತಿ, ತರ್ಕದಿಂದ ಕೂಡಿರುವ ಷಟ್‌ಸ್ಥಲಸಂಬಂಧ ಶಾಸ್ತ್ರಸಮೂಹ ದರ್ಶನಗಳು ರಾಜಪೂಜಿತಪಾದಕಮಲನಾದ ನಿನಗೆ ನಿಸರ್ಗದತ್ತವಾಗಿ ಬಂದವುಗಳಾಗಿವೆ. ವ॥ ಎಂದು ಮನಮುಟ್ಟಿ ಹೊಗಳಿ ಮತ್ತು ಹೀಗೆ ಹೇಳಿದರು ೭೩. ಮಂಗಳಕರ ಕೈಲಾಸದ ಸಭೆಯಲ್ಲಿ ಶಂಕರನು ಇದ್ದಾಗ (ಒಮ್ಮೆ) ಬ್ರಹ್ಮನು ಬಂದು ನಮಸ್ಕರಿಸಿ, "ಶ್ರೀಕಂಠನೇ, ನಿಮ್ಮ ಆಜ್ಞೆಯಂತೆ ಷಣ್ಮುಖನಿಗೆ ಪ್ರೀತಿಯಿಂದ ವಿದ್ಯಾಭ್ಯಾಸ ಮಾಡಿಸಬೇಕೆಂದು ಮೊದಲು ನಾನು ಪ್ರೇಮದಿಂದ ಓಂಕಾರವನ್ನು ಬರೆದುಕೊಡಲು (ಅವನು) ಇದಕ್ಕೆ ಏನರ್ಥ ಹೇಳೆನ್ನಲು ಮೊದಲು ಇದರ ಅರ್ಥವನ್ನು ಕೇಳುವುದು ಲಘುವಾದುದೆಂದೆನ್ನಲು (ನನ್ನನ್ನು) ಚಾಟಿಯಿಂದ ಹೊಡೆದನು. ೭೪. ಹೇ ದೇವನೇ, ಆರುಮುಖದ ಈ ಸ್ವಾಮಿಯೊಡನೆ ವಾದಿಸುವುದು ಯುಕ್ತವಲ್ಲವೆಂದು ಆ ಪ್ರಣವಕ್ಕೆ ಆದರದಿಂದ ನಾನು

ಮ॥ ಅದನಾಕರ್ಣಿಸಿ ಜಾಡ್ಯಬುದ್ಧಿ ತೊಲಗೆಂದೇಳ್ತಂದನಿಲ್ಲೀದೆ ಮೇ
ಲೆ ದಯಾವಾರಿಧಿ ನೀಂ ನಿರೂಪಿಸೆನೆ ಕೇಳೆಂದೋದಿದಂ ಶಂಭು ಸಂ
ಮದದಿಂ ದ್ವಾದಶಲಕ್ಷಮಂ ಪ್ರಣವದರ್ಥಗ್ರಂಥಮಂ ಕೇಳ್ದು ಷ
ಡ್ವದನಂ ದ್ವಾದಶಕೋಟಿಯುಂಟೆನೆ ಮಹೇಶಂ ಮಚ್ಚಿ ಸಂಪ್ರೀತಿಯಿಂ ೭೫

ಉ॥ ಅಂದಗಜಾತೆಗಾನೊರೆವ ಕಾಲದೊಳಾಲಿಸಿ ಬಾಲನೀ ಕುಮಾ
ರಂ ದಿಟಮಂತದಂ ಮಱೆದನಲ್ಲೆನುತಂ ಪೊಗಳ್ದಲ್ಲಿ ಪೋಗು ಸೈ
ಪೊಂದಿದ ಚೋಳಮಂಡಳದ ಶೈವಸಮೂಹಕೆ ಮಂತ್ರದರ್ಥಮಂ
ಕುಂದದೆ ಬೋಧಿಸೆಂದುಸುರ್ದು ಕಂಜಜನಂ ಕರೆದೊಲ್ದು ಶಂಕರಂ ೭೬

ಶಾ॥ ವಾಗೀಶಾಹ್ವಯಮಾಂತು ಪುಟ್ಟಿ ತಿಳಿ ನೀನೀ ಮಂತ್ರದರ್ಥಂಗಳಂ
ಪೋಗೆಂದಾದೊಡಗೂಡಿ ಪೇಣ್ಮಳುಪೆ ಚೋಳೋರ್ವೀತಳಕ್ಕೈದಿ ಸ
ದ್ರಾಗಂ ಕೈಮಿಗೆ ತಾಮವಂಗಱುಪುವಾಗಳ್ ಪಿಳ್ಳೈನೈನಾರರಿಂ
ಬಾಗಿರ್ದೊಂದಿತಿಹಾಸಮಂ ದ್ರವಿಡಭಾಷಾಭೇದದಿಂ ಮಾಡಿದರ್ ೭೭

೧೨ ಸಾವಿರ ಗ್ರಂಥಸಂಖ್ಯೆಯ ಉಚಿತಾರ್ಥವನ್ನು ಹೇಳಿದೆನು. ೭೫. ಅದನ್ನು ಕೇಳಿ (ಷಣ್ಮುಖಸ್ವಾಮಿಯು) 'ಮಂದಬುದ್ಧಿಯುಳ್ಳವನೇ ! ತೊಲಗಾಚೆ' ಎಂದು ಇಲ್ಲಿಗೆ ಬಂದನು. ಆತನು 'ಇನ್ನು ಮುಂದೆ ದಯಾಸಮುದ್ರನಾದ ಶಿವನೇ, ನೀನೇ ಹೇಳು' ಎನ್ನಲು ಶಂಭುವು ಕೇಳೆಂದು ಹನ್ನೆರಡು ಲಕ್ಷ ಗ್ರಂಥಸಂಖ್ಯೆಯ ಪ್ರಣವಾರ್ಥಗಳನ್ನು ಹೇಳಿದನು. (ಆಗ) ಷಡಾನನನು ಕೇಳಿ, ೧೨ ಕೋಟಿ ಗ್ರಂಥಸಂಖ್ಯೆಯುಂಟೆನ್ನಲು ಪರಮೇಶ್ವರನು ಮೆಚ್ಚಿ ಪ್ರೀತಿಯಿಂದ ೭೬. ಪೂರ್ವದಲ್ಲಿ ಪಾರ್ವತಿಗೆ(ಈ ಷಡಕ್ಷರ ಮಂತ್ರದರ್ಥವನ್ನು) ಹೇಳುವ ಕಾಲದಲ್ಲಿ ಬಾಲಕನಾದ ಈ ಕುಮಾರನು ಕೇಳಿ ಅದನ್ನು ಮರೆತಿಲ್ಲ ಎಂದು ಹೊಗಳಿ, ಪುಣ್ಯಭೂಮಿಯಾದ ಚೋಳಮಂಡಳದ ಶೈವಭಕ್ತಸಮೂಹಕ್ಕೆ ಈ ಮಂತ್ರದರ್ಥವನ್ನು ಕುಂದಿಲ್ಲದಂತೆ ಬೋಧಿಸೆಂದು ಹೇಳಿ, ಬ್ರಹ್ಮನನ್ನು ಪರಮೇಶ್ವರನು ಪ್ರೀತಿಯಿಂದ ಕರೆದು, ೭೭. ನೀನು ವಾಗೀಶನೆಂಬ ಹೆಸರಿನಿಂದ ಚೋಳದೇಶದಲ್ಲಿ ಹುಟ್ಟಿ, ಈ ಮಂತ್ರದರ್ಥಗಳನ್ನು ತಿಳಿ ಎಂದು ಅಂದೇ ಕುಮಾರಸ್ವಾಮಿಯೊಡನೆ ಕಳುಹಿಸಲಾಗಿ, ಚೋಳಮಂಡಳಕ್ಕೆ ಬಂದು ವಾಗೀಶನಾಗಿ ಹುಟ್ಟಿದ ಕುಮಾರಸ್ವಾಮಿಯು ಅತ್ಯಂತ ವಾತ್ಸಲ್ಯದಿಂದ ವಾಗೀಶನಾಗಿ ಹುಟ್ಟಿದ ಬ್ರಹ್ಮನಿಗೆ ಆ ಮಂತ್ರಾರ್ಥ ಬೋಧೆಮಾಡುವಾಗ ಪಿಳ್ಳೈನೈನಾರರು ವಿಸ್ತಾರವಾದ ಒಂದು ಇತಿಹಾಸವನ್ನು ದ್ರಾವಿಡಭಾಷಾಭೇದದಿಂದ

ಉ॥ ಆ ಕಥೆಯಂ ಕೃತಾರ್ಥ ಸುಮನೋಲತೆಯಂ ವರಮಲ್ಲಣಾರ್ಯರು
ರ್ವೀಕವಿರಾಜರಾಜಿನುತಮಾಗಿರೆ ವರ್ಣಕದಿಂದೆ ಭಾವರ
ತ್ನಾಕರಮಾಗೆ ಪೇಳ್ದರದನೊಪ್ಪಿರೆ ವಸ್ತುಕಮಾಗಿ ಪೇಳ್ವುದಾ
ಲೋಕಿತ ಕಾವ್ಯಬೃಂದದೊಳಗಿಲ್ಲದ ಮಂಜುಳಯುಕ್ತಿಪುಂಜದಿಂ ೭೮

ವ॥ ಎನೆ ಮನಂದಂದು

ಕಂ॥ ಮೃದುಮಧುರಪದವಿಳಾಸಾ
ಸ್ಪದರಸವಿಸರಪ್ರಕಾಶ ಕರ್ಣಾಟಕವಿ
ತ್ವದೊಳೊರ್ವನೆ ಪೆಸರ್ವಡೆದ
ಗ್ಗದ ಹರಿಹರನುದಿತಮಾರ್ಗದಿಂದಿದನೊರೆವೆಂ ೭೯

ಮೊದಲೊರೆದ ಕೃತಿಗಳಿರೆ ಪೇ
ಳ್ವುದು ಮೆಱೆಯದಿದೆನ್ನದಿರ್ಕೆ ವಿಬುಧರ್ ಮೊದಲ
ಗ್ಗದ ಸಕ್ಕದಮಿರೆ ಕನ್ನಡ
ಮುದಯಿಸಿ ರಂಜಿಸದೆ ಕರ್ಣಕಮನೀಯತೆಯಿಂ ೮೦

ರಚಿಸಿದರು. ೭೮. ಪುಣ್ಯಶಾಲಿಗಳಿಗೆ ಕಲ್ಪವೃಕ್ಷದಂತಿರುವ ಆ ಕಥೆಯನ್ನು (ಗುಬ್ಬಿಯ) ಮಲ್ಲಣಾರ್ಯರು ಭೂಮಿಯ ಕವಿರಾಜರ ಸಮೂಹದಿಂದ ಸ್ತುತಿಸಲ್ಪಡುವಂತೆ ಷಟ್ಪದಿ ರೂಪವಾಗಿ ಭಾವರತ್ನಾಕರವಾಗುವಂತೆ ಹೇಳಿದರು. ಅದನ್ನು ಒಪ್ಪಿ, ಚಂಪೂ ರೂಪದಲ್ಲಿ ಈವರೆಗೆ ಅವಲೋಕಿಸಲ್ಪಟ್ಟ ಕಾವ್ಯಸಮೂಹದಲ್ಲಿಲ್ಲದ ಮಂಜುಳ ಮಾತುಗಳ ಸಮೂಹದಿಂದ ಹೇಳಬೇಕೆಂದು ವಿದ್ವಾಂಸರು ಹೇಳಿದರು. ವ॥ ಆಗ ನಾನು ಮನಸ್ಸು ಮಾಡಿ, ೭೯. ಮೃದುಮಧುರವಾದ ಪದಗಳ ಸೌಂದರ್ಯಕ್ಕೆ ಆಸ್ಪದವೂ, ನವರಸ ಸಮೂಹ ದಿಂದ ಪ್ರಕಾಶಮಾನವೂ ಆಗುವಂತೆ ಕರ್ನಾಟಕ ಭಾಷಾಕವಿತ್ವದಲ್ಲಿ ಪ್ರಖ್ಯಾತನಾದ ಏಕೈಕಕವಿ ಹರಿಹರನ ಶ್ರೇಷ್ಠ ರೀತಿಯನ್ನನುರಿಸಿ ಈ ರಾಜಶೇಖರವಿಳಾಸವನ್ನು ರಚಿಸು ತ್ತೇನೆ. ೮೦. ಈ ಮೊದಲು ರಚಿಸಿದ ಕೃತಿಗಳಿರುವಾಗ ಈಗ ಈ ಕೃತಿಯನ್ನು ಹೇಳುವುದು ಶೋಭಿಸುವುದಿಲ್ಲವೆಂದು ವಿದ್ವಾಂಸರು ಹೇಳದಿರಲಿ. (ಏಕೆಂದರೆ) ಮೊದಲು ಶ್ರೇಷ್ಠವಾದ ಸಂಸ್ಕೃತ ಕಾವ್ಯಗಳಿದ್ದರೂ ಕನ್ನಡಭಾಷೆಯು ಉದಯಗೊಂಡು ಕಿವಿಗಳಿಗೆ ರಮಣೀಯ

ಕಾವ್ಯಮೆನಿಸಿರ್ದು ವಿಬುಧಸು
ಸೇವ್ಯಂ ಘನರಸಮಿದೆನಿಸಿ ಭಂಗವಿರಹಿತಂ
ಭವ್ಯಗುಣಮೆನಿಸಿ ಕುಜನಾ
ಭಾವ್ಯಂ ಮತ್ಕೃತಿ ಚಮತ್ಕೃತಿಪ್ರದಮಲ್ತೇ* ೮೧

ಚಂ॥ ಸರಸಿಜದಂತೆ ಸಾರಗುಣಮರ್ಣವದಂತೆ ರಸಾರ್ದ್ರಮರ್ಕನಂ
ತಿರೆ ಘನಮಾರ್ಗಶೋಭಿ ವನಿತಾಜನದಂತಿರೆ ಭಾವಜಾತಿ ಬಂ
ಧುರಮಮರಾದ್ರಿಯಂತೆ ವಿಬುಧಾವಳಿಸೇವಿತಮಿಂದುಬಿಂಬದಂ
ತಿರೆ ಸುಕರಪ್ರಸಿದ್ಧಮೆನಿಕುಂ ವಿಳಸತ್ಕೃತಿ ಸನ್ಮನೋಜ್ಞನಾ ೮೨

ವಾದ ಕಾವ್ಯಗಳಿಂದ ರಂಜಿಸುತ್ತಿಲ್ಲವೆ ? ೮೧. (ವಿರೋಧಾರ್ಥ)–(ನನ್ನ ಕಾವ್ಯವು) ಶುಕ್ರಾಚಾರ್ಯನೆನಿಸಿಯೂ ದೇವತೆಗಳಿಂದ ಸೇವಿಸಲ್ಪಡುವಂತಹದು. ಮೇಘರಸ (ನೀರು) ವೆನಿಸಿದರೂ ತರಂಗರಹಿತವಾದುದು. ಉತ್ತಮ ಗುಣವುಳ್ಳದ್ದಾದರೂ ಭೂಮಿಯಲ್ಲಿರುವ ಜನರಿಗೆ ಅಗ್ರಾಹ್ಯವಾದುದು. (ವಿರೋಧ ಪರಿಹಾರ) (ಗದ್ಯಪದ್ಯಾತ್ಮಕ ಚಂಪೂ) ಕಾವ್ಯವೆನಿಸಿಕೊಂಡಿದ್ದು ಪಂಡಿತರಿಂದ ಸೇವಿಸಲ್ಪಡುವಂತಹುದು. ಶ್ರೇಷ್ಠವಾದ ಶೃಂಗಾರಾದಿ ರಸವಿಶಿಷ್ಟವೆನಿಸಿ ಛಂದೋಭಂಗಾದಿ ದೋಷರಹಿತವಾದುದು. ಶ್ರೇಷ್ಠವಾದ ಕಾವ್ಯ ಗುಣಗಳಿಂದ ಕೂಡಿ ದುರ್ಜನರಿಗೆ ಅರ್ಥವಾಗದಿರುವಂತಹುದು. (ಇಂಥ ನನ್ನ ಕೃತಿ) ಚಮತ್ಕಾರದಿಂದ ಕೂಡಿದುದಲ್ಲವೆ. ೮೨. ಒಳ್ಳೆಯ ಮನೋಹರನಾದ (ಷಡಕ್ಷರಿ) ಕವಿಯ ಈ ಶ್ರೇಷ್ಠಕೃತಿಯು ಕಮಲದಂತೆ ಸಾರವಾದ ಎಳೆಗಳಿಂದ ಕೂಡಿದ್ದು, ಕಾವ್ಯದ ಸಾರವತ್ತಾದ ಗುಣಗಳಿಂದ ಕೂಡಿದುದು; ಸಮುದ್ರದಂತೆ ಸದಾ ಜಲಭರಿತ–ಶೃಂಗಾರಾದಿ ನವರಸಗಳಿಂದ ಕೂಡಿದುದು; ಸೂರ್ಯನಂತೆ ಘನಮಾರ್ಗ (ಆಕಾಶಮಾರ್ಗ) ಶೋಭಿ–ಶ್ರೇಷ್ಠ ಕವಿತಾಮಾರ್ಗದಲ್ಲಿ ಶೋಭಿಸುವಂತಹುದು; ಸ್ತ್ರೀಯರಂತೆ ಕಾಮಭಾವದಿಂದ ಅತಿಶಯವಾಗಿ ಕೂಡಿರುವುದು–ಅನೇಕ ಭಾವಗಳ ಸಮೂಹದ ಬಂಧುರಶೈಲಿಯಿಂದ ಕೂಡಿದುದು; ಅಮರಾದ್ರಿಯಂತೆ ದೇವತೆಗಳ ಸಮೂಹದಿಂದ ಸೇವಿಸಲ್ಪಡುವುದು–ಪಂಡಿತ ಸಮೂಹದಿಂದ ಸೇವಿಸಲ್ಪಡುವಂತಹುದು. ಚಂದ್ರಬಿಂಬದಂತೆ ಶೀತಕಿರಣಗಳಿಂದ ಆನಂದ

---

*ಕಾವ್ಯ = ಶುಕ್ರ, ಕಾವ್ಯ, ವಿಬುಧ = ದೇವತೆ, ವಿದ್ವಾಂಸ. ಕುಜನ = ಭೂಮಿಯಲ್ಲಿರುವ ಜನ; ದುಷ್ಟ

ಅತಿರಸವೃತ್ತ್ಯಲಂಕೃತಿ ಸಮನ್ವಿತಪದ್ಧತಿ ಸಾರವಿಚ್ಛಮ
ತ್ಕೃತಿ ಕರಭಾವಸಂಗತಿ ನವೀನಗುಣೋನ್ನತಿ ಸತ್ಕವೀಂದ್ರಸಂ
ತತಿ ಸರಸೋಕ್ತಿಸನ್ನುತಿ ಬುಧವ್ರಜಸಮ್ಮತಿ ಮಂಜುಳಾರ್ಥಸು
ಸ್ಥಿತಿ ನವರೀತಿ ಸದ್ರತಿಯೊಡರ್ಚುವುದೀ ಕೃತಿ ಸದ್ಗುಣಾಂಕನಾ ೮೩

ಉ॥ ತಂಬೆಲರಂತೆ ತುಂಬುವೆಳಿ೯ಯಿಂ ಪೊಱಪೊಣ್ಮುವ ಜೊನ್ನದಂತೆ ಪೆ
ಣ್ದುಂಬಿಯ ಗಾನದಂತೆ ಪೊಸಸುಗ್ಗಿಯ ನಂದನದಂತೆ ನಲ್ಮೆಯಿಂ
ದಂ ಬಿಗಿದಪ್ಪಿದಂಗನೆಯ ಪೆರ್ಮೊಲೆಸೋಂಕಿನ ಸೌಖ್ಯದಂತೆ ಚಿ
ತ್ತಂಬಿಡಿದಪ್ಪುದೀ ಕೃತಿ ಷಡಕ್ಷರಿದೇವಕೃತಂ ರಸಜ್ಞರಾ ೮೪

ಚಂ॥ ನುತರಸಸಂಪದಂ ಪದಮುದರ್ಥಸಮನ್ವಿತಮರ್ಥಮಾರ್ಯಸ
ಮ್ಮತಗುಣರಂಜಿತಂ ಗುಣಮುದಾತ್ತ ನವಸ್ಥಿತಿವೃತ್ತಿ ವೃತ್ತಿನಿ
ರ್ಮಿತ ಸರಸಾನುಭಾವಮುರುಭಾವಮುದಂಚಿತ ರೀತಿ ರೀತಿವಿ
ಶ್ರುತ ಸದಲಂಕೃತಿ ಸ್ಫುರದಲಂಕೃತಿ ರಂಜಿಪುದೀ ಪ್ರಬಂಧದೊಳ್ ೮೫

ದಾಯಕ—ಮಂಗಲಕರವಾದುದಾಗಿ ಪ್ರಸಿದ್ಧವೆನಿಸಿರುವುದು. ೮೩. ಉತ್ತಮ ಗುಣಗಳಿಗೆ ಕುರುಹಾಗಿ ಉಳ್ಳ (ಷಡಕ್ಷರಿ) ಕವಿಯ ಈ ಕೃತಿಯು ಅತಿಶಯವಾದ ಶೃಂಗಾರಾದಿ ನವ ರಸ, ಶಬ್ದಾರ್ಥವೃತ್ತಿ, ಉಪಮಾದಿ ಅಲಂಕಾರ ಸಮನ್ವಿತವಾಗಿದೆ. ಕವಿತಾಪದ್ಧತಿ, ಕವಿತಾಸಾರಗ್ರಾಹಿಗಳಾದ ಪಂಡಿತರಿಗೆ ಚಮತ್ಕಾರವನ್ನುಂಟುಮಾಡುವಂತಹುದು. ಭಾವಾವಿಷ್ಟವಿಷಯ ಸಮೂಹದ್ದು; ನೂತನ ಕಾವ್ಯಗುಣಗಳ ಆಧಿಕ್ಯವುಳ್ಳದ್ದು ; ಸತ್ಕವೀಶ್ವರಸಮೂಹದ ರಸಭರಿತ ಮಾತುಗಳಿಂದ ನುತಿಸಲ್ಪಡುವಂತಹದು; ಜ್ಞಾನಿಗಳ ಸಮೂಹಕ್ಕೆ ಸಮ್ಮತವಾದುದು; ಮನೋಹರಾರ್ಥಗಳಿಂದ ಉತ್ತಮ ಸ್ಥಿತಿಯಲ್ಲಿರುವಂತ ಹುದು;ನೂತನರೀತಿಯಲ್ಲಿ ಪವಿತ್ರರತಿಯನ್ನು (ಓದುಗರಿಗೆ) ಉಂಟುಮಾಡುವುದು. ೮೪. ಷಡಕ್ಷರಿದೇವನಿಂದ ರಚಿಸಲ್ಪಟ್ಟ ಈ ಕೃತಿಯು ತಂಗಾಳಿಯಂತೆ, ಪೂರ್ಣಚಂದ್ರ ನಿಂದ ಹೊರಹೊಮ್ಮುವ ಬೆಳದಿಂಗಳಂತೆ, ಹೆಣ್ಣುದುಂಬಿಯ ಝೇಂಕಾರದಂತೆ, ವಸಂತ ಮಾಸದ ನಂದನದ ಹಾಗೆ, ಪ್ರೀತಿಯಿಂದ ಬಿಗಿದಪ್ಪಿಕೊಂಡ ಸ್ತ್ರೀಯ ದೊಡ್ಡಸ್ತನಸ್ಪರ್ಶದ ಸೌಖ್ಯದಂತೆ ಮನಸ್ಸಿಗೆ ಒಪ್ಪುವಂತಹುದು. ೮೫. ಶ್ಲಾಘ್ಯವಾದ ರಸಗಳ ಸಂಪತ್ತು ಳ್ಳುದು ; ಪದವಾದರೊ ಅರ್ಥಸಮನ್ವಿತವಾದುದು; ಅರ್ಥವು ವಿದ್ವಾಂಸರಿಗೆ ಒಪ್ಪಿಗೆ ಯಾಗುವಂತಹ ಗುಣದಿಂದ ಶೋಭಿಸುವಂತಹದು ; ಕಾವ್ಯಗುಣಗಳೋ ಉದಾತ್ತವಾದ ನೂತನವೃತ್ತಿಯಲ್ಲಿ ನೆಲೆಸಿರುವುವು. ಆ ವೃತ್ತಿಯಾದರೊ ನವರಸಾನುಭವಗೊಳಿ ಸುವಂತಹುದು; ಶ್ರೇಷ್ಠ ಭಾವಪ್ರಕಾಶನ ರೀತಿಯುಳ್ಳದ್ದು; ರೀತಿಗಳಾದರೊ ಪ್ರಸಿದ್ಧವಾದ ಒಳ್ಳೆಯ ಅಲಂಕಾರಗಳಿಂದ ಕೂಡಿದುದು; ಅಲಂಕಾರಗಳು ಸ್ಫುರಿಸುವಂತಹವು. (ಇವೆಲ್ಲ)

ಕಂ॥ ವಿತತ ಪುರಾತನಕವಿಕೃತ
ಕೃತಿಭೂಷಣ ಭೂಷಿತಾಂಗಿ ಭಾರತಿ ಭುವನ
ಸ್ತುತ ಕಾಂತಿಗುಣಮಿಳಿತ ಮ
ತ್ಕೃತಿ ನವಸೀಮಂತರತ್ನಮಂ ತಳೆದೆಸೆವಳ್ ೮೬

ಮ॥ ಕಡೆಗಾಣರ್ಗಡ ವಿಷ್ಣುಮುಖ್ಯ ವಿಬುಧರ್ ಕಲ್ಪಾಂತಪರ್ಯಂತಮಾ
ಮೃಡಮಾಹಾತ್ಮ್ಯಮನಾಗಳುಂ ಪೊಗಳ್ದುಮೆಂದೇಬಾಗಳಾಂ ಪೇಳ್ವೆನೆಂ
ದೊಡೆ ಕಿಂಚಿಜ್ಞನದೇತು ತೀರ್ದಪುದೊ ಮೇಣಂತಾದೊಡಂ ತಚ್ಛಲಂ
ಬಿಡಿದಿಂದಾಗಿಪೆನೆನ್ನ ಮೆಲ್ನುಡಿಗೆ ಬಲ್ಲರ್ಮೆಚ್ಚೆ ಸಾಫಲ್ಯಮಂ ೮೭

ಚಂ॥ ಅನುಚಿತಮಲ್ತೆ ಯೋಗಿಜನಮಂಡನ ನೀಂ ಕೃತಿವೇಳ್ವುದಿಲ್ಲಿ ಕೇ
ಳ್ಮನಸಿಜಕೇಳಿಮುಖ್ಯಜನರಂಜನ ವರ್ಣನೆಗೆಯ್ವುದೆಂದು ಸ
ಜ್ಜನರಿದನೆನ್ನದಿರ್ಕೆ ಶಿವಯೋಗಿ ಹರೀಶ್ವರ ಮಲ್ಲಣಾರ್ಯರಿಂ
ಪಿನ ಪೊಸಕಬ್ಬಮಂ ನೆಗಳ್ದರಾನವರಂತಿರೆ ಪೇಳ್ವೆನಿಂತಿದಂ ೮೮

ಕಂ॥ ಸರನೊರ್ಮೆ ನೆನೆಯೆ ಸಲೆ ಶಂ
ಕರನಂ ನೆಜಿ³ ಮಾಳ್ಪ ಮಹಿಮೆಯಂ ತಳೆದ ಷಡ
ಕ್ಷರಮಂತ್ರದಮಳ ಕಥನಮ
ನೊರೆವೆನ್ನಿಂದನ್ಯರೊಳರೆ ಧನ್ಯರ್ಜಗದೊಳ್ ೮೯

ಈ ಕೃತಿಯಲ್ಲಿ ರಂಜಿಸುತ್ತವೆ. ೮೬. ಪ್ರಸಿದ್ಧರಾದ ಪ್ರಾಚೀನ ಕವಿಗಳಿಂದ ರಚಿಸಲ್ಪಟ್ಟ ಕಾವ್ಯಗಳೆಂಬ ಆಭರಣಗಳಿಂದ ಶೋಭಿತಳಾದ ಸರಸ್ವತಿಯು, ಭೂಮಂಡಲದವರಿಂದ ಸ್ತೋತ್ರಮಾಡಲ್ಪಡುವ ಕಾಂತಿಯುತ ಕಾವ್ಯಗುಣಗಳಿಂದ ಕೂಡಿದ ನನ್ನ ಕೃತಿಯೆಂಬ ಹೊಸ ಬೈತಲೆಯ ರತ್ನವನ್ನು ಧರಿಸಿ ಶೋಭಿಸುತ್ತಾಳೆ. ೮೭. ವಿಷ್ಣುಮುಖ್ಯರಾದ ದೇವತೆಗಳು ಕಲ್ಪಾಂತದವರೆಗೆ ಆ ಪರಶಿವನ ಮಹಿಮೆಗಳನ್ನು ಸತತವೂ ಹೊಗಳಿ ಕಡೆಗಂಡಿಲ್ಲವೆನ್ನುವಾಗ, ಅಲ್ಪಜ್ಞಾನಿಯಾದ ನಾನು ಹೊಗಳಹೊರಟರೆ ತೀರೀತೇ ? ಹಾಗಾದರೂ (ಹೊಗಳಬೇಕೆಂಬ) ಛಲವನ್ನು ಹಿಡಿದು ಇಂದು ನನ್ನ ಮೃದುನುಡಿಗೆ ತಿಳಿದವರು ಮೆಚ್ಚುವಂತೆ ಸಾಫಲ್ಯವನ್ನುಂಟುಮಾಡುತ್ತೇನೆ. ೮೮. ಯೋಗಿಜನಾಲಂಕಾರನೇ, ಕೇಳು : ನೀನು ಕೃತಿಯನ್ನು ರಚಿಸುವುದರಲ್ಲಿ ಮನ್ಮಥಕೇಳಿಯೇ ಮೊದಲಾದ ಜನರಂಜನೆಯ ವರ್ಣನೆ ಮಾಡುವುದು ಅನುಚಿತವಲ್ಲವೆ ? ಎಂದು ಸಜ್ಜನರು ಅನ್ನದಿರಲಿ. (ಏಕೆಂದರೆ) ಶಿವಯೋಗೀಶ್ವರರಾದ ಹರಿಹರದೇವ, (ಗುಬ್ಬಿಯ) ಮಲ್ಲಣಾರ್ಯರು ಇಂಪಾದ ನೂತನ ಕಾವ್ಯಗಳನ್ನು ರಚಿಸಿದರು. ಅವರ ಹಾಗೆಯೆ ಈ ಕಾವ್ಯವನ್ನು ನಾನೂ ಹೇಳುತ್ತೇನೆ. ೮೯. ಮನುಷ್ಯನು ಒಮ್ಮೆ ನೆನೆದರೆ ಸಾಕು, ಶಂಕರನನ್ನೇ ಮಾಡುವ ಮಹಿಮೆಯನ್ನು ಹೊಂದಿದ ಷಡಕ್ಷರಮಂತ್ರದ ಶ್ರೇಷ್ಠ ಕಥೆಯನ್ನು ಹೇಳುತ್ತೇನೆ. ನನಗಿಂತಲೂ ಧನ್ಯರಾದ ಬೇರೆಯವರು ಜಗತ್ತಿನಲ್ಲಿ ಯಾರಾ

ವ॥ ಅದೆಂತೆಂದೊಡೆ

ಸ್ರ॥ ಅಂಭಃಕುಂಭೀನ ಕುಂಭೀನ ಸಮಕರ ಮಹಾಕೂರ್ಮ ಕೀರ್ಣೋರ್ಮಿಮಾಲಾ
ಜೃಂಭದ್ದಂಭೋಳಿಹಸ್ತಾಹತಚಕಿತಗತಕ್ಷ್ಮಾಧ್ರ ವಿಸ್ಫಾರ ವಿದ್ಯು
ತ್ಸಂಭಿನ್ನಾಂಭೋಭೃತ್ ಉದ್ಯತ್ತಟ ಚಟುಳಚಳನ್ಮೀನ ಫೇನಪ್ರತಾನಂ
ಶುಂಭದ್ಗಂಭೀರಮಿಂ ರಂಜಿಸಿದುದಮಮ ದತ್ತೇಂದ್ರಭದ್ರಂ ಸಮುದ್ರಂ ೯೦

ಕಂ॥ ಯಮುನಾನದಿ ರೋಮಾಳಿವೊ
ಲಮರೆ ಮಹೀರಮಣಿ ನಿಜಮಹೀಧರ ಜಘನ
ಕ್ಕೆ ಮುದಂ ಮಿಗೆ ತೆಗೆದುಟ್ಟವೊ
ಲೆ ಮನೋಜ್ಞಾಂಬರಮೆನಿಸಿದುದಂಬುನಿಧಾನಂ ೯೧

ವ॥ ಮತ್ತಮಲ್ಲಿ

ಕಂ॥ ತನುಜನ ತೇಜಮನಪಹರಿ
ಪನಿವನೆನುತ್ತಬ್ಧಿ ಮುಳಿದು ಸಂಧ್ಯಾರುಣ ಸೂ
ರ್ಯನ ಕಿರಣಮನುಱೆ ಸೆಱೆವಿಡಿ
ದನೆನೆ ವಿರಾಜಿಪುದು ವಿದ್ರುಮಂ ಸದ್ರುಚಿಯಿಂ ೯೨

ದರೂ ಉಂಟೆ ? ವ|| ಅದು ಹೇಗೆಂದರೆ, ೯೦. ನೀರಾನೆ, ಸರ್ಪ, ಮೊಸಳೆ, ದೊಡ್ಡ ಮೊಸಳೆ ಮಹಾಕೂರ್ಮಿಗಳಿಂದಲೂ, ತೆರೆಗಳ ಸಮೂಹದಿಂದಲೂ, ಪ್ರಕಾಶಿಸುತ್ತಿರುವ ವಜ್ರಾಯುಧಪಾಣಿಯಾದ ಇಂದ್ರನ ಹೊಡೆತದಿಂದ ಭಯಗೊಂಡು ಸಮುದ್ರದಲ್ಲಿ ಹೊಕ್ಕು ನಿಂತ ಬೆಟ್ಟಗಳಿಂದಲೂ, ವಿಶೇಷವಾದ ಕೋಲ್ಮಿಂಚಿನ ಸೆಳೆತದಿಂದ ಭಿನ್ನ ಭಿನ್ನ ಗಳಾದ ಮೋಡಗಳ ಸಮೂಹದಿಂದಲೂ, ದಂಡೆಯಲ್ಲಿ ವೇಗದಿಂದ ಸಂಚರಿಸುತ್ತಿರುವ ಮೀನುಗಳ ಮತ್ತು ನೊರೆಗಳ ಸಮೂಹದಿಂದಲೂ ಉಂಟಾಗಿರುವ ಗಂಭೀರತೆಯಿಂದ ಇಂದ್ರನಿಗೆ ಐಶ್ವರ್ಯವನ್ನಿತ್ತ ಸಮುದ್ರವು, ಅಮಮ! ಶೋಭಿಸುತ್ತಿತ್ತು. ೯೧. ಯಮುನಾ ನದಿಯೇ ಕೂದಲುಗಳ ಸಮೂಹದ ಹಾಗೆ ಒಪ್ಪಿರಲು, ಭೂಮಿಯೆಂಬ ಸ್ತ್ರೀಯು ಬೆಟ್ಟ ಗಳೆಂಬ ತನ್ನ ಪೃಷ್ಟಪ್ರದೇಶಕ್ಕೆ ಅತಿಪ್ರೀತಿಯಿಂದ ಮನೋಹರವಾದ ಸೀರೆ ಯನ್ನು ತೆಗೆದುಟ್ಟುಕೊಂಡಹಾಗೆ ಸಮುದ್ರವು ಕಾಣುತ್ತಿತ್ತು. ವ|| ಮತ್ತು ಅಲ್ಲಿ ೯೨. ತನ್ನ ಮಗನಾದ ಚಂದ್ರನ ತೇಜಸ್ಸನ್ನು ಸೂರ್ಯನು ಅಪಹರಿಸುವನೆಂದು ಸಮು ದ್ರವು ಕೋಪಗೊಂಡು ಅವನ ಸಾಯಂಕಾಲದ ಕೆಂಪುಕಿರಣಗಳನ್ನು ಸೆರೆಹಿಡಿದಿದೆಯೋ ಎನ್ನುವಂತೆ ಕೆಂಪುಬಣ್ಣದ ಕಾಂತಿಯಿಂದ ಹವಳಗಳು ಶೋಭಿಸುತ್ತಿದ್ದವು.

ಜಲಕರಿನಿಕರಂ ಪುಷ್ಕರ
ಮಲರೆ ಕರಂ ನಿಮಿರೆ ಫೂತ್ಕರಿಸೆ ಸಿಡಿದ ಲಸ
ಜ್ಜಲಕಣಮನಮಲಮುಕ್ತಾ
ಫಳಮೆಂದುಱಿ ಮುಗ್ಧಖಚರಿಯರ್ ಕೈಯಿಡುವರ್ ೯೩

ಪಡೆದುದು ಗಡ ಮೊದಲಿಂದುವ
ಕಡಲಿದು ಮೇಣಿಂದು ಪಡೆದುದುಡುವಿತತಿಯುನೆಂ
ಬೆಡೆಗೆಡೆಯಾದುದು ಜಡನಿಧಿ
ಸಿಡಿದೆಡೆವಿಡದಿಡಿದ ವಾರಿಕಣಗಣದಿಂದಂ ೯೪

ಎಲೆ ಜಲಧಿ ಜಿಷ್ಣುಚಕಿತಾ
ಚಲಪಾಲಕ ಕಾವುದೆಮ್ಮನೆನುತಂ ಕರ್ಗ
ಳ್ತಲೆ ಖರಕರ ಕರಭಯುವಿ
ಹ್ವಲಮಿರ್ಪಂತದಱ ತೀರದೊಳ್ ಮುಗಿಲೆಸೆಗುಂ ೯೫

ವ|| ಅಂತುಮಲ್ಲದೆಯುಂ

ಮ|| ಘನಲಾವಣ್ಯರಸಾನ್ವಿತಂಗೆ ನವರತ್ನಾಲಂಕೃತಾಂಗಂಗೆ ಜೀ
ವನಮೊಂದಾಗಿರೆ ಕೂಡಿ ಮಚ್ಚಿಸಿದ ಪಾರಾವಾರಕಾಂತಂಗೆ ಸೋ
ಲ್ತು ನದೀನಾರಿಯರಿತ್ತ ನುಣ್ಗುರುಳಿವೆಂಬಂತಾಗುಲಿವ್ರಾತಮೆಂ
ಬಿನೆಗಂ ತೀರದ ನೀರದಂಗಳೆಸೆಗುಂ ಸದ್ವಿದ್ರುಮಾಗ್ರಂಗಳುಂ ೯೬

೯೩. ನೀರಾನೆಗಳ ಸಮೂಹವು ತಮ್ಮ ಸೊಂಡಿಲುಗಳನ್ನರಳಿಸಿ ಚೆನ್ನಾಗಿ ಮೇಲಕ್ಕೆತ್ತಿ ಫೂತ್ಕರಿಸಲಾಗಿ (ಮೇಲಕ್ಕೆ) ಸಿಡಿದ ಮಿಂಚುವ ನೀರಿನ ಕಣಗಳನ್ನು ಮುತ್ತುಗಳೆಂದು (ಭಾವಿಸಿ) ಮುಗ್ಧೆಯರಾದ ದೇವತಾಸ್ತ್ರೀಯರು (ಅವಕ್ಕೆ) ಕೈ ಚಾಚುತ್ತಿದ್ದರು. ೯೪. ಸಮುದ್ರವು ಮೊದಲು ಚಂದ್ರನನ್ನು ಹಡೆಯಿತಲ್ಲವೆ ! ಈಗ ನಕ್ಷತ್ರಗಳ ಸಮೂಹವನ್ನು ಹಡೆಯಿತೋ ಎನ್ನುವ ಹಾಗೆ ಸಮುದ್ರದಿಂದ ಎಡೆಬಿಡದೆ ನಿಬಿಡವಾಗಿ ಹಾರಿದ ನೀರಿನ ಕಣಗಳ ಸಮೂಹವು ತೋರುತ್ತಿತ್ತು. ೯೫. ದೇವೇಂದ್ರನಿಗೆ ಹೆದರಿದ ಬೆಟ್ಟಗಳನ್ನು ರಕ್ಷಿಸುತ್ತಿರುವ ಎಲೈ ಸಮುದ್ರವೇ, ನಮ್ಮನ್ನು ರಕ್ಷಿಸಬೇಕೆನ್ನುತ್ತ ಕಗ್ಗತ್ತಲೆಯು ಸೂರ್ಯಕಿರಣಗಳ ಭಯದಿಂದ ಸಮುದ್ರನಾಥನ ಮರೆಹೊಕ್ಕಿದೆಯೋ ಎನ್ನುವಂತೆ ಕಪ್ಪಾದ ಮೇಘಗಳು ಸಮುದ್ರತೀರದಲ್ಲಿ ಶೋಭಿಸುತ್ತಿದ್ದವು. ವ|| ಅದೂ ಅಲ್ಲದೆ, ೯೬. ಘನವಾದ ಲವಣ ಸಂಬಂಧದ ರಸದಿಂದ ಮತ್ತು ಲಾವಣ್ಯದಿಂದ ಕೂಡಿರುವವನಿಗೆ, ನವರತ್ನಗಳಿಂದ ಅಲಂಕಾರಗೊಂಡ ಶರೀರಿಯಾದವನಿಗೆ, ಒಂದೇ ನೀರಾಗಿ ಕೂಡಿ ಮೆಚ್ಚಿಸಿದ ಸಮುದ್ರನೆಂಬ ಗಂಡನಿಗೆ ಸೋತು ನದಿಗಳೆಂಬ ಸ್ತ್ರೀಯರು ಒಲಿದಿತ್ತ ನುಣುಪಾದ ಮುಂಗುರಳುಗಳೋ ಎಂಬಂತೆ ಮೋಡಗಳೂ, ಬೆರಳುಗಳ ಸಮೂಹಗಳೋ ಎಂಬ ಹಾಗೆ ಹವಳದ ಕುಡಿಗಳೂ

ಕಂ॥ ಜಲನಿಧಿಜಲಮಂ ಜಲಭೃ
ತ್ಕುಲಕ್ಕೆ ನಲಿದಿತ್ತುದತ್ತಮಿತ್ತ ನದೀ ನಿ
ರ್ಮಲ ಸಲಿಲಂ ದೊರೆದುದು ಗಡ
ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ ೯೭

ಘನದ ಬರವಪ್ರಯೋಜನ
ಮೆನುತಱಿದುಂ ಜಡದಿ ಜಡಮನಿತ್ತುದದಂ ನೆ
ಟ್ಟನೆ ಪೊತ್ತುದು ಜಳದಂ ವ್ಯ
ರ್ಥನಿಯುಕ್ತಮಿದೆಂದು ಬಗೆವೊಡಿದು ಚಿತ್ರತರಂ ೯೮

ಚಂ॥ ಜಲನಿಧಿ ಜಂಭವೈರಿಗರಿಯಂ ನಿಱಿಯಂ ಬಿಡು ಬೇಗಮೆಂದು ಬಂ
ದುಲಿವವೊಲೊಪ್ಪೆ ಸುಸ್ತನಿತಮುಚ್ಚತಟಿತ್ಕರವಾಳನಾಂತು ತ
ಜ್ಜಲದ ಭಟಂಗದಂ ಕುಡದೆ ತನ್ನಯ ಜೀವನಮಿತ್ತುದಬ್ಧಿ ಭೂ
ತಲದೊಳೆ ಸತ್ವಶಾಲಿ ಪಗೆಗೇಂ ಮಱೆವೊಕ್ಕನನೀಯಲಾರ್ಪನೇ ೯೯

ಕಂ॥ ಎಱಗಿದ ನಿಱಿಮುಗಿಲೊಳ್ನೆಱೆ
ಮಿಱುಗುವ ಮಿಂಚುಗಳನುಡಿದು ಪಿಡಿದನೊ ಕಡುಪಿಂ
ತೊಱೆಯೆಱೆಯಂ ತೆಱೆಗೈಗಳಿ.
ನಱಿದೆನೆ ಕೆಮ್ಮೀನ್ಗಳೇಂ ಮನಂಗೊಳಿಸಿದುವೋ ೧೦೦

ಶೋಭಿಸುತ್ತಿದ್ದವು. ೯೭. ಸಮುದ್ರವು ನೀರನ್ನು ಮೋಡಗಳಿಗೆ ಪ್ರೀತಿಯಿಂದ ಕೊಟ್ಟಿತು. ಇತ್ತ ಹೊಳೆಗಳ ನಿರ್ಮಲಜಲವು (ಸಮುದ್ರಕ್ಕೆ) ದೊರೆಯಿತಲ್ಲವೆ! (ಈ) ಭೂಮಿಯಲ್ಲಿ ಕೊಟ್ಟವನಿಗೆ ಬಡತನವು ಬಂದೀತೇ! ೯೮. ಮೇಘಗಳ ಬರವು ಪ್ರಯೋಜನವಿಲ್ಲದು ಎಂದು ತಿಳಿದೂ ಸಮುದ್ರವು ನೀರನ್ನು ಕೊಟ್ಟಿತು. ಅದನ್ನು ನೆಟ್ಟನೆ ಮೋಡವು ವ್ಯರ್ಥವೆಂದರಿತೂ ಹೊತ್ತುಕೊಂಡಿತು. ಇದು ವಿಚಿತ್ರವಾದದ್ದು.[1] ೯೯. 'ಎಲೈ ಸಮುದ್ರನೇ, ದೇವೇಂದ್ರನಿಗೆ ಅವನ ವೈರಿಯಾದ ಮೈನಾಕನನ್ನು ಸುಮ್ಮನೆ ಬಿಡು ಬೇಗ' ಎಂದು ಬಂದು ಕೂಗಿಹೇಳುವಂತೆ ಮೋಡದ ಧ್ವನಿಯು ಒಪ್ಪುತ್ತಿರಲಾಗಿ, ಒರೆದೆಗೆದ ಖಡ್ಗವೆಂಬಂತೆ ಮಿಂಚಿನಿಂದ ಕೂಡಿದ ಆ ಮೋಡವೆಂಬ ಭಟನಿಗೆ ಆ ಮೈನಾಕನನ್ನು ಒಪ್ಪಿಸದೆ ತನ್ನ (ಜೀವವನ್ನೇ) ನೀರನ್ನೇ ಕೊಟ್ಟಿತು. ಸತ್ವಶಾಲಿಯಾದವನು ವೈರಿಗೆ ತನ್ನ ಮರೆ ಹೊಕ್ಕವರನ್ನು ಬಿಟ್ಟುಕೊಡುವನೇ ? ೧೦೦. ತನ್ನ ಮೇಲೆಬಾಗಿದ ಮುಗಿಲಿನಲ್ಲಿ ಚೆನ್ನಾಗಿ ಹೊಳೆಯುತ್ತಿರುವ ಮಿಂಚುಗಳನ್ನು ಶೌರ್ಯದಿಂದ ತನ್ನ ತೆರೆಗೈಗಳ ಮೂಲಕ ಸಮುದ್ರರಾಜನು ಕೋಪಗೊಂಡು ಹಿಡಿದನೋ ಎನ್ನುವಂತೆ (ಸಮುದ್ರದಲ್ಲಿ) ಕೆಮ್ಮೀನುಗಳು

1 (ಟಿಪ್ಪಣಿ) ಮೋಡದಿಂದ ಸಮುದ್ರಕ್ಕೆ ಲಾಭವಿಲ್ಲ. ನೀರನ್ನು ಮತ್ತೆ ಸುರಿಸಿಬಿಡುವುದರಿಂದ ಮೋಡಕ್ಕೆ ನೀರು ಹೊರುವುದರಿಂದ ಪ್ರಯೋಜನವಿಲ್ಲವೆಂದು ಅಭಿಪ್ರಾಯ (ರಂ)

ಶಾ॥ ಎನ್ನೊಳ್ ಪುಟ್ಟಿದ ಚಂದ್ರನಿಂದೆ ಪಡೆಗುಂ ಸಸ್ಯಾಳಿ ಸಂಪತ್ತನಂ
ತೆನ್ನೊಳ್ ಪುಟ್ಟಿದ ಲಕ್ಷ್ಮಿಯಿಂದೆ ಪಡೆಗುಂ ಸೌಭಾಗ್ಯಮಂ ಧಾತ್ರಿ ಮೇ
ಣೆನ್ನೊಳ್ ಪುಟ್ಟಿದ ವಸ್ತುವಿಂದೆ ಪಡೆದಂ ಸರ್ವಾರ್ಥಮಂ ಜಿಷ್ಣು ತಾ
ನೆನ್ನೊಳ್ ಪೇಳ್ಸರಿಯಾವನೆಂದುಲಿವವೋಲುದ್ಘೋಷಿಕುಂ ಸಾಗರಂ ೧೦೧

ಮ॥ಸ್ರ॥ ಅಳಿಯಂ ಪೂಗಣ್ಣನೆನ್ನೀ ಮಗಳೆ ಚಪಳೆ ಪುತ್ರಂ ಕರಂ ರಾಜಯಕ್ಷ್ಮಾ
ಕುಳನೆನ್ನೈಶ್ವರ್ಯಮಂ ನಿರ್ಜರರೆ ಕವರ್ದರೆನ್ನೊಳ್ವಿಸಂ ಪುಟ್ಟಿತೆನ್ನಂ
ಕಳಶಪ್ರೋದ್ಭೂತನಂದೀಂಟಿದನಕಟ ಮಹಾಭಂಗಮಂ ತಾಳ್ದಿನೆಂದೆಂ
ದೊಳಗಂಭೋರಾಶಿ ಚಿಂತಾಗ್ನಿಯನೆ ತಳೆದವೋಲೌರ್ವನಂತಸ್ಥಮಿರ್ಕುಂ ೧೦೨

ವ॥ ಮತ್ತಂ ತಡಿಗೊಂಡೆಡೆವಿಡದೆ ಮಡಲ್ತು ಬೆಳೆದ ತರುಣ ತಮಾಲತರುವನದೊಳಿಡಿದು ಕಡುಕೊರ್ಬಿ ಪರ್ಬಿದ ಮರ್ಬು ಮಿಗವಕ್ಕೆಗನೊಳಾದ ಪಗೆತನಮಂ ಬಗೆಗೊಂಡು ತಜ್ಜನಕ ವನನಿಧಿಯಂ ಕನಲ್ದು ಸುತ್ತಮೊತ್ತರಿಸಿ ಪೊತ್ತಂಗೊಂಡು ಪತ್ತುಗೆಗುಂದದೊತ್ತಿ ಮುತ್ತಿರ್ದುದೆಂಬೊಪ್ಪಮನಪ್ಪುಕೆಯ್ದುಳಿಯ ಬಣ್ಣಮಂ ಪಳಿದು ನೀರುಣಲೆಂದು ಸಾರೆವಂದು ತೀರದೊಳ್ ನಿಂದ ನೀರದಂಗಳವಾರದಿನಾ ನೀರದಂಗಳೊಳ್ ವಾರಿವಾಹವಾಹನೊಳೊದವಿದ ವೈರದಿಂ

ಶೋಭಿಸುತ್ತಿದ್ದವು. ೧೦೧. ನನ್ನಲ್ಲಿ ಹುಟ್ಟಿದ ಚಂದ್ರನಿಂದ ಸಸ್ಯಸಮೂಹವು ಸಂಪತ್ತನ್ನು ಪಡೆಯುತ್ತದೆ. ನನ್ನಲ್ಲಿ ಹುಟ್ಟಿದ ಲಕ್ಷ್ಮಿಯಿಂದ ಭೂಮಂಡಲವು ಸೌಭಾಗ್ಯವನ್ನು ಪಡೆಯುತ್ತದೆ. ನನ್ನಲ್ಲಿ ಹುಟ್ಟಿದ ವಸ್ತುಗಳಿಂದ ಇಂದ್ರನು ಸರ್ವಸಂಪತ್ತನ್ನು ಪಡೆದನು. ನನಗೆ ಸಮಾನನಾವನಿದ್ದಾನೆಂದು ಸಾರುವಂತೆ ಸಮುದ್ರವು ಭೋರ್ಗರೆಯುತ್ತಿತ್ತು. ೧೦೨. 'ಅಳಿಯನು ಹೂಗಣ್ಣನು (ಪುಂಡರೀಕಾಕ್ಷನು). ಮಗಳಾದ ಲಕ್ಷ್ಮಿಯಾದರೋ ಚಪಲೆ. ಮಗನಾದ ಚಂದ್ರನು ಕ್ಷಯರೋಗದಿಂದ ಆಕುಲಗೊಂಡವನು. ದೇವತೆಗಳು ನನ್ನ ಐಶ್ವರ್ಯವನ್ನು ಬಾಚಿದರು. ನನ್ನಲ್ಲಿ ವಿಷವು ಹುಟ್ಟಿತು. ನನ್ನನ್ನು ಅಗಸ್ತ್ಯನು ಕುಡಿದುಬಿಟ್ಟನು. ಅಯ್ಯೋ! ನಾನು ಮಹಾಭಂಗ ಹೊಂದಿದೆನು'. ಎಂದು ಒಳಗೊಳಗೇ ಸಮುದ್ರವು ಚಿಂತಾಗ್ನಿಯನ್ನು ಹೊಂದಿತೋ ಎನ್ನುವಂತೆ ವಡಬಾಗ್ನಿಯನ್ನು ತನ್ನ ಗರ್ಭದಲ್ಲಿ ಪಡೆದಿತ್ತು. ವ|| ಮತ್ತು, ತೀರಪ್ರದೇಶವಲ್ಲಿ ದಟ್ಟವಾಗಿ ಬೆಳೆದ ತರುಣ ಹೊಂಗೇಮರಗಳ ತೋಪುಗಳಲ್ಲಿನ ದಟ್ಟವಾದ ಕತ್ತಲೆಯು ಚಂದ್ರನ ಮೇಲಿನ ಕೋಪದಿಂದ ಆ ಚಂದ್ರನ ತಂದೆಯಾದ ಸಮುದ್ರರಾಜನನ್ನು ಸುತ್ತಲೂ ಮುತ್ತಿರುವುದೋ ಎನ್ನುವ ಹಾಗೆ ಕಾಣುತ್ತಿತ್ತು. ದುಂಬಿಗಳ ನೀಲವರ್ಣವನ್ನೂ ಧಿಕ್ಕರಿಸಿದ ಹಾಗೆ ಕಾಣುವ ಮೋಡಗಳ ತಂಡಗಳು ಆ ಸಮುದ್ರದ ನೀರು ಕುಡಿಯಲೆಂದು ಹತ್ತಿರಕ್ಕೆ ಬಂದು ದಂಡೆಯ ಮೇಲೆ ನಿಂತುಕೊಂಡಿರುವುವೊ, ಎನ್ನುವ ಹಾಗೆ ಶೋಭಿಸುತ್ತಿದ್ದವು. ದೇವೇಂದ್ರ (ವಾರಿವಾಹವಾಹ)ನ ಮೇಲಿನ ಹಗೆತನದಿಂದ ಸಮುದ್ರರಾಜನ ಮರೆಹೊಕ್ಕ ದೊಡ್ಡದೊಡ್ಡ

ವಾರಿಧಿಯೊಳ್ಪೊಕ್ಕ ಭೂರಿಭೂಧರಂಗಳ್ಪೀಚಲೆಂದು ಪಟುತೆಯಿಂದಿದಿರ್ಚಿ ನಿಂದವೆಂಬಂತೆ ಸಾರ್ತಂದದಂ ಪ್ರತಿಗಜವ್ರಜಮೆಂದು ಸರಿಸದೊಳ್ನಿಂದು ಕೊಡಂಕೆ ಚಲಿಸೆ ಕೋಡವೊನೆಯೊಳೀದಿಱಿಯೆ ಮುಗಿಲ್ಮುತ್ತುಗಳ್ವೆರಸು ಜಲಕಣಗಣಂ ಜಲ್ಲನುಗೆಮಿಗೆ ಮೆಱೆವಂಬುಸ್ತಂಬೇರಮಂಗಳಿಂ ಆ ಸ್ತಂಬೇರಮನಂಬುದಂಗೆತ್ತು ದಂತಕಾಂತಿಯುಂ ಗೊಂಚಲ್ಮಿಂಚೆಂದು ಗರ್ಜನೆಯುಂ ಪರ್ಜನ್ಯಜನ್ಯಧ್ವನಿಯೆಂದು ಮುಂದುಗೆಟ್ಟು ತೊಟ್ಟನೆ ಕಾಡಕಡೆಗೆ ಬಡಬಂಗಳ್ಕೆ ಶಂಖ ಸಮುದಯಂ ನೆಗೆದು ಪೋಪಂತೆ ಬೆಗಡುಗೊಂಡು ತಳರ್ವ ·ತರುಣ ಮರಾಳಂಗಳಿಂ ಆ ಮರಾಳಂಗಳ ಗಱಿದುಱುಗಲ ತುದಿಗಳಿಂ ಕೆದರ್ದುರುಳ್ವ ವಿಮಲಜಲಕಣಗಣಮುಂ ಕಡಲೊಳ್ ಬಡಬಾನಲ ಜ್ವಲಜ್ವಾಲೆಯಿಂ ಶುಕ್ತಿಪುಟಂಗಳಿಲೆನೆ ಸಿಡಿದೊಡವಱಿಂದುಚ್ಚಳಿಸಿದಚ್ಛಮುತ್ತೆಂದು ತುಡುಕಲವ್ವಳಿಪ ಖೇಚರಾಂಗನೆಯರಂ ನೆಱೆನೆಗೆವ ನಿಡುಮೀನ್ಗಳೆಂಬ ಕಣ್ಗಳಿಂ ಕಂಡು ಕೆಂಬವಳಮೆಂಬ ತಂಬುಲರಸಂ ಸೂಸೆ ಶುಕ್ತಿಯಿಂ ಪೊಣ್ಮುವ ನುಣ್ಮುತ್ತೆಂಬ ಸುಲಿಪಲ್ಲ ಸೂಸುವೆಳಗು ಥಳಥಳಿಸಿ ಪೊಳೆಯೆ ಬೆಳ್ನೊರೆಯೆಂಬ ಪಸನರುಚಿ ದೆಸೆದೆಸೆಗೆ ಪಸರಿಸೆ ತೊಳಪ ಸೀಳ್ದೆರೆಯೆಂಬ ಸಳಿತೋಳಂ ನೀಡಿ ನದೀನಾರಿಯರುಣಸರಸಿಜಮೆಂಬ ಕರತಳಮಂ ಗಳಿಲನೆ ಪೊಯ್ದು ರಯ್ಯಮೆನೆ

ಪರ್ವತಗಳ ಮೇಲೇರಿ ನೀರಾನೆಗಳು ನಿಂತಿದ್ದವು. ಅವು ಸಮುದ್ರದ ದಂಡೆಯ ಮೇಲೆ ಮುತ್ತಿದ್ದ ಮೋಡಗಳನ್ನು ತಮ್ಮ ಎದುರಾಳಿಗಳಾದ ಆನೆಗಳೇ ಎಂದು ಭ್ರಮಿಸಿ ತಮ್ಮ ತಮ್ಮ ಆಟೋಪಿನಲ್ಲಿಯೇ ನಿಂತು ಕಿವಿಗಳನ್ನಲ್ಲಾಡಿಸುತ್ತ ದಂತಗಳ ತುದಿಯಿಂದ ಆ ಮೋಡಗಳನ್ನು ಚುಚ್ಚಿ ಇರಿಯುತ್ತಿರಲು, ಆ ಮೋಡಗಳು ಮುತ್ತು ಸಮೇತವಾದ ಮಳೆಯನ್ನು ಝುಲ್ಲನೆ ಸುರಿಸುತ್ತಿದ್ದವು. (ಆ ಸಮುದ್ರದಲ್ಲಿದ್ದ) ಹಂಸಪಕ್ಷಿಗಳು ಆ ನೀರಾನೆಗಳನ್ನು ಮೋಡಗಳೆಂದೂ, ಅವುಗಳ ದಂತಗಳ ಕಾಂತಿಯನ್ನು ಮಿಂಚೆಂದೂ, ಗರ್ಜನೆಯನ್ನು ಗುಡುಗೆಂದೂ ಭ್ರಮಿಸಿ, ದಿಕ್ಕುತೋಚದೆ ಕಂಡ ಕಂಡ ಕಡೆಗೆ ಗಾಬರಿಯಿಂದ ಹಾರಿ ಹೋಗುತ್ತಿದ್ದವು. (ಹೀಗೆ ಅವು ಹಾರಿ ಹೋಗುವಿಕೆಯು) ವಡಬಾಗ್ನಿಗೆ ಹೆದರಿ ಶಂಖಗಳ ಸಮುದಾಯವೇ ಹಾರಿಹೋಗುತ್ತಿರುವಂತೆ ಭಾಸವಾಗುತ್ತಿತ್ತು. ಆ ಹಂಸ ಪಕ್ಷಿಗಳ ರೆಕ್ಕೆಗಳ ಸಮೂಹದಿಂದ ಕೆದರಿ ಹೊರ ಚಿಮ್ಮುತ್ತಿರುವ ಸ್ವಚ್ಛನೀರಿನ ಕಣಗಳು ಬಡಬಾನಲಜ್ವಾಲೆಯಿಂದ ಮುತ್ತಿನ ಚಿಪ್ಪುಗಳು ಸಿಡಿಯಲಾಗಿ, ಆ ಚಿಪ್ಪಿನಿಂದ ಸಿಡಿದ ಮುತ್ತುಗಳು ಸಮುದ್ರದ ಮೇಲೆ ಹಾರಿಬಂದಂತೆ ಕಾಣುತ್ತಿದ್ದವು. ಅವು ನಿಜವಾದ ಮುತ್ತುಗಳೇ ಎಂದು ಭ್ರಮಿಸಿ ದೇವತಾಸ್ತ್ರೀಯರು ಕೈಚಾಚುತ್ತಿದ್ದರು. ನದಿಗಳೆಂಬ ನಾರಿಯರು ತಮ್ಮಲ್ಲಿರುವ ಮೀನುಗಳೆಂಬ ಕಣ್ಣುಗಳಿಂದ (ಇನಿಯನಾದ) ಸಮುದ್ರನಾಥನನ್ನು ಕಂಡು, ಕೆಂಪುಹವಳಗಳೆಂಬ ತಾಂಬೂಲರಸವು ಹೊರ ಸೂಸುತ್ತಿರುವವರಾಗಿ, ಮುತ್ತಿನ ಚಿಪ್ಪುಗಳಿಂದ ಹೊರಹೊಮ್ಮುವ ನುಣುಪಾದ ಮುತ್ತೆಂಬ ಬಿಳಿಯ ಹಲ್ಲುಗಳ ಬೆಳಕನ್ನು ಹೊರ ಸೂಸುವವರಾಗಿ, ಬಿಳಿಯನೊರೆಯೆಂಬ ಕಿರುನಗೆಯ ಬೆಳಕನ್ನು ದಿಕ್ಕು ದಿಕ್ಕಿಗೂ ಹಬ್ಬಿಸುವವರಾಗಿರಲು, ಅವರನ್ನು ತನ್ನ ದೊಡ್ಡ ದೊಡ್ಡ ತೆರೆಗಳೆಂಬ ತೋಳು

ಮೈಯದಿರೆ ಮತ್ತೆ ಮತ್ತೆ ಮಾಣದೆ ಗಹಗಹಿಸಿ ನಕ್ಕಪನೆಂಬಂತೆ ಪವನಹತಿ ಪ್ರಚಲಿತ ತರಂಗಸಂಗ ಸಮುದ್ಘೋಷಣದಿಂ ತಳ್ತು ರತ್ನಾಕರಂ ರಮಣೀಯಮಾಗಿರ್ಪುದಂತುಮಲ್ಲದೆಯುಂ

ಚಂ॥ ಪವಳಮೆ ನೀಳ್ದ ಕೆಂಜೆಡೆ ಮೊಗಂ ಶತಪತ್ರಮುದೀರ್ಣಫೇನಮೊ
ಪ್ಪುವ ಭಸಿತಂ ಕರೋಟಿ ಸುಳಿ ಕಂಬುಕದಂಬಕಮಸ್ಥಿಮಾಲೆ ಮೀನ್
ಪ್ರವಿಮದ ಘೂರ್ಣಿತಾಕ್ಷಿ ಜಳಸರ್ಪನೆ ಕೂರಸಿ ವೀಚಿಬಾಹುವ
ರ್ಣವನವ ಭೈರವಂಗೆ ಮಣಿಬುದ್ಬುದ ಕಿಂಕಿಣಿ ಕಣ್ಗೆ ರಂಜಿಕುಂ ೧೦೩

ವ॥ ಅಂತುಮಲ್ಲದೆಯುಂ

ಚಂ॥ ಘುಳಿಘುಳಿಸುತ್ತೆ ಬರ್ಪ ತೆಱೆಯಿಂ ನೊಱೆಯಿಂ ಕಱೆಯಿಂಬಿನೊಳ್ಕರಂ
ಬೆಳೆದ ತಮಾಲ ನೀಲವನದಿಂ ಘನದಿಂ ಬಿನದಂಬೊಗುತ್ತೆ ಸಂ
ಚಳಿಸುವ ಪೀನಮೀನಕುಲದಿಂ ಬಲದಿಂ ಜಲದಿಂ ಸಿಡಿಲ್ದ ನಿ
ರ್ಮಳತರ ಶುಕ್ತಿಯಿಂದೆ ಹರಿಯಿಂ ಕರಿಯಿಂ ಗಿರಿಯಿಂದಮೊಪ್ಪುಗುಂ ೧೦೪

ವ॥ ಮತ್ತಮಾ ಸಮುದ್ರಂ ರುದ್ರನಂತೆ ವಿಷವಿಷಧರಭರಣನುಂ, ಸುಪರ್ಣಪತಾಕನಂತೆ ಶಂಖಚಕ್ರಕರಾಂಬುಜ ಕಲಿತನುಂ, ವಿರಿಂಚನಂತೆ ಸುರಸಭಾಕಾಂತನುಂ, ಅಮರಲೋಕದಂತೆ

ಗಳನ್ನು ಬಾಚಿ ಕೆಂಪು ಕಮಲಗಳೆಂಬ ತನ್ನ ಕೈಗಳನ್ನು ಹೊಡೆಯುತ್ತ ಚಲಿಸುವ ದೇಹವುಳ್ಳವನಾಗಿ, ಪುನಃ ಪುನಃ ಗಹಗಹಿಸಿ ನಗುತ್ತಿರುವನೋ ಎಂಬಂತೆ ಗಾಳಿಯ ಹೊಡೆತದಿಂದ ಅಪ್ಪಳಿಸುತ್ತಿರುವ ಅಲೆಗಳ ಸಮೂಹಗಳ ಭೋರ್ಗರೆಯುವಿಕೆಯಿಂದ ಆ ಸಮುದ್ರವು ಮನೋಹರವಾಗಿತ್ತು. ಇದೂ ಅಲ್ಲದೆ ೧೦೩. ಹವಳದ ಬಳ್ಳಿಯೇ ಉದ್ದವಾದ ಕೆಂಜೆಡೆ, ಕಮಲವೇ ಮುಖ, ವ್ಯಾಪಕವಾಗಿ ಹರಡಿರುವ ಬಿಳಿನೊರೆಯೇ ಭಸ್ಮ, ಸುಳಿಗಳೇ ಕಪಾಲ (ತಲೆಬುರುಡೆ), ಶಂಖಗಳ ಸಮೂಹವೇ ಮೂಳೆಗಳ ಸರ, ಮೀನುಗಳೇ ಮತ್ತತೆಯಿಂದ ತಿರುಗುತ್ತಿರುವ ಕಣ್ಣುಗಳು, ನೀರುಹಾವುಗಳೇ ತೀಕ್ಷ್ಣ ಖಡ್ಗ, ತೆರೆಗಳೇ ತೋಳುಗಳುಳ್ಳವನಾದ ಆ ಸಮುದ್ರವೆಂಬ ಭೈರವನಿಗೆ ನೀರುಗುಳ್ಳೆಗಳೇ ಮಣಿಗಳ ಗೆಜ್ಜೆಗಳಾಗಿ ಕಣ್ಣಿಗೆ ಶೋಭಿಸುತ್ತಿದ್ದವು. ವ|| ಅಡಲ್ಲದೆ, ೧೦೪. ಘುಳುಘುಳು ಧ್ವನಿಮಾಡುತ್ತ ಬರುವ ತೆರೆಗಳಿಂದಲೂ, ನೊರೆಯಿಂದಲೂ, ದಂಡೆಯ ಪ್ರದೇಶದಲ್ಲಿ ಬೆಳೆದ ಹೊಂಗೆಯ ನೀಲವರ್ಣದ ಅರಣ್ಯದಿಂದಲೂ, ಮೇಘಗಳಿಂದಲೂ, ವಿನೋದಗೊಂಡು ಸಂಚರಿಸುತ್ತಿರುವ ದೊಡ್ಡ ದೊಡ್ಡ ಮೀನುಗಳ ಸಮೂಹದಿಂದಲೂ, ಬಲವಾಗಿ ನೀರಿನಿಂದ ಸಿಡಿದ ನಿರ್ಮಲವಾದ ಮುತ್ತಿನ ಚಿಪ್ಪುಗಳಿಂದಲೂ, ಕಪ್ಪೆ, ನೀರಾನೆ, ಪರ್ವತಗಳಿಂದಲೂ ಆ ಸಮುದ್ರವು ಒಪ್ಪುತ್ತಿತ್ತು. ವ|| ಮತ್ತು ಆ ಸಮುದ್ರವು ರುದ್ರನು ಹೇಗೆ ಹಾಲಾಹಲ ವಿಷ ಮತ್ತು ಹಾವುಗಳಿಂದ ಶೋಭಿತನೋ ಹಾಗೆ ನೀರು ಮತ್ತು ಮೋಡಗಳಿಂದ ಶೋಭಿಸುತ್ತಿತ್ತು ; ಸುಪರ್ಣಪತಾಕನಾದ ವಿಷ್ಣುವು ಹೇಗೆ ಕೈಯಲ್ಲಿ ಶಂಖ, ಚಕ್ರ, ಕಮಲಗಳನ್ನು ಧರಿಸಿರು

ಅನಿಮಿಷಸಂತಾನಾಶ್ರಯನುಂ, ಅರಣ್ಯದಂತೆ ನಗನಾಗವಿಲಸಿತನುಂ, ದಿವದಂತೆ ಹಿಮಕರಮಂಜು ಳನುಂ, ಸುರಪಥದಂತುಡುಪತರಣಿಗಮನ ರಮಣೀಯನುಂ, ದ್ವಿಪಪ್ರವಿಷ್ಟವನದಂತೆ ಸುಪ್ರವಾಳ ಭಂಗಭಾಸುರನುಂ, ಶರದ್ಘನದಂತೆ ಮುಕ್ತಾಂಬುಕಣಮನೋಹರನುಂ, ಭೂತಳದಂತೆ ಸದಾನ ದೀನತಾಸಹಿತನೆನಿಸಿರ್ದನಂತುಮಲ್ಲದೆಯುಂ

ಮ॥ ಯಮಿಯಂತಂಬರದಂತೆ ಹಂಸನಿಲಯಂ ಪದ್ಮಾಭಿರಾಮಂ ರಮಾ
ರಮಣಂತಾ ನಿಧಿಯಂತೆ ಪುಷ್ಕರಯುತಂ ಮತ್ತೇಭದಂತರ್ಕನಂ
ತೆ ಮಹಾಮಾರುತಿಯಂತೆ ಚೈತ್ರಕುಜದಂತುದ್ಯತ್ಪ್ರವಾಲಾಶ್ರಯಂ
ಸುಮದಂತುತ್ಸವನಂತೆ ಸಂಭೃತ ರಸ ಶ್ರೀಗಾಗರಂ ಸಾಗರಂ ೧೦೫

ವನೋ ಹಾಗೆ ಶಂಖ, ನೀರಿನ ಸುಳಿ, ಮತ್ತು ಕಮಲಗಳಿಂದ ಕೂಡಿತ್ತು. ಬ್ರಹ್ಮನು ಹೇಗೆ ದೇವತೆಗಳ ಸಭೆಯಿಂದ ಕಾಂತಿಯುಳ್ಳವನೋ ಹಾಗೆ ಒಳ್ಳೆಯ ಲವಣರಸಯುತವಾದ ನೀರಿನ ಕಾಂತಿಯಿಂದ ಶೋಭೆಗೊಂಡಿತ್ತು (ಸು + ರಸ + ಭಾ) ; ದೇವಲೋಕವು ಹೇಗೆ ದೇವತೆಗಳಿಗೆ ಮತ್ತು ಕಲ್ಪವೃಕ್ಷಕ್ಕೆ ಆಶ್ರಯವೋ ಹಾಗೆ ಮೀನುಗಳ ಸಮೂಹಕ್ಕೆ ಆಶ್ರಯಸ್ಥಾನವಾಗಿತ್ತು ; ಅರಣ್ಯವು ಹೇಗೆ ಮರ, ಕಾಡಾನೆಗಳಿಂದ ಒಪ್ಪುತ್ತಿರುವುದೋ ಹಾಗೆ ಮೈನಾಕ ಮೊದಲಾದ ಬೆಟ್ಟಗಳಿಂದಲೂ, ನೀರಾನೆಗಳಿಂದಲೂ ಒಪ್ಪುತ್ತಿತ್ತು ; ಹಗಲು ಹೇಗೆ ಉಷ್ಣಕರನಾದ ಸೂರ್ಯನಿಂದ (ಅ + ಹಿಮಕರ) ಮಂಜುಳವೋ ಹಾಗೆ ಹಾವು ಮತ್ತು ಮೊಸಳೆ (ಅಹಿ + ಮಕರ)ಗಳಿಂದ ಮಂಜುಳವಾಗಿತ್ತು ; ಆಕಾಶವು ಹೇಗೆ ಚಂದ್ರ, ಸೂರ್ಯರ ಗಮನದಿಂದ ರಮಣೀಯವೋ ಹಾಗೆ ತೆಪ್ಪ ಹಾಗು ಹಡಗುಗಳಿಂದ ರಮಣೀಯವಾಗಿತ್ತು; ಆನೆ ಹೊಕ್ಕ ಕಾಡು ಹೇಗೆ ಚಿಗುರುಗಳ ಮುರಿಯುವಿಕೆಯಿಂದ ಪ್ರಕಾಶಮಾನವೋ ಹಾಗೆ ಒಳ್ಳೆಯ ಹವಳದ ಬಳ್ಳಿ ಮತ್ತು ತೆರೆಗಳಿಂದ ಪ್ರಕಾಶಮಾನವಾಗಿತ್ತು ; ಶರತ್ಕಾಲದ ಮೋಡವು ಹೇಗೆ ನೀರುಕಣಗಳಿಲ್ಲದೆ ಮನೋಹರವೋ ಹಾಗೆ ಮುತ್ತು ಮತ್ತು ನೀರಿನ ಕಣಗಳಿಂದ ಮನೋಹರವಾಗಿತ್ತು ; ಭೂಭಾಗವು ಹೇಗೆ ದಾನದಿಂದ (ಸದಾನ) ಮತ್ತು ದೀನತಾಭಾವದಿಂದ ಸಹಿತವೋ ಹಾಗೆ ಸದಾ ನದಿಗಳ ಪತಿತ್ವ (ಸದಾ + ನದೀ + ಇನತಾ)ದಿಂದ ಸಹಿತವಾಗಿತ್ತು. ಇದೂ ಅಲ್ಲದೆ, ೧೦೫. ಆ ಸಾಗರವು ಯೋಗಿಯಂತೆ ಆಕಾಶದಂತೆ ಹಂಸನಿಲಯವಾಗಿತ್ತು ; ಅಂದರೆ ಯಮಿಯು ಹಂಸಮಂತ್ರಕ್ಕೆ ನಿಲಯನು. ಅಂಬರತಲವು ಸೂರ್ಯನಿಗೆ ನಿಲಯವು. ಸಮುದ್ರ ಹಂಸಪಕ್ಷಿಗೆ ನಿಲಯ (ಹಂಸ = ಹಂಸಮಂತ್ರ, ಸೂರ್ಯ, ಹಂಸಪಕ್ಷಿ). ವಿಷ್ಣುವಿನಂತೆ, ನವನಿಧಿಯಂತೆ ಪದ್ಮಾಭಿರಾಮವಾಗಿತ್ತು ; ಅಂದರೆ ವಿಷ್ಣುವು ಲಕ್ಷ್ಮೀದೇವಿಯಿಂದ ಅಭಿರಾಮನು, ನಿಧಿಯು ಪದ್ಮವೆಂಬ ನಿಧಿಯಿಂದ ಅಭಿರಾಮ, ಸಮುದ್ರವು ಕಮಲಗಳಿಂದ ಅಭಿರಾಮ, (ಪದ್ಮ = ಲಕ್ಷ್ಮಿ, ಪದ್ಮನಿಧಿ, ಕಮಲ); ಮದೋನ್ಮತ್ತ ಆನೆಯಂತೆ, ಸೂರ್ಯನಂತೆ ಪುಷ್ಕರದಿಂದ ಕೂಡಿತ್ತು ; ಅಂದರೆ ಆನೆಯ ಸೊಂಡಿಲ ತುದಿ

ಚಂ॥ ಪೃಥುತರ ಮಧ್ಯಕಂಕಣಮೆ ಸುತ್ತಿದ ಪನ್ನಗನಾಗೆ ತತ್ಫಣಾ
ಪ್ರಥಿತಸುರತ್ನಮಾಗೆ ಮಣಿಸಾನು ಸುರರ್ಪಿರಿದಾಶೆಯಿಂದೆ ಮೇಣ್
ಮಥಿಯಿಸಲೆಂದು ಮಂದರಮನಲ್ಲಿರದಿಟ್ಟರೆನಿಪ್ಪ ಭಾವಮಂ
ಕಥಿಯಿಸುವಂತೆ ಮೇರು ಮೆಱೆದಿರ್ದುದು ಮಧ್ಯದೊಳಾ ಪಯೋಧಿಯಾ ೧೦೬

ಮ॥ಸ್ರ॥ ನುತನಕ್ಷತ್ರಾಚ್ಛಮುಕ್ತಾವೃತಮಮೃತಮಯೂಖಾರ್ಕ ಸದ್ದರ್ಪಣಂ ತ
ದ್ಗತ ಶೃಂಗೋತ್ತುಂಗ ದಂಡಾಮರವರ ಸರಿದುದ್ಯದ್ಧ್ವಜಂ ರತ್ನರುಕ್ಛಿ
ತ್ರಿತಪಾಥೋಭೃತ್ಪಟಂ ಶಂಕರಗೃಹ ಕಲಶಂ ದೇವರಾಜಾಧಿದೇವ
ಪ್ರತಿಮಂ ಸ್ವರ್ಣಾಚಲಾಲಂಕೃತರಥಮೆಸೆದತ್ತೀಶ್ವರಾವಾಸಯೋಗ್ಯಂ ೧೦೭

ಯಿಂದ, ಸೂರ್ಯನು ಆಕಾಶದಿಂದ, ಸಮುದ್ರವು ನೀರಿನಿಂದ ಕೂಡಿತ್ತು. (ಪುಷ್ಕರ= ಆನೆಯ ಸೊಂಡಿಲ ತುದಿ, ಆಕಾಶ, ನೀರು). ವೀರ ಹನುಮಂತನಂತೆ, ಚೈತ್ರ ಮಾಸದ ಮರದಂತೆ, ಉದ್ಯತ್ ಪ್ರವಾಲಾಶ್ರಯವಾಗಿತ್ತು ; ಅಂದರೆ ಹನುಮಂತನು ಎತ್ತರಿಸಿದ ಶ್ರೇಷ್ಠ ಬಾಲವುಳ್ಳವನು, ಚೈತ್ರಮಾಸದ ಮರವು ಉದಯಗೊಳ್ಳು ತ್ತಿರುವ ಚಿಗುರುಗಳಿಂದ ಕೂಡಿದುದು, ಸಮುದ್ರವು ಜನಿಸುವ ಹವಳದ ಬಳ್ಳಿಗಳಿಗೆ ಆಶ್ರಯವಾಗಿತ್ತು. (ಪ್ರವಾಲ= ದೊಡ್ಡ ಬಾಲ, ಚಿಗುರು, ಹವಳ). ಹೂವಿನಂತೆ ಉತ್ತಮನ ಹಾಗೆ ಸಂಭೃತರಸಶ್ರೀಗೆ ಆಗರವಾಗಿತ್ತು ; ಅಂದರೆ ಹೂವು ತುಂಬಿದ ಮಕರಂದದಿಂದ ಕೂಡಿದುದು, ಉತ್ತಮನು ಶಾಂತರಸನನ್ನು ಹೊಂದಿದವನು, ಸಮುದ್ರವು ರಾಶಿಯಾಗಿ ಕೂಡಿರುವ ಜಲಸಂಪತ್ತಿಗೆ ಆಗರವಾದುದು. (ರಸ= ಮಕರಂದ, ಶಾಂತರಸ, ನೀರು). ೧೦೬. ದೊಡ್ಡದಾದ ಮಧ್ಯಭಾಗದ ಕಂಕಣವೇ ಸುತ್ತುವರಿದ ಆದಿಶೇಷ ನಂತಿರಲು, ಮಣಿಗಳಿಂದ ಕೂಡಿದ ತಪ್ಪಲುಪ್ರದೇಶವೇ ಆ ಹಾವಿನ ಹೆಡೆಯ ರತ್ನ ಗಳಂತಿರಲು, ದೇವತೆಗಳು ಹೆಬ್ಬಯಕೆಯಿಂದ ಪುನಃ ಸಮುದ್ರಮಥನ ಮಾಡಲು ಮಂದರ ಪರ್ವತವನ್ನು ಅಲ್ಲಿ ಇಟ್ಟರೊ ಎನ್ನುವ ಭಾವವನ್ನುಂಟುಮಾಡುವಂತೆ ಆ ಸಮುದ್ರ ಮಧ್ಯದಲ್ಲಿ ಮೇರುಪರ್ವತವು ಶೋಭಿಸುತ್ತಿತ್ತು. ೧೦೭. ದೇವರಾಜಾಧಿರಾಜನೂ, ಅಪ್ರತಿಮನೂ ಆದ ಈಶ್ವರನ ಆವಾಸಕ್ಕೆ ಯೋಗ್ಯವಾದಂತಹ ಮೇರುಪರ್ವತವೆಂಬ ಅಲಂಕರಿಸಲ್ಪಟ್ಟ ರಥವು ಶ್ರೇಷ್ಠವಾದ ನಕ್ಷತ್ರಗಳೆಂಬ ಮುತ್ತುಗಳಿಂದಲೂ, ಆವರಿಸಲ್ಪಟ್ಟ ಅಮೃತಕಿರಣನಾದ ಚಂದ್ರ ಮತ್ತು ಸೂರ್ಯರೆಂಬ ಒಳ್ಳೆಯ ಕನ್ನಡಿಗಳಿಂದಲೂ, ಆ ಮೇರುವಿನಲ್ಲಿರುವ ಶಿಖರವೆಂಬ ಎತ್ತರ ಧ್ವಜಸ್ತಂಭಕ್ಕೆ ದೇವತೆಗಳ ನದಿಯಾದ ಗಂಗಾ ನದಿಯೇ ಪ್ರಕಾಶಿಸುವ ಪಟವಾಗಿಯೂ, ನವರತ್ನಗಳ ಕಾಂತಿಯಿಂದ ವಿಚಿತ್ರವಾದಂಥ ಮೋಡಗಳೆಂಬ ಪಟವಸ್ತ್ರಗಳುಳ್ಳದ್ದಾಗಿಯೂ, ಶಂಕರನ ವಾಸಗೃಹವಾದ ಕೈಲಾಸವೇ

ಉ॥ ಮೇವ ಮುಗಿಲ್ಗಳಿಂ ಮುಸುಕಿ ಮೋಹಿಪ ಭೂಧರವೊಂದು ಪಕ್ಕದೊಳ್
ತಾವರೆಗಣ್ಣನಂತಿರೆ ಧರಾಧರವೊಂದು ಸಧಾತು ನಿಂದ ವಾ
ಣೀವರನಂತೆ ತಳ್ತಿರೆ ಮೊದಲ್ತುದಿಗಾಣಿಸದಿರ್ದ ಸಾಂದ್ರತೇ
ಜೋವಹ ಲಿಂಗದಂತೆ ಕನಕಾಚಲಮುಜ್ವಲಮಾದುದುರ್ವಿಯೊಳ್[1] ೧೦೮

ಕಂ॥ ಹರನಿರ್ಪ ಗಿರಿಯಿದೆಂದಾ
ದರದೆ ನಭೋಲಕ್ಷ್ಮಿ ಭಗಣ ವಿಚಕಿಲಸಮುದಿಂ
ದಿರದರ್ಚಿಸಿ ಬೆಳಗುವ ಬಂ
ಧುರದೀಪದ ತೆಱದೆ ಹಿಮಕರಂ ಬಲವರ್ಪಂ ೧೦೯

ಖರನಖರದೆ ಹರಿ ಗಿರಿ ಕರಿ
ವರಶಿರಮಂ ಸೀಳ್ದು ಕೆದರ್ದ ಮುತ್ತಿನ ಮಣಿಗಳ್
ತರುಗಳೊಳೆಡೆದೊಡರ್ದಂತೊ
ಪ್ಪಿರುತಿರ್ಪವು ತಪ್ಪಲಲ್ಲಿ ಮಿಗೆ ತಾರಗೆಗಳ್ ೧೧೦

ಸಾರಸಸಖನಾ ನಗಕಾ
ಸಾರಸಮುತ್ಪನ್ನ ಕಮಳಮಂ ಕೀಳ್ತಾಂತಾ
ದಾರಿಯೊಳಲ್ಲದೊಡೆ ನಭ
ಶ್ಚಾರಿಗೆ ನೆಲನಱಿಯೆ ನಳಿನಮೇಂ ದೊರೆದಪುದೇ ೧೧೧

ಧ್ವಜಕಲಶವುಳ್ಳದ್ದಾಗಿಯೂ ಶೋಭಿಸುತ್ತಿತ್ತು. ೧೦೮. (ಆ ಮೇರು ಪರ್ವತದ) ಒಂದು ಪಕ್ಕದಲ್ಲಿ ಮೋಡಗಳಿಂದ ಮುಸುಕಿ ಮೋಹಗೊಳಿಸುವ ಪರ್ವತವೊಂದು ಮಹಾ ವಿಷ್ಣುವಿನಂತೆ ಇತ್ತು. ಮತ್ತೊಂದು ಪರ್ವತವು ಗೈರಿಕಾದಿ ಧಾತುಗಳಿಂದ ಕೂಡಿ ನಿಂತು ಕೊಂಡಿರುವ ಬ್ರಹ್ಮನಂತೆ ಇತ್ತು. ತುದಿ ಮೊದಲುಗಳೇ ಗೊತ್ತಾಗದಿದ್ದ ವಿಶೇಷ ತೇಜಸ್ಸಿನಿಂದ ಕೂಡಿದ ಜ್ಯೋತಿರ್ಲಿಂಗದಂತೆ ಆ ಕನಕಾಚಲವು ಭೂಮಿಯಲ್ಲಿ ಉಜ್ವಲ ವಾಗಿ ಕಾಣುತ್ತಿತ್ತು. ೧೦೯. ಪರಮೇಶ್ವರನಿರುವ ಪರ್ವತವಿದೆಂದು ಆದರದಿಂದ ಆಕಾಶ ವೆಂಬ ಲಕ್ಷ್ಮಿಯು ನಕ್ಷತ್ರಗಳೆಂಬ ದುಂಡುಮಲ್ಲಿಗೆಯ ಹೂವುಗಳಿಂದ ತಪ್ಪದೆ ಪೂಜಿಸಿ, ಮನೋಜ್ಞವಾದ ದೀಪಗಳಿಂದ ಆರತಿ ಬೆಳಗುವಳೋ ಎಂಬಂತೆ ಚಂದ್ರನು ಬಲಪ್ರದಕ್ಷಿಣೆ ಬರುತ್ತಿದ್ದನು. ೧೧೦. ತಪ್ಪಲುಪ್ರದೇಶದಲ್ಲಿ ಪ್ರಕಾಶಿಸುವ ನಕ್ಷತ್ರಗಳು ಸಿಂಹವು ತನ್ನ ತೀಕ್ಷ್ಣವಾದ ಉಗುರುಗಳಿಂದ ಪರ್ವತಗಳೆಂಬ ಆನೆಗಳನ್ನು ಸೀಳಿದಾಗ ಕೆದರಿದ ಮುತ್ತಿನ ಮಣಿಗಳು ಮರಗಳಲ್ಲಿ ಎಡಬಿಡದೆ ಸೇರಿಕೊಂಡಿರುವುವೋ ಎಂಬಂತೆ ಇದ್ದವು. ೧೧೧. ಕಮಲಮಿತ್ರನಾದ ಸೂರ್ಯನು ಆ ಬೆಟ್ಟದ ಸರೋವರದಲ್ಲಿ ಹುಟ್ಟಿದ ಕಮಲಗಳನ್ನು ಕಿತ್ತು ಧರಿಸಿಕೊಂಡನು. ಹಾಗಲ್ಲದಿದ್ದರೆ ಭೂಜನರಿಗೆಲ್ಲ ತಿಳಿಯುವಂತೆ ಆಕಾಶಮಾರ್ಗ

1. ಟಿಪ್ಪಣಿ : ಮೋಡಗಳಿಂದ ಕಪ್ಪಾದ ಕಾರಣ ವಿಷ್ಣುವಿನಂತೆಯೂ, ಗೈರಿಕಧಾತುಗಳಿಂದ ಕೆಂಪಾದ ಕಾರಣ ರಜೋಗುಣ ವಿಶಿಷ್ಟನಾದ ಬ್ರಹ್ಮನಂತೆಯೂ ಇದ್ದಿತೆಂದು ಅಭಿಪ್ರಾಯ (ರಂ)

ನಗದ ಗಗನೇಚರಿಯ ಮು
ಖ್ಯೊಗರುಗುವ ಮೊಗಂ ಮೃಗಾಂಕನುಂ ಸಂಧಿಸಿ ತ
ನ್ಮೃಗಮದತಿಲಕಂ ಪತ್ತಿರೆ
ಜಗಮಱಿಯದೆ ವಟಮಿದೆಂಬುದಿಂದುವ ಕಂದಂ ೧೧೨

ಗುರುತರ ತರುತಳದೊಳ್ಕಿ
ನ್ನರಿಯರ ಸರಕೆಳಸಿ ಬಳಸದಿರೆ ನಿಜಹರಿಣಂ
ಹರಿಣಾಂಕಂ ಸಲೆ ನಿಲೆ ತ
ತ್ತರುಣಿಯರಿದು ಸುಕರಮುಕುರಮೆಂದೀಕ್ಷಿಸುವರ್ ೧೧೩

ಮುನಿದಿನಿಯಳಿನಿಯನೊಳ್ ದಲ್
ನನೆದೀವಿದ ಜಾದಿಯಲ್ಲಿ ಮೆಯ್ಗಱೆದಿರೆ ತ
ದ್ವನಿತೆಯ ನಿಡುಜಡೆಗಂಡದ
ನನುವಿಸುವಂ ರಾಹುವೆಂದು ರಜನಿಪನದಱೊಳ್ ೧೧೪

ಚಪಳಾಕ್ಷಿಯರಾ ಗಿರಿಯೊಳ್
ತಪನಾತಪಮೆಯ್ದೆ ಸುಟ್ಟೊಡಿರಲಾಱದೆ ಪಾ
ಱಿ ಪಯೋಧರದೆಡೆಯೊಳ್ ಶೀ
ತಪಯೋಜಾಕರದೆ ಪೊಕ್ಕು ಜಳಮಂ ಕಳೆವರ್ ೧೧೫

ದಲ್ಲಿ ಸಂಚರಿಸುವವರಿಗೆ ಆ ಹೂವುಗಳು ದೊರಕುವುದು ಶಕ್ಯವೆ ? ೧೧೨. ಆ ಮೇರು ಪರ್ವತದ ಅಂತರಿಕ್ಷದಲ್ಲಿ ಸಂಚಾರಮಾಡುವ ಅಪ್ಸರೆಯ ಕಾಂತಿವಿಶಿಷ್ಟವಾದ ಮುಖಕ್ಕೆ ಚಂದ್ರಬಿಂಬವು ತಗುಲಿ ಆ ಮುಖದಲ್ಲಿರುವ ಕಸ್ತೂರಿತಿಲಕವು ಚಂದ್ರನಿಗಂಟಲಾಗಿ ಅದಕ್ಕೆ ಕಪ್ಪುಂಟಾಯಿತು. ಜಗದ ಜನರು ತಿಳಿಯದೆ ಆ ಚಂದ್ರನ ಕಂದು ಬಣ್ಣವನ್ನು ವಟವೆಂದು (ಆಲವೆಂದು) ಕರೆಯುತ್ತಾರೆ. ೧೧೩. ಚಂದ್ರನ ವಾಹನವಾದ ಹರಿಣವು ದೊಡ್ಡದೊಂದು ಮರದ ಕೆಳಗೆ (ಇರುವ) ಕಿನ್ನರಸ್ತ್ರೀಯರ ಕಿನ್ನರಿ ವಾದ್ಯಸ್ವರವನ್ನು ಕೇಳಬಯಸಿ ಮುಂದಕ್ಕೆ ನಡೆಯದೆ ನಿಲ್ಲಲಾಗಿ, ಆ ಹೆಂಗಸರು ಇದು ಸುಂದರವಾದ ಕನ್ನಡಿಯೆಂದು (ಆ ಚಂದ್ರನನ್ನು) ನೋಡುತ್ತಿದ್ದರು. ೧೧೪. ಗಂಡನ ಮೇಲೆ ಕೋಪಗೊಂಡ ದೇವಾಂಗನೆಯೊಬ್ಬಳು ಹೂ ತುಂಬಿದ ಜಾಜಿಯ ಬಳ್ಳಿಯಲ್ಲಿ ಅಡಗಿರಲಾಗಿ, ಆ ಹೆಂಗಸಿನ ಉದ್ದವಾದ ಜಡೆಯನ್ನು ಕಂಡು ಚಂದ್ರನು ಅದನ್ನು ರಾಹುವೆಂದು ಶಂಕಿಸುತ್ತಿದ್ದನು. ೧೧೫. ಚಪಲನೇತ್ರೆಯರಾದ ದೇವತಾಸ್ತ್ರೀಯರು ಸೂರ್ಯನ ಬಿಸಿಲಿನ ಕಾವಿನಿಂದ 'ಸುಡುತ್ತಿರಲಾಗಿ, (ಅಲ್ಲಿ) ನಿಂತಿರಲಾರದೆ ಮೋಡಗಳ ಬಳಿಯನ್ನು ಸೇರಿ, (ಅಲ್ಲಿರುವ) ಶೀತವಾದ ಕಮಲ ಸರೋವರದಲ್ಲಿ ಹೊಕ್ಕು

ಚಂ॥ ವಿರಹಿಣಿಯಂತೆ ತದ್ಗಿರಿಯ ತಂಗೊಳದೊಳ್ ನೆಲಸಿರ್ಪ ಪದ್ಮಿನೀ
ತರುಣಿಯ ಚಾರುಕೋರಕ ಕುಚಂಗಳನುತ್ಕರದಿಂದಿನಂ ಸಮುಂ
ತಿರದಮರ್ದಪ್ಪೆ ಕಂಟಕಿತಮಾದ ಲತಾಂಗಮೆ ಕಂಪಿಪಂತೆ ತೆ
ಳ್ದಿರೆ ಪೊಯೆ ತೋರ್ಪುದೇಳ್ದ ಬೆಮರಂತಿರೆ ತದ್ಗತ ಶೀಕರೋತ್ಕರಂ ೧೧೬

ಮ॥ ಪರಿತಂದಾ ಗಿರಿಯೊಂದು ತಪ್ಪಲೆಳೆವುಲ್ಲಂ ಮೇದು ಮೆಯ್ವೆರ್ಚಿ ನಿ
ರ್ಜರಕಾಂತಾನನ ಚಂದ್ರನಿಂದೊಸರ್ದ ಚಂದ್ರಾಶ್ಮಾಂಬುವಂ ಪೀರ್ದು ಕಿ
ನ್ನರಗೀತಕ್ಕೆ ಕಡಂಗಿ ಕಾಮದುಘಮುದ್ಯತ್ ಕ್ಷೀರಮಂ ಕೆಚ್ಚಲಿಂ
ಸುರಿಯಲ್ಮುಳ್ಗಿ ಸುಧಾಂಗನಾದನದಱೊಳ್ ಸಾಂದಿಂದುವೇನೆಂದಪೆಂ ೧೧೭

ಚಂ॥ ಅರಿಗಿರಿವೈರಿ ವಾರಿಧರಗುಪ್ತಚರರ್ಕಳನಟ್ಟೆ ಕಂಡು ತ
ದ್ಗಿರಿ ನೆಱೆತಳ್ತು ಶೃಂಗಕರದಿಂ ಕಶೆಯಿಂ ಕಡುಕಾಯ್ದು ಪೊಯ್ವವೋ
ಲಿರೆ ಸೆಳೆಮಿಂಚು ಕಣ್ಬನಿವೊಲಲ್ ಪರಿತರ್ಪವೊಲೊಪ್ಪೆ ವೃಷ್ಟಿ ಶೋ
ಕರವದ ಮಾಳ್ಕೆಯಿಂದವಱ ಪೆರ್ಮೊಳಗೊಪ್ಪುಗುಮಲ್ಲಿ ತಪ್ಪಲೊಳ್ ೧೧೮

(ತಮ್ಮ) ತಾಪವನ್ನು ಕಳೆದುಕೊಳ್ಳುತ್ತಿದ್ದರು. ೧೧೬. ಆ ಮೇರುಗಿರಿಯ ತಂಗೊಳದಲ್ಲಿ ವಿರಹಿಣಿಯಾಗಿ ನೆಲಸಿರುವ ಪದ್ಮಿನೀಜಾತಿಯ ಹೊಗಸಿನ (ಕಮಲವೆಂಬ ಸ್ತ್ರೀಯಳ) ಮನೋಹರವಾದ ಮೊಗ್ಗುಗಳಿಂತಿರುವ ಮೊಲೆಗಳನ್ನು ಸೂರ್ಯನು ತನ್ನ ಕಿರಣಹಸ್ತಗಳಿಂದ ಆಲಿಂಗಿಸಿ ಮುಟ್ಟಲಾಗಿ, ರೋಮಾಂಚನಗೊಂಡು ಲತೆಯಂತಿರುವ ದೇಹವು ನಡಗುವಂತೆ ತೆಳುವಾದ ತೆರೆಯು ಹೊಯ್ಯುತ್ತಿರಲು ಅದರಿಂದ ಹೊರಹೊರಟ ನೀರಿನ ಕಣಗಳು ಬೆಮರಿನಂತೆ (ಇದ್ದವು). ೧೧೭. ಕಾಮಧೇನುವು ಬಂದು ಆ ಮೇರುಗಿರಿಯ ಒಂದು ತಪ್ಪಲುಪ್ರದೇಶದಲ್ಲಿರುವ ಎಳೆಯ ಹುಲ್ಲನ್ನು ಮೇದು ಸೊಕ್ಕಿದ ಶರೀರವುಳ್ಳದ್ದಾಗಿ, ದೇವತಾಸ್ತ್ರೀಯರ ಮುಖವೆಂಬ ಚಂದ್ರನಿಂದ ಹರಿದುಬಂದ ಚಂದ್ರಕಾಂತಶಿಲೆಯ ನೀರನ್ನು ಕುಡಿದು, ಕಿನ್ನರಸ್ತ್ರೀಯರ ಸಂಗೀತಕ್ಕೆ ಸಂತೋಷಗೊಂಡು ವಿಶೇಷವಾಗಿ ಕೆಚ್ಚಲಿನಿಂದ ಹಾಲನ್ನು ಸುರಿಸಲು, ಆ ಹಾಲಿನಲ್ಲಿ ಮುಳುಗಿ ಚಂದ್ರನು ಸುಧಾಂಗನಾದನು. ಏನು ಹೇಳಲಿ! ೧೧೮. ವೈರಿಯಾದ ಇಂದ್ರನು ಮೋಡಗಳೆಂಬ ಗುಪ್ತಚರರನ್ನು ಅಟ್ಟಲು, ಆ ಬೆಟ್ಟವು ಅದನ್ನು ನೋಡಿ, ತನ್ನ ಶಿಖರವೆಂಬ ಕೈಯಲ್ಲಿ ಚಾಟಿಯನ್ನು ಚೆನ್ನಾಗಿ ಹಿಡಿದು ಕೋಪದಿಂದ ಹೊಯ್ಯುವಂತೆ ಸೆಳೆಮಿಂಚು ಶೋಭಿಸುತ್ತಿತ್ತು. (ಆ ಹೊಡೆತವನ್ನು ತಾಳಲಾರದೆ) ಕಣ್ಣೀರು ಹರಿಯುತ್ತಿದೆಯೋ ಎಂಬಂತೆ ಇರಲು, ಶೋಕಧ್ವನಿಯ ರೀತಿಯಲ್ಲಿ ದೊಡ್ಡ ಗುಡುಗು ಹೊರಹೊಮ್ಮುತ್ತಿರಲು, ಆ ತಪ್ಪಲಲ್ಲಿ ಗುಡುಗಿನಿಂದ ಕೂಡಿದ ಮಳೆ ಬೀಳುವ ರೀತಿಯು ಒಪ್ಪುತ್ತಿತ್ತು.

ಚರಿಪ ನಿಳಿಂಪಕಾಂತೆಯರ ಪಚ್ಚದ ಪಚ್ಚೆಯ ಕಾಂತಿ ಕಣ್ಗೆ ಮುಂ
ಬರಿಯೆ ಕಱುಂಕೆಗೆತ್ತೆಳಸಿ ಚಂದ್ರನ ಪುಲ್ಲೆ ತುಡುಂಕಲೆಂದು ನಿಂ
ದಿರೆ ಪರಿವೊಜ್ಝರಂಬಿಡಿದು ಪುಟ್ಟಿದ ಪುಲ್ಗಳನೀವರಲ್ಲಿ ತ
ತ್ತರುಣಿಯರಂದದರ್ಕೆ ನಿಜನೇತ್ರವ ನೇತ್ರದೆ ಪೋಲ್ತ ನಣ್ಪಿನಿಂ ೧೧೯

ಕಂ॥ ಎಱಪ ಶರಧರದ ತುಱುಗ
ಲ್ಕಱೆವ ಘನೋಪಳಕದಂಬಮುಡುಗಣಮನೆ ಮೇಣ್
ತಱೆಸಂದು ನುಂಗಿ ಕಳ್ತಲೆ
ನೆಱೆಯುಗುಳ್ವಂದೊಪ್ಪವೊಪ್ಪೆ ತಪ್ಪಲೊಳೆಸೆಗುಂ ೧೨೦

ಮುಗಿಲಿಂದೆ ತಟಲ್ಲತೆ ಮಿಗೆ
ಚಿಗಿದೊಗೆವಂದದೊಳೆ ನೆಗೆವ ಖಚರಿಯ ಮುಡಿಯಿಂ
ದುಗುವಲರ್ಗಳ್ಕರಮೆಸೆಗುಂ
ಮುಗಿಲಿಂ ಮುಗಿಲೊಗೆದು ಕಱೆವ ಕರಕಂಗಳವೊಲ್ ೧೨೧

ಮ॥ ಗಿರಿಶೃಂಗಾಗ್ರದೆ ನಿಂದು ನೆಟ್ಟನಿದಿರೊಳ್ತೋರ್ಪಿಂದುವಂ ನೋಡಿ ಪಂ
ಕರುಹಂ ತಪ್ಪದಿದೆಂದು ಮಧ್ಯದ ಕಳಂಕಂ ಕಂಡು ಮತ್ತಾಳಿಯೆಂ
ದು ರಣತ್ಕಂಕಣಹಸ್ತಮಂ ನೆಗಪಿ ಸೋವುತ್ತಿರ್ಪ ಗಂಧರ್ವ ಸುಂ
ದರಿಯಂ ಕಿನ್ನರಿಯರ್ ಕರಂ ನಗುವರಾ ಸ್ವರ್ಣಾಚಳಪ್ರಾಂತದೊಳ್ ೧೨೨

೧೧೯. (ಆ ಮೇರುವಿನಲ್ಲಿ) ಓಡಾಡುತ್ತಿರುವ ದೇವತಾಸ್ತ್ರೀಯರ ಆಭರಣಗಳಲ್ಲಿರುವ ಪಚ್ಚೆಯ ಕಾಂತಿಯು ಮುಂದೆ ಹರಡಿರಲಾಗಿ, ಗರಿಕೆಯೆಂದು ಭಾವಿಸಿ ಚಂದ್ರನ ಜಿಂಕೆಯು ಅದನ್ನು ತುಡುಕಲೆಂದು ನಿಂತಿರಲಾಗಿ, ಆ ದೇವತಾಸ್ತ್ರೀಯರು ತಮ್ಮ ನೇತ್ರದ ಹೋಲಿಕೆಯುಳ್ಳ ಅವುಗಳ ನೇತ್ರಗಳ ನಂಟನಿಂದ ಅವಕ್ಕೆ ಆ ಬೆಟ್ಟದಲ್ಲಿ ಹರಿಯುತ್ತಿರುವ ಝರಿಗಳ ಮಗ್ಗಲು ಭೂಮಿಯಲ್ಲಿ ಹುಟ್ಟಿದ ಹುಲ್ಲನ್ನು (ಕಿತ್ತು ತಂದು ತಿನ್ನಲು) ಕೊಡುತ್ತಿದ್ದರು. ೧೨೦. (ಆ ಗಿರಿಯ) ತಪ್ಪಲುಪ್ರದೇಶದಲ್ಲಿ ಎರಗುತ್ತಿರುವ ಮೇಘಗಳ ಸಮೂಹವು ಸುರಿಸುತ್ತಿರುವ ಆಣೆಕಲ್ಲುಗಳ ಸಮೂಹವು ಕತ್ತಲೆಯು ನಕ್ಷತ್ರಗಳ ಸಮೂಹವನ್ನೇ ಚೆನ್ನಾಗಿ ನುಂಗಿ ಉಗುಳುತ್ತಿದೆಯೋ ಎಂಬ ರೀತಿಯಲ್ಲಿ ಮನೋಹರವಾಗಿತ್ತು. ೧೨೧. ಮೋಡಗಳಿಂದ ಮಿಂಚಿನಬಳ್ಳಿಯು ಜಿಗಿಯುವಂತೆ ಹಾರುತ್ತಿದ್ದ ದೇವಾಂಗನೆಯರ ತುರುಬಿನಿಂದ ಬೀಳುವ ಹೂವುಗಳು ಮೇಘದಿಂದ ಮೇಘವು ಹುಟ್ಟಿ ಸುರಿಸುತ್ತಿರುವ ಆಣೆಕಲ್ಲುಗಳ ಹಾಗೆ ಚೆನ್ನಾಗಿ ಶೋಭಿಸುತ್ತಿತ್ತು. ೧೨೨. ಮೇರು ಪರ್ವತಪ್ರಾಂತದ ಗಿರಿಯ ಶಿಖರದ ತುದಿಯಲ್ಲಿ ನಿಂತು ನೇರವಾಗಿ ಎದುರಿನಲ್ಲಿಯೇ ಕಾಣುವ ಚಂದ್ರನನ್ನು ನೋಡಿ ಗಂಧರ್ವಸ್ತ್ರೀಯು ಇದು ಕಮಲವೇ ಆಗಿರಬೇಕೆಂದೂ ಮಧ್ಯದ ಕಪ್ಪು ಕಲೆಯು ಉನ್ಮತ್ತ ದುಂಬಿಯೇ ಆಗಿರಬೇಕೆಂದೂ, (ತಿಳಿದು) ತನ್ನ ಧ್ವನಿ ಮಾಡುವ ಕಂಕಣದಿಂದ ಕೂಡಿದ ಕೈಯನ್ನು ಮೇಲೆತ್ತಿ ದುಂಬಿಯನ್ನೋಡಿಸಲು ಯತ್ನಿ

ಚಂ॥ ನಗತಟನಂದನಸ್ಥಿತ ಲತಾಭವನಂಗಳೊಳಾಂತನಂಗಕೇ
ಳಿಗಳನೆ ಖೇಚರೀನಿವಹಮಾಗಸಕಾಗಳೆ ಪಾಱಿ ಪೋಗಲು
ಜ್ಜುಗಿಸಿ ಬಳಲ್ದು ಪಾಱಲಳವಿಲ್ಲದೆ ಕಾರ್ಮುಗಿಲೇಱಿ ನಲ್ಲರೊ
ಳ್ನಗುತೆ ವಿಳಾಸದಿಂ ತಳರ್ವುದಲ್ಲಿಯ ಮಿಂಚಿನೆ ಚಂಚಲೇಕ್ಷಣಂ ೧೨೩

ಕಂ॥ ಪೊಸಸುಸಿಲೊಳೆಸಗೆ ರಮಣಂ
ಮಿಸುಗುವ ನೆಲೆವೊಲೆಯೊಳೆಸೆವ ನಖಹತಿಯುದನಂ
ಮುಸುಕುದೆಱೆದೆಱಗಿ ನೋಡು
ತ್ತ್ರಸವಸದಿಂ ದಾರಿತಪ್ಪುವರ್ಖೇಚರಿಯರ್ ೧೨೪

ಚಂ॥ ಮುಳಿದು ನಿಜೇಶನೊಳ್ಖಚರಿ ಕಾರ್ಮುಗಿಲೊಳ್ಮಱೆಗೊಂಡು ಗಾಳಿಯಿಂ
ತಳರ್ದೊಡದಾಗಸಕ್ಕೊಡನೆ ತಾಂ ತಳರುತ್ತಿರೆ ಸೋರ್ವ ಕರ್ಪಿನು
ತ್ಪಳದಳಮಾಲೆಯಾಂತ ಕಬರೀಭರದಿಂ ಕರಿವಾವ ಕರ್ಚಿ ಕಂ
ಗೊಳಿಸುವ ಸೋಗೆಯಿಂ ಕೆಳೆತನಕ್ಕದು ತಾಳ್ದುದೆನಲ್ ವಿರಾಜಿಕುಂ ೧೨೫

ವ॥ ಇಂತು ಸಕಳ ವಿಭವ ಸಮಗ್ರ ಸಮುಜ್ಜ್ವಳ ವಿಳಾಸಂಬಡೆದು ರಂಜಿಪಾ ಪೊಂಬೆಟ್ಟದ ನಿತಂಬದೊಳಿಂಬುವಡೆದ ಜಂಬು ಜಂಬೀರ ಪನಸ ಪಾಟಳಿ ರಸಾಲ ತಮಾಲ ತಾಲ ಹಿಂತಾಲ ನಾರಿ

ಸುವುದನ್ನು ಕಂಡು ಕಿನ್ನರಸ್ತ್ರೀಯರು ನಗುತ್ತಿದ್ದರು. ೧೨೩. ಆ ಪರ್ವತದ ಸಾನು ಪ್ರದೇಶಗಳಲ್ಲಿರುವ ಬಳ್ಳಿಮನೆಗಳಲ್ಲಿ ಖೇಚರ ದಂಪತಿಗಳು ಸೇರಿ, ಅನಂಗಕೇಳಿಯನ್ನು ಗೆಯ್ದು, ಆಕಾಶಕ್ಕೆ ಆಗಲೆ ಹಾರಿಹೋಗಲು ಪ್ರಯತ್ನಿಸಿ, ಬಳಲಿ ಶಕ್ತಿಯಿಲ್ಲದೆ ಕಾರ್ಮುಗಿಲುಗಳನ್ನು ಹತ್ತಿ ತಮ್ಮ ನಲ್ಲರೊಡನೆ ಮುಗುಳುನಗುತ್ತ ಹೋಗುತ್ತಿದ್ದರು. (ಆ ಸಮಯದ) ಅವರ ಚಂಚಲನೋಟಗಳು ಆ ಮೋಡಗಳಲ್ಲಿನ ಮಿಂಚುಗಳಂತೆ ಪ್ರಕಾಶಿಸುತ್ತಿದ್ದವು. ೧೨೪. ಆ ದೇವತಾಸ್ತ್ರೀಯರು ನೂತನ ರತಿಕ್ರೀಡೆಯಲ್ಲಿ ಶೋಭಿಸುವ ಸ್ಥಿರವಾದ ತಮ್ಮ ಮೊಲೆಗಳಲ್ಲಿ ಕಾಣುತ್ತಿರುವ ಗಂಡನಿಂದಾದ ಉಗುರಿನ ಗಾಯವನ್ನು ಮುಸುಕು ತೆರೆದು ಬಗ್ಗಿ ನೋಡಿಕೊಳ್ಳುವ ಅವಸರದಲ್ಲಿ ದಾರಿಯನ್ನೇ ತಪ್ಪುತ್ತಿದ್ದರು. ೧೨೫. ಓರ್ವ ಖಚರಿಯು ತನ್ನ ಗಂಡನೊಡನೆ ಕೋಪಗೊಂಡು ಕಾರ್ಮುಗಿಲಿನಲ್ಲಿ ಮರೆಗೊಂಡಳು. ಗಾಳಿಯಿಂದ ಆ ಮೇಘವು ಆಕಾಶದಲ್ಲಿ ಹಾರಿಹೋಗುತ್ತಿರಲು ಅದರೊಡನೆಯೇ ಅವಳೂ ಹೋಗುತ್ತಿರಲಾಗಿ ಜೋತಾಡುವ ಕನ್ನೈದಿಲೆಯ ಎಸಳುಗಳಿಂದ ಮಾಡಿದ ಮಾಲೆಯನ್ನು ಧರಿಸಿದ ತುರುಬಿನಿಂದ ಅವಳು ವಿರಾಜಿಸುತ್ತಿದ್ದಳು. ಆಗ ಕೃಷ್ಣಸರ್ಪವನ್ನು ಕಚ್ಚಿಕೊಂಡಿರುವ ನವಿಲನ್ನು ಸ್ನೇಹದಿಂದ ಮೇಘವು ತನ್ನೊಡನೆ ಒಯ್ಯುತ್ತಿರುವುದೋ ಎಂಬಂತೆ ಕಾಣಿಸಿತು. ವ॥ ಹೀಗೆ ಸಮಸ್ತ ವೈಭವಪೂರ್ಣವಾಗಿ ಪ್ರಕಾಶಿಸುವ ಸೌಂದರ್ಯವನ್ನು ಹೊಂದಿ ಶೋಭಿಸುವ ಆ ಕಾಂಚನಪರ್ವತದ ಅಕ್ಕಪಕ್ಕದಲ್ಲಿ ವಿಸ್ತಾರವಾಗಿ (ಬೆಳೆದುನಿಂತ) ನೇರಿಳೆ, ಲಿಂಬೆ, ಹಲಸು, ಪಾದರಿ,

ಕೇಳ ನಾರಂಗ ಲುಂಗ ಲವಂಗ ಪೂಗ ಪುನ್ನಾಗ ನಾಗಕೇಸರ ಕರ್ಣಿಕಾರ ಖರ್ಜೂರ ಕರ್ಪೂರ ಕದಳಿಷಂಡ ಕಮಲಷಂಡಂಗಳಿಂದಿಡಿದು ಕಡುಚೆಡಂಗಾದ ಸಾರ್ವರ್ತುಕಮಾದ ಸದಮಳ ತಪೋವನದ ಪರಮ ಪವಿತ್ರವೆತ್ತ ಪರ್ಣಶಾಲೆಯೊಳ್ ಇಟ್ಟ ವಿಭೂತಿಯ ತೊಟ್ಟ ರುದ್ರಾಕ್ಷಿಯ ಉಟ್ಟ ಮೃಗಾಜಿನದ ಬಿಟ್ಟೆಳಲ್ವ ಕೆಂಜೆಡೆಯ ಕಟ್ಟಿದ ಕರಣಂಗಳ ನಟ್ಟನಿರೀಕ್ಷಣದ ಮುಟ್ಟಿಮಾಳ್ಪ ಜಪದ ಮಿಟ್ಟನೆ ಮಿಡುಕದಂಗದ ನೆಟ್ಟನೆ ನಿಂದ ಮನದ ತೊಟ್ಟನೆ ತೋರ್ಪ ಸಾತ್ವಿಕದ ದಿಟ್ಟಗಚ್ಚರಿಗೊಳಿಪ ಕಟ್ಟಣಕದ ಕಡುಮಹಿಮೆಯಾಂತ ತಪೋಧನರಿರ್ಪ ತಾಣದಲ್ಲಿ

ಮ॥ ಸ್ರ॥ ಉಡುಗುತ್ತಲ್ಲಿರ್ಪುದುದ್ಯಚ್ಚಮರಿ ರಜಮನಾ ತಾಣದೊಳ್ ಹಸ್ತಿ ಕೈನೀ
ರಿಡುತಂ ಸಮ್ಮಾರ್ಜನಂಗೆಯ್ವುದು ಸುರಿವುದು ಮುಕ್ತೌಘಮಂ ಮೇಘಮಂದಂ
ಬಡೆವಂತಲ್ಲಲ್ಲಿ ರಂಗಂಗೊಳಿಪುದು ಸುಮನೋರೇಣುವಿಂ ಮಾರುತಂ ಸಂ
ಗಮೆಲ್ಲಂ ಮೆಲ್ಲನಾ ತಾಪಸರ್ಗೆ ಪರಿಚಯಮಂ ಮಾಳ್ಪುವಾಗಳ್ ಮೃಗಂಗಳ್ ೧೨೩

ವ॥ ಮತ್ತಮಲ್ಲಿ

ಸೀಮಾವು, ತೇಗ, ಹೊಂಗೆ, ತಾಳೆ, ಈಚಲು, ತೆಂಗು, ಕಿತ್ತಳೆ, ಮಾದಲ, ಲವಂಗ, ಅಡಿಕೆ, ಜಾಕಾಯಿ, ನಾಗಕೇಸರ, ಬೆಟ್ಟದಾವರೆ, ಖರ್ಜೂರ, ಕರ್ಪೂರ, ಬಾಳೆಗಳ ಸಮೂಹದಿಂದಲೂ, ಕಮಲಗಳ ಸಮೂಹಗಳಿಂದಲೂ, ಅತ್ಯಂತ ಮನೋಹರವಾಗಿದ್ದು ಸರ್ವಋತುಗಳಲ್ಲೂ ಇರುವಂಥ ಶ್ರೇಷ್ಠವಾದ ತಪೋವನದ ಪರಮ ಪವಿತ್ರತೆಯನ್ನು ಹೊಂದಿದ ಪರ್ಣಶಾಲೆಯಲ್ಲಿ, ವಿಭೂತಿಯನ್ನಿಟ್ಟು, ರುದ್ರಾಕ್ಷಿಯನ್ನು ತೊಟ್ಟು, ಮೃಗಾಜಿನವನ್ನುಟ್ಟ, ಜೋತಾಡುವ ಕೆಂಜೆಡೆಯ, ಸಂಯಮಗೊಳಿಸಿದ ಇಂದ್ರಿಯಗಳ, ತದೇಕದೃಷ್ಟಿಯ ಶ್ರದ್ಧೆಯಿಂದ ಮಾಡುವ ಜಪದ, ಅಲ್ಲಾಡದ ದೇಹದ, ಧ್ಯಾನಾಸಕ್ತ ಮನಸ್ಸಿನ, ಸ್ಪಷ್ಟವಾಗಿ ಗೋಚರಿಸುವ ಸಾತ್ವಿಕಗುಣದ, ನೋಟಕ್ಕೆ ಆಶ್ಚರ್ಯವನ್ನುಂಟುಮಾಡುವ ನಿಯಮಶೀಲರೂ ಮಹಿಮಶಾಲಿಗಳೂ ಆದ ತಪಸ್ವಿಗಳಿದ್ದರು. ಅಲ್ಲಿ ೧೨೩. ಆ ತಪೋವನಸ್ಥಾನದಲ್ಲಿ ಶ್ರೇಷ್ಠವಾದ ಚಮರೀ ಮೃಗವು ಕಸಗುಡಿಸುತ್ತಿತ್ತು ; ಆನೆಯು ತಮ್ಮ ಕರಗಳಿಂದ ನೀರೆತ್ತಿ ತಂದು ಸಾರಣೆಯನ್ನು ಮಾಡುತ್ತಿತ್ತು ; ಮೋಡವು ಮುಕ್ತಾಫಲ ವಿಶಿಷ್ಟ ಮಳೆಗರೆಯುತ್ತಿತ್ತು ; ಹೂವುಗಳ ಧೂಳಿನಿಂದ ಗಾಳಿಯು ಅಂದವಾಗಿ ಕಾಣುವಂತೆ ರಂಗವಲ್ಲಿಯನ್ನಿಕ್ಕುತ್ತಿತ್ತು ; ಅಲ್ಲಿನ ಸಮಸ್ತ ಮೃಗಗಳು ಒಟ್ಟಾಗಿ ಸೇರಿ ಆ ತಾಪಸರುಗಳ ಸೇವೆಯನ್ನು ಸತತವೂ ಮಾಡುತ್ತಿದ್ದವು. ವ॥ ಮತ್ತೂ ಅಲ್ಲಿ, ೧೨೩. ಕಪಿಯು ಹೂವಿನ ಮಕರಂದ

ಚಂ॥ ಸುಮಮಕರಂದದಿಂದೆ ಕಪಿ ಕೈದೊಳೆದಾದ್ರುಮಪತ್ರಪಾತ್ರೆಯಂ
ಸಮೆದದಱಲ್ಲಿ ತುಂಬಿತುಳಿಪೊಂದದ ಪೂಗಳನ್ನೈದೆ ತುಂಬಿಕೊಂ
ಡಮರ್ದಮರ್ದಂತೆ ತೋರ್ಪ ಗಿಳಿ ಮುಟ್ಟದ ಪಣ್ಗೊನೆಯಾಂತು ಬಂದು ಸಂ
ಯಮಿಗಳ ಮುಂದೆ ನಿಂದೆಱಗಿ ಕಾಣ್ಕೆಯನಿತ್ತುದತೀವ ಭಕ್ತಿಯಿಂ ೧೨೭

ವ॥ ಮತ್ತಮೊಂದು ಪವಿತ್ರಸತ್ರಶಾಲೆಯಲ್ಲಿ

ಉ॥ ಹೋಮದಕುಂಡದಿಂ ಕಡೆಸಿಡಿಲ್ದು ಪೊದಳ್ದಿರೆ ಕಂಡು ಕೆಂಡಮಂ
ಕಾಮಿಸಿ ಗೇರಪಣ್ಣೆನುತೆ ಪಣ್ಣನೆ ಪೊರ್ದಿ ತುಡುಂಕೆ ಕೈಸುಡಲ್
ಭೂಮಿಗೆ ತಗ್ಗಿಕುಗ್ಗಿ ಮಿಗೆ ಪಲ್ದೆಱೆದುಃಪೆನುತೂದಿ ಪುರ್ಬಿಡು
ತ್ತಾ ಮುನಿಪುತ್ರರಂ ನಗಿಸಿ ಹಱ್ರೆನುತೇಡಿಸಿತೊಂದು ಕೋಡಗಂ ೧೨೮

ವ॥ ಮತ್ತಮೊಂದುದೀರ್ಣಮಹಿಮಾಕೀರ್ಣವರ್ಣಿ ಪೂರ್ಣಪರ್ಣಶಾಲೆಯಲ್ಲಿ

ಮ॥ಸ್ರ॥ ಯಮಮುಖ್ಯಾಷ್ಟಾಂಗಯೋಗಂ ಸಮನಿಸೆ ಹೃದಯಾವಾಸದೊಳ್ ಶಂಭುಪಾದಾ
ಬ್ಜಮನೋರಂತಿಟ್ಟು ಕಟ್ಟುರ್ಬಟೆಯ ಪವನನಂ ಕಟ್ಟಿ ಕೈಕೊಂಡು ಬೋಧ
ಕ್ರಮಮಂ ದೇಹೋಹಮೆಂಬುದನುಡುಗಿ ನಿಜಾನಂದಮಂ ನೆರ್ಮಿ ಭಿನ್ನ
ಭ್ರಮೆಯಂ ಕೀಳ್ತಿಕ್ಕಿ ಮುಕ್ತಿಪ್ರಮದೆಯನೊಲಿಸಲ್ ಸಾಲ್ವರಿರ್ದರ್ ಮುನೀಂದ್ರರ್ ೧೨೯

ರಸದಲ್ಲಿಯೇ ಕೈತೊಳೆದು, ಮರದ ಎಲೆಗಳಿಂದ ಮಾಡಿದ ಪಾತ್ರೆಯನ್ನು ಮಾಡಿಕೊಂಡು, ಅದರಲ್ಲಿ ದುಂಬಿಯಿಂದ ತುಳಿಯಲ್ಪಡದ ಹೂಗಳನ್ನು ಪೂರ್ಣವಾಗಿ ತುಂಬಿಕೊಂಡು ಅಮೃತರಸವೇ ತುಂಬಿಕೊಂಡಂತೆ ಇರುವ, ಗಿಳಿಗಳಿಂದ ಕಚ್ಚಲ್ಪಡದ ಹಣ್ಣಿನ ಗೊಂಚಲು ಗಳನ್ನು ಹಿಡಿದು ತಂದು ಆ ತಪಸ್ವಿಗಳ ಮುಂದೆ ನಿಂತು ನಮಸ್ಕರಿಸಿ ತನ್ನ ಕಾಣಿಕೆಯನ್ನು ಅತೀವ ಭಕ್ತಿಯಿಂದ ಕೊಡುತ್ತಿತ್ತು. ವ|| ಮತ್ತೊಂದು ಪವಿತ್ರವಾದ ಯಾಗಮಂಟಪ ದಲ್ಲಿ ೧೨೮. (ಆ ತಪೋವನದ) ಹೋಮಕುಂಡದಿಂದ ಸಿಡಿದು ಈಚೆಗೆ ಬಿದ್ದು ಪ್ರಕಾಶಿ ಸುತ್ತಿರುವ ಕೆಂಡವೊಂದನ್ನು ಒಂದು ಕೋಡಗವು ಕಂಡು, ಅದನ್ನು ಗೇರಹಣ್ಣೆಂದು ತಿನ್ನಲು ಆಸೆಪಟ್ಟು ತಟ್ಟನೆ ಅದರ ಹತ್ತಿರಕ್ಕೆ ಹೋಗಿ ಹಿಡಿಯಲು ಕೈಸುಟ್ಟಿತು. (ಆಗ ಅದು) ಭೂಮಿಗೆ ತಗ್ಗಿ ಕುಗ್ಗಿ ಹಲ್ಲನ್ನು ತೆರೆದು ಉಃಫ್ ಎಂದು (ತನ್ನ ಕೈಯನ್ನು) ಊದಿ ಕೊಳ್ಳುತ್ತ ಹುಬ್ಬುಹಾರಿಸುತ್ತ ಆ ಮುನಿಪುತ್ರರನ್ನು ನಗಿಸಿ ಹರ್‍ರೆನ್ನುತ್ತ ಅಣಕಿಸುತ್ತಿತ್ತು. ವ|| ಮಹಿಮೆಯಿಂದ ಕೂಡಿ ಬ್ರಹ್ಮಚಾರಿಗಳಿಂದ ತುಂಬಿದ ಮತ್ತೊಂದು ಪರ್ಣಶಾಲೆ ಯಲ್ಲಿ ೧೨೯. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಯೇ ಮೊದಲಾದ ಅಷ್ಟಾಂಗಯೋಗವು ಕೈಗೂಡುವಂತೆ ಹೃದಯದಲ್ಲಿ ಪರಮಾತ್ಮನ ಪಾದಾಬ್ಜಗಳನ್ನು ಕ್ರಮವಾಗಿರಿಸಿಕೊಂಡು, ತೀವ್ರ ಸಾಮರ್ಥ್ಯದ ವಾಯು

ವ॥ ಪೆಱತೊಂದು ಕುಸುಮಕಿಸಲಯಮಹಿತಮಂದಾರಮಹೀಜಾತಸಂಜಾತ ಮಧ್ಯ ಪ್ರದೇಶದಲ್ಲಿ

ಚಂ॥ ಶಿವಕಥೆವೇಳ್ವ ಶಂಕರಪುರಾಣಮನಾಲಿಪ ಶೈವತತ್ತ್ವಮಂ
ವಿವರಿಪ ಶಂಭುವಂ ಪದೆದು ಕೀರ್ತಿಪ ಹೃದ್ಗೃಹದಲ್ಲಿ ಶೈಲಜಾ
ಧವನನೆ ನೆಟ್ಟು ಜಾನಿಪ ಮಹೇಶನನರ್ಚಿಪ ಸೋಮನಾಮಮಂ
ಸವಿನಃಡಿಯಿಂದೆ ಬಣ್ಣಿಸುವ ಬರ್ದಿನ ತಾಪಸವರ್ಯರೊಪ್ಪಿದರ್ ೧೩೦

ವ॥ ಅಲ್ಲಿ ಮತ್ತಮೊಂದು ತಳಿರ್ತ ತರುಣತಮಾಲ ತರುವನದ ತಳದ ತಣ್ಣೆಳಲ ಪಳಿಕುವಾಸಱೆಯ ಪರ್ಣಶಾಲೆಯಲ್ಲಿ

ಚಂ॥ ಕರಿಯನೆ ನೆರ್ಮಿ ಸಿಂಗಮದನಂಟಿ ಮಹಾಶರಭಂ ಶಿರೋದ್ವಯಂ
ಕರಮದನೊಂದಿ ಸಾರ್ದು ಪುಲಿ ಪುಲ್ಲೆಯನಲ್ಲಿಯ ಮೌನಿ ಮಧ್ಯದ
ಲ್ಲಿರುತೆ ಮುದಂಬಡುತ್ತೆ ನೆರೆದಾಲಿಪುದದ್ಭುತಮೆಂಬಿನಂ ಪೊದ
ಳ್ದರಗಿಳಿವೋದುವೀಶ್ವರಪುರಾಣಮನಾದರದಿಂದನಾರತಂ ೧೩೧

ವನ್ನು ಕುಂಭಕದಲ್ಲಿ ನಿಲ್ಲಿಸಿ, ತಮಗೆ ಉಪದೇಶವಾಗಿರುವ ರೀತಿಯಂತೆ (ಯೋಗಾಭ್ಯಾಸ ವನ್ನು) ನಡೆಸುತ್ತ, ದೇಹವೇ ನಾನು ಎಂಬ ಭಾವನೆಯನ್ನು ದೂರಮಾಡಿ, ಆತ್ಮಾನುಭವ ದಿಂದುಂಟಾದ ನಿಜಾನಂದದಲ್ಲಿ ಮುಳುಗಿ, ಭೇದಭ್ರಾಂತಿಯನ್ನು ಕಿತ್ತು ಹಾಕಿ ಮುಕ್ತಿ ಕಾಂತೆಯನ್ನೊಲಿಸಲು ತಕ್ಕವರಾದ ಮುನೀಂದ್ರರು ಇದ್ದರು. ವ॥ ಬೇರೊಂದು ಹೂ ಚಿಗುರುಗಳಿಂದ ಶ್ಲಾಘ್ಯವಾಗಿದ್ದ ಮಂದಾರವೃಕ್ಷಗಳ ಗುಂಪಿನ ಮಧ್ಯಪ್ರದೇಶದಲ್ಲಿ ೧೩೦. ಶಿವಕಥೆಯನ್ನು ಹೇಳುವ, ಶಂಕರನ ಪುರಾಣವನ್ನು ಕೇಳುವ, ಶಿವಸಂಬಂಧದ ತತ್ತ್ವಗಳನ್ನು ವಿವರಿಸುವ, ಪ್ರೀತಿಯಿಂದ ಶಂಭುವನ್ನು ಕೀರ್ತಿಸುವ ಹೃದಯವೆಂಬ ಗೃಹದಲ್ಲಿ ಪಾರ್ವತೀರಮಣನನ್ನು ನಿಲ್ಲಿಸಿ ಧ್ಯಾನಿಸುವ, ಮಹೇಶ್ವರನನ್ನು ಪೂಜಿಸುವ, ಉಮಾಧವನ ನಾಮವನ್ನು ಸವಿಮಾತುಗಳಿಂದ ಬಣ್ಣಿಸುವ ಸಮರ್ಥರಾದ ತಾಪಸೋತ್ತ ಮರು ಶೋಭಿಸುತ್ತಿದ್ದರು. ವ॥ ಅಲ್ಲಿ ತಳಿರುಗೊಂಡ ಎಳೆಯ ಹೊಂಗೆಮರಗಳ ವನದ ತಂಪಾದ ನೆಲದ ಸ್ಫಟಿಕಶಿಲೆಯ ಹಾಸುಗಲ್ಲಿನ ಪರ್ಣಶಾಲೆಯಲ್ಲಿ ೧೩೧. ಆನೆಯನ್ನು ಹೊಂದಿಕೊಂಡು ಸಿಂಹವೂ, ಅದಕ್ಕೆ ಅಂಟಿಕೊಂಡು ಶರಭವೂ, ಅದಕ್ಕೆ ನೆಮ್ಮಿಕೊಂಡು ಗಂಡಭೇರುಂಡವೂ, ಹುಲ್ಲೆಯನ್ನು ಹೊಂದಿಕೊಂಡು ಹುಲಿಯೂ ಅಲ್ಲಿಯ ಮೌನಿಗಳಾದ ಋಷಿಗಳ ಮಧ್ಯದಲ್ಲಿರುತ್ತ, ಸಂತೋಷಪಡುತ್ತ ಒಟ್ಟಿಗೆ ಸೇರಿ ಇರುತ್ತಿದ್ದವು. (ಅಲ್ಲಿನ ಪ್ರಸಂಗಗಳನ್ನು) ಕೇಳುವುದು ಅದ್ಭುತವೆನ್ನುವಂತೆ ಶ್ರೇಷ್ಠವಾದ ಅರಗಿಳಿಗಳೂ ಓದುವ

ಮ॥ಸ್ರ॥ ಎಳೆಮಿಂಚಂ ಪೋಲ್ವ ಬಂಬಲ್ಜಡೆ ಬಳೆದ ಘನಶ್ಮಶ್ರು ಭಸ್ಮತ್ರಿಪುಂಡ್ರಂ
ತೊಳಪುದ್ಯದ್ಭಾಳಮಾಲಂಬಿತ ವಿಳಸಿತ ರುದ್ರಾಕ್ಷಮಾಲಾಳಿಹಸ್ತೋ
ಜ್ವಳದಂಡಂ ಯೋಗಪಟ್ಟಂ ಮೃಗದ ಸದಜಿನಂ ವಲ್ಕಲಂ ಲಾಕುಳಂ ಮಂ
ಜುಳಮಂದಸ್ಮೇರವಕ್ತ್ರಂ ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ ೧೩೨

ವ॥ ಮತ್ತಮೊಂದು ನಗತಟದ ಸರಸ ಸರೋವರದ ತೀರದಲ್ಲಿ

ಮ॥ ಪಗೆಯಂ ಕೈವಶಮಾಗಿಪೊಂದು ಬಗೆಯಂ ತಾಳ್ದಲ್ಲಿ ಕಾಸಾರವಾ
ರಿಗತಂ ತಾನೆನಿಸಿರ್ದು ಮಾಡಿ ತಪಮಂ ತತ್ಪಾಣಿಯಾದಂಬುಜಂ
ನಗದೊಳ್ ಬರ್ಪ ಮೃಗಾಂಕನಂ ಪಿಡಿದುದೆಂಬಂತುತ್ಪಲಾಪ್ರಾಶ್ಮದಿಂ
ನೆಗಳ್ದೊಳ್ಗುಂಡಿಗೆಯಾಂತ ದಕ್ಷಿಣಕರಂ ತೋರಿತ್ತು ಯೋಗೀಂದ್ರನಾ ೧೩೩

ವ॥ ಮತ್ತೊಂದೆಡೆಯೊಳ್ ಇತ್ತರಂಬಿಡಿದೊತ್ತರಿಸಿ ಬೆಳೆದ ಕ್ಷೀಣವೇಣುಕುಂಜ ಮಂಜುಳ ಸ್ಥಾನದಲ್ಲಿ

ಈಶ್ವರಪುರಾಣವನ್ನು ಸತತವೂ ಆದರದಿಂದ ಕೇಳುತ್ತಿದ್ದವು. ೧೩೨. ಎಳೆಯ ಮಿಂಚನ್ನು ಹೋಲುತ್ತಿರುವ ಜೋತಾಡುತ್ತಿರುವ ಹೊಸೆದ ಜಡೆ, ಉದ್ದವಾಗಿ ಬೆಳೆದ ಮೀಸೆ, ಭಸ್ಮಲೇಪನದ ಮೂರುಗೆರೆಗಳಿಂದ ಪ್ರಕಾಶಿಸುವ ಹಣೆ, ಜೋತಾಡುತ್ತಿರುವ ಶ್ರೇಷ್ಠ ರುದ್ರಾಕ್ಷಮಾಲೆಗಳ ಸಮೂಹ, ಕೈಯಲ್ಲಿ ಶೋಭಿಸುವ ಕೋಲು ಮತ್ತು ಯೋಗ ಪಟ್ಟ, ಜಿಂಕೆಯ ಚರ್ಮ, ನಾರುಡುಗೆ, ಲಾಕುಳ ಚಿಹ್ನೆಯ ದಂಡ, ಮನೋಹರವಾದ ಕಿರುನಗೆಯ ಮುಖ, ಇವು ಶೋಭಿಸುತ್ತಿರಲು ಆ ನಗದ ತಪ್ಪಲುಪ್ರದೇಶದಲ್ಲಿ ತಾಪಸೋತ್ತಮರು ಸಂಚಾರ ಮಾಡುತ್ತಿದ್ದರು. ವ॥ ಮತ್ತೊಂದು ಗುಡ್ಡದ ದಂಡೆಯಲ್ಲಿ ತುಂಬಿದ ಸರೋವರದ ತೀರದಲ್ಲಿ ೧೩೩. ವೈರಿಯನ್ನು ಕೈವಶಮಾಡಿಕೊಳ್ಳಬೇಕೆಂಬ ಒಂದು ಬಯಕೆಯನ್ನು ಹೊಂದಿ ಸರೋವರದ ನೀರಿನಲ್ಲಿರುವಂಥ ಕಮಲವು ತಪಸ್ಸನ್ನು ಮಾಡಿ ಆ ಋಷಿಯ ಕೈಯಾಗಿ ಆ ಅರಣ್ಯದಲ್ಲಿ ಬರುವ ಚಂದ್ರನನ್ನು ಹಿಡಿದುಕೊಂಡಿರುವುದೋ ಎನ್ನುವಂತೆ ಚಂದ್ರಕಾಂತಶಿಲೆಯಿಂದ ಮಾಡಿದ ಕಮಂಡಲು ಆ ಯೋಗೀಂದ್ರನ ಬಲಗೈಯಲ್ಲಿ ಶೋಭಿಸುತ್ತಿತ್ತು. ವ॥ ಮತ್ತೊಂದು ಎರಡೂ ಪಾರ್ಶ್ವಗಳಲ್ಲಿ ದಟ್ಟವಾಗಿ ಬೆಳೆದ, ನಶಿಸದೆ ಇರುವ ಬಿದುರಿನ ಮೊಳೆಗಳ ಮನೋಹರಸ್ಥಾನದಲ್ಲಿ ೧೩೪. ಹುತ್ತವು

ಕಂ॥ ಒತ್ತರಿಸಿ ಸುತ್ತಿ ವೆಯ್ಯೊ
ಳ್ಪುತ್ತಿಡೆ ಬೇರಿಳಿಯೆ ಜಡೆಗಳಿಡಿಕಿಱಿದಹಿಗಳ್
ಪತ್ತಿ ಪರಿದಾಡುತಿರೆ ನಡು
ನೆತ್ತಿಯ ಪೆಜ್ರೋಡರನೊರ್ವನೀಕ್ಷಿಸುತಿರ್ದಂ ೧೩೪

ಅಹರ್ದು ನಿಡುಜಡೆಯೆಡೆಯೊಳಹಿ
ಯಡಂಗೆ ತನ್ಮಸ್ತಕಸ್ಥಫಣಮಣಿ ಪದಪಂ
ಪಡೆದುದು ತನ್ಮುನಿಪನ ತಲೆ
ಯೆಡೆಯಣ ಚಿಜ್ಜ್ಯೋತಿ ಜಗಿದು ಪೊಱಪೊಣ್ಮದವೋಲ್ ೧೩೫

ವ॥ ಮತ್ತಮಲ್ಲಿ ಸಲ್ಲೀಲೆಯಿಂ ವಲ್ಲಭನೊಡನೆ ಮೆಲ್ಲನಿಳಿದು ತಳಿರ್ತ ಕಂಕೆಲ್ಲಿಯ ವನ ಮಧ್ಯದ ಮಲ್ಲಿಕಾಮಂಟಪದಲ್ಲಿ ಪಸರಿಸಿದ ಮಿಸುಪ ಕುಸುಮದೆಸಳ ಪೊಸವಸೆಯ ಮೇಲೆ ನಲ್ಲ ನೊಡನೆ ಚಲ್ಲದಿಂ ಕುಳ್ಳಿರ್ದು ಫುಲ್ಲಶರಕೇಳಿಯಂ ಮನಂದಣಿಯೆ ತನು ಕರಗಲನುಭವಿಸಿ ಬಳಲ್ದಿಲರ್ವಟ್ಟಿಗೆ ಪಾಱಲಳವುಗೆಟ್ಟ ಬಟ್ಟಜವ್ವನದ ಬಿಜ್ಜೋದರಿಯರಂ ಪೆಗಲೊಳ್ ಪೇಱಿಂ ತಳೆದು ತಳರ್ವ ವಿಪುಳವಿದ್ಯಾಧರರ್ಗೆ ಸಹಾಯಮಾಗಿ ಪೊತ್ತೆತ್ತಲುಜ್ಜುಗಿಪ ಕಾರ್ಮುಗಿಲ್ಗೆ ಕರ್ಬು ವಿಲ್ಲಂ ಕೈವೀಸಿ ಕರೆದುಕಳುಪಲೊಡನೆ ತಾನುಂ ಸಂಗಡಮಾಗಿ ಪೋಗಿ, ಪೊತ್ತೆತ್ತುವ ಗಂಧವಹನ

ವ್ನೈಯಸುತ್ತಲೂ ದಟ್ಟವಾಗಿ ಸುತ್ತಿ ಬೆಳೆದಿರಲು, ಜಡೆಗಳು ಭೂಮಿಗಿಳಿದು ಒತ್ತಾಗಿ ಬೇರುಬಿಟ್ಟಿರಲು, ಹಾವುಗಳು ಮೈಮೇಲೆ ಹತ್ತಿ ಹರಿದಾಡುತ್ತಿರಲು, ಓರ್ವ ತಪಸ್ವಿಯು ತನ್ನ ನಡುನೆತ್ತಿಯ (ಬ್ರಹ್ಮರಂಧ್ರಸ್ಥಾನದಲ್ಲಿರುವ) ಚಿಜ್ಜ್ಯೋತಿಯನ್ನು ನಿರೀಕ್ಷಿಸು ತ್ತಿದ್ದನು. ೧೩೫. ಒಂದು ಹಾವು ಆ ಮುನಿಯ ಮೇಲೆ ಹತ್ತಿ ಅವನ ನೀಳವಾದ ಜಡೆಯಲ್ಲಿ ಅಡಗಿಕೊಳ್ಳಲಾಗಿ, ಅದರ ಹೆಡೆಯಲ್ಲಿರುವ ರತ್ನವು ಆ ಮುನಿಯ ಬ್ರಹ್ಮರಂಧ್ರ ಸ್ಥಾನದಲ್ಲಿರುವ ಚಿಜ್ಜ್ಯೋತಿಯು ಚಿಗಿತು ಹೊರಹೊಮ್ಮಿತೋ ಎನ್ನುವ ಅಂದವನ್ನು ಪಡೆಯಿತು. ವ॥ ಮತ್ತು ಅಲ್ಲಿ ಅತಿ ವಿಲಾಸದಿಂದ ತನ್ನ ಪ್ರಿಯನೊಡನೆ ಸಾವಕಾಶ ವಾಗಿ ಇಳಿದು, ಚಿಗಿತುನಿಂತ ಅಶೋಕವನದ ಮಧ್ಯದಲ್ಲಿರುವ ಮಲ್ಲಿಗೆ ಬಳ್ಳಿಯ ಮಂಟಪ ದಲ್ಲಿ ಸುತ್ತಲೂ ಪಸರಿಸಿ ಶೋಭಿಸುವ ಹೂವುಗಳ ಎಸಳಿನ ಹೊಸ ಹಸೆಯ ಮೇಲೆ ಪತಿ ಯೊಡನೆ ವಿನೋದದಿಂದ ಕುಳಿತುಕೊಂಡು, ಕಾಮಕೇಳಿಯನ್ನು ಮನಸ್ತೃಪ್ತಿಯಾಗು ವಂತೆ, ತನುವು ಬಳಲುವಂತೆ ಅನುಭವಿಸಿ, ಬಳಲಿ ಆಕಾಶಕ್ಕೆ ಹಾರಲು ಶಕ್ತಿಗುಂದಿದ ತುಂಬು ಹರೆಯದ ವಿದ್ಯಾಧರಿಯರನ್ನು ಹೆಗಲಮೇಲೆ ಹೆಮ್ಮೆಯಿಂದ ಹೊತ್ತುಕೊಂಡು. ಹೋಗುತ್ತಿರುವ ಅನೇಕ ವಿದ್ಯಾಧರರಿಗೆ ಹೊತ್ತು ಎತ್ತುವುದಕ್ಕೆ ಸಹಾಯಕವಾಗುವಂತೆ ಕಾರ್ಮುಗಿಲುಗಳಿಗೆ ಕೈಬೀಸಿ ಮನ್ಮಥನು ಕರೆದು ಕಳಿಸುತ್ತಿದ್ದನು. ಆಗ ಹೊತ್ತು

ಮ॥ಸ್ರ॥ ಎಳೆಮಿಂಚಂ ಪೋಲ್ವ ಬಂಬಲ್ಜಡೆ ಬಳೆದ ಘನಶ್ಮಶ್ರು ಭಸ್ಮತ್ರಿಪುಂಡ್ರಂ
ತೊಳಪುದ್ಯದ್ಭಾಳಮಾಲಂಬಿತ ವಿಳಸಿತ ರುದ್ರಾಕ್ಷಮಾಲಾಳಿಹಸ್ತೋ
ಜ್ವಳದಂಡಂ ಯೋಗಪಟ್ಟಂ ಮೃಗದ ಸದಜಿನಂ ವಲ್ಕಲಂ ಲಾಕುಳಂ ಮಂ
ಜುಳಮಂದಸ್ಮೇರವಕ್ತ್ರಂ ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ ೧೩೨

ವ॥ ಮತ್ತಮೊಂದು ನಗತಟದ ಸರಸ ಸರೋವರದ ತೀರದಲ್ಲಿ

ಮ॥ ಪಗೆಯಂ ಕೈವಶಮಾಗಿಪೊಂದು ಬಗೆಯಂ ತಾಳ್ದಲ್ಲಿ ಕಾಸಾರವಾ
ರಿಗತಂ ತಾನೆನಿಸಿರ್ದು ಮಾಡಿ ತಪಮಂ ತತ್ಪಾಣಿಯಾದಂಬುಜಂ
ನಗದೊಳ್ ಬರ್ಪ ಮೃಗಾಂಕನಂ ಪಿಡಿದುದೆಂಬಂತುತ್ಪಲಾಪ್ತಾಶ್ಮದಿಂ
ನೆಗಳ್ದೊಳ್ಗುಂಡಿಗೆಯಾಂತ ದಕ್ಷಿಣಕರಂ ತೋರಿತ್ತು ಯೋಗೀಂದ್ರನಾ ೧೩೩

ವ॥ ಮತ್ತೊಂದೆಡೆಯೊಳ್ ಇತ್ತರಂಬಿಡಿದೊತ್ತರಿಸಿ ಬೆಳೆದ ಕ್ಷೀಣವೇಣುಕುಂಜ ಮಂಜುಳ ಸ್ಥಾನದಲ್ಲಿ

ಈಶ್ವರಪುರಾಣವನ್ನು ಸತತವೂ ಆದರದಿಂದ ಕೇಳುತ್ತಿದ್ದವು. ೧೩೨. ಎಳೆಯ ಮಿಂಚನ್ನು ಹೋಲುತ್ತಿರುವ ಜೋತಾಡುತ್ತಿರುವ ಹೊಸೆದ ಜಡೆ, ಉದ್ದವಾಗಿ ಬೆಳೆದ ಮೀಸೆ, ಭಸ್ಮಲೇಪನದ ಮೂರುಗೆರೆಗಳಿಂದ ಪ್ರಕಾಶಿಸುವ ಹಣೆ, ಜೋತಾಡುತ್ತಿರುವ ಶ್ರೇಷ್ಠ ರುದ್ರಾಕ್ಷಮಾಲೆಗಳ ಸಮೂಹ, ಕೈಯಲ್ಲಿ ಶೋಭಿಸುವ ಕೋಲು ಮತ್ತು ಯೋಗ ಪಟ್ಟ, ಜಿಂಕೆಯ ಚರ್ಮ, ನಾರುಡುಗೆ, ಲಾಕುಳ ಚಿಹ್ನೆಯ ದಂಡ, ಮನೋಹರವಾದ ಕಿರುನಗೆಯ ಮುಖ, ಇವು ಶೋಭಿಸುತ್ತಿರಲು ಆ ನಗದ ತಪ್ಪಲುಪ್ರದೇಶದಲ್ಲಿ ತಾಪಸೋತ್ತಮರು ಸಂಚಾರ ಮಾಡುತ್ತಿದ್ದರು. ವ|| ಮತ್ತೊಂದು ಗುಡ್ಡದ ದಂಡೆಯಲ್ಲಿ ತುಂಬಿದ ಸರೋವರದ ತೀರದಲ್ಲಿ ೧೩೩. ವೈರಿಯನ್ನು ಕೈವಶಮಾಡಿಕೊಳ್ಳಬೇಕೆಂಬ ಒಂದು ಬಯಕೆಯನ್ನು ಹೊಂದಿ ಸರೋವರದ ನೀರಿನಲ್ಲಿರುವಂಥ ಕಮಲವು ತಪಸ್ಸನ್ನು ಮಾಡಿ ಆ ಋಷಿಯ ಕೈಯಾಗಿ ಆ ಅರಣ್ಯದಲ್ಲಿ ಬರುವ ಚಂದ್ರನನ್ನು ಹಿಡಿದುಕೊಂಡಿರುವುದೋ ಎನ್ನುವಂತೆ ಚಂದ್ರಕಾಂತಶಿಲೆಯಿಂದ ಮಾಡಿದ ಕಮಂಡಲು ಆ ಯೋಗೀಂದ್ರನ ಬಲಗೈಯಲ್ಲಿ ಶೋಭಿಸುತ್ತಿತ್ತು. ವ|| ಮತ್ತೊಂದು ಎರಡೂ ಪಾರ್ಶ್ವಗಳಲ್ಲಿ ದಟ್ಟವಾಗಿ ಬೆಳೆದ, ನಶಿಸದೆ ಇರುವ ಬಿದುರಿನ ಮೆಳೆಗಳ ಮನೋಹರಸ್ಥಾನದಲ್ಲಿ ೧೩೪. ಹುತ್ತವು

ಕಂ॥ ಒತ್ತರಿಸಿ ಸುತ್ತಿ ಮೆಯ್ಯೊ
ಳ್ಪುತ್ತಿಡೆ ಬೇರಿಳಿಯೆ ಜಡೆಗಳಿಡಿಕಿಱಿದಹಿಗಳ್
ಪತ್ತಿ ಪರಿದಾಡುತಿರೆ ನಡು
ನೆತ್ತಿಯ ಪೆರ್ಜೊಡರನೊರ್ವನೀಕ್ಷಿಸುತಿರ್ದಂ ೧೩೪

ಆಡರ್ದು ನಿಡುಜಡೆಯೆಡೆಯೊಳಹಿ
ಯಡಂಗೆ ತನ್ಮಸ್ತಕಸ್ಥ ಫಣಮಣಿ ಪದಪಂ
ಪಡೆದುದು ತನ್ಮುನಿಪನ ತಲೆ
ಯೆಡೆಯಣ ಚಿಜ್ಜ್ಯೋತಿ ಜಗಿದು ಪೊಱಪೊಣ್ಮಿದವೋಲ್ ೧೩೫

ವ॥ ಮತ್ತಮಲ್ಲಿ ಸಲ್ಲೀಲೆಯಿಂ ವಲ್ಲಭನೊಡನೆ ಮೆಲ್ಲನಿಳಿದು ತಳಿರ್ತ ಕಂಕೆಲ್ಲಿಯ ವನ ಮಧ್ಯದ ಮಲ್ಲಿಕಾಮಂಟಪದಲ್ಲಿ ಪಸರಿಸಿದ ಮಿಸುಪ ಕುಸುಮದೆಸಳ ಪೊಸವಸೆಯ ಮೇಲೆ ನಲ್ಲ ನೊಡನೆ ಚಲ್ಲದಿಂ ಕುಳ್ಳಿರ್ದು ಫುಲ್ಲಶರಕೇಳಿಯಿಂ ಮನಂದಣಿಯೆ ತನು ಕರಗಲನುಭವಿಸಿ ಬಳಲ್ದಿಲರ್ವಟ್ಟೆಗೆ ಪಾಱಲಳವುಗೆಟ್ಟು ಬಟ್ಟಜವ್ವನದ ಬಿಜ್ಜೋದರಿಯರಂ ಪೆಗಲೊಳ್ ಪೇಱಿಂ ತಳೆದು ತಳರ್ವ ವಿಪುಳವಿದ್ಯಾಧರರ್ಗೆ ಸಹಾಯಮಾಗಿ ಪೊತ್ತೆತ್ತಲುಜ್ಜುಗಿಪ ಕಾರ್ಮುಗಿಲ್ಗೆ ಕರ್ಬು ವಿಲ್ಲಂ ಕೈವೀಸಿ ಕರೆದುಕಳುಪಲೊಡನೆ ತಾನುಂ ಸಂಗಡಮಾಗಿ ಪೋಗಿ, ಪೊತ್ತೆತ್ತುವ ಗಂಧವಹನ

ಮೈಯಸುತ್ತಲೂ ದಟ್ಟವಾಗಿ ಸುತ್ತಿ ಬೆಳೆದಿರಲು, ಜಡೆಗಳು ಭೂಮಿಗಿಳಿದು ಒತ್ತಾಗಿ ಬೇರುಬಿಟ್ಟಿರಲು, ಹಾವುಗಳು ಮೈಮೇಲೆ ಹತ್ತಿ ಹರಿದಾಡುತ್ತಿರಲು, ಓರ್ವ ತಪಸ್ವಿಯು ತನ್ನ ನಡುನೆತ್ತಿಯ (ಬ್ರಹ್ಮರಂಧ್ರಸ್ಥಾನದಲ್ಲಿರುವ) ಚಿಜ್ಜ್ಯೋತಿಯನ್ನು ನಿರೀಕ್ಷಿಸು ತ್ತಿದ್ದನು. ೧೩೫. ಒಂದು ಹಾವು ಆ ಮುನಿಯ ಮೇಲೆ ಹತ್ತಿ ಅವನ ನೀಳವಾದ ಜಡೆಯಲ್ಲಿ ಅಡಗಿಕೊಳ್ಳಲಾಗಿ, ಅದರ ಹೆಡೆಯಲ್ಲಿರುವ ರತ್ನವು ಆ ಮುನಿಯ ಬ್ರಹ್ಮರಂಧ್ರ ಸ್ಥಾನದಲ್ಲಿರುವ ಚಿಜ್ಜ್ಯೋತಿಯು ಚಿಗಿತು ಹೊರಹೊಮ್ಮಿತೋ ಎನ್ನುವ ಅಂದವನ್ನು ಪಡೆಯಿತು. ವ|| ಮತ್ತು ಅಲ್ಲಿ ಅತಿ ವಿಲಾಸದಿಂದ ತನ್ನ ಪ್ರಿಯನೊಡನೆ ಸಾವಕಾಶ ವಾಗಿ ಇಳಿದು, ಚಿಗಿತುನಿಂತ ಅಶೋಕವನದ ಮಧ್ಯದಲ್ಲಿರುವ ಮಲ್ಲಿಗೆ ಬಳ್ಳಿಯ ಮಂಟಪ ದಲ್ಲಿ ಸುತ್ತಲೂ ಪಸರಿಸಿ ಶೋಭಿಸುವ ಹೂವುಗಳ ಎಸಳಿನ ಹೊಸ ಹಸೆಯ ಮೇಲೆ ಪತಿ ಯೊಡನೆ ವಿನೋದದಿಂದ ಕುಳಿತುಕೊಂಡು, ಕಾಮಕೇಳಿಯನ್ನು ಮನಸ್ತೃಪ್ತಿಯಾಗು ವಂತೆ, ತನುವು ಬಳಲುವಂತೆ ಅನುಭವಿಸಿ, ಬಳಲಿ ಆಕಾಶಕ್ಕೆ ಹಾರಲು ಶಕ್ತಿಗುಂದಿದ ತುಂಬು ಹರೆಯದ ವಿದ್ಯಾಧರಿಯರನ್ನು ಹೆಗಲಮೇಲೆ ಹೆಮ್ಮೆಯಿಂದ ಹೊತ್ತುಕೊಂಡು. ಹೋಗುತ್ತಿರುವ ಅನೇಕ ವಿದ್ಯಾಧರರಿಗೆ ಹೊತ್ತು ಎತ್ತುವುದಕ್ಕೆ ಸಹಾಯಕವಾಗುವಂತೆ ಕಾರ್ಮುಗಿಲುಗಳಿಗೆ ಕೈಬೀಸಿ ಮನ್ಮಥನು ಕರೆದು ಕಳಿಸುತ್ತಿದ್ದನು. ಆಗ ಹೊತ್ತು

ಪಿಂದುಗೊಂಡು ಮಂಡಳಿಸಿ ಮಱಿಪುಗಿಲಂತೆ ಪಾರ್ವ ಮಧುಕರ ಪ್ರಕರದಿಂ ಮತ್ತಮೊಂದೆಡೆ
ಯೊಳ್ ದರದಳಿತ ವಿಮಳದಳ ವಿಪುಳ ಪರಿಮಳಮಿಳಿತ ಕುಸುಮವಿಸರ ವಿಳಸಿತ ಮಧುಮದಿತ
ತರುಣ ಮಧುಕರನಿಕರ ಪರಿವೃತ ಮೃದುಳಕಿಸಲಯಮಹಿತ ಪಾರಿಜಾತ ಮಹೀಜಾತ ಮೂಲ
ಹರಿನೀಲ ವಿಶಾಲ ಶಿಲಾತಲದೊಳ್ ಸಂದಣಿಸಿ ಗೊಂದಣಂಗೊಂಡು ಕುಳ್ಳಿರ್ದ ಸುರಸುದತಿಯರ
ನೆರವಿಯೊಳೊರ್ವ ಮನ್ನಣೆಯ ಕಿನ್ನರಕನ್ನೆ ತನ್ನ ಚೆನ್ನಕಿನ್ನರಿಯಂ ತೆಗೆದು ಮೇಳಂಗೈದಾಳಾಪಿಸಿ
ಕೊರಲ ಬೆರಲ ಸಂಚುಗೂಡಿ ನುಣ್ಚರಂದೆಗೆಯೆ ಕೇಳ್ದೊಡನೆ ಪೆಡೆಯೆತ್ತಿದ ಕಾಳಾಹಿಯೆಂಬಂತೆ
ನಿಡುಜಡೆ ಕಡುಬೆಡಂಗುವಡೆಯಲೆಳಸಿ ಬಳಸಿಬಂದು ನಿಂದು ಸುತ್ತಿ ಮುತ್ತಿ ಮೇವಂ ತೊಱೆದು
ಮೆಯ್ಯಂ ಮಱೆದಭ್ಯರ್ಣವದೊಳಾಕರ್ಣಿಪ ತರುಣ ಹರಿಣಗಣಕ್ಕೆ ಸರಸೇಕ್ಷಣದ ಸವಿನೋಟಮನು
ಪದೇಶಿಪಂತೆ ದೆಸೆವಡೆದು ಮುಱಿದಿಟ್ಟಿಪ ದಿಟ್ಟಿ ನೆಱೆ ಮೆಱೆಯೆ ಮೊಗಸಸಿಯ ಮುಗುಳ್ನಗೆ
ಜೊನ್ನದಿಂ ಮುನ್ನಲರ್ದ ಕನ್ನವುರದ ಕನ್ನೈದಿಲೊಳಿರದೆಱಗಿ ಝೇಂಕರಿಪ ಮಧುಕರಿ ಮದನ
ನಾಣತಿಯಿಂ ಜಾಣಿಂದೊಡನೆ ಸುತ್ತಿ ಎಚ್ಚರಿಸಿದಪುದೆಂಬಂತೆಸೆಯೆ ಕೇಳ್ವರ ಕರ್ಣಕುಹರಕಾಸಾರಂ

ಎತ್ತುವ ಗಾಳಿಯ ಹಿಂದೆಹೋಗಿ ಮಂಡಲಾಕಾರವಾಗಿ ಮರಿಮುಗಿಲಿನಂತೆ ಹಾರುವ
ದುಂಬಿಗಳ ಸಮೂಹದಿಂದಲೂ, ಮತ್ತೊಂದೆಡೆಯಲ್ಲಿ ಚೆನ್ನಾಗಿ ಅರಳಿದ ಶ್ರೇಷ್ಠವಾದ
ಅನೇಕ ದಳಗಳಿಂದಲೂ, ವಿಶೇಷ ಸುಗಂಧದಿಂದಲೂ ಕೂಡಿದ ಪುಷ್ಪಸಮೂಹದಲ್ಲಿ
ಹೊಳೆಯುತ್ತಿರುವ ಮಕರಂದವಿತ್ತು. (ಅದಕ್ಕೆ) ಮೋದಗೊಂಡು ತರುಣ ದುಂಬಿಗಳ
ಸಮೂಹವು ಮುತ್ತಿತು. (ಇಂಥ) ಪಾರಿಜಾತವೃಕ್ಷಮೂಲದಲ್ಲಿರುವ ಇಂದ್ರನೀಲ
ಮಣಿಯ ವಿಶಾಲವಾದ ಶಿಲಾವೇದಿಕೆಯ ಮೇಲೆ ಒತ್ತಾಗಿ ಗುಂಪುಗೊಂಡು ಕುಳಿತಿದ್ದ
ದೇವಕನ್ಯೆಯರ ಗುಂಪಿನಲ್ಲಿ ಒಬ್ಬ ಮನ್ನಣೆ ಪಡೆದ ಕಿನ್ನರಕನ್ಯೆ (ಇದ್ದಳು). (ಅವಳು)
ತನ್ನ ಚೆಲುವಾದ ಕಿನ್ನರಿಯನ್ನು ಕೈಗೆತ್ತಿಕೊಂಡು (ಅದನ್ನು) ಶ್ರುತಿಗೂಡಿಸಿ ಸ್ವರಾಲಾಪ
ಮಾಡಿ ಹಾಡುವಿಕೆ ಮತ್ತು ಮೀಟುವಿಕೆಗಳು ಸರಿಹೊಂದುವಂತೆ ಇಂಪಾದ ಧ್ವನಿ ತೆಗೆದು
ಹಾಡಿದಳು. (ಅದನ್ನು) ಕೇಳಿದೊಡನೆ ಹೆಡೆಯೆತ್ತಿದ ಕೃಷ್ಣಸರ್ಪವೋ ಎಂಬಂತೆ ಉದ್ದ
ಪಾದ ಹೆರಳು ಅತ್ಯಂತ ಬೆಡಗನ್ನು ಪಡೆಯಿತು. ಮೇಯುವುದನ್ನು ಬಿಟ್ಟು, ಸುತ್ತಿ
ಮುತ್ತಿಕೊಂಡು ಪಕ್ಕದಲ್ಲಿಯೇ ಇದ್ದು ಕೇಳುತ್ತಿರುವ ತರುಣ ಜಿಂಕೆಗಳ ಸಮೂಹಕ್ಕೆ
ಮನೋಜ್ಞವಾದ ದೃಷ್ಟಿಯ ಸವಿನೋಟವನ್ನು ಉಪದೇಶಿಸುವಂತಹ ರೀತಿಯನ್ನು ಪಡೆದು
ವಕ್ರನೋಟದಿಂದ ನೋಡುವ ಆಕೆಯ ದೃಷ್ಟಿಯು ಚೆನ್ನಾಗಿ ಮೆರೆಯಿತು. ಅವಳ ಮುಖ
ವೆಂಬ ಚಂದ್ರನ ಮುಗುಳುನಗೆಯೆಂಬ ಬೆಳುದಿಂಗಳಿಂದ ಮೊದಲೇ ಅರಳಿದ್ದ ಕರ್ಣಪೂರ
(ಕರ್ಣಾಭರಣ) ದ ಕನ್ನೈದಿಲೆಗೆ ಎರಗಿ ಝೇಂಕಾರ ಮಾಡುವ ಹೆಣ್ದುಂಬಿಯು ಮನ್ಮಥನ
ಆಜ್ಞೆಯನ್ನು ಜಾಣತನದಿಂದ ಕೂಡಲೇ ಸುತ್ತ ಬಳಸಿ ಜ್ಞಾಪಿಸುತ್ತಿತ್ತೋ ಎನ್ನುವ ಹಾಗೆ
ಶೋಭಿಸಿತು. ಕೇಳುವವರ ಕಿವಿಯ ರಂಧ್ರವೆಂಬ ಸರೋವರವು ತುಂಬಿ ಪ್ರವಾಹವಾಗಿ

ತುಂಬಿ ಪೊಱಸೂಸಿ ಪೊನಲಿಟ್ಟು ಪರಿವಂತೆ ಪಿಂಗದೆ ಸಂಗೀತಸುಧಾರಸವೃಷ್ಟಿಯಂ ಸುಧಾ ಕಾದಂಬಿನಿಯಂತೆ ಕಱೆಯೆ ಕೂರ್ಮೆಯಿಂ ಕೇಳ್ದು ವಸಂತಂ ಸಂತಸಂಬಟ್ಟು ಮರದುದಿಯೊಳಿರ್ದು ಮಚ್ಚಿ ಪುಷ್ಪಾಂಜಲಿಗಱೆದನೆಂಬಂತೆ ಪವನಪಾತದಿನಾ ಯುವತಿಯ ಮೇಲೆ ತತ್ಕುಜದ ಸೆಳೆಗೊಂಬಿನಿಂ ಕಳಿದು ಕವಿವ ಕಮ್ಮಲರ್ಗಳಿಂ ಮತ್ತವೊಂದೆಡೆಯೊಳ್ ಬಿಸಿಗದಿರನ ಬಿಸಿವಿಸಿಲ್ ಮೆಯ್ಯಂ ಪೊಯ್ಯೆ ತನುಲತೆ ಮುಗುಳ್ತಂತೆ ತಳ್ತಿಡಿದು ತೀವಿದ ಘರ್ಮಜಳಕಣದಿಂ ಭಗಣಮಂ ತಳೆದ ಗಗನಲಕ್ಷ್ಮಿ ನಗದ ಪೆರ್ಮೆಯನೊರ್ಮೆ ಕೂರ್ಮೆಯಿಂ ನೋಡಲಿಳಿತಂದಳೆಂಬಂ ತಂದಂಬಡೆದಿಳಿತಂದು ಕಂದರದೊಳ್ನಿಂದು ಕಂದಿದ ಮೊಗದಾವರೆಯಂ ಕಾಂತಿಗುಂದಿದ ಕಣ್ಣೈದಿಲಂ ಬಳಲ್ದ ಕುಚಕೋಕ ಮಿಥುನಮಂ ಕೊರಗಿದ ತೋಳ್ವಳ್ಳಿಯಂ ನೀರ್ವೊಗಿಸುವಂತೆ ವಿಪುಳಪುಳಿನ ವಿದಳಿತ ನಳಿನ ವಿಮಳ ಕುಮುದ ಕಲ್ಹಾರಸುರಭಿಮಿಳಿತ ತುಹಿನ ಶೀತಳಸಲಿಲಸಂಭೃತ ಸರಸಿಜಾಕರಮಂ ಸಂತಸಂಮಿಕ್ಕು ಪೊಕ್ಕು ಮುಗಿಲಿಂ ಮುತ್ತು ಸುತ್ತಂ ಸೂಸುವಂತೆ ಮುಡಿಯಿಂ ಮುಗುಳುದುರೆ ಕುಚಕಮಳಕುಟ್ಮಳಕ್ಕೆ ಮುಖಚಂದ್ರನತ್ತಣಿಂ ಭೀತಿಬೇಡೆಂದು ಕುಸುಮಶರಂ ಪೊಸವಿಸಿಲ ಗವಸಿಣಿಗೆದೊಡಿಸಿದಂತೆ ಮನೋರಮಣಂ ರತಿಸಮಯದೊಳ್ ನಿಜಕರದಿಂ ತೊಡೆದ

ಹೊರ ಸೂಸಿ ಹರಿಯುವಂತೆ, ಸಂಗೀತವೆಂಬ ಅಮೃತದ ಮಳೆಯನ್ನು ಅಮೃತಮಯ ಮೇಘದಂತೆ ಆ ಕಿನ್ನರ ಕನ್ಯೆ ಸುರಿಸಿದಳು. ಆಗ ಪ್ರೀತಿಯಿಂದ ವಸಂತಋತುರಾಜನು ಕೇಳಿ ಸಂತೋಷಗೊಂಡು ಮರದ ತುದಿಯ ಮೇಲೆಯೇ ಇದ್ದು ಮೆಚ್ಚಿ ಪುಷ್ಪಗಳನ್ನು ಸುರಿಸಿದನೋ ಎಂಬಂತೆ ಗಾಳಿಯ ಹೊಡೆತದಿಂದ ಆ ಕಿನ್ನರಸ್ತ್ರೀಯ ಮೇಲೆ ಆ ಪಾರಿಜಾತ ವೃಕ್ಷದ ಸೆಳೆಗೊಂಬಿನ ರೆಂಬೆಯಿಂದ ಕಳಚಿ ಮೇಲೆ ಕವಿದು ಬೀಳುವ ಸುಗಂಧಯುಕ್ತವಾದ ಹೂಗಳ ಸಮೂಹ ಕಂಗೊಳಿಸಿತು. ಮತ್ತೊಂದೆಡೆಯಲ್ಲಿ ಕೆಲವು ಸುಂದರಿಯರು ಸೂರ್ಯನ ಬಿಸಿಯಾದ ಬಿಸಿಲು ಮೆಯ್ಗೆ ಹೊಯ್ಯಲಾಗಿ, ದೇಹವೆಂಬ ಬಳ್ಳಿಯು ಮೊಗ್ಗುಗಳನ್ನು ಬಿಟ್ಟಂತೆ ಒತ್ತೊತ್ತಾಗಿ ತುಂಬಿದ ಬೆವರಿನ ಹನಿಗಳಿಂದ ಕೂಡಿ, ನಕ್ಷತ್ರಗಳಿಂದ ತುಂಬಿದ ಗಗನವೆಂಬ ಲಕ್ಷ್ಮಿಯು ಮೇರುಪರ್ವತದ ಘನತೆಯನ್ನು ಒಮ್ಮೆ ಪ್ರೀತಿಯಿಂದ ನೋಡಬೇಕೆಂದು ಇಳಿತಂದಳೋ ಎಂಬಂತೆ ಅಂದಗೊಂಡು ಇಳಿದು ಬಂದು ಒಂದು ಕಂದರದಲ್ಲಿ ನಿಂತು ಕಂದಿದ ಮೊಗವೆಂಬ ಕಮಲವನ್ನೂ, ಕಾಂತಿಗೆಟ್ಟ ಕಣ್ಣೆಂಬ ನೈದಿಲೆಯನ್ನೂ, ಬಳಲಿದ ಕುಚಗಳೆಂಬ ಚಕ್ರವಾಕಪಕ್ಷಿಗಳ ಜೋಡಿಯನ್ನೂ, ಸೊರಗಿದ ಬಾಹುಲತೆಗಳನ್ನು ನೀರಿನಲ್ಲಿ ಹೊಗಿಸುವ ಹಾಗೆ (ಆಗಲು) ವಿಶೇಷವಾದ ಮಳಲದಿನ್ನೆಗಳಿಂದಲೂ, ಅರಳಿದ ಕಮಲ ಮತ್ತು ಸ್ವಚ್ಛವಾದ ಕರಿಯ ಕಮಲ, ಸೌಗಂಧಿಕಪುಷ್ಪಗಳ ಸುಗಂಧದಿಂದ ಮಿಳಿತವಾದ ಮಂಜಿನಿಂದ ಶೀತಗೊಂಡ ನೀರಿನಿಂದ ತುಂಬಿದ ಸರೋವರವನ್ನು ಸಂತೋಷದಿಂದ ಹೋಗುತ್ತಿದ್ದರು. ಆಗ ಮುಗಿಲಿನಿಂದ ಮುತ್ತು ಸುತ್ತಲೂ ಉದುರುವಂತೆ ಮುಡಿಯಿಂದ ಮೊಗ್ಗುಗಳು ಉದುರುತ್ತಿರಲು, ಸ್ತನಗಳೆಂಬ ತಾವರೆಮೊಗ್ಗುಗಳಿಗೆ ಮುಖವೆಂಬ ಚಂದ್ರನ ದೆಸೆಯಿಂದ ಭಯ ಬೇಡವೆಂದು ಮನ್ಮಥನು ಹೊಸಬಿಸಿಲಿನ ವಸ್ತ್ರ

ಕುಂಕುಮಪಂಕಂ ಜಲದೊಳೊಡವೆರೆದು ತರಳತರತರಂಗಪಾತದಿಂ ವಿಕಚ ಕನಕ ಕಮಳ ಪರಾಗ ಪಟಳಂ ಸುರಿದು ಪರೆದಂತೆ ಪಸರಿಸೆ ಕಮಲವನದೊಳೆಱಗಿದ ಪಱಿಮೆದುಱುಗಲೆಂಬಂತಲ್ಲಿ ಚಿಕುರ ನಿಕರಮೆಸೆಯೆ ಸಲಿಲಕೇಳಿಯನಾಂತು ಬಳಲ್ಕೆಗಳಿದ್ಯೆದಿ ತನ್ನಗದ ಕಾಂತಿಯನೆಳೆವಿಸಿಲ್ಗೆತ್ತು ಮೆಯ್ಯೊಡ್ಡಿನಿಂದಂಬುಜಂ ತುಂಬಿಗಳ ಬಂಬಲಂ ಮ್ಯೆದಡಪುವಂತೆ ಸುಣ್ಗುರುಳ್ಗಳಂ ನೆಳಲುವ ಕರಾಬ್ಜಂ ಕಂಗೊಳಿಸೆ ತೋರ್ಪ ಗಂಧರ್ವಸುಂದರಿಯರಿಂ ಮತ್ತಮೊಂದೆಡೆಯೊಳ್ ಗಗನ ಕ್ಕೊಗೆವ ಮುಗಿಲೊಡನೆ ನೆಗೆದು ಪಾಱಲಲ್ಲಿ ನಿಜಾರುಣಾಧರಮನವಲೋಕಿಸಿ ರಸಾಲದಳ ಬಿಂಬಫಲಭ್ರಾಂತಿಯಿಂ ಕರ್ದುಂಕಲೆಂದ್ಯೆತಂದು ನೆಟ್ಟನೆ ಕಟ್ಟಿದಿರಿರ್ಕೊಳ್ನಂದ ಪರಪುಟ್ಟ ಪಂಡಿತ ವಕ್ಕಿಗಳಂ ನಿಜಕರಾಗ್ರದಿಂ ಪಿಡಿದೊಡಗೊಂಡುಪೋಗಿ ನಿಜಗೃಹದೊಳೋವಿಯಾ ಗಿಳಿಯ ಮುದ್ದುತನಕ್ಕೊಲ್ದು ವಾತ್ಸ್ಯಾಯನಮನೋದಿಸಿ ರಸಾಲರಮಣನೆಂಬ ಪೊಸವೆಸರಿಟ್ಟು ಕಳ ಕಂಠನ ಕಳರವಕ್ಕೆ ಮೆಚ್ಚಿ ನಿಚ್ಚಂ ಸವಿಸವೆಯುವ ಸಾರಸಂಗೀತಮಂ ಕಲಿಸಿ ಮಾಕಂದಮಧುರ ನೆಂದು ನಾಮಕರಣಂಗೈದನಂತರಂ ಸಿಂಗರಂಬಡೆದು ಕನಕನಗದ ನಂದನಮಧ್ಯದ ಮಂದಾರ

ವನ್ನು ತೊಡಿಸಿದನೋ ಎಂಬ ಹಾಗೆ, ಮನೋರಮಣನು ಸಂಭೋಗಸಮಯದಲ್ಲಿ ತನ್ನ ಕಯ್ಯಿಂದ ಲೇಪನ ಮಾಡಿದ ಕುಂಕುಮಕೇಸರಿಯ ಪಂಕವು ನೀರಿನಲ್ಲಿ ಕೂಡಿ ಕಂಪನ ಗೊಂಡ ತೆರೆಗಳ ಹೊಡೆತದಿಂದ ಅರಳಿದ ಬಂಗಾರವರ್ಣದ ಕಮಲ (ಹೊಂದಾವರೆ)ದ ಧೂಳಿಯು ಸುರಿದು ಹರಿದು ವಿಸ್ತರಿಸಿತು. ಆ ಗಂಧರ್ವಸ್ತ್ರೀಯರು ಕಮಲವನದಲ್ಲಿ ಮೇಲೆ ಬಿದ್ದ ಭೃಂಗಗಳ ಸಮೂಹವೋ ಎಂಬಂತೆ ಆ ಕೊಳದಲ್ಲಿ ಮುಂಗುರುಳುಗಳ ಸಮೂಹವು ಶೋಭಿಸುತ್ತಿರಲು, ಜಲಕ್ರೀಡೆಯನ್ನು ಅನುಭವಿಸಿ, ಬಳಲಿಕೆಯನ್ನು ಹೋಗ ಲಾಡಿಸಿಕೊಂಡು ಬಂದು ಆ ಮೇರುಪರ್ವತದ ಕಾಂತಿಯನ್ನೇ ಎಳೆಬಿಸಿಲೆಂದು ಭ್ರಮಿಸಿ, ಅದಕ್ಕೆ ಮೈಯೊಡ್ಡಿ ನಿಂತುಕೊಂಡರು. ಕಮಲವು ತುಂಬಿಗಳ ಹಿಂಡಿನ ಮೈಮೇಲೆ ಕೈಯಾಡುವಂತೆ ನುಣ್ಣನೆಯ ಮುಂಗುರುಳುಗಳ ಸಿಕ್ಕನ್ನು ಬಿಡಿಸುತ್ತಿರುವ ಅವರ ಕರಕಮಲವು ಕಂಗೊಳಿಸುತ್ತಿತ್ತು. ಮತ್ತೊಂದು ತಾಣದಲ್ಲಿ ಅಪ್ಸರೆಯರು ಮೋಡ ಗಳೊಡನೆ ಆಕಾಶಕ್ಕೆ ನೆಗೆದು ಹಾರುವ ಸಮಯದಲ್ಲಿ ತಮ್ಮ ಅರುಣವರ್ಣದ ತುಟಿ ಗಳನ್ನು ನೋಡಿ, ಸಿಹಿಮಾವಿನ ಮರದ ಚಿಗುರೆಂಬ ಭ್ರಾಂತಿಯಿಂದ ಅದನ್ನು ಕರ್ದುಕುವು ದಕ್ಕೆ ಬಂದು ನೇರವಾಗಿ ಎದುರಿನಲ್ಲಿಯೇ ನಿಂತಂಥ ಕೋಗಿಲೆ ಗಿಳಿಗಳನ್ನು ತನ್ನ ಕೈಗಳಿಂದ ಹಿಡಿದು, ಸಂಗಡ ಕರೆದುಕೊಂಡುಹೋಗಿ, ತನ್ನ ಮನೆಯಲ್ಲಿ ಅವನ್ನು ಸಾಕಿ ಆ ಗಿಳಿಯ ಮುದ್ದುತನಕ್ಕೆ ಒಲಿದು ಅದಕ್ಕೆ ವಾತ್ಸ್ಯಾಯನಪ್ರಣೀತವಾದ ಮದನಶಾಸ್ತ್ರವನ್ನು ಕಲಿಸಿ, 'ರಸಾಗಾಲರಮಣ'ನೆಂದು ಹೆಸರಿಟ್ಟು, ಕೋಗಿಲೆಯ ಮನೋಹರ ಧ್ವನಿಗೆ ಮೆಚ್ಚಿ ಅದಕ್ಕೆ ಪ್ರತಿದಿನವೂ ಮಾಧುರ್ಯ ಕುಗ್ಗದ ಶ್ರೇಷ್ಠ ಸಂಗೀತವನ್ನು ಕಲಿಸಿ 'ಮಾಕಂದ ಮಧು ಕರ'ನೆಂದು ನಾಮಕರಣ ಮಾಡಿದನು. ಆಮೇಲೆ ಅವನ್ನು ಅಲಂಕಾರಗೊಳಿಸಿ ಆ ಮೇರು ಪರ್ವತದ ನಂದನವನದ ಮಧ್ಯದಲ್ಲಿರುವ ಮಂದಾರವೃಕ್ಷಗಳ ತಳಭಾಗದ ತಂಪಾದ ಎಲೆಮ

ತರುಗಳ ತಳದ ತಣ್ಣೆಳಲ ತಳಿರ್ವಂದರ ಮಲ್ಲಿಕಾಕುಸುಮಮಾಲಿಕಾಲಂಕೃತ ಕುಸುಮಮಂಟಪದೊಳರೆವಿರಿದ ಕೆಂಜಾಜಿಯ ನನೆದುಱುಗಲ ಸಿಂಹಾಸನದ ಮೇಲೆ ತಳಿರಗದ್ದುಗೆಯಲ್ಲಿ ಚೈತ್ರನೆಂಬ ಚಿಪ್ಪಿಗಂ ಮಾಂದಳಿರ್ವಟ್ಟೆಯೊಳ್ ಶಿರೀಷಕುಸುಮಮಂ ತುಂಬಿ ಕಳಮ ಕಂಟಕ ಸೂಚಿಯಿಂ ಕಮಳಸೂತ್ರಮಂ ಕೊಯ್ದು ಪೊಲಿದಿರಿಸಿದ ಮಲಂಗುಮೂಡೆಯ ಮೋಡಿಯೊಳೊಱಗಿ ಬಳಸಿ ಶಶಿವಸಂತಾದಿಗಳೋಲೈಸಿ ನಿಲೆ ಶೃಂಗಾರಸಾರಸರ್ವಸ್ವಮಂಗಂಬಡೆದಂತೆ ಕಂಗೊಳಿಪನಂಗಚಕ್ರೇಶ್ವರಂ ತನ್ನಂಗನೆಯಾದ ರತಿದೇವಿಯೊಡನೊಡ್ಡೋಲಗಂಗೊಟ್ಟಿರ್ಪ ವೇಳೆಯಱಿದು ಭೋಂಕನೈದಿ ಸಾದರಂ ಮಿಗೆ ರತಿಕಾಮರ್ಗೆ ಮಣಿದುಚಿತಸ್ಥಾನದೊಳ್ ಕುಳ್ಳಿರ್ದಾಪಿಕನಿಂ ಮಾರವೀರನ ಬೀರದ ಬಿರಿದಾವಳಿಯಂ ಪಾಡಿಸುತ್ತಮಾ ರಾಜಶುಕನಿಂ ತಾನುಸಿರ್ದ ಮದನವಿಜಯಮೆಂಬ ಸರಸಕಾವ್ಯಮಂ ಸಭೆ ಕೇಳ್ದು ತಲೆದೂಗಲೋದಿಸುತ್ತಮವೆರಡಂ ಕಾಣ್ಕೆಗೊಟ್ಟುಚ್ಚೆಗಾರ್ತಿ ಪಚ್ಚೆವಿಲ್ಲರಿಂ ಮಚ್ಚುವಡೆದಚ್ಚರಿಮಿಗೆ ತಳರ್ದೊಚ್ಚೇರೆಗಣ್ಣ ಪೆರ್ಚಿನಚ್ಚರಿಯರಿಂ ಮತ್ತಮೊಂದೆಡೆಯೊಳ್ ಸೋಗೆನವಿಲಂತೆಸೆವ ಸೋರ್ಮುಡಿಗೆ ಮೊಲ್ಲೆಯ ಮುಗುಳಂತುಱುಂಬಿ ಅರೆವೆಱೆಯಂತೆ ಮೆಱೆವ ಪಣೆಗೆ ಕಳಂಕನಮರ್ಚುವಂತೆ ಕತ್ತುರಿಯ ಬಟ್ಟುಬೊಟ್ಟ

ಹಂದರದಲ್ಲಿ ಮಲ್ಲಿಗೆಯ ಹೂವುಗಳ ಮಾಲೆಯಿಂದ ಅಲಂಕಾರಗೊಂಡ ಹೂವಿನ ಮಂಟಪದಲ್ಲಿ ಸ್ವಲ್ಪ ಅರಳಿದ ಕೆಂಪು ಜಾಜಿಯ (ಹವಳ ಮಲ್ಲಿಗೆಯ) ಮೊಗ್ಗುಗಳ ರಾಶಿಯ ಸಿಂಹಾಸನದಮೇಲೆ ಚಿಗುರುಗಳ ಮೆತ್ತೆಯಲ್ಲಿ ಚೈತ್ರನೆಂಬ ಸಿಂಪಿಗನು ಮಾವಿನ ತಳಿರೆಂಬ ಬಟ್ಟೆಯಲ್ಲಿ ಶಿರೀಷಪುಷ್ಪಗಳನ್ನು ತುಂಬಿ, ಬತ್ತದ ಮುಳ್ಳಿನ ಸೂಜಿಗೆ ಕಮಲದ ದಂಡಿನ ದಾರವನ್ನು ಪೋಣಿಸಿ, ಹೊಲಿದು ಇಟ್ಟ ಮಲಗುದಿಂಬುಗಳ ಮೋಡಿಯಲ್ಲಿ ಮಲಗಿ ಸುತ್ತ ಇರುವ ಚಂದ್ರ ಮತ್ತು ವಸಂತರುಗಳು ಸೇವಿಸಲು ನಿಂತಿರಲು, ಶೃಂಗಾರದ ಸಮಗ್ರ ಸ್ವರೂಪವೇ ದೇಹವಿಡಿದಂತೆ ಶೋಭಿಸುವ ಮನ್ಮಥಚಕ್ರವರ್ತಿಯು ತನ್ನ ಹೆಂಡತಿಯಾದ ರತಿದೇವಿಯೊಡನೆ ದೊಡ್ಡ ರಾಜಸಭೆಯನ್ನು ಕೂಡಿಸಿಕೊಂಡಿದ್ದ ಸಮಯವನ್ನು ತಿಳಿದು ಕುತೂಹಲದಿಂದ ಬಂದು ವಿಶೇಷಾದರದಿಂದ ರತಿಕಾಮರುಗಳಿಗೆ ನಮಸ್ಕರಿಸಿ, ಉಚಿತಾಸನದಲ್ಲಿ ಕುಳಿತುಕೊಂಡು ಆ ಕೋಗಿಲೆಯಿಂದ ವೀರ ಮನ್ಮಥನ ಶೌರ್ಯದ ಬಿರುದಾವಳಿಗಳನ್ನು ಹೇಳಿಸುತ್ತ (ಮತ್ತು) ಆ ಅರಮನೆಯ ಗಿಳಿಯಿಂದ ತಾನು ಹೇಳಿಕೊಟ್ಟ ಮದನವಿಜಯವೆಂಬ ರಸಭರಿತ ಕಾವ್ಯವನ್ನು ಸಭೆಯೆಲ್ಲ ಕೇಳಿ ತಲೆದೂಗುವಂತೆ ಹೇಳಿಸುತ್ತ, ಅವೆರಡನ್ನೂ ಕಾಣಿಕೆಯನ್ನಾಗಿ ಕೊಟ್ಟು ರತಿದೇವಿ ಮತ್ತು ಮನ್ಮಥರಿಂದ ಮೆಚ್ಚುಗೆಯ ದ್ರವ್ಯವನ್ನು ಪಡೆದು ವಿಶೇಷಾಶ್ಚರ್ಯದಿಂದ ಅಲ್ಲಿಂದ ಹೋಗುತ್ತಿರುವ ವಿಶಾಲನೇತ್ರೆಯರಾದ (ಒಂದು ಸೆರೆ ಅಗಲವ ನೇತ್ರಗಳುಳ್ಳವರಾದ) ಶ್ರೇಷ್ಠ ಅಪ್ಸರಸ್ತ್ರೀಯರಿಂದ—ಮತ್ತೊಂದು ಕಡೆಯಲ್ಲಿ ಸೋಗೆ ನವಿಲಿನಂತೆ ಶೋಭಿಸುವ ಜೋಲುಬಿದ್ದ ಮುಡಿಗೆ ಮಲ್ಲಿಗೆಯ ಮೊಗ್ಗುಗಳನ್ನು ಮುಡಿದುಕೊಂಡು, ಅರ್ಧಚಂದ್ರಾಕಾರದಲ್ಲಿ ಶೋಭಿಸುವ ಹಣೆಗೆ ಕರಿಯ ಗುರುತನ್ನು ಮಾಡಿಕೊಳ್ಳುವಂತೆ ಕಸ್ತೂರಿಯ ದುಂಡಾದ ಬೊಟ್ಟನ್ನಿಟ್ಟುಕೊಂಡು

ನಿಟ್ಟು ಮದನಂ ವದನಲಕ್ಷ್ಮಿಯನೋಜೆಯಿಂ ಪೂಜಿಸಿದ ಸಂಪಗೆಯೆನೆ ಸೊಂಪುಗರೆವ ನಾಸಿಕಕ್ಕೆ ನಱುಸುಯ್ಗಂಪಂ ಪಡೆದು ರತಿಯ ಮುಡಿಗೆ ಮುಡಿಯಲ್ ಯೋಗ್ಯಮಕ್ಕೆಂದು ಮಲ್ಲಿಗೆಯ ಮುಗುಳಂ ಸೇರಿಪಂತಾಣಿಮುತ್ತಿನ ಮೂಕುತಿಯುಂ ಸಾರ್ಚಿ ಮದನ ಮದಗಜದ ಕುಂಭದಂತಿಂಬು ವಡೆವ ಒಟ್ಟವೊಲೆಗೆ ತಲೆಮಾಲೆಯನಲಂಕರಿಪಂತೆ ಕಂಠಮಾಲೆಯಂ ನೆಲೆಗೊಳಿಸಿ ಕಂಜದಂತೆ ರಂಜಿಪ ಕರಯುಗಳಕ್ಕೆ ರವಿಕಿರಣಮಂ ತುಡಿಸುವಂತೆ ಸುವರ್ಣಮಣಿವಲಯಮಂ ಕೈಗೊಳಿಸಿ ರೋಹಣಾಚಲವೆಂಬೂಹೆಗೊಳಗಪ್ಪ ನಿತಂಬಮಂಡಳಕ್ಕೆ ಮಾಲೆಗೊಂಡ ಮಣಿಗಣಮಂ ಸೇರಿಪಂತೆ ನೂತ್ನರತ್ನಕಾಂಚಿಯನಮರ್ಚಿಯನಂಗನಿಷಂಗಮೆನೆ ಕಂಗೊಳಿಪ ಜಂಘೆಗಳ್ಗಣಸಂ ಬಂಧಿಪಂತಂದುಗೆಯನಂದಂಗೊಳಿಸಿ ನುಣ್ದೊಡೆಗಳೆಂಬ ರಂಭಾಸ್ತಂಭಂಗಳ್ಕೆಂದದಂತೆ ಬೆಳ್ದಿಂಗಳಿಂ ಬಾಸಣಿಸುವಂತೆ ಬೆಳ್ವಟ್ಟೆಯಂ ನುಟ್ಟು ಸಿಂಗರಂಗೈದು ಕಡೆಗಣ್ಣ ಕದಿರ್ದುಱುಗಲ್ಮಿಡಿಮಿಂಚಂ ಕಿದಱೆ ಬಿಂಬಾಧರದ ಕೆಂಬೆಳಗಿನೊಡನೆ ಸುಲಿಪಲ್ಲ ನುಣ್ಬೆಳಗು ಮೊಗಸಿರಿಯ ಮೈಸಿರಿಯುಂ ಪಸರಿಸೆ ಮಿಸುಪಂಗಲತೆಯ ಪೊಸಕಂಪು ದೆಸೆದೀವೆ ಮದವೇಳ್ದ ಮದನಗಜದ ಮದಲಕ್ಷ್ಮಿಯಂತೆ

ಮನ್ಮಥನು ಮುಖನೆಂಬ ಲಕ್ಷ್ಮಿಯನ್ನು ಕ್ರಮಬದ್ಧವಾಗಿ ಪೂಜಿಸಿದ ಸಂಪಗೆಯೋ ಎಂಬಂತಿರುವ ಚೆಲುವನ್ನು ಬೀರುತ್ತಿರುವ ಮೂಗಿಗೆ ಸುಗಂಧದುಸಿರನ್ನು ಹೊಂದಿ, ರತಿಯ ಮುಡಿಗೆ ಮುಡಿದುಕೊಳ್ಳುವದಕ್ಕೆ ಯೋಗ್ಯವಾದುದಾಗಿರುವುದೆಂದು ಮಲ್ಲಿಗೆಯ ಮೊಗ್ಗುಗಳನ್ನು ಸೇರಿಸುವಂತೆ ಶ್ರೇಷ್ಠಮುತ್ತುಗಳಿಂದ ಮಾಡಿದ ಮೂಗುತಿಯನ್ನು ಅಂದರೆ ನತ್ತೆಂಬ ಆಭರಣವನ್ನು ಇಟ್ಟು, ಮನ್ಮಥನ ಮದೋನ್ಮತ್ತವಾದ ಆನೆಯ ಕುಂಭಸ್ಥಲದ ಹಾಗೆ ವಿಶಾಲವಾದ ವೃತ್ತಾಕಾರದ ಸ್ತನಗಳಿಗೆ ಶಿರೋಮಾಲೆಯನ್ನು ಅಲಂಕರಿಸುವ ಹಾಗೆ, ಕುತ್ತಿಗೆಯ ಸರವನ್ನು ಸ್ಥಿರಗೊಳಿಸಿ, ಕಮಲದಂತೆ ಶೋಭಿಸುವ ಎರಡೂ ಕೈಗಳಿಗೆ ರವಿಕಿರಣಗಳನ್ನು ತೊಡಿಸುವ ಹಾಗೆ ಬಂಗಾರದಲ್ಲಿ ರತ್ನಗಳನ್ನು ಕೆಚ್ಚಿರುವ ಕಡಗಗಳನ್ನು ತೊಡಿಸಿ, ಮೇರುಪರ್ವತವೋ ಎಂಬ ಊಹೆಗೊಳಗಾದ ಕಟಿಪ್ರದೇಶ (ಜಘನ ಪ್ರದೇಶ)ಕ್ಕೆ ಸುತ್ತಲೂ ಮಾಲಾಕಾರವಾಗಿ ಮಣಿಗಳ ಸಮೂಹವನ್ನು ಸೇರಿಸುವ ಹಾಗೆ, ಹೊಸದಾದ ರತ್ನಗಳ ಒಡ್ಯಾಣ (ಪಟ್ಟಿ) ವನ್ನು ಅಳವಡಿಸಿ, ಮನ್ಮಥನ ಬತ್ತಳಿಕೆಯೋ ಎನ್ನುವಂತೆ ಶೋಭಿಸುವ ಜಂಘೆ (ಮೊಳಕಾಲು)ಗೆ ಅಣಸುಬಡಿದ ಹಾಗೆ ಕಾಲಂದಿಗೆಯನ್ನು ತೊಡಿಸಿ ಅಲಂಕಾರಗೊಳಿಸಿ, ನುಣುಪಾದ ತೊಡೆಗಳೆಂಬ ಬಾಳೆಯ ಕಂಬಗಳು ಬಾಡದಹಾಗೆ ಬೆಳದಿಂಗಳಿಂದ ಮುಚ್ಚುವ ರೀತಿಯಲ್ಲಿ ಬಿಳಿಯ ಬಟ್ಟೆಯನ್ನು ಉಟ್ಟು, ಸಿಂಗಾರ ಮಾಡಿಕೊಂಡು ಕಡೆಗಣ್ಣಿನ ಕಾಂತಿಯ ಸಮೂಹವು ಬಳ್ಳಿಮಿಂಚನ್ನು ಹೊರಸೂಸಲು ತೊಂಡೆಯ ಹಣ್ಣಿನಂತಿರುವ ತುಟಿಗಳ ಕೆಂಪಾದ ಕಾಂತಿಯೂ, ಬಿಳಿಯಹಲ್ಲುಗಳ ನುಣುಪಾದ ಪ್ರಕಾಶವೂ (ಕ್ರಮವಾಗಿ) ಮುಖದ ಶ್ರೀಯನ್ನೂ, ಮೈಯ ಚಲುವನ್ನೂ ಸುತ್ತಲೂ ಪ್ರಸಾರಗೊಳಿಸಲು, ಶೋಭಿಸುವ ಬಳ್ಳಿಯಂತಿರುವ ದೇಹದ ನೂತನ ಸುಗಂಧವು ದಿಕ್ಕುಗಳನ್ನೆಲ್ಲ ತುಂಬಲು, ಮದಗೊಂಡ ಮನ್ಮಥನ ಆನೆಯ ಮದದಲಕ್ಷ್ಮಿಯ ಹಾಗೆ (ಮದದ ಸಿರಿಯ ಹಾಗೆ)

ಸೊರ್ಕುಂಜವ್ವನೆ ಸೊಗಯಿಪ ವಿಮಳ ಕಮಳಾಕರದ ತೀರದ ವಿಶದ ಶಶಿಮಣಿಭಿತ್ತಿಯಂ ನೆಮ್ಮಿ ಚೆನ್ನೆಸೆಯೆ ಸಿಂಗರಂಗೈದು ಕಾದಂಬಿನಿಯ ಬರವಂ ಬಯಸುವ ಮಯೂರನಂತೆ ತನ್ನ ಬರವಂ ಬಯಸುತೆ ಕುಳ್ಳಿರ್ದ ಮನದನ್ನನೆಡೆಗೆ ತಡೆಯದೆಯ್ತರ್ಪಲ್ಲಿ ನಿಜಪ್ರತಿಬಿಂಬಮಂ ನೆಮ್ಮಿರ್ದ .ಚಂದ್ರಕಾಂತಭಿತ್ತಿಯೊಳ್ ಮಾರ್ಪೊಳೆಯಲ್ಕತಿಯುವತಿಯೆಂದು ಬಗೆದು ಕನಲ್ಕೆ ಕೈಮಿಾಱಿ ಮುಳಿದು ಮುಗಿಲ್ವಟ್ಟೆಗೆ ಗಳಿಲನೆ ನೆಗೆಯೆ ತನ್ನ ನೆಳಲ್ ಸಸಿಗಲ್ಲ ನೆಲಗಟ್ಟನೊಳ್ ತೊಟ್ಟನೆ ತೋಱೆ ಮಹೋದ್ರೇಕದಿಂ ಮುಂದುಗಾಣದೆ ಧರೆಗಿಳಿದಳ್ಗಿತ್ತು ಮೂರ್ಛೆವೋದ ಮನದನ್ನನಂ ಕಂಡು ಕರುಣಾರಜ್ಜುವೆಳೆದಂತೆ ತಳ್ವದಿಳಿತಂದು ತೆಗೆದು ಬಿಗಿಯಪ್ಪುತ್ತೆ ಸುರತರು ತಳ ವಿಳಸಿತ ವಿಕಚ ವಿಚಕಿಲ ನಿಚಯ ನಿಚಿತ ರುಚಿರತರ ಮಲ್ಲಿಕಾಮಂಟಪಕ್ಕೊಡಗೊಂಡುಪೋಗಿ ನಳನಳಿಪೆಳೆದಳಿರ ಪೂವಸೆಯೊಳಿರ್ವರುಂ ಕುಳ್ಳಿರ್ದು ಬಳ್ಳಿವರಿವ ಕಟಾಕ್ಷದಿಂದಡರಿನೋಡಿ ಮದ ನಾನುರಾಗಂ ಕೈಗಣ್ಮೆ ಮನಂಬಂದ ಬಂಧದಿಂ ಸವಿಸವೆಯದ ಸುಸಿಲಸೊಗಮನನುಭವಿಸಿ ತದ್ದಂ ಪತಿಗಳ್ಪೋಗೆ ಪಾಸಿನೊಳ್ಪತ್ತಿದ ಕಜ್ಜಳಮಂ ಸೂಸಿದ ನರುದಂಬುಲಮನುದಿರ್ದಂಗರಾಗಮಂ

ಯೌವನ ಮದೋನ್ಮತ್ತಳಾದ ಹೆಂಗಸು ಸೊಗಸನ್ನು ಬೀರುವ ಶುದ್ಧವಾದ ಸರೋವರದ ತೀರದಲ್ಲಿರುವ ಪರಿಶುದ್ಧ ಚಂದ್ರಕಾಂತಶಿಲಾನಿರ್ಮಿತ ಗೋಡೆಯನ್ನು ಆಶ್ರಯಿಸಿ ಚೆಲುವಿನಿಂದ ಶೋಭಿಸುತ್ತಿರಲು ಸಿಂಗಾರ ಮಾಡಿಕೊಂಡು ಮೇಘಗಳ ಬರುವಿಕೆಯನ್ನು ಎದುರು ನೋಡುವ.ನವಿಲಿನ ಹಾಗೆ ತನ್ನ ಬರುವಿಕೆಯನ್ನೇ ಬಯಸುತ್ತ ಕುಳಿತಿರುವ ಪ್ರಿಯನ ಹತ್ತಿರಕ್ಕೆ ನಿಲ್ಲದೆ ಬರುತ್ತಿರುವಾಗ ತನ್ನ ಪ್ರತಿಬಿಂಬವನ್ನು ಹೊಂದಿದ್ದ ಚಂದ್ರಕಾಂತದ ಗೋಡೆಯಲ್ಲಿ ಪ್ರತಿಛಾಯೆ ಹೊಳೆಯಲು ಬೇರೊಬ್ಬ ಹೆಂಗಸೆಂದು ಯೋಚಿಸಿ, ಹಿಡಿತ ತಪ್ಪಿದ ಕೋಪದಿಂದ ಸಿಟ್ಟುಮಾಡಿಕೊಂಡು ಆಕಾಶಕ್ಕೆ ಹಾರಲು, ತನ್ನ ನೆಳಲು ಚಂದ್ರಕಾಂತ ಶಿಲೆಯ ನೆಲಗಟ್ಟಸಲ್ಲಿ ತೊಟ್ಟನೆ ಮಾರ್ಪೊಳೆದು ತೋರಲಾಗಿ ಮಹಾ ಉದ್ರೇಕಗೊಂಡು ದಿಕ್ಕುಗಾಣದವಳಾಗಿ ಧರೆಗಿಳಿದವಳಂತಾಗಿ ಮೂರ್ಛೆಗೊಂಡ ತನ್ನ ಪ್ರಿಯನನ್ನು ಕಂಡು, ಕರುಣವೆಂಬ ಹಗ್ಗದಿಂದ ಎಳೆಯಲ್ಪಟ್ಟವಳಂತಾಗಿ ತಡಮಾಡದೆ ಇಳಿದುಬಂದು ಬಿಗಿಯಾಗಿ ತೆಗೆದಪ್ಪಿಕೊಂಡು, ಕಲ್ಪವೃಕ್ಷತಳದ ಶೋಭಿಸುವ ಅರಳಿದ ಹೂಗಳಿಂದ ಕೂಡಿದ, ಮಲ್ಲಿಗೆಯ ಬಳ್ಳಿಯ ಸಮೂಹಗಳಿಂದ ಮಾಡಿದ ನಿಬಿಡವಾದ ಆ ಮಲ್ಲಿಕಾಮಂಟಪಕ್ಕೆ ಕೂಡಿಕೊಂಡುಹೋಗಿ, ನಳನಳಿಸುವ ಎಳೆಯ ಚಿಗುರಿನ ಮತ್ತು ಹೂವಿನ ಹಾಸಿಗೆಯ ಮೇಲೆ ಇಬ್ಬರೂ ಕುಳಿತು ಕೊರಸೂಸುವ ಕಡೆಗಣ್ಣನೋಟದಿಂದ ದಿಟ್ಟಿಸಿ ನೋಡಿ, ಕಾಮ ಸಂಬಂಧವಾದ ಅನುರಾಗದಿಂದ ಹತೋಟಿ ತಪ್ಪಿದವರಾಗಿ, ಮನಸ್ಸಿಗೆ ಬಂದ ಬಂಧನಗಳ ಸವಿಬಯಕೆಯೇ ಮುಗಿಯದಂತೆ ಸಂಭೋಗಸುಖವನ್ನು ಅನುಭವಿಸಿ, ಆ ದಂಪತಿಗಳು ಹೋಗಲಾಗಿ, ಹಾಸಿಗೆಯಲ್ಲಿ ಅಂಟಿದ ಕಾಡಿಗೆಯನ್ನು, ಸುರಿದು ಬಿದ್ದಿರುವ ಸುವಾಸನೆಯ ತಾಂಬೂಲವನ್ನು, ಉದುರಿಬಿದ್ದ ದೇಹಕ್ಕೆ ತೊಡೆದುಕೊಂಡಿದ್ದ ಸುಗಂಧವನ್ನು, ಕೆದರಿ

ಕೆದರ್ದ ಮೃಗಮದ ರಜಮುಂ ಜಗುಳ್ದ ಪೂಮಾಲೆಯುಂ ಮುಗುಳ್ದು ಮುಸುರ್ವಳಿಗಳುಂ ಕಂಡು ಕಾದಲರ್ನೆರೆದು ತಳರ್ದ ತಾಣಮಿದೆಂದು ಜಾಣಿಂ ಕೆಳದಿಯರಂ ಕರೆದು ತೋಱಿ ಮುಗುಳ್ನಗೆ ನಗುತ್ತನಂಗನಿಂಗಿತದಂಗಮಂ ಪಿಂಗದೆ ಪೊಗಳ್ವ ದೇವಾಂಗನೆಯರಿಂ ಮತ್ತಮೊಂದೆಡೆಯೊಳ್ ಅಜಗರಮುಗುಳ್ದ ಗರಳದುರಿಯ ಪೆರ್ಬೊಗೆ ಪೊಯ್ಯೆ ಗಗನದಿಂ ಜಗುಳ್ದುರುಳ್ದ ವಿಧುರವಿಗಳಂತೆಸೆವ ರವಿಮಣಿ ಚಂದ್ರಕಾಂತಂಗಳಿಂ ರವಿಶಶಿಗಳ್ಗೆ ರಾಹುಭ್ರಾಂತಿಗುಡುವಿಂದ್ರನೀಲದ ಕೋಡುಂಗಲ್ಗಳಿಂ ಸಪ್ತಾಶ್ವನಶ್ವಂಗಳ್ಗೆ ಶಶ್ವದ್ದೂರ್ವಾಂಕುರಶಂಕೆಯಂ ಭೋಂಕನೊಡರ್ಚುವ ಪಚ್ಚೆಗಲ್ಗಳಿಂ ಹರಿಯೊಳ್ಪುರುಡಿಸಿ ಗಿರಿವರಂ ವಜ್ರಮನಾಂತ ಬೆಡಂಗನಾಗಿಪ ವಜ್ರಶೃಂಗದಿಂ ಹರನೋಲಗಕ್ಕೆ ಹರುಷದಿಂ ಪೋಗಿಬರ್ಪ ಸುರ ಖಚರ ಕಿನ್ನರರ್ಗಾವಾಸಮಾದ ರನ್ನಗವಿಗಳಿಂ ತಾಪಸರೇಪೊಳ್ತುಂ ನೆಲೆಗೊಂಡ ತಪೋವನಂಗಳಿಂ ಪಾಱುವ ಪಕ್ಕಿಗಳಿಂ ನೆಗೆವ ಮೃಗೇಂದ್ರಂಗಳಿಂ ಚಲ್ಲವರಿವ ಪುಲ್ಲೆಗಳಿಂ ಸಮ್ಮದಂಬಡೆವ ಪೊಮ್ಮೃಱಿಗಳಿಂ ಪರಿವ ಪುರುಷಾಮೃಗಂಗಳಿಂ ನೆರೆದು ಪರಿವ ಕರಿಗಳಿಂ ಸಾರಿಬರ್ಪ ಭೇರುಂಡಂಗಳಿಂ ನಲಿವ ಪುಲಿಗಳಿಂ ನಿಲುಂಬಿದ ಮೊಲಂಗಳಿಂ ಪೆಡೆಯೆತ್ತುವ ಗಡಣದಹಿಗಳಿಂ ಕೋಡಿಡುವ ಕೋಳ್ಮಿಗಂಗಳಿಂ ಸರಿವ ಮಱಿ

ಬಿದ್ದಿದ್ದ ಕಸ್ತೂರಿಯಧೂಳನ್ನು, ಜಾರಿಬಿದ್ದ ಹೂಮಾಲೆಯನ್ನು, ಪುನಃ ಅವಕ್ಕೆ ಮುತ್ತಿಕೊಂಡಿರುವ ದುಂಬಿಗಳನ್ನು ನೋಡಿ ಸತಿಪತಿಗಳು ಸೇರಿ ಹೊರಟುಹೋದ ಸ್ಥಾನವೆಂದು ಜಾಣತನದಿಂದ ಗೆಳತಿಯರನ್ನು ಕರೆದು ತೋರಿಸಿ, ಮುಗುಳುನಗೆಯಿಂದ ನಗುತ್ತ ಮನ್ಮಥನ ಮನೋಭಾವದ ಅಂತರಂಗವನ್ನು ಹಿಂಗದೆ ಹೊಗಳುವ ದೇವತಾಸ್ತ್ರೀಯರಿಂದ, ಮತ್ತೊಂದುಕಡೆಯಲ್ಲಿ ಹೆಬ್ಬಾವು ಉಗುಳಿದ ವಿಷದ ಉರಿಯ ವಿಶೇಷವಾದ ಹೊಗೆಯು ಹೊಯ್ಯಲು ಆಕಾಶದಿಂದ ಜಾರಿ ಉರುಳಿದ ಸೂರ್ಯ ಚಂದ್ರರಹಾಗೆ ಶೋಭಿಸುವ ಸೂರ್ಯಕಾಂತ ಚಂದ್ರಕಾಂತಶಿಲೆಗಳಿಂದ ಸೂರ್ಯ ಚಂದ್ರರಿಗೆ ರಾಹುವಿನ ಭ್ರಾಂತಿಯನ್ನುಂಟುಮಾಡುವ ನೀಲಮಣಿಯ ಕೋಡುಗಲ್ಲುಗಳಿಂದ, ಸೂರ್ಯನ ಕುದುರೆಗಳಿಗೆನಿತ್ಯವೂ ಗರಿಕೆಯ ಹುಲ್ಲಿನ ಸಂಶಯವನ್ನು ಕಂಡೊಡನೆಯೆ ಉಂಟುಮಾಡುವ ಪಚ್ಚೆಗಲ್ಲುಗಳಿಂದ (ಮರಕತ ಮಣಿಗಳಿಂದ), ಇಂದ್ರನ ಸಂಗಡ ಸ್ಪರ್ಧೆಯನ್ನು ಮಾಡಿ ಮೇರುಪರ್ವತವು ವಜ್ರಾಯುಧವನ್ನು ಧರಿಸಿದ ಬೆಡಗನ್ನುಂಟುಮಾಡುವ ವಜ್ರಮಯವಾದ ಶಿಖರಗಳಿಂದಲೂ, ರತ್ನಗಳ ಗವಿಗಳಿಂದಲೂ, ಎಲ್ಲಕಾಲದಲ್ಲೂ ವಾಸಿಸುವ ತಾಪಸೋತ್ತಮರಿಂದ ಕೂಡಿದ ತಪೋವನಗಳಿಂದಲೂ, ಹಾರುವ ಹಕ್ಕಿಗಳಿಂದಲೂ, ನೆಗೆದಾಡುವ ಸಿಂಹಗಳಿಂದಲೂ, ಸ್ವೇಚ್ಛೆಯಾಗಿ ಸಂಚರಿಸುವ ಜಿಂಕೆಗಳಿಂದಲೂ, ಮದವನ್ನು ಪಡೆದು ಓಡಾಡುವ ಚಮರೀಮೃಗಗಳಿಂದಲೂ, ಹರಿದಾಡುವ ಪುರುಷಾಮೃಗಗಳಿಂದಲೂ, ಗುಂಪಾಗಿ ಓಡಾಡುವ ಆನೆಗಳಿಂದಲೂ, ಹತ್ತಿರಕ್ಕೆ ಬರುವ ಭೇರುಂಡಗಳಿಂದಲೂ, ನಲಿದಾಡುವ ಹುಲಿಗಳಿಂದಲೂ, ಗುಂಪುಗುಂಪಾಗಿರುವ ಮೊಲಗಳಿಂದಲೂ, ಹೆಡೆಯೆತ್ತಿ ಆಡುತ್ತಿರುವ ಗುಂಪು ಗುಂಪಾದ ಹಾವುಗಳಿಂದಲೂ, ಒಂದರೊಡನೊಂದು ಕೋಡುಗಳಿಂದ ಜಗಳವಾಡುವ ಕೋಡಿನ

ಗಳಿಂ ಮೆಲ್ಲನೆಬರ್ಪ ಜಲ್ಲಿಮಿಗಂಗಳಿಂ ಬಹುವಿಧದ ವಿಹಗಂಗಳಿಂ ನೂತನಂಬಡೆದ ಜ್ಯೋತಿ ರ್ಲತೆಗಳಿಂ ರಮಣೀಯಮಾದ ಮರತರುಗಳಿಂ ಸುರುಚಿರಮಾದ ಸುರಧೇನುಗಳಿಂ ಸಂತತಮೆಸೆವ ಚಿಂತಾಮಣಿಯ ಕಣಿಯಿಂ ಪರುಷದಱಿಯಿಂ ಪರಿವ ಸಿದ್ಧರಸದಿಂ ಫಣಿಪತಿಗಮಾದೊಡಂ ಗಣೆಸಲರಿದಾದ ಘನಮಹಿಮೆಯೊಂತ ಶಿವಲೋಕಮಂ ತನ್ನ ನೆತ್ತಿಯೊಳ್ಪೊತ್ತಲಂಪಿನ ಪೆಂಪಿಂಗೆ ಪಕ್ಕಾದ ಸರ್ವಪರ್ವತ ಸಾರ್ವಭೌಮನಖರ್ವಸಂಪದಂ ಮಿಗೆ ಮೆಱೆವುತಿರ್ದುದಂತುಮಲ್ಲ ದೆಯುಂ

ಮಾಲಿನಿ॥ ನಮದಮರವಧೂಟೀ ಕುಂತಳಸ್ರಸ್ತಮಾಲಾ
ಸಮುದಿತ ಮಕರಂದೋತ್ಸಿಕ್ತ ಪಾದಾಂಬುಜಾತೇ
ಕಮನ ಕಮಳಜ ಸ್ತ್ರೀಗೀಯ ಮಾನಾಂಕಮಾಲಾ
ಸಮುದಯೆ ದಯೆಯಿಂದಂ ದೇವಿ ರಕ್ಷಿಪ್ಪುದೆನ್ನಂ ೧೩೬

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣಮಹಾಪ್ರಭಾಪಟಲ ಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ

ಮಿಕಗಳಿಂದಲೂ, ದೂರಸರಿಯುತ್ತಿರುವ ಒಂದು ರೀತಿಯ ಜಿಂಕೆಗಳಿಂದಲೂ, ಮೆಲ್ಲನೆ ಬರುವ ಕಾಡಾಕಳುಗಳಿಂದಲೂ, ಅನೇಕ ಬಗೆಯ ಪಕ್ಷಿಗಳಿಂದಲೂ, ನವ್ಯತೆಯನ್ನು ಹೊಂದಿದ ಬೆಳಕಿನ ಬಳ್ಳಿಗಳಿಂದಲೂ, ಮನೋಹರವಾದ ಗಿಡಮರಗಳಿಂದಲೂ, ಶ್ರೇಷ್ಠತರ ವಾದ ಕಾಮಧೇನುಗಳಿಂದಲೂ, ಸದಾ ಶೋಭಿಸುವ ಚಿಂತಾಮಣಿಯಿಂದಲೂ, ಸ್ಪರ್ಶ ಶಿಲೆಯ ಬಂಡೆಗಳಿಂದಲೂ, ಹರಿಯುತ್ತಿರುವ ಸಿದ್ಧರಸದಿಂದಲೂ, ಆದಿಶೇಷನಿಂದಲೂ ಎಣಿಸಲು ಅಸಾಧ್ಯವಾದಂತಹ ಘನಮಹಿಮೆಯನ್ನು ಹೊಂದಿದ ಶಿವಲೋಕವನ್ನೇ ತನ್ನ ನೆತ್ತಿಯ ಮೇಲೆ ಹೊತ್ತುನಿಂತ ಅತಿಶಯವಾದ ಹೆಮ್ಮೆಗೆ ಕಾರಣವಾದ ಸಮಸ್ತ ಪರ್ವತಗಳಿಗೆ ಚಕ್ರವರ್ತಿಯೆನಿಸಿ ಸಮಸ್ತ ಸಂಪತ್ತುಗಳಿಂದ ಕೂಡಿದ ಆ ಮೇರು ಪರ್ವತವು ಮೆರೆಯುತ್ತಿತ್ತು. ಅದೂ ಅಲ್ಲದೆ, ೧೩೬. ವಂದಿಸುತ್ತಿರುವ ದೇವತಾಸ್ತ್ರೀಯರ ಮುಡಿಯಿಂದ ಜಾರಿ ಬಿದ್ದ ಮಾಲೆಗಳಿಂದ ಚೆನ್ನಾಗಿ ಸುರಿದ ಮಕರಂದದಲ್ಲಿ ತೊಯ್ದು ಹೋದ ಪಾದಕಮಲಗಳುಳ್ಳವಳೂ, ಮನೋಜ್ಞವಾದ ಕಮಲದಿಂದ ಜನಿಸಿದ ಲಕ್ಷ್ಮೀದೇವಿಯಿಂದಲೂ, ಸರಸ್ವತಿಯಿಂದಲೂ ಸ್ತುತಿಸಲ್ಪಡುವ ಬಿರುದಾವಳಿಗಳ ಸಮೂಹ ವುಳ್ಳವಳೂ, ಸಮುದಯಳೂ ಆದ ದೇವಿಯು ದಯೆಯಿಂದ ನನ್ನನ್ನು ರಕ್ಷಿಸಲಿ. ಈ ರಾಜಶೇಖರ ವಿಳಾಸವೆಂಬ ಕಾವ್ಯವು ನಮಸ್ಕರಿಸಲ್ಪಡುವ ದೇವೇಂದ್ರನ ಕಿರೀಟದ ದಂಡೆ ಯಲ್ಲಿ ಕೆತ್ತಿರುವ ರತ್ನಸಮೂಹಗಳ ಅತಿಶಯವಾದ ಪ್ರಭೆಯ ರಾಶಿಯಿಂದ ಸುತ್ತು ವರಿದಿರುವ ಪರಮೇಶ್ವರನ ಶ್ರೀಪಾದಗಳ ಉಗುರುಗಳೆಂಬ ಚಂದ್ರನಿಂದ ಹೊರಹೊಮ್ಮುವ ದಟ್ಟವಾದ ಬೆಳದಿಂಗಳಲ್ಲಿ ಶೋಭಿಸುವ ಚಕೋರಪಕ್ಷಿಯಂತಿರುವ ರಸಜ್ಞರಾದ ಜನರಿಂದ

ಸರಸಜನ ಮಾನಿತೋಭಯ ಕವಿತಾವಿಶಾರದ ಶ್ರೀ ಷಡಕ್ಷರಿದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳ ಪ್ರಬಂಧದೊಳ್ ಪೀಠಿಕಾರಚನಾ ಸಮುದ್ರಗಿರಿವರ್ಣನಂ.

ಅಂತು ಆಶ್ವಾಸ ೧ಕ್ಕಂ ಪದಂ ೧೩೬ಕ್ಕಂ ಮಂಗಳಂ

## ಪ್ರಥಮಾಶ್ವಾಸಂ
## ಸಂಪೂರ್ಣಂ

ಮನ್ನಣೆಗೊಂಡ ಕನ್ನಡ ಸಂಸ್ಕೃತಭಾಷಾ ಕವಿತೆಯಲ್ಲಿ ವಿಶಾರದನೆನಿಸಿದ ಷಡಕ್ಷರಿದೇವನಿಂದ ರಚಿಸಲ್ಪಟ್ಟ ರಾಜಶೇಖರ ವಿಳಾಸವೆಂಬ ದೊಡ್ಡ ಪ್ರಬಂಧದಲ್ಲಿ ಪೀಠಿಕೆಯ ರಚನೆ, ಸಮುದ್ರ, ಮೇರುಗಿರಿಯ ವರ್ಣನೆ. ಮಂಗಳ ಮಹಾಶ್ರೀ.

# ದ್ವಿತೀಯಾಶ್ವಾಸಂ

ಕಂ॥ ಶ್ರೀಪಾರ್ವತೀ ಪಯೋಧರ
ಲೇಪಿತ ಮೃಗಮದವಿಲಿಪ್ತ ವಕ್ಷಸ್ಥಲನು
ರ್ವೀಪಾಲನಶೀಲಂ ಕರು
ಣಾಪಾಂಗಂ ಪಾಲಿಕೆಮ್ಮನುಜ್ಜ್ ಶಿವಲಿಂಗಂ ೧

ಅಂತೆಸೆವ ಮೇರುಗಿರಿಗೆ ಸ
ಮಂತೊಪ್ಪುವ ದಕ್ಷಿಣಾಶೆಯೊಳ್ ಘನಧರಣೀ
ಕಾಂತೆಯ ಸೀಮಂತದರ
ತ್ನಂ ತಾನೆನೆ ಚೋಳಮಂಡಳಂ ಸೊಗಯಿಸುಗುಂ ೨

ಮ॥ಸ್ರ॥ ದಣಿತಾಂಭೋಜಾಳಿ ತಳ್ತೊಪ್ಪುವ ಕೆಱೆ ಕುಮುದಂ ತೀವಿ ತೋರ್ಪಬ್ಜಷಂಡಂ
ಕಳಹಂಸಶ್ರೇಣಿಯಿಂ ರಂಜಿಪ ಪೊಳೆ ಬೆಳೆಯಿಂ ಬಾಳ್ವ ಕೆಯ್ ಪೂಗಳಿಂ ಕ
ಣ್ಗೊಳಿಪುದ್ಯತ್ಪುಷ್ಪವಾಟೀಕುಳಮಲರ್ದಲರಿಂ ಕಾಯ್ಗಳಿಂ ಪಣ್ಗಳಿಂ ಮಂ
ಜುಳಮಾದುದ್ಯಾನಮಾ ನಾಡೊಳೆ ಪಿರಿದೆಸೆವುತ್ತಿರ್ಪುದಲ್ಲಲ್ಲಿ ನಿಚ್ಚಂ ೩

೧. ಶ್ರೀ ಪಾರ್ವತಿದೇವಿಯ ಕುಚಗಳಿಗೆ ಲೇಪಿಸಲ್ಪಟ್ಟ ಕಸ್ತೂರಿಯಿಂದ ಲೇಪಿತವಾದ ಎದೆಯುಳ್ಳವನೂ, ಭೂಮಂಡಲವನ್ನು ರಕ್ಷಿಸುವ ಶೀಲವುಳ್ಳವನೂ, ಕರುಣಾಕಟಾಕ್ಷನೂ ಆದ ಶಿವಲಿಂಗನು ನಮ್ಮನ್ನು ಚೆನ್ನಾಗಿ ಪಾಲಿಸಲಿ. ೨. ಈ ಪ್ರಕಾರವಾಗಿ ಶೋಭಿಸುವ ಮೇರುಗಿರಿಗೆ ದಕ್ಷಿಣದಿಕ್ಕಿನಲ್ಲಿ ಸರಿಯಾಗಿ ಒಪ್ಪುವ ಶ್ರೇಷ್ಠಳಾದ ಭೂದೇವಿಯ ಸೀಮಂತರತ್ನವು ತಾನೆನ್ನುವಂತೆ ಚೋಳನುಂಡಳವು ಶೋಭಿಸುತ್ತಿದೆ. ೩. ಅರಳಿದ ಕಮಲಗಳಿಂದ ಕೂಡಿದ ಕೆರೆಗಳಿಂದಲೂ, ತಾವರೆಗಳಿಂದ ತುಂಬಿದ ಸರೋವರಗಳಿಂದಲೂ, ಕಲಹಂಸಪಕ್ಷಿಗಳ ಸಾಲಿನಿಂದ ರಂಜಿಸುತ್ತಿರುವ ಹೊಳೆಗಳಿಂದಲೂ, ಬೆಳೆಗಳಿಂದ ಅಭಿವೃದ್ಧಿಗೊಂಡು ನಿಂತ ಹೊಲಗಳಿಂದಲೂ, ಹೂವುಗಳಿಂದ ಮನೋಹರವಾಗಿ ಕಾಣುವ ಶ್ರೇಷ್ಠ ಪುಷ್ಪವಾಟಿಕೆಗಳ ಸಮೂಹಗಳಿಂದಲೂ, ಅರಳಿದ ಹೂ, ಕಾಯಿ, ಹಣ್ಣುಗಳಿಂದ ಶೋಭಿ

ಮ॥ ತರುಸಂತಾನಮದೊಪ್ಪೆ ತನ್ನ ತಟದೊಳ್ ನೀರಾಟಕೆಂದೆಯ್ದಿ ಸಾ
ರ್ದಿರೆ ದಿವ್ಯದ್ವಿಪಮಿಂಬುಗೊಂಡು ಜಳಮಂ ರಂಭಾದಿಗಳ್ಸೇವಿಸು
ತ್ತಿರೆ ಕೂರ್ಪಿಂದವಗಾಹಿಸುತ್ತನಿಮಿಷವ್ರಾತಂ ಕರಂ ತೋಱೆ ನಿ
ರ್ಜರ ಗಂಗಾನದಿ ತಾನಿದೆಂಬ ತೆಱದಿಂ ಕಾವೇರಿ ಕಣ್ಗೊಪ್ಪುಗುಂ[1] ೪

ಕಂ॥ ಶರನಿಧಿಯೊಳೊಗೆದ ವಿಷಮಂ
ಧರಿಯಿಸಿ ಸುರರಂ ಸಮಂತು ಪೊರೆದಭವಂಗೀ
ಧರೆ ಪಾಸಿದ ನಡೆಮುಡಿ[2]ಯೆನೆ
ಕರಮೆಸೆದುದು ವಿಮಳಗುಣದಿನಾ ನದಿ ಪದಪಿಂ ೫

ಚಂ॥ ದರದಳಿತಾಂಬುಜಾನನದೊಳೊಪ್ಪುವ ಕತ್ತುರಿಬೊಟ್ಟಿನಂತೆ ಸಾ
ರ್ದಿರಲಳಿ ತೊಟ್ಟ ಮುತ್ತುಗಳಿವೆಂಬಿನಮೊಪ್ಪಿರೆ ಸೀಕರಾಳಿ ಬೆ
ಳ್ನೊರೆ ಸಿರಿಕಂಡದಣ್ಪೆನೆ ವಿರಾಜಿಸೆ ಪದ್ಮಪರಾಗವಾಸೆ ವಾ
ಶ್ಚರಚಪಲಾಕ್ಷಿ ಪೊಚ್ಚಪೊಸವೆಣ್ಣಲೆ ಸಿಂಗರವಾಂತು ತೋಱಿದಳ್ ೬

ಸುವ ಉದ್ಯಾನಗಳೂ ಆ ನಾಡಿನಲ್ಲಿ ಹೆಚ್ಚಾಗಿ ಅಲ್ಲಲ್ಲಿ ಪ್ರಕಾಶಿಸುತ್ತಿದ್ದವು. ೪. ತನ್ನ ದಂಡೆಯಲ್ಲಿ ಅನೇಕ ಪ್ರಕಾರದ ಮರಗಳು ಒಪ್ಪುತ್ತಿರಲು–ಸಂತಾನ ವೃಕ್ಷವಿರಲು ನೀರನ್ನು ಸೇವಿಸಲು ಮೋಡವು ಬಂದಿರಲು–ಐರಾವತವು ಪ್ರವೇಶಿಸಿರಲು, ಬಾಳೆಮರಗಳೇ ಮೊದಲಾದವಿರಲು ರಂಭೆಯೇ ಮೊದಲಾದ ಸ್ತ್ರೀಯರು ಆ ನೀರನ್ನು ಸ್ನಾನಪೂಜಾದಿಗಳಿಂದ ಸೇವಿಸುತ್ತಿರಲು ಪ್ರೀತಿಯಿಂದ ದೇವತೆಗಳ ಸಮೂಹವು ಸ್ನಾನಪಾನಾದಿಗಳನ್ನು ಅಲ್ಲಿ ಮಾಡುತ್ತಿರಲು, ಮೀನುಗಳು–ದೇವತೆಗಳು ಕಾಣಿಸುತ್ತಿರಲು ತಾನು ದೇವಗಂಗಾನದಿಯೇ ಎನ್ನುವ ರೀತಿಯಲ್ಲಿ ಕಾವೇರಿಯು (ಆ ಚೋಳದೇಶದಲ್ಲಿ) ಶೋಭಿಸುತ್ತಿತ್ತು. ೫. ಸಮುದ್ರದಲ್ಲಿ ಹುಟ್ಟಿದ ವಿಷವನ್ನು ಧರಿಸಿ, ದೇವತೆಗಳನ್ನು ಕ್ರಮಗೊಂಡು ರಕ್ಷಿಸಿದ ಪರಮೇಶ್ವರನಿಗೆ, ಈ ಭೂಮಿಯು ಹಾಸಿದ ನಡೆಮುಡಿಯೋ ಎನ್ನುವಂತೆ ಆ ನದಿ ತೇಜೋವಿಶೇಷದಿಂದ ಕೂಡಿದ ಪವಿತ್ರಗುಣಗಳಿಂದ ಶೋಭಿಸುತ್ತಿತ್ತು. ೬. ಚೆನ್ನಾಗಿ ಅರಳಿದ ಕಮಲವೆಂಬ ಮುಖದಲ್ಲಿ ಕಸ್ತೂರಿಯ ಬೊಟ್ಟಿನಂತೆ ದುಂಬಿಯು ಅದರಲ್ಲಿ ಪ್ರವೇಶಿಸಿರಲು, ನೀರಿನ ಕಣಗಳೇ ತೊಟ್ಟುಕೊಂಡ ಮುತ್ತುಗಳ ಹಾಗೆ ಕಾಣುತ್ತಿರಲು, ಬಿಳಿದಾದ ನೊರೆಯು ಶ್ರೀಗಂಧದ ಲೇಪನವೋ ಎನ್ನುವಂತೆ ಶೋಭಿಸುತ್ತಿರಲು, ಕೆಂಪುಕಮಲಗಳ ಪರಾಗದ ಸುವಾಸನೆಯಿಂದ ಕೂಡಿದವಳಾಗಿ, ನೀರಿನಲ್ಲಿ ಚಲಿಸುತ್ತಿರುವ ಮೀನುಗಳೆಂಬ ಚಪಲನೇತ್ರಗಳಿಂದ ಕೂಡಿ ಚೆನ್ನಾಗಿ ಸಿಂಗಾರಗೊಂಡ ನೂತನ ಕನ್ಯೆಯಂತೆ

---

1 ಟಿಪ್ಪಣಿ : ದಿವ್ಯದ್ವಿಪ=ಆಕಾಶದ ಆನೆಯಂತಿರುವ ಮೋಡ. ಅನಿಮಿಷ ಮೀನು ; ದೇವತೆ [ರಂ.]

2 ನಡೆಮುಡಿ = ಹಾಸಿದ ರೇಷ್ಮೆವಸ್ತ್ರ.

ಪರಿಗತ ಕೃಷ್ಣವೇಣಿಯುರರೀಕೃತ ಪುಷ್ಕರೆ ಸಿಂಧುರಾಗಬಂ
ಧುರೆ ಧೃತತುಂಗಭದ್ರೆ, ಜಿತಭಾನುಜೆ ಗೋಮತಿ ಧೂತಪಾಪೆ ಭಾ
ಸುರತರ ಲೋಕಪಾವನೆ ನತಾಘಲತಾಸಿ ಸಮಸ್ತ ದೇವತಾ
ವರಣೆ ಕವೇರಕನ್ಯೆ ಕೆಳೆಗೊಂಡಳನೇಕ ನದೀವಿಳಾಸಮಂ[1] ೭

ಕಂ॥ ಚಾರುಪಯೋಧರೆ ಮಹಿಮಾ
ಧಾರೆ ಸದಾನಿಮಿಷಸೇವ್ಯರಸಯುತೆ ವರ ಶೃಂ
ಗಾರಾಜಿತೆಯೆನಿಸುವ ಕಾ
ವೇರಿಧರಾಕಾಮಧೇನುವೆನಿಪುದು ಪುಸಿಯೇ ೮

ಆ ಕಾವೇರಿಯು ತೋರುತ್ತಿದ್ದಳು. ೭. ಸಮಸ್ತ ದೇವತೆಗಳಿಂದ ಆದೃತಳಾದ ಕಾವೇರಿಯು ಕಪ್ಪಾದ ಕಲೆಯುಳ್ಳದ್ದಾಗಿ, ನೀರು ಅಥವಾ ಕಮಲವನ್ನು ಧರಿಸಿ, ಸಮುದ್ರದಲ್ಲಿ ಪ್ರೀತಿಯನ್ನಿರಿಸಿ, ಉನ್ನತವಾದ ಕ್ಷೇಮವನ್ನು ಕೊಡತಕ್ಕದ್ದಾಗಿ, ಔದಾರ್ಯದಲ್ಲಿ ಕರ್ಣನನ್ನು ಜಯಿಸಿ, ಗೋವುಗಳಿಗೆ ಆಶ್ರಯವಾಗಿ, ಪಾಪಪರಿಹಾರಕಳಾಗಿ, ಲೋಕಪಾವನೆಯಾಗಿ, ಸೇವಿಸುವವರ ಪಾಪಲತೆಗೆ ಖಡ್ಗವಾಗಿ ಸಕಲನದಿಗಳ ಶೋಭೆಯನ್ನು ಧರಿಸಿತ್ತು. (ಸಕಲ ನದಿಗಳಿಗಿಂತ ಉತ್ಕೃಷ್ಟಳೆಂದು ಅಭಿಪ್ರಾಯ) ಅಸಿಕ್ಷೇತ್ರ ಸ್ವರೂಪಳು (ವಿರೋ). ನಮಸ್ಕರಿಸುವವರ ಪಾಪವೆಂಬ ಲತೆಗೆ ಕತ್ತಿಯಂತಿರುವವಳು (ವಿ.ಪರಿ). ಸಮಸ್ತ ದೇವತೆಗಳಿಗೆ ವರಣಕ್ಷೇತ್ರದಂತಿರುವವಳು (ವಿರೋ.) ಸಮಸ್ತ ದೇವತೆಗಳಿಗೆ ಸ್ನಾನಾರ್ಥವಾಗಿ ಅಪೇಕ್ಷಿಸಲ್ಪಡುವವಳು (ವಿ. ಪರಿ) ಇಂಥ ಕವೇರಋಷಿಕನ್ಯೆಯು ಅನೇಕ ನದಿಗಳ ವಿಲಾಸವನ್ನು ಕೂಡಿಕೊಂಡಿದ್ದಳು. ೮. ಕಾವೇರಿಯು ಧರೆಯ ಕಾಮಧೇನುವೆಂಬುದು ಸುಳ್ಳಲ್ಲ. ಸ್ವರ್ಗದ ಕಾಮಧೇನುವು ಮನೋಹರವಾದ ಹಾಲಿರುವ ಕೆಚ್ಚಲುಳ್ಳದ್ದಾದರೆ ಕಾವೇರಿಯು ಮನೋಹರ ನೀರುಳ್ಳದ್ದು ; ಭಕ್ತರಾದವರಿಗೆ ಬೇಡಿದುದನ್ನು ಕೊಡುವ ಮಹಿಮೆಗೆ ಕಾಮಧೇನು ಆಧಾರೆಯಾದರೆ ಕಾವೇರಿಯು ಭಕ್ತರ ಪಾಪಪರಿಹಾರಕಳೆಂಬ ಮಹಿಮೆಗೆ ಕಾರಣಳಾದವಳು ; ಸತತವೂ ದೇವತೆಗಳಿಂದ ಸೇವಿಸಲ್ಪಡುವ, ಕ್ಷೀರರಸದಿಂದ ಕೂಡಿರುವವಳು ಕಾಮಧೇನುವಾದರೆ ಕಾವೇರಿಯು ಸತತವೂ ಮೀನು ಮತ್ತು ದೇವತೆಗಳೇ ಮೊದಲಾದವರ ಸ್ನಾನಪಾನಾನುಕೂಲವಾದ ನೀರಿನಿಂದ ಕೂಡಿರುವವಳು ; ಶ್ರೇಷ್ಠವಾದ ಕೋಡುಗಳಿಂದ ಶೋಭಿಸುವವಳು ಕಾಮಧೇನುವಾದರೆ ಕಾವೇರಿಯು ಶ್ರೇಷ್ಠ ಪರ್ವತ ಶೃಂಗದಿಂದ ಶೋಭೆಗೊಂಡವಳು. [ಬ್ರಹ್ಮಗಿರಿಶೃಂಗದಿಂದ ಹುಟ್ಟಿಬಂದವಳು ಎಂದರ್ಥ]

---

[1]ಟಿಪ್ಪಣಿ : ಇಲ್ಲಿ ಕೃಷ್ಣವೇಣಿ, ಪುಷ್ಕರೆ, ಸಿಂಧು, ತುಂಗಭದ್ರೆ, ಭಾನುಜೆ_ಯಮುನೆ, ಗೋಮತಿ, ಧೂತಪಾಪೆ, ಲೋಕಪಾವನೆ, ಅಘನಾಶಿನಿ_ಎಂಬ ನದಿಗಳ ಹೆಸರು ಸೂಚಿತವಾಗಿದೆ, ಇದೇ ಚಮತ್ಕಾರ. (ರಂ).

ವ॥ ಎಂಬ ನೆಗಳ್ತೆವಡೆದಾ ತರಂಗಿಣಿಯು ತಡಿಗೊಂಡು ಬೆಳೆದರೆವಿರಿದ ಸರಸಿಜದರಲ ಸರಸಪರಿಮಳಕೆ ಮೊಱೆದೆಱಗುವ ಪರಮೆವಱಿದುಱುಗಲಿಂ ತೊಱೆಯೆಱೆಯೆನೊಳ್ಪುರುಡಿಸಿ ನೀಲರತ್ನಮಂ ಧವಳನಳಿನಶುಕ್ತಿಯೊಳ್ಪಡೆದಪಳೆಂಬಂತಿಂಬುವಡೆದು ಪಾಳಿಯಿಂ ಜಳಕೇಳಿಗೈದು ತಳರ್ದ ತುಂಬುಜವ್ವನದ ನಿತಂಬಿನಿಯರ ಕುಂಭಕುಚದಿರುಂಬಿನೊಳಿಂಬುವಡೆದು ತುಂಬಿದ ಮಿಗ ಸೊರ್ಕುಗೆಸಱಿಂ ಮೈಗರ್ಚಿಕೊಳ್ವ ಮದಗಜಂಗಳ ಕಟಿತಟದ ಮದಕರ್ದಮದಿನೊಡವೆರೆದು ಕಲಸಿ ಕಲಂಕಿ ಕಡುಗರ್ಪನಾಳ್ದು ಕಾಳಿಂದಿಯಂತೆ ಕಣ್ಗೆವಂದು ತೀರದೇಶದ ಪುಳಿನತಳದೊಳೋರಣದಿನಡಿಯಿಡುವರಸಂಚೆವಱಿಗಳ ಮೆಲ್ನಡೆಗೆ ನಿಟ್ಟಿಪ ಬಟ್ಟಜವ್ವನೆಯರ ದಿಟ್ಟಿ ತಾಗದಂತೆ ಕಟಳ್ಕಱಿಂ ತೂಪಿಱಿದಪಳೆನೆ ತುಱುಂಗಿ ತೂಱಿ ಸಿಡಿವ ಸೀರ್ಪನಿ ಕಡುಬೆಡಂಗುವಡೆಯೆ ಸುಸಿಲೆಸಗಿ ಬಳಲ್ದು ಬಸವಳಿದು ಪಸಿದು ಜಕ್ಕವಕ್ಕಿ ಮೆಲಲೆಂದು ಸಾರ್ತಂದು ಮೃದುಮೃಣಾಳಮಂ ಮುಱಿದೆತ್ತೆ ನೊಂದಳಿರವವ್ಯಾಜದಿನರಳ್ವ ನಳಿನಿಯುಂ ನೆಱೆನೆಗೆವ ನಿಡುಮೀನ್ಗಂಗಳಿಂ ನಿಳ್ಕಿನೋಡಿ ಘುಳುಘುಳಿಸಿ ಮೊಱೆವ ನೆವದಿಂ ಪಲ್ಮೊಱೆದು ತೆಱೆದೋಳನೆತ್ತಿ ಕಶೆಗೊಂಡು ಪೊಡೆವಂತೆ ತಳ್ತು

ವ॥ ಹೀಗೆನ್ನುವ ಪ್ರಸಿದ್ಧಿಯನ್ನು ಪಡೆದ, ಆ ನದಿಯ ದಂಡೆಯುದ್ದಕ್ಕೂ ಬೆಳೆದು ಅರ್ಧ ಅರಳಿದ ಕಮಲದ ಹೂವಿನ ಮಕರಂದದ ವಿಶಿಷ್ಟ ಸುಗಂಧಕ್ಕೆ ಝೇಂಕರಿಸುತ್ತ ಎರಗುವ ಮರಿದುಂಬಿಗಳ ಸಮೂಹದಿಂದ ಕೂಡಿ, ಸಮುದ್ರನೊಡನೆ ಸ್ಪರ್ಧಿಸಿ, ನೀಲಮಣಿಯನ್ನು ಧವಳವರ್ಣದ ಕಮಲವೆಂಬ ಮುತ್ತಿನ ಚಿಪ್ಪಿನಲ್ಲಿ ಪಡೆದಳೋ ಎನ್ನುವಂತೆ ವಿಸ್ತಾರವಾಗಿ [ಶೋಭಿಸುತ್ತಿದ್ದಳು]. ಸಾಲುಸಾಲಾಗಿ ಜಲಕೇಳಿಯನ್ನು ಮುಗಿಸಿ ಹೊರಟ ಪೂರ್ಣಯೌವನದ ಹೆಂಗಸರುಗಳು ಕುಂಭಗಳಿಗೆ ಸಮಾನವಾದ ಮೊಲೆಗಳ ಮಧ್ಯದಲ್ಲಿ ದಟ್ಟವಾಗಿ ತುಂಬಿರುವ ಮೃಗಮದ (ಕಸ್ತೂರಿ) ದ ಕೆಸರಿನಿಂದಲೂ, ಮೈಗೆ ಬಳಿದುಕೊಳ್ಳುತ್ತಿರುವ ಮದೋನ್ಮತ್ತಗಜಗಳ ಕುಂಭಸ್ಥಳದ ಮದೋದಕದ ಕೆಸರಿನೊಡನೆ ಸೇರಿಸಿ ಕಲಸಿ ಕಲಕಿ ಅತ್ಯಂತ ಕಪ್ಪನ್ನು ಮಾಡಿ ಕಣ್ಣಿಗೆ ಹಚ್ಚಿಕೊಂಡು ಕಾಳಿಂದಿಯ ಹಾಗೆ ಕಾಣುತ್ತಿರುವ, ತೀರಪ್ರದೇಶದ ಮಳಲಿನ ಪ್ರದೇಶದಲ್ಲಿ ಒಪ್ಪವಾಗಿ ಅಡಿಯಿಡುತ್ತಿರುವ ರಾಜಹಂಸಮರಿಗಳ ಮಂದ ನಡಿಗೆಯನ್ನು ನೋಡುತ್ತಿರುವ ಪೂರ್ಣಯೌವನಭರಿತೆಯರಾದ ಸ್ತ್ರೀಯರ ದೃಷ್ಟಿಯು ತಾಗದಹಾಗೆ, ಅತಿಪ್ರೀತಿಯಿಂದ ನಿವಾಳಿದೆಗೆದಳೋ ಎನ್ನುವಂತೆ ಒತ್ತಾಗಿ ಎತ್ತರಕ್ಕೆ ಹಾರಿ ಸಿಡಿಯುತ್ತಿರುವ ನೀರಿನ ಕಣಗಳು ವಿಶೇಷ ಚಮತ್ಕಾರದಿಂದ ಕಾಣುತ್ತಿರಲು, ಸಂಭೋಗಗೈದು ಬಳಲಿ ಬಲಹೀನತೆಗೊಂಡು ಹಸಿದ ಚಕ್ರವಾಕಪಕ್ಷಿಗಳು ತಿನ್ನಲಿಕ್ಕೆಂದು ಬಂದು ಮೃದುವಾದ ಕಮಲದ ದಂಟನ್ನು ಮುರಿದು ಎತ್ತಲು, ನೊಂದುಕೊಂಡು ಭ್ರಮರಗಳ ಝೇಂಕಾರದ ನೆಪದಿಂದ ನರಳುತ್ತಿರುವ ಕಮಲದ ಬಳ್ಳಿಯನ್ನು , ಚೆನ್ನಾಗಿ ಹಾರುತ್ತಿರುವ ಉದ್ದವಾದ ಮೀನುಗಳೆಂಬ ಕಣ್ಣುಗಳಿಂದ ಕತ್ತೆತ್ತಿ ನೋಡಿ, ಘುಳುಘುಳು ಎಂದು ಧ್ವನಿಮಾಡುವ ನೆಪದಿಂದ ಹಲ್ಲು ಕಡಿದು, ತೆರೆಗಳೆಂಬ ತೋಳುಗಳನ್ನೆತ್ತಿ, ಚಾಟಿಯನ್ನು ಹಿಡಿದು ಹೊಡೆಯುವ ಹಾಗೆ ಕೂಡಿ, ಹಬ್ಬಿ

ಪಾಯ್ವ ನಿಡುವಾಸೆಯಿಂ ರಂಜಿಸಿ ನೀರಾಟಕೆಳಸಿ ತೀರದೇಶದೊಳ್ ನಿಂದ ವಾರನಾರಿಯರ ನಿಡು ಜಡೆಯು ಪಡಿನೆಳಲನೊಳಕೊಂಡು ನಿಜಸಲಿಲ ನಿರ್ಮಲತೆಯಿಂ ನಾಗಲೋಕದ ನಾಗಿಣಿಯರಂ ತೋರ್ಪಂತೆ ತೋರ್ಕೆವಡೆದು ನೀರ್ವೊಗ್ಗೆಯಲೆಂದು ನಿಲುಂಬಿನಿಂದ ಪೌರನಿತಂಬಿನಿಯರ ಕರಘಟಿತ ಘಟಪಟಳಮಂ ಕಂಡಗಸ್ತ್ಯಜನಕಂಗಳನೇಕಂಗಳೀಂಟಲೆಳ್ತಂದವೆಂದಳ್ಕಿ ನಡುಂಗುವಂತೆ ಪವನ ಪ್ರಪಾತಚಲಿತ ಕಲ್ಲೋಲಮಾಲೆಯಿಂ ಕಂಪಿಸಿ ತುದಿಗೊಂಡ ಬೆಳ್ನೊರೆಯಿಂ ಕರೆಕತ್ತರಿಸಿದಂಬರ ದಂತಿಂಬುವಡೆದು ಪುತ್ತಮಿತ್ತರಂಬಿಡಿದು ಬಿತ್ತರಂಬಡೆದು ಬೆಳೆದ ಚೂತ ಚಂಪಕ ಕುಟಜ ಕುರವಕ ತಿಲಕ ಬಕವಕುಳ ಲಿಕುಚ ತಮಾಲ ತಾಲ ಹಿಂತಾಲ ಪೂಗ ಪುನ್ನಾಗ ಕದಳಿ ಕಂಕೆಲ್ಲಿ ನಾರಂಗ ನಾರಿಕೇಳ ಪನಸ ಪಾಟಲಿ ಜಂಬು ಜಂಬೀರ ಕದಂಬ ಕಪಿತ್ಥ ಲವಂಗ ದಾಡಿಮ ದ್ರಾಕ್ಷಾ ಮಾಲತಿ ಮಲ್ಲಿಕಾ ಜಾತಿ ಯೂಥಿಕಾಮುಖ ಲಲಿತ ಲತಾವಿತಾನವನದಿಂ ಪರಿಶೋಭೆವಡೆದು ಜಪತಪೋನುಷ್ಠಾನಪರಾಯಣ ಪರಮತಪೋಧನನಿವಹ ಸ್ನಾನಪಾನಾನುಕೂಲೆಯೆನಿಸಿ ತನ್ನ ನೆನೆದರಂ ನಿರ್ಮಲರಂ ಮಾಡುತ್ತೆ ಕಂಡರಂ ಕಲುಷರಹಿತರೆನಿಸುತ್ತೆ ಮುಳುಂಗಿದರ ಮೋಹಮಂ ಪಱಿಪುತ್ತೆ

ರುವ ಉದ್ದವಾದ ಬಳ್ಳಿಯಿಂದ ರಂಜನೆಗೊಂಡು, ನೀರಾಟಕ್ಕೆ ಬಯಸಿ ತೀರಪ್ರದೇಶದಲ್ಲಿ ನಿಂತ ವೇಶ್ಯಾಸ್ತ್ರೀಯರ ಉದ್ದವಾದ ಜಡೆಯು ಪ್ರತಿಬಿಂಬವನ್ನು ಒಳಗುಮಾಡಿಕೊಂಡು ತನ್ನ ಜಲದ ನಿರ್ಮಲತೆಯಿಂದ ನಾಗಲೋಕದ ನಾಗಸ್ತ್ರೀಯರನ್ನು ತೋರಿಸುವ ಹಾಗೆ ಶೋಭಾಯಮಾನವಾಗಿ, ನೀರನ್ನು ತುಂಬಲೆಂದು ಬಗ್ಗಿನಿಂತ ಪೌರಸ್ತ್ರೀಯರ ಕೈಯಲ್ಲಿರುವ ಕೊಡಗಳ ಸಮೂಹವನ್ನು ಕಂಡು, ಅನೇಕ ಅಗಸ್ತ್ಯಜನಕುಗಳು ತನ್ನನ್ನು ಕುಡಿಯಲಿಕ್ಕೆ ಬಂದರೆಂದು ಹೆದರಿ ನಡುಗುವಂತೆ, ಗಾಳಿಯ ಹೊಡೆತದಿಂದ ಮೇಲೇಳತಕ್ಕ ತರಂಗಗಳ ಮಾಲೆಯಿಂದ ಕಂಪನಗೊಳ್ಳುತ್ತ, ದಂಡೆಯಲ್ಲಿ ನಿಂತ ಬಿಳಿಯ ನೊರೆಯಿಂದ ದಡವು ಕತ್ತರಿಸಿದ ಆಕಾಶದ ಹಾಗೆ ತೋರಿಕೆಗೊಂಡು ಮತ್ತು ಇಕ್ಕೆಲಗಳಲ್ಲೂ ವಿಸ್ತಾರವಾಗಿ ಬೆಳೆದುನಿಂತ ಮಾವು, ಸಂಪಗೆ, ಕಾಡುಮಲ್ಲಿಗೆ, ಗೋರಂಟೆ, ತಿಲಕವೃಕ್ಷ, ಬಕಪುಷ್ಪವೃಕ್ಷ, ವಜ್ರದಂತಿ, ಗಜನಿಂಬೆ, ಹೊಂಗೆ, ತಾಳೆ, ಶ್ರೀತಾಳೆ, ಅಡಿಕೆ, ಸುರಹೊನ್ನೆ, ಬಾಳೆ, ಕಂಕೆಲ್ಲಿ (ಬಂಗಾರವರ್ಣದ ಎಲೆಯ ಮರ), ಕಿತ್ತಳೆ, ತೆಂಗು, ಹಲಸು, ಪಾದರಿ, ನೇರಳೆ, ಲಿಂಬೆ, ಈಚಲು, ಬೇಲ, ಲವಂಗ, ದಾಳಿಂಬೆ, ದ್ರಾಕ್ಷೆ, ಮಾಲತಿ, (ಕರಿತಿಗಡೇ ಮರ), ಮಲ್ಲಿಗೆ, ಜಾಜಿ, ನಂದಿಬಟ್ಟಲುಗಳೇ ಮೊದಲಾದ ಮನೋಹರವಾದ ಲತಾಸಮೂಹದಿಂದ ಪರಿಶೋಭೆಗೊಂಡು ಜಪ, ತಪ, ಅನುಷ್ಠಾನದಲ್ಲಿ ನಿರತರಾದ ಶ್ರೇಷ್ಠ ತಪೋಧನರ ಸಮೂಹದ ಸ್ನಾನಕ್ಕೂ ಪಾನಕ್ಕೂ ಅನುಕೂಲೆಯೆಂದೆನಿಸಿ ತನ್ನನ್ನು ನೆನೆಯುವವರನ್ನು ನಿರ್ಮಲರನ್ನಾಗಿ ಮಾಡುತ್ತ, ಸಂದರ್ಶನ ಮಾಡಿದವರ ಪಾಪವನ್ನು ಪರಿಹಾರ ಮಾಡುತ್ತ, ಸ್ನಾನ ಮಾಡಿದವರ ಅಜ್ಞಾನವನ್ನು ಪರಿಹಾರ ಮಾಡುತ್ತ,

ಸೇವಿಸಿದರ್ಗೆ ಸುಕೃತಮಂ ಸಾರ್ಚುತ್ತೆ ಮನಕ್ಕೆ ಮನೋಹರಮೆನಿಸಿ ನುತಿಪೊಡತರ್ಕ್ಯಮಾಗಿ ಪರಮಪವಿತ್ರರೂಪಿಣಿ ಪರಿದೊಪ್ಪುತ್ತಮಿರ್ಪಳ್ ಅಂತುಮಲ್ಲದೆಯುಂ

ಮ॥ ಇಳೆಯಂ ಪಾಲಿಪ ಸೈಪಿನೊಂದು ಬೆಳೆಯಂ ಚಂದ್ರಾಶ್ಮಸದೃಶ್ಮಿನಿ
ರ್ಮಳೆಯಂ ನಿರ್ಮಿತ ಶರ್ಮಧರ್ಮ ಫಳೆಯಂ ಪದ್ಮೋತ್ಪಲೋತ್ಫುಲ್ಲಸಂ
ಕುಳೆಯಂ ಕೋಕಬಳಾಕ ಹಂಸಬಳೆಯಂ ಡಿಂಡೀರ ಪಿಂಡೌಘಮಂ
ಜುಳೆಯಂ ಪೆಂಪಿನಲಂಪನಾಳ್ವ ಪೊಳೆಯಂ ಪೇಳ್ವಣ್ಣಸಲ್ವಕ್ಕುಮೇ ೯

ವ॥ ಎನಿಸಿ ರಂಜಿಸಿರ್ದುದದಱ ತಟನಿಕಟಪ್ರದೇಶದಲ್ಲಿ

ಚಂ॥ ಬಳಸಿರೆ ನೀಲನೀರಜವನಂ ಕಱಿಯಂಚಿನವೊಲ್ಪೊಡರ್ಪಿನಿಂ
ಬೆಳೆದೆಳೆಗೆಂಪನಾಂತ ಕಡೆಗರ್ದೆಗಳಂತರವರ್ಣದಂತೆ ಕಂ
ಗೊಳಿಸೆ ಶುಕಾಳಿ ಚಿತ್ರಮೆನೆ ರಂಜಿಸೆ ಪಚ್ಚೆಯ ಶಾಲೆಯಂ ಧರಾ
ಲಲನೆ ವಿಳಾಸದಿಂ ತಳೆದಳೆಂದೆನೆ ಶಾಲೆಯ ಗರ್ದೆ ತೋಱುಗುಂ ೧೦

ವ॥ ಅಂತುಮಲ್ಲದೆಯುಂ

ಪೂಜಿಸಿದವರಿಗೆ ಪುಣ್ಯವನ್ನುಂಟುಮಾಡುತ್ತೆ, ಮನಸ್ಸಿಗೆ ಮನೋಹರಕೆಯನ್ನುಂಟು ಮಾಡುತ್ತೆ ಸ್ತುತಿಗೆ ನಿಲುಕದವಳೆನಿಸಿದ ಆ ಪರಮಪವಿತ್ರೆಯಾದ ಕಾವೇರಿಯು ಹರಿದು ಒಪ್ಪುತ್ತಿದ್ದಳು. ಅದೂ ಅಲ್ಲದೆ, ೯. ಭೂಮಿಯ ಜನತೆಯನ್ನು ಸಂರಕ್ಷಿಸುವ ಪುಣ್ಯದ ಬೆಳೆಯನ್ನುಳ್ಳವಳು ; ಚಂದ್ರಕಾಂತಶಿಲೆಯಂತೆ ನಿರ್ಮಲೆಯೆನಿಸಿದವಳು ; ಸುಖಕರವಾದ ಧರ್ಮದ ಫಲವನ್ನುಂಟುಮಾಡುವವಳು ; ಅರಳಿದ ಕಮಲ ಮತ್ತು ಉತ್ಪಲಗಳಿಂದ ಕೂಡಿದವಳು ; ಚಕ್ರವಾಕ, ಮತ್ತು ನೀರುಹಕ್ಕಿ (ಬೆಳ್ಳಕ್ಕಿ) ಹಂಸಪಕ್ಷಿಗಳಿಂದ ಸುತ್ತು ವರಿದವಳು. ನೊರೆಯ ಮುದ್ದೆಗಳ ಸಮೂಹದಿಂದ ಮನೋಹರೆಯೆನಿಸಿದವಳು. ಇಂಥ ಹಿರಿತನದ ಸೊಗಸುಗಳಿಂದ ಕೂಡಿದ ಹೊಳೆಯನ್ನು ಬಣ್ಣಿಸಲಿಕ್ಕೆ ಬಂದೀತೇ ? ವ॥ ಹೀಗೆನಿಸಿ ರಂಜಿಸಿತ್ತು, ಅದರ ದಂಡೆಯ ಸಮೀಪದ ಪ್ರದೇಶದಲ್ಲಿ ೧೦. ಸುತ್ತಲೂ ಸುತ್ತಿಕೊಂಡಿರುವ ಕಮಲವನಗಳು ಕಪ್ಪಾದ ಅಂಚಿನ ಕಾಂತಿಯಿಂದಲೂ, ಬೆಳೆದುನಿಂತ ಎಳೆಗೆಂಪನ್ನು ಹೊಂದಿದ ನದಿಯ ಇಕ್ಕೆಲಗಳ ಕಟ್ಟಕಡೆಯ ಗದ್ದೆಗಳು ಮಧ್ಯದ ಬಣ್ಣದ ಹಾಗೆ ಶೋಭಿಸುತ್ತಿರಲು, ಶುಕಗಳ ಸಮೂಹವೇ ಅಲ್ಲಲ್ಲಿ ಮೂಡಿದ ಚಿತ್ರದಂತೆ ಕಾಣು ತ್ತಿರಲು, ಹಸಿರುಬಣ್ಣದ ಸೀರೆಯನ್ನು ಭೂದೇವಿಯು ವಿನೋದದಿಂದ ಉಟ್ಟಿರುವಳೋ ಎನ್ನುವಂತೆ ಬತ್ತದ ಗದ್ದೆಗಳು ಆ ನದಿಯ ತೀರಪ್ರದೇಶದಲ್ಲಿ ಶೋಭಿಸುತ್ತಿದ್ದವು.

ಕಂ॥ ತೂಗುತೆ ತೊನೆಯುತೆ ಬಳ್ಕುತೆ
ಬಾಗುತೆ ಕಂಪಿಡುತೆ ಕನಕರುಚಿದಾಳುತ್ತುಂ
ರಾಗಿಸುತೆ ರಂಜಿಸುತೆ ಸೊಂ
ಪಾಗಿರ್ದುವು ಕಣ್ಗೆ ಗಂಧಶಾಲಿವನಂಗಳ್ ೧೧

ಗಿಳಿಗಳ ಬಳಗಂ ಗಳಗಳ
ನಿಳಿದೊಳಪೊಕ್ಕೆಳಸಿ ಬಳಸಿ ಖರಚಂಚುಪುಟಂ
ಗಳಿಸುಡಿವುದೆಂದಗಿದು ನೀ
ರ್ಗಳನೊಳಪೊಕ್ಕಂತೆ ನೆಲ್ಲಗರ್ದೆಗಳೆಸೆಗುಂ ೧೨

ಪಾಲ್ದುಂಬಿದ ಸಾಲ್ದೆನೆಗಳ
ನೆಲ್ದುಱುಗಲನೊಲ್ದು ಸೀಳೆ ಗಿಳಿ ಭಯಭರದಿಂ
ಜೋಲ್ದಿಳೆಗಿಳಿವಂತಿರೆ ಬಂ
ಬಲ್ದೆಱೆಯೊಳ್ಪೊಳೆದು ಮಡಿಯನೀರೊಳ್ ತೋರ್ಕುಂ ೧೩

ಅರಗಿಳಿ ಸೀಳ್ದೊಡೆ ಮಡಿಯೊಳ್
ಸುರಿದಿರೆ ನೆಲ್ವಾಲ್ವದಂಬುವಂ ಹಂಸಂ ಬೇ
ಱಿರಿಸುತಮುರ್ದಿಂಟೆ ಕಾಣುತೆ
ಶಿರವೊಲೆವಂತೊಲೆವ ಕಳಮೆಗಳ್ ಕಣ್ಗೆಸೆಗುಂ ೧೪

೧೧. ಗಂಧಶಾಲಿ ಬತ್ತದ ಗದ್ದೆಗಳು ತೂಗಾಡುತ್ತ, ತೊನೆದಾಡುತ್ತ (ಒಲೆದಾಡುತ್ತ), ಬಳುಕಾಡುತ್ತ, ಕಾಳಿನ ಭಾರದಿಂದ ಬಾಗುತ್ತ, ಸುಗಂಧವನ್ನು ಬೀರುತ್ತ, ಬಂಗಾರ ವರ್ಣದ ರೂಪವನ್ನು ತಾಳುತ್ತ, ನೋಡುವವರಿಗೆ ಪ್ರೀತಿಯನ್ನುಂಟು ಮಾಡುತ್ತ ಮನೋಹರವಾಗಿ ಕಣ್ಣಿಗೆ ಸೊಂಪಾಗಿ ಕಾಣುತ್ತಿದ್ದವು. ೧೨. ಗಿಳಿಗಳ ಸಮೂಹವು ತಟತಟನೆ ಇಳಿದುಬಂದು ನಮ್ಮನಪೇಕ್ಷಿಸಿ ಸುತ್ತುವರಿದು ತೀಕ್ಷ್ಣವಾದ ಚಂಚುಗಳಿಂದ ಕತ್ತರಿಸುತ್ತವೆ ಎಂದು ಹೆದರಿ ನೀರಿನೊಳಗೆ ಹೊಕ್ಕು ನಿಂತ ಹಾಗೆ (ನೀರುತುಂಬಿದ) ಬತ್ತದಗದ್ದೆಗಳು ಶೋಭಿಸುತ್ತಿದ್ದವು. ೧೩. ಹಾಲು ತುಂಬಿದ ಕಾಳುಗಳಿಂದ ಸಾಲಾಗಿ ಕಾಣುವ ಬತ್ತದ ಸಮುದಾಯದ ತೆನೆಗಳಿಗೆ ಇಚ್ಛಿಸಿ ಬರುವ ಗಿಳಿಗಳ ಭಯವಿಶೇಷದಿಂದ ಜೋತು ಭೂಮಿಗೆ ಇಳಿಯುವ ರೀತಿಯಲ್ಲಿ ಗದ್ದೆಯ ನೀರಿನ ದೊಡ್ಡ ತೆರೆಗಳಲ್ಲಿ ಹೊಳೆಹೊಳೆದು ಅವು ಕಾಣುತ್ತಿದ್ದವು. ೧೪. ಅರಗಿಳಿಗಳು ಬಂದು ಹಾಲುಗಾಳುಗಳನ್ನು ಸೀಳಲಾಗಿ ಆ ಹಾಲುಮಡಿಯಲ್ಲಿ ಸುರಿದಿರಲು, ಆ ನೀರನ್ನು ಹಾಲನ್ನು ಬೇರೆ ಮಾಡಿ ಹಂಸಪಕ್ಷಿಯು ಕುಡಿಯುತ್ತಿರಲು, ತನ್ನ ಶಿರಸ್ಸನ್ನು ತೂಗುವಂತೆ ಬತ್ತದ ಪೈರು ಕಣ್ಣಿಗೆ ಶೋಭಾಯ

ಎಳಗಿಳಿಗಳ ಬಳಗಂ ಗಳ
ಗಳನಿಳಿತಂದೆಳಸಿ ಬಳಸಿ ಸುಳಿದೊಳಪುಗುತುಂ
ನಳನಳಿಸಿ ಬೆಳೆದು ಕಳಿಯುದ
ಕಳಮೆಯ ಕಣಿಶಂಗಳಂ ಕರಂ ಖಂಡಿಸುಗುಂ ೧೫

ಚಃ॥ ಬಡನಡು ಬಳ್ಕಿ ಬಟ್ಟವೊಲೆ ಮೇಲುದನೆತ್ತೆ ನಿತಂಬಮಂಡಳಂ
ಪೊಡರೆ ಕಪೋಲರಂಗದೊಳೆ ನರ್ತಿಸೆ ಕರ್ಣಪುರಂ ಸರಾಗಮಿ
ರ್ಕಡೆಗೆಡೆಯಾಡೆ ನೋಟಮುಳಿವುತ್ತಿರೆ ಸೋರ್ಮುಡಿ ಬಂದುನಿಂದು ಪೆ
ಣ್ಗಡಣಮದಲ್ಲಿ ಪಾಱಿಪುದು ಕೈರವದಿಂದಿಡುತುಂ ಶುಕಾಳಿಯಂ ೧೬

ವ॥ ಮತ್ತಂ

ಉ॥ ತಾವರೆಗಾವೊಳಾಗಿಸಿದ ಬಿಲ್ಗದಱೀರೆಳೆಯೇಱಿಸುತ್ತೆ ಚೆ
ಲ್ವಾವರಿಸಿರ್ದ ತದ್ದಳದ ಪಟ್ಟಿಯ ಮಧ್ಯದೊಳಿಟ್ಟು ಕಟ್ಟಿ ಭೃಂ
ಗಾವಳಿಯೆಂಬ ಮಿಂಟೆವಿಡಿದಂಟಿಸಿ ಗೆಂಟಿನೊಳಿಟ್ಟು ಪಾಱಿಪರ್
ತೀವಿದ ಕೀರಮಂಡಳಿಯನಲ್ಲಿಯ ಪಾಮರಿಯರ್ ನಿರಂತರಂ ೧೭

ಮಾನವಾಗಿ ಕಾಣುತ್ತಿತ್ತು. ೧೫. ಎಳೆಯ ಗಿಳಿಗಳ ಸಮೂಹವು ಕಟಕಟನೆ ಇಳಿದು ಬಂದು ಹಾಲ್ದೆನೆಗೆ ಇಚ್ಛಿಸಿ ಸುತ್ತುವರೆದು, ಸುಳಿದಾಡಿ ಒಳಹೊಕ್ಕು, ನಳನಳಿಸಿ ಬೆಳೆದು ಇನ್ನೂ ಬಲಿಯದಿರುವ ಬತ್ತದ ಎಳೆಯ ಕಾಳುಗಳನ್ನು ಕತ್ತರಿಸಿ ತಿನ್ನುತ್ತಿದ್ದವು. ೧೬. ಚಿಕ್ಕ ನಡುವು ಬಳುಕುತ್ತಿರಲು, ವೃತ್ತಾಕಾರದ ಮೊಲೆಗಳ ಮೇಲಿನ ಸೆರಗು ಸರಿದಿರಲು, ಕಟಿಪ್ರದೇಶವು ಕದಲುತ್ತಿರಲು, ಕರ್ಣಪೂರವು ಕಪೋಲಗಳ ಮೇಲೆ ಕುಣಿದಾಡುತ್ತಿರಲು, ದೃಷ್ಟಿಯು ಅನುರಾಗಪೂರ್ಣವಾಗಿದ್ದು ಎರಡೂ ಕಡೆಗಳಲ್ಲಿ ಪ್ರಸರಗೊಳ್ಳುತ್ತಿರಲು, ಸೊಂಪಾಗಿರುವ ಮುಡಿಯು ಕದಲಿಸಿಹೋಗುತ್ತಿರಲು ಹೆಂಗಸರ ಸಮೂಹವು ಆ ಬತ್ತದ ಗದ್ದೆಯ ಹತ್ತಿರ ಬಂದು ನಿಂತು ನೈದಿಲೆಗಳಿಂದ ಹೊಡೆಯುತ್ತ ಆ ಶುಕಸಮೂಹವನ್ನು ಹಾರಿಸುತ್ತಿತ್ತು. ವ॥ ಮತ್ತು ೧೭. ಕಮಲದ ದಂಟುಗಳಿಂದ ಮಾಡಿದ ಬಿಲ್ಲಿಗೆ ಅದರ ಎರಡೆಳೆಗಳನ್ನು ಏರಿಸಿ, ಚೆಲುವು ತುಂಬಿದ ಆ ಕಮಲದೆಲೆಯ ನಡುಪಟ್ಟಿಯನ್ನು ಬಿಲ್ಲಿನ ನಡುವೆ ಇಟ್ಟು ಬಂಧಿಸಿ, ಭ್ರಮರಗಳ ಸಮೂಹವೆಂಬ ಮಣ್ಣಿನ ಗೋಲಿಗಳನ್ನು ಅಂಟಿಸಿ, ದೂರದ ಗುರಿಯನ್ನು ಇಟ್ಟು ಅಲ್ಲಿಯ ಹೊಲ ಕಾಯುವ ಹೆಂಗಸರು ನಿರಂತರ ಗದ್ದೆಯಲ್ಲಿ ತುಂಬಿದ ಗಿಳಿಗಳ ಸಮೂಹವನ್ನು ಹೊಡೆದು ಹಾರಿ

ವ॥ ಅವರೊಳೊರ್ವ ಪಾವುರಿ

ಕಂ॥ ಅರಗಿಳಿಯಂ ಸೋವಲ್ ಸರ
ಸಿರುಹೇಕ್ಷಣೆ ನಿಂದು ಕುಮುದವಮಂ ಕೀಳ್ವಡೆ ಶಂ
ಬರರಿಪುವಿಸೆ ಭೀಂಕೃತಿಯೊಡ
ವೆರೆದ ತದಸ್ತ್ರಮನೆ ಸಾಳಿರವಮದು ಪೋಲ್ಗುಂ ೧೮

ವ॥ ಮತ್ತಮೊಂದೆಡೆಯೊಳೊರ್ವ ಮತ್ತಕಾಶಿನಿ ಗಿಳಿಯಂ ಪಾಱಿಪಲ್ಲಿ

ಕಂ॥ ಎಳೆಯಳ ಕಣ್ಗದಿರೋಡುವ
ಗಿಳಿಗಳ ಬೆಂಬತ್ತಿ ಸುತ್ತಿ ಮುತ್ತಿರೆ ತೋರ್ಕುಂ
ಪೊಳೆವಿಡುವಲೆಯಿಡೆಯುವಳವ
ನೊಳಗಾಗಿಸಿದಂತೆ ನೋಳ್ಪ ಪಥಿಕರ್ಗಾಗಳ್ ೧೯

ವ॥ ಮತ್ತವೊಂದೆಡೆಯೊಳೊರ್ವಳ್ ವೃತ್ತಕುಚದ ಮತ್ತಗಜಗಮನೆ

ಕಂ॥ ಏಱುಂಜವ್ವನೆ ಮೇಲುದು
ಜಾಱೆ ಕಿಲಂದೋಱೆ ತೋರವೊಲೆಗಳ್ ಮೊದಲೊಳ್
ಪಾಱಿಸಿದಳ್ ಯುವಧೃತಿಯಂ
ಪಾಱಿಸಿದಳ್ ಬಳಿಕೆ ಗಿಳಿಯ ಕರತಳರವದಿಂ ೨೦

ಸುತ್ತಿದ್ದರು. ವ|| ಅದರಲ್ಲಿ ಒಬ್ಬ ಹೊಲಗಾಯುವ ಹೆಂಗಸು, ೧೮. ಅರಗಿಳಿಗಳನ್ನು ಓಡಿಸಲು ಒಬ್ಬ ಕಮಲನೇತ್ರೆಯು ನಿಂತುಕೊಂಡು ನೈದಿಲೆಗಳನ್ನು ಕಿತ್ತು ಹೊಡೆಯಲು ಶಂಬರವೈರಿಯಾದ ಮನ್ಮಥನು ಬಾಣಪ್ರಯೋಗ ಮಾಡಿದಾಗ ಭೀಂಕಾರ ಮಾಡುತ್ತ ಹೋಗುವ ಆ ಬಾಣವನ್ನು ಅಳಿರವ ಸಹಿತವಾದ ಈ ಎಸೆಯುವಿಕೆ ಹೋಲುತ್ತಿತ್ತು. ವ|| ಮತ್ತೊಂದು ಸ್ಥಳದಲ್ಲಿ ಓರ್ವ ಮತ್ತಳಾದ ಹೆಂಗಸು ಗಿಳಿಗಳನ್ನು ಹಾರಿಸುವಾಗ, ೧೯. ಎಳೆಯಳಾದ ಆ ಸ್ತ್ರೀಯ ಕಣ್ಣಿನ ಪ್ರಕಾಶದ ಕಿರಣಗಳು ಹಾರಿಹೋಗುವ ಗಿಳಿಗಳನ್ನು ಬೆನ್ನು ಹತ್ತಿ ಸುತ್ತ ಮುತ್ತಿಕೊಳ್ಳಲು, ಹೊಳೆಯುತಕ್ಕ ಇಡುಬಲೆಯನ್ನು ಇಡಲು ಆ ಗಿಳಿಗಳು ಆ ಬಲೆಯೊಳಗಾದ ಹಾಗೆ ನೋಡುವ ಪಾಂಥಜನಗಳಿಗೆ ತೋರುತ್ತಿದ್ದವು. ವ|| ಮತ್ತೊಂದೆಡೆಯಲ್ಲಿ ಓರ್ವ ವೃತ್ತಾಕಾರವಾದ ಮೊಲೆಗಳನ್ನುಳ್ಳ ಮದೋನ್ಮತ್ತ ಆನೆಯ ನಡಿಗೆಯಂತೆ ನಡಿಗೆಯುಳ್ಳವಳು ೨೦. ಏರುತ್ತಿರುವ ಪ್ರಾಯದ ಹೆಂಗಸೊಬ್ಬಳ ಎದೆಯ ಮೇಲಿನ ಸೆರಗು ಪಕ್ಕಕ್ಕೆ ಜಾರಲಾಗಿ ದಪ್ಪನಾದ ಅವಳ ಮೊಲೆಗಳು ಕಾಣಲು ಮೊದಲು ಯುವಕರ ಧೈರ್ಯವನ್ನೇ ಹಾರಿಸಿದಳು. ಆಮೇಲೆ

ವ॥ ಇಂತನಂತಜನಮನಸ್ಸೂಚೀಸೂತ್ರಮಾದ ಕಳಮಕ್ಷೇತ್ರದನತಿದೂರದ ಭೂರಮೆಯ ಸಿಂಧೂರ ಸೀಮಂತರೇಖೆಯಂತೆ ಚೆಂಬುಡಿತಳ್ತು ಕಂಗೊಳಿಪ ಘಂಟಾಪಥದ ಪರಿಸರದಲ್ಲಿ

ಮ॥ಸ್ರ॥ ಎಳಗೌಂಗೊಳ್ಗಂಬದಿಂ ಬಾಳೆಯ ತೊಲೆಯಿನಳಿಸ್ಫಾರ ಕಲ್ಹಾರಪುಷ್ಪಂ
ಗಳ ಘಂಟಾಶ್ರೇಣಿಯಿಂ ಕೇತಕಿಯ ದಳದ ಕಿಳ್ತಂತೆಯಿಂ ಬಾಳವೇರ್ಪೂ
ಗಳ ಕೇರಿಂ ಬಾಲಸತ್ಪಲ್ಲವದ ಪೊದಕೆಯಿಂದಿಕ್ಷುದಂಡಂಗಳಿಂ ಕ
ಣ್ಗೊಳಿಕುಂ ನಾನಾ ಲತಾಂತಪ್ರಸರಸರಯುತಂಗಳ್ ಪ್ರಪಾಮಂಟಪಂಗಳ್ ೨೧

ವ॥ ಅಲ್ಲಿ

ಕಂ॥ ಪಚ್ಚಪಸಿಪರೆಯದಲರ್ಗಳ
ಪಚ್ಚದ ಶತಪತ್ರ ಸೂತ್ರದಂಬರದ ತೊಳ
ಪ್ಪುಚ್ಚಸಸಿಮೊಗದ ಸೊಗಯಿ
ಪ್ಪುಚ್ಚರಸಿಯರಂತೆ ಮೆಱೆವ ತರುಣಿಯರೆಸೆದರ್ ೨೨

ವ॥ ಅಂತೊಪ್ಪುವಶ್ರಾಂತಪಥಶ್ರಾಂತಪಾಂಥ ಸಂತಾನ ನಯನಪಾಂಥ ಪ್ರತಾನ ಲಾವಣ್ಯರಸಪ್ರಪಾಶಾಲೆಯರಪ್ಪ ಬಾಲೆಯರೊಳೊರ್ವಳ್ ಲೀಲೆವಡೆದು

ಗಿಳಿಗಳನ್ನು ಕೈಚಪ್ಪಾಳೆಗಳ ಧ್ವನಿಯಿಂದ ಹಾರಿಸಿದಳು. ವ|| ಈ ರೀತಿ ಅನಂತ ಜನರ ಮನಸ್ಸೆಂಬ ಸೂಜಿಗೆ ಸೂತ್ರದಾರದೋಪಾದಿಯಲ್ಲಿರುವ ಬತ್ತದ ಗದ್ದೆಗಳ ಅನತಿದೂರದಲ್ಲಿ ಭೂದೇವಿಯ ಸಿಂಧೂರರಾಗ ವಿಶಿಷ್ಟವಾದ ಸೀಮಂತರೇಖೆಯಂತೆ ಮನೋಹರವಾಗಿರುವ ಕೆಂಪುಹುಡಿಯಿಂದ ಕೂಡಿದ ರಾಜಮಾರ್ಗದ ಪಕ್ಕ ಗಳಲ್ಲಿ ೨೧. ಎಳೆಯ ಅಡಿಕೆಮರಗಳ ಒಳ್ಳೆಯ ಕಂಬಗಳಿಂದ, ಬಾಳೆಮರದ ತೊಲೆ ಗಳಿಂದ ದುಂಬಿಗಳಿಂದ, ಝೇಂಕರಿಸಲ್ಪಡುವ ಕೆಂಪು ಕಮಲಗಳ ಘಂಟೆಗಳ ಸಾಲಿನಿಂದ, ಕೇದಿಗೆಯ ದಳಗಳ ಕಿರುಜಾಂತೆಗಳಿಂದ, ಬಾಳದ ಬೇರುಗಳ ಗೋಡೆಗಳಿಂದ, ಚಿಕ್ಕದಾದ ಎಳೆಯ ಚಿಗುರಿನ ಮೇಲುಹೊದಿಕೆಯಿಂದ, ಕಬ್ಬಿನ ಕೋಲುಗಳ ಅಡ್ಡಕಟ್ಟುಗಳಿಂದ ನಾನಾ ಪುಷ್ಪಗಳ ಸಮೂಹದ ಸರಗಳಿಂದ ಕೂಡಿದ ಅರವಟ್ಟಿಗೆಗಳು ಶೋಭಿಸುತ್ತಿದ್ದವು. ವ|| ಆ ಅರವಟ್ಟಿಗೆಯಲ್ಲಿ, ೨೨. ಹಚ್ಚಹಸುರಡಗದ ಹೂಗಳ ಆಭರಣದ, ಕಮಲದ ದಾರದ ಬಟ್ಟೆಗಳ, ಪ್ರಕಾಶಿಸುವ ಸ್ವಚ್ಛವಾದ ಚಂದ್ರನಂತಿರುವ ಮುಖದ, ಶೋಭಿಸುವ ಅಪ್ಸರಸ್ತ್ರೀಯರಂತೆ ಮೆರೆಯುವ ತರುಣಿಯರು ಪ್ರಕಾಶಿಸುತ್ತಿದ್ದರು. ವ|| ಈ ರೀತಿಯಲ್ಲಿ ಶೋಭಿಸುವ ರಾಜಮಾರ್ಗದಲ್ಲಿ ಮಾರ್ಗಾಯಾಸಗೊಂಡ ದಾರಿ ಹೋಕರ ಸಮೂಹದ ಕಣ್ಣೆಂಬ ಪಥಿಕಸಮೂಹಕ್ಕೆ ಲಾವಣ್ಯರಸಭರಿತರೆನಿಸಿ, ಅರವಟ್ಟಿ

ಚಂ॥ ತೊಳಗುವ ಚಂದ್ರಕಾಂತ ಕಳಶಂಬಿಡಿದಂಬುಜನೇತ್ರೆ ನೀರಸಂ
ಜಳಿಪುಟದಲ್ಲಿ ನಿಂದೆಱೆಯೆ ತನ್ಮಧುರಾಧರರಾಗಮಿಶ್ರ ತ
ಜ್ಜಳಮರುಣಾಂಬುವೆಂದುಸಿಕನಿರ್ಘದನೀಕ್ಷಿಸಿ ನಕ್ಕೊಡಾಕೆಯ
ಜ್ಜಳದಶನಾಂಶುಮಿಶ್ರಮದು ಶಂಕೆಯನೋಡಿಸೆ ಪಾಂಥನೀಂಟಿದಂ ೨೩

ಕಂ॥ ಕರತಳಗತ ಜಳಬಿಂಬಿತ
ತರುಣಿಯ ನೇತ್ರಮನೆ ನೋಡಿ ಪೆಱನೊರ್ವಂ ತ
ತ್ಪರಿಮಳಕೆಂದಿಟ್ಟ ಸಿತಾಂ
ಬುರುಹಮಿದೆಂದೀಂಟಲೊಲ್ಲದೀಕ್ಷಿಸುತಿರ್ದಂ ೨೪

ವ॥ ಪೆಱತೊಂದು ಪಾನೀಯಶಾಲೆಯಲ್ಲಿ

ಚಂ॥ ಉಗುರ್ಗಳ ನುಣ್ಗದಿರ್ ತೊಳಪಪಾಂಗಶಶಿಪ್ರಭೆ ಸಾರಸೌರಭಂ
ಸೊಗಯಿಪ ಸುಯ್ಯೆಲರ್ ಕರಕವಾರಿಯೊಳಾಗಿಸೆ ನಿರ್ಮಳತ್ವಮಂ
ನೆಗಳ್ದತಿಶೈತ್ಯಮಂ ಮೃದುಸುಗಂಧಮನಿಂದುನಿಭಾಸ್ಯೆ ಸೂಸೆ ಮಾ
ರ್ಗಗನೆರ್ದೆ ತಣ್ಪನಾನೆ ತನು ರೋಮಾಂಚಿಸಿ ಕಂಪಿಸೆ ನೀರನೀಂಟಿದಂ ೨೫

ಗೆಯ ಸ್ತ್ರೀಯರೆನಿಸಿದ ಬಾಲೆಯರಲ್ಲಿ ಒಬ್ಬಳು ಲೀಲೆಗೊಂಡು, ೨೩. ಕಮಲಕ್ಕೆ ಸಮಾನವಾದ ನೇತ್ರಗಳನ್ನುಳ್ಳ ಬಾಲೆಯೋರ್ವಳು ಥಳಥಳಿಸುವ ಚಂದ್ರಕಾಂತಶಿಲೆಯಲ್ಲಿ ಮಾಡಿದ ಕಲಶವನ್ನು ಹಿಡಿದು ನೀರನ್ನು ಅಂಜಲಿಪುಟದಂತಿರುವ ಅಂಗೈಯಿಂದ ಎರೆಯಲಾಗಿ, ಅವಳ ಮಧುರವಾದ ತುಟಿಗಳ ಕೆಂಪುಮಿಶ್ರಗೊಂಡ ನೀರು ಅರುಣಾಂಬುವೇ (ರಕ್ತವೇ) ಎಂದು ಅವನು ಕುಡಿಯದೆ ಸುಮ್ಮನೆ ಇರುವುದನ್ನು ನೋಡಿ ನಗಲು, ಆಕೆಯ ಶುಭ್ರವಾದ ಹಲ್ಲುಗಳ ಪ್ರಕಾಶವು ಅವನ ಸಂಶಯವನ್ನು ಓಡಿಸಿತು. (ಆಗ ಆ) ಪಾಂಥನು ನೀರನ್ನು ಕುಡಿದನು. ೨೪. ಬೇರೆ ಇನ್ನೊಬ್ಬನು ತನ್ನ ಕರತಳದಲ್ಲಿ ಬಿದ್ದ ನೀರಿನಲ್ಲಿ ಪ್ರತಿಬಿಂಬಿತವಾದ ತರುಣಿಯ ನೇತ್ರಗಳನ್ನು ನೋಡಿ, ನೀರಿನ ಸುಗಂಧಕ್ಕೋಸ್ಕರವಾಗಿ ಇಟ್ಟಂಥ ಬಿಳಿಯ ಕಮಲವೆಂದು ತಿಳಿದು ನೀರನ್ನು ಕುಡಿಯಲೊಲ್ಲದೆ ಅದನ್ನೇ ನೋಡುತ್ತ ಇದ್ದನು. ವ॥ ಮತ್ತೊಂದು ಅರವಟ್ಟಿಗೆಯಲ್ಲಿ, ೨೫. ಉಗುರುಗಳ (ಕಾಂತಿಯ) ನುಣುಪಾದ ಕಿರಣಗಳು, ಹೊಳೆಯುವ ಕಡೆಗಣ್ಣ ಕಾಂತಿಯೆಂಬ ಚಂದ್ರಪ್ರಭೆ, ಸಾರವತ್ತಾಗಿ ಸುಗಂಧಮಿಶ್ರವಾದ ಸೊಗಸಿನ ಶ್ವಾಸವಾಯು ಇವು ಕುಂಭದ ನೀರಿನಲ್ಲಿ ನಿರ್ಮಲತೆಯನ್ನೂ, ಅತಿಶೀತವನ್ನೂ, ನರುಗಂಪನ್ನೂ ಉಂಟುಮಾಡುತ್ತಿರಲು, ಆ ಚಂದ್ರಕಾಂತಿಗೆ ಸಮಾನ ಮುಖವುಳ್ಳ ತರುಣಿಯು ನೀರೆರೆಯಲು ದಾರಿಹೋಕನ ಎದೆಯು ತಂಪಾಗಿ ದೇಹವು ಪುಳಕದಿಂದ ಕೂಡಿ, ನಡುಕಗೊಂಡು ನೀರನ್ನು

ವ॥ ಮತ್ತಮಲ್ಲಿ ಪೆಱತೊಂದಱವಟಿಗೆಯೊಳೊರ್ವಂ

ಉ॥ ನೀರೆಱೆವಚ್ಚಜವ್ವನೆಯ ಮೇಲುದು ಮೆಲ್ಲನೆ ಜಾಱೆ ಗೌರರು
ಕ್ಚಾರುಕುಚಂಗಳೆಂಬ ಕಳಶಂಗಳ ಕಾಂತಿ ಪಯಃಪ್ರವಾಹಮಂ
ಪೀರುತೆ ಕಣ್ಗಳಿಂ ಮಱೆದು ನೀರ್ಗುಡಿವಂದಮನಂದು ನಿಂದು ನಿ
ಸ್ಸಾರಮುಖಂ ಮನೋಭವನ ಬಾಣದ ಬಾರಿಗೆ ಬಂದನಧ್ವಗಂ ೨೬

ವ॥ ಅಂತುಮಲ್ಲದೆಯುಂ

ಮ॥ಸ್ರ॥ ಆರಲಿಂ ಪಣ್ಣಂ ಮರಂ ಪೆಣ್ಗಳಿಯನುದ್ಯಾನಮಂಭೋಜದಿಂದೀ
ವರದಿಂ ಕಾಸಾರಮಾಸಾರದೆ ಪೊಸಬೆಳೆಯಿಂ ಭೂಮಿ ಭೂಮೀಜದಿಂ ತ
ಣ್ಣೆರಲಿಂ ಮಾರ್ಗಂ ಮರಾಳೋತ್ಕರದೆ ನೆರೆದ ಚಕ್ರೌಘದಿಂ ಸಿಂಧು ಸಿಂಹೋ
ತ್ಕರದಿಂ ಪೇರಾನೆಯಿಂ ಕಾನನಮಿಡಿದೆಸೆಗುಂ ದೇಶದೊಳ್ ನಿಂದಜಸ್ರಂ ೨೭

ಮ॥ ನದಿಯಿಂ ನಂದನದಿಂ ಲತಾಪ್ರತತಿಯಿಂ ಪುಷ್ಪಾಳಿಯಿಂ ಪಾಳಿಯಿಂ
ಪುದಿದೆತ್ತಂ ನವಸೌರಭಂಬಡೆದ ಸದ್ಭೃಂಗಾಳಿಯಿಂ ಗಾಳಿಯಿಂ
ಮದವತ್ತಾಮ್ರಮುಖಪ್ರತರ್ಜನಕರ ಸ್ತ್ರೀಶಾಳಿಯಿಂ[1] ಶಾಳಿಯಿಂ
ತದಿಳಾಮಂಡಳಮೊಪ್ಪುಗುಂ ಕ್ರಮುಕದೊಳ್ ಪೊಂಬಾಳೆಯಿಂ ಬಾಳೆಯಿಂ ೨೮

ಕುಡಿದನು. ವ॥ ಮತ್ತೂ ಅಲ್ಲಿ ಬೇರೊಂದು ಅರವಟ್ಟಿಗೆಯಲ್ಲಿ, ೨೬. ಓರ್ವ ದಾರಿಹೋಕನು ನೀರೆರೆಯುತ್ತಿರುವ ಹೊಚ್ಚಹೊಸ ಯೌವನಸ್ತ್ರೀಯು ಎದೆಯ ಮೇಲಿನ ಸೆರಗು ಮೆಲ್ಲನೆ ಓರೆಯಾಗಲು, ಶುಭ್ರವರ್ಣಕಾಂತಿಯು ಮನೋಹರವಾದ ಮೊಲೆಗಳ ಕಾಂತಿಯೆಂಬ ನೀರಿನ ಪ್ರವಾಹವನ್ನೇ ಕಣ್ಣುಗಳಿಂದ ಹೀರುತ್ತ ನೀರುಕುಡಿಯುವುದನ್ನೇ ಮರೆತು, ನೀರುಕುಡಿಯುವವನಂತೆ ನಟಿಸಿ, ಬಾಡಿಹೋದ ಮುಖವುಳ್ಳವನಾಗಿ ಮನ್ಮಥನ ಬಾಣದ ಹೊಡೆತಗಳಿಗೆ ಗುರಿಯಾದನು. ವ॥ ಅದೂ ಅಲ್ಲದೆ, ೨೭. ಹೂವಿನಿಂದ ಹಣ್ಣಿನಿಂದ ಮರಗಳು ; ಹೆಣ್ಣುಗಿಳಿಗಳಿಂದ ದುಂಬಿಗಳಿಂದ ಉದ್ಯಾನವನಗಳು ; ಕಮಲಗಳಿಂದ ನೈದಿಲೆಗಳಿಂದ ಸರೋವರಗಳು ; ಕ್ರಮವಾಗಿ ಬೀಳುವ ಮಳೆ, ಹೊಸ ಬೆಳೆಯಿಂದ ಭೂಮಿ ; ವೃಕ್ಷಗಳಿಂದ ತಂಪಾದ ನೆರಳಿನಿಂದ ಮಾರ್ಗಗಳು ; ಹಂಸಪಕ್ಷಿಗಳ ಸಮೂಹ ಕೂಡಿರುವ ಚಕ್ರವಾಕ ಮಿಥುನಗಳ ಸಮೂಹದಿಂದ ನದಿಗಳು ; ಸಿಂಹಗಳ ಸಮೂಹದಿಂದ ದೊಡ್ಡದೊಡ್ಡ ಆನೆಗಳಿಂದ ಕಾಡುಗಳು ಕೂಡಿ ಸತತವೂ ಆ ನಾಡು ಶೋಭಿಸುತ್ತಿತ್ತು. ೨೮. ಆ ಭೂಭಾಗವು ನದಿಯಿಂದಲೂ, ನಂದನವನದಿಂದಲೂ, ಲತಾಸಮೂಹದಿಂದಲೂ, ಪುಷ್ಪಸಮೂಹದಿಂದಲೂ, ಲತಾಗೃಹಗಳಿಂದಲೂ ತುಂಬಿ ನೂತನ ಸುಗಂಧವನ್ನು ಪಡೆದಿರುವ ಶ್ರೇಷ್ಠ ದುಂಬಿಗಳಿಂದಲೂ, ಗಾಳಿಯಿಂದಲೂ, ಮದಯುಕ್ತರಾದ ತಾಮ್ರದಂತೆ ಕೆಂಪಾದ ಮುಖದಿಂದ ಕೂಡಿ ಪಕ್ಷಿಗಳನ್ನು ಓಡಿಸುವುದಕ್ಕೆ ಗರ್ಜಿಸುತ್ತಿರುವ ಸ್ತ್ರೀಯರಿಂದಲೂ, ಶಾಲಿವನಗಳಿಂದಲೂ ಹೊಂಬಾಳೆ ಬಿಟ್ಟ

1. ಮದವತ್ತಾಮ್ರ ಮುಖ ಪ್ರತರ್ಜನಕರಾ ಸ್ತ್ರೀಶಾಳಿಯಿಂ = ಮದಿಸಿದ ತಾಮ್ರಮುಖರಾದ ಆಂಗ್ಲರನ್ನು ಹೆದರಿಸಬಲ್ಲ ಅಸ್ತ್ರಧಾರಿಗಳ ಸಮೂಹದಿಂದ ಎಂದು ಅಭಿಪ್ರಾಯಪಡಬಹುದು (ರಂ).

ವ॥ ಮತ್ತಮಾ ಜನಪದಂ ಸಮುದ್ರದಂತೆ ಸದಾರ ವಿಭವೋಪೇತಮುಮನಂತಾತಿಶಯಾನ್ವಿತಮುಂ ನಾಕಲೋಕದಂತೆ ಸುರಾಗನಂದನಾಶ್ರಿತಮಂದಿರೌಘಮುಂ ವಿಮಳಾಪ್ಸರೋಗಣ ವಿರಾಜಿತಮುಂ ಅಳಕಾನಗರದಂತಗಣ್ಯಪುಣ್ಯಜನಮಿಳಿತಮುಂ ಧನಸನಾಥೈಲಬಿಲೋಪಯುಕ್ತಮುಂ ಅಂತಪುರದಂತೆ ಮಹಾಮಹಿಷೀಮಂಡಿತಮುಂ ಗೋರಾಜಿತಾಂತಸ್ಥಿತಿ ಘೋಷಾಂ

ಅಡಿಕೆಮರಗಳಿಂದಲೂ, ಬಾಳೆಯಿಂದಲೂ ಒಪ್ಪುತ್ತಿತ್ತು. ವ॥ ಮತ್ತು ಆದೇಶವು ಸಮುದ್ರದಂತೆ ಸದಾರ ವಿಭವೋಪೇತವೂ, ಅನಂತಾತಿಶಯಾನ್ವಿತವೂ ಆಗಿತ್ತು. ಅಂದರೆ ದೇಶವು ಧರ್ಮಪತ್ನೀಸಮೇತವಾದ ವಿಭವದಿಂದ ಕೂಡಿತ್ತು; ಸಮುದ್ರವು ಸದಾ ರವಿಯಿಂದ ಹುಟ್ಟಿದ ಯಮುನಾನದಿಯಿಂದ ಕೂಡಿತ್ತು; ದೇಶವು ಅಸಂಖ್ಯಾತವಾದ ಚಿತ್ರ ವಿಚಿತ್ರ ವಿಸ್ತಾರದಿಂದ ಕಾರ್ಯಗಳಿಂದ ಕೂಡಿತ್ತು; ಸಮುದ್ರವು ಅನಂತನಾದ ವಿಷ್ಣುವಿನ ಹಾಸಿಗೆಯಾಗಿ ಉಳ್ಳ ಆದಿಶೇಷನಿಂದ ಕೂಡಿತ್ತು ; ನಾಕಲೋಕವಂತೆ ಸುರಾಗ ಸಂದನಾಶ್ರಿತ ಮಂದಿರೌಘಮುಂ ವಿಮಳಾಪ್ಸರೋಗಣ ವಿರಾಜಿತಮುಂ ಆಗಿತ್ತು. ಅಂದರೆ ದೇಶವು ಒಳ್ಳೆಯ ಅನುರಾಗದವರಾದ ಪುತ್ರರಿಂದ ಕೂಡಿದ ಮನೆಗಳ ಸಮೂಹವುಳ್ಳದ್ದು; ಸ್ವರ್ಗವು -ಮಂದಾರ ಕಲ್ಪವೃಕ್ಷಾದಿ (=ಸುರಾಗ) ವೃಕ್ಷಗಳಿಂದಲೂ, ನಂದನವೆಂಬ ಉದ್ಯಾನವನದಿಂದ ಆಸರೆಯಾಗಿರುವ ಇಂದ್ರಾದಿದೇವತೆಗಳ ಸಮೂಹವುಳ್ಳದ್ದು ಆಗಿತ್ತು. ದೇಶವು–ವಿಮಲವಾದ ನೀರಿನ ಸರೋವರಗಳ ಸಮೂಹದಿಂದ ವಿರಾಜಿಸುತ್ತಿತ್ತು; ಸ್ವರ್ಗವು–ಶ್ರೇಷ್ಠರಾದ ಅಪ್ಸರಸ್ತ್ರೀಯರ ಸಮೂಹದಿಂದ ವಿರಾಜಿತವಾಗಿತ್ತು. ದೇಶವು ಅಳಕಾನಗರದಂತೆ ಅಗಣ್ಯ ಪುಣ್ಯಜನ ಮಿಳಿತವಾಗಿತ್ತು. ಅಂದರೆ ದೇಶವು ಲೆಕ್ಕವಿಲ್ಲದ ಧರ್ಮಾತ್ಮರಾದ ಜನರಿಂದ ಮಿಳಿತವಾಗಿತ್ತು. ಅಳಕಾನಗರವು–ಲೆಕ್ಕವಿಲ್ಲದ ಯಕ್ಷ (=ಪುಣ್ಯಜನ)ರಿಂದ ಕೂಡಿತ್ತು ; ದೇಶವು–ದ್ರವ್ಯದಿಂದ ಕೂಡಿರುವರಾದಂಥ ಮತ್ತು ಭೂಮಿಯಲ್ಲಿನ ಹಗೇವು (ಐಲಬಿಲ)ಗಳಿಂದ ಕೂಡಿತ್ತು, ಅಲಕಾನಗರವು–ದ್ರವ್ಯಕ್ಕೆ ಸ್ವಾಮಿಯಾದ ಕುಬೇರ (=ಐಲಬಿಲಿ)ನಿಂದ ಕೂಡಿತ್ತು, ಆ ದೇಶವು ಅಂತಪುರದಂತೆ ಮಹಾಮಹಿಷೀಮಂಡಿತಮುಂ, ಗೋರಾಜಿತಾಂತಸ್ಥಿತಿ ಘೋಷಾಂಚಿತಮುಂ ಆಗಿತ್ತು. ಅಂದರೆ ದೇಶವು ದೊಡ್ಡ ಎಮ್ಮೆಗಳಿಂದ ಶೋಭಿಸುತ್ತಿತ್ತು ; ಅಂತಃಪುರವು ಶ್ರೇಷ್ಠರಾದ ಪಟ್ಟದರಾಣಿಯಿಂದ ಶೋಭಿಸುತ್ತಿತ್ತು ; ದೇಶವು–ಹಸುಗಳಿಂದ ರಂಜಿತವಾದ ಅಂತಃಸ್ಥಿತಿಯುಳ್ಳ ಗೊಲ್ಲರ ದೊಡ್ಡಿಗಳಿಂದ ವಿರಾಜಿತವಾಗಿತ್ತು ; ಅಂತಃಪುರವು–ವಜ್ರಗಳ ಪ್ರಭೆಯಿಂದ ಪ್ರಕಾಶಿಸುವಂಥ ಅಂತಃಪುರದ ಇರುವಿಕೆಯುಳ್ಳ ಆಭರಣ ಮತ್ತು ತಾಳಾದಿಗಳ ಧ್ವನಿಯಿಂದ ವಿರಾಜಿಸುತ್ತಿತ್ತು. ಆ ದೇಶವು–ಕಾರ್ಗಾಲವಂತೆ ವಿತತ ಕಾಸಾರಘನನೋರ್ಜಿತಮುಂ, ಮಿಳಿತ ಶಿಳೀಮುಖ ಕದಂಬ ಸುಮನೋಗಂಧವಾಹ ವಿಜೃಂಭಿತಮುಂ ಆಗಿತ್ತು. ಅಂದರೆ ದೇಶವು ವಿಶೇಷವಾದ ಸರೋವರ ಶ್ರೇಷ್ಠವಾದ ತೋಟ ಪಟ್ಟಿಗಳಿಂದ ಊರ್ಜಿತಗೊಂಡಿತ್ತು; ಕಾರ್ಗಾಲವು ವಿಶೇಷವಾದ (ಕ=) ನೀರಿನ (ಆಸಾರಂ=) ಧಾರಾ

ಚಿತಮುಂ ಕಾರ್ಗಾಲದಂತೆ ವಿತತ ಕಾಸಾರಘನವನೋರ್ಜಿತಮುಂ ಮಿಳಿತ ಶಿಳೀಮುಖ ಕದಂಬಸುಮನೋಗಂಧವಾಹ ವಿಜೃಂಭಿತಮುಂ ತಪೋವನದಂತೆವೋಲ್ ಪ್ರಪಾವನಾಡಂಬರ ಮುಮನೇಕ ಶಾಖಾಶ್ರಿತ ದ್ವಿಜಧ್ವನಿಮನೋಜ್ಞಮುಂ ಭೈಷಜ್ಯಸಂಗ್ರಹದಂತೆ ಬಹುಧಾನ್ಯಕ ಧಾತ್ರೀ ಸಂಯುಕ್ತಮುಂ ಸಾರರಸೌಷಧಿಸಮೇತಮುಂ ಸರೋವರದಂತೆ ಕಳಮಹಿತಧ್ವನಿ ಹಂಸೀ ಯಾನಕಾಂತಮುಂ ಕಮಳಾಭಿರಾಮಮುಮೆನಿಸಿ ರಮಣೀಯಮಾಗಿರ್ಪುದಂತುಮಲ್ಲದೆ

ಪಾತದಿಂದಲೂ, ಶ್ರೇಷ್ಠವಾದ ಅರಣ್ಯಪ್ರದೇಶವನ್ನು ಊರ್ಜಿತಗೊಳಿಸುವಂತಹುದೂ ಆಗಿತ್ತು. ದೇಶವು-ಕೂಡಿರುವ ಭ್ರಮರ (ಶಿಳೀಮುಖ)ಗಳ ಸಮೂಹವುಳ್ಳ ಪುಷ್ಪಗಳ ವಾಸನೆಯನ್ನು ಹೊತ್ತುತರುವ ಗಾಳಿಯಿಂದ ವಿಜೃಂಭಿತವಾಗಿತ್ತು; ಕಾರ್ಗಾಲವು-ಕೂಡಿ ರುವ ಶಿಳಿ ಅಂದರೆ ಕಪ್ಪೆಗಳೇ ಮೊದಲಾದ (=ಮುಖ) ಜಲಚರಪ್ರಾಣಿಗಳ ಸಮೂಹ ದಿಂದ ಪುಷ್ಪಗಳ ಮೇಲೆ ಹರಿದುಬರುತ್ತಿರುವ ವಾಯುವಿನಿಂದ ವಿಜೃಂಭಿತವಾಗಿತ್ತು. ಆ ದೇಶವು ತಪೋವನದಂತೆವೋಲ್ ಪ್ರಪಾವನಾಡಂಬರಮುಂ ಅನೇಕ ಶಾಖಾಶ್ರಿತದ್ವಿಜಧ್ವನಿ ಮನೋಜ್ಞವೂ ಆಗಿತ್ತು. ಅಂದರೆ ದೇಶವು ಅರವಟ್ಟಿಗೆಗಳ ಮತ್ತು ಅರಣ್ಯಗಳ ಆಡಂಬರ ದಿಂದ ಕೂಡಿತ್ತು ; ತಪೋವನವು-ಪ್ರಕೃಷ್ಟವಾದ ಪಾವನ (ಪಾವಿತ್ರ್ಯ)ದ ಆಡಂಬರ ವೆಂದರೆ ಆಧಿಕ್ಯದಿಂದ ಕೂಡಿತ್ತು. ದೇಶವು-ಋಗ್ವೇದಾದಿ ಅನೇಕ ಶಾಖೆಗಳಿಂದ ಕೂಡಿದ ಬ್ರಾಹ್ಮಣರುಗಳ ಧ್ವನಿಯಿಂದ ಮನೋಜ್ಞವಾಗಿತ್ತು; ತಪೋವನವು-ಅನೇಕಶಾಖೆ ಅಂದರೆ ರೆಂಬೆಗಳಲ್ಲಿ ಆಶ್ರಯ ಹೊಂದಿದ ದ್ವಿಜ ಅಂದರೆ ಪಕ್ಷಿಗಳ ಧ್ವನಿಯಿಂದ ಮನೋಜ್ಞ ವಾಗಿತ್ತು. ಆ ದೇಶವು ಭೈಷಜ್ಯ ಸಂಗ್ರಹದಂತೆ ಬಹುಧಾನ್ಯಕ ಧಾತ್ರೀಸಂಯುಕ್ತಮುಂ, ಸಾರರಸೌಷಧಿ ಸಮೇತಮುಂ ಆಗಿತ್ತು. ಅಂದರೆ ದೇಶವು ಬಹುಕಾಳುಕಡಿಗಳನ್ನು ಬೆಳೆಯುವಿಕೆಯಿಂದ ಕೂಡಿದ (=ಬಹುಧಾನ್ಯಕ) ಭೂಮಿಯಿಂದ ಕೂಡಿತ್ತು; ಭೈಷಜ್ಯ ಸಂಗ್ರಹದಂತೆ ಅಂದರೆ ಔಷಧಗಳ ಸಂಗ್ರಹಿಸುವಿಕೆಯ ಹಾಗೆ ಕೊತ್ತುಂಬರಿಯ ಬೀಜ (=ಬಹುಧಾನ್ಯಕ) ಧಾತ್ರಿ (ನೆಲ್ಲೀಕಾಯಿ)ಗಳಿಂದಲೂ ಕೂಡಿತ್ತು. ದೇಶವು-ಸಾರವತ್ತಾದ ರಸಯುಕ್ತ ದ್ರವಯುಕ್ತವಾದ ಕಬ್ಬು ಹಣ್ಣು ಮೊದಲಾದವುಗಳಿಂದ ಕೂಡಿತ್ತು. ಭೈಷಜ್ಯಸಂಗ್ರಹವು-ಸಾರವೆಂದರೆ ಬಲವತ್ತರವಾದ ರಸಭಸ್ಮ, ರಸೌಷಧಿಗಳಿಂದ ಸಮೇತ ವಾಗಿತ್ತು. ಆ ದೇಶವು-ಸರೋವರದಂತೆ ಕಳಮಹಿತಧ್ವನಿ ಹಂಸೀಯಾನಕಾಂತಮುಂ ಕಮಳಾಭಿರಾಮಮುಂ ಎನಿಸಿತ್ತು. ಅಂದರೆ ದೇಶವು ಕಳ ಅಂದರೆ ಅವ್ಯಕ್ತ ಮಧುರಾಕ್ಷರ ವುಳ್ಳವರಾದ ಕೇಳುವುದಕ್ಕೆ ಇಂಪಾದ (-ಮಹಿತ) ಧ್ವನಿಯುಳ್ಳ ಹೆಣ್ಣುಹಂಸದಂತೆ ನಡಿಗೆಯುಳ್ಳ ಹೆಂಗಸರಿಂದ ಕಾಂತಿಗೊಂಡಿತ್ತು ; ಸರೋವರವು-ಅವ್ಯಕ್ತ ಮಧುರವಾದ ಹಿತವಾದ ಶಬ್ದವುಳ್ಳ ಹೆಣ್ಣುಹಂಸಗಳ ಸಂಚಾರದಿಂದ ಕಾಂತಿಗೊಂಡಿತ್ತು ; ದೇಶವು-ಕಮಳಾ ಅಂದರೆ ಸಂಪತ್ತಿನಿಂದ ರಮ್ಯವಾಗಿತ್ತು ; ಸರೋವರವು-ಕಮಲಪುಷ್ಪಗಳಿಂದ

ಕಂ॥ ದ್ವಿಜಹತಿ ವನಿತಾಧರದೊಳ್
ಪ್ರಜಾತಿಪಾತಂ ಮದಾಳಿಕುಲದೊಳ್ ಬನದೊಳ್
ಕುಜನಾಳೀ ಕಾಕರಸಂ
ಭಜನಂ ತಲೆದೋರ್ಕುಮಲ್ಲದಿಲ್ಲಾ ನಾಡೊಳ್ ೨೯

ಬಡತನಮುಂ ಮಾಂದ್ಯಮುಮಿ
ಟ್ಟೆಡೆಯುಂ ಚಪಲತೆಯುಮಧಿಕತರ ಕುಟಿಲತೆಯುಂ
ಮಡದಿಯ ನಡು ನಡೆ ಮೊಲೆ ಕ
ಣ್ಗಡೆ ಕುರುಳೊಳ್ ತೋರ್ಕುಮಲ್ಲಿ ತಲೆದೋಱುಗುಮೇ ೩೦

ಎನಗೆ ಪಗೆ ಧರ್ಮಮದನಿದು
ವಿನಯದೆ ತಳೆದಿರ್ಪುದೆಂದು ಮುಳಿದಂತೆವೊಲಾ
ಜನಪದಮನಧರ್ಮಂ ತೊಱೆ
ದನಿಶಂ ತದ್ರಿಪು ಧರಿತ್ರಿಯೊಳ್ ನೆಲಸಿರ್ಕುಂ ೩೧

ವ॥ ಇಂತಖರ್ವ ವಿಭವಾವಾಸಮಾದ ಚೋಳದೇಶದ ಮಧ್ಯದಲ್ಲಿ

ಅಭಿರಾಮಗೊಂಡಿತ್ತು. ಈ ರೀತಿಯಲ್ಲಿ ಆ ಚೋಳದೇಶವು ರಮಣೀಯವಾಗಿತ್ತು. ಇದೂ ಅಲ್ಲದೆ, ೨೯. ದ್ವಿಜಹತಿ–ದಂತಕ್ಷತವು ವನಿತೆಯರ ಅಧರದಲ್ಲಿಯೂ, ಪ್ರಜಾತಿಪಾತ= ಜಾಜಿಹೂಗಳಲ್ಲಿ ಎರಗುವುದು ಮದಿಸಿದ ದುಂಬಿಗಳಲ್ಲಿಯೂ, ಕುಜನಾಳೀಕಾಕರಸಂಭಜನ–ಮರ ಮತ್ತು ಸರೋವರಗಳನ್ನಾಶ್ರಯಿಸುವುದು ವನಗಳಲ್ಲಿಯೂ ಸಂಭವಿಸುತ್ತಿತ್ತಲ್ಲದೆ ಇನ್ನೆಲ್ಲಿಯೂ ಇರಲಿಲ್ಲ. ದ್ವಿಜಹತಿ–ಬ್ರಾಹ್ಮಣವಧೆ, ಪ್ರಜಾತಿಪಾತ=ಪ್ರಜೆಗಳ ದುರ್ವರ್ತನೆ, ಕುಜನಾಳೀಕಾಕರ ಸಂಭಜನ=ದುಷ್ಟರ ಮತ್ತು ಸುಳ್ಳರ ಸಹವಾಸ-ಇವು ಆ ನಾಡಿನಲ್ಲಿರಲಿಲ್ಲ. ೩೦. ಬಡತನ, ಮಂದತನ, ಒತ್ತೊತ್ತಾಗಿರುವಿಕೆ, ಚಾಪಲ್ಯ, ; ವಕ್ರತೆಗಳು ಕ್ರಮವಾಗಿ ಸ್ತ್ರೀಯರ ನಡು, ನಡೆಯುವಿಕೆ, ಸ್ತನಗಳು, ಕಡೆಗಣ್ಣು, ಮುಂಗುರುಳುಗಳಲ್ಲಿ ಇತ್ತಲ್ಲದೆ ಆ ನಾಡಿನಲ್ಲಿ ತಲೆದೋರುವುದೇ ? ೩೧. "ನನಗೆ ವೈರಿಯು ಧರ್ಮವು ; ಅಂಥ ಧರ್ಮವನ್ನು ವಿನಯದಿಂದ ಈ ನಾಡು ಹೊಂದಿರುವುದು" ಎಂದು ಕೋಪಗೊಂಡು ಆ ದೇಶವನ್ನು ಬಿಟ್ಟು ಅಧರ್ಮವು ಸತತ ಆ ಚೋಳದೇಶದ ವೈರಿಗಳ ರಾಜ್ಯದಲ್ಲಿ ನೆಲೆಸಿತ್ತು. ವ|| ಈ ರೀತಿಯಲ್ಲಿ ಸಮಗ್ರ ಸಂಪತ್ತಿಗೆ ಆಶ್ರಯ

ಚಂ॥ ಕ್ಷಿತಿವಧು ತಾಳ್ದಲಂಕೃತಿಯಿದೆಂದೆನಿಸಿರ್ಪುದು ಸಾರವಸ್ತುಸಂ
ಗತಿ ಮಣಿಹರ್ಮ್ಯಸಂಹತಿ ಸುರೇಂದ್ರಪುರಾಕೃತಿ ಲೋಕನೇತ್ರನಿ
ರ್ವೃತಿ ಕರರಾಜಪದ್ಧತಿ ಸದಾಶ್ರಿತಸಂತತಿ ದತ್ತ ನಿರ್ಜರ
ಸ್ಥಿತಿ ನುತಿವೆತ್ತ ಧರ್ಮವತಿಯೆಂಬ ಪುರಂ ವಿತತಪ್ರಭಾವದಿಂ ೩೨

ವ॥ ಮತ್ತಮಾ ವಿಳಾಸೈಕದೇಶಮಾದಾ ಪುರದ ಬಹಿರ್ದೇಶದಲ್ಲಿ

ಕಂ॥ ಇರುಳೊಳೊಸರ್ವ ಚಂದ್ರಮಣಿಬಂ
ಧುರ ತತ್ಪುರ ಸಾಲದಂಬು ಬಳಯಿಸೆ ಬೆಳೆದಾ
ಪುರನಂದನಮಂ ಹರಹರ
ಸುರನಂದನಮೆಂದು ಬಣ್ಣಿಸಲ್ ಬಗೆವುಗದೇ ೩೩

ವ॥ ಎನ್ನುವ ಪಿರಿಯ ಸಿರಿಯನಪ್ಪುಗೈದು

ಕಂ॥ ಪರಿಗತರಂಭಾಸುಮನ
ಸ್ಸ್ಫುರಿತ ಪ್ರಮದಾಳಿ ಮಂಜುಘೋಷಾಂಚಿತಮ
ಚ್ಚರಿವಡೆದು ಪೋಲ್ತು ಮೆಱೆದುದು
ಪುರನಂದನಮಮರ್ದು ಮಿಸುಪ ಸುರನಂದನಮಂ ೩೪

ಭೂತವಾದ ಆ ಚೋಳದೇಶದ ಮಧ್ಯದಲ್ಲಿ, ೩೨. ವಿಖ್ಯಾತವಾದ ಧರ್ಮವತಿಯೆಂಬ ಪುರವು ಶ್ರೇಷ್ಠವಸ್ತುಗಳ ಸಮೂಹಗಳ ಕೂಡಿರುವಿಕೆಯಿಂದಲೂ, ರತ್ನಮಯವಾದ ದೊಡ್ಡ ದೊಡ್ಡ ಉಪ್ಪರಿಗೆಯ ಮನೆಗಳಿಂದಲೂ, ದೇವೇಂದ್ರನ ಅಮರಾವತಿಯ ಆಕೃತಿಯಲ್ಲೂ, ಲೋಕದ ಜನದ ಕಣ್ಣುಗಳಿಗೆ ಸುಖವನ್ನುಂಟುಮಾಡುವಂತಹುದೂ, ಉತ್ತಮವಾದ ರಾಜಪದ್ಧತಿಯಿಂದಲೂ, ಆಶ್ರಿತರಾದ ಭೃತ್ಯಾದಿಗಳ ವಂಶಪರಂಪರೆಯಿಂದಲೂ, ದೇವತೆಗಳಿಗೆ ಕೊಡಲ್ಪಟ್ಟ ಆಶ್ರಯದಿಂದಲೂ ಕೂಡಿ ಭೂದೇವಿಯು ಹೊಂದಿದ ಅಲಂಕಾರವೋ ಎನ್ನುವಂತೆ ಸುತ್ತಲೂ ಹರಡಿರುವ ಪ್ರಭಾವದಿಂದ ಕೂಡಿತ್ತು. ವ॥ ಮತ್ತು ಆ ವಿಲಾಸಕ್ಕೆ ಒಂದೇ ಪ್ರದೇಶವೆಂಬಂತಿರುವ ಆ ಪಟ್ಟಣದ ಬಹಿರುದ್ಯಾನವನದಲ್ಲಿ ೩೩ ರಾತ್ರಿಯಲ್ಲಿ ಜಿನುಗುವ ಚಂದ್ರಕಾಂತಶಿಲೆಯಿಂದ ಬಂಧುರವಾಗಿ ಆ ಪಟ್ಟಣದ ಕೋಟೆಯು ಕಟ್ಟಲ್ಪಟ್ಟು ಆ ನೀರನ್ನೆ ಬಳಸಿ ಬೆಳೆದ ಆ ಪಟ್ಟಣದ ಬಹಿರುದ್ಯಾನವನವನ್ನು ಶಿವಶಿವ ದೇವಲೋಕದ ನಂದನವೆಂದು ವರ್ಣಿಸಲಿಕ್ಕೆ ಮನಸ್ಸು ಬಂದೀತೆ? ವ॥ ಹೀಗೆನ್ನುವ ಹಿರಿದಾದ ಸಂಪತ್ತನ್ನೊಳಗೊಂಡು ೩೪. ಆ ಧರ್ಮವತಿ ಎಂಬ ಪಟ್ಟಣದ ನಂದನವು ಬಾಳೆ, ಹೂ, ದುಂಬಿಗಳ ಮಧುರನಾದಗಳಿಂದ ಕೂಡಿ, ರಂಭೆ, ಮಂಜುಘೋಷೆ ಮುಂತಾದವರಿಂದ ರಾಜಿಸುವ ದೇವಲೋಕದ ನಂದನದಂತೆ ಆಶ್ಚರ್ಯಕರ

ಚಂ॥ ಕಳರವವಿಲ್ಲದಿರ್ಪ ಪಿಕನಂಚೆಗಳಾಡದ ಪೂಗೊಳಂ ಫಳಾ
ವಳಿ ಬಳಸಿಲ್ಲದಿರ್ಪ ಪೊಸಮಾವಿನಿವಾತುಗಳಾಡದಿರ್ಪ ಪೆ
ಣ್ಗಿಳಿಯುಳಿರಾಜಿ ರಾಜಿಸದ ತಾವರೆ ಪೂಗುಡಿ ಮೂಡಿತೋಱದಿ
ರ್ಪೆಳಲತೆ ಪೆಲ್ಲಿತಲ್ಲದೆಲರಿಲ್ಲೆನೆ ತದ್ವನವೇಂ ಮನೋಜ್ಞಮೋ ೩೫

ವ॥ ಮತ್ತಮಲ್ಲಿ

ಮ॥ಸ್ರ॥ ಅರನೇರಿಲ್ ನಿಂಬೆ ಕಂಕೆಲ್ಲಿ ಪಲಸು ಬಕುಳಂ ಬಾಳೆ ಪೇರೀಳೆ ತಾಳೀ
ತರು ತೆಂಗುಂ ಕೌಂಗು ಸಪ್ತಚ್ಛದ ಕದಳಿ ತಮಾಲಂ ಲಸಚ್ಚಂಪಕಂ ಪಾ
ದರಿ ಪುನ್ನಾಗಂ ರಸಾಲಂ ತಿಲಕ ಕುರವಕಂ ಕರ್ಣಿಕಾರಂ ಕದಂಬಂ
ಸಿರಿಸಂ ಶ್ರೀಪರ್ಣಿ ದಾಳಿಂಬಮರಮುಪರ್ದು ಸಾಲ್ಗೊಂಡು ಕಣ್ಗೊಪ್ಪುತಿರ್ಕುಂ ೩೬

ಚಂ॥ ಎಳನನೆ ತೀವಿತೋರ್ಪ ಪೊನೆಮಲ್ಲಿಗೆ ತಾವರೆ ತೀವಿತೋರ್ಪ ತಂ
ಗೊಳಮಳಿ ತೀವಿತೋರ್ಪ ಮಧುದೂತಿಯಲರ್ತವೆ ತೀವಿತೋರ್ಪ ಪಾ
ಟಳಿ ಗಿಳಿ ತೀವಿತೋರ್ಪ ಪೊಸಮಾವು ತಳಿರ್ಬಿಡೆ ತೀವಿತೋರ್ಪ ಮಂ
ಜುಳತರಮಾದಶೋಕೆ ಮೆಱೆದಿರ್ಪುದು ತದ್ವನಮಧ್ಯದೇಶದೊಳ್ ೩೭

ವ॥ ಮತ್ತಮಲ್ಲಿ

ವಾಗಿ ಇತ್ತು. ೩೫. ಕಲಕಂಠದಿಂದ ಕೂಗದಿರುವ ಕೋಗಿಲೆ, ಹಂಸಗಳು ಆಡದೆ ಇರುವ ಪುಷ್ಪಗಳ ಕೊಳ, ಹಣ್ಣುಗಳನ್ನು ಬಿಡದೆ ಇರುವ ಸಿಹಿಮಾವು, ಮಧುರ ಮಾತುಗಳನ್ನಾಡದೆ ಇರುವ ಹೆಣ್ಣುಗಿಳಿ, ದುಂಬಿಗಳ ಸಮೂಹದಿಂದ ಶೋಭಿಸದ ಕಮಲಗಳು, ಹೂಗೊಂಚಲುಗಳು ತೋರದೆ ಇರುವ ಎಳೆಯ ಬಳ್ಳಿಗಳು, ಮಂದವಾಗಿ ಬೀಸದ ಗಾಳಿ, ಇವು ಇಲ್ಲವೆನ್ನುವಂತೆ ಇರುವ ಆ ವನವು ಅದೇನು ಮನೋಹರವೋ ! ವ॥ ಮತ್ತು ಅಲ್ಲಿ ೩೬. ಸತತ ನಿಬಿಡವಾದ ನೆರಳನ್ನುಂಟುಮಾಡುವ ನೇರಿಳೆ, ನಿಂಬೆ, ಕಂಕೆಲ್ಲಿ (ಅಶೋಕ), ಹಲಸು, ಬಕುಳ, ಬಾಳೆ, ಹೇರಿಳೆ, ತಾಳೆಗಿಡ, ತೆಂಗು, ಅಡಿಕೆ, ಏಳೆಲೆ ಬಾಳೆ, ಬಾಳೆ, ಹೊಂಗೆ, ಪ್ರಕಾಶಿಸುವ ಸಂಪಿಗೆ, ಪಾದರಿ, ಜಾಕಾಯಿಮರ, ಮಾವು, ತಿಲಕ, ಗೋರಂಟೆ, ಕಕ್ಕೆ, ನೀಪ (ಈಚಲು), ಸಿರಸಲು, ಕಿರುನೆಲ್ಲಿ(?), ದಾಳಿಂಬೆ ಮರಗಳು ಕೂಡಿಕೊಂಡು ಸಾಲುಸಾಲಾಗಿ ತೋರುತ್ತಿದ್ದವು. ೩೭. ಎಳೆಯ ಚಿಗುರಿನಿಂದ ತುಂಬಿತೋರುವ ಸೂಜಿಮಲ್ಲಿಗೆ, ತಾವರೆ ಹೂವುಗಳಿಂದ ತುಂಬಿ ತೋರುವ ತಣ್ಣೀರಿನ ಕೊಳಗಳು, ದುಂಬಿಗಳಿಂದ ಆವರಿಸಿಕೊಂಡು ತೋರುವ ಸೀಮಾವಿನಮರ, ಹೂವುಗಳಿಂದ ತುಂಬಿ ತೋರುವ ಪಾದರಿಮರ, ಗಿಳಿಗಳಿಂದ ತುಂಬಿತೋರುವ ಫಲಬಿಟ್ಟ ಮಾವು, ತಳಿರು ತುಂಬಿ ವಿಸ್ತಾರಗೊಂಡು ಕಾಣುತ್ತಿರುವ ಮನೋಹರವಾದ ಅಶೋಕವೃಕ್ಷ ಮುಂತಾದುವು ಆ ನಂದನದ ಮಧ್ಯದಲ್ಲಿ ಶೋಭಿಸುತ್ತಿದ್ದವು. ವ॥ ಮತ್ತು ಅಲ್ಲಿ

ಚಂ॥ ಕ್ಷಿತಿವಧು ತಾಳ್ದಲಂಕೃತಿಯಿದೆಂದೆನಿಸಿರ್ಪುದು ಸಾರವಸ್ತುಸಂ
ಗತಿ ಮಣಿಹರ್ಮ್ಯಸಂಹತಿ ಸುರೇಂದ್ರಪುರಾಕೃತಿ ಲೋಕನೇತ್ರನಿ
ರ್ವೃತಿ ಕರರಾಜಪದ್ಧತಿ ಸದಾಶ್ರಿತಸಂತತಿ ದತ್ತ ನಿರ್ಜರ
ಸ್ಥಿತಿ ನುತಿವೆತ್ತ ಧರ್ಮವತಿಯೆಂಬ ಪುರಂ ವಿತತಪ್ರಭಾವದಿಂ ೩೨

ವ॥ ಮತ್ತಮಾ ವಿಳಾಸೈಕದೇಶಮಾದಾ ಪುರದ ಬಹಿರ್ದೇಶದಲ್ಲಿ

ಕಂ॥ ಇರುಳೊಳೊಸರ್ವ ಚಂದ್ರಮಣಿಬಂ
ಧುರ ತತ್ಪುರ ಸಾಲದಂಬು ಬಳಯಿಸೆ ಬೆಳೆದಾ
ಪುರನಂದನಮಂ ಹರಹರ
ಸುರನಂದನಮೆಂದು ಬಣ್ಣಿಸಲ್ ಬಗೆವುಗದೇ ೩೩

ವ॥ ಎನ್ನುವ ಪಿರಿಯ ಸಿರಿಯನಪ್ಪುಗೈದು

ಕಂ॥ ಪರಿಗತರಂಭಾಸುಮನ
ಸ್ಫುರಿತ ಪ್ರಮದಾಳಿ ಮಂಜುಘೋಷಾಂಚಿತಮು
ಚ್ಚರಿವಡೆದು ಪೋಲ್ತು ಮೆಱೆದುದು
ಪುರನಂದನಮಮರ್ದು ಮಿಸುಪ ಸುರನಂದನಮಂ ೩೪

ಭೂತಮಾದ ಆ ಚೋಳದೇಶದ ಮಧ್ಯದಲ್ಲಿ, ೩೨. ವಿಖ್ಯಾತವಾದ ಧರ್ಮವತಿಯೆಂಬ ಪುರವು ಶ್ರೇಷ್ಠವಸ್ತುಗಳ ಸಮೂಹಗಳ ಕೂಡಿರುವಿಕೆಯಿಂದಲೂ, ರತ್ನಮಯವಾದ ದೊಡ್ಡ ದೊಡ್ಡ ಉಪ್ಪರಿಗೆಯ ಮನೆಗಳಿಂದಲೂ, ದೇವೇಂದ್ರನ ಅಮರಾವತಿಯ ಆಕೃತಿಯಲ್ಲೂ, ಲೋಕದ ಜನದ ಕಣ್ಣುಗಳಿಗೆ ಸುಖವನ್ನುಂಟುಮಾಡುವಂತಹುದೂ, ಉತ್ತಮವಾದ ರಾಜಪದ್ಧತಿಯಿಂದಲೂ, ಆಶ್ರಿತರಾದ ಭೃತ್ಯಾದಿಗಳ ವಂಶಪರಂಪರೆಯಿಂದಲೂ, ದೇವತೆಗಳಿಗೆ ಕೊಡಲ್ಪಟ್ಟ ಆಶ್ರಯದಿಂದಲೂ ಕೂಡಿ ಭೂದೇವಿಯು ಹೊಂದಿದ ಅಲಂಕಾರವೋ ಎನ್ನುವಂತೆ ಸುತ್ತಲೂ ಹರಡಿರುವ ಪ್ರಭಾವದಿಂದ ಕೂಡಿತ್ತು. ವ॥ ಮತ್ತು ಆ ವಿಲಾಸಕ್ಕೆ ಒಂದೇ ಪ್ರದೇಶವೆಂಬಂತಿರುವ ಆ ಪಟ್ಟಣದ ಬಹಿರುದ್ಯಾನವನದಲ್ಲಿ ೩೩. ರಾತ್ರಿಯಲ್ಲಿ ಜಿನುಗುವ ಚಂದ್ರಕಾಂತಶಿಲೆಯಿಂದ ಬಂಧುರವಾಗಿ ಆ ಪಟ್ಟಣದ ಕೋಟೆಯು ಕಟ್ಟಲ್ಪಟ್ಟು ಆ ನೀರನ್ನೆ ಬಳಸಿ ಬೆಳೆದ ಆ ಪಟ್ಟಣದ ಬಹಿರುದ್ಯಾನವನವನ್ನು ಶಿವಶಿವ ದೇವಲೋಕದ ನಂದನವೆಂದು ವರ್ಣಿಸಲಿಕ್ಕೆ ಮನಸ್ಸು ಬಂದೀತೆ? ವ॥ ಹೀಗೆನ್ನುವ ಹಿರಿದಾದ ಸಂಪತ್ತನ್ನೊಳಗೊಂಡು ೩೪. ಆ ಧರ್ಮವತಿ ಎಂಬ ಪಟ್ಟಣದ ನಂದನವು ಬಾಳೆ, ಹೂ, ದುಂಬಿಗಳ ಮಧುರನಾದಗಳಿಂದ ಕೂಡಿ, ರಂಭೆ, ಮಂಜುಘೋಷೆ ಮುಂತಾದವರಿಂದ ರಾಜಿಸುವ ದೇವಲೋಕದ ನಂದನದಂತೆ ಆಶ್ಚರ್ಯಕರ

ಚಂ॥ ಕಳರವವಿಲ್ಲದಿರ್ಪ ಪಿಕನಂಚೆಗಳಾಡದ ಪೂಗೊಳಂ ಫಳಾ
ವಳಿ ಬಳಸಿಲ್ಲದಿರ್ಪ ಪೊಸಮಾವಿನಿವಾತುಗಳಾಡದಿರ್ಪ ಪೆ
ಣ್ಗಳಿಯಳಿರಾಜಿ ರಾಜಿಸದ ತಾವರೆ ಪೂಗುಡಿ ಮೂಡಿತೋಱದಿ
ರ್ಪೆಳಲತೆ ಮೆಲ್ಲಿತಲ್ಲದೆಲರಿಲ್ಲೆನೆ ತದ್ವನವೇಂ ಮನೋಜ್ಞಮೋ ೩೫

ವ॥ ಮತ್ತಮಲ್ಲಿ

ಮ॥ಸ್ರ॥ ಅರನೇರಿಲ್ ನಿಂಬೆ ಕಂಕೆಲ್ಲಿ ಪಲಸು ಬಕುಳಂ ಬಾಳೆ ಪೇರೀಳೆ ತಾಳೀ
ತರು ತೆಂಗುಂ ಕೌಂಗು ಸಪ್ತಚ್ಛದ ಕದಳಿ ತಮಾಲಂ ಲಸಚ್ಚಂಪಕಂ ಪಾ
ದರಿ ಪುನ್ನಾಗಂ ರಸಾಲಂ ತಿಲಕ ಕುರವಕಂ ಕರ್ಣಿಕಾರಂ ಕದಂಬಂ
ಸಿರಿಸಂ ಶ್ರೀಪರ್ಣಿ ದಾಳಿಂಬಮರಮುಪರ್ದು ಸಾಲ್ಗೊಂಡು ಕಣ್ಗೊಪ್ಪುತಿರ್ಕುಂ ೩೬

ಚಂ॥ ಎಳನನೆ ತೀವಿತೋರ್ಪ ಪೊನೆಮಲ್ಲಿಗೆ ತಾವರೆ ತೀವಿತೋರ್ಪ ತಂ
ಗೊಳಮಳಿ ತೀವಿತೋರ್ಪ ಮಧುದೂತಿಯಲರ್ತವೆ ತೀವಿತೋರ್ಪ ಪಾ
ಟಳಿ ಗಿಳಿ ತೀವಿತೋರ್ಪ ಪೊಸಮಾವು ತಳಿರ್ಬಿಡೆ ತೀವಿತೋರ್ಪ ಮಂ
ಜುಳತರಮಾದಶೋಕೆ ಮೆಱೆದಿರ್ಪುವು ತದ್ವನಮಧ್ಯದೇಶದೊಳ್ ೩೭

ವ॥ ಮತ್ತಮಲ್ಲಿ

ವಾಗಿ ಇತ್ತು. ೩೫. ಕಲಕಂಠದಿಂದ ಕೂಗದಿರುವ ಕೋಗಿಲೆ, ಹಂಸಗಳು ಆಡದೆ ಇರುವ ಪುಷ್ಪಗಳ ಕೊಳ, ಹಣ್ಣುಗಳನ್ನು ಬಿಡದೆ ಇರುವ ಸಿಹಿಮಾವು, ಮಧುರ ಮಾತುಗಳನ್ನಾಡದೆ ಇರುವ ಹೆಣ್ಣುಗಿಳಿ, ದುಂಬಿಗಳ ಸಮೂಹದಿಂದ ಶೋಭಿಸದ ಕಮಲಗಳು, ಹೂಗೊಂಚಲುಗಳು ತೋರದೆ ಇರುವ ಎಳೆಯ ಬಳ್ಳಿಗಳು, ಮಂದವಾಗಿ ಬೀಸದ ಗಾಳಿ, ಇವು ಇಲ್ಲವೆನ್ನುವಂತೆ ಇರುವ ಆ ವನವು ಅದೇನು ಮನೋಹರವೋ ! ವ॥ ಮತ್ತು ಅಲ್ಲಿ ೩೬. ಸತತ ನಿಬಿಡವಾದ ನೆರಳನ್ನುಂಟುಮಾಡುವ ನೇರಿಳೆ, ನಿಂಬೆ, ಕಂಕೆಲ್ಲಿ (ಅಶೋಕ), ಹಲಸು, ಬಕುಳ, ಬಾಳೆ, ಹೇರಿಳೆ, ತಾಳೆಗಿಡ, ತೆಂಗು, ಅಡಿಕೆ, ಏಳೆಲೆ ಬಾಳೆ, ಬಾಳೆ, ಹೊಂಗೆ, ಪ್ರಕಾಶಿಸುವ ಸಂಪಿಗೆ, ಪಾದರಿ, ಜಾಕಾಯಿಮರ, ಮಾವು, ತಿಲಕ, ಗೋರಂಟಿ, ಕಕ್ಕೆ, ನೀಪ (ಈಚಲು), ಸಿರಸಲು, ಕಿರುನೆಲ್ಲಿ(?), ದಾಳಿಂಬೆ ಮರಗಳು ಕೂಡಿಕೊಂಡು ಸಾಲುಸಾಲಾಗಿ ತೋರುತ್ತಿದ್ದವು. ೩೭. ಎಳೆಯ ಚಿಗುರಿನಿಂದ ತುಂಬಿತೋರುವ ಸೂಜಿಮಲ್ಲಿಗೆ, ತಾವರೆ ಹೂವುಗಳಿಂದ ತುಂಬಿ ತೋರುವ ತಣ್ಣೀರಿನ ಕೊಳಗಳು, ದುಂಬಿಗಳಿಂದ ಆವರಿಸಿಕೊಂಡು ತೋರುವ ಸೀಮಾವಿನಮರ, ಹೂವುಗಳಿಂದ ತುಂಬಿ ತೋರುವ ಪಾದರಿಮರ, ಗಿಳಿಗಳಿಂದ ತುಂಬಿತೋರುವ ಫಲಬಿಟ್ಟ ಮಾವು, ತಳಿರು ತುಂಬಿ ವಿಸ್ತಾರಗೊಂಡು ಕಾಣುತ್ತಿರುವ ಮನೋಹರವಾದ ಅಶೋಕವೃಕ್ಷ ಮುಂತಾದುವು ಆ ನಂದನದ ಮಧ್ಯದಲ್ಲಿ ಶೋಭಿಸುತ್ತಿದ್ದವು. ವ॥ ಮತ್ತು ಅಲ್ಲಿ

ಕಂ॥ ಬಲವರ್ಪಾಱದಿ ಬಗ್ಗಿಪ
ಕಳಕಂಠಂ ತೊಂಡುಗೆಡೆವ ಗಿಳಿ ಪೂತೆಸೆದಿ
ರ್ಫಲಜೊರ್ಣಂಪಂ ಕಾತೊಱಗುವ ಫ
ಲಾಳಿ ತಳ್ತಿರೆ ರಸಾಲಭೂರುಹಮೆಸೆಗುಂ ೩೮

ಮ॥ ಅಲರ್ಗಂಪಿಂಗೆಱಗಿರ್ದ ತುಂಬಿಗಳ ಬಂಬಲ್ ಕಾರ್ಮುಗಿಲ್ಪಲ್ಲವಾ
ವಲಿ ವಿದ್ಯುತ್ಪ್ರಚಯಂ ಪಿಕಪ್ರಕರನಾದಂ ಮೇಘನಾದಂ ನಿರಾ
ಕುಲವೊಂದಿರ್ಪ ಶುಕಾಳಿ ಶಕ್ರಧನುವೆಂಬಂತಾಗೆ ಮೇಘಾಗಮಂ
ಬೊಲದೇಂ ಸೂಸಿದುದೋ ಮರಂದರಸವೃಷ್ಟಿವ್ರಾತಮಂ ಮಾಮರಂ ೩೯

ಕಂ॥ ಸ್ಮರನಲ್ಲಿ ನೆಲಸಿ ನೆಲೆಗೊಂ
ಡಿರೆ ಮಾಮರದಲ್ಲಿ ಗಿರಿಶನುರಿಗಣ್ಣುರಿ ಬಂ
ದಿರದಡರ್ದು ಸುತ್ತಿ ಮುತ್ತಿದ
ಪರಿಯಂ ಪಸರಿಪುದು ಚೆಲ್ವ ಚೆಂದಳಿರ್ದುಱುಗಲ್ ೪೦

ಮಲ್ಲಿಗೆ ಮಾಮರದೆಳದಳಿ
ರಲ್ಲಿ ಮುಗುಳ್ತಡರೆ ಮುಗುಳ್ಗಳೆಸೆದುವು ಸಂಧ್ಯಾ
ಸಲ್ಲಲಿತ ತಾರಕಾಳಿವೊ
ಲಲ್ಲಿಳಿವಾಱಡಿಗಳಿಳಿವ ತಮಮೆನಿಸಿರ್ದುಂ ೪೧

೩೮. ಪ್ರದಕ್ಷಿಣೆ (ಸುತ್ತ ಬಳಸಿ) ಬರುವ ದುಂಬಿಗಳು, ಕೂಗುವ ಕೋಗಿಲೆ, ಚಪ್ಪರಿಸುತ್ತಿರುವ (ಮಾತಾಡುತ್ತಿರುವ ?) ಗಿಳಿ, ಹೂಬಿಟ್ಟು ಶೋಭಿಸುವ ಹೂಗೊಂಚಲುಗಳು, ಕಾಯಿಬಿಟ್ಟು ಭಾರದಿಂದ ಬಗ್ಗಿರುವ ಹಣ್ಣುಗಳ ಸಮೂಹ ತುಂಬಿರಲಾಗಿ ಒಂದು ಸಿಹಿಮಾವಿನ ಮರವು ಶೋಭಿಸುತ್ತಿತ್ತು. ೩೯. ಹೂವಿನ ಸುಗಂಧಕ್ಕೆ ಮುತ್ತಿರುವ ತುಂಬಿಗಳ ಸಮೂಹವೇ ಕಾರ್ಮೋಡ, ಚಿಗುರುಗಳ ಸಮೂಹವೇ ಮಿಂಚುಗಳ ಸಮೂಹ, ಕೋಗಿಲೆಗಳ ಸಮೂಹದ ಕೂಗುವಿಕೆಯೇ ಮೇಘಗರ್ಜನೆ, ಯಾವ ಸದ್ದಿಲ್ಲದೆ ಇರುವ ಗಿಳಿಗಳ ಸಮೂಹವೇ ಕಾಮನಬಿಲ್ಲು ಎನ್ನುವಂತೆ ಇರಲು, ಮೇಘೋದಯದ ಹಾಗೆ ಮಕರಂದವೆಂಬ ರಸದ ಮಳೆಯನ್ನು ಆ ಮಾವಿನಮರವು ಅದೇನು ಸೂಸಿತೋ ! ೪೦. ಮನ್ಮಥನು ಆ ಸೀಮಾಮರದಲ್ಲಿ ವಾಸವಾಗಿರಲಾಗಿ, ಅವನನ್ನು ಸುಡಲು ಶಿವನು ತನ್ನುರಿಗಣ್ಣಿನ ಬೆಂಕಿಯು ಬಂದು ತಪ್ಪದೆ ಅಡರಿದಂತೆ, ಅದು ಸುತ್ತಿ ಮುತ್ತಿದ ಚೆಲುವಾದ ಕೆಂಪುಬಣ್ಣದ ತಳಿರಿನ ಗೊಂಚಲು ಕಾಣುತ್ತಿತ್ತು. ೪೧. ಮಲ್ಲಿಗೆಬಳ್ಳಿಯು ಮಾವಿನಮರದ ಎಳೆಯ ತಳಿರಿನಲ್ಲಿ ಮೊಗ್ಗು ಬಿಟ್ಟು ಅಡರಿಕೊಂಡಿರಲು ಆ ಮುಗುಳ್ಗಳು ಸಂಧ್ಯಾಕಾಲದ ಮನೋಹರವಾದ ನಕ್ಷತ್ರಗಳೋ ಎನ್ನುವಂತೆ ಇದ್ದವು. ಆ ಮುಗುಳುಗಳಿಗೆ ಎರಗುವ ಭ್ರಮರಗಳು ಸಂಜೆಯಲ್ಲಿ ಇಳಿದು ಬರುವ

ಅಳಿಗಳ ಗಿಳಿಗಳ ತಳಿರ್ಗಳ
ಫಳಂಗಳಲರ್ಗಳ ವಿಶೇಷ ವರ್ಣದಿನೆಸೆಗುಂ
ಥಳಥಳಿಪ ಪಂಚರತ್ನದ
ನಿಳಯಮಿದೆನೆ ಮದನನೃಪತಿಗದು ಮಧುರಚಿತಂ ೪೨

ತರುಣಾಮ್ರತರುಯುಗಳ ಮದ
ಕರಿಗಳ್ ಕಾದಲ್ಕೆ ನಿಲೆ ಮನೋಜನ ಬಿನದ
ಕ್ಕಿರದಡರ್ದವನಾರ್ದಾರ್ದ
ಬ್ಬರಿಪರ ಸರಗೈವ ಪರಭೃತಂಗಳ್ಪೊಲ್ತುಂ ೪೩

ಮ॥ಸ್ರ॥ ತುದಿಗೇಱಿರ್ದೊಂದು ಕೀರಂ ಮರಕತಕಲಶಂ ಸತ್ಫಲಂ ದರ್ಪಣಂ ಪ
ರ್ಬಿದ ಮಲ್ಲೀವಲ್ಲಿಯೇ ಬಲ್ಸೊರಜಿ ನಿಚಿತಭೃಂಗವ್ರಜಂ ನೀಲಶೋಭಾ
ಸ್ಪದಮಾಲ್ಯಂ ಪುಷ್ಪಗುಚ್ಛಂ ಚಮರಮುರುಪಟಂ ಪಲ್ಲವಂ ಕೋಕಿಲವ್ಯಾ
ತದ ನಾದಂ ವಾದ್ಯಮಾಗಲ್ಕುಸುಮಶರನ ತೇರಂತೆ ಚೆಲ್ವಾಯ್ತು ಚೂತಂ ೪೪

ಕಂ॥ ಎಲರಲೆಯೆ ಕೆಲಕೆ ತೊಲಗಿದ
ಚಲಶಾಖೆಯ ತಳಿರ ತುಡುಕಲಾತುರಿಪ ಪಿಕಂ
ಗೆಲೆವಂದುದು ಮುಳಿದು ಕಿಲ
ಕ್ಕೊಲೆದಳ ಚೆಂದುಟಿಯ ಚುಂಬಿಸಲ್ ತವಕಿಪನಂ ೪೫

ಕತ್ತಲೆಯೆನಿಸುತ್ತಿತ್ತು. ೪೨. ದುಂಬಿಗಳ, ಗಿಳಿಗಳ, ಚಿಗುರುಗಳ, ಫಲಗಳ ಮತ್ತು ಹೂವುಗಳ ವಿಶೇಷವಾದ ಬಣ್ಣದಿಂದ ಆ ಮಾವಿನಮರವು ವಸಂತಮಾಸವು ಮನ್ಮಥನೃಪತಿಗಾಗಿ ರಚಿಸಿದಂಥ ಥಳಥಳಿಪ ಪಂಚರತ್ನಗಳ ನಿಲಯವೋ ಎನ್ನುವಂತೆ ಶೋಭಿಸುತ್ತಿತ್ತು. ೪೩. ಮನ್ಮಥನ ವಿನೋದಕ್ಕಾಗಿ ಕೆಂಪಾದ ಎರಡು ತರುಣ ಮಾಮರಗಳೆಂಬ ಆನೆಗಳು ಕಾದಾಟಕ್ಕೆ ನಿಂತಿರಲಾಗಿ, ಬಿಡದೆ ಅವುಗಳನ್ನು ಅಡರಿ ಕೂಗುವ ಕೋಗಿಲೆಗಳು ಅಬ್ಬರಿಸುವ ಆನೆಗಳ ಸವಾರರನ್ನು ಹೋಲುತ್ತಿದ್ದವು. ೪೪. ತುದಿಗೆ ಏರಿ ಕುಳಿತ ಒಂದು ಗಿಳಿಯೇ ಪಚ್ಚೆಯಿಂದ ಮಾಡಿದ ಕಲಶ, ಒಳ್ಳೆಯ ಹಣ್ಣುಗಳೇ ಕನ್ನಡಿ, ಹಬ್ಬಿದ ಮಲ್ಲಿಗೆಯ ಬಳ್ಳಿಯೇ ದಪ್ಪನಾದ ಹಗ್ಗ, ಮುತ್ತಿಕೊಂಡಿರುವ ದುಂಬಿಗಳ ಸಮೂಹವೇ ನೀಲವರ್ಣದ ಶೋಭೆಗೊಂಡ ಹೂಸರಗಳು, ಪುಷ್ಪಗುಚ್ಛಗಳೇ ಚಾಮರಗಳು, ಚಿಗುರುಗಳೇ ಪಟಗಳು, ಕೋಗಿಲೆಗಳ ಕೂಗುವಿಕೆಯೇ ವಾದ್ಯಗಳಾಗಲಾಗಿ, ಪುಷ್ಪಬಾಣನಾದ ಮನ್ಮಥನ ತೇರಿನಂತೆ ಆ ಮಾವಿನಮರವು ಚೆಲುವುಗೊಂಡಿತ್ತು. ೪೫. ಗಾಳಿಯು ಬೀಸಲು ಪಕ್ಕಕ್ಕೆ ಸರಿದ ಗಿಡದ ಕೊಂಬೆಯ ತಳಿರನ್ನು ಕರ್ದುಂಕಲು ಆತುರಪಡುತ್ತಿರುವ ಕೋಗಿಲೆಯು, ಕೋಪಗೊಂಡು ಪಕ್ಕಕ್ಕೆ ಮುಖಮಾಡಿದ ಸ್ತ್ರೀಯ ಕೆಂಪಾದ ತುಟಿ

ಕಂ॥ ಬಲವರ್ಪಱಿಡಿ ಬಗ್ಗಿಪ
ಕಳಕಂಠಂ ತೊಂಡುಗೆಡೆವ ಗಿಳಿ ಪೂತೆಸೆದಿ
ರ್ಪಲರ್ಜೊಂಪಂ ಕಾತೊಱಗುವ ಫ
ಲಾಳಿ ತಳ್ತಿರೆ ರಸಾಲಭೂರುಹಮೆಸೆಗುಂ ೩೮

ಮ॥ ಅಲರ್ಗಂಪಿಂಗೆಱಗಿರ್ದ ತುಂಬಿಗಳ ಬಂಬಲ್ ಕಾರ್ಮುಗಿಲ್ಪೆಲ್ಲವಾ
ವಲಿ ವಿದ್ಯುತ್ಪ್ರಚಯಂ ಪಿಕಪ್ರಕರನಾದಂ ಮೇಘನಾದಂ ನಿರಾ
ಕುಲವೊಂದಿರ್ಪ ಶುಕಾಳಿ ಶಕ್ರಧನುವೆಂಬಂತಾಗೆ ಮೇಘಾಗಮಂ
ಬೊಲದೇಂ ಸೂಸಿದುದೋ ಮರಂದರಸವೃಷ್ಟಿವ್ರಾತಮಂ ಮಾಮರಂ ೩೯

ಕಂ॥ ಸ್ಮರನಲ್ಲಿ ನೆಲಸಿ ನೆಲೆಗೊಂ
ಡಿರೆ ಮಾಮರದಲ್ಲಿ ಗಿರಿಶನುರಿಗಣ್ಣುರಿ ಬಂ
ದಿರದಡರ್ದು ಸುತ್ತಿ ಮುತ್ತಿದ
ಪರಿಯಂ ಪಸರಿಪುದು ಚೆಲ್ವ ಚೆಂದಳಿರ್ದುಱುಗಲ್ ೪೦

ಮಲ್ಲಿಗೆ ಮಾಮರದೆಳದಳಿ
ರಲ್ಲಿ ಮುಗುಳ್ತಡರೆ ಮುಗುಳ್ಗಳೆಸೆದುವು ಸಂಧ್ಯಾ
ಸಲ್ಲಲಿತ ತಾರಕಾಳಿವೊ
ಲಲ್ಲಿಳಿವಾಱಡಿಗಳಿಳಿವ ತಮಮೆನಿಸಿರ್ಕುಂ ೪೧

೩೮. ಪ್ರದಕ್ಷಿಣೆ (ಸುತ್ತ ಬಳಸಿ) ಬರುವ ದುಂಬಿಗಳು, ಕೂಗುವ ಕೋಗಿಲೆ, ಚಪ್ಪರಿಸು ತ್ತಿರುವ (ಮಾತಾಡುತ್ತಿರುವ ?) ಗಿಳಿ, ಹೂಬಿಟ್ಟು ಶೋಭಿಸುವ ಹೂಗೊಂಚಲು ಗಳು, ಕಾಯಿಬಿಟ್ಟು ಭಾರದಿಂದ ಬಗ್ಗಿರುವ ಹಣ್ಣುಗಳ ಸಮೂಹ ತುಂಬಿರಲಾಗಿ ಒಂದು ಸಿಹಿಮಾವಿನ ಮರವು ಶೋಭಿಸುತ್ತಿತ್ತು. ೩೯. ಹೂವಿನ ಸುಗಂಧಕ್ಕೆ ಮುತ್ತಿರುವ ತುಂಬಿಗಳ ಸಮೂಹವೇ ಕಾರ್ಮೋಡ, ಚಿಗುರುಗಳ ಸಮೂಹವೇ ಮಿಂಚುಗಳ ಸಮೂಹ, ಕೋಗಿಲೆಗಳ ಸಮೂಹದ ಕೂಗುವಿಕೆಯೇ ಮೇಘಗರ್ಜನೆ, ಯಾವ ಸದ್ದಿಲ್ಲದೆ ಇರುವ ಗಿಳಿಗಳ ಸಮೂಹವೇ ಕಾಮನಬಿಲ್ಲು ಎನ್ನುವಂತೆ ಇರಲು, ಮೇಘೋದಯದ ಹಾಗೆ ಮಕರಂದವೆಂಬ ರಸದ ಮಳೆಯನ್ನು ಆ ಮಾವಿನಮರವು ಅದೇನು ಸೂಸಿತೋ ! ೪೦. ಮನ್ಮಥನು ಆ ಸೀಮಾಮರದಲ್ಲಿ ವಾಸವಾಗಿರಲಾಗಿ, ಅವನನ್ನು ಸುಡಲು ಶಿವನು ತನ್ನುರಿಗಣ್ಣಿನ ಬೆಂಕಿಯು ಬಂದು ತಪ್ಪದೆ ಅಡರಿದಂತೆ, ಅದು ಸುತ್ತಿ ಮುತ್ತಿದ ಚೆಲುವಾದ ಕೆಂಪುಬಣ್ಣದ ತಳಿರಿನ ಗೊಂಚಲು ಕಾಣುತ್ತಿತ್ತು. ೪೧. ಮಲ್ಲಿಗೆಬಳ್ಳಿಯು ಮಾವಿನಮರದ ಎಳೆಯ ತಳಿರಿನಲ್ಲಿ ಮೊಗ್ಗು ಬಿಟ್ಟು ಅಡರಿ ಕೊಂಡಿರಲು ಆ ಮುಗುಳ್ಗಳು ಸಂಧ್ಯಾಕಾಲದ ಮನೋಹರವಾದ ನಕ್ಷತ್ರಗಳೋ ಎನ್ನು ವಂತೆ ಇದ್ದವು. ಆ ಮುಗುಳುಗಳಿಗೆ ಎರಗುವ ಭ್ರಮರಗಳು ಸಂಜೆಯಲ್ಲಿ ಇಳಿದು ಬರುವ

ಅಳಿಗಳ ಗಿಳಿಗಳ ತಳಿರ್ಗಳ
ಫಳಂಗಳಲರ್ಗಳ ವಿಶೇಷ ವರ್ಣದಿನೆಸೆಗುಂ
ಥಳಥಳಿಪ ಪಂಚರತ್ನದ
ನಿಳಯಮಿದೆನೆ ಮದನನೃಪತಿಗದು ಮಧುರಚಿತಂ ೪೨

ತರುಣಾಮ್ರತರುಯುಗಳ ಮದ
ಕರಿಗಳ್ ಕಾದಲ್ಕೆ ನಿಲೆ ಮನೋಜನ ಬಿನದ
ಕ್ಕಿರದಡರ್ದವನಾರ್ದಾರ್ದ
ಬ್ಬರಿಪರ ಸರಗೈವ ಪರಭೃತಂಗಳ್ಪೋಲ್ಗುಂ ೪೩

ಮ॥ಸ್ರ॥ ತುದಿಗೇಱಿರ್ದೊಂದು ಕೀರಂ ಮರಕತಕಲಶಂ ಸತ್ಫಲಂ ದರ್ಪಣಂ ಪ
ರ್ಬಿದ ಮಲ್ಲೀವಲ್ಲಿಯೇ ಬಲ್ಪೊರಜಿ ನಿಚಿತಭೃಂಗವ್ರಜಂ ನೀಲಶೋಭಾ
ಸ್ಪದಮಾಲ್ಯಂ ಪುಷ್ಪಗುಚ್ಛಂ ಚಮರಮುರುಪಟಂ ಪಲ್ಲವಂ ಕೋಕಿಲವ್ರಾ
ತದ ನಾದಂ ವಾದ್ಯಮಾಗಲ್ಕುಸುಮಶರನ ತೇರಂತೆ ಚೆಲ್ವಾಯ್ತು ಚೂತಂ ೪೪

ಕಂ॥ ಎಲರಲೆಯೆ ಕೆಲಕೆ ತೊಲಗಿದ
ಚಲಶಾಖೆಯ ತಳಿರ ತುಡುಕಲಾತುರಿಪ ಪಿಕಂ
ಗೆಲೆವಂದುದು ಮುಳಿದು ಕೆಲ
ಕ್ಕೊಲೆದಳ ಚೆಂದುಟಿಯ ಚುಂಬಿಸಲ್ ತವಕಿಪನಂ ೪೫

ಕತ್ತಲೆಯೆನಿಸುತ್ತಿತ್ತು. ೪೨. ದುಂಬಿಗಳ, ಗಿಳಿಗಳ, ಚಿಗುರುಗಳ, ಫಲಗಳ ಮತ್ತು ಹೂವುಗಳ ವಿಶೇಷವಾದ ಬಣ್ಣದಿಂದ ಆ ಮಾವಿನಮರವು ವಸಂತಮಾಸವು ಮನ್ಮಥನೃಪತಿಗಾಗಿ ರಚಿಸಿದಂಥ ಥಳಥಳಿಪ ಪಂಚರತ್ನಗಳ ನಿಲಯವೋ ಎನ್ನುವಂತೆ ಶೋಭಿಸುತ್ತಿತ್ತು. ೪೩. ಮನ್ಮಥನ ವಿನೋದಕ್ಕಾಗಿ ಕೆಂಪಾದ ಎರಡು ತರುಣ ಮಾಮರಗಳೆಂಬ ಆನೆಗಳು ಕಾದಾಟಕ್ಕೆ ನಿಂತಿರಲಾಗಿ, ಬಿಡದೆ ಅವುಗಳನ್ನು ಅಡರಿ ಕೂಗುವ ಕೋಗಿಲೆಗಳು ಅಬ್ಬರಿಸುವ ಆನೆಗಳ ಸವಾರರನ್ನು ಹೋಲುತ್ತಿದ್ದವು. ೪೪. ತುದಿಗೆ ಏರಿ ಕುಳಿತ ಒಂದು ಗಿಳಿಯೇ ಪಚ್ಚೆಯಿಂದ ಮಾಡಿದ ಕಲಶ, ಒಳ್ಳೆಯ ಹಣ್ಣುಗಳೇ ಕನ್ನಡಿ, ಹಬ್ಬಿದ ಮಲ್ಲಿಗೆಯ ಬಳ್ಳಿಯೇ ದಪ್ಪನಾದ ಹಗ್ಗ, ಮುತ್ತಿಕೊಂಡಿರುವ ದುಂಬಿಗಳ ಸಮೂಹವೇ ನೀಲವರ್ಣದ ಶೋಭೆಗೊಂಡ ಹೂಸರಗಳು, ಪುಷ್ಪಗುಚ್ಛಗಳೇ ಚಾಮರಗಳು, ಚಿಗುರುಗಳೇ ಪಟಗಳು, ಕೋಗಿಲೆಗಳ ಕೂಗುವಿಕೆಯೇ ವಾದ್ಯಗಳಾಗಲಾಗಿ, ಪುಷ್ಪಬಾಣನಾದ ಮನ್ಮಥನ ತೇರಿನಂತೆ ಆ ಮಾವಿನಮರವು ಚೆಲುವುಗೊಂಡಿತ್ತು. ೪೫. ಗಾಳಿಯು ಬೀಸಲು ಪಕ್ಕಕ್ಕೆ ಸರಿದ ಗಿಡದ ಕೊಂಬೆಯ ತಳಿರನ್ನು ಕರ್ದುಂಕಲು ಆತುರಪಡುತ್ತಿರುವ ಕೋಗಿಲೆಯು, ಕೋಪಗೊಂಡು ಪಕ್ಕಕ್ಕೆ ಮುಖಮಾಡಿದ ಸ್ತ್ರೀಯ ಕೆಂಪಾದ ತುಟಿ

ವ॥ ಮತ್ತಮಲ್ಲಿ

ಕಂ॥ ಕೆಂದಳಿರದು ಮಾಂದಳಿರೆನೆ
ಸಂದಣಿಸಿದ ಪಣ್ಗಳಳಿಗಳೆನೆ ತಾನುಂ ಮಾ
ಕಂದಮೆನಿಸಲ್ಕೆಗಳ್ಚಿದ
ಚಂದಮನಾಂತಂತೆ ನೇಱಿಲಲ್ಲಿಸೆದಿರ್ಕುಂ ೪೭

ಮಿಡಿ ಪಚ್ಚೆಯ ಪರಲೆನೆ ಕೆಂ
ಪಿಡಿದರೆವಣ್ ಪದ್ಮರಾಗಮೆನೆ ತನಿವಣ್ ಕ
ರ್ಪಿಡಿದಿಂದ್ರನೀಲಮೆನೆ ಮಣಿ
ಗಡಣಮನಾಂತಂತೆ ನೇಱಿಲೆಸೆದುದು ಬನದೊಳ್ ೪೭

ಅಮರ್ದಿನಿದನಿದಱಿನಿದನೆಲೆ
ಯಮರರೆ ಸರಿನೋಳ್ಪುದೆಂದು ನಿಜರಸಮನಿಳಾ
ರಮೆ ಮರಕತಕಳಶದೆ ತುಂ
ಬಿ ಮೇಲೆ ನೀಡಿದಪಳೆಂಬಪೋಲ್ ತೆಂಗೆಸೆಗುಂ ೪೮

ಬಿಡದಾಲವಾಲ ಜಲದೊಳ್
ಕಡುಗೆಂಪಿಡಿದಿಡಿದ ಬೀಜ ರದನದ ಚೆಲ್ವಂ
ನಡೆನೋಳ್ಪಂತಿರೆ ತೋರ್ಕುಂ
ಪಡಿನೆಳಲಿಂಬಾಗೆ ಬಾಗಿ ರಸದಾಳಿಂಬಂ ೪೯

ಗಳನ್ನು ಚುಂಬಿಸಲು ತವಕಪಡುತ್ತಿರುವವನಿಗೆ ಸಮನಾಗಿತ್ತು. ವ|| ಮತ್ತೂ ಅಲ್ಲಿ ೪೬. ಆ ಕೆಂಪಾದ ತಳಿರು ಮಾಂದಳಿರೆಂದು, ತುಂಬಿಕೊಂಡಿರುವ ತುಂಬಿಗಳು ಹಣ್ಣು ಗಳೋ ಎಂದು, ನೇರಿಳೆಮರವು ತಾನೂ ಸೀಮಾವಿನ ಮರವೆಂದೆನಿಸಲು ಚೆಂದವನ್ನು ಹೊಂದಿದಂತೆ ಶೋಭಿಸುತ್ತಿತ್ತು. ೪೭. ಮಿಡಿಗಳೇ ಪಚ್ಚೆಯ ಹರಳುಗಳೊ ಎನ್ನುವಂತೆ, ಕೆಂಪಾಗಿರುವ ದೋರೆಹಣ್ಣುಗಳು ಪದ್ಮರಾಗವೋ ಎನ್ನುವಂತೆ, ಕಪ್ಪಾದ ಮಾಗಿದ ಹಣ್ಣು ನೀಲಮಣಿ ಸಮೂಹವನ್ನು ಹೊಂದಿದಂತೆ ನೇರಿಳೆಮರವು ಶೋಭಿಸುತ್ತಿತ್ತು. ೪೮. ಅಮೃತದ ಮಧುರತೆಯನ್ನೂ, ಇದರ ಇನಿದನ್ನೂ, ಎಲೈ ದೇವತೆಗಳೇ, ಸರಿ ನೋಡಿಕೊಳ್ಳಿ ಎಂದು ತನ್ನ ರಸವನ್ನು ಭೂಮಿಯೆಂಬ ಹೆಂಗಸು ಮರಕತ ಕಳಶಗಳಲ್ಲಿ ತುಂಬಿ ಮೇಲೆ ನೀಡುತ್ತಿರುವಳೋ ಎಂಬಂತೆ ತೆಂಗಿನ ಮರಗಳು ಶೋಭಿಸುತ್ತಿದ್ದವು. ೪೯. ಎಡಬಿಡದೆ ಪಾತಿಯ ನೀರಿನಲ್ಲಿ ಪ್ರತಿಚ್ಛಾಯೆಯು ಸ್ಪಷ್ಟವಾಗಿ ಕಾಣುತ್ತಿರಲು ಕೆಂಪುಬಣ್ಣದಿಂದ ಕೂಡಿದ ಬೀಜವು ತನ್ನ ಹಲ್ಲಿನ ಚೆಲುವನ್ನು ಬಗ್ಗಿನೋಡುತ್ತಿರು

ಜಲದ ಜಲದಕ್ಕೆ ಜಲವ
ತ್ಫಲವೀವುದು ತೆಂಗಿದಕ್ಕೆ ಕುಡದಾಯ್ತೀಸಂ
ಸಲಪಿದಿಳೆಗೆಂದೆಱಗಿ ನವ
ಫಲಂಗಳೀವಂತೆ ಬಾಗಿ ಬಾಳೆಗಳೆಸೆಗುಂ ೫೦

ಘನತರಫಳವುಮಂ ಬೇರಿಂ
ಕೊನೆವರೆಗಂ ತಾಳ್ದ ಬಕ್ಕೆವಲಸಿನ ಪಣ್ಗ
ಳ್ಮನಸಿಜನ ಮಲಗುಮೂಡೆಯ
ನನುಕರಿಪುವು ನೋಳ್ಪ ಮನುಜನಿಕರಕಜಸ್ರಂ ೫೧

ಗಗನೇಚರಿಯರ್ ಗಗನದೆ
ನೆಗೆತರುತಂ ಬನದ ಕೌಂಗಿನೆಳೆಯಡಕೆಗಳಂ
ಮಿಗೆ ಪಚ್ಚೆವರಲಿವೆಂದು
ಜ್ಜುಗಿಪತ್ತೊರ್ಡಲೆಂದು ಬಂದು ನಿಂದದಱಡೆಯೊಳ್ ೫೨

ಅಲರಂಬಂ ಕುಸುಮಸಮು
ಜ್ವಲಲಿಂಗಮನರ್ಚಿಸಲ್ಕೆ ನಿಲಿಸಿದ ದೀಪಾ
ವಳಿಯ ಘನಸ್ತಂಭಂಗಳ
ವೊಲದೇನೆಸೆದುವೊ ಸಪುಷ್ಪ ಚಂಪಕತರುಗಳ್ ೫೩

ವುದೋ ಎನ್ನುವಂತೆ ರಸದಾಳಿಂಬೆಯು ಕಾಣುತ್ತಿತ್ತು. ೫೦. ನೀರನ್ನೇ ಕೊಡುವ ಮೋಡಕ್ಕೆ ತೆಂಗು ಜಲಸಮೇತವಾದ ಫಲವನ್ನು ಕೊಡುತ್ತಿರುವುದು. ಸಲಹಿದ ಈ ಭೂಮಿಗೆ ಏನನ್ನೂ ಕೊಡದೆ ಹೋಯಿತು ಎಂದು (ಭೂಮಿಗೆ) ಬಗ್ಗಿ (ತನ್ನ) ನೂತನ ಫಲಗಳನ್ನು ಕೊಡುತ್ತಿರುವಂತೆ ಬಾಳೆಯ ಮರಗಳು ಶೋಭಿಸುತ್ತಿದ್ದವು. ೫೧. ಶ್ರೇಷ್ಠವಾದ ಹಣ್ಣುಗಳನ್ನು ಬೇರಿನಿಂದ ಮೊದಲ್ಗೊಂಡು ತುದಿಯವರೆಗೂ ಹೊಂದಿರುವ ಬಕ್ಕೆ ಹಲಸಿನ ಹಣ್ಣುಗಳು ನೋಡುವ ಜನಸಮೂಹಕ್ಕೆ ಸದಾ ಮನ್ಮಥನ ಮಲಗುಡಿಂಬುಗಳನ್ನು ಹೋಲುತ್ತಿದ್ದವು. ೫೨. ಗಗನಚಾರಿಣಿಯರಾದ ಕಿನ್ನರ ಗಂಧರ್ವ ಸ್ತ್ರೀಯರು ಗಗನದಲ್ಲಿ ಹಾರಿಬರುತ್ತಿರುವಾಗ ತೋಟದ ಅಡಿಕೆಮರಗಳಲ್ಲಿರುವ ಎಳೆಯಡಕೆಯ ಕಾಯಿಗಳನ್ನು ಪೂರ್ಣವಾಗಿ ಪಚ್ಚೆಯಕಲ್ಲುಗಳೇ ಇವು ಎಂದು (ಆ ಅಡಿಕೆಮರಗಳ) ಅಡಿಗೆ ಬಂದು ನಿಂತು ತೊಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದರು ! ೫೩. ಹೂಬಾಣನಾದ ಮನ್ಮಥನು ಕುಸುಮಗಳಿಂದ ಪ್ರಕಾಶಿಸುತ್ತಿರುವ ಲಿಂಗವನ್ನು ಅರ್ಚಿಸುವುದಕ್ಕೆ ನಿಲ್ಲಿಸಿದಂಥ ದೀಪಸಮೂಹಗಳ ದೊಡ್ಡಕಂಬಗಳ ಹಾಗೆ ಪುಷ್ಪಭರಿತವಾದ ಸಂಪಿಗೆ ಮರಗಳು

ಬನಗಳ್ತಲೆಯುಂ ಕಮಳಾ
ಪ್ತನ ಕದಿರುಂ ಕಾದಿ ಮಡಿವುತಳಿಯುಂ ಚಾಂಪೇ
ಯನಿಕಾಯಮಾದುವಲ್ಲದೊ
ಡೆನಸುಂ ತದ್ವಯಕೆ ಪಗೆತನಂ ಸಮನಿಪ್ಪುದೇ ೫೪

ಕೆಂಬಟ್ಟೆಯ ಗೂಡಾರಮ
ನಿಂಬಱಿದು ಬಸಂತನೆಯ್ದೆ ಪೊಯ್ದನೊ ಮದನಂ
ಗೆಂಬಂತೆ ಮುಸುಕಿ ತಳಿರ್ಗಳಿ
ನೇಂ ಬಂದುದೊ ಕಣ್ಗನೇಕ ಶಾಖಿಮಶೋಕಂ ೫೫

ತಳಿರ್ಗಳೆ ದಳ್ಳುರಿ ಮುಸುಕಿ
ರ್ದಳಿಗಳೆ ಪೊಸಮಸಿಗಳಾಗೆ ಮದನನ ಬಾಣಾ
ವಳಿಯಂ ಕಾಸಲ್ ಚೈತ್ರೋ
ಜ್ವಳ ಕಾರುಕನಿಟ್ಟ ಕಮ್ಮಟಂಬೊಲದೆಸೆಗುಂ ೫೬

ಮ॥ ಅಲರ್ವಿಲ್ಲಂಗಜವೀರ ನಿನ್ನ ಪಗೆಯಾವಂ ಕಾಯ್ದವಂ ಬೈದು ಮೇ
ಣ್ಕಲುಷಂಗೂಡಿದೆಯೆಂದು ವರ್ಜಿಸಿದನೆನ್ನಂ ಬಂದೆನಿಂದಾಂ ನಿರಾ
ಕುಳಮೆನ್ನೊಂದೆಸಳಂ ತೊಡರ್ಚಿಬಿಡು ನಿನ್ನೀ ಬಿಲ್ಲೊಳಾಂ ಗೆಲ್ವೆನೆಂ
ದುಲಿವಂತುದ್ಭ್ರಮರಸ್ವನಂ ಸೊಗಯಿಸಿತ್ತಾ ತಾಣದೊಳ್ ಕೈತಕಂ ೫೭

ಅದೇನು ಶೋಭಿಸುತ್ತಿದ್ದವೋ ! ೫೪. ಆ ಉದ್ಯಾನವನದ ಕತ್ತಲೆಯೂ, ಕಮಲ ಸಖನಾದ ಸೂರ್ಯನ ಕಿರಣಗಳೂ, ಯುದ್ಧಮಾಡಿ ಮರಣಹೊಂದಿ ದುಂಬಿಯೂ, ಸಂಪಿಗೆಯ ಸಮೂಹವೂ ಆದವು ! ಅಲ್ಲದಿದ್ದರೆ ಅವುಗಳಿಗೆ ಸ್ವಲ್ಪವಾದರೂ ಹಗೆತನವು ಇರುತ್ತಿತ್ತೇ ! ೫೫. ವಸಂತನೆಂಬ ಮನ್ಮಥನ ಸಾಮಂತನು ಸೂಕ್ತಸ್ಥಳದಲ್ಲಿ ಮನ್ಮಥ ಚಕ್ರವರ್ತಿಗೆ ಕೆಂಪಾದ ಬಟ್ಟೆಯ ಗೂಡಾರವನ್ನು ಚೆನ್ನಾಗಿ ಹಾಕಿರುವನೋ ಎನ್ನುವ ಹಾಗೆ ತುಂಬಿಕೊಂಡಿರುವ ಚಿಗುರುಗಳಿಂದಲೂ, ಅನೇಕ ರೆಂಬೆಗಳಿಂದಲೂ ಕೂಡಿದ ಅಶೋಕವೃಕ್ಷವು ಕಣ್ಣಿಗೆ ಏನು ಶೋಭೆಯನ್ನುಂಟುಮಾಡುತ್ತಿತ್ತೋ ! ೫೬. ತಳಿರುಗಳೇ ದಳ್ಳುರಿಯಾಗಿ, ಮುತ್ತಿರುವ ದುಂಬಿಗಳೇ ಮಸಿಕೆಂಡಗಳಾಗಿರಲು ಮನ್ಮಥನ ಬಾಣದ ಸಮೂಹವನ್ನು ಕಾಯಿಸಿ ಬಡಿದು ಹರಿತಗೊಳಿಸಲು, ಚೈತ್ರನೆಂಬ ಪ್ರಸಿದ್ಧನಾದ ಕಮ್ಮಾರನು ಹೂಡಿದ ಕುಲುಮೆಯೋ ಎನ್ನುವಂತೆ ಅದು (ಆ ಅಶೋಕವೃಕ್ಷವು) ಶೋಭಿಸುತ್ತಿತ್ತು. ೫೭. "ಎಲೈ ಪುಷ್ಪಬಾಣನಾದ ಮನ್ಮಥನೇ, ನಿನ್ನೊಡನೆ ಯುದ್ಧ ಮಾಡಿದ ನಿನ್ನ ಹಗೆಯು ಯಾವನೋ (ಆ ಶಿವನು ನನ್ನನ್ನು) ಬೈದು ಮತ್ತು ದೋಷದಿಂದ ಕೂಡಿರುವೆಯೆಂದು ನನ್ನನ್ನು ವರ್ಜಿಸಿದನು. ಇಂದು ನಾನು ನಿನ್ನಲ್ಲಿಗೆ ಬಂದಿದ್ದೇನೆ. (ಸ್ವಲ್ಪವೂ) ಯೋಚಿಸದೆ ನನ್ನ ಒಂದೆಸಳನ್ನು ಬಿಲ್ಲಿಗೆ ಹೂಡಿ ಬಿಡು, ನಾನು ಗೆಲ್ಲುತ್ತೇನೆ, (ಆ ಶಿವನನ್ನು ಗೆಲ್ಲುತ್ತೇನೆ) ಎಂದು ಹೇಳುವಂತೆ ದುಂಬಿಗಳ ಹೆಚ್ಚಾದ ಝೇಂಕಾರ

ಕಂ॥ ಹರನೊಳ್ಪುಸಿನುಡಿದಘಮಂ
ಪರಿಹರಿಸಲ್ನಿಜ ರಜೋವಿಭೂತಿಯಿನಂಗಂ
ಬೊರೆದಕ್ಷಮಾಲೆಯಂ ಮೇ
ಣ್ತಿರುಪುವವೋಲ್ಷಡ್ಪ್ರಂಗಮಾಲೆಯಿಂದದು ಮೆಱೆಗುಂ ೫೮

ಮ॥ ಕೊಳನೊಂದಿರ್ದುದು ಕಣ್ಗೆ ಕೌತುಕಮನೀವುತ್ತಲ್ಲಿ ಮತ್ತದ್ಧನಿ
ರ್ಮಳ ಪಾನೀಯದಿನುರ್ವಿಬರ್ಪ ತೆರೆಯಿಂ ಕನ್ನೈದಿಲಿಂ ನೈದಿಲಿಂ
ದಳಿಯಿಂದಂ ಕಳಹಂಸೆಯಿಂ ಕಮಲದಿಂ ಕೋಕಂಗಳಿಂ ಮೀಂಗಳಿಂ
ಚಳಶೈವಾಳದಿನಿತ್ತರಂಬಿಡಿದ ಭೂಜಾತಾಳಿಯಿಂ ಪಾಳಿಯಿಂ ೫೯

ಕಂ॥ ಅಲರಂಬನಂಬುಗಳ ಬೆಳೆ
ವೊಲಮುಲರ್ವಕ್ಕಿಗಳ ಗೀತಶಾಲೆ ಸರೋಜೋ
ತ್ಪಲಸಖರ ರಾಣಿವಾಸದ
ನೆಲೆ ಮಂದಾನಿಲನ ಕೋಶಮಾ ಕಾಸಾರಂ ೬೦

ಚಂ॥ ಪರಿಗತ ರಾಜಹಂಸ ರುಚಿರಂ ಜಿತಮಾನಸಮುನ್ನತಾಳಿ ಬೃಂ
ದ ರುಚಿವಿಕೀರ್ಣ ಸಾರಸರಜೋಮರುದನ್ವಿತ ಪುಷ್ಪಕಂ ಪಯೋ
ಧರವರಚಕ್ರಮಂಡಿತಸಮಂಗಳ ಸೌಮ್ಯಕ ವಿಪ್ರಯುಕ್ತಮಂ
ಬರದವೊಲೇಂ ಮನಂಗೊಳಿಸಿತೋ ಪೊಸಮೀಂಗಳನಂಬುಜಾಕರಂ ೬೧

ಧ್ವನಿಯಿಂದ ಕೂಡಿದ ಕೇದಗೆಯು ಆಸ್ಥಾನದಲ್ಲಿ ಸೊಗಸುಗೊಂಡಿತ್ತು. ೫೮. ಹರನಲ್ಲಿ ಹುಸಿ ನುಡಿದ ಪಾಪವನ್ನು ಹೋಗಲಾಡಿಸಿಕೊಳ್ಳಲು, ತನ್ನ ರಜಸ್ಸಿನ ವಿಭೂತಿಯು ಅಂಗವನ್ನು ಹೊಂದಿದ ರುದ್ರಾಕ್ಷಮಾಲೆಯನ್ನು ತಿರುವುತ್ತಿರುವ ಹಾಗೆ ಅಳಿಗಳ ಮಾಲೆಯಿಂದ ಆ ಕೇದಗೆಯು ಶೋಭಿಸುತ್ತಿತ್ತು. ೫೯. ಪವಿತ್ರವಾದ ಸ್ವಚ್ಛ ಜಲದಿಂದಲೂ, ಉಬ್ಬಿ ಬರುತ್ತಿರುವ ತೆರೆಗಳಿಂದಲೂ, ಕನ್ನೈದಿಲಿನಿಂದಲೂ, ತಾವರೆಯಿಂದಲೂ, ದುಂಬಿಯಿಂದಲೂ, ಕಲಕಲಧ್ವನಿಮಾಡುವ ಹಂಸಗಳಿಂದಲೂ, ಕಮಲಗಳಿಂದಲೂ, ಚಕ್ರವಾಕಗಳಿಂದಲೂ, ಮೀನುಗಳಿಂದಲೂ, ಚಲಿಸುತ್ತಿರುವ ಅಂತರಗಂಗೆ (ಹಾವುಸೆ)ಯಿಂದಲೂ, ಎಲ್ಲ ಕಡೆಗೂ ಬೆಳೆದುನಿಂತ ಗಿಡಗಳಿಂದಲೂ, ಲತೆಗಳಿಂದಲೂ ಕಣ್ಣಿಗೆ ಆಶ್ಚರ್ಯವನ್ನುಂಟುಮಾಡುವಂತೆ ಕೂಡಿ ಒಂದು ಸರೋವರವು ಅಲ್ಲಿ ಇತ್ತು. ೬೦. ಆ ಕಾಸಾರವು ಪುಷ್ಪಬಾಣನಾದ ಮನ್ಮಥನ ಬಾಣಗಳು ಬೆಳೆಯುವ ಹೊಲ, ಪುಷ್ಪಗಳೆಂಬ ಪಕ್ಷಿಗಳ ಸಂಗೀತಶಾಲೆ (ದುಂಬಿಗಳ ಸಂಗೀತಶಾಲೆ), ಸೂರ್ಯಚಂದ್ರರ ರಾಣೀವಾಸದ ನೆಲೆ ಮನೆ, ದಕ್ಷಿಣ ದಿಕ್ಕಿನ-ಗಾಳಿಯಾದ ಮಂದಾನಿಲನು ವಾಸಮಾಡಿರುವ ಸ್ಥಳ. ೬೧. ಆ ಸರೋವರವು ಸುತ್ತುವರಿಯಲ್ಪಟ್ಟ ರಾಜಹಂಸಗಳಿಂದ ಮನೋಹರವಾಗಿತ್ತು ; ಮಾನಸ ಸರೋವರವನ್ನೂ ಗೆದ್ದಂತಿತ್ತು ; ಉನ್ನತವಾದ ದುಂಬಿಗಳ ಸಮೂಹದಿಂದ ಸಮೀಚೀನವಾಗಿತ್ತು ; ತನ್ನ ತುಂಬ ಹರಡಿರುವ ಕಮಲಗಳ ಧೂಳಿಯಿಂದ ಕೂಡಿದ ಗಾಳಿಯಿಂದ

ವ॥ ಅಂತುಮಲ್ಲದೆಯುಂ

ಮ॥ ಸ್ರ॥ ಕಳಹಂಸೀ ಚಾರುಚಂಚೂದಳಿತ ಗಳಿತ ಬಾಲಾಬ್ಜಬೀಜಾಳಿ ಮುಕ್ತಾ
ಕಳಿತಂ ಷಟ್ಪಾದಪಕ್ಷಾಹತಿ ಪತಿತಪಯೋರುಟ್ಪರಾಗಾರುಣಶ್ರೀ
ವಿಳದುದ್ಯದ್ವರ್ಣಕಂ ಕೀದಳಿತ ಕಮಳಚಿತ್ರಂ ಪ್ರವಿಷ್ಟಾರ್ಕರೋಚಿ
ರ್ಜ್ವಲಿತಂ ಕಾಸಾರಮೊಂದಾರತಿ ರತಿರಚಿತಂ ಕಂತುಗೆಂಬಂತೆ ತೋರ್ಕುಂ ೬೨

ಮ॥ ಸರದೊಳ್ಪಾರ್ವೊಳಿವರ್ಕಮಂಡಳಮುಮಲ್ಲೊಕ್ಕಿರ್ದತೀರಕ್ಷಮಾ
ಜರಜಃಪೂರಿತ ಪುಷ್ಪಬೃಂದಮುಮದೇಂ ಚೆಲ್ವಾಯ್ತೊ ತತ್ಪಂಕಜಾ
ಕರಚಾರುತ್ವಕೆ ಮೆಚ್ಚಿ ತೂಗೆ ಶಿರಮಂ ಮೇಲಂಬರಶ್ರೀಯ ಸೀಂ
ದರ ಸೀಮಂತದ ರತ್ನಮಂ ಮುಡಿಯ ಪುಷ್ಪವ್ರಾತಮೊಕ್ಕಿದದಿಂ ೬೩

ಕೂಡಿತ್ತು ; ಹೂವು ಮತ್ತು ನೀರು (ಪುಷ್ಪ+ಕ) ಗಳಿಂದ ಕೂಡಿತ್ತು ; ವೃತ್ತಕುಚದಂತೆ ಇರುವ ಚಕ್ರವಾಕಪಕ್ಷಿಗಳಿಂದ ಅಲಂಕಾರಗೊಂಡಿತ್ತು ; ಮಂಗಳಕರವೂ ಸೌಮ್ಯವಾದವುಗಳೂ ಆದ ಪಕ್ಷಿ (ಕವಿ)ಗಳಿಂದ ಕೂಡಿತ್ತು. ಶುಭ್ರವಾದ ಮೀನುಗಳಿಂದ ಎಷ್ಟು ಮನೋಹರವಾಗಿತ್ತು ! ಅಂಬರದವೊಲ್ (ಅಂಬರಪರವಾದ ಅರ್ಥ) ಸುತ್ತಲೂ ವ್ಯಾಪಿಸಿರುವ ಚಂದ್ರ (ರಾಜ) ಮತ್ತು ಸೂರ್ಯ (ಹಂಸ) ಗಳಿಂದ ಮನೋಹರವಾಗಿದೆ ; ಮಾನಸ ಸರೋವರವನ್ನು (ತನ್ನ ವೈಶಾಲ್ಯದಿಂದ) ಜಯಿಸಿದೆ. ಶ್ರೇಷ್ಠವಾದ ಭ್ರಮರಗಳ ಗುಂಪಿನ ಝೇಂಕಾರರವದಿಂದ ಆಸಕ್ತವಾಗಿದೆ ; ಹರಡಿರುವ ಕಮಲಗಳ ರಜಸ್ಸಿನ ಪರಿಮಳದಿಂದ ಕೂಡಿದ ಗಾಳಿಯಿಂದ ಕೂಡಿದೆ ; ಪುಷ್ಪಕವೆಂಬ ದೇವಯಾನ ವಿಮಾನದಿಂದ ಕೂಡಿದೆ ; ಶ್ರೇಷ್ಠವಾದ ಮೋಡಗಳ ಸಾಲುಗಳಿಂದ ಶೋಭೆಗೊಂಡಿದೆ ; ಮಂಗಳಸಮೇತವಾದ ಅಂಗಾರಕ ಗ್ರಹದಿಂದ, ಸೌಮ್ಯ ಅಂದರೆ ಬುಧ, ಕವಿ ಎಂದರೆ ಶುಕ್ರನಿಂದ ಕೂಡಿದೆ.
ವ|| ಅದೂ ಅಲ್ಲದೆ, ೬೨. ಆ ಸರೋವರವು ಮನ್ಮಥನಿಗಾಗಿ ರತಿಯು ರಚಿಸಿದ ಆರತಿಯಂತೆ ಕಾಣಿಸುತ್ತಿತ್ತು. ಹೆಣ್ಣುಹಂಸೆಗಳ ಕೊಕ್ಕಿನ ಹತಿಯಿಂದ ಉದುರಿದ ಕಮಲದ ಬೀಜಗಳೇ ಮುತ್ತು. ದುಂಬಿಗಳ ರೆಕ್ಕೆಗಳ ಹೊಡೆತದಿಂದ ಉದುರಿದ ತಾವರೆಯ ಪರಾಗಗಳೇ ಬಣ್ಣದ ರೇಖೆಗಳು. ಅರಳಿದ ತಾವರೆಗಳೇ ಆರತಿಯಲ್ಲಿ ಒರೆದ ಹೂಗಳು. ಸರಸ್ಸಿನಲ್ಲಿ ಪ್ರತಿ ಬಿಂಬಿಸಿದ ಸೂರ್ಯನ ಕಿರಣವೇ ಆರತಿಯ ಜ್ಯೋತಿ. (ರು) ೬೩. ಸರಸ್ಸಿನಲ್ಲಿ ಪ್ರತಿ ಬಿಂಬಿಸಿದ ಸೂರ್ಯಮಂಡಲವೂ ತೀರತರುಗಳಿಂದ ಅದರಲ್ಲಿ ಉದುರಿದ ಪುಷ್ಪರಾಶಿಯೂ ಅದೇನು ಚೆಲುವನ್ನು ಪಡೆಯಿತೊ ! ಆ ಸರಸ್ಸಿನ ಚೆಲುವಿಗೆ ಮೆಚ್ಚಿ ಗಗನಲಕ್ಷ್ಮಿಯು ತಲೆದೂಗಲಾಗಿ ಅವಳ ಸೀಮಂತರತ್ನವೂ ಮುಡಿಯಲ್ಲಿದ್ದ ಹೂಗಳ ರಾಶಿಯೂ ಆ

ಮ॥ಸ್ರ॥ ರತಿಕಾಮರ್ಮಲ್ಲಿಕಾಮಾಲತಿಗಳ ಲತಿಕಾಗೇಹದೊಳ್ತಾಳ್ದಮೋಘಂ
ರತಿಕೇಳಿಶ್ರಾಂತಿಯಂ ತತ್ಸರದೊಳೆ ಜಳಕಂಬೊಕ್ಕವರ್ಪೋಗೆ ಸೂಸಿ
ತ್ತು ತದೀಯಾಂಗಾಂಗರಾಗಂ ಪಿರಿದೆನೆ ಕರಮೊಪ್ಪಿತ್ತು ಕಂಜಾತಕಲ್ಹಾ
ರತಟಕ್ಷ್ಮಾಜಾತಪುಷ್ಪವ್ರಜರಜಮಳಿಪಕ್ಷಾನಿಲೋದ್ಭೂತಮೆತ್ತಂ ೬೪

ಕಂ॥ ನಿಜಪತಿಯಭಿಧಾನಮನೀ
ದ್ವಿಜನಾಂತಃದು ಮಾಣದೆಂದು ಹಂಸಂ[1]ಗಾನೀ
ರಜಿನಿ ಪದೆದಿತ್ತ ಮುಕ್ತಾ
ಪ್ರಜಮೆನೆ ತತ್ತನುವೊಳಿಡಿದ ಜಲಕಣಮೆಸೆಗುಂ ೬೫

ನೀರಕ್ಷೀರಪರೀಕ್ಷಾ
ಧೀರತೆಗಾನಲ್ಲದಿಲ್ಲೆನುತೆ ಮುಡಿಗಿಕ್ಕಿ
ತ್ತಾ ರಾಜಹಂಸನೆನೆ ಖಗ
ಪಾರದೆ ಗಱಿಗೆದಱೆ ಜಱಿದ ಗಱಿ ನೆಱೆ ಮೆಱೆಗುಂ ೬೬

ಮೊರೆವಳಿನಿಯರವಮಿಷದಿಂ
ದರವಿಂದಿನಿ ಪಾಡೆ ಮೆಚ್ಚಿ ಮುತ್ತಿನಸರಮಂ
ಸರಸಿ ತೆರೆಗೈಯೊಳೀವಂ
ತಿರೆ ಜಲಕಣಮಾಲೆ ಮೇಲದೇಂ ರಂಜಿಸಿತೋ ೬೭

ಸರೋವರದಲ್ಲಿ ಬಿದ್ದವೋ ಎಂಬಂತೆ ತೋರಿತು ! (ರಂ) ೬೪. ರತಿ ಮನ್ಮಥರು ಮಲ್ಲಿಗೆ ಮತ್ತು ಮಾಲತಿಗಳ ಪುಷ್ಪವಾಟಿಕೆಗಳಲ್ಲಿ ರತಿಕ್ರೀಡೆಯಾಡಿ, ಆ ಸರೋವರದಲ್ಲಿ ಸ್ನಾನವನ್ನು ಮಾಡಿ ಹೊರಟು ಹೋಗಲಾಗಿ, ಅವರ ಅಂಗಾಂಗಗಳಿಗೆ ತೊಡೆದಿದ್ದ ಕುಂಕುಮ ಗಂಧಾದಿ ಅಂಗರಾಗದ್ರ ಹೆಚ್ಚಾಗಿ ಬಿದ್ದಿತ್ತೋ ಎನ್ನುವ ಹಾಗೆ ಅಳಿಗಳ ರೆಕ್ಕೆಗಳ ಹೊಡೆತದಿಂದ ಕಮಲ ಕನ್ನೈದಿಲೆಗಳಲ್ಲಿರುವ ರಜವೂ, ಸರೋವರತೀರದಲ್ಲಿ ಬೆಳೆದುನಿಂತ ಗಿಡಮರಗಳಲ್ಲಿರುವ ಹೂವುಗಳ ಧೂಳಿಯೂ ಎಲ್ಲ ಕಡೆಗೂ ಪೂರ್ಣವಾಗಿ ಒಪ್ಪಿತ್ತು. ೬೫. ತನ್ನ ನಿಜಪತಿಯಾದ ಸೂರ್ಯನ ಹೆಸರನ್ನು ಈ ಹಂಸಪಕ್ಷಿಯು ತಪ್ಪದೆ ಹೊಂದಿತು ಎಂದು ಆ ಸರೋಜಿನಿಯು ಸಂತೋಷದಿಂದ ಕೊಟ್ಟ ಮುತ್ತಿನಸರವೋ ಎನ್ನುವಂತೆ ಆ ಹಂಸದ ಮೈಮೇಲಿರುವ ನೀರಿನ ಕಣಗಳು ಪ್ರಕಾಶಿಸುತ್ತಿದ್ದವು. ೬೬. ನೀರು ಮತ್ತು ಹಾಲಿನ ಪರೀಕ್ಷೆಯ ಬುದ್ಧಿವಂತಿಕೆಗೆ ನಾನಲ್ಲದೆ ಇನ್ನು ಬೇರೆ ಯಾರೂ ಅಲ್ಲ ಎಂದು ಪಕ್ಷಿಸಮೂಹಕ್ಕೆ ಆ ರಾಜಹಂಸವು ಮುಂಡಿಗೆ ಇಕ್ಕಿತೋ ಎನ್ನುವ ಹಾಗೆ ಗರಿಗೆದರಲಾಗಿ, ಕೆದರಿದ ಗರಿಗಳು ಶೋಭಿಸುತ್ತಿದ್ದವು. ೬೭. ಹೆಣ್ಣುದುಂಬಿಯ ಝೇಂಕಾರವ್ಯಾಜದಿಂದ (ನೆಪದಿಂದ) ಕಮಲಿನಿಯೆಂಬ ಸ್ತ್ರೀಯು ಹಾಡಲು, ಸರಸಿ ಎಂಬ ಸ್ತ್ರೀಯು ಮೆಚ್ಚಿ ತನ್ನ ತೆರೆಗಳೆಂಬ ಕೈಗಳಿಂದ ಮುತ್ತಿನ ಸರವನ್ನು ಕೊಡುವ

---

1 ಟಿಪ್ಪಣಿ : ಸೂರ್ಯನಿಗೆ ಹಂಸನೆಂಬ ಹೆಸರಿದೆ.

ಅಂಬುಪ್ರತಿಬಿಂಬಿತ ರವಿ
ಬಿಂಬದೊಳೊಡವೆರೆಯಲೆಂದು ಕಮಳಿನಿ ಘನಮೋ
ಹಂಬಡೆದು ಮುಳುಗಿದಂತೆ ನಿ
ಲುಂಬಿದ ತೆರೆಪೊಯ್ಯೆ ಮುಳುಗುತುಂ ಮೋಹಿಸುಗುಂ ೬೮

ಆಱಡಿಯೆಱಗಿದೊಡೆ ಕೆಲಂ
ಜಾಱುತೆ ತರುಣಾಂಬುಜಂ ತರಂಗಾಹತಿಯಿಂ
ತೋಱಿದುದಿನಿಯಂ ಚುಂಬಿಸೆ
ನೀಱಿ ಮೊಗಂದಿಱುಪುವಂದಮಂ ಮುಳಿಸಿಂದಂ ೬೯

ಅಲರ್ದ ಮೊಗದಿಂದೆ ನಱುದಂ
ಬುಲ ಮುಗುಳ್ದಳ್ನಳಿನಿ ಪಚ್ಚೆವಡಿಗದೊಳೆಂಬಂ
ತಲರ್ದಲರಿಂದುಗುತಂ ಕೀ
ಳೆಲೆಯೊಳ್ಮಧುಮಿಶ್ರಿತದ್ರಜಂ ರಂಜಿಸುಗುಂ ೭೦

ದಳಿತಾಬ್ಜದಿಂದಮೊಂದೊಂ
ದಳಿಗಳ್ನೆಗೆನೆಗೆದು ಮತ್ತಮೆಱಗುತ್ತಿರೆ ತ
ನ್ನಳಿನಿ ಹರಿನೀಲದಿಂ ಕೆಂ
ದಳದೊಳ್ ತಿರಿಕಲ್ಲನಾಡುವಂತೆವೊಲೆಸೆಗುಂ ೭೧

ಹಾಗಿರಲು ಜಲಕಣಗಳ ಸಮೂಹವು ಆ ಸರೋವರದ ಮೇಲೆ ಅದೇನು ರಂಜಿಸಿತೋ ! ೬೮. ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬದಲ್ಲಿ ಬೆರೆಯಬೇಕೆಂದು ಕಮಲಿನಿಯು ಅತ್ಯಂತಮೋಹವನ್ನು ಹೊಂದಿ ಮುಳುಗಿದ ಹಾಗೆ, ತೆರೆ ಹೊಡೆಯಲು ಬಾಗಿ ಮುಳುಗುತ್ತ ಮೋಹಗೊಳಿಸುತ್ತಿತ್ತು. ೬೯. ಭ್ರಮರವು ಎರಗಲಾಗಿ, ಕೆಂಪು ಕಮಲವು ತರಂಗಗಳ ಹೊಡೆತದಿಂದ ಪಕ್ಕಕ್ಕೆ ಜಾರಿಕೊಳ್ಳುತ್ತ ಇನಿಯನು ಮುದ್ದು ಕೊಡುವಾಗ ಕೋಪದಿಂದ ಪಕ್ಕಕ್ಕೆ ಮುಖ ತಿರುಗಿಸುವ ಸ್ತ್ರೀಯಳ ರೀತಿಯನ್ನು ತೋರಿಸುತ್ತಿತ್ತು. ೭೦. ನಳಿನಿಯೆಂಬ ಸ್ತ್ರೀಯು ಎಲೆಅಡಿಕೆಯನ್ನು ಹಾಕಿಕೊಂಡು ಪಚ್ಚೆ ಮಣಿಯಿಂದ ಮಾಡಿದ ಉಗುಳುಪಾತ್ರೆಯಲ್ಲಿ ತನ್ನ ನರುದಂಬುಲವನ್ನು ಅರಳಿದ ಮುಖದಿಂದ ಉಗುಳಿದಳೋ ಎನ್ನುವಂತೆ ಅರಳಿದ ತಾವರೆಯಿಂದ ಕೆಳಗಿನ ತಾವರೆಯ ಎಲೆಯಲ್ಲಿ ಬಿದ್ದ ಮಕರಂದದಿಂದ ಕೂಡಿದ ಕೆಂಪುಧೂಳು ಪ್ರಕಾಶಿಸುತ್ತಿತ್ತು. ೭೧. ಅರಳಿದ ಕಮಲದಿಂದ ಒಂದೊಂದಾಗಿ ದುಂಬಿಗಳು ನೆಗೆನೆಗೆದು ಮತ್ತೆ ಮತ್ತೆ ಎರಗುತ್ತಿರಲು, ಆ ಕಮಲಿನಿಯು ಕೆಂಪಾದ ಕೈಗಳಿಂದ ಇಂದ್ರನೀಲಮಣಿಯ ಅಣೆಕಲ್ಲು

ವ॥ ಮತ್ತಮಾ ಕಾಸಾರದಲ್ಲಿ

ಚಂ॥ ಕುವಳಯ ಕುಟ್ಮಳಾವಳಿಯ ಪೆರ್ಗಳಿಯಂ ನೆಗೆದೇಱಿ ಲಾಗಿಸು
ತ್ತೆ ವನಜವಲ್ಲರೀ ನಿಬಿಡ ಕಂಟಕಸೂಚಿ ನಿಬದ್ಧಯಂತ್ರದೊ
ಳ್ತವೆ ನುಸುಳ್ದೇಱಿ ಪಾಸೆವಿಳೆಯೊಳ್ಪರಿದಾಡಿ ತರಂಗಸಂಘಸಂ
ಭವರವವಾದ್ಯಕಾಡಿದುದು ಕೂಡೆ ಝಷಂ ಪೊಸಡೊಂಬನೆಂಬಿನಂ ೭೨

ತೊರೆದ ಪಯೋಧರಂ ನವಮರಂದ ರಸಾಮೃತ ಪೂರ್ಣಕುಟ್ಮಳಂ
ಪರಿಯದೆ ನಿಂದ ತುಂಬಿ ಸೊಡರ್ವಕ್ಕಿನ ಬೊಟ್ಟು ಫಲಾಶವಾಸವಿ
ಸ್ಫುರಿತ ಮರಾಳನೊಂದು ಶಿಶುವಾಗಿರೆ ಬಾಣತಿಯಂತೆ ಕಣ್ಗದೇಂ
ಸುರುಚಿರವಾಯ್ತೊ ನೀರಜಿನಿ ನೈಜರಜೋರಜನೀವಿರಾಜಿತಂ ೭೩

ಮ॥ ಜಗಮಂ ಪುಟ್ಟಿಪನೆನ್ನ ಸೂನು ಬುಧರಂತಲ್ತೆನ್ನದಿರ್ಕೆನ್ನವೊ
ಲ್ಜಗದೊಳ್ಪೂರ್ಣರಜೋಗುಣಾನ್ವಿತನದಂತಿರ್ಕಾತನಂ ಶೂಲಿ ಸು
ಮ್ಮಗೆ ಕೊಂದಂ ಗಡ ನೋಡಿಮೆಂದಜಕಪಾಲಂಬೊತ್ತು ಪೇಳ್ವಂತೆ ಹಂ
ಸ[1]ಗತಾಂಭೋಜಮದೊಪ್ಪಿದತ್ತು ಮಧುಬಾಷ್ಪಾಳಿಸ್ವನಾರ್ತಸ್ವರಂ ೭೪

ಗಳನ್ನು ಆಡುವಂತೆ ಶೋಭಿಸುತ್ತಿತ್ತು. ವ॥ ಮತ್ತೂ ಆ ಸರೋವರದಲ್ಲಿ, ೭೨. ಒಂದು ಮೀನು ನೈದಿಲೆಯ ಮೊಗ್ಗುಗಳ ದೊಡ್ಡ ಗಣೆಯ ಮೇಲೆ ಹಾರಿ ಹತ್ತಿ ಲಾಗಹೊಡೆಯುತ್ತ, ಕಮಲದ ಒತ್ತೊತ್ತಾದ ಬಳ್ಳಿಗಳೆಂಬ ಸೂಜಿಗಳಿಂದ ಕಟ್ಟಿದ ಯಂತ್ರದಲ್ಲಿ ನುಸುಳಿ ಹತ್ತಿ, ಹಾವಸೆ ಬೆಳೆದಿರುವ ದಾರಿಯಲ್ಲಿ ಹರಿದಾಡಿ, ತರಂಗಗಳ ಪರಸ್ಪರ ಬಡಿತವೆಂಬ ವಾದ್ಯ ರವಕ್ಕೆ ಕೂಡಿಕೊಂಡು ನೂತನ ಡೊಂಬರನೋ ಎನ್ನುವ ಹಾಗೆ ಆಡಿತು. ೭೩. ಕಮಲಿನಿಯು ತನ್ನ ಎಲೆಯಲ್ಲಿ ಕುಳಿತ ಹಂಸವೆಂಬ ಮಗುವನ್ನೆತ್ತಿಕೊಂಡಿರುವ ಬಾಣಂತಿಯಂತೆ ಗೋಚರಿಸಿತು. ಮಕರಂದಪೂರ್ಣವಾದ ತಾವರೆಯು ಮೊಗ್ಗೇ ಮೇಲೆ ಅಲ್ಲಾಡದೆ ಕುಳಿತಿದ್ದ ದುಂಬಿಯೇ ದೀಪದ ಕರಕಿನ ಕಪ್ಪು ಬಟ್ಟು, ಹೂವಿನ ಧೂಳಿಯೇ ಸುತ್ತ ಹರಡಿದ ಕತ್ತಲೇ. (ರಂ) ೭೪. ಈ ಜಗತ್ತನ್ನು ಎನ್ನ ಮಗನು ಹುಟ್ಟಿಸುವವನು. ವಿದ್ವಾಂಸರು ಹಾಗಲ್ಲವೆನ್ನಲಾರರು. ನನ್ನ ಹಾಗೆ ಪೂರ್ಣರಜೋಗುಣ ವಿಶಿಷ್ಟನಾದವನು ನನ್ನ ಮಗ ಬ್ರಹ್ಮನು. ಆದಿರಲಿ; ಆತನನ್ನು ಪರಮೇಶ್ವರನು ಸುಮ್ಮನೆ ಕೊಂದನು, ನೋಡಿರಿ ಎಂದು ಬ್ರಹ್ಮನ ಕಪಾಲವನ್ನು ಹಿಡಿದು ಹೇಳುವ ಹಾಗೆ ಹಂಸವನ್ನು ಧರಿಸಿ ಮಕರಂದ ವೆಂಬ ಕಣ್ಣೀರಿನಿಂದಲೂ, ಅಳಿಗಳ ಝೇಂಕಾರರವವೆಂಬ ದುಃಖಧ್ವನಿಯಿಂದಲೂ ಕಮಲ

1 ಟಿಪ್ಪಣಿ : ಹಂಸವೇ ಬ್ರಹ್ಮನ ಕಪಾಲವೆಂದು ಆಶಯ.

ಕಂ॥ ತೀರಮಹೀರುಹನಿಕರಂ
ನೀರೊಳ್ ಪ್ರತಿಬಿಂಬಿಸಿದೊಡೆ ಪೊಲ್ತುದು ತತ್ಕಾ
ಸಾರಂ ಬೃಂದಾರಕತರು
ವಾರಮನೊಳಕೊಂಡು ಪೆಂಪುವಡೆದಂಬುಧಿಯಂ ೭೫

ಮ॥ ನಳಿನೀನಾಳಮದೆಂಬ ಕಂಬಮನೆ ಕಟ್ಟುತ್ತಲ್ಲಿ ಚಕ್ರಂಗಳೆಂ
ಬ ಲಸತ್ಸಂಗ್ರಹಣಂಗಳಂ ಪಿಡಿದು ಮೇಲೆತ್ತುತ್ತೆ ತತ್ಸೀಕರಾ
ವಳಿ ಘರ್ಮಾಂಬುವನಾಂತು ಪಂಕಜರಜೋಮೃದ್ಧೂಳಿಯುಕ್ತಂ ಸರ
ಸ್ಥಳದೊಳ್ಮಾರನ ಮಲ್ಲನಂತೆ ಸುಳಿದಂ ಮೈದೋರಿ ಮಂದಾನಿಲಂ ೭೬

ವ॥ ಮತ್ತಮಾ ಪುರದ ಬಹಿರ್ವನಂ ದರದಳಿತ ಕುಸುಮ ವಿಸರ ವಿಳಸಿತ ಪರಾಗ ಪಟಲ ಸುರಭಿ ಲಲಿತ ಲತಾಲಿಂಗಿತ ತರುಣರಸಾಲತರುನಿಕರದೆಳೆಗೊಂಬಿನೊಳ್ ಕುಳ್ಳಿರ್ದಂಕುರಮನವಲೋಕಿಸಿ ಭೋಂಕನೆ ತುಡುಂಕಿ ನಿಜಚಂಚುವಿಂದುಡಿದು ಕರ್ದುಂಕೆ ಜಗುಳ್ವ ರಸಧಾರೆಯಂ ಮಗುಳ್ದು ಸೇವಿಸಿ ಚಂಚತ್ಪಂಚಶರನ ಬಂಚರದಂತೆ ಮುಂಚಿ ಪಂಚಮದಿಂಚರಂ ಪಂಚಮೆನೆ ನೆಗಳ್ದು ಸಂಗಡಿಸಿದ ಕೆಂಗಣ್ಣಕ್ಕಿಗಳಿಂ

ಮತ್ತಮಲ್ಲಿ ಸಲ್ಲೀಲೆಯಿಂ ನಲ್ಲಳೊಡನೆ ಸುಸಿಲೆಸಗಿ ಬಳಲ್ದು ಬಾಯಾರಿ ಕಟ್ಟಿದಿರೊಳ್ ತೊಟ್ಟ

ವೊಂದು ಕಾಣಿಸುತ್ತಿತ್ತು. ೭೫. ತೀರದಲ್ಲಿರುವ ಗಿಡಗಳ ಪ್ರತಿಬಿಂಬವು ನೀರಿನಲ್ಲಿ ಪ್ರತಿಫಲಿಸಲು ಆ ಸರೋವರವು ಕಲ್ಪವೃಕ್ಷಾದಿಗಳಿಂದ ಶೋಭಿಸುವ ಸಮುದ್ರವನ್ನು ಹೋಲುತ್ತಿತ್ತು. ೭೬. ಕಮಲದನಾಳವೆಂಬ ಕಂಬವನ್ನು ಕಟ್ಟಿ, ಚಕ್ರವಾಕಪಕ್ಷಿಗಳೆಂಬ ಇನ್ನಿತರ ಬಲಸಂವರ್ಧನೆಗಾಗಿ ಬಳಸುವ ವ್ಯಾಯಾಮಸಾಧನಗಳನ್ನು ಹಿಡಿದು, ಮೇಲಕ್ಕೆ ತ್ತುತ್ತೆ ವ್ಯಾಯಾಮ ಮಾಡಿ, ಆ ಸರೋವರದ ಸೀಕರಗಳೆಂಬ ಬೆವರಿನ ಕಣಗಳನ್ನು ಮೈಯಲ್ಲಿ ಹೊಂದಿ, ಕಮಲದ ರಜವೆಂಬ ಕೆಮ್ಮಣ್ಣ ಮೈಯಲ್ಲಿ ಹೊಂದಿ ಆ ಸರೋವರದಲ್ಲಿ ಮನ್ಮಥನ ಜಟ್ಟಿಯ ಹಾಗೆ ಮಂದಮಾರುತನು ಮೈದೋರಿ ಸುಳಿದನು. ವ॥ ಮತ್ತು ಆ ಪಟ್ಟಣದ ಬಹಿರುದ್ಯಾನವನದಲ್ಲಿ ಪೂರ್ಣವಾಗಿ ಅರಳಿರುವ ಹೂವುಗಳ ಸಮೂಹದಲ್ಲಿರುವ ಶ್ರೇಷ್ಠವಾದ ಪರಾಗವೊತ್ತದ ಸುಗಂಧದಿಂದ ಕೂಡಿದ ಮನೋಹರವಾದ ಲತೆಗಳು ಸಿಹಿಮಾವಿನ ಮರಗಳ ಸಮೂಹವನ್ನು ಅಪ್ಪಿದ್ದವು. ಅವುಗಳ ಸೆಳೆಗೊಂಬಿನಲ್ಲಿ ಕುಳಿತು, ಆ ಮರದ ಚಿಗುರುಗಳನ್ನು ನೋಡಿ ಒಮ್ಮೆಲೆ ಅವುಗಳ ಮೇಲೆ ಬಿದ್ದು ತಮ್ಮ ಚಂಚುವಿನಿಂದ ಕುಕ್ಕುತ್ತಿರುವಾಗ ಸೋರುವ ಚಿಗುರಿನ ರಸಧಾರೆಯನ್ನು ಪುನಃ ಪುನಃ ಕುಡಿದು ಪ್ರಕಾಶಮಾನವಾದ ಮನ್ಮಥನ ವಂದಿಮಾಗಧರಂತೆ ಉಚ್ಚಸ್ವರದಿಂದ ಪಂಚಮಸ್ವರವನ್ನು ಮನೋಹರವಾಗಿ ಹಾಡುವ ಗುಂಪಾದ ಕೋಗಿಲೆಗಳಿಂದ ; ಮತ್ತು ಅಲ್ಲಿ ಸಂಭೋಗಿಸಿ ಬಳಲಿ ಬಾಯಾರಿ ನೇರವಾಗಿ ಎದುರಿನಲ್ಲಿ ಕೊಟ್ಟನೆ ಗಾಳಿಯು ಬೀಸಲು ಆ ಕಾರಣದಿಂದ

ನೆಲರಲೆಯೆ ಸಾರೆವಂದು ಸೆಳೆಗೊಂಬಿನೊಳಿಂಬುವಡೆದ ತನಿವಣ್ಣಂ ಮನವಾರೆ ನೋಡಿ ಸಂತಸಂ ಮಿಕ್ಕು ಪೊಕ್ಕು ಪಕ್ಕದಿಂದಪ್ಪಿ ಮಿಂಚುವ ಚಂಚುವಿಂ ಸೆಳೆದು ಸೀಳ್ದು ಗಳಿಲನೆ ಗಳಿಯಿಪ ರಸಾಸಾರಮಂ ಮನೋರಮಣನಿನಿಯಳ ಬಿಂಬಾಧರರಸಮಂ ಸವಿವಂತೆ ಸವಿದು ಚೀತ್ಕಾರಂ ಪೊಣ್ಮೆ ತನ್ನ ನಚ್ಚಿನ ನಲ್ಲಳಂ ಗಱಿಸನ್ನೆಯಿಂ ಕೆಲಕ್ಕೆ ಕರೆದಳ್ಕಱಿಂ ಮುಕ್ಕುಳಿಸಿ ಚಂಚುಗೂಡಿ ಗಾಡಿಯಿಂದೆಱೆದವಳ್ಗೂಡಿ ಕುಸುಮಪರಾಗವೆಂಬಂಗರಾಗಮಂ ತಳೆದು ಮುಂದೆ ಮಂದಾನಿಲವಿನೊಗೆತಂದ ಚೆಂದಳಿರ್ದುರುಗಲ್ಸೀಗುರಿಯಾಗೆ ಕೆಲದೊಳ್ ಅಲರ್ವಕ್ಕಿಗಳಿನೊಲೆವ ರಸಾಲಲತಾಸರಲಶಾಖಾಗ್ರದೊಳ್ ತೂಗುವ ಪೂಗುಡಿ ಧವಳಚಾಮರಮೆನಿಸೆ ಪಾಡುವ ಪರಮೆದುಱಿಗಲ ಸರಸರವ ಸಂಗೀತಮಿಂಬುವಡೆಯೆ ಕಳಕಂಠನ ಕಂಠನಿನದಂ ವಂದಿಧ್ವನಿಯಂತೆಸೆಯೆ ನಟ್ಟಗೊಂಬಿನ ತುಟ್ಟತುದಿಯೊಳಲರ್ವುಡಿ ನೆಗೆದು ಮಂದೈಸಿ ಮಂಡಳಿಸಿ ಧವಳಾತಪತ್ರಲಕ್ಷ್ಮಿಯಂ ತಳೆಯೆ ರಾಜಶುಕನಾಮಕ್ಕಿದುಚಿತಮೆಂಬಂತೆ ಮೆರೆದು ಸೋಜಿಗಮೆನೆ ರಾಜಿಸುವ ರಾಜಶುಕಸಮಾಜದಿಂ

ಮತ್ತಮಲ್ಲಿ ಸಲ್ಲೀಲೆಯಿಂ ಮೆಲ್ಲನಲೆವ ಮೆಲ್ಲೆಲರಿಂದುಳ್ಕಲರ್ದ ಮಲ್ಲಿಗೆಯ ಮಕರಂದ

ಹತ್ತಿರಕ್ಕೆ ಬಂದ ಸೆಳೆಗೊಂಬಿನಲ್ಲಿ ದಪ್ಪನಾಗಿ ಬೆಳೆದ ರಸತುಂಬಿದ ಹಣ್ಣನ್ನು ಅತಿ ಸಂತೋಷದಿಂದ ನೋಡಿ, ತನ್ನ ಪಕ್ಕದಿಂದ ಆ ಹಣ್ಣನ್ನು ಅಪ್ಪಿಕೊಂಡು, ಮಿಂಚುತ್ತಿರುವ ತನ್ನ ಚುಂಚುವಿನಿಂದ ಮುಂದಕ್ಕೆಳೆದುಕೊಂಡು ಸೀಳಿ, ಗಳಿಲೆಂದು ಸೋರುತ್ತಿದ್ದ ರಸದ ಧಾರೆಯನ್ನು ಮನೋವಲ್ಲಭನು ಇನಿಯಳಾದವಳ ಬಿಂಬಾಧರವನ್ನು ರುಚಿ ನೋಡುವ ಹಾಗೆ ಕುಡಿದು, ಚೀತ್ಕಾರವು ಕಂಠದಿಂದ ಹೊರಹೊಮ್ಮಲು ಕಣ್ಮುಚ್ಚಿ, ತನ್ನ ನಚ್ಚಿನ ಹೆಂಡತಿಯನ್ನು ಗರಿಸನ್ನೆಯಿಂದ ಪಕ್ಕಕ್ಕೆ ಕರೆದು, ಪ್ರೀತಿಯಿಂದ ಚುಂಚಿನಲ್ಲಿ ಚಂಚನ್ನಿಟ್ಟು ಮುಕ್ಕುಳಿಸಿ ಸಂಭ್ರಮದಿಂದ ಕೊಟ್ಟು, ಅವಳೊಡನೆ ಕೂಡಿಕೊಂಡು ಹೂಧೂಳೆಂಬ ಅನುಲೇಪನವನ್ನು ಮೈಗೆ ಹಚ್ಚಿಕೊಂಡು, ಮುಂದಿರುವ ಕೆಂಪಾದ ತಳಿರು ಮಂದಮಾರುತನಿಂದ ಹತ್ತಿರಕ್ಕೆ ಬರಲು, ಅದೇ ಛತ್ರಿಯಂತಾಗಲು ಪಕ್ಕದಲ್ಲಿಯೇ ದುಂಬಿಗಳಿಂದ ಒಲೆದಾಡುತ್ತಿರುವ ಸೀಮಾಮರದ ಸೆಳೆಗೊಂಬಿನ ತುದಿಯಲ್ಲಿ ತೂಗಾಡುವ ಹೂವುಗಳ ಗುಚ್ಛವು ಬಿಳಿಯ ಚಾಮರದಂತಾಗಲು, ಹಾಡುತ್ತಿರುವ ದುಂಬಿಸಮೂಹದ ಸರಸವಾದ ಝೇಂಕಾರದ ಸಂಗೀತವು ಸುಶ್ರಾವ್ಯವಾಗಿರಲು, ಕೋಗಿಲೆಯ ಕಂಠಧ್ವನಿಯು ವಂದಿಮಾಗಧರ ಧ್ವನಿಯಂತೆ ಶೋಭಿಸಲು, ನೇರವಾದ ಕೊಂಬೆಯ ತುಟ್ಟತುದಿಯಲ್ಲಿ ಪುಷ್ಪಧೂಳು ಹಾರಿ ದಟ್ಟವಾಗಿ ಸುತ್ತಲೂ ಹಬ್ಬಿ, ಧವಳಛತ್ರಿಯ ಐಸಿರಿಯನ್ನು ಹೊಂದಲು, ರಾಜಶುಕನಾಮಕ್ಕೆ ಈ ರೀತಿಯು ಉಚಿತವೆನ್ನುವಂತೆ ಮೆರೆದು ಸೋಜಿಗಗೊಂಡು ಪ್ರಕಾಶಿಸುತ್ತಿರುವ ಅರಗಿಳಿಗಳ ಸಮೂಹದಿಂದ ; ಮತ್ತು ಅಲ್ಲಿ ಸಲ್ಲೀಲೆಯಿಂದ ಮೆಲ್ಲಮೆಲ್ಲನೆ ಬೀಸುವ ಮಂದಮಾರುತದಿಂದ ಚೆನ್ನಾಗಿ ಅರಳಿದ ಮಲ್ಲಿಗೆಹೂವಿನ ಮಕರಂದದೊಡನೆ ಕೂಡಿದ ಪರಾಗವೆಂಬ ಹೊಸ ಕೆಸರು ಮೈಗೆ ಮೆತ್ತಲಾಗಿ, ಅದನ್ನು ಬಾಯಿಂದ ಕಚ್ಚಿ ಕಳೆಯಲೆಂದು

ದೊಡೆವೆರೆದ ಪರಾಗಮೆಂಬ ಪೊಸಕೆಸರ್ವೆತ್ತೆ ಕರ್ಚ ಕಳೆಯಲೆಂದು ಸಂದಣಿಸಿ ಗೊಂದಣ ಗೊಂಡೈದುತರವಿಂದಾಕರದರವಿಂದ ಬೃಂದಮರಂದರಸದೊಳ್ಮುಳುಂಗಿ ಪಿಂಗದೆ ಪಸಿವಿನೆಸಕದಿಂ ದೆಸಳಕುಸುಂಕಱೊಳ್ಮುಸುಂಬಿಟ್ಟು ಮಿಸುಪ ಪೊಸಬಂಡನುಂಡು ಪಿಂಡುಗೊಂಡು ಮಂಡಳಿಸಿ ಕೆಲದ ಪುಂಡರೀಕದೊಳ್ ಮಂಡಿಸಿದ ಮರಾಳ ಮಂಡಳಿಗ ಕಾಂಡಜಳದ ಮಂಡಳಶಂಕೆಯಂ ಭೋಂಕನಾಗಿಸಿ ಮೇಗಣ್ಗೆ ಪಾಱಿಸಿ ಪರಕಲಿಸಿ ಪಾಡುವ ಪರಮೆವಱಿಗಳಿಂ

ಮತ್ತಂ ಜಾತಿಯೂಥಿಕಾ ಮಲ್ಲಿಕಾ ಮಾಲತೀ ಲತಾಮಂಟಪಂಗಳೊಳ್ ನೆರೆದು ಸೇದೆವಟ್ಟ ಕಾದಲರ ಸುಯ್ಯೆಲರ ನರುಗಂಪಿನೊಡವೆರೆದು ಸೊಂಪುಗಱಿವ ಚಂಪಕ ಮುಕುಳದೀಪಂಗಳನಲೆದು ಫಲಭಾರಮಂ ಪೊಱಲಾಱದೆ ನಿಂದು ಬಳ್ಕಿ ಬಸವಳಿವ ಬಾಲರಸಾಲಂಗಳ ಮಕರಂದ ಘರ್ಮಜಲಕಣಮನುದಿರ್ಚಿ ಮೈಸಾರ್ಚಿ ಸರಳಶಾಖೆಗಳಂ ಪೊತ್ತೆತ್ತಿ ಕುಸುಮವಿಸರ ಸುರಭಿರಜಮಂ ಕೊರಲ್ಕುಸಿವಿನಂ ಪೊತ್ತು ಪಿಂದುಗೊಂಡು ಬರ್ಪಿಂದಿಂದಿರಬೃಂದದ ಝೇಂಕಾರರವವ್ಯಾಜದಿಂ ಪೊಱಲಾಱದೆ ನರಳ್ದು ನಿಂದು ನಿಂದು ಬರ್ಪ ಮಂದಾನಿಲಂಗೆ ಕರುಣಿಸಿ ಕೈಗೊಟ್ಟಪ್ಪವೆಂಬಂತೆ ಕೆಂದಳಿರಂದಂಬೆತ್ತುದ್ದಗೊಂಬಿಂದೆಡ್ಡಮಾದ ನೇಕಾಶೋಕಾನೋಕಹಂಗಳಿಂ ಮತ್ತು ವಸಂತರಾಜಂ ವನಲಕ್ಷ್ಮಿಯೊಡನೆ ಸುಸಿಲೆಸಗಲೊಡನವಳ

ಒಗ್ಗಟ್ಟಿನಿಂದ ಗುಂಪಾಗಿ ಕೂಡುತ್ತ, ಸರೋವರದ ಕಮಲಗಳ ಸಮೂಹಗಳಲ್ಲಿರುವ ಮಕರಂದದ ರಸದಲ್ಲಿ ಮುಳುಗಿ, ಹಿಂಜರಿಯದೆ ಹಸಿವಿನ ಬಾಧೆಯಿಂದ ಎಸಳಿನ ಧೂಳಿಯಂತಿರುವ ಪಿಷ್ಟದಲ್ಲಿ ಮುಖವನ್ನಿಟ್ಟು, ಶೋಭಿಸುವ ಮಕರಂದವನ್ನು ಕುಡಿದು ಹಿಂಡು ಹಿಂಡಾಗಿ ಮಂಡಲಾಕಾರವಾಗಿ ಪಕ್ಕದ ಕಮಲದಲ್ಲಿ ಕುಳಿತಂಥ ಹಂಸಪಕ್ಷಿಗಳಿಗೆ ಒಮ್ಮಿಂದೊಮ್ಮೆಲೆ ಉಂಟಾದ ಮೋಡದ ಶಂಕೆಯನ್ನುಂಟುಮಾಡಿ, ಮೇಲಕ್ಕೆ ಅವನ್ನು ಹಾರಿಹೋಗುವಂತೆ ಮಾಡಿ, ಒಟ್ಟಾಗಿ ಝೇಂಕಾರ ಧ್ವನಿಮಾಡುವ ಮರಿದುಂಬಿಗಳಿಂದಲೂ ; ಮತ್ತು ಜಾಕಾಯಿಗಿಡ, ಕಾಡುಮಲ್ಲಿಗೆ, ಮಲ್ಲಿಗೆ, ಮಾಲತಿಗಳ ಬಳ್ಳಿಮನೆಗಳಲ್ಲಿ ಸಂಯೋಗಗೊಂಡು ಆಯಾಸಗೊಂಡ ಪ್ರೇಮಿಗಳ (ಪ್ರಿಯ ಮತ್ತು ಪ್ರಿಯಳ) ಶ್ವಾಸದ ಗಾಳಿಯ ಸುವಾಸನೆಯೊಡನೆ ಕೂಡಿ, ಚೆಲುವನ್ನುಂಟುಮಾಡುತ್ತಿರುವ ಸಂಪಗೆಯ ಮೊಗ್ಗುಗಳೆಂಬ ದೀಪಗಳ ಹತ್ತಿರ ಅಲೆದಾಡಿ, ಹಣ್ಣಿನ ಭಾರವನ್ನು ಹೊರಲಾರದೆ ನಿಂತು ಬಳುಕಿ ಆಯಾಸಗೊಂಡು ಎಳೆಯ ಸೀಮಾವಿನಮರದ ಮಕರಂದವೆಂಬ ಬೆವರಿನ ಹನಿಗಳನ್ನು ಸುರಿಸಿ ಮೈಚಾಚಿ ನಿಂತ ಸೆಳೆಗೊಂಬುಗಳನ್ನು ಹೊಂದಿ, ಹೊತ್ತು ಸೆಡೆದು ನಿಂತ ಹೂಗಳ ಸಮೂಹದ ಸೌರಭ್ಯದ ಧೂಳನ್ನು ಶಿರಬಾಗುವವರೆಗೂ ಹೊತ್ತು ಹಿಂಬಾಲಿಸಿ ಬರುತ್ತಿರುವ ದುಂಬಿಗಳ ಸಮೂಹದ ಝೇಂಕಾರದವದ ನೆವದಿಂದ, ಹೊರಲಾರದೆ ನರಳುತ್ತ ನಿಂತು ನಿಂತು ಬರುತ್ತಿರುವ ಮಂದಮಾರುತನಿಗೆ ಕರುಣೆದೋರಿ ಹಸ್ತಲಾಘವವನ್ನು ಕೊಡುವುದೋ ಎಂಬಂತೆ ಕೆಂಪುಚಿಗುರನ್ನು ಧರಿಸಿ ಟಿಸಿಲು ಕೊಂಬೆಗಳಿಂದ ಮನೋಹರವಾಗಿ ಕೆಂಪುಚಿಗುರನ್ನು ಹೊತ್ತುನಿಂತ ಅಶೋಕವೃಕ್ಷಗಳಿಂದಲೂ ಮತ್ತು ಚೈತ್ರರಾಜನು ಅವನ ಸಿರಿಯೆಂಬ ಸ್ತ್ರೀಯೊಡನೆ ನೆರೆಯಲಾಗಿ ಅವಳ ಉದ್ದವಾದ

ನಿಡುಮುಡಿಯಿಂ ಕುಚಕುಂಭದಿಂ ತನುಲತೆಯಿಂ ಸುರಿದು ಪಸರಿಸಿದ ಕುಸುಮವಿಸರ ಕುಂಕುಮರೇಣು ಘರ್ಮಜಲಕಣಂಗಳೆಂಬಂತೆ ತರುತರುಗಳ ಸೆಳೆಗೊಂಬುಗಳೊಂದೊಂದನೊರಸೆ ಸುತ್ತುಂ ಸೂಸಿ ಬಿಡದೆಲ್ಲೆಡೆಯೊಳ್ ಚೆಲ್ವಾದ ಲಲಿತ ಲತಾಂತ ಪರಾಗ ಮಕರಂದ ಸಂದೋಹದಿಂ ದಳಿತ ಧವಳಕುಸುಮವಿಸರದಿಂ ಕಳಕಂಠನ ಕಳಕಳಧ್ವನಿಯಿಂ ನಾಕಲೋಕದ ನಂದನಮಂ ನಗುವಂತೆ ನಳಿನಬಾಣನ ಕೇಳೀನಿಳಯಮೆಂಬಂತೆ ಬನಸಿರಿಯ ಬಿನದದೆಡೆಯಂತೆ ಚೈತ್ರರಾಜನ ಚಿತ್ರಶಾಲೆಯಂತೆ ಅಲರಂಬನ ಬಲದ ಗರುಡಿಯೆಂಬಂತೆ ಲತಾನರ್ತಕಿಯ ನರ್ತನಶಾಲೆಯಂತೆ ಕಲಕಂಠನ ಸಂಗೀತಭವನದಂತೆ ರಾಜಶುಕಂಗಳ ಭೋಜನಶಾಲೆಯಂತೆ ಮಧುಪಪಾಂಥಪ್ರಪಾಶಾಲೆಯಂತೆ ರಥಾಂಗಕಾಮುಕರ ರತಿಶಾಲೆಯಂತೆ ಮನೋಹರಮಾಗಿರ್ಪುದಂತುಮಲ್ಲದೆಯುಂ

ಕಂ॥ ಸುರತರುಯುತ ನಂದನಮಂ
ಸುರತರುಣಿಯರೆಳಸದಿನಿಯರೊಡನೆಳ್ತರುತಂ
ಸುರತರುಚಿದಾಳ್ದು ಘನಭಾ
ಸುರತರುತಳದಲ್ಲಿ ನೆರೆವರಾ ಉಪವನದೊಳ್ ೭೭

ಮುಡಿಯಿಂದ ಮತ್ತು ಕುಂಭದಂತಹ ಮೊಲೆಗಳಿಂದ, ಲತೆಯಂತಿರುವ ದೇಹದಿಂದ ಸುರಿದುವಾಪ್ತಗೊಂಡ, ಹೂಗಳ ಸಮೂಹ, ಕುಂಕುಮದ ಪುಡಿ, ಬೆವರಿನಹನಿಗಳೋ ಎಂಬಹಾಗೆ ಗಿಡಗಿಡಗಳ ಸೆಳೆಗೊಂಬುಗಳು ಒಂದರೊಡನೊಂದು ತಿಕ್ಕಾಡಿ, ಎಲ್ಲ ಕಡೆಗೂ ಪ್ರಸಾರಗೊಂಡು, ತಪ್ಪದೆ ಎಲ್ಲ ಕಡೆಗೂ ಚೆಲುವನ್ನುಂಟುಮಾಡಿದ ಲಲಿತವಾದ ಹೂವುಗಳ ಪರಾಗ ಮತ್ತು ಮಕರಂದ ಸಮೂಹದಿಂದಲೂ, ಅರಳಿದ ಬಿಳಿಯ ಪುಷ್ಪಸಮೂಹದಿಂದಲೂ, ಕೋಗಿಲೆಯ ಅವ್ಯಕ್ತಮಧುರವಾದ ಧ್ವನಿಯಿಂದಲೂ, ದೇವಲೋಕದ ನಂದನವನವನ್ನು ನೋಡಿ ನಗುವಹಾಗೆ, ಮನ್ಮಥನ ಕ್ರೀಡಾಭವನವೋ ಎನ್ನುವಂತೆ ಅರಣ್ಯಲಕ್ಷ್ಮಿಯ ವಿನೋದದ ಸ್ಥಾನವೋ ಎಂಬಂತೆ, ಚೈತ್ರರಾಜನ ಚಿತ್ರಗಳ ಶಾಲೆಯೋ ಎಂಬಂತೆ, ಮನ್ಮಥನು ಅಧಿಕ ಶಕ್ತಿಸಂಪಾದನೆಗಾಗಿ ಮಾಡಿದ ಗುರುಡಿಯ ಮನೆಯೋ ಎಂಬಂತೆ, ಲತೆಯೆಂಬ ನರ್ತಕಿಯ ನರ್ತನಮಾಡುವ ಶಾಲೆಯೋ ಎಂಬಂತೆ, ಕೋಗಿಲೆಯ ಸಂಗೀತಶಾಲೆಯೋ ಎಂಬಂತೆ, ರಾಜಶುಕಗಳ ಊಟದ ಮನೆಯೋ ಎಂಬಂತೆ, ದುಂಬಿಗಳೆಂಬ ದಾರಿಕಾರರ ಅರವಟ್ಟಿಗೆಯೋ ಎಂಬ ಹಾಗೆ ಚಕ್ರವಾಕಪಕ್ಷಿಗಳೆಂಬ ಕಾಮುಕರ ಸಂಭೋಗಗೃಹವೋ ಎಂಬ ಹಾಗೆ, ಆ ಧರ್ಮವತೀ ನಗರದ ನಂದನವು ಮನೋಹರವಾಗಿತ್ತು. ಇದೂ ಅಲ್ಲದೆ, ೭೭. ಕಲ್ಪವೃಕ್ಷದಿಂದ ಕೂಡಿದ ನಂದನವನವನ್ನು ದೇವತಾಸ್ತ್ರೀಯರು ಇಚ್ಛಿಸದೆ ತಮ್ಮ ತಮ್ಮ ಗಂಡಂದಿರೊಡನೆ ಹೊರಟುಬಂದು ಸುರತಕೇಳಿಯ ಅಭಿರುಚಿಗೊಂಡು ಆ ಉಪವನದ ಶ್ರೇಷ್ಠವೂ ಪ್ರಕಾಶಮಾನವೂ ಆದ ಗಿಡಗಳ ಬುಡದಲ್ಲಿ ಸಂಯೋಗಗೊಳ್ಳು

ವ॥ ಇಂತೊಪ್ಪುವಾ ಪುರೋಪವನಮಧ್ಯದಲ್ಲಿ

ಚಂ॥ ನಳಿನಪರಾಗರಂಗಮನೊಡರ್ಚಿ ಮರಂದರಸಾಭಿಷಿಕ್ತ ಭೂ
ತಳದೊಳೆ ಸಾರ್ಚಿ ಚಂಪಕದ ಕುಟ್ಮಳದೀಪಮನೊಕ್ಕ ಪುಷ್ಪಸಂ
ಕುಳಮನೆ ಪಾಸಿ ತೋರಣಮನಾಗಿಸಿ ಚೆಂದಳಿರಿಂದೆಲರ್ಪಿಕೀ
ಕಳರುತಿ ವಾದ್ಯಮಾಗೆ ಭಜಿಪಂ ಸಲೆ ಕಂತು ಲತಾಂತಲಿಂಗಮಂ ೭೮

ವ॥ ಮತ್ತಮಾ ವನಂ ವನಧಿಯಂತೆ ವಲ್ಲಕಿಯಂತೆ ವರಪ್ರವಾಳಮಂಡಿತಮುಂ ಸುತ್ರಾಮನಂತೆ ಸುಜನನಂತೆ ಸುಮನೋಮನೋಜ್ಞಮುಂ ಕಮಳದಂತೆ ಕಳಹಂಸನಂತೆ ಕಮಳಾಕರಾಭಿರಾಮಮುಂ ನೀರದಂತೆ ನಿಷಂಗದಂತೆ ನಿಬಿಡಶಿಳೀಮುಖಮುಂ ರಾಜಚಿತ್ತದಂತೆ ರಮಣೀಹೃದಯದಂತೆ ರಸಾಲಸಮುದಂಚಿತಮುಂ ವಿರಹಿಯಂತೆ ವಿಧಿವಾಹನದಂತೆ

ತ್ತಿದ್ದರು. ವ|| ಇಂತು ಶೋಭಿಸುವ ಆ ನಗರದ ಬಹಿರುದ್ಯಾನವನದ ಮಧ್ಯದಲ್ಲಿ ೭೮. ಮಕರಂದರಸದ ಸಾರಣೆಮಾಡಿದ ಭೂಮಿಯ ಮೇಲೆ ಕಮಲದ ಪರಾಗವೆಂಬ ಪುಡಿಯಿಂದ ರಂಗವಲ್ಲಿಯನ್ನು ಹಾಕಿ, ಸಂಪಿಗೆಯ ಮೊಗ್ಗುಗಳೆಂಬ ದೀಪವನ್ನು ಮುಡಿಸಿ, ಉದುರಿರುವ ಹೂವುಗಳನ್ನೇ ಹಾಸಿ, ಕೆಂಪಾದ ಚಿಗುರಿನ ತೋರಣವನ್ನು ಕಟ್ಟಿ, ಗಾಳಿಯ ಮತ್ತು ಹೆಣ್ಣುಕೋಗಿಲೆಯ ಮನೋಹರಧ್ವನಿಯೇ ವಾದ್ಯಧ್ವನಿಯಾಗಲು ಮನ್ಮಥನು ಹೂವುಗಳೆಂಬ ಲಿಂಗಗಳನ್ನು ಪೂಜಿಸುತ್ತಿದ್ದನು. ವ|| ಮತ್ತು ಆ ವನವು ಸಮುದ್ರದಂತೆ, ವೀಣೆಯಂತೆ ಪ್ರವಾಳದಿಂದ ಕೂಡಿತ್ತು. (ಪ್ರವಾಳ= ೧. ಚಿಗುರು ೨. ಹವಳ ೩. ವೀಣಾದಂಡ) ವನವು ಇಂದ್ರನಂತೆ, ಸಜ್ಜನನಂತೆ ಸುಮನದಿಂದ ಶೋಭಿಸುತ್ತಿತ್ತು ; (ಸುಮನ=೧. ಪುಷ್ಪ ೨. ದೇವತೆ, ೩. ವಿದ್ವಾಂಸ.) ಆ ವನವು ಕಮಲದಂತೆ, ಕಲಹಂಸದಂತೆ ಕಮಲಾಕರದಿಂದ ಮನೋಹರ. (ಕಮಲಾಕರ=೧. ಸರಸ್ಸು ೨. ಲಕ್ಷ್ಮಿಯ ಕೈ ೩. ಕಮಲ ಸಮೂಹ) ನೀರಿನಂತೆ, ಬತ್ತಳಿಕೆಯಂತೆ ನಿಬಿಡವಾದ ಶಿಲೀಮುಖವುಳ್ಳದ್ದು (ಶಿಲೀಮುಖ=೧. ದುಂಬಿ ೨. ಕಪ್ಪೆಯ ಮುಖ ೩. ಬಾಣ.) ರಾಜನ ಚಿತ್ತದಂತೆ, ರಮಣಿಯ ಹೃದಯದಂತೆ ರಸಾಲಸಮುದಂಚಿತ (ರಸಾಲ=೧. ಮಾವಿನ ಮರಗಳಿಂದ, ಸಮುದಂಚಿತ=ಯುಕ್ತ ೨. ರಸಾ=ಭೂಮಿಯಲ್ಲಿ, ಅಲಸ=ಆಸಕ್ತವಾದ, ಮುತ್=ಸಂತೋಷದಿಂದ, ಅಂಚಿತ=ಯುಕ್ತ ೩. ರಸ=ಶೃಂಗಾರರಸದಲ್ಲಿ, ಅಲಸ=ಆಸಕ್ತವಾದ, ಮುತ್=ಸಂತೋಷದಿಂದ, ಅಂಚಿತ=ಯುಕ್ತ.) ಅದು ವಿರಹಿಯಂತೆ, ಬ್ರಹ್ಮವಾಹನವಾದ ಹಂಸದಂತೆ ವಿಕಳಧ್ವನಿ ವಿಳಸಿತ (೧. ವಿ=ಹಕ್ಕಿಗಳ, ಕಲಧ್ವನಿಯಿಂದ ವಿಲಸಿತ ೨. ವಿಕಲ=ವ್ಯಾಕುಲಗೊಂಡ ಧ್ವನಿಯಿಂದ ವಿಲಸಿತ ೩. ವಿ=ವಿಶೇಷವಾಗಿ, ಕಲ=ಮಧುರವಾದ, ಧ್ವನಿಯಿಂದ ವಿಲಸಿತ). ಮನಸ್ಸಿನಂತೆ, ಆಕಾಶ

ವಿಕಳಧ್ವನಿವಿಳಸಿತಮುಂ ಬಗೆಯಂತೆ ಬಾನಂತೆ ಬಹುಲತಾರಾರಾಜಿತಮುಂ ಸಗ್ಗದಂತೆ ಸಮರದಂತೆ ಸಂರಂಭಾನ್ವಿತಮುಮೆನಿಸಿದುದಂತುಮಲ್ಲದೆಯುಂ

ಕಂ॥ ಅಲಕಾಳಿರುಚಿರಮಾ ವನ
ವಲಯಂ ತಿಲಕೋಪಶೋಭಿಸರದಚ್ಛವಿ ಮಂ
ಜುಲಮಿಂದುಕಾಂತರುಚಿರೋ
ಜ್ವಲಾಧರಸ್ಥಾನಮಾಸ್ಯಮೆನೆ ನೆಲಸಿರಿಯಾ ೭೯

ಮ॥ ಸ್ರ॥ ಮೊರೆದೆತ್ತಂ ದಾನಧಾರಾ ಸುರಭಿಗೆಱಗುವಿಂದಿಂದರಶ್ರೇಣಿಯಂ ಪೊ
ಯ್ದುದ್ದರಟತ್ಕರ್ಣಾಗ್ರದಿಂದಂ ತಗುಳೆ ಮಗುಳೆ ತತ್ಪುಷ್ಕರಂಗಂಡು ರಕ್ತಾಂ
ಬುರುಹಂಗೆತ್ತಾರ್ದು ಸಾರ್ತಂದೆಱಗೆ ಬಿದಿರ್ದು ದಂತಾಗ್ರ ಕುಂತಾಗ್ರ ಕಾಂತಿ
ಸ್ಫುರಣಂ ಕೈಗಣ್ಮೆ ತನ್ನಂದನದೆಡೆಯೊಳೆ ರಾಜಿಪ್ಪವಾಗಳ್ಗಜಂಗಳ್ ೮೦

ದಂತೆ ಬಹುಲತಾರಾರಾಜಿತ (೧. ಬಹುಲತೆಗಳಿಂದ ವಿರಾಜಿತ ೨. ಬಹುಲತಾ=ಬಾಹುಳ್ಯದಿಂದ-ವೈವಿಧ್ಯಡಿಂದ ವಿರಾಜಿತ ೩. ಬಹುಲ=ಬಹಳ, ತಾರಾ = ನಕ್ಷತ್ರಗಳಿಂದ ರಾಜಿತ.) ಆ ವನವು ಸ್ವರ್ಗದಂತೆ, ಯುದ್ಧದಂತೆ ಸಂರಂಭಾನ್ವಿತ (೧. ಸಂರಂಭಾ= ಉತ್ತಮವಾದ ಬಾಳೆ ೨. ಉತ್ತಮಳಾದ ರಂಭೆ ೩. ಸಂರಂಭ=ಸಂಭ್ರಮ, ಕೋಪ) (೮೦) ೭೯. ಆ ವನವು ಭೂದೇವಿಯ ಮುಖದಂತೆ ಕಂಗೊಳಿಸುತ್ತಿತ್ತು. ಹೇಗೆಂದರೆ, ವನಪಕ್ಷದಲ್ಲಿ, ಅಲಕ=ಮುಂಗುರುಳಿನಂತಿರುವ, ಅಲಿ=ದುಂಬಿಗಳಿಂದ, ರುಚಿರ= ಮನೋಹರ. ತಿಲಕ=ತಿಲಕವೃಕ್ಷಗಳಿಂದ ಶೋಭಿಸತಕ್ಕದ್ದು. ಸರತ್=ಹಾರಾಡುವ, ಅಚ್ಛ=ಉತ್ತಮವಾದ, ವಿ=ಹಕ್ಕಿಗಳಿಂದ, ಮಂಜುಲ=ಮನೋಹರ. ಇಂದು ಕಾಂತ=ಚಂದ್ರಕಾಂತಶಿಲೆಯಿಂದ, ರುಚಿರ=ಸುಂದರ ಮತ್ತು ಉಜ್ವಲ=ಪ್ರಕಾಶಮಾನವಾದ, ಅಧರಸ್ಥಾನ=ಕೆಳಗಿಳ ನೆಲವುಳ್ಳದ್ದು. ಮುಖಪಕ್ಷದಲ್ಲಿ, ಅಲಕಾಲಿ= ಮುಂಗುರುಳಿನ ಸಮೂಹದಿಂದ ರುಚಿರ, ಹಣೆಯ ತಿಲಕದಿಂದ ಶೋಭಿಸತಕ್ಕದ್ದು. ರದಚ್ಛವಿ=ಹಲ್ಲಿನ ಕಾಂತಿಯಿಂದ ಸಹಿತವಾದದ್ದು. ಇಂದುಕಾಂತ=ಚಂದ್ರನಂತೆ ಮನೋಹರ. ಉಜ್ವಲವಾದ ಅಧರ=ಕೆಳದುಟಿಯುಳ್ಳದ್ದು. ೮೦. ದುಂಬಿಗಳು ಎಲ್ಲ ಕಡೆಗಳಿಂದಲೂ ಝೇಂಕರಿಸುತ್ತ ಗಂಡಸ್ಥಳದ ಮದೋದಕ ಧಾರೆಗಳಿಗೆ ಎರಗುತ್ತಿರಲು, ಅವುಗಳ ಸಮೂಹವನ್ನು ಚಲಿಸುತ್ತಿರುವ ಕಿವಿಗಳಿಂದ ಆನೆಗಳು ಹೊಡೆದು ತಗುಲಿಸುತ್ತಿರಲು, ಪುನಃ ಅದರ ಸೊಂಡಿಲಿನ ಅಗ್ರಭಾಗವನ್ನು ಕಂಡು ಕೆಂಪುಕಮಲವೆಂದು ಭಾವಿಸಿ ಮುಂಬರಿದು ದುಂಬಿಗಳು ಎರಗುತ್ತಿದ್ದವು. ಬೆದರಿಹೋದ ಆ ಆನೆಗಳು ತಮ್ಮ ಭರ್ಜಿಯಂತಿರುವ ದಂತಗಳ ತುದಿಯ ಬೆಳಕಿನ ಕಾಂತಿಯು ಕೈಗೂಡುತ್ತಿರುವಂತೆ

ವ॥ ಮತ್ತಮಲ್ಲಿ

ಚಂ॥ ಕರಿವರಗಂಡಮಂಡಳಗಳನ್ಮದಕರ್ದಮಮುಗ್ನ ಮತ್ತಷ
ಟ್ಚರಣಗಣಂ ವಿರಾಜಿಪ್ಪದು ತದ್ರದನದ್ಯುತಿ ಚಂದನಚ್ಛಟಾ
ಪರಿವಿಹಿತಂ ಸಿತಪ್ರಕಟ ಕುಂಭತಟಸ್ಫುಟಮೌಕ್ತಿಕವ್ರಜಂ
ಸುರಿವ ಮದಾಂಬುಧಾರೆಯೊಡಗೂಡಿ ಕರಂ ಪೊಱಪೊಣ್ಮಿತೆಂಬಿನಂ ೮೧

ಕಂ॥ ಭಯರಹಿತರ್ ಜಯಸಹಿತರ್
ನಯವಿಹಿತರ್ಹಯಮನೇಱಿ ಬಹುವಿಧಗತಿಯಿಂ
ರಯದಿಂ ಪರಿಯಿಪ ವೈಹಾ
ಳಿಯ ಬಯಲಿಂ ತಳ್ತು ತದ್ವನಂ ರಂಜಿಸುಗುಂ ೮೨

ವ॥ ಇಂತನಂತಜನವಿಲೋಚನ ರಮಣೀಯಮಾದ ವನವಳಯದಿಂದಮೊಳಗೆ

ಮ॥ ಘನಸತ್ಸೇವ್ಯನನಂತರತ್ನರುಚಿ ಲಾವಣ್ಯಪ್ರಭಾವಸ್ಥಿತಂ
ವಿನತಾನಂದನವಾಹಸಂಶ್ರಯನುದಾತ್ತಾಭಂಗವಿಕ್ರಾಂತವಾ
ಹಿನಿ ತಾನೀ ನರನಾಥನನ್ನವೊಲೆನುತ್ತಂಭೋಧಿ ತಾಂ ಬಂದು ನಂ
ದನೆಯಿತ್ತಲ್ಲಿಯೆ ನಿಂದವೊಲ್ ಪರಿಖೆ ಚೆಲ್ವಂಬೇಱಿ ಕಣ್ಗೊಪ್ಪುಗುಂ ೮೩

ಚಲಿಸುತ್ತ ಶೋಭಿಸುತ್ತಿದ್ದವು. ವ॥ ಮತ್ತೂ ಅಲ್ಲಿ, ೮೧. ಆನೆಗಳ ವೃತ್ತಾಕಾರವಾದ ಗಂಡಸ್ಥಳದ ಸೋರುತ್ತಿರುವ ಮದೋದಕದ ಕೆಸರಿನಲ್ಲಿ ಮುಳುಗಿಹೋದ ಭೃಂಗಗಳ ಸಮೂಹವು ಆನೆಗಳ ದಂತಗಳ ಪ್ರಕಾಶವೆಂಬ ಶ್ರೀಗಂಧದ ದೀಪ್ತಿಯಿಂದ ಆವೃತವಾಗಿದ್ದವು. ಆಗ ಪ್ರಸಿದ್ಧ ಕುಂಭಸ್ಥಳದಲ್ಲಿ ಸ್ಫುಟವಾಗಿರತಕ್ಕ ಬಿಳುಪಾದ ಮುತ್ತುಗಳ ಸಮೂಹವು ಸುರಿಯುತ್ತಿರುವ ಮದೋದಕದ ಪ್ರವಾಹದೊಡಗೂಡಿ ಹೊರಹೊಮ್ಮಿತೋ ಎನ್ನುವಂತೆ ಆ ಭೃಂಗಸಂಘವು ಶೋಭಿಸುತ್ತಿತ್ತು. ೮೨. ಆ ಧರ್ಮವತೀಪುರದ ಬಹಿರುದ್ಯಾನವನದ ತೋಟವು ಭಯರಹಿತರೂ, ಜಯಸಹಿತರೂ, ನೀತಿಯಿಂದ ಕೂಡಿದವರೂ ಆದ ಸವಾರರು ಕುದುರೆಯನ್ನೇರಿ ಅನೇಕ ವಿಧವಾದ ಗತಿಗಳಿಂದ ಓಡಿಸುತ್ತಿರುವ ವೈಹಾಳಿಯ ಬಯಲಿನಿಂದ ಕೂಡಿ ಶೋಭಿಸುತ್ತಿತ್ತು. ವ॥ ಹೀಗೆ ಅನಂತ ಜನರ ಕಣ್ಣುಗಳಿಗೆ ರಮಣೀಯತೆಯನ್ನುಂಟುಮಾಡುವ ವೃತ್ತಾಕಾರದ ವನದಿಂದ ಪ್ರಕಾಶಿಸುತ್ತಿರಲು, ೮೩. 'ಈ ರಾಜನು ನನ್ನಂತೆಯೇ ಇದ್ದಾನೆ' ಎಂದು ತಿಳಿದು ಸಮುದ್ರರಾಜನು ತನ್ನ ಮಗಳಾದ ಲಕ್ಷ್ಮಿಯನ್ನು ರಾಜನಿಗೆ ಕೊಟ್ಟು ನಗರದ ಸುತ್ತಲೂ ನೆಲೆಸಿದನೋ ಎಂಬಂತೆ ಆ ನಗರದ ಪರಿಖೆಯು ಕಂಗೊಳಿಸುತ್ತಿತ್ತು. ರಾಜ ಮತ್ತು ಸಮುದ್ರದ ಹೋಲಿಕೆ: ರಾಜನ ಪಕ್ಷದಲ್ಲಿ—1) ಘನವಂತರಾದ ಸಜ್ಜನರಿಂದ ಸೇವ್ಯ. ಅನೇಕ ರತ್ನಗಳ ಕಾಂತಿಲಾವಣ್ಯಗಳಿಂದ ಒಪ್ಪತಕ್ಕವನು. ವಿನತರಾದವರನ್ನು ಸಂತೋಷಪಡಿಸತಕ್ಕವನು. ವಾಹನಗಳುಳ್ಳವನು. ಉನ್ನತವೂ ಸೋಲನ್ನು ಕಾಣದಿರುವುದೂ ಆದ ಸೇನೆಯುಳ್ಳವನು. ಸಮುದ್ರದ ಪಕ್ಷದಲ್ಲಿ 2. ಘನ—ಮೋಡಗಳಿಂದ ಸಂಸೇವ್ಯನು. ಅನಂತ—ಆದಿಶೇಷನ ರತ್ನ ಕಾಂತಿಯಿಂದ ಕೂಡಿದವನು.

ಕಂ॥ ಮಣಿದೆನೆಗಳ ಮಾರ್ಪೊಳಪಂ
ಫಣಿಪಸ್ಫಟಗೆತ್ತು ನೋಳ್ಪ ಖೇಚರಿಯರ ಕ
ಣ್ಗೊಪ್ಪಿಣರ್ಗಳ್ ಮಾರ್ಪೊಳೆವಂದಮ
ನಣಕಿಪುವಗಳಮಳಜಳದೊಳಂಬುಚರಂಗಳ್ ೮೪

ಆಂ ತಳೆದಿಳೆಯಂ ಭುಜದೊಳ್
ತಾಂ ತಳೆದಂ ನೃಪತಿಯೆಂದು ವೇಲಾಚಲವೋ
ರಂತೈದಿ ನೋಡಿಕುತುಕ
ಸ್ವಾಂತಂ ನಿಂದಂತೆ ಸಾಲಮೇಂ ಸೊಗಯಿಸಿತೋ ೮೫

ಖರಕರ ತುರಗೋತ್ಕರ ಖರ
ತರ ಖುರಘಟ್ಟನದಿನಾದ ಕುಱುಪೆನೆ ಮೆಱೆಗುಂ
ಸುರುಚಿರ ಕೋಟಾಚಕ್ರದ
ತರವಿಡಿದಿಡಿದೆಸೆವ ಬಟ್ಟದೆನೆಯೆಡೆಯೆಡೆಯೊಳ್ ೮೬

ಘನಕೇತನ ಪಟದಗ್ರದೊ
ಳಿನಬಿಂಬಂ ಬಂದುನಿಂದು ಮಧ್ಯಂದಿನದೊ
ಳ್ಕನಕಮಯದರ್ಪಣಂ ತಾ
ನೆನೆ ಪೊಳೆವುದೆಂದೊಡದನದೇಂ ಬಣ್ಣಿಪುದೋ ೮೭

ಲಾವಣ್ಯ ಪ್ರಭಾವ=ಲವಣಮಯವಾದ ಪ್ರಭಾವವನ್ನು ಪಡೆದವನು. ವಿನತನಂದನ ವಾಹಸಂಶ್ರಯ=ವೈನತೇಯನನ್ನು ವಾಹನವಾಗಿ ಉಳ್ಳ ವಿಷ್ಣುವಿಗೆ ಆಶ್ರಯ. ಉದಾತ್ತವೂ ಪಡೆಯಿಲ್ಲದ್ದೂ ಆಗಿ ಹರಿಯುವ, ವಾಹಿನಿ=ನದಿಯುಳ್ಳವನು. ೮೪. ರತ್ನಗಳಿಂದ ಮಾಡಿದ ಕೋಟೆಯ ತೆನೆಗಳ (ಬತೇರಿಗಳ) ಪ್ರತಿಬಿಂಬವನ್ನು ಆದಿ ಶೇಷನ ಅನೇಕ ಹೆಡೆಗಳೆಂದು ತಿಳಿದು ನೋಡುತ್ತಿರುವ ದೇವತಾಸ್ತ್ರೀಯರ ಕಣ್ಣಿನ ಕಾಂತಿಯ ಪ್ರತಿಫಲನವನ್ನು ಆ ಅಗಳಿನಲ್ಲಿರುವ ಜಲಚರಗಳಾದ ಮೀನುಗಳು ಅಣಕಿಸು ತ್ತಿದ್ದವು—ಹೋಲುತ್ತಿದ್ದವು. ೮೫. ನಾನು ಧರಿಸಿದ ಭೂಮಿಯನ್ನು ಅರಸನು ತಾನು ತನ್ನ ಭುಜದಲ್ಲಿ ಧರಿಸಿದನು ಎಂದುಕೊಂಡು, ಮೇರುಪರ್ವತವು ಒಮ್ಮೆಗೇ ಬಂದು ಕುತೂಹಲದಿಂದ ಕೂಡಿದ ಮನಸ್ಸುಳ್ಳದ್ದಾಗಿ ನಿಂತ ಹಾಗೆ ಆ ಕೋಟೆಯ ಗೋಡೆಯು ಏನು ಶೋಭಿಸಿತೋ ! ೮೬. ಸೂರ್ಯನ ಸಪ್ತಅಶ್ವಗಳ ಶ್ರೇಷ್ಠವೂ ಅತ್ಯಂತ ಕಠಿಣತರವೂ ಆದ ಗೊರಸುಗಳ ತುಳಿತದಿಂದ ಆದ ಚಿಹ್ನೆಯೋ ಎನ್ನುವ ಹಾಗೆ ಮನೋಹರವಾದ ವೃತ್ತಾಕಾರವಾಗಿರುವ ಕೋಟೆಯ ತಳವನ್ನು ಹಿಡಿಹಿಡಿದು ಶೋಭಿಸುವ ದುಂಡಾಗಿರುವ ಬುರುಜುಗಳು (ಬತೇರಿಗಳು) ಆಯಾ ಸ್ಥಳಗಳಲ್ಲಿ ಶೋಭಿಸುತ್ತಿದ್ದವು. ೮೭. ಮಧ್ಯಾಹ್ನದ ಸಮಯದಲ್ಲಿ ಸೂರ್ಯನ ಬಿಂಬವು ಘನವಾದ ಧ್ವಜಪಟದ ತುದಿಯಲ್ಲಿ ನಿಲ್ಲುತ್ತಿತ್ತು, ಅದು ಬಂಗಾರದಿಂದ ಮಾಡಿದ ದರ್ಪಣವೋ ಎನ್ನುವಂತೆ ಹೊಳೆಯು

ಪೊಂದೆನೆಗಳ್ವರಕರ ಕರ
ದಿಂದಂ ಕರಗುಗುಮಿವೆಂದು ಪುರರಾಜಂ ನೀ
ರೊಂದಿದ ಸಿತಪಟತತಿಯಂ
ಕುಂದದೆ ಮುಸುಕಿದವೊಲಬ್ದ ಚಯಮಲ್ಲಿರ್ಕುಂ ೮೮

ವ॥ ಮತ್ತಂ

ಉ॥ ಆ ಪುರ ಭರ್ಮಹರ್ಮ್ಯರುಚಿ ಪೊಂಬಿಸಿಲಂತಿರೆ ರಾತ್ರಿಯೊಳ್ಸುಪ
ರ್ವಾಪಗೆಯೊಳ್ವಿರಾಜಿಪ ರಥಾಂಗಯುಗಂ ನೆರೆದಿರ್ಪುದಂಬುಜ
ಶ್ರೀ ಪರಿದೆತ್ತಮೋಸರಿಸಲಲ್ಲಿ ವಿಳಾಸದೆ ನಿಂದು ನಿರ್ಜರ
ಸ್ತ್ರೀ ಪದೆದೊತ್ತಿ ಮೇಲುದನಭೀಕ್ಷಿಪಳುತ್ಕಚದೊಳ್ನಖಾಂಕಮಂ ೮೯

ವ॥ ಅಂತುಮಲ್ಲದೆಯುಂ

ಕಂ॥ ತಳರ್ವೆಳವಣ್ಗಳ ನಯನಾಂ
ಚಳರುಚಿಚಂದ್ರಿಕೆಯನಾಂತು ಪೊಂದುಡಿಗೆಗಳು
ಜ್ವಳಕಿರಣಮೆಂಬ ಬಿಸಿಲಂ
ತಳೆದಲ್ಲಿಯ ಸೋಮ ಸೂರ್ಯವೀಧಿಗಳೆಸಗುಂ ೯೦

ತ್ತಿರುವುದನ್ನು ಏನು ವರ್ಣಿಸುವುದೋ ! ೮೮. ಬಂಗಾರದ ಈ ಕೋಟೆಯ ತೆನೆಗಳು ಸೂರ್ಯನ ಕಿರಣಗಳ ಬಿಸಿಯಿಂದ ಕರುಗುತ್ತವೆ ಎಂದು ತಿಳಿದು ಆ ಪಟ್ಟಣದ ಅರಸನು ನೀರಿನಲ್ಲಿ ನೆನೆಸಿದ ಕರಿಯಬಣ್ಣದ ಬಟ್ಟೆಗಳ ಸಮೂಹವನ್ನು ಮುಚ್ಚಿರುವನೋ ಎನ್ನುವಂತೆ ಮೋಡಗಳ ಸಮೂಹವು ಆ ಕೋಟೆಗೆ ಮುಸುಕಿದ್ದವು. ವ॥ ಮತ್ತು ೮೯.. ಆ ಪಟ್ಟಣದ ಬಂಗಾರಮಯವಾದ ಉಪ್ಪರಿಗೆಗಳ ಸಮೂಹದ ಕಾಂತಿಯು ರಾತ್ರಿಯ ವೇಳೆಯಲ್ಲಿ ಹೊಂಬಿಸಿಲಿನಂತೆ ಇರಲಾಗಿ, ರಾತ್ರಿಯಲ್ಲಿ ದೇವಗಂಗಾನದಿಯಲ್ಲಿ ಶೋಭಿಸುವ ಚಕ್ರವಾಕ ದಂಪತಿಗಳು ಹಗಲೆಂದು ತಿಳಿದು ಪರಸ್ಪರ ಸಂಯೋಗಗೊಳ್ಳುತ್ತಿದ್ದವು. ಕಮಲಗಳ ಕಾಂತಿಯು (ಹಗಲಿನ ಹಾಗೆಯೆ) ತಗ್ಗದೆ ವಿಕಾಸಗೊಂಡೇ ಇರುತ್ತಿತ್ತು. ದೇವತಾಸ್ತ್ರೀಯು ತನ್ನ ಎದೆಯ ಮೇಲಿನ ಸೆರಗನ್ನು ತೆಗೆದು ವಿಲಾಸದಿಂದ ನಿಂತು ಸ್ತನಗಳ ಮೇಲಿನ ಉಗುರಿನ ಗಾಯುಗಳನ್ನು ನೋಡಿಕೊಳ್ಳುತ್ತಿದ್ದಳು. ವ॥ ಹಾಗೂ ಅಲ್ಲದೆ, ೯೦. ಅಲ್ಲಿಯ ಸೋಮಸೂರ್ಯಬೀದಿಗಳು ಸಂಚಾರಮಾಡುತ್ತಿರುವ ಎಳೆಯ ಹೆಣ್ಣುಮಕ್ಕಳ ಕಡೆಗಣ್ಣಗಳ ಕಾಂತಿಯೆಂಬ ಬೆಳುದಿಂಗಳನ್ನು ಹೊಂದಿ, ಬಂಗಾರದುಡಿಗೆಗಳ ಉಜ್ವಲವಾದ ಸೂರ್ಯನ ಬಿಸಿಲನ್ನು ಹೊಂದಿ ಪ್ರಕಾಶಿಸುತ್ತಿದ್ದವು.

ಲಯಗ್ರಾಹಿ॥ ಧೀರಜನರಿಂ ಶ್ರುತಿವಿಚಾರಪರರಿಂ ಲಸದುದಾರಗುಣರಿಂ ದುರಿತದೂರ ಶಿವಭಕ್ತ್ಯಾ
ಚಾರಯುತರಿಂ ನಿಗಮಸಾರಮತರಿಂ ಸುಭಗದಾರರತರಿಂ ಹರಿಕುಮಾರ ವರಮಾರಾ
ಕಾರಮಹರಿಂ ವಿವಿಧವೀರಭಟರಿಂ ವಿಜಿತಶೂರಪರರಿಂ ತುರಗವಾರಗಜಶಿಕ್ಷಾ
ಭಾರವಹರಿಂ ಮಿಳದಪಾರಧನರಿಂ ಮೆಱೆಗುಮಾ ರುಚಿರಪಟ್ಟಣಮಿಳಾರಮಣ
ಯುಕ್ತಂ ೬೧

ಕಂ॥ ಆ ಧರ್ಮವತಿಯ ಪುರದ ಮ
ಹಾಧರ್ಮಯುತರ್ಗೆ ಸುರರ್ಗೆ ಮೈವೆತ್ತುದು ತಾಂ
ಸಾಧರ್ಮ್ಯಮೆಂದು ಬಿದಿ ಮಿಗೆ
ವೈಧರ್ಮ್ಯಮನನಿಮಿಷತೆಯನವರೊಳ್ನೆಗಳ್ದಂ ೬೨

ಚಂ॥ ಶಿವಪದಪದ್ಮಮಂ ಪದೆದು ಪೂಜಿಪ ಶೈವಪುರಾಣಮಂ ಮಹೋ
ತ್ಸವದಿನೊಱಲ್ದು ಕೇಳ್ವ ಶಿವಭಕ್ತಸಮರ್ಚನೆಗೈವ ಸಂತತಂ
ಶಿವಸ್ತವನಂಗಳಂ ರಚಿಪ ಸಾರ ಶಿವಾಗಮ ಪೂಗದರ್ಥಮಂ
ವಿವರಿಪ ಶೈವವರ್ಯರವರಿಂ ಮೆಱೆದತ್ತು ಪುರಂ ನಿರಂತರಂ ೬೩

೬೧. ರಾಜಯುಕ್ತವಾದ ಆ ಮನೋಹರವಾದ ಪಟ್ಟಣವು ಧೀರರಾದಜನರಿಂದ, ವೇದಾರ್ಥ ಜ್ಞಾನವುಳ್ಳವರಿಂದ, ಶ್ರೇಷ್ಠವಾದ ಉದಾತ್ತಗುಣದಿಂದ ಪಾಪದೂರರಾದ ಶಿವಭಕ್ತಿಯ ಆಚಾರವಂತರಿಂದ, ನಿಗಮಗಳ ಸಾರದಂತೆ ವ್ಯವಹರಿಸುವವರಿಂದ, ಏಕಪತ್ನೀವ್ರತದವರಿಂದ, ವಿಷ್ಣುಪುತ್ರನಾದ ಶ್ರೇಷ್ಠ ಮನ್ಮಥಾಕಾರದ ಜನರಿಂದ, ವೈವಿಧ್ಯಮಯ ವೀರ ಭಟರುಗಳಿಂದ, ಶತ್ರುಗಳ ಗೆಲುವಿನಿಂದ ಕೂಡಿದವರಿಂದ, ತುರಗ ಆನೆಗಳ ಸಮೂಹಕ್ಕೆ ಶಿಕ್ಷಣ ಕೊಡುವವರಿಂದ, ಅಪಾರಧನಸಂಗ್ರಹವುಳ್ಳವರಿಂದ ಮೆರೆಯುತ್ತಿತ್ತು. ೬೨. ಆ ಧರ್ಮವತಿ ಪಟ್ಟಣದಲ್ಲಿರುವ ಮಹಾಧರ್ಮಾತ್ಮರಾದ ಜನರಿಗೂ, ದೇವತೆಗಳಿಗೂ ಸಮಾನಧರ್ಮವುಂಟಾಯಿತು ಎಂದು ತಿಳಿದು ಬ್ರಹ್ಮನು (ವೈಧರ್ಮ್ಯವು ಇಬ್ಬರಲ್ಲಿಯೂ ಇರಬೇಕೆಂದು ತಿಳಿದು) ರೆಪ್ಪೆಯಿಲ್ಲದಿರುವಿಕೆಯನ್ನು ದೇವತೆಗಳಲ್ಲಿ ಉಂಟುಮಾಡಿ ಇಬ್ಬರಲ್ಲೂ ಭೇದವುಂಟುಮಾಡಿದನು. ೬೩. ಆ ಪಟ್ಟಣವು ಶಿವನ ಪಾದಕಮಲವನ್ನು ಪ್ರೀತಿಯಿಂದ ಪೂಜಿಸುವ, ಶೈವಪುರಾಣಗಳನ್ನು ಉತ್ಸಾಹದಿಂದ ಹೇಳಿ ಕೇಳುವ, ಶಿವಭಕ್ತರನ್ನು ಪೂಜಿಸುವ, ಸತತವೂ ಶಿವಸ್ತೋತ್ರಗಳನ್ನು ರಚಿಸುವ, ಸಾರವತ್ತಾದ ಶಿವಾಗಮಗಳ ಸಮುದಾಯದ ಅರ್ಥವನ್ನು ಇನ್ನೊಬ್ಬರಿಗೆ ತಿಳಿಸುವ ಶಿವಭಕ್ತರಿಂದ

ವ॥ ಆ ನಗರಾಂತರಾಳದಲ್ಲಿ

ಚಂ॥ ಮನೆಮನೆದಪ್ಪದೊಪ್ಪಿದುದು ವೀಣೆಯ ಮೆಲ್ಲುಲಿ ರಾಜಕೀರನಿಂ
ಪಿನ ನುಡಿ ವಾಸದಿಂಚರಮುದಾರಮೃದಂಗರವಂ ಶಿವಸ್ತುತಿ
ಸ್ವನಮುರುಘಂಟಿಕಾರುತಿಯ ಜೀಯ ಜಯಧ್ವನಿ ಸಾಮಗಾನನಿ
ಸ್ವನಿತಮಶೇಷಶಾಸ್ತ್ರನಿನದಂ ಘನಶಂಖದ ನಾದಮಾವಗಂ ೯೪

ಕಂ॥ ಧನದಂ ಭಿಕ್ಷುಸಖಂಗೆ
ಳ್ಳನಿತಂ ಧನಮೀಯದಾದನಾ ನಾಮಂ ಸು
ಮ್ಮನೆ ಬಂದುದೆಂದು ನಗುತುಂ
ಧನದಾಪ್ತನನಲ್ಲಿ ಮನ್ನಿಪರ್ ಘನಧನದರ್ ೯೫

ಪುಲಿದೊವಲಂ ಗಜದಜಿನಮ
ನೆಲೆ ನೀನುಡದಿರ್ಬಿಡೆಂದು ಬಿಡಿಸುತೆ ಮೃಡನಂ
ಸುಲಲಿತ ದಿವ್ಯಾಂಬರಮಂ
ನಲಿದುಡಿಸುವ ದೂಸಿಗರ್ಕರಂ ನೆಲಸಿರ್ಪರ್ ೯೬

ಮೆರೆಯುತ್ತಿತ್ತು. ವ॥ ಆ ನಗರದ ಮಧ್ಯದಲ್ಲಿ. ೯೪. ಪ್ರತಿಮನೆಯಲ್ಲೂ ತಪ್ಪದಂತೆ ವೀಣೆಯ ಮಧುರಧ್ವನಿ, ಅರಗಿಳಿಯ ಇಂಪಾದ ನುಡಿಗಡಣದ ಮಾಧುರ್ಯ, ಮೃದಂಗ ನುಡಿಸುವ ಧ್ವನಿ, ಶಿವನಾಮಸಂಕೀರ್ತನೆಯ ಧ್ವನಿ, ದೊಡ್ಡ ದೊಡ್ಡ ಗಂಟೆಗಳ ಧ್ವನಿ, ಜಾಗಟೆಗಳ ಧ್ವನಿ, ಸಾಮಗಾನದ ಧ್ವನಿ, ಸಮಸ್ತ ಶಾಸ್ತ್ರಾರ್ಥವಿವರಣೆಯಧ್ವನಿ, ಶ್ರೇಷ್ಠ ವಾದ ಶಂಖದನಾದ ಯಾವಾಗಲೂ ಒಪ್ಪುತ್ತಿದ್ದವು. ೯೫. ಕುಬೇರನು ಸಖನಾದ ಶಿವನಿಗೆ (ಭಿಕ್ಷುಸಖ) ಸ್ವಲ್ಪವೂ ಧನವನ್ನು ಕೊಡದೆಹೋದನು. ಆ ಧನವನ್ನು ಕೊಡುವವನು ಎಂಬ ಹೆಸರು ಸುಮ್ಮ ಸುಮ್ಮನೆ (ಅವನಿಗೆ) ಬಂದದ್ದೆಂದು (ಹೇಳಿ) ನಗುತ್ತ ಧನದಾಪ್ತ ನಾದ ಶಿವನನ್ನು ಆ ಊರಿನ ಶ್ರೇಷ್ಠರಾದ ಶ್ರೀಮಂತರು ಮನ್ನಿಸುತ್ತಿದ್ದರು. (ಎಂದರೆ ಧನಕನಕಾದಿಗಳನ್ನು ಸಲ್ಲಿಸಿ ಪೂಜೆಮಾಡುತ್ತಿದ್ದರು). ೯೬. 'ಹುಲಿಯ ತೊಗಲನ್ನೂ, ಆನೆಯ ಚರ್ಮವನ್ನೂ, ಎಲೈ ಶಿವನೇ, ನೀನು ಉಡಬೇಡ, ಬಿಡು' ಎಂದು ಶಿವನಿಗೆ ಹೇಳಿ ಬಿಡಿಸುತ್ತ ಅತಿಲಲಿತವಾದ ದಿವ್ಯದುಕೂಲವನ್ನು ನಲಿದಾಡಿ ಉಡಿಸುವಂಥ ವರ್ತಕರು ಆ

ಸುರರೆಲ್ಲಂ ಸುತ್ತಲ್ಕಂ
ಬರ[1]ವೊಂದದು ಪಳಿಯದೆಂದು ಪಳಿದದನೆಸೆಗುಂ
ಪುರಜನರೆಲ್ಲಂ ಕೊಳಲಾ
ಪುರದೊಳ್ ಬಹುನೂತನಾಂಬರಂಗಳ ಪಸರಂ ೯೭

ಶರಧಿ ನಿಜಾತ್ಮಜೆಯೆನಿಸುವ
ಸುರಲಕ್ಷ್ಮಿಗೆ ಕಳಿಪಿದಮಳರತ್ನವ್ರಾತಂ
ಕರವಿಡಿದೆಸೆದಪುದೆನೆ ಸುಂ
ದರಮಾದುದು ರನ್ನವಸರದೊಳ್ಮಣಿವಿಸರಂ ೯೮

ವ॥ ಮತ್ತಂ

ಕಂ॥ ಅರಸನ ತೋಳ್ಗೋಳ್ಸಲೆ ನೆಲ
ಸಿರುತಂ ಮಣಿಗರ್ಭೆ ಪಡೆದ ಮಣಿಗಣಮದು ತ
ತ್ಪುರದೆಡೆಯೊಳ್ನೆಲಸಿದುದೆನೆ
ಸುರುಚಿರ ನವರತ್ನರಾಶಿ ಪಸರದೊಳೆಸೆಗುಂ ೯೯

ಚಂ॥ ಅಳಿಕುಳ ನೀಲಚೇಲಮದು ಮೌಕ್ತಿಕವೃಂದವಃನಾಂತು ಕಣ್ಗದೇಂ
ತೊಳಗಿದುದೋ ಪಳಚ್ಚನೆಸೆವಂಗಡಿವೀಧಿಯೊಳಲ್ಲಿ ಕೇತನಂ
ಗಳ ಗಳೆ ತಾಗಿ ತಟ್ಟುಗಿಯೆ ತಾರೆಗಳೊರ್ಬುಳಿಗೂಡಿ ತದ್ಧರಾ
ವಳಯದ ಮೇಲೆ ತಾಂ ಪರಿದುಬಿಳ್ದ ನಭಸ್ಥಳಖಂಡದಂತೆವೊಲ್ ೧೦೦

ಪಟ್ಟಣದಲ್ಲಿದ್ದರು. ೯೭. 'ದೇವತೆಗಳೆಲ್ಲರಿಗೂ ಸುತ್ತಿಕೊಳ್ಳಲು–ತಿರುಗಾಡಲು ಇರುವ ಅಂಬರ–ಬಟ್ಟೆ ಮತ್ತು ಆಕಾಶ ಒಂದೇ ಇದೆ' ಎಂದು ಅದನ್ನು ನಿಂದಿಸಿ ಪುರಜನರೆಲ್ಲರಿಗೂ ಕೊಳ್ಳಲು ಬೇಕಾದಷ್ಟು ವಸ್ತ್ರಗಳಿರುವ ಬಟ್ಟೆಅಂಗಡಿಯು ಅಲ್ಲಿ ಶೋಭಿಸುತ್ತಿತ್ತು. ೯೮. ಸಮುದ್ರವು ತನ್ನ ಗರ್ಭಸಂಭವೆಯೆಂದೆನಿಸಿದ ಲಕ್ಷ್ಮಿಗೆ ಕಳುಹಿಸಿಕೊಟ್ಟ ಪರಿಶುದ್ಧವಾದ ರತ್ನಗಳ ಸಮೂಹವು ಕ್ರಮವಾಗಿ ಇಡಲ್ಪಟ್ಟು ಶೋಭಿಸುತ್ತಿರುವುದೋ ಎನ್ನುವಂತೆ ರತ್ನಪಡಿ ಮಾರುಕಟ್ಟೆಯಲ್ಲಿ ರತ್ನಗಳ ಸಮೂಹವು ಸುಂದರವಾಗಿತ್ತು. ವ॥ ಮತ್ತು ೯೯. ರತ್ನಗರ್ಭೆಯಾದ ಭೂಮಿಯು ಅರಸನ ಭುಜಬಲದಲ್ಲಿ ಸದಾ ವಾಸವಾಗಿರುತ್ತ ಪಡೆದ ರತ್ನಗಳ ಆ ಸಮೂಹವೇ ಆ ಪಟ್ಟಣದಲ್ಲಿ ನೆಲಸಿರುವುದೋ ಎನ್ನುವಂತೆ ಶ್ರೇಷ್ಠವಾದ ನವರತ್ನಗಳ ರಾಶಿಯು ಅಂಗಡಿಗಳಲ್ಲಿ ಶೋಭಿಸುತ್ತಿತ್ತು. ೧೦೦. ಅಲ್ಲಿಯ ಅಂಗಡಿಗಳಲ್ಲಿ ಮುತ್ತುಗಳನ್ನು ಪೋಣಿಸಿ ರಚಿಸಿದ್ದ ತುಂಬಿಗಳಂತೆ ಕಪ್ಪಾದ ಸೀರೆಯು, ಉನ್ನತವಾದ ಧ್ವಜಸ್ತಂಭವು ತಾಕಿದ್ದರಿಂದ ನಕ್ಷತ್ರ ಸಹಿತವಾದ,

---

1 ಟಿಪ್ಪಣಿ : ಸುತ್ತಲ್, ಅಂಬರ--ಈ ಎರಡು ಶಬ್ದಗಳಲ್ಲಿ ಶ್ಲೇಷವನ್ನಿಟ್ಟು ಚಮತ್ಕಾರವನ್ನು ತರಲಾಗಿದೆ. (ರಂ)

ಕಂ॥ ಅನುದಿನಮಿನಘನರುಚಿಯಿಂ
ಜನಿತೋತ್ಸವದಿಂದೆ ಸೇವಿಸಿದ ವನಜಂಗ
ಳ್ವನಪನ ಪುರಸರದೆ ಪಳ
ಚ್ಚನೆ ಪೊಳೆದಲರ್ದಂತೆ ಕಂಚುವಸರಂ ತೋರ್ಕುಂ ೧೦೧

ಗಗನಶ್ರೀ ರವಿಯೊಂದಂ
ಮಿಗೆ ತಳೆದೊಡೆ ಪುರುಡಿಸುತ್ತೆ ಪುರರಮೆ ತಳೆದ
ಳ್ವಗಬಿಂಬಶತಮನೆಂದೆನೆ
ಸೊಗಯಿಸಿದುದು ತೊಳಪ ಕಂಚುಗಾಱರ ಪಸರಂ ೧೦೨

ವನಿತಾ ಮಧುರಾಧರದಿಂ
ಪನೆ ಬಯಸಿ ಬೆಳರ್ತುದೆನಿಪ ಬೆಳ್ಳೆಲೆಬಿಡದೇಂ
ನೆನೆಯಿಸಿದುದೊ ತರುಣೀಜನ
ಘನವಿರಹಾ ಪಾಂಡುಗಂಡಮಂಡಳದಿರವಂ ೧೦೩

ಚಂ॥ ಸುರಯಿಯ ದುಂಡುದಂಡೆ ಪೊಸಮಲ್ಲಿಗೆಯೈಸರಮುನ್ಮದಾಳಿ ಬಂ
ಧುರನವಮಾಲತೀತ್ರಿಸರಮೊಪ್ಪುವ ಸಂಪಗೆವೂವಿನೊರ್ಚರಂ
ಸುರುಚಿರ ಕುಂದಬೃಂದದ ಶಿಖಾಸ್ರುಜಮೆಂಬಿವನಬ್ಜಸೂತ್ರದಿಂ
ವಿರಚಿಪ ಮಾಲೆಗಾರ್ತಿಯರ ಮಂತಣಮೊಪ್ಪುಗುಮಲ್ಲಿ ಸಂತತಂ ೧೦೪

ಆಕಾಶದ ಒಂದು ತುಂಡು ನೆಲದಮೇಲೆ ಬಿದ್ದಿರುವಂತೆ ಶೋಭಿಸಿತು. ೧೦೧. ಪ್ರತಿ ದಿವಸವೂ ಸೂರ್ಯಕಿರಣಗಳಿಂದ ಉತ್ಸವಗೊಂಡು ಅರಳಿದ ಕಮಲಗಳು ಆ ಮಹಾ ರಾಜನ ಪಟ್ಟಣವೆಂಬ ಸರೋವರದಲ್ಲಿ ಫಳಫಳನೆ ಹೊಳೆಯುತ್ತ ಅರಳಿದ ಹಾಗೆ ಅಲ್ಲಿಯ ಕಂಚುಗಾರರ ಅಂಗಡಿಗಳು ತೋರುತ್ತಿದ್ದವು. ೧೦೨. ಗಗನವೆಂಬ ಶ್ರೀಯು ಒಂದು ರವಿ ಮಂಡಲವನ್ನು ಚೆನ್ನಾಗಿ ಪಡೆದಿದ್ದರೆ (ಅವಳೊಡನೆ) ಸ್ಪರ್ಧೆಯಿಂದ ಆ ಧರ್ಮವತಿಯೆಂಬ ಪಟ್ಟಣದ ಕಾಂತೆಯು ನೂರಾರು ಸೂರ್ಯಮಂಡಳಗಳನ್ನು ಧರಿಸಿರುವಳೋ ಎನ್ನುವಂತೆ ಪ್ರಕಾಶಿಸುವ ಕಂಚುಗಾರರ ಅಂಗಡಿಯ ಸಾಲು ಶೋಭಿಸುತ್ತಿತ್ತು. ೧೦೩. ಸುಂದರ ಸ್ತ್ರೀಯರ ಮಧುರವಾದ ತುಟಿಗಳ ಇಂಪನ್ನು ಅಪೇಕ್ಷಿಸಿ ಬೆಳ್ಳಗಾಯಿತೋ ಎನ್ನಿಸಿಕೊಳ್ಳು ತ್ತಿರುವ ಬಿಳಿದಾದ ವೀಳ್ಯದೆಲೆಗಳು ವಿರಹಿಗಳಾದ ಹೆಂಗಸರ ಪಾಂಡುವರ್ಣದ (ಬಿಳಿಯ) ಕೆನ್ನೆಗಳ ರೀತಿಯನ್ನು ಏನು ನೆನಪುಮಾಡುತ್ತಿದ್ದವೋ ! ೧೦೪. ಸುರಗೀಹೂಗಳ ದುಂಡುದಂಡೆ, ನೂತನವಾದ ಮಲ್ಲಿಗೆಹೂವಿನ ಐದು ಸರಗಳ ಮಾಲೆ, ವಿಶೇಷಮದದಿಂದ ಕೂಡಿದ ದುಂಬಿಗಳಿಂದ ಸುತ್ತುವರಿಯಲ್ಪಟ್ಟ ಮಧುರೆಸಳಿನ ಜಾಜಿಗಳ ಮಾಲೆ, ಸಂಪಗೆ ಹೂವುಗಳ ಒಪ್ಪುವಂತಹ ಏಕಾವಳಿ ಮಾಲೆ, ಶ್ರೇಷ್ಠವಾದ ಕುಂದವೆಂಬ ಮಲ್ಲಿಗೆಯ ಶಿಖೆ ಯಲ್ಲಿ ಧರಿಸುವ ಮಾಲೆ ಎನ್ನುವ ಈ ಮಾಲೆಗಳನ್ನು ಕಮಲದ ದೇಟಿನ ನಾರಿನಿಂದ ರಚಿಸು ವಂತಹ ಮಾಲೆಗಾರ್ತಿಯರ ಅಂಗಡಿಮುಗ್ಗಟ್ಟು ಅಲ್ಲಿ ಯಾವಾಗಲೂ ಒಪ್ಪುತ್ತಿತ್ತು.

ಚಂ॥ ಪರಿಮಳಸಂಭ್ರಮಭ್ರಮರವಿಭ್ರಮ ಭೃನ್ನಿಜದೃಷ್ಟಿಘೃಷ್ಟಿಭಾ
ಸುರಸುಮಮಾಲೆಯುಂ ಸಮಧುತದ್ರಜಮೊಕ್ಕಿರೆ ಪದ್ಮಪತ್ರದೊ
ಳ್ತರುಣವಿಟರ್ನಿರೀಕ್ಷಿಸಿ ಕದಂಬಕದಂಬಮಿದೆಂದು ಬಂದು ಸುಂ
ದರಿಯರ ಮುಂದೆ ನಿಂದು ಬೆಲೆಯಿತ್ತದನೊಯ್ವರತೀವ ರಾಗದಿಂ ೧೦೫

ಕಂ॥ ನೀಲ ಪಟಾಂಚಿತ ಕಂಚುಕ
ಬಾಲಾಬಾಹಾಲತಾಗ್ರದೊಳ್ಮೆಱೆದುದು ಪೂ
ಮಾಲೆ ವಿಧುಂತುದಮುಖದಿಂ
ಸಾಲಿಟ್ಟಿಳಿವಿಂದುವಮೃತಕಣಮಂಜರಿವೊಲ್ ೧೦೬

ತಾರಗೆಗಳನೋರಂತಿರೆ
ವಾರಿಜಮದು ತೆಗೆದು ಕಟ್ಟಿ ಸೆಜೆವೊಪ್ಪಿಸುವಂ
ತಾ ರವಿಗೆಸೆದುದು ರಮಣೀ
ಚಾರುಕರಂ ನೆಗಪೆ ಮಾಲೆಯುಂ ಮಲ್ಲಿಗೆಯಾ ೧೦೭

ವ॥ ಇಂತೆಸೆವ ಮಾಲೆಗಾರ್ತಿಯರಂಗಡಿಯ ಮುಂಗಡೆಯಲ್ಲಿ

೧೦೫. ತಾವರೆಯ ಎಲೆಯಲ್ಲಿ ಸ್ವಚ್ಛವಾದ ಹೂಮಾಲೆಗಳಿದ್ದವು. ಹೂವಾಡಗಿತ್ತಿಯರ ನೋಟವು ಪರಿಮಳಕ್ಕೆ ಮುಗ್ಧವಾದ ದುಂಬಿಗಳಂತೆ ಆ ಮಾಲೆಗಳಮೇಲೆ ಬಿದ್ದಿತ್ತು. ಧೂಳಿಯಿಂದ ಸಹಿತವಾದ ಮಕರಂದವು ಹೂಗಳಿಂದ ಚೆಲ್ಲುತ್ತಿತ್ತು. ಆ ಹೂಮಾಲೆಗಳನ್ನು ವಿಟರು ನೋಡಿ ಇದು ಕದಂಬಪುಷ್ಪವೆಂದು ಬಗೆದು ಆ ಸುಂದರಿಯರ ಮುಂದೆ ಬಂದು ಕೊಂಡುಹೋಗುತ್ತಿದ್ದರು. [ರಂ.] ೧೦೬. ಕರಿಬಣ್ಣದ ಬಟ್ಟೆಯ ಕುಪ್ಪಸವನ್ನು ತೊಟ್ಟ ಬಾಲೆಯರ ಲತೆಯಂತಿರುವ ತೋಳುಗಳ ತುದಿಯಲ್ಲಿ ಧರಿಸಿದ್ದ ಶೋಭಿಸುವ ಹೂಮಾಲೆಯು ರಾಹುಗ್ರಸ್ತವಾದ ಚಂದ್ರನ ಮುಖದಿಂದ ಸಾಲುಗೊಂಡು ಇಳಿಯುತ್ತಿರುವ ಅಮೃತಬಿಂದುಗಳ ಸಮೂಹದಂತೆ ಶೋಭಿಸುತ್ತಿತ್ತು. ೧೦೭. ನಕ್ಷತ್ರಗಳ ಸಮೂಹವನ್ನು ವಶಪಡಿಸಿಕೊಂಡು ಕಮಲವು ಅವನ್ನು ಕಟ್ಟಿ ಸೂರ್ಯನಿಗೆ ಸೆರೆಯಾಳುಗಳನ್ನಾಗಿ ಒಪ್ಪಿಸುತ್ತಿದೆಯೋ ಎಂಬ ಹಾಗೆ ಮನೋಹರವಾದ ಕೈಗಳಿಂದ ಆ ಮಾಲೆಗಾರ್ತಿಯರಾದ ರಮಣಿಯರು ಮಲ್ಲಿಗೆಯ ಆ ಮಾಲೆಗಳನ್ನು ಎತ್ತುತ್ತಿರಲು ಶೋಭಿಸುತ್ತಿತ್ತು. ವ॥ ಹೀಗೆ ಶೋಭಿಸುತ್ತಿರುವ ಮಾಲೆಗಾರ್ತಿಯರ ಅಂಗಡಿಯ ಮುಂಭಾಗದಲ್ಲಿ

ಮ॥ ಮೊದಲೊಳ್ ಕುಂಕುಮಮಿಟ್ಟು ಮತ್ತೆ ನವಕಸ್ತೂರೀರಜಂಬೊಯ್ದು ಮೇ
ಣ್ಬಿದುವಂ ಸಾರ್ಚಿ ವರಾಂಗಿ ಗಂಧಮನೊಡರ್ಚಲ್ತೆಯ್ಯೆ ಕಣ್ಗೊಪ್ಪಿದ
ತ್ತದು ಚಂದ್ರಾಶ್ಮದ ಸಾಣೆಗಲ್ಕ್ರಮದೆ ಮೂವಣ್ಣಂಗಳಂ ತಾಳ್ದು ತ
ತ್ತನ್ವದತೀಪಾಣಿಪಯೋಜಮರ್ದನಕೆ ಪಕ್ಕಾದಿಂದುವೇಂಬಂತೆವೊಲ್ ೧೦೮

ಛಂದೋವೃತ್ತ॥ ಚಂದ್ರಕಾಂತಶಿಲೆಯಲ್ಲಿ ನವಶ್ರೀಖಂಡಮನಿಟ್ಟು ಕರಾಬ್ಜದಿಂ
ಚಂದ್ರಿಕಾಲಸದಪಾಂಗೆಯರ್ ಉದ್ಯತ್ಸೌರಭನಿಶ್ವಸಿತಾಂಗೆಯರ್
ಸಾಂದ್ರಚಂದನದ ಘಟ್ಟಿಗೆ ನೀರಂ ಪಾರದೆ ಮಾಳ್ಪುದನೀಕ್ಷಿಸು
ತ್ತಿಂದ್ರನಂದನನ ಪೋಲ್ವ ಭುಜಂಗರ್ ಕೌತುಕದಿಂ ತಲೆದೂಗುವರ್ ೧೦೯

ಶಾ॥ ಹಾರಂ ಕುಂತಳಮುಯ್ಯಲಾಡೆ ಜಘನಾಭೋಗಂ ಪಯೋಭೃದ್ವಯಂ
ಸಾರಂ ನರ್ತನಮಾಡೆ ಚಿಟ್ಟುಮುಟಿಯಂ ಪೆಣ್ದುಂಬಿಯುಂ ಘ್ರಾಣಸಂ
ಚಾರಂ ಮಾರುತನಾಡೆ ಪಾಯ್ವಳಿಗಳಿಂ ಕರ್ಣೋತ್ಪಲಂ ವೇಣಿಯುಂ
ಸೇರುತ್ತಂ ತಿರಿಕಲ್ಲನಾಡೆ ತೆಗೆವರ್ ಶ್ರೀಖಂಡಮಂ ಬಾಲೆಯರ್ ೧೧೦

೧೦೮. ಮೊದಲು ಕುಂಕುಮವನ್ನು ಹಾಕಿ, ಆಮೇಲೆ ನೂತನವಾದ ಕಸ್ತೂರಿಯ ಪುಡಿಯನ್ನು ಹೊಯ್ದು, ಮೇಲೆ ಪಚ್ಚಕರ್ಪೂರವನ್ನು ಹಾಕಿ ಸೇರಿಸಿ ಸ್ತ್ರೀಯರುಗಳು ಗಂಧವನ್ನು ಮಾಡಲು ತೆಯ್ಯುತ್ತಿರಲು, ಆ ಚಂದ್ರಕಾಂತಶಿಲೆಯಿಂದ ಮಾಡಲ್ಪಟ್ಟ ಗಂಧದಕಲ್ಲು ಕ್ರಮವಾಗಿ ಮೂರುರೀತಿಯ ಬಣ್ಣವನ್ನು ಹೊಂದಿ, ಆ ಹೆಣ್ಣುಮಗಳ ಕೈಗಳೆಂಬ ಕಮಲಗಳನ್ನು ಮರ್ದನ (ಹಿಚುಗು) ಮಾಡುವುದಕ್ಕೆ ತಕ್ಕುದಾದ ಚಂದ್ರನಹಾಗೆ ಕಣ್ಣಿಗೆ ಶೋಭಾಯಮಾನವಾಗಿತ್ತು. ೧೦೯. ಬೆಳುದಿಂಗಳ ಬೆಳಕಿನಂತೆ ಕಡೆಗಣ್ಣೋಟದ ಕಾಂತಿಯುಳ್ಳ ಸುಗಂಧಪರಿಮಳದಿಂದ ಕೂಡಿದ ಶ್ವಾಸವುಳ್ಳ ಸುಂದರಿಯರು ಚಂದ್ರಕಾಂತದಿಂದ ಮಾಡಿದ ಸಾಣೆಕಲ್ಲಿನಮೇಲೆ ಶ್ರೀಗಂಧದ ಕೊರಡನ್ನಿಟ್ಟು ತಮ್ಮ ಕೈಯೆಂಬ ಕಮಲದಿಂದ ಗಟ್ಟಿಯಾದ ಶ್ರೀಗಂಧದ ಕೊರಡಿಗೆ ನೀರನ್ನು ಹಾಕದೆಯೆ ತೆಯ್ದು ಗಂಧ ಮಾಡುತ್ತಿರುವುದನ್ನು ಇಂದ್ರಕುಮಾರನಾದ ಜಯಂತನನ್ನು ಹೋಲುತ್ತಿದ್ದ ವಿಟರುಗಳು ಕುತೂಹಲದಿಂದ ತಲೆದೂಗುತ್ತಿದ್ದರು. (ಚಂದ್ರಕಾಂತಶಿಲೆಯು ಆ ಹೆಂಗಸರ ಅಪಾಂಗವೆಂಬ ಚಂದ್ರಕಿರಣಗಳಿಂದ ತಾನೇ ನೀರನ್ನು ಸ್ರವಿಸುತ್ತಿತೆಂದು ತಿಳಿಯಬೇಕು.) ೧೧೦. ಕೊರಳಲ್ಲಿ ಧರಿಸಿದ ಹಾರವೂ ಜಡೆಯೂ ಜೋಕಾಲಿಯಂತೆ ನೇತಾಡುತ್ತಿರಲು, ಕಟಿಪಶ್ಚಾದ್ಭಾಗಗಳು ಮತ್ತು ಎರಡೂ ಮೊಲೆಗಳು ಸಾರವತ್ತಾದ ನರ್ತನ ಮಾಡುತ್ತಿರಲು ಹೆಣ್ಣುದುಂಬಿಯೂ ಘ್ರಾಣದಲ್ಲಿ ಸಂಚಾರ ಮಾಡುವ ವಾಯುವೂ ಏರಿಳಿಯುವ ಆಟವನ್ನಾಡುತ್ತಿರಲು (ಅಥವಾ ಚಕ್ಕುಳಿಗೂಡಿಸಿದಂತೆ ಮಾಡುತ್ತಿರಲು) ಬಂದು ಹಾಯುತ್ತಿರುವ ದುಂಬಿಗಳಿಂದ (ಮುಂಗುರುಳುಗಳಿಂದ) ಕಿವಿಯಲ್ಲಿರುವ ಕರ್ಣೋತ್ಪಲವೂ ಜಡೆಯೂ ಸೇರುತ್ತ ಆಣೆಕಲ್ಲನ್ನಾಡುತ್ತಿರುವಂತೆ ಇರಲು ಬಾಲೆಯರು ಶ್ರೀಖಂಡ

ವ॥ ಮತ್ತಮಾ ಸುಗಂಧವಿಪಣಿಯಲ್ಲಿ

ಚಂ॥ ತುಱುಬಿದ ಯೂಥಿಕಾಕುಸುಮಮಂಜರಿಯೊಳ್ ನಱುಗಂಪನುಂಡು ಪಾ
ರ್ದೆಱಗಲೊಡರ್ಚೆ ಮಂಡಳಿಸಿ ಮಲ್ಲಳಿಗೊಳ್ವಳಿವಿಂಡು ಕಾರ್ಮುಗಿ
ಲ್ಗಱಿಗಳ ಸಾಲ್ಗಳಿಂ ಸುರಿವ ರತ್ನದ ವೃಷ್ಟಿಯದಾಗೆ ಗಂಧಮಂ
ನೆಱೆತೆಗೆವಚ್ಚಜವ್ವನೆಯ ಸೋರ್ಮುಡಿ ತಾಂ ನವಿಲಂತೆ ನರ್ತಿಕುಂ ೧೧೧

ಮ॥ ಸ್ರ॥ ನೃಪಸೇವಾಯಾತ ಪೃಥ್ವೀಪತಿಸುತವೃತತೂರ್ಯಪ್ರಣಾದಂ ಪಯಃಪಾ
ನಪರ ವ್ಯಾಯಾತ ಗಂಧದ್ವಿಪಗಣ ಘನಘಂಟಾಪ್ರಘೋಷಂ ಪಣಸ್ತ್ರೀ
ವಿಪುಳಾಗಾರಸ್ಥಳೀ ನಿರ್ಗಮಿತ ವಿಟವಪುಃಸೌರಭವ್ಯಾಪ್ತಭೃಂಗೀ
ಚಪಲಧ್ವಾನಂ ಕರಂ ರಂಜಿಸೆ ಬಗೆಗೊಳಿಕುಂ ತತ್ಪುರೀರಾಜಮಾರ್ಗಂ ೧೧೨

ವ॥ ಅದಲ್ಲದೆಯುಂ

ಚಂ॥ ನಡೆವೆಳೆವೆಣ್ಗಳುನ್ನತಕುಚಂಗಳ ಕುಂಕುಮರೇಣು ಸೂಸೆ ಸೋ
ರ್ಮುಡಿಯೆಡೆಯಲ್ಲಿ ತಾಳ್ದ ಮೃಗನಾಭಿಜಪುಷ್ಪರಜಃ ಪ್ರತಾನಮೊ
ರ್ಗುಡಿಸಿರೆ ಬೀದಿಯಲ್ಲಿ ಬಿದುವೊಳ್ ಬಿಡದೊಟ್ಟಿಕೊಳುತ್ತೆ ಗಂಧಮಂ
ಪಡೆದೆಡೆಯಾಡುತಿರ್ಪ ಕರಿ ತಾಳ್ದುದು ಗಂಧಗಜಾಭಿಧಾನಮಂ ೧೧೩

(ಶ್ರೀಗಂಧ) ವನ್ನು ತೆಗೆಯುತ್ತಿದ್ದರು (ತೆಯ್ಯುತ್ತಿದ್ದರು). ವ॥ ಮತ್ತು ಆ ಸುಗಂಧ ಮಾರುವ ಬೀದಿಯಲ್ಲಿ (ಅಂಗಡಿಮುಗ್ಗಟ್ಟನಲ್ಲಿ) ೧೧೧. ದುಂಬಿಗಳ ಹಿಂಡು ಮಲ್ಲಿಗೆ ಹೂವಿನ ಗೊಂಚಲಿನಲ್ಲಿರುವ ಹೊಸದಾದ ಸುಗಂಧವನ್ನು ಕುಡಿದು, ಹಾರಿ ಮತ್ತೆ ಎರಗ ಬೇಕೆಂದು ಮನಸ್ಸುಮಾಡಿ ಮಂಡಲಾಕಾರವಾಗಿ ಮೇಳಗೊಂಡಿರಲು, ಕಪ್ಪಾದ ಮೋಡ ಗಳಂತಿರುವ ಗರಿಗಳ ಸಾಲುಗಳಿಂದ ಸುರಿಯುತ್ತಿರುವ ರತ್ನದ ಮಳೆಯಂತೆ ಮಲ್ಲಿಗೆಹೂ ಕಾಣುತ್ತಿರಲು ಗಂಧವನ್ನು ಚೆನ್ನಾಗಿ ತೆಯ್ದು ತೆಗೆಯುತ್ತಿರುವ ನೂತನ ಯೌವನ ಸ್ತ್ರೀಯರ ತುರುಬು ತಾನು ನವಿಲಿನ ಹಾಗೆ ನರ್ತನ ಮಾಡುತ್ತಿತ್ತು. ೧೧೨. ಆ ಪಟ್ಟಣದ ರಾಜಮಾರ್ಗವು ಚಕ್ರವರ್ತಿಯ ಸೇವೆಗಾಗಿ ಬಂದಂಥ ಸಾಮಂತರಾಜಪುತ್ರರು ಬರುವಾಗ ಬಾರಿಸುವ ಕೊಂಬು ಕಹಳೆ ತಮಟೆಗಳ ಧ್ವನಿಯಿಂದಲೂ, ನೀರುಕುಡಿಯುವು ದರಲ್ಲಿ ಆಸಕ್ತಿಯುಳ್ಳ ಮದ್ದಾನೆಗಳ ಸಂಚಾರದಿಂದ ಉಂಟಾಗುತ್ತಿರುವ ದೊಡ್ಡದೊಡ್ಡ ಗಂಟೆಗಳ ಮಹಾಧ್ವನಿಯಿಂದಲೂ, ವೇಶ್ಯಾಸ್ತ್ರೀಯರ ದೊಡ್ಡ ದೊಡ್ಡ ಮನೆಗಳಿಂದ ಹೊರ ಹೊರಡುತ್ತಿರುವ ವಿಟರುಗಳ ದೇಹಕ್ಕೆ ಅಂಟಿದ್ದ ಸುಗಂಧದ ಪ್ರಸಾರದಿಂದ ಉಂಟಾದ ಹೆಣ್ದುಂಬಿಗಳ ಚಪಲತೆಯ ಝೇಂಕಾರಧ್ವನಿಯಿಂದಲೂ ಚೆನ್ನಾಗಿ ರಂಜಿಸುತ್ತ ಮನಕ್ಕೆ ಆನಂದಗೊಳಿಸುವಂತಿತ್ತು. ವ॥ ಅದೂ ಅಲ್ಲದೆ ೧೧೩. ಓಡಾಡುತ್ತಿರುವ ಬಾಲೆ ಯರುಗಳ ದಪ್ಪನಾದ ಮೊಲೆಗಳ ಕುಂಕುಮದ ಹುಡಿಯು ಚೆಲ್ಲುತ್ತಿರಲು, ತುರುಬಿನಲ್ಲಿ ಧರಿಸಿದ ಕಸ್ತೂರಿಯಿಂದ ಉಂಟಾದ ಪುಷ್ಪಗಳ ಧೂಳಿನ ಸಮೂಹವು ಒಂದುಗೂಡಿರಲು, ಆ ರಾಜಬೀದಿಯಲ್ಲಿ ಬಿದ್ದ ಆ ಧೂಳಿಯನ್ನು ಬಿಡದೆ ತನ್ನ ನಡುವಿನ ಮೇಲೆ ಎರಚಿ ಕೊಳ್ಳುತ್ತ ಸುಗಂಧ ಪರಿಮಳವನ್ನು ಪಡೆದು ತಿರುಗಾಡುತ್ತಿರುವ ಆನೆಯು ಗಂಧಗಜ

ಮ॥ ಮೊದಲೊಳ್ ಕುಂಕುಮಮಿಟ್ಟು ಮತ್ತೆ ನವಕಸ್ತೂರೀರಜಂಬೊಯ್ದು ಮೇ
ಣ್ಪಿದುವಂ ಸಾರ್ಚಿ ವರಾಂಗಿ ಗಂಧಮನೊಡರ್ಚಲ್ತೆಯ್ಯೆ ಕಣ್ಗೊಪ್ಪಿದ
ತ್ತಿದು ಚಂದ್ರಾಶ್ಮದ ಸಾಣೆಗಲ್ಕ್ರಮದೆ ಮೂವಣ್ಣಂಗಳಂ ತಾಳ್ದು ತ
ತ್ತನ್ನದತೀಪಾಣಿಪಯೋಜಮರ್ದನಕೆ ಪಕ್ಕಾದಿಂದುವೆಂಬಂತೆವೊಲ್ ೧೦೮

ಛಂದೋವೃತ್ತ॥ ಚಂದ್ರಕಾಂತಶಿಲೆಯಲ್ಲಿ ನವಶ್ರೀಖಂಡಮನಿಟ್ಟು ಕರಾಬ್ಜದಿಂ
ಚಂದ್ರಿಕಾಲಸದಪಾಂಗೆಯರ್ ಉದ್ಯತ್‌ಸೌರಭನಿಶ್ವಸಿತಾಂಗೆಯರ್
ಸಾಂದ್ರಚಂದನದ ಘಟ್ಟಿಗೆ ನೀರಂ ಪಾರದೆ ಪೂಳ್ಪುದನೀಕ್ಷಿಸು
ತ್ತಿಂದ್ರನಂದನನ ಪೋಲ್ವ ಭುಜಂಗರ್ ಕೌತುಕದಿಂ ತಲೆದೂಗುವರ್ ೧೦೯

ಶಾ॥ ಹಾರಂ ಕುಂತಳಮುಯ್ಯಲಾಡೆ ಜಘನಾಭೋಗಂ ಪಯೋಭೃದ್ವಯಂ
ಸಾರಂ ನರ್ತನಮಾಡೆ ಚಿಟ್ಟುಮುಱಿಯುಂ ಪೆಣ್ದುಂಬಿಯುಂ ಘ್ರಾಣಸಂ
ಚಾರಂ ಮಾರುತನಾಡೆ ಪಾಯ್ವಳಿಗಳಿಂ ಕರ್ಣೋತ್ಪಲಂ ವೇಣಿಯುಂ
ಸೇರುತ್ತಂ ಕಿರಿಕಲ್ಲನಾಡೆ ತೆಗೆವರ್ ಶ್ರೀಖಂಡಮಂ ಬಾಲೆಯರ್ ೧೧೦

೧೦೮. ಮೊದಲು ಕುಂಕುಮವನ್ನು ಹಾಕಿ, ಆಮೇಲೆ ನೂತನವಾದ ಕಸ್ತೂರಿಯ ಪುಡಿ ಯನ್ನು ಹೊಯ್ದು, ಮೇಲೆ ಪಚ್ಚಕರ್ಪೂರವನ್ನು ಹಾಕಿ ಸೇರಿಸಿ ಸ್ತ್ರೀಯರುಗಳು ಗಂಧ ವನ್ನು ಮಾಡಲು ತೆಯ್ಯುತ್ತಿರಲು, ಆ ಚಂದ್ರಕಾಂತಶಿಲೆಯಿಂದ ಮಾಡಲ್ಪಟ್ಟ ಗಂಧದಕಲ್ಲು ಕ್ರಮವಾಗಿ ಮೂರುರೀತಿಯ ಬಣ್ಣವನ್ನು ಹೊಂದಿ, ಆ ಹೆಣ್ಣುಮಗಳ ಕೈಗಳೆಂಬ ಕಮಲ ಗಳನ್ನು ಮರ್ದನ (ಹಿಚುಗು) ಮಾಡುವುದಕ್ಕೆ ತಕ್ಕುದಾದ ಚಂದ್ರನಹಾಗೆ ಕಣ್ಣಿಗೆ ಶೋಭಾಯಮಾನವಾಗಿತ್ತು. ೧೦೯. ಬೆಳುದಿಂಗಳ ಬೆಳಕಿನಂತೆ ಕಡೆಗಣ್‌ನೋಟದ ಕಾಂತಿಯುಳ್ಳ ಸುಗಂಧಪರಿಮಳದಿಂದ ಕೂಡಿದ ಶ್ವಾಸವುಳ್ಳ ಸುಂದರಿಯರು ಚಂದ್ರಕಾಂತ ದಿಂದ ಮಾಡಿದ ಸಾಣೆಕಲ್ಲಿನಮೇಲೆ ಶ್ರೀಗಂಧದ ಕೊರಡನ್ನಿಟ್ಟು ತಮ್ಮ ಕೈಯೆಂಬ ಕಮಲ ದಿಂದ ಗಟ್ಟಿಯಾದ ಶ್ರೀಗಂಧದ ಕೊರಡಿಗೆ ನೀರನ್ನು ಹಾಕದೆಯೆ ತೆಯ್ದು ಗಂಧ ಮಾಡುತ್ತಿ ರುವುದನ್ನು ಇಂದ್ರಕುಮಾರನಾದ ಜಯಂತನನ್ನು ಹೋಲುತ್ತಿದ್ದ ವಿಟರುಗಳು ಕುತೂ ಹಲದಿಂದ ತಲೆದೂಗುತ್ತಿದ್ದರು. (ಚಂದ್ರಕಾಂತಶಿಲೆಯು ಆ ಹೆಂಗಸರ ಅಪಾಂಗ ವೆಂಬ ಚಂದ್ರಕಿರಣಗಳಿಂದ ತಾನೇ ನೀರನ್ನು ಸ್ರವಿಸುತ್ತಿತೆಂದು ತಿಳಿಯಬೇಕು.) ೧೧೦. ಕೊರಳಲ್ಲಿ ಧರಿಸಿದ ಹಾರವೂ ಜಡೆಯೂ ಜೋಕಾಲಿಯಂತೆ ನೇತಾಡುತ್ತಿರಲು, ಕಟಿಪಶ್ಚಾದ್ಭಾಗಗಳು ಮತ್ತು ಎರಡೂ ಮೊಲೆಗಳು ಸಾರವತ್ತಾದ ನರ್ತನ ಮಾಡುತ್ತಿರಲು ಹೆಣ್ಣುದುಂಬಿಯೂ ಘ್ರಾಣದಲ್ಲಿ ಸಂಚಾರ ಮಾಡುವ ವಾಯುವೂ ಏಳಿಯುವ ಆಟ ವನ್ನಾಡುತ್ತಿರಲು (ಅಥವಾ ಚಕ್ಕುಳಿಗೂಡಿಸಿದಂತೆ ಮಾಡುತ್ತಿರಲು) ಬಂದು ಹಾಯು ತ್ತಿರುವ ದುಂಬಿಗಳಿಂದ (ಮುಂಗುರುಳುಗಳಿಂದ) ಕಿವಿಯಲ್ಲಿರುವ ಕರ್ಣೋತ್ಪಲವೂ ಜಡೆಯೂ ಸೇರುತ್ತ ಅಣೆಕಲ್ಲನ್ನಾಡುತ್ತಿರುವಂತೆ ಇರಲು ಬಾಲೆಯರು ಶ್ರೀಖಂಡ

ವ॥ ಮತ್ತಮಾ ಸುಗಂಧವಿಪಣಿಯಲ್ಲಿ

ಚಂ॥ ತುಱುಬಿದ ಯೂಥಿಕಾಕುಸುಮಮಂಜರಿಯೊಳ್ ನಱುಗಂಪನುಂಡು ಪಾ
ರ್ದೆಱಗಲೊಡರ್ಚಿ ಮಂಡಳಿಸಿ ಮಲ್ಲಳಿಗೊಳ್ವಳಿವಿಂಡು ಕಾರ್ಮುಗಿ
ಲ್ಗಱಿಗಳ ಸಾಲ್ಗಳಿಂ ಸುರಿವ ರತ್ನದ ವೃಷ್ಟಿಯದಾಗೆ ಗಂಧಮಂ
ನೆಱೆತೆಗೆವಚ್ಚಜವ್ವನೆಯ ಸೋರ್ಮುಡಿ ತಾಂ ನವಿಲಂತೆ ನರ್ತಿಕುಂ ೧೧೧

ಮ॥ ಸ್ರ॥ ನೃಪಸೇವಾಯಾತ ಪೃಥ್ವೀಪತಿಸುತವೃತತೂರ್ಯಪ್ರಣಾದಂ ಪಯಃಪಾ
ನಪರ ವ್ಯಾಯಾತ ಗಂಧದ್ವಿಪಗಣ ಘನಘಂಟಾಪ್ರಘೋಷಂ ಪಣಸ್ತ್ರೀ
ವಿಪುಳಾಗಾರಸ್ಥಳೀ ನಿರ್ಗಮಿತ ವಿಟವಪುಃಸೌರಭವ್ಯಾಪ್ತಭೃಂಗೀ
ಚಪಲಧ್ವಾನಂ ಕರಂ ರಂಜಿಸೆ ಬಗೆಗೊಳಿಕುಂ ತತ್ಪುರೀರಾಜಮಾರ್ಗಂ ೧೧೨

ವ॥ ಅದಲ್ಲದೆಯುಂ

ಚಂ॥ ನಡೆವೆಳೆವೆಣ್ಗಳುನ್ನತಕುಚಂಗಳ ಕುಂಕುಮರೇಣು ಸೂಸೆ ಸೋ
ರ್ಮುಡಿಯೆಡೆಯಲ್ಲಿ ತಾಳ್ದ ಮೃಗನಾಭಿಜಪುಷ್ಪರಜಃ ಪ್ರತಾನವೊ
ರ್ಗುಡಿಸಿರೆ ಬೀದಿಯಲ್ಲಿ ಬಿದುವೊಳ್ ಬಿಡದೊಟ್ಟಿಕೊಳುತ್ತೆ ಗಂಧಮಂ
ಪಡೆದೆಡೆಯಾಡುತಿರ್ಪ ಕರಿ ತಾಳ್ದುದು ಗಂಧಗಜಾಭಿಧಾನಮಂ ೧೧೩

(ಶ್ರೀಗಂಧ) ವನ್ನು ತೆಗೆಯುತ್ತಿದ್ದರು (ತೆಯ್ಯುತ್ತಿದ್ದರು). ವ|| ಮತ್ತು ಆ ಸುಗಂಧ ಮಾರುವ ಬೀದಿಯಲ್ಲಿ (ಅಂಗಡಿಮುಗ್ಗಟ್ಟಿನಲ್ಲಿ) ೧೧೧. ದುಂಬಿಗಳ ಹಿಂಡು ಮಲ್ಲಿಗೆ ಹೂವಿನ ಗೊಂಚಲಿನಲ್ಲಿರುವ ಹೊಸದಾದ ಸುಗಂಧವನ್ನು ಕುಡಿದು, ಹಾರಿ ಮತ್ತೆ ಎರಗ ಬೇಕೆಂದು ಮನಸ್ಸುಮಾಡಿ ಮಂಡಲಾಕಾರವಾಗಿ ಮೇಳಗೊಂಡಿರಲು, ಕಪ್ಪಾದ ಮೋಡ ಗಳಂತಿರುವ ಗರಿಗಳ ಸಾಲುಗಳಿಂದ ಸುರಿಯುತ್ತಿರುವ ರತ್ನದ ಮಳೆಯಂತೆ ಮಲ್ಲಿಗೆಹೂ ಕಾಣುತ್ತಿರಲು ಗಂಧವನ್ನು ಚೆನ್ನಾಗಿ ತೆಯ್ದು ತೆಗೆಯುತ್ತಿರುವ ನೂತನ ಯೌವನ ಸ್ತ್ರೀಯರ ತುರುಬು ತಾನು ನವಿಲಿನ ಹಾಗೆ ನರ್ತನ ಮಾಡುತ್ತಿತ್ತು. ೧೧೨. ಆ ಪಟ್ಟಣದ ರಾಜಮಾರ್ಗವು ಚಕ್ರವರ್ತಿಯ ಸೇವೆಗಾಗಿ ಬಂದಂಥ ಸಾಮಂತರಾಜಪುತ್ರರು ಬರುವಾಗ ಬಾರಿಸುವ ಕೊಂಬು ಕಹಳೆ ತಮಟೆಗಳ ಧ್ವನಿಯಿಂದಲೂ, ನೀರುಕುಡಿಯುವು ದರಲ್ಲಿ ಆಸಕ್ತಿಯುಳ್ಳ ಮದ್ದಾನೆಗಳ ಸಂಚಾರದಿಂದ ಉಂಟಾಗುತ್ತಿರುವ ದೊಡ್ಡದೊಡ್ಡ ಗಂಟೆಗಳ ಮಹಾಧ್ವನಿಯಿಂದಲೂ, ವೇಶ್ಯಾಸ್ತ್ರೀಯರ ದೊಡ್ಡ ದೊಡ್ಡ ಮನೆಗಳಿಂದ ಹೊರ ಹೊರಡುತ್ತಿರುವ ವಿಟರುಗಳ ದೇಹಕ್ಕೆ ಅಂಟಿದ್ದ ಸುಗಂಧದ ಪ್ರಸಾರದಿಂದ ಉಂಟಾದ ಪೆಣ್ದುಂಬಿಗಳ ಚಪಲತೆಯ ಝೇಂಕಾರಧ್ವನಿಯಿಂದಲೂ ಚೆನ್ನಾಗಿ ರಂಜಿಸುತ್ತ ಮನಕ್ಕೆ ಆನಂದಗೊಳಿಸುವಂತಿತ್ತು. ವ|| ಅದೂ ಅಲ್ಲದೆ ೧೧೩. ಓಡಾಡುತ್ತಿರುವ ಬಾಲೆ ಯರುಗಳ ದಪ್ಪನಾದ ಮೊಲೆಗಳ ಕುಂಕುಮದ ಹುಡಿಯು ಚೆಲ್ಲುತ್ತಿರಲು, ತುರುಬಿನಲ್ಲಿ ಧರಿಸಿದ ಕಸ್ತೂರಿಯಿಂದ ಉಂಟಾದ ಪುಷ್ಪಗಳ ಧೂಳಿನ ಸಮೂಹವು ಒಂದುಗೂಡಿರಲು, ಆ ರಾಜಬೀದಿಯಲ್ಲಿ ಬಿದ್ದ ಆ ಧೂಳಿಯನ್ನು ಬಿಡದೆ ತನ್ನ ನಡುವಿನ ಮೇಲೆ ಎರಚಿ ಕೊಳ್ಳುತ್ತ ಸುಗಂಧ ಪರಿಮಳವನ್ನು ಪಡೆದು ತಿರುಗಾಡುತ್ತಿರುವ ಆನೆಯು ಗಂಧಗಜ

ಕಂ॥ ಲೋಲಾಕ್ಷಿಯರೈದುತ್ತಿರೆ
ಸಾಲಿಟ್ಟವರಳಕಗಂಧಕೊಡನೈತರುತಂ
ರೋಲಂಬಮಾಲೆ ಮೇಲದು
ನೀಲದ ನಡೆ ತೋರಣಂಬೊಲೇನೊಪ್ಪಿದುದೋ ೧೧೪

ಕಿಳಿರ್ವಶ್ವಂಗಳ ನಿನದಂ
ತಳರ್ವ ಗಜಂಗಳ ನಿಬದ್ಧನಿಗಳಧ್ವನಿ ಕೆಂ
ದಳಿರ್ವಣ್ಣದ ಕೇತನದೊಳ್
ಮಿಳಿರ್ವುರು ಘಂಟಾನಿನಾದಮಲ್ಲಿಡಿದಿರ್ಕುಂ ೧೧೫

ಉ॥ ಪಚ್ಚೆಯತೋರಣಂ ಕನಕದುಯ್ಯಲಪೂರ್ವಸುರೇಂದ್ರರತ್ನದಿಂ
ದಚ್ಚರಿದಿರ್ದ ವೇದಿಕೆ ಸುಧಾಕರಕಾಂತದ ಸೆಜ್ಜೆ ಕಾಂತಿಯಂ
ಬಿಚ್ಚಳಿಪಚ್ಚಬಜ್ಜರಗದಂ ನವಮೌಕ್ತಿಕಸೌಧಮಾಲೆ ಕ
ಣ್ಗಚ್ಚರಿಯಾದ ರನ್ನವನೆ ರಯ್ಯಮದಲ್ಲಿಯ ಸೂಳೆಗೇರಿಯೊಳ್ ೧೧೬

ಮಲ್ಲಿಕಾಮಾಲೆ॥ ಕಾಮಶಾಸ್ತ್ರಮನೋದುಗುಂ ಗಿಳಿ ಪೇಳ್ಗುಮಂತದರ್ಥಮಂ
ಪ್ರೇಮದಿಂ ಬಳಿಸಾರ್ದು ಸಾರಿಕೆ ಬೀಣೆಯಂ ನೆರೆಬಾಜಿಕುಂ
ಸೋಮರತ್ನ ಸಜೀವಪುತ್ರಿಕೆ ಪಾಡುಗುಂ ಕಳಕಂಠಿಗಳ್
ಕಾಮನುದ್ಗಮಚಾಪನೋಲಗಿಸಿರ್ಪ ಸಚ್ಚರಿಯೆಂಬಿನಂ ೧೧೭

ವೆಂಬ ಹೆಸರನ್ನು ಹೊಂದಿತು. ೧೧೪. ಚಪಲನೇತ್ರೆಯರಾದ ಸ್ತ್ರೀಯರು ಬರುತ್ತಿರಲು, ಭ್ರಮರಗಳ ಸಾಲುಗಳು ಆ ಹೆಂಗಸರುಗಳ ಅಲಕಾವಳಿಯಲ್ಲಿರುವ ಸುಗಂಧಕ್ಕೆ ಇಚ್ಛಿಸಿ ಅವರೊಡನೆಯೇ ಸಾಲುಸಾಲಾಗಿ ಅವರ ಮೇಲೆ ಬರುತ್ತಿರಲು ಅದು ನೀಲವರ್ಣದ ನಡೆಯುತ್ತಿರುವ ತೋರಣದ ಹಾಗೆ ಏನು ಶೋಭಿಸಿತೋ ! ೧೧೫ ಹೇಷಾರವವನ್ನು ಮಾಡುತ್ತಿರುವ ಕುದುರೆಗಳ ಧ್ವನಿಯೂ, ಹೋಗುತ್ತಿರುವ ಆನೆಗಳಿಗೆ ಕಟ್ಟಲ್ಪಟ್ಟ ಸರಪಳಿಗಳ ಧ್ವನಿಯೂ, ಕೆಂಪು ಚಿಗುರಿನ ಬಣ್ಣದ ಧ್ವಜದಲ್ಲಿ ಕೂಡಿರುವ ಶ್ರೇಷ್ಠವಾದ ಗಂಟೆಯು ಧ್ವನಿಯೂ ಆ ರಾಜಮಾರ್ಗದಲ್ಲಿ ತುಂಬಿತ್ತು. ೧೧೬. ಅಲ್ಲಿಯ ಸೂಳೆಯರ ಕೇರಿಯಲ್ಲಿರುವ ರತ್ನವಿಕಾರವಾದ ಮನೆಗಳು, ಪಚ್ಚೆಮಣಿಗಳ ತೋರಣ, ಬಂಗಾರದ ಜೋಕಾಲಿಗಳೇ ಮೊದಲಾದವುಗಳಿಂದ, ಇಂದ್ರನೀಲಮಣಿಯಿಂದ ಮಾಡಿದ ಆಶ್ಚರ್ಯಕರ ಜಗುಲಿ, ಚಂದ್ರಕಾಂತಶಿಲೆಯ ಶಯ್ಯಾಗೃಹ, ಕಾಂತಿಯನ್ನು ಹೊರಸೂಸುವ ನಿರ್ಮಲವಾದ ವಜ್ರದ ಕದ, ನೂತನವಾದ ಮುತ್ತುಗಳ ಅಲಂಕಾರದಿಂದ ಕೂಡಿದ ಉಪ್ಪರಿಗೆಗಳು ಕಣ್ಣಿಗೆ ಆಶ್ಚರ್ಯವನ್ನುಂಟುಮಾಡತಕ್ಕವುಗಳಾಗಿ ಶೃಂಗಾರದಿಂದ ಕೂಡಿ ಇದ್ದವು. ೧೧೭. ಹೂವುಗಳೇ ಬಾಣವಾಗಿ ಉಳ್ಳವನಾದ ಕಾಮನು ಆಶ್ಚರ್ಯಕರವಾದ ಓಲಗವನ್ನು ಕೊಟ್ಟು ಇರುವನೋ ಎನ್ನುವಂತೆ ಗಿಳಿಯು ಕಾಮಶಾಸ್ತ್ರವನ್ನು ಓದುತ್ತಿತ್ತು ಮತ್ತು ಅದರ ಅರ್ಥವನ್ನೂ ಹೇಳುತ್ತಿತ್ತು. ಪ್ರೇಮದಿಂದ ಹತ್ತಿರಕ್ಕೇ ಬಂದು ಹೆಣ್ಣುಗಿಳಿಯು ವೀಣೆಯನ್ನು ಚೆನ್ನಾಗಿ ನುಡಿಸುತ್ತಿತ್ತು. ಚಂದ್ರಕಾಂತಶಿಲೆಯಿಂದ ಮಾಡಿದ ಜೀವಂತ

ರಗಳೆ॥ ಅಲ್ಲಿ ಮಣಿಭವನದೊಳ್
ಸಲ್ಲಲಿತ ಸೌಧದೊಳ್
ಪೊಸತಪ್ಪ ಸೆಜ್ಜೆಯೊಳ್
ಮಿಸುಪ ನೆಲೆವನೆಗಳೊಳ್
ಪನ್ನೀರ್ಗಳಂ ಮೀದು
ಚೆನ್ನೆಸೆಯೆಲ್ಕೆತಂದು
ಬಿಳಿಯ ಸಪುರಮನುಟ್ಟು
ಪೊಳೆವಂದುಗೆಯನಿಟ್ಟು
ಮುಟಿುತಂ ಸಡಗರಿಸಿ
ಕಾಂಚಿಯನಲಂಕರಿಸಿ
ಘುಸೃಣರಸದಣ್ಪಟ್ಟು
ಮಿಸುನಿರವಕೆಯ ತೊಟ್ಟು
ತೊಳತೊಳಪ ತೋರಮಾಣಿಕದ ಮಾಲೆಯನಾಂತು
ಥಳಥಳಿಪ ಪಂಚರತ್ನದ ಪದಕಮುಮನಾಂತು
ಭುಜಮಕರಿಕೆಯ ಬಾಹುಪೂರ ಕಟಕಂಗಳಂ
ನಿಜರುಚಿಯನುಗುಳ್ವ ನವರತ್ನದುಂಗುರಗಳಂ
ತಳೆದಾಣಿಮುತ್ತುಗಳ ಹತ್ತೆಸರಮಂ ಧರಿಸಿ
ಕಳಿವೆತ್ತ ಪೊಸರತ್ನದೋಲೆಯನಲಂಕರಿಸಿ

ಗೊಂಬೆಯು ಹಾಡುತ್ತಿತ್ತು. ಅದರಂತೆ ಕೋಗಿಲೆಗಳೂ ಹಾಡುತ್ತಿದ್ದವು. ರಗಳೆ|| ಅಲ್ಲಿಯ ರತ್ನನಿರ್ಮಿತ ಮನೋಹರವಾದ ಮೇಲುಪ್ಪರಿಗೆಗಳ, ನೂತನವಾದ ಶಯ್ಯಾಗೃಹದಿಂದ ಕೂಡಿರುವ ಶೋಭಿಸುವ ವಾಸಗೃಹಗಳಲ್ಲಿ ಪನ್ನೀರಿನಲ್ಲಿ ಸ್ನಾನಮಾಡಿ, ಮನೋಹರವಾಗಿ ಕಾಣುವಂತೆ ಹೊರಬಂದು, ಬಿಳಿಯ ತೆಳುವಾದ ಸೀರೆಯನ್ನುಟ್ಟು ಹೊಳೆಯುವ ಕಾಲಂದಿಗೆ ಯನ್ನು ತೊಟ್ಟು, ಸಡಗರದಿಂದಕೂಡಿ ಪಟ್ಟೆಯನ್ನು ಇಟ್ಟುಕೊಂಡು ಅಲಂಕಾರಮಾಡಿ ಕೊಂಡು, ಕುಂಕುಮಕೇಸರಿಯ ಬೊಟ್ಟನ್ನು ಹಣೆಯ ಮೇಲೆ ಇಟ್ಟುಕೊಂಡು, ಬಂಗಾರದ ಜರತಾರಿಯ ಕುಪ್ಪಸವನ್ನು ತೊಟ್ಟುಕೊಂಡು, ಪ್ರಕಾಶಿಸುವ ದೊಡ್ಡ ದೊಡ್ಡ ಮಾಣಿಕದ ಮಾಲೆಯನ್ನು ಹಾಕಿಕೊಂಡು, ಥಳಥಳಿಸುವ ಪಂಚರತ್ನಗಳ ಪದಕಗಳನ್ನು ಧರಿಸಿ, ತೋಳಿನಲ್ಲಿ ಮಕರಪತ್ರವನ್ನೂ ನಾಗಮುರಿ ಆಭರಣವನ್ನೂ ಹಾಕಿಕೊಂಡು, ಸ್ವಯಂ ಪ್ರಕಾಶ ಬೀರುವ ನವರತ್ನದ ಉಂಗುರಗಳನ್ನಿಟ್ಟುಕೊಂಡು, ಗುಂಡಾಗಿರುವ ಆಣಿಮುತ್ತು ಗಳ ಕುತ್ತಿಗೆಗೆ ಬಿಗಿಯಾಗುವಂತಹ ಸರಗಳನ್ನು ಧರಿಸಿ, ಕಳಾಪೂರ್ಣವಾದ ನೂತನ

ತೋರಮುತ್ತಿನ ಮೂಕುತಿಯನಾಂತು ಕಂಪೆಸೆವ
ಸಾರಮೃಗಮದದ ತಿಲಕಮನಾಂತು ನುಣ್ಪೆಸೆವ
ತೆಳ್ಗದಂಪಿಂಗೆ ಮಕರಿಕೆಯನಂದಂಗೊಳಿಸಿ
ಒಳ್ಗುರುಳ್ಗೆ ಮುತ್ತಿನ ಬಲೆಯನೊಲ್ದು ಕೈಗೊಳಿಸಿ
ಮಾಲತಿಯ ಮಾಲೆಯಂ ನಿಡುಜಡೆಯೊಳಳವಡಿಸಿ
ಲೀಲೆಯಿಂ ಕರ್ಣದೊಳ್ ಕರ್ಣಪೂರಮನಿರಿಸಿ
ಕಡೆಗಣ್ಣಕಾಂತಿ ಕುಸುಮಾಸ್ತ್ರಮಂ ಕರೆವುತಿರೆ
ಕುಡುವುರ್ವು ಕುಡುವಿಲ್ಲ ಚೆಲ್ವ ಸೈಗಱೆವುತಿರೆ
ಕೆಂಬಲ್ಲ ನುಂಬೆಳಗು ದೆಸೆದೆಸೆಗೆ ಪಸರಿಸಿರೆ
ಬಿಂಬಾಧರದ ಕಾಂತಿ ಕೆಂಬರಲನಿಳಿಪುತಿರೆ
ತೊಡವೆಳಗು ಥಳಥಳಿಸೆ
ಬಿಡುಮುಡಿಯನಳಿ ಬಳಸೆ
ಮುಖರಸಂ ತುಳ್ಕುತಿರೆ
ನಖದ ರುಚಿ ನಿಳ್ಕುತಿರೆ
ನಡೆಗಂಚೆ ತೊಡರುತಿರೆ
ನುಡಿಗೆ ಗಿಳಿವೊಡನೆ ಬರೆ
ಮೊಲೆ ಮೇಲುದೊತ್ತರಿಸೆ
ಸಲೆ ಚೆಲ್ವು ಬಿತ್ತರಿಸೆ

ರತ್ನದ ಓಲೆಗಳನ್ನಿಟ್ಟುಕೊಂಡು, ದೊಡ್ಡ ದೊಡ್ಡ ಮುತ್ತಿನ ಮೂಗುತಿಯನ್ನು ಮೂಗಿನಲ್ಲಿಟ್ಟು, ಸುಗಂಧ ಪೂರಿತವಾದ ಸಾರವತ್ತಾದ ಕಸ್ತೂರಿತಿಲಕವನ್ನು ಹೊಂದಿ, ನುಣುಪಾದ ತೆಳ್ಳನೆಯ ಕೆನ್ನೆಗಳಿಗೆ ಮಕರಿಕಾಪತ್ರವನ್ನು ಅಲಂಕಾರಗೊಳಿಸಿಕೊಂಡು, ಒಳ್ಳೆಯ ಕುರುಳುಗಳಿಗೆ ಮುತ್ತಿನ ಜಾಲರಿಯನ್ನು ಹಾಕಿಕೊಂಡು, ಮಾಲತೀಮಾಲೆಯನ್ನು ನಿಡುಜಡೆಯಲ್ಲಿ ಧರಿಸಿ, ಲೀಲೆಯಿಂದ ಕಿವಿಯಲ್ಲಿ ಚಂದ್ರಮುರುವನ್ನಿಟ್ಟುಕೊಂಡು, ಕಡೆಗಣ್ಣಿನ ಕಾಂತಿಯು ಮನ್ಮಥಬಾಣಗಳನ್ನು ಸುರಿಸುತ್ತಿರಲು, ಕುಡಿಹುಬ್ಬುಗಳು ಮನ್ಮಥನ ಬಿಲ್ಲಿನ ಚೆಲುವನ್ನು ಸೂರೆಮಾಡುತ್ತಿರಲು, ಕೆಂಪಾದ ಹಲ್ಲುಗಳ ನುಣ್ಣನೆಯ ಬೆಳಕು .ದಿಕ್ಕುದಿಕ್ಕಿಗೆ ಪ್ರಸಾರಗೊಳ್ಳುತ್ತಿರಲು, ತೊಂಡೆಯಹಣ್ಣಿನಂತಹ ತುಟಿಗಳ ಕಾಂತಿಯು ಮಾಣಿಕ್ಯದ ಕಾಂತಿಯನ್ನು ಕೀಳುಮಾಡುತ್ತಿರಲು, ತೊಡವುಗಳ ಪ್ರಕಾಶವು ಥಳಥಳಿಸುತ್ತಿರಲು, ಬಿಟ್ಟ ಮುಡಿಯನ್ನು ದುಂಬಿಗಳು ಸುತ್ತುವರೆದಿರಲು, ಮುಖದಲ್ಲಿ ತಾರುಣ್ಯರಸವು ತುಳುಕಾಡುತ್ತಿರಲು, ಉಗುರುಗಳ ಕಾಂತಿಯು ಹೊರಸೂಸುತ್ತಿರಲು, ನಡೆಯುವಿಕೆಗೆ ಹಂಸಪಕ್ಷಿಯು ತೊಡರುತ್ತಿರಲು, ನುಡಿಗೆ ಗಿಳಿಯು ಬೆನ್ನುಹತ್ತಿ ಬರುತ್ತಿರಲು, ಮೊಲೆಗಳು ಮೇಲುದವನ್ನು ಒತ್ತರಿಸಿ ಹೊರಬರುತ್ತಿರಲು, ಅದರ

ಘನನಿತಂಬಂ ಜಡಿಯೆ
ತನುಮಧ್ಯಮದು ಸೆಡೆಯೆ
ನೋಡೆ ನಡೆಗೆಡಿಸುತಂ
ಕೂಡೆ ಕೆಳೆಗೊಳಿಸುತಂ
ಚೇಟಮಂ ಪೆರ್ಚಿಸುತೆ
ಕೂಟಮಂ ಮಚ್ಚಿಸುತೆ
ಕಳಗಳದ ಕಳರವದ
ಚಳದಳಕ ಮಿಳದಳಿಕ
ವೆಳನಗೆಯ ಕಳೆಯುಗೆಯ
ಸರಸಿಜದ ಸಿರಿಮೊಗದ
ಗುರುಕುಚದ ವರಕಚದ
ಚದುರಿಡಿದ ಮೃದುವಡೆದ
ಸವಿನುಡಿಯ ತಳಿರಡಿಯ
ಪುರವಾರನಾರಿಯರ್
ಪರಮ ಸುಕುಮಾರಿಯರ್
ಸುರತರಣಧೀರೆಯರ್
ಸರಸಗುಣ ಸಾರೆಯರ್
ಪೊಸದೇಸಿವೆತ್ತು ಸಂತತಮಿಂತು ರಾಜಿಪರ್
ಕುಸುಮಶರನಂ ರತಿಯುನನುದಿನಂ ಪೂಜಿಪರ್

ಚೆಲ್ಲುವು ಚನ್ನಾಗಿ ಪ್ರಕಟವಾಗುತ್ತಿರಲು, ದೊಡ್ಡ ದೊಡ್ಡ ನಿತಂಬಪ್ರದೇಶವು ಗದಗದಿಸುತ್ತಿರಲು, ಚಿಕ್ಕ ನಡುವು ಸೆಡೆದು ನಿಂತಿರಲು, ನೋಡುವವರ ನಡೆಯನ್ನು ಕೆಡಿಸುತ್ತ, ಕೂಡಲು ಸ್ನೇಹಗೊಳ್ಳುತ್ತ, ಆಸಕ್ತಿಯನ್ನು ಅಧಿಕಗೊಳಿಸುತ್ತ, ಕೂಟವನ್ನು ರೂಢಿಗೊಳಿಸುತ್ತ, ಅವ್ಯಕ್ತಮಧುರವಾದ ಧ್ವನಿಯಕಂಠದ ಅವ್ಯಕ್ತಮಧುರವಾದ ಧ್ವನಿ ಕೋಗಿಲೆಯ ಸ್ವರದ, ಹಾರಾಡುತ್ತಿರುವ ಅಳಕದ ಸುವಾಸನೆಗೆ ಬಂದ ದುಂಬಿಗಳ ಸಮೂಹವನ್ನುಳ್ಳ, ಮಂದಹಾಸದಿಂದ ಕೂಡಿ ಕಾಮಶಾಸ್ತ್ರದ ಕಲೆಗೆ ಪಾತ್ರರಾಗಿರುವ, ಕಮಲದಂತಹ ಗೆಲುವಾದ ಮುಖದ, ದಪ್ಪ ಮೊಲೆಯ, ಶ್ರೇಷ್ಠವಾದ ಕೂದಲಿನ ಚಾತುರ್ಯದಿಂದಲೂ, ಮೃದುತ್ವದಿಂದಲೂ ಕೂಡಿದ ಸವಿಮಾತಿನವರಾದ, ತಳಿರಿನಂತಹ ಪಾದಗಳುಳ್ಳ ಆ ಪಟ್ಟಣದ ಸೂಳೆಯರು ಒಳ್ಳೆಯ ಕುಮಾರಿಯರೆನಿಸಿ, ಸುರತವೆಂಬ ರಣದಲ್ಲಿ ಧೀರೆಯರಾಗಿ, ಶೃಂಗಾರಾದಿ ರಸಜ್ಞೆಯರೆನಿಸಿ, ಗುಣಸಂತೆಯರಾಗಿ ನೂತನ ಸೊಬಗನ್ನು ಹೊಂದಿ ಸತತವೂ ಶೋಭಿಸುತ್ತಿದ್ದರು ; ಮನ್ಮಥ ರತಿದೇವಿಯರುಗಳನ್ನು ಪ್ರತಿದಿನವೂ

ಶಾ॥ ಆ ವಾರಾಂಗನೆಯರ್ಕಳಾಸ್ಯಕಮಳಂ ಮಂದಸ್ಮಿತಜ್ಯೋತ್ಸ್ನೆಯಿಂ
ತೀವಿರ್ದುಂ ನಯನೋತ್ಪಳಂ ಕನಕ ತಾಟಂಕಾರ್ಕಬಿಂಬಪ್ರಭಾ
ಶ್ರೀವಿನ್ಯಾಸಕವಾಗಿಯುಂ ಮುಗಿದುದಿಲ್ಲೇಕೆಂಬೊಡೀ ತಾಣದೊಳ್
ಕಾವಂ ಕಿತ್ತಡಿಯಿರ್ಪನಾತನ ಮಹತ್ವಂ ತಾನಿದೆಂಬರ್ಬುಧರ್ ೧೧೮

ಉ॥ ಕೆಂಬವಳೆಂಬೊಲೊಪ್ಪುವರುಣಾಧರಮಂ ಗಿಳಿಬಿಂಬವೆಂದು ತಾಂ
ಚುಂಬಿಸಲಾಟಿಸುತ್ತಿರೆ ಕರಾಗ್ರದೊಳೊಯ್ಯನೆ ನೋಡಿ ತಮ್ಮ ಬಾ
ಯ್ದಂಬುಲಮಿಕ್ಕೆ ಪಾರವಧುಗಳ್ ಸವಿದಾಸ್ಯದೆ ಕೆಂಪನಾಂತುದ
ಲ್ಲೇಂಬೊಡದೆಂತು ಸಾರ್ದುದೊ ತದಂಚಿತ ಚಂಚುಗೆ ಕೆಂಬರಲ್ಗದಿರ್ ೧೧೯

ವ॥ ಮತ್ತಂ

ಮ॥ ಸ್ರ॥ ಉದಯಂಬೆತ್ತೊಪ್ಪುವರ್ಕಂ ಘನರುಚಿಕಲಶಂ ಕಾಂಚನೋದಂಚಿತಂ ಪ
ರ್ಬಿದ ಸಂಧ್ಯಾರಾಗವೊಪ್ಪಂಬಡೆದೆಸೆವ ಮಹಾಪದ್ಮರಾಗಾಂಶು ತಾನಾ
ಗೆ ದಿಟಂ ಪೂರ್ವಾದ್ರಿಯೆಂಬಂತೆಸೆಗುಮವಿರತಂ ಭೂಮಿಕಾಧಾರಕಂ ಕಾಂ
ತಿದಸದ್ವಾತಾಯನಪ್ರಸ್ಫುರಿತಮಮರ್ದುಗಾಣಿಕ್ಯಮಾಣಿಕ್ಯಹರ್ಮ್ಯಂ ೧೨೦

ಪೂಜಿಸುತ್ತಿದ್ದರು. ೧೧೮. ಆ ವೇಶ್ಯಾಸ್ತ್ರೀಯರುಗಳ ಮುಖವೆಂಬ ಕಮಲವು ತನ್ನ ಮಂದಹಾಸವೆಂಬ ಬೆಳುದಿಂಗಳಿನಿಂದ ತುಂಬಿಕೊಂಡಿದ್ದರೂ, ಕಣ್ಣೆಂಬ ನೈದಿಲೆಯು ಬಂಗಾರಮಯವಾದ ಓಲೆಯೆಂಬ ಸೂರ್ಯಪ್ರಭೆಯ ಸಿರಿಯಿಂದ ವಿಶೇಷವಾಗಿ ಇರಿಸಲ್ಪಟ್ಟು ದಾಗಿದ್ದರೂ ಅವು ಮುದುಡಿಕೊಳ್ಳಲಿಲ್ಲ. ಏಕೆಂದರೆ ಈ ಸ್ಥಾನದಲ್ಲಿ ಕಾಮನು (ಮಂತ್ರ ವಾದಿಯಾದ) ಋಷಿಯ ಹಾಗೆ ಇದ್ದಾನೆ. ಇದು ಆತನ ಮಹತ್ವವೆಂದು ಪಂಡಿತರು ಗಳು ಹೇಳುತ್ತಾರೆ. ೧೧೯. ಕೆಂಪಾದ ರತ್ನವೆನ್ನುವ ಹಾಗೆ ಶೋಭಿಸುವ ಕೆಂಪುತುಟಿ ಯನ್ನು ಗಿಳಿಯು ತೊಂಡೆಯಹಣ್ಣೆಂದು ಕುಕ್ಕಲು ಹೊಂಚುಹಾಕಿರಲು ಅವರು ಕೂಡಲೇ ನೋಡಿ ತಮ್ಮ ಬೆರಳುಗಳಿಂದ ಬಾಯ ತಂಬುಲವನ್ನು ತೆಗೆದು ಇಕ್ಕಲಾಗಿ ಅದನ್ನು ಆ ಗಿಳಿಯು ತಿಂದು ಚಂಚುಪುಟದಲ್ಲಿ ಕೆಂಪುಬಣ್ಣವನ್ನು ಧರಿಸಿತು. ಹಾಗಲ್ಲ ವೆನ್ನುವುದಾದರೆ ಆ ಗಿಳಿಯ ಚಂಚುವಿಗೆ ಕೂಡಿರುವ ಕೆಂಪುರತ್ನದ ಬಣ್ಣವು ಹೇಗೆ ಉಂಟಾಯಿತೋ ! ವ॥ ಮತ್ತು ೧೨೦. ಆ ಗಣಿಕೆಯರ. ಉಪ್ಪರಿಗೆಯ ಮೇಲಿ ರುವ ಬಂಗಾರದಿಂದ ಮಾಡಲ್ಪಟ್ಟ ವಿಶೇಷವಾದ ಪ್ರಕಾಶದಿಂದ ಶೋಭಿಸುವ ಕಲಶವು ಉದಯಗೊಂಡ ಸೂರ್ಯನ ಹಾಗೂ, ಅಲ್ಲಿರುವ ಪದ್ಮರಾಗಮಣಿಯಿಂದ ಹೊರ ಹೊಮ್ಮುವ ಕಿರಣಗಳು ಸಂಧ್ಯಾರಾಗದ ಹಾಗೂ ಆಗಲು, ನಿಜವಾಗಿ ಉದಯ ಪರ್ವತವೋ ಎನ್ನುವ ಹಾಗೆ ಭೂಮಿಯ ತಳಹದಿಯೇ ಆಧಾರವಾಗಿ ಉಳ್ಳ ಬೆಳಕನ್ನು

ವ॥ ಇಂತೆಸೆವ ನಿರ್ಮಿತ ಶರ್ಮಭರ್ಮಹರ್ಮ್ಯದೊಳ್ಮೊರ್ಮೆಯಿಂ ಪೆರ್ಮೆವೆತ್ತು

ಕಂ॥ ಪದಪದಮರ್ದಿರೆ ಸುಧಾಸಾ
ರದ ರದನಚ್ಛದದ ರದದ ರುಚಿ ಬೆರಸೆ ಲಸ
ನ್ಮದ ಮದನಾಗಮಮಂ ತ
ಪ್ಪದೆ ಪಡೆದುಪದೇಶಿಪರ್ವಿದಗ್ಧೆಯರದಱೊಳ್ ೧೨೧

ವ॥ ಮತ್ತಂ

ಕಂ॥ ನೆಲೆವಾಡದ ನೆಲೆನೆಲೆಯೊಳ್
ನೆಲೆವೊಲೆಯೊಳ್ತಳೆದು ವೀಣೆಯಂ ಬಾಜಿಸುತುಂ
ನೆಲೆಗೊಂಡಿರ್ಪುದು ಸತತಂ
ನೆಲೆಯಾದ ಲತಾಂಗದಂಗನಾಜನಮಾಗಳ್ ೧೨೨

ಮ॥ ಸ್ರ॥ ಇದು ಚಿತ್ರಂ ಬಾಳಿಮಿನ್ಮಿಂಚನೆ ಕಱೆದಪುದಂಭೋರುಹಂ ಚಂದ್ರಿಕಾಸಂ
ಪದಮಂ ಬೀಱುತ್ತಮಿರ್ಲ್ದಿರ್ದಪುದು ಮಧುಕರಶ್ರೇಣಿ ತಾರಾಳಿಯಂ ತಾ
ಳ್ದುದು ಚಾಂಪೇಯಪ್ರಸೂನಂ ವಿಚಕಿಲಮುಕುಳಂಬೆತ್ತುದೆಂದಲ್ಲಿ ಹರ್ಮ್ಯಾ
ಗ್ರದ ವಾರಸ್ತ್ರೀಯರಂ ಶಂಕಿಪರವಯವಮಂ ನೋಡಿದರ್ ಭ್ರಾಂತಿಯಿಂದಂ೧೨೩

ಕೊಡುತ್ತಿರುವ ಆ ಕಿಡಿಗಳ ಮೂಲಕ ಸದಾ ಕಂಗೊಳಿಸುತ್ತಿದ್ದವು. ವ॥ ಈ ರೀತಿಯಲ್ಲಿ ಶೋಭಿಸುತ್ತಿರುವಂತೆ ಸುಖದಾಯಕವಾದ ಕನಕದಿಂದ ನಿರ್ಮಿಸಲ್ಪಟ್ಟ ಉಪ್ಪರಿಗೆಗಳಲ್ಲಿ ಪ್ರೀತಿಯ ಆಧಿಕ್ಯನ್ನು ಹೊಂದಿ, ೧೨೧. ಆ ಉಪ್ಪರಿಗೆಯ ಮನೆಗಳಲ್ಲಿ ಪ್ರೌಢೆಯರಾದ ಸ್ತ್ರೀಯರು ತುಟಿಯ ಕಾಂತಿಯ ಸವಿಯೂ, ಹಲ್ಲುಗಳ ಪ್ರಕಾಶವೂ ಸೊಗಸಾಗಿ ಕೂಡಿ ಕೋಡಿರಲು, ಸುಧೆಯಂತೆ ಕೇಳಲು ಸಾರಭೂತವಾದ ಸೊಗಸು ಬೆರಸಿದ (ಮಾತುಗಳಿಂದ) ಪ್ರಕಾಶಮಾನನಾಗಿ ಮದದಿಂದ ಕೂಡಿದ ಮನ್ಮಥನ ಆಗಮನ ಕಾರಣವಾದ ಕಾಮ ಶಾಸ್ತ್ರವನ್ನು ಭೋಧಿಸುತ್ತಿದ್ದರು. ವ॥ ಮತ್ತು ೧೨೨. ಆಗ ಪ್ರತಿಯೊಂದು ವಾಸಗೃಹದ ಉಪ್ಪರಿಗೆಗಳಲ್ಲೂ ಯಾವಾಗಲೂ ಆ ವೇಶ್ಯಾಂಗನಾಜನವು ತಮ್ಮ ಮೊಳೆಯುತ್ತಿರುವ ಸ್ತನಗಳ ಮೇಲೆ ಮೀಣೆಯನ್ನಿರಿಸಿಕೊಂಡು ಬಾರಿಸುತ್ತ, ಸಕಲಜನರ ಅರ್ಥಪ್ರಾಣ ಮಾನಾದಿಗಳ ಅಪಹರಣಕ್ಕೆ ನೆಲೆಯಾದ ಆ ಸ್ಥಳದಲ್ಲಿ ಲತೆಯಂತಿರುವ ಸುಂದರ ದೇಹದಿಂದ ಕೂಡಿ ವಾಸವಾಗಿದ್ದರು. ೧೨೩. ಇದು ವಿಚಿತ್ರ (ಏಕೆಂದರೆ) ಬಾಳಿಮಿಾನ್ ಮಿಂಚನ್ನು ಉಂಟುಮಾಡುತ್ತ ; ಕಮಲವು ಬೆಳದಿಂಗಳ ಬೆಳಕನ್ನು ಕರೆಯುತ್ತ ಈ ಹೊಗಸರ ದೇಹ ದಲ್ಲಿ ಇದೆ. ದುಂಬಿಗಳ ಸಮೂಹವು ನಕ್ಷತ್ರ ಸಮೂಹವನ್ನು ಧರಿಸಿರುವುದು ; ಸಂಪಿಗೆಯ ಹೂವು ದುಂಡುಮಲ್ಲಿಗೆಯ ಮೊಗ್ಗನ್ನು ಹೊಂದಿರುವುದು, ಎಂದು ಅಲ್ಲಿ ಉಪ್ಪರಿಗೆಗಳ ಮೇಲಿರುವ ಸ್ತ್ರೀಯರ ಅವಯವವನ್ನು ನೋಡಿ ಭ್ರಾಂತಿಯಿಂದ ಜನರು ಶಂಕೆಗೊಳ್ಳು ತ್ತಿದ್ದರು. (ಬಾಳೆ ಮಿಾನ್‌ಗಳಿಗೆ ಸಮಾನವಾದುದು ಕಣ್ಣು, ಅದು ತನ್ನ ಕಡೆಗಣ್ಣ ಕಾಂತಿ ಯಿಂದ ಮಿಂಚನ್ನು ಮುಖವು ಕಮಲಸದೃಶ, ಅದು ಮುಖದಿಂದ ಚಂದ್ರಿಕಾಸದೃಶ ಮಂದಸ್ಮಿತವನ್ನೂ ಧರಿಸಿತ್ತು. ಭ್ರಮರಗಳಂತೆ ಕಪ್ಪಾದ ತುರುಬು ದುಂಡುಮಲ್ಲಿಯನ್ನೂ

ವ|| ಅಂತುಮಲ್ಲದೆಯುಂ

ಮ|| ಸ್ರ|| ಪುರಸೌಧಾಗ್ರಸ್ಥಿತಾತ್ಮೇಶ್ವರ ವಿರಹಶಿಖಾವಚ್ಛಿಖಾತಪ್ತಕಾಂತಾ
ಕರಕಂಜಾತಾಸಿತಾಂಭೋರುಹನಿಹತ ತದುದ್ಯದ್ರಜಃಪುಂಜಮಂಜು
ಸ್ಫುರದಂಕಾಂಕಂ ಮೃಗಾಂಕಂ ತದಧಿಕಮುಖರುಕ್ತಸ್ಕರಂ ಪೂರ್ಣನಪ್ಪಂ
ವರಯುಕ್ತದ್ಯೋಷಿದಾಸ್ಯಾಹೃತ ಸಕಲಕಲಂ ಸಕ್ರಮಂ ಕುಂದುತಿರ್ಪಂ ೧೨೪

ವ|| ಮತ್ತಮಾ ಪುಟಭೇದನಸ್ಫುಟಪ್ರದೇಶದಲ್ಲಿ

ಮ|| ಸ್ರ|| ವರವೇದಂ ವಾದ್ಯನಾದಂ ನೆರೆದಿರೆ ಕುಸುಮಾಮೋದಮಾಹ್ಲಾದವಾದಂ
ನರವಾರಂ ನರ್ತಕೀರಂಜಿತನಟನಮುದಾರಾಂಗನಾಗೀತಸಾರಂ
ಸ್ಫುರದತ್ಯಂತಾಂಶು ತತ್ಯನ್ವಿತ ನವಮಣಿಭಿತ್ಯಂಚಿತಂ ದೇವನುತ್ಯಂ
ಸುರಕಾಂತಂ ತನ್ನಿಶಾಂತಂ ಕರಮೆಸೆಗುಮನಂತಪ್ರದೀಪಾಳ್ಯುಪಾಂತಂ ೧೨೫

ವ|| ಮತ್ತಂ

ಧರಿಸಿದ್ದರಿಂದ ಮಲ್ಲಿಗೆ ಮೊಗ್ಗನ್ನು ಧರಿಸಿದಂತೆಯೂ ಇತ್ತೆಂದು ತಿಳಿಯಬೇಕು.) ವ|| ಹೀಗೂ ಅಲ್ಲದೆ ೧೨೪. ಆ ಧರ್ಮವತೀಪುರದ ಉಪ್ಪರಿಗೆಮನೆಗಳ ಮೇಲೆ ನಿಂತು ತನ್ನ ಹೃದಯೇಶ್ವರನ ವಿರಹವೆಂಬ ಅಗ್ನಿಜ್ವಾಲೆಯಿಂದ ತಪ್ತಳಾದ ಕಾಂತೆಯೊಬ್ಬಳ ಹಸ್ತಕಮಲವೆಂಬ ನೀಲೋತ್ಪಲದಿಂದ ಹೊಡೆದ ಹೊಡೆತದಿಂದ ಉದುರಿದ ರಜಸ್ಸಿನ ಸಮೂಹದಿಂದ ಒಪ್ಪುವ ಕಪ್ಪಿನ ಗುರು ತನ್ನ ಹೊಂದಿದ ಚಂದ್ರನು ಆ ಹೆಂಗಸಿನ ಅಧಿಕತರವಾದ ಮುಖದ ಪ್ರಭೆಯನ್ನು ಸೆಳೆದುಕೊಂಡ ಕಳ್ಳನಾಗಿ ಹದಿನಾರು ಕಲೆಗಳಿಂದ ಪರಿಪೂರ್ಣನಾಗಿ ಆಗುವನು. ಪ್ರಿಯರಿಂದ ಕೂಡಿರುವವರಾದ ಆ ಸ್ತ್ರೀಯರ ಅಪಹಾರ ಮಾಡಿದ ಮುಖದ ಸಕಲಕಲೆಗಳುಳ್ಳವನಾದ್ದರಿಂಡ ಕ್ರಮವಾಗಿ ಕಳಾಕ್ಷಯವನ್ನು ಹೊಂದಿದವನೂ ಆಗುವನು. ವ|| ಮತ್ತು ಆ ಪಟ್ಟಣದ ಬಹಿರಂಗಪ್ರದೇಶಗಳಲ್ಲಿ ೧೨೫. ಶ್ರೇಷ್ಠವಾದ ಋಗ್ಯಜುಸ್ಸಾಮಾದಿ ವೇದಗಳು, ವೀಣಾವೇಣು ಮೃದಂಗಾದಿ ವಾದ್ಯಧ್ವನಿಗಳು ಕೂಡಿರಲು, ಪುಷ್ಪಗಳ ಆಮೋದವು, ಆಹ್ಲಾದಕರವಾದ ಮಾತನ್ನಾಡುವ ಮನುಷ್ಯರ ಗುಂಪು, ನರ್ತಕಿಯರ ಮನೋಹರವಾದ ನೃತ್ಯವು, ಉದಾರರಾದ ಸ್ತ್ರೀಯರ ಸಂಗೀತದ ಸ್ವಾರಸ್ಯವು, ಪ್ರಕಾಶಮಾನವಾದ ಕಾಂತಿಯ ಸಮೂಹದಿಂದ ನೂತನ ರತ್ನನಿರ್ಮಿತ ಗೋಡೆಗಳಿಂದ ಕೂಡಿರುವುದಾದ ದೇವತಾಜನರಿಂದ ; ಸ್ತೋತ್ರಾರ್ಹವಾದ ದೇವತೆಗಳಿಗೆ ಮನೋಜ್ಞವೆನಿಸುವ ಅನೇಕ ದೀವಿಗೆಗಳ ಸಾಲುಗಳು ಸಮೀಪದಲ್ಲಿಯೇ ಇರುವವುಗಳಾದ ಆ ಮನೆಗಳು ಶೋಭಿಸುತ್ತಿದ್ದವು. ವ|| ಮತ್ತು

ಉ॥ ತುಂಗಮೃದಂಗಮಂಗಳರವಂ ಕಹಳಾಧ್ವನಿ ತಾಳನಿಸ್ವನಂ
ರಂಗದಪಾಂಗಸಂಗತನಟೀನವನರ್ತನಮಾಗಮಪ್ರಘೋ
ಷಂಗಳಭಂಗಶಂಖನಿನದಂ ಬಿನದಂಬಡೆದಿರ್ದ ಭಕ್ತಲೋ
ಕಂಗಳ ಕಂಗಳಂಗವಿಸೆ ಸಂಗಳಿಸಿರ್ಪುವು ಲಿಂಗಗೇಹದೊಳ್ ೧೨೬

ಕಂ॥ ಆ ಲಿಂಗಾಲಯ ಶಿಖರ
ಸ್ಥೂಲೋನ್ನತಕನಕಕಳಶಮದು ಗಗನಶ್ರೀ
ಪಾಲಂಗೀವುದು ಕಾನಕ
ಚೇಲದ ಚೆಲ್ವಂ ನಿರಂತರಂ ನಿಜರುಚಿಯಿಂ ೧೨೭

ಮೃಡಸೇವೆಗೆ ಬಿಡುಗಣ್ಣರ್
ನಡೆತರಲೆಂದಜನೊಡರ್ಚಿ ನಿಚ್ಚಣಿಗೆಯನಿ
ರ್ಕಡೆಯಿಟ್ಟನೆಂಬ ಪೆಂಪಂ
ಪಡೆದಂಬರಚುಂಬಿ ಗೋಪುರಂ ಕರಮೆಸೆಗುಂ ೧೨೮

ಅಮರಾಪಗೆಯೊಳ್ ಮಿಂದಂ
ದಮರಿಯರಾ ಗೋಪುರಾಗ್ರದೊಳ್ ನಿಂದದಱ
ಗ್ರಿಮ ಕನಕಕಲಶರುಚಿಯನ
ಹಿಮಕರಕರಮೆಂದು ಕೇಶಮಂ ಪಸರಿಸುವರ್ ೧೨೯

೧೨೬. ಆ ನಗರದ ಶಿವಾಲಯಗಳಲ್ಲಿ ಶ್ರೇಷ್ಠವಾದ ಮೃದಂಗದ ಮಂಗಳಕಾರಕ ಧ್ವನಿಯೂ, ಕಹಳೆ ಮತ್ತು ತಾಳಗಳಧ್ವನಿಗಳೂ, ಮೇಳದ ಅಪಾಂಗನೋಟದಿಂದ ಸಂಗತರಾದ ನರ್ತಕಿಯರ ನೂತನವಾದ ನರ್ತನವೂ, ಆಗಮಮಂತ್ರಗಳ ವಿಶೇಷವಾದ ಘೋಷವೂ, ಎಡೆಬಿಡದೆ ಸಾಗುತ್ತಿರುವ ಶಂಖದಧ್ವನಿ ಮೊದಲಾದವು ಸಂತೋಷಗೊಂಡಿದ್ದ ಭಕ್ತ ಸಮೂಹದ ಕಣ್ಣಿನಲ್ಲಿ ತುಂಬಿದಂತೆ ಕೂಡಿಕೊಂಡು ಇದ್ದುವು. ೧೨೭. ಆ ಶಿವಾಲಯದ ಶಿಖರದಲ್ಲಿರುವ ದಪ್ಪನಾಗಿಯೂ ಎತ್ತರವಾಗಿಯೂ ಇರುವ ಆ ಭಂಗಾರದ ಕಳಶವು ಗಗನ ಲಕ್ಷ್ಮಿಯ ಪಾಲಕನಾದ ವಿಷ್ಣುವಿಗೆ ಬಂಗಾರಮಯವಾದ ಬಟ್ಟೆಯ ಚೆಲುವನ್ನು ತನ್ನ ಕಾಂತಿಯಿಂದ ನಿರಂತರವೂ ಕೊಡುತ್ತಿತ್ತು. ೧೨೮. ಪರಮೇಶ್ವರನ ಸೇವೆಗೆ ದೇವತೆಗಳು ನಡೆದುಬರುವುದಕ್ಕೆಂದು ಬ್ರಹ್ಮನು ನಿಚ್ಚಣಿಕೆಯನ್ನು ಮಾಡಿ ಎರಡೂಕಡೆ ಇಟ್ಟನೋ ಎನ್ನುವ ಘನತೆಯನ್ನು ಪಡೆದು ಗಗನಚುಂಬಿಯಾದ ಗೋಪುರವು ಚೆನ್ನಾಗಿ ಶೋಭಿಸುತ್ತಿತ್ತು. ೧೨೯. ದೇವಗಂಗಾನದಿಯಲ್ಲಿ ದೇವತಾಸ್ತ್ರೀಯರು ಸ್ನಾನಮಾಡಿ, ಆ ಶಿವಾಲಯದ ಗೋಪುರಾಗ್ರದಲ್ಲಿ ನಿಂತು ಆ ಗೋಪುರದ ಅಗ್ರಭಾಗದಲ್ಲಿರುವ ಬಂಗಾರದ ಕಳಶದ ಪ್ರಕಾಶವನ್ನು ಸೂರ್ಯನಕಿರಣನೆಂದು ತಿಳಿದು ತಮ್ಮ ಕೂದಲುಗಳನ್ನು ಒಣಗಿಸಿಕೊಳ್ಳಲು

ಹರಗೃಹದಿಂ ನೆಗೆದು ನಭೋಂ
ತರಕೈದುವ ಧೂಪಧೂಮದಾಮೋದಕ್ಕಂ
ಬರಲಕ್ಷ್ಮಿ ನಿಜಶಿರೋಜೋ
ತ್ಕರಮಂ ಬಿರ್ಚಿದವೊಲಬ್ದಮಗ್ರದೊಳೆಸೆಗುಂ ೧೩೦

ಅಲ್ಲಿ ಧರಾಸುರವಿಸರಂ
ಮೆಲ್ಲನೆ ಮಾಳ್ಪತುಳಹೋಮಧೂಮಂ ಪುಗೆ ಕ
ಣ್ಣಲ್ಲಿ ಸಲೆ ಮೇಲೆ ನಡೆಯಲ್
ಸಲ್ಲದೆ ರವಿ ದಕ್ಷಿಣೋತ್ತರಾಯಣನೆನಿಪಂ ೧೩೧

ವ॥ ಇಂತನಂತವಿಭವ ಸನಾಥಮಾಗಿ ಪೆರ್ಮೆವೆತ್ತಾ ಪುರಮಧ್ಯದಲ್ಲಿ

ಚಂ॥ ಕನಕಕವಾಟಕೋಟಿ ಘಟಿತಸ್ಫುಟರತ್ನ ಮರೀಚಿವೀಚಿ ಚಂ
ದನಘನಸಾರಸೌರಭ ಸಮಾವೃತ ಭೃಂಗರಮಾಧಿವಾಸವಾ
ಸನಳಿನಮಿಂದುಕಾಂತಗೃಹಕಾಂತಿಜಳಂ ಲಲನಾಕ್ಷಿಕೈರವಂ
ಘನತರ ರಾಜಹಂಸನಿರೆ ರಾಜಗೃಹಂ ಕೊಳದಂತೆ ರಂಜಿಕುಂ ೧೩೨

ವ॥ ಅಂತೊಪ್ಪುವಂತಃಪುರದ ವಜ್ರಮಯ ಬಹಿಃಪ್ರಾಕಾರದಂತರಾಳದೊಳ್

ಹರಡಿಕೊಳ್ಳುತ್ತಿದ್ದರು. ೧೩೦. ಆ ಶಿವಾಲಯದಿಂದ ಮೇಲಕ್ಕೆ ನಭೋಮಂಡಲಕ್ಕೆ ಹಾರಿಹೋಗುವ ಧೂಪದ ಹೊಗೆಯ ಸುಗಂಧಕ್ಕೆ ಆಕಾಶಲಕ್ಷ್ಮಿಯು ತನ್ನ ಕೂದಲುಗಳನ್ನು ಬಿಚ್ಚಿ ಹರಡಿದಹಾಗೆ ಮೋಡವು ಮೇಲ್ಭಾಗದಲ್ಲಿ ಶೋಭಿಸುತ್ತಿತ್ತು. ೧೩೧. ಆ ದೇವಾಲಯದಲ್ಲಿ ಬ್ರಾಹ್ಮಣರುಗಳ ಸಮೂಹವು ನಿಧಾನವಾಗಿ ಮಾಡುತ್ತಿದ್ದ ಶ್ರೇಷ್ಠವಾದ ಯಜ್ಞದ ಹೋಮದ ಹೊಗೆಯು ಕಣ್ಣಲ್ಲಿ ತುಂಬಲಾಗಿ ಮುಂದೆ ತನ್ನ ಮೂಲಮಾರ್ಗದಲ್ಲಿ ನಡೆಯಲು ಶಕ್ಯವಿಲ್ಲದೆ ಸೂರ್ಯನು ದಕ್ಷಿಣಾಯನ, ಉತ್ತರಾಯಣ ಸಂಚಾರಿ ಎನಿಸಿದನು. ವ|| ಹೀಗೆ ಅನಂತ ವೈಭವಗಳಿಗೆ ಆಧಾರಭೂತವಾಗಿ ಹಿರಿಮೆಗೊಂಡಿದ್ದ ಆ ಪಟ್ಟಣದ ಮಧ್ಯದಲ್ಲಿ .೧೩೨. ಆ ನಗರದ ರಾಜಗೃಹವು ಬಂಗಾರದ ಬಾಗಿಲುಗಳ ತುದಿಗಳಲ್ಲಿ ಕೆತ್ತಲ್ಪಟ್ಟಿರುವ ಪ್ರಕಾಶಮಾನವಾದ ರತ್ನಗಳ ಕಿರಣಗಳ ಅಲೆ ಅಲೆಗಳಿಂದಲೂ, ಶ್ರೀಗಂಧ ಪಚ್ಚಕರ್ಪೂರಾದಿ ಸೌರಭದಿಂದ ಬರಮಾಡಿಕೊಳ್ಳಲ್ಪಟ್ಟ ಭೃಂಗಗಳಿಂದಲೂ, ಲಕ್ಷ್ಮೀದೇವಿಯ ಅಧಿವಾಸದ ಮನೆಯೇ ಕಮಲವಾಗಿಯೂ, ಚಂದ್ರಕಾಂತಶಿಲಾಕಾಂತಿಯೇ ನೀರಾಗಿಯೂ, ಅಲ್ಲಿನ ಹೆಂಗಸರ ಕಣ್ಣುಗಳೇ ಕನ್ನೈದಿಲೆಗಳಾಗಿಯೂ, ಶ್ರೇಷ್ಠನಾದ ರಾಜನೇ ಹಂಸಪಕ್ಷಿಯಾಗಿಯೂ ಇರಲಾಗಿ ಸರೋವರದ ಹಾಗೆ ಶೋಭಿಸುತ್ತಿತ್ತು. ವ|| ಹೀಗೆ ಶೋಭಿಸುತ್ತಿರುವ ಅಂತಃಪುರದ ವಜ್ರವಿಕಾರವಾದಂಥ

ಕಂ|| ಮರಕತರತ್ನದ ಪೊಸಮಂ
ದಿರದೊಳ್ ಹಯರಾಜಿ ಮೆಱೆದುದದಱುದ್ರುಚಿ ತ
ಳ್ತಿರೆ ತತ್ಪ್ರತಾಪಮದು ಭಾ
ಸ್ಕರಾಶ್ವವೃಂದಮನೆ ತಂದು ಸೆಱೆಯಿಕ್ಕಿದವೊಲ್ ೧೩೩

ತಾರಾಚಲಘನಗುಹೆಯೊಳ
ಗೈರಾವತಮಿರ್ಪತೆಱದೆ ಶಶಿಮಣಿಸೌಧಾ
ಗಾರದೆ ತದ್ರುಚಿಧವಳಾ
ಕಾರಾನ್ವಿತ ಭದ್ರಗಜಮದೇನೊಪ್ಪಿದುದೋ ೧೩೪

ತೊಳಪ ನಿಜರುಚಿಸುಧೆಗೆ ಬಗೆ
ಯೆಳಸಿ ಕರಂ ನಿಂದ ಭೀಕರಾಹಿಗಳನಿದೇಂ
ತಳೆದುದೊ ಪೇಳೆನೆ ಶಸ್ತ್ರಾ
ವಳಿಯಂ ತಳೆದಮಮ ಶಸ್ತ್ರಶಾಲೆಯದೆಸೆಗುಂ ೧೩೫

ವ|| ಅದಲ್ಲದೆಯುಂ

ಮ|| ವರಕರ್ಪೂರ ಪರಾಗರಂಗಮುರುಕಸ್ತೂರೀಪ್ರಲಿಪ್ತಂ ಸುಮೋ
ತ್ಕರಮಾಲಾಕಲಿತಂ ಪ್ರದೀಪಪಟು ಧೂಪಾಮೋದ ಚಿತ್ರಾಂಬರಾ
ವರಣಂ ರತ್ನವಿತಾನರಂಜಿತಮುದಂಚತ್ಪಂಚವಾದ್ಯಂ ಸುಧಾ
ಕರಕಾಂತೋಪಳನಿರ್ಮಿತಂ ಗಿರಿಶಪೂಜಾಮಂದಿರಂ ರಂಜಿಕುಂ ೧೩೬

ಸುತ್ತಣ ಪ್ರಾಕಾರದ ಮಧ್ಯಭಾಗದಲ್ಲಿ ೧೩೩. ಮರಕತಮಣಿಯಿಂದ ಮಾಡಲ್ಪಟ್ಟ ಹೊಸದಾದ ಮಂದಿರದಲ್ಲಿ ಕುದುರೆಗಳ ಸಾಲು ಆ ಮರಕತಮಣಿಯ ಶ್ರೇಷ್ಠವಾದ ಹಸಿರು ಬಣ್ಣದ ಪ್ರಕಾಶದಿಂದ ಅದೇ ಬಣ್ಣವನ್ನು ಹೊಂದಿ ಆ ರಾಜನು ಸಾಮರ್ಥ್ಯದಿಂದ ಸೂರ್ಯನರಥಕ್ಕೆ ಕಟ್ಟುವ ಸಪ್ತಾಶ್ವಗಳನ್ನೇ ತಂದು ಸೆರೆಯಲ್ಲಿ ಇಕ್ಕಿರುವನೋ ಎನ್ನು ವಂತೆ ಮೆರೆಯುತ್ತಿತ್ತು. ೧೩೪. ಕೈಲಾಸಪರ್ವತದ ಶ್ರೇಷ್ಠವಾದ ಗುಹೆಯಲ್ಲಿ ಐರಾವತವು ಇರುವ ರೀತಿಯಲ್ಲಿ ಚಂದ್ರಕಾಂತಶಿಲೆಯಿಂದ ನಿರ್ಮಿಸಲ್ಪಟ್ಟ ಆ ಚಂದ್ರ ಕಾಂತಕಿರಣಗಳಿಂದ ಧವಳವರ್ಣವನ್ನಾಂತ ಮಂಗಳಕರವಾದ ಪಟ್ಟದ ಆನೆಯು ಅದೇನು ಶೋಭಿಸುತ್ತಿತ್ತೋ! ೧೩೫. ಪ್ರಕಾಶಿಸುತ್ತಿರುವ ತನ್ನ ಕಾಂತಿಯೆಂಬ ಅಮೃತಕ್ಕೆ ಮನಸ್ಸು ಮಾಡಿ ತುಂಬಿ ನಿಂತ ಭಯಂಕರವಾದ ಹಾವುಗಳನ್ನೇನಾದರೂ ಇದು ಹೊಂದಿರುವುದೋ ಹೇಳು! ಎನ್ನುವಂತೆ ಶಸ್ತ್ರಗಳ ಸಮೂಹವನ್ನು ಹೊಂದಿದ ಶ್ರೇಷ್ಠವಾದ ಶಸ್ತ್ರಾಸ್ತ್ರಗಳ ಶಾಲೆಯು ಶೋಭಿಸುತ್ತಿತ್ತು. ವ|| ಅದೂ ಅಲ್ಲದೆ ೧೩೬ ಶ್ರೇಷ್ಠವಾದ ಪಚ್ಚ ಕರ್ಪೂರದ ಪರಾಗದಿಂದ ಮಾಡಿದ ರಂಗವಲ್ಲಿಯಿಂದ, ಉತ್ತಮ ಕಸ್ತೂರಿಯಿಂದ ಸಾರಿಸ ಲ್ಪಟ್ಟ ನೆಲದಿಂದ, ಅಧಿಕವಾದ ಹೂಮಾಲೆಗಳಿಂದ ಕೂಡಿದ, ಉತ್ತಮ ದೀಪಗಳಿಂದ, ಪಟುವಾದ ಧೂಪದ ಸುವಾಸನೆಯಿಂದ, ಚಿತ್ರತರವಾದ ಬಟ್ಟೆಗಳ ಆವರಣದಿಂದ, ರತ್ನ ಸಮೂಹಗಳಿಂದ ರಂಜಿತವಾದಂಥ ಧ್ವನಿಮಾಡುತ್ತಿರುವ ಪಂಚಮಹಾವಾದ್ಯಗಳಿಂದ,

ವ॥ ಮತ್ತಮಂತಃಪುರಮೆಂಬ ಸರೋವರದ ಸಿರಿಯ ಕುರುಮಾಡಂಗಳಂತೆಸೆವ ಕರುಮಾಡಂಗಳುಂ, ಕರುಮಾಡಂಗಳ ಸೊದೆವೆಳಗಂ ಸೊದೆಗೆತ್ತು ಸಾರೆವರ್ಪ ದೀಹದಂಚೆಗಳುಂ, ದೀಹದಂಚೆಗಳ್ಗೆ ಕಾರ್ಮುಗಿಲೆಂಬ ಶಂಕೆಗೊಟ್ಟಿರ್ದಿರ್ಪವಿಂದ್ರನೀಲನಿಳಯಂಗಳುಂ, ಇಂದ್ರನೀಲನಿಳಯಂಗಳ ಕರ್ಬೊಳಪಂ ಕಳ್ತಲೆಗೆತ್ತಗಲ್ವ ಗೃಹಸರೋವರ ಚಕ್ರಂಗಳುಂ, ಗೃಹಸರೋವರ ಚಕ್ರಂಗಳ್ಗೆ ಪಾಸೆಯೆಂಬಾಸೆಗೊಡುವ ಬಾಸೆದಳೆದು ನೀರ್ಮುಳುಗುವ ನಿತಂಬಿನಿಯರುಂ, ನೀರ್ಮುಳುಗುವ ನಿತಂಬಿನಿಯರ ನಿಡುಜಡೆಯಂ ಜಳೋರಗಮೆಂದು ತಡಿವಿಡಿದು ನೋಳ್ಪ ನೃಪಕುಮಾರಿಯರುಂ, ನೃಪಕುಮಾರಿಯರ ಕಟಾಕ್ಷರುಚಿಯಂ ವಿಚಕಿಲಮಾಲೆಯೆಂದೆಱಗಲಪ್ಪಳಿಪ ಮದಮಧುಪಂಗಳುಂ, ಮದಮಧುಪಂಗಳ್ಗೆ ಪುಷ್ಕರಭ್ರಾಂತಿಗೊಡುವ ಪುಷ್ಕರದಿಂ ಮೆಱೆವ ಮದಕಳಭಂಗಳುಂ, ಮದಕಳಭಂಗಳಂ ಮೇಚಕಾಚಲಮೆಂದಾರೋಹಿಪ ಲೀಲಾಮಯೂರಂಗಳುಂ, ಲೀಲಾಮಯೂರಂಗಳ್ಗೆ ಪೊಸಮಿಂಚಂ ಪಸರಿಪ ಮಿಸುನಿವನೆಗಳುಂ, ಮಿಸುನಿವನೆಗಳ ಮಿಸುಪ ಕಾಂತಿಯಂ ಬಿಸಿಲೆಂದು ಪೆಱದೆಗೆವ ಚಪಲಚಕೋರಂಗಳುಂ, ಚಪಲಚಕೋರಂಗಳ್ಗೆ

ಚಂದ್ರಕಾಂತ ಶಿಲೆಯಿಂದ ನಿರ್ಮಿಸಲ್ಪಟ್ಟ ಪರಮೇಶ್ವರ ಪೂಜಾಮಂದಿರವು ರಂಜಿಸುತ್ತಿತ್ತು.

ವ॥ ಮತ್ತು ಆ ಅಂತಃಪುರವೆಂಬ ಸರೋವರದ ಲಕ್ಷ್ಮಿಯ ಉಪ್ಪರಿಗೆಯಂತೆ ಶೋಭಿಸುವ ಮೇಲುಪ್ಪರಿಗೆಯ ಮನೆಗಳೂ, ಆ ಉಪ್ಪರಿಗೆ ಮನೆಗಳ ಸುಧೆಯ ಎಂದರೆ ಸುಣ್ಣದ ಬೆಳಕನ್ನು ಅಮೃತವೆಂದು ತಿಳಿದು ಅದರ ಬಳಿಗೆ ಬರುತ್ತಿರುವ ಸಾಕಿದ ಹಂಸಪಕ್ಷಿಗಳೂ, ಆ ಹಂಸಪಕ್ಷಿಗಳಿಗೆ ಕಾರ್ಮುಗಿಲೆನ್ನುವ ಸಂಶಯವನ್ನುಂಟುಮಾಡುವ ಇಂದ್ರನೀಲಮಣಿ ನಿರ್ಮಿತ ಮನೆಗಳೂ, ಆ ಇಂದ್ರನೀಲ ನಿಲಯಗಳ ಕಪ್ಪಾದ ಕಾಂತಿಯನ್ನು ಕತ್ತಲೆಯೆಂದು ತಿಳಿದು ಪರಸ್ಪರ ಅಗಲುವ ಗೃಹದ ಸರೋವರದಲ್ಲಿರುವ ಚಕ್ರವಾಕಗಳೂ, ಆ ಗೃಹಸರೋವರದ ಚಕ್ರವಾಕಗಳಿಗೆ ಹಾವಸೆಯೆಂಬ ಆಸೆಯನ್ನು ಕೊಡುವ ಹೊಕ್ಕಳದ ಕೆಳಭಾಗದ ರೋಮಾವಳಿಯನ್ನು ಧರಿಸಿ ನೀರಿನಲ್ಲಿ ಮುಳುಗುವ ಸುಂದರಿಯರೂ, ನೀರುಮುಳುಗುವ ಆ ಸುಂದರಿಯರ ಉದ್ದವಾದ ಜಡೆಯನ್ನು ನೀರುಹಾವೆಂದು ದಡೆಯಲ್ಲಿ ನಿಂತು ನೋಡುತ್ತಿರುವ ರಾಜಕುಮಾರಿಯರೂ, ಆ ರಾಜಕುಮಾರಿಯರ ಕಡೆಗಣ್ಣುಗಳ ಕಾಂತಿಯನ್ನು ಮಲ್ಲಿಗೆಯ ಮಾಲೆಯೆಂದು ಅದಕ್ಕೆ ಎರಗಿ ಅಪ್ಪಳಿಸಲೆತ್ನಿಸುವ ಮಕರಂದರಸ ಕುಡಿದು ಮದಗೊಂಡ ದುಂಬಿಗಳೂ, ಆ ಮದಿಸಿದ ದುಂಬಿಗಳಿಗೆ ಕಮಲವೆಂಬ ಭ್ರಾಂತಿಯನ್ನುಂಟುಮಾಡುವ ಸೊಂಡಿಲಿನ ತುದಿಯಿಂದ ಕೂಡಿ ಶೋಭಿಸುವ ಮದಿಸಿದ ಆನೆಗಳೂ, ಆ ಮದಿಸಿದ ಆನೆಗಳನ್ನು ಕತ್ತಲೆಯ ಪರ್ವತವೆಂದು ಮೇಲೇರುವ ವಿನೋದಾರ್ಥವಾಗಿ ಸಾಕಿದ ನವಿಲುಗಳೂ, ಲೀಲೆಗಾಗಿ ಸಾಕಿದ ಆ ನವಿಲುಗಳಿಗೆ ಹೊಸದಾದ ಮಿಂಚನ್ನು ಪ್ರಸರಿಸುವ ಬಂಗಾರಮಯವಾದ ಮನೆಗಳೂ, ಆ ಬಂಗಾರ ವಿಕಾರದ ಮನೆಗಳ ಶೋಭಿಸುವ ಕಾಂತಿಯನ್ನು ಬಿಸಿಲೆಂದು ಹಿಂಜರಿಯುವ ಚಪಲಸ್ವಭಾವದ ಚಕೋರಪಕ್ಷಿಗಳೂ, ಆ ಚಕೋರಪಕ್ಷಿಗಳಿಗೆ ಬೆಳದಿಂಗಳನ್ನು ಹರಡುವ ಚಂದ್ರಕಾಂತಶಿಲಾನಿರ್ಮಿತ ಜಗುಲಿ

ಚಂದ್ರಿಕೆಯುಂ ಪರಪುವ ಚಂದ್ರಮಣಿಕುಟ್ಟಿಮಂಗಳುಂ, ಚಂದ್ರಮಣಿಕುಟ್ಟಿಮಂಗಳಂ ತಿಳಿಗೊಳಂಗಳೆಂದಡಿಯಿಡಲಂಜಿ ಪೆಡಂಮೆಟ್ಟುವ ಕಿಱುಮೆಂಡಿರುಂ, ಕಿಱುಮೆಂಡಿರಲತಿಗೆಯಡಿವಜ್ಜೆಯುಂ ಕಂಡು ಮಾಂದಳಿರೆಂದು ಕರ್ದುಂಕುವ ಕೇಳಿಕಳಕಂಠಿಗಳುಂ, ಕೇಳಿಕಳಕಂಠಿಗಳಂ ಪುರುಳಿಗಳೆನಿಸಿ ಮಾಳ್ಪ ಪಸುರ್ವರಲ ಪಂಜರಂಗಳುಂ, ಪಸುರ್ವಲರೆ ಪಂಜರಂಗಳೊಳ್ಮಾರ್ಪೊಳೆವ ನಿಜ ತುಂಡಪ್ರತಿಬಿಂಬಮಂ ಬಿಂಬಫಳಂಗೆತ್ತು ತುಡುಂಕುವ ತಾಮ್ರತುಂಡುಗಳುಂ ಸಂಗಳಿಸಿ ಮಂಗಳಮಂ ಕಂಗೊಳಿಸಿರ್ದುವಾತುಮಲ್ಲದೆ

ಮ॥ ರಮಣೀಕಂಕಣ ಕಿಂಕಿಣೀಕ್ವಣಿತಮಿಂದ್ವಾಸ್ಯಾಕರಾಂಭೋರುಹ
ಭ್ರಮಿತಾಂಭೋಜಮಿಳದ್ಭ್ರಮದ್ಭ್ರಮರಝೇಂಕಾರಂ ಸುಬಿಂಬಾಧರಾ
ಸಮುದಂಚತ್ ಕರಶಾರಿಕಾಶುಕರವಂ ಕೂಜತ್ಪಿಕಾಲಾಪಿನೀ
ಕ್ರಮಸಂವಾದಿತ ಸಾಧುನಾದವಹ ವೀಣಾರಾವಮಲ್ಲೊಪ್ಪುಗುಂ ೧೩೭

ಮ॥ಸ್ರ॥ ಕರುಮಾಡಂ ಕಣ್ಗೆವಂದತ್ತಮೃತಕರಶಿಲಾನಿರ್ಮಿತಂ ಭರ್ಮಬದ್ಧ
ಸ್ಫುರದುದ್ಯತ್ಪದ್ಮರಾಗಾಂಚಿತ ಕಲಶಮಿನಗ್ರಾವ ದೀಪ್ಯದ್ವಿಟಂ ಕಾ
ವರಣಂ ವೈಢೂರ್ಯವೇದೀ ವಿದಿತಮುರುಹರಿತ್ಕುಟ್ಟಿಮಂ ವಜ್ರಕುಡ್ಯಂ
ಹರಿನೀಲಸ್ತಂಭಮುದ್ವಿದ್ರುಮಲಸದರರಂ ಮೌಕ್ತಿಕದ್ವಾರಬಂಧಂ ೧೩೮

ಗಳೂ, ಆ ಚಂದ್ರಮಣಿಯ ಶಿಲಾನಿರ್ಮಿತ ಜಗುಲಿಗಳನ್ನು ತಿಳಿನೀರಿನ ಸರೋವರಗಳೆಂದು ಅಡಿಯಿಡಲು ಹೆದರಿ ಹಿಂದಕ್ಕೆ ಸರಿಯುವ ಬಾಲೆಯರೂ, ಆ ಬಾಲೆಯರು ಕಾಲಿಗೆ ಹಚ್ಚಿರುವ ಅಲತಿಕೆಯ ರಸ ಹಚ್ಚಿದುದರಿಂದ ಕೆಂಪಾದ ಅವರ ಅಂಗಾಲುಗಳನ್ನು ಮಾವಿನ ಚಿಗುರೆಂದು ಅವನ್ನು ಕರ್ದುಂಕಲು ಸಾಕಿದ ಕೋಗಿಲೆಗಳೂ, ಆ ಕೋಗಿಲೆಗಳನ್ನು ಗಿಳಿಗಳೆನ್ನಿಸುತ್ತಿರುವ ಪಚ್ಚೆಮಣಿಗಳಿಂದ ಮಾಡಿದ ಪಂಜರಗಳೂ, ಆ ಹಸುರು ರತ್ನದ ಪಂಜರಗಳಲ್ಲಿ ಪ್ರತಿಫಲಿಸುವ ತಮ್ಮ ಬಾಯಿಯ ಪ್ರತಿಚ್ಛಾಯೆಯನ್ನು ತೊಂಡೆಯ ಹಣ್ಣೆಂದು ತಿಳಿದು ತುಡುಕುತ್ತಿರುವ ಗಿಳಿಗಳೂ, ಇವೆಲ್ಲವುಗಳಿಂದ ಕೂಡಿಕೊಂಡು ಮಂಗಳನನ್ನು ಕಂಗೊಳಿಸಿದುವು. ಇದೂ ಅಲ್ಲದೆ ೧೩೭. ರಮಣೀಯಾಕಾರೆಯರಾದ ಸ್ತ್ರೀಯರ ಕಡಗಗಳ, ಕಿರುಗೆಜ್ಜೆಗಳ ಧ್ವನಿಯೂ, ಚಂದ್ರಮುಖಿಯರಾದ ಸ್ತ್ರೀಯರ ಕೈಯೆಂಬ ಕಮಲಗಳ ವಿಷಯದಲ್ಲಿ ಭ್ರಮೆಗೊಂಡು ಸುತ್ತುತ್ತಿರುವ ದುಂಬಿಗಳ ಝೇಂಕಾರವೂ, ಶ್ರೇಷ್ಠವಾದ ಬಿಂಬಫಲದಂತಿರುವ ತುಟಿಗಳುಳ್ಳ ಹೆಂಗಸರ ಚೆನ್ನಾಗಿ ಒಪ್ಪುತ್ತಿರುವ ಕೈಗಳಲ್ಲಿರುವ ಶಾರಿಕೆ(ಗೊರವಂಕ) ಮತ್ತು ಗಿಳಿಗಳ ಧ್ವನಿಯೂ, ಕೋಗಿಲೆಯಂತೆ ಹಾಡುತ್ತಿರುವ ಸ್ತ್ರೀಯರೂ, ಕ್ರಮವಾಗಿ ನುಡಿಸತಕ್ಕ ಯುಕ್ತ ಸ್ವರವನ್ನು ಹೊಂದಿದ ವೀಣೆಯ ಧ್ವನಿಯೂ ಅಲ್ಲಿನ ಅಂತಃಪುರದಲ್ಲಿ ಒಪ್ಪುತ್ತಿತ್ತು. ೧೩೮. ಚಂದ್ರಕಾಂತಶಿಲೆಯಿಂದ ನಿರ್ಮಿತವಾದುದಾಗಿಯೂ, ಬಂಗಾರದಿಂದ ಕಟ್ಟಲ್ಪಟ್ಟ ಪ್ರಕಾಶಿಸುವ ಶ್ರೇಷ್ಠ ಪದ್ಮರಾಗದಿಂದ ಕೂಡಿರುವ ಕಲಶವುಳ್ಳದ್ದಾಗಿಯೂ, ಸೂರ್ಯಕಾಂತಶಿಲೆಯಿಂದ ಹೊಳೆಯುತ್ತಿರುವ ಪಕ್ಷಿಗಳನ್ನು ಸಾಕುಮನೆಯಿಂದ ಸುತ್ತಿರುವುದಾಗಿಯೂ, ವೈಢೂರ್ಯದಿಂದ ಮಾಡಲ್ಪಟ್ಟ ವೇದಿಕೆಗಳಿಂದಲೂ, ಪಚ್ಚೆಯ ನೆಲಗಟ್ಟಿನಿಂದ ಕೂಡಿದ್ದಾಗಿಯೂ, ವಜ್ರದ ಗೋಡೆಗಳುಳ್ಳದ್ದಾಗಿಯೂ, ಇಂದ್ರನೀಲಮಣಿಗಳ ಕುಂಭವುಳ್ಳದ್ದಾಗಿಯೂ, ಹವಳದಿಂದ ಮಾಡಿಸಿದ

ಕಂ॥ ಸುದೆವೆಳಗಂ ಸುಧೆಗೆತ್ತಾ
ಬದಿಯ ಮರಾಳಂ ಸರಾಗಮುಗುತರ ಸೌಧಾ
ಗ್ರದೆ ನಿಂದುವೆಂಬ ಭಾವಮ
ನೊದವಿಪುದಿರುಳದಱ ತುದಿಗೆ ಬಂದ ಮೃಗಾಂಕಂ ೧೯೯

ಅದಱಗ್ರದಲ್ಲಿ ಪಾಡುವ
ಸುದತಿಯ ಗೀತಮನೆ ಕೇಳ್ದು ಸುರಪಶು ಸುರಿದ
ಗ್ಗದ ಪಾಲ್ಸರಿ ಪಸರಿಸಿತೆನೆ
ಬಿದುಗದಿರ್ಗಳಿನಿಳಿಪ ಸೊದೆಯದೇಂ ಸೊಗಯಿಸಿತೋ ೧೪೦

ಅಮರಿಯರಾ ನೃಪಹರ್ಮ್ಯಾ
ಗ್ರ ಮಹಾಧ್ವಜಪಟದ ಮಱೆಯೊಳಗಿರೆ ಬಿನದ
ಕ್ಕಮರರಸವಸದೆ ತನ್ಮುಕು
ರಮನವರ ಕಪೋಲಮೆಂದು ಚುಂಬಿಸುತಿರ್ಪರ್ ೧೪೧

ಮ॥ ಸ್ರ॥ ಕಡೆಗಣ್ಣಿಂ ಕಾವನಂಬಂ ಕಱೆವುತೆ ಕುಡಿವುರ್ವಿಂದೆ ಜರ್ವುತ್ತೆ ಮುಂಗೈ
ಯೆಡೆಯೊಳ್ಕುಳ್ಳಿರ್ದ ಕೀರಂ ನುಡಿದ ನುಡಿಯನಾಕರ್ಣಿಸುತ್ತೊರ್ಮೆ ಕೈಯೊ
ಳ್ಪಿಡಿದಂಭೋಜಾತದಿಂ ಸುಯ್ಗೆಱಪಳಿಗಳ ಸೋವುತ್ತೆ ಮಂದಸ್ಮಿತಂ ಮುಂ
ದಿಡೆ ಚಂಚಜ್ಜ್ಯೋತ್ಸ್ನೆಯಂ ಸೌಧದೊಳೆಸೆವುದಳುಂಬಂ ನೃಪಸ್ತ್ರೀಕದಂಬಂ ೧೪೨

ಕದಗಳುಳ್ಳದ್ದಾಗಿಯೂ ಮುತ್ತಿನ ತೋರಣವುಳ್ಳದ್ದಾದ ಉಪ್ಪರಿಗೆಯು ಕಣ್ಣಿಗೆ ಮನೋಹರವಾಗಿತ್ತು. ೧೯೯. ಸುಣ್ಣದ ಬಿಳುಪನ್ನು ಅಮೃತವೆಂದೇ ತಿಳಿದು ಬ್ರಹ್ಮವಾಹನವಾದ ಹಂಸವು ಅತ್ಯಂತಾಸಕ್ತಿಯುಳ್ಳದಾಗಿ ಆ ಶ್ರೇಷ್ಠಸೌಧದ ಅಗ್ರದಲ್ಲಿ ನಿಂತಿದೆಯೋ ಎಂಬ ಭಾವವನ್ನು ರಾತ್ರಿಕಾಲದಲ್ಲಿ ಆ ಉಪ್ಪರಿಗೆಯ ಮೇಲೆ ಚಂದ್ರನು ಬಂದಾಗ ಉಂಟು ಮಾಡುತ್ತಿತ್ತು. ೧೪೦. ಆ ಅಂತಃಪುರದ ಉಪ್ಪರಿಗೆಯ ಮೇಲೆ ಹಾಡುತ್ತಿರುವ ಸುಂದರಿಯರ ಸಂಗೀತವನ್ನು ಕೇಳಿ ಕಾಮಧೇನುವು ಶ್ರೇಷ್ಠವಾದ ಹಾಲಿನ ಧಾರೆಯನ್ನು ಸುರಿಸುತ್ತಿರುವುದರಿಂದ ಅದು ಪ್ರಸಾರಗೊಂಡಿತೋ ಎನ್ನುವಂತೆ ಚಂದ್ರಕಿರಣಗಳನ್ನು ಕೀಳು ಮಾಡುವ ಸುಣ್ಣದ ಬಿಳುಪು ಅದೇನು ಶೋಭಿಸಿತೋ ! ೧೪೧. ದೇವತಾಸ್ತ್ರೀಯರು ಆ ಅಂತಃಪುರ ಹರ್ಮ್ಯದ ಅಗ್ರಭಾಗದಲ್ಲಿರುವ ಧ್ವಜಪಟದ ಮರೆಯಲ್ಲಿ ವಿನೋದಕ್ಕಾಗಿ ಅಡಗಿರಲಾಗಿ ಅವಸರವಸರವಾಗಿ ಅಲ್ಲಿರುವ ಕನ್ನಡಿಗಳನ್ನೇ ಅವರ ಕಪೋಲಗಳೆಂದು ಚುಂಬಿಸುತ್ತಿದ್ದರು. ೧೪೨. ಕಡೆಗಣ್ಣ ಕಾಂತಿಯಿಂದ ಮನ್ಮಥನ ಬಾಣವಾದ ಕಮಲವನ್ನು ಸುರಿಸುತ್ತ, ಕುಡಿಹುಬ್ಬಿನಿಂದಲೇ ಸಂಜ್ಞೆಯನ್ನು ಮಾಡುತ್ತ, ಮುಂಗೈಯ ಮೇಲೆ ಕುಳಿತ ಗಿಳಿಯು ನುಡಿದ ನುಡಿಗಳನ್ನು ಕೇಳುತ್ತ, ಒಮ್ಮೆ ಕೈಯಲ್ಲಿ ಹಿಡಿದ ಕಮಲದಿಂದ ಮೂಗಿನ ಸುವಾಸನಾಯುಕ್ತ ಉಸುರಿಗೆ ಎರಗುವ ದುಂಬಿಗಳನ್ನು ಓಡಿಸುತ್ತ, ಕಿರುನಗೆಯು ಪ್ರಕಾಶಿಸುವ ಬೆಳುದಿಂಗಳನ್ನು ಮುಂದೆ ಚಲ್ಲುತ್ತಿರಲು ರಾಜಪರಿವಾರದ ವಿಸ್ತಾರವಾದ ಸ್ತ್ರೀಸಮೂಹವು ಆ ಅಂತಃಪುರದ ಮಹಡಿಯಲ್ಲಿ ಶೋಭಿಸುತ್ತಿತ್ತು.

ಮ॥ಸ್ರ॥ ಹಿಮಷಂಡಂ ಫೇನಖಂಡಂ ತುರಗತತಿತರಂಗಾಳಿ ಪೇರಾನೆ ನೀರಾ
ನೆ ಮಹಾಹರ್ಮ್ಯಂ ವಿಭೀತಾಚಲಮಭವಗೃಹಂ ಭೈತ್ರಮುತ್ಕೇತು ತತ್ಕೇ
ತು ಮಣಿವ್ರಾತಂ ತದುದ್ಯನ್ಮಣಿಗಣಮುರುಸೌಧಾಂಶುದುಗ್ಧಂ ಧರಿತ್ರೀ
ರಮಣಾಗಾರಂ ಮಣಿದ್ವೀಪವಿದೆನೆ ಪುರಿ ರತ್ನಾಕರಂಬೋಲ್ ಮನೋಜ್ಞಂ ೧೪೩

ಕಂ॥ ಆ ನಗರಿಯೊಳೆಸೆದಿರ್ಪಂ
ಶ್ರೀನಾಯಕ ವಿಭವನಭವಪದಭಕ್ತನಿಳಾ
ಮಾನಿನಿಯರಸಂ ಸರಸಂ
ಭೂನುತ ಸತ್ಯೇಂದ್ರಚೋಳ ರಾಜನರೇಂದ್ರಂ ೧೪೪

ಮಂದಾಕ್ರಾಂತ॥ ವ್ಯಾನಮ್ರ ಶ್ರೀಮುಖಸುರವಧೂವಕ್ತ್ರಪದ್ಮಪ್ರಭಾಂಭ
ಸ್ಸ್ನಾನೋನ್ಮೀಲತ್ಪದಕಮಳೆ ಕಲ್ಯಾಣಿ ಕಲ್ಯಾಣಶೈಲಾ
ನೂನಾಸ್ಥಾನಾಶ್ರಿತ ಶಿತಗಳಾಂಕಸ್ಥಳಾರೂಢೆ ಗೌರೀ
ನೀನೆನ್ನಂ ರಕ್ಷಿಪುದು ಸತತಂ ಸತ್ಯವಾಣೀ ಮೃಡಾಣೀ ೧೪೫

೧೪೩. ಕರ್ಪೂರಾದಿಗಳೇ ನೊರೆಯ ಗಡ್ಡೆಗಳಂತೆಯೂ, ಕುದುರೆಗಳ ಸಮೂಹವೇ ತರಂಗಗಳ ಸಮೂಹದಂತೆಯೂ, ದೊಡ್ಡ ದೊಡ್ಡ ಆನೆಗಳೇ ನೀರಾನೆಗಳಂತೆಯೂ, ದೊಡ್ಡ ಮೇಲುಪ್ಪರಿಗೆಯ ಮನೆಗಳೇ ಇಂದ್ರನ ವಜ್ರದ ಪೆಟ್ಟಿಗೆ ಹೆದರಿ ಸಮುದ್ರದಲ್ಲಿ ಅಡಗಿರುವ ಪರ್ವತಗಳಂತೆಯೂ, ಶಿವದೇವಾಲಯಗಳೇ ಹಡಗುಗಳಂತೆಯೂ, ಆ ಸೌಧಾಗ್ರದಲ್ಲಿರುವ ಎತ್ತರವಾದ ಧ್ವಜಗಳೇ ಆ ಹಡಗುಗಳ ಮೇಲಿರುವ ಧ್ವಜಗಳಾಗಿಯೂ, ನವರತ್ನಗಳ ಸಮೂಹವೇ ಆ ಸಮುದ್ರದಲ್ಲಿ ಲಭ್ಯವಾಗುತ್ತಿರುವ ಶ್ರೇಷ್ಠವಾದ ರತ್ನಸಮೂಹಗಳಾಗಿಯೂ, ಶ್ರೇಷ್ಠವಾದ ಸುಣ್ಣದ ಬಿಳುಪುಬಣ್ಣವೇ ಕ್ಷೀರಸಮುದ್ರವಾಗಿಯೂ, ಭೂಮೀಶ್ವರನಾದ ಆ ಸತ್ಯೇಂದ್ರಚೋಳ ಮಹಾರಾಜನ ಮನೆಯೇ ರತ್ನದ್ವೀಪವೆನ್ನುವಂತೆಯೂ ಆ ಧರ್ಮಪತಿಯೆಂಬ ಪಟ್ಟಣವು ಸಮುದ್ರದ ಹಾಗೆ ಮನೋಜ್ಞವಾಗಿತ್ತು. ೧೪೪. ಆ ಪಟ್ಟಣದಲ್ಲಿ ಭೂಮಿಯು ಸಮಸ್ತಜನರಿಂದ ನುತಿಸಲ್ಪಡುವವನಾದ ಸತ್ಯೇಂದ್ರಚೋಳನೆಂಬ ರಾಜಶ್ರೇಷ್ಠನು, ಲಕ್ಷ್ಮೀಪತಿಯಾದ ಶ್ರೀವಿಷ್ಣುವಿಗೆ ಸಮಾನವಾದ ಸಂಪತ್ತುಳ್ಳವನಾಗಿ, ಪರಮೇಶ್ವರನ ಪಾದಭಕ್ತನಾಗಿ, ಭೂಮಿಯೆಂಬ ಸ್ತ್ರೀಯ ಪತಿಯಾಗಿ ರಸಜ್ಞನಾಗಿ ಶೋಭಿಸುತ್ತಿದ್ದನು. ೧೪೫. ವಿಧೇಯತೆಯಿಂದಿರುವ ಶ್ರೀಲಕ್ಷ್ಮಿಯೇ ಮೊದಲಾದ ದೇವತಾಸ್ತ್ರೀ ಸಮೂಹದ ಮುಖಕಮಲಪ್ರಭೆಯೆಂಬ ನೀರಿನಲ್ಲಿ ಸ್ನಾನ ಮಾಡುವುದರಿಂದ ಮುಳುಗುತ್ತಿರುವ ಪಾದಕಮಲಗಳುಳ್ಳವಳೂ, ಕಲ್ಯಾಣಪ್ರದಳೂ, ಕಲ್ಯಾಣಕರವಾದ ಶ್ರೇಷ್ಠ ಮೇರುಪರ್ವತಸ್ಥಾನವನ್ನು ಆಶ್ರಯಿಸಿರುವ ಕಪ್ಪುಗೊರಳನ ತೊಡೆಯ ಪ್ರದೇಶದಲ್ಲಿ ಕುಳಿತಿರುವವಳೂ, ಸತ್ಯವಾಣಿಯೂ, ಮೃಡನ ಸತಿಯೂ ಆದ

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣಮಹಾಪ್ರಭಾಪಟಲಪರಿವೃತ ಪರಶಿವ ಶ್ರೀ ಪಾದನಖಚಂದ್ರಸಾಂದ್ರ, ರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯಕವಿತಾವಿಶಾರದ ಶ್ರಿ ಷಡಕ್ಷರಿದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳ ಪ್ರಬಂಧದೊಳ್ ದ್ರಾವಿಡದೇಶಾದಿ ವರ್ಣನಂ

ಅಂತು ಆಶ್ವಾಸ ೨ ಕ್ಕಂ ಪದ ೨೮೧ ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ

ದ್ವಿತೀಯಾಶ್ವಾಸಂ

ಸಂಪೂರ್ಣಂ

ಗೌರೀದೇವಿಯೇ, ನೀನು ಸತತವೂ ರಕ್ಷಿಸುವುದು. ಗದ್ಯ॥ ಈ ಪ್ರಬಂಧವು ನಮಸ್ಕರಿಸುತ್ತಿರುವ ದೇವೇಂದ್ರನ ಶ್ರೇಷ್ಠವಾದ ಮಕುಟದ ಅಂಚಿನಲ್ಲಿ ಕೆಚ್ಚಿರುವ ಮಣಿಗಳ ಸಮೂಹದ ಮಹಾಪ್ರಭೆಯ ಪುಂಜದಿಂದ ಸುತ್ತುವರಿಯಲ್ಪಟ್ಟ ಪರಮೇಶ್ವರನ ಶ್ರೀಪಾದಗಳ ನಖದಿಂದ ಹೊರಹೊರಟ ದಟ್ಟವಾದ ಚಂದ್ರನ ಕಾಂತಿಯೆಂಬ ವಿಸ್ತಾರವಾದ ಬೆಳುದಿಂಗಳಿಗೆ ಒಪ್ಪುತ್ತಿರುವ ಚಕೋರಪಕ್ಷಿಯಂತಿರುವ ರಸಜ್ಞರಾದ ಜನರಿಂದ ಮನ್ನಿಸಲ್ಪಟ್ಟ ಉಭಯಭಾಷಾಕವಿತೆಯಲ್ಲಿ ಪಾರಂಗತನಾದ ಶ್ರೀಷಡಕ್ಷರಿದೇವನಿಂದ ರಚಿಸಲ್ಪಟ್ಟ ರಾಜಶೇಖರವಿಳಾಸವೆಂಬ ದೊಡ್ಡ ಪ್ರಬಂಧದಲ್ಲಿ ದ್ರಾವಿಡ ದೇಶಾದಿ ವರ್ಣನೆ

ದ್ವಿತೀಯಾಶ್ವಾಸಂ ಸಂಪೂರ್ಣಂ

## ತೃತೀಯಾಶ್ವಾಸಂ

ಕಂ॥ ಶ್ರೀ ತುಹಿನಗಿರಿಸುತಾಕರ
ಜಾತಕ್ಷತಕಲಿತಕಂಧರಂ ನಿಜರುಚಿನಿ
ರ್ಧೂತಯಮಿಹೃದಯತಮಸಂ
ಪ್ರೀತಿಯೊಳೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ಚಂ॥ ಹರಚರಣಾರವಿಂದ ಮಕರಂದ ಮಧುವ್ರತನೀಶಭಕ್ತಭ
ಕ್ತಿರಸಸುಧಾಬ್ಧಿಸೋಮನಭಿರಾಮ ಶಿವಸ್ತುತಿಪೂರ್ಣಕರ್ಣನೀ
ಶ್ವರಯಜನಾನುರಕ್ತನಭಿಯುಕ್ತಗುರೂಕ್ತಮತಾನುವರ್ತಿ ಶಂ
ಕರಪರಮಂತ್ರತಂತ್ರನಿಪುಣಾಗ್ರಣಿ ಭೂವರವಾರಶೇಖರಂ ೨

ಮ॥ ಅಕಳಂಕಾನನಮಿಂದುವಂ ಗೆಲೆ ಧರಾಭಾರಾವಹಂ ಬಾಹುದಿ
ವ್ಯಕರಿ ಶ್ರೀಕರಮಂ ಕರಂ ಜಚಿಯೆ ಚಂಚದ್ರಶ್ಮಿವಿಸ್ಮೇರದೃ
ಷ್ಟಿಕಲಾಪೇಕ್ಷಣಮುಬ್ಜಮಂ ಪಳಿಯೆ ಸೌಂದರ್ಯಾಂಗನೀಶಾಂಘ್ರಿಸೇ
ವಕನಾ ದರ್ಪಕನಂ ತಿರಸ್ಕರಿಸಿದಂ ಶ್ರೀಚೋಳಭೂಪಾಳಕಂ ೩

೧. ಶ್ರೀಗಿರಿರಾಜ ಹಿಮವಂತನ ಮಗಳಾದ ಪಾರ್ವತಿಯ ಕೈಗಳ ಉಗುರುಗಳಿಂದಾದ ಗಾಯ (ಕ್ಷತ)ದಿಂದ ಕೂಡಿದ ಕುತ್ತಿಗೆಯನ್ನುಳ್ಳ, ತನ್ನ ತೇಜಸ್ಸಿನ ಕಿರಣಗಳಿಂದ ಹೋಗಲಾಡಿಸಲ್ಪಟ್ಟ ಯೋಗಿಜನರ ಹೃದಯಾಂಧಕಾರನಾದ ಶಿವಲಿಂಗನು ಪ್ರೀತಿಯಿಂದ ನಮಗೆ ಸೌಖ್ಯವನ್ನುಂಟುಮಾಡಲಿ. ೨. ಪರಮೇಶ್ವರನ ಚರಣಕಮಲಗಳಲ್ಲಿರುವ ಮಕರಂದಪಾನ ಮಾಡುವ ದುಂಬಿಯೋಪಾದಿಯಲ್ಲಿರುವವನೂ, ಪರಮೇಶ್ವರನಲ್ಲಿ ಭಕ್ತಿಯನ್ನಿಟ್ಟಿರುವವರ ಭಕ್ತಿರಸವೆಂಬ ಕ್ಷೀರಸಾಗರಕ್ಕೆ ಚಂದ್ರನೋಪಾದಿಯಲ್ಲಿರುವವನೂ, ಮನೋಹರವಾದ ಶಿವಸ್ತುತಿಯಿಂದ ತುಂಬಿಹೋದ ಕರ್ಣಗಳನ್ನುಳ್ಳವನೂ, ಈಶ್ವರ ಪೂಜಾಸಕ್ತನೂ, ಶಾಸ್ತ್ರಾಚಾರಸಂಪನ್ನನೂ, ಗುರೂಪದಿಷ್ಟಮತವನ್ನು ಅನುಸರಿಸುವವನೂ, ಶಂಕರ ಸಂಬಂಧವಾದ ಮಂತ್ರ ತಂತ್ರಗಳ ನಿಪುಣರಲ್ಲಿ ಅಗ್ರಗಣ್ಯನೂ, ರಾಜರುಗಳ ಸಮೂಹಕ್ಕೆ ಶಿಖರಪ್ರಾಯನೂ ಆದ ಸತ್ಯೇಂದ್ರಚೋಳನು ಶೋಭಿಸುತ್ತಿದ್ದನು. ೩. ಆ ಮಹಾರಾಜನ ಕಲಂಕರಹಿತವಾದ ಮುಖವು ಚಂದ್ರನನ್ನು ಗೆಲ್ಲುತ್ತಿರಲು, ಭೂಭಾರವನ್ನು ಹೊತ್ತ ಬಾಹುಗಳು ಅಷ್ಟದಿಕ್ಕುಗಳಲ್ಲೂ ಭೂಮಿಯನ್ನು ಹೊತ್ತು ನಿಂತಿರುವ ಅಷ್ಟದಿಗ್ಗಜಗಳ ಸೊಂಡಿಲುಗಳನ್ನು ಕೀಳ್ಮಾಡುತ್ತಿರಲು, ಮಿಂಚಿನ ಪ್ರಕಾಶವನ್ನು ಪಡೆದು ನಗುತ್ತಿರುವ ದೃಷ್ಟಿಯ ಸಮೂಹವುಳ್ಳ ಕಣ್ಣು ಕಮಲವನ್ನು ಜರೆಯುತ್ತಿರಲು, ಸೌಂದರ್ಯದಿಂದ ಕೂಡಿದ ದೇಹವುಳ್ಳವನೂ, ಈಶ್ವರಪಾದಸೇವಕನೂ ಆದ ಶ್ರೀ ಚೋಳ

ಕುಳಭೂಭೃತ್ ಪರಿಪಂಥಿಪಾವಕಮುಖಂ ಪಾಕಾಪಹಂ ಧ್ವಸ್ತದು
ರ್ಬಳಸುದ್ವೀತಕುಲೀನವೃತ್ತಿ ಸತತಂ ಸಂಕ್ರಂದನಂ ಸದ್ಗುಣೋ
ಜ್ವಳ ಸತ್ಯೇಂದ್ರ ನರೇಂದ್ರರುಂದ್ರಯಶಮಂ ಗಂಧರ್ವರಿಂ ಕೇಳ್ದು ನಾ
ಣ್ದಳೆದಾಗಳ್ಗಡ ನಿದ್ರೆಗೆಯ್ವಪನೆ ಪಕ್ಷಸ್ಪಂದಮಂ ಮಾಳ್ಪನೇ ೪

ವ॥ ಅಂತುಮಲ್ಲದೆಯುಂ

ಚಂ॥ ಸುರನದಿಯಲ್ಲಿ ಮಿಂದು ಸುರಮಾರ್ಗಕಚೌಘಮನೆಯ್ದೆ ಬಿರ್ಚಿ ವಿ
ಸ್ಫುರಿತತದುತ್ತಮತಾಪ ತಪನಾತಪದಾಱಿಸಿ ಸೂಡಿ ತಾರಕೋ
ತ್ಕರಕುಸುಮಂಗಳಂ ತಳೆದು ಚಂದ್ರಿಕೆಯೆಂಬ ವಿಶಾಲ ಚೇಲಮಂ
ಧರಣಿಪ ಕೀರ್ತಿಕಾಂತೆ ವಿಧುದರ್ಪಣಮಂ ನೆಱೆನಿಂದು ನಿಟ್ಟಿಪಳ್ ೫

ಭೂಪಾಲಕನು ಆ ಮನ್ಮಥನನ್ನು ತಿರಸ್ಕರಿಸಿದನು. ೪. (೧. ಇಂದ್ರನ ಪರವಾಗಿ ಸಮೀಚೀನವಾದ ಅರ್ಥ :) ಸಪ್ತಕುಲಪರ್ವತಗಳಿಗೆ ಹಗೆಯಾದ, ಅಗ್ನಿಯನ್ನೇ ಮುಖವನ್ನಾಗಿ ಮಾಡಿಕೊಂಡು ಹವಿರ್ಭಾಗಾದಿಗಳನ್ನು ಗ್ರಹಿಸುವ ಮುಖವುಳ್ಳವನಾದ, ಪಾಕನೆಂಬ ದೈತ್ಯನನ್ನು ಸಂಹರಿಸಿದವನಾದ, ದುಷ್ಟಬಲವುಳ್ಳವನಾದ ಬಲಾಸುರನನ್ನು ಕೊಂದ, ಉತ್ತಮವಾದ ಕುಲೀನವೃತ್ತಿಯುಳ್ಳ ದೇವೇಂದ್ರನು. (೨. ಇಂದ್ರನ ಪರವಾದ ದೋಷಾರ್ಥ :) ಕುಲೀನ ರಾಜರಿಗೆ ಶತ್ರುವಾದ, ಬೆಂಕಿಯಂತೆ ಮುಖವುಳ್ಳವನಾದ (ಕೋಪಿಷ್ಠನಾದ) ಶಿಶುಹತ್ಯಾದೋಷ (ಪಾಕಾಪಹಂ)ದಿಂದ ಕೂಡಿದ, ದುರ್ಬಲರನ್ನು ನಾಶಮಾಡಿದ, ವ್ಯಭಿಚಾರದಿಂದ ಕುಲೀನವೃತ್ತಿಯನ್ನು ಕಳೆದುಕೊಂಡವನಾದ ಇಂದ್ರನು (೩. ಸತ್ಯೇಂದ್ರಚೋಳ ಮಹಾರಾಜನ ಪರವಾದ ಅರ್ಥ :) ಇಂದ್ರನ ಮೇಲ್ಕಂಡ ಯಾವ ದೋಷಗಳೂ ಇಲ್ಲದೆ ಸದ್ಗುಣಗಳಿಂದ ಪ್ರಕಾಶಿಸುವ ಸತ್ಯೇಂದ್ರನರೇಂದ್ರನ ಅತಿಶಯ (ರುಂದ್ರ) ಯಶಸ್ಸನ್ನು ಗಂಧರ್ವರಿಂದ ಕೇಳಿ, ನಾಚಿಕೆಯನ್ನು ಪಡೆದು ದೇವೇಂದ್ರನು ನಿದ್ರೆ ಮಾಡುವನೇ ! ರೆಪ್ಪೆಗಳನ್ನು ಮುಚ್ಚುವನೇ ! ವ॥ ಅದೂ ಅಲ್ಲದೆ, ೫. ಆ ಭೂಮೀಶ್ವರನ ಕೀರ್ತಿಯೆಂಬ ಕಾಂತೆಯು ದೇವಗಂಗಾನದಿಯಲ್ಲಿ ಸ್ನಾನ ಮಾಡಿದಳು. ಆಕಾಶವೆಂಬ ಕೂದಲಿನ ರಾಶಿಯನ್ನು ಬಿಚ್ಚಿ, ಆ ರಾಜನ ಪ್ರಕಾಶಮಾನವಾದ ಶ್ರೇಷ್ಠ ಶೌರ್ಯಗುಣವೆಂಬ ಸೂರ್ಯನ ಬಿಸಿಲಿನಲ್ಲಿ ಆರಿಸಿಕೊಂಡಳು ಶ್ರೇಷ್ಠವಾದ ನಕ್ಷತ್ರಸಮೂಹಗಳೆಂಬ ಹೂವುಗಳನ್ನು ಮುಡಿದುಕೊಂಡಳು. ಬೆಳುದಿಂಗಳೆಂಬ ವಿಸ್ತಾರವಾದ ಸೀರೆಯನ್ನು ಉಟ್ಟುಕೊಂಡು ಚಂದ್ರನೆಂಬ ಕನ್ನಡಿಯಲ್ಲಿ ತನ್ನ ಸೌಂದರ್ಯವನ್ನು ನಿಂತು ಚೆನ್ನಾಗಿ

ಮ॥ ವದನಂ ಚಂದ್ರನಿಭಂ ವಿಲೋಚನಯುಗಂ ಪಂಕೇಜಪತ್ರಪ್ರಭಂ
ರದನಂ ವಜ್ರಸಮಂ ಪ್ರವಾಳಸದೃಶಂ ದಂತಚ್ಛದಂ ಮಂಗಳಾ
ಸ್ಪದ ನಾಸಾಮುಕುಳಂ ಸುಚಂಪಕ ಸುಮಪ್ರಖ್ಯಂಗಳಂ ಶಂಖಸಂ
ಪದಮುದ್ಯದ್ಭುಜಯುಗ್ಮಮೀ ಭುಜಗರಾಜಸ್ಪರ್ಧಿ ಭೂಪಾಳನಾ ೬

ಉ॥ ರೂಪದು ಪುಷ್ಪಚಾಪನನುದಗ್ರಯಶಂ ಶಶಿಯಂ ಸುಭಾಗ್ಯಮಾ
ಶ್ರೀಪತಿಯಂ ಪ್ರತಾಪಮಿನನಂ ಘನಧೈರ್ಯಗುಣಂ ಧರಾಧ್ರಮಂ
ಕೋಪಮದಗ್ನಿಯಂ ಸುರತರಂಗಿಣಿಯಂ ದಯೆ ಗೆಲ್ದು ತೋಱದಾ
ಭೂಪನ ಖಡ್ಗಮೊಂದೆ ಸಲೆ ಗೆಲ್ದುದೆ ವೈರಿನರಾಧಿನಾಥರಾ ೭

ಚಂ॥ ತ್ವರಿತಗತಿಪ್ರಯುಕ್ತ ತುರಗೋತ್ಕರ ಸತ್ಖುರಘಟ್ಟನೋತ್ಥಿತೋ
ದ್ಧುರರಜಮರ್ಕಮಂಡಲಮನಾವರಿಸುತ್ತಿರೆ ತತ್ಪ್ರತಾಪದಿಂ
ಪರಿಭವಮಾಂತ ಮಾಳ್ಕೆಯೊಳೆ ಮಾಸಿದ ದರ್ಪಣದಂತದೊಪ್ಪೆ ನಿ
ರ್ಜರಕರಿ ಪಾಂಶುಕೇಳಿಯನೊಡರ್ಚುಗುಮಲ್ಲಿ ಜಯಪ್ರಯಾಣದೊಳ್ ೮

ನೋಡಿಕೊಳ್ಳುತ್ತಿದ್ದಳು. ೬. ಆ ಸತ್ಯೇಂದ್ರಚೋಳಭೂಪಾಲಕನ ಮುಖವು ಚಂದ್ರ ಕಾಂತಿಗೆ ಸಮನಾದುದು; ಎರಡೂ ಕಣ್ಣುಗಳು ಕಮಲದ ದಳಗಳ ಪ್ರಭೆಯಿಂದ ಕೂಡಿದ ವುಗಳು ; ಹಲ್ಲುಗಳು ವಜ್ರಗಳಿಗೆ ಸಮಾನವಾದಂಥವುಗಳು ; ತುಟಿಗಳು ಹವಳದಂತೆ ಕೆಂಪಾದವುಗಳು ; ಮಂಗಳಕಾರಕವಾದ ಮೊಗ್ಗಿನಂತಿರುವ ಮೂಗು ಸಂಪಿಗೆ ಹೂವಿಗೆ ಸಮಾನವಾದುದು ; ಕುತ್ತಿಗೆಯು ಶಂಖದ ಸೌಂದರ್ಯಕ್ಕೆ ಸಮ ; ಉದ್ದವಾದ ಬಾಹು ದ್ವಯವು ಆದಿಶೇಷನೊಡನೆ ಸ್ಪರ್ಧಿಸುವಂಥಹುದು. ೭. ಆ ಸತ್ಯೇಂದ್ರಚೋಳನ ರೂಪವು ಪುಷ್ಪಚಾಪನಾದ ಮನ್ಮಥನನ್ನು, ಯಶಸ್ಸು ಚಂದ್ರನನ್ನು, ಐಶ್ವರ್ಯವು ಲಕ್ಷ್ಮೀ ಪತಿಯಾದ ವಿಷ್ಣುವನ್ನು, ಪ್ರತಾಪವು ಸೂರ್ಯನನ್ನು, ಶ್ರೇಷ್ಠವಾದ ಧೈರ್ಯಗುಣವು ಭೂಮಿಯನ್ನು ಧಾರಣಮಾಡಿರುವ ಮೇರುಪರ್ವತವನ್ನು, ಕೋಪವು ಅಗ್ನಿಯನ್ನು, ದಯೆಯು ದೇವತೆಗಳ ನದಿಯಾದ ಗಂಗೆಯನ್ನು ಗೆದ್ದಿತು. ಆ ಭೂಪನ ಖಡ್ಗವೊಂದೇ ವೈರಿರಾಜರುಗಳನ್ನು ಗೆದ್ದಿತೇನು ? ೮. ಆ ಸತ್ಯೇಂದ್ರಚೋಳಮಹಾರಾಜನು ಶತ್ರುರಾಜರ ಜಯಾರ್ಥವಾಗಿ ಪ್ರಯಾಣ ಹೊರಡುವ ಸಮಯದಲ್ಲಿ ಅತ್ಯಂತ ವೇಗದಿಂದ ಓಡುತ್ತಿರುವ ಕುದುರೆಗಳ ಸಮೂಹದ ಕಾಲಿನ ಗೊರಸುಗಳ ತುಳಿತದ ಫಲವಾಗಿ ಮೇಲಕ್ಕೆದ್ದು ಹಾರಿದ ಯುದ್ಧಸಂಬಂಧವಾದ ಧೂಳು ಸೂರ್ಯಮಂಡಲವನ್ನು ಆವರಿಸು ತ್ತಿತ್ತು. ಆ ಸೂರ್ಯನು ಸತ್ಯೇಂದ್ರಚೋಳಮಹಾರಾಜನ ಪ್ರತಾಪದ ಫಲವಾಗಿ ತಿರ ಸ್ಕಾರ ಹೊಂದಿದವನಾದನು, ಮಾಸಿಹೋದ ಕನ್ನಡಿಯು ಹಾಗೆ ತೋರುತ್ತಿದ್ದನು. ದೇವತೆಗಳ ಆನೆಯಾದ ಐರಾವತವು ಧೂಳಿನ ಆಟವನ್ನು (ಎಂದರೆ ನೆಲದ ಧೂಳನ್ನೆತ್ತಿ

ಮ॥ಸ್ರ॥ ಕೃತಶುಂಭದ್ವೇಷೆ ಚಂಚತ್ತನು ವಿಬುಧಪತಿಸ್ತುತ್ಯೆ ಕಲ್ಯಾಣಿ ತೇಜೋ
ನ್ವಿತೆ ದೃಪ್ಯಚ್ಚಂಡಮುಂಡಪ್ರಹರಿಣಿ ರಿಪುದುರ್ಗಘ್ನಿ ಸೌವರ್ಣಕೋಶ
ಸ್ಥಿತೆ ರೌದ್ರಶ್ರೀಸಮಾಲಂಬಿತೆ ಶುಭಕರವಿಖ್ಯಾತೆ ರಕ್ತಾಂಗವಿಭ್ರಾ
ಜಿತೆ ವಿದ್ಯುದ್ದ್ಯೋತಿ ತದ್ಭೂಭುಜನಸಿಲತಿಕಾಕಾಳಿ ಕಣ್ಗೊಪ್ಪುತಿರ್ದಳ್ ೯

ವ॥ ಮತ್ತಮಾ ನೃಪೇಂದ್ರನುಪೇಂದ್ರನಂತೆ ಸದಾನಂದಕರಾಜಿತನುಂ, ಕಮಳಭವನಂತೆ ಸಕಳ ವಿಬುಧ ಸಂಸೇವಿತ ಸಾರಸೋನ್ನತ ಪೀಠಾಸೀನನುಂ, ಸುರೇಂದ್ರನಂತೆ ಸಹಸ್ರನೇತ್ರಾಶ್ರಿತ ವಿಪುಳ ವಿಗ್ರಹ ಪರಬಲಾಪಹನುಂ, ವೀತಿಹೋತ್ರನಂತೆ ವಿತತಕಾಂತಾರತ

ಮ್ಮೆಮೇಲೆ ಎರಚಿಕೊಳ್ಳುವ ಆಟವನ್ನು) ಆಡುತ್ತಿತ್ತು. ೯. ಆ ರಾಜನ ಖಡ್ಗಲತೆಯೆಂಬ ಕಾಳಿಯು ವಿರಾಜಿಸುತ್ತಿದ್ದಳು. ಹೇಗೆಂದರೆ, (ಖಡ್ಗ ಪರವಾದ ಅರ್ಥ :) ಪ್ರಕಾಶಮಾನವಾದ ವೇಷವುಳ್ಳದ್ದು. ಅಲ್ಲಾಡುವ ಆಕೃತಿಯುಳ್ಳದ್ದು. ದೇವೇಂದ್ರನಿಂದ ಸ್ತುತ್ಯವಾದದ್ದು. ಮಂಗಳಕರೆ. ತೇಜೋನ್ವಿತೆ. ಉದ್ಧತರದ ಕ್ರೂರಿಗಳ ಮುಂಡವನ್ನು ಬೇರ್ಪಡಿಸತಕ್ಕದ್ದು. ಶತ್ರುಗಳ ಕೋಟೆಯನ್ನು ಭೇದಿಸುವಂತಹುದು. ಸುವರ್ಣಮಯವಾದ ಒರೆಯಲ್ಲಿ ಇರತಕ್ಕುದು. ರೌದ್ರ ತೇಜಸ್ಸಿನಿಂದ ಕೂಡಿದ್ದು. (ರಾಜನ) ಶುಭವಾದ ಕೈಯಲ್ಲಿ ವಿಖ್ಯಾತವಾದುದು. ರಕ್ತಮಯವಾದ ದೇಹದಿಂದ ವಿರಾಜಿತ. ಮಿಂಚಿನಂತೆ ಹೊಳೆಯುವುದು. (ಕಾಳಿಯ ಪರವಾದ ಅರ್ಥ:) ಶುಂಭಾಸುರನನ್ನು ದ್ವೇಷಿಸತಕ್ಕವಳು. ನಡುಗುವ ದೇಹವುಳ್ಳ ಇಂದ್ರನಿಂದ ಸ್ತುತ್ಯೆ. ದೃಪ್ಯತ್ = ದರ್ಪಯುಕ್ತರಾದ, ಚಂಡ ಮುಂಡ ಎಂಬುವರನ್ನು ಸಂಹರಿಸಿದವಳು. ರಿಪುಗಳಾದ ಕಷ್ಟಗಳನ್ನು ಪರಿಹರಿಸತಕ್ಕವಳು. ಅಕಾರಾದಿ ಕ್ಷಕಾರಪರ್ಯಂತವಾದ ಸುಂದರ ಮಾತೃಕಾಮಯವಾದ ಕೋಶದಲ್ಲಿ ಸ್ಥಿತೆ. ರುದ್ರನ ಶೋಭೆಯಿಂದ ಯುಕ್ತೆ. ಶುಭಕರಳೆಂದು ವಿಖ್ಯಾತೆ. ಕೆಂಪುಬಣ್ಣವುಳ್ಳ ದೇಹದಿಂದ ಶೋಭಿತೆ. (ಉಳಿದ ವಿಶೇಷಣಗಳು ಸಮಾನ).
ವ॥ ಆ ಚೋಳನರೇಂದ್ರನು ವಿಷ್ಣುವಂತೆ ಸದಾನಂದಕರಾಜಿತ (೧. ಸಜ್ಜನರನ್ನು ಆನಂದಗೊಳಿಸುವವರಿಂದ ಶೋಭಿತ. ೨. ಸದಾನಂದಕವೆಂಬ ಖಡ್ಗದಿಂದ ಶೋಭಿತ.) ಬ್ರಹ್ಮನಂತೆ ಸಕಲ ವಿದ್ವಾಂಸರಿಂದಲೂ ಸೇವಿತವಾದ ಸಾರವತ್ತೂ ಉನ್ನತವೂ ಆದ ಪೀಠದಲ್ಲಿ ಕುಳಿತವನು. ಸಕಲ ದೇವತೆಗಳಿಂದಲೂ ಸೇವಿತವಾದ ಕಮಲ ಅಥವಾ ಹಂಸವೆಂಬ ಪೀಠದಲ್ಲಿ ಕುಳಿತವನು. (ಸಾರಸ = ಕಮಲ, ಹಂಸ) ದೇವೇಂದ್ರನಂತೆ ಸಾವಿರಾರು ನಾಯಕರಿಂದ ವಿಪುಲವಾದ ಯುದ್ಧದಲ್ಲಿ ಶತ್ರುಬಲವನ್ನು ನಾಶಮಾಡತಕ್ಕವನು. (ಸಹಸ್ರನೇತ್ರ + ಆಶ್ರಿತ–ಸಹಸ್ರ ನೇತ್ರಗಳಿಗೂ ಪಾತ್ರವಾದ ವಿಪುಲದೇಹವುಳ್ಳ ಶತ್ರುವಾದ ಬಲನನ್ನು ಸಂಹರಿಸಿದವನು. (ವಿಗ್ರಹ = ಯುದ್ಧ, ದೇಹ). ಅಗ್ನಿಯಂತೆ ವಿತತ ಕಾಂತಾರತಮೋಹ,

ಮೋಹನುಂ, ದಂಡಧರನಂತೆ ಕುಜನತಾಪಕಾರಿಯುಂ, ರಾಕ್ಷಸೇಶ್ವರನಂತೆ ಸದಾನವವಿಭವನುಂ, ಪಾಶಹಸ್ತನಂತೆ ಘನಸಿಂಧುರಾಜಿತಾಪ್ರಮೇಯಬಲನುಂ, ಸಮೀರಣನಂತೆ ನಿಜಸತ್ವ ಸಮುದ್ಧೃತಪರಭೂಪರಾಗನುಂ, ಧನೇಶ್ವರನಂತೆ ಮಹಾಪದ್ಮಾಶ್ರಿತಕೋಶನುಂ, ಈಶಾನನಂತೆ ಚಂದ್ರೋಪಲಸಿತಾಂಗ ವೃಷೇಂದ್ರಗಮನನುಂ, (ವಿರೋಧಾಭಾಸ) ಕೃತಪದ್ಮಾನಂದನಾಗಿಯುಂ ಸಕಳ ಕಳಾನಿಧಿಯುಂ, ಕುವಳಯಾಧಿಪನಾಗಿಯುಂ ಅನಂತರತ್ನನುಂ, ಪ್ರಬಳ ತೇಜಸ್ವಿಯಾಗಿಯುಂ ಅಂಧಕಾರಾತಿರುಚಿಯುಂ, ಮಹಾಮಹಿಮಾರಾಶಿಯಾಗಿಯುಂ ಸುರಾಗನುಂ,

(೧. ವಿಸ್ತೃತವಾದ ಕಾಂತಾಸಕ್ತವಾದ ಮೋಹವುಳ್ಳವನು. ೨. ವಿಶಾಲವಾದ ಅರಣ್ಯದ ಕತ್ತಲೆಯನ್ನು ಹೋಗಲಾಡಿಸತಕ್ಕವನು.) ಯಮನಂತೆ ಕುಜನಪಕಾರಿ (೧. ಕುತ್ಸಿತ ಜನರಿಗೆ ತಾಪಕಾರಿ ೨. ಭೂಮಿಯಲ್ಲಿರುವ ಜನರಿಗೆ ತಾಪಕಾರಿ.) ನೈರ್ಋತಿಯಂತೆ ಸದಾ ನವವಾದ ವೈಭವವುಳ್ಳವನು-ದಾನವವೈಭವಸಹಿತನು. ವರುಣನಂತೆ ಘನವಾದ ಸಿಂಧುರ =ಆನೆಗಳಿಂದ ಕೂಡಿದ ಅಜಿತವೂ ಅಪ್ರಮೇಯವೂ ಆದ ಸೇನೆಯುಳ್ಳವನು-ಘನವಾದ ಸಿಂಧು=ಸಮುದ್ರದಿಂದ ಶೋಭಿತನೂ ಅಪ್ರಮೇಯಬಲನೂ ಆದವನು. ವಾಯುವಿನಂತೆ ತನ್ನ ಸತ್ತ್ವದಿಂದ ವಿನಾಶಗೊಳಿಸಿದ ಪರಭೂಪಾಲಕರ ವ್ಯಾಮೋಹ ಉಳ್ಳವನು-ತನ್ನ ಸತ್ತ್ವದಿಂದ ಎತ್ತಿಹಾಕಿದ, ಪರ=ವಿಶಾಲವಾದ, ಭೂ=ಭೂಮಿಯ, ಪರಾಗ=ಧೂಳುಳ್ಳವನು. ಕುಬೇರನಂತೆ ಮಹತ್ತರವಾದ, ಪದ್ಮಾ=ಲಕ್ಷ್ಮಿಯಿಂದ ಆಶ್ರಿತವಾದ ಭಂಡಾರವುಳ್ಳವನು-ಮಹಾಪದ್ಮವೆಂಬ ನಿಧಿಯಿಂದ ಆಶ್ರಿತವಾದ ಭಂಡಾರವುಳ್ಳವನು. ಈಶ್ವರನಂತೆ ಚಂದ್ರನಿಂದ, ಉಪಲಸಿತ=ಶೋಭಿತವಾದ, ಅಂಗ=ಶಿರಸ್ಸೆಂಬ ಅಂಗವುಳ್ಳವನೂ, ವೃಷೇಂದ್ರಗ=ವೃಷಭವಾಹನನೂ ಆದ ಶಿವನಲ್ಲಿ ಮನಸ್ಸುಳ್ಳವನು. ಚಂದ್ರೋಪಲ =ಚಂದ್ರಕಾಂತ ಶಿಲೆಯಂತೆ, ಸಿತಾಂಗ=ಬಿಳುಪಾದ ದೇಹವುಳ್ಳ, ವೃಷೇಂದ್ರ=ವೃಷಭದ ಮೇಲೆ, ಗಮನ=ಗಮನವುಳ್ಳವನು. (ಮುಂದೆ ವಿರೋಧಾಭಾಸ: ಮೊದಲನೆಯ ಅರ್ಥದಲ್ಲಿ ವಿರೋಧ, ಎರಡನೆಯ ಅರ್ಥದಲ್ಲಿ ವಿರೋಧ ಪರಿಹಾರ) ೧. ಪದ್ಮಕ್ಕೆ ಆನಂದವನ್ನುಂಟುಮಾಡುವ ಸೂರ್ಯನಾದರೂ ಸಕಲ ಷೋಡಶಕಲೆಗಳಿಗೂ ನಿಧಿಯಾದ ಚಂದ್ರ. ೨. ಕಮಲದಲ್ಲಿ ಪ್ರೀತಿಯುಳ್ಳವನು. ಸಕಲವಿದ್ಯೆಗಳಿಗೆ ಆಶ್ರಯ. ೧. ಕುತ್ಸಿತವಾದ, ವಲಯ=ಸ್ವಲ್ಪ ಪ್ರದೇಶಕ್ಕೆ ಒಡೆಯನಾದರೂ ಅನಂತರತ್ನವುಳ್ಳವನು ಅಥವಾ ಭೂಮಿಗೆ ಒಡೆಯನಾದರೂ ಅನಂತನ=ಆದಿಶೇಷನ ರತ್ನವುಳ್ಳವನು. ೨. ಭೂಮಂಡಲಕ್ಕೆ ಒಡೆಯ. ಅನಂತರತ್ನ. ೧. ಪ್ರಬಲತೇಜಸ್ವಿಯಾದರೂ ಅಂಧಕಾರದಂತೆ ಕಪ್ಪಾದ ಬಣ್ಣವುಳ್ಳವನು ಅಥವಾ ಅಂಧಕಾರದಿಂದ ಶೋಭಿಸತಕ್ಕವನು. ೨. ಪ್ರಬಲ ತೇಜಸ್ವಿ. ಅಂಧಕವೈರಿಯಾದ ಶಿವನಲ್ಲಿ ಭಕ್ತಿಯುಳ್ಳವನು. ೧. ಮಹಾಮಹಿಮೆಗಳ ರಾಶಿಯಾಗಿದ್ದರೂ ಸುರಾಗ=ಸುರೆಯನ್ನು ಕುಡಿಯತಕ್ಕವನು. ೨. ಮಹಾಮಹಿಮ. ಉತ್ತಮ ಅಭಿರುಚಿ

ಸುಧರ್ಮಾಧಿಷ್ಠಿತನಾಗಿಯುಂ ಗೋತ್ರಪ್ರಿಯನುಂ, ಭೂಜನಕುಳಾಶ್ರಯನಾಗಿಯುಂ ಅವನ ಸ್ವಭಾವನುಂ, ಮಹಿತನಯಯುಕ್ತನಾಗಿಯುಂ ಅನವಗ್ರಹನುಂ, ಅತನು ವಿಭೂತಿ ವಿಳಸಿತನಾಗಿಯುಂ ಅಶೇಷಾಭರಣಾಕರನೆನಿಸಿರ್ದನಂತುಮಲ್ಲದೆ

ಮ॥ ವನದಂತಿಂದ್ರನಲೋಕದಂತೆ ಸುಮನೋವಾಸಂ ಸುಧಾಧಾಮನಂ
ತಿನನಂತುತ್ಕಮಳಾಶ್ರಯಂ ಗಗನದಂತಬ್ಜಾಕ್ಷನಂತೈದೆ ದಿ
ವ್ಯನವೀನ ದ್ವಿಜರಾಜರಂಜಿತಸಭಂ ಸತ್ಕಾವ್ಯದಂತಬ್ಧಿಯಂ
ತೆ ನಿತಾಂತಂ ಸರಸಂ ವಿರಾಜಿಸಿದನಾ ರಾಜೇಂದ್ರಪಂಚಾನನಂ ೧೦

ಯುಳ್ಳವನು. ೧. ಸುಧರ್ಮಾ ಎಂಬ ದೇವಸಭೆಯಲ್ಲಿ ಕುಳಿತ ಇಂದ್ರನಾಗಿದ್ದರೂ ಗೋತ್ರ=ಪರ್ವತಗಳಲ್ಲಿ ಪ್ರೀತಿಯುಳ್ಳವನು. ೨. ಉತ್ತಮ ಧರ್ಮಯುಕ್ತ. ಗೋತ್ರ= ಸ್ವಜನರಲ್ಲಿ ಪ್ರೀತಿಯುಳ್ಳವನು. ೧. ಭೂಜ=ಮರಗಳಿಗೂ, ನಕುಲ=ಮುಂಗಸಿಗಳಿಗೂ ಆಶ್ರಯನಾದರೂ ವನದ ಸ್ವಭಾವವಿಲ್ಲದವನು. ೨. ಭೂಮಿಯಲ್ಲಿರುವ ಜನತೆಗೆ ಆಶ್ರಯ. ಅವನ=ಪಾಲಿಸುವ ಸ್ವಭಾವದವನು. ೧. ಮಹಿತನಯ=ಕುಜನಿಂದ ಯುಕ್ತನಾಗಿದ್ದರೂ ನವಗ್ರಹದಲ್ಲಿ ಸೇರಿದವನಲ್ಲ. ೨. ಮಹಿತ=ಪೂಜ್ಯವಾದ, ನಯ=ನೀತಿಯಿಂದ ಯುಕ್ತ. ಅವಗ್ರಹ (ತಡೆಯಿಂದ) ರಹಿತ ಅಥವಾ ದುರ್ಭಿಕ್ಷವಿಲ್ಲದವನು. ೧. ಅತನು=ಮನ್ಮಥನ, ವಿಭೂತಿ=ಭಸ್ಮದಿಂದ ಶೋಭಿತನಾದ ಶಿವನಾಗಿದ್ದರೂ ಆದಿಶೇಷನನ್ನು ಆಭರಣವಾಗಿ ಧರಿಸದ ಕೈಯುಳ್ಳವನು. ೨. ಅತನು=ದೊಡ್ಡದಾದ, ವಿಭೂತಿ=ಐಶ್ವರ್ಯದಿಂದ ಶೋಭಿತ. ಎಲ್ಲ ಆಭರಣಗಳನ್ನೂ ಧರಿಸಿದ ಕೈಯುಳ್ಳವನು. (೮) ಇದೂ ಅಲ್ಲದೆ ೧೦. ಆ ರಾಜೇಂದ್ರನೆಂಬ ಸಿಂಹನು-ವನದ ಹಾಗೆ, ಇಂದ್ರನ ಸ್ವರ್ಗದ ಹಾಗೆ ಸುಮನಸ್ ಎಂದರೆ ಪಂಡಿತರುಗಳಿಗೆ ಆಶ್ರಯಸ್ಥಾನವಾಗಿ ಉಳ್ಳವನು, ವನವು-ಸುಮಾನ ಎಂದರೆ ಹೂವುಗಳಿಗೆ ಆಶ್ರಯಸ್ಥಾನವಾದದ್ದು, ಇಂದ್ರನ ಲೋಕವಾದ ಸ್ವರ್ಗವು ಸುಮನಸ್ ಎಂದರೆ ದೇವತೆಗಳಿಗೆ ಆಶ್ರಯಸ್ಥಾನವಾಗಿ ಉಳ್ಳದ್ದು. ಸುಧಾಮನಾದ ಚಂದ್ರನ ಹಾಗೆ, ಸೂರ್ಯನ ಹಾಗೆ ಉತ್ತಮವಾದ ರಾಜ್ಯವೆಂಬ ಲಕ್ಷ್ಮಿ (ಕಮಲಾ)ಗೆ ಆಶ್ರಯವಾಗಿ ಉಳ್ಳವನು ; ಚಂದ್ರನು-ಉನ್ನತವಾದ ಅಥವಾ ಉತ್ತಮವಾದ ಜಿಂಕೆಗೆ (ಕಮಲಾ) ಆಸರೆಯಾದವನು ; ಸೂರ್ಯನು ಶ್ರೇಷ್ಠವಾದ ಕಮಲಕ್ಕೆ ಆಧಾರಭೂತನಾದವನು. ಗಗನದ ಹಾಗೆ, ವಿಷ್ಣುವಿನ ಹಾಗೆ ಶ್ರೇಷ್ಠರಾದ ನವೀನರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಂದಲೂ, ರಾಜರಿಂದಲೂ ಮನೋಹರವಾದ ಸಭೆಯುಳ್ಳವನು ; ಗಗನಪಕ್ಷದಲ್ಲಿ ದ್ವಿಜರಾಜ= ಚಂದ್ರ. ವಿಷ್ಣುಪಕ್ಷದಲ್ಲಿ ದ್ವಿಜರಾಜ= ಗರುಡ. ಗಗನಪಕ್ಷದಲ್ಲಿ ಸಭ= ನಕ್ಷತ್ರಯುಕ್ತ ಎಂದು ಹೇಳಬಹುದು. ಸತ್ಕಾವ್ಯದ ಹಾಗೆ, ಸಮುದ್ರದ ಹಾಗೆ ರಸಾ= ಭೂಮಿಯಿಂದ ಯುಕ್ತ. ಸತ್ಕಾವ್ಯವು-ನವರಸಗಳಿಗೆ ಆಶ್ರಯ. ಅಬ್ಧಿಯು-ರಸ ಎಂದರೆ ನೀರಿನಿಂದ ಸಮೇತ

ಮ॥ಸ್ರ॥ ಪತಿ ನಿದ್ರಾಸಕ್ತನಾದಂ ಜಡಧಿಯೊಳದಱಿಂ ಜಾಡ್ಯನಾದಂತೆ ಭಂಗಾ
ನ್ವಿತನಾದಂ ತಂದೆ ಕುಂಭೋದ್ಭವನಿಸದುವಲಂ ತಳ್ತ ಪಾಂಗೀದೆ ಪುತ್ರಂ
ಕೃತಶಂಭುದ್ವೇಷದಿಂ ಮೈಯಳಿದನದು ಮಧುಸ್ನೇಹದಿಂದಾದವೋಲೆಂ
ದು ತದುದ್ವ್ಯಾಮೋಹಮಂ ತಾಂ ತೊಱೆದು ಸಿರಿನರಾಧೀಶನಂ ಸಾರ್ದು ಬಾಳ್ದಳ್ ೧೧

ವ॥ ಇಂತೊಪ್ಪುವ ಇಳಾಕಾಂತನಂತಃಪುರ ಕಮಳದೊಳ್ಕಮಳೆಯಂತೆ ಕಮನೀಯ ತೆಯನಪ್ಪುಕೆಯ್ದು

ಕಂ॥ ಅಮೃತಮಯವಾಣಿ ಪರಿಲಸ
ದಮೃತಾಧರೆಯಮೃತಕಿರಣಮಂಡಲಮುಖಿ ತಾ
ನಮೃತಮತಿಯೆಂಬ ಪೆರ್ವೆಸ
ರಮರ್ದಿರೆ ತನ್ಮಹಿಪಮಹಿಳೆ ಕರಮೆಸೆದಿರ್ದಳ್ ೧೨

ಶಾ॥ ಲೋಕಾಲೋಕನ ಚಿತ್ರಪುತ್ರಿಕೆ ಲಸಲ್ಲಾವಣ್ಯಲಕ್ಷ್ಮೀಮುಖ
ಶ್ರೀ ಕಲ್ಯಾಣಯಶೋನಿಧಾನೆ ರತಿರತ್ನಜ್ಯೋತಿ ವಿಖ್ಯಾತಶೈ
ವಾಕೂಪಾರ ಶಶಾಂಕಮಂಡಳಿ ಕಳಾಸಸ್ಯಾವಳೀ ಧಾತ್ರಿ ಸು
ಶ್ಲೋಕಾನೇಕ ಗುಣಾಬ್ಜಪದ್ಮಿನಿ ವಿಳಾಸಂಬೆತ್ತು ಕಣ್ಗೊಪ್ಪಿದಳ್ ೧೩

ವಾದುದು. ಹೀಗೆ ವಿರಾಜಿಸುತ್ತಿದ್ದನು. (ಶ್ಲೇಷಾಲಂಕಾರ). ೧೧. ತನ್ನ ಪತಿಯಾದ ವಿಷ್ಣುವು ಜಡಧಿಯಲ್ಲಿ— ಸಮುದ್ರದಲ್ಲಿ-ದಡ್ಡನಲ್ಲಿ ಆಸಕ್ತನಾಗಿ ಜಾಡ್ಯವನ್ನು ಪಡೆದು ಆ ಕಾರಣದಿಂದಲೇ ನಿದ್ರೆಯಲ್ಲಿ ಆಸಕ್ತನಾಗಿಹೋದನು. (ಸಮುದ್ರದಲ್ಲಿ ಮುಳುಗಿದನು). ತನ್ನನ್ನು ಹೆತ್ತವನಾದ ಸಮುದ್ರನು ಅಗಸ್ತ್ಯಮಹರ್ಷಿಯಿಂದ ಕುಡಿಯಲ್ಪಟ್ಟು ಭಂಗ ವನ್ನು ಹೊಂದಿದನೆಂಬುದದು ಸತ್ಯವೇ ಅಲ್ಲವೆ ! ಮಗನಾದ ಮನ್ಮಥನು ಶಿವನ ದ್ವೇಷ ವನ್ನು ಚೈತ್ರನ ಸ್ನೇಹಕಾರಣದಿಂದಾಗಿ ಮಾಡಿಕೊಂಡು ತನ್ನ ದೇಹವನ್ನೇ ನಾಶಮಾಡಿ ಕೊಂಡನು. ಆದ್ದರಿಂದ ಲಕ್ಷ್ಮಿಯು ತನ್ನ ಆ ಸಂಬಂಧವಾದ ವ್ಯಾಮೋಹವನ್ನೆಲ್ಲ ತೊರೆದು ನರಾಧಿಪತಿಯಾದ ಸತ್ಯೇಂದ್ರಚೋಳಮಹಾರಾಜನ ಆಶ್ರಯವನ್ನು ಹೊಂದಿ ಬಾಳಿದಳು. ವ॥ ಹೀಗೆ ಒಪ್ಪುವ ಆ ರಾಜನ ಅಂತಃಪುರವೆಂಬ ಕಮಲದಲ್ಲಿ ಲಕ್ಷ್ಮಿ ಯಂತೆ ಚೆಲ್ವಿಕೆಯಿಂದ ಕೂಡಿಕೊಂಡು ೧೨. ಅಮೃತಮಯವಾದ ಮಾತುಳ್ಳವಳೂ, ಪ್ರಕಾಶಿಸುವ ಅಮೃತಸಮಾನ ತುಟಿಯುಳ್ಳವಳೂ, ಚಂದ್ರಮಂಡಲದಂತೆ ಮುಖವುಳ್ಳ ವಳೂ ಎನಿಸಿದವಳಾಗಿ ಅಮೃತಮತಿಯೆಂಬ ಉತ್ತಮ ಹೆಸರಿನಿಂದ ಪ್ರಖ್ಯಾತಳಾದ ಆ ರಾಜನ ಧರ್ಮಪತ್ನಿಯು ಶೋಭಿಸುತ್ತಿದ್ದಳು. ೧೩. ಲೋಕದ ಜನಗಳ ಚಿತ್ರತರವಾದ ಪುತ್ರಿಕೆಯಂತೆ ಶೋಭಿಸುವ ಲಾವಣ್ಯದಿಂದ ಕೂಡಿದ ಲಕ್ಷ್ಮೀಮುಖದಂತಿರುವವಳು ; ಮಂಗಳಕ್ಕೂ ಯಶಸ್ಸಿಗೂ ಕಾರಣೀಭೂತಳು ; ರತಿಗೆ ಸಮಾನವಾದ ರತ್ನಜ್ಯೋತಿ ಯಂತಿರುವವಳು ; ವಿಖ್ಯಾತವಾದ ಶಿವಸಂಬಂಧದ ಸಮುದ್ರಕ್ಕೆ ಚಂದ್ರಮಂಡಳ ದಂತಿದ್ದು, ಕಲೆಗಳೆಂಬ ಸಸ್ಯಾಳಿಗಳಿಗೆ ಭೂಮಿಸ್ವರೂಪಳು ; ಉತ್ತಮ ಕೀರ್ತಿಯುಳ್ಳ

ಕಂ॥ ಕಳರವಜಿತಕೋಕಿಳೆ ಕೋ
ಮಳೆ ಮಲಯಜಗಂಧಿಗಂಧೆ ಗಜಪತಿಗತಿ ಮಂ
ಜುಳೆ ಮಧುಕರಕುಂತಳೆ ಮಂ
ಗಳಮಯೆ ಮಾಧುರ್ಯಗುಣಗಣೋಜ್ವಳೆ ಮೆಱೆದಳ್ ೧೪

ಉ॥ ಪಾಱದ ತುಂಬಿಯುಂ ಕಱೆಯೊಳೊಂದಿರದಿಂದುವನಿಂದು ದರ್ಶನ
ಕ್ಕಾಱಿಡಿಗೊಳ್ಳದಂಬುರುಹಮುಂ ಬಿರಿಸಾಗದ ರನ್ನಮುಂ ಕಿಲಂ
ಜಾಱದ ಚಕ್ರಮುಂ ಜಱಿದು ಬೀಳದ ನುಣ್ಮಳಲೊಟ್ಟಲಂ ಫಲಂ
ದೋಱದ ಬಾಳೆಯುಂ ಬಲಿಯದೊಪ್ಪುವಶೋಕನವಪ್ರವಾಳಮುಂ ೧೫

ಕಂ॥ ಪಡೆಯದುದಂ ಮುಂ ಪಡೆದಂ
ಜಡಜಭವಂ ಜಡನೆನಿಪ್ಪ ನುಡಿಯತೊಡಂಕಂ
ಬಿಡಿಸಲೊಡರ್ಚಿದನೆಂದೆನೆ
ಮಡದಿಯ ದಿವ್ಯಾಂಗಮೇಂ ಮನಂಗೊಳಿಸಿದುದೋ ೧೬

ವಳು ; ಅನೇಕ ಗುಣಗಳೆಂಬ ಕಮಲಗಳಿಗೆ ಸರೋವರ ಸ್ವರೂಪಳಾಗಿ ಆ ಅಮೃತಮತೀ ದೇವಿಯ ವೈಭವವನ್ನು ಹೊಂದಿ ಕಣ್ಣಿಗೆ ಶೋಭಿಸುತ್ತಿದ್ದಳು. ೧೪. ಆ ಅಮೃತ ಮತಿಯ ಧ್ವನಿಯು ಕೋಗಿಲೆಯ ಧ್ವನಿಯನ್ನು ಗೆದ್ದಿತ್ತು ; ಶ್ರೀಗಂಧದಂತೆ ಸುವಾಸನೆ ಯುಳ್ಳವಳು ; ಮದೋದಕದ ಗಂಧದಿಂದ ಶೋಭಿಸುವ ಆನೆಯ ನಡಿಗೆಯಂತೆ ನಡಿಗೆ ಯುಳ್ಳವಳು ; ಮನೋಹರಳು ; ದುಂಬಿಯಂತೆ ಮುಂಗುರುಳುಳ್ಳವಳು ; ಮಂಗಳಮಯ ಳೆನಿಸಿ, ಮಧುರವಾದ ಗುಣಸಮೂಹದಿಂದ ಮೆರೆಯುತ್ತಿದ್ದಳು. ೧೫. ಹಾರಿಹೋಗದ ಭ್ರಮರದಂತೆ ಕಪ್ಪುಕೂದಲುಳ್ಳವಳು ; ಕಲಂಕರಹಿತವಾದ ಚಂದ್ರನಂತೆ ಮುಖವುಳ್ಳ ವಳು ; ಚಂದ್ರನ ನೋಟಕ್ಕೆ ಮಾತ್ಸರ್ಯಪಡದ ಕಮಲಗಳಂತೆ ಇರುವ ಹಸ್ತಗಳುಳ್ಳವಳು ; ಕಾಠಿಣ್ಯವಿರದ ಕೆಂಪುರತ್ನದಂತಿರುವ ತುಟಿಯುಳ್ಳವಳು ; ಪಕ್ಕಕ್ಕೆ ಜೋತುಬೀಳದ ಚಕ್ರ ವಾಕದಂತಿರುವ ಸ್ತನಗಳುಳ್ಳವಳು. ಜರಿದು ಅತ್ತ ಇತ್ತ ಸರಿಯದ ಮಳಲರಾಶಿ ಯಂತಹ ಪೃಷ್ಟಭಾಗಗಳನ್ನುಳ್ಳವಳು ; ಗೊನೆಬಿಡದ ಬಾಳೆಯ ಮರದಂತೆ ನುಣುಪಾದ ತೊಡೆಗಳನ್ನುಳ್ಳವಳು ; ಬಲಿಯದೆ ಇರುವ ಅಶೋಕವೃಕ್ಷದ ಹೊಸ ಚಿಗುರಿನಂತೆ ಕಾಲು ಳ್ಳವಳಾಗಿ (ಆ ಅಮೃತಮತಿದೇವಿ ವಿರಾಜಿಸುತ್ತಿದ್ದಳು.) ೧೬. ಕಮಲಭವನಾದ ಬ್ರಹ್ಮನು ತಾನು ಪಡೆಯಬಾರದುದನ್ನು ಮೊದಲೇ ಪಡೆದನು. ತಾನು ಮಂದಬುದ್ಧಿ ಯವನೆನ್ನುವ ನುಡಿಯ (ಲೋಕದ ಜನಗಳ ಮಾತಿನ) ತೊಡಕನ್ನು ಬಿಡಿಸಿಕೊಳ್ಳಲು, ಈ ಅಮೃತಮತೀದೇವಿಯನ್ನು ಸೃಜಿಸಿ ತನ್ನ ಚಾತುರ್ಯವನ್ನು ತೋರಿಸಿಕೊಂಡನೋ ಎನ್ನುವ ಹಾಗೆ ಆವಳ ಆ ದಿವ್ಯಾಂಗಗಳು ಏನು ಮನಸ್ಸಿಗೆ ಆನಂದದಾಯಕವಾಗಿ

ವ॥ ಅಂತುಮಲ್ಲದೆಯುಂ

ಮ॥ ಸುಲಿಪಲ್ ಕೆಂಬವಳಂಬೊಲೊಪ್ಪುವಧರಂ ಭೃಂಗಾಳಕಂ ನುಣ್ಣೊಸ
ಲ್ತಿಲಪುಷ್ಪೋಪಮ ನಾಸಿಕಂ ನಗೆಮೊಗಂ ನೀಳ್ದಕ್ಷಿಗಳ್ ನುಣ್ಗೊರಲ್
ವಿಳಸದ್ದೋರ್ಲತೆ ಕೆಂದಳಂ ಘನಕುಚಂ ಗಂಭೀರನಾಭೀಲಸ
ದ್ವಲಯಂ ಪೂರ್ಣನಿತಂಬಮೊಳ್ತೊಡೆ ಪದಾಬ್ಜಂ ಮಂಜುಳಂ ಕಾಂತೆಯಾ ೧೭

ಹರಿಣಿ॥ ಕುಮುದನಯನಂ ಕುಂದಸ್ಮೇರಂ ಲಸದ್ವಿಸಜಾನನಂ
ಸಮದಗಮನಂ ಸಾಮೋದಾಂಗಂ ಸುಧಾಮಧುರಾಧರಂ
ತಿಮಿರಚಿಕುರಂ ತೀಕ್ಷ್ಣಾಪಾಂಗಂ ಘನಂ ಜಘನಸ್ಥಳಂ
ಕಮಳಚರಣಂ ಕಣ್ಗೊಪ್ಪಿತ್ತಾ ಧರಾಧಿಪಕಾಂತೆಯಾ ೧೮

ವ॥ ಮತ್ತಂ

ಚಂ॥ ತನುಗಳವಟ್ಟ ರೂಪು ಘನರೂಪನಲಂಕರಿಪಚ್ಚಜೌವನಂ
ಮನಕಿನಿದಾದ ಜೌವನಕೆ ತಕ್ಕ ವಿಳಾಸತೆ ಸದ್ವಿಳಾಸಮಂ
ಘನಮನೆ ಮಾಳ್ಪ ಜಾಣ್ಮೆ ಪೊಸಜಾಣ್ಮೆಯನುರ್ವಿಪ ಸದ್ಗುಣಂ ನೃಪಾಂ
ಗನೆಗೆಸೆದತ್ತು ಸದ್ಗುಣಮನೇಳ್ಗಿಯೊಳೊಂದಿಪ ಶ್ರೈವಸಂಪದಂ ೧೯

ದ್ದುವೋ ! ವ|| ಅಂತೂ ಅಲ್ಲದೆ, ೧೭. ಆ ಕಾಂತೆಯಾದ ಅಮೃತಮತಿದೇವಿಯ ಬಿಳಿದಾದ ಹಲ್ಲುಗಳು ; ಕೆಂಪಾದ ಹವಳದ ಕುಡಿಯಂತೆ ಶೋಭಿಸುವ ತುಟಿಗಳು ; ದುಂಬಿಗಳ ಸಮೂಹದಂತಿರುವ ಮುಂಗುರುಳು ; ನುಣುಪಾದ ಹಣೆ ; ತಿಲಪುಷ್ಪದಂತೆ ಕಾಣುವ ಮೂಗು ; ನಗುತ್ತಿರುವ ಮುಖ ; ನೀಳವಾದ ಕಣ್ಣುಗಳು ; ನುಣುಪಾದ ಕುತ್ತಿಗೆ ; ಶೋಭೆಗೊಂಡ ಬಳ್ಳಿಯಂತಿರುವ ತೋಳುಗಳು ; ಕೆಂಪಾದ ಅಂಗೈಗಳು ; ದಪ್ಪನಾದ ಮೊಲೆಗಳು; ಪ್ರಕಾಶಿಸುತ್ತಿರುವ ಆಳವಾದ ಹೊಕ್ಕಳಿನ ಮಂಡಲ ; ದಪ್ಪನಾದ ಪೃಷ್ಠಭಾಗ ; ಒಳ್ಳೆಯ ತೊಡೆಗಳು ; ಕಮಲದಂತಿರುವ ಪಾದಗಳು ಮನೋಹರವಾಗಿ ದ್ದುವು. ೧೮. ಆ ಭೂಮಿಪಾಲನಾದ ಸತ್ಯೇಂದ್ರಮಹಾರಾಜನ ಕಾಂತೆಯ ಆ ಕನ್ನೈ ದಿಲೆಗೆ ಸಮಾನವಾದ ಕಣ್ಣು ; (ಅರಳಿದ) ಮಲ್ಲಿಗೆಗೆ ಸಮಾನವಾದ ಹಸನ್ಮುಖ; ಪ್ರಕಾಶಮಾನವಾದ ತಾವರೆಯಂತಹ ಮುಖ ; ಮದಿಸಿದ ಆನೆಯ ನಡಿಗೆ ; ಸುಗಂಧ ದಿಂದ ಕೂಡಿದ ದೇಹ (ಅಥವಾ ಸಂತೋಷದಿಂದ ಕೂಡಿದ ದೇಹ) ; ಅಮೃತರಸ ಸುರಿಯುವ ಮಧುರವಾದ ತುಟಿ ; ಕತ್ತಲೆಯಂತೆ ಕಪ್ಪಾದ ಮುಂಗುರುಳು ; ಪ್ರಕಾಶಿ ಸುವ (ಹೊಳೆಯುವ) ಕಡೆಗಣ್ಣ ಕಾಂತಿ ; ದಪ್ಪನೆಯ ಪೃಷ್ಠಗಳು ; ಕಮಲದಂತಹ ಪಾದಗಳು ಕಣ್ಣಿಗೆ ಶೋಭಿಸುತ್ತಿದ್ದವು. ವ|| ಮತ್ತು ೧೯. ಆ ಅಮೃತಮತಿದೇವಿಗೆ ದೇಹಕ್ಕೆ ಹೊಂದಿಕೆಯಾಗಿರುವಂತಹ ರೂಪು, ಆ ರೂಪಕ್ಕೆ ಅಲಂಕಾರರೂಪವಾದ ಹರೆಯ, ಮನೋಹರತೆಗೊಂಡ ಆ ಹರಯಕ್ಕೆ ತಕ್ಕುದಾದ ವಿನೋದ (ಚಮತ್ಕಾರ ಬುದ್ಧಿ), ಆ ಒಳ್ಳೆಯ ವಿಲಾಸವನ್ನು ಹಿರಿಮೆಯನ್ನಾಗಿ ಮಾಡುವ ಜಾಣತನ, ಆ ನೂತನವಾದ ಜಾಣತನವನ್ನು ವೃದ್ಧಿಪಡಿಸುವಂತಹ ಸದ್ಗುಣಗಳು, ಆ ಸದ್ಗುಣ

ಮ॥ಸ್ರ॥ ಕಲಹಂಸೀಯಾನೆ ಕಂಜಕ್ರಮೆ ಕುಮುದವಿಶಾಲಾಕ್ಷಿ ಸಚ್ಚಂದ್ರಿಕಾಮಂ
ಜುಲಲೀಲಾಪಾಂಗೆ ಕುಂದಸ್ಮಿತೆ ಘನಕಬರೀಭಾರೆ ಭೂಭೃನ್ನಿತಂಬೋ
ಜ್ವಲೆ ಸಿಂಹೀಮಧ್ಯೆ ಬಿಂಬಾಧರೆ ಶುಕವಿಲಸದ್ವಾಣಿ ತಾನಾದ ಪಾಂಗಿಂ
ದೆ ಲತಾತನ್ವಂಗಿ ಕಲ್ಪದ್ರುಮಸಮನೃಪನೊಳ್ಕೂಡಿ ಬಾಳುತ್ತಮಿರ್ದಳ್ ೨೦

ಕಂ॥ ಗುಣಮನೊಳಕೈದು ತೋರ್ಕುಂ
ಮಣಿಮಹಿಯೊಳದೆಂಬುದುಚಿತಮವನೀಶ ಶಿರೋ
ಮಣಿಯನೊಳಕೈದುದಾ ಪೆ
ಣ್ಮಣಿಯ ಗುಣಂ ತಾನಿದೆಂಬುದೇನಚ್ಚರಿಯೋ ೨೧

ವ॥ ಮತ್ತಮಾ ಸತ್ಯೇಂದ್ರನರೇಂದ್ರಂಗೆ

ಮ॥ ಶಿವಲಿಂಗಾರ್ಚಕನಾರ್ಯಸಂಗತಿರತಂ ತೇಜೋನ್ವಿತಂ ರಾಜನೀ
ತಿವಿದಂ ವಿದ್ವದಮರ್ತ್ಯರತ್ನಮಮಳಸ್ವಾಂತಂ ಪರಕ್ಷ್ಮಾಧವ
ಸ್ತವನೀಯಂ ಸಮದರ್ಶಿ ಸದ್ಗುಣಯುತಂ ಸತ್ಕೀರ್ತಿಯುಕ್ತಂ ನಯಾಂ
ಕವಚಸ್ಕಂ ಪತಿಮೋಹಿನಾಮದಿನಲಂಪಿಂ ಮಂತ್ರಿಪಂ ರಂಜಿಪಂ ೨೨

ಗಳನ್ನು ವೃದ್ಧಿಗೊಳಿಸತಕ್ಕಂತಹ ಶಿವಭಕ್ತಿಯೂಸವಾದ ಸಂಪತ್ತು ಶೋಭಿಸುತ್ತಿತ್ತು. ೨೦. ಕಳಹಂಸದಂತೆ ನಡಿಗೆಯುಳ್ಳ, ಕಮಲದಂತಹ ಪಾದವುಳ್ಳ, ನೈದಿಲೆಯಂತೆ ವಿಶಾಲವಾದ ನೇತ್ರಗಳುಳ್ಳ, ಶ್ರೇಷ್ಠವಾದ ಬೆಳುದಿಂಗಳಂತೆ ಮಂಜುಳವಾದ ಲೀಲೆಯಿಂದ ಕೂಡಿದ ಕಡೆಗಣ್ಣ ನೋಟವುಳ್ಳ, ಮಲ್ಲಿಗೆಹೂವಿನಂಥ ಕಿರುನಗೆಯುಳ್ಳ, ನಿಡುಜಡೆ, ಪರ್ವತಗಳ ಹಾಗೆ ಪೃಷ್ಠಭಾಗದಿಂದ ಪ್ರಕಾಶಿಸುವ ಸಿಂಹದ ನಡುವಿನಂತೆ ಚಿಕ್ಕ ನಡುವುಳ್ಳ, ತೊಂಡೆ ಹಣ್ಣಿನಂತಹ ತುಟಿಯುಳ್ಳ, ಗಿಳಿಯಂತಹ ಮನೋಹರ ಮಾತುಗಳುಳ್ಳ—ಈ ರೀತಿಯಿಂದ ಕೂಡಿದ ಕಾರಣದಿಂದ ತಾನು ಬೆಳ್ಳಿಯಂತಹ ತನುವಿನಿಂದ ಕೂಡಿ ಕಲ್ಪವೃಕ್ಷಕ್ಕೆ ಸಮಾನವಾದ ಅರಸನೊಡನೆ ಕೂಡಿಕೊಂಡು ಬಾಳುತ್ತಿದ್ದಳು. ೨೧. ಲೋಕದಲ್ಲಿ ದಾರವನ್ನೊಳಗೊಂಡಿರುವ ಮಣಿಯು ಶೋಭಿಸುತ್ತದೆಯೆಂಬುದು ಸಹಜ. ಆದರೆ ಆ ರಾಜಶಿರೋಮಣಿಯನ್ನೊಳಗೊಂಡು ಆ ಕಾಂತೆಯ ದಾರವೇ (ಗುಣವೇ) ಶೋಭಿಸುತ್ತದೆಯೆಂಬುದು ಅಚ್ಚರಿಯೇ ಸರಿ (ಗುಣ=ದಾರ, ಸದ್ಗುಣ). (೮೦) ವ|| ಮತ್ತು ಆ ಸತ್ಯೇಂದ್ರಮಹಾರಾಜನಿಗೆ ೨೨. ಶಿವಲಿಂಗಪೂಜಾಸಕ್ತನೂ, ಪೂಜ್ಯರಾದವರ ಸಹವಾಸದಲ್ಲಿ ನಿರತನೂ, ತೇಜಸ್ವಿಯೂ, ರಾಜನೀತಿತಜ್ಞನೂ, ವಿದ್ವಾಂಸರಿಗೆ ಚಿಂತಾಮಣಿಯಂಥವನೂ, ಶ್ರೇಷ್ಠವಾದ ಮನಸ್ಸುಳ್ಳವನೂ, ಪರರಾಜರಿಂದ ಸ್ತೋತ್ರಮಾಡಿಸಿಕೊಳ್ಳುವವನೂ, ಸಮಾನ ದೃಷ್ಟಿಯುಳ್ಳವನೂ, ಸದ್ಗುಣಗಳಿಂದ ಕೂಡಿದವನೂ, ಒಳ್ಳೆಯ ಕೀರ್ತಿವಂತನೂ, ನಯನೀತಿಯಿಂದ ಕೂಡಿದ ಮಾತುಳ್ಳವನೂ ಆದ ಪತಿಮೋಹಿ ಎಂಬ ಸೊಗಸಾದ ಹೆಸರಿನ

ಚಂ॥ ಅರಸನ ಧರ್ಮಕೋಶಮೆರಡಂ ಪರಿವರ್ಧಿಪನೀಶಭಕ್ತರ್ಗೆ
ತರೆ ಪೊಡಮಟ್ಟು ಪೂಜಿಪನರಾತಿನರಾಧಿಪರೆಲ್ಲರಂ ನಿಜೇ
ಶ್ವರ ಚರಣಾಬ್ಜಕಾನತರನಾಗಿಪನುತ್ತಮಮಂತ್ರಶಕ್ತಿವಿ
ಸ್ಫುರಿತ ನಿಜಪ್ರತಾಪದಿನವಂ ಪತಿಮೋಹಿಯೆನಿಪ್ಪ ಮಂತ್ರಿಪಂ ೨೩

ಮ॥ಸ್ರ॥ ಪರರಾಜಶ್ರೀಕರಾಕರ್ಷಣಕರಣಕರಂ ಸೂರ್ಯಸೂತಂಬೊಲಂಭೋ
ಧರವಾಹಂಬೋಲ್ವಿಪಕ್ಷಕ್ಷಿತಿಭೃದುರುಬಲಧ್ವಂಸಿ ಪದ್ಮಂಬೊಲುದ್ಯ
ತ್ಪರಿಣದ್ಧ ಶ್ರೀಗುಣಾಂಕಂ ರಜನಿಕುವಲಯಂಬೋಲ್ವಲಂ ಸೋಮಪಾದಾ
ಬ್ಜರುಚಿಸ್ನಿಗ್ಧಂ ಸದಾಮೋದರಸರಸನುದಂಚತ್ ಸಮುದ್ರಂಬೊಲಾತಂ ೨೪

ಕಂ॥ ಆ ಮಂತ್ರಿಮೌಲಿಮಣಿಗೆ ಮ
ಹಾಮಹಿಮಮಹೀಶಮೌಲಿಮಣಿ ಚೋಳಧರಾ
ಭಾಮಾಧಿಪತಿ ಮನೋಜ್ಞ
ಶ್ರೀಮಹಿತಂ ಪೃಥುಳಭಾಗ್ಯಮಂ ಪದೆದಿತ್ತಂ ೨೫

ಮಂತ್ರೀಶ್ವರನು ಶೋಭಿಸುತ್ತಿದ್ದನು. ೨೩. ಆ ಮಂತ್ರೀಶ್ವರನಾದ ಪತಿಮೋಹಿಯು ಉತ್ತಮ ಮಂತ್ರಶಕ್ತಿಯಿಂದ ಕೂಡಿದ ಪ್ರಜ್ವಲಿಸುವ ತನ್ನ ಪ್ರತಾಪದಿಂದ ಅರಸನ ಧರ್ಮ ಮತ್ತು ಭಾಂಡಾರಗಳೆರಡನ್ನೂ ವೃದ್ಧಿಗೊಳಿಸುತ್ತಿದ್ದನು. ಶಿವಭಕ್ತರನ್ನು ನಮಸ್ಕರಿಸಿ ಪೂಜಿಸುತ್ತಿದ್ದನು. ವೈರಿಗಳಾದ ಅರಸರುಗಳನ್ನೆಲ್ಲ ತನ್ನ ಪ್ರಭುವಿನ ಚರಣಕ್ಕೆ ಬಾಗುವಂತೆ ಮಾಡುತ್ತಿದ್ದನು. ೨೪. ಆ ಮಂತ್ರಿಯು ಅರುಣನಂತೆ ಪರರಾಜರ ಸಂಪತ್ತನ್ನು ಸೆಳೆದುಕೊಳ್ಳುವ ಕೈಯುಳ್ಳವನು. (ಸೂರ್ಯಪಕ್ಷದಲ್ಲಿ) ಶ್ರೇಷ್ಠನಾದ ರಾಜ=ಚಂದ್ರನ, ಸಂಪದ್ಯುಕ್ತವಾದ ಕಿರಣಗಳನ್ನು ಆಕರ್ಷಿಸುವ, ಕರ=ಕಿರಣವುಳ್ಳವನು. ಮೇಘವಾಹನನಾದ ಇಂದ್ರನಂತೆ ಶತ್ರುರಾಜರ ಬಲವನ್ನು ಧ್ವಂಸಪಡಿಸತಕ್ಕವನು. (ಇಂದ್ರನ ಪಕ್ಷದಲ್ಲಿ) ಶತ್ರುಗಳಾದ ಪರ್ವತಗಳ ಬಲವನ್ನು ನಾಶಪಡಿಸತಕ್ಕವನು. ಕಮಲದಂತೆ ಉದಯೋನ್ಮುಖವಾದ ಉತ್ತಮ ಗುಣಗಳಿಂದ ಕೂಡಿದವನು. (ಕಮಲ ಪಕ್ಷದಲ್ಲಿ) ಗುಣ=ಕಮಲನಾಳದ ದಾರಗಳಿಂದ ಕೂಡಿದ್ದು, ರಾತ್ರಿಯ ನೈದಿಲೆಯಂತೆ, ಸೋಮ=ಶಿವನ ಪಾದಕಮಲದಲ್ಲಿ ಭಕ್ತಿಯುಳ್ಳವನು. (ನೈದಿಲೆಯ ಪಕ್ಷದಲ್ಲಿ) ಸೋಮ =ಚಂದ್ರನ, ಪಾದಾಬ್ಜ=ಶಂಖದಂತೆ ಬೆಳ್ಳಗಿರುವ ಕಿರಣಗಳಲ್ಲಿ ಸ್ನೇಹವುಳ್ಳದ್ದು. ಸಮುದ್ರದಂತೆ ಸಜ್ಜನರನ್ನು ಸಂತೋಷಪಡಿಸುವ ಅಭಿರುಚಿಯುಳ್ಳವನು. (ಸಮುದ್ರ ಪಕ್ಷದಲ್ಲಿ) ಸದಾಮೋದರ=ವಿಷ್ಣುವಿನಿಂದ ಸಹಿತನೂ, ಸರಸ=ಜಲಯುಕ್ತನು. (ರು) ೨೫. ಮಂತ್ರಿಗಳಿಗೆಲ್ಲ ರತ್ನಪ್ರಾಯನಾದ ಆ ಪತಿಮೋಹಿಗೆ ವಿಶೇಷ ಮಹಿಮಾಶಾಲಿಯೂ, ಅರಸರಲ್ಲೆಲ್ಲ ರತ್ನಪ್ರಾಯನೂ ಚೋಳರಾಜ್ಯದ ಧರೆಯೆಂಬ ರಾಣಿಯ ಪತಿಯೂ ಆದ ಸತ್ಯೇಂದ್ರಚೋಳಮಹಾರಾಜನು ಮನೋಹರತೆಯಿಂದ ಕೂಡಿದ ಸಂಪತ್ತಿನಿಂದ

ವ॥ ಅಂತಿತ್ತ ಸಂಪದಮನನವರತಮನುಭವಿಸುತ್ತಮಿರ್ದು

ಮ॥ ತನಯರ್ಕಳ್ ತನಗಿಲ್ಲಮೆಂದು ಪಿರಿದಾಯಾಸಕ್ಕೆ ಪಕ್ಕಾದ ಕಾ
ಮಿನಿಯಂ ಸಂತಮಿಡುತ್ತೆ ಚಿದ್ಘನ ಶಿವಾಚಾರ್ಯಾಂಘ್ರಿಯಂ ಪೊರ್ದಿ ಸೇ
ವನೆಗೆಯ್ಯುತ್ತವರಿತ್ತ ಮಂತ್ರಬಲದಿಂ ಸತ್ಪುತ್ರನಂ ಪೆತ್ತು ತ
ತ್ತನಯಾನಂದಿತನಿರ್ದನಾ ನೃಪಸಭಾವಾರಾಶಿಚಂದ್ರೋದಯಂ ೨೬

ವ॥ ಅಂತಾ ಪತಿವ್ರೋಹಿಮಂತ್ರಿಪಂ ನಿಜಸುತಂಗೆ ಮಿತವಚನಾಭಿಧಾನಮನಿಟ್ಟು ಕಟ್ಟ
ಳ್ಕಱಿಂ ಸಲಪುತ್ತಮಿರ್ಪಿನಮೊಂದು ದಿವಸಂ

ಮ॥ಸ್ರ॥ ಹರಿಪೀಠಾಸೀನನುದ್ಯತ್ಸಚಿವನಿಚಯ ಸಂಯುಕ್ತನುದ್ದೀಪ್ತ ದಿವ್ಯಾ
ಭರಣಾಂಚತ್ಕಾಯನುರ್ವೀಶ್ವರ ನಿಕರನಿಷೇವ್ಯಾಂಘ್ರಿಪದ್ಮಂ ಪಯೋಭೃ
ದ್ಭರನಮ್ರಾಂಗಾಂಗನಾಚಾಲಿತ ಚಮರರುಹದ್ವಂದ್ವಪಾರ್ಶ್ವಂ ಜಯಸ್ವ
ಸ್ವರ ಭಾಸ್ವದ್ವಂದಿವೃಂದಸ್ತುತನವನಿಪನೊಡ್ಡೋಲಗಂಗೊಟ್ಟನಾಗಳ್ ೨೭

ವ॥ ಅಂತೊಡ್ಡೋಲಗಂಗೊಟ್ಟಿರ್ದು ನಿಜಾಮಾತ್ಯನಪ್ಪ ಪತಿಪ್ರೋಹಿಯಂ ನಿರೀಕ್ಷಿಸಿ

ಕೂಡಿದ ವಿಶೇಷಭಾಗ್ಯವನ್ನು ಪ್ರೀತಿಯಿಂದ ಕೊಟ್ಟನು. ವ|| ಹಾಗೆ ಕೊಟ್ಟ ಸಂಪತ್ತನ್ನು ಸತತವೂ ಅನುಭವಿಸುತ್ತಿದ್ದು ೨೬. ಆ ಸತ್ಯೇಂದ್ರಚೋಳಮಹಾರಾಜನ ಸಭೆಯೆಂಬ ಸಮುದ್ರಕ್ಕೆ ಚಂದ್ರೋದಯಸ್ವರೂಪನಾಗಿದ್ದ ಪತಿವ್ರೋಹಿಯು ತನಗೆ ಮಕ್ಕಳು ಇಲ್ಲವೆಂದು ವಿಶೇಷವಾದ ವ್ಯಥೆಯಿಂದ ಕೂಡಿದ ತನ್ನ ಧರ್ಮಪತ್ನಿಯನ್ನು ಸಮಾಧಾನಗೊಳಿಸುವವನಾಗಿ ಚಿದ್ಘನಶಿವಾಚಾರ್ಯರೆಂಬ ಹೆಸರಿನ ಗುರುವರ್ಯರ ಪಾದಕಮಲಗಳನ್ನು ಸೇರಿ, ಅವರ ಸೇವೆಯನ್ನು ಮಾಡುತ್ತ, ಅವರು ಅನುಗ್ರಹಿಸಿ ಹೇಳಿಕೊಟ್ಟ ಮಂತ್ರದ ಬಲದಿಂದ ಶ್ರೇಷ್ಠನಾದ ಮಗನನ್ನು ಪಡೆದು ಆ ಮಗನಿಂದ ಆನಂದಗೊಂಡು ಇದ್ದನು. ವ॥ ಆ ರೀತಿ ಪತಿವ್ರೋಹಿಯೆಂಬ ಮಂತ್ರಿಶ್ರೇಷ್ಠನು ತನ್ನ ಮಗನಿಗೆ ಮಿತವಚನನೆಂಬ ಹೆಸರನ್ನಿಟ್ಟು, ಹೆಚ್ಚಾದ ಪ್ರೀತಿಯಿಂದ ಸಲಹುತ್ತ ಇರುತ್ತಿರಲು ಒಂದು ದಿವಸ, ೨೭. ಸಿಂಹಪೀಠದಲ್ಲಿ ಮಂಡಿಸಿದವನೂ, ಶ್ರೇಷ್ಠರಾದ ಸಚಿವಸಮೂಹದಿಂದ ಕೂಡಿದವನೂ, ಹೊಳೆ ಹೊಳೆಯುವ ಶ್ರೇಷ್ಠವಾದ ಆಭರಣಗಳನ್ನು ತೊಟ್ಟ ದೇಹವುಳ್ಳವನೂ, ಅನೇಕ ರಾಜರಿಂದ ಸೇವಿಸಲ್ಪಡುತ್ತಿರುವ ಪಾದಕಮಲಗಳನ್ನುಳ್ಳವನೂ, ಮೊಲೆಗಳ ಭಾರದಿಂದ ಬಗ್ಗಿ ಹೋದ ಅಂಗಾಂಗಗಳಿಂದ ಕೂಡಿದ ಸ್ತ್ರೀಯರು ಉಭಯ ಪಕ್ಕಗಳಲ್ಲೂ ಚಾಮರ ಬೀಸುವವರಾಗಿಯೂ, 'ಜಯಹೊಂದು, ಜಯಹೊಂದು' ಎಂದು ಜಯಕಾರ ಮಾಡುವ ಸ್ವರಭಾವದ ಶ್ರೇಷ್ಠ ವಂದಿಮಾಗಧರಿಂದ ಸ್ತುತಿಸಲ್ಪಡುವವನೂ ಆದ ಸತ್ಯೇಂದ್ರಚೋಳಮಹಾರಾಜನು ರಾಜಸಭೆಯನ್ನು ನಡೆಸಿದನು. ವ|| ಹೀಗೆ ಒಡ್ಡೋಲಗವನ್ನು ಕೊಟ್ಟಿರುವ ಸಮಯದಲ್ಲಿ ತನ್ನ ಅಮಾತ್ಯನಾದ ಪತಿವ್ರೋಹಿಯನ್ನು ನೋಡಿ ಅತ್ಯಂತ ಸಂತೋಷದಿಂದ ಪತಿವ್ರೋಹಿ

ಕಂ॥ ಲೀಲೆಯಿಗೆ ನುಡಿದನಾ ನರ
ಪಾಲಂ ಪತಿಮೋಹಿಯೊಡನೆ ಪದಪಿಂ ಪರಮೋ
ಕ್ಷಾಲಂಬಮೆನಿಪ ಕಾಶಿಗೆ
ಕಾಲಾರಿಗೆ ಪೋಗಿ ಜಹ್ನುಜಾಂಬುಗಳಿಂದಂ ೨೮

ಉ॥ ತುಂಬಿ ಸಹಸ್ರಕುಂಭದಭಿಷೇಕಮನಾಗಿಪೆನಾಗಮೋಕ್ತಮಾ
ರ್ಗಂಬಿಡದಂಬಿಕಾಪತಿಗೆ ಮನ್ಮನದಿಷ್ಟಮಿದಲ್ತೆ ತಳ್ವದೇ
ಳೆಂಬುದುಮಿಂಬುವೆತ್ತ ಪಣೆಗತ್ತುರಿಬೊಟ್ಟು ತದಂಘ್ರಿಪದ್ಮದೊ
ಳ್ತುಂಬಿಯಿದೆಂಬವೋಲಮರ್ದುಪತ್ತಿರೆ ತಾಂ ಪೊಡಮಟ್ಟು ಮಂತ್ರಿಪಂ ೨೯

ಕಂ॥ ನುಡಿದನೆಲೆ ಜೀಯ ನಿಮ್ಮೊ
ಳ್ಮೃಡನೆಂದು ನೆಲಸಿನಿಂದನದಱಿಂ ನೀಮಿ
ರ್ದೆಡೆ ಕಾಶಿಯಲ್ತೆ ಬೇಱೆ
ನ್ನೆಡೆಯಾಡಲದೇಕೆ ತರಿಪೆನಾ ನದಿಯುದಮಂ ೩೦

ಮ॥ ಜವದಿಂದಿಲ್ಲಿಗೆನುತ್ತೆ ಧರ್ಮವತಿಗೇಳ್ನೂರ್ಗಾವುದಂಬೆತ್ತ ಶಾಂ
ಭವಲೀಲಾಗೃಹಮಾದ ಕಾಶಿಯ ನದೀತೋಯಂಗಳಂ ಮಂಗಳೋ
ತ್ಸವದಿಂ ಭೂವರವೃಂದಮಂ ನಿಲಿಸಿ ಸಾಲ್ಗೊಂಬಂತುಟೋರೋರ್ವಱಿಂ
ದವನಂದೈದಿಸಿದಂ ಸುವರ್ಣಘಟದಿಂ ತಾನೆಂದೊಡೇಂ ಪೆರ್ಮೆಯೋ ೩೧

ಯೊಡನೆ ೨೮. ಆ ರಾಜನು ಹೀಗೆ ನುಡಿದನು: "ಮೋಕ್ಷಕ್ಕೆ ಮತ್ತು ಕಾಲಾರಿಯಾದ ಶಿವನಿಗೆ ಆಶ್ರಯಸ್ಥಾನವಾದ ಕಾಶಿಗೆ ಹೋಗಿ ಅಲ್ಲಿಯ ಗಂಗಾಜಲದಿಂದ ೨೯. ತುಂಬಿ ಆಗಮದಲ್ಲಿ ಹೇಳಿದ ಕ್ರಮವನ್ನು ಅನುಸರಿಸಿ ಆ (ವಿಶ್ವೇಶ್ವರನಿಗೆ) ಪರಮೇಶ್ವರನಿಗೆ ಸಹಸ್ರ ಕುಂಭಾಭಿಷೇಕವನ್ನು ಮಾಡಬೇಕೆಂಬುದು ನನ್ನ ಮನಸ್ಸಿನ ಅಭಿಲಾಷೆಯಾಗಿದೆಯಲ್ಲವೆ ! ತಡಮಾಡದೆ ಏಳು" ಎಂದೆನ್ನಲಾಗಿ, ವಿಶಾಲವಾದ ಹಣೆಯಲ್ಲಿಟ್ಟ ಕಸ್ತೂರಿಯ ತಿಲಕವು ಆ ಸತ್ಯೇಂದ್ರಚೋಳಮಹಾರಾಜನ ಪಾದವೆಂಬ ಕಮಲದಲ್ಲಿ ದುಂಬಿಯಂತೆ ಶೋಭಿಸಿತೋ ಎನ್ನುವಂತೆ ನಮಸ್ಕಾರಮಾಡಿ ೩೦. ನುಡಿದನು: "ಎಲೆ ಜೀಯಾ, ನಿಮ್ಮಲ್ಲಿ ಶಿವನು ಯಾವಾಗಲೂ ನೆಲಸಿಯೇ ಇದ್ದಾನೆ. ಆದ್ದರಿಂದ ನೀವಿರುವ ಸ್ಥಳವೇ ಕಾಶಿಯಲ್ಲವೆ ! ಬೇರೆ ಅತ್ತಿತ್ತ ತಿರುಗಾಡುವುದಾದರೂ ಏಕೆ ? ನಾನು ತೀವ್ರವಾಗಿ ಆ ನದಿಯ ನೀರನ್ನು ಇಲ್ಲಿಗೇ ತರಿಸುತ್ತೇನೆ" ೩೧. ಎಂದು ಧರ್ಮವತಿನಗರಕ್ಕೆ ಏಳುನೂರು ಗಾವುದ ದೂರದಲ್ಲಿರುವ ಪರಮೇಶ್ವರನ ಲೀಲಾಗೃಹವಾದ ಕಾಶಿಯ ಗಂಗಾನದಿಯ ನೀರನ್ನು ಅತ್ಯಂತ ಮಂಗಳಕಾರಕವಾದ ಸಂಭ್ರಮದಿಂದ ಸಾಲುಸಾಲಾಗಿ ಅರಸರುಗಳ ಸಮೂಹವನ್ನು ನಿಲ್ಲಿಸಿ, ಆ ಪತಿಮೋಹಿಯು ಬಂಗಾರದ ಕೊಡದಲ್ಲಿ ಒಬ್ಬರಿಂದೊಬ್ಬರಿಗೆ ಘಟಗಳು ಕಾಶಿಯಿಂದ ಬರುವಂತೆ ಮಾಡಿಸಿದನು. ಇದೇನು ಹೆಮ್ಮೆಯ ವಿಷಯವೋ!

ವ॥ ಘನ ಕನಕಕಟಿಘಟಸಹಸ್ರದಿಂ ಭಾಗೀರಥೀ ಭದ್ರಮಯೋಂಬುವನೈದಿಸಲೊಡನೆ ಸಂಭ್ರಮಂ ಮಿಗೆ

ಮ॥ ತಳೆದಾನಂದಮನಾ ನರೇಂದ್ರತಿಳಕಂ ಪೂಜಾಗೃಹಂಬೊಕ್ಕು ನಿ
ರ್ಮಳಕಾಯಂ ಭಸಿತಾಕ್ಷಮಾಲಿಕೆಗಳಂ ತಾಳ್ದಂಗದೊಳ್ ತನ್ನದೀ
ಜಳದಿಂ ಮಂತ್ರಯುತಂ ಶಿವಾಗಮವಿದಂ ತೂರ್ಯಸ್ವನಂ ಪೊಣ್ಮೆ ಮಂ
ಗಳಲಿಂಗಕ್ಕಭಿಷೇಕಮಂ ರಚಿಸಿದಂ ಮಾಹೇಶ್ವರಪ್ರಾವೃತಂ ೩೨

ವ॥ ಅನಂತರಂ

ಚಂ॥ ಘನಘನಸಾರ ಕುಂಕುಮವಿಲೇಪನದಿಂ ಧವಳಾಕ್ಷತಂಗಳಿಂ
ವನರುಹಕೈರವಪ್ರಸರದಿಂ ನವಸೌರಭ ದಿವ್ಯಧೂಪದಿಂ
ದಿನರುಚಿದೀಪದಿಂದಿನಿದನಪ್ಪಿದ ಸಾರಸುಧಾನ್ನದಿಂ ಹಿಮಾಂ
ಕನಿಯುತ ವೀಟಿಕಾವಿತತಿಯಿಂ ನೃಪನರ್ಚಿಸಿದಂ ಕಪರ್ದಿಯಂ ೩೩

ವ॥ ಅಂತುಮಾ ರಾಜಮೌಲಿಮಣಿಗೆ ರಾಜದ್ರಾಜಮೌಲಿ ಮಣಿಮಣಿದು ರಾಜವದುಪಚಾರಮನೋಜೆಮಿಗೆ ರಚಿಸಿ

ವ॥ ಶ್ರೇಷ್ಠವಾದ ಸಹಸ್ರಬಂಗಾರದ ಕೊಡಗಳಿಂದ ಗಂಗಾನದಿಯ ಮಂಗಳಕರವಾದ ನೀರನ್ನು ಅತ್ಯಂತ ಸಂಭ್ರಮದಿಂದ ತರಿಸಲಾಗಿ, ೩೨. ಆ ರಾಜಶ್ರೇಷ್ಠನೂ ನಿರ್ಮಲ ದೇಹಿಯೂ ಆದ ಸತ್ಯೇಂದ್ರಚೋಳನು ಆನಂದಗೊಂಡು ಪೂಜಾಗೃಹವನ್ನು ಪ್ರವೇಶಿಸಿ, ಪವಿತ್ರದೇಹದಲ್ಲಿ ಭಸ್ಮರುದ್ರಾಕ್ಷಗಳನ್ನು ಹೊಂದಿ, ಆಗಮಜ್ಞನಾದ ಅವನು ಮಂತ್ರ ಪೂರ್ವಕವಾಗಿ ಆ ಗಂಗಾನದೀಜಲದಿಂದ ಅಭಿಷೇಕವನ್ನು ಮಾಡಿದನು. ಮಂಗಳ ವಾದ್ಯಗಳು ಮೊಳಗುತ್ತಿರಲು ಮಾಹೇಶ್ವರ ಸಮೂಹದೊಡನೆ ಕೂಡಿ ಮಾಡಿದನು. ವ॥ ಅನಂತರ ೩೩. ಶ್ರೇಷ್ಠವಾದ ಪಚ್ಚಕರ್ಪೂರ (ಘನಸಾರ) ಕುಂಕುಮಗಳ ಲೇಪನ ದಿಂದಲೂ, ಶುಭ್ರವಾದ ಅಕ್ಷತೆಗಳಿಂದಲೂ, ಕಮಲಪುಷ್ಪಸಮೂಹದಿಂದಲೂ, ನೂತನ ವಾದ ಸುಗಂಧಭರಿತ ಧೂಪದಿಂದಲೂ, ಸೂರ್ಯಪ್ರಕಾಶಕ್ಕೆ ಸಮಾನವಾದ ದೀಪದಿಂದಲೂ, ರುಚಿಕರವಾದ ಸಾರಪತ್ತಾದ ಅಮೃತಕ್ಕೆ ಸಮಾನವಾದ ನೈವೇದ್ಯದ ಅನ್ನದಿಂದಲೂ, ಪಚ್ಚಕರ್ಪೂರ ಮಿಶ್ರವಾದ ತಾಂಬೂಲಸಮೂಹಗಳಿಂದಲೂ ಮಹೇಶ್ವರನನ್ನು ರಾಜನು ಪೂಜಿಸಿದನು. ವ॥ ಆ ರೀತಿ ಆ ಚಂದ್ರಮೌಳಿಯಾದ ಶಿವನಿಗೆ ಪ್ರಕಾಶಮಾನವಾದ ರಾಜರಿಗೆಲ್ಲ ಶಿರೋರತ್ನದಂತಿರುವ ಸತ್ಯೇಂದ್ರಚೋಳಮಹಾರಾಜನು ಅನೇಕಸಲ ನಮಸ್ಕ

ಮ॥ ತನು ರೋಮಾಂಚಮನೊಂದೆ ಮುಂದೆ ನಯನಾನಂದಾಶ್ರುಗಳ್ ಜಾಱೆ ತೋ
ಱೆ ನವಂ ಗದ್ಗದಮುಣ್ಮೆ ಪೊಣ್ಮೆ ನಡುಕಂ ಘರ್ಮಾಂಬು ಕೈಗಣ್ಮೆ ಜಾ
ಣ್ಮೆ ನಿತಾಂತಂ ದೃಢಯೋಗರಾಗರಸದಿಂ ಚಿತ್ತಾಬ್ಧಿ ನೀರೇಱೆ ಮಾ
ಱೆ ನರೇಂದ್ರಂ ಶಿವಲಿಂಗಸಂಗರತಿಯಂ ತಳ್ತಪ್ಪಿದಂತೊಪ್ಪಿದಂ ೩೪

ವ॥ ಮತ್ತಮಾಗಳ್

ಮ॥ ನುತಿಗೆಯ್ದಂ ನುತರಾಜರಾಜನಗಜಾತಾಕಾಂತನಂ ಕಾಂತನಂ
ಸಿತಶೂಲಾಹತನಾಗನಾಗಭರಣ ಭ್ರಾಜಿಷ್ಣುವಂ ಜಿಷ್ಣುವಂ
ದಿತನಂ ವಿಶ್ರುತದೇವದೇವನನುದಾರಶ್ರೀದನಂ ಶ್ರೀದನಂ
ದಿತನಂ ದರ್ಪಿತಭಾವ ಭಾವಜತಮಃಶ್ರೀಸೋಮನಂ ಸೋಮನಂ ೩೫

ವ॥ ಅದೆಂತೆನೆ

ಶಾ॥ ಶ್ರೀಮತ್ಪೂರ್ಣಸುಖಾಬ್ಧಿ ನಿತ್ಯನಿರುಪಾಧಿಜ್ಯೋತಿ ವಿಖ್ಯಾತಮಾ
ಯಾಮೋಹಾಮಯದೂರ ಸಾರನಿಗಮಾಂತಾಭೇದ್ಯ ಸದ್ರೂಪ ಚಿ
ದ್ವ್ಯೋಮಾಕಾರ ಯಮೀಂದ್ರಮಾನಸ ಸಮುಲ್ಲಾಸಾಸ್ಪದಾವಾಸ ನಿ
ಷ್ಕಾಮುಪ್ರೇಮ ಮಹೇಶ ರಕ್ಷಿಸೊಲವಿಂ ಶ್ರೀಶೈಲಜಾವಲ್ಲಭಾ ೩೬

ರಿಸಿ ರಾಜೋಪಚಾರವನ್ನು ಕ್ರಮವಾಗಿ ಮಾಡಿ, ೩೪. ದೇಹವು ಪುಳಕಗೊಳ್ಳುತ್ತಿತ್ತು, ಆನಂದಾಶ್ರುಗಳು ಮುಂದೆ ಸುರಿದು ಕಾಣುತ್ತಿದ್ದವು, ಹೊಸದಾದ ಗದ್ಗದ ಧ್ವನಿಯು ಕಂಠದಿಂದ ಹೊರಹೊರಡುತ್ತಿತ್ತು, ನಡುಗು ಹೊರಸೂಸುತ್ತಿತ್ತು, ಬೆವರು ಮೈಯಿಂದ ಸುರಿಯುತ್ತಿತ್ತು, ಅತಿಶಯವಾದ ಭಕ್ತಿಯು ಜಾಣ್ಮೆಯಿಂದ ದೃಢವಾದ ಶಿವಯೋಗ ಸಂಬಂಧವಾದ ಅನುರಾಗರಸದಿಂದ ಚಿತ್ತವೆಂಬ ಸಮುದ್ರವು ಉಕ್ಕಿ ಹೊರಸೂಸಿತು. (ಹೀಗೆ) ಆ ನರಶ್ರೇಷ್ಠನಾದ ಸತ್ಯೇಂದ್ರಚೋಳನು ಶಿವಲಿಂಗಸಂಗದ ಅನುರಾಗವೇ ತಾನೆಂದು ಅಪ್ಪಿಕೊಂಡ ಹಾಗೆ ಶೋಭಿಸಿದನು. ವ॥ ಮತ್ತು ಆಗ, ೩೫. ರಾಜಾಧಿರಾಜರಿಂದ ಸ್ತುತಿಸಲ್ಪಡುವ ಆ ಸತ್ಯೇಂದ್ರಚೋಳರಾಜನು ಕಾಂತಿಯಿಂದ ಕೂಡಿದ ಪಾರ್ವತೀಪತಿಯಾದ ಪರಮೇಶ್ವರನನ್ನು, ತೀಕ್ಷ್ಣವಾದ ತ್ರಿಶೂಲದಿಂದ ಗಜಾಸುರನನ್ನು ಸಂಹರಿಸಿದವನನ್ನು, ಆದಿಶೇಷನ ಆಭರಣದಿಂದ ಪ್ರಕಾಶಿಸುವವನನ್ನು, ವಿಷ್ಣುವಿನಿಂದ ನಮಸ್ಕಾರಮಾಡಿಸಿಕೊಂಡವನನ್ನು, ವಿಖ್ಯಾತನಾದ ದೇವತೆಗಳಿಗೆಲ್ಲ ದೇವನಾದವನನ್ನು, ಭಕ್ತರಿಗೆ ಉದಾರವಾಗಿ ಸಂಪತ್ತನ್ನು ಕೊಡುವವನನ್ನು, ಕುಬೇರನಲ್ಲಿ ಪ್ರೀತಿಯುಳ್ಳವನಾದವನನ್ನು, ಗರ್ವಿಷ್ಠನಾದ ಮನ್ಮಥನ ಕತ್ತಲೆಗೆ ಚಂದ್ರನಂತಿರುವವನನ್ನು, ಉಮಾಸಮೇತನಾದ ಶಿವನನ್ನು ಸ್ತುತಿಸಿದನು. ವ॥ ಅದು ಹೇಗೆಂದರೆ ೩೬. "ಮಂಗಳಕರವಾದ ಪರಿಪೂರ್ಣಸುಖವೆಂಬ ಸಮುದ್ರನೂ, ಶಾಶ್ವತನೂ, ಸ್ವಯಂಪ್ರಕಾಶನೂ, ಪ್ರಖ್ಯಾತವಾದ ಅಜ್ಞಾನದಿಂದಾಗುವ ಮೋಹವನ್ನು ಮತ್ತು ರೋಗಾದಿಗಳನ್ನು ದೂರೀಕರಿಸುವವನೂ, ವೇದಾಂತಾದಿಗಳಿಂದಲೂ ಕಾಣಲಾಗದ ಸಾರಭೂತನೂ, ಭೇದಿಸಲಶಕ್ಯನೂ ಶಾಶ್ವತನೂ, ಚಿದಾಕಾಶಾಕೃತಿಯುಳ್ಳವನೂ, ಯೋಗೀಶ್ವರರ

ಮ॥ ತಳೆದತ್ತಬ್ಜಭವಾಂಡನಾಮವಭವದ್ವಾಮಾಕ್ಷಿಸಂಜಾತ ಭೂ
ವಳಯಂ ಮೇಣದನೋವಿ ಮಿತ್ರವೆಸರಂ ತಾಳ್ದಿರ್ದುದಾ ದಕ್ಷಿಣೋ
ಜ್ವಳನೇತ್ರಂ ಪಣೆಗಣ್ಣದಂ ದಹಿಸುಗುಂ ಕಾಲಾಗ್ನಿರೂಪಂ ನಿರಾ
ಕುಳಮಿಂತಾಗಿರೆ ನಿರ್ವಿಕಾರನೆನಿಪೈ ಶ್ರೀಶೈಲಜಾವಲ್ಲಭಾ ೩೭

ಪದೆವಿಲ್ಗಳ್ತಳೆದಿರ್ಕುಮಿಾ ಧರಣಿಯಂ ಸೂತಂ ಕರಂ ಪುಟ್ಟಿಪಂ
ಪದಪಿಂದೀ ಭುವನಂಗಳಂ ಪೊರೆಗುಮಾ ಬಾಣಂ ರಥಾಂಗಂಗಳಂ
ತದನುದ್ಯದ್ರುಚಿಯಿಂ ವಲಂ ಬೆಳಗುಗುಂ ನಿನ್ನಶ್ವಮಾ ಕರ್ಮಬ್ರ
ಹ್ಮದ ಪಾಂಗಂ ಸಲೆ ಬೋಧಿಕುಂ ಬುಧರ್ಗೆ ಕೇಳ್ ಶ್ರೀಶೈಲಜಾವಲ್ಲಭಾ ೩೮

ಹರಿಮುಖ್ಯಾಮರರಂ ಪಡಲ್ವಡಿಸಿ ಲೋಕಾನೀಕಮಂ ಪರ್ಬಿ ಮ
ರ್ಬಿರದೇಳ್ತರ್ಪವೊಲೊತ್ತಿ ಸುತ್ತಿ ಪರಿತರ್ಪತ್ಯುಗ್ರಹಾಲಾಪಲೋ
ತ್ಕರಮಂ ತಾಳದೊಡೋವೊ ದೇವಸತಿಯರ್ ಸೀಮಂತ ಸಿಂಧೂರರಾ
ಗರಜಶ್ರೀಯನದೆಂತು ತಾಳ್ದಪರೊ ಪೇಳ್ ಶ್ರೀಶೈಲಜಾವಲ್ಲಭಾ ೩೯

ಮನಸ್ಸಿನಲ್ಲಿ ಆನಂದರೂಪವಾಗಿ ವಾಸವಾಗಿರುವವನೂ, ನಿಷ್ಕಾಮಿಗಳಾದವರಲ್ಲಿ ಪ್ರೇಮವುಳ್ಳವನೂ ಆದ ಶ್ರೀಪಾರ್ವತೀರಮಣನಾದ ಮಹೇಶ್ವರನೇ ಪ್ರೀತಿಯಿಂದ ರಕ್ಷಿಸು." ೩೭. "ಹೇ ಶ್ರೀಪಾರ್ವತೀಪತಿಯಾದ ಪರಮೇಶ್ವರನೇ, ನಿನ್ನ ಎಡಗಣ್ಣಿನಿಂದ (ಚಂದ್ರನೇತ್ರದಿಂದ) ಹುಟ್ಟಿದ ಈ ಭೂಮಂಡಲವು ಬ್ರಹ್ಮಾಂಡವೆಂಬ ಹೆಸರನ್ನು ಪಡೆದಿದೆ. ಮತ್ತು ಅದನ್ನು ಸಂರಕ್ಷಿಸಿ, ಪ್ರಕಾಶಮಾನವಾದ ಬಲಗಣ್ಣು (ಸೂರ್ಯನೇತ್ರವು) ಮಿತ್ರನೆಂಬ ಹೆಸರನ್ನು ಪಡೆದಿದೆ. ಹಣೆಯಲ್ಲಿರುವ ಅಗ್ನಿನೇತ್ರವು ಯಾವ ಆಕುಲವೂ ಇಲ್ಲದೆ ಕಾಲಾಗ್ನಿಯೆಂಬ ಹೆಸರಿನಿಂದ ಸುಡುವುದು. ಹೀಗಿದ್ದರೂ ನೀನು ನಿರ್ವಿಕಾರನಾಗಿಯೇ ಇರುತ್ತೀಯಲ್ಲವೆ!" ೩೮. "ಹೇ ಶ್ರೀಶೈಲಪುತ್ರಿಯ ಪತಿಯಾದ ಪರಮೇಶ್ವರನೇ, ನಿನ್ನ ಹೆದೆ ಮತ್ತು ಬಿಲ್ಲುಗಳಾದ ಆದಿಶೇಷ ಮತ್ತು ಮೇರುಪರ್ವತಗಳು ಈ ಭೂಮಿಯನ್ನು ಧರಿಸಿರುವುವು. ನಿನ್ನ ರಥದ ಸೂತನಾದ ಬ್ರಹ್ಮನು ಪ್ರೀತಿಯಿಂದ ಈ ಲೋಕಗಳನ್ನು ಸೃಷ್ಟಿಸುವನು. ನಿನ್ನ ಭಾಗವಾಗಿದ್ದ ವಿಷ್ಣುವು ರಕ್ಷಿಸುವನು. ನಿನ್ನ ರಥದ ಗಾಲಿಗಳಾದ ಸೂರ್ಯಚಂದ್ರರು ಆ ಬ್ರಹ್ಮಾಂಡವನ್ನು ತಮ್ಮ ಶ್ರೇಷ್ಠವಾದ ಪ್ರಕಾಶದಿಂದ ಬೆಳಗುವರು. ಆ ನಿನ್ನ ರಥದ ಕುದುರೆಗಳಾದ ವೇದಗಳು 'ಕರ್ಮವೆಂದರೇನು ? ಬ್ರಹ್ಮನೆಂದರೆ ಯಾರು ? ಎಂಬ ರೀತಿಯನ್ನು ಜ್ಞಾನಿಗಳಿಗೆ ಬೋಧಿಸುವುವು". ೩೯. "ಶ್ರೀಶೈಲಜಾವಲ್ಲಭನೇ, ವಿಷ್ಣುವೇ ಮುಖ್ಯರಾದ ದೇವತೆಗಳನ್ನು ದಿಕ್ಕುಗೆಡಿಸಿ, ಸಮಸ್ತ ಲೋಕಗಳಲ್ಲಿ ಹಬ್ಬಿ, ಘೋರ ಕತ್ತಲೆಯೇ ತಪ್ಪದೆ ಬರುತ್ತಿದ್ದ ಹಾಗೆ ದಟ್ಟವಾಗಿ ಕವಿದು ಹರಿದುಬರುತ್ತಿದ್ದ ಅತಿತೀಕ್ಷ್ಣವಾದ ಹಾಲಾಹಲವಿಷದ ತೀಕ್ಷ್ಣತೆಯನ್ನು ನೀನು ತಾಳದಿದ್ದರೆ ಓಹೋ! ದೇವತೆಗಳ ಹೆಂಡತಿಯರು ಸೀಮಂತದಲ್ಲಿ ಸಿಂಧೂರದ ಕೆಂಪು ಬೊಟ್ಟನ್ನು ಇಟ್ಟ

ಶಿವ ನಿನ್ನಂಘ್ರಿಯನಾವನೊರ್ಮೆ ನೆನೆವಂ ಸದ್ಭಕ್ತಿಯಿಂದಾತನಂ
ದಿವಿಜರ್ಕಳ್ ನೆನೆವರ್ ತ್ವದಂಘ್ರಿಗೆಱಪಂ ತಾನಾವನಾತಂಗೆ ಯೋ
ಗಿವರರ್ ತಾವೆಱಪರ್ಭವನ್ನುತಿಯನಾವಂ ಮಾಳ್ಪನಾ ಧನ್ಯನಂ
ಸವಿವಾತಿಂ ನುತಿಗೆಯ್ವುದಾಗಮಚಯಂ ಶ್ರೀಶೈಲಜಾವಲ್ಲಭಾ ೪೦

ನಿಗಮಂಗಳ್ಗೆ ಕಾಣಲಾರ್ತವೆ ಭವತ್ಪಾದಾಬ್ಜಮಂ ನಿನ್ನನೇಂ
ಪೊಗಳಲ್ ಶಕ್ತರೆ ವಿಷ್ಣುಮುಖ್ಯವಿಬುಧರ್ ಯೋಗೀಂದ್ರರುಂ ಭಾವದೃ
ಷ್ಟಿಗಳಿಂ ಲಕ್ಷಿಸಲೇಂ ಸಮರ್ಥರೆ ಭವದ್ಭಕ್ತರ್ಕಳೇ ಕಾಣಲುಂ
ಪೊಗಳಲ್ಲಕ್ಷಿಸಲುಂ ವಲಂ ನೆರೆದಪರ್ ಶ್ರೀಶೈಲಜಾವಲ್ಲಭಾ ೪೧

ಭವದೊಳ್ ಬರ್ಪಮರರ್ಕಳಂ ಭವವಿಮುಕ್ತ್ಯರ್ಥಂ ಶರಣ್ಪೊಕ್ಕೊಡೇ
ನವರೇನೀವರೆ ಮುಕ್ತಿಯಂ ಭವಹರಂ ನೀನಲ್ಲದಿಷ್ಟಾರ್ಥಮಂ
ತವೆ ಮಾಡಲ್ ಸುರಪಾದಪಂ ನೆಱೆಗುಮಿಾ ಬರ್ಬೂರವೃಕ್ಷಂಗಳೀ
ವವೆ ಕೇಳಂತಿರೆ ನೀನೆ ಮೋಕ್ಷವರದಂ ಶ್ರೀಶೈಲಜಾವಲ್ಲಭಾ ೪೨

ಕೊಳ್ಳಲು ಶಕ್ಯವಿತ್ತೆ ? ಹೇಳು !" ೪೦. "ಶ್ರೀಶೈಲಜಾವಲ್ಲಭನೇ, ಸುಖದಾಯಕನೇ, ನಿನ್ನ ಪಾದಗಳನ್ನು ಸದ್ಭಕ್ತಿಯಿಂದ ಯಾವನು ಒಮ್ಮೆ, ನೆನೆಯುತ್ತಾನೆಯೋ ಆತನನ್ನು ದೇವತೆಗಳೂ ಕೂಡ ಸ್ತೋತ್ರಮಾಡುತ್ತಾರೆ. ನಿನ್ನ ಅಂಘ್ರಿಗಳಿಗೆ ನಮಸ್ಕರಿಸುವವನು ಯಾವನೋ ಅವನಿಗೆ ಯೋಗಿಗಳು ನಮಸ್ಕರಿಸುತ್ತಾರೆ. ನಿನ್ನ ಸ್ತೋತ್ರವನ್ನು ಯಾರು ಮಾಡುತ್ತಾರೋ ಆ ಧನ್ಯನನ್ನು ಆಗಮ ಸಮೂಹವು ಸವಿಯಾದ ಮಾತುಗಳಿಂದ ಸ್ತೋತ್ರ ಮಾಡುವುದು." ೪೧. "ಶ್ರೀಶೈಲಜಾವಲ್ಲಭಾ, ನಿನ್ನ ಪಾದಕಮಲಗಳನ್ನು ವೇದಗಳು ಕೂಡ ಕಾಣಲು ಶಕ್ತವಾದುವೆ ? ವಿಷ್ಣುವೇ ಮುಖ್ಯರಾದ ದೇವತೆಗಳು ನಿನ್ನನ್ನು ಹೊಗಳಲು ಶಕ್ತರಾದರೆ ? ಯೋಗೀಶ್ವರರು ಭಾವದ ದೃಷ್ಟಿಗಳಿಂದ (ಅನುಭಾವ ದೃಷ್ಟಿ) ನೋಡಲು ಶಕ್ತರಾದರೆ ? ನಿನ್ನ ಭಕ್ತರಾದವರೇ ನಿನ್ನನ್ನು ನೋಡಲು, ಹೊಗಳಲು, ದೃಷ್ಟಿಸಲು ನಿಜವಾಗಿ ಸಮರ್ಥರಾಗುವರು." ೪೨. "ಸಂಸಾರದಲ್ಲಿ ಹುಟ್ಟಿಬರುವ ದೇವತೆಗಳನ್ನು ಈ ಭವಸಾಗರದಿಂದ ವಿಮುಕ್ತಿ ಪಡೆಯಲು ಶರಣು ಹೊಕ್ಕರೆ ಅವರೇನು ಕೊಟ್ಟಾರೆಯೆ ? ಈ ಹುಟ್ಟುಸಾವುಗಳೆಂಬ ಭವವನ್ನು ದೂರಮಾಡಿದ ನೀನಲ್ಲದೆ ಮುಕ್ತಿಯನ್ನೀಯುವವರು ಯಾರು ? ಇಷ್ಟಾರ್ಥವನ್ನು ಕೊಡಲು ಕಲ್ಪವೃಕ್ಷವು ಸಮರ್ಥವಾಗುವುದಲ್ಲದೆ ಈ ಜೊಬ್ಬುಳಿ(ಜಾಲಿ)ಯ ಮರಗಳು ಸಮರ್ಥವಾದಾವೆ? ಕೇಳು. ಅದರಂತೆ ಮೋಕ್ಷವೆಂಬ ವರ ಕೊಡುವವನು ನೀನೇ! ಶ್ರೀಶೈಲ

ಸುಲಭಂ ದೇವ ಭವತ್ಪದಾಬ್ಜಭಜನಾಸಕ್ತರ್ಗೆ ಧರ್ಮಾರ್ಥ ಕಾ
ಮ ಲಸನ್ಮುಕ್ತಿಗಳೆಂಬುದಂ ತಿಳಿದುಮೆನ್ನೀ ಮಾನಸಂ ನಿನ್ನ ನಿ
ಶ್ಚಲಭಕ್ತಿಸ್ಪೃಹೆಯಾನದಿರ್ಪ ತೆಜನೇಂ ಪೇಳ್ಮೋಹಮೋ ತನ್ನ ಮಂ
ಜುಲಪುತ್ರಾಂಗಮನಿಕ್ಕಿದೊಂದು ಮುಳಿಸೋ ಶ್ರೀಶೈಲಜಾವಲ್ಲಭಾ ೪೩

ಕರದೊಳ್ ತಾಳ್ದ ನಿಜೇಷ್ಟಲಿಂಗದೆ ಮನಂ ಪಂಚಾಕ್ಷರಂ ವಕ್ತ್ರದೊಳ್
ಕೊರಳೊಳ್ ತಳ್ತ ಶಿವಾಕ್ಷಿಮಾಲೆ ಭಸಿತಾಲೇಪಂ ಲಲಾಟಾಗ್ರದೊಳ್
ಗುರುಪಾದಾಂಬುಜಸೇವೆ ಕಾಯದೊಳೊಡಂಬಟ್ಟಿರ್ಪ ಭಕ್ತಂಗದಾರ್
ಸರಿ ನೀನಾತನಧೀನನಲ್ತೆ ಸತತಂ ಶ್ರೀಶೈಲಜಾವಲ್ಲಭಾ ೪೪

ವ॥ ಅಂತು ಪೊಗಳ್ದು ಪೊಡಮಟ್ಟು ಮಗುಳ್ದು ಲಿಂಗಪೂಜೆಯಂ ಸಾಂಗಮೆನೆ ರಚಿಸಿದ ನಂತರಂ

ಕಂ॥ ಧನ ಕನಕ ವಸನ ಮಣಿಭರ
ಣನಿವಹ ನವಗಂಧಮಾಲ್ಯವೀಟಿಕೆಗಳಿನಂ
ದನುನಯದಿಂದರ್ಚಿಸಿದಂ
ಜನನಾಮಯಹರಣ ಶರಣಚರಣಾಂಬುಜಮಂ ೪೫

ವಲ್ಲಭಾ." ೪೩. "ಹೇ ಶ್ರೀಶೈಲಜಾವಲ್ಲಭಾ, ದೇವನೆ, ನಿನ್ನ ಪಾದಕಮಲಗಳನ್ನು ಭಜಿಸುವ ಭಕ್ತರಿಗೆ ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳನ್ನು ಕೊಡಲು ನೀನು ಸುಲಭನು. ಇದನ್ನು ತಿಳಿದೂ ಕೂಡ ನನ್ನ ಈ ಮನಸ್ಸು ನಿನ್ನಲ್ಲಿ ನಿಶ್ಚಲವಾದ ಭಕ್ತಿಯನ್ನು ಹೊಂದದಿರಲೇನುಕಾರಣ ? ಹೇಳು ! ನನ್ನಲ್ಲಿರುವ ಸತಿಸುತ ಧನಕನಕಾದಿ ಮೋಹವೋ ! ಅಥವಾ ಮನೋಭವವಾದ ಮನ್ಮಥನನ್ನು ನೀನು ಕೊಂದೆಯೆಂಬ ಕಾರಣದಿಂದುಂಟಾದ ಈ ಮನದ ಕೋಪವೋ !" ೪೪. "ಕೈಯಲ್ಲಿಹಿಡಿದ ತನ್ನ ಇಷ್ಟಲಿಂಗದಲ್ಲಿ ಮನಸ್ಸು, ಮುಖದಲ್ಲಿ ಪಂಚಾಕ್ಷರಿಮಂತ್ರ, ಕೊರಳಲ್ಲಿ ಧರಿಸಿದ ರುದ್ರಾಕ್ಷಿಮಾಲೆ, ಹಣೆಯಲ್ಲಿ ಧರಿಸಿದ ಭಸ್ಮ, ದೇಹದಲ್ಲಿ ಗುರುವಿನ ಪಾದಕಮಲಗಳ ಸೇವೆ, ಇವು ಅಳವಟ್ಟಿರುವ ಭಕ್ತನಿಗೆ ಯಾರು ಸಮ ! ಶ್ರೀಶೈಲಜಾವಲ್ಲಭಾ, ನೀನು ಸತತವೂ ಅಂಥ ಭಕ್ತನ ಅಧೀನನಲ್ಲವೆ ! " ವ ॥ ಹೀಗೆ ಹೊಗಳಿ ನಮಸ್ಕರಿಸಿ, ಪುನಃ ಲಿಂಗಪೂಜೆಯನ್ನು ಯಥಾಸಾಂಗವಾಗಿ ಮಾಡಿದ ಮೇಲೆ ೪೫. ಧನ, ಕನಕ, ವಸ್ತ್ರ, ರತ್ನ, ಆಭರಣಗಳ ಸಮೂಹ ನೂತನವಾದ ಗಂಧ ಪುಷ್ಪ ತಾಂಬೂಲಗಳನ್ನು ಪರಮಾತ್ಮನಿಗೆ ಅಂದು ಅನುನುಯದಿಂದ ಅರ್ಪಿಸಿ, ಜನನ, ರೋಗಾದಿ ಪರಿಹಾರಕನಾದ ಅವನ ಶರಣಜನರ

ವ॥ ಅಂತರ್ಚಿಸಿ ಪೊಗಳ್ದು ಮಗುಳ್ದೆಱಗಿ ಕೈಂಕರ್ಯಮನಾಂತವರ ಕಾರುಣ್ಯಮಂ ಪಡೆದರಸನನನವರತಮಿಂತು ಪೊಳ್ತುಗಳೆವುತ್ತಮಿರ್ದನನ್ನೆವರಮಂತವುರದೊಳ್ ಅಮೃತಮತಿ ಮಹಾದೇವಿಯೊಂದು ಪುಣ್ಯವಾಸರದ ಸುಪ್ರಭಾತಸಮಯದೊಳ್ ಶಿವಲಿಂಗಪೂಜಾನಂತರಂ ಪುರಾಣಮಂ ಕೇಳ್ವಲ್ಲಿ ಮಾರ್ಕಂಡೇಯಚರಿತಂ ಬರೆವರೆ ತದ್ಬಾಲಲೀಲೆಯುಮನಾಕರ್ಣಿಸಿ ತನಗೆ ತನಯನಿಲ್ಲದವ್ಪುದಱಿಂ ನೆನೆದು ಬಿಸುಸುಯ್ದು ಕೆಲದೊಳಿರ್ಪ ಕೆಳದಿಯರೊಳಿಂತೆಂದಳ್

ಕಂ॥ ಎಳವರೆಯದೊಳೆಳೆಯರ್ಕಳ
ನೆಳಸುತೆ ನಳಿದೋಳ್ಗಳಿಂದೆ ಬಿಗಿದಪ್ಪಿ ಮನಂ
ಗೊಳೆ ತಳ್ತು ನೋಡಿ ಮುದ್ದಿಪ
ವಿಳಾಸವೊಂದಕ್ಕೆ ನೋಂತುದಿಲ್ಲಾಂ ಕೆಳದೀ ೪೬

ಶಿವಭಕ್ತಿಯಿಲ್ಲದನ ಬಾ
ಳ್ಕವಿತ್ವಮಿಲ್ಲದನ ಜಾಣ್ಮೆ ಕಳೆಯಿಲ್ಲದ ಪೆ
ಣ್ವಿವಮಿಲ್ಲದಶ್ವಮುಂ ತನು
ಭವನಿಲ್ಲದ ಭಾಗ್ಯಮೆಂತುಮೇಂ ಮೆಱೆದಪುದೇ ೪೭

ಅರಳೆಲೆ ಮಾಗಾಯ್ಕುಣಿವು
ತ್ತಿರೆ ನುಣ್ಣೊಸಲೊಳ್ಕದಂಪಿನೊಳ್ಮೃದುಹಾಸ
ಸ್ಫುರಿತಂ ಮೊಳವಲ್ಮಿನುಗು
ತ್ತಿರೆ ಪರಿದಾಡುವ ಕುಮಾರನೆಂದಾದಪನೋ ೪೮

ಪಾದಕಮಲಗಳನ್ನು ಪೂಜಿಸಿದರು. ವ|| ಆ ರೀತಿ ಪೂಜಿಸಿ ಹೊಗಳಿ ಪುನಃ ನಮಸ್ಕರಿಸಿ, ಕಿಂಕರಭಾವದಿಂದ ಅವರ ಕಾರುಣ್ಯವನ್ನು ಪಡೆದ ಅರಸನು ಈ ರೀತಿ ಕಾಲವನ್ನು ಕಳೆಯುತ್ತ ಇದ್ದನು. ಅಷ್ಟರಲ್ಲಿ ರಾಣೀವಾಸದಲ್ಲಿ ಅಮೃತಮತಿ ಮಹಾದೇವಿಯು ಒಂದು ಪುಣ್ಯಪ್ರದವಾದ ದಿವಸ ಬೆಳಗಿನ ಸಮಯಲ್ಲಿ ಶಿವಪೂಜೆಯನಂತರ ಪುರಾಣವನ್ನು ಕೇಳುತ್ತಿರುವಲ್ಲಿ ಮಾರ್ಕಂಡೇಯನ ಚರಿತ್ರೆಯು ಬರಲಾಗಿ ಅವನ ಬಾಲಲೀಲೆಯನ್ನು ಕೇಳಿ ತನಗೆ ಮಗನಿಲ್ಲದುದನ್ನು ನೆನೆದು ನಿಟ್ಟುಸಿರುಬಿಟ್ಟು, ಪಕ್ಕದಲ್ಲಿದ್ದ ಗೆಳತಿಯೊಡನೆ ಹೀಗೆ ಹೇಳಿದಳು : ೪೬. "ಚಿಕ್ಕ ಪ್ರಾಯದಲ್ಲಿ ಚಿಕ್ಕ ಮಕ್ಕಳನ್ನು ಇಚ್ಛಿಸಿ ನೀಳವಾದ ತೋಳುಗಳಿಂದ ಬಿಗಿದು ಅಪ್ಪಿ, ಮನಾನಂದವಾಗುವಂತೆ ಚೆನ್ನಾಗಿ ನೋಡಿ, ಮುದ್ದಿಡುವ ಸಂಭ್ರಮದ ಪುಣ್ಯಕ್ಕೆ, ಕೆಳದಿ, ವ್ರತಾದಿಗಳನ್ನು ನಾನು ಮಾಡಲಿಲ್ಲ. ೪೭. ಶಿವಭಕ್ತಿಯಿಲ್ಲದವನ ಬಾಳುವೆ, ಕವಿತಾಶಕ್ತಿಯಿಲ್ಲದವನ ಜಾಣತನ, ಸೌಂದರ್ಯವಿಲ್ಲದ ಹೆಣ್ಣುಮಗಳು, ವೇಗವಾದ ಓಟವಿಲ್ಲದ ಕುದುರೆ, ಮಗನಿಲ್ಲದ ಭಾಗ್ಯ ಇವು ಶೋಭಿಸುವುದಕ್ಕೆ ಶಕ್ಯವೆ? ೪೮. ನುಣ್ಣನೆಯ ಹಣೆ ಬಲಭಾಗದಲ್ಲಿ ಅರಳೆಲೆಯೆಂಬ ನೇತಾಡುವ ಆಭರಣವೂ, ಮಾಂಗಾಯೆಂಬ ಆಭರಣವು ಕೆನ್ನೆಯ ಮೇಲೆಯೂ ಕುಣಿದಾಡುತ್ತಿರಲು, ಮಂದಹಾಸವು ಮುಖದಲ್ಲಿ ಪದೇ ಪದೇ ಪ್ರಕಾಶಿಸುತ್ತಿರಲು, ಆಗತಾನೆ ಹುಟ್ಟುವ ಹಲ್ಲುಗಳು ಥಳಥಳಿಸುತ್ತಿರಲು, ಓಡಾಡುವ ಕುಮಾರನು (ತನಗೆ) ಎಂದು ಆಗುವನೋ!

ಕರತಳದಿಂದೆನ್ನಯ ನು
ಣ್ಬೆರಲಂ ಪಿಡಿದೇಳ್ದು ಜನನಿ ನಡೆದಪೆನೆನುತೊಂ
ದೆರಡಡಿಯನಿಟ್ಟು ನಿಱಿಯಂ
ಭರದಿಂ ತಳ್ಕೈಪ ಮಗನನೆಂದೀಕ್ಷಿಪೆನೋ ೪೯

ಅರಸನ ಪಿಂದೆಸೆಯೊಳ್ಮೈ
ಗರೆದೆಲ್ಲಿರ್ದಪೆನೊ ಜನನಿ ಪೇಳೆನುತೊಲವಿಂ
ಪರಿತಂದೆಳನಗೆ ಮಿಸುಗು
ತ್ತಿರೆ ಕುವರಂ ಕೊರಲನೆಂದು ಬಿಗಿಯಪ್ಪುವನೋ ೫೦

ಮ॥ ಮಗನಂ ತಳ್ತಮರ್ದಪ್ಪಿ ನೋಡಿ ಮೊಗಮಂ ಮುಂಡಾಡಿ ನೇಹಂ ಮನಂ
ಬುಗೆ ಮಾತಾಡಿಸಿ ಲಲ್ಲೆಗೆಯ್ದು ನಗಿಸುತ್ತಿರ್ಕೈಗಳಂ ಸಾರ್ಚಿ ಮಂ
ಡೆಗೆ ಬಟ್ಟಾಡಿ ಕಿಲಕ್ಕಿ ಚಿಮ್ಮಿ ಮೊಲೆವಾಲಂ ಮತ್ತೆ ಬಾಯ್ಗೂಡಿ ಮೆ
ಲ್ಲಗೆ ತೊಟ್ಟಲ್ಗಿರದಿಟ್ಟು ತೂಗುವೆಳವೆಣ್ಣೇಂ ನೋಂಪಿಯಂ ನೋಂತಳೋ ೫೧

ಕಂ॥ ಪಡಿನೆಳಲಂ ಮಣಿಕುಟ್ಟಿಮ
ದೆಡೆಯೊಳ್ ನಡೆನೋಡಿ ನೋಡಿ ದಾಯೆನುತಂ ಕೈ
ದುಡುಕಲದು ತುಡುಕೆ ನಗೆನಗೆ
ಕಡುಬಿನದಂಬಡೆವ ಕಂದನೆಂದಾದಪನೋ ೫೨

೪೯. ಅಂಗೈಯಿಂದ ನನ್ನ ನುಣುಪಾದ ಬೆರಳನ್ನು ಹಿಡಿದು ಎದ್ದು 'ಅಮ್ಮಾ, ನಡೆಯುತ್ತೇನೆ' ಎನ್ನುತ್ತ ಒಂದೆರಡು ತಪ್ಪುಹೆಜ್ಜೆ ಹಾಕುತ್ತ ಗಟ್ಟಿಯಾಗಿ ನನ್ನ ಸೀರೆಯ ನಿರಿಗೆಗಳನ್ನು ತ್ವರೆಯಿಂದ ಹಿಡಿದು ಅಪ್ಪುವಂತಹ ಮಗನನ್ನು ಎಂದು ನೋಡುವೆನೋ. ೫೦. ಅರಸನಾದ ತಂದೆಯ ಬೆನ್ನ ಹಿಂದೆ ಅಡಗಿಕೊಂಡು 'ಅಮ್ಮಾ ಎಲ್ಲಿದ್ದೇನೆ, ಹೇಳು' ಎನ್ನುತ್ತ ಪ್ರೀತಿಯಿಂದ ಮುಖದಲ್ಲಿ ಮಂದಹಾಸವು ಪ್ರಕಾಶಿಸುತ್ತಿರಲು, ಓಡಿ ಬಂದು ನನ್ನ ಕುತ್ತಿಗೆಯನ್ನು ಎಂದು ಅಪ್ಪಿಕೊಳ್ಳುವನೋ. ೫೧. ಮಗನನ್ನು ಪಡೆದು ಪ್ರೀತಿಯಿಂದ ಬಿಗಿಯಾಗಿ ಅಪ್ಪಿ, ಮುಖವನ್ನು ನೋಡಿ, ತಲೆಯ ಮೇಲೆ ಕೈಯಾಡಿ, ಸ್ನೇಹವು ಮನಸ್ಸಿನಲ್ಲಿ ನಾಟಿ, ಮಾತನಾಡಿಸಿ, ಮುದ್ದುಮಾಡಿ, ಎರಡೂ ಕೈಗಳನ್ನು ಚಾಚಿ ತಲೆಗೆ ಬಟ್ಟಾಡಿಸಿ ನಗಿಸುತ್ತ, ಮೊಲೆಯ ಹಾಲನ್ನು ಪಕ್ಕಕ್ಕೆ ಸಿಡಿದು ಮತ್ತೆ ಬಾಯಿಗೆ ಕೊಡಿಸಿ ಮೆಲ್ಲಗೆ ತೊಟ್ಟಲಲ್ಲಿ ಮಲಗಿಸಿ ತೂಗತಕ್ಕ ಬಾಲಿಕೆಯು ಏನು ವ್ರತವನ್ನು ಮಾಡಿದಳೋ! ೫೨. ರತ್ನಮಯವಾದ ನೆಲಗಟ್ಟಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡುತ್ತ ನೋಡುತ್ತ, ದಾ! ಎನ್ನುತ ಕೈಚಾಚಲು ಅದೂ ಕೈಚಾಚುತ್ತಿರಲು, ನಗಲು ಆ ಬಿಂಬವೂ ನಗುತ್ತಿರುವ ವಿಶೇಷ ವಿನೋದವನ್ನು ಹೊಂದುವ ಮಗನು ಎಂದು ಆಗುವನೋ ?"

ಉ॥ ಇಂತು ಪಲುಂಬಿ ಪಂಬಲಿಸಿ ಭೂಷಣಮಂ ತೆಗೆದಿಟ್ಟು ಚಿತ್ತದೊ
ಳ್ಚಿಂತೆಯನಾಂತು ಕಾಂತೆ ಬಿಸುಸುಯ್ಯೆಲರಿಂ ತನುವಲ್ಲಿ ಕಂದಿತೆಂ
ಬಂತಿರೆ ತಮ್ಮೊಳಾಳಿಯರಿದೇನೆನುತಳ್ಕರೆ ತಳ್ವದೈದಿದೇ
ಕಾಂತನಿಕೇತನಕ್ಕೆ ಧರಣೀಪತಿ ಬಂದೊಳಪೊಕ್ಕು ನೋಡಿದಂ ೫೩

ಮ॥ಸ್ರ॥ ಎಡಗೈಯಿಂದೊತ್ತಿ ಶಯ್ಯಾತಳಮನಿನಿಸು ಜಾಱಿರ್ದುದಂ ಮೇಲುದಂ ಪೊಂ
ಗಡಗಂ ಗಲ್ಲೆಂದು ಶಬ್ದಂಗುಡೆ ಬಲದ ಕರಾಂಭೋಜದಿಂದೇಱಿನೊಂಕು
ತ್ತೊಡನುತ್ತುಂಗಸ್ತನಾಗ್ರಕ್ಕಿಳಿವ ಮುಡಿಯನಾಂತೌಂಕುತಂ ಕೇಶದಿಂ ಮುಂ
ಗಡೆಯೊಳ್ಕಂಡೇಳ್ವಳಂ ಕೈವಿಡಿದವಳೊಡನರ್ಧಾಸನಂಗೊಂಡನಾಗಳ್ ೫೪

ವ॥ ಅಂತು ಕುಳ್ಳಿರ್ದು ಕೂರ್ಮೆಯಿಂ ನಿರೀಕ್ಷಿಸಿ

ಚಂ॥ ಮೃಗಮದಗಂಧಿ ನಿನ್ನ ಮೊಗಮೆಂಬ ಸುಧಾಕರಬಿಂಬಮಿಂದು ಬೆ
ಳ್ಪಗೆ ತಿಳಿಜೊನ್ನಮಂ ತೋಱಿದುದಿಂದುಟಿ ಚೆಂದಳಿರ್ಪುಗುಂದಿದ
ತ್ತಗಲದ ರಾಗಸಾಗರದ ಪೆರ್ಚುಗೆ ತಗ್ಗಿದುದಕ್ಷಿಕೈರವಂ
ಮಿಗೆ ಕೊರಗಿತ್ತು ಚಿತ್ತ ಪರಿತಾಪಮಹಾತಪದಿಂ ಮನೋರಮೇ ೫೫

ವ॥ ಅಂತುಮಲ್ಲದೆಯುಂ

೫೩. ಈ ರೀತಿಯಾಗಿ ಹಲುಬಿ ಹಂಬಲಿಸಿ, ತೊಡವುಗಳನ್ನು ತೆಗೆದಿಟ್ಟು, ಮನಸ್ಸಿನಲ್ಲಿ ಚಿಂತೆಗೊಂಡು ಆ ಅಮೃತಮತಿಯು ಬಿಸಿಯುಸಿರಿನಿಂದ ದೇಹವೆಂಬ ಬಳ್ಳಿಯು ಬಾಡಿ ಹೋಯಿತೋ ಎನ್ನುವಂತೆ ಇರಲು, ದಾದಿಯರು ತಮ್ಮ ತಮ್ಮಲ್ಲಿ ಇದೇನೆಂದು ಹೆದರಿಕೊಂಡಿರಲು, ತಡಮಾಡದೆ ಅರಸನು ಬಂದು ಏಕಾಂತಗೃಹವನ್ನು ಹೊಕ್ಕು (ಅವಳನ್ನು) ನೋಡಿದನು. ೫೪. ಎಡಗೈಯಿಂದ ಹಾಸಿಗೆಯನ್ನು ಒತ್ತಿ, ಸ್ವಲ್ಪ ಜಾರಿದ ಸೆರಗನ್ನು ಬಲದ ಕೈಯಿಂದ ಮೇಲಕ್ಕೆ ಏರಿಸಿಕೊಳ್ಳುತ್ತಿರಲು, ಬಂಗಾರದ ಕಡಗವು ಗಲ್ಲೆಂದು ಶಬ್ದ ಮಾಡಲಾಗಿ, ಕೂಡಲೆ ಎತ್ತರವಾದ ಮೊಲೆಯ ಮೇಲ್ಭಾಗಕ್ಕೆ ಇಳಿಯುತ್ತಿರುವ ಮುಡಿಯನ್ನು ಕುತ್ತಿಗೆಯಿಂದಲೆ ಹತ್ತಿಕ್ಕಿ ಹಿಡಿದು, ಮುಂದೆ ಬಂದ ತನ್ನನ್ನು ಕಂಡು ಏಳುತ್ತಿರುವ ಹೆಂಡತಿಯನ್ನು ಕೈಹಿಡಿದು ಅವಳೊಡನೆ ಆಗ ಹಾಸಿಗೆಯ ಮೇಲೆ ಕುಳಿತನು. ವ॥ ಆ ರೀತಿ ಕುಳಿತುಕೊಂಡು ಪ್ರೀತಿಯಿಂದ ನೋಡಿ, ೫೫. "ಕಸ್ತೂರಿಯ ಗಂಧದಂತೆ ದೇಹಗಂಧವುಳ್ಳವಳೇ, ಮನಸ್ಸಿನ ಸಂಕಟವೆಂಬ ಬಿರುಬಿಸಿಲಿನಿಂದ ನಿನ್ನ ಮುಖವೆಂಬ ಅಮೃತಕರನಾದ ಚಂದ್ರಮಂಡಲವು ಇಂದು ಬಿಳಿಸಗೆಯು ತಿಳಿ ಬೆಳದಿಂಗಳನ್ನು ತೋರೆದಿರುವುದು ; ಇನಿದಾದ ಚಿಗುರಿನಂತಹ ತುಟಿಯು ಒಣಗಿಹೋಗಿದೆ ; ಎಡೆಬಿಡದೆ ಇದ್ದ ಅನುರಾಗವೆಂಬ ಸಾಗರದ ಉಬ್ಬುವಿಕೆಯು ತಗ್ಗಿಹೋಗಿದೆ ; ತಾವರೆಯಂತಹ ಕಣ್ಣುಗಳು ಹೆಚ್ಚಾಗಿ ಕೊರಗಿವೆ ; (ಏಕೆ) ಮನೋರಮೆಯೇ ? ವ॥ ಅದೂ ಅಲ್ಲದೆ

ಚಂ॥ ಕರಕಮಳಂ ಕಪೋಳಶಶಿಬಿಂಬಮನಪ್ಪಿದುದೇಕೆ ನಿನ್ನ ಭಾ
ಸುರನಯನೋತ್ಪಳೋದ್ಗಳಿತ ಕಜ್ಜಳವಜ್ಜಳಬಿಂದುವೃಂದ ಷ
ಟ್ಚರಣಗಣಂ ಕುಚಾಬ್ಜಮುಕುಳಕ್ಕೆಱಗಿರ್ದಪುದೇಕೆ ಸುಯ್ಯೆಲ
ರ್ಕೊರಗಿಪುದೇಕೆ ಪೇಳಧರಪಲ್ಲವಮಂ ತರಳಾಯತೇಕ್ಷಣೇ ೫೬

ಕಂ॥ ಅರುಣಾಂಬುಜನಾಳಮನಾ
ವರಿಸಿದ ನವಫೇನಪಿಂಡಮಾಲೆಯ ಚೆಲ್ವಂ
ಪರಿಭವಿಸಿ ಮೆಱೆದುದೇಕಿ
ಲ್ಲರಸಿ ಪದಾಗ್ರದೊಳೆ ಮೌಕ್ತಿಕದ ಪದಕಟಕಂ ೫೭

ಗುರುಜಘನಬಿಂಬ ಶಂಬರ
ಹರಕರಿವರಕುಂಭಮಿಂಬುವಡೆದುದಿದಿಲ್ಲೇ
ಕರವಿಂದಾನನೆ ಮಣಿಗಣ
ಸುರುಚಿರತರ ಮೇಖಲಾಶಿರೋಮಾಲಿಕೆಯಿಂ ೫೮

ಅಲರ್ಗಣೆಯನರ್ಚಿಸಿದ ವಿಚ
ಕಿಲಮಾಲೆಯನಾಂತ ಪೂರ್ಣಕುಂಭದ ಚೆಲ್ವಂ
ಗೆಲೆವಂದುದಿಲ್ಲ ಕುಚಮಂ
ಡಲಮಿದು ತರಳಾಕ್ಷಿ ಮುತ್ತಿನೇಕಾವಳಿಯಿಂ ೫೯

೫೬. ಕೈಗಳೆಂಬ ಕಮಲಗಳು ಕಪೋಳಗಳೆಂಬ ಚಂದ್ರಮಂಡಲವನ್ನು ಅಪ್ಪಿದುದು ಏಕೆ ? ನಿನ್ನ ಪ್ರಕಾಶಮಾನವಾದ ಕಣ್ಣುಗಳೆಂಬ ಕನ್ನೈದಿಲೆಯಿಂದ ಕಾಡಿಗೆಯಿಂದೊಡಗೂಡಿದ ನೀರಿನ ಹನಿಗಳ ಸಮೂಹವೆಂಬ ದುಂಬಿಗಳ ಸಮೂಹವು ಮೊಲೆಯ ತುದಿಯ ಮೊಗ್ಗುಗಳಿಗೆ ಮುತ್ತಿರುವುದೇಕೆ? ಬಿಸಿಯಾದ ನಿಟ್ಟುಸಿರು ತುಟಿಗಳೆಂಬ ಚಿಗುರುಗಳನ್ನು ಏಕೆ ಬತ್ತಿಸಿವೆ ? ಚಂಚಲವೂ ವಿಶಾಲವೂ ಆದ ನೇತ್ರವುಳ್ಳವಳೇ, ಹೇಳು ! ೫೭. ಅರಸಿಯೇ, ಕೆಂಪು ಕಮಲಗಳ ನಾಳವನ್ನು ಆವರಿಸದಂತಹ ನೂತನ ನೊರೆಯ ಉಂಡೆಯ ಮಾಲೆಯ ಚೆಲುವಿಕೆಯನ್ನೂ ತಿರಸ್ಕರಿಸುವಂಥ ಮುತ್ತಿನ ಕಾಲುಬಳೆಯು ನಿನ್ನ ಕಾಲಿನ ಅಗ್ರದಲ್ಲಿ ಏಕೆ ಶೋಭಿಸುತ್ತಿಲ್ಲ ? ೫೮. ಅರವಿಂದದಂಥ ಮುಖವುಳ್ಳ ರಾಣಿಯೇ, ದೊಡ್ಡವೂ ಮನ್ಮಥನ ಮದ್ದಾನೆಗಳ ಕುಂಭಸ್ಥಳ ಸಮಾನವೂ ಆದ ಜಘನದ ಬಳಿಯಲ್ಲಿ ರತ್ನಮಾಲೆಯಂತೆ ಪ್ರಕಾಶಿಸುವ ಶ್ರೇಷ್ಠ ನಡುಪಟ್ಟಿಯೆಂಬ ಶಿರೋಮಾಲಿಕೆಯು ಅಲ್ಲಿ (ಆ ಕುಂಭಸ್ಥಳದಲ್ಲಿ) ಏಕೆ ಶೋಭಿಸುತ್ತಿಲ್ಲ ? ೫೯. ಚಂಚಲನೇತ್ರೆಯೇ, ಮನ್ಮಥನು ಮಲ್ಲಿಗೆಯ ಮಾಲೆಯನ್ನು ಧರಿಸಿ ಪೂಜಿಸಿದ ಪೂರ್ಣಕುಂಭಗಳ ಚೆಲುವನ್ನು ಈ ನಿನ್ನ ಕುಚಸ್ಥಳಗಳ ಪ್ರದೇಶವು ಮುತ್ತಿನ ಏಕಾವಳಿಸರದಿಂದ ಏಕೆ ಗೆಲುವನ್ನು ಪಡೆದಿಲ್ಲ ?

ಮದನಮಣಿದರ್ಪಣದ ಪದ
ಪೊದವಿದ ಕದಪಿದು ಪೊದಳ್ದ ಮಕರಿಕೆಯಂ ತಾ
ಳದೆ ಕಱೆವೆರಸದೆ ಶಶಿಬಿಂ
ಬದ ಪೋಲ್ವೆಯನಾಳ್ದುದೇಕೆ ಕಮಲದಳಾಕ್ಷೀ ೬೦

ವದನಾಂಬುಜಲಕ್ಷ್ಮಿಯನ
ಪ್ಪಿದ ವೇಣ್ಯಸಿತಾಹಿಭೀತ ಬಾಲೇಂದುವಿದೆಂ
ಬುದನೆನಿಸದೇಕೆ ನೊಸಲೊ
ಳ್ಸದಮಳತರ ಭಸಿತಲಸಿತತಿಲಕಂ ರಮಣೀ ೬೧

ಮೊಗಸಸಿ ನಯನಾಂಭೋರುಹ
ಯುಗಳಮನಮರ್ದಪ್ಪಿ ನಿಂದುದೆಂಬೀ ಪುರುಡಿಂ
ಜಗುಳ್ದಂತೆ ತೋರ್ಪುದಿಲ್ಲೆಲೆ
ಮೃಗಾಕ್ಷಿ ಪೇಳೇಕೆ ಕರ್ಣಪೂರದ ನೈದಿಲ್ ೬೨

ಕಾರಿರುಳೊಳಮರ್ದ ತಾರಗೆ
ಗೋರಗೆಯೆನಿಸಿರ್ದುದಿಲ್ಲರಲ್ ಮುಡಿಯೊಳಿದೇಂ
ಕಾರಣಮಱಿಪೆನ್ನೊಳ್ಮದ
ವಾರಣಮೃದುಯಾನೆ ನಿನ್ನ ಮನದುಮ್ಮಳಮಂ ೬೩

೬೦. ಎಲೈ ಕಮಲದಳದಂತಹ ನೇತ್ರವುಳ್ಳ ರಾಣಿಯೇ, ಮನ್ಮಥನ ಮಣಿಯಿಂದ ಮಾಡಿದ ಕನ್ನಡಿಯಂತಹ ಸೌಂದರ್ಯವನ್ನು ಹೊಂದಿದ ಈ ನಿನ್ನ ಕೆನ್ನೆಯು ವ್ಯಾಪಿಸಿರುವ (ಕಸ್ತೂರಿ, ಕೇಸರಿ ಮುಂತಾದ ಸುಗಂಧದ್ರವ್ಯಗಳಿಂದ ಮಾಡಿದ) ಮಕರಿಕಾಪತ್ರನನ್ನು ಧರಿಸದೆ ಕಳಂಕರಹಿತವಾದ ಚಂದ್ರಮಂಡಲದ ಹೋಲಿಕೆಯನ್ನು ಹೊಂದಿರುವುದೇಕೆ ? ೬೧. ಹೇ ಮನೋಹರಳಾದ ರಾಣಿಯೇ, ಮುಖವೆಂಬ ಲಕ್ಷ್ಮಿಯನ್ನು ಅಪ್ಪಿಕೊಂಡಿರುವ ಹೆರಳೆಂಬ ಕೃಷ್ಣಸರ್ಪಕ್ಕೆ ಹೆದರಿದ ಬಾಲಚಂದ್ರನಿದೆಂಬುದನ್ನು ಎಣಿಸದೆ ಹಣೆಯಲ್ಲಿ ಶ್ರೇಷ್ಠತರವಾದ ಭಸ್ಮದಿಂದ ರಮಣೀಯವಾಗಿ ಇಡಲ್ಪಟ್ಟ ತಿಲಕವು ಏಕೆ ಇಲ್ಲ ? ೬೨. ಹೇ ಜಿಂಕೆಯ ಕಣ್ಣಿನಂತೆ ಚಂಚಲವುಳ್ಳ ನೇತ್ರವುಳ್ಳ ರಮಣೀ, ಮುಖವೆಂಬ ಚಂದ್ರನು ಕಣ್ಣೆಂಬ ಕಮಲಗಳೆರಡನ್ನೂ ಅಪ್ಪಿಕೊಂಡನೆಂಬ ಹೊಟ್ಟೆಕಿಚ್ಚಿನ ಕಾರಣವಾಗಿ ಜಾರಿಹೋದ ಹಾಗೆ ಕರ್ಣಾಭರಣವಾದ ಓಲೆಯೆಂಬ ಕನ್ನೈದಿಲೆಯು ಕಿವಿಯಲ್ಲಿ ತೋರುತ್ತಿಲ್ಲ ಏಕೆ ? ೬೩. ಹೇ ಮದ್ದಾನೆಯಂತ ಮಂದನಡಿಗೆಯ ರಾಣಿಯೇ, ಕಗ್ಗತ್ತಲಿನ ರಾತ್ರಿಯಲ್ಲಿನ ನಕ್ಷತ್ರಗಳಿಗೆ ಸಮಾನವಾಗಿ ಮುಡಿಯಲ್ಲಿ ಹೂವುಗಳನ್ನೇಕೆ ಮುಡಿದಿಲ್ಲ?

ಮದಕೋಕಿಳಕಳರವೆ ಸಂ
ಮದಕರಮೃದುವಾಣಿ ನಿನ್ನ ಮೊಗದೊಳ್ ಪೊರಪೊ
ಣ್ಮದೊಡಳಿರವಮಿಲ್ಲದ ಪ
ದ್ಮದೊಳೆಣೆವಂದೆನಗೆ ಮಾಳ್ಪುದಿದು ಮನದಳಲಂ ೬೪

ಆರಿಂದಾದುದು ಚಿಂತಾ
ಭಾರಂ ಶಶಿವದನೆ ಪೇಳ್ವುದೆನ್ನೊಡನೆಂದಾ
ಭೂರಮಣಂ ಬೆಸಗೊಳೆ ಕರ
ವಾರಿಜಮಂ ಮುಗಿದು ಮಧುರಭಾಷಿಣಿ ನುಡಿದಳ್ ೬೫

ಅವಧರಿಪುದಖಿಳ ಧರಣೀ
ಧವನಿವಹ ಕಿರೀಟಕೋಟಿ ಮಣಿಗಣಘೃಣಿಸಂ
ಭವ ನವರವಿರುಚಿ ರುಚಿರಾಂ
ಘ್ರಿವನೇರುಹಯುಗಳ ದೇವದೇವಿಯುರಿರವಂ ೬೬

ವಾಸ್ತವ ಪುರಾಣದೊಳ್ ಪೃಥು
ಳಸ್ತನಿ ಕೇಳ್ದಳ್ ಮೃಕಂಡುಜೋಪಾಖ್ಯಾನ
ನ್ಯಸ್ತ ಮೃಕಂಡುಜಲೀಲಾ
ವಿಸ್ತಾರಮನೆಲ್ಲಮಂ ವಸುಂಧರೆಯುರಸಾ ೬೭

ಮನಸ್ಸಿನ ಸಂಕಟಕ್ಕೆ ಕಾರಣವೇನೆಂಬುದನ್ನು ನನ್ನಲ್ಲಿ ಹೇಳು ! ೬೪. ಹೇ ಮತ್ತಕೋಕಿಲೆಯ ಧ್ವನಿಗೆ ಸಮಾನ ಧ್ವನಿಯುಳ್ಳವಳೇ ನಿನ್ನ ಮುಖದಿಂದ ಒಳ್ಳೆಯ ಮುದವನ್ನುಂಟು ಮಾಡದೆ ಇರುವ ಮೃದುವಾಣಿಯು ಹೊರಹೊರಡದೆ ಇರುವ ಈರೀತಿಯು ಭೃಂಗದ ಝೆಂಕಾರಧ್ವನಿಯಿಲ್ಲದ ಕಮಲದೊಡನೆ ಸರಿಹೊಂದಿದೆ. ನನ್ನ ಮನಸ್ಸಿಗೆ ಇದು ಸಂಕಟವನ್ನುಂಟುಮಾಡುತ್ತಿದೆ. ೬೫. ಶಶಿಗೆ ಸಮಾನ ಮುಖವಳ್ಳವಳೇ, ನಿನಗೆ ಈ ಚಿಂತೆಯ ಭಾರವು ಯಾರಿಂದ ಆಯಿತು? ನನ್ನೊಡನೆ ಹೇಳುವುದು" ಎಂದು ಆ ಮಹಾರಾಜನು ಕೇಳಲು ಕೈಯೆಂಬ ಕಮಲಗಳನ್ನು ಮುಗಿದು ಓರ್ವ ಮಧುರಮಾತಿನ ಸಖಿಯು ಹೇಳಿದಳು. ೬೬. "ಸಮಸ್ತ ರಾಜರುಗಳ ಕಿರೀಟದ ಅಂಚಿನಲ್ಲಿರುವ ರತ್ನದ ಕಾಂತಿಯಿಂದ ಉಂಟಾದ, ನೂತನ ಸೂರ್ಯನ ಕಾಂತಿಯಿಂದ ರಮಣೀಯವಾದ ಪಾದಕಮಲಗಳುಳ್ಳ ಮಹಾರಾಜನೇ ದೇವಿಯವರ ಈ ದುಃಖದ ಕಾರಣವನ್ನು ಕೇಳಬೇಕು (ಆಲಿಸಬೇಕು). ೬೭. ಭೂಮಂಡಲದ ಪ್ರಭುವೇ, ವಾಸ್ತವವಾದ ಪುರಾಣಶ್ರವಣ ಕಾಲದಲ್ಲಿ ಈ ವಿಪುಲವಾದ ಸ್ತನಪ್ರದೇಶಗಳನ್ನುಳ್ಳ ಮಹಾರಾಣಿಯು ಮೃಕಂಡುಜೋಪಾಖ್ಯಾನದಲ್ಲಿ ಬರುವ

ತನಗಿಲ್ಲಪ್ಪುದಱಿಂದಂ
ತನಯುರ್ಬಿಸುಸುಯ್ದು ಬಿಸುಟು ಮಣಿಭರಣಮನೀ
ವನಿತೆ ವಸಂತಂ ತೊಲಗಿದ
ವನಲತೆಯೆನೆ ಬಿನ್ನನಿರ್ಪಳಿಲೆ ಧರಣೀಶಾ ೬೮

ತನುವಲ್ಲಿಗೆ ಫಳವಾವುದೊ
ತನಯಂ ತತ್ತನಯನಿಲ್ಲದಿರೆ ವಿಫಳಂ ಕೇ
ಳ್ತನುವಲ್ಲಿಯದಱಿನೀ ಮಾ
ನಿನಿಗೆ ಕರಂ ಚಿಂತೆ ನೆಗಳ್ದುದವನಿಪತಿಳಕಾ ೬೯

ದೇವಿಯರ ಚಿತ್ತದನುವಿದು
ದೇವರ್ ಚಿತ್ತವಿಪುದೆಂದು ನುಡಿದಳ ನುಡಿಯಂ
ಭಾವಿಸಿ ಕಾಂತೆಯ ಚಿಂತೆಯ
ನಾ ವಿಭು ತಾಂ ಪೆರ್ಚುಗೊಂಡು ತಳೆದಿಂತೆಂದಂ ೭೦

ಚಂ॥ ಶಿವಮತವಾರ್ಧಿವರ್ಧನ ಶಶಾಂಕನನಂಗಜಮರ್ದನಾರ್ಚನೋ
ತ್ಸವ ಸವನಪ್ರದೀಕ್ಷಿತನಬ್ಜಕಳಾಧರಭಕ್ತಬೃಂದ ಬಾಂ
ಧವನನುಮೇಶಲಾಂಛನ ಧರಾಂಘ್ರಿಸರೋರುಹಭಕ್ತಿಯುಕ್ತನಂ
ಕುವರನನೀಗಳೆನ್ನ ಬಗೆಯುಂ ಬಯಸಿರ್ದಪುದಂಬುಜಾನನೇ ೭೧

ಮಾರ್ಕಂಡೇಯನ ಲೀಲಾವಿಸ್ತಾರವನ್ನೆಲ್ಲ ಕೇಳಿದಳು. ೬೮. ಎಲೈ ಧರಣೀಪತಿಯೆ, ಕೇಳು, ಮಕ್ಕಳು ತನಗೆ ಇಲ್ಲದೆ ಇರುವುದರಿಂದ, ನಿಟ್ಟುಸಿರು ಬಿಟ್ಟು ರತ್ನಾಭರಣಗಳೆಲ್ಲವನ್ನೂ ಬಿಸಾಡಿ, ಈ ಮಹಾರಾಣಿಯು ವಸಂತಕಾಲವು ತೊಲಗಿದ ಮೇಲೆ ಉಂಟಾಗುವ ಅರಣ್ಯದ ಬಳ್ಳಿಯಂತಾಗಿ ಹೀಗೆ ಗಂಟುಮುಖವುಳ್ಳವಳಾಗಿದ್ದಾಳೆ. ೬೯. ದೇಹ ವೆಂಬ ಬಳ್ಳಿಗೆ ಫಲವು ಯಾವುದೋ! ಅವನೀಶ್ವರಾ, ಆ ಮಗನಿಲ್ಲದಿದ್ದರೆ ಈ ದೇಹ ಲತೆಯು ವಿಫಲವೇ ಸರಿ. ಆದ್ದರಿಂದ ಈ ಮಾನಿನಿಯಾದ ಮಹಾರಾಣಿಗೆ ಚಿಂತೆಯುಂಟಾ ಯಿತು. ೭೦. ದೇವಿಯವರ ಮನಸ್ಸಿನ ಬಯಕೆ ಇದು. ದೇವರು ಚಿತ್ತೈಸಬೇಕು." ಎಂದು ನುಡಿದ ಆ ದಾಸಿಯ ಮಾತನ್ನು ಕೇಳಿದ ಮಹಾರಾಜನು ತನ್ನ ಮಡದಿಯ ಚಿಂತೆಯನ್ನು ತಿಳಿದು ತಾನೂ ಆ ಚಿಂತೆಯಿಂದ ಅಧಿಕಗೊಂಡವನಾಗಿ ಹೀಗೆ ಹೇಳಿದನು: ೭೧. "ಕಮಲಮುಖಿಯೇ, ಶಿವಮತವೆಂಬ ಸಮುದ್ರವನ್ನು ಉಕ್ಕಿಸುವ ಚಂದ್ರನಾದ ಮನ್ಮಥಹರನಾದ ಶಂಕರಪೂಜೆ, ಉತ್ಸವ, ಮಹೇಶ್ವರಯಜ್ಞಕ್ಕಾಗಿ, ಶ್ರೇಷ್ಠ ದೀಕ್ಷಾ ಬದ್ಧನ, ಚಂದ್ರಶೇಖರನ ಭಕ್ತರ ಸಮೂಹಕ್ಕೆ ಬಂಧುವಾದವನ, ಪರಮೇಶ್ವರನ ಲಾಂಛನ ಧರರಾದ ಗುರುಜಂಗಮರ ಪಾದಕಮಲದಲ್ಲಿ ಭಕ್ತಿಯಿಂದ ಕೂಡಿದವನಾದ ಮಗನನ್ನು

ವ॥ ಎಂದು ನುಡಿದಿನಿಯನನುಕೂಲ ವಚನಮಂ ಕೇಳ್ದು

ಕಂ॥ ವದನಸ್ಥಿತವಾಣಿಯ ಕ
ಣ್ಗಿದಿರುರ್ವಿದುದೆಂಬ ಭಾವಮಂ ಬೀಱ ಲಸ
ದ್ರದನದ್ಯುತಿ ಪಸರಿಸೆ ತ
ತ್ಸುದತಿ ಮೃದೂಕ್ತಿಯೊಳೆ ಕಾಂತನೊಡನಿಂತೆಂದಳ್ ೭೨

ಮ॥ಸ್ರ॥ ಪರರಾಜಾಶೇಷತೇಜಸ್ಥಿತಿ ಕೆಡೆ ಕಮಳಾಮೋದಮಿಂಬಾಗೆ ಧಾತ್ರೀ
ಪರಿತೋಷಂ ಪೆರ್ಚೆ ಪೂರ್ವಕ್ಷಿತಿಭೃದಧಿಕರಾಗಂ ಸಮಂತಾಗೆ ಸನ್ಮಾ
ರ್ಗರುಚಿಪ್ರಸ್ಫೂರ್ತಿ ಚೆಲ್ವಾಗಿರೆ ಕರಮುದಯಂಗೊಂಬ ಬಾಲಾರ್ಕನಂ ಮ
ದ್ವರ ಚೇತಃಪದ್ಮಮೀಗಳ್ ಬಯಸಿದಪುದು ಕೇಳ್ಭೂಮಿಪಾಲಾವತಂಸಾ ೭೩

ಕಂ॥ ಗಿಳಿವಱ ಮೆಱೆಯದ ನಂದನ
ಮಳಿಶಿಶು ವಿಹರಿಸದ ಪೂಗೊಳಂ ಕಳರವದಿಂ
ದೆಳೆಯಂಚೆಯಡಿಯಿಡದ ತ
ಣ್ಬುಳಿಲರ್ಭಕನಾಡದಂಗಳಂ ಮೆಚಜುಳಮೇ ೭೪

ಈಗ ನನ್ನ ಮನಸ್ಸೂ ಕೂಡ ಬಯಸಿದೆ." ವ|| ಹೀಗೆಂದು ನುಡಿದ ಪ್ರಿಯನಾದ ಗಂಡನ ಅನುಕೂಲಕರ ಮಾತುಗಳನ್ನು ಕೇಳಿ, ೭೨. ಬಾಯಿಯಲ್ಲಿರುವ ಮಾತಿನ ಸರಸ್ವತಿಯೇ ಕಡೆಗಣ್ಣ ಕಾಂತಿರೂಪವಾಗಿ ಅಧಿಕಗೊಂಡಳೋ ಎಂಬ ಭಾವವನ್ನು ವ್ಯಕ್ತಪಡಿಸಿ, ಶ್ರೇಷ್ಠವಾದ ದಂತಪಂಕ್ತಿಯ ಪ್ರಕಾಶವು ಪ್ರಸಾರಗೊಳ್ಳುವಂತೆ ಆ ಅಮೃತಮತಿ ದೇವಿಯು ಮೃದುವಾದ ಮಾತುಗಳಿಂದ ಗಂಡನಿಗೆ ಹೀಗೆ ಹೇಳಿದಳು: ೭೩. "ಸಮಸ್ತ ಪರರಾಜರ ಪ್ರತಾಪಸ್ಥಿತಿಯನ್ನು ಕೊಡಿಸುವ, ಐಶ್ವರ್ಯದಿಂದಾಗುವ ಸಂತೋಷವು ಹೆಚ್ಚಾಗುವಂತೆ ಮಾಡುವ, ಭೂಮಿಯ ಪ್ರಜಾವರ್ಗದ ಸಂತೋಷವನ್ನು ಅಧಿಕಗೊಳಿಸುವ, ಹಿಂದಿನ ಮಹಾರಾಜರಿಗಿಂತ ವಿಶೇಷವಾದ ಪ್ರಜಾನುರಾಗವನ್ನು ಉಂಟುಮಾಡುವ, ಸನ್ಮಾರ್ಗದ ಆಸಕ್ತಿಯಲ್ಲಿ ವಿಶೇಷಸ್ಫೂರ್ತಿಯಿಂದ ಚೆಲುವಾದಂತಹ, ಅಂದವಾಗಿ ಉದಯಗೊಳ್ಳುವ ಬಾಲಸೂರ್ಯನನ್ನು ನನ್ನ ಶ್ರೇಷ್ಠವಾದ ಚೇತಸ್ಸೆಂಬ ಕಮಲವು ಬಯಸುತ್ತಿರುವುದು. (ಸೂರ್ಯಪರಅರ್ಥ) ಶ್ರೇಷ್ಠನಾದ ಚಂದ್ರನ ಸಮಸ್ತ ಕಲೆಗಳ ತೇಜಸ್ಸು ಕೆಡುತ್ತಿರಲು, ಕಮಲಗಳಿಗೆ ವಿಶೇಷ ಸಂತೋಷವುಂಟಾಗುತ್ತಿರಲು, ಭೂಮಿಯಲ್ಲಿ ಅತಿಪ್ರೀತಿಯು ಹೆಚ್ಚುಗೊಳ್ಳುತ್ತಿರಲು, ಪೂರ್ವದಿಕ್ಕಿನಲ್ಲಿರುವ ಉದಯಪರ್ವತದಲ್ಲಿ ವಿಶೇಷವಾದ ಅರುಣರಾಗವು ಉಂಟಾಗುತ್ತಿರಲು, ಶ್ರೇಷ್ಠವಾದ ಗಹನಮಾರ್ಗ (ನಕ್ಷತ್ರಮಾರ್ಗ)ದಲ್ಲಿ ಪ್ರಭಾವಿಶೇಷವು ಚೆಲುವಾಗಿ ಹೆಚ್ಚುಗೊಳಿಸುವ, ಚೆನ್ನಾಗಿ ಉದಯಗೊಳ್ಳುವ ಬಾಲಸೂರ್ಯನನ್ನು ನನ್ನ ಶ್ರೇಷ್ಠವಾದ ಮನಸ್ಸೆಂಬ ಕಮಲವು ಬಯಸುತ್ತಿರುವುದು. ೭೪. ಗಿಳಿಯೆಮರಿಯು ಮೆರೆದಾಡದ ಉದ್ಯಾನ, ಮರಿದುಂಬಿಯು ವಿಹಾರಮಾಡದ ಕಮಲಸರಸ್ಸು, ಮಧುರಧ್ವನಿಮಾಡುತ್ತ ಹಂಸಪಕ್ಷಿ ಓಡಾಡದ ತಂಪಾದ ಮಳಲು, ಚಿಕ್ಕಮಗನು ಆಟವಾಡದ

ಎನೆ ನೃಪನೆಂದಂ ಕೇಳಂ
ಗನೆ ನೀನೆಂದಂತೆ ತನಯನಂ ಪಡೆಯದೆ ಬಾ
ಳ್ವನ ಸಂಸಾರಮಸಾರಂ
ತೆನೆಯಿಲ್ಲದ ನವಪಲಾಲದಂತಿರೆ ಧರೆಯೊಳ್ ೭೫

ಸುರತರುವಿರೆ ಸಿರಿವಡೆವುದು
ಪಿರಿದೆ ಸರೋಜಾಕ್ಷಿ ಮದ್ಗುರೂತ್ತಮನೊಲ್ದೊ
ಪ್ಪಿರೆ ತತ್ಪ್ರಸಾದಬಲದಿಂ
ಪಿರಿದು ಮದಿಷ್ಟಮನೆ ಪಡೆಯಲಕ್ಕುಮಮೋಘಂ ೭೬

ಅದಱಿಂ ಚಿಂತೆಯನುಳಿವುದು
ಸುದತಿ ಸುಧಾಕರಧರಾಂಘ್ರಿಯಂ ಪೂಜಿಪುದ
ಭ್ಯುದಯಕರ ಧರ್ಮಮಂ ಮಾ
ಳ್ಪುದು ದೊರೆದಪುದಲ್ತೆ ಭವದಭೀಪ್ಸಿತಮಬಲೇ ೭೭

ಇಂತೆಂದು ತಿಳಿಪೆ ಧರಣೀ
ಕಾಂತಂ ಬಗೆವಿಡಿದು ಚಿಂತೆಯಂ ತಾನುಳಿದ
ಳ್ಕಾಂತೆ ಬಿಡದಾಪ್ತವಚನದಿ
ನೇಂ ತಿಳಿವೊಡೆ ಚಿಂತೆಗೌಷಧಂ ಪೆಱತುಂಟೇ ೭೮

ಅಂಗಳ—ಇವು ಮಂಜುಳವೆನಿಸುವವೇ ?" ೭೫. ಹೀಗೆಂದು ಆ ಅಮೃತಮತಿಯು ಹೇಳಲಾಗಿ ಅರಸನು "ರಮಣಿಯೇ ಕೇಳು, ನೀನು ಅಂದಹಾಗೆ ಮಗನನ್ನು ಪಡೆಯದೆ ಬಾಳುವವನ ಸಂಸಾರವು ಭೂಮಿಯಲ್ಲಿ ತೆನೆಯಿಲ್ಲದ ಪೈರಿನಂತೆ ನಿಸ್ಸಾರವಾದದ್ದು" ಎಂದನು. ೭೬. "ಸುರತರುವಿದ್ದರೆ ಸಂಪತ್ತನ್ನು ಪಡೆಯುವುದು ಅತಿಶಯವೇನಲ್ಲ. ಕಮಲಾಕ್ಷಿಯೇ, ನನ್ನ ಗುರುಶ್ರೇಷ್ಠನು ನನ್ನ ವಿಷಯದಲ್ಲಿ ಪ್ರೀತಿಯಿಂದ ಇರಲಾಗಿ ಆ ಗುರುವಿನ ಪ್ರಸಾದದ ಬಲದಿಂದ ಅಮೋಘವಾದ ನನ್ನ ಮನದಿಷ್ಟವನ್ನು ಪಡೆಯುವುದು ಶಕ್ಯ. ೭೭. ಆದ್ದರಿಂದ, ಎಲೈ ಸುದತಿಯಾದ ಅಮೃತಮತಿಯೇ, ಚಿಂತೆಯನ್ನು ದೂರೀಕರಿಸುವುದು ; ಚಂದ್ರಧರನಾದ ಪರಮಾತ್ಮನ ಪಾದಗಳನ್ನು ಪೂಜೆಮಾಡುವಂತಹ ಅಭ್ಯುದಯವನ್ನುಂಟುಮಾಡುವ ಧರ್ಮಕಾರ್ಯವನ್ನು ಮಾಡುವುದು ; ಆದರಿಂದ ನಿನ್ನ ಅಭಿಷ್ಟವು ನೆರವೇರುವುದಲ್ಲವೇ ಅಬಲೆಯೇ !" ೭೮. ಧರಣಿಪತಿಯು ಈ ಪ್ರಕಾರವಾಗಿ ಅಮೃತಮತಿದೇವಿಯ ಮನಸ್ಸಿಗೆ ನಾಟುವ ಹಾಗೆ ತಿಳಿಸಿ ಹೇಳಲಾಗಿ, ಆ ಕಾಂತೆಯು ಚಿಂತೆಯನ್ನು ದೂರಮಾಡಿದಳು. ತಪ್ಪದೆ ಆಪ್ತವಚನದಿಂದ ಆಪ್ತರಾದವರು ತಿಳುವಳಿಕೆಯನ್ನು ಹೇಳಿದರೆ ಚಿಂತೆಗೆ ಅದಕ್ಕಿಂತ ಬೇರೆ

ವ॥ ಅನಿತಱಿೞೊಳವರ ಮನೋರಥಮಂ ನಿರ್ವಿಚಲೆಂದು ಸೈಪುಸಾಕಾರತೆವೆತ್ತು ಬರ್ಪಂತೆ

ಚಂ॥ ಘನಮಹಿಮರ್ ಸುವೃತ್ತರಭವಾರ್ಚಕರುಜ್ವಲಲಿಂಗಸಂಗಸ
ಜ್ಜನವಿನುತರ್ಶಿವಾಗಮವಿಶಾರದರಾರ್ಯರುದಾತ್ತಕೀರ್ತಿಮಂ
ಡನರುಚಿತಜ್ಞರಪ್ರತಿಮವೇದಶಿರೋಮಣಿ ಪಂಚವರ್ಣಚಿಂ
ತನ ನಿಜಚಿತ್ತಚಿದ್ಘನಶಿವಾರ್ಯ ಗುರೂತ್ತಮರೆಯ್ದೆ ಸಾದರಂ ೭೯

ಮಣಿಮಯತೋರಣಂ ಮುಕುರತೋರಣಮೊಪ್ಪಿರೆ ಮಂಗಳಧ್ವಜಂ
ಕುಣಿಯೆ ಗಜವ್ರಜಂ ರಥಪದಾತಿ ತುರಂಗಮಸಂಘಮಲ್ಲಿ ಸಂ
ದಣಿಗೊಳೆ ಭೂರಿಭೇರಿಯ ಘನಸ್ವನವೊಂದೆ ದಿಗಂತಮಂ ಗುರು
ಪ್ರಣತಿಸಮುತ್ಸುಕಂ ಮುದದಿನಂದಿದಿರ್ಗೊಂಡನವಂ ನರಾಧಿಪಂ ೮೦

ವ॥ ಅಂತಿದಿರ್ಗೊಂಡು ಕಟ್ಟಿದಿರೊಳ್ಕಂಡು ಪುಷ್ಪಾಂಜಲಿಗೆದರ್ದು ಸಾಷ್ಟಾಂಗಪ್ರಣತನಾಗಿ ಸಾತ್ವಿಕಂ ಮಿಗೆ ನಿರೀಕ್ಷಿಸಿ ನಿಜಹೃದಯನಳಿನಮಿನ್ನೆವರಮಿಂತಿರ್ದುದೆಂದಱಿಪುವಂತೆ ಕರ

ಔಷಧವು ಇರುವುದೇ ? ವ|| ಅಷ್ಟರಲ್ಲಿ ಅವರ ಮನೋರಥವನ್ನು ಈಡೇರಿಸಿಕೊಡಬೇಕೆಂದು ಪುಣ್ಯವೇ ಮೋಹಗೊಂಡು ಬರುವ ಹಾಗೆ ೭೯. ಘನಮಾಹಿಮಾಶಾಲಿಗಳು, ಸದ್ವೃತ್ತಿಯಲ್ಲಿ ನಿರತರಾದವರು, ಪರಮೇಶ್ವರನ ಪೂಜಾಕಾರ್ಯದಲ್ಲಿ ನಿರತರು, ಶ್ರೇಷ್ಠವಾದ ಇಷ್ಟಲಿಂಗಸಂಗದಿಂದ ಕೂಡಿದ ಸಜ್ಜನರುಗಳಿಂದ ಸ್ತೋತ್ರಮಾಡಿಸಿಕೊಳ್ಳುವವರು, ಶಿವಾಗಮಜ್ಞಾನದಲ್ಲಿ ಪರಿಪೂರ್ಣರು, ದೊಡ್ಡವರು, ಯೋಗ್ಯವಾದ ಕೀರ್ತಿಯಿಂದ ಅಲಂಕಾರಗೊಂಡವರು, ಉಚಿತ ಜ್ಞಾನವುಳ್ಳವರು, ಸರಿಸಾಟಿಯಿಲ್ಲದ ಋಗ್ಯಜುಸ್ಸಾಮಾದಿ ವೇದಜ್ಞಾನಿಗಳಲ್ಲಿ ಶಿರೋರತ್ನಪ್ರಾಯರು, ಪಂಚಾಕ್ಷರೀ ಮಂತ್ರಾರ್ಥವನ್ನು ಚಿಂತನೆಮಾಡುವಂಥ ಮನಸ್ಸುಳ್ಳವರು ಆದ ಚಿದ್ಘನ ಶಿವಾಚಾರ್ಯರೆಂಬ ನಾಮದ ಗುರುಶ್ರೇಷ್ಠರು ಅತ್ಯಂತ ಆದರಪೂರ್ವಕವಾಗಿ ಅಲ್ಲಿಗೆ ಬಂದರು. ೮೦. ಹೀಗೆ ಬಂದ ಚಿದ್ಘನ ಶಿವಾಚಾರ್ಯ ಗುರುಶ್ರೇಷ್ಠರನ್ನು ರತ್ನಮಯವಾದ ತೋರಣವೂ, ಕನ್ನಡಿಗಳ ಸಾಲುತೋರಣವೂ ಒಪ್ಪಿರಲಾಗಿ, ಮಂಗಳಕರವಾದ ನಂದಿಧ್ವಜವು ಕುಣಿದಾಡುತ್ತಿರಲಾಗಿ, ಆನೆಗಳ ಸಮೂಹವೂ ರಥ ಕಾಲಾಳು ಕುದುರೆಗಳ ಸಮೂಹವೂ ಅಲ್ಲಿ ಗುಂಪುಗುಂಪಾಗಿ ಬರುತ್ತಿರಲು, ದೊಡ್ಡ ದೊಡ್ಡ ನಗಾರಿಗಳ ಮೇಘಧ್ವನಿಯಂತಹ ಧ್ವನಿಯು ದಿಕ್ಕುಗಳ ಕೊನೆಯವರೆಗೂ ವ್ಯಾಪಿಸಿರಲಾಗಿ, ಗುರುವಿಗೆ ಶಿರಬಾಗುವ ವಿಷಯದಲ್ಲಿ ಅತ್ಯಂತ ಕುತೂಹಲವುಳ್ಳವನಾದ ಆ ಸತ್ಯೇಂದ್ರಚೋಳಮಹಾರಾಜನು ಆದಿನ ಇದಿರುಗೊಂಡನು. ವ|| ಹಾಗೆ ಇದಿರುಗೊಂಡು ನೇರವಾಗಿ ತನ್ನೆದುರಿನಲ್ಲಿಯೇ ಕಂಡು, ಬೊಗಸೆಯಲ್ಲಿ ತುಂಬಿದ ಹೂವುಗಳನ್ನು ಪಾದಗಳ ಮೇಲೆ ತೂರಿ (ಸುರಿಸಿ), ಸಾಷ್ಟಾಂಗಪೂರ್ವಕವಾಗಿ ನಮಸ್ಕರಿಸಿ, ದೇಹದಲ್ಲಿ ಸಾತ್ವಿಕಭಾವಗಳು ಉಂಟಾಗುತ್ತಿ

ಕಂಜಮಂ ಮುಗಿದು ನಲವಿಂ ಸುತಿಗೆಯ್ದು ಪರಮಾನಂದಂ ಮಿಗೆ ಪರಕೆಯಂ ಕೈಕೊಂಡು ಕೃತಾರ್ಥತೆಯನಪ್ಪುಕೆಯ್ದು ಕನಕಮಯ ಸುಖಾಸನದೊಳ್ ಕೈಗೊಟ್ಟು ಮೂರ್ತಿಗೊಳಿಸಿ ಮಕುಟವರ್ಧನರ್ ಬಳಸಿಬರೆ ಮಹೋತ್ಸವಂಬೆರಸು ಧರ್ಮಮಂ ತರ್ಪ ದಾನದಂತೆ ಜಸಮಂ ತರ್ಪ ಜಯದಂತೆ ಸುಖಮಂ ತರ್ಪ ಸುಕೃತದಂತೆ ಸಾಹಸಮಂ ತರ್ಪ ಸತ್ಯರಂತೆ ವಿನಯಮಂ ತರ್ಪ ವಿವೇಕದಂತೆ ಪರಿಮಳಮಂ ತರ್ಪ ಪವಮಾನನಂತೆ ಶಿವನೊಲವಂ ತರ್ಪ ಶಿವಯೋಗ ದಂತೆ ಗುರುಕುಲೋತ್ತಂಸನಂ ನೃಪಕುಲೋತ್ತಂಸನಂತಃಪುರಕೊಡಗೊಂಡು ಬಂದು ಮಣಿ ಖಚಿತ ದಿವ್ಯಸಿಂಹಾಸನದೊಳ್ ಮೂರ್ತಿಗೊಳಿಸಿ ಪರಿಮಳೋದಕದಿಂ ಪಾದಪ್ರಕ್ಷಾಳನಂ ಗೆಯ್ದು ಸಾದರಂ ಮಿಗೆ ಪಾದತೀರ್ಥಮಂ ತಳಿದು ವಿವಿಧೋಪಚಾರಂಗೆಯ್ದು ಸಚಿವನುಂ ತಾನುಂ ಸಮುಚಿತಾಸನದೊಳ್ ತದನುಜ್ಞೆಯಿಂ ಕುಳ್ಳಿರ್ದು ಬಳ್ಳಿವರಿವ ಭಕ್ತಿಗಡರ್ಪಾಗಿ ತದೀಯ ಕಟಾಕ್ಷಾರುಚಿರರುಚಿ ಸಾಂದ್ರಚಂದ್ರಿಕೆಯಿಂದಾನಂದಸುಧಾಬ್ಧಿ ತೆರೆಮಸಗಿದಂತೆ ಪಲ್ವೆಳಗು ಪಸರಿಸೆ ಮೆಲ್ಲನಿಂತೆಂದಂ

ರಲು ನಿರೀಕ್ಷಿಸಿ, ತನ್ನ ಹೃದಯವೆಂಬ ಕಮಲವು ಇಲ್ಲಿಯವರೆಗೆ ಈ ರೀತಿಯಿತ್ತು ಎಂಬು ದನ್ನು ತಿಳಿಸಿಕೊಡುವ ಹಾಗೆ ಕೈಗಳನ್ನು ಜೋಡಿಸಿ ವಂದಿಸಿ, ಪ್ರೀತಿಯಿಂದ ಸ್ತೋತ್ರ ಮಾಡಿ, ಪರಮಾನಂದವುಂಟಾಗುವಂತೆ ಅವರಿಂದ ಹರಕೆಗಳನ್ನು (ಆಶೀರ್ವಾದಗಳನ್ನು) ಸ್ವೀಕಾರಮಾಡಿ, ತಾನು ಧನ್ಯನಾದೆನೆಂಬ ಭಾವವನ್ನು ಹೊಂದಿದವನಾಗಿ, ಬಂಗಾರದಿಂದ ಮಾಡಲ್ಪಟ್ಟ ಸುಖಕರವಾದ ಆಸನದಲ್ಲಿ ಕುಳ್ಳಿರಿಸಿದನು. ಸುತ್ತಲೂ ರಾಜಾಧಿರಾಜರು ನೆರೆದಿದ್ದರು. (ಆಗ) ಅತಿ ಉತ್ಸಾಹದೊಡನೆ ಕೂಡಿ ಧರ್ಮವನ್ನುಂಟುಮಾಡುವ ದಾನದ ಹಾಗೆ, ಯಶಸ್ಸನ್ನುಂಟುಮಾಡುವ ವಿಜಯದಂತೆ, ಸುಖವನ್ನುಂಟುಮಾಡುವ ಪುಣ್ಯದ ಹಾಗೆ, ಸಾಹಸವನ್ನು ತರುವಂಥ ಸತ್ಯದಹಾಗೆ, ವಿನಯಗುಣವನ್ನುಂಟು ಮಾಡುವ ಯುಕ್ತಾಯುಕ್ತ ವಿಚಾರದ ಹಾಗೆ, ಸುಗಂಧವನ್ನು ಹೊತ್ತುತರುವ ವಾಯು ವಿನ ಹಾಗೆ, ಶಿವನ ಕಾರುಣ್ಯವನ್ನು ತರುವ ಶಿವಯೋಗದ ಹಾಗೆ, ಗುರುಕುಲಕ್ಕೆ ಶಿರೋ ಭೂಷಣದಂತೆ ಇರುವ ಚಿದ್ಘನ ಶಿವಾಚಾರ್ಯರನ್ನು ನೃಪಕುಲಕ್ಕೆ ಶಿರೋಭೂಷಣದಂತಿರುವ ಸತ್ಯೇಂದ್ರಚೋಳಮಹಾರಾಜನು ತನ್ನ ರಾಣೀವಾಸಕ್ಕೆ ಕೂಡಿಕೊಂಡು ಬಂದು ರತ್ನ ಖಚಿತವಾದ ಪವಿತ್ರಸಿಂಹಾಸನದಲ್ಲಿ ಕುಳ್ಳಿರಿಸಿ, ಸುಗಂಧಮಿಶ್ರವಾದ ನೀರಿನಿಂದ ಪಾದ ಗಳನ್ನು ತೊಳೆದು, ಆದರಪೂರ್ವಕವಾಗಿ ಪಾದತೀರ್ಥವನ್ನು ತಲೆಯಮೇಲೆ ಪ್ರೋಕ್ಷಣೆ ಮಾಡಿಕೊಂಡು, ವಿವಿಧರೀತಿಯಲ್ಲಿ ಉಪಚಾರವನ್ನುಮಾಡಿ, ಸಚಿವನೂ ತಾನೂ ಗುರು ಗಳ ಆಜ್ಞೆಯಂತೆ ಉಚಿತವಾದ ಆಸನದಲ್ಲಿ ಕುಳಿತುಕೊಳ್ಳಲು, ಕುಡಿವಡೆದು ಹಬ್ಬುವ ಬಳ್ಳಿಯಂತೆ ಹಬ್ಬುವ ಭಕ್ತಿಗೆ ಆಶ್ರಯವುಳ್ಳವರಾಗಿ, ಆ ಗುರುಗಳ ಕಡೆಗಣ್ಣ ಕಾಂತಿ ಯಂತಹ ದಟ್ಟವಾದ ಬೆಳದಿಂಗಳಿಂದ ಆನಂದವೆಂಬ ಸಮುದ್ರವು ಉಕ್ಕಿ ತರಂಗಗಳಿಂದ ತುಂಬಿದಂತೆ ಇರಲು, ಹಲ್ಲಿನ ಕಾಂತಿಯು ಹೊರಹೊರಡುತ್ತಿರಲು ಮೆಲ್ಲನೆ ರಾಜನು ಹೀಗೆ

ಉ॥ ಪಾವನದೇಶಿಕಾನ್ವಯಪಯೋಜದಿನೇಶ್ವರ ನಿಮ್ಮ ಪಾದಸಂ
ಸೇವನೆಯಿಂದರಲ್ದುದು ಮದೀಯ ಮನಃಕಮಳಂ ವಿವೇಕಮೆಂ
ಬಾ ವಿಮಳಾಕ್ಷಿಗಾದುದಖಿಳಾರ್ಥನಿರೀಕ್ಷಣಮಿಂದು ಧನ್ಯ ಸ
ದ್ಭಾವಮನಾಂತೆನೆನ್ನವೊಲದಾರ್ ಕೃತಕೃತ್ಯರಿಳಾತಳಾಗ್ರದೊಳ್ ೮೧

ಕಂ॥ ಎನೆ ಕೇಳ್ದು ಹರ್ಷಮೊಗೆತರೆ
ಮನಕ್ಕೆ ಕರುಣಾವಲೋಕನಂಗೈದೆಲೆ ಭೂ
ವನಿತೇಶ ನಿನ್ನ ಮನದಿ
ಷ್ಟನಿಯೋಜನೆಗೆಯ್ವೆವಾವುದದನಱಿಪೆಂದರ್ ೮೨

ವ॥ ಎನೆ ಮುದಂಬಡೆದು

ಕಂ॥ ದೇವ ಬಯಸಿರ್ಪುದು ಮ
ದ್ಭಾವಂ ಭವದೀಯ ವದನದಿಂ ತಿಳಿದಪೆನೆಂ
ದಾ ವಿಮಳಮೆನಿಪ ಶಿವಲೀ
ಲಾವಳಿಯಂ ಪೇಳ್ವುದೆನಗದಂ ದಯೆಯಿಂದಂ ೮೩

ವ॥ ಎಂದು ಭಕ್ತಿಭರದಿಂ ಪುತ್ರವರಮಂ ಬೇಳ್ಪದಂ ಮಱಿದಿಂತೆಂದು ಬಿನ್ನಪಂಗೆಯ್ದ ನರೇಂದ್ರನ ಬಗೆಗೆ ಮಚ್ಚಿ ಸಂತಸಂಬಟ್ಟು ನೀಡುಂ ನಿರೀಕ್ಷಿಸಿ ನಿಖಿಳ ಶ್ರುತಿಪುರಾಣಾಗಮಸಾರ ಮಪ್ಪ ಶಿವಲೀಲೆಯಂ ಪೇಳಲುಜ್ಜುಗಿಸಿ

ನುಡಿದನು: ೮೧. "ಪವಿತ್ರವಾದ ಗುರುಪರಂಪರೆಯೆಂಬ ಕಮಲಕ್ಕೆ ಸೂರ್ಯಪ್ರಾಯ ನಾದ ಗುರುವೇ, ನಿಮ್ಮ ಪಾದಸೇವೆಯಿಂದ ನನ್ನ ಮನಸ್ಸೆಂಬ ಕಮಲವು ಅರಳಿತು. ವಿವೇಕವೆನ್ನುವ ಆ ಶ್ರೇಷ್ಠಕಣ್ಣಿನ ಮಹಾರಾಣಿಗೆ ಇಂದು ಸಕಲ ಸಂಪತ್ತನ್ನು ನೋಡಿ ದಂತಾಯಿತು. ನಾನಿನ್ನು ಧನ್ಯನಾದೆನೆಂಬ ಸದ್ಭಾವದಿಂದ ಕೂಡಿದವನಾದೆನು. ನನ್ನ ಹಾಗೆ ಕೃತಕೃತ್ಯರಾದವರು ಈ ಭೂಭಾಗದಲ್ಲಿ ಯಾರಿದ್ದಾರೆ ?" ೮೨. ಹೀಗೆಂದ ಮಾತನ್ನು ಕೇಳಿ ಗುರುಗಳಿಗೆ ಅಧಿಕ ಹರ್ಷವು ಮನಸ್ಸಿಗೆ ಉಂಟಾಗಿ, ಕರುಣಾದೃಷ್ಟಿ ಯಿಂದ ನೋಡಿ, "ಎಲೈ ಭೂವನಿತೆಯರಸನೇ, ನಿನ್ನ ಮನೋಭಿಲಾಷೆಯನ್ನು ನಡೆಸಿ ಕೊಡುತ್ತೇವೆ. ಅದೇನು ತಿಳಿಸು ?" ಎಂದರು. ವ|| ಎನ್ನಲು ಸಂತೋಷಗೊಂಡು ೮೩. "ದೇವ, ನನ್ನ ಭಾವವು ತಮ್ಮ ವದನದಿಂದ ಆ ಶ್ರೇಷ್ಠವೆನಿಸಿರುವ ಶಿವನ ಇಪ್ಪತ್ತೈದು ಲೀಲೆಗಳನ್ನು ಕೇಳಬೇಕೆಂದು ಬಯಸಿರುವುದು. ದಯೆಯಿಂದ ಆ ಲೀಲೆಗಳನ್ನು ಎನಗೆ ಹೇಳಬೇಕು." ವ|| ಎಂದು ಭಕ್ತಿಯ ಆಧಿಕ್ಯದಿಂದ ಪುತ್ರ ಸಂತಾನ ಬೇಕೆಂಬ ವರವನ್ನು ಕೇಳದೆ ಮರೆತು ಹೀಗೆಂದು ಬಿನ್ನವಿಸಿಕೊಂಡ ಆ ಮಹಾರಾಜನ ಮನಸ್ಸಿಗೆ ಮೆಚ್ಚಿ, ಸಂತೋಷಗೊಂಡು ದಿಟ್ಟಿಸಿ ನೋಡಿ, ಸಮಸ್ತ ಪುರಾಣಾಗಮಸಾರಭೂತವಾದ ಶಿವನ ಲೀಲೆಗಳನ್ನು ಹೇಳಲು ಉದ್ಯೋಗಿಸಿ

ಕಂ॥ ಹೃದಯಕಮಲದೊಳೆ ನೆಲಸಿದ
ಮದನಾರಿಯ ಮಕುಟದಗ್ರದೆಳವೆಱೆಗದಿರು
ಣ್ಮೆದುದೆನೆ ಪಸರಿಸೆ ವಿಳಸ
ದ್ರದನದ್ಯುತಿವೊಗದೊಳಾಗಳವರಿಂತೆಂದರ್ ೮೪

ಮ॥ ಮೊದಲೊಳ್ನಿಷ್ಕಳಮಾಗಿ ನಿರ್ವಿಕೃತಿಯಿಂ ತಾನೊಂದೆ ಸಚ್ಚಿತ್ಸುಖಾ
ಸ್ಪದಲಿಂಗಂ ಸತಮಾಗಿ ಪೂರ್ಣಮುರು ಷಟ್‌ತ್ರಿಂಶತ್ಪರಂ ಶಕ್ತಿಯಂ
ಗದ ಸಂಪರ್ಕದೆ ಘಟ್ಟಿಗೊಂಡ ತಿಳಿನೆಯ್ಯಂತಾ ಮಹೇಶತ್ವಮಾಂ
ತದು ತದ್ದೇಹದೊಳೊಲ್ದು ತಾಳ್ದುದುರುಲೀಲಾಜಾಲಮಂ ಭೂಮಿಪಾ ೮೫

ವ॥ ಅದೆಂತೆಂದೊಡೆ

## ೧. ಚಂದ್ರಶೇಖರ ಲೀಲೆ

ಮ॥ ಸುರಗೋರ್ಯೋರ್ವರನಿತ್ತು ದಕ್ಷನೊಸೆದಿರ್ಪತ್ತೇಳ್ತನೂಜಾತೆಯರ್
ಸರಿಯೆಂಬಂತಿರೆ ಕೂಡಿರೆಂದು ಕುಡೆ ಮೀಱುತ್ತೊರ್ವಳೊಳ್ ಪ್ರೀತಿ ಸಂ
ದಿರೆ ಶಾಪಂಗುಡೆ ಕಂದಿಕುಂದಿ ತಪಮಂ ತಾನಾಂತಿರಲ್ ಮೆಚ್ಚಿ ಶಂ
ಕರನಾಕಾಶನದೀಮೃಣಾಳಮೆನೆ ತಚ್ಚಂದ್ರಾರ್ಧಮಂ ಸೂಡಿದಂ ೮೬

೮೪. ಹೃದಯಕಮಲದಲ್ಲಿ ನೆಲಸಿದಂಥ ಪರಮೇಶ್ವರನ ಮಕುಟಾಗ್ರದಲ್ಲಿರುವ ಎಳೆಯ ಬೆಳದಿಂಗಳ ಕಾಂತಿಯು ಮುಖದಿಂದ ಹೊರಹೊಮ್ಮಿತೋ ಎನ್ನುವಂತೆ ಪ್ರಕಾಶಮಾನವಾದ ಹಲ್ಲಿನ ಕಿರಣಗಳು ಸುತ್ತಲೂ ಪ್ರಸಾರಗೊಳ್ಳಲು ಅವರು ಹೀಗೆ ಹೇಳಿದರು: ೮೫. "ಮಹಾರಾಜನೇ ಕೇಳು, ಆದಿಯಲ್ಲಿ ಒಂದೇ ಒಂದಾದ ಸತ್ತು ಚಿತ್ತು ಆನಂದಗಳಿಗೆ ಆಸ್ಪದವಾದ ಲಿಂಗವು ಯಾವ ವಿಕಾರಕ್ಕೂ ಒಳಗಾಗದೆ ನಾಮ ರೂಪ ಕ್ರಿಯೆಗಳಿಗೆ ಅತೀತವಾಗಿ ಪರಿಪೂರ್ಣ ವಸ್ತುವಿತ್ತು. ಅದು ಶ್ರೇಷ್ಠವಾದ ಮೂವತ್ತಾರು ತತ್ತ್ವಗಳಿಗಿಂತಲೂ ಅತ್ತತ್ತ ಇದ್ದು ಶಾಶ್ವತವಾಗಿತ್ತು. ಅದು ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿಗಳ ಅಂಗದ ಸಂಪರ್ಕದಿಂದ ಹೆಪ್ಪುಗಟ್ಟಿ ಗಟ್ಟಿದುಪ್ಪದಂತೆ ಮಹೇಶ್ವರನೆಂಬ ಹೆಸರನ್ನು ಧರಿಸಿ, ಅಂದರೆ ನಾಮರೂಪಕ್ರಿಯಾತ್ಮಕ ದೇಹಧಾರಿಯಾಗಿ, ಲಿಂಗವೇ ದೇಹರೂಪದಲ್ಲಿ ಕಾಣಿಸಿಕೊಂಡು, (ಕರ್ಮೋದ್ಯೋಗ ಭೂಮಿಯಲ್ಲಿ ಕರ್ಮತನುವಿನಿಂದ) ಶ್ರೇಷ್ಠ ಲೀಲಾಜಾಲಗಳನ್ನು ಕಳೆಯಿತು. ವ॥ ಅದು ಎಂತು ಎಂದರೆ ೮೬. ದೇವತೆಗಳಿಗೆ ಒಬ್ಬೊಬ್ಬರಂತೆ ದಕ್ಷನು ಕೊಟ್ಟು, ಪ್ರೀತಿಪಟ್ಟು ಅಶ್ವಿನ್ಯಾದಿ ಇಪ್ಪತ್ತೇಳು ಸುತೆಯರನ್ನು ಚಂದ್ರನಿಗೆ ಕೊಟ್ಟು ಇವರೆಲ್ಲರನ್ನೂ ಸಮನಾಗಿ ಕಾಣಬೇಕೆಂದು ತಿಳಿಸಲಾಗಿ ಆ ಮಾತನ್ನು ಚಂದ್ರನು ಮಿಕ್ಕಿ ಒಬ್ಬಳಾದ ರೋಹಿಣಿಯಲ್ಲಿ ಅಧಿಕ ಪ್ರೀತಿಯನ್ನಿಟ್ಟು ಇರಲು, ಇದನ್ನು ದಕ್ಷಬ್ರಹ್ಮನು ತಿಳಿದು ಅವನಿಗೆ ಕಳಾಹೀನನಾಗೆಂದು ಶಾಪವನ್ನಿತ್ತನು. ಆಗ ಚಂದ್ರನು ಕಂದಿ ಕುಂದಿ ಶಿವನನ್ನು ಕುರಿತು ತಪಸ್ಸನ್ನಾಚರಿಸಲು ಪರಮೇಶ್ವರನು ಇವನ ತಪಸ್ಸಿಗೆ ಮೆಚ್ಚಿ, ದೇವಗಂಗಾನದಿಯಲ್ಲಿರುವ ಕಮಲದ ನಾಳವೋ ಎನ್ನುವಂತಿರುವ ಆ ಚಂದ್ರನ ಒಂದು ಕಲೆಗೆ

## ೨. ಉಮಾಮಹೇಶ್ವರ ಲೀಲೆ

ಶಾ॥ ಮಂದಾರಾಮಳ ಪುಷ್ಪದೊಳ್ ಪರಿಮಳಂ ಶ್ರೀದೇವಸದ್ರತ್ನದೊ
ಳ್ಚಿಂದಂಬೆತ್ತೆಸೆದಿರ್ಪ ಕಾಂತಿ ನೆಲೆಗೊಂಡಿರ್ಪಂತೆ ತನ್ನೊಳ್ಸದಾ
ನಂದಂಬೆತ್ತೆಸೆದಿರ್ಪುಮಾರಮಣಿಯೊಳ್ಬ್ರಹ್ಮಾಂಡಜಾಂಡಂಗಳಂ
ಕಂದರ್ಪಾರಿ ನಿಮಿರ್ಚಿ ಸಾರ್ಚಿ ಸುಮನಃಸಂಪ್ರೀತಿಯಂ ಮಾಡಿದಂ ೮೭

ತನ್ನ ತಲೆಯಲ್ಲಿ ಆಶ್ರಯಕೊಟ್ಟು ಚಂದ್ರಶೇಖರನೆಂದು ಹೆಸರು ಪಡೆದನು. ಇದು ಚಂದ್ರಶೇಖರಲೀಲೆಯೆನಿಸಿತು. ೮೭. ಕಲ್ಪವೃಕ್ಷ ಪುಷ್ಪದಲ್ಲಿ ಪರಿಮಳವೂ, ಶ್ರೀದೇವ ಸದ್ರತ್ನವಾದ ಚಿಂತಾಮಣಿಯಲ್ಲಿ ಚೆಂದವಾಗಿ ಶೋಭಿಸುವ ಕಾಂತಿ ಸಹಜವಾಗಿಯೇ ನೆಲೆಗೊಂಡು ಇರುವ ರೀತಿಯಲ್ಲಿ ತನ್ನಲ್ಲಿಯೇ ಅಂದರೆ ಶಿವನಲ್ಲಿ ಶಿವಸ್ವರೂಪೆಯಾಗಿ ಶಂಕರ ನಲ್ಲಿ ಶಾಂಕರಿಯೆನಿಸಿ ಶೋಭಿಸುವ ಉಮಾರಮಣಿಯಲ್ಲಿ ಬಹ್ಮಾಂಡಗಳನ್ನೆಲ್ಲ ಸೃಷ್ಟಿಸಿ, ಅವುಗಳನ್ನು ಆಯಾಯ ಸ್ಥಳಗಳಲ್ಲಿ ನೆಲೆಗೊಳಿಸಿ ದೇವತೆಗಳಿಗೆ ಪ್ರೀತಿಯನ್ನು ಮಾಡಿ ದನು. (ವಿಶೇಷ ವಿವರಣೆ : ಇಂಥ ಬ್ರಹ್ಮಾಂಡಕ್ಕೆ ಕ್ರಿಯಾಶಕ್ತಿಯಾದ ಪ್ರಕೃತಿಯು ಸತ್ವರಜಸ್ತಮೋಗುಣತ್ರಯಗುಣಗಳಲ್ಲಿ ಸತ್ವಗುಣಪ್ರಧಾನನಾಗಿ ಪಾಲನಾರ್ಥವಾಗಿ ವಿಷ್ಣುವನ್ನೂ, ರಜೋಗುಣದಿಂದ ಸೃಷ್ಟಿಮಾಡುವುದಕ್ಕಾಗಿ ಬ್ರಹ್ಮನನ್ನೂ, ಲಯಕ್ಕಾಗಿ ತಮೋಗುಣದಿಂದ ರುದ್ರನನ್ನೂ ಸೃಷ್ಟಿಮಾಡಿದನು. ಅವರಲ್ಲಿ ಬ್ರಹ್ಮನು ಸೃಷ್ಟಿಸುವ ಕಾರ್ಯದಲ್ಲಿ ಅಸಮರ್ಥನಾಗಿ ಶಿವನನ್ನು ಕುರಿತು ತಪಸ್ಸು ಮಾಡಿದನು. ಆಗ ಸನಕ ಸನಂದನ ಸನತ್ಸುಜಾತಾದಿ ಐದು ಜನ ಮಾನಸಪುತ್ರರನ್ನು ಪಡೆದನು. ಅವರು ವಿರಕ್ತ ರಾಗಿಹೋದುದರಿಂದ ಸೃಷ್ಟಿಕಾರ್ಯಕ್ಕೆ ವಿಘ್ನವುಂಟಾಯಿತು. ಆಗ ಬ್ರಹ್ಮನು ಪುನಃ ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿದನು. ಆತನ ಅನುಗ್ರಹದಿಂದ ತನ್ನ ದೇಹ ದಿಂದಲೇ ಮರೀಚಿ, ಅತ್ರಿ, ಆಂಗೀರಸ, ಪುಲಸ್ತ್ಯ, ಪುಲಹ, ಕೃತು, ದಕ್ಷ ಮೊದಲಾದವ ರನ್ನು ಪಡೆದು ಅವರಿಂದ ಸೃಷ್ಟಿಗೆ ಪ್ರಯತ್ನಿಸಿದನು. ಅವರಿಂದಲೂ ಸೃಷ್ಟಿಕಾರ್ಯವು ಆಗದೆಯಿರಲು ಪುನಃ ಬ್ರಹ್ಮನು ಪರಮಾತ್ಮನಲ್ಲಿಯೇ ಒಡವೆರೆದಿರುವ ಕ್ರಿಯಾಶಕ್ತಿಯನ್ನು ಕುರಿತು ಪ್ರಾರ್ಥಿಸಿಕೊಳ್ಳಲಾಗಿ ಆಕೆಯು ತನ್ನ ಮಗನೇ ಆದ ದಕ್ಷನಿಗೆ ಮಗಳಾಗುವಂತೆ ಮಾಡಿದನು. ಆಗ ಬ್ರಹ್ಮನು ಅವಳ ಅನುಗ್ರಹದಿಂದ ಸೃಷ್ಟಿಕಾರ್ಯದಲ್ಲಿ ತೊಡಗಿದನು. ಮಹಾದೇವನು ಲೀಲಾಮೂರ್ತಿಯಾಗಿ ದೇವಾಸುರ ಮನುಷ್ಯಾದಿ ಸಕಲ ಚರಾಚರ

## ೩. ವೃಷಭವಾಹನ ಲೀಲೆ

ಉ॥ ಒರ್ಮೆ ಜಗತ್ರಯಕ್ಕೆ ಲಯಮಂ ರಯದಿಂದೆ ನೆಗಳ್ಚಿ ತನ್ನ ಚಿ
ದ್ಧರ್ಮಮನಳ್ಕರಿಂ ನೆನೆಯೆ ತಾಂ ವೃಷಭಾಕೃತಿಗೊಂಡು ಮುಂದಿರ
ಲ್ಕೊರ್ಮೆಯೊಳೇಱಿನಿಂದನಿದು ಚಿತ್ರಮಿಳಾತಳದಲ್ಲಿ ಧರ್ಮಿ ಮೇ
ಣ್ಧರ್ಮದೊಳಿರ್ಪುದೆಂದು ವಿಬುಧರ್ ಪೊಗಳುತ್ತಿರೆ ಪಾರ್ವತೀಶ್ವರಂ ೮೮

ಗಳನ್ನು ಸಲಹುತ್ತ ಉಮಾಮಹೇಶ್ವರ ಲೀಲೆಯನ್ನೆಸಗಿದನು.) ೮೮. ಪರಮೇಶ್ವರ
ರನು ಹಿಂದೆ ಒಮ್ಮೆ ಮೂರುಲೋಕಗಳಿಗೆ ಒಮ್ಮಿಂದೊಮ್ಮೆಲೆ ಪ್ರಳಯವನ್ನುಂಟು
ಮಾಡಿ, ತನ್ನ ಚಿತ್ಕಳಾರೂಪವಾದ ಧರ್ಮವನ್ನೇ ನೆನೆಯಲಾಗಿ, ಆ ಚಿದ್ಧರ್ಮವು
ವೃಷಭನ ಆಕಾರವನ್ನು ಹಿಡಿದು ಮುಂದೆ ಬಂದು ನಿಲ್ಲಲಾಗಿ ಆ ವೃಷಭ
ನನ್ನು ಪ್ರೀತಿಯಿಂದ ಹತ್ತಿ ನಿಂತನು. ಈ ರೀತಿಯು ಭೂಮಂಡಲದಲ್ಲಿ ಅತಿ ವಿಚಿತ್ರ
ವಾದುದು. (ಏಕೆಂದರೆ) ಧರ್ಮಸ್ವರೂಪನಾದ ಪರಮೇಶ್ವರನು ಧರ್ಮದಲ್ಲಿಯೇ ಇರುವ
ನೆಂಬುದು. ಹೀಗೆಂದು ಜ್ಞಾನಿಗಳು ಹೊಗಳುತ್ತಿರಲು ಪಾರ್ವತೀಪರಮೇಶ್ವರನು
ವೃಷಭವಾಹನಲೀಲೆಯನ್ನು ಮಾಡಿದನು. ಧರ್ಮಸ್ವರೂಪನಾದ ಶಿವನಲ್ಲಿ ಚಿದ್ಧರ್ಮ
ರೂಪನಾದ ಶಿವನಿರುವುದು ಕ್ರಮಬದ್ಧವಾದದ್ದು ; ಅದು ತಪ್ಪಿ ವೃಷಭೇಶ್ವರನಲ್ಲಿಯೇ
ಶಿವನಿರ್ಪನೆಂಬುದು ವಿಚಿತ್ರಾರ್ಥವಾಗಿದೆ. ಗ್ರಂಥಾಂತರದಲ್ಲಿ ಈ ಲೀಲೆಯು ಹೀಗೆ
ಹೇಳಲ್ಪಟ್ಟಿದೆ : ಪರಶಿವನು ಜಗತ್ತನ್ನು ಸೃಷ್ಟಿಸಿ, ಲೀಲೆಯಿಂದ ಅದನ್ನು ತನ್ನ ರೋಮ
ಕೂಪದಲ್ಲಿಟ್ಟುಕೊಂಡು, ತನ್ನನ್ನು ಹೊರುವವರಾರೆಂದು ಮನಸ್ಸಿನಲ್ಲಿಯೇ ಸ್ಮರಿಸಲು
ಕೂಡಲೇ ಒಬ್ಬ ದಿವ್ಯ ಮೂರ್ತಿಯು ಭಯಭಕ್ತಿಯಿಂದ ಕೈಮುಗಿದು ಎದುರಿಗೆ ನಿಂತು
ಏನಪ್ಪಣೆ ಎನ್ನಲು. ಶಿವನು ಅವನನ್ನು ಕುರಿತು ಜಗತ್ತಿಗೆ ಆಧಾರನಾದ ಧರ್ಮ
ಮೂರ್ತಿಯೇ ನೀನು ನನ್ನಲ್ಲಿ ಹುಟ್ಟಿದೆ, ಶಬ್ದಬ್ರಹ್ಮ ನೀನು, ಅರ್ಥಬ್ರಹ್ಮ ನೀನು,
ನನಗೂ ನಿನಗೂ ಭೇದವಿಲ್ಲ. ನಿನಗೆ ಸರಿಸಮಾನರಾರೂ ಇಲ್ಲ. ನೀನು ವೃಷಭದ ಆಕಾರ
ದಿಂದ ನನ್ನನ್ನು ಹೊತ್ತಿರು ಎಂದು ಅವನನ್ನು ತನ್ನ ವಾಹನವನ್ನಾಗಿ ಮಾಡಿಕೊಂಡದ್ದೇ
ವೃಷಭವಾಹನ ಲೀಲೆಯಾಯಿತು (ಶಿವತತ್ತ್ವಚಿಂತಾಮಣಿ) ಈ ವೃಷಭನೂ
೧೨ ಲೀಲೆ ಮಾಡಿದ್ದಾನೆ. ೧) ಧರ್ಮರೂಪ ೨) ನಂದಿಕೇಶ್ವರ ೩) ಪಶುಪ
೪) ವೃಷಭ ೫) ಜಗದಾರಾಧ್ಯ ೬) ಬಸವೇಶ್ವರ ೭) ಸರ್ವತೋಭದ್ರ ೮)
ಭಕ್ತವತ್ಸಲ ೯) ಪ್ರಮಥಾಧಿಪ ೧೦) ಮುಕ್ತಿದಾಯಕ ೧೧) ಲೀಲಾಂಗ ೧೨)

## ೪. ತಾಂಡವ ಲೀಲೆ

ಸ್ರ॥ ಸ್ಫೂರ್ಜದ್ಗರ್ಜದ್ಘನಾಡಂಬರರವ ಡಮರುಧ್ವಾನಮಿಂಬಾಗೆ ಗಂಗಾ
ವಾರ್ಜಂಗಳ್ ಸೀಕರಂಗಳ್ ಸುರಿಯೆ ಮೊರೆಯೆ ಸರ್ಪಾಳಿ ಚಂಡೇಭಚರ್ಮಂ
ಪರ್ಜನ್ಯಾಭಂ ಕಟೀಮಂಡಳದೆ ಪೊಡರೆ ಕಾಲಾನಲಾಕ್ಷಿಸ್ಫುರತ್ ರೋ
ಚಿರ್ಜಾಲಂ ಪೊಣ್ಮೆ ದಿಗ್ಭಿತ್ತಿಗಳೊಡೆಯೆ ಹರಂ ತಾಂಡವಂಗೈವುತಿರ್ದಂ ೮೯

## ೫. ಗಿರಿಜಾಕಲ್ಯಾಣ ಲೀಲೆ

ಮ॥ ತಪಮಿರ್ಪದ್ರಿಜೆಯಲ್ಲಿಗೈದಿ ವಟುವೇಷಂಬೊತ್ತು ನಾನಾ ಪ್ರಪಂ
ಚಪರಾಲಾಪಮನಾಡಿ ನೋಡಿ ಮನಮಂ ಮೆಚ್ಚುತ್ತೆ ಪೋಗೆಂದು ತ
ದ್ವಿಪುಳಾವಾಸಕಲಂಪಿನಿಂ ಕಳುಪಿ ಬಂದಾನಂದದಿಂ ನಿರ್ಜರಾ
ಧಿಪರೆಲ್ಲಂದಿರೆ ಶಂಭು ಕೂರ್ತು ಪಸೆನಿಂದಂ ತನ್ಮಹಾದೇವಿಯೊಳ್ ೯೦

ವರಪ್ರದಮೂರ್ತಿ ೮೯. ವಜ್ರಾಯುಧಧ್ವನಿಯಂತೆ ಮತ್ತು ಮೇಘಗಳ ವಿಶೇಷವಾದ ಆಡಂಬರದ ಧ್ವನಿಯಂತೆ ಡಮರುಗದ ಭಯಂಕರ ಧ್ವನಿಯು ಅಧಿಕವಾಗಿರಲಾಗಿ, ತಲೆಯ ಮೇಲಿರುವ ಗಂಗೆಯ ನೀರು ಸಣ್ಣ ಸಣ್ಣ ನೀರಿನ ಕಣಗಳಾಗುತ್ತ ಸುರಿಯುತ್ತಿರಲು, ದೇಹದಲ್ಲಿ ಧರಿಸಿದ ಹಾವುಗಳೆಲ್ಲ ಬುಸುಗುಡುತ್ತಿರಲು, ಮೋಡಗಳಿಗೆ ಸಮಾನವಾದ ಕಾಂತಿಯಿಂದ ತೀಕ್ಷ್ಣನಾದ ಗಜಾಸುರನ ಚರ್ಮವು ಕಟಿಪ್ರದೇಶದಲ್ಲಿ ಸೇರಿ ಚಲಿಸುತ್ತಿರಲಾಗಿ, ಪ್ರಳಯಕಾಲದಲ್ಲಿ ತೆರೆಯುವ ಅಗ್ನಿನೇತ್ರದಿಂದ ಪ್ರಕಾಶಮಾನವಾದ ಅಗ್ನಿಜ್ವಾಲೆಯು ಹೊರಹೊಮ್ಮುತ್ತಿರಲು, ದಶದಿಕ್ಕುಗಳಲ್ಲಿರುವ ಬ್ರಹ್ಮಾಂಡದ ಗೋಡೆಗಳೆಲ್ಲ ಒಡೆದುಹೋಗುತ್ತಿರಲು ಶಿವನು ತಾಂಡವನೃತ್ಯ ಮಾಡುತ್ತಿದ್ದನು. (ಈ ಶಿವನ ತಾಂಡವದ ರುದ್ರಮನೋಹರಲೀಲೆಯ ವಿರಾಡ್‌ದರ್ಶನವನ್ನು ಹರಿಹರನು ತನ್ನ ಕುಂಬಾರ ಗುಂಡಯ್ಯನ ರಗಳೆಯಲ್ಲಿ ಮನೋಜ್ಞವಾಗಿ ವಿವರಿಸಿದ್ದಾನೆ. ಆ ರಗಳೆಯನ್ನು ಓದಿ ತಾಂಡವನಾಟ್ಯವೆಂದರೇನು ? ಅದರ ಭಾವಭಂಗಿಯೇನು ? ಎಂಬುದನ್ನು ತಿಳಿಯಬೇಕು.) (ಈಶ್ವರನು ಸಂಧ್ಯಾಕಾಲದಲ್ಲಿ ಈ ತಾಂಡವನೃತ್ಯ ಮಾಡುತ್ತಾನೆಂದೂ ಆ ಕಾಲವಲ್ಲಿ ಅಂದರೆ ಸಾಯಂಕಾಲದಲ್ಲಿ ಅವಶ್ಯವಾಗಿ ಶಿವನ ದರ್ಶನವನ್ನು ಮಾಡಬೇಕೆಂದೂ ಬಲ್ಲವರು ಹೇಳುತ್ತಾರೆ.) ೯೦. ತಪಸ್ಸುಮಾಡುತ್ತಿದ್ದ ಗಿರಿರಾಜಕುಮಾರಿಯಾದ ಪಾರ್ವತಿಯಲ್ಲಿಗೆ ವಟುವೇಷಧಾರಣೆ ಮಾಡಿ ಶಿವನು ಹೋಗಿ, ಲೌಕಿಕ ಸಮ್ಮತವಾದ ಆಲಾಪವನ್ನು ಅವಳೊಡನೆ ಮಾಡಿ, ಅವಳ ಮನಸ್ಸನ್ನು ಪರೀಕ್ಷಿಸಿ, ಮೆಚ್ಚಿ, ಅವಳ ತಂದೆಯ ನಗರಿಯಾದ ಓಷಧಿಪ್ರಸ್ಥಪುರಕ್ಕೆ ಹೋಗೆಂದು ಪ್ರೀತಿಯಿಂದ ಕಳಿಸಿಕೊಟ್ಟು, ತಾನು ಕೈಲಾಸಕ್ಕೆ ಬಂದು ಆನಂದದಿಂದ ದೇವತಾಧಿಪರೆಲ್ಲರೊಡಗೂಡಿ ಓಷಧಿಪ್ರಸ್ಥಪುರಕ್ಕೆ ಮದುವೆಗಾಗಿ ಬಂದು ಆ ಮಹಾದೇವಿಯೊಡನೆ ವಿವಾಹಹಸೆಯನ್ನೇರಿ ಲಗ್ನವಾದನು. (ದಕ್ಷಪುತ್ರಿಯಾದ ದಾಕ್ಷಾಯಿಣೀದೇವಿಯು

## ೬. ಭಿಕ್ಷಾಟನಾ ಲೀಲೆ

ಚಂ॥ ಅಧರಿತ ಮನ್ಮಥಾಕೃತಿ ಮನೋಹರಮೂರ್ತಿ ವಿಳಾಸವಾಂತು ಬಂ
ದಧಿಗತರೂಪಯವ್ವನ ಸುರೇಂದ್ರಪುರೀ ಸುದತೀ ವಿತಾನಮಂ
ಮಧುಸಖಿಬಾಣಪಾತಕೊಳಗಾಗಿಸಿ ಭಿಕ್ಷೆಯನಲ್ಲಿ ಬೇಡುತಂ
ವಿಧುಧರನೊರ್ಮೆ ತಾಳ್ದನಧಿಕೋತ್ಸುಕ ಭಿಕ್ಷುಕ ಲೀಲೆಯಂ ನೃಪಾ ೯೧

ತನ್ನ ತಂದೆಯು ಮಾಡುವ ಯಜ್ಞಕ್ಕೆ ಹೋಗಿ ಶಿವನಿಗೆ ಹವಿರ್ಭಾಗ ಕೊಡದೆ, ಯಜ್ಞ ಮಾಡುತ್ತಿರುವ ತಂದೆಗೆ ಬುದ್ಧಿ ಹೇಳಿದರೂ ಪ್ರಯೋಜನವಾಗದೆ, ತಂದೆಯಿಂದ ತಿರಸ್ಕೃತಳಾಗಲು, ಈ ಅವಮಾನವನ್ನು ಸಹಿಸಲಾರದೆ ತನ್ನ ಯೋಗಾಗ್ನಿಯಲ್ಲಿ ಆ ದಕ್ಷ ಸಂಬಂಧವಾದ ದೇಹವನ್ನು ತ್ಯಾಗಮಾಡಿ, ಗಿರಿರಾಜಪತ್ನಿಯಾದ ಮೇನಾದೇವಿಯ ಗರ್ಭದಲ್ಲಿ ಮಗಳಾಗಿ ಹುಟ್ಟಿ ಪಾರ್ವತಿಯೆಂಬ ಹೆಸರನ್ನು ಪಡೆದಳು. ಅವಳು ದೊಡ್ಡವಳಾಗಿ ಒಂದು ದಿನ ನಾರದರ ಮಾತಿನಂತೆ ಶಿವನು ಇದ್ದಲ್ಲಿಗೆ ಹೋಗಿ ಅವನನ್ನು ಒಲಿಸಿಕೊಳ್ಳಲು ಮಾಡಿದ ಪ್ರಯತ್ನಗಳೆಲ್ಲ ವಿಫಲವಾದುವು. ಶಿವನು ಸಕಾಮಿಯಾಗಿ ಬಂದ ಇವಳು ನನ್ನ ಕೈ ಹಿಡಿಯಲು ಅಸಮರ್ಥಳೆಂದೂ ಇವಳ ಮತ್ತು ನನ್ನ ಸಂಬಂಧಕ್ಕೆ ದೂತ್ಯವಹಿಸಿ ಬಂದ ಮನ್ಮಥನು ಮೊದಲು ನಾಶವಾಗತಕ್ಕವನೆಂದೂ, ಅವನನ್ನೂ ಸುಟ್ಟು ಕೈಲಾಸಕ್ಕೆ ಹೋಗಲು ಪಾರ್ವತಿಯು ಈ ರಹಸ್ಯವನ್ನರಿತು ತಪಸ್ಸಿನಿಂದ ಶಿವನನ್ನು ಪಡೆದಳು. (ಇದೇ ಗಿರಿಜಾ ಕಲ್ಯಾಣದ ಲೀಲೆ) ೯೧. ಎಲೈ ಅರಸನೇ, ಮನ್ಮಥನ ಆಕೃತಿಯನ್ನು ಕೀಳ್ಮಾಡುವ ತಾರುಣ್ಯದ ರೂಪವನ್ನು ಹೊಂದಿ, ಆ ಮನೋಹರ ಮೂರ್ತಿಯಾದ ಶಿವನು ಲೀಲಾವಿನೋದದಿಂದ ದೇವೇಂದ್ರನಗರಿಯಾದ ಅಮರಾವತಿಗೆ ಬಂದನು. ಆ ಪಟ್ಟಣದಲ್ಲಿರುವ ಸುಂದರಿಯರ ಸಮೂಹವನ್ನು ವಸಂತಸಖನಾದ ಮನ್ಮಥನ ಪಂಚಬಾಣಗಳ ಪೆಟ್ಟಿಗೆ ಒಳಗಾಗುವಂತೆ ಮಾಡಿ, ಅಲ್ಲಿ ಭಿಕ್ಷೆಯನ್ನು ಬೇಡಿದನು. ಹೀಗೆ ಒಮ್ಮೆ ಅಧಿಕತರವಾದ ಉತ್ಸಾಹದಿಂದ ಭಿಕ್ಷಾಟನದ ಲೀಲೆಯನ್ನು ಆ ಚಂದ್ರಧರನು ಮಾಡಿದನು. (ಗ್ರಂಥಾಂತರದಲ್ಲಿ ಈ ಕಥೆ ಹೀಗೆ : ಪರಮೇಶ್ವರನು ಒಮ್ಮೆ ಋಷಿಗಳ ಮನಸ್ಸನ್ನು ಪರೀಕ್ಷಿಸಬೇಕೆಂದು ಸಾವಿರ ಕೋಟಿ ಮನ್ಮಥರುಗಳ ಸುಂದರಾಕಾರವನ್ನು ಪಡೆದು, ದಾರುಕಾಶ್ರಮಕ್ಕೆ ಬಂದನು. ಅಲ್ಲಿನ ಮುನಿಸತಿಯರ ಮನಸ್ಸು ವಿಕಾರಗೊಂಡಿತು. ಆಗ ಕೋಪಗೊಂಡ ಋಷಿಗಳು ಶಿವನನ್ನು ನಾಶಮಾಡಬೇಕೆಂದು ಯೋಚಿಸಿ ಮಾರಣಹೋಮವನ್ನು ಮಾಡತೊಡಗಿದರು. ಆ ಯಜ್ಞದಿಂದ ದುಷ್ಟ ವ್ಯಾಘ್ರ ಸರ್ಪಾದಿಗಳು ಹೊರಬರಲು ಶಿವನು ಅವನ್ನೆಲ್ಲ ಕೊಂದು, ಕೊನೆಗೆ ಬಂದ ಅಪಸ್ಮಾರಕನನ್ನೂ ತನ್ನ ಕಾಲಿನಿಂದ ಮೆಟ್ಟಿ ತುಳಿದು ಭರತರಸ ತಾಳಗತಿಯಿಂದ ತಾಂಡವನಾಟ್ಯವನ್ನಾಡಿದನು. ಋಷಿಗಳು ತಾವು ಮಾಡಿದ ಅಭಿಚಾರ ವಿದ್ಯೆಗಳಾವುವೂ ಶಿವನಲ್ಲಿ ನಾಟದಿರಲು ಕೊನೆಗೆ ಅವನನ್ನೇ ಪ್ರಾರ್ಥಿಸಿದರು,

## ೭. ಮನ್ಮಥದಹನ ಲೀಲೆ

ಉ॥ ಅಂಬಿನ ಶತ್ರು ಸತ್ತಿಗೆಯಃದಕ್ಕಗಿದಿರ್ಪ ರಥಂ ನಿಜಾಶ್ವಮಾ
ಲಂಬಿಸೆ ಕೋಡೊಳಿಟ್ಟು ಪೊರೆವಾನೆಯದಂ ಮದವೇಱಿಪಾತನೇ
ನಂಬುಗೆವೆತ್ತ ಮಂತ್ರಿ ಗುಣಮಂ ಪರಿಪಾಲಿಪ ಬಿಲ್ಪಲಂ ತದ
ಸ್ತ್ರಾಂಬಕಿಯಾಗಲೆಚ್ಚ ಮುಗುಳಂಬನನೀಕ್ಷಿಸಿ ಸುಟ್ಟನೀಶ್ವರಂ ೯೨

## ೮. ಯಮಾಂತಕ ಲೀಲೆ (ಕಾಲಸಂಹಾರ ಲೀಲೆ)

ಶ್ವೇತನೆನಿಪ್ಪ ಪಾತಕಿ ಪಣಾಂಗನೆಗೆಂದರಲಂ ತರುತ್ತೆ ಧಾ
ತ್ರೀತಳದಲ್ಲಿ ಬೀಳೆ ಗಿರಿಶಂಗೆ ಸಮರ್ಪಣಮೆಂದ ಸೈಪು ರಂ
ಭಾತರುಣೀರತಂಗುಡಲವಳ್ಗಿಗೆ ಬೋಧಿಸೆ ತನ್ನನರ್ಚಿಸಿ
ರ್ಪಾತನನೊಯ್ಯಲೈದಿದ ಕೃತಾಂತನನರ್ದಿಸಿದಂ ಮಹೇಶ್ವರಂ ೯೩

ಆಗ ಶಿವನು ದಕ್ಷಿಣಾಮೂರ್ತಿಯ ರೂಪ ಧರಿಸಿ ವಟವೃಕ್ಷದ ಅಡಿಯಲ್ಲಿ ಅವರಿಗೆಲ್ಲ ಸುಜ್ಞಾನವನ್ನು ಭೋಧಿಸಿದನು—ಶಿವತತ್ವ ಚಿಂತಾಮಣಿ) ೯೨. ಕಾಮನ ಬಾಣವಾದ ಕಮಲಕ್ಕೆ ಶತ್ರುವಾದಂಥ ಚಂದ್ರನೇ ಶ್ವೇತಚ್ಛತ್ರಿ ; ಆ ಕೊಡೆಯಾಗಿರುವ ಚಂದ್ರನಿಗೆ ಹೆದರದೆ ಇರುವ ಗಿಳಿಯೇ ವಾಹನವು ; ವಸಂತನೇ ಮಂತ್ರಿ ; ಮಾಮರವೇ ಮದ್ದಾನೆ ; ಆ ಮಾಮರವೆಂಬ ಆನೆಯನ್ನು ಮದೋನ್ಮತ್ತಗೊಳಿಸುವ ವಸಂತನೇ ನಂಬಿಕೆಯ ಸಚಿವನು; ಮನ್ಮಥನ ಬಿಲ್ಲಿನ ಹಗ್ಗವಾದ ದುಂಬಿಗಳ ಸಮೂಹವನ್ನು ರಕ್ಷಿಸುವ ಕಮಲದ ದೇಟವೇ ಬಿಲ್ಲು ; ಆ ಕಮಲದಂತಹ ಮಂತ್ರಾಸ್ತ್ರ ರೂಪವಾದ ಕಟಾಕ್ಷದಿಂದ ಕೂಡಿದ ಸುಂದರಿಯರೆಂಬ ಪದಾತಿದಳ. ಇಂಥ ಚತುರಂಗಬಲದಿಂದ ಕೂಡಿ ಎಲ್ಲರನ್ನೂ ಜಯಿಸುತ್ತಿರುವ ಮನ್ಮಥನನ್ನು (ಪುಷ್ಪಬಾಣನನ್ನು) ಪರಮೇಶ್ವರನು ಸುಟ್ಟನು. ಈ ಕಾರ್ಯಮಾಡಲು ತಾರಕನ ಬಾಧೆಯಿಂದ ಬೇಸತ್ತ ದೇವತೆಗಳು ಈಶ್ವರನಿಂದ ತಾರಕಾರಿಯಾದ ಷಣ್ಮುಖನನ್ನು ಪಡೆಯಬೇಕಾಗಿತ್ತು. ಈ ಇಂದ್ರಾದಿ ದೇವತೆಗಳ ಅಜ್ಞೆಯಂತೆ ಶಿವನ ತಪೋಭರದ ಬೆಸುಗೆಯನ್ನು ಬಿಡಿಸಿ, ಹತ್ತಿರದಲ್ಲಿಯೇ ಇದ್ದ ಗಿರಿರಾಜಕುಮಾರಿಯಾದ ಪಾರ್ವತಿಯನ್ನು ಶಿವನು ನೋಡಿ ಲಗ್ನವಾಗುವ ಹಾಗೆ ಮಾಡಲು ಮನ್ಮಥನು ಚತುರಂಗಬಲ ಸಮೇತನಾಗಿ, ಒಡನೆ ರತಿಯನ್ನು ಕರೆದುಕೊಂಡು ಬಂದು, ಶಿವನ ಮೇಲೆ ಪಂಚಬಾಣಾನುಸಂಧಾನಮಾಡಿ ಬಿಡಲಾಗಿ, ಈಶ್ವರನು ತನ್ನ ಹಣೆಗಣ್ಣನ್ನು ಬಿಟ್ಟು ಆ ಮನ್ಮಥನನ್ನು ಸುಟ್ಟುಹಾಕಿ, ಆ ಚಿತಾಭಸ್ಮವನ್ನು ಮೈಗೆ ಧರಿಸಿಕೊಂಡು ಗಿರಿಜೆಯನ್ನು ಮಾತನಾಡಿಸದೆ ಅಂತರ್ಧಾನನಾದನು. ಇದನ್ನೇ ಮನ್ಮಥದಹನ ಲೀಲೆ ಎನ್ನುವರು) ೯೩. ಮಹಾಪಾಪಿಷ್ಠನೂ, (ವ್ಯಭಿಚಾರಿಯೂ) ಆದ ಶ್ವೇತನೆಂಬುವನು ತನ್ನ ಪ್ರೇಯಸಿಗೆಂದು ಹೂಗಳನ್ನು ತರುತ್ತಿರುವಾಗ ಆ ಹೂವುಗಳು ಭೂಮಿಯ ಮೇಲೆ ಬೀಳಲಾಗಿ, ಗಿರಿಶಂಗೆ ಸಮರ್ಪಣವಾಗಲಿ ಎಂದ ಪುಣ್ಯದ ಫಲವಾಗಿ, ರಂಭಾದಿ ಅಪ್ಸರಸ್ತ್ರೀಯರು ಇವನಿಗೆ ಭೋಗಸುಖವನ್ನು ಕೊಡುತ್ತ, ಅವರು ಇವನಿಗೆ ಸನ್ಮಾರ್ಗವನ್ನು

## ೯. ತ್ರಿಪುರಸಂಹಾರ ಲೀಲೆ

ನಾರಿ ಶರಂ ತದಂಗಜನೆ ಸಾರಥಿ ತತ್ಪದ ಶತ್ರುಮಿತ್ರರೇ
ಸೇರಿದ ಗಾಲಿಗಳ್ ತದಹಿತಂ ಪೆದೆ ತದ್ಧೃತಮೇ ರಥಂ ತದಾ
ಧಾರಮೆ ಬಿಲ್ತದಗ್ರಚರತೃಪ್ತಿ ವಿಧಾಯಕಮಶ್ವಮಾಗೆ ತ
ಚ್ಚೋರಸಜಾತಿ ಜಾತಪುರಮಂ ಪುರವೈರಿ ಕನಲ್ದು ಚುರ್ಚಿದಂ ೯೪

ಭೋಧಿಸಲಾಗಿ, ಶ್ವೇತನು ಶಿವಾರ್ಚನಾಕಾರ್ಯದಲ್ಲಿ ನಿರತನಾದಾಗ ಆತನ ನ್ನೊಯ್ಯಲು ಬಂದ ಯಮನನ್ನು ಶಿವನು ಕೊಂದನು. (ಶ್ವೇತನೆಂಬ ರಾಜನು ಪಾಪ ಕಾರ್ಯ ನಿರತನಾಗಿ ಅನ್ಯಸ್ತ್ರೀಯರಲ್ಲಿ ಕಾಮಾನುರಾಗದಿಂದ ಇರುತ್ತಿದ್ದನು. ಹೀಗಿರು ವಾಗ ಅನ್ಯರಾಜರು ಬಂದು ಈತನ ರಾಜ್ಯವನ್ನು ಕಿತ್ತುಕೊಂಡರು. ಆದರೂ ಇವನ ದುಷ್ಕಾರ್ಯಗಳು ನಿಲ್ಲಲಿಲ್ಲ. 'ಗಿರಿಶೆ' ಎಂಬ ವೇಶ್ಯಾಸ್ತ್ರೀಲಂಪಟನಾಗಿ ಒಂದು ದಿನ ಅವಳಿಗಾಗಿ ಹೂಗಳನ್ನು ತೋಟದಿಂದ ಕದ್ದು ತರುತ್ತಿರುವಾಗ ಆ ಹೂಗಳು ಕೈಜಾರಿ ಅಶುದ್ಧ ನೆಲಕ್ಕೆ ಬೀಳಲು 'ಗಿರಿಶೆ'ಗೆ ಪ್ರೀತಿಯಾಗಲೆಂದನು. ಅಷ್ಟರಲ್ಲಿ ಆ ಹೂವುಗಳ ತೋಟದವನು ಶ್ವೇತನನ್ನು ಹೊಡೆದು ಕೊಂದನು. ಬಳಿಕ ಯಮದೂತರು ಇವನನ್ನು ಯಮನ ಮುಂದೆ ತಂದು ನಿಲ್ಲಿಸಿ ಹುಟ್ಟಿದಾರಭ್ಯ ಪಾಪಗಳನ್ನೇ ಮಾಡಿರುವನೆಂದೂ ಆದರೆ ಒಂದು ದಿನ ಸೂಳೆಗೆ ಹೂವು ತರುತ್ತಿದ್ದಾಗ ಮಾತ್ರ ಕೈಜಾರಿಬಿದ್ದ ಹೂವು ಗಿರಿಶೆಗೆ ಸಮರ್ಪಿತವಾಗಲೆಂದು ಹೇಳಿದನು ಎಂದರು. ಆ 'ಗಿರಿಶ' ಎಂಬ ಶಬ್ದೋ ಚ್ಚಾರಣೆಯ ಫಲವಾಗಿ ಯಮನು ಇವನಿಗೆ ಕೆಲವು ದಿನ ಇಂದ್ರಲೋಕದ ಭೋಗವನ್ನು ಅನುಭವಿಸಲು ಕಳಿಸಿದನು. ಆ ಪ್ರಕಾರ ಸ್ವರ್ಗದಲ್ಲಿ ರಂಭಾದಿ ಅಪ್ಸರೆಯರೊಡನೆ ಭೋಗಸುಖವನ್ನು ಅನುಭವಿಸುತ್ತಿರಲು, ರಂಭೆಯು ಮುಂದೆ ಇವನಿಗೆ ಘೋರ ನರಕ ಕಾಯ್ದಿದೆಯೆಂದು ತಿಳಿದು ಶಿವನ ಪೂಜಾದಿ ಕಾರ್ಯಗಳಲ್ಲಿ ನಿರತನಾಗೆಂದು ಬೋಧಿಸಿದಳು. ಆತನು ಶಿವಾರಾಧನೆ ಕಾರ್ಯ ಕೈಕೊಂಡನು. ಅಷ್ಟರಲ್ಲಿ ಇವನ ಇಂದ್ರಲೋಕಾದಿ ಸುಖದ ಕಾಲವು ಮುಗಿಯಲು ಶಿವಧ್ಯಾನಾಸಕ್ತನಾದಾಗಲೇ ಯಮನು ಪಾಶದಿಂದ ಬಿಗಿಯಲು ಶಿವನು ತನ್ನ ಭಕ್ತನ ನೆರವಿಗೆ ಬಂದು ಯಮನನ್ನೂ ಸುಟ್ಟು ಶ್ವೇತನಿಗೆ ಸಾಲೋಕ್ಯ ವನ್ನಿತ್ತನು.) ೯೪. ಭಸ್ಮಾಸುರಸಂಹಾರಕಾರಣಕ್ಕಾಗಿ ನಾರೀರೂಪ ಧರಿಸಿದ ವಿಷ್ಣುವೇ ಬಾಣ; ಆತನ ಅಂಗದಿಂದ ಜನಿಸಿದ ಬ್ರಹ್ಮನೇ ಸಾರಥಿ; ಆ ಬ್ರಹ್ಮನ ಹುಟ್ಟಿನ ಸ್ಥಾನವಾದ ಕಮಲದ ಮಿತ್ರ ಶತ್ರುಗಳಾದ ಸೂರ್ಯ ಚಂದ್ರರೇ ರಥದ ಗಾಲಿಗಳು; ಆ ಸೂರ್ಯ ಚಂದ್ರರಿಗೆ ಅಹಿತವುಳ್ಳವನಾದ ರಾಹುವಿನ ರೂಪವಾದ ಆದಿಶೇಷನೇ ಹೆದೆ; ಆ ಆದಿಶೇಷನಿಂದ ಧಾರಣ ಮಾಡಿದ ಭೂಮಿಯೇ ರಥ; ಆ ಭೂಮಿಗೆ ಆಧಾರವಾದ ಮೇರುಪರ್ವತವೇ ಬಿಲ್ಲು; ಆ ಮೇರುಪರ್ವತಾಗ್ರದಲ್ಲಿ ಸಂಚರಿಸುವ ದೇವತೆಗಳಿಗೆ ತೃಪ್ತಿಯನ್ನು ವಿಧಾಯಕ ಮಾಡುವಂಥವುಗಳಾದ ವೇದಗಳೇ ಅಶ್ವಗಳು; ಆ ವೇದ ಗಳನ್ನು ಕದ್ದೊಯ್ದ ರಾಕ್ಷಸರ ಸಜಾತೀಯ ಬಂಧುಗಳಾದ ತಾರಕಾಕ್ಷ, ಮಕರಾಕ್ಷ,

## ೧೦. ಜಲಂಧರ ಸಂಹಾರ ಲೀಲೆ

ಮ॥ ವರಕಂಜೋದ್ಭವನಿಂ ವರಂಬಡೆದು ದಿಕ್ಪಾಲರ್ಕಳಂ ಪೊಯ್ದು ತ
ತ್ತರುಣೀವೃಂದಮನೆಯ್ದೆ ತಂದು ಸೆಱೆಯಂ ದೈತ್ಯಾರಿಯಂ ಕಟ್ಟಿ ಮೇ
ಲಿರದಿಟ್ಟಂದು ಜಲಂಧರಂ ಬರೆ ಜಯಾರ್ಥಂ ವಾರ್ಧಿಯೊಳ್ ಚಕ್ರಮಂ
ಬರೆದಂಗುಷ್ಠದಿನೆತ್ತಿಸುತ್ತೆ ತಲೆಗೊಯ್ದಂ ಶರ್ವನಾ ಚಕ್ರದಿಂ ೯೫

ವಿದ್ಯುನ್ಮಾಲಿಯೆಂಬ ರಾಕ್ಷಸಕ ಮೂರು ಪುರಗಳನ್ನು ಪುರವೈರಿಯಾದ ಶಿವನು ಸುಟ್ಟು ಹಾಕಿದನು. (ತಾರಕಾಸುರನ ಮಕ್ಕಳಾದ ತಾರಕಾಕ್ಷ, ಮುಕರಾಕ್ಷ, ವಿದ್ಯುನ್ಮಾಲಿಯರು ಬ್ರಹ್ಮನಿಂದ ವರವನ್ನು ಪಡೆದು ಆಕಾಶದಲ್ಲಿ ಬಂಗಾರ, ಬೆಳ್ಳಿ, ಕಬ್ಬಿಣಗಳ ಮೂರು ನಗರ ಗಳನ್ನು ನಿರ್ಮಿಸಿಕೊಂಡು ಉದ್ಗರ್ವಿಗಳಾಗಿ ದೇವತೆಗಳಿಗೆ ಹಿಂಸೆಕೊಡುತ್ತಿದ್ದರು. ದಿವ್ಯಸಹಸ್ರವರ್ಷಕ್ಕೊಮ್ಮೆ ಆ ಮೂರು ಪುರಗಳು ಸಂಧಿಸುತ್ತಿದ್ದವು. ಆ ಸಮಯದಲ್ಲಿ ಮಾತ್ರ ಲೋಕವಿಲಕ್ಷಣ ಬಿಲ್ಲು ಬಾಣ ರಥಾದಿ ಸಾಮಾಗ್ರಿಗಳುಳ್ಳವನು ಮಾತ್ರ ಅವರನ್ನೂ ಅವರ ಪಟ್ಟಣಗಳನ್ನೂ ನಾಶಮಾಡಬೇಕಾಗಿತ್ತು. ಅಂತೆಯೇ ಶಿವನು ಮೇಲೆ ಹೇಳಿದ ರೀತಿಯಲ್ಲಿ ಲೋಕವಿಲಕ್ಷಣವಾದ ಯುದ್ಧವನ್ನು ದೇವತೆಗಳೆಲ್ಲ ಸೇರಿ ಮಾಡಬೇಕಾಗಿ ಬಂತು. ದೇವಾಧಿದೇವನಾದ ಶಿವನೇ ಈ ಯುದ್ಧದ ಯೋಧ, ರಕ್ಷಣಾಕರ್ತೃವಾದ ವಿಷ್ಣುವೇ ಬಾಣ, ಬ್ರಹ್ಮ ಸಾರಥಿ, ಭೂಮಿ ರಥ, ಮೇರು ಬಿಲ್ಲು, ಆದಿಶೇಷ ಹಗ್ಗ, ಕನಕ ಗಿರಿಯೇ ಅಚ್ಚು, ಸೂರ್ಯಚಂದ್ರರೇ ಗಾಲಿ, ಸಕಲಶಾಸ್ತ್ರಗಳು ಕೀಲು, ಓಂಕಾರವೇ ನೋಗ, ವೇದಗಳು ಕುದುರೆಗಳು, ದೇವತೆಗಳೇ ಭಟರು, ಈ ರೀತಿ ಸಜ್ಜುಗೊಳಿಸಿಕೊಂಡು ಶರಚಾಪವಿಡಿದು ನಿರೀಕ್ಷಣಾಮಾತ್ರದಿಂದಲೇ ತ್ರಿಪುರಗಳನ್ನು ಸುಟ್ಟ ಶಿವನು ತ್ರಿಪುರಹರ, ತ್ರಿಪುರಧ್ವಂಸಿ, ಪುರಹರ ಇತ್ಯಾದಿ ಹೆಸರು ಪಡೆದನು.) ೯೫. ಶ್ರೇಷ್ಠನಾದ ಬ್ರಹ್ಮನಿಂದ ವರವನ್ನು ಪಡೆದು ಅಷ್ಟದಿಕ್ಪಾಲಕರನ್ನು ಹೊಡೆದು, ಅವರ ಧರ್ಮಪತ್ನಿಯರನ್ನು ಸೆರೆ ಯಲ್ಲಿಟ್ಟು, ಶ್ರೀ ವಿಷ್ಣುವನ್ನು ವಾರುಣಪಾಶದಿಂದ ಕಟ್ಟಿಹಾಕಿ, ಅಷ್ಟಕ್ಕೂ ಸುಮ್ಮನಿರದೆ, ಶಿವನ ಮೇಲೆ ಯುದ್ಧಕ್ಕೆ ಹೊರಟು ಶಿವನಿದ್ದಲ್ಲಿಗೆ ಬರಲಾಗಿ, ಸಮುದ್ರದಲ್ಲಿ ಅಂಗುಷ್ಠ ದಿಂದ ಚಕ್ರವನ್ನು ಬರೆದು, ಅದನ್ನು ಎತ್ತಿ ತಿರುಗಿಸಿಬಿಟ್ಟ ಶಿವನು ಆ ಜಲಂಧರನ ಶಿರ ವನ್ನು ಕತ್ತರಿಸಿದನು. (ಬೆಟ್ಟನೊಳು ಬರೆದ ಚಕ್ರವ ಜಲಂಧರನಿಗೆ ಕೊಟ್ಟು ಶಿರವರಿದುದು ನಿನ್ನ ಪಾದ–ನಿಜಗುಣ ಶಿವಯೋಗಿ ಕೈವಲ್ಯಪದ್ಧತಿ). (ಇದೇ ಜಲಂಧರ ಸಂಹಾರ ಲೀಲೆ). (ದೇವೇಂದ್ರನು ದಾಯಾದಿಗಳಾದ ರಾಕ್ಷಸರನ್ನು ಗೆದ್ದು ಗರ್ವಿಷ್ಠನಾಗಿ ತನಗೆ ಯೋಗ್ಯನಾದ ವೈರಿಯು ಬೇಕೆಂದು ಶಿವನಲ್ಲಿ ಕೇಳಿದನು. ಶಿವನಿಗೆ ಈ ಮಾತಿನಿಂದ ಕೋಪ ಬಂತು. ಕನಿಷ್ಠನಾದ ಇವನನ್ನು ಸುಟ್ಟುಬಿಡಬೇಕೆಂದು ಹಣೆಗಣ್ಣಿನ ಒಂದು ಕಿಡಿಯನ್ನು ಹೊರಗೆ ಉಗುಳಿದನು. ಅಷ್ಟರಲ್ಲಿ ಬೃಹಸ್ಪತಿಯು ಬಂದು ಕ್ಷಮಿಸಬೇಕೆಂದು ಕೇಳಿಕೊಳ್ಳಲು ಆ ಕಿಡಿಯನ್ನು ಹಿಡಿದು ಸಮುದ್ರಕ್ಕೆಸೆದು, ನಿನಗೆ ಶತ್ರುವನ್ನು ಕೊಟ್ಟೆ

## ೧೧. ಬ್ರಹ್ಮಶಿರಚ್ಛೇದನ ಲೀಲೆ

ಉ॥ ಪುಟ್ಟಿಪೆನೀ ಜಗತ್ರಯಮನೆನ್ನೊಳೆ ವಿಶ್ವಮಿದಿರ್ಕುಮಾಗಳುಂ
ನೆಟ್ಟನೆ ಬೊಮ್ಮವಾನೆನುತಹಂಕರಿಸುತ್ತಿರೆ ವಿಷ್ಣು ವೇದಮಂ
ಪುಟ್ಟಿಸಿದಾತನೆಮ್ಮನಭವಂ ಪರಬೊಮ್ಮನೆನಲ್ಕನಲ್ದು ಬೊ
ಟ್ಟಿಟ್ಟೊಡೆ ಬೊಮ್ಮನೊಂದು ತಲೆಯುಂ ಪಱಿದಾಂತನವಂ ಸದಾಶಿವಂ ೯೬

ದ್ದೇನೆ ಹೋಗೆಂದನು. ಆ ಕಿಡಿಯು ಬಾಲಕನಾಗಿ ಗಂಗೆಯು ಸಮುದ್ರಕ್ಕೆ ಕೂಡಿದ ಸ್ಥಳದಲ್ಲಿ ಅಳುತ್ತಿರಲು, ಅಲ್ಲಿ ಇಂದ್ರನನ್ನು ಗೆಲ್ಲುವಂಥ ಮಗನನ್ನು ಪಡೆಯಲು ತಪಸ್ಸು ಮಾಡುತ್ತಿದ್ದ ಸಿಂಧುರಾಜನು ಆ ಅಳುವನ್ನು ಕೇಳಿ ಅಲ್ಲಿಗೆ ಹೋಗಿ ಆ ತೇಜಸ್ವಿಯಾದ ಮಗುವನ್ನೆತ್ತಿಕೊಂಡನು. ಅಷ್ಟರಲ್ಲಿ ಆ ಮಗುವು ಬ್ರಹ್ಮಾಂಡವು ಒಡೆಯುವಂತಹ ಧ್ವನಿತೆಗೆದು ಅಳುತ್ತಿರಲು ಆ ಧ್ವನಿ ಕೇಳಿ ಬ್ರಹ್ಮನು ಅಲ್ಲಿಗೆ ಬಂದನು. ಸಿಂಧುರಾಜನು ಆ ಶಿಶುವನ್ನು ಬ್ರಹ್ಮನ ಕೈಗೆ ಕೊಟ್ಟನು. ಬ್ರಹ್ಮನು ತನ್ನ ತೊಡೆಯ ಮೇಲೆ ಆ ಮಗುವನ್ನು ಇಟ್ಟುಕೊಂಡು ನೋಡುತ್ತಿದ್ದಂತೆಯೇ ಬ್ರಹ್ಮನ ನೀಳವಾದ ಗಡ್ಡವನ್ನು ಆ ಮಗುವು ಎಳೆಯಲು, ಬ್ರಹ್ಮನ ಕಣ್ಣಿನಿಂದ ನೀರುದುರಿ ಮಗುವಿನ ಮೇಲೆ ಬೀಳಲು ಬ್ರಹ್ಮನು ಜಲಂಧರ ಎಂದು ಅದಕ್ಕೆ ಹೆಸರಿಟ್ಟನು. ಸಿಂಧುರಾಜನಿಗೆ ಯಾರಿಂದ ಈ ಮಗುವು ಜನಿಸಿದೆಯೊ ಅವನಿಂದಲೇ ಇದಕ್ಕೆ ಮರಣವಲ್ಲದೆ ಬೇರಿಲ್ಲವೆಂದನು. ಮುಂದೆ ಅದೇ ಜಲಂಧರನು ದೊಡ್ಡವನಾಗಿ ದೇವತೆಗಳಿಗೆ ತೊಂದರೆ ಕೊಡಲು, ದೇವತೆಗಳು ಶಿವನನ್ನು ಪ್ರಾರ್ಥಿಸಿ ಅವನಿಂದಲೇ ಜಲಂಧರನನ್ನು ಕೊಲ್ಲಿಸಿದರು.) ೯೬. ಈ ಜಗತ್ರಯಗಳನ್ನು ನಾನೇ ಸೃಷ್ಟಿಸಿದ್ದೇನೆ. ನನ್ನಲ್ಲಿಯೇ ಈ ವಿಶ್ವವು ಯಾವಾಗಲೂ ಇದೆ. ನಾನೇ ಪರಬ್ರಹ್ಮ -ಎಂದು ಬ್ರಹ್ಮನು ಅಹಂಕಾರದಿಂದ ಕೂಡಿರಲು, ವಿಷ್ಣುವು ವೇದಗಳನ್ನೂ ನಮ್ಮನ್ನೂ ಹುಟ್ಟಿಸಿದವನು ಶಿವನು. ಅವನೇ ಪರಬ್ರಹ್ಮನು ಎನ್ನಲು, ಕೋಪಗೊಂಡು ಬ್ರಹ್ಮನು ಬೊಬ್ಬಿಡುತ್ತಿರಲು, ಪರಮೇಶ್ವರನು ಕೋಪಗೊಂಡು (ಭೈರವನ ಆಕಾರದಿಂದ ಬಂದು) ಅವನ ಒಂದು ತಲೆಯನ್ನು ಕತ್ತರಿಸಿ ಅದನ್ನು ಬ್ರಹ್ಮಕಪಾಲವೆಂದು ತನ್ನ ಕಯ್ಯಲ್ಲಿ ಧರಿಸಿದನು. (ಇದು ಬ್ರಹ್ಮಶಿರಚ್ಛೇದನ ಲೀಲೆ) (ಒಂದು ದಿನ ಬ್ರಹ್ಮನು ದೇವಸಭೆಯನ್ನು ಕರೆದು ತಾನು ಸಿಂಹಾಸನಾರೂಢನಾಗಿ ಕುಳಿತಿದ್ದನು. ಆಗ ಆ ಸಭೆಯಲ್ಲಿ 'ನಿತ್ಯರಾದವರಾರು ? ಜಗತ್ಪೂಜ್ಯತೆ ಯಾರಿಗೆ ಸಲ್ಲಬೇಕು' ಎಂಬ ವಿಷಯವು ಚರ್ಚೆಗೆ ಬಂದಿತು. ಆಗ ಬ್ರಹ್ಮನು ಸಚರಾಚರದ ಜನನ, ರಕ್ಷಣ, ಪ್ರಳಯಾದಿ ವ್ಯವಹಾರಗಳು ತನ್ನಿಂದಲೇ ನಡೆಯುತ್ತವೆ. ತನಗಿಂತಲೂ ಶ್ರೇಷ್ಠರಾದವರು ಯಾರೂ ಇಲ್ಲ ಎಂದು ಅಹಂಕಾರಪಡುತ್ತಿರಲು, ಅಲ್ಲಿಗೆ ಅಷ್ಟುಹೊತ್ತಿಗೆ ಬಂದ ವಿಷ್ಣುವು ಶಿವನ ಮಹಿಮಾತಿಶಯವನ್ನು ಹೊಗಳುತ್ತ–ಎಲೈ ಬ್ರಹ್ಮನೇ, ವೃಥಾ ಗರ್ವಪಡಬೇಡ. ನಾವೆಲ್ಲ ಆ ಪರಮೇಶ್ವರನ ವಿನೋದಸೂತ್ರದ ಬೊಂಬೆಗಳು. ಅವನು ನಿತ್ಯನು. ಜನನ ಮರಣಗಳೆರಡೂ ಇಲ್ಲದವನು. ಅವನ ಹಾಗೆ ನಮಗೆ

## ೧೨. ದಕ್ಷಯಜ್ಞ ಸಂಹಾರ ಲೀಲೆ (ವೀರಭದ್ರ ಲೀಲೆ)

ದಕ್ಷನೊಡರ್ಚೆ ಮಾರಣ ಮಹಾಮಖಮಂ ನಿಜವೈರದಿಂದೆ ಕೇ
ಳ್ದಕ್ಷಯರೂಪೆ ತತ್ಸುತೆಯೆನಿಪ್ಪುದನಂಬಿಕೆ ಪೋಗಿ ನೀಗೆ ಕೇ
ಳ್ದಾಕ್ಷಣಮುಗ್ರಮೂರ್ತಿ ತಳೆದೈದಿ ತದಾಪ್ತರನಿಕ್ಕಿ ಸೊರ್ಕಿದಾ
ದಕ್ಷನ ಮಸ್ತಕಂಗಡಿದು ವೀರಸಮಾಹ್ವಯನಾದನೀಶ್ವರಂ ೯೭

ನಿತ್ಯತ್ವವಿಲ್ಲ. ನಾದಬಿಂದುಗಳು ಪಂಚವಿಂಶತಿತತ್ತ್ವಗಳು ಯಾರಿಂದ ಆದುವೆಂಬುದನ್ನು ವೇದಗಳನ್ನೇ ಕೇಳಿನೋಡು ಎಂದು ಹೇಳಲಾಗಿ ವೇದಗಳು ಒಂದೊಂದಾಗಿ ಹರನು ನಿತ್ಯನೆಂದೂ, ಸರ್ವತಂತ್ರಸ್ವತಂತ್ರನೆಂದೂ, ಉಳಿದವರೆಲ್ಲ ಕಾಲಕಲ್ಪಿತವೆಂದೂ ನುಡಿದವು. ಇದಕ್ಕೂ ಒಪ್ಪದೆ ಇದ್ದಾಗ ಪರಮೇಶ್ವರನೇ ಪಂಚವದನನಾಗಿ ಅಲ್ಲಿಗೆ ಬಂದನು. ಬ್ರಹ್ಮನು ತಾನೇನು ಕಡಿಮೆ ಎಂದು ತಾನೂ ಪಂಚವದನನಾಗಿ ಪರಮೇಶ್ವರನ ಎದುರಿಗೆ ನಿಂತನು. ಈ ರೀತಿ ಗರ್ವದಿಂದ ವರ್ತಿಸುವ ಬ್ರಹ್ಮನ ಒಂದು ತಲೆಯನ್ನು ಪರಶಿವನು ಭೈರವಾಕೃತಿಯನ್ನು ತಳೆದು ತನ್ನ ಉಗುರಿನಿಂದಲೇ ಆವನ ಒಂದು ತಲೆಯನ್ನು ಚಿವುಟಿದನು. ಪುನಃ ಬ್ರಹ್ಮನ ಪ್ರಾರ್ಥನೆಯ ಮೇರೆಗೆ ಅದನ್ನು ಕಪಾಲವಾಗಿ ಕೈಯಲ್ಲಿ ಧರಿಸಿದನು. ಶಿವ ತತ್ತ್ವ ಚಿಂತಾಮಣಿ) ೯೭. ತನ್ನ ಮೇಲಿನ ವೈರದಿಂದ ದಕ್ಷನು ಮಾರಣ ಮಹಾಯಜ್ಞವನ್ನು ಮಾಡುತ್ತಿದ್ದನು. ಇದನ್ನು ಕೇಳಿದ ಕ್ಷಯರಹಿತರೂಪೆಯೂ ಆ ದಕ್ಷನ ಮಗಳೂ ಆದ ದಾಕ್ಷಾಯಿಣಿಯು (ಅಂಬಿಕೆಯು) ಅಲ್ಲಿಗೆ ಹೋಗಿ, ತಾನು ಅವನ ಸಂಬಂಧದ ತನ್ನ ದೇಹವನ್ನು ಅಲ್ಲಿ ನೀಗಿದಳು. ಇದನ್ನು ಕೇಳಿದ ಶಿವನು ಆಕ್ಷಣವೇ ಉಗ್ರಮೂರ್ತಿಯ ರೂಪ ಧರಿಸಿ, ಅಲ್ಲಿಗೆ ಹೋಗಿ, ಅವನ ಆಪ್ತರನ್ನೆಲ್ಲ ಕೊಂದು, ಗರ್ವಿಷ್ಟನಾದ ದಕ್ಷನ ತಲೆಯನ್ನು ಕಡಿದು ವೀರಭದ್ರನೆಂಬ ಹೆಸರನ್ನು ಶಿವನು ತಳೆದನು. (ಇದೇ ದಕ್ಷಯಜ್ಞ ಸಂಹಾರಲೀಲೆ ಅಥವಾ ವೀರಭದ್ರಲೀಲೆ ಎನಿಸುವುದು). (ಒಮ್ಮೆ ದಕ್ಷನು ತಾನು ದೇವತೆಗಳಿಗೆ ಹೆಣ್ಣುಮಕ್ಕಳನ್ನೂ ಅಳಿಯಂದಿರನ್ನೂ ನೋಡಿ ಬರಬೇಕೆಂಬ ಇಚ್ಛೆಗೊಂಡು ಹೋಗಿ, ಎಲ್ಲೆಲ್ಲೂ ಗೌರವಾದರಗಳನ್ನು ಸ್ವೀಕರಿಸಿ, ಇನ್ನೊಬ್ಬ ಅಳಿಯ ಮತ್ತು ಮಗಳಾದ ಶಿವದಾಕ್ಷಾಯಿಣಿಯರನ್ನು ಕಾಣಲು ಕೈಲಾಸಕ್ಕೆ ಬಂದನು. ಅಲ್ಲಿ ಶಿವನ ಮಹಾವೈಭವವನ್ನು ಕಂಡು ಸಂತೋಷಗೊಂಡನಾದರೂ ದಂಪತಿಗಳಿಬ್ಬರೂ ತನಗೆ ತಕ್ಕ ಪುರಸ್ಕಾರ ನೀಡಲಿಲ್ಲವೆಂದು ಕೋಪಗೊಂಡು, ಐಶ್ವರ್ಯದ ಮದದಿಂದ ಇವನು ನನ್ನನ್ನು ಉದಾಸೀನ ಮಾಡಿದ್ದಾನೆ. ಇವನ ಐಶ್ವರ್ಯವನ್ನು ಹೇಗೆ ಅಗ್ನಿಗೆ ಆಹುತಿ ಮಾಡಲಿ ಎಂದು ಯೋಚಿಸಿ ಹರಿಬ್ರಹ್ಮರಲ್ಲಿ ಬಂದು ಅವರನ್ನೂ ಒಪ್ಪಿಸಿ ಅಶ್ವಮೇಧಯಾಗವನ್ನು ಮಾಡಲು ಗಂಗಾದ್ವಾರದ ಬಳಿಯೇ ಯಜ್ಞಶಾಲೆಯನ್ನು ನಿರ್ಮಿಸಿ ಯಜ್ಞದೀಕ್ಷಿತನಾದನು. ಕುದುರೆಯ ರಕ್ಷಣೆಗೆ ಹರಿಯನ್ನೇ ನೇಮಿಸಿದನು. ಅನೇಕ ದೇವತೆಗಳಿಂದಲೂ ಮುನಿಗಳಿಂದಲೂ ಯಜ್ಞಕಾರ್ಯ ನಡೆಯಿತು. ದಧೀಚಿಯು ಬಂದು ಶಿವನಿಂದಾಮಯವಾದ ಈ ಯಜ್ಞ ಮಂಗ

## ೧೩. ಶರಭಲೀಲೆ ವಿಷ್ಣು ಕಂಧರಪಾತನ ಲೀಲೆ

ಘೋರ ಹಿರಣ್ಯಕಶಿಪು ರುಧಿರೋನ್ಮದಿರಾಮದ ಮತ್ತನಾಗಿ ದೈ
ತ್ಯಾರಿ ನೃಸಿಂಹಮೂರ್ತಿದಳಿದರ್ದಿಸುತಂತಿರೆ ಲೋಕಮಂ ಮನೋ
ಜಾರಿ ವಿಚಾರಿಸುತ್ತೆ ಶರಭಾಕೃತಿದಾಳ್ದಿರದೈದಿ ಸೀಳ್ದು ರ
ಕ್ತಾರುಣಚರ್ಮಮಂ ತಳೆದತಿದ್ಯುತಿ ತತ್ತಮಮಂ ಕಳಲ್ಚಿದಂ ೯೮

ಳಾಂತವಾಗದೆಂದನು. ದಾಕ್ಷಾಯಿಣಿಯು ನಂದೀಶ್ವರನೊಡನೆ ಶಿವನ ಅಪ್ಪಣೆ ಪಡೆದು ಬಂದು ತಂದೆಗೆ ಬುದ್ಧಿ ಹೇಳಿದಳು. ಅದು ವ್ಯರ್ಥವಾಯಿತು. ಇನ್ನು ಈತನ ಸಂಬಂಧದ ಈ ದೇಹ ಧರಿಸಬಾರದೆಂದು ತನ್ನ ಯೋಗಾಗ್ನಿಗೆ ದೇಹವನ್ನು ಆಹುತಿಗೊಟ್ಟು ಗಿರಿರಾಜ ಪತ್ನಿಯಾದ ಮೇನೆಯ ಗರ್ಭದಲ್ಲಿ ಪಾರ್ವತಿಯಾಗಿ ಹುಟ್ಟಿದಳು. ಈ ವಾರ್ತೆಯನ್ನು ನಂದೀಶ್ವರನು ಶಿವನಿಗೆ ತಿಳಿಸಲಾಗಿ ಕೋಪಗೊಂಡ ಶಿವನು ಭಯಂಕರ ವೀರಭದ್ರಾವತಾರ ತಳೆದು ಬಂದು ದಕ್ಷನ ಯಾಗವನ್ನು ಧ್ವಂಸಮಾಡಿ, ದಕ್ಷನ ತಲೆಯನ್ನು ಕಡಿದು ಅವನಿಗೆ ಕುರಿಯತಲೆಯನ್ನು ಹಚ್ಚಿದನು.–ಚೆನ್ನಬಸವ ಪುರಾಣ–ವಿರೂಪಾಕ್ಷಪಂಡಿತ) ೯೮. ಅತಿ ಭಯಂಕರನೂ, ಬಂಗಾರವರ್ಣದಂತೆ ಕಣ್ಣುಳ್ಳವನೂ ಆದ ಹಿರಣ್ಯಕಶ್ಯಪನ ರಕ್ತವೆಂಬ ಉನ್ಮತ್ತತೆಯನ್ನುಂಟುಮಾಡುವ ಮದ್ಯಪಾನದಿಂದ ಮತ್ತನಾಗಿ ವಿಷ್ಣುವು ನೃಸಿಂಹಾ ಕಾರದಿಂದ ಲೋಕವನ್ನೇ ನಾಶಮಾಡುತ್ತಿರಲು, ಪರಮೇಶ್ವರನು ಈ ವಿಚಾರವನ್ನು ತಿಳಿದು ಶರಭಾಕೃತಿ ತಾಳಿ, ಅವನಲ್ಲಿಗೆ ಬಂದು ಸೀಳಿಹಾಕಿ, ರಕ್ತವರ್ಣದಿಂದ ಕೆಂಪಾದ ಚರ್ಮವನ್ನು ಧರಿಸಿ, ಅತಿಕಾಂತಿಯುಕ್ತನಾಗಿ ಆ ನೃಸಿಂಹನಿಂದ ಲೋಕಕ್ಕುಂಟಾದ ಹಿಂಸೆ ಯೆಂಬ ಕತ್ತಲೆಯನ್ನು (ಅಥವಾ ಆ ನೃಸಿಂಹನಲ್ಲಿ ಆವರಿಸಿದ್ದ ಕೋಪವೆಂಬ ತಮವನ್ನು) ದೂರಮಾಡಿದನು.) (ಕಶ್ಯಪಋಷಿಯ ಹೆಂಡತಿಯಾದ ದಿತಿ ಎಂಬುವಳ ಗರ್ಭದಲ್ಲಿ ಹುಟ್ಟಿದ ಹಿರಣ್ಯಕಶ್ಯಪನೆಂಬ ರಾಕ್ಷಸನು ತಪಸ್ಸನ್ನು ಮಾಡಿ ಬ್ರಹ್ಮನನ್ನು ಮೆಚ್ಚಿಸಿ, ತನಗೆ ಇದುವರೆಗೆ ಭೂಮಿಯಲ್ಲಿ ಸೃಷ್ಟಿಮಾಡಿರುವ ಪ್ರಾಣಿಗಳಿಂದಲೂ, ಇದುವರೆಗೆ ಇರುವ ಅಸ್ತ್ರಶಸ್ತ್ರಗಳಿಂದಲೂ, ಹಗಲು ಅಥವಾ ರಾತ್ರಿ, ಮನೆಯೊಳಗೆ ಅಥವಾ ಹೊರಗೆ ಮರಣವಾಗದ ಹಾಗೆ ವರಬೇಕೆಂದು ಬೇಡಿ ಪಡೆದನು. ಈ ಕಾರಣದಿಂದ ಆ ಹಿರಣ್ಯಕಶ್ಯಪನಿಗೆ ಅತಿಗರ್ವವುಂಟಾಗಿ ದೇವತೆಗಳ ಮೇಲೆ ದ್ರೋಹ ಬಗೆಯುತ್ತ, ತಾನೇ ಜಗನ್ನಿಯಾಮಕನು ಎಂದು ಹೊಗಳಿಸಿಕೊಳ್ಳುತ್ತ ಇದ್ದನು. ಈ ಹಿರಣ್ಯಕಶ್ಯ ಪನ ಗರ್ಭದಿಂದ ದೈವಭಕ್ತನೂ ಸಜ್ಜನನೂ ಆದ ಪ್ರಹ್ಲಾದನೆಂಬ ಮಗನು ಹುಟ್ಟಿ ವೈಷ್ಣವಭಕ್ತಿಸಂಪನ್ನನಾಗಿದ್ದನು. ವಿಷ್ಣುವೂ ಸರ್ವಾಂತರ್ಯಾಮಿಯೆಂದು ತೋರಿಸಿ ಕೊಡಲು ಹಿರಣ್ಯಕಶ್ಯಪನು ತೋರಿಸಿದ ಕಂಬದಿಂದಲೇ ವಿಷ್ಣುವು ನೃಸಿಂಹಾಕಾರ ಗೊಂಡು ಬಂದು ಹಗಲು ಸಂಜೆ ಎರಡೂ ಅಲ್ಲದ ಸೂರ್ಯಾಸ್ತ ಸಮಯದಲ್ಲಿ ತನ್ನ ತೊಡೆಯ ಮೇಲಿಟ್ಟುಕೊಂಡು, ಅವನ ಮನೆಯ ಹೊಸ್ತಿಲ ಮೇಲೆಯೇ

## ೧೪. ಅರ್ಧನಾರೀಶ್ವರ ಲೀಲೆ

ಸ್ರ॥ ಕ್ಷೀರಾಂಭೋರಾಶಿಯೊಳ್ ಶ್ರೀಪತಿಯಿರೆ ಬದಿಯೇಳ್ತಂದು ಯುದ್ಧಂಗುಡಲ್ತ
ಳ್ತೋರೋರ್ವರ್ಪಾಶುಪತಾಸ್ತ್ರದಿನಿಡೆ ಶಿಖಿಯಿಂ ಬೇಯೆ ಲೋಕಂ ಕೃಪಾಕೂ
ಪಾರಂ ವಾರಾಶಿಯೊಳ್ ಪ್ರಜ್ವಲಿಸಿ ಬಳೆದು ತನ್ಮಧ್ಯದೊಳ್ ಲಿಂಗರೂಪಂ
ಸಾರುತ್ತಂದರ್ಧನಾರೀಶ್ವರನವರ್ಗಖಿಳರ್ಗಳ್ಕಱಂ ತಣ್ಪುಗೈದಂ ೯೯

ತನ್ನ ತೀಕ್ಷ್ಣನಖಗಳಿಂದ ಹಿರಣ್ಯಕಶ್ಯಪನನ್ನು ಕೊಂದು ಅವನ ರಕ್ತಪಾನಮಾಡಿದನು. ದೇವತೆಗಳು ಎಷ್ಟು ಪ್ರಾರ್ಥನೆ ಮಾಡಿದರೂ ಕೇಳದೆ ಉನ್ಮತ್ತ ನೃಸಿಂಹನು ಲೋಕಕಂಟಕನಾಗತೊಡಗಲು ದೇವತೆಗಳು ಶಿವನ ಮರೆಹೊಕ್ಕರು. ಶಿವನು ರುದ್ರಾಂಶದಿಂದ ಶರಭಪಕ್ಷಿಯ ರೂಪಧರಿಸಿ ನಾರಸಿಂಹನನ್ನು ಕೊಂದನು.) ೯೯. ಕ್ಷೀರ ಸಮುದ್ರದಲ್ಲಿ ಶ್ರೀ ವಿಷ್ಣುವು ಇರುತಿರಲಾಗಿ, ಬ್ರಹ್ಮನು ಬಂದು ಯುದ್ಧವನ್ನು ಸಾರಿದನು. ಇಬ್ಬರಿಗೂ ಯುದ್ಧವು (ಘನಘೋರವಾಗಿ) ಉಂಟಾಗಲು ಒಬ್ಬೊಬ್ಬರೂ ಪಾಶುಪತಾಸ್ತ್ರವನ್ನು ಪ್ರಯೋಗಿಸಿದರು. ಈ ಕಾರಣದಿಂದ ಲೋಕವೆಲ್ಲ ಬೆಂಕಿಯಿಂದ ಬೇಯತೊಡಗಿತು. ಕೃಪಾಸಮುದ್ರನಾದ ಶಿವನು ಆ ಸಮುದ್ರಮಧ್ಯದಿಂದಲೇ ಜಾಜ್ವಲ್ಯಮಾನನಾಗಿ ಕಾಣಿಸಿಕೊಂಡು, ಅವರಿಬ್ಬರ ಮಧ್ಯದಲ್ಲಿ ಬೆಳೆದು ಲಿಂಗಾಕೃತಿಯನ್ನು ವ್ಯಕ್ತಪಡಿಸುತ್ತ, ಅರ್ಧನಾರೀಶ್ವರ ರೂಪನಾಗಿ ಕಾಣಿಸಿಕೊಂಡು ವಿಷ್ಣು ಬ್ರಹ್ಮರಿಗೂ ಲೋಕಕ್ಕೂ ಬಂದ ಕಂಟಕವನ್ನು ತಪ್ಪಿಸಿ ತಂಪನ್ನುಂಟುಮಾಡಿದನು. (ಗಣಪತಿಯ ಶಾಪದ ಫಲವಾಗಿ-ಹರಿ ಬ್ರಹ್ಮರಿಬ್ಬರಿಗೆ ನಾ ಹೆಚ್ಚು ತಾ ಹೆಚ್ಚೆಂಬ ವಾಗ್ವಾದ ಬೆಳೆಯಿತು. ಬ್ರಹ್ಮನು ತನ್ನೊಡಲಿನಲ್ಲಿ ಹದಿನಾಲ್ಕು ಲೋಕಗಳನ್ನು ತೋರಿಸಿದನು. ಆಗ ನಾರಾಯಣನು ಬ್ರಹ್ಮನ ಶರೀರದೊಳಗಾದನು. ವಿಷ್ಣುವು ಹೊರಗೆ ಬರಲು ಪ್ರಯತ್ನಿಸಲಾಗಿ ಬ್ರಹ್ಮನು ತನ್ನ ದ್ವಾರಗಳನ್ನೆಲ್ಲ ಬಂಧಿಸಿದನು. ವಿಷ್ಣುವು ಉಪಾಯಗಾಣದೆ ಅಧೋಭಾಗ (ಗುದ) ದಿಂದ ಹೊರಹೊರಟು ಬಂದನು. ಆದ್ದರಿಂದಲೇ ವಿಷ್ಣುವಿಗೆ 'ಅಧೋಕ್ಷಜ' ಎಂಬ ಹೆಸರಾಯಿತು. ಹಾಗೆಯೇ ಬ್ರಹ್ಮನೂ ಕೂಡ ವಿಷ್ಣುವಿನ ಶರೀರದೊಳಗೆ ಪ್ರವೇಶಿಸಿ, ಅವನ ನಾಭಿಕಮಲವನ್ನು ಭೇದಿಸಿಕೊಂಡು ಹೊರಗೆ ಬಂದುದರಿಂದ ಅವನಿಗೆ 'ಕಮಲಸಂಭವ' ಎಂಬ ಹೆಸರಾಯಿತು. ಮುಂದೆ ಇವರಿಬ್ಬರಿಗೂ ಘನಘೋರ ಯುದ್ಧವಾಗಿ ಇಬ್ಬರೂ ಪಾಶುಪತಾಸ್ತ್ರ ಪ್ರಯೋಗ ಮಾಡಲಾಗಿ ಶಿವನು ಇವರಿಬ್ಬರ ಮಧ್ಯದಲ್ಲಿ ಉಮಾಸಹಿತ ಒಂದೇ ಆಕೃತಿದೋರಿ ಯುದ್ಧ ನಿಲ್ಲಿಸಿ ಬುದ್ಧಿ ಹೇಳಿದನು. ಗ್ರಂಥಾಂತರದಲ್ಲಿ ಅರ್ಧನಾರೀಶ್ವರ ಲೀಲೆಯ ಕಥೆ ಬೇರೆ ರೀತಿಯಲ್ಲಿರುವುದು—ಚೆನ್ನಬಸವ

## ೧೫. ಕಿರಾತಲೀಲೆ

ಮ॥ ಮಗಳೆಂದೀಕ್ಷಿಸದೆಂಟೆ ಭಾರತಿ ಮೃಗೀರೂಪೀದವಳ್ಪಾರೆ ತಾಂ
ಮಿಗೆ ತನ್ನೊಂದು ಪಶುತ್ವಮಂ ಪ್ರಕಟಿಪಂತಾಂತಲ್ಲಿ ತದ್ರೂಪಮಂ
ಬಗೆಗೊಂಡಟ್ಟಲವಳ್ ಶಿವಂಗವಿದಿಡಲ್ ಶ್ವಾಕಾರದಿಂ ವೇದಮಂ
ಘ್ರಿಗಳಂ ಘ್ರಾಣಿಸುತೆಯ್ದೆ ತಚ್ಛಿರಮನೆಚ್ಚಂ ಕೇಳ್ಕಿರಾತೇಶ್ವರಂ ೧೦೦

## ೧೬. ಕಂಕಾಳಧರ ಲೀಲೆ

ಉ॥ ಆಱಡಿಗೊಂಡು ಮೂಱಡಿಯಿನಾ ಬಲಿಯಿಂ ಬಲಿಗೊಂಡು ಭೂಮಿಯಂ
ಮೂಱಡಿಯಾಂತು ಮೀಱಿ ಬಳೆದಿತ್ತನನಿಕ್ಕಿ ರಸಾತಳಕ್ಕೆ ನಿಂ
ದಾಱಡಿವಣ್ಣದಾಗಸಕೆ ಕಾಲಿಡೆ ಖಂಡಿಸೆ ಬೊಮ್ಮನಿಟ್ಟನೀ
ರ್ಮಾಱಡಿಯಿಂದೆ ಕೊಲ್ವನನೆ ಕೊಂದವನಸ್ಥಿಯಸಾಂತನಾ ಪರಂ ೧೦೧

ಪುರಾಣ, ಶಿವತತ್ತ್ವ ಚಿಂತಾಮಣಿಯನ್ನು ನೋಡಿರಿ). ೧೦೦. ಸರಸ್ವತಿಯನ್ನು ತನ್ನ ಮಗಳೆಂದು ನೋಡದೆ ಅವಳನ್ನು (ಭೋಗಾಪೇಕ್ಷೆಯಿಂದ) ಮುಟ್ಟಲಾಗಿ, ಆ ಸರಸ್ವತಿಯು ಹೆಣ್ಣುಜಿಂಕೆಯ ರೂಪಧರಿಸಿ ಓಡಿಹೋಗಲು, ಬ್ರಹ್ಮನೂ ಕೂಡ ತನ್ನ ಒಂದು ಬಗೆಯ ಪಶುಭಾವವನ್ನು ಪ್ರಕಟಪಡಿಸುವಂತೆ, ತಾನೂ ಗಂಡು ಜಿಂಕೆಯ ರೂಪವನ್ನು ಧರಿಸಿ (ಓಡಿಹೋಗುತ್ತಿರುವ ಸರಸ್ವತಿಯನ್ನು) ಬೆನ್ನಟ್ಟಿಹೋದನು. ಅವಳು ಶಿವನಲ್ಲಿ ಮೊರೆಯಿಡಲು, ಶಿವನು ಕಿರಾತ ರೂಪಧರಿಸಿ ನಾಲ್ಕು ವೇದಗಳನ್ನು ನಾಲ್ಕು ನಾಯಿಗಳನ್ನಾಗಿ ಮಾಡಿಕೊಂಡು ಹೊರಟನು. ವೇದಗಳು ಶಿವನ ಪಾದಗಳನ್ನು ಆಘ್ರಾಣಿಸುತ್ತ ಬಂದವು. ಶಿವನು ಗಂಡುಜಿಂಕೆಯ ರೂಪದಲ್ಲಿರುವ ಬ್ರಹ್ಮನ ಶಿರಸ್ಸನ್ನು ಕತ್ತರಿಸಿ ಹಾಕಿದನು. (ಇದೇ ಕಿರಾತಲೀಲೆ–ಅರ್ಜುನನಿಗೆ ವರಪ್ರದಾನ ಮಾಡಲು ಕಿರಾತ ರೂಪಧರಿಸಿ ಹೋಗಿ ಅವನೊಡನೆ ಯುದ್ಧ ಮಾಡಿದ ಲೀಲೆಯನ್ನು ಕಿರಾತ ಲೀಲೆಯೆಂದು ಕರೆಯುವುದುಂಟು) (ಬ್ರಹ್ಮನ ಶಿರಚ್ಛೇದನಾನಂತರ ಅವನು ಶಿವನಲ್ಲಿ ತನ್ನ ತಪ್ಪನ್ನೊಪ್ಪಿ, ನನ್ನ ಈ ಮೃಗ ರೂಪದ ಚಿಹ್ನೆಯು ಶಾಶ್ವತವಾಗಿರುವಂತೆ ಮಾಡಬೇಕೆಂದು ಬೇಡಿಕೊಂಡನು. ಶಿವನು ಕರುಣಿಸಿ ಆ ಮೃಗರೂಪದ ಕಳೇಬರವನ್ನು ಅಂತರಿಕ್ಷದ ನಕ್ಷತ್ರ ಸಮೂಹದಲ್ಲಿ ಮೃಗಶಿರಾ ನಕ್ಷತ್ರವಾಗಿರುವ ಹಾಗೆ ಕರುಣಿಸಿ ಅದನ್ನು ಶಾಶ್ವತಗೊಳಿಸಿದನು. ಹೆಣ್ಣುಜಿಂಕೆಯಾದ ಭಾರತಿಯನ್ನು ತನ್ನ ಕಯ್ಯಲ್ಲಿ ಧರಿಸಿದನು. ಆದ್ದರಿಂದಲೇ ಶಿವನಿಗೆ 'ಮೃಗಧರ' ಎಂಬ ಹೆಸರು ಬಂದಿತೆಂದು ಪುರಾಣಾದಿಗಳಲ್ಲಿ ಹೇಳಲಾಗಿದೆ.) ೧೦೧. ಹಗೆತನವನ್ನು ಹೊಂದಿ ಮೂರು ಪಾದಗಳಿಂದ ಬಲಿಚಕ್ರವರ್ತಿಯಿಂದ ಬಲಿಯನ್ನಾಗಿ ತೆಗೆದುಕೊಂಡು (ದಾನವನ್ನಾಗಿ ಸ್ವೀಕರಿಸಿ) ಮೂರು ಪಾದಗಳನ್ನು ಧರಿಸಿ, ಮೀರಿ ಬೆಳೆದು ದಾನಕೊಟ್ಟ ಬಲಿಯನ್ನೇ ರಸಾತಳಕ್ಕೆ ತುಳಿದು ನಿಂತು, ದುಂಬಿಯ ಬಣ್ಣದ ಆಕಾಶಕ್ಕೆ ಕಾಲನ್ನಿಡಲಾಗಿ ಬ್ರಹ್ಮನು ಇಟ್ಟ ಅಂದರೆ ಶಿವನ ಚರಣವಾಗದಿದ್ದರೆ ನಾಶವಾಗಲೆಂದು ಶಾಪ ಪೂರ್ವಕವಾಗಿ ಇಟ್ಟಂಥ ಕಮಂಡಲೋದಕವು ಆ ಕಾಲನ್ನು (ವಾಮನಮೂರ್ತಿಯ

## ೧೭. ಚಂಡೀಶ್ವರಾನುಗ್ರಹ ಲೀಲೆ

ನುಣ್ಮಳಲಿಂದೆ ಮಾಡಿ ಶಿವಲಿಂಗಮನರ್ಚಿಸಿ ಧೇನುವೃಂದಮಂ
ಜಾಣ್ಮೆಗೆ ತಂದು ಪಾಲ್ಗರೆಚಿಯೆ ಕಂಡೊದೆಯುತ್ತಿರೆ ತಂದೆ ಬಂದದಂ
ಪೊಣ್ಮೆ ಕನಲ್ಕೆ ಕೈಗೊಡಲಿಯಿಂದವನಂ ಪೊಡೆದಿಕ್ಕಿ ಮಿಕ್ಕು ಕೈ
ಗಣ್ಮದ ಚಂಡನೆನ್ನ ಸುತನೆಂದು ಗಣೇಶತೆಯಿತ್ತನೀಶ್ವರಂ ೧೦೨

ಕಾಲನ್ನು) ಕತ್ತರಿಸಿ ಹಾಕಲಾಗಿ, ಉಳಿದ ತುಂಡು ಕಾಲುಗಳಿಂದಲೇ ಕೊಲ್ಲಲು ಹೋದ ಆ ವಾಮನನನ್ನೇ ಕೊಂದು ಅವನ ಅಂದರೆ ಆ ತ್ರಿವಿಕ್ರಮನ ಮೂಳೆಯನ್ನು (ಎಲುಬನ್ನು) ಆ ಹರನು ಖಟ್ವಾಂಗವನ್ನಾಗಿ ಧರಿಸಿದನು. (ವಿರೋಚನನೆಂಬ ರಾಕ್ಷಸನ ಮಗನಾದ ಬಲಿಚಕ್ರವರ್ತಿಯು ಇಂದ್ರಾದಿಗಳನ್ನು ಜಯಿಸಿ ತ್ರಿಲೋಕ ಸಾಮ್ರಾಜ್ಯಸುಖವನ್ನು ಅನುಭವಿಸುತ್ತ ಇದ್ದು, ಕೊಡುವವನು ಇದ್ದರೂ ಕೇಳುವವರೇ ಇಲ್ಲವೆಂದು ಗಂಟೆಯನ್ನು ಹೊಡೆಸುತ್ತ ಇದ್ದನು. ದೇವತೆಗಳು ಅದಿತಿಯ ಗರ್ಭದಿಂದ ವಾಮನನನ್ನು ಪಡೆದು ಮೂರಡಿ ಭೂಮಿಯನ್ನು ಬಲಿಯಲ್ಲಿ ಬೇಡಿ ಪಡೆಯಲು ಕಳಿಸುವರು. ಬಲಿಯು ಗರ್ವದಿಂದ ವಾಮನನಿಗೆ ಮೂರಡಿ ಭೂಮಿಯನ್ನು ದಾನವಾಗಿ ಕೊಡುವನು. ಬಲಿಯು ತ್ರಿವಿಕ್ರಮಾಕಾರವಾಗಿ ಬೆಳೆದು ಒಂದಡಿಯಿಂದ ಭೂಮಿಯನ್ನೂ ಇನ್ನೊಂದಡಿಯಿಂದ ಆಕಾಶವನ್ನೂ ಅಳೆದು ಬಲಿಯನ್ನು ಪಾತಾಳಕ್ಕೆ ಮೆಟ್ಟಿದನು. ಆಕಾಶದಲ್ಲಿಟ್ಟ ಅಡಿಯನ್ನು ಬ್ರಹ್ಮನು ಕಂಡು ಇದೇನಾಶ್ಚರ್ಯ, ಈ ಕಾಲು ಶಿವನ ಕಾಲಿನಂತೆ ಇದೆಯಲ್ಲಾ ಎಂದುಕೊಂಡು, ಇದು ಶಿವನ ಪಾದವಾಗದೆ ಇದ್ದಲ್ಲಿ ನಾಶವಾಗಲೆಂದು ಶಾಪಕೊಟ್ಟನು. ತ್ರಿವಿಕ್ರಮನ ಆ ಕಾಲು ತುಂಡಾಗಿ ಕತ್ತರಿಸಿ ಬಿತ್ತು. ಅದರಿಂದಲೇ 'ಕುಟಲ' ವೆಂಬ ನದಿಯುಂಟಾಯಿತು. ಆಗ ತ್ರಿವಿಕ್ರಮನು ಮೊಂಡಗಾಲಿನಿಂದಲೇ ಲೋಕಗಳನ್ನು ತುಳಿದುಬಿಡುತ್ತೇನೆಂದು ಬರುತ್ತಿರಲು, ಶಿವನು ಅವನನ್ನು ಕೊಂದು ಅವನ ಬೆನ್ನೆಲುಬನ್ನು ಖಡ್ವಾಂಗವೆಂಬ ಕಂಕಾಳವನ್ನಾಗಿ ಮಾಡಿ, ಅದನ್ನು ಧರಿಸಿ ಕಂಕಾಳಧರನೆನ್ನಿಸಿದನು. ಗ್ರಂಥಾಂತರದಲ್ಲಿ ಈ ಕಥೆ ಬೇರೆ ಇದೆ. ಚನ್ನಬಸವಪುರಾಣ, ಶಿವತತ್ತ್ವ ಚಿಂತಾಮಣಿಗಳನ್ನು ನೋಡಿರಿ.) ೧೦೨. ನುಣ್ಣನೆಯ ಮಳಲಿನಿಂದ (ಶಿವಲಿಂಗವನ್ನು ಮಾಡಿ, ಅದನ್ನು ಪೂಜಿಸಿ, ತನ್ನ ಆಕಳುಗಳ ಸಮೂಹವನ್ನು ಸಾಧುಗಳನ್ನಾಗಿ ಮಾಡಿಕೊಂಡು ಆ ಶಿವಲಿಂಗದ ಮೇಲೆ ಹಾಲನ್ನು ಕರೆಯುತ್ತಿರಲು (ಇದನ್ನು ತಿಳಿದ) ತಂದೆಯು ಬಂದು, ದಿನ ದಿನವೂ ಹಸುಗಳ ಹಾಲನ್ನು ಈ ಮಳಲಿನ ಲಿಂಗದ ಮೇಲೆ ಕರೆಯುತ್ತಿರುವನಲ್ಲಾ ! ಎಂದು ನೋಡಿ ಲಿಂಗವನ್ನು ಒದೆಯಲಾಗಿ, ಕೈಯೊಳಗಿನ ಕೊಡಲಿಯಿಂದ ಚಂಡೇಶನು ತನ್ನ ತಂದೆಯೆಂಬ ಅಭಿಮಾನವನ್ನು ಮಿಕ್ಕಿ ಹೊಡೆದು ಕೊಂದು ಹಾಕಲು, ಶಿವನು ಕೈಮಿಕ್ಕಿ ತಂದೆಯನ್ನು ಕೊಂದ ಚಂಡನು ನನ್ನ ಮಗನು ಎಂದು ಅವನ ಭಕ್ತಿಗೆ ಮೆಚ್ಚಿ ಅವನಿಗೆ ಗಣಪದವಿಯನ್ನು ಕೊಟ್ಟನು. (ಸತ್ಯಸಂಧನೆಂಬುವನು ಬಾಲನಾಗಿರುವಾಗ ಅಡವಿ

## ೧೮. ವಿಷಾಪಹರಣ ಲೀಲೆ

ಸ್ರ॥ ದೂರ್ವಾಸಂ ಶಂಭು ನಿರ್ಮಾಲ್ಯಮನಮರವರಂಗೀಯೆ ತಾನೊಲ್ಲದಿರ್ಪಾ
ಗರ್ವಂಗಂಡಬ್ಧಿಯೊಳ್ ಮೇಣ್ಮೆರಪೆ ಸಿರಿಯನೀಶಾಜ್ಞೆಯಿಂ ಶೇಷನಂ ತಂ
ದುರ್ವೀಧ್ರಕ್ಕುರ್ವಿ ಸುತ್ತುತ್ತೊಡನೆ ಕಡೆಯೆ ದೇವಾದಿದೇವರ್ಮಹಾಶಾ
ಪೂರ್ವಂ ಪುಟ್ಟಿರ್ದ ಮೃತ್ಯುಪ್ರಭವಿಷಮನದಂ ಕಂಠದೊಳ್ ಶರ್ವನಾಂತಂ ೧೦೩

ಯಲ್ಲಿ ಹಸುಗಳನ್ನು ಕಾಯುತ್ತ ಶಿವಭಕ್ತಿಯನ್ನು ಪ್ರಕಟಿಸುತ್ತಿದ್ದನು. ಹೀಗಿರುತ್ತ ದನ ಕಾಯುವ ಅಡವಿಯಲ್ಲಿಯೇ ಒಂದು ಶಿವಲಿಂಗವನ್ನು ನಿರ್ಮಿಸಿ, ಅದರ ಮೇಲೆ ಗೋವು ಗಳ ಹಾಲನ್ನು ಅಭಿಷೇಕಕ್ಕೆ ಗುಟ್ಟಾಗಿ ಸುರಿಸುತ್ತಿದ್ದನು. ಈ ವಿಷಯವು ತಂದೆಗೆ ತಿಳಿಯ ಲಾಗಿ ಅವನು ಬಂದು ಮಗನ ಈ ಕೃತ್ಯವನ್ನು ಕಣ್ಣಾರ ಕಂಡು ಕೋಪಗೊಂಡವನಾಗಿ ಮಗನು ಮಾಡಿದ ಆ ಲಿಂಗವನ್ನು ಕಾಲಿನಿಂದ ತುಳಿದುಬಿಟ್ಟನು. ಸತ್ಯಸಂಧನು ತಂದೆ ಯನ್ನು 'ಲಿಂಗದ್ರೋಹಿ ಪಿತನಿವನ ಸುಡಲಿ' ಎನ್ನುತ್ತ ಕೈಯಲ್ಲಿನ ಕೊಡಲಿಯಿಂದ ಅವನ ಕಾಲನ್ನು ಕತ್ತರಿಸಿದನು. ಆಗ ಪರಮೇಶ್ವನು ಇವನ ದೃಢಭಕ್ತಿಗೆ ಮೆಚ್ಚಿ ಅಹುದೋ ! ನೀನು ಬಾಲಮಾಹೇಶ್ವರಂ ಚಂಡನೆನುತ ಗಣಪದವಿಯನ್ನಿತ್ತನು. ಇದು ಶಿವತತ್ತ್ವ ಚಿಂತಾಮಣಿಯಲ್ಲಿ ಬಂದ ಕಥೆ. ಚೆನ್ನಬಸವ ಪುರಾಣದಲ್ಲಿ ಚಂಡೇಶನ ಈ ಕಥೆಯನ್ನು ವಿರೂಪಾಕ್ಷಪಂಡಿತನು ಸೇರಿಸಿಲ್ಲ.) ೧೦೩. ಅಮರವರನಾದ ಇಂದ್ರನಿಗೆ ದೂರ್ವಾಸಮಹರ್ಷಿಗಳು ಪರಮೇಶ್ವರನ ಪ್ರಸಾದವನ್ನು ಕೊಡಲಾಗಿ, ಇಂದ್ರನು ತಾನು ಒಲ್ಲದವನಾದನು. ಇವನ ಈ ಗರ್ವವನ್ನು ಕಂಡು ಸಮುದ್ರದಲ್ಲಿ ಅವನ ತ್ರೈಲೋಕ್ಯಾಧಿ ಪತ್ಯವನ್ನು ಕೂಡಿಸಿಬಿಡಲು, ಅಂದರೆ–ಅವನ ತ್ರೈಲೋಕ್ಯಾಧಿಪತ್ಯವು ಹೋಗುವಂತೆ ಶಾಪ ವನ್ನಿತ್ತನು. (ಪುನಃ ಅದನ್ನು ಪಡೆಯಲು) ಶಿವನ ಅಪ್ಪಣೆಯಂತೆ ಆದಿಶೇಷನನ್ನು ಕರೆ ತಂದು ಮೇರುಪರ್ವತಕ್ಕೆ ಹಬ್ಬಿಸಿ, ಸುತ್ತಿ ದೇವಾಸುರರೆಲ್ಲ ತೀವ್ರವಾಗಿ ಕಡೆಯಲು ಹುಟ್ಟಿದ ಮೃತ್ಯು ಸಮಾನವಾದ ಕಾಳಕೂಟವಿಷವನ್ನು ಶಿವನು ತನ್ನ ಕಂಠದಲ್ಲಿ ಧರಿಸಿ ದನು. (ಒಮ್ಮೆ ದೂರ್ವಾಸನು ಕೈಲಾಸದಿಂದ ಬರುವಾಗ ಶಿವನ ಪ್ರಸಾದರೂಪವಾಗಿ ಮಂದಾರಕುಸುಮಮಾಲಿಕೆಯನ್ನು ತಂದು ದೇವತೆಗಳ ಅರಸನಾದ ದೇವೇಂದ್ರನಿಗೆ ಕೊಟ್ಟನು. ದೇವೇಂದ್ರನು ಉದಾಸೀನತೆಯಿಂದ ಆ ಮಾಲೆಯನ್ನು ತನ್ನ ಆನೆಯಾದ ಐರಾವತದ ಗಂಡಸ್ಥಳದ ಮೇಲೆ ಹಾಕಿದನು. ಅದಕ್ಕೆ ಮುಕುರಿದ ದುಂಬಿಗಳು ಆನೆಯ ಗಂಡಸ್ಥಳದಲ್ಲಿ ಮದೋದಕಕ್ಕೆ ಮುತ್ತಲು ಅದು ಆ ಮಾಲಿಕೆಯನ್ನು ತನ್ನ ಸೊಂಡಿಲಿ ನಿಂದ ಎತ್ತಿ, ನೆಲಕ್ಕಿಕ್ಕಿ ಕಾಲಿನಿಂದ ತುಳಿಯಿತು. ದೇವೇಂದ್ರನ ಈ ಉದಾಸೀನತೆಯಿಂದ ಕೋಪಗೊಂಡ ದೂರ್ವಾಸನು ನಿನ್ನ ಐಶ್ವರ್ಯವೆಲ್ಲ ಸಮುದ್ರದ ಪಾಲಾಗಲೆಂದು ಶಾಪ ಕೊಟ್ಟನು. ದೇವೇಂದ್ರನ ಐಶ್ವರ್ಯವೆಲ್ಲ ನಾಶವಾದುದನ್ನು ಕಂಡ ದೇವತೆಗಳು ಶಿವನಲ್ಲಿ ಮೊರೆಯಿಡಲಾಗಿ ಶಿವನು ಪುನಃ ಐಶ್ವರ್ಯಪಡೆಯಲು ಕ್ಷೀರಸಾಗರವನ್ನು ದೇವಾಸುರರೆಲ್ಲ

## ೧೯. ಚಕ್ರಪ್ರದಾನ ಲೀಲೆ

ಚಂ॥ ಸುರರಿಪುಬಾಧೆಗಳ್ಕುತೆ ಮುರಾರಿ ಪುರಾರಿಪದಾರವಿಂದಮಂ
ಸರಸಿಜದಿಂ ಸಹಸ್ರದೆ ಸಮರ್ಚಿಪ ವೇಳೆಯೊಳೊಂದು ಕುಂದೆ ಕ
ಣ್ಮಲರನನೂನಭಕ್ತಿಭರದಿಂ ತೆಗೆದೇಱಿಸೆ ಮೆಚ್ಚಿ ಚಕ್ರಮಂ
ಸುರುಚಿರಲೋಚನಾಬ್ಜಮನಮರ್ತ್ಯನದೀಧರನಿತ್ತನುರ್ವಿಪಾ ೧೦೪

ಕೂಡಿ ಮಥನಮಾಡಿರೆಂದು ಸಲಹೆ ಕೊಡಲು, ದೇವಾಸುರರು ಸೇರಿ ಮೇರು ಪರ್ವತವನ್ನು ಕಡಗೋಲನ್ನಾಗಿ ಮಾಡಿ ಆದಿಶೇಷನನ್ನು ಹಗ್ಗವನ್ನಾಗಿಮಾಡಿ ಕಡೆದರು. ಆಗ ಬಂದ ಕಾಲಕೂಟವಿಷ ಮೂರುಲೋಕಗಳನ್ನೂ ಸುಡತೊಡಗಲು ಶಿವನು ಲೋಕರಕ್ಷಣಾರ್ಥವಾಗಿ ಆ ವಿಷವನ್ನು ಕೈಗೆ ತೆಗೆದುಕೊಂಡು ಬಾಯಿಗೆ ಹಾಕಿ ನುಂಗುವಷ್ಟರಲ್ಲಿ ಉಮೆಯು ಕುತ್ತಿಗೆಯ ಬಳಿ ಕೈಹಿಡಿದು ನೀನು ಇದನ್ನು ನುಂಗಿದರೆ ನಿನ್ನ ಗರ್ಭದಲ್ಲಿರುವ ೧೪ ಲೋಕಗಳಿಗೆ ನಾಶವೆಂದಳು. ಶಿವನು ಆ ವಿಷವನ್ನು ಕುತ್ತಿಗೆಯಲ್ಲೇ ಧರಿಸಿ ನೀಲಕಂಠನೆನಿಸಿದನು.) ೧೦೪. ಎಲೈ ಸತ್ಯೇಂದ್ರಚೋಳಮಹಾರಾಜನೇ ಕೇಳು, ರಾಕ್ಷಸಕ ಬಾಧೆಗಳಿಗೆ ಹೆದರುತ್ತ ಶ್ರೀವಿಷ್ಣುವು ಪರಮೇಶ್ವರನ ಪಾದಕಮಲಗಳನ್ನು ಸಹಸ್ರ ಕಮಲ (ದಿನಾಲು) ಪುಷ್ಪಗಳಿಂದ ಅರ್ಚಿಸುವ ವೇಳೆಯಲ್ಲಿ (ಒಂದು ದಿನ) ಒಂದು ಹೂವು ಕಡಿಮೆಯಾಗಿರಲಾಗಿ, ಪರಿಪೂರ್ಣ ಭಕ್ತಿಯ ಭರದಲ್ಲಿದ್ದ ವಿಷ್ಣುವು ತನ್ನ ಕಣ್ಣನ್ನೇ ಕಿತ್ತು ಪುಷ್ಪರೂಪವಾಗಿ ಏರಿಸಿ ಪೂಜೆಮುಗಿಸಲು ಗಂಗಾಧರನು ಅವನಿಗೆ ಚಕ್ರವನ್ನು ಪ್ರದಾನ ಮಾಡಿದನು ಮತ್ತು ಮನೋಹರವಾದ ಕಮಲದಂತಹ ಕಣ್ಣನ್ನು ಕೊಟ್ಟನು (ದುಷ್ಟ ದಾನವರನ್ನುಕೊಂದು ಧರ್ಮವನ್ನು ಪರಿಪಾಲಿಸ ಬೇಕೆಂದು ಹರನು ವಿಷ್ಣುವಿಗೆ ಆಜ್ಞಾಪಿಸಲು ದುಷ್ಟದೈತ್ಯವನ್ನೂ ಹಾಳುಮಾಡುವ ಅಚಲವಾದ ಆಯುಧವನ್ನು ದಯಪಾಲಿಸಬೇಕೆಂದು ಹರಿಯು ವೇದಮಂತ್ರಗಳಿಂದ ಭಾವಶುದ್ಧಿಯಿಂದ ಕೈಮುಗಿದು ನಿಂತಿರಲು, ಶಿವನು ಅತಿಕರುಣೆಯಿಂದ ಸೋಮ ಸೂರ್ಯಾಗ್ನಿಗಳೇ ಅಧಿದೇವತೆಗಳಾಗಿರುವ ಅತುಳ ಬಳದ ಚಕ್ರವನ್ನು ವಿಷ್ಣುವಿಗೆ ಕೊಟ್ಟನು. ಶಿವ ನಿರೂಪದಿಂದ ಉಮೆಯೂ ಕೂಡ ವದನ ನಯನದಿಂದ ಶಂಖ ಪದ್ಮಗಳನ್ನು ಸೃಜಿಸಿ ವಿಷ್ಣುವಿಗೆ ಕೊಟ್ಟಳು. ಪುನಃ ಶಿವನು ವಿಷ್ಣುವಿಗೆ ಧರ್ಮಸಂಸ್ಥಾಪನಾಕಾರ್ಯದಲ್ಲಿ ಅಧಿಕತರವಾದ ಶಕ್ತಿಯುಂಟಾಗಲೆಂದು ಗದೆ, ಕಿರೀಟ, ಕೌಸ್ತುಭ, ಗರುಡ ಮೊದಲಾದುವುಗಳನ್ನು ಕೊಟ್ಟು ಅನುಗ್ರಹಿಸಿದನು.— ಶಿವತತ್ತ್ವ ಚಿಂತಾಮಣಿ.) (ವಿಷ್ಣುವು ಶಿವನನ್ನು ಮೆಚ್ಚಿಸಿ ಶಿವನಲ್ಲಿರುವ ಚಕ್ರವನ್ನು ಪಡೆಯಬೇಕೆಂದು ಉಗ್ರತಪಸ್ಸನ್ನಾಚರಿಸಿದನು. ಈಶ್ವರನು ಸಂತುಷ್ಟನಾಗಿ ವರವನ್ನು ಬೇಡೆನ್ನಲು, ವಿಷ್ಣು ನಿನ್ನ ಆಜ್ಞೆಯ ಪ್ರಕಾರ ಲೋಕರಕ್ಷಣೆಯನ್ನು ಮಾಡುತ್ತಿರಲು ರಾಕ್ಷಸರ ಹಾವಳಿ ಹೆಚ್ಚಾಗಿ ಹಾಳು ಮಾಡುತ್ತಿರುವರು. ನಿನ್ನ ಕೈಯ ಚಕ್ರವನ್ನು ಕೊಟ್ಟರೆ ದುಷ್ಟರನ್ನು ಶಿಕ್ಷಿಸುವೆನು ಎನ್ನಲು ಶಿವನು ಕರುಣಿಸಿ ತನ್ನ ಚಕ್ರವನ್ನು ಇತ್ತನು–ಚೆನ್ನ

## ೨೦. ವಿಘ್ನಸಂಹಾರ ಲೀಲೆ

ಉ॥ ವಾರಣದೈತ್ಯವೈರಿ ವರವಾರಣವಕ್ತ್ರನನೊಲ್ದು ಪೆತ್ತು ದಿ
ವ್ಯಾರುಣರತ್ನಮಂಡನಮನಿತ್ತು ಚತುರ್ದಶವಿದ್ಯೆಗಳ್ಗೆವಂ
ಕಾರಣನೆಂಬವೊಲ್ನೆಗಳ್ದು ಕಟ್ಟಿ ಗಣಾಧಿಪಪಟ್ಟಮಂ ಭವೋ
ತ್ತಾರಣ ಪಂಚವಕ್ತ್ರನೆಸೆದಂ ಕನಕಾದ್ರಿಯೊಳದ್ರಿಜಾನ್ವಿತಂ ೧೦೫

ಬಸವ ಪುರಾಣ) ೧೦೫. ಗಜಾಸುರನೆಂಬ ಹೆಸರಿನ ಆನೆಗೆ ವೈರಿಯಾದ ಪರಶಿವನು ಶ್ರೇಷ್ಠ ವಾದ ಆನೆಯಮುಖದ ಗಣಪತಿಗೆ ಒಲಿದು ಪಡೆದನು. ಅವನಿಗೆ ದಿವ್ಯವಾದ ಕೆಂಪುರತ್ನದ ಆಭರಣಗಳನ್ನು ಕೊಟ್ಟು ಹದಿನಾಲ್ಕು ವಿದ್ಯೆಗಳಿಗೆ ಇವನೇ ಕಾರಣಪುರುಷನೆಂದು ಗೊತ್ತು ಪಡಿಸಿ,ಪ್ರಮಥಗಣಾ ಪಟ್ಟಾಭಿಷೇಕವನ್ನು ಅಭವನೂ, ಪಂಚಮುಖಗಳುಳ್ಳವನೂ ಆದ ಪರ ಮೇಶ್ವರನು ಮಾಡಿ, ಸುವರ್ಣಪರ್ವತವಾದ ಮೇರುಗಿರಿಯಲ್ಲಿ ಪಾರ್ವತೀ ಸಮೇತನಾಗಿ ಪ್ರಕಾಶಿಸುತ್ತಿದ್ದನು. (ಪೂರ್ವದಲ್ಲಿ ಅಗಸ್ತ್ಯಋಷಿಯ ಶಾಪದಿಂದಾಗಿ ಒಬ್ಬ ಗಂಧರ್ವನು ಮದೋನ್ಮತ್ತ ದುಷ್ಟಗಜವಾಗಿ ಹುಟ್ಟಿದನು. ಶಿವನೊಬ್ಬನಿಂದಲ್ಲದೆ ಅವನನ್ನು ಕೊಲ್ಲುವ ಸಾಮರ್ಥ್ಯ ಇನ್ನಾರಿಗೂ ಇರಲಿಲ್ಲ. ಉನ್ಮತ್ತನಾದ ಈ ಗಜಾಸುರನಿಂದ ದೇವತೆಗಳಿಗೂ ಬಾಧೆಯುಂಟಾಯಿತು. ಇಂದ್ರಾದಿ ದೇವತೆಗಳು ಯಥಾಪ್ರಕಾರ ಶಿವನಲ್ಲಿ ಮೊರೆಯಿಟ್ಟರು. ಈಶ್ವರನು ದೇವತೆಗಳಿಗೆ ಅಭಯವಿತ್ತು ಸಕಲ ಸೈನ್ಯದೊಡನೆ ಗಜಾ ಸುರನನ್ನು ಸಂಹರಿಸಲು ಹೊರಟನು. ಹರಿಬ್ರಹ್ಮರೂ ಗಜಾಸುರನೊಡನೆ ಭಯಂಕರ ಹೋರಾಟ ಮಾಡಿದರು. ಕೊನೆಗೆ ಮಹೇಶ್ವರನು ತನ್ನ ಪಿನಾಕದಲ್ಲಿ ಬಾಣ ಹೂಡಿ ಆನೆಯ ತಲೆಯನ್ನು ಕತ್ತರಿಸಿದನು. ಆಗ ಗಂಧರ್ವನು ನಿಜರೂಪತಾಳಿ ಶಿವನಿಗೆ ಎರಗಿ ದನು. ಶಿವನು ಗಂಧರ್ವನ ಪ್ರಾರ್ಥನೆಯಂತೆ ಆ ಆನೆಯ ಚರ್ಮವನ್ನು ಧರಿಸಿದನು. ಆ ಶಿರಸ್ಸನ್ನು ಕೈಯಲ್ಲಿ ಹಿಡಿದು ಕೈಲಾಸಕ್ಕೆ ಬಂದನು. ಪಾರ್ವತಿಯು ತನ್ನ ಮೆಯ್ಯ ಮಣ್ಣಿನಿಂದಾದ ಮಗನು ಬಾಗಿಲಲ್ಲಿದ್ದು ಈಶ್ವರನನ್ನು ಒಳಗೆ ಬಿಡದಿರಲು ಕೋಪಗೊಂಡ ಶಿವನು ಅವನ ತಲೆಯನ್ನು ಆಕಾಶದಲ್ಲಿ ಹಾರಿಸಿದನು. ಮಗನು ಸತ್ತ ಸುದ್ದಿಯನ್ನು ಕೇಳಿದ ಪಾರ್ವತಿ ಸಂಕಟಗೊಳ್ಳಲು ಶಿವನು 'ನಿನ್ನ ಮಗನಿದ್ದಾನೆ ನೋಡು ಬಾ' ಎಂದು ತನ್ನ ಕಯ್ಯ ಆನೆಯ ಮುಖವನ್ನೇ ಆ ಬಾಲಕನಿಗೆ ಅಂಟಿಸಿದನು. ಪಾರ್ವತಿಯು ಈ ವಿಕೃತಮುಖದಿಂದ ದುಃಖಗೊಂಡಳು. ಆಗ ಶಿವನು ವಿಕಾರಮುಖವೆಂದು ದುಃಖಿ ಸಬೇಡ ಎಂದು ಗಣಪದವಿಯನ್ನು ಆ ಹುಡಗನಿಗೆ ಕೊಟ್ಟು ಸಕಲ ವಿಧ್ಯಾಧಿದೇವತೆಯು

## ೨೧. ಉಮಾಸ್ಕಂದ ಲೀಲೆ

ಚಂ॥ ಅಸುರನ ಬಾಧೆಗಳ್ಕಿ ಶಿಖಿಯಂ ಕರೆದಟ್ಟೆ ಮೃಡಂ ಮೃಡಾನಿಯೊ
ಳ್ಸುಸಿಲೆಸಪಲ್ಲಿಗೆಯ್ದುತದು ತದ್ಘನವೀರ್ಯಮನೀಂಟೆ ವಹ್ನಿವ
ಕ್ತ್ರಸಮಿತಿ ಗರ್ಭಮಾಂತು ಶರದೊಳ್ಪಸಿಱಿಂ ಕೊಱೆದಿಕ್ಕೆ ಕೃತ್ತಿಕಾ
ವಿಸರವಿವರ್ಧಿತಂ ಗುಹಸಮಾಹ್ವಯನೊಪ್ಪಿದನಾ ಮೃಡಾಂಕದೊಳ್ ೧೦೬

ಸ್ನಾಗಿ ಮಾಡಿದನು-ಚೆನ್ನಬಸವ ಪುರಾಣ) ೧೦೬. ತಾರಕಾಸುರ ಬಾಧೆಗೆ ಹೆದರಿಹೋದ ದೇವತೆಗಳು ಅಗ್ನಿಯನ್ನು ಕರೆದು ಶಿವಪಾರ್ವತಿಯರ ಭೋಗಸಮಯಕ್ಕೆ ಅಲ್ಲಿಗೆ ಅಟ್ಟಿದರು. ಅಗ್ನಿಯು ಶಿವನ ಘನತರವಾದ ವೀರ್ಯವನ್ನು ಕುಡಿದುದರಿಂದ ಅಗ್ನಿಯೇ ಮುಖವಾಗಿ ಉಳ್ಳ ದೇವತೆಗಳೆಲ್ಲರೂ ಗರ್ಭಧಾರಣ ಮಾಡಿದರು. ಆ ಗರ್ಭವನ್ನು ಅವರು ತಾಳಲಾರದೆ ಶರವಣಕ್ಷೇತ್ರಕ್ಕೆ ಬಂದು ಗರ್ಭವನ್ನು ಕೊರೆದು ಅಲ್ಲಿಕ್ಕಿದರು. ಆ ಗರ್ಭಪಿಂಡವು ಷಟ್‌ಕೃತ್ತಿಕೆಯರಿಂದ ಬೆಳೆದ ಗುಹನೆಂಬ ಪುತ್ರನು ಪರಮೇಶ್ವರನ ತೊಡೆಯ ಮೇಲೆ ಒಪ್ಪಿದನು. (ತಾರಕಾಸುರನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅವನಿಂದ ಯಾರಿಂದಲೂ ಮರಣವಾಗದಂತಹ ವರವನ್ನು ಕೇಳಿದನು. ಬ್ರಹ್ಮನು ಹುಟ್ಟಿದವನು ಸಾಯಲೇಬೇಕು. ಆದರೆ ಊರ್ಧ್ವರೇತಸ್ಕನಾದ ಪರಶಿವನ ಅಂಶದಿಂದ ಹುಟ್ಟಿದ ಮಗನಿಂದಲ್ಲದೆ ಯಾರಿಂದಲೂ ಸಾಯುವುದಿಲ್ಲವೆಂದು ವರಕೊಟ್ಟನು. ಈ ವರದಿಂದ ಗರ್ವಿತನಾದ ತಾರಕನು ದೇವಲೋಕಕ್ಕೇ ಮುತ್ತಿಗೆ ಹಾಕಿ ದೇವತೆಗಳನ್ನೆಲ್ಲ ಸೆರೆಹಿಡಿದನು. ದೇವತೆಗಳು ಸಮಾಧಿಸ್ಥನಾದ ಶಿವನಲ್ಲಿ ಪಾರ್ವತಿಯನ್ನು ಕಳುಹಿಸಿ ಮನ್ಮಥನ ಮೂಲಕ ಶಿವನ ತಪೋಭರದ ಬೆಸುಗೆ ಬಿಡಿಸಿದರು. ಆದರೆ ಶಿವನು ಮನ್ಮಥನನ್ನೂ ಸುಟ್ಟುಹೋದನಲ್ಲದೆ ಪಾರ್ವತಿಯನ್ನೂ ಲಗ್ನವಾಗಲಿಲ್ಲ. ಮುಂದೆ ಪಾರ್ವತಿಯು ಘೋರತಪಸ್ಸುಮಾಡಿ ಶಿವನನ್ನು ಲಗ್ನವಾದಳು. ಆದರೆ ಶಿವಪಾರ್ವತಿಯರು ಅನೇಕ ವರ್ಷಗಳವರೆಗೆ ಕ್ರೀಡಿಸಿದರು. ದೇವತೆಗಳು ಅಗ್ನಿಗೆ ನೀನು ಹೋಗಿ ಈಶ್ವರನ ರೇತಸ್ಸನ್ನು ಕುಡಿದು ಬಾರೆಂದು ಕಳಿಸಲು ಅವನು ಬಂದು ಶಿವನ ರೇತಸ್ಸನ್ನು ಕುಡಿದನು. ಇದರ ಪರಿಣಾಮವಾಗಿ ಅಗ್ನಿಗೆ ಮುಖರಾದ ದೇವತೆಗಳಿಗೆ ಗರ್ಭವುಂಟಾಯಿತು. ಅಗ್ನಿಯ ಮಾತಿನಂತೆ ಅದನ್ನು ತಾಳಲಾರದ ದೇವತೆಗಳು ಮೇರುವಿನ ಸಮೀಪದಲ್ಲಿರುವ ಶರವಣದಲ್ಲಿ ಆ ಗರ್ಭಪಾತ ಮಾಡಿದರು. ಅಲ್ಲಿಗೆ ಬಂದ ಷಟ್ಕೃತ್ತಿಕೆಯರು ಆ ಗರ್ಭಪಿಂಡವನ್ನು ನೋಡಲು ಅವರು ಗರ್ಭಧರಿಸಿ ಶಿಶುಗಳನ್ನು ಪಡೆದು ಅಲ್ಲಿಯೇ ಇರಿಸಿಹೋದರು. ಅನಂತರ ಹರಿಬ್ರಹ್ಮರು ಶಿವನೊಡನೆ ಅಲ್ಲಿಗೆ ಬಂದು ಆ ಕುಮಾರನಿಗೆ ತಾರಕನನ್ನು ಕೊಂದು ನಮ್ಮನ್ನು ರಕ್ಷಿಸೆಂದು ಬೇಡಲಾಗಿ ಹುಟ್ಟಿದ ಏಳನೆಯ ದಿವಸದಲ್ಲಿಯೇ ತಾರಕನನ್ನು ಕೊಂದು ದೇವತೆಗಳಿಗೆ ಸುಖನೀಡಿದನು.

## ೨೨. ಏಕಪಾದ ಲೀಲೆ

ಪದಕಟಕಾಹಿಗಳ್ಕಿ ಕಳೆಗುಂದೆ ರವೀಂದುಗಳಲ್ಲಿ ಕಿಳ್ತು ಸೂ
ಸಿದ ನವರೌಪ್ಯ ಕಿಂಕಿಣಿಗಳಂತಿರೆ ತೋಱಿ ಪೊದಳ್ದ ತಾರೆಗಳ್
ವಿದಿತ ನಭಃಕಟಾಹತಟಮಂ ಬಗಿದುರ್ವಿ ಶಿವೈಕಪಾದಮಾ
ಳ್ದುದು ಬಹಿರಂಬುಸಂಭವನವಾಂಬುಜಮೆಂಬ ಬೆಡಂಗನುರ್ವಿಪಾ ೧೦೭

ಚೆನ್ನಬಸವಪುರಾಣ.) ೧೦೭. ಎಲೈ ಸತ್ಯೇಂದ್ರಚೋಳಮಹಾರಾಜನೇ, ಪರಮೇಶ್ವರನು ಪಾದದಲ್ಲಿ ಧರಿಸಿದ್ದ ಹಾವುಗಳ ತೊಡಿಗೆ (ಆಭರಣ) ಗಳನ್ನು ರಾಹು ಕೇತುಗಳೆಂದು ಭಾವಿಸಿ ಸೂರ್ಯ ಚಂದ್ರರು ಕಳೆಗುಂದಿದರು. ನಕ್ಷತ್ರಗಳು ಬೆಳ್ಳಿಯ ಸಣ್ಣ ಗೆಜ್ಜೆಗಳು ಕಿತ್ತು ಚಲ್ಲಾಪಿಲ್ಲಿಯಾಗಿರುವಂತೆ ತೋರುತ್ತಿದ್ದವು. ವಿಖ್ಯಾತವಾದ ಆಕಾಶವೆಂಬ ದೊಡ್ಡ ಕೊಪ್ಪರಿಗೆಯ ದಡವನ್ನೂ ಭೇದಿಸಿಕೊಂಡು ಹಬ್ಬಿ, ಹೊರಗಿನ ಆವರಣವೆಂಬ ಸಮುದ್ರದ ನೀರಿನಲ್ಲಿ ಹುಟ್ಟಿದ ಕಮಲವೋ ಎನ್ನುವ ಶೋಭೆಯಿಂದ ಶಿವನ ಒಂದು ಪಾದವು ಶೋಭಿಸುತ್ತಿತ್ತು. ('ಅತ್ಯತಿಷ್ಠದ್ದಶಾಂಗುಲ' ನೆಂಬ ಪರಶಿವನು ನಾದಬಿಂದು ಕಲಾತೀತನಾಗಿ ಸರ್ವಶೂನ್ಯನಾಗಿ ತನ್ನ ನಿಜಸುಖಸಮಾಧಿಯಿಲ್ಲಿದ್ದನು. ಆಗ ಅವನು ತನ್ನ ಮನದಲ್ಲಿ ಪ್ರವೃತ್ತಿಯನ್ನು ನೆನೆಯಲು ಆ ಚಿತ್ತು ಚಿಚ್ಛಕ್ತಿಯಾಯಿತು. ಅದರಿಂದ ಮಹಾಲಿಂಗ, ಪರಶಕ್ತಿಯರಾದರು. ಅವರಿಂದ ಸದಾಶಿವನಾದನು ; ಆ ಸದಾಶಿವನು ಆದಿಶಕ್ತಿಯಿಂದ ಕೂಡಿ ಅವರಿಬ್ಬರಿಗೆ ಈಶ್ವರನಾದನು. ಈಶ್ವರನಿಗೆ ಸುಜ್ಞಾನವೆಂಬ ಶಕ್ತಿ, ಅವರಿಬ್ಬರಿಗೆ ಮಹೇಶಸೃಷ್ಟಿಯಾಯಿತು. ಆ ಮಹೇಶನು ವಿರಾಡ್ರೂಪ ಧರಿಸಲು ಅವನ ಪಾದ, ಗುಲ್ಫ, ಜಾನು, ಜಂಘೆ, ಊರು, ಕಟಿ, ಮಧ್ಯ ಇವುಗಳಿಂದ ಪಾತಾಳ ಮೊದಲಾದ ಏಳು ಅಧೋಲೋಕಗಳೂ. ನಾಭಿ, ಉದರ, ಭುಜ, ಹೃದಯ, ಕಂಧರ, ಮುಖ, ಶಿರ ಗಳಿಂದ ಏಳು ಊರ್ಧ್ವಲೋಕಗಳೂ ಆದವು. ಮೈಯಕಾಂತಿಯಿಂದ ಸಮುದ್ರ, ಕಿವಿಗ ಳಿಂದ ದಶದಿಕ್ಕುಗಳು, ಹಡಡ, ಹಿನ್ನಡಗಳಿಂದ ಪರ್ವತಗಳೂ ಉಂಟಾಗಿ, ಮುಖದಲ್ಲಿ ರುದ್ರ, ಎಡಭುಜದಲ್ಲಿ ವಿಷ್ಣು, ಬಲದೊಡೆಯಲ್ಲಿ ಬ್ರಹ್ಮ ಇತ್ಯಾದಿ ತ್ರಿಮೂರ್ತಿಗಳೂ ಬೇರೆ ಬೇರೆ ಅವಯವಗಳಿಂದ ಉಳಿದ ದೇವತೆಗಳೂ ಆಗಲಾಗಿ ಆಮೇಲೆ ಅವನು ತಾಂಡವನೃತ್ಯ ಮಾಡಲು ಉಪಕ್ರಮಿಸಿದನು. ಆ ನೃತ್ಯಗಳಲ್ಲಿ ಅವನು ಪಾದಗಳನ್ನಿಟ್ಟಂತೆಯೇ ಆ ವಿಶಾಲ ಸೃಷ್ಟಿಯು ಧೂಳೀಪಟವಾಯಿತು. ಎಲ್ಲವೂ ಲಯವಾಗತೊಡಗಿತು. ಹೀಗೆ ಸೃಷ್ಟಿಯು ಲಯವಾಗುವುದನ್ನು ಕಂಡು ಈಶ್ವರನು ಶ್ಮಶಾನ ರುದ್ರತ್ವವನ್ನು ತಾಳಿ, ಒಂದೇ ಪಾದ ದಿಂದ ನಿಂತು ಏಕಪಾದಾಹ್ವಯಲೀಲೆಯನ್ನು ನಟಿಸಿದನು. ಚೆನ್ನಬಸವಪುರಾಣ–ವಿರೂ

## ೨೩. ಸುಖಾವಹಮೂರ್ತಿ ಲೀಲೆ

ತಿಳಿಯದೆ ಮುಕ್ತಿ ತನ್ನ ಪದಭಕ್ತಿಯಿನಪ್ಪುದೆನಿಪ್ಪುದಂ ಕಳಂ
ಕಳಿಯದೆ ಚಿತ್ತದೊಳ್ನಿಗಳ್ಪ ಕರ್ಮಕಲಾಪಮನನ್ಯಮಾರ್ಗದೊ
ಳ್ತೊಳಲಿ ಭವಕ್ಕೆ ಬರ್ಪ ಪಶುವರ್ಗಕೆ ಬೋಧಿಸಿ ಮೋಕ್ಷಮೀಯಲೆಂ
ದೆಳಸಿ ಕೃಪಾಳು ತಾಳ್ದನೆಲೆ ಚೋಳ ಸುಖಾವಹಮೂರ್ತಿ ಲೀಲೆಯಿಂ ೧೦೮

ಪಾಕ್ಷ ಪಂಡಿತ) ೧೦೮. ಮುಕ್ತಿಯೆಂಬುದು ಈಶ್ವರನ ಪಾದಭಕ್ತಿಯಿಂದಲೇ ಆಗುವು ದೆಂಬದನ್ನು ತಿಳಿಯದೆ, ಕಳಂಕವು ನಾಶವಾಗದೆ, ಚಿತ್ತದಲ್ಲಿ ಅನೇಕ ಕರ್ಮಗಳ ಬಗೆಗೆ ಯೋಚನೆ ಮಾಡಿ, ಬೇರೆ ಮಾರ್ಗದಲ್ಲಿ ತೊಳಲಾಡಿ ಪುನಃ ಜನನ ಮರಣಗಳೆಂಬ ಈ ಸಂಸಾರಕ್ಕೆ ಬರುವ ಜೀವಕೋಟಿಗೆ ಮೋಕ್ಷವನ್ನುಂಟುಮಾಡಬೇಕೆಂಬ ಬುದ್ಧಿಯಿಂದ ಎಲೈ ಚೋಳಭೂಮಿಪಾಲನೇ ಆ ಕೃಪಾಳುವಾದ ಪರಮೇಶ್ವರನು ಸುಖಾವಹ ಮೂರ್ತಿಯ ಲೀಲೆಯನ್ನು ಧರಿಸಿದನು. (ಗೌತಮ ಋಷಿಯು ದಂಡಕಾರಣ್ಯದಲ್ಲಿ ತ್ರ್ಯಂಬ ಕೇಶ್ವರ ಕ್ಷೇತ್ರದಲ್ಲಿ ತಪಸ್ಸನ್ನು ಮಾಡುತ್ತಿದ್ದಾಗ ದ್ವಾದಶವಾರ್ಷಿಕ (೧೨ ವರ್ಷಗಳ) ದೊಡ್ಡ ಬರಬಂದಿತು. ಆ ಬರಗಾಲದಲ್ಲಿ ಕಾಮಧೇನುವಿನ ಸಹಾಯದಿಂದ ಎಲ್ಲ ದ್ವಿಜ ವರ್ಗವನ್ನೂ ಗೌತಮನು ಸಲಹಿದನು. ಕ್ಷಾಮವು ಮುಗಿದ ಮೇಲೆ ಋಷಿಗಳು ತಮ್ಮ ತಮ್ಮ ಸ್ಥಳಗಳಿಗೆ ಹೋಗುವಾಗ ಒಂದು ಕೃತಕ ಗೋವನ್ನು ಮಾಡಿ ಬೆಳೆದ ಹೊಲವನ್ನು ಹೊಗಿಸಲು ಅದನ್ನು ಗೌತಮನು ಬೆದರಿಸಿದುದೇ ಕಾರಣವಾಗಿ ಗೋವು ಸತ್ತಿತು. ಸರಿ ಗೌತಮನಿಗೆ ಗೋಹತ್ಯಾದೋಷವೊದಗಿತೆಂದು ಹೇಳಿ ಆ ಋಷಿವರ್ಗವೆಲ್ಲ ಹೊರಟು ಹೋಯಿತು. ಋಷಿಗಳು ಮಾಡಿದ ಈ ಕಪಟವನ್ನು ಜ್ಞಾನದೃಷ್ಟಿಯಿಂದ ನೋಡಿದ ಗೌತ ಮನು ಆ ಋಷಿವರ್ಗಕ್ಕೆ ನೀವೆಲ್ಲ ವೇದಬಾಹಿರರಾಗಿ ಪಾಷಂಡಿಗಳಾಗಿರೆಂದು ಶಾಪವಿತ್ತನು. ಶಿವಾನುಗ್ರಹದಿಂದ ದೇವಗಂಗಾಜಲವನ್ನು ತಂದು ಭೂಮಿಯಲ್ಲಿ ಹರಿಯುವಂತೆ ಮಾಡಲು ಅದೇ ಗೌತಮೀ ಎಂಬ ಹೆಸರನ್ನು ಪಡೆಯಿತು. ಆ ನೀರು ಗೋವಿಗೆ ತಗುಲಿ ಹರಿದದ್ದರಿಂದ 'ಗೋದಾವರಿ' ನದಿ ಎಂಬ ಹೆಸರು ಪಡೆಯಿತು; ಆ ಬಳಿಕ ಶಾಪಹತರಾತ ಋಷಿಗಳು ಪಾಷಂಡಿಗಳಾಗಿ ಕಲಿಯುಗದಲ್ಲಿ ಆಚಾರವಿಚಾರಹೀನರಾಗಿ ವೇದಾದಿಗಳ ನಿಂದೆಯನ್ನು ಮಾಡಲಾಗಿ ಬೇಸತ್ತುಹೋದ ಸಪ್ತರ್ಷಿಗಳು ಶಿವನ ಮರೆಹೊಕ್ಕರು. ಶಿವನು ಇವರ ಬಿನ್ನಹವನ್ನು ಮನ್ನಿಸಿ ಸುಖಾವಹಮೂರ್ತಿಯಾಗಿ ತನ್ನ ಎರಡನೇ ಮೂರ್ತಿಯಾದ ನಂದೀಶ್ವರನ ಮೂಲಕ ಋಷಿಗಳೇ ಮೊದಲಾದ ಜೀವರುಗಳಿಗೆ ಈಶ್ವರೋಪಾಸನಾ ಮೂಲಕವಾಗಿ ಮುಕ್ತಿಯಾಗುವ ಮಾರ್ಗವಾದ ಇಪ್ಪತ್ತೆಂಟನೆಯ ಆಗಮವನ್ನು ಬೋಧಿಸಿ ಶಿವಭಕ್ತಿಯುತನನ್ನಾಗಿ ಮಾಡಿದುದೇ ಸುಖಾವಹಮೂರ್ತಿ

## ೨೪. ದಕ್ಷಿಣಾಮೂರ್ತಿ ಲೀಲೆ

ಮ॥ಸ್ರ॥ ವಿಳಸದ್ವಿದ್ಯುಜ್ಜಟಾಮಂಡಳಮಮರನದೀ ಚಂದ್ರಖಂಡಾನ್ವಿತಂ ಮಂ
ಜುಳಗಂಡಂ ಸರ್ಪಕರ್ಣಾಭರಣಕಲಿತಮಾಸ್ಯಂ ಮೃದುಸ್ಮೇರವಿಂದೂ
ಜ್ವಳಮಂಗಂ ಕಣ್ಗೆ ಚೆಲ್ವಾಗಿರೆ ವಟತರುಮೂಲಸ್ಥಿತಂ ಜ್ಞಾನಮುದ್ರಾಂ
ಗುಳಿಯಿಂ ಶಿಷ್ಯಪ್ರಬೋಧಪ್ರದನೆಸೆದನವಂ ದಕ್ಷಿಣಾಮೂರ್ತಿದೇವಂ ೧೯೯

ಲೀಲೆಯಾಗಿದೆ. ಶಿವತತ್ತ್ವಚಿಂತಾಮಣಿ-ಲಕ್ಕಣ್ಣದಂಡೇಶ) ೧೯೯. ಶಿವನು ದೇವ ಗಂಗಾನದಿ ಮತ್ತು ಚಂದ್ರಲೇಖೆಯಿಂದ ಕೂಡಿದ ಮನೋಜ್ಞವೂ ವಿದ್ಯುತ್ ಪ್ರಕಾಶ ಪೂರ್ಣವೂ ಆದ ಜಡೆಯ ಸಮೂಹದಿಂದ ಕೂಡಿದ್ದನು. ಮಂಜುಳವಾದ ಕೆನ್ನೆ ಮತ್ತು ಸರ್ಪಗಳ ಕರ್ಣಕುಂಡಲಗಳಿಂದ ಸೇರಿದ ಮುಖಮಂಡಳದಲ್ಲಿ ಮಂದ ಹಾಸವು ಸುಳಿಯುತ್ತಿತ್ತು. ಚಂದ್ರಪ್ರಕಾಶದಂತೆ ಶುಭ್ರವಾದ ದೇಹವು ಕಣ್ಣು ಗಳಿಗೆ ಚೆಲುವಾಗಿ ಕಾಣುತ್ತಿತ್ತು. ಇಂಥ ಶಿವನು ದಕ್ಷಿಣಾಮೂರ್ತಿ ಎಂಬ ಹೆಸರಿನಿಂದ ಆಲದಮರದ ಬುಡದಲ್ಲಿ ಜ್ಞಾನಮುದ್ರಾಂಗುಳಿಯಿಂದ ಕುಳಿತು ಶಿಷ್ಯರಾದ ಋಷಿಗಳಿಗೆ ಧರ್ಮಬೋಧೆ ಮಾಡಿ ಶೋಭಿಸುತ್ತಿದ್ದನು. (ಈಶ್ವರನು ಇಂದ್ರನ ಅರಮನೆಗೆ ಬಂದು ಭಿಕ್ಷೆ ಬೇಡಲು ಇಂದ್ರನು ತನ್ನ ಸುಕೃತದಿಂದ ಶಿವನು ನನ್ನ ಮನೆಗೆ ಬಂದನೆಂದು ತನ್ನ ಸಕಲ ಸಂಪತ್ತನ್ನೂ ಬ್ರಹ್ಮಕಪಾಲಕ್ಕೆ ಸುರಿದರೂ ಅದು ತುಂಬಲಿಲ್ಲ. ಆಗ ಇಂದ್ರನು ಅಮೃತಕಲಶವನ್ನು ತಂದು ನೀಡಲು ಬಂದಾಗ ಶಿವನು ಸಾಕು, ಅಮೃತಕಲಶವು ದೇವತೆಗಳಿಗೆ ಆಧಾರ, ಅದನ್ನು ರಕ್ಷಿಸಬೇಕೆಂದು ಹೇಳಿ ಮುಂದೆ ಹೊರಟು ಅಗ್ನಿ, ಯಮ, ದಿಕ್ಪಾಲಕರುಗಳಿಂದ ಭಿಕ್ಷೆಯನ್ನು ಕೊಂಡು ಕೈಲಾಸಕ್ಕೆ ಬಂದನು. ಅಲ್ಲಿ ದಾರುಕವನ ದಲ್ಲಿ ಗೌತಮ ಭೃಗು ಮೊದಲಾದ ಋಷಿಗಳು ಧ್ಯಾನಾಸಕ್ತರಾಗಿದ್ದರು. ಋಷಿಪತ್ನಿಯರು ಈಶ್ವರನ ಈ ಸುಂದರರೂಪ ಕಂಡು ಮೋಹಿತರಾದರು. ಶಿವನು ಆ ಸ್ತ್ರೀಯರ ಕೈಹಿಡಿ ದಂತೆ ನಟಿಸಿದನು. ಆಗ ಅಲ್ಲಿದ್ದ ವಟುಗಳು ಕೂಗಾಡಿ ಗದ್ದಲವೆಬ್ಬಿಸಲು ಮುನಿಗಳು ಜಪತಪಗಳನ್ನು ಬಿಟ್ಟು ಕೋಪಗೊಂಡು ಆರ್ಭಟಿಸಿದರು. ಶಿವನು ಮುಂದಕ್ಕೆ ನಡೆಯು ತ್ತಿದ್ದನು. ಸ್ತ್ರೀಯರು ಬೆನ್ನುಹತ್ತಿದ್ದರು. ಋಷಿಗಳ ಯಾವ ಮಂತ್ರತಂತ್ರಗಳೂ ಶಿವನ ಮುಂದೆ ನಡೆಯಲಿಲ್ಲ. ಇವನನ್ನು ಮಾಯಾವಿಯೆಂದು ತಿಳಿದು ಮಾರಣಹೋಮ ಮಾಡಿದರು. ಅದಕ್ಕೆ ಶಿವನು ಜಗ್ಗಲಿಲ್ಲ. ಶಿವನು ಈ ಯಜ್ಞಾದಿಗಳನ್ನೆಲ್ಲ ತುಳಿದು ತಾಂಡವನೃತ್ಯ ಮಾಡಲು ಋಷಿಗಳಿಗೆ ಜ್ಞಾನೋದಯವಾಗಿ ಇವನು ಶಿವನೇ ಎಂದು ಗುರುತಿಸಿ ಪಾದಗಳ ಮೇಲೆ ಬಿದ್ದರು. ಈಶ್ವರನು ಅವರನ್ನು ಕ್ಷಮಿಸಿ, ಕೈಯಕಪಾಲ ವನ್ನು ಭೈರವನ ಕೈಗೆಕೊಟ್ಟು ವಟವೃಕ್ಷದ ಕೆಳಗೆ ಕುಳಿತು ಅವರಿಗೆಲ್ಲ ಮೋಕ್ಷಮಾರ್ಗ ವನ್ನು ಬೋಧಿಸಿ, ಅವರನ್ನು ಅವರ ಸತಿಯರೊಡನೆ ಕಳಿಸಿ ತಾನು ಕೈಲಾಸಕ್ಕೆ ತೆರಳಿ

## ೨೫. ಲಿಂಗೋದ್ಭವ ಲೀಲೆ

ಮ॥ ಹರಿಬೊಮ್ಮರ್ ಜಗದೀಶರಾವೆನುತಹಂಕಾರಕ್ಕೆ ಪಕ್ಕಾಗುತಿ
ರ್ವರೆ ಕಾದುತ್ತಿರೆ ಕೋಟಿಸೂರ್ಯರುಚಿಯಿಂ ತನ್ಮಧ್ಯದೊಳ್ಮೂಡಿ ತಾ
ನುರುಲಿಂಗಾಕೃತಿಯಾಗೆ ಸೂಕರಮರಾಳಾಕಾರದಿಂ ಪೋಗಿಯುಂ
ವರಪನ್ಮೂಲಮನಾನನಾಬ್ಜಮನವರ್ಕಾಣಲ್ಕದೇನಾರ್ತರೇ ೧೧೦

ದನು–ಚೆನ್ನಬಸವಪುರಾಣ–ವಿರೂಪಾಕ್ಷಪಂಡಿತ). ೧೧೦. ವಿಷ್ಣು ಬ್ರಹ್ಮರು ನಾವೇ ಜಗದೀಶ್ವರರೆಂದು ಅಹಂಕಾರದಿಂದ ಕೂಡಿ, ಇಬ್ಬರೇ ಯುದ್ಧ ಮಾಡುತ್ತಿರಲು ಅವರಿಬ್ಬರ ಮಧ್ಯದಲ್ಲಿ ಕೋಟಿಸೂರ್ಯಪ್ರಕಾಶಮಾನವಾದ ಕಾಂತಿಯಿಂದ ಶ್ರೇಷ್ಠ ಲಿಂಗಾಕಾರದಲ್ಲಿ (ಜ್ಯೋತಿರ್ಲಿಂಗಾಕಾರದಲ್ಲಿ) ಶಿವನು ಮೂಡಿ ನಿಲ್ಲಲಾಗಿ, ಹಂದಿ ಮತ್ತು ಹಂಸಗಳ ಆಕಾರ ದಲ್ಲಿ ಹರಿ ಬ್ರಹ್ಮರಿಬ್ಬರೂ ಹೋಗಿ, ಹರಿಯು ಪಾದಮೂಲವನ್ನೂ ಬ್ರಹ್ಮನೂ ಮುಖ ಕಮಲವನ್ನೂ ಕಾಣಲೇನು ಸಮರ್ಥರಾದರೇ? (ಪೂರ್ವದಲ್ಲಿ ವಿಷ್ಣುವು ನಾನು ಜಗನ್ನಿಯಾ ಮಕನೆಂದೂ, ಬ್ರಹ್ಮನು ತಾನು ಜಗನ್ನಿಯಾಮಕನೆಂದೂ ಜಗಳಕ್ಕೆ ಮೊದಲು ಮಾಡಿ ದರು. ಅವರಿಬ್ಬರ ಮಧ್ಯದಲ್ಲಿ ಕೋಟಿಸೂರ್ಯಪ್ರಕಾಶಮಾನವಾದ ಜ್ಯೋತಿರ್ಲಿಂಗ ವೊಂದು ಉದ್ಭವವಾಯಿತು. ಅಶರೀರವಾಣಿಯು–ಈ ಲಿಂಗದ ಮೂಲವನ್ನು ಅಂದರೆ ಪಾದಗಳನ್ನಾಗಲಿ ಮುಖವನ್ನಾಗಲಿ ಯಾರು ನೋಡಿ ಬರುತ್ತಾರೋ ಅವರೇ ಜಗನ್ನಿ ಯಾಮಕರೆಂದು ನುಡಿಯಲು, ಬ್ರಹ್ಮನು ಹಂಸವಾಗಿ ಆ ಲಿಂಗದ ಶಿರವನ್ನು ನೋಡಲು ಆಕಾಶಕ್ಕೆ ಹಾರಿತು. ವಿಷ್ಣುವು ಹಂದಿಯ ರೂಪ ಧರಿಸಿ ಪಾತಾಳವನ್ನು ಹೊಕ್ಕನು. ಅವರಿಬ್ಬರೂ ಪ್ರಯತ್ನಪಟ್ಟು ಬಂದು ವಿಷ್ಣುವು ತಾನು ಪಾದವನ್ನು ಕಾಣಲಾಗಲಿಲ್ಲ ವೆಂದು ಸತ್ಯನುಡಿದನು. ಆದರೆ ಬ್ರಹ್ಮನು ನಾನು ತಲೆಯನ್ನು ಕಂಡು ಬಂದೆನೆಂದು ಸುಳ್ಳು ಹೇಳಿದನು. ಆಗ ವಿಷ್ಣುವು ನೀನು ನೋಡಿಬಂದುದಕ್ಕೆ ಸಾಕ್ಷಿ ಏನು ? ಎಂದು ಕೇಳಲು ಕಾಮಧೇನುವೂ, ಕೇದಗೆಯೂ ಬ್ರಹ್ಮನೂ ಶಿವನ ಶಿರವನ್ನು ಕಂಡದ್ದು ಸತ್ಯ ವೆಂದು ಸಾಕ್ಷಿ ನುಡಿದವು. ಆಗ ಶಿವನು ಮೂರ್ತೀಭವಿಸಿ ಬಂದು ಸುಳ್ಳು ಹೇಳಿದ ಕಾಮಧೇನುವಿಗೆ ನೀನು ಸುಳ್ಳುಸಾಕ್ಷಿ ಹೇಳಿದ ಫಲವಾಗಿ ಪ್ರಾತಃಕಾಲ ನಿನ್ನ ಮುಖ ನೋಡಿದವರಿಗೆ ಪಾಪವುಂಟಾಗಲೆಂದು ಶಾಪ ಕೊಟ್ಟನು. ಕೇದಗೆಗೆ ನೀನು ಮುಳ್ಳಾಗಿ ವನದ ಹೊರಗೆ ಹುಟ್ಟಿ ವೇಶ್ಯಾಂಗನೆಯರಿಗೆ ಪ್ರಿಯವಾಗು ಎಂದು ಶಾಪ ಕೊಟ್ಟನು. ಸುಳ್ಳು ಹೇಳಿದ ಬ್ರಹ್ಮನಿಗೆ ದೇವಾಲಯಗಳಲ್ಲಿ ದೇವತೆಗಳ ಮಧ್ಯದಲ್ಲಿ ಪೂಜೆಗೆ ಅರ್ಹ ನಾಗದೆ ಹೋಗು ಎಂದು ಹೇಳಿ, ವಿಷ್ಣುವನ್ನು ಮನ್ನಿಸಿ ನೀನು ನಿಜವನ್ನು ಆಡಿದ್ದರಿಂದ ಪ್ರತಿಮಾದ್ಯಾಕಾರಗಳಲ್ಲಿ ಅಲಂಕಾರಾದಿಗಳಿಂದ ವಿಶೇಷವಾಗಿ ಪೂಜೆ ಮಾಡಿಸಿಕೊಳ್ಳುವ

ಚಂ॥ ಕಳೆ ಸಿರಿ ಧರ್ಮಮುತ್ಸವಮಭೀಪ್ಸಿತ ಮಂಗಳಮಂದವಾತ್ಮನಿ
ರ್ಮಳತೆ ಚಿರಾಯು ವೈರಿಪುರಶೂನ್ಯತೆ ತಜ್ಜಯಮೇಳ್ಗೆಯಾರ್ಪನ
ರ್ಗಳಕೃತಿ ಶಾಂತಿಯೊಳ್ಪು ಬಲಮಾಶ್ರಿತರಕ್ಷಣೆ ಪೆರ್ಮೆ ಕೂರ್ಮೆ ವ
ತ್ಸಳತೆ ಜಸಂ ಸುಲೀಲೆ ಸುಖಮುಜ್ಜ್ವಳವಿದ್ಯೆ ವಿಮುಕ್ತಿಯೆಂಬಿವಂ ೧೧೧

ಕಂ॥ ಪಡೆವಂ ಪ್ರಮೋದದಿಂ ಕೇ
ಳ್ದೊಡೆ ಕೇಳ್ದರನಾವನಾದೊಡಂ ಪೊಡವಿಯೊಳೀ
ಮೃಡನ ಘನಪಂಚವಿಂಶತಿ
ವಡೆದೀ ಲೀಲೆಗಳನೆಲೆ ನರೇಂದ್ರಲಲಾಮಾ ೧೧೨

ಮ॥ಸ್ರ॥ ಎನೆ ಕೇಳ್ದಾನಂದದುಗ್ಧಾಂಬುಧಿಯೊಳೆ ಮುಳುಗುತ್ತೇಳ್ದವೊಲ್ಕಂಪಮಂ ಜು
ಮ್ಮನೆ ರೋಮಾಂಚಂಗಳುಂ ಸಂಜನಿಸೆ ಬಗೆಗಡರ್ಪಾಗೆ ಕೌತೂಹಲಂ ಭೋಂ
ಕನೆ ತಾನೇಳ್ದಂಘ್ರಿಪದ್ಮಕ್ಕಮರ್ದು ಮಣಿದು ಬಾಳ್ದೆಂ ಕೃತಾರ್ಥಾತ್ಮನಾದೆಂ
ಮುನಿಮುಖ್ಯಾರಾಧ್ಯ ನಿಮ್ಮಿಂದೆನುತೆ ನುತಿಸುತಂ ಮಂತ್ರಿಯುಂ ತಾನುಮಿರ್ದರ್ ೧೧೩

ವನಾಗು ಎಂದು ವರವನ್ನು ಅನುಗ್ರಹಿಸಿ ಅಂತರ್ಧಾನನಾದನು). ೧೧೧-೧೧೨. ನರೇಂದ್ರಲಲಾಮನೇ, ಭೂಮಿಯಲ್ಲಿ ಯಾವ ಮನುಷ್ಯನೇ ಆಗಲಿ ಮೃಡನ ಈ ಘನತರವಾದ ಪಂಚವಿಂಶತಿಲೀಲೆಗಳನ್ನು ಆನಂದದಿಂದ ಕೇಳಿದ್ದಾದರೆ, ಅವನಿಗೆ ಕಳೆಗಳು, ಐಶ್ವರ್ಯ, ಧರ್ಮ, ಆನಂದ, ಇಷ್ಟಾರ್ಥಸಿದ್ಧಿ, ಮಂಗಳ, ಸೊಗಸು, ಚಿತ್ತನೈರ್ಮಲ್ಯ, ದೀರ್ಘಾಯುಷ್ಯ, ಶತ್ರುಸಮೂಹದ ನಾಶ, ಅವರ ಜಯ, ಏಳಿಗೆ, ಅತಿಶಯವಾದ ವಿರೋಧವಿಲ್ಲದ ಕಾರ್ಯಸಿದ್ಧಿ, ಶಾಂತಿ, ಒಳ್ಳೆಯದು, ಬಲ, ಆಶ್ರಿತರಕ್ಷಣೆ, ಹೆಮ್ಮೆ, ಪ್ರೀತಿ, ವಾತ್ಸಲ್ಯಭಾವ, ಯಶಸ್ಸು, ವಿನೋದ, ಸುಖ, ಶ್ರೇಷ್ಠವಿದ್ಯೆ, ಮುಕ್ತಿ–ಇವೇ ಮೊದಲಾದುವುಗಳನ್ನು ಪಡೆಯುತ್ತಾನೆ." ೧೧೩. ಹೀಗೆ ಚಿಪ್ಪನ ಶಿವಾಚಾರ್ಯರು ಹೇಳಿದುದನ್ನು ಆ ಸತ್ಯೇಂದ್ರಚೋಳನೂ ಮತ್ತು ಮಂತ್ರಿಯೂ ಕೇಳಿ ಆನಂದವೆಂಬ ಕ್ಷೀರಸಾಗರದಲ್ಲಿ ಮುಳುಗುತ್ತ ಎದ್ದವರ ಹಾಗೆ ಭಕ್ತಿಪೂರ್ವಕವಾದ ನಡುಕವೂ, ಮೈ ಜುಮ್ಮೆಂದು ರೋಮಾಂಚನವೂ ಉಂಟಾಗಲಾಗಿ, ಮನಸ್ಸಿಗೆ ಅತಿಶಯವಾಗಿ ಹಿಡಿದು ಕುತೂಹಲದಿಂದ ಕೂಡಿ, ಒಮ್ಮೆಲೆ ಪಾದಕಮಲಕ್ಕೆ ಬಿದ್ದು ನಮಸ್ಕರಿಸಿ, "ನಿಮ್ಮಿಂದ ಬದುಕಿದೆನು; ಕೃತಾರ್ಥನಾದೆನು, ಮುನಿಮುಖ್ಯರಿಂದ ಆರಾಧಿಸಿ ಕೊಳ್ಳುವ ಗುರುವೇ" ಎಂದು ನುತಿಸುತ್ತಿದ್ದರು.

ಮಲ್ಲಿಕಾಮಾಲೆ॥ ಸಾರಸಾರ ಸಮಾನಲೋಚನಕಾಂತಕಾಂತಿಯುತಾನನೇ
ಭೂರಿಭೂರಿಪು ಸಂಘಸಂಹೃತಿ ಶಕ್ತಿಶಕ್ತಿಸಮನ್ವಿತೇ
ಮಾರಮಾರಣ ದಕ್ಷದಕ್ಷಮದಾಪಹಾಂಕ ವಿರಾಜಿತೇ
ಧೀರಧೀರತಿಪಾಲಪಾಲನಶೀಲೆ ಪಾಲಿಪುದಂಬಿಕೇ ೧೧೪

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣಮಹಾಪ್ರಭಾಪಟಲಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸ ಜನಮಾನಿ ತೋಭಯಕವಿತಾವಿಶಾರದ ಶ್ರೀ ಷಡಕ್ಷರಿದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್ ಕಥಾವತರಣ ಶಿವಲೀಲಾವರ್ಣನಂ

ಅಂತು ಆಶ್ವಾಸ ೩ಕ್ಕಂ ಪದನು ೩೫೯ ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ

## ತೃತೀಯಾಶ್ವಾಸಂ

### ಸಂಪೂರ್ಣಂ

೧೧೪. ಕಮಲಪುಷ್ಪದ ದಳ (ಸಾರಸ+ಆರ)ಕ್ಕೆ ಸಮಾನವಾದ ಕಣ್ಣುಗಳ ಕಾಂತಿಯಿಂದ ಕೂಡಿದ ಮುಖವುಳ್ಳವಳೂ, ಅಧಿಕವಾಗಿ ಭೂಮಿಯ ಜನಸಮೂಹಕ್ಕೆ ವೈರಿಗಳಾದ ರಾಕ್ಷಸರ ಸಮೂಹವನ್ನು ಸಂಹಾರಕಾರಣವಾದ ಶಕ್ತ್ಯಾಯುಧದ ಸಾಮರ್ಥ್ಯದಿಂದ ಕೂಡಿದವಳೇ, ಹಿಂಸಾತ್ಮಕವಾದ ಮಾರಣಯಜ್ಞದಲ್ಲಿ ದಕ್ಷನಾದ ದಕ್ಷಬ್ರಹ್ಮನ ಗರ್ವವನ್ನು ಹೋಗಲಾಡಿಸಿದಂತಹ ಶಿವನ ತೊಡೆಯನ್ನೇರಿ ಕುಳಿತವಳೇ, ವಿವೇಕಪೂರ್ಣ ಬುದ್ಧಿಯುಳ್ಳವಳಾದ ರತಿದೇವಿಯನ್ನು ರಕ್ಷಿಸುವ ಮನ್ಮಥನನ್ನು ರಕ್ಷಿಸಿದವಳೇ, ಅಂಬಿಕೆಯೇ (ನಮ್ಮನ್ನು) ರಕ್ಷಿಸು. ಇದು ವಿಶೇಷವಾಗಿ ನಮಸ್ಕಾರಮಾಡುತ್ತಿರುವ ದೇವೇಂದ್ರನ ಕಿರೀಟದ ಕೊನೆಯಲ್ಲಿ ಕೆತ್ತಲ್ಪಟ್ಟ ರತ್ನಸಮೂಹದ ಮಹಾಪ್ರಭೆಯ ಸಮೂಹದಿಂದ ಸುತ್ತುವರಿದ ಪರಮೇಶ್ವರನ ಶ್ರೀಪಾದಗಳಲ್ಲಿರುವ ಉಗುರಿನಿಂದ ಹೊರಟ ಚಂದ್ರನ ದಟ್ಟವಾದ ಕಾಂತಿಯಿಂದ ನಿಬಿಡವಾಗಿ ಹೊರಹೊಮ್ಮುವ ಬೆಳದಿಂಗಳಿಗೆ ಚಕೋರ ಪಕ್ಷಿಯಂತಿರುವ ರಸಜ್ಞರಾದ ಜನರಿಂದ ಮನ್ನಿಸಲ್ಪಟ್ಟ ಉಭಯಕವಿತಾವಿಶಾರದನಾದ ಶ್ರೀ ಷಡಕ್ಷರಿದೇವನಿಂದ ರಚಿಸಲ್ಪಟ್ಟ ರಾಜಶೇಖರ ವಿಳಾಸವೆಂಬ ದೊಡ್ಡ ಪ್ರಬಂಧದಲ್ಲಿ ಕಥಾರಂಭದ ಶಿವನ ಇಪ್ಪತ್ತೈದು ಲೀಲೆಗಳ ವರ್ಣನೆ.

## ತೃತೀಯಾಶ್ವಾಸ

### ಮುಗಿದುದು

# ಚತುರ್ಥಾಶ್ವಾಸಂ

ಕಂ॥ ಶ್ರೀ ಶರ್ವಾಣೀಹೃದಯ ಕು
ಶೇಶಯಹಂಸಂ ನಿಜಾಂಘ್ರಿಸೇವಕ ಜನತಾ
ಪಾಶಹರಂ ಪಶುಪತಿ ಪರ
ಮೇಶಂ ಪೊರೆಗೆಮ್ಮನಾವಗಂ ಶಿವಲಿಂಗಂ ೧

ಮ॥ಸ್ರ॥ ಮುಡಿಗಂಪಿಂಗಾರ್ದುಸಾರ್ತಂದೆಱಗೆ ಪರಮೆಗಳ್ಮಂಜುಮಂಜೀರನಾದ
ಕ್ಕೊಡನೊಂದೊಂದಾಗಿ ಪಿಂದೈತರೆ ವಿಮಳಮರಾಳಾಂಗಳಾಳೀಜನಂ ಪಿಂ
ಗಡೆಯೊಳ್ಕೂರ್ತೈದೆ ಶೋಭಾವತಿ ಮೃದುಗತಿಯಿಂ ಬಂದು ಪೂವಿಲ್ವಿನಮ್ಬುಂ
ಬಡೆವಂತಂಗಂ ಬಳುಂಕಲ್ಮಣಿದಳವರ ದಿವ್ಯಾಂಘ್ರಿಯೊಳ್ ದೇವಿಯಾಗಳ್ ೨

ಕಂ॥ ಪರಸಿದರಧಿಕೋತ್ಸವದಿಂ
ಗುರುಗಳ್ಮಗುಳ್ದವಳ ಮಾನದಭೀಷ್ಟಮನಿಂತಂ
ದಿರದಱಿದರ್ ಶಿವಶಿವ ಶಂ
ಕರಶರಣರ ಮಹಿಮೆ ಮಹಿಗೆ ಸಾಧಾರಣಮೇ ೩

೧. ಮಂಗಳಕರಳಾದ ಪಾರ್ವತಿಯ ಹೃದಯವೆಂಬ ಕಮಲಕ್ಕೆ ಹಂಸಸ್ವರೂಪನೂ, ತನ್ನ ಪಾದಕಮಲಗಳನ್ನು ಸೇವಿಸುವ ಭಕ್ತರ ಸಂಸಾರಬಂಧನರೂಪವಾದ ಪಾಶವನ್ನು ಪರಿಹರಿಸುವವನೂ, ಪ್ರಾಣಿ ಕೋಟಿಗಳಿಗೆಲ್ಲ ಪತಿಯೂ, ಪರಮೋತ್ಕೃಷ್ಟನಿಯಾಮಕನೂ ಆದ ಶಿವಲಿಂಗನು ನಮ್ಮನ್ನು ಯಾವಾಗಲೂ ರಕ್ಷಿಸಲಿ. ೨. ಮುಡಿಯಲ್ಲಿ ಮುಡಿದ ಸುಗಂಧ ಪೂರಿತ ಹೂವುಗಳಿಗೆ ದುಂಬಿಗಳು ಬಂದು ಎರಗಿರಲು, ಮನೋಹರವಾದ ಕಾಲಂದಿಗೆಗಳ ಝಣತ್ಕಾರಕ್ಕೆ ಹಿಂದಿನಿಂದ ಒಂದೊಂದಾಗಿ ಹಂಸಪಕ್ಷಿಗಳೆಂಬ ದಾಸಿಯರು ಹಿಂಭಾಗದಲ್ಲಿ ಪ್ರೀತಿಯಿಂದ ಬರುತ್ತಿರಲು, ಶೋಭೆಯಿಂದ ಕೂಡಿದ ಅನ್ಯತನುತವೇಣಿಯು ಮೆಲ್ಲ ಮೆಲ್ಲನೆ ನಡೆದುಬಂದು ಪುಷ್ಪಧನುಸ್ಸು ಬಾಗುವಂತೆ ದೇಹವು ಬಳುಕಲಾಗಿ, ಆ ಗುರು ಗಳಾದ ಚಿದ್ಘನ ಶಿವಾಚಾರ್ಯರ ಪಾದಗಳಿಗೆ ನಮಸ್ಕಾರ ಮಾಡಿದಳು. ೩. ಆಗ ಚಿದ್ಘನ ಶಿವಾಚಾರ್ಯರು ಅತ್ಯಂತ ಸಂತೋಷದಿಂದ ಅವಳ ಮನದ ಅಭೀಷ್ಟವು ಇದೇ ಎಂಬುದನ್ನು ತಿಳಿದು ಆಶೀರ್ವಾದ ಮಾಡಿದರು. ಶಿವ ಶಿವ ! ಶಿವಶರಣರ ಮಹಿಮೆ ಭೂಮಿಯಲ್ಲಿ

ಧರಣಿಪನುಂ ಸಚಿವನುಮು
ಚ್ಚರಿವಡುತಿರೆ ಮಗಳೆ ಬಾರೆನುತ್ತೀಕ್ಷಿಸಿ ಶಂ
ಕರನಡಿದಳಿರಂ ಜಾನಿಸಿ
ತರಳೆಗೆ ಪಂಚಾಕ್ಷರೋಪದೇಶಂಗೆಯ್ದರ್ ೪

ತರುಣಿ ಭವದೀಯ ಪುಣ್ಯೋ
ದರದೊಳ್ ಪುಟ್ಟುಗುಮಿನಾನ್ವಯಾಂಬುಧಿಚಂದ್ರಂ
ಹರಮಂತ್ರಮಿದನೆ ಜಪಿಸು
ತ್ತಿರೆ ತಪ್ಪದಿದೆಂದು ದೇಶಿಕಂ ಕರುಣಿಸಿದಂ ೫

ಎನೆ ನಂಬಿ ನಲಿದು ಮನದೊಳ್
ನನೆಕೊನೆವೋದಳ್ ಗುರೂಕ್ತಿಯಂ ಬಗೆಗೊಂಡಳ್
ಜನಪತಿಯ ವದನಮಂ ಕ
ಣ್ಗೊನೆಯಿಂ ನಡೆನೋಡಿ ಮುದಮಂ ತಳೆದಳ್ ೬

ವ॥ ಅನಂತರಂ

ಕಂ॥ ಆ ದಂಪತಿಯ ಸಪರ್ಯೆಯ
ನಾದಂ ಕೈಕೊಂಡು ನೆನೆದುದಂ ನೆಗಳ್ದು ಮಹಾ
ಮೋದಂ ಮಿಗೆ ನಿಜದೇಶಕೆ
ಪೋದರ್ ಚಿದ್ಘನಶಿವಾರ್ಯರುತ್ತಮಕಾರ್ಯರ್ ೭

ಸಾಮಾನ್ಯವಾದದ್ದೇ ! ೪. ಭೂಮೀಶ್ವರನಾದ ಸತ್ಯೇಂದ್ರಚೋಳ ಮಹಾರಾಜನೂ, ಪತಿ ಮೋಹಿಯೂ ಆಶ್ಚರ್ಯಗೊಳ್ಳುತ್ತಿರಲು, 'ಮಗಳೇ, ಬಾ' ಎನ್ನುತ್ತ ಅಮೃತಮತಿದೇವಿ ಯನ್ನು ಕರೆದು ಅವಳನ್ನು ದಿಟ್ಟಿಸಿನೋಡಿ ಶಂಕರನ ಚಿಗುರಿನಂತಹ ಪಾದಗಳನ್ನು ಧ್ಯಾನಿಸಿ, ಆ ಅಮೃತಮತಿಗೆ ಪಂಚಾಕ್ಷರಿಮಂತ್ರವನ್ನು ಉಪದೇಶ ಮಾಡಿದರು. ೫. "ಯುವತಿಯಾದ ಅಮೃತಮತಿಯೇ, ಹರಮಂತ್ರವಾದ ಇದನ್ನು ಜಪಿಸುತ್ತಿದ್ದರೆ ನಿನ್ನ ಪುಣ್ಯಗರ್ಭದಲ್ಲಿ, ಸೂರ್ಯವಂಶನೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವ ಮಗನು ಹುಟ್ಟುತ್ತಾನೆ. ಈ ಮಾತು ಸುಳ್ಳಾಗುವುದಿಲ್ಲ" ಎಂದು ಆ ದೇಶಿಕವರೇಣ್ಯ ನಾದ ಚಿದ್ಘನ ಶಿವಾಚಾರ್ಯನು ಕರುಣದೋರಿ ಆಶೀರ್ವದಿಸಿದನು. ೬. ಹೀಗೆಂದು ಗುರುಗಳು ಹೇಳಿದುದನ್ನು ನಂಬಿ ನಲಿದಾಡಿ ರಾಣಿಯು ಮುಗುಳ್ನಗೆಯ ಮುಖವುಳ್ಳ ವಳಾದಳು. ಗುರುವಿನ ಆಶೀರ್ವಾದವನ್ನು ಮನಸ್ಸಿನಲ್ಲಿ ಒಪ್ಪಿಕೊಂಡಳು. ಮಹಾರಾಜನ ಮುಖವನ್ನು ಕಡೆಗಣ್ಣಿನಿಂದ ನೋಡಿ ಸಂತೋಷಗೊಂಡಳು. ವ॥ ಅನಂತರ ೭. ಆ ದಂಪತಿಗಳ ಪೂಜಾದಿ ಸೇವಾಕೈಂಕರ್ಯವನ್ನು ಸ್ವೀಕರಿಸಿ ಅವರ ಮನದಭೀಷ್ಟವನ್ನು ನೆರವೇರಿಸಿ, ಸಂತೋಷದಿಂದ ಉತ್ತಮಕಾರ್ಯ ನಿರತರಾದ ಚಿದ್ಘನ ಶಿವಾಚಾರ್ಯರು ತಮ್ಮ

ವ॥ ಅಂತವರ್ಪೊಂಗಲೊಡನಿರ್ಪ್ಪಲ್

ಮ॥ ಶಿವಲಿಂಗಾರ್ಚನೆಗೆಯ್ಯುತಂ ಶಿವಕಥಾಪೀಯೂಷಮಂ ಕರ್ಣದಿಂ
ಸವಿವುತ್ತಂ ಶಿವಯೋಗಿವೃಂದಚರಣಾಂಭೋಜಂಗಳಂ ಪೂಜಿಸು
ತ್ತವರಿರ್ವರ್ ಗುರುವಿತ್ತ ಮಂತ್ರಮನದಂ ಚಿತ್ತಾಂತದೊಳ್ ಜಾನಿಸು
ತ್ತೆ ವಧೂವಲ್ಲಭರಿರ್ದರುತ್ಸವಯುತರ್ ನಾನಾ ವಿನೋದಂಗಳಿಂ ೮

ವ॥ ಅಂತಿರ್ಪಿನಮೊಂದುದಿವಸಂ

ಚಂ॥ ಮೊಗದೊಳಗೊಂದೆರಳ್ಕೊಡವಿ ಮೂಡೆ ಬೆಮರ್ನಸುದೋರೆ ಕಾಂತಿ ಕೆಯ್
ಮಿಗೆ ಕದಪುಜ್ವಳಂಬಡೆಯೆ ಮೆಲ್ನಗೆ ಲಜ್ಜೆಯನೊತ್ತಿಗೊಂಡು ತಾ
ನೊಗೆಯೆ ಘನಸ್ತನಂ ಬಿಗಿಯೆ ಸುಯ್ ಬಿಸುಪಾಂತಿರೆ ಲೋಚನಾಂಚಲಂ
ಸೊಗಯಿಸೆ ಕೆಂಕಮಾಗಿ ಸತಿ ಪುಷ್ಪಿತೆಯಾದಳದೊಂದು ಬಿಂಕದಿಂ ೯

ಕರತಳದಲ್ಲಿ ತಾಳ್ದ ಸೆಳೆವುಟ್ಟೆಳೆಗೆಂಪಿನ ಸೀರೆ ರನ್ನದಾ
ಭರಣಮುರೋಜದೊಳ್ತಳೆದ ಕುಂಕುಮಲೇಪನಮಂದವೀಯೆ ಬಿಂ
ಬರುಚಿರದಂತವಾಸೆ ವನಿತಾಮಣಿ ಮಾಣಿಕವಾಂತು ನೋಳ್ಪ ಭೂ
ವರನ ವಿಲೋಚನಕ್ಕೆ ಪೊಸಮಾಣಿಕಪುತ್ಥಳಿಯಂತಿರೊಪ್ಪಿದಳ್ ೧೦

ದೇಶಕ್ಕೆ ಹೊರಟುಹೋದರು. ವ॥ ಆ ರೀತಿ ಅವರು ಹೊರಟುಹೋಗಲಾಗಿ ಇತ್ತ ೮. ಸತ್ಯೇಂದ್ರಚೋಳ ಮತ್ತು ಅಮೃತಮತೀದೇವಿಯರಿಬ್ಬರೂ ಶಿವಲಿಂಗವನ್ನು ಪೂಜೆ ಮಾಡುತ್ತ, ಶಿವಕಥೆಯೆಂಬ ಅಮೃತವನ್ನು ಕಿವಿಗಳಿಂದ ಸ್ವೀಕರಿಸುತ್ತ, ಶಿವಯೋಗಿಗಳಾದವರ ಪಾದಕಮಲಗಳನ್ನು ಪೂಜಿಸುತ್ತ, ಚಿದ್ಘನ ಶಿವಾಚಾರ್ಯಗುರುಗಳು ಉಪದೇಶಿಸಿದ ಆ ಪಂಚಾಕ್ಷರೀ ಮಂತ್ರವನ್ನು ಮನಸ್ಸಿನಲ್ಲಿಯೇ ಧ್ಯಾನಿಸುತ್ತ, ಅತ್ಯಂತ ಹರ್ಷದಿಂದ ಕೂಡಿದ ಚಿತ್ತವುಳ್ಳವರಾಗಿ, ಅನೇಕ ಬಗೆಯ ವಿನೋದಗಳಿಂದ ಕಾಲಯಾಪನೆ ಮಾಡುತ್ತಿದ್ದರು. ವ॥ ಹೀಗಿರಲು ಒಂದು ದಿವಸ ೯. ಮುಖದಲ್ಲಿ ಒಂದೆರಡು ಮಡಿವೆಯ ಗುಳ್ಳೆಗಳು ಕಾಣಿಸಿಕೊಂಡು ನಸು ಬೆವರು ತೋರಲಾಗಿ, ಹೆಚ್ಚಾದ ಕಾಂತಿಯಿಂದ ಕೆನ್ನೆಗಳು ಉಜ್ವಲವಾಗಲು, ಲಜ್ಜೆಯನ್ನು ಹಿಂದೆ ಸರಿಸಿ ಬಿಸಾಡಿ ಮೃದುನಗೆ ಮುಖದಲ್ಲಿ ಮೂಡುತ್ತಿರಲು, ತೋರಕುಚಗಳು ಬಿಗಿಯುತ್ತಿರಲು, ಉಸಿರು ಬಿಸುಪಾಗಿರಲು, ಕಡೆಗಣ್ಣು ನಸುಕೆಂಪಾಗಿ ಸೊಗಸಾಗಿರಲು, ಆ ಅಮೃತಮತಿಯು ಒಂದು ಗಂಭೀರಭಾವದಲ್ಲಿ ಋತುಮತಿಯಾದಳು. ೧೦. ಕಯ್ಯಲ್ಲಿ ಹಿಡಿದ ನೀಗೆ, ಉಟ್ಟ ನಸುಗೆಂಪಿನ ಸೀರೆ, ರತ್ನಾಭರಣಗಳು, ಸ್ತನಪ್ರದೇಶದಲ್ಲಿ ತೊಡೆದುಕೊಂಡಿದ್ದ ಕುಂಕುಮ, ಅಂದವಾಗಿ ಕಾಣುತ್ತಿರುವ ಪಕ್ವ ತೊಂಡೆಯ ಹಣ್ಣಿನ ಕಾಂತಿಯಿಂದ ಕೂಡಿದ ತುಟಿ, ಇವುಗಳಿಂದ ಕೂಡಿ ಆ ಸ್ತ್ರೀರತ್ನವು ಮಾಣಿಕ್ಯದ ಕಾಂತಿಯನ್ನು ಹೊಂದಿ, ನೋಡುವ

ವ॥ ಅಂತೆಸೆದು ಕಾಂತೆ ಚತುರ್ಥದಿವಸದೊಳ್ ಕೆಳದಿಯರ್ ಸೂಸುವ ಸುಗಂಧ ಸಲಿಲದಿಂ ಮಂಗಳಮಜ್ಜನಂಗೆಯ್ದನಂತರಂ .

ಕಂ॥ ಪರಿಪೂರ್ಣ ಚಂದ್ರಬಿಂಬದ
ಸಿರಿ ಕೆಂಗದಿರಂ ಕಳಲ್ಚಿ ತಳೆವಂತಿರೆ ಬಂ
ಧುರಚಂದ್ರಿಕೆಯಂ ರಾಗಾಂ
ಬರಮಂ ತಾನುಳಿದು ತಳೆದಳಮಳಾಂಬರಮಂ ೧೧

ಮ॥ಸ್ರ॥ ವಿಳಸತ್ಕರ್ಪೂರ ಸಂಮಿಶ್ರಿತ ಮಳಯಜ ಲಿಪ್ತಾಂಗಿ ಮುಕ್ತಾವಳೀಮಂ
ಜುಳಭೂಷಾಭೂಷ್ಯೆ ಮಲ್ಲೀಕುಸುಮಮಿಳಿತ ಧಮ್ಮಿಲ್ಲೆ ಶುಭ್ರಾಂಬರಶ್ರೀ
ಕಲಿತ ಶ್ರೋಣೀತಟಪ್ರೋಜ್ವಳೆ ಭಸಿತಲಲಾಮಾಭಿರಾಮಾರ್ಧಚಂದ್ರಾ
ಭ ಲಲಾಟಸ್ಥಾನೆ ಚಂದ್ರೋಪಳದ ಪರಿಜಿದೆಂಬಂತೆ ಕಣ್ಗೊಪ್ಪುತಿರ್ದಳ್ ೧೨

ವ॥ ಆ ಸಮಯದಲ್ಲಿ

ಮ॥ಸ್ರ॥ ವರರಾತ್ರೀಕಾಂತೆ ಸೂರ್ಯಾಸ್ತಮಯ ಸಮಯದೊಳ್ ಸಂಜೆಗೆಂಪೆಂಬ ರಾಗಾಂ
ಬರಮಂ ತಾನುಟ್ಟು ತೊಟ್ಟೊಪ್ಪುವ ನವಭಗಣ ಸ್ವಚ್ಛ ಮುಕ್ತಾಳಿಯಂ ಸಿಂ
ಗರಿಸುತ್ತಂ ಪದ್ಮಕೋಶಸ್ತನೆ ಚಪಲ ಚಕೋರಾಕ್ಷಿ ನಿಂದಿರ್ದೊಡಂದಿಂ
ದಿರದಿಕ್ಕೆಂಬಾಳಿ ತೋರ್ಪಾ ಮುಕುರಮೆನೆ ಕರಂ ಮೂಡಿತಬ್ಜಾರಿಬಿಂಬಂ ೧೩

ಭೂಪಾಲನ ಕಣ್ಣಿಗೆ ಹೊಸದಾದ ಮಾಣಿಕ್ಯದ ಗೊಂಬೆಯಂತೆ ಶೋಭಿಸಿದಳು. ವ|| ಈ ರೀತಿ ಶೋಭಿಸಿ, ಆ ಸ್ತ್ರೀಯು ನಾಲ್ಕನೆಯ ದಿನದಲ್ಲಿ ಸಖೀಜನರು ಸುರಿಯತಕ್ಕ ಪನ್ನೀರಿನಿಂದ ಮಂಗಳಸ್ನಾನ ಮಾಡಿ, ಅನಂತರ ೧೧. ಷೋಡಶಕಳಾಪೂರ್ಣನಾದ ಚಂದ್ರಮಂಡಳದ ಶೋಭೆಯು, ಕೆಂಪು ಕಿರಣಗಳನ್ನು ಹೋಗಲಾಡಿಸಿ ಶುಭ್ರ ಬೆಳದಿಂಗಳನ್ನು ಹೊಂದಿದಂತೆ ಎಳೆಗೆಂಪಿನ ಸೀರೆಯನ್ನುಳಿದು ಶುಭ್ರವಾದ ಸೀರೆಯನ್ನು ಆ ಅಮೃತಮತಿ ದೇವಿಯು ಉಟ್ಟಿದ್ದಳು. ೧೨. ಶೋಭಾಯಮಾನವಾದ ಪಚ್ಚಕರ್ಪೂರ ಮಿಶ್ರವಾದ ಶ್ರೀಗಂಧವನ್ನು ಮೈಗೆ ಲೇಪಿಸಿಕೊಂಡಿದ್ದಳು. ಮುತ್ತಿನ ಏಕಾವಳೀ ಹಾರದಿಂದ ಭೂಷಿತಳಾಗಿದ್ದಳು. ಮಲ್ಲಿಗೆಹೂವಿನ ದಂಡೆಯನ್ನು ತುರುಬಿಗೆ ಧರಿಸಿದ್ದಳು. ಶುಭ್ರವಾದ ಸೀರೆಯ ಕಾಂತಿಯಿಂದ ಕೂಡಿ ಶೋಭಿಸುವ ಕಟಿಪ್ರದೇಶದಿಂದ ವಿಶೇಷ ಪ್ರಕಾಶಿತಳಾಗಿದ್ದಳು. ಮನೋಹರವಾದ ಅರ್ಧಚಂದ್ರಾಕಾರದ ಹಣೆಯಲ್ಲಿ ಭಸ್ಮ ಧರಿಸಿ, ಭಸ್ಮ ತಿಲಕವನ್ನಿಟ್ಟು ಶೋಭಿಸುತ್ತಿದ್ದಳು. (–ಇವುಗಳಿಂದ) ಚಂದ್ರಕಾಂತ ಶಿಲೆಯ ಪುತ್ಥಳಿಯಂತೆ ಕಣ್ಣಿಗೆ ಒಪ್ಪುತ್ತಿದ್ದಳು. ವ|| ಆ ಸಮಯದಲ್ಲಿ ೧೩. ಶ್ರೇಷ್ಠ ರಾತ್ರಿಯೆಂಬ ಹೆಂಗಸು ಸೂರ್ಯಾಸ್ತ ಸಮಯದಲ್ಲಿ ಸಂಜೆಗೆಂಪೆಂಬ ನಸುಗೆಂಪಿನ ಸೀರೆಯನ್ನುಟ್ಟು, ನೂತನ ನಕ್ಷತ್ರಗಳೆಂಬ ಮುತ್ತಿನ ಸರವನ್ನು ತೊಟ್ಟುಕೊಂಡು, ಸಿಂಗಾರಗೊಂಡು, ಕಮಲದ ಮೊಗ್ಗುಗಳ ಮೊಲೆಗಳಿಂದ, ಚಕೋರಗಳೆಂಬ ಚಪಲನೇತ್ರಗಳಿಂದ ಕೂಡಿ ನಿಂತಿರಲಾಗಿ ಪೂರ್ವದಿಕ್ಕೆಂಬ ಸೇವಕಿಯು ತೋರಿಸುವ ಕನ್ನಡಿಯೋ ಎಂಬಂತೆ

ವ॥ ಅಂತುಮಲ್ಲದೆಯುಂ

ಚಂ॥ ತನಗಿದಿರ್ವಂದು ಬಿಂದ ರಜನೀವಧುವಂ ನಸುಸೋಂಕಿದಾಕ್ಷಣಂ
ಘನತಿಮಿರಾಸಿತಾಂಬರಮುದೊಯ್ಯನೆ ಜಾಱೆ ಸುಧಾಂಶುವಲ್ಲಭಂ
ಮನದೊಲವಿಂದೆ ತನ್ನ ವಿತತಾಂಶುಕಮಂ ಪೊದಿಸುತ್ತೆ ಕೂಡುತಿ
ರ್ಪನಿತಱೊಳಲ್ಲಿ ಚಲ್ಲಿದಳಕಾಳಿಯ ಪೊಗ್ಗಗಳಲ್ತೆ ತಾರೆಗಳ್ ೧೪

ವ॥ ಎನಿಸಿ ರಂಜಿಸುತ್ತಮಿರ್ಪಿನಮಾಗಳಮೃತಮತಿಮಹಾದೇವಿ ಪರ್ಬಿದ ಬೆಳ್ದಿಂಗಳೊಳ್ ಬೆಳ್ದಿಂಗಳಧಿದೇವತೆಯಂತೆ ಬೆಳ್ಪಸದನಂಬಡೆದಿರ್ದು ಮಂಗಳಾಂಗಿ ಲಿಂಗಪೂಜಾಗೃಹಂಬೊಕ್ಕು ಸಾಂಗಮೆನೆ ಲಿಂಗಪೂಜೆಗೆಯ್ದು ನಿಜೇಶ್ವರನೊಡನೆ ಹರಪ್ರಸಾದ ಸುಧಾಸ್ವಾದನಂಗೆಯ್ದು ಪರಿತುಷ್ಟಿವಡೆದು ಪರಿಮಳಿಪ ಕೈಗಟ್ಟಿಯಂ ಕೊಂಡು ಕರ್ಪೂರ ಪರಿಮಳಂ ಬೆರೆದ ಸರಸ ತಾಂಬೂಲಮಂ ಸಖಿ ನೀಡೆ ತಳೆದು ವಿವಿಧ ವಿನಿಯೋಗದ ವಿಳಾಸಿನಿಯರ್ ಬಳಸಿ ಬರೆ ಮಣಿವಾವುಗೆಯಂ ಮೆಟ್ಟಿ ವಿಳಾಸಂ ಮಿಗೆ ವಿದಗ್ಧಸಖಿಯ ಕರತಳಮಂ ಪಿಡಿದು ಮುಡಿಗಂಪಿಂಗೆ ಪಱಿಮೆವಱಿಗಳೆಱಗಿ ನೇವರಿಸಿದಳಕಮಂ ಕೆದಱದಂತೆ ಕೆಳದಿ ಪಿಡಿದ ಕೆಂಡಸಂಪಗೆಯ ಬಿಱಿಮುಗುಳಾಲವಟ್ಟಂ ಬಟ್ಟಮೊಗಕ್ಕೆ ಕಟ್ಟಿದಿರೊಳೆಸೆವ ಬಟ್ಟವೆಱೆಯ ದಿಟ್ಟಿ ತಾಗದಂತೆ

ಚಂದ್ರೋದಯವಾಯಿತು. ವ|| ಅದೂ ಅಲ್ಲದೆ, ೧೪. ಚಂದ್ರನು ತನಗೆ ಇದಿರಾಗಿ ಬಂದ ರಾತ್ರಿಯೆಂಬ ಸ್ತ್ರೀಯಳನ್ನು ಸ್ವಲ್ಪ ಮುಟ್ಟಿದೊಡನೆ ವಿಶೇಷ ಕತ್ತಲೆಯೆಂಬ ಕರಿಯ ಸೀರೆಯು ಕಳಚಿ ಹೋಗಲು, ಮನದ ಒಲುಮೆಯಿಂದ ತನ್ನ ವಿಸ್ತಾರವಾದ ಕಿರಣಗಳೆಂಬ ಬಿಳಿಬಟ್ಟೆಯನ್ನು ಹೊದ್ದಿಸಿ ರತಿಕ್ರೀಡೆಯಲ್ಲಿ ತೊಡಗಲಾಗಿ ಆಕಾಶದಲ್ಲಿ ಕಾಣುವ ಚುಕ್ಕೆಗಳು ಅವಳ ಮುಂದಲೆಯಲ್ಲಿದ್ದ ಹೂವು ಚೆಲ್ಲಿ ಆದುವಲ್ಲವೆ? ವ|| ಹೀಗೆನಿಸಿ ಮನೋಹರತೆವೆತ್ತ ಸಮಯದಲ್ಲಿ ಅಮೃತಮತೀಮಹಾದೇವಿಯು, ಹಬ್ಬಿದ ಬೆಳದಿಂಗಳಲ್ಲಿ ಬೆಳದಿಂಗಳ ಅಧಿದೇವತೆಯಂತೆ ಬಿಳಿಯ ನೂತನಾಭರಣಗಳನ್ನು ಧರಿಸಿದ್ದ ಆ ಮಂಗಳಾಂಗಿಯು ಲಿಂಗಪೂಜೆಯ ಮನೆಯನ್ನು ಹೊಕ್ಕು, ಯಥಾವಿಧಿಯಾಗಿ ಲಿಂಗಪೂಜೆ ಮಾಡಿದಳು. ತನ್ನ ಗಂಡನೊಡನೆ ಶಿವಪ್ರಸಾದವೆಂಬ ಅಮೃತದಂತಹ ಆಹಾರವನ್ನು ಸೇವಿಸಿದಳು. ಸಂತುಷ್ಟಿಯನ್ನು ಹೊಂದಿ ಸುವಾಸನಾಯುಕ್ತವಾದ ಗಂಧದ ನೀರಿನಲ್ಲಿ ಕೈಯದ್ದಿದಳು. ಸಖಿಯು ಪಚ್ಚಕರ್ಪೂರ ಮಿಶ್ರವಾದ ಪರಿಮಳದಿಂದ ಕೂಡಿದ ರಸಭರಿತ ತಾಂಬೂಲವನ್ನು ಕೊಡಲು ಅದನ್ನು ಸ್ವೀಕರಿಸಿ, ಅನೇಕ ಬಗೆಯ ಸೇವಕವರ್ಗದ ಹೆಂಗಸರು ಸುತ್ತುಗಟ್ಟಿ ನಿಂತಿರಲಾಗಿ ರತ್ನಖಚಿತ ಹಾವುಗೆಗಳನ್ನು ಮೆಟ್ಟಿ ಅತ್ಯಂತ ವೈಭವದಿಂದ ಜಾಣೆಯಾದ ಸಖಿಯ ಕೈಹಿಡಿದು ಮುಡಿಯ ಹೂವಿನ ಕಂಪಿಗೆ ದುಂಬಿಯ ಮರಿಗಳು ಮುತ್ತಿ, ಬಾಚಿದ ಮುಂಗುರುಗಳು ಕೆದರದ ಹಾಗೆ ಸಖಿಯು ಹಿಡಿದ ಕೆಂಡಸಂಪಿಗೆಯ ಅರೆಬಿರಿದ ಹೂಗಳ ಬೀಸಣಿಗೆಯು ದುಂಡುಮುಖದ ಎದುರಿನಲ್ಲಿ ಪ್ರಕಾಶಿಸುವ ಪೂರ್ಣಚಂದ್ರನ ದೃಷ್ಟಿ

ಮಱಿಗೆಯ್ದಂತೆ ಮೆಱೆಯೆ ಮಿಱುಪ ಸುಲಿಪಲ್ಲ ನುಣ್ಬೆಳಗು ಕಿಱುವೆಳ್ದಿಂಗಳಂ ಕಱೆಯೆ ಕಡೆಗಣ್ಣ ಕಾಂತಿ ಕಾವನಲರಂಬಂ ಕೆದಱೆ ಬಿಂಬಾಧರದ ಕೆಂಬೆಳಗು ಮುಂಬಱಿದು ಕುಂಭಕುಚಕ್ಕೆ ಕೆಂಬರಲಸರಮಂ ಕೆಳೆಗೊಳಿಸೆ ಉಡೆನೂಲೊಳ್ ತೊಡರ್ಚಿದ ವಿವಿಧ ನವರತ್ನ ಕಿರಣಮುಟ್ಟ ಧವಳಾಂಬರಮಂ ಚಿತ್ರಾಂಬರಮನೊಡರ್ಚೆ ಮಂಜುಮಂಜೀರ ಸಂಜನಿತಧ್ವನಿ ಪದನಖ ಮಯೂಖ ಮಾಲಾನರ್ತನಕ್ಕೆ ಜತಿಗುಡೆ ಮಂದಯಾನದಿಂ ನಡೆತಂದು ಮುನ್ನಂ ಕೈಗೈದು ತನ್ನ ಬರವಂ ಬಯಸುತ್ತೆ ಮನೋರಮಣನಿರ್ದ ಮಣಿಭವನಮಂ ಸಾರ್ವಲ್ಲಿ ನೆವಂಗೊಂಡು ಕೆಳದಿಯರ್ ತೊಲಂಗೆ ವಿಲಾಸದಿಂದೊಳಪೊಕ್ಕಳವಿಗಳಿದ ಸಂತಸದಿಂ ಕಾಂತನಿರ್ದ ಸಿರಿಮಂಚದ ಅಂಚೆದುಪ್ಪುಳದಡಿಕಿಲ್ವಾಸಿನೊಳ್ ಮೆಲ್ಲನೆ ಚೆಲ್ವದಿಂ ಕುಳ್ಳಿರ್ದು ಬಳ್ಳಿವಱಿವ ನೇಹದಿಂದೊಡನೆ ಸಡಗರಿಸಿ ಗಾಡಿಮಿಗೆ ನೋಡುತ್ತಮಿರ್ಪಾಗಳ್

ಕಂ॥ ಮೊಳೆದೋರ್ಪ ಪುಳಕವಂಗದೊ
ಳೆಳಸುವ ಕರಣಂಗಳುಣ್ಮುವಿನಿಪಾತು ಸುಖಂ
ದಳೆವ ಬಾಗೆ ಮೃದುಹಸಿತ ಮಂ
ಜುಳವದನಂ ಮೆಱೆಯೆ ಸಾರ್ದರೊರ್ವರನೊರ್ವರ್ ೧೫

ತಾಗದಂತೆ ಮರೆಗೆಯ್ದಳೋ ಎಂಬಂತೆ ಮೆರೆಯುತ್ತಿತ್ತು. ಶೋಭಿಸುವ ಬಿಳಿಯ ಹಲ್ಲುಗಳ ತಿಳಿಬೆಳಕು ಚಿಕ್ಕ ಬೆಳದಿಂಗಳನ್ನು ಹೊರಸೂಸುತ್ತಿತ್ತು. ಕಟಾಕ್ಷದ ಹೊಳಪು ಮನ್ಮಥನ ಪುಷ್ಪಬಾಣಗಳನ್ನೇ ಕೆದರುತ್ತಿದ್ದವು. ತೊಂಡೆಹಣ್ಣಿನಂಥ ತುಟಿಯ ಕೆಂಪಾದ ಬೆಳಕು ಮುಂದಕ್ಕೆ ಚಾಚಿ ಬಂಗಾರದ ಕಲಶದಂತಹ ಮೊಲೆಗಳಿಗೆ ಮಾಣಿಕ್ಯದ ಸರವನ್ನು ಹಾಕಿದಂತೆ ಇತ್ತು. ಡಾಬಿನಲ್ಲಿ ಬಂಧಿಸಿದ್ದ ವಿವಿಧವಾದ ನವರತ್ನಗಳ ಕಿರಣಗಳು ಉಟ್ಟ ಬಿಳಿಯ ಸೀರೆಯನ್ನು ವಿಚಿತ್ರ ವರ್ಣದ ಸೀರೆಯನ್ನಾಗಿ ಮಾಡಿದ್ದವು. ಮಂಜುಳವಾದ ಕಾಲಂದಿಗೆಯಿಂದ ಹೊರಡುತ್ತಿದ್ದ ಧ್ವನಿಯು ಪಾದದ ಉಗುರುಗಳಿಂದ ಹೊರಡುವ ಕಿರಣಗಳ ಸಮೂಹದ ನರ್ತನಕ್ಕೆ ಮೇಳಗೊಡುತ್ತಿತ್ತು. (ಹೀಗೆ) ಆಕೆಯು ಮಂದಗತಿಯಿಂದ ಬಂದಳು. ಈ ಮೊದಲೇ ಬಂದು ಅಮೃತಮತಿಯು ಬರುವಿಕೆಯನ್ನೇ ಎದುರು ಕಾಯುತ್ತಿದ್ದ ಮನೋರಮಣನಾದ ಸತ್ಯೇಂದ್ರಚೋಳರಮಣನಿದ್ದ ರತ್ನಗೃಹವನ್ನು ಹೊಗುವಾಗ ಕೆಳದಿಯರು ಒಂದೊಂದು ನೆಪದಿಂದ ದೂರ ಹೋಗಲು, ವಿಲಾಸದಿಂದ ಶಯ್ಯಾಗೃಹವನ್ನು ಹೊಕ್ಕು ಎಣೆಯಿಲ್ಲದ ಸಂತೋಷದಿಂದ ಗಂಡನಿದ್ದ ಶೃಂಗಾರಪೂರ್ಣವಾದ ಹಂಸದ ತುಪ್ಪಳದಿಂದ ಮಾಡಿದ ಉತ್ಕೃಷ್ಟ ಹಾಸಿಗೆಯ ಮೇಲೆ ಮೆಲ್ಲನೆ ಸೊಬಗಿನಿಂದ ಕುಳಿತು ಹೊರಸೂಸುವ ಸ್ನೇಹದಿಂದ ಕೂಡಲೆ ಸಡಗರಗೊಂಡು ಅತಿಸಂಭ್ರಮದಿಂದ ನೋಡುತ್ತಿದ್ದಳು. ೧೫. ದೇಹದಲ್ಲಿ ಮೊಳೆಗೊಂಡು ಏಳುವ ರೋಮಾಂಚನ, ಇಚ್ಛಿಸುವ ಇಂದ್ರಿಯಗಳು, ಹೊರಹೊಮ್ಮುವ ಸವಿಮಾತು, ಸುಖಬಡಬೇಕೆನ್ನುವ ಮನಸ್ಸು, ಮೃದುನಗೆ, ಮನೋಹರ ಮುಖ, ಇವು ಮೆರೆಯುತ್ತಿರಲು ಒಬ್ಬರನ್ನೊಬ್ಬರು ಅಪ್ಪಿದರು.

ಕಾರಿರುಳ ತರಳತಾರಗೆ
ಗೋರಗೆಯೆನೆ ಕುರುಳೊಳೆಸೆಯೆ ಮಲ್ಲಿಗೆ ಮಿಗೆ ನೀ
ಹಾರಕರವದನೆ ಮದನಾ
ಕಾರಮನೋರಮಣನಂಕದೊಳ್ ಕುಳ್ಳಿರ್ದಳ್ ೧೬

ಮ॥ ನಿಮಿರ್ದಂಗಂ ಕಡುಚೆಲ್ವನೀಯೆ ವಳಿಗಳ್ ಪ್ಯೆಗುಂದೆ ಮಧ್ಯಂ ಬಳುಂ
ಕೆ ಮರಲ್ದಕ್ಷಿ ವಿಳಾಸಮಂ ಕಱಿಯೆ ಕಕ್ಷಸ್ಥಾನದೊಳ್ಗಂಪು ತೀ
ಡೆ ಮನೋಜ್ಞಸ್ತನಮುರ್ಚೆ ಕಂಕಣರಝಣತ್ಕಾರಂ ಕರಂ ಪೊಣ್ಮೆ ಸಂ
ಭ್ರಮದಿಂ ತೋಳ್ಗಳನೆತ್ತಿ ಕಂಚುಕಮನಾಗಳ್ ಪಾಣಿಯಿಂ ನೂಂಕಿದಳ್ ೧೭

ವ॥ ಅನಂತರಂ

ಮ॥ ಪದೆದಾಲಿಂಗಿಸಿ ಮುದ್ದುಗೆಯ್ದು ಮೊಗದೊಳ್ವಕ್ತ್ರಾಬ್ಜಮಂ ಸಾರ್ಚಿ ಸಾ
ರ್ಚಿದ ರಾಗಾಧರಮಂ ಕರ್ದುಂಕಿ ರತಿರಾಗಾಂಭೋಧಿ ಪ್ಯೆಪೆರ್ಚುವಂ
ದದೆ ನಾನಾ ಕಳೆಗೊಡಿ ತಳ್ತು ತನುವೊಂದೆಂಬಂತೆ ಸಂಭೋಗ ಸಂ
ಪದಮಂ ತಾಂ ಪಡೆದಂ ಪಯೋಜಮುಖಿಯೊಳ್ ಭೂಪಾಳ ಪುಷ್ಪಾಯುಧಂ ೧೮

೧೬. ಕಾರಿರುಳಿನ ಹೊಳೆಯುವ ನಕ್ಷತ್ರಗಳಿಗೆ ಸಮವೆನ್ನುವಂತೆ ಮಲ್ಲಿಗೆಯ ಹೂವು ಮುಂಗುರುಗಳಲ್ಲಿ ಶೋಭಿಸುತ್ತಿರಲು ಚಂದ್ರವದನೆಯಾದ ಮನ್ಮಥಾಕಾರನಾದ ಗಂಡನ ತೊಡೆಯ ಮೇಲೇರಿ ಕುಳಿತಳು. ೧೭. ನಿಮಿರಿನಿಂತ ದೇಹವು ವಿಶೇಷ ಚೆಲುವನ್ನುಂಟು ಮಾಡುತ್ತಿತ್ತು. ತ್ರಿವಳಿಗಳು ಇಲ್ಲದಂತಾದುವು. ನಡುವು ಬಳುಕುತ್ತಿತ್ತು. ಅರಳಿದ ಕಣ್ಣು ಬೆಡಗನ್ನು ಹೊರಸೂಸುತ್ತಿದ್ದವು. ಬಗಲಿನ ಒಳ್ಳೆಯ ವಾಸನೆಯು ಹೊರ ಸೂಸಿತು. ಮನೋಹರವಾದ ಮೊಲೆಯು ಕಟ್ಟು ಬಿಚ್ಚಿತು. ಕೈಬಳೆಗಳ ಝಣ ಝಣ ಶಬ್ದವು ಹೊರಟಿತು. ಸಂಭ್ರಮದಿಂದ ತೋಳುಗಳನ್ನು ಮೇಲಕ್ಕೆತ್ತಿ ಉಟ್ಟಕುಪ್ಪಸ ವನ್ನು ಎತ್ತಿ ತೆಗೆದು ಕೈಯಿಂದ ಆಚೆಗೆ ನೂಕಿದಳು. ವ॥ ಆಮೇಲೆ ೧೮. ಸಂತೋಷ ದಿಂದ ತಬ್ಬಿಕೊಂಡು ಮುದ್ದುಮಾಡಿ ಅವಳ ಮುಖದಲ್ಲಿ ತನ್ನ ಮುಖಕಮಲವನ್ನಿಟ್ಟು, ಅವಳು ಚಾಚಿದ ಕೆಂಪಾದ ತುಟಿಯನ್ನು ಕಚ್ಚಿ, ರತಿಕ್ರೀಡೆಯ ಅನುರಾಗವೆಂಬ ಸಮುದ್ರವು ಉಕ್ಕೇರುವಂತೆ ನಾನಾ ವಿಧವಾದ ರತಿಕ್ರೀಡಾ ಸಂಬಂಧದ ಕಲೆಗಳಿಂದ ಕೂಡಿದವನಾಗಿ, ಇಬ್ಬರ ದೇಹಗಳೂ ಒಂದೇ ಎನ್ನುವ ರೀತಿಯಲ್ಲಿ ಸಂಭೋಗಸುಖದ ಸಂಪತ್ತನ್ನು ಆ ಕಮಲಮುಖಿಯೊಡನೆ ಸತ್ಯೇಂದ್ರಚೋಳನೆಂಬ ಮನ್ಮಥನು ಪಡೆದನು.

ಮ॥ಸ್ರ॥ ಜನಿತಾನಂದಾಶ್ರುಪೂರ್ಣಂ ನಯನಮಧಿಕ ಘರ್ಮಾಂಬುಕೀರ್ಣಂ ಕಪೋಲಂ
ತನುರೋಮಾಂಚಪ್ರಯುಕ್ತಂ ಮೃದುಹಸಿತ ಸುಧಾಸಿಕ್ತಮಾಸ್ಯಾಂಬುಜಂ ಚುಂ
ಬನಕಿಂಚನ್ಮುಕ್ತರಾಗಂ ಲಸದಧರದಳಂ ಚಿತ್ತಮಾತ್ತಾನುರಾಗಂ
ಸ್ತನಮಾ ಲುಪ್ತಾಂಗರಾಗಂ ರಸಭರಜ ಘನಾಭೋಗಮನ್ಯೋನ್ಯಯೋಗಂ ೧೯

ಚಂ॥ ತನುಲತೆ ಘರ್ಮವಾರಿಕಣಕುಟ್ಮಳಮಾಂತಿರೆ ವಕ್ತ್ರಪದ್ಮದೊಳ್
ಜನಿಯಿಸೆ ಸೊಂಪು ಕಂಪುವೆರಸಿರ್ದೆಳಸುಯ್ಯೆಲರುರ್ವಿ ತೀಡೆ ಭೋಂ
ಕನೆ ಕುರುಳೆಂಬ ತುಂಬಿ ನಲಿದಾಡೆ ತಳಿರ್ತಿರೆ ರಾಗವಾಂತು ತ
ನ್ಮನವೆನಿಸಿರ್ಪ ಮಾವು ರತಿಚೈತ್ರದೊಳೊಪ್ಪಿದರೊಲ್ದು ಕಾದಲರ್ ೨೦

ವ॥ ಇಂತು ಸಮಾನುರಾಗ ಸಂಜನಿತ ಸಮರತಿ ಸುಖಾನುಭವ ಪರಿಣತಾಂತಃಕರಣರಾಗಿ ಕಾದಲರ್ ಸುಖನಿದ್ರೆಗೆಯ್ಯುತ್ತುಮಿರೆಯಿರೆ ನಿಶಾವಸಾನಸಮಯದಲ್ಲಿ

೧೯. ನಯನಗಳು ಅತ್ಯಂತ ಆನಂದದಿಂದ ಆನಂದಬಾಷ್ಪಗಳಿಂದ ತುಂಬಿದವು. ಕಪೋಲಗಳು ಹೆಚ್ಚಾದ ಬೆವರಿನ ಹನಿಗಳಿಂದ ಕೂಡಿದವು. ದೇಹವು ವಿಶೇಷವಾದ ರೋಮಾಂಚನದಿಂದ ಕೂಡಿತ್ತು. ಮಂದಸ್ಮಿತವೆಂಬ ಅಮೃತರಸದಿಂದ ಮುಖಕಮಲವು ತೊಯ್ದು ಹೋಯಿತು. ತುಟಿಗಳು ಚುಂಬನದ ಕಾರಣದಿಂದ ಸ್ವಲ್ಪಮಟ್ಟಿಗೆ ತಮ್ಮ ಕೆಂಪು ಬಣ್ಣವನ್ನು ಕಳೆದುಕೊಂಡವು. ಅವರು ಅತ್ಯಂತ ಅನುರಾಗದಿಂದ ಕೂಡಿದ ಚಿತ್ತವುಳ್ಳವರಾಗಿದ್ದರು. ಸ್ತನಗಳ ಮೇಲೆ ಹಚ್ಚಿದ ಸುಗಂಧ ಲೇಪನವು ಅಳಿಸಿತ್ತು. ಅನ್ಯೋನ್ಯವಾಗಿ ಕೂಡಿಕೊಂಡಿದ್ದ ಭೋಗಯೋಗ್ಯ ಕಟಿಪ್ರದೇಶಗಳು ದ್ರವೀಭಾವವುಳ್ಳವುಗಳಾಗಿದ್ದವು.
೨೦. ಲತೆಯಂತಿರುವ ತನುವು ಬೆವರಿನ ಹನಿಗಳೆಂಬ ಮೊಗ್ಗಿನಿಂದ ಕೂಡಿತ್ತು. ಕಮಲ ಸದೃಶ ಮುಖದಲ್ಲಿ ಸುಖದ ಸ್ವಾರಸ್ಯವು ಹುಟ್ಟಿತ್ತು. ಸುಗಂಧದಿಂದ ಕೂಡಿದ ಉಸುರೆಂಬ ಎಳೆಗಾಳಿಯು ಉಬ್ಬಿ ಬೀಸುತ್ತಿತ್ತು. ತಟ್ಟನೆ ಮುಂಗುರುಳೆಂಬ ಭ್ರಮರಗಳು ನಲಿದು ಆಡುತ್ತಿದ್ದವು. ಮನಸ್ಸೆಂಬ ಮಾಮರವು ಅನುರಾಗವೆಂಬ ಚಿಗುರಿನಿಂದ ತುಂಬಿರಲು ಆ ದಂಪತಿಗಳು ಪರಸ್ಪರ ಪ್ರೀತಿಯಿಂದ ರತಿಕ್ರೀಡೆಯೆಂಬ ಚೈತ್ರಮಾಸದಂತೆ ಶೋಭಿಸುತ್ತಿದ್ದರು. ವ॥ ಸಮಾನವಾದ ಅನುರಾಗದಿಂದ ಹುಟ್ಟಿದ ಹೊದಿಕೆಯಾದ ರತಿಕ್ರೀಡೆಯ ಸುಖದ ಆನಂದಪೂರ್ಣವಾದ ಅಂತಃಕರಣವುಳ್ಳವರಾಗಿ ಆ

ಮ॥ ಮದವದ್ಭದ್ರಗಜೇಂದ್ರಮಂ ಸುರಸರಿತ್ಸಂಜಾತ ಕಂಜಾತಮಂ
ಸದಲಂಕಾರ ವೃಷೇಂದ್ರನಂ ವಿತತರೋಚಿರ್ಗಾತ್ರನಂ ಮಿತ್ರನು
ಬಿದುಗಲ್ಗನ್ನಡಿಯುಂ ಸುಧಾಬ್ಧಿಯನಮರ್ತ್ಯಾಧಾರವಂ ಮೇರುವಂ
ಮುದದಿಂ ಸ್ವಪ್ನದೆ ಕಂಡಳಾ ವಧುಕಳಾಶ್ರೀಸಾಂದ್ರನಂ ಚಂದ್ರನಂ ೨೧

ವ॥ ಮತ್ತಮಾಗಳ್

ಮ॥ ನೆರೆಯೊಳ್ ನೈದಿಲೆ ನಾಣ್ಚಿಪಂತೆನಗೆ ತಾರಾನಾರಿಯರ್ ನೋಡೆ ಬಂ
ದಿರುಳೆನ್ನಂ ಕರದಿಂದೆ ಮುಟ್ಟಿದನಿವಂ ದೋಷಾಕರಂ ವಕ್ರಮಂ
ಭರದಿಂ ಮುಚ್ಚಿದೆನೆಂದಿನಂಗಳಿನಿನಾದ ವ್ಯಾಜದಿಂ ಪೇಳೆ ತಾ
ವರೆ ಪಾದಾಗ್ರದೆ ನೂಂಕಿದಂ ಮುಳಿದವಂ ವಾರಾಶಿಯೊಳ್ ಚಂದ್ರನಂ ೨೨

ಕಂ॥ ದಿನಮಣಿ ನೀನೆಲೆ ವನಿತಾ
ಜನಮಣಿಯಾನೆಂದು ಚುಂಬಿಸಿದ ಪೂರ್ವದಿಶಾಂ
ಗನೆಯ ಮುಖಕುಂಕುಮಂ ನೆ
ಟ್ಟನೆ ತಳ್ತಂತೆಸೆದುದರುಣರುಚಿ ದಿನಕರನಾ ೨೩

ದಂಪತಿಗಳು ಸುಖವಾಗಿ ನಿದ್ದೆ ಮಾಡುತ್ತಿರಲು ಬೆಳಗಿನ ಸಮಯದಲ್ಲಿ, ೨೧. ಮದಿಸಿದ ಮಂಗಳಕರ ಆನೆಯನ್ನೂ, ಅಮರ ಗಂಗಾನದಿಯಲ್ಲಿ ಹುಟ್ಟಿದ ಕಮಲವನ್ನೂ, ಅಲಂಕಾರ ವಿಶಿಷ್ಟವಾದ ಗೂಳಿಯನ್ನೂ, ವಿಸ್ತಾರವಾದ ಕಿರಣಗಳಿಂದ ಕೂಡಿದ ಸೂರ್ಯನನ್ನೂ, ಚಂದ್ರ ಕಾಂತಶಿಲೆಯ ಕನ್ನಡಿಯನ್ನೂ, ಕ್ಷೀರಸಮುದ್ರವನ್ನೂ, ಮರ್ತ್ಯಲೋಕಕ್ಕೆ ಆಧಾರ ಭೂತವಾದ ಮೇರುಪರ್ವತವನ್ನೂ, ಷೋಡಶಕಲಾಪೂರ್ಣನಾದ ಚಂದ್ರನನ್ನೂ ಆ ಸತ್ಯೇಂದ್ರಚೋಳನ ಹೆಂಡತಿಯಾದ ಅಮೃತಮತಿಯು ಸಂತೋಷದಿಂದ ಸ್ವಪ್ನದಲ್ಲಿ ಕಂಡಳು. ವ॥ ಮತ್ತು ಆಗ, ೨೨. "ಪಕ್ಕದಲ್ಲಿಯೇ ಇದ್ದ ಕನ್ನೈದಿಲೆಯನ್ನು ನಾಚಿಸುವ ಹಾಗೆ, ನಕ್ಷತ್ರಗಳೆಂಬ ಹೆಂಗಸರು ನೋಡುತ್ತಿದ್ದಂತೆಯೇ ಬಂದು ರಾತ್ರಿಯಲ್ಲಿ ನನ್ನನ್ನು ಈ ದೋಷಾಕರನಾದ ಚಂದ್ರನು ತನ್ನ ಕರದಿಂದ ಮುಟ್ಟಿದನು. ಆಗ ಭರದಿಂದ ಮುಖವನ್ನು ಮುಚ್ಚಿಕೊಂಡೆನು" ಎಂದು ತನ್ನ ಗಂಡನಾದ ಸೂರ್ಯನಿಗೆ ತಾವರೆಯು ದುಂಬಿಗಳ ಝೇಂಕಾರರವವೆಂಬ ನೆಪದಿಂದ ಹೇಳಲಾಗಿ, ಆ ಸೂರ್ಯನು ಕೋಪಗೊಂಡು ಚಂದ್ರನನ್ನು ತನ್ನ ಪಾದಗಳ ತುದಿಯಿಂದ ಸಮುದ್ರದಲ್ಲಿ ನೂಕಿದನು. ೨೩. ಪೂರ್ವ ದಿಕ್ಕೆಂಬ ಸ್ತ್ರೀಯು ಸೂರ್ಯನನ್ನು ಕುರಿತು, 'ನೀನು ದಿನಮಣಿ ನಾನು ವನಿತಾಮಣಿ' ಎಂದು ಚುಂಬಿಸಿದಾಗ, ಆ ಪೂರ್ವದಿಕ್ಕೆಂಬ ಹೆಂಗಸಿನ ಮುಖದಲ್ಲಿರುವ ಕುಂಕುಮವು ಚೆನ್ನಾಗಿ ಹತ್ತಿಕೊಂಡ ಹಾಗೆ ಕೆಂಪುಬಣ್ಣದ ಸೂರ್ಯಮಂಡಲವು ಶೋಭಿಸಿತು.

ವ॥ ಮತ್ತಂ

ಕಂ॥ ಭುವನಜ ಭವಾಂಡಭವನಕೆ
ಸವೆದುರುರವಿಬಿಂಬಮೆಂಬ ಜಾದಣದೊಳಪೊ
ಕ್ಕವಿರಳತ ದಂಡದ ಬಹಿಃ
ಸುವರ್ಣರುಚಿ ಪರ್ಬಿದಂತೆ ಕೆಂಬಿಸಿಲೆಸೆಗುಂ ೨೪

ಚಂ॥ ಪರೆದಿರೆ ನುಣ್ಗುರುಳ್ ನೊಸಲೊಳಾಳ್ದಿರೆ ಕಣ್ಗಡೆ ಕೆಂಪನಿಟ್ಟ ಕ
ಸ್ತೂರಿಯ ಲಲಾಮಮಚ್ಚಳಿಯದಂತಿರದೊಪ್ಪಿರೆ ಕೇಶಬಂಧಮೊಂ
ದಿರೆ ಶಿಥಿಲತ್ವಮಂ ನಸುಬೆಮರ್ ಕುಚಮಧ್ಯದೊಳುಣ್ಮೆ ಸುಯ್ಯೆಲರ್
ತರಹರವಾಂತು ಸೂಸೆ ಸತಿಯುಪ್ಪವಡಂಬಡೆದೊಪ್ಪಿ ತೋರಿದಳ್ ೨೫

ವ॥ ಆಗಳ್

ಕಂ॥ ಜಳಪಕ್ಷಿಗಳುಲಿಯಿಂದಂ
ಕಳಹಂಸಂ ಕಮಳತಳ್ಪದಿಂದೇಳ್ವವೊಲೊ
ಲ್ದಿಳೆಯರಸನೆಳ್ದನಾ ಮಂ
ಗಳಪಾಠಕರುಲಿಯಿನಮಳತಳ್ಪಸ್ಥಳದಿಂ ೨೬

ವ|| ಮತ್ತು ೨೪. ಬ್ರಹ್ಮಾಂಡವೆಂಬ ಭವನಕ್ಕೆ ರವಿಬಿಂಬವೇ ಕಿಟಕಿ. ಆ ಕಿಟಕಿಯ ಮೂಲಕ ಭವನದ ಸುವರ್ಣರಾಶಿಯು ಹೊರಹೊಮ್ಮಿ ರಂಜಿಸುವುದೋ ಎಂಬಂತೆ ಕೆಂಬಿಸಿಲು ರಂಜಿಸಿತು. (ಟಿಪ್ಪಣಿ : ಭುವನಜ=ಕಮಲದಲ್ಲಿ, ಭವ=ಹುಟ್ಟಿದವನು ಬ್ರಹ್ಮ. ಸುವರ್ಣಮಯವಾದ ಮೇರುಪರ್ವತದ ಕಾಂತಿಯೇ ಭವನದೊಳಗಿರುವ ಸುವರ್ಣ ಕಾಂತಿ. ರಂ). ೨೫. ನುಣುಪಾದ ಮುಂಗುರುಳು ಚಲ್ಲಾಪಿಲ್ಲಿಯಾಗಿ ಹಣೆಯ ಮೇಲೆ ಚಲ್ಲಾಡಿದ್ದವು. ಕಡೆಗಣ್ಣು ಕೆಂಪುಬಣ್ಣವನ್ನು ಹೊಂದಿದ್ದವು. ಹಣೆಯ ಮೇಲಿಟ್ಟಿದ್ದ ಕಸ್ತೂರಿಯ ಬೊಟ್ಟು ಅಚ್ಚಳಿಯದಂತೆ ಇದ್ದು ಶೋಭಿಸುತ್ತಿತ್ತು. ಕಟ್ಟಿದ ಕೂದಲುಗಳು ಸಡಿಲವಾಗಿದ್ದವು. ಸ್ವಲ್ಪ ಬೆವರು ಮೊಲೆಗಳ ಮಧ್ಯದಲ್ಲಿ ಹೊರಹೊಮ್ಮಿತ್ತು. ನಿಟ್ಟುಸಿರು ನಿದಾನವಾಗಿ ಸೂಸಿಬರುತ್ತಿತ್ತು. (ಹೀಗೆ) ಮಹಾರಾಣಿಯು ಹಾಸಿಗೆಯಿಂದೆದ್ದು ಶೋಭಿಸಿದಳು. ವ|| ಆಗ ೨೬. ಇಳಾರಮಣನಾದ ಸತ್ಯೇಂದ್ರಚೋಳನು ನೀರುಹಕ್ಕಿಗಳ ಕಲಕಲರವದಿಂದ ರಾಜಹಂಸಪಕ್ಷಿಯು ಕಮಲದ ಹಾಸಿಗೆಯಿಂದ ಏಳುವಂತೆ ಆ ಮಂಗಳಪಾಠಕರ ಧ್ವನಿಯಿಂದ ಶ್ರೇಷ್ಠಹಾಸಿಗೆಯಿಂದ ಮೇಲೆದ್ದನು.

ವ॥ ಅಂತಿರ್ವರುಮೆಳ್ದು ಶಿವಸ್ಮರಣಪರಿಣತಾಂತಃಕರರುಮಪೂರ್ವ ಸುರಭಿಜಲ ಪರಿರಚಿತ ಸ್ನಾನರುಂ ಪರಿವೃತ ಧೌತವಸನ ಸಮುಂಚಿತ ಕೋಮಳಕಳೇವರರುಂ ವಿರಚಿತ ಶಿವ ಲಿಂಗಪೂಜಾನೂನವಿಧಾನರುಂ ತತ್ಪದಾಂಬುಪ್ರಸಾದಸ್ವಾದನಾನಂದ ಕಂದಳಿತ ಹೃದಯರುಂ ಯಥೋಚಿತ ಪ್ರಧಾನ ನಾನಾ ದಾನವಿಧಾನ ಸನ್ಮಾನಮಾನಿತಾ ಸಮಾನ ಮಾಹೇಶ್ವರ ಪ್ರತಾನರುಂ ಅಭಿನವಾಭರಣಗಣ ಪರಿಕಲಿತ ದಿವ್ಯಾಂಗರುಂ ಅತಿಸುಗಂಧ ತಾಂಬೂಲ ಮಧುರತರ ಮುಖಾಂತರ್ವಳಯರುಂ ಅಮೃತಮತಿ ಸತ್ಯೇಂದ್ರನರೇಂದ್ರರುಂ ಅತ್ಯಂತ ಪ್ರಮೋದದಿಂ ರತಿಮದನರಂ ಪಳಿವ ವಿಳಾಸದಿಂ ಕತಿಪಯಾಪ್ತಸಖೀಜನಂಬೆರಸು ಕೇಳೀ ನಿಳಯದ ಕನತ್ಕನಕ ಪರ್ಯಂಕಪೀಠಮನಳಂಕರಿಸಿ ಕುಳ್ಳಿರ್ದಾಗಳ್

ಕಂ॥ ಮೊಗಸಸಿ ತಿಳಿಜೊನ್ನಮನೊ
ಲ್ದುಗುವಂತಿರೆ ತುಳ್ಕಿ ರದನರುಚಿರಮಣಂಗಾ
ಮೃಗಲೋಚನೆ ಪೆಳ್ದಳ್ಮುದ
ಮೊಗೆತರೆ ತಾಂ ಕಂಡ ಕನಸನೆಲ್ಲಮನಾಗಳ್ ೨೭

ವ॥ ಈ ರೀತಿ ಇಬ್ಬರೂ ಎದ್ದು ಶಿವನ ಸ್ಮರಣೆಯಿಂದ ಪರಿಣತಗೊಂಡ ಅಂತಃಕರಣ ವುಳ್ಳವರಾದರು. ಅಪೂರ್ವವಾದ ಸುಗಂಧಮಿಶ್ರ ಜಲದಿಂದ ಸ್ನಾನಮಾಡಿದವ ರಾದರು. ಶುಭ್ರವಸ್ತ್ರಗಳನ್ನು ಉಟ್ಟು ಶೃಂಗಾರಗೊಂಡ ಕೋಮಲ ದೇಹವುಳ್ಳವ ರಾದರು. ಚ್ಯುತಿಯಿಲ್ಲದ ಶಿವಲಿಂಗ ಪೂಜಾವಿಧಾನವನ್ನು ಮುಗಿಸಿದವರಾದರು. ಆ ಶಿವನ ಪಾದತೀರ್ಥ ಮತ್ತು ಪ್ರಸಾದಗಳ ಸ್ವೀಕಾರದಿಂದಾದ ಆನಂದದಿಂದ ವಿಕಾಸಗೊಂಡ ಹೃದಯವುಳ್ಳವರಾದರು. ಯಥಾಯೋಗ್ಯವಾಗಿ ಅನೇಕ ಬಗೆಯಾಗಿ, ದಾನಗಳನ್ನು ಕೊಡುವುದರ ಮೂಲಕ ಅಸಮಾನರಾದ ಮಾಹೇಶ್ವರರುಗಳಿಗೆ ಸನ್ಮಾನ ಮಾಡಿದರು. ನೂತನವಾದ ಆಭರಣ ಸಮೂಹಗಳಿಂದ ಶೃಂಗಾರ ಮಾಡಿಕೊಂಡ ದೇಹ ವುಳ್ಳವರಾದರು. ವಿಶೇಷವಾದ ಸುಗಂಧಮಿಶ್ರ ಮಧುರತರವಾದ ತಾಂಬೂಲವನ್ನು ಹಾಕಿಕೊಂಡ ಬಾಯಿಯಿಂದ ಕೂಡಿದವರಾಗಿ ಅಮೃತಮತಿ ಮತ್ತು ಸತ್ಯೇಂದ್ರಚೋಳ ಮಹಾರಾಜರು ಸಂತೋಷಭರಿತರಾಗಿ ರತಿಮನ್ಮಥರನ್ನು ಕೀಳ್ಮಾಡುವ ಮನೋಹರತೆ ಯಿಂದ ಇದ್ದು ಕೆಲವೇ ಜನ ಆಪ್ತರಾದ ಸಖಿಯರುಗಳಿಂದ ಕೂಡಿ ಕ್ರೀಡಾಗೃಹದ ಥಳಥಳಿಸುವ ಬಂಗಾರದ ಮಂಚದ ಮೇಲೆ ಕುಳಿತಿದ್ದಾಗ ೨೭. ರಮಣನಾದ ಸತ್ಯೇಂದ್ರ ಚೋಳಮಹಾರಾಜನಿಗೆ ಆ ಮೃಗಲೋಚನೆಯು–ಮುಖವೆಂಬ ಚಂದ್ರನು ತಿಳಿ ಬೆಳದಿಂಗಳನ್ನು ಸೂಸುವಂತೆಯೂ, ಹಲ್ಲಿನ ಕಾಂತಿಯು ತುಳುಕಾಡುವಂತೆಯೂ ಕೂಡಿ, ತಾನು ರಾತ್ರಿಯಲ್ಲಿ ಕಂಡ ಕನಸಿನ ಪರಿಯೆಲ್ಲವನ್ನು ಸಂತೋಷ ತುಂಬಿದ ಹೃದಯದಿಂದ

ಕೇಳ್ದದನೋದಿನಿಸುಳಿಯದೆ
ತಾಳ್ದತಿಮುದಮಂ ತನೂರುಹಂ ಗುಡಿಗಟ್ಟು
ತ್ತೇಳ್ದಿರೆ ತನುವೊಳ್ತರುಣಿಗೆ
ಪೇಳ್ದಂ ತತ್ಫಳಮನರಸನಿಂತೆಂದಾಗಳ್ ೨೮

ಮ॥ ಕರಿಯಿಂ ಭದ್ರಯುತಂ ಸರೋಜದೆ ಗುಣಾಧಾರಂ ವೃಷಾಧೀಶನಿಂ
ಹರಭಕ್ತಂ ಕಮಳಾಪ್ತನಿಂ ಪ್ರಬಳತೇಜೋಯುಕ್ತನಾದರ್ಶದಿಂ
ಪರಸಂಪ್ರೀತದಿನಬ್ಧಿಯಿಂದತಿಗಭೀರಂ ಮೇರುವಿಂ ಭೂಮಿಭೃ
ದ್ವರನಬ್ಜಾಹಿತನಿಂ ಕಳಾನಿಧಿಕುಮಾರಂ ಪುಟ್ಟುವಂ ನಿಶ್ಚಯಂ ೨೯

ವ॥ ಎಂದ ಮನೋರಮಣನ ಮಾತಂ ಮನದೆಗೊಂಡು ಮನೋರಥಂ ಕೈಸಾರ್ದಂತೆ ನಂಬಿ ಸಲವೇಳಿ ಮಿಾಳಿ ಪರಮಹರ್ಷಮನೊಳಕೊಂಡಿರುತ್ತಮಿರೆಯಿರೆ

ಕಂ॥ ಹೃದಯದೊಳೊದವಿದ ಶಿವಮಂ
ತ್ರದ ಕಳೆ ಸುಮುಹೂರ್ತದೊಳ್ ಶಿವಪ್ರೇರಣೆಯಿಂ
ಸುದತಿ ಪುಣ್ಯೋದರದೊಳ್
ಪದಪಿಂದಿಳಿತಂದು ನೆಲಸೆ ಬಳೆದುದು ಗರ್ಭಂ ೩೦

ಹೇಳಿದಳು. ೨೮. ಅರಸನು ಆ ಕನಸಿನ ರೀತಿಯನ್ನು ಸ್ವಲ್ಪವೂ ಬಿಡದಂತೆ ಕೇಳಿದನು. ಅತಿ ಸಂತೋಷವನ್ನು ಹೊಂದಿದನು. ದೇಹವು ರೋಮಾಂಚನಗೊಂಡು ಕೂದಲುಗಳು ಎದ್ದು ನಿಂತವು. ಹೆಂಡತಿಗೆ ಸೂಕ್ಷ್ಮವಾಗಿರುವಂತೆ ಆ ಕನಸಿನ ಫಲವನ್ನು ಅರಸನು ಹೀಗೆಂದು ಹೇಳಿದನು. ೨೯. "ಮದಗಜವನ್ನು ಕಂಡುದರಿಂದ ಮಂಗಳಕರನೂ, ಕಮಲ ಪುಷ್ಪವನ್ನು ಕಂಡುದರಿಂದ ಸದ್ಗುಣಗಳಿಗೆ ಆಧಾರಭೂತನೂ, ವೃಷಭನನ್ನು ಕಂಡದ್ದ ರಿಂದ ಪರಮೇಶ್ವರಭಕ್ತನೂ, ಸೂರ್ಯನನ್ನು ಕಂಡುದರಿಂದ ಪ್ರಬಲವಾದ ತೇಜಸ್ಸಿನಿಂದ ಕೂಡಿದವನೂ, ಕನ್ನಡಿಯನ್ನು ಕಂಡುದರಿಂದ ಇನ್ನೊಬ್ಬರಿಗೆ ಪ್ರೀತಿಯನ್ನುಂಟುಮಾಡು ವಂತವನೂ, ಸಮುದ್ರದರ್ಶನದಿಂದ ಅತ್ಯಂತ ಗಂಭೀರಸ್ವಭಾವದವನೂ, ಮೇರುವಿನ ದರ್ಶನದಿಂದ ಭೂಭಾಗವನ್ನು ಧಾರಣಮಾಡುವ ಸಾಮರ್ಥ್ಯವುಳ್ಳವನೂ, ಚಂದ್ರನ ನೋಟದಿಂದ ಅನೇಕ ಕಲೆಗಳಿಗೆ ಆಧಾರಭೂತನೂ ಆದ ಕುಮಾರನು ನಿಶ್ಚಯವಾಗಿ ಹುಟ್ಟುವನು." ವ|| ಹೀಗೆಂದ ಪತಿದೇವನ ಮಾತನ್ನು ಮನಸ್ಸಿನಲ್ಲಿ ಗ್ರಹಿಸಿ, ಮನೋ ರಥವು ಕೈಗೂಡಿದಂತೆ ನಂಬಿ ಸಂತೋಷಗೊಂಡು ಪರಿಪೂರ್ಣವಾದ ಪರಮಹರ್ಷದೊಡನೆ ಇರುತ್ತಿರಲಾಗಿ ೩೦. ಹೃದಯದಲ್ಲಿ ಸಿದ್ಧಿಸಿದ ಶಿವಪಂಚಾಕ್ಷರೀ ಮಂತ್ರದ ತೇಜಸ್ಸು ಪ್ರಕಾಶಮಾನವಾಗಿ ಇಳಿದುಬಂದು, ಶಿವನ ಪ್ರೇರಣೆಯಿಂದ ಸುಮುಹೂರ್ತದಲ್ಲಿ ಆ ಅಮೃತಮತಿದೇವಿಯ ಪುಣ್ಯಮಯವಾದ ಗರ್ಭದಲ್ಲಿ ನೆಲಸಲಾಗಿ ಗರ್ಭವು ಬೆಳೆ

ಮ॥ ವಳಿಗಳ್ಪಿಂಗಿದುವಾಸ್ಯಮಿಂದುರುಚಿಯಂ ಕೈಕೊಂಡುದಾ ನಾಭಿ ಗು
ಣ್ಪಳಿದೊಪ್ಪಿತ್ತು ವಿಲಾಸಯಾನಮದು ಮಾಂದ್ಯಂಬೆತ್ತುದಂಭೋಜಕು
ಟ್ಮಳ ವಕ್ಷೋರುಹದಗ್ರಮಾಳ್ದುದೆಳೆಗರ್ಪಂ ನುಣ್ಗದಿರ್ದೇಹದೊಳ್
ಕೆಳೆಗೊಂಡತ್ತು ತನೂದರಂ ಬಳೆದುದಾ ತನ್ವಂಗಿಗಾ ಗರ್ಭದೊಳ್ ೩೧

ಕಂ॥ ಎಳೆಮುತ್ತಿನಂತೆ ಬೆಮರು
ಜ್ಜ್ವಳಬಿಂದುಗಳಿರೆ ಬೆಳರ್ತ ತರುಣಿಯ ವದನಂ
ಪೊಳೆದುದು ಕಾವನ ಕೈಯೊಳ್
ತೊಳಗುವ ಶಶಿಮಣಿಯ ಮಣಿಯ ಮುಕುರದ ಚೆಲ್ವಂ ೩೨

ತೊಲಗೆ ರಜಂ ತಮಮದು ಪೊಱ
ತೊಲಂಗುವಂತೆಸೆಯೆ ಮೇಚಕಂ ಚೂಚುಕಮಾ
ಲಲನೆಗೆ ತನುವೊಳ್ ಸತ್ವಂ
ಬಲಿದಂತೆ ಬೆಳರ್ತುದುರದಮಳಾರ್ಭಕನಿಂ ೩೩

ಶೃಂಗಾರವಸ್ತು ತೀವಿದ
ಗಾಂಗೇಯ ಕರಂಡಮೆನಿಸಿ ಮೊಲೆ ಚೂಚುಕಮೇಂ
ಕಂಗೊಳಿಸಿದುದೊ ತದಗ್ರದೆ
ಸಂಗಳಿಸಿದ ನೀಲಮಣಿಯ ಕಿಱು ಮುಚ್ಚಳವೊಲ್ ೩೪

ಯಿತು. ೩೧. ಆ ಅಮೃತಮತಿದೇವಿಗೆ ಗರ್ಭದ ಸಮಯದಲ್ಲಿ ಹೊಟ್ಟೆಯ ಮೇಲಿನ ಮೂರು ಮಡಿಕೆಗಳು ಮಾಯವಾದುವು. ಮುಖವು ಚಂದ್ರನ ಕಾಂತಿಯನ್ನು ಪಡೆಯಿತು. ತಗ್ಗಾದ ಹೊಕ್ಕಳವು ಮುಚ್ಚಿ ಶೋಭಿಸಿತು. ವಿಲಾಸದಿಂದ ಕೂಡಿದ ನಡಿಗೆಯು ಮಂದಗತಿಯುಳ್ಳದ್ದಾಯಿತು. ಕಮಲದ ಮೊಗ್ಗಿನಂತಿರುವ ಮೊಲೆಯ ತುದಿಗಳು ಎಳೆಗಪ್ಪು ಬಣ್ಣದಿಂದ ಕೂಡಿದವು. ನುಣ್ಣನೆಯ ಹೊಳೆಪು ದೇಹಕ್ಕೆ ಕೂಡಿ ಬಂತು. ತೆಳ್ಳನೆಯ ಹೊಟ್ಟೆಯು ದಪ್ಪವಾಯಿತು. ೩೨. ಉಜ್ವಲವಾದ ಬೆವರಿನ ಹನಿಗಳು ಎಳೆಯ ಮುತ್ತಿನಂತೆ ಇದ್ದು, ಬಿಳುಪಾದ ಆ ರಮಣಿಯ ಮುಖವು ಮನ್ಮಥನ ಕಯ್ಯಲ್ಲಿ ಪ್ರಕಾಶಿಸುವ ಚಂದ್ರಕಾಂತಶಿಲೆಯ ರತ್ನದ ಕನ್ನಡಿಯ ಚಲುವನ್ನು ಪಡೆಯಿತು. ೩೩. ಹೊಟ್ಟೆಯಲ್ಲಿನ ನಿರ್ಮಲವಾದ ಶಿಶುವಿನ ಕಾರಣದಿಂದಾಗಿ, ಆ ಅಮೃತಮತಿ ದೇವಿಗೆ ರಜೋಗುಣವು ಹೋಗಲಾಗಿ (ಮುಟ್ಟು ನಿಲ್ಲಲಾಗಿ), ಆ ಮುಂದಿರುವ ತಮೋ ಗುಣವು ತಾನಾಗಿ ಹೊರಗೆ ಬರುವಂತೆ ಕಪ್ಪುವರ್ಣದ ಮೊಲೆಯ ತೊಟ್ಟು ದೇಹದಲ್ಲಿ ಸತ್ವಗುಣವು ಬಲಿತಂತೆ (ಸತ್ತ್ವ=ಗರ್ಭ) ಅಧಿಕವಾಗಿ ಬೆಳೆಯಿತು. ೩೪. ಶೃಂಗಾರ ಮಯವಾದ ಸಾಮಾನುಗಳಿಂದ ತುಂಬಿದ ಬಂಗಾರದ ಭರಣಿಯ ಮೇಲುಭಾಗದಲ್ಲಿ ನೀಲಮಣಿಯಿಂದ ಮಾಡಿದ ಚಿಕ್ಕ ಮುಚ್ಚಳದ ಹಾಗೆ ಮೊಲೆಯ ತೊಟ್ಟು ಆದೇನು

ಜನದೃಷ್ಟಿ ತಾಗೆ ನಡು ಬಡ
ವೆನಿಸುತ್ತಿರೆ ಕಾವನಿಟ್ಟ ಕಾಪಿನ ಗೆರೆಯೇಂ
ದೆನೆ ಮಿಸುಗೆ ಬಾಸೆಯುದಱಿಂ
ಘನವೆನಿಸಿತಿದೆನಿಸಿ ತೀವಿಬಳೆದುದು ಗರ್ಭಂ ೩೫

ಎನಿತೆನಿತು ವದನವಿಧು ಬೆ
ಳ್ಪನೆ ತಳೆದುಜ್ವಳಿಸಿದುದು ಪಯೋಧರಚಕ್ರಾ
ನನಮನಿತನಿತು ಕರಂಗಿದು
ದೆನೆ ಪಗೆಗಾದಧಿಕತೇಜಮಂ ಸೈರಿಪರಾರ್ ೩೬

ಚಂ॥ ತರುಣಮರಾಳಮಂ ತಳೆದು ಕೊರ್ಬಿದ ಕೋಶಮನಾಂತ ಪದ್ಮಿನೀ
ತರುಣಿ ತರಂಗದಿಂ ನೆಗೆವ ಸೀರ್ಪನಿ ತಳ್ತಿರೆ ಭೃಂಗಮಾಲೆ ಮೇ
ಲಿರೆ ಮೆಱೆವಂತೆ ಪುತ್ರನೆಡೆಗೊಂಡುರು ಗರ್ಭಮನಾಂತು ಜಾಡ್ಯಮೊಂ
ದಿರೆ ಬೆಮರುಣ್ಮೆ ಬಾಸೆ ಕಡುಕರ್ಪಿಡಿದೊಪ್ಪಿರೆ ನೀಱೆ ತೋಱಿದಳ್ ೩೭

ಕಂ॥ ಬಳೆದುದು ಪೊಡೆಯುಂ ಜಘನಾ
ಚಳಮುಂ ಕರ್ಪಿಡಿದುದಳಕಮುಂ ಚೂಚುಕಮುಂ
ತಳೆದುದು ಮಾಂದ್ಯಮನತಿಮಂ
ಜುಳಗತಿಯುಂ ನುಡಿಯುಮಾ ಮೃದುಸ್ಮಿತಮುಖಿಯಾ ೩೮

ಶೋಭಿಸಿತೊ ! ೩೫. ಜನರ ದೃಷ್ಟಿಯು ತಾಗಿದ್ದರಿಂದ ಆಕೆಯ ನಡು ಬಡವಾದಂತಾಯಿತು. ಅವಳ ಉದರದಮೇಲಿನ ಕೂದಲು ಮನ್ಮಥನಿಟ್ಟ ದೃಷ್ಟಿದೋಷ ಪರಿಹಾರಾರ್ಥವಾದ ಕರಿಯ ಗೆರೆಯೆನಿಸಲು, ಉದರವು ಪುಷ್ಟವಾಯಿತು. ಗರ್ಭವು ಬೆಳೆಯಿತು. ೩೬. ಎಷ್ಟೆಷ್ಟು ವದನವೆಂಬ ಚಂದ್ರನ ಕಾಂತಿಯು ಬಿಳುಪನ್ನು ತಳೆದು ಪ್ರಕಾಶಮಾನವಾಯಿತೋ ಅಷ್ಟಷ್ಟು ಚಕ್ರವಾಕಗಳಂತಿರುವ ಮೊಲೆಗಳ ಮುಖವು (ತುದಿಯು) ಕರಗಿತು ಎನ್ನುವಾಗ ವೈರಿಗಾದ ಅಧಿಕ ತೇಜಸ್ಸನ್ನು ಸೈರಿಸುವವರು ಯಾರಿದ್ದಾರೆ ? (ಟಿಪ್ಪಣಿ : ಚಕ್ರವಾಕವು ಚಂದ್ರನ ವೈರಿಯಾದ ಮೇಘವನ್ನು ಪ್ರೀತಿಸುವುದರಿಂದ ಚಂದ್ರನಿಗೆ ವೈರಿ. ಅಲ್ಲದೆ ಪಯೋಧರ ಚಕ್ರ=ಮೇಘ ರಾಶಿ. ಅದು ಸ್ವತಃ ಚಂದ್ರನಿಗೆ ವೈರಿ. ೮೦) ೩೭. ತಾವರೆಯ ಬಳ್ಳಿಯೆಂಬ ಹೆಂಗಸು ತರುಣಹಂಸವನ್ನು, ಕಮಲದ ಮೊಗ್ಗುಗಳಂತೆ ಕುಚಗಳನ್ನು, ತೆರೆಗಳಿಂದ ಹಾರುವ ತುಂತುರುಹನಿಗಳೆಂಬ ಬೆವರಿನ ಹನಿಗಳನ್ನು, ಭೃಂಗಗಳ ಸಮೂಹವೆಂಬ ಕೂದಲುಗಳನ್ನು ಧರಿಸಿ ಶೋಭಿಸುವ ಹಾಗೆ ಸತ್ಪುತ್ರನನ್ನೊಳಗಿಟ್ಟುಕೊಂಡು ಗರ್ಭಧರಿಸಿ, ಆಲಸ್ಯವುಳ್ಳವಳಾಗಿ, ಬೆವರು ಮೈಯಲ್ಲಿ ಉಂಟಾಗಿರಲು ಅತಿಶಯ ಕಪ್ಪುಕೂದಲುಗಳಿಂದ ಕೂಡಿ ಆ ಸುಂದರಿಯು ಕಾಣುತ್ತಿದ್ದಳು. ೩೮. ಮೃದುವಾದ ಮಂದಹಾಸದಿಂದ ಕೂಡಿದ ಆ ಅಮೃತಮತಿಯ ಹೊಟ್ಟೆಯೂ, ಬೆಟ್ಟದಂತೆ ಇರುವ ಕಟಿಭಾಗವೂ ಬೆಳೆದುವು. ಮುಂಗುರುಳುಗಳೂ, ಮೊಲೆಗಳ ತುದಿಯೂ ಕಪ್ಪಾದುವು. ಮನೋಹರವಾದ ನಡಿಗೆಯೂ, ನುಡಿಯೂ ಮಂದ

ಮುಂಬಯಕೆಯಾಂತುದವಳ ಮ
ನಂ ಬಾಲಕನೊಲ್ದು ಬಯಕೆಯೆನೆ ಮೃಡಲೀಲಾ
ಡಂಬರಕಥಾಸುಧಾರಸ
ಮಂ ಬಿಡದೀಂಟಲ್ಕೆ ಶೈವನಿಧಿ ಶಶಿಮುಖಿಯಾ ೩೯

ಪುರಹರಪುರಾಣಮಂ ಶಂ
ಕರಚರಿತಮನಭವಕಾವ್ಯಮಂ ಭವಹರ ಭಾ
ಸುರಕೃತಿಯಂ ಗಿರಿಜಾವರ
ವರಚರಿತಮನಬಲೆ ಕೇಳ್ದು ಮುದಮಂ ತಳೆದಳ್ ೪೦

ಚಂ॥ ಪರಿಮಳವಾರಿಯಿಂ ಜಳಕಮಾಗಿಪ ನಲ್ಲುಣಿಸಿಕ್ಕುವಂಗರಾ
ಗರಚನೆಗೈವ ಮಾಲ್ಯಮನೆ ಸೂಡುವ ಸಿಂಗರಗೈವ ವೇಣಿಯಂ
ವಿರಚಿಪ ದರ್ಪಣಂಬಿಡಿವ ಬೆಳ್ಳೆಲೆಯಂ ಮಡಿದೀವ ದಿವ್ಯ ಚಾ
ಮರಮನೆ ಬೀಸುವಗ್ಗದ ವಿದಗ್ಧೆಯರೊಪ್ಪಿರೆ ದೇವಿ ರಂಜಿಪಳ್ ೪೧

ಸಚಿವನ ಪತ್ನಿ ತುಂಬಿದಱುದಿಂಗಳ ಗರ್ಭದೊಳೊಲ್ದುಬಂದು ತಂ
ದುಚಿತಸುವಸ್ತುವಿತ್ತು ಕಲಸೋಗರಮಂ ನಲಿದಿಕ್ಕಿ ಭೂಷಣ
ಪ್ರಚಯಮನಿಟ್ಟು ಪೇರೊಸಗೆಗೆಯ್ದು ಸಖೀಜನದೊಂದುಗೂಡಿ ಸ
ದ್ರುಚಿ ಮಿಗೆ ಮಾಡಿ ಸತ್ಕ್ರಿಯೆಯನಂಗನೆಗಾ ವಧು ಪೋದಳಳ್ಕಱಿಂ ೪೨

ಗತಿಯನ್ನು ಪಡೆದವು. ೩೯. ಶಿವಸಂಬಂಧವಾದ ಭಕ್ತಿಗೆ ಗಣಿಯಂತಿದ್ದ ಆ ಚಂದ್ರಮುಖಿಯಾದ ಅಮೃತಮತೀದೇವಿಯ ಗರ್ಭದಲ್ಲಿರುವ ಬಾಲಕನ ಬಯಕೆಗಳೋ ಎಂಬಹಾಗೆ ಪರಮೇಶ್ವರನ ಸುಂದರವಾದ ಕಥೆಯೆಂಬ ಅಮೃತರಸಪಾನಮಾಡುವ ಬಯಕೆಯು ಅವಳಿಗೆ ಉಂಟಾದುವು. ೪೦. ತ್ರಿಪುರಮಥನನಾದ ಶಿವನ ಪುರಾಣಗಳನ್ನೂ, ಸುಖದಾಯಕನಾದ ಶಂಕರನ ಚರಿತ್ರೆಯನ್ನೂ, ಜನನ ಮರಣಗಳನ್ನು ದೂರಗೊಳಿಸುವ ಪರಮೇಶ್ವರನ ನಿರ್ಮಲವಾದ ಕಾವ್ಯಗಳನ್ನೂ, ಗಿರಿಜಾಪತಿಯಾದ ಮಹಾದೇವನ ಚರಿತ್ರೆಯನ್ನೂ ಆ ಅಮೃತಮತಿಯು ಕೇಳಿ ಸಂತೋಷವನ್ನು ಹೊಂದಿದಳು. ೪೧. ಆ ಅಮೃತಮತಿದೇವಿಯು ಪನ್ನೀರಿನಿಂದ ಸ್ನಾನಮಾಡಿಸುವ, ಒಳ್ಳೆಯ ಭಕ್ಷ್ಯಭೋಜ್ಯಗಳನ್ನು ಊಟಕ್ಕೆ ಎಡೆಮಾಡುವ, ದೇಹಕ್ಕೆ ಸುಗಂಧಾದಿದ್ರವ್ಯಗಳನ್ನು ಅನುಲೇಪನಮಾಡುವ, ಹೂವುಗಳನ್ನು ಮುಡಿಸುವ, ಅಲಂಕಾರಮಾಡುವ, ಜಡೆಯನ್ನು ಹೆಣೆಯುವ, ಕನ್ನಡಿಯನ್ನು ಹಿಡಿಯುವ, ಬಿಳಿಯದಾದ ವೀಳ್ಯದೆಲೆಗಳನ್ನು ಮಡಿಚಿಕೊಡುವ, ಶ್ರೇಷ್ಠವಾದ ಚಾಮರ ಬೀಸುವ ಪ್ರೌಢೆಯರಾದ ಸ್ತ್ರೀಯರುಗಳಿಂದ ರಂಜಿಸುತ್ತಿದ್ದಳು. ೪೨. ಆರುತಿಂಗಳು ತುಂಬಿದ ಸಮಯದಲ್ಲಿ ಸಚಿವನಾದ ಪತಿಮೋಹಿಯ ಪತ್ನಿಯು ಪ್ರೀತಿಯಿಂದ ಬಂದು ಮಹಾರಾಣಿಗೆ ಉಚಿತವಾದ ವಸ್ತು ಒಡವೆಗಳನ್ನು ಕೊಟ್ಟು, ಕಲಸನ್ನವನ್ನು ಭೋಜನಕ್ಕೆ ಬಡಿಸಿ, ಅಲಂಕಾರದ್ರವ್ಯಗಳನ್ನು ತಂದು ಅಲಂಕರಿಸಿ ದೊಡ್ಡ ಹಬ್ಬವನ್ನೇಮಾಡಿ, ಸಖೀಜನರುಗಳಿಂದ ಕೂಡಿ ಆ ಅಮೃತಮತಿಗೆ ಸಂತೋಷವುಂಟಾಗುವಂತೆ ಸತ್ಕಾರಸಮಾರಂಭ

ಜನದೃಷ್ಟಿ ತಾಗೆ ನಡು ಬಡ
ಮೆನಿಸುತ್ತಿರೆ ಕಾವನಿಟ್ಟ ಕಾಪಿನ ಗೆರೆಯೇಂ
ದೆನೆ ಮಿಸುಗೆ ಬಾಸೆಯುದಱಿಂ
ಘನಮೆನಿಸಿತಿದೆನಿಸಿ ತೀವಿಬಳೆದುದು ಗರ್ಭಂ ೩೫

ಎನಿತೆನಿತು ವದನವಿಧು ಬೆ
ಳ್ಪನೆ ತಳೆದುಜ್ವಳಿಸಿದುದು ಪಯೋಧರಚಕ್ರಾ
ನನಮನಿತನಿತು ಕರಂಗಿದು
ದೆನೆ ಪಗೆಗಾದಧಿಕತೇಜಮಂ ಸೈರಿಪರಾರ್ ೩೬

ಚಂ॥ ತರುಣಮರಾಳಮಂ ತಳೆದು ಕೊರ್ಬಿದ ಕೋಶಮನಾಂತ ಪದ್ಮಿನೀ
ತರುಣಿ ತರಂಗದಿಂ ನೆಗೆವ ಸೀರ್ಪನಿ ತಳ್ತಿರೆ ಭೃಂಗಮಾಲೆ ಮೇ
ಲಿರೆ ಮೆಱೆವಂತೆ ಪುತ್ರನೆಡೆಗೊಂಡುರು ಗರ್ಭಮನಾಂತು ಜಾಡ್ಯಮೊಂ
ದಿರೆ ಬೆಮರುಣ್ಮೆ ಬಾಸೆ ಕಡುಕರ್ಪಿಡಿದೊಪ್ಪಿರೆ ನೀಱೆ ತೋಱಿದಳ್ ೩೭

ಕಂ॥ ಬಳೆದುದು ಪೊಡೆಯುಂ ಜಘನಾ
ಚಳಮುಂ ಕರ್ಪಿಡಿದುದಳಕಮುಂ ಚೂಚುಕಮುಂ
ತಳೆದುದು ಮಾಂದ್ಯಮನತಿಮಂ
ಜುಳಗತಿಯುಂ ನುಡಿಯುಮಾ ಮೃದುಸ್ಮಿತಮುಖಿಯಾ ೩೮

ಶೋಭಿಸಿತೊ ! ೩೫. ಜನರ ದೃಷ್ಟಿಯು ತಾಗಿದ್ದರಿಂದ ಆಕೆಯ ನಡು ಬಡವಾದಂತಾಯಿತು. ಅವಳ ಉದರದಮೇಲಿನ ಕೂದಲು ಮನ್ಮಥನಿಟ್ಟ ದೃಷ್ಟಿದೋಷ ಪರಿಹಾರಾರ್ಥವಾದ ಕರಿಯ ಗೆರೆಯೆನಿಸಲು, ಉದರವು ಪುಷ್ಟವಾಯಿತು. ಗರ್ಭವು ಬೆಳೆಯಿತು. ೩೬. ಎಷ್ಟೆಷ್ಟು ವದನವೆಂಬ ಚಂದ್ರನ ಕಾಂತಿಯು ಬಿಳುಪನ್ನು ತಳೆದು ಪ್ರಕಾಶಮಾನವಾಯಿತೋ ಅಷ್ಟಷ್ಟು ಚಕ್ರವಾಕಗಳಂತಿರುವ ಮೊಲೆಗಳ ಮುಖವು (ತುದಿಯು) ಕರಗಿತು ಎನ್ನುವಾಗ ವೈರಿಗಾದ ಅಧಿಕ ತೇಜಸ್ಸನ್ನು ಸೈರಿಸುವವರು ಯಾರಿದ್ದಾರೆ ? (ಟಿಪ್ಪಣಿ : ಚಕ್ರವಾಕವು ಚಂದ್ರನ ವೈರಿಯಾದ ಮೇಘವನ್ನು ಪ್ರೀತಿಸುವುದರಿಂದ ಚಂದ್ರನಿಗೆ ವೈರಿ. ಅಲ್ಲದೆ ಪಯೋಧರ ಚಕ್ರ=ಮೇಘ ರಾಶಿ. ಅದು ಸ್ವತಃ ಚಂದ್ರನಿಗೆ ವೈರಿ. ರಂ) ೩೭. ತಾವರೆಯ ಬಳ್ಳಿಯೆಂಬ ಹೆಂಗಸು ತರುಣಹಂಸವನ್ನು, ಕಮಲದ ಮೊಗ್ಗುಗಳಂತೆ ಕುಚಗಳನ್ನು, ತೆರೆಗಳಿಂದ ಹಾರುವ ತುಂತುರುಹನಿಗಳೆಂಬ ಬೆವರಿನ ಹನಿಗಳನ್ನು, ಭೃಂಗಗಳ ಸಮೂಹವೆಂಬ ಕೂದಲುಗಳನ್ನು ಧರಿಸಿ ಶೋಭಿಸುವ ಹಾಗೆ ಸತ್ಪುತ್ರನನ್ನೊಳಗಿಟ್ಟುಕೊಂಡು ಗರ್ಭಧರಿಸಿ, ಆಲಸ್ಯವುಳ್ಳವಳಾಗಿ, ಬೆವರು ಮೈಯಲ್ಲಿ ಉಂಟಾಗಿರಲು ಅತಿಶಯ ಕಪ್ಪುಕೂದಲುಗಳಿಂದ ಕೂಡಿ ಆ ಸುಂದರಿಯು ಕಾಣುತ್ತಿದ್ದಳು. ೩೮. ಮೃದುವಾದ ಮಂದಹಾಸದಿಂದ ಕೂಡಿದ ಆ ಅಮೃತಮತಿಯ ಹೊಟ್ಟೆಯೂ, ಬೆಟ್ಟದಂತೆ ಇರುವ ಕಟಿಭಾಗವೂ ಬೆಳೆದುವು. ಮುಂಗುರುಳುಗಳೂ, ಮೊಲೆಗಳ ತುದಿಯೂ ಕಪ್ಪಾದುವು. ಮನೋಹರವಾದ ನಡಿಗೆಯೂ, ನುಡಿಯೂ ಮಂಧ

ಮುಂಬಯಕೆಯಾಂತುದವಳ ಮ
ನಂ ಬಾಲಕನೊಲ್ದು ಬಯಕೆಯೆನೆ ಮೃಡಲೀಲಾ
ಡಂಬರಕಥಾಸುಧಾರಸ
ಮಂ ಬಿಡದೀಂಟಲ್ಕೆ ಶೈವನಿಧಿ ಶಶಿಮುಖಿಯಾ ೩೯

ಪುರಹರಪುರಾಣಮಂ ಶಂ
ಕರಚರಿತಮನಭವಕಾವ್ಯಮಂ ಭವಹರ ಭಾ
ಸುರಕೃತಿಯಂ ಗಿರಿಜಾವರ
ವರಚರಿತಮನಬಲೆ ಕೇಳ್ದು ಮುದಮಂ ತಳೆದಳ್ ೪೦

ಚಂ॥ ಪರಿಮಳವಾರಿಯಿಂ ಜಳಕಮಾಗಿಪ ನಲ್ಲುಣಿಸಿಕ್ಕುವಂಗರಾ
ಗರಚನೆಗೈವ ಮಾಲ್ಯಮನೆ ಸೂಡುವ ಸಿಂಗರಗೈವ ವೇಣಿಯಂ
ವಿರಚಿಪ ದರ್ಪಣಂಬಿಡಿವ ಬೆಳ್ಳಿಲೆಯಂ ಮಡಿದೀವ ದಿವ್ಯ ಚಾ
ಮರಮನೆ ಬೀಸುವಗ್ಗದ ವಿದಗ್ಧೆಯರೊಪ್ಪಿರೆ ದೇವಿ ರಂಜಿಪಳ್ ೪೧

ಸಚಿವನ ಪತ್ನಿ ತುಂಬಿದಱುದಿಂಗಳ ಗರ್ಭದೊಳೊಲ್ದು ಬಂದು ತಂ
ದುಚಿತಸುವಸ್ತುವಿತ್ತು ಕಲಸೋಗರಮಂ ನಲಿದಿಕ್ಕಿ ಭೂಷಣ
ಪ್ರಚಯಮನಿಟ್ಟು ಪೇರೊಸಗೆಗೆಯ್ದು ಸಖೀಜನದೊಂದುಗೂಡಿ ಸ
ದ್ರುಚಿ ಮಿಗೆ ಮಾಡಿ ಸತ್ಕ್ರಿಯೆಯನಂಗನೆಗಾ ವಧು ಪೋದಳಳ್ಕಱಿಂ ೪೨

ಗತಿಯನ್ನು ಪಡೆದವು. ೩೯. ಶಿವಸಂಬಂಧವಾದ ಭಕ್ತಿಗೆ ಗಣಿಯುಂತಿದ್ದ ಆ ಚಂದ್ರಮುಖಿಯಾದ ಅಮೃತಮತೀದೇವಿಯ ಗರ್ಭದಲ್ಲಿರುವ ಬಾಲಕನ ಬಯಕೆಗಳೋ ಎಂಬಹಾಗೆ ಪರಮೇಶ್ವರನ ಸುಂದರವಾದ ಕಥೆಯೆಂಬ ಅಮೃತರಸಪಾನಮಾಡುವ ಬಯಕೆಯು ಅವಳಿಗೆ ಉಂಟಾದುವು. ೪೦. ತ್ರಿಪುರಮಥನನಾದ ಶಿವನ ಪುರಾಣಗಳನ್ನೂ, ಸುಖದಾಯಕನಾದ ಶಂಕರನ ಚರಿತ್ರೆಯನ್ನೂ, ಜನನ ಮರಣಗಳನ್ನು ದೂರಗೊಳಿಸುವ ಪರಮೇಶ್ವರನ ನಿರ್ಮಲವಾದ ಕಾವ್ಯಗಳನ್ನೂ, ಗಿರಿಜಾಪತಿಯಾದ ಮಹಾದೇವನ ಚರಿತ್ರೆಯನ್ನೂ ಆ ಅಮೃತಮತಿಯುಕೇಳಿ ಸಂತೋಷವನ್ನು ಹೊಂದಿದಳು. ೪೧. ಆ ಅಮೃತಮತಿದೇವಿಯು ಪನ್ನೀರಿನಿಂದ ಸ್ನಾನಮಾಡಿಸುವ, ಒಳ್ಳೆಯ ಭಕ್ಷ್ಯಭೋಜ್ಯಗಳನ್ನು ಊಟಕ್ಕೆ ಎಡೆಮಾಡುವ, ದೇಹಕ್ಕೆ ಸುಗಂಧಾದಿದ್ರವ್ಯಗಳನ್ನು ಅನುಲೇಪನಮಾಡುವ, ಹೂವುಗಳನ್ನು ಮುಡಿಸುವ, ಅಲಂಕಾರಮಾಡುವ, ಜಡೆಯನ್ನು ಹೆಣೆಯುವ, ಕನ್ನಡಿಯನ್ನು ಹಿಡಿಯುವ, ಬಿಳಿಯದಾದ ವೀಳ್ಯದೆಲೆಗಳನ್ನು ಮಡಿಚಿಕೊಡುವ, ಶ್ರೇಷ್ಠವಾದ ಚಾಮರ ಬೀಸುವ ಪ್ರೌಢೆಯರಾದ ಸ್ತ್ರೀಯರುಗಳಿಂದ ರಂಜಿಸುತ್ತಿದ್ದಳು. ೪೨. ಆರುತಿಂಗಳು ತುಂಬಿದ ಸಮಯದಲ್ಲಿ ಸಚಿವನಾದ ಪತಿವ್ರೋಹಿಯ ಪತ್ನಿಯು ಪ್ರೀತಿಯಿಂದ ಬಂದು ಮಹಾರಾಣಿಗೆ ಉಚಿತವಾದ ವಸ್ತು ಒಡವೆಗಳನ್ನು ಕೊಟ್ಟು, ಕಲಸನ್ನವನ್ನು ಭೋಜನಕ್ಕೆ ಬಡಿಸಿ, ಅಲಂಕಾರದ್ರವ್ಯಗಳನ್ನು ತಂದು ಅಲಂಕರಿಸಿ ದೊಡ್ಡ ಹಬ್ಬವನ್ನೇಮಾಡಿ, ಸಖೀಜನರುಗಳಿಂದ ಕೂಡಿ ಆ ಅಮೃತಮತಿಗೆ ಸಂತೋಷವುಂಟಾಗುವಂತೆ ಸತ್ಕಾರಸಮಾರಂಭ

ಮಲಯಜದಣ್ಪು ಮಲ್ಲಿಗೆಯ ಚೊಲ್ಲೆಯಮಬ್ಜಗುಣಾಂಬರಂ ಸಮು
ಜ್ವಲತರ ಚಂಪಕಪ್ರಸವಕಾಂಚಿ ಸರೋರುಹ ಕರ್ಣಪೂರಮು
ತ್ಪಲಕಟಕಂ ಮೃಣಾಲವಲಯಂ ಸುರಹೊನ್ನೆಯ ಹಾರಮಿಂದುಮಂ
ಡಲಮಧುರಾಸ್ಯೆಗೊಪ್ಪಿದುದು ನಿರ್ಭರಗರ್ಭವಿಳಾಸವೇಳ್ಗೆಯೊಳ್ ೪೩

ವ॥ ಇಂತೊಪ್ಪುತ್ತುಮಿರೆಯಿರೆ

ಕಂ॥ ಒಂದುದಿನಮವನಿಪಂ ಪದ
ಪಿಂದಿನಿಯಳ ಗರ್ಭದಂದಮಂ ನೋಡಲ್ಬಿ
ತ್ತ್ರಂ ದಳವೇಱುತ್ತಿರೆ ಬಂ
ದಂದೊಳಪೊಕ್ಕಂ ತದೀಯ ಮಣಿಮಯಗೃಹಮಂ ೪೪

ಚಂ॥ ಕರಗತಕಂಕಣಕ್ವಣಿತಮುಣ್ಮಿರೆ ಪೊಂದೆಱೆಯಂ ಸವೇಗವೋ
ಸರಿಸೆ ಸಖೀಜನಂ ಶಶಿಕಳಾಕೃತಿಯಂ ಸತಿಯಂ ನರೇಂದ್ರನಾ
ದರಿಸಿ ನಿರೀಕ್ಷೆಗೆಯ್ವನಿತಱಲ್ಲಿದಿರೇಳ್ವಳನೇಳಲೀಯದಂ
ತಿರಿಸಿ ಸಮೀಪದೊಳ್ ನೆಲಸಿದಂ ಮಣಿಕಾಂಚನಮಂಚತಳ್ಪದೊಳ್ ೪೫

ವನ್ನು ಮಾಡಿ ಸಂತೋಷದಿಂದಹೋದಳು. ೪೩. ಶ್ರೀಗಂಧದ ಸುಗಂಧ, ಮಲ್ಲಿಗೆಯಮಾಲೆ, ಕಮಲದದೇಟಿನ ನಾರಿನಿಂದ ಮಾಡಿದ ಬಟ್ಟೆ ಬರೆ, ಅತಿಹೊಳಪಾದ ಸಂಪಿಗೆಹೂವುಗಳ ನಡುಪಟ್ಟಿ, ಕಮಲಗಳ ಕರ್ಣಾಭರಣ, ಕನ್ನೈದಿಲೆಗಳ ಬಳೆಗಳು, ತಾವರೆದಂಟಿನ ಕಡಗಗಳು, ಸುರಹೊನ್ನೆಯಹೂವುಗಳ ಹಾರ ಮೊದಲಾದುವುಗಳು ಚಂದ್ರಮಂಡಲದಂತಹ ಮಧುರವಾದ ಮುಖವುಳ್ಳ ಆ ಅಮೃತಮತಿಗೆ ಶ್ರೇಷ್ಠವಾದ ಗರ್ಭಿಣೀ ಸಮಯದ ಏಳ್ಗೆಯ ಕಾಲದಲ್ಲಿ ಶೋಭಿಸುತ್ತಿತ್ತು. ವ|| ಹೀಗೆ ಶೋಭಾಯಮಾನವಾಗಿರುತ್ತಿರಲು ೪೪. ಒಂದು ದಿನ ಸತ್ಯೇಂದ್ರಚೋಳಮಹಾರಾಜನು ಪ್ರಿಯಳಾದ ಅಮೃತಮತಿದೇವಿಯ ಗರ್ಭದ ರೀತಿಯನ್ನು ನೋಡುವುದಕ್ಕೆ ಉತ್ಸಾಹಗೊಂಡು ಅವಳ ರತ್ನನಿರ್ಮಿತ ಗೃಹಕ್ಕೆ ಬಂದು ಒಳಗೆ ಪ್ರವೇಶಿಸಿದನು. ೪೫. ಸಖೀಜನರು ತಮ್ಮ ಕೈಯಲ್ಲಿರುವ ಬಳೆಗಳ ಧ್ವನಿಯನ್ನು ಮಾಡುತ್ತ ಅವಸರವಸರವಾಗಿ ರಾಣಿಯಿರುವ ಮಣಿಗೃಹದ ಬಂಗಾರದ ತೆರೆಯನ್ನು ಸರಿಸಲಾಗಿ ಚಂದ್ರಕಲೆಗಳ ಆಕೃತಿಯಿಂದಿರುವ ಹೆಂಡತಿಯನ್ನು ಆ ನೃಪಶ್ರೇಷ್ಠನು ಆದರಪೂರ್ವಕವಾಗಿ ನೋಡುವಷ್ಟರಲ್ಲಿ ಎದ್ದು ಎದುರಿಗೆ ಬರಲು ತವಕಿಸುತ್ತಿರುವ ಹೆಂಡತಿಯನ್ನು ಏಳಗೊಡದೆ ಹಾಗೆ ಇರಿಸಿ, ಸಮೀಪದಲ್ಲಿ ಇರುವ ರತ್ನಖಚಿತವಾದ ಬಂಗಾರದ ಮಂಚದಲ್ಲಿರುವ ಹಾಸಿಗೆಮೇಲೆ ಕುಳಿ

ಕುವಲಯಮಿತ್ರಗರ್ಭೆ ಪುರುಹೂತದಿಶಾವಧು ಬೆಳ್ಪನಾಂತಿರ
ಲ್ಕವಕದೆ ನೋಡಿನೋಡಿ ನಲಿವಂತೆ ಚಕೋರಯುಗಂ ಮೃಗಾಕ್ಷಿ ಸ
ತ್ಕುವಲಯಮಿತ್ರಗರ್ಭೆಯೆನಿಸುತ್ತೆ ಬೆಳರ್ತಿರೆ ನೋಡಿನೋಡಿ ಭೂ
ಧವನ ವಿಲೋಚನದ್ವಯಮದೇಂ ಮುದವಾಂತುದೊ ರಾಗರಂಜಿತಂ ೪೬

ಕಂ॥ ಇನಿಯಳ ಮೃದುಕರತಳಮಂ
ವಿನಯದೆ ಪಿಡಿದಾಸ್ಯಮಂ ನಿರೀಕ್ಷಿಸಿ ಕುರುಳಂ
ಕೊನೆಯುಗುರಿಂ ತಿರ್ದುತೆ ಮೆ
ಲ್ಲನೆ ಪಲ್ಗದಿರುರ್ವೆ ನಗುತೆ ನೃಪನೀತೆಂದಂ ೪೭

ಬಱಿದೆ ಪಯೋಧರನಾಮಂ
ಮೆಱೆಯದೆನುತ್ತಾಂತುದೊಳಗೆ ಪಯಮನುರೋಜಂ
ಸೆಱೆವಿಡಿದುದದಱ ಬಣ್ಣಮ
ನುಱೆ ಚೂಚುಕದೊಳ್ ಸರೋರುಹಾಯತನಯನೇ ೪೮

ಮದನಗುಣರುಚಿಯನಾಂತುದು
ಮದನಾರಿಶರಾಸನಾಗ್ರಮಮರಾಧ್ವಂ ತೋ
ರ್ಪುದು ನಳಿನಂ ಶಶಿರುಚಿದಾ
ಳ್ದುದು ನಿನ್ನೊಳ್ಕಾಂತೆ ಪೇಳಿದೇಂ ಕೌತುಕವೋ ೪೯

ತನು. ೪೬. ಪೂರ್ವದಿಕ್ಕೆಂಬ ಹೆಂಗಸು ಚಂದ್ರನನ್ನು ಗರ್ಭದಲ್ಲಿ ಧರಿಸಿ ಬಿಳುಪನ್ನು ಹೊಂದಿದಾಗ ಆತುರದಿಂದ ಅದನ್ನು ನೋಡಿ ನೋಡಿ ಚಕೋರದಂಪತಿಗಳು ನಲಿದಾಡುವ ಹಾಗೆ, ಜಿಂಕೆಯಂತೆ ಚಪಲನೇತ್ರಗಳಿಂದ ಕೂಡಿದ ಅಮೃತಮತಿದೇವಿಯು ಭೂಮಂಡಲದ ಕ್ಷೇಮಚಿಂತಕನಾಗಿ ಹುಟ್ಟಿಬರಲಿರುವ ಕುಮಾರನನ್ನು ಗರ್ಭದಲ್ಲಿ ಧರಿಸಿರುವವಳು ಎನಿಸಿ ಬಿಳುಪಾದ ಕಾಂತಿಯಿಂದ ಕೂಡಿರಲು, ಆ ಮಹಾರಾಜನ ಅನುರಾಗಪೂರ್ಣವಾದ ನೇತ್ರದ್ವಯಗಳು ನೋಡಿ ನೋಡಿ ಅದೆಷ್ಟು ಸಂತೋಷವನ್ನು ಹೊಂದಿದವೋ! ೪೭. ಪ್ರಿಯೆಯಾದ ಅಮೃತಮತಿದೇವಿಯ ಮೃದುವಾದ ಅಂಗೈಗಳನ್ನು ವಿನಯಪೂರ್ವಕವಾಗಿ ಹಿಡಿದು ಮುಖವನ್ನು ನೋಡಿ, ಮುಂಗುರುಳನ್ನು ಉಗುರಿನ ಕೊನೆಯಿಂದ ತಿದ್ದುತ್ತ, ದಂತಗಳ ಕಾಂತಿಯು ಹೊರಬರುತ್ತಿರಲು ಮೆಲ್ಲನೆ ನಗುತ್ತ ಹೀಗೆ ಹೇಳಿದನು: ೪೮. "ಕಮಲದಂತೆ ವಿಶಾಲನೇತ್ರೆಯಾದ ರಾಣಿಯೇ, 'ಪಯೋಧರ' ಎಂಬ ಹೆಸರನ್ನು ಸುಮ್ಮನೆ ಧರಿಸಿದರೆ ಆಗದು ಎಂದು ನಿನ್ನ ಮೊಲೆಗಳು (ಪಯೋಧರಗಳು) ಒಳಗೆ ಹಾಲನ್ನು ಹೊಂದಿ ಮೇಘಗಳ (ಪಯೋಧರಗಳ) ಕಪ್ಪುಬಣ್ಣವನ್ನು ತಮ್ಮ ತುದಿಯಲ್ಲಿ ಅಂದರೆ ಚೂಚುಕಗಳಲ್ಲಿ ಸೆರೆಹಿಡಿದು (ಆ ಹೆಸರನ್ನು ಸಾರ್ಥಕಗೊಳಿಸಿ) ಇವೆ. ೪೯. ಮನೋಹರೆ, ಮನ್ಮಥವೈರಿಯ ಬಿಲ್ಲಿನ ಅಗ್ರಭಾಗವು ಮನ್ಮಥನ ಗುಣದಲ್ಲಿ ಅಭಿರುಚಿಯನ್ನು ತೋರಿಸುತ್ತಿದೆ–ಎಂದರೆ ಶಿವನ ಬಿಲ್ಲು ಮೇರು, ಮೇರುವಿನಂತಿರುವ ಸ್ತನ, ಅದರ ಅಗ್ರಭಾಗವು

ವ॥ ಎಂದು ನುಡಿದರಸನ ಸರಸೋಕ್ತಿಗೆ ಮನದೊಳ್ಮುದಮಂ ಮಾತಿನೊಳ್ಮಾಧುರ್ಯಮಂ ಮೊಗದೊಳ್ ಲಜ್ಜೆಯಂ ಕಟಾಕ್ಷದೊಳ್ ಲಟ್ಟಳ್ಕೆಯಿಂ ತಳೆದು ವಿಳಾಸಂಬಡೆದೊಪ್ಪುತ್ತಮಿರೆಯಿರೆ

ಕಂ॥ ನವಮಾಸಂ ನೆಱೆದುದು ಮಾ
ನವಪತಿ ಪತ್ನಿಯ ಪೊದಳ್ದ ಗರ್ಭಕೆ ಸಖಿಯರ್
ನವಹರ್ಷಂದಳೆದಿರ್ದರ್
ನವಗ್ರಹಂ ಸುಕರವೃತ್ತಿದಾಳ್ದುತ್ತಾಗಳ್ ೫೦

ನಳಿನಿ ಮರಾಳಮನೆಸೆವು
ತ್ಪಳಿನಿ ಸುಗಂಧಮನುದಾರಕೃತಿ ಸಿತಯಶಮಂ
ತಿಳಿಜೊನ್ನಮನಿಂದೂಜ್ವಳ
ಕಳೆವಡೆವವೊಲಬಳೆ ಪಡೆದಳಮಳಾರ್ಭಕನಂ ೫೧

ನಳಿನಂಗಳಂತೆ ಸಖಿಯರ
ವಿಳಸಿತ ವದನಂಗಳಲರೆ ಗರ್ಭಾಚಲದಿಂ
ದೆಳೆನೇಸಱಂತೆ ರಾಗೋ
ಜ್ವಳರುಚಿ ತಾನುದಿಸಿ ತೊಳಗಿದಂ ನೃಪತನಯಂ ೫೨

ಮನ್ಮಥನ ಗುಣದಲ್ಲಿ=ಹೆದೆಯಲ್ಲಿ, ಹೆದೆ=ದುಂಬಿ, ದುಂಬಿಯ ಕಪ್ಪುಬಣ್ಣವನ್ನು ತಳೆದಿದೆ ಎಂದರ್ಥ. ಅಮರಾಧ್ವ=ಆಕಾಶ. ಆಕಾಶದಂತೆ ಗೋಚರಿಸದಿದ್ದ ನಡುಭಾಗವು ಈಗ ಕಾಣುತ್ತಿರುವುದು. ಕಮಲವು ಚಂದ್ರನಲ್ಲಿ ಅಭಿರುಚಿಯನ್ನು ಪಡೆದಿದೆ. ಎಂದರೆ ಮುಖವು ಚಂದ್ರನ ಕಾಂತಿಯನ್ನು–ಬಿಳುಪನ್ನು ಪಡೆದಿದೆ. ನಿನ್ನಲ್ಲಿ ಇದೇನಾಶ್ಚರ್ಯ! (ರಂ)
ವ॥ ಹೀಗೆಂದು ನುಡಿದ ಅರಸನ ಚತುರವಾದ ಮಾತಿಗೆ ಮನಸ್ಸಿನಲ್ಲಿ ಸಂತೋಷವನ್ನೂ, ಮಾತಿನಲ್ಲಿ ಮಧುರತೆಯನ್ನೂ, ಮುಖದಲ್ಲಿ ಲಜ್ಜೆಯನ್ನೂ, ಕಡೆಗಣ್ಣಲ್ಲಿ ಅತಿಪ್ರೀತಿಯನ್ನೂ ಹೊಂದಿ ವಿಲಾಸಗೊಂಡು ಅಮೃತಮತಿ ಒಪ್ಪಿದಳು. ೫೦. ಸತ್ಯೇಂದ್ರ ಚೋಳಮಹಾರಾಜನ ಪತ್ನಿಯಾದ ಅಮೃತಮತಿಯು ಧರಿಸಿದ ಗರ್ಭಕ್ಕೆ ನವಮಾಸಗಳು ತುಂಬಿದುವು. ಸಖಿಯರು ನೂತನಹರ್ಷವನ್ನು ಹೊಂದಿದರು. ನವಗ್ರಹಗಳು ಶುಭಮುಹೂರ್ತಗೊಂಡವು. ೫೧. ಕಮಲವು ಹಂಸವನ್ನೂ, ಶೋಭಿಸುವ ಉತ್ಪಲವು ಸುಗಂಧವನ್ನೂ, ಶ್ರೇಷ್ಠಕೃತಿಯು ಯಶಸ್ಸನ್ನೂ, ಚಂದ್ರನು ಉಜ್ವಲವಾದ ಕಳೆಯ ಬೆಳದಿಂಗಳನ್ನೂ ಪಡೆಯುವಹಾಗೆ ಆ ಅಮೃತಮತಿಯು ಶ್ರೇಷ್ಠ ಕುಮಾರನನ್ನು ಪಡೆದಳು. ೫೨. ಕಮಲಗಳಂತೆ ಸಖೀಜನರ ಮುಖಗಳು ಅರಳಲಾಗಿ, ಪೂರ್ವದಿಕ್ಕಿನ ಅದ್ರಿಯೆಂಬ ಗರ್ಭದಿಂದ, ಅರುಣವರ್ಣದ ಕಾಂತಿಯಿಂದ ಕೂಡಿದ ಬಾಲಸೂರ್ಯ

ಮ॥ ಬಲಗಣ್ಕೆತ್ತಿದುದೀಶ್ವರಾರ್ಚಕರ ಕೈಲಾಸಾದ್ರಿಯೊಳ್ ಶಂಕರಂ
ನಲಿದಂ ಭೂರಮೆಯುತ್ಸವಂಬಡೆದಳಿಂದ್ರಾದ್ಯರ್ ಮುದಂಬಟ್ಟರೀ
ನೆಲದೊಳ್ ಬಾಳ್ವ ಜನಾಳಿ ಕೇಳ್ದು ಗುಡಿಗಟ್ಟಿತ್ತಲ್ಲಿ ಬಂಧುಕ್ಷಿತೀ
ಶಲ ಸನ್ಮಾನಸವಾರ್ಧಿ ಪೆರ್ಚಿದುದು ತತ್ಪುತ್ರೋದಯೋತ್ಸಾಹದೊಳ್ ೫೩

ವ॥ ಅಂತುಮಲ್ಲದೆಯುಂ

ಕಂ॥ ಕಳೆಯೇಱ ನಳಿನಸಖನು
ಜ್ವಲಿಸಿದನಿಳೆ ಪುಳಕವಾಂತುದಖಿಳರ್ ಮುದಮಂ
ತಳೆದರ್ ಕೆಳದಿಯರೊಸಗೆಯ
ನಿಳಾಧಿಪರ್ಗಱುಪಿ ಸೆಳೆದರುಚಿತಮನಾಗಳ್ ೫೪

ವ॥ ಆಗಳ್ ಸಂಭ್ರಮಂಬೆರಸು

ಮ॥ಸ್ರ॥ ವಿಳಸತ್ಕಾಶ್ಮೀರರಾಗಂಬಡೆದ ತನು ಬೆಡಂಗಾಗೆ ಮಂದಸ್ಮಿತಂ ಮಂ
ಜುಳವಕ್ತ್ರಾಂಭೋಜದೊಳ್ಕಂಗೊಳಿಸೆ ಕುಣಿಯೆ ವಕ್ಷೋಜಕೋಕದ್ವಯಂ ಮೇ
ಲಳಿವಿಂಡಂಗಾಂಗರಾಗಕ್ಕೆಳಸಿ ಬಳಸೆ ಬಂದಳ್ ಪ್ರತೀಹಾರಿ ಸಂಧ್ಯೋ
ಜ್ವಳೆ ಪುತ್ರಾದಿತ್ಯ ಬಿಂಬೋದಯಮನಱಪುವೊಂದುಜ್ಜುಗಂಬೆತ್ತು ಬೇಗಂ ೫೫

ನಂತೆ ನೃಪತನಯನು ಹುಟ್ಟಿ ಪ್ರಕಾಶಿಸಿದನು. ೫೩. ಆ ಕುಮಾರನು ಉದಯಗೊಳ್ಳಲು ಈಶ್ವರಾರಾಧಕರ ಬಲಗಣ್ಣು ಹಾರಿತು. ಕೈಲಾಸದಲ್ಲಿ ಶಂಕರನು ನಲಿದನು. ಭೂರಮಣಿಯು ಉತ್ಸಾಹಗೊಂಡಳು. ಇಂದ್ರಾದಿ ದೇವತೆಗಳು ಸಂತೋಷಪಟ್ಟರು. ಈ ಭೂಭಾಗದಲ್ಲಿ ಬಾಳುವ ಜನಸಮುದಾಯವು ಪುಳಕಗೊಂಡಿತು. ಬಂಧುರಾಜರುಗಳ ಮನಸ್ಸೆಂಬ ಸಮುದ್ರವು ಉಕ್ಕಿತು. ವ|| ಹಾಗೂ ಅಲ್ಲದೆ, ೫೪. ಸೂರ್ಯನು ಕಳೆಗೊಂಡು ಅತಿ ಪ್ರಕಾಶಮಾನನಾದನು. ಭೂಮಿಯು ರೋಮಾಂಚನಗೊಂಡಿತು. ಅಖಿಳ ಪ್ರಜಾವರ್ಗದವರು ಸಂತೋಷಗೊಂಡರು. ಸಖೀಜನರುಗಳು ಪುತ್ರೋತ್ಸವದ ಶುಭಸಮಾಚಾರವನ್ನು ಭೂಪಾಲರುಗಳಿಗೆ ತಿಳಿಸಿ ಅವರ ಮೇಲಿನ ಆಭರಣಗಳೇ ಮೊದಲಾದ ವಸ್ತು ಒಡವೆಗಳನ್ನು ಬಹುಮಾನವಾಗಿ ಪಡೆದರು. ವ|| ಆಗ ಸಂಭ್ರಮದಿಂದ ಕೂಡಿ ೫೫. ಪ್ರಕಾಶಮಾನವಾದ ಕೇಸರಿಯ ನಸು ಕೆಂಪುಬಣ್ಣವನ್ನು ಹೊಂದಿದ ದೇಹ ನೂತನ ರೀತಿಯಿಂದ ಕೂಡಿರಲು, ನಸುನಗೆಯು ಮನೋಹರವಾದ ಮುಖಕಮಲದಲ್ಲಿ ಕಣ್ಣಿಗೆ ಅಂದವಾಗಿ ಕಾಣುತ್ತಿರಲು, ಚಕ್ರವಾಕದಂತಿರುವ ಸ್ತನಗಳು ಕುಣಿಯುತ್ತಿರಲು, ಅಂಗಾಂಗಗಳಿಗೆ ಬಡಿದ ಸುಗಂಧದ್ರವ್ಯಗಳ ಸುಗಂಧಕ್ಕೆ ಬಯಸಿ ದುಂಬಿಗಳಸಾಲು ಸುತ್ತಿ ಮುತ್ತಿರಲು, ಸಂಧ್ಯಾಕಾಲದ ಪ್ರಕೃತಿಯಂತೆ ಕೆಂಪಾಗಿ ಶೋಭಿಸುತ್ತಿರುವ ಪ್ರತೀಹಾರಿಯು ಸೂರ್ಯಮಂಡಲದಂತಹ ಪುತ್ರನ ಉದಯದ ಸುದ್ದಿಯನ್ನು ತಿಳಿಸುವ ಕಾರ್ಯವನ್ನು ಹೊಂದಿ ಬೇಗಬಂದಳು.

ವ॥ ಅಂತು ಸತ್ವರಂ ಪರಿತಂದು ನಿಂದು ವಿಮಳಹಾರಾಂಶುಚಂದ್ರಿಕೆಯಿಂ ಕರಾರುಣ ಸರಸಿಜಂ ಮುಗಿದುದೇಂಬಂತಂಜಲಿಪುಟಂ ರೇಜಿಸೆ ಬಿಂಬಾಧರದ ಕೆಂಬೆಳಗನೊತ್ತರಿಸಿ ವಿಶದ ದಶನರುಚಿನಿಚಯಂ ಪಸರಿಸುತ್ತಿರೆ ಕಣ್ಗದಿರ್ ತಣ್ಗದಿರಂತೆ ಸಭಾಸದರ ನಯನಕುಮುದಮ ನಲರ್ಚೆ ನಲವಿನಿಂದೊಡ್ಡೋಲಗಂಗೊಟ್ಟು ಪಟ್ಟವಣೆಯೊಳ್ ಕುಳ್ಳಿರ್ದ ನರೇಶ್ವರಂಗೆ ದೇವಾ ಪಿರಿದೊಸಗೆಯೆಂದಿಂತೆಂದಳ್

ಚಂ॥ ಅವನಿಪಸಾರ್ವಭೌಮ ಭವದೀಯಮನೋರಮೆ ಸನ್ಮುಹೂರ್ತದೊಳ್
ಕುವರನನೀಗಳೊಲ್ದು ಪಡೆದಳ್ ಗುಡಿಗಟ್ಟಿಪುದೆಂದು ಪೇಳ್ದ ತ
ದ್ಯುವತಿಗನರ್ಘ್ಯಮಂಡನಮನೊಲ್ದು ಚಿತಂಗುಡುತೀಕ್ಷಿಸಲ್ ಮಹೋ
ತ್ಸವಮನನೇಳ್ದನೇಳೆ ಪುಳಕಾಂಕುರವಂಗದೊಳಾ ನರಾಧಿಪಂ ೫೬

ವ॥ ಅಂತೇಳ್ದು ನಡೆಗೊಳ್ವಾಗಳ್ ಜಯರವ ಮುಖರಮುಖ ನಿಖಿಲ ವಂದಿವೃಂದ ಪಠಿತ ಸರಸಕವಿರಚಿತ ರುಚಿರತರ ನಿಜಬಿರುದ ಗದ್ಯಪದ್ಯಸಮುದಯ ಸಮುದ್ಘೋಷ ಸಹಚರಿತ ಮೃದುಮೃದಂಗ ಪಟುಪಟಹ ಶಂಖತಾಳಕಹಳಾ ವೇಣುವೀಣಾದ್ಯನೇಕ ಲೋಕಕರ್ಣಕೌತುಕಕರ ವಿತತಾನವದ್ಯವಾದ್ಯರವಂ ದಶದಿಶೆಯೊಳ್ ಪರ್ಬಿ ಪಸರಿಸೆಯುಂ ಪರಿವೃತಮಕುಟವರ್ಧನನಿಕರ

ವ|| ಆರೀತಿ ವೇಗವಾಗಿ ಓಡಿಬಂದು ನಿಂತು ಶ್ರೇಷ್ಠವಾದ ರತ್ನಹಾರದ ಕಾಂತಿಯೆಂಬ ಬೆಳದಿಂಗಳ ಬೆಳಕಿನಿಂದ ಕೈಗಳೆಂಬ ಕೆಂಪು ಕನುಲಗಳು ಮುದುಡಿದವೋ ಎನ್ನುವಂತೆ ಮುಗಿದ ಕೈಗಳು ಶೋಭಿಸುತ್ತಿರಲು, ತೊಂಡೆಯಹಣ್ಣಿನಂತಹ ತುಟಿಯ ಕೆಂಪಾದ ಪ್ರಕಾಶವನ್ನು ದಾಟಿ ಸ್ಪಷ್ಟವಾದ ಹಲ್ಲುಗಳ ಕಾಂತಿಯ ಸಮೂಹವು ಪ್ರಸಾರಗೊಂಡಿ ರಲು, ಕಣ್ಣಿನ ಪ್ರಕಾಶವು ಚಂದ್ರನ ಪ್ರಕಾಶದಂತೆ ಸಭೆಯಲ್ಲಿ ಕುಳಿತಿರುವವರ ಕಣ್ಣು ಗಳೆಂಬ ಕನ್ನೈದಿಲೆಯ ಹೂವುಗಳನ್ನು ಅರಳಿಸುತ್ತಿರಲು, ಸಂತೋಷದಿಂದ ರಾಜಸಭೆ ಗೊಟ್ಟು ಸಿಂಹಾಸನದ ಮೇಲೆ ಕುಳಿತುಕೊಂಡಿದ್ದ ನೃಪಶ್ರೇಷ್ಠನಾದ ಸತ್ಯೇಂದ್ರಚೋಳ ಮಹಾರಾಜನಿಗೆ 'ದೇವಾ, ಅತ್ಯಂತ ಮಹೋತ್ಸವ' ಎಂದು ಹೀಗೆ ಹೇಳಿದಳು : ೫೬. "ಭೂಮಿಶ್ವರರುಗಳಿಗೆ ಚಕ್ರವರ್ತಿಯಾದ ಸತ್ಯೇಂದ್ರಚೋಳ ಮಹಾರಾಜನೇ, ನಿನ್ನ ಮನೋರಮೆಯಾದ ಅಮೃತಮತಿದೇವಿಯು ಒಳ್ಳೆಯ ಮುಹೂರ್ತದಲ್ಲಿ ಪ್ರೀತಿ ಯಿಂದ ಸತ್ಪುತ್ರನನ್ನು ಪಡೆದಳು, ಸಂತೋಷ ಸಮಾರಂಭಗಳನ್ನೇರ್ಪಡಿಸುವುದು. (ಅಥವಾ ಅಲಂಕಾರಾದಿಗಳನ್ನೇರ್ಪಡಿಸುವುದು) ಎಂದು ಹೇಳಿದ ಆ ಪ್ರತೀಹಾರಿಗೆ ಬೆಲೆಬಾಳುವ ತನ್ನ ಮೈಮೇಲಿನ ಅಲಂಕಾರ ವಸ್ತು ಒಡವೆಗಳನ್ನು ಪ್ರೀತಿಯಿಂದ ತೆಗೆದು ಕೊಡುತ್ತ, ಈ ಶ್ರೇಷ್ಠವಾದ ಪುತ್ರೋತ್ಸವದ ಮಹಾಉತ್ಸವವನ್ನು ನೋಡಲು ಶರೀರ ದಲ್ಲಿ ರೋಮಾಂಚನಗೊಂಡವನಾಗಿ ಎದ್ದನು. ವ|| ಹಾಗೆ ಎದ್ದು ನಡೆಯುತ್ತಿರುವಾಗ ಸಮಸ್ತ ಭಟ್ಟಂಗಿಗಳು ರಸಜ್ಞರಾದ ಕವಿಗಳಿಂದ ರಚಿತವಾದ ಗದ್ಯ ಪದ್ಯಮಯವಾದ ಸಮಸ್ತ ಬಿರುದುಗಳ ಸಮುದಾಯವನ್ನು 'ಜಯಜಯ' ಎಂಬ ಧ್ವನಿಯಿಂದ ಉದ್ಘೋಷಿ ಸುತ್ತಿದ್ದರು. ಜೊತೆಗೆ ಮೃದುವಾದ ಮೃದಂಗ, ವಿಶೇಷಧ್ವನಿ ಮಾಡುವ ನಗಾರಿ, ಶಂಖ,

ಮಕುಟತಟಘಟಿತಮಂಜುಮಾಣಿಕ್ಯಮಂಜರೀ ಸಂಜನಿತ ತೇಜಃಪುಂಜಂಕಂಜಸಖನನಿಕರದಂತೆ ತಳ ತಳಿಸಿ ಪೊಳೆಯೆಯುಂ ಶುಂಭನ್ನಿತಂಬಬಿಂಬಕುಂಭಿಕುಂಭಸ್ಥಳೋಪಲಂಬಿತ ಕೌಸುಂಭಾಂಬರ ಚುಂಬಿತ ಜೃಂಭನ್ಮಣಿಮಯಮೇಖಲಾವಲಯಕಲಿತ ಕಲಕಿಂಕಿಣೀಗಣ ಝಣಝಣರಣಿತ ಸುಕರ ಕಂಕಣರವ ಸುರುಚಿರ ಕರಸರಸಿಜಬಾಲಾಚಯಲೀಲಾಚಾಲಿತ ಚಾರುಚಾಮರಂ ಪಾರ್ಶ್ವಯುಗ ದೊಳ್ ಪರಿರಂಜಿಸೆಯುಂ ನಡೆತಂದು ಪರಿವರ್ಜಿತಾಶೇಷಪರಿಜನಂ ನಿಜಕರಗೃಹೀತಾಮಾತ್ಯ ಕರ ಪಲ್ಲವನುಲ್ಲಸಿತ ಹೃದಯಂ ಪ್ರಸನ್ನಮುಖಂ ಪ್ರಸೂತಿಸದನಾಭಿಮುಖನಾಗಿ ಬರ್ಪಲ್ಲಿ ನಿಜಾಂತಃ ಪುರದೊಳ್ ಸಡಗರಿಪ ವಿಳಾಸಿನಿಯರಿಂ ಗುಡಿಗಟ್ಟುವ ಪೌರಜನದಿಂದೆಡೆಯಾಡುವ ಬಂಧುವರ್ಗದಿಂ ಪೊಡೆವ ಮಂಗಳವಜಿ³ಗಳಿಂ ಮಿಳಿರ್ವ ಕೇತನಂಗಳಿಂ ತಳಿವ ಲಾಜೆಗಳಿಂ ಪೊಳೆದೆತ್ತುವಾರತಿಗಳಿಂ ಕೆಳೆಗೊಳಿಪ ರಂಗವಲ್ಲಿಗಳಿಂ ಬೆಳಗುವ ಮಣಿದೀಪಿಕೆಗಳಿಂದಿಳಿಪಿದ ಫಳಾವಳಿಗಳಿಂ ಗೃಹರಕ್ಷೆಗೆಯ್ವ ಸಹಚರಿಯರಿಂ ವಿಹರಣಂಗೊಂಬ ವಿದಗ್ಧೆಯರಿಂ ನೆರಪುವ ರಕ್ಷಾಸಾಧನಂಗಳಿಂ ಪರಪುವ

ತಾಳ, ಕಹಳೆ, ಕೊಳಲು, ವೀಣಾ–ಮೊದಲಾದ ಲೋಕದ ಜನರ ಕಿವಿಗಳಿಗೆ ಕೌತುಕ ವನ್ನುಂಟುಮಾಡುವ ಅನೇಕ ದೋಷರಹಿತವಾದ .ವಾದ್ಯಧ್ವನಿಗಳು ಕೂಡಿಕೊಂಡು ಹತ್ತು ದಿಕ್ಕುಗಳಲ್ಲೂ ಪ್ರಸಾರಗೊಂಡಿದ್ದವು. ಸುತ್ತುವರಿಯಲ್ಪಟ್ಟ ರಾಜಸಮುದಾಯದ ಕಿರೀಟಗಳ ಕೊನೆಯಲ್ಲಿ ಕೆತ್ತಿದ ರಮಣೀಯವಾದ ಮಾಣಿಕ್ಯಮಣಿಗಳ ಸಮೂಹದಿಂದ ಹೊರಹೊರಟ ತೇಜೋವಿಶೇಷದ ಕಿರಣಗಳು ಅನೇಕ ಸೂರ್ಯರುಗಳಂತೆ ತಳತಳಿಸಿ ಹೊಳೆಯುತ್ತಿದ್ದವು. ಆನೆಗಳ ಕುಂಭಸ್ಥಳದಂತೆ ಶೋಭಿಸುವ ಕಟಿಪ್ರದೇಶ ಮಂಡಲ ಗಳು ಅಲುಗಾಡುತ್ತಿರುವವರೂ, ಕುಸುಬೆಹೂವುಗಳ ಬಣ್ಣದಂತೆ ಕೆಂಪು ಹಳದಿ ಮಿಶ್ರ ವಾದ ವಸ್ತ್ರಗಳನ್ನುಟ್ಟವರೂ, ಝಣಝಣ ಧ್ವನಿ ಮಾಡುತ್ತಿರುವಂಥ ಕಿರುಗೆಜ್ಜೆಗಳ ಸಮೂಹದಿಂದ ಕೂಡಿ ಡಾಬನ್ನು ನಡುವಿನಲ್ಲಿ ಇಟ್ಟು ಶೋಭಿಸುವವರೂ, ಬಳೆಗಳ ಧ್ವನಿ ಯಿಂದ ಕೂಡಿದ ಸುಂದರವಾದ ಕಮಲಗಳಂತೆ ಕೈಗಳಿಂದ ಕೂಡಿದ ಬಾಲೆಯರ ಸಮೂ ಹವು ಲೀಲೆಯಿಂದ ಬೀಸುತ್ತಿರುವ ಚಾಮರಗಳು ಎರಡೂ ಕಡೆಗಳಲ್ಲಿ ಕಂಗೊಳಿಸಿದವು. ಬಂಧು ಪರಿಜನರನ್ನೆಲ್ಲ ದೂರೀಕರಿಸಿ, ಉಲ್ಲಾಸಗೊಂಡು ತನ್ನ ಕೈಗಳಿಂದ ಅಮಾತ್ಯನಾದ ಪತಿಮೋಹಿಯ ಕರಪಲ್ಲವಗಳನ್ನು ಹಿಡಿದಿದ್ದನು. ಪ್ರಸನ್ನವಾದ ಮುಖದಿಂದ ಕೂಡಿ ಹೆರಿಗೆಯ ಮನೆಗೆ ಎದುರಾಗಿ ಬರುತಿದ್ದನು. ಆ ಅಂತಃಪುರದಲ್ಲಿ ಸ್ತ್ರೀಯರು ಸಡಗರ ದಿಂದ ಕೂಡಿದ್ದರು. ಅದು ಗುಂಪು ಗುಂಪಾಗಿ ನೆರೆದ ಪುರಜನರಿಂದ, ಅತ್ತಿಂದಿತ್ತ ತಿರುಗಾಡುವ ಬಂಧುವರ್ಗದಿಂದ ಕೂಡಿತ್ತು. ಮಂಗಳವಾದ್ಯಗಳು ಬಾರಿಸಲ್ಪಡುತ್ತಿದ್ದವು. ಎತ್ತಿಕಟ್ಟಿರುವ ನಿಶಾನೆಗಳಿಂದ, ಚಲ್ಲುತ್ತಿರುವ ಬತ್ತದರಳುಗಳಿಂದ, ಹೊಳೆಯುತ್ತಿದ್ದ ಎತ್ತುವ ಆರತಿಗಳಿಂದ, ಇಡುತ್ತಿದ್ದ ರಂಗವಲ್ಲಿಗಳಿಂದ, ಬೆಳಗುತ್ತಿದ್ದ ರತ್ನದೀಪಗಳಿಂದ, ಇಟ್ಟಿರುವ ಹಣ್ಣುಗಳ ಸಮೂಹದಿಂದ, ಅಂತಃಪುರ ರಕ್ಷಣೆಗೆಯ್ಯುವ ಸೇವಕಿಯರಿಂದ, ಹರಡುತ್ತಿರುವ ಧೂಪದ ಹೊಗೆಯಿಂದ, ಪರಮೇಶ್ವರಾಲಯಕ್ಕೆ ಕೊಡಲು ಒಯ್ಯು

ಧೂಪ ಧೂಮಂಗಳಿಂ ಪರಗೃಹಕೊಯ್ವ ಬಾಯಿನಂಗಳಿಂ ಪರಸುವ ಮಾಹೇಶ್ವರರಿಂದತಿ ಸಂಭ್ರ
ಮನಪ್ಪುಕೆಯ್ದು ಕಣ್ಗೆ ಕೌತುಕಮಂ ಮನಕ್ಕೆ ಸಂತಸಮನೀವುತ್ತಿರೆ ನಿರೀಕ್ಷಣೆಗೆಯ್ಯಲೆಳಸಿಗಳಿಲ
ನೆಯ್ತಂದು ಕುಲವೃದ್ಧೆಯರ್ ತೋಱಿ ಕುಮಾರನಂ ನೋಡಿ ಸುಧಾಕರನಂ ಕಂಡ ಸುಧಾಬ್ಧಿ
ಪೆರ್ಚುವಂತೆ ಮೆಯ್ವೆರ್ಚಿ ಶಿವಪ್ರಸಾದಮಹಿಮೆಯಂ ಬಗೆದು ಬಗೆಯೊಳ್ಮದಂದಳೆದಿರ್ಪನ್ನೆಗಂ

ಮ॥ ಗುರುಗಳ್ ಬಂದು ಶಿವಾಂಘ್ರಿವಾರಿ ಪರಿಸೇಕಂಗೆಯ್ದು ಕಾರುಣ್ಯದಿಂ
ಪರಸುತ್ತಿಟ್ಟು ವಿಭೂತಿಯಂ ಪಣೆಯೊಳಾಗಳ್ ಶೈವಮಂತ್ರಂಗಳಿಂ
ಪರಿಶುದ್ಧಪ್ರಭುಲಿಂಗಮಂ ಧರಿಸಿ ಬಾಲಂಗೊಲ್ದು ಮಾಹೇಶ್ವರಾ
ವರಣರ್ ಮಾಡಿಸಿದರ್ ಮಹೋತ್ಸವದಿನೊಪ್ಪಲ್ ಜಾತಕರ್ಮಂಗಳಂ ೫೭

ಹರಮಂತ್ರೋದ್ಭವನೀತನಿನ್ನುಮದನೇ ಸಂರಕ್ಷಿಪಂ ತಪ್ಪದೆಂ
ದಿರದಾಳೋಚಿಸಿ ಮಂತ್ರಲಕ್ಷ್ಯವೆಸರಂ ಭೂಕಾಂತಸಂತಾನದೊ
ಳ್ತೊರೆವೆತ್ತಗ್ಗದ ಕೀರ್ತಿವೆತ್ತೆಸೆವನೆಂದನ್ವರ್ಥಮಂ ರಾಜಶೇ
ಖರನೆಂದಿತ್ತಭಿಧಾನಮಂ ತಳೆರ್ದರಾಚಾರ್ಯರ್ ಮಹೋತ್ಸಾಹದಿಂ ೫೮

ತ್ತಿರುವ ಬಾಣಗಳಿಂದ, ಆಶೀರ್ವದಿಸುತ್ತಿರುವ ಗುರುವರ್ಗದವರಿಂದ ಅತ್ಯಂತ ಸಂಭ್ರಮ
ವನ್ನು ಹೊಂದಿತ್ತು. ಕಣ್ಣಿಗೆ ಕೌತುಕವನ್ನೂ, ಮನಸ್ಸಿಗೆ ಸಂತೋಷವನ್ನೂ ಉಂಟು
ಮಾಡುತ್ತಿತ್ತು. (ಇಂಥ ಪ್ರಸೂತಿಗೃಹದಲ್ಲಿ ಜನಿಸಿರುವ) ಪುತ್ರನನ್ನು ನೋಡಲು ಬಯಸಿ
ರಾಜನು ಒಮ್ಮೆಲೆ ಬಂದನು. ತಮ್ಮ ವಂಶದ ವೃದ್ಧಸ್ತ್ರೀಯರು ತೋರಿಸಲಾಗಿ ಕುಮಾರ
ನನ್ನು ನೋಡಿದನು. (ಆಗ) ಚಂದ್ರನನ್ನು ಕಂಡು ಕ್ಷೀರಸಾಗರವು ಉಬ್ಬುವಂತೆ ಉತ್ಸಾಹ
ಗೊಂಡು ಶಿವಪ್ರಸಾದದ ಮಹಿಮೆಯನ್ನು ಅರಿತು ಮನಸ್ಸಿನಲ್ಲಿಯೇ ಆನಂದಗೊಂಡನು.
೫೭. ಗುರುಗಳಾದ ಚಿದ್ಘನ ಶಿವಾಚಾರ್ಯರು ಬಂದು ಶಿವಪಾದೋದಕವನ್ನು ಚಿಮುಕಿಸಿ,
ಕರುಣದೃಷ್ಟಿಯಿಂದ ಹರಸುತ್ತ, ಹಣೆಯಲ್ಲಿ ವಿಭೂತಿಯನ್ನು ಧರಿಸಿ, ಶಿವಸಂಬಂಧವಾದ
ಮಂತ್ರಗಳಿಂದ ಪರಿಶುದ್ಧ ಪ್ರಭುವಾದ ಲಿಂಗದೇವನನ್ನು ಕೊರಳಲ್ಲಿ ಧರಿಸಿ, ಪ್ರೀತಿಯಿಂದ
ರಾಜಕುಮಾರನಿಗೆ ಮಾಹೇಶ್ವರ ವರ್ಗದವರೆಲ್ಲ ಒಪ್ಪುವಂತೆ ಜನನಕಾಲದ ಕರ್ಮಗಳನ್ನೆಲ್ಲ
ಮಾಡಿಸಿದರು. ೫೮. "ಈ ಕುಮಾರನು ಹರಮಂತ್ರದಿಂದ ಉದ್ಭವಿಸಿದವನು. ಇನ್ನೂ
ಅದನ್ನೇ ರಕ್ಷಿಸಿಕೊಂಡು ಹೋಗುತ್ತಾನೆ, ಇದು ತಪ್ಪುವುದಿಲ್ಲ" ಎಂದು ಯೋಚಿಸಿ,
ಮಂತ್ರಲಕ್ಷ್ಯನೆಂಬ ಹೆಸರಿನಿಂದ ರಾಜರುಗಳ ಸಮೂಹದಲ್ಲಿ ಶ್ರೇಷ್ಠವಾದ ಕೀರ್ತಿಯನ್ನು
ಹೊಂದಿ ಶೋಭಿಸುತ್ತಾನೆ ಎಂದು ರಾಜಶೇಖರ ಎಂದರೆ ಚಂದ್ರನನ್ನು ಜಡೆಯಲ್ಲಿ ಧರಿಸಿದ
ಶಿವನೆಂಬ ಅಭಿಪ್ರಾಯದಿಂದ ಅತ್ಯಂತ ಉತ್ಸವದಿಂದ ರಾಜಶೇಖರನೆಂದು ಹೆಸರಿಟ್ಟು

ವ॥ ಅನಂತರಮರಸನತಿಪ್ರಮೋದದಿನಪರಿಮಿತ ಧನಕನಕವಸನಮಾಲ್ಯ ಮಣಿಭೂಷಣಂಗಳಿಂ ಮಾಹೇಶ್ವರಾರಾಧನಂಗೆಯ್ದು ಸಾನುರಾಗಂ ನಾನಾ ದಾನಂಗಳನನೂನಮೆನೆ ನೆಗಳ್ದು ಪೆರ್ಮೆವೆತ್ತು ಕೂರ್ಮೆಯಿಂ ಶಿವಕಥಾಕಮನೀಯ ಮಾಣಿಕ್ಯಮಂಜರೀ ಕರ್ಣಪೂರಂ ಶಿವಚರಣ ಸಮರ್ಚನ ಸಾಮ್ರಾಜ್ಯದುರಂಧರಂ ಶಿವಲಿಂಗ ಪತಂಗ ಸಂಗತ ಮಂಗಳಹೃದಯನಳಿನಂ ಶಿವಧರ್ಮಕಮಳಾಕರ ವಿಮಳಮರಾಳಂ ಶಿವಶರಣಮನೋವನವಸಂತಂ ಸತ್ಯೇಂದ್ರಚೋಳ ಧರಣೀಶ್ವರಂ ಸಚಿವಸಮೇತಂ ಸಕಲ ಧರಣೀಪಾಲರೋಲೈಸುತ್ತಿರೆ ಸಾಮ್ರಾಜ್ಯಸಂಜನಿತ ಸುಖಮನನುಭವಿಸುತ್ತಮಿರೆಯಿರೆ

ಕಂ॥ ಪನ್ನೆರಡುದಿನದೊಳಿಟ್ಟರ್
ಸನ್ನುತ ಸುಕುಮಾರಕಂಗೆ ಮಣಿದೊಟ್ಟಲನೆ
ತ್ತನ್ನೆಗಳ್ದಿರೆ ವಾದ್ಯರವಂ
ಕನ್ನೆಯರಿರದೆಯ್ದೆ ಮಾಡಿದರ್ ಮಂಗಳಮಂ ೫೫

ಆ ಆಚಾರ್ಯರು ಹೊರಟುಹೋದರು. ವ|| ಅನಂತರ ಅರಸನಾದ ಸತ್ಯೇಂದ್ರಚೋಳನು ಅತ್ಯಂತ ಹರ್ಷದಿಂದ ಅಪರಿಮಿತವಾದ ಧನ, ಬಂಗಾರ, ವಸ್ತ್ರ, ಹೂವು, ರತ್ನಾಭರಣಾದಿಗಳನ್ನು ಸಲ್ಲಿಸಿ, ಮಾಹೇಶ್ವರ ವರ್ಗದವರನ್ನು ಆರಾಧನೆ ಮಾಡಿ, ಅತ್ಯಂತ ಪ್ರೀತಿಯಿಂದ ನಾನಾ ಪ್ರಕಾರದ ದಾನಧರ್ಮಾದಿಗಳನ್ನು ಸ್ವಲ್ಪವೂ ಊಣೆಯವಿಲ್ಲದಂತೆ ಮಾಡಿ, ಹೆಮ್ಮೆಯನ್ನು ಹೊಂದಿ, ಅತಿಸ್ನೇಹದಿಂದ ಶಿವಕಥೆಯೆಂಬ ಶ್ಲಾಘನೀಯ ಮಾಣಿಕ್ಯರತ್ನಗಳ ಗೊಂಚಲುಗಳೆಂಬ ಕರ್ಣಕುಂಡಲಗಳನ್ನು ಧರಿಸಿದವನೂ, ಶಿವನ ಚರಣಗಳ ಪೂಜೆಯೆಂಬ ಸಾಮ್ರಾಜ್ಯಭಾರವನ್ನು ವಹಿಸಿದವನೂ, ಶಿವಲಿಂಗವೆಂಬ ಸೂರ್ಯನನ್ನು ಕೂಡಿರುವ ಪರಿಶುದ್ಧ ಹೃದಯಕಮಲವುಳ್ಳವನೂ, ಶಿವಧರ್ಮವೆಂಬ ಸರೋವರದ ಶ್ರೇಷ್ಠ ರಾಜಹಂಸನೂ, ಶಿವಶರಣರ ಮನಸ್ಸೆಂಬ ವನಕ್ಕೆ ವಸಂತಮಾಸದೋಪಾದಿಯಲ್ಲಿರುವವನೂ ಆದ ಸತ್ಯೇಂದ್ರಚೋಳನೆಂಬ ಭೂಮಿಾಶ್ವರನು ಸಚಿವನಾದ ಪತಿವ್ರೋಹಿಸಮೇತನಾಗಿ, ಸಮಸ್ತ ರಾಜರಿಂದ ಸೇವಿಸಲ್ಪಡುವವನಾಗಿ ಸಾಮ್ರಾಜ್ಯದಿಂದುಂಟಾದ ಸುಖವನ್ನು ಅನುಭವಿಸುತ್ತಿದ್ದನು. ಹೀಗಿರಲು ೫೫. ಹನ್ನೆರಡನೆಯ ದಿನದಲ್ಲಿ ಶ್ರೇಷ್ಠನಾದ ಕುಮಾರನಿಗೆ ರತ್ನಮಯವಾದ ತೊಟ್ಟಿಲನ್ನಿಟ್ಟರು. ವಾದ್ಯಧ್ವನಿಯು ಮೊಳಗುತ್ತಿತ್ತು. ಕನ್ಯೆಯರು ಸೇರಿ ಮಂಗಳ ಮಹೋತ್ಸವವನ್ನು ಆಚರಿಸಿದರು. ವ|| ಆ

ವ॥ ತನ್ಮಹೋತ್ಸವಾನಂತರಂ

ಚಂ॥ ತೊಳಗುವ ರನ್ನದೊಟ್ಟಿಲೊಳಿ ಪಟ್ಟರಿಸುತ್ತೆ ಕುಮಾರನಂ ಮುದಂ
ದಳಿದೆಳವೆಣ್ಗಳೊಲ್ದು ರಸನಾಂಚಲದೊಳ್ ಪನಿದೋಱಿ ಕಂದ ಜೋ
ವಿಳಸಿತರೂಪ ಜೋ ವಿನಯಭೂಷಣ ಜೋ ಸುಕುಮಾರ ಜೋ ಸುಧಾ
ನಿಳಯಸುವಾಣಿ ಜೋ ಸುಭಗ ಜೋ ವಿಭು ಜೋಯೆನುತೊಪ್ಪಿ ತೂಗಿದರ್ ೬೦

ಉ॥ ಮಂಗಳಕರ ಜೋ ಮನೋಹರ ಜೋ ಮಹೇಶ್ವರ ಜೋ ಮಹಾ
ಲಿಂಗಸಂಗತ ಜೋ ಮುದನ್ವಿತ ಜೋ ಮೃದುಸ್ಮಿತ ಜೋ ಜನೋ
ತ್ತುಂಗವಂದಿತ ಜೋ ಜಗನ್ನುತ ಜೋ ಜಯೋನ್ನತ ಜೋಯೆನು
ತ್ತುಂಗನಾಜನಮೆಯ್ದೆ ಪಾಡುತೆ ಜೋಗುಳಂ ಮಿಗೆ ತೂಗಿದರ್ ೬೧

ಕಂ॥ ಅರಿನೃಪರ ಸಿರಿಯ ಸೆಱೆಯಂ
ತರಳಂ ತಾನಿಂತು ಪಿಡಿವೆನೆಂದಱುಪುವವೊಲ್
ಸರಳಕರಾಂಗುಲಿಯಿಂದಂ
ತರುಣೀಜನದಳಿಕದಳಕಮಂ ಬರಸೆಳೆವಂ ೬೨

ಮಹೋತ್ಸವದ ಅನಂತರ, ೬೦. ಎಳೆಯ ಬಾಲಿಕೆಯರು ಪ್ರೀತಿಯಿಂದ ಪ್ರಕಾಶಿಸುವ ರತ್ನ ವಿಕಾರವಾದ ಮಣಿದೊಟ್ಟಿಲಲ್ಲಿ ಆ ರಾಜಕುಮಾರನನ್ನು ಮಲಗಿಸಿ, ಜಿಹ್ವಾಗ್ರದಲ್ಲಿ ಧ್ವನಿ ತೋರಿಸಿ, "ಕಂದನೇ ಜೋ, ಮನೋಹರರೂಪನೇ ಜೋ, ವಿನಯವೇ ಭೂಷಣವಾಗಿ ಉಳ್ಳವನೇ ಜೋ, ಸುಕುಮಾರನೇ ಜೋ, ಅಮೃತವನ್ನು ಸುರಿಸುವಂತಹ ಮಾತುಗಳುಳ್ಳವನೇ ಜೋ, ಉತ್ತಮ ಕೀರ್ತಿ ಸಂಪದಾದಿಗಳನ್ನು ಕರುವವನೇ ಜೋ, ವಿಭುವೇ ಜೋ" ಎನ್ನುತ್ತ ತೂಗುತ್ತ ಶೋಭಿಸಿದರು. ೬೧. "ಮಂಗಳಕರನೇ ಜೋ, ಮನೋಹರನೇ ಜೋ, ಮಹೇಶ್ವರನೇ ಜೋ, ಮಹಾಲಿಂಗದೊಡಗೂಡಿದವನೇ ಜೋ, ಸದಾ ಪ್ರೀತಿಯಿಂದ ಕೂಡಿದವನೇ ಜೋ, ಹಸನ್ಮುಖನೇ ಜೋ, ಶ್ರೇಷ್ಠರಾದ ಜನರಿಂದ ನಮಸ್ಕರಿಸಲ್ಪಡುವವನೇ ಜೋ, ಜಗದ ಜನರಿಂದ ಸ್ತೋತ್ರಮಾಡಿಸಿಕೊಳ್ಳುವವನೇ ಜೋ, ಶ್ರೇಷ್ಠ ಜಯದಿಂದ ಕೂಡಿದವನೇ ಜೋ" ಎನ್ನುತ್ತ ಸ್ತ್ರೀಸಮೂಹವು ತಪ್ಪದೆ ಜೋಗುಳವನ್ನು ಹಾಡುತ್ತ ಚೆನ್ನಾಗಿ ತೂಗಿದರು. ೬೨. ವೈರಿರಾಜರ ಐಶ್ವರ್ಯದ ಬಂಧನವನ್ನು ಈ ರೀತಿ ಹಿಡಿದು ಎಳೆಯುತ್ತೇನೆಂದು ತಿಳಿಸುವ ಹಾಗೆ ತನ್ನ ಸರಳವಾದ ಕೈ ಬೆರಳುಗಳಿಂದ ಆ ಹೆಂಗಸರುಗಳ ಭ್ರಮರಗಳಂತೆ ಕಪ್ಪಾದ ಮುಂಗುರುಳುಗಳನ್ನು ಕುಮಾರನು ಹಿಡಿದು

ನಿರುಪಾಧಿಕ ಪ್ರಕಾಶಾಂ
ತರ ಚಿಜ್ಜ್ಯೋತಿಗೆ ಸಮಾನಮಲ್ತೆಂದು ಕರಂ
ಪರಿಹಾಸಂಗೆಯ್ವಂತಿರೆ
ತರುಣಂ ಮಣಿದೀಪಮಂ ನಿರೀಕ್ಷಿಸಿ ನಗುವಂ ೬೩

ಶಿವನ ಜಡೆಮುಡಿಯ ಶಶಿಕಳೆ
ಭುವನದೊಳೀ ಕುವರವರಿಜುವಡೆದುದಯಿಸಿತೆಂ
ಬವೊಲೆಸೆದು ಕಳೆಗಳೊಡವೆರೆ
ಯೆ ವಿಳಾಸಂಬೆತ್ತು ಬಳೆದನವನಿಪತನಯಂ ೬೪

ದರಹಸನಾಮೃತವರ ವ
ಲ್ಲರಿಯಂಕುರದಂತೆ ತೋಱ ಮೊಳೆವಲ್ಲದ ಕಂ
ಬುರುಹಮುಖಿ ಸುರಿವವೊಲ್ಪಾ
ಲ್ಸರಿಯ ಪಯೋಧರದಿನಮೃತಮಂ ಪದೆದಿತ್ತಳ್ ೬೫

ವ|| ಮತ್ತಮತಿಸ್ನೇಹಂಬೆರಸು

ಚಂ|| ಬರೆ ತೆಗೆದಪ್ಪಿ ಚೀನವಸನಾಂಚಲಮಂ ನಸುನೂಂಕಿ ಹಾರಮಂ
ಕರತಳದಿಂ ಕಿಲಕ್ಕೆ ತೆಗೆದೊಯ್ಯನೆ ಸೋಗಿಲೊಳಿಟ್ಟು ನೇಹದಿಂ
ತೊರೆದಿರದೆಚ್ಚುಪಾಯ್ವ ಮೊಲೆವಾಲ್ಗಳನಳ್ಕಱೊಳೂಡಿ ನೋಡಿ ಭಾ
ಸುರಸುಕುಮಾರನಂ ನಲಿದಳಂಗನೆ ಪೂರ್ಣವಿಳಾಸದೇಳ್ಗೆಯಿಂ ೬೬

ಎಳೆಯುತ್ತಿದ್ದನು. ೬೩. ಆ ಬಾಲಕನು ಉಪಾಧಿರಹಿತವಾದ ಬೇರೊಂದು ಮಹಾ ಪ್ರಕಾಶವಾದ ಚಿತ್‌ಪ್ರಕಾಶಕ್ಕೆ ಇದು ಸಮಾನವಲ್ಲವೆಂದು ಚೆನ್ನಾಗಿ ಪರಿಹಾಸ್ಯ ಮಾಡುವನೋ ಎಂಬಂತೆ (ಅಲ್ಲಿರುವ) ರತ್ನದ ದೀಪಗಳನ್ನು ನೋಡುತ್ತ ನಗುತ್ತಿದ್ದನು. ೬೪. ಶಿವನ ಜಡೆಯಲ್ಲಿರುವ ಚಂದ್ರಕಳೆಯು ಈ ಕುಮಾರನ ರೂಪಧರಿಸಿ ಹುಟ್ಟಿತೆನ್ನುವ ಹಾಗೆ ಶೋಭಿಸಿ ಸಕಲ ಕಳೆಗಳು ತುಂಬಿಬರಲು ಮನೋಹರತೆಯನ್ನು ಪಡೆದು ಆ ರಾಜಕುಮಾರನು ಬೆಳೆದನು. ೬೫. ಮಂದಹಾಸವೆಂಬ ಅಮೃತದ ಶ್ರೇಷ್ಠವಾದ ಬಳ್ಳಿಯ ಮೊಳಕೆಯಂತೆ ಮೊಳೆಯುತ್ತಿರುವ ಹಲ್ಲುಗಳೆಂಬ ಆ ಅಮೃತಬಳ್ಳಿಯ ಅಂಕುರಕ್ಕೆ ಅಮೃತಮತಿದೇವಿಯು ಹಾಲಿನ ಹೊಯ್ನೀರನ್ನು ಹಾಕುತ್ತಿರುವಳೋ ಎಂಬಂತೆ ತನ್ನ ಮೊಲೆಯ ಹಾಲನ್ನು ಕುಮಾರನಿಗೆ ಪ್ರೀತಿಯಿಂದ ಕೊಡುತ್ತಿದ್ದಳು. ವ|| ಮತ್ತು ಅತಿ ಸ್ನೇಹದಿಂದ ಕೂಡಿ ೬೬. ಕುಮಾರನು ಹತ್ತಿರಕ್ಕೆ ಬರಲು ಗಾಢವಾಗಿ ಅಪ್ಪಿಕೊಂಡು, ರೇಷ್ಮೆಯ ವಸ್ತ್ರದ ತುದಿಯನ್ನು ಹಿಂದಕ್ಕೆ ಸರಿಸಿ, ಹಾರವನ್ನು ಕೈಯಿಂದ ಪಕ್ಕಕ್ಕೆ ಸರಿಸಿ, ಕೂಡಲೆ ಮಡಿಲಲ್ಲಿ ಇಟ್ಟುಕೊಂಡು, ತೊರೆಸಿ ಚಿಮ್ಮುವ ಮೊಲೆಹಾಲನ್ನು ಪ್ರೀತಿಯಿಂದ ಕುಡಿಸಿ, ಪ್ರಕಾಶಮಾನನಾದ ಸುಕುಮಾರನನ್ನು ನೋಡಿ ಪರಿಪೂರ್ಣ ಆನಂದಾತಿಶಯತೆ

ಕಂ|| ಈ ತೋಳೊಳಾಂತು ತೋರ್ಪೆನಿ
ಳಾತಳಮಂ ಶತ್ರುಭೂಪರಂ ಜಯಿಸುವೆನೆ
ನ್ನೀ ತೋಳೊಳೆಂದು ತೋರ್ಪವೊ
ಲಾ ತೋಳಾಡಿಸುವನವನಿಪಾಲಕತನಯಂ ೬೭

ಸವಿನಗೆಯೆಂಬಮರ್ದಿನ ಸೋನೆ
ಕವಿತರ್ಪವೊಲಾಗೆ ಸುರಿವ ಲಾಲಾಜಲಮು
ಣ್ಮುವ ಮೊಳೆವಲ್ಮಿನುಗುತ್ತಿರೆ
ಕುವರಂ ಕುಳ್ಳಿರ್ದು ಜನನಿಯೊಳ್ ಬಿನದಿಸುವಂ ೬೮

ವ|| ಅಂತುಮಲ್ಲದೆಯುಂ

ಕಂ|| ನಲವೆರ್ಚುವ ಪೆಣ್ಗಳ ಕರ
ತಲದಿಂ ಕರತಲಕೆ ಬರ್ಪ ಬಾಲಕನಾಗ
ಳ್ಗಲವಂದಂ ಕೆಂದಾವರೆ
ಯಲರಿಂದಲರ್ಗೆಯ್ದೆ ತಳರ್ವ ಹಂಸಾರ್ಭಕನಂ ೬೯

ಮ||ಸ್ರ|| ನಗಿಸುತ್ತಿರ್ಕೈಗಳಿಂ ಮಸ್ತಕಮನೆಳವಿ ಮುದ್ದೀವುದೆಂದಪ್ಪಿ ಶಿಷ್ಟೋ
ಕ್ತಿಗಳಂ ತಾಂ ಪೇಳ್ದು ಪೇಳ್ವಂತಿರೆ ಕಲಿಸಿ ತೊದಳ್ವಾತು ಚೆಲ್ವಾಗೆ ವಾಮಾ
ಕ್ಷಿಗೆ ಪುರ್ಬಿಂ ಜರ್ಬಿನಿಂ ನೋಡೆನುತಜುಪಿ ನೃಪಂ ಯತ್ನದಿಂ ಪಂಚವರ್ಣ
ತ್ರಿಗತಾಂಬಾಪಾಣಿಕೀರಪ್ರಭತನಯ:ನಿನಾನಂದಮಂ ತಾಳ್ದನಾಗಳ್ ೭೦

ದಿಂದ ನಲಿಯುವಳು. ೬೭. ಈ ತೋಳುಗಳಿಂದಲೇ ಈ ಭೂಮಿಯನ್ನು ಧಾರಣಮಾಡಿ ತೋರಿಸುತ್ತೇನೆ. ಶತ್ರುರಾಜರನ್ನು ಎನ್ನ ತೋಳುಗಳಿಂದಲೇ ಜಯಿಸುತ್ತೇನೆಂದು ತೋರಿಸುವ ಹಾಗೆ ತನ್ನ ಆ ತೋಳುಗಳನ್ನು ಆ ರಾಜಕುಮಾರನು ಆಡಿಸುತ್ತಿದ್ದನು. ೬೮. ಸವಿನಗೆಯೆಂಬ ಅಮೃತದ ಸುರಿಮಳೆ ಕವಿದುಬೀಳುವ ಹಾಗೆ ಲಾಲಾಜಲವು ಸುರಿಯುತ್ತಿರಲು, ಮೊಳಕೆಯೊಡೆದಿರುವ ಹಲ್ಲುಗಳು ಮಿನುಗುತ್ತಿರಲಾಗಿ ತಾಯಿಯ ತೊಡೆಯ ಮೇಲೆ ಆ ಕುಮಾರನು ಕುಳಿತು ವಿನೋದವನ್ನುಂಟುಮಾಡುತ್ತಿದ್ದನು. ವ|| ಅದೂ ಅಲ್ಲದೆ, ೬೯. ಅಕ್ಕರೆಯಿಂದ ಎತ್ತಿ ಆಡಿಸುವ ಸ್ತ್ರೀಯರುಗಳ ಕೈಯಿಂದ ಕೈಗೆ ಬರುತ್ತಿರುವ ಆ ಕುಮಾರನು ಆಗ ಕಮಲದಿಂದ ಕಮಲಕ್ಕೆ ಹೊರಡುವ ಹಂಸದ ಮರಿಗೆ ಸಮನಾಗಿದ್ದನು. ೭೦. ಆ ನರೇಂದ್ರನು ಎರಡೂ ಕೈಗಳಿಂದ ಚಕ್ಕಳಗುಳಿಯಿಟ್ಟು ನಗಿಸುತ್ತ, ತಲೆಯನ್ನು ತಡವುತ್ತ ಮುದ್ದು ಕೊಡು ಎಂದು ಹೇಳುತ್ತ ಅಪ್ಪಿಕೊಂಡು ಆದ್ಯರ ಒಳ್ಳೊಳ್ಳೆಯ ಮಾತುಗಳನ್ನು ಹೇಳಿ, ಹೇಳೆಂದು ಪುನಃ ಕುಮಾರನನ್ನು ಕೇಳುತ್ತ ಆ ಮಾತುಗಳನ್ನು ಕಲಿಸಿದನು. ಕುಮಾರನ ತೊದಲುಮಾತುಗಳು ಚೆಂದವಾಗಿರುತ್ತಿರಲು, ಅಮೃತಮತಿದೇವಿಗೆ ಹುಬ್ಬಿನ ಸಂಜ್ಞೆಯಿಂದಲೇ 'ನೋಡು !' ಎನ್ನುತ್ತ ತಿಳಿಸುತ್ತಿದ್ದನು. ಹೀಗೆ ಐದಾರು ಮಾತುಗಳನ್ನು ಕಲಿತು ತಾಯಿಯಾದ ಅಮೃತಮತಿದೇವಿಯ ಕೈಯ

ಮ॥ಸ್ರ॥ ತರಳಂಗೊಪ್ಪಿರ್ದುದೊಳ್ಮಾಣಿಕದರಳಿಲೆ ನೀಲಂಗಳಿಂ ತಳ್ತ ಕರ್ಣಾ
ಭರಣಂ ನುಣ್ಮುತ್ತಿನೇಕಾವಳಿ ಮಿಸುಪ ಹರಿದ್ರತ್ನವೊಂದಿರ್ದ ಮುಂಗೈ
ಸರಮುದ್ಯತ್ಸ್ವರ್ಣದಿಂ ಕೀಲಿಸಿದ ಪುಲಿಯುಗುರ್ ಪುಷ್ಯರಾಗಾಂಗದಂ ಬ
ಜ್ರರದಿಂದಿಂಬಾದ ಪೊಂಗೆಜ್ಜೆಗಳೊಡನೆ ಬೆಡಂಗಾದ ಮಂಜೀರಯುಗ್ಮಂ 20

ಚಂ॥ ಎಳನಗೆಯುಣ್ಮೆ ಮುದ್ದುಮೊಗದೊಳ್ ಮಱಿಯಂಚೆಯನಟ್ಟಲೆಂದು ಮಂ
ಜುಳತರಮಾಗೆ ದಟ್ಟಡಿಯನಿಕ್ಕುವ ಬಾಲಕನಂಗದೊಂದು ಮಾ
ರ್ಪೊಳಪಿರೆ ನೀಲಕುಟ್ಟಿಮದೊಳುರ್ವರೆ ತಜ್ಜನನೀಸಪತ್ನಿ ತಾಂ
ತಳೆದಳೊ ತತ್ಸಮಾತ್ಮಭವನಂ ಪುರುಡಿಂದೆನೆ ಕಣ್ಗೆ ರಂಜಿಕುಂ 21

ಮ॥ ಪೊಳೆವಿಂದೂಪಳ ಕುಟ್ಟಿಮಸ್ಥಳದೊಳೆತ್ತಂ ಸೂಸೆ ತೀವಿರ್ದ ನಿ
ರ್ಮಳ ಕರ್ಪೂರರಜಂಗಳಿಂ ತಳೆದು ಧೂಳೀಕೇಳಿಯಂ ಗಂಡದೊಳ್
ಮಿಳಿರ್ದಾಡುತ್ತಿರೆ ಕುಂಡಲಂ ಝುಣರೆನಲ್ ಪೊಂಗೆಜ್ಜೆಯೊಂದೊಂದು ಪ
ಲ್ಲೊಳೆ ಚೆಲ್ವಾಗಿರೆ ಮುದ್ದುವೀಱೆ ನಗುತೇಳ್ತಂದಪ್ಪುವಂ ಮಾತೆಯಂ 22

ಗಿಳಿಯಂತೆ ಇರುವ ಮಗನಿಂದ ಆನಂದವನ್ನು ಹೊಂದಿದನು. 20. ಆ ಕುಮಾರನಿಗೆ ಒಳ್ಳೆಯ ಮಾಣಿಕದ ಅರಳೆಲೆ, ನೀಲರತ್ನಗಳನ್ನು ಹೊಂದಿದ್ದ ಕರ್ಣಕುಂಡಲಗಳು, ಎಳೆಯ ಮುತ್ತಿನ ಏಕಾವಳಿಸರ, ಪ್ರಕಾಶಿಸುವ ಪಚ್ಚೆಕಲ್ಲುಗಳಿಂದ ಮಾಡಿದ್ದ ಮುಂಗೈ ಸರ, ಹೊಳೆಯುವ ಬಂಗಾರದಲ್ಲಿ ಕೂಡಿಸಿದ್ದ ಹುಲಿಯುಗುರು, ಪುಷ್ಯರಾಗದಿಂದ ಮಾಡಿದ ಭುಜಕೀರ್ತಿ (ತೋಳ ಬಾವುರಿ), ವಜ್ರಗಳಿಂದ ಒತ್ತೊತ್ತಾಗಿ ಬಿಗಿದ ಬಂಗಾರದ ಗೆಜ್ಜೆಗಳಿಂದ ಸೌಂದರ್ಯಗೊಂಡ ಪೈಜಣಗಳು ಶೋಭೆಯನ್ನುಂಟುಮಾಡಿದ್ದವು. 21. ಮುದ್ದು ಮುಖದಲ್ಲಿ ಎಳೆನಗೆಯು ಹೊರಸೂಸುತ್ತಿರಲು ಮರಿಹಂಸಗಳನ್ನು ಬೆನ್ನಟ್ಟಿ ಮನೋಹರವಾದ ತಪ್ಪುಹೆಜ್ಜೆಗಳನ್ನಿಡುತ್ತ ನಡೆಯುವ ಕುಮಾರನ ರೂಪು ನೀಲರತ್ನದ ನೆಲಗಟ್ಟಿನಲ್ಲಿ ಪ್ರತಿಫಲಿಸುತ್ತಿರಲಾಗಿ, ತನ್ನ ತಾಯಿಯ ಸವತಿಯಾದ ಭೂದೇವಿಯು ಸ್ಪರ್ಧೆಯಿಂದ (ಅಸೂಯೆಯಿಂದ) ರಾಜಕುಮಾರನಿಗೆ ಸಮಾನನಾದ ಮಗನನ್ನು ತಾನೂ ಪಡೆದಿರುವಳೋ ಎನ್ನುವಂತೆ ಕಣ್ಣಿಗೆ ಶೋಭೆಯುಂಟುಮಾಡುತ್ತಿತ್ತು. 22. ಹೊಳೆಯುತ್ತಿರುವ ಚಂದ್ರಕಾಂತಶಿಲೆಯ ನೆಲಗಟ್ಟಿನಲ್ಲಿ ಎಲ್ಲೆಲ್ಲೂ ತುಂಬಾ ಹರಡಿದ್ದ ನಿರ್ಮಲವಾದ ಕರ್ಪೂರದ ಧೂಳನ್ನು ತಲೆಗೆ ಮೆತ್ತಿಸಿಕೊಂಡು ಮಣ್ಣಾಟವನ್ನಾಡುತ್ತಿದ್ದನು. ಕರ್ಣಕುಂಡಲಗಳು ನೇತಾಡುತ್ತಿದ್ದವು. ಬಂಗಾರದ ಗೆಜ್ಜೆಗಳು ಝಣ ಝಣತ್ಕಾರ ಮಾಡುತ್ತಿದ್ದವು. ಮೊಳೆಯುತ್ತಿರುವ ಹಲ್ಲುಗಳು ಬಾಯಲ್ಲಿ ಚೆಲುವಾಗಿದ್ದುವು. ಹೀಗೆ ಸಂತೋಷವನ್ನು ಬೀರುತ್ತ, ನಗುತ್ತ ಓಡಿಬಂದು ತಾಯಿಯನ್ನು ಆ

ಕಂ॥ ಅರಳೆಲೆ ನೊಸಲೊಳ್ಚಲಿಸು
ತ್ತಿರೆ ಮಣಿಮಾಂಗಾಯ್ಗಳೊಲೆಯೆ ಕಿಱುಗೆಜ್ಜೆಗಳಾ
ವರಿಸಿ ದನಿಗುಡೆ ಮೃದುಸ್ಮಿತ
ಮಿರೆ ಮೊಗದೊಳ್ಮುದ್ದುವೀಱಿ ಕುಣಿವಂ ಕುವರಂ ೭೪

ವ॥ ಇಂತನಂತವಿಳಾಸಮಂ ಮೆಱೆದು

ಮ॥ಸ್ರ॥ ವಿಳಸತ್ಪೂರ್ವಾದ್ರಿಯೊಳ್ ಭಾಸುರ ತರುಣದಿನಾಧೀಶಬಿಂಬಂ ಸುಧಾಬ್ಧಿ
ಸ್ಥಳದೊಳ್ ಬಾಲಂ ಮರಾಳಂ ಮಳಯಜವನದೊಳ್ಕುಂಜರೇಂದ್ರಾರ್ಭಕಂ ಮೇ
ಣ್ಬಳೆವಂತತ್ಯಂತತೇಜಂ ವಿಮಳತೆ ವಿಸರದ್ಭದ್ರಮೊಂದಾಗಿ ತನ್ನೊಳ್
ಬಳೆಯಲ್ ಸತ್ಯೇಂದ್ರನಂತಃಪುರದೊಳೆ ಬಳೆದಂ ಸತ್ವಸಾರಂ ಕುಮಾರಂ ೭೫

ವ॥ ಇಂತು ಬಳೆವುತ್ತಮಿರೆಯಿರೆ

ಚಂ॥ ಜನಪತಿ ಪುತ್ರನಂ ಶುಭಮುಹೂರ್ತದೊಳೋರಗೆಗೊಂಡ ಮಂತ್ರಿಪು
ತ್ರನೊಳೊಡಗೂಡಿ ಮಂಗಳವಿಳಾಸಮೊಡಂಬಡೆ ಸರ್ವವಿದ್ಯೆ ಸಂ
ಜನಿಪವೊಲೋದಲಿಟ್ಟು ಮುದವೊಂದಿರೆ ಕಲ್ತರನೂನವಿದ್ಯೆಯುಂ
ಘನತರ ಶಸ್ತ್ರಶಾಸ್ತ್ರಹಯಹಸ್ತಿ ವಿಶೇಷಕ ವಾಹಕತ್ವಮಂ ೭೬

ಬಾಲಕನು ಅಪ್ಪುತ್ತಿದ್ದನು. ೭೪. ಅರಳೆಲೆಯ ಆಭರಣವು ಹಣೆಯಲ್ಲಿ ಅತ್ತಿಂದಿತ್ತ ಚಲಿಸುತ್ತಿತ್ತು. ರತ್ನಖಚಿತವಾದ ಮಾಂಗಾಯಿಯೆಂಬ ಆಭರಣವು ಒಲೆದಾಡುತ್ತಿತ್ತು. ಕಿರುಗೆಜ್ಜೆಗಳು ಒಟ್ಟಾಗಿ ಸೇರಿ ಧ್ವನಿಗುಡುತ್ತಿದ್ದವು. ಮುಖದಲ್ಲಿ ಕಿರುನಗೆಯಿರುತ್ತಿತ್ತು. ಹೀಗೆ ಚಲುವನ್ನು ಬೀರುತ್ತ ಆ ಕುಮಾರನು ಕುಣಿದಾಡುತ್ತಿದ್ದನು. ವ॥ ಹೀಗೆ ಎಣೆಯಿಲ್ಲದ ಸೊಗಸನ್ನು ಮೆರೆಯುತ್ತ ೭೫. ಪ್ರಕಾಶಿಸುವ ಪೂರ್ವದಿಗ್ಭಾಗದ ಅದ್ರಿಯಲ್ಲಿ ಹೊಳೆಯುವ ತರುಣಸೂರ್ಯಬಿಂಬವೂ, ಕ್ಷೀರಸಮುದ್ರದಲ್ಲಿ ಎಳೆಯ ಹಂಸಪಕ್ಷಿಯೂ, ಮಲಯಪರ್ವತದ ಅರಣ್ಯದಲ್ಲಿ ಐರಾವತದ ಮರಿಯೂ ಬೆಳೆಯುವ ಹಾಗೆ ಆ ಸತ್ಯೇಂದ್ರ ಚೋಳರಾಜನ ಅಂತಃಪುರದಲ್ಲಿ ಸತ್ವಸಾರನಾದ ಆ ಕುಮಾರನು ತೇಜಸ್ಸು, ಪರಿಶುದ್ಧತೆ, ವಿಶೇಷವಾದ ಮಂಗಳ(ಶುಭ)ಗಳು ಬೆಳೆಯುವಂತೆ ಬೆಳೆಯುತ್ತಿದ್ದನು. ವ॥ ಹೀಗೆ ಬೆಳೆಯುತ್ತಿರಲಾಗಿ, ೭೬. ಆ ರಾಜಕುಮಾರನನ್ನು ಮಂತ್ರಿಪುತ್ರನಾದ ಮಿತವಚನನೊಡನೆ ಜೊತೆಗೊಳಿಸಿ ಶುಭಮುಹೂರ್ತದಲ್ಲಿ ಮಂಗಳಕರ ನಡೆವಳಿಕೆಗಳು ಒಪ್ಪಿಗೆಯಾಗುವಂತಾಗಲು, ಸಮಸ್ತ ವಿದ್ಯೆಗಳೂ ವ್ಶೆಗೂಡುವಂತೆ ಓದುವುದಕ್ಕೆ ಗುರುಕುಲದಲ್ಲಿ ಇಟ್ಟು ಸಂತೋಷವನ್ನು ಪಡೆದಿರಲು, ಪರಿಪೂರ್ಣ ವಿದ್ಯೆಗಳಾದ ಶ್ರೇಷ್ಠ ಶಸ್ತ್ರಾಸ್ತ್ರವಿದ್ಯೆ, ಶಾಸ್ತ್ರಗಳು, ಕುದುರೆಸವಾರಿ, ಆನೆಗಳ ಸವಾರಿ ಮೊದಲಾದ ವಿಶೇಷವಾದ ವಿದ್ಯೆಗಳನ್ನು

ವ॥ ಇಂತು ಪರಿಣತಾಖಿಳ ರಾಜವಿದ್ಯಾವಿಶಾರದರೆನಿಸಿ

ಕಂ॥ ಕಲಿಪಂಗೆ ನೆರೆಯದಧಿಕೋ
ಜ್ಜ್ವಲಕಲೆ ಕೈಸಾರ್ದುದಮಳಮತಿಮತಿಗೆ ಸುಧಾ
ಜಲನಿಧಿಗಿಲ್ಲದ ಕಳೆಗಳ್
ನೆಲೆಗೊಂಡವೊಲಮಳಕಮಲರಿಪುಕಳೆಗಾಗಳ್ ೭೭

ವ॥ ಎಂದಧಿಕಬುಧಕದಂಬಂ ಪೊಗಳುತ್ತಮಿರೆಯಿರೆ

ಕಂ॥ ಸಮಚರಿತರ್ ಸಮವಿನಯರ್
ಸಮಾನವಯಸರ್ ಸಮಪ್ರಭರ್ ಸಮವಿದ್ಯರ್
ಸಮರೂಪರ್ ಸಮಗುಣರು
ತ್ತಮನೃಪಸುತಮಂತ್ರಿಪುತ್ರರಿರ್ವರ್ ಬಳೆದರ್ ೭೮

ಅವರಿರ್ವರಿರವನುರ್ವರೆ
ಯವರೀಕ್ಷಿಸುತಂ ಸಹೋದರರ್ ನಿಜಮೆಂಬರ್
ವಿವಿಧ ವಿಳಾಸದಿನಾ ನೃಪ
ಯುವತಿಯುಮಾ ನೃಪನುಮುಳ್ಕಟಿಂ ಸರಿಗಾಣ್ಬರ್ ೭೯

ಅಭ್ಯಾಸ ಮಾಡಿದರು. ವ॥ ಹೀಗೆ ಪರಿಪೂರ್ಣವಾದ ಅಖಿಳರಾಜವಿದ್ಯೆಗಳಲ್ಲಿ ವಿಶಾರದ ರೆನಿಸಿ ೭೭. ಕಲಿಸುವ ಗುರುವಿಗೆ ಉಂಟಾಗದಿದ್ದ ಅಧಿಕವಾದ ಶ್ರೇಷ್ಠ ಕಲೆಗಳು ನಿರ್ಮಲ ಬುದ್ಧಿಯ ಆ ರಾಜಕುಮಾರನ ಬುದ್ಧಿಶಕ್ತಿಗೆ ಕ್ಷೀರಸಮುದ್ರಕ್ಕೆ ಉಂಟಾಗದಿರುವ ಸಕಲ ಕಲೆಗಳು ಚಂದ್ರನಿಗೆ ಉಂಟಾಗುವ ಹಾಗೆ ಉಂಟಾದುವು. ವ॥ ಹೀಗೆಂದು ವಿಶೇಷವಾಗಿ ಜ್ಞಾನಿಗಳ ಸಮುದಾಯವು ಹೊಗಳುತ್ತಿರಲಾಗಿ ೭೮. ಆ ಉತ್ತಮವಾದ ರಾಜ ಕುಮಾರ ಮತ್ತು ಮಂತ್ರಿಕುಮಾರರಿರ್ವರು ಸಮಾನ ನಡೆವಳಿಕೆಯುಳ್ಳವರಾಗಿ, ಸಮಾನ ವಿನಯಶೀಲರಾಗಿ, ಒಂದೇ ಓರಗೆಯವರಾಗಿ, ಸಮಾನವಾದ ಕಾಂತಿಯುಳ್ಳವರಾಗಿ, ಸಮಾನ ವಿದ್ಯೆಯುಳ್ಳವರಾಗಿ, ಸಮಾನ ರೂಪವುಳ್ಳವರಾಗಿ, ಸಮಾನ ಗುಣವುಳ್ಳವರಾಗಿ ಬೆಳೆದರು. ೭೯. ಭೂಭಾಗದ ಜನರು ಅವರಿಬ್ಬರನ್ನೂ ನೋಡುತ್ತ ನಿಜವಾಗಿಯೂ ಇವರು ಒಂದೇ ತಾಯಿಯ ಮಕ್ಕಳು (ಅಣ್ಣ ತಮ್ಮಂದಿರು) ಎನ್ನುತ್ತಿದ್ದರು. ಸತ್ಯೇಂದ್ರ ಚೋಳನೂ ಮತ್ತು ಅಮೃತಮತಿ ಮಹಾರಾಣಿಯೂ ಅನೇಕ ವಿಳಾಸಗಳಿಂದ ಕೂಡಿದ

ನಡೆ ನಗೆ ಪುಗೆ ಮಾಂದ್ಯದೊಳೊ
ಳ್ದೊಡೆ ನುಡಿ ಕಡುನುಣ್ಪನಾನೆ ರಾಗದೊಳೆ ಮನಂ
ಕಡೆಗಣ್ತೊಡರ್ದಿರೆ ಜವ್ವನ
ಮಡಿಯಿಟ್ಟುದು ಮಂತ್ರಿಪುತ್ರನಂಗದೊಳಾಗಳ್ ೮೦

ಉ|| ಜಾಣ್ಮೆಗೆ ಜವ್ವನಂ ನೆಱೆದುದುಣ್ಮಿದ ಜವ್ವನಕೆಯ್ದೆ ಜಾಣ್ಮೆ ಕೈ
ಗಣ್ಮಿದುದೇಳ್ಗೆವೆತ್ತ ಸೊಬಗಿಂಗಳವಟ್ಟುದು ಚೆಲ್ವು ಚೆಲ್ವುಮಂ
ಕಣ್ಮನಕೊಪ್ಪುವಂತೆ ಸೊಬಗೊಂದಿದುದಗ್ಗದ ಲೀಲೆಗುತ್ಸವಂ
ಪೊಣ್ಮಿದುದುತ್ಸವಕ್ಕೆಸೆದುದಗ್ಗದಲೀಲೆ ತದಂಗಸಂಗದಿಂ ೮೧

ವ|| ಆಗಳಾ ಮಿತವಚನನತಿವಿತತಕೌತುಕಾವಹನೆನಿಸಿ

ಮ|| ಶತಪತ್ರಾಯತಲೋಚನಂ ನಗೆಮೊಗಂ ಬಿಂಬಾಧರಂ ವಜ್ರರಂ
ಜಿತ ದಂತಾವಳಿ ದೀರ್ಘಬಾಹುಯುಗಳಂ ವಿದ್ಯುತ್ಕಪೋಲದ್ವಯಂ
ವಿತತೋರಸ್ಥಲಮುನ್ನತಾಂಸಮರುಣಾಂಭೋಜಸ್ಫುರತ್ಪಾಣಿ ರಂ
ಜಿತ ರಂಭೋರು ಬೆಡಂಗುವೀಱೆ ತಳೆದಂ ಸೌಂದರ್ಯಸೌಭಾಗ್ಯಮಂ ೮೨

ಅವರಿಬ್ಬರನ್ನೂ ಒಂದೇ ರೀತಿಯಾಗಿ ನೋಡುತ್ತಿದ್ದರು. ೮೦. ನಡೆವಳಿಕೆ, ನಗುಗಳು ಚಪಲತೆಯನ್ನು ಕಳೆದುಕೊಂಡವು. ಒಳದೊಡೆಗಳೂ ನುಡಿಯೂ ವಿಶೇಷವಾಗಿ ವಿಲಾಸ ವನ್ನು ಹೊಂದಿದವು (ಪ್ರಕಾಶಗೊಂಡವು). ಅನುರಾಗದಿಂದ ಕೂಡಿದ ಮನಸ್ಸು ಕಡೆ ಗಣ್ಣಿನಲ್ಲಿ ತೊಡಕಿಕೊಂಡಿರಲಾಗಿ ಆ ಮಂತ್ರಿಪುತ್ರನ ಅಂಗದಲ್ಲಿ ಯೌವನವು ತಲೆದೋರಿತು. ೮೧. ಆ ಮಿತವಚನನ ಜಾಣತನಕ್ಕೆ ತಕ್ಕ ಯೌವನವು ಕೂಡಿಕೊಂಡಿತು. ಹೊರ ಹೊಮ್ಮುವ ಯೌವನಕ್ಕೆ ತಕ್ಕ ಜಾಣತನ ಕರಗತವಾಯಿತು. ಅಧಿಕಗೊಂಡ ಸೊಬಗಿಗೆ ಸೌಂದರ್ಯವೂ, ಸೌಂದರ್ಯವನ್ನು ಕಣ್ಣು ಮನಸ್ಸುಗಳಿಗೆ ಒಪ್ಪಿಗೆಯಾಗುವ ಹಾಗೆ ಸೊಬಗೂ ಹೊಂದಿಕೊಂಡವು. ಶ್ರೇಷ್ಠವಾದ ವಿಲಾಸಕ್ಕೆ ಸಂಪದಭಿವೃದ್ಧಿಯುತವಾದ ಉತ್ಸುಕತೆಯೂ, ಆ ಸಂಪದಭಿವೃದ್ಧಿಯುತವಾದ ಉತ್ಸುಕತೆಗೆ ಆ ಶ್ರೇಷ್ಠ ವಿಲಾಸತೆಯೂ ಆ ಯೌವನದ ಪ್ರಾಪ್ತಿಯು ದೇಹಕ್ಕಾದ ಕಾರಣದಿಂದ ಉಂಟಾದುವು. ವ|| ಆಗ ಆ ಮಿತವಚನನು ಹೆಚ್ಚಾದ ಕೌತುಕವನ್ನುಂಟುಮಾಡುವವನಾಗಿ ೮೨. ಕಮಲದಂತೆ ವಿಸ್ತಾರವಾದ ಕಣ್ಣು, ನಗೆಯಿಂದ ಕೂಡಿದ ಮುಖ, ತೊಂಡೆಯ ಹಣ್ಣಿನಂತಹ ತುಟಿ, ವಜ್ರದ ಹರಳಿ ನಂತೆ ರಂಜಿಸುವ ಹಲ್ಲುಗಳ ಸಾಲು, ಉದ್ದವಾದ ಬಾಹುದ್ವಯಗಳು, ಮಿಂಚುತ್ತಿರುವ ಎರಡೂ ಕೆನ್ನೆಗಳು, ವಿಸ್ತಾರವಾದ ಎದೆಯ ಪ್ರದೇಶ, ಎತ್ತರವಾದ ಭುಜದ್ವಯಗಳು, ಕೆಂಪುಕಮಲಗಳ ಹಾಗೆ ಪ್ರಕಾಶಿಸುವ ಅಂಗೈಗಳು, ರಂಜನೆಯನ್ನುಂಟುಮಾಡುವಂತಹ ತೊಡೆಗಳು, ಇವು ಸೊಬಗನ್ನು ಬೀರುತ್ತಿರಲು ಸೌಂದರ್ಯವೆಂಬ ಸಂಪತ್ತನ್ನು ಪಡೆದವ

ವ|| ಇಂತು ಸಮಾರೂಢಪ್ರೌಢ ಯೌವನಾಲಂಕೃತ ಸಹಜಸೌಂದರ್ಯಮಾಧುರ್ಯ ಧುರಂಧರತೆಯನಪ್ಪುಕೈದಾರ್ಯಜನವಿನುತಗುಣಗಣಾಭರಣಭೂಷಿತನುಂ ವಿತತಸಿತಯಶಃ ಸುಧರ್ಮಸಮುದಿತ ದಯಾನ್ವಿತ ನಿರ್ಮಲಾಂತಃಕರಣನುಮಮಿತಶೌರ್ಯ ಧೈರ್ಯ ಚಾತುರ್ಯ ಗಾಂಭೀರ್ಯ ಪ್ರಕಟಿತ ನಿಜಪ್ರಭಾವನುಂ ಪರಮಶಿವಚರಣಾರವಿಂದ ಮಂದ ಮಕರಂದಪಾನ ಮತ್ತಮಧುಕರಾಯಮಾನನುಮಖಿಳಕಳಾನೈಪುಣ್ಯಜನವರೇಣ್ಯನುಮೆನಿಸಿ ಪೊಗಳ್ತೆವಡೆದು ರಂಜಿಪಾ ಮಿತವಚನನೊಡನೆ ಕಳೆಗೊಂಡು ಶೈಶವದಶೆಯಂ ವಿಸರ್ಜಿಸಲುಪಕ್ರಮಿಸಿ ರಾಜಶೇಖರಕುಮಾರನೋಜೆಯಿಂ ರಾಜಿಸುತ್ತುಮಿರ್ಪಾಗಳ್

ಚಂ|| ಅನುಪಮ ಚಿದ್ಘನಾರ್ಯಗುರುಗಳ್ ಪಿರಿದುತ್ಸವದಿಂದೆ ಬಂದು ತ
ಜ್ಜನಪತಿಪುತ್ರನಂ ಸಚಿವಪುತ್ರನುಮಂ ನಡೆನೋಡಿ ಚಿತ್ತದೊಳ್
ನನೆಕೊನೆವೋಗಿ ರಾಗಿಸಿ ಮಹಾಶಿವದೀಕ್ಷೆಯನೊಲ್ದು ಮಾಡಿ ಪಾ
ವನಶಿವತತ್ವಮಂ ತಿಳಿಪಿ ಲಿಂಗಸಮರ್ಚಕರಂ ನಿಮಿರ್ಚಿದರ್ ೮೩

ನಾದನು. ವ|| ಈ ರೀತಿ ಏರುತ್ತಿರುವ ಪ್ರೌಢವಾದ ಯೌವನದಿಂದ ಅಲಂಕಾರಗೊಂಡ ಸಹಜವಾದ ಸೌಂದರ್ಯ ಮತ್ತು ಮಧುರತೆಯೇ ಮೊದಲಾದ ಶಕ್ತಿಗಳನ್ನು ಹೊಂದಿದ (ಅವನು) ಹಿರಿಯರಿಂದ ಸ್ತುತವಾದ ಗುಣಾವಳಿಗಳೆಂಬ ಆಭರಣಗಳಿಂದ ಅಲಂಕಾರಗೊಂಡನು. ವಿಸ್ತಾರವೂ ಶುಭ್ರವೂ ಆದ ಯಶಸ್ಸು ಮತ್ತು ಸದ್ಧರ್ಮಗಳಿಂದ ಸಂತುಷ್ಟನಾಗಿ ದಯಾದಿಗುಣಗಳಿಂದ ಕೂಡಿ, ನಿರ್ಮಲವಾದ ಅಂತಃಕರಣ ಚತುಷ್ಟಯವುಳ್ಳವನಾದನು. ಎಣೆಯಿಲ್ಲದ ಶೌರ್ಯ, ಧೈರ್ಯ, ಚತುರತೆ, ಗಂಭೀರತೆಗಳನ್ನು ಪ್ರಕಟಗೊಳಿಸುವ ತನ್ನದೇ ಆದ ಪ್ರಭಾವವುಳ್ಳವನಾದನು. ಶ್ರೇಷ್ಠವಾದ ಪರಮೇಶ್ವರನ ಚರಣಕಮಲಗಳಲ್ಲಿರುವ ಅಧಿಕವಾದ ಮಕರಂದ ಪಾನಮಾಡಿ ಮದಿಸಿದ ದುಂಬಿಗಳೋಪಾದಿಯಲ್ಲಿರುವವನಾದನು. ಅಖಿಲ ಕಲೆಗಳಲ್ಲಿ ನೈಪುಣ್ಯವನ್ನು ಪಡೆದ ಶ್ರೇಷ್ಠವ್ಯಕ್ತಿಯೆನಿಸಿದನು. ಹೀಗೆ ವಿಖ್ಯಾತಿಯನ್ನು ಪಡೆದು ರಂಜಿಸುತ್ತಿದ್ದ ಆ ಮಿತವಚನನೊಡನೆ ಸ್ನೇಹಗೊಂಡವನಾಗಿ ಆ ಚೋಳಭೂಪಾಲಕುಮಾರನಾದ ರಾಜಶೇಖರನು ಶೈಶವದ ಕಾಲವನ್ನು ದೂರತೊಲಗಿಸಲು ಆರಂಭಿಸಿ, ಅಂದರೆ ಬಾಲ್ಯವನ್ನು ಕಳೆದು ಯೌವನಾವಸ್ಥೆಗೆ ಅಡಿಯಿಡಲು ಆರಂಭಿಸಿ ತೇಜೋವಿಶೇಷವುಳ್ಳವನಾಗಿ ಪ್ರಕಾಶಿಸುತ್ತ ಇರುವ ಸಮಯದಲ್ಲಿ ೮೩. ಅನುಪಮರಾದ ಚಿದ್ಘನ ಶಿವಾಚಾರ್ಯ ಗುರುಗಳು ವಿಶೇಷ ಉತ್ಸವಗೊಂಡು ಬಂದು, ಆ ರಾಜಕುಮಾರನಾದ ರಾಜಶೇಖರ ಮತ್ತು ಸಚಿವಪುತ್ರರುಗಳನ್ನು ಚೆನ್ನಾಗಿ ದೃಷ್ಟಿಸಿ, ಮನಸ್ಸಿನಲ್ಲಿ ಆನಂದಾತಿಶಯಗೊಂಡು, ಪ್ರೀತಿಯಿಂದ ಮಹಾಶಿವದೀಕ್ಷಾ ಸಂಸ್ಕಾರವನ್ನುಂಟುಮಾಡಿ, ಪವಿತ್ರವಾದ ಶಿವತತ್ತ್ವವನ್ನು ತಿಳಿಸಿ ಲಿಂಗಪೂಜಾಧುರಂಧರರನ್ನಾಗಿ ಮಾಡಿದ್ದರು.

ವ॥ ಅಂತು ಶಿವದೀಕ್ಷೆಯಂ ರಚಿಸಿ ಶಿವಮಂತ್ರೋಪದೇಶಂಗೆಯ್ದು ಕೃಪಾರಸಭರ ಕಟಾಕ್ಷದಿನಭೀಕ್ಷಿಸಿ ಮತ್ತಮಿಂತೆಂದರ್

ಚಂ॥ ಇದು ಶಿವಮಂತ್ರಕೋಟಿಗೆ ತವರ್ಮನೆ ನೋಡಿದು ಶೈವಶಾಸ್ತ್ರಭೂ
ಜದ ಘನಮೂಲಮಿಂತಿದು ಚಿದಂಗನೆಯುಜ್ವಳದರ್ಪಣಂ ಪೊದ
ಳ್ದಿದು ಪರಮುಕ್ತಿಕಾಂತೆಯ ಶಿರೋಮಣಿ ತಾನಿದು ಮುನ್ನಿನಾರ್ಯರ
ಗ್ಗದನಿಧಿ ನೋಳ್ಪೊಡಿಂತಿದು ಮಹಾಮುನಿಚಿತ್ತಸರೋಜಷಟ್ಪದಂ ೮೪

ಮ॥ಸ್ರ॥ ನಿರಯಾಂಭೋರಾಶಿಯೊಳ್ಮೇಣ್ಮುಳುಗಿ ಬಹುತರಕ್ಲೇಶದೀ ಬೇವ ಪಾಪಾ
ತ್ಮರನಂದೈತಂದು ನೋಡುತ್ತಮಿತಮಹಿಮ ಸಾನಂದಯೋಗೀಂದ್ರನೊಲ್ದು
ಚ್ಚರಿಪನ್ನಂ ಕರ್ಣಮಂ ಸೋಂಕಿದನಿತಱೊಳವರ್ಗಿತ್ತು ರುದ್ರತ್ವಮಂ ತಾಂ
ಪೊರೆದತ್ತೀ ಮಂತ್ರಕೋಟಿಸ್ಫುಟಮಕುಟಮಹಾರತ್ನ ಷಡ್ವರ್ಣಮಂತ್ರಂ ೮೫

ಚಂ॥ ತನುಕೃತತಾಪನಾಗದತಿದೂರಕೆ ಪೋಗದೆ ಯತ್ನದಿಂ ಮರು
ನ್ಮನಮನೊಬಿಲ್ದು ಕಟ್ಟದೆ ಮಹಾದ್ರಿಯ ಮೆಟ್ಟದೆ ಕಂದಮೂಲಮಂ
ಮನದೊಲವಿಂದೆ ಮೆಲ್ಲದೆ ವನಾಂತದೆ ನಿಲ್ಲದೆ ಸುಮ್ಮನೊರ್ಮೆ ಮೆ
ಲ್ಲನೆ ನುಡಿದಂಗೆ ಮುಕ್ತಿಗುಡುತಿರ್ಪುದಿದೇದೊಡದಾರೊ ಬಣ್ಣಿಪರ್ ೮೬

ವ|| ಆ ರೀತಿ ಶಿವದೀಕ್ಷೆಯನ್ನು ಕೊಟ್ಟು, ಶಿವಮಂತ್ರೋಪದೇಶವನ್ನು ಮಾಡಿ, ಕೃಪಾರಸ ಪರಿಪೂರ್ಣವಾದ ಕಡೆಗಣ್ಣಿನಿಂದ ನೋಡಿ ಹೀಗೆ ಹೇಳಿದರು. ೮೪. "ನೋಡಿರಿ, ಈ ಶಿವ ಷಡಕ್ಷರಿ ಮಂತ್ರವು ಕೋಟಿ ಶಿವಮಂತ್ರಗಳಿಗೆ ತವರುಮನೆ, ಶೈವಶಾಸ್ತ್ರಗಳೆಂಬ ವೃಕ್ಷದ ಶ್ರೇಷ್ಠವಾದ ಬುಡ ; ಹೀಗೆಯೇ ಇದು ಜ್ಞಾನವೆಂಬ ಕಾಂತೆಯ ಪ್ರಕಾಶಮಾನವಾದ ಕನ್ನಡಿ ; ಪ್ರಸಿದ್ಧವಾದ ಇದು ಶ್ರೇಷ್ಠವಾದ ಮುಕ್ತಿಸ್ತ್ರೀಯ ಶಿರೋರತ್ನ ; ಇದು ತಾನು ಪೂರ್ವದ ಹಿರಿಯರ ಶ್ರೇಷ್ಠವಾದ ಹೂಳಿಟ್ಟ ಧನ ; ವಿಚಾರಿಸಿ ನೋಡಿದರೆ ಮಹಾಮುನಿ ಗಳ ಚಿತ್ತವೆಂಬ ಕಮಲದಲ್ಲಿರುವ ಭೃಂಗವೆನಿಸಿದೆ. ೮೫. ಹಿಂದಿನ ಕಾಲದಲ್ಲಿ ಪಾಪ ಸಮುದ್ರದಲ್ಲಿ ಮುಳು ಮುಳುಗಿ ಬಹುಸಂಕಟಗಳಿಂದ ಬೇಯುತ್ತಿರುವ ಪಾಪಾತ್ಮರನ್ನು ಕಂಡು, ಅಲ್ಲಿಗೆ ಬಂದು ಅವರನ್ನು ಕಂಡ ಅಗಣಿತ ಮಹಿಮಾಶಾಲಿಯಾದ ಸಾನಂದ ಯೋಗೀಂದ್ರನು ಅವರಲ್ಲಿ ಕನಿಕರಗೊಂಡು ಈ ಷಡಕ್ಷರ ಮಂತ್ರವನ್ನು ಉಚ್ಚರಿಸಲಾಗಿ, ಅದು ಅವರ ಕಿವಿಗೆ ಸೋಂಕಿದಾಕ್ಷಣವೇ ಅವರಿಗೆ ರುದ್ರಪದವಿಯನ್ನು ಕೋಟಿಮಂತ್ರಗಳ ಶೋಭಿಸುವ ಕಿರೀಟದ ಮಹಾರತ್ನಸ್ವರೂಪವಾದ ಆರಕ್ಷರಗಳ ಮಂತ್ರವು ಕೊಟ್ಟು ರಕ್ಷಿಸಿತು. ೮೬. ತಾಪವನ್ನು ದೇಹಕ್ಕೆ ಕೊಡುವವನಾಗದೆ, ದೂರಕ್ಕೆ ಎಲ್ಲಿಗೋ ಹೋಗದೆ, ಪ್ರಯತ್ನದಿಂದ ಶ್ವಾಸೋಚ್ಛ್ವಾಸಗಳನ್ನೂ ಮನಸ್ಸನ್ನೂ ಬಂಧಿಸದೆ, ದೊಡ್ಡ ದೊಡ್ಡ ಗುಡ್ಡಗಳನ್ನು ಏರದೆ, ಪ್ರೀತಿಯಿಂದ ಕಂದಮೂಲಾದಿಗಳನ್ನು ತಿನ್ನದೆ, ಅರಣ್ಯ ಮಧ್ಯದಲ್ಲಿ ನಿಲ್ಲದೆ, ಸುಮ್ಮನೆ ಒಂದುಸಲ ಮೆಲ್ಲನೆ ಉಚ್ಚರಿಸಿದವನಿಗೆ ಮುಕ್ತಿಯುನ್ನು ಈ ಷಡಕ್ಷರಮಂತ್ರವು ಉಂಟುಮಾಡುತ್ತಿರುವಾಗ ಯಾರು ಇಂಥ ಮಂತ್ರದ ಮಹಿಮೆ

ಕಂ॥ ಹರವದನ ಚಂದ್ರಬಿಂಬದಿ
ನಿರದೊಗೆದುದನೂನ ವೇದವಟುತರ ಪಂಚಾ
ಕ್ಷರಬೀಜದಿನುರು ಶಾಖಾ
ವಿರಾಜಿತಂ ಪಲ್ಲವಾಂಚಿತಂ ಫಳಮಿಳಿತಂ ೮೭

ಸ್ಮೃತಿವಿತತಪುರಾಣೌಘದೊ
ಳತಿಶಯಮಾ ಶ್ರುತಿಸಮೂಹಮದಱೊಳ್ನಿಸದಂ
ಶತರುದ್ರೀಯಮದತಿಶಯ
ಮತಿಶಯಮದಱಲ್ಲಿ ಪಂಚಮುಖಪರಮಂತ್ರಂ ೮೮

ಅಮೃತಪ್ರದಮಾನೆಂಬುದ
ನಮರ್ತ್ಯಮರ್ತ್ಯಾಳಿಗಱಿಪುವಂತಿತ್ತುದು ತಾ
ನಮಮ ಶತಮನ್ಯುಗುಪಮ
ನ್ಯುಮುನಿಗಮೃತಮಂ ಷಡಕ್ಷರಂ ಶಿವಮಂತ್ರಂ ೮೯

ಉ॥ ಕಾಮಿತವಸ್ತುವಂ ನೆಗಳಲಾರ್ಪುದು ಕಾಮದುಘಂ ಸುರರ್ಗೆ ಚಿಂ
ತಾಮಣಿ ಚಿಂತಿತೇಷ್ಟಮನಮರ್ತ್ಯಗುಮಾರಯೆ ಕಲ್ಪಿತಾರ್ಥಮಂ
ನೇಮಿಪುದಲ್ತೆ ಕಲ್ಪತರು ಕಾಮಿತ ಚಿಂತಿತ ಕಲ್ಪತೇತರೋ
ದ್ದಾಮ ಮಹಾಪದಪ್ರದಮಿದೆಂದೊಡಿದರ್ಕೆಣೆ ಬರ್ಪುದಾವುದೋ ೯೦

ಯನ್ನು ಬಣ್ಣಿಸಲು ಶಕ್ತರಾದಾರು ! ೮೭. ಅಧಿಕತರವಾದ ವೇದಗಳೆಂಬ ಆಲದಮರಗಳ ಐದಕ್ಷರಗಳೆಂಬ ಬೀಜದಿಂದ ಹುಟ್ಟಿ, ಶ್ರೇಷ್ಠರೆಂಬ ಕೊಂಬೆಗಳಾಗಿ, ಚಿಗುರುಗಳಿಂದ ಕೂಡಿ, ಫಲಾದಿಗಳಿಂದ ವಿಶಿಷ್ಟವಾದ ಹಾಗೆ ಪರಮೇಶ್ವರನ ಐದುಮುಖಗಳೆಂಬ ಚಂದ್ರಬಿಂಬದಿಂದ ಈ ಮಂತ್ರವು ಉದಯಗೊಂಡಿದೆ. ೮೮. ಸ್ಮೃತಿ ವಿಸ್ತಾರವಾದ ಪುರಾಣಗಳ ಸಮೂಹದಲ್ಲಿ ವೇದಗಳ ಸಮೂಹವು ಶ್ರೇಷ್ಠವಾದುದು ; ಅದರಲ್ಲಿ ಅತಿಶಯಾಗಿ ಶತರುದ್ರೀಯ ಅಂದರೆ ರುದ್ರಾಧ್ಯಾಯವು ಅಧಿಕವಾದದ್ದು ; ಆ ರುದ್ರಾಧ್ಯಾಯದಲ್ಲಿ ಅತಿಶಯವಾದುದು ಪರಮೇಶ್ವರನ ಪಂಚಮುಖಗಳಲ್ಲಿ ಪಂಚ ಅಕ್ಷರಗಳಾಗಿ ಹೊರಬಂದ ಪಂಚಾಕ್ಷರಿ ಎಂಬ ಮಂತ್ರವು. ೮೯. ನಾನು ಅಮೃತ ಸ್ವರೂಪವೆಂಬುದನ್ನು ದೇವತೆ ಮತ್ತು ಮನುಷ್ಯರ ಸಮೂಹಕ್ಕೆ ತಿಳಿಸುವ ಹಾಗೆ, ಷಡಕ್ಷರಾತ್ಮಕವಾದ ಈ ಶಿವಮಂತ್ರವು ಅಮಮ ! ಶತಮನ್ಯು (ಇಂದ್ರ)ವಿಗೂ, ಉಪಮನ್ಯುವಿಗೂ ಅಮೃತತ್ವವನ್ನು ಕೊಟ್ಟಿತಲ್ಲವೆ ! ೯೦. ದೇವತೆಗಳಿಗೆ ಕಾಮಿತವಸ್ತುಗಳನ್ನು ಉಂಟುಮಾಡಿಕೊಡಲು ಕಾಮಧೇನುವು ಸಮರ್ಥವಾಗುವುದು ; ಚಿಂತಾಮಣಿಯು ಚಿಂತಿಸಿದ ಪದಾರ್ಥಗಳನ್ನು ಉಂಟುಮಾಡಲು ಸಮರ್ಥವಾಗುವುದು ; ಕಲ್ಪತರುವು ಕಲ್ಪಿತ ವಸ್ತುಗಳನ್ನು ಕೊಡಲು ಶಕ್ಯವಾಗುವುದು. ಬಯಕೆ, ಚಿಂತನೆ, ಕಲ್ಪನೆಗಳಿಗಿಂತ ಇತರವಾದ ಅಮೋಘವಾದ ಮಹಾಪದವಿಗಳಾದ ಭೋಗಮೋಕ್ಷಾದಿಗಳನ್ನು ಈ

ಕಂ॥ ಘನಮುಕ್ತಿಕಾಂತೆಗಿದು ತಾಂ
ಜನನಿ ಲಸದ್ಭಕ್ತಿಯುವತಿಗಿದು ಕೆಳದಿ ಪುರಾ
ತನರ ಮತದಿಂದೆ ಶರಣಾಂ
ಗನೆಗಭವನನೆಳೆದುತರ್ಪ ದೂದವಿ ಪೆಱತೇಂ ೯೧

ಮ॥ಸ್ರ॥ ದುರಿತೌಘಧ್ವಾಂತವಿಧ್ವಂಸನಖರಕರಮತ್ಯುಗ್ರಮೃತ್ಯುಗ್ರಹಾದಿ
ಸ್ಫುರದುದ್ಯದ್ವಜ್ರಮುಜ್ಜೃಂಭಿತ ಭವನಿವಹಾಂಭೋಧಿಕುಂಭೋದ್ಭವಂ ದು
ರ್ಧರದುರ್ಮಂತ್ರಾಭ್ರವಿಭ್ರಂಶನ ಪಟುಪವನಂ ದಂಡಭೃತ್ ಚಂಡಕಾಕೋ
ದರ ಮೋಘಜ್ಯೋತಿ ಪಂಚಾಕ್ಷರಮಿದು ಶಿವತಂತ್ರೋದಿತಂ ದಿವ್ಯಮಂತ್ರಂ ೯೨

ಕಂ॥ ಈ ಮಂತ್ರದಮಿತ ಮಹಿಮೆಯ
ನೀ ಮಹಿತ ಮಹೀತಳಾಗ್ರದೊಳ್ಬಣ್ಣಿಸಲಾರ್
ಸಾಮರ್ಥ್ಯಸಮೇತರ್ ಶೇ
ಷಾಮರಗುರು ತಾಮರಸಭವರ್ವರ್ಣಿಸಿದಪರೇ ೯೩

ಮಂತ್ರವು ತಾನಾಗಿಯೇ ಉಂಟುಮಾಡುತ್ತದೆನ್ನುವಾಗ ಇದಕ್ಕೆ ಸರಿಬರುವುದು ಇದ್ದೀತೆ ! ೯೧. ಈ ಮಂತ್ರವು ಘನತರಳಾದ ಮುಕ್ತಿಕಾಂತೆಗೆ ತಾಯಿ ; ಭಕ್ತಿಯೆಂಬ ಹೆಂಗಸಿಗೆ ಗೆಳತಿ ; ಪ್ರಾಚೀನರ ಮತದಂತೆ ಶರಣನೆಂಬ ಸ್ತ್ರೀಗೆ ಪರಮೇಶ್ವರನನ್ನೇ ಎಳೆದುತರುವ ದೂತಿಕೆ, ಬೇರೆ ಹೇಳುವುದೇನು ? ೯೨. ಪಾಪವೆಂಬ ಕತ್ತಲೆಯನ್ನು ವಿಧ್ವಂಸನಗೊಳಿಸುವ ತೀಕ್ಷ್ಣಕಿರಣನಾದ ಸೂರ್ಯ ; ಅತಿ ಉಗ್ರಸ್ವರೂಪದ ಸಾವು ಮತ್ತು ಗ್ರಹದೋಷಗಳಿಗೆ ಹೊಳೆಯುತ್ತಿರುವ ವಜ್ರಾಯುಧ ; ಜೀವರಿಗೆ ಅಡರಿಕೊಂಡಿರುವ ಜನನ ಮರಣರೂಪವಾದ ಸಮುದ್ರಕ್ಕೆ ಅಗಸ್ತ್ಯಋಷಿಯು ಹಾಗೆ ; ತಡೆಯಲಸಾಧ್ಯವಾದ ಅಯೋಗ್ಯಮಂತ್ರಗಳೆಂಬ ಮೋಘಗಳನ್ನು ಹೊಡೆದೋಡಿಸುವ ಬಿರುಗಾಳಿ ; ಯಮನೆಂಬ ಭಯಂಕರ ಸರ್ಪಕ್ಕೆ ಕೋಲ್ಮಿಂಚಿನಂತಿರುವ ಐದಕ್ಷರಗಳ ಈ ಮಂತ್ರವು ಶಿವಸಂಬಂಧವಾದ ತಂತ್ರಗಳಲ್ಲಿ (ಆಗಮಗಳಲ್ಲಿ) ಹೇಳಲ್ಪಟ್ಟ ದಿವ್ಯ ಮಂತ್ರವಾಗಿದೆ. ೯೩. ಈ ಮಂತ್ರದ ಅಪರಿಮಿತ ಮಹಿಮೆಯನ್ನು ವಿಸ್ತಾರವಾದ ಭೂಭಾಗದಲ್ಲಿ ವರ್ಣಿಸಲು ಯಾರು ಸಾಮರ್ಥ್ಯದಿಂದ ಕೂಡಿದ್ದಾರೆ ? ಆದಿಶೇಷ, ಬೃಹಸ್ಪತಿ, ಕಮಲಭವನಾದ ಬ್ರಹ್ಮರುಗಳು ಕೂಡ ಸಮರ್ಥರಾಗುವರೇ ?

ತನುವಿಲ್ಲದತನುವಿಧ್ವಂ
ಸನಂಗೆ ತನು ಪೇಳಲೊಂದು ಪೆಸರಿಲ್ಲದ ಚಿ
ದ್ಘನಲಿಂಗಕ್ಕಿದು ಪೆಸರಂ
ದೆನೆ ಬಣ್ಣಿಪರಾರೊ ಪಂಚವರ್ಣದ ಘನಮಂ ೯೪

ಆದಱಿಂದೆ ನಂಬಿ ಜಪಿಸಿದೊ
ಡಿದಱಿಂ ದೊರೆಕೊಳ್ಗುಮಮಳ ಶಿವಪದಮಿಂತ
ಲ್ಲದೆ ಪೇಱಿತುಮಾರ್ಗದಿಂದ
ಪ್ಪುದು ತಾನೆಂಬುದು ನಭಃಪಯೋಜಪ್ರಾಯಂ ೯೫

ಚಂ|| ಚರಚರಣಾಂಬುವಂ ತಳೆದು ತದ್ಘನಶೇಷಮನೆಯ್ದೆ ಕೊಂಡು ಶಂ
ಕರಶರಣರ್ಕಳಂ ಸವಿನಯಂ ಮಿಗೆ ಮನ್ನಿಸಿ ಪೆಂಪುವೆತ್ತ ಭಾ
ಸುರಭಸಿತಾಕ್ಷಮಾಲಿಕೆಯನಂಗದೊಳಾಂತು ನಿಜಾರ್ಯಪೂಜೆಯಂ
ವಿರಚಿಸಿ ಲಿಂಗಮಂ ಭಜಿಸಿದಂಗಿದು ಸಿದ್ಧಿಪ್ರದೀಶ್ವರಾಜ್ಞೆಯಿಂ ೯೬

ವ|| ಎಂದು ಸಾಂಗಮೆನೆ ತಿಳಿಪಿದಾಗಳ್

೯೪. ದೇಹಾದಿವಿಕಾರವಿಲ್ಲದವನೂ ಮನ್ಮಥಹರನೂ ಆದ ಶಿವನಿಗೆ ಈ ಮಂತ್ರವು ದೇಹ. ಹೆಸರೇ ಇಲ್ಲದ ಕೇವಲಜ್ಞಾನಮಯವೂ, ಪ್ರಕಾಶಮಯವೂ ಆದ ಘನಲಿಂಗಕ್ಕೆ ಇದು ಹೆಸರು. ಹೀಗಿರುವಾಗ ಈ ಐದಕ್ಷರಗಳ ಪಂಚಾಕ್ಷರಿಮಂತ್ರವನ್ನು ಬಣ್ಣಿಸುವವನು ಯಾವನಿದ್ದಾನೆ? ೯೫. ಆದುದರಿಂದ ಇಂಥ ಮಹಿಮಾತಿಶಯವುಳ್ಳ ಪಂಚಾಕ್ಷರಿ ಮಂತ್ರವನ್ನು ನಂಬಿ ಜಪಿಸಿದ್ದಾದರೆ, ಅದರಿಂದ ಪವಿತ್ರವಾದ ಶಿವಸಾಯುಜ್ಯವು ಲಭ್ಯವಾಗುತ್ತದೆ. ಅದನ್ನು ಬಿಟ್ಟು ಅನ್ಯಮಾರ್ಗದಿಂದ ಲಭ್ಯವಾಗುತ್ತದೆಂದು ಹೇಳುವುದು ಆಕಾಶಕಮಲಪ್ರಾಯವಾದುದು. (ಆಕಾಶದಿಂದ ಕಮಲವನ್ನು ತಂದ ಹಾಗೆ) ೯೬. ಜಂಗಮಮೂರ್ತಿಗಳ ಪಾದೋದಕವನ್ನು ಧರಿಸಿ ಆ ಶ್ರೇಷ್ಠ ಪಾದೋದಕದ ಶೇಷವನ್ನು ಲಿಂಗತೀರ್ಥವಾಗಿ ಸ್ವೀಕರಿಸಿ, ಶಿವಲಾಂಛನಧಾರಿಗಳಾದ ಶರಣರುಗಳನ್ನು ವಿನಯಾದಿ ಭಕ್ತ್ಯಾಚಾರಮಾರ್ಗದಿಂದ ಮನ್ನಣೆಮಾಡಿ, ಘನತೆವೆತ್ತ ಪ್ರಕಾಶಮಾನಗಳಾದ ಭಸ್ಮರುದ್ರಾಕ್ಷಮಾಲೆಗಳನ್ನು ದೇಹದಲ್ಲಿ ಧರಿಸಿ, ತನ್ನ ಇಷ್ಟಲಿಂಗವನ್ನು ಪೂಜೆಮಾಡಿ, ಆ ಲಿಂಗವನ್ನು ಸ್ತೋತ್ರಮಾಡಿದವನಿಗೆ ಈ ಮಂತ್ರವು ಈಶ್ವರಾಜ್ಞೆಯಿಂದ ಸಿದ್ಧಿಯನ್ನುಂಟುಮಾಡುವುದು." ವ|| ಎಂದು ಯಥಾಸಾಂಗವಾಗಿ ತಿಳಿಸಿದಾಗ

ಕಂ॥ ಘನಮುಕ್ತಿಕಾಂತೆಗಿದು ತಾಂ
ಜನನಿ ಲಸದ್ಭಕ್ತಿಯುವತಿಗಿದು ಕೆಳದಿ ಪುರಾ
ತನರ ಮತದಿಂದೆ ಶರಣಾಂ
ಗನೆಗಭವನನೆಳೆದುತರ್ಪ ದೂದವಿ ಪೆಱತೇಂ ೯೧

ಮ॥ಸ್ರ॥ ದುರಿತೌಘಧ್ವಾಂತವಿಧ್ವಂಸನಖರಕರಮತ್ಯುಗ್ರಮೃತ್ಯುಗ್ರಹಾದಿ
ಸ್ಫುರದುದ್ಯದ್ವಜ್ರಮುಜ್ಜೃಂಭಿತ ಭವನಿವಹಾಂಭೋಧಿಕುಂಭೋದ್ಭವಂ ದು
ರ್ಧರದುರ್ಮಂತ್ರಾಭ್ರವಿಭ್ರಂಶನ ಪಟುಪವನಂ ದಂಡಭೃತ್ ಚಂಡಕಾಕೋ
ದರ ಮೋಘಜ್ಯೋತಿ ಪಂಚಾಕ್ಷರವಿದು ಶಿವತಂತ್ರೋದಿತಂ ದಿವ್ಯಮಂತ್ರಂ ೯೨

ಕಂ॥ ಈ ಮಂತ್ರದಮಿತ ಮಹಿಮೆಯ
ನೀ ಮಹಿತ ಮಹೀತಳಾಗ್ರದೊಳ್ಬಣ್ಣಿಸಲಾರ್
ಸಾಮರ್ಥ್ಯಸಮೇತರ್ ಶೇ
ಷಾಮರಗುರು ತಾಮರಸಭವರ್ನೆರೆದಪರೇ ೯೩

ಮಂತ್ರವು ತಾನಾಗಿಯೇ ಉಂಟುಮಾಡುತ್ತದೆನ್ನುವಾಗ ಇದಕ್ಕೆ ಸರಿಬರುವುದು ಇದ್ದೀತೆ! ೯೧. ಈ ಮಂತ್ರವು ಘನತರಳಾದ ಮುಕ್ತಿಕಾಂತೆಗೆ ತಾಯಿ ; ಭಕ್ತಿಯೆಂಬ ಹೆಂಗಸಿಗೆ ಗೆಳತಿ ; ಪ್ರಾಚೀನರ ಮತದಂತೆ ಶರಣನೆಂಬ ಸ್ತ್ರೀಗೆ ಪರಮೇಶ್ವರನನ್ನೇ ಎಳೆದುತರುವ ದೂತಿಕೆ, ಬೇರೆ ಹೇಳುವುದೇನು ? ೯೨. ಪಾಪವೆಂಬ ಕತ್ತಲೆಯನ್ನು ವಿಧ್ವಂಸನಗೊಳಿಸುವ ತೀಕ್ಷ್ಣಕಿರಣನಾದ ಸೂರ್ಯ ; ಅತಿ ಉಗ್ರಸ್ವರೂಪದ ಸಾವು ಮತ್ತು ಗ್ರಹದೋಷಗಳಿಗೆ ಹೊಳೆಯುತ್ತಿರುವ ವಜ್ರಾಯುಧ ; ಜೀವರಿಗೆ ಅಡರಿಕೊಂಡಿರುವ ಜನನ ಮರಣರೂಪವಾದ ಸಮುದ್ರಕ್ಕೆ ಅಗಸ್ತ್ಯಋಷಿಯು ಹಾಗೆ ; ತಡೆಯಲಸಾಧ್ಯವಾದ ಅಯೋಗ್ಯಮಂತ್ರಗಳೆಂಬ ಮೇಘಗಳನ್ನು ಹೊಡೆದೋಡಿಸುವ ಬಿರುಗಾಳಿ ; ಯಮನೆಂಬ ಭಯಂಕರ ಸರ್ಪಕ್ಕೆ ಕೋಲ್ಮಿಂಚಿನಂತಿರುವ ಐದಕ್ಷರಗಳ ಈ ಮಂತ್ರವು ಶಿವಸಂಬಂಧವಾದ ತಂತ್ರಗಳಲ್ಲಿ (ಆಗಮಗಳಲ್ಲಿ) ಹೇಳಲ್ಪಟ್ಟ ದಿವ್ಯ ಮಂತ್ರವಾಗಿದೆ. ೯೩. ಈ ಮಂತ್ರದ ಅಪರಿಮಿತ ಮಹಿಮೆಯನ್ನು ವಿಸ್ತಾರವಾದ ಭೂಭಾಗದಲ್ಲಿ ವರ್ಣಿಸಲು ಯಾರು ಸಾಮರ್ಥ್ಯದಿಂದ ಕೂಡಿದ್ದಾರೆ ? ಆದಿಶೇಷ, ಬೃಹಸ್ಪತಿ, ಕಮಲಭವನಾದ ಬ್ರಹ್ಮರುಗಳು ಕೂಡ ಸಮರ್ಥರಾಗುವರೇ ?

ತನುವಿಲ್ಲದತನುವಿಧ್ವಂ
ಸನಂಗೆ ತನು ಪೇಳಲೊಂದು ಪೆಸರಿಲ್ಲದ ಚಿ
ದ್ಘನಲಿಂಗಕ್ಕಿಧು ಪೆಸರಿಂ
ದೆನೆ ಬಣ್ಣಿಪರಾರೊ ಪಂಚವರ್ಣದ ಘನಮಂ ೯೪

ಅದಱಿಂದೆ ನಂಬಿ ಜಪಿಸಿದೊ
ಡಿದಱಿಂ ದೊರೆಕೊಳ್ಗುಮಮಳ ಶಿವಪದಮಿಂತ
ಲ್ಲದೆ ಪೇಱತುಮಾರ್ಗದಿಂದ
ಪ್ಪುದು ತಾನೆಂಬುದು ನಭಃಪಯೋಜಪ್ರಾಯಂ ೯೫

ಚಂ॥ ಚರಚರಣಾಂಬುವಂ ತಳೆದು ತದ್ಘನಶೇಷಮನೆಯ್ದೆ ಕೊಂಡು ಶಂ
ಕರಶರಣರ್ಕಳಂ ಸವಿನಯಂ ಮಿಗೆ ಮನ್ನಿಸಿ ಪೆಂಪುವೆತ್ತ ಭಾ
ಸುರಭಸಿತಾಕ್ಷಮಾಲಿಕೆಯನಂಗದೊಳಾಂತು ನಿಜಾರ್ಯಪೂಜೆಯಿಂ
ವಿರಚಿಸಿ ಲಿಂಗಮಂ ಭಜಿಸಿದಂಗಿದು ಸಿದ್ಧಿಪ್ರದೀಶ್ವರಾಜ್ಞೆಯಿಂ ೯೬

ವ॥ ಎಂದು ಸಾಂಗಮೆನೆ ತಿಳಿಪಿದಾಗಳ್

೯೪. ದೇಹಾದಿವಿಕಾರವಿಲ್ಲದವನೂ ಮನ್ಮಥಹರನೂ ಆದ ಶಿವನಿಗೆ ಈ ಮಂತ್ರವು ದೇಹ. ಹೆಸರೇ ಇಲ್ಲದ ಕೇವಲಜ್ಞಾನಮಯವೂ, ಪ್ರಕಾಶಮಯವೂ ಆದ ಘನಲಿಂಗಕ್ಕೆ ಇದು ಹೆಸರು. ಹೀಗಿರುವಾಗ ಈ ಐದಕ್ಷರಗಳ ಪಂಚಾಕ್ಷರಿಮಂತ್ರವನ್ನು ಬಣ್ಣಿಸುವವನು ಯಾವನಿದ್ದಾನೆ? ೯೫. ಆದುದರಿಂದ ಇಂಥ ಮಹಿಮಾತಿಶಯವುಳ್ಳ ಪಂಚಾಕ್ಷರಿ ಮಂತ್ರವನ್ನು ನಂಬಿ ಜಪಿಸಿದ್ದಾದರೆ, ಅದರಿಂದ ಪವಿತ್ರವಾದ ಶಿವಸಾಯುಜ್ಯವು ಲಭ್ಯವಾಗುತ್ತದೆ. ಅದನ್ನು ಬಿಟ್ಟು ಅನ್ಯಮಾರ್ಗದಿಂದ ಲಭ್ಯವಾಗುತ್ತದೆಂದು ಹೇಳುವುದು ಆಕಾಶಕಮಲಪ್ರಾಯವಾದುದು. (ಆಕಾಶದಿಂದ ಕಮಲವನ್ನು ತಂದ ಹಾಗೆ) ೯೬. ಜಂಗಮಮೂರ್ತಿಗಳ ಪಾದೋದಕವನ್ನು ಧರಿಸಿ ಆ ಶ್ರೇಷ್ಠ ಪಾದೋದಕದ ಶೇಷವನ್ನು ಲಿಂಗತೀರ್ಥವಾಗಿ ಸ್ವೀಕರಿಸಿ, ಶಿವಲಾಂಛನಧಾರಿಗಳಾದ ಶರಣರುಗಳನ್ನು ವಿನಯಾದಿ ಭಕ್ತ್ಯಾಚಾರಮಾರ್ಗದಿಂದ ಮನ್ನಣೆಮಾಡಿ, ಘನತೆವೆತ್ತ ಪ್ರಕಾಶಮಾನಗಳಾದ ಭಸ್ಮರುದ್ರಾಕ್ಷಮಾಲೆಗಳನ್ನು ದೇಹದಲ್ಲಿ ಧರಿಸಿ, ತನ್ನ ಇಷ್ಟಲಿಂಗವನ್ನು ಮಾಡಿ, ಆ ಲಿಂಗವನ್ನು ಸ್ತೋತ್ರಮಾಡಿದವನಿಗೆ ಈ ಮಂತ್ರವು ಈಶ್ವರಾಜ್ಞೆಯಿಂದ ಸಿದ್ಧಿಯನ್ನುಂಟುಮಾಡುವುದು.” ವ॥ ಎಂದು ಯಥಾಸಾಂಗವಾಗಿ ತಿಳಿಸಿದಾಗ

ಕಂ॥ ಹೃದಯಪಯೋಜದ ಪರಿಮಳ
ಮಿದು ಚೇತಸ್ತಂಭದಗ್ರಮಣಿದೀಪಿಕೆ ವೋ
ಣಿದು ಮಾನಸಮುಕುರದ ಪೊಳ
ಪಿದು ತಾನೆನಿಸಿದುದು ಗುರುನಿರೂಪಿತಮಂತ್ರಂ ೯೭

ಬಗೆಗೊಗೆದುದಧಿಕ ಮುದಮುಱೆ
ನೆಗೆದುದು ರೋಮಾಂಚಮಂಗದೊಳ್ ಸುಖಜಳಮು
ಕ್ಷಿಗಳಿಂ ಕಳಿದಿಳಿದುದು ಮೆ
ಲ್ಲಗೆ ಬೆಮರುಣ್ಮಿದುದು ಸಚಿವಸುತ ನೃಪಸುತರಾ ೯೮

ವ॥ ಇಂತೊಗೆದ ಸಾತ್ವಿಕಂಬೆರಸು ನಿತ್ಯಸತ್ಯ ಸಮಗ್ರೋದಗ್ರಪ್ರಭಾವರಾ ಶ್ರೀಗುರು ಚರಣನಖಚಂದ್ರನಂ ನೊಸಲ್ವೆಱೆಯಿನಾಲಿಂಗಿಪಂತೆ ಪದೆದೆಱಗಿನಿಂದು ಕರಾಬ್ಜಮಂ ಮುಗಿದು

ಕಂ॥ ಜಯಜಯರವಮುಣ್ಮಿರೆ ಸಂ
ಶಯರಹಿತಾಶಯು ಸಮೇತರಾನಂದಯುತರ್
ಭಯಭಕ್ತಿವೆರಸು ನುತಿಸಿದ
ರಯಕರಣಕರರ್ ಕುಮಾರರಾ ಗುರುವರನಂ ೯೯

೯೭. ಗುರುಗಳಿಂದ ನಿರೂಪಿಸಲ್ಪಟ್ಟ ಈ ಶಿವಮಂತ್ರವು ಹೃದಯಕಮಲದ ಪರಿಮಳ ವಾಗಿಯೂ, ಚೇತನವೆಂಬ ಕಂಬದ ರತ್ನದೀಪವಾಗಿಯೂ ಮತ್ತು ಇದು ಮನಸ್ಸೆಂಬ ಕನ್ನಡಿಯ ಪ್ರಕಾಶವಾಗಿಯೂ ಇರುವುದು. ೯೮. ಆಗ ಆ ರಾಜಕುಮಾರನಾದ ರಾಜಶೇಖರನಿಗೂ, ಮಂತ್ರಿಸುತನಾದ ಮಿತವಚನನಿಗೂ ಮನಸ್ಸಿಗೆ ವಿಶೇಷವಾದ ಸಂತೋಷವಾಯಿತು ; ಮೈಯಲ್ಲಿ ರೋಮಾಂಚನವು ಅಧಿಕವಾಗಿ ಉಂಟಾಯಿತು ; ಆನಂದಬಾಷ್ಪಗಳು ಕಣ್ಣಿನಿಂದ ಒಂದೇಸಮನೆ ಇಳಿದವು ; ಮಯ್ಯಲ್ಲಿ ಬೇವರು ಇಳಿಯ ತೊಡಗಿತು. ವ|| ಹೀಗೆ ಉಂಟಾದ ಸಾತ್ವಿಕರಸದೊಡನೆ ನಿತ್ಯಸತ್ಯರೂ ಸಮಗ್ರವಾಗಿ ವಿಶೇಷ ಪ್ರಭಾವಯುತರೂ ಆದ ಆ ಚಿದ್ಘನ ಶಿವಾಚಾರ್ಯ ಗುರುಗಳ ಶ್ರೀಪಾದಗಳಲ್ಲಿರುವ ಉಗುರು ಗಳೆಂಬ ಚಂದ್ರನನ್ನು ಅರ್ಧಚಂದ್ರಾಕಾರವಾದ ಹಣೆಯೆಂಬ ಚಂದ್ರನಿಂದ ಆಲಿಂಗಿಸುವಹಾಗೆ ಪ್ರೀತಿಯಿಂದ ನಮಸ್ಕರಿಸಿ ಕರಕಮಲಗಳನ್ನು ಮುಗಿದು, ೯೯. ಜಯ ಜಯ ಎಂಬ ಶಬ್ದವು ಉಂಟಾಗಿರಲು, ಸಂಶಯರಹಿತವಾದ ಅಭಿಪ್ರಾಯದಿಂದ ಕೂಡಿದವರಾಗಿ, ಆನಂದ ದಿಂದ ಕೂಡಿದವರೂ ಶುಭದಾಯಕವಾದ ವಿಧಿಗಳನ್ನಾಚರಿಸುವವರೂ ಆದ ಆ ರಾಜಕುಮಾರರು ಆ ಗುರುಶ್ರೇಷ್ಠನನ್ನು ಭಕ್ತಿಯಿಂದಕೂಡಿ ಸ್ತೋತ್ರಮಾಡಿದರು.

ದುರಿತಾಬ್ಜ ಸುಧಾಕರ ಭೀ
ಕರಭವಬಂಧನತಮೋ ದಿವಾಕರ ಮಹಿಮಾ
ಕರ ವಿತತಕೃಪಾಕರ ಕೇ
ಕರ ಜಯ ಜಗತೀಜನೋತ್ತಮಸ್ತುತಿಪಾತ್ರ ೧೦೦

ತನುವಂ ಮನವಂ ಘನಜೀ
ವನಮಂ ಪರಿಶುದ್ಧಗೊಳಿಸಿ ಶಿವಚಿತ್ಕಳೆ ಪಾ
ವನಪಂಚಾಕ್ಷರಮಂತ್ರಮ
ನನುಗೊಳಿಸಿದಿರಾರ್ಯಕುಲಕುಶೇಶಯಮಿಹಿರಾ ೧೦೧

ನಿಗಮಾಂತ ಭೂಮಿಕಾಂತಃ
ಪ್ರಗತ ಶಿವಾದ್ವೈತ ಚಿನ್ಮಹಾನಿಧಿಯನಿದಂ
ವಿಗತಾಂಜನನಱಿದೆಮಗುಱಿ
ತೆಗೆದಿತ್ತುದು ಚಿತ್ರಮಲ್ತೆ ನೀಂ ಗುರುವರ್ಯಾ ೧೦೨

ವ॥ ಎಂದು ವಿಪುಳತರಭಕ್ತಿಯಿಂ ವಿವಿಧ ಸ್ತುತಿಗಳಿಂ ಪೊಗಳ್ದು ಸಾಷ್ಟಾಂಗ ಪ್ರಣಾಮಂ ಗೈದು ನಿರತಿಶಯ ವಸುವಸನಮಣಿಭರಣಂಗಳಿಂ ಪೂಜಿಸಿ ಪೂರ್ಣಮನೋರಥಂಬಡೆದು ಮಗುಳ್ದು ಪೊಡಮಡಲೊಡನೆ

೧೦೦. "ದುರಿತವೆಂಬ ಕಮಲಕ್ಕೆ ಚಂದ್ರನೋಪಾದಿಯಲ್ಲಿರುವವನೇ, ಭಯಂಕರವಾದ ಈ ಹುಟ್ಟು ಸಾವುಗಳಿಂದ ಕೂಡಿದ ಸಂಸಾರವೆಂಬ ಕತ್ತಲೆಗೆ ಸೂರ್ಯಪ್ರಾಯನಾದವನೇ, ಮಹಿಮೆಗಳಿಂದ ತುಂಬಿರುವವನೇ, ವಿಶೇಷವಾದ ಕೃಪೆಯನ್ನು ಕಡೆಗಣ್ಣಿನ ಕಾಂತಿಯಿಂದಲೇ ಶಿಷ್ಯರಲ್ಲಿ ಉಂಟುಮಾಡುವವನೇ, ಜಗತ್ತಿನ ಶ್ರೇಷ್ಠಜನರಿಂದ ನುತಿಸಿಕೊಳ್ಳುವವನೇ ಜಯ ಜಯ. ೧೦೧. ತನು, ಮನ, ಘನತರ ಜೀವನವನ್ನು ಪರಿಶುದ್ಧಗೊಳಿಸಿ, ಶಿವಚಿತ್ಕಳಾಸ್ವರೂಪವಾದ ಪವಿತ್ರಪಂಚಾಕ್ಷರಿಮಂತ್ರವನ್ನು ಅನುಭವಕ್ಕೆ ಬರುವಂತೆ ಮಾಡಿದಿರಿ, ಗುರುವಂಶವೆಂಬ ತಾವರೆಗೆ ಸೂರ್ಯಸಮಾನನಾದ ಗುರುವೇ. ೧೦೨. ಗುರುವರ್ಯನೇ, ನೀನು ಉಪನಿಷತ್ತುಗಳೆಂಬ ಭೂಮಿಯಲ್ಲಡಗಿದ ಶಿವಾದ್ವೈತ ತತ್ತ್ವದ ಮುಖ್ಯ ವಿಷಯವಾಗಿರುವ ಈ ಮಹಾಗುಪ್ತ ಧನವನ್ನು ಅಂಜನಸಿದ್ಧಿಯಿಲ್ಲದೆಯೇ ತಿಳಿದು ಹೊರತೆಗೆದು ನಮಗೆ ಕೊಟ್ಟದ್ದೀಯೆ, ಇದು ವಿಚಿತ್ರವಲ್ಲವೆ?". ವ॥ ಹೀಗೆಂದು ವಿಶೇಷವಾದ ಭಕ್ತಿಯಿಂದ ಕೂಡಿ ಅನೇಕ ಬಗೆಯ ಸ್ತೋತ್ರಗಳಿಂದ ಹೊಗಳಿ, ಸಾಷ್ಟಾಂಗ ಪೂರ್ವಕ ಪ್ರಣಾಮಗಳನ್ನು ಮಾಡಿ, ಅಮೂಲ್ಯವಾದ ದ್ರವ್ಯ, ವಸ್ತ್ರ, ರತ್ನಾಭರಣಗಳೇ ಮೊದಲಾದ ಕಾಣಿಕೆ ಕೊಡುವುದರ ಮೂಲಕ ಪೂಜಿಸಿ, ಪೂರ್ಣ ಮನೋರಥವನ್ನು ಹೊಂದಿದವರಾಗಿ, ಪುನಃ ಪುನಃ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿದರು. ಒಡನೆಯೇ

ಶ್ಲೋಕ॥ ಯಾಭ್ಯಾಮುಮಾಸ್ಯ ನೇತ್ರಾಬ್ಜ ನೀಲಾಬ್ಜೇ ಸುವಿಕಾಸಿತೇ
ಸದಾ ಶಂಭೋಃ ಖರತ್ನಾಬ್ಜನೇತ್ರೇ ತೇವ್ಯೋsವತಾಂ ಚಿರಂ ॥

ಶಾ॥ ಪ್ರಾಂಚತ್ಪಂಚಮರುದ್ವಿಹಾರನಗರೀ ಪಂಚಾಸ್ತ್ರಹೃದ್ಭೀಕರೀ
ಪಂಚಾಚಾರ ಪರೋಕ್ಷಸಂಚಯಚರೀ ಪಂಚಾನನಾಂತಃಪುರೀ
ಪಂಚೀಭೂತ ಜಗತ್ತ್ರಪಂಚಲಹರೀ ಪಂಚಪ್ರಮಾಮಂಜರೀ
ಪಂಚಬ್ರಹ್ಮಧರೀ ಮಹಾಸುಖಕರೀ ಪಂಚಾಕ್ಷರೀ ಪಾತು ವಃ ೧೦೩

ವ॥ ಎಂದಮೋಘಪ್ರಭಾವರಾಶೀರ್ವಾದಂಗೆಯ್ದು ತತ್ಪಿತೃಗಳಿಂ ಪೂಜೆಗೊಂಡಖಂಡ ವಿಭವಂ ಮಿಗೆ ನಿಜದೇಶಕ್ಕೆ ತಳರ್ದರನ್ನೆವರಮಿತ್ತಲ್

ಚಂ॥ ವಿತತ ಮಹೋತ್ಸವಂಬೆರಸು ಸತ್ಕುಲ ಸದ್ಗುಣ ಸದ್ವಯಸ್ಸಮು
ನ್ನತ ಮತಿಯುಕ್ತಿಯುಂ ಕಮಳಲೋಚನೆಯೆಂಬ ಮನೋಜ್ಞಕನ್ನೆಯಂ
ಮಿತವಚನಂಗೆ ಚೋಳಧರಣೀಪತಿ ಮಾಡಿ ವಿವಾಹಮಂ ಸಮು
ಸ್ಥಿತಿಪೃಥುಸಂಪದಂಗೊಳಿಸಿ ರಂಜಿಸಿದಂ ಬುಧಕಲ್ಪಭೂರುಹಂ ೧೦೪

ಶ್ಲೋಕ|| "ಶಿವನ ನೇತ್ರಗಳಾದ ಸೂರ್ಯ ಚಂದ್ರ ರೂಪವಾದ ಯಾವ ಎರಡು ಕಣ್ಣುಗಳಿಂದ ಪಾರ್ವತೀದೇವಿಯ ಕಮಲ ಕನ್ನೈದಿಲೆಗಳಂತಿರುವ ಎರಡು ನೇತ್ರಗಳು ಅರಳುವವೋ ಅಂಥ ಆಕಾಶಕ್ಕೆ ರತ್ನಪ್ರಾಯರಾಗಿರುವ ಸೂರ್ಯ ಚಂದ್ರರೆಂಬ ಶಿವನ ನೇತ್ರಗಳು ನಿಮ್ಮನ್ನು ಚಿರಕಾಲ ರಕ್ಷಿಸಲಿ. ೧೦೩. ಶೋಭಿಸುವ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ ಈ ದೇವತೆಗಳ ವಿಹಾರಯೋಗ್ಯವಾದ ನಗರವೂ, ಪಂಚಬಾಣನಾದ ಮನ್ಮಥನ ಹೃದಯಕ್ಕೆ ಭಯಂಕರವಾದುದಾಗಿಯೂ, ಐದು ಆಚಾರಗಳಾದ ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ, ಗಣಾಚಾರ ಪರರಾದವರ ಇಂದ್ರಿಯಗಳ ಸಮೂಹದಲ್ಲಿ ಸುಳಿದಾಡುವಂತಹುದೂ, ಪರಮೇಶ್ವರನ ಅಂತಃಪುರದಲ್ಲಿರುವಂತಹದೂ, ಪಂಚಭೂತಾತ್ಮಕವಾದ ಪ್ರಪಂಚದಲ್ಲಿ ತರಂಗರೂಪವಾಗಿರುವಂತಹುದೂ, ಪಿಪೀಲಿಕಾ, ವಿಹಂಗಮ, ಮರ್ಕಟ, ಗಜ, ಪೂರ್ಣಜ್ಞಾನಗಳೆಂಬ ಪಂಚಪ್ರಮಾಜ್ಞಾನಗಳ ಗೊಂಚಲಾಗಿರುವಂತಹುದೂ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನಗಳೆಂಬ ಪಂಚಬ್ರಹ್ಮಗಳನ್ನು ಧರಿಸಿರುವಂತಹದೂ, ಮಹಾಸುಖಪ್ರದವಾದುದೂ ಆದ ಪಂಚಾಕ್ಷರೀಮಂತ್ರವು ನಿಮ್ಮನ್ನು ರಕ್ಷಿಸಲಿ." ವ|| ಎಂದು ಅಮೋಘಪ್ರಭಾವರಾದ ಗುರುಗಳು ಆಶೀರ್ವಾದ ಮಾಡಿ, ಅವರ ತಂದೆಯರುಗಳಿಂದ ಪೂಜೆಯನ್ನು ಕೈಕೊಂಡು, ಅಖಂಡವಾದ ವಿಭವಸಂಪನ್ನರಾಗಿ ತಮ್ಮ ದೇಶಕ್ಕೆ ಹೊರಟುಹೋದರು. ಇತ್ತಕಡೆ ೧೦೪. ಸತ್ಕುಲ, ಸದ್ಗುಣ, ಸಮವಯಸ್ಸುಗಳಿಂದ ಕೂಡಿ, ಶ್ರೇಷ್ಠಳೆನಿಸಿದ ಬುದ್ಧಿವಂತೆಯಾದ ಕಮಳಲೋಚನೆ ಎಂಬ ಹೆಸರಿನ ಮನೋಹರಕನ್ಯೆಯನ್ನು ತಂದು ಮಿತವಚನನಿಗೆ ವಿಶೇಷವಾದ ಮಹೋತ್ಸವದಿಂದ ಕೂಡಿ ವಿವಾಹವನ್ನು ಆ ಚೋಳಧರಣಿಪತಿಯು ಮಾಡಿದನು. ಸಮುಸ್ಥಿತಿಗೊಳಿಸಲು ಹೆಚ್ಚಾದ ಸಂಪತ್ತನ್ನು ಅವರಿಗೆ ಕೊಟ್ಟು ಆ

ವ॥ ಅಂತೆಸಗಲೊಡನೆ

ಮ॥ ಸ್ರ॥ ಸುದತೀ ಸಸ್ಮೇರ ವಕ್ತ್ರಾಂಬುಜಪರಿಮಳಮಂ ಘ್ರಾಣದಿಂ ತದ್ವಚಃಸಂ
ಪದಮಂ ಶ್ರೋತ್ರಂಗಳಿಂ ತನ್ಮೃದುಳತರ ತನುಸ್ಪರ್ಶಮಂ ದೇಹದಿಂ ತ
ದ್ವಿದಿತೋದ್ಯದ್ರೂಪಮಂ ನೇತ್ರದಿನಧರಸುಧಾಸಾರಮಂ ಜಿಹ್ವೆಯಿಂ ಸಂ
ಮುದದಿಂದಂ ಸೇವಿಸುತ್ತಂ ಮಿತವಚನಕುಮಾರಂ ಕರಂ ರಂಜಿಸಿರ್ದಂ ೧೦೫

ವ॥ ಇಂತತಿಪ್ರಮೋದದಿನವನಭಿನವ ಸಂಸಾರಸುಖಮನನವರತಮನುಭವಿಸುತ್ತ ಮಿರ್ದನಿರ್ಪನ್ನೆಗಂ

ಚಂ॥ ಕರತಳಪಲ್ಲವಕ್ಕೆ ನವರಾಗತೆ ನೇತ್ರಸರೋರುಹಕ್ಕೆ ಭಾ
ಸುರತೆ ಮುಖೇಂದುಬಿಂಬಕಮಳಾಂಶು ವಿಳಾಸತೆ ಕೋಮಳಾಂಗ ಬಂ
ಧುರಹರಿಚಂದನಕ್ಕೆ ಕಮನೀಯತೆ ಸಾರ್ದಿರೆ ಯೌವನೋದಯ
ಸ್ಫುರಿತ ವಸಂತಮೆಯ್ದಿದುದು ತನ್ನೃಪನಂದನರಂಜನಾಸ್ಪದಂ ೧೦೬

ವ॥ ಅಂತೆಯ್ದಿದ ನಡುಜವ್ವನದ ಸಿರಿಯಂ ಮೈಸಿರಿಯೊಡನೆ ಕೇಳಿಯಿಂ ಕೆಳೆಗೊಳಿಸಿ

ಜ್ಞಾನಿಗಳಿಗೆ ಕಲ್ಪವೃಕ್ಷಪ್ರಾಯನಾದ ರಾಜನು ರಂಜಿಸಿದನು. ವ॥ ಈ ರೀತಿ ವಿವಾಹ ಮಾಡಿದ ಮೇಲೆ ೧೦೫. ಮಿತವಚನಕುಮಾರನು ತನ್ನ ಹೆಂಡತಿಯಾದ ಕಮಲಲೋಚನೆಯ ಕಿರುನಗೆಯಿಂದ ಕೂಡಿದ ಮುಖಕಮಲದ ಪರಿಮಳವನ್ನು ಮೂಗಿನಿಂದಲೂ, ಅವಳ ಸಂಪದ್ಭರಿತ ಮಾತುಗಳನ್ನು ಕಿವಿಗಳಿಂದಲೂ, ಅವಳ ಮೃದುವಾದ ದೇಹಸ್ಪರ್ಶವನ್ನು ದೇಹದಿಂದಲೂ, ಅವಳ ಪ್ರಖ್ಯಾತವಾದ ಶ್ರೇಷ್ಠ ರೂಪವನ್ನು ನೇತ್ರಗಳಿಂದಲೂ, ತುಟಿಯ ಸುಧೆಯಸಾರವನ್ನು ನಾಲಿಗೆಯಿಂದಲೂ ಪ್ರೀತಿಯಿಂದ ಸೇವಿಸುತ್ತ ಹೆಚ್ಚಾಗಿ ಶೋಭಿಸುತ್ತಿದ್ದನು. ವ॥ ಹೀಗೆ ಅತ್ಯಂತ ಸಂತೋಷದಿಂದ ಅವನು ನೂತನ ಸಂಸಾರಸುಖವನ್ನು ಸದಾ ಅನುಭವಿಸುತ್ತ ಇರುವಷ್ಟರಲ್ಲಿ ೧೦೬. ಅಂಗೈಗಳೆಂಬ ಚಿಗುರುಗಳಿಗೆ ನೂತನ ಅರುಣವರ್ಣವೂ, ನೇತ್ರಕಮಲಗಳಿಗೆ ಪ್ರಕಾಶವೂ, ಮುಖವೆಂಬ ಚಂದ್ರಮಂಡಲಕ್ಕೆ ಪರಿಶುದ್ಧ ಕಾಂತಿಯ ವಿಲಾಸವೂ, ರಮ್ಯವೂ ಕೋಮಲವೂ ಆದ ದೇಹವೆಂಬ ಶ್ರೀಗಂಧದಮರಕ್ಕೆ ಕಾಮನಾಯೋಗ್ಯ ಸೌಗಂಧವೂ ಕೂಡಿಕೊಂಡಿರಲು ಯೌವನದ ಉದಯವೆಂಬುದನ್ನು ತೋರಿಸುವ ವಸಂತಋತುವಿಗೆ ಆ ನೃಪಕುಮಾರನು ಆಸ್ಪದನಾಗಿ ರಂಜಿಸಿದನು. ವ॥ ಆರೀತಿ ಉಂಟಾದ ನೂತನ ಪ್ರಾಯದ ಐಶ್ವರ್ಯವು

ಮ॥ ನಿಡುಗಣ್ ಪಂಕಜಪತ್ರಮಂ ಪಳಿಯೆ ವಕ್ತ್ರಂ ಪಾರಿಜಾತಾರಿಯಂ
ಜಡಿಯಲ್ ಜಹ್ನುಸುತಾತರಂಗತತಿಯಂ ತಳ್ಪೊಯ್ಯೆ ಬಾಹುದ್ವಯಂ
ಕುಡುಪುರ್ವಿಕ್ಷುಧನುರ್ಲತಾಲಲಿತಮಂ ಕೀಳ್ಮಾಡೆ ಪೊಂಬಾಳೆಯಂ
ತೊಡೆ ಬಿಳ್ಕೋಡಾಡೆ ನರೇಂದ್ರಸೂನು ತಳೆದಂ ತಾರುಣ್ಯಲಾವಣ್ಯಮಂ ೧೦೭

ಉ॥ ಆ ನರನಾಥಚಂದ್ರನ ಮುಖೇಂದುವನೀಕ್ಷಿಸಿ ಗಾಡಿಕಾರ್ತಿಯರ್
ಮಾನಸಮಧ್ಯದೊಳ್ ತಳೆಯೆ ತನ್ನೃಪಮೂರ್ತಿಯನಂದು ಕಾಣುತಂ
ಮೀನಪತಾಕನೈದುಸರಲಿಂ ಪುರುಡಿಂದಿಸೆ ನೊಂದು ಬೆಂದು ಕಾ
ಮಾನಲನಿಂ ಲತಾಭವನದೊಳ್ ಪೊರಳ್ವರ್ ನವನಂದನಂಗಳೊಳ್ ೧೦೮

ವ॥ - ಅಂತುಮಲ್ಲದೆಯುಂ

ಕಂ॥ ಅಮೃತಾಂಬುಧಿಯ ಗುಣಂಗಳ
ನಮೃತಕರಂ ತಾಳ್ದು ತೋರ್ಪವೊಲ್ ಕ್ರಮದಿಂ ತಾ
ನಮಮ ತಳೆದೊಪ್ಪಿದಂ ಸಕ
ಳ ಮನೋಜ್ಞಂ ಜನಕನಮಳತರ ಗುಣಗಣಮಂ ೧೦೯

ವೈಯ ಸಂಪತ್ತಿನೊಡನೆ ವಿಲಾಸದಿಂದ ಸ್ನೇಹವನ್ನು ಹೊಂದಿ, ೧೦೭. ದೀರ್ಘನೇತ್ರಗಳು ಕಮಲದ ದಳಗಳನ್ನು ಹೀಯಾಳಿಸುತ್ತಿರಲು, ಮುಖವು ಚಂದ್ರನನ್ನು ಹೊಡೆಯುತ್ತಿರಲು, ಎರಡುತೋಳುಗಳು ಗಂಗಾನದಿಯ ತರಂಗಗಳನ್ನು ತಳ್ಳಿಹಾಕುವಂತಿರಲು, ಕುಡಿ ಹುಬ್ಬುಗಳು ಕಾಮನ ಕಬ್ಬಿನ ಬಿಲ್ಲಿನ ಸೌಂದರ್ಯವನ್ನು ಕೀಳುಮಾಡುತ್ತಿರಲು, ತೊಡೆಗಳು ಸುವರ್ಣವರ್ಣದ ಬಾಳೆಗಿಡಗಳನ್ನು ಹಾಸ್ಯಮಾಡುತ್ತಿರಲು ನರೇಂದ್ರಕುಮಾರನು ತಾರುಣ್ಯದಿಂದ ಕೂಡಿದ ಲಾವಣ್ಯವನ್ನು ಹೊಂದಿದನು. ೧೦೮. ಚಂದ್ರನಂತೆ ಆಹ್ಲಾದಕರನಾದ ದೊರೆಯ ಮುಖಚಂದ್ರನನ್ನು ಸುಂದರಿಯರು ನೋಡಿ, ಅವನನ್ನು ತಮ್ಮ ಹೃದಯ ಮಧ್ಯದಲ್ಲಿ ಇಟ್ಟುಕೊಂಡಿರಲಾಗಿ, ಆ ರಾಜಕುಮಾರನ ಮೂರ್ತಿಯನ್ನು ಕಾಣುತ್ತಲೇ ಮನ್ಮಥನು ಮಾತ್ಸರ್ಯಗೊಂಡು ಬಾಣಗಳಿಂದ ಹೊಡೆಯಲು, ಆ ಹೆಂಗಸರು ಕಾಮವೆಂಬ ಬೆಂಕಿಯಿಂದ ನೊಂದು ಬೆಂದು ನೂತನ ನಂದನವನದ ಲತಾಭವನಗಳಲ್ಲಿ ಹೊರಳಾಡುತ್ತಿದ್ದರು. ವ|| ಅದೂ ಅಲ್ಲದೆ ೧೦೯. ಕ್ಷೀರಸಮುದ್ರದ ಗುಣಗಳನ್ನು ಅವನ ಪುತ್ರನಾದ ಚಂದ್ರನು ಹೊಂದಿ ಕಾಣುವಹಾಗೆ ಕ್ರಮವಾಗಿ ತನ್ನ ತಂದೆಯಾದ ಸತ್ಯೇಂದ್ರಚೋಳಮಹಾರಾಜನ ಶ್ರೇಷ್ಠವಾದ ಗುಣಗಳ ಸಮೂಹವನ್ನು ಅಬ್ಬಾ!

ಪಿರಿದು ಸಿರಿಯಿರೆಯುಮವನೀ
ಶ್ವರತನಯಂ ವಿಮಳಗುಣಮನೊಳಕೊಂಡೆಸೆದಂ
ಸರಸಿಜಮೆನೆ ಮಿತ್ರರುಚಿ
ಸ್ಫುರಿತಾಮೋದಾವಹಂ ಸದಾಳಿನಿಷೇವ್ಯಂ ೧೧೦

ಚಂ॥ ವಿತರಣದಿಂದೆ ದಿವ್ಯನಗಮಂ ನಗಮಂ ಘನಧೈರ್ಯದಿಂದೆ ವಿ
ಶ್ರುತ ಯಶದಿಂದೆ ಪದ್ಮರಿಪುವಂ ರಿಪುವಂ ನಿಜತೇಜದಿಂದೆ ಮಂ
ಡಿತಮತಿಯಿಂದೆ ಪದ್ಮಜನಿಯಂ ಜನಿಯಂ ಶಿವಮಂತ್ರದಿಂದೆ ರಂ
ಜಿತಗುಣರಾಜಿ ರಾಜಿತನವಂ ಜಯಿಸಿರ್ದನುದಾತ್ತವೈಭವಂ ೧೧೧

ವ॥ ಇಂತುಮಾ ಮಹೀಕಾಂತಸುತಂ ಪೊಗಳ್ತೆವಡೆದೊಪ್ಪುತ್ತಮಿರ್ದೊಂದು ಶುಭದಿನದಲ್ಲಿ

ಚಂ॥ ಬರೆ ಧರಣೀಶಪುತ್ರರೊಡನುಗ್ಘಡಿಸುತ್ತಿರೆ ವಂದಿವೃಂದಮೇ
ಳ್ತರೆ ಬಳಿಯೊಳ್ ಮಹಾ ಸಚಿವಸಂತತಿ ರತ್ನವಿಭೂಷಣಾಂಶು ನೇ
ತ್ರರುಚಿ ಮುಖಪ್ರಕಾಶವೊಡನೊಪ್ಪಿರೆ ಮುಪ್ಪುರಿಗೊಂಡು ರಾಜಶೇ
ಖರನತುಳೋತ್ಸವಂ ಜನಕನೋಲಗಮಂ ಪುಗುತಂದನಳ್ಕರಿಂ ೧೧೨

ಆ ಕುಮಾರನು ಹೊಂದಿ ಶೋಭಿಸುತ್ತಿದ್ದನು. ೧೧೦. ಆ ರಾಜಕುಮಾರನು ಹೆಚ್ಚಿದ ಕಾಂತಿಯನ್ನು ಪಡೆದು, ಶುದ್ಧವಾದ ಗುಣಗಳನ್ನು ಹೊಂದಿ, ಮಿತ್ರರ ಅನುರಾಗದಿಂದ ಯುಕ್ತನಾಗಿ, ಅವರಿಗೆ ಆನಂದವನ್ನುಂಟುಮಾಡುತ್ತ, ಸಜ್ಜನಸಮೂಹದಿಂದ ಸೇವಿತನಾಗಿ ಕಮಲದಂತೆ ರಂಜಿಸಿದನು. (ಕಮಲದ ಪರವಾಗಿ ಅರ್ಥ : ಲಕ್ಷ್ಮೀಯುಕ್ತ, ವಿಮಲವಾದ ಗುಣ=ಕಮಲನಾಳಗಳ ಸಹಿತ, ಮಿತ್ರ=ಸೂರ್ಯನ ಕಾಂತಿಯಿಂದ ಅರಳತಕ್ಕದ್ದು. ಸುಗಂಧಯುಕ್ತ. ಸದಾ ಅಳಿ=ದುಂಬಿಗಳಿಂದ ಸೇವ್ಯ. ರಂ) ೧೧೧. ದಾನಗುಣದಿಂದ ದೇವಲೋಕದ ವೃಕ್ಷ (ಕಲ್ಪವೃಕ್ಷ)ವನ್ನೂ, ಘನತರವಾದ ಧೈರ್ಯದಿಂದ ಪರ್ವತವನ್ನೂ, ಸರ್ವತ್ರ ವ್ಯಾಪಕಗೊಂಡ ಯಶಸ್ಸಿನಿಂದ ಚಂದ್ರನನ್ನೂ, ಸ್ವಸಾಮರ್ಥ್ಯದಿಂದ ವೈರಿಗಳನ್ನೂ, ಅಲಂಕಾರಗೊಂಡ ಬುದ್ಧಿಶಕ್ತಿಯಿಂದ ಬ್ರಹ್ಮನನ್ನೂ, ಶಿವಮಂತ್ರದಿಂದ ಮನ್ಮಥನನ್ನೂ ರಂಜಿಸುತ್ತಿರುವ ಗುಣಗಳ ಸಮೂಹದಿಂದ ಪ್ರಕಾಶಿಸುವ ಉದಾತ್ತವೈಭವದ ಆ ರಾಜಕುಮಾರನು ಜಯಿಸಿದನು. ವ॥ ಈ ರೀತಿ ಭೂಮಿಶನಾದ ಮಗನು ಖ್ಯಾತಿವೆತ್ತು ಒಪ್ಪುತ್ತಿದ್ದ ಒಂದು ಶುಭದಿನದಲ್ಲಿ ೧೧೨. ರಾಜಕುಮಾರ ಸಮೂಹದೊಡನೆ ರಾಜಶೇಖರನು (ತಂದೆಯ ಓಲಗಕ್ಕೆ) ಬರಲಾಗಿ, ವಂದಿಮಾಗಧರು ಬಿರುದುಗಳನ್ನು ಹೊಗಳುತ್ತಿದ್ದರು. ಮಹಾ ಮಹಾ ಮಂತ್ರಿಗಳು ಹತ್ತಿರದಲ್ಲಿಯೇ ಬರುತ್ತಿದ್ದರು. ರತ್ನಾಭರಣಗಳ ಕಿರಣಗಳು, ಕಣ್ಣುಗಳ ಕಾಂತಿ, ಮುಖದ ಹೊಳಪು, ಇವುಗಳು ಕೂಡಲೇ ಶೋಭಿಸಿ ಮುಪ್ಪುರಿಗಳಂತೆ ಸೇರಿಕೊಂಡು ಸಮಸ್ತ ಉತ್ಸವಗಳಿಂದ ಕೂಡಿದವನಾಗಿ ಪ್ರೀತಿಯಿಂದ ತಂದೆಯ ಓಲಗವನ್ನು ಹೊಕ್ಕನು.

ವ॥ ಅಂತು ತತ್ಪಾದಸೇವೆಗೆಯ್ದಲೆಂದೊಯ್ಯನೆ ಬರ್ಪಾಗಳ್

ಮ॥ ಇದಿರೊಳ್ಕಂಡಿದಿರೇಳ್ವ ಮಂಡಳಿಕರಂ ಕೈಸನ್ನೆಯಿಂದೇಳಲೀ
ಯದೆ ಹೋ ಸಮ್ಮುಖಮೆಂಬ ವಂದಿಜನಮಂ ಕಣ್ಸನ್ನೆಯಿಂದೊತ್ತಿ ಸಂ
ಮದಮಂ ತಾಳ್ದುಮದಕ್ಕೆ ಪಕ್ಕುಗುಡದಾ ಸತ್ಯೇಂದ್ರಚೋಳೇಂದ್ರ ಸ
ತ್ಪದಪದ್ಮಕ್ಕೆ ಮರಂದಮಂ ಪಡೆದು ಮೌಲಿದ್ಯೋತಿಯಿಂ ಮೊಳ್ಗಿದಂ ೧೧೩

ವ॥ ಅಂತು ಪೊಡಮಡಲೊಡನೆ

ಕಂ॥ ತೆಗೆದು ಬಿಗಿದಪ್ಪಿ ಪರಸು
ತ್ತಗಣಿತ ಸಂಭ್ರಮದೆ ನೃಪತಿಯರ್ಧಾಸನದ
ಲ್ಲಿಗೆ ಸೆಳೆಯೆ ವಿನಯದಿಂ ಮೆ
ಲ್ಲಗೆ ಜಗುಳ್ದು ತದಂಘ್ರಿಯೊತ್ತಿನೊಳ್ಕುಳ್ಳಿರ್ದಂ ೧೧೪

ವ॥ ಆಗಳ್

ಕಂ॥ ಪರಿಮಳಮನುಂಡು ವಿಕಚಾಂ
ಬುರುಹದೊಳೆರಡೊಂದುಗೂಡಿ ಸುಳಿವಳಿಗಳಿವೆಂ
ಬಿರವನನುಕರಿಸಿ ಯುವಮುಖ
ಸರಸಿಜದೊಳ್ ನೃಪನ ಕಣ್ಗಳೇಂ ತೊಳಲಿದವೋ ೧೧೫

ವ॥ ಆ ರೀತಿ ತಂದೆಯ ಪಾದಸೇವೆಯನ್ನು ಮಾಡಲಿಕ್ಕೆ ಒಮ್ಮೆಲೆ ಬರುತ್ತಿರುವಾಗ ೧೧೩. ಎದುರಿನಲ್ಲಿಯೇ ಕಂಡು ಪ್ರೀತಿಯಾಗಿ ಎದ್ದು ಗೌರವಿಸುವ ಮಾಂಡಲಿಕರನ್ನು ಕಯ್ಯ ಸಂಜ್ಞೆಯಿಂದಲೇ ಏಳಗೊಡದೆ 'ಹೋ! ಸನ್ನಿಧಿಯವರ ಆಗಮನ!' ಎನ್ನುತ್ತಿರುವ ಭಟ್ಟಂಗಿಗಳನ್ನು ಕಣ್ಸನ್ನೆಯಿಂದಲೇ ಮುಂದೆ ಉಗ್ಘಡಿಸದಂತೆ ನಿಲ್ಲಿಸಿ, ಸಂತೋಷವನ್ನು ಹೊಂದಿ ಅದನ್ನು ಪ್ರಕಟಿಸದ ಸತ್ಯೇಂದ್ರಚೋಳಮಹಾರಾಜನ ಪಾದಪದ್ಮಗಳಿಗೆ ಮಕರಂದಸ್ಥಿತಿಯನ್ನು ಪಡೆದ ತನ್ನ ಪ್ರಕಾಶಯುಕ್ತ ಮುಕುಟದಿಂದ ನಮಸ್ಕರಿಸಿದನು. (ಬಾಗಿದನು.) ವ॥ ಅಂತು ಪೊಡಮಡಲೊಡನೆ ೧೧೪. ಆ ಸತ್ಯೇಂದ್ರಚೋಳನು ಬಾಚಿ ತಬ್ಬಿ ಅಪ್ಪಿಕೊಂಡು ಮೇರೆವಿಾರಿದ ಸಂಭ್ರಮದಿಂದ ತನ್ನ ಸಿಂಹಾಸನದ ಅರ್ಧ ಭಾಗಕ್ಕೆ ಸೆಳೆಯಲಾಗಿ ಆ ರಾಜಶೇಖರನು ನಮ್ರತೆಯಿಂದ ಮೆಲ್ಲನೆ ಜಾರಿಕೊಂಡು ತಂದೆಯ ಪಾದದಡಿಯಲ್ಲಿ ಕುಳಿತನು. ವ॥ ಆಗ ೧೧೫. ಅರಳಿದ ಕಮಲದಲ್ಲಿರುವ ಮಕರಂದ ಪಾನಮಾಡಿ ಒಂದುಗೂಡಿ ಸುಳಿದಾಡುವ ಗಂಡು ಹೆಣ್ಣು ದುಂಬಿಗಳೋ ಎನ್ನುವ ರೀತಿಯನ್ನು ಧರಿಸಿ ಯುವಕನಾದ ರಾಜಶೇಖರನ ಮುಖವೆಂಬ ಕಮಲದಲ್ಲಿ ಆ ರಾಜನ ಎರಡೂ ಕಣ್ಣುಗಳೂ ಏನು ಪ್ರಕಾಶಿಸಿದವೋ ! ವ॥ ಹಾಗೆ ಪೂರ್ಣಸ್ನೇಹದಿಂದ ನೋಡಿ

ವ॥ ಅಂತು ನಿಡುನೇಹದಿಂ ನಿರೀಕ್ಷಿಸಿ ಮಹೀಪತಿ ಪತಿಮೋಹಿಮಂತ್ರಿಪತಿಯೊಡನಿಂತೆಂದಂ

ಕಂ॥ ಧರಣೀತಳಭಾರಮನೀ
ತರುಣಂ ತಳೆಯಲ್ಕೆ ನೆಱೆದನೀತನ ಭುಜಭೂ
ಧರದೊಳಿದನಿಳಿಪಿ ಪುರಹರ
ಚರಣೈಕಧ್ಯಾನಮಾಂತು ಸುಖದಿಂದಿರ್ಪೆಂ ೧೧೬

ಎಂದೊಡಮಾತ್ಯನೊಡಂಬ
ಟ್ಟೆಂದನಿಳಾರಮಣ ಕಜ್ಜಮಿದು ಲೇಸು ಸದಾ
ನಂದನಿಧಿ ನಂದನಂಗೊಲ
ವಿಂದಂ ಬಗೆದಂತೆ ಮಾಳ್ಪುದತುಳೋತ್ಸವಮಂ ೧೧೭

ವ॥ ಎಂಬ ಹಿತೋಕ್ತಿಯನವಧರಿಸಿ ಮೌಹೂರ್ತಿಕರ್ಸಮಕಟ್ಟಿದ ಸುಮುಹೂರ್ತದೊಳತುಳತರ ಸಂಭ್ರಮುಂಬೆರಸು

ಮ॥ ಧರಣೀಕಾಂತೆಗೆ ಸಂತಸಂ ರಿಪುಮಹೀಕಾಂತರ್ಗೆ ಸಂತಾಪಮಿಂ
ದಿರೆಗಾನಂದರಸಂ ಬುಧಪ್ರಕರ ದಾರಿದ್ರ್ಯಕ್ಕೆ ವಿಚ್ಛೇದಮೀ
ಶ್ವರಭಕ್ತರ್ಗತಿಸಂಮದಂ ನೆಗಳೆ ಸತ್ಯೇಂದ್ರಕ್ಷಿತೀನಾಥನಾ
ದರದಿಂದಾತ್ಮಭವಂಗೆ ಪಟ್ಟಮನಮಂದೋತ್ಸಾಹದಿಂ ಕಟ್ಟಿದಂ ೧೧೮

ಮಹಾರಾಜನು ಪತಿಮೋಹಿಯೆಂಬ ಮಂತ್ರೀಶ್ವರನೊಡನೆ ಹೀಗೆಂದನು : ೧೧೬. "ಈ ಭೂಭಾರವನ್ನು ತರುಣನಾದ ಈ ರಾಜಶೇಖರನು ಧರಿಸಲು ಸಮರ್ಥನಾಗಿದ್ದಾನೆ. ಇವನ ಭುಜವೆಂಬ ಪರ್ವತದ ಮೇಲೆ ಆ ಭಾರವನ್ನು ಇಳಿಸಿ ನಾನು ಪರಮೇಶ್ವರನ ಚರಣಕಮಲಧ್ಯಾನವೊಂದರಲ್ಲಿ ನಿರತನಾಗಿ ಸುಖದಿಂದ ಇರುತ್ತೇನೆ." ೧೧೭. ಹೀಗೆಂದು ಸತ್ಯೇಂದ್ರಚೋಳನು ಹೇಳಲು ಅಮಾತ್ಯನಾದ ಪತಿಮೋಹಿಯು ಒಡಂಬಟ್ಟವನಾಗಿ, "ಭೂಪತಿಯೇ, ಈ ಕಾರ್ಯವು ಲೇಸಾದುದು. ಸದಾ ಆನಂದಕ್ಕೆ ನಿಧಿಯಂತೆ ಇರುವ ಕುಮಾರನಿಗೆ ಪ್ರೀತಿಯಿಂದ ಯೋಚಿಸಿದಂತೆ ಶ್ರೇಷ್ಠವಾದ ಯುವರಾಜಪಟ್ಟಾಭಿಷೇಕವನ್ನು ಮಾಡುವುದು." ವ॥ ಹೀಗೆಂದ ಹಿತವಾದ ಮಾತನ್ನು ಕೇಳಿ ಜ್ಯೋತಿಷ್ಕರು ತೆಗೆದ ಸುಮುಹೂರ್ತದೊಳಗೆ ವಿಶೇಷವಾದ ಸಂಭ್ರಮದೊಡನೆ ಕೂಡಿ ೧೧೮. ಭೂ ರಮಣಿಗೆ ಸಂತೋಷವೂ, ವೈರಿಗಳಾದ ರಾಜರುಗಳಿಗೆ ಸಂಕಟವೂ, ಸಂಪದಭಿಮಾನಿ ದೇವತೆಯಾದ ಲಕ್ಷ್ಮಿಗೆ ಆನಂದರಸವೂ, ವಿದ್ವಾಂಸರ ಸಮೂಹದ ಬಡತನಕ್ಕೆ ವಿಚ್ಛೇದವೂ, ಈಶ್ವರಾರಾಧಕರಾದ ಭಕ್ತರುಗಳಿಗೆ ಸಂತೋಷವೂ ಉಂಟಾಗಲಾಗಿ ಆ ಸತ್ಯೇಂದ್ರ ಚೋಳನೆಂಬ ಭೂರಮಣನು ಅತ್ಯಂತ ಪ್ರೀತಿಯಿಂದ ತನ್ನ ಮಗನಾದ ರಾಜಶೇಖರನಿಗೆ ಅಪರಿಮಿತ ಉತ್ಸಾಹದಿಂದ ಯುವರಾಜಪಟ್ಟವನ್ನು ಕಟ್ಟಿದನು.

ಮ॥ಸ್ರ॥ ಸಕಳೋರ್ವೀಪಾಲರೆಲ್ಲರ್ನೆರೆದು ಪಿರಿದು ಸತ್ಪ್ರೇಮದಿಂ ಬಂದು ಸಂದು
ತ್ಸುಕಮಂ ಮುಂದಿಟ್ಟು ಕಪ್ಪಂಬಿಡಿದು ಕರಿತುರಗಂಗಳಂ ಪೊಂಗಳಂ ಮೌ
ಳಿಕಳಾಪದ್ಯೋತಮೆತ್ತಂ ಪಸರಿಸೆ ಮಣಿದಂಘ್ರಿದ್ವಯೋಪಾಂತದೊಳ್ ನಿಂ
ದಕಳಂಕರ್ಸೇವಿಸುತ್ತೊಪ್ಪಿರೆ ಮೆಱೆದನಿಳಾಭೃತ್ಸುತಂ ಪಟ್ಟಬದ್ಧಂ ೧೧೯

ವ॥ ಅಲ್ಲಿಂ ಬಳಿಯಿಂ

ಮ॥ ಶಿವಲಿಂಗಾಂಘ್ರಿ ಸಮರ್ಚನೈಕಸುಖದಿಂದೋರೊರ್ಮೆ ವಿಖ್ಯಾತ್ಯ ಶಾಂ
ಭವಲೀಲಾಕಥನಪ್ರಸಂಗರಸದಿಂದೋರೊರ್ಮೆ ಮಾಹೇಶ್ವರ
ಪ್ರವಿರಾಜತ್ಪದಪದ್ಮಸೇವನದಿನಂದೋರೊರ್ಮೆ ಸತ್ಯೇಂದ್ರಭೂ
ಧವಬೃಂದಾರಕನಿಂತು ಪೊಳ್ತುಗಳೆದಂ ಸನ್ಮಾರ್ಗಸಾರೋದಯಂ ೧೨೦

ವ॥ ಅಂತುಮಲ್ಲದೆಯುಂ

ಚಂ॥ ಮದಮದವದ್ಗಜವ್ರಜಮನಿಕ್ಕಿ ದುರೀಷಣಭೀಷಣಾಹಿಯುಂ
ಸದೆದತನುಗ್ರಹಾಗ್ರಹಮನರ್ದಿಸಿ ಮರ್ದಿಸಿ ರಾಗರೋಗಮಂ
ಕೆದರ್ದು ವಿಮೋಹಸಾಹಸಮನುನ್ನತ ಸನ್ನುತವೃತ್ತಿವೆತ್ತು ತಾ
ಳ್ದಿದನವನೀಶನೀಶಪದಮಂ ಪದಪಿಂ ಹೃದಯಾಂತರಾಳದೊಳ್ ೧೨೧

೧೧೯. ಸಮಸ್ತ ಭೂಮಿಪಾಲರುಗಳೆಲ್ಲ ಸೇರಿ, ಹಿರಿದಾದ ಸತ್ಪ್ರೇಮದಿಂದ ಬಂದು ತಮಗುಂಟಾದ ಉತ್ಸಾಹವನ್ನು ವಿವಿಧವಾಗಿ ವ್ಯಕ್ತಪಡಿಸುತ್ತ ಕಪ್ಪಕಾಣಿಕೆಗಳಾದ ಆನೆ, ಕುದುರೆ, ಬಂಗಾರ ಮೊದಲಾದವನ್ನು ಹಿಡಿದು ನಿಂತಿದ್ದರು. ಅವರು ತಮ್ಮ ತಲೆಯಲ್ಲಿ ಧರಿಸಿದ್ದ ಕಿರೀಟಗಳ ಪ್ರಕಾಶವು ಸುತ್ತಮುತ್ತೆಲ್ಲ ಪಸರಿಸಿತ್ತು. ತಲೆವಾಗಿ ನಮಸ್ಕರಿಸಿ ಅವರು ಪಾದಗಳ ಸಮೀಪದಲ್ಲಿ ಕಲಂಕರಹಿತರಾಗಿ ನಿಂತು ಓಲೈಸುತ್ತ ಒಪ್ಪಿದ್ದರು. ಹೀಗೆ ಆ ಇಳಾರಮಣನಾದ ಸತ್ಯೇಂದ್ರಚೋಳಕುಮಾರನು ಪಟ್ಟಾಭಿಷೇಕೋತ್ಸವದಲ್ಲಿ ಶೋಭಿಸಿದನು. ವ॥ ಅನಂತರದಿಂದ ೧೨೦. ಒಮ್ಮೊಮ್ಮೆ ಪರಮೇಶ್ವರನ ಪಾದ ಪೂಜೆಯೇ ಮುಖ್ಯವಾದ ಸುಖದಿಂದಲೂ, ಒಮ್ಮೊಮ್ಮೆ ಪ್ರಖ್ಯಾತವಾದ ಪರಮೇಶ್ವರನ ಲೀಲೆಯ ಕಥೆಗಳನ್ನು ಕೇಳಿ ರಸಾನುಭವ ಪಡೆಯುವ ಸನ್ನಿವೇಶಗಳಿಂದಲೂ, ಒಮ್ಮೊಮ್ಮೆ ಮಾಹೇಶ್ವರರುಗಳ ಪ್ರಕಾಶಮಾನವಾದ ಪಾದಕಮಲಗಳ ಸೇವೆ ಮಾಡುವಿಕೆಯಿಂದಲೂ ಹೀಗೆ ಆ ಸನ್ಮಾರ್ಗಸಾರವೇ ಉದಯಗೊಂಡವನಂತಿರುವ ಸತ್ಯೇಂದ್ರಭೂಮಿಪಾಲ ಶ್ರೇಷ್ಠನು ಹೊತ್ತನ್ನು ಕಳೆಯುತ್ತಿದ್ದನು. ವ॥ ಹಾಗೂ ಅಲ್ಲದೆ ೧೨೧. ಅಷ್ಟಮದಗಳೆಂಬ ಮದೋನ್ಮತ್ತವಾದ ಆನೆಗಳ ಸಮೂಹವನ್ನು ಮೆಟ್ಟಿ, ದುಷ್ಟ ಈಷಣತ್ರಯಗಳಾದ ಪುತ್ರೇಷಣ, ವಿತ್ತೇಷಣ, ದಾರೇಷಣಗಳೆಂಬ ಭಯಂಕರ ಹಾವುಗಳನ್ನು ಹೊಡೆದು, ಮನ್ಮಥನ ಗ್ರಹಬಾಧೆಯನ್ನು (ಆತನು) ಬಗ್ಗುಬಡೆದು, ಅಂದರೆ ಕಾಮವನ್ನು ಒಕ್ಕಲಿಕ್ಕಿ, ಅನುರಾಗವೆಂಬ ರೋಗವನ್ನು ಮರ್ದನಮಾಡಿ, ವಿಶೇಷವಾದ ಮೋಹವೆಂಬ ಸಾಹಸ ವನ್ನು ಚದುರಿಸಿ ಓಡಿಸಿ, ಯೋಗ್ಯವಾದ ವೃತ್ತಿಯನ್ನನುಸರಿಸಿ, ಆ ರಾಜನು ಹೃದಯ

ವ॥ ಅಂತುಮಾ ಸತ್ಯೇಂದ್ರನರೇಂದ್ರನುಪೇಂದ್ರವಂದ್ಯನನಾರಾಧಿಸುತ್ತಮಿರೆಯಿರೆ

ಕಂ॥ ಅನುರಕ್ತತೆಯಂ ಪ್ರಕೃತಿಯೊ
ಳನುವರ್ತನೆಯಂ ಸ್ವಕೀಯಜನಬೃಂದದೊಳಂ
ದನುಕೂಲತೆಯುಂ ಶರಣರೊ
ಳನುಗೊಳಿಸಿದನಹಿತ ತಿಮಿರಮಿಹಿರಂಕುವರಂ ೧೨

ವ॥ ಅಂತುಮಲ್ಲದೆಯುಂ

ಮ॥ ಜಿತಶತ್ರುಪ್ರಕರ ಸಮಾಹಿತಹಿತೋದ್ಯೋಗಂ ಕ್ಷಮಾಧಾರಣೋ
ಚಿತಕೃತ್ಯಂ ಸದುಪಾಯ ತಂತ್ರನಿಪುಣಂ ಮಂತ್ರಪ್ರವೀಣಂ ವಶೀ
ಕೃತಸತ್ವಂ ಸದಯಸ್ವಭಾವನನಿಶಂ ಶಕ್ತಿಪ್ರಯುಕ್ತಂ ಶಿವಾ
ನ್ವಿತನಿರ್ದಂ ಪಿತನಂತೆ ಪೂರ್ಣವಿಭವಂ ವಿಶ್ವಂಭರಾವಲ್ಲಭಂ ೧೩

ಮ॥ಸ್ರ॥ ಸಿರಿಯೊಳ್ ಶ್ರೀಕಾಂತನೇತಂತತುಳಕಳೆಗಳೊಳ್ ಕಂಜಸಂಜಾತನೆಂತಂ
ತರಿವರ್ಗಧ್ವಂಸದೊಳ್ ಧೂರ್ಜಟಿಯ ತನುಜನೆಂತಂತೆ ಗಾಂಭೀರ್ಯದೊಳ್ ಭಾ
ಸುರಪಾರಾವಾರಮೆಂತಂತಧಿಕ ವಿಭವದೊಳ್ ಶಕ್ರನೆಂತಂತೆ ದಾನೋ
ತ್ಕರದೊಳ್ ಮಂದಾರಮೆಂತಂತೆಸೆದನಭಿನವಂ ಭಾರತೀಭಾಗಧೇಯಂ ೧೪

ಮಧ್ಯದಲ್ಲಿ ಈಶ್ವರಪಾದಗಳನ್ನು ಪ್ರಕಾಶಮಾನವಾಗಿ ಹೊಂದಿದವನಾದನು. ವ|| ಹಾಗೆ ಆ ಸತ್ಯೇಂದ್ರಚೋಳನರೇಂದ್ರನು ವಿಷ್ಣುವಂದ್ಯನಾದ ಪರಮೇಶ್ವರನನ್ನು ಆರಾಧಿಸುತ್ತ ಇರಲಾಗಿ, ೧೨. ಶತ್ರುಗಳೆಂಬ ಕತ್ತಲೆಗೆ ಸೂರ್ಯಪ್ರಾಯನಾದ ರಾಜಶೇಖರ ಕುಮಾರನು ಸಪ್ತಪ್ರಕೃತಿಗಳಲ್ಲಿ ಅನುರಾಗವನ್ನೂ, ಸ್ವಜನ ಸಮೂಹದಲ್ಲಿ ಹೊಂದಿಕೊಂಡು ಹೋಗುವಿಕೆಯನ್ನೂ ಪಡೆದು, ಶರಣಜನರಲ್ಲಿ ಅನುಕೂಲಕರನಾಗಿಯೂ ಪಟ್ಟಾಭಿಷಕ್ತನಾದ ಮೇಲೆ ಇರತೊಡಗಿದನು. ವ|| ಅದೂ ಅಲ್ಲದೆ, ೧೩. ಭೂರಮಣನಾದ ತನ್ನ ತಂದೆ ಸತ್ಯೇಂದ್ರಚೋಳಮಹಾರಾಜನ ಹಾಗೆ ಸಂಪೂರ್ಣ ಐಶ್ವರ್ಯದಿಂದಲೂ, ಶುಭದಿಂದಲೂ ಕೂಡಿದ್ದ ಆ ರಾಜಶೇಖರನು ಸಮಸ್ತ ವೈರಿಗಳ ಸಮೂಹವನ್ನು ಗೆದ್ದನು. ಹಿತವನ್ನುಂಟುಮಾಡುವ ಉದ್ಯೋಗದಲ್ಲಿ ನಿರತನಾಗಿದ್ದನು. ಭೂಮಿಯನ್ನು ಧಾರಣ ಮಾಡಲು ಯಾವ ಕಾರ್ಯಗಳು ಉಚಿತವಾದುವೋ ಅವನ್ನು ಎಸಗುತ್ತಿದ್ದನು. ಯೋಗ್ಯವಾಗಿ ಸಾಮ ದಾನ ಭೇದ ದಂಡಾದಿ ಉಪಾಯಗಳ ತಂತ್ರಗಳನ್ನು ಸಾಧಿಸುವಲ್ಲಿ ನೈಪುಣ್ಯ ಪಡೆದವನಾಗಿದ್ದನು. ಮಂತ್ರಾಲೋಚನೆಗಳನ್ನು ಮಾಡುವಲ್ಲಿ ಪ್ರವೀಣನೆನಿಸಿದನು. ಸತ್ವಗುಣಗಳನ್ನೆಲ್ಲ ಸ್ವಾಧೀನಪಡಿಸಿಕೊಂಡಿದ್ದನು. ದಯೆಯೇ ಸ್ವಭಾವವುಳ್ಳವನಾಗಿ ಸತತವೂ ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹಶಕ್ತಿಗಳಿಂದ ಕೂಡಿದ್ದನು. ೧೪. ಐಶ್ವರ್ಯದಲ್ಲಿ ಶ್ರೀವಿಷ್ಣುವು ಹೇಗೋ ಹಾಗೆ, ಅನಂತ ಕಲೆಗಳಲ್ಲಿ ಬ್ರಹ್ಮನು ಹೇಗೋ ಹಾಗೆ, ವೈರಿಸಮೂಹ ಸಂಹಾರಕಾರ್ಯದಲ್ಲಿ ಶಿವಪುತ್ರನಾದ ಕುಮಾರಸ್ವಾಮಿಯು ಹೇಗೋ ಹಾಗೆ, ಗಂಭೀರತೆಯಲ್ಲಿ ಪ್ರಕಾಶಮಾನನಾದ ಸಮುದ್ರವು ಹೇಗೋ ಹಾಗೆ, ವಿಶೇಷನಾದ

ವಸಂತತಿಲಕ॥ ಶೀಮತ್ಕಳಾಧರ ಕಳಾಧರೆ ದಿವ್ಯದೇವಾ
ರಾಮಾರಮಾರಮ ಸಮರ್ಚಿತಪಾದಪದ್ಮೇ
ಕಾಮಪ್ರಿಯಾಪ್ರಣತೆ ಪಾರ್ವತಿ ಪಾಲಿಸೆನ್ನಂ
ಭೀಮಾಘಮರ್ದಿನಿ ಭವಾರ್ದಿನಿ ನೀಂ ಭವಾನೀ ೧೨೫

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣ ಮಹಾಪ್ರಭಾಪಟಲ ಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷರಿದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳಪ್ರಬಂಧದೊಳ್ ರಾಜಶೇಖರಾಭ್ಯುದಯವ್ಯಾವರ್ಣನಂ

ಅಂತು ಅಶ್ವಾಸ ೪ಕ್ಕಂ ಪದ ೫೨೦ ಕ್ಕಂ ಸಮಾಪ್ತಂ ಮಂಗಳಾಮಹಾ ಶ್ರೀ ಶ್ರೀ ಶ್ರೀ

## ಚತುರ್ಥಾಶ್ವಾಸಂ
### ಸಂಪೂರ್ಣಂ

ವೈಭವದಲ್ಲಿ ದೇವೇಂದ್ರನು ಹೇಗೋ ಹಾಗೆ, ಅಧಿಕವಾಗಿ ದಾನಮಾಡುವ ಗುಣದಲ್ಲಿ ಕಲ್ಪವೃಕ್ಷವು ಹೇಗೋ ಹಾಗೆ ನೂತನ ಪಟ್ಟಾಭಿಷಕ್ತನಾಗಿ ಸರಸ್ವತಿಯು ಭಾಗ್ಯದಂತೆ ಇದ್ದ ಆ ರಾಜಶೇಖರನು ಪ್ರಕಾಶಿಸುತ್ತಿದ್ದನು. ೧೨೫. ಶೋಭಿಸುವ ಚಂದ್ರನ ಕಳೆಯನ್ನು ಧರಿಸಿರುವವಳೇ, ಪವಿತ್ರವಾದ ದೇವತೆಗಳ ಆರಾಮದಲ್ಲಿರುವ ರಮಾರಮಣನಾದ ಶ್ರೀ ವಿಷ್ಣುವಿನಿಂದ ಪೂಜಿಸಿಕೊಂಡ ಪಾದಕಮಲವುಳ್ಳವಳೇ, ಮನ್ಮಥಪತ್ನಿಯಾದ ರತಿಯಿಂದ ವಂದಿಸಲ್ಪಟ್ಟವಳೇ, ಪಾರ್ವತೀದೇವಿಯೇ, ಭಯಂಕರ ಪಾಪಗಳನ್ನು ಹೊಡೆದೋಡಿಸುವವಳೂ, ಜನನ ಮರಣ ರೂಪದ ಸಂಸಾರಬಾಧೆಯನ್ನು ದೂರೀಕರಿಸುವವಳೂ, ಭವಾನಿಯೂ ಆದ ನೀನು ನನ್ನನ್ನು ರಕ್ಷಿಸು. ಗದ್ಯ|| ಈ ಗದ್ಯ ಪದ್ಯವಾದ ಕಾವ್ಯವು ವಿಶೇಷವಾಗಿ ನಮಸ್ಕರಿಸಲ್ಪಡುವ ದೇವತೆಗಳಲ್ಲಿ ಶ್ರೇಷ್ಠರಾದವರ ಕಿರೀಟಗಳ ಕಡೆಯಲ್ಲಿ ಕೆತ್ತಿರುವ ರತ್ನಸಮೂಹಗಳ ಪ್ರಭೆಯ ಸಮೂಹದಿಂದ ಸುತ್ತುವರಿಯಲ್ಪಟ್ಟ ಪರಮೇಶ್ವರನ ಶ್ರೀಪಾದಗಳ ಉಗುರುಗಳೆಂಬ ಚಂದ್ರನ ದಟ್ಟವಾದ ಕಿರಣಪ್ರಕಾಶದ ನಿಬಿಡ ಬೆಳದಿಂಗಳಿಗೆ ರಮಣೀಯವಾದ ಚಕೋರಪಕ್ಷಿಯಂತಿರುವ ರಸಜ್ಞರಾದ ಜನರಿಂದ ಮನ್ನಣೆಗೊಂಡ ಸಂಸ್ಕೃತ ಕನ್ನಡ ಭಾಷಾಕವಿತೆಯಲ್ಲಿ ವಿಶಾರದನಾದ ಶ್ರೀ ಷಡಕ್ಷರಿದೇವನಿಂದ ವಿರಚಿಸಲ್ಪಟ್ಟ ರಾಜಶೇಖರ ವಿಳಾಸವೆಂಬ ದೊಡ್ಡ ಪ್ರಬಂಧದಲ್ಲಿ ರಾಜಶೇಖರಾಭ್ಯುದಯ ವರ್ಣನೆ.

## ಚತುರ್ಥಾಶ್ವಾಸ
### ಮುಗಿದುದು

# ಪಂಚಮಾಶ್ವಾಸಂ

ಕಂ॥ ಶ್ರೀ ಗೌರೀಕುಚಘುಸೃಣ ಪ
ರಾಗಾರುಣವಕ್ಷನುಕ್ಷಲಕ್ಷಂ ವಿಳಸ
ದ್ಭೋಗೀಂದ್ರಕಂಕಣಂ ಗುಣ
ಸಾಗರನೆಮಗೀಗೆ ಭಕ್ತಿಯಂ ಶಿವಲಿಂಗಂ ೧

ವ॥ ಮತ್ತಮಾ ನರೇಂದ್ರಕುಮಾರನಗಣಿತ ಗುಣಮಣಿಗಣರೋಹಣ ಧರಣೀಧರನುಂ; ಶಿವಶರಣ ಚರಣ ಚಾಮೀಕರಾರವಿಂದ ಸಂದೋಹಪರಾಗಸಾರ ಕಾಶ್ಮೀರಲಲಾಮಲಲಾಟತಟನುಂ; ಅಭಿನವ ವಿಭವಾತಿಶಯ ತಿರಸ್ಕೃತ ಭರತ ಭಗೀರಥ ದಶರಥಪ್ರಮುಖ ನಿಖಿಳ ಪಾರ್ಥಿವಪ್ರತಾನನುಂ ; ಸಮಧಿಗತ ಸಂಪೂಜ್ಯರಾಜ್ಯಲಕ್ಷ್ಮೀರಕ್ಷಣ ವಿಚಕ್ಷಣದಕ್ಷಿಣದೋಸ್ತಂಭಸಂರಂಭೋತ್ತಂಭಿತಾಸಿ ದಂಭೋಳಿದಳಿತಾರಿ ಕುಂಭಿಕುಂಭಿನೀಧರ ಶುಂಭತ್ಕುಂಭತಟಗಳಿತ ವಿಪುಳ ವಿಮಳ ಮುಕ್ತಾಫಳಾ ವಳೀಪರಿಷ್ಕೃತ ಮಹಿತ ಮಹಾಮಹಿಮಾನೀಕನುಂ; ಸಮದ ಸಮಸ್ತಸಾಮಂತಸೀಮಂತಿನೀಸೀಮಂತ ಸಿಂಧೂರಪೂರಪಲ್ಲವ ಪ್ರಸರರಸಹರಣಚರಣನುಂ ; ವಿತತಪ್ರತಾಪತಪನಕರನಿಕರ ಪರಿವೃತ ಪದ್ಮ ಸದ್ಮಾಂಡಭಾಂಡ ಬಹಿಸ್ತಮಸ್ತೋಮನುಂ ; ಅಮಂದಕುಂದಮಂದಾರ ಚಂದ್ರಿಕಾಡಿಂಡೀರಪಿಂಡ

೧. ಶೋಭಾಯುಕ್ತಳಾದ ಪಾರ್ವತಿಯ ಸ್ತನಗಳ ಮೇಲೆ ಲೇಪಿಸಿರುವ ಕೇಸರೀ ಗಂಧದ ಪರಾಗದಿಂದ ಕೆಂಪಾದ ಎದೆಯುಳ್ಳವನೂ, ವೃಷಭವಾಹನನೂ, ಶೋಭಿಸುವ ಉರಗ ಕಂಕಣವುಳ್ಳವನೂ, ಸತ್ಯಜ್ಞಾನಾನಂದಸಾಗರನೂ ಆದ ಶಿವಲಿಂಗನು ನಮಗೆ ಭಕ್ತಿಯನ್ನು ಕೊಡಲಿ. ವ॥ ಮತ್ತು ಆ ರಾಜಕುಮಾರನು ಅಗಣಿತ ಶೌರ್ಯೌದಾರ್ಯಾದಿ ಗುಣಗಳೆಂಬ ರತ್ನಸಮೂಹಗಳಿಗೆ ಆವಿರ್ಭಾವಸ್ಥಳವಾದ ರೋಹಣಾಚಲದಂಥವನಾಗಿದ್ದನು. ಶಿವಶರಣರ ಪಾದಗಳೆಂಬ ಸುವರ್ಣಕಮಲಗಳ ಸಮೂಹದ ಪರಾಗವೆಂಬ ಕುಂಕುಮತಿಲಕವುಳ್ಳ ಹಣೆಯ ಪ್ರದೇಶವುಳ್ಳವನಾಗಿದ್ದನು. ನೂತನವಾದ ವಿಶೇಷ ಸಂಪತ್ತಿನಿಂದ ಭರತ, ಭಗೀರಥ, ದಶರಥಾದಿ ರಾಜಮಹಾರಾಜರ ಸಂಪತ್ತನ್ನು ತಿರಸ್ಕರಿಸುವಂಥವನಾಗಿದ್ದನು. ತನ್ನ ಪೂಜ್ಯವಾದ ರಾಜ್ಯಲಕ್ಷ್ಮಿಯನ್ನು ಸಂರಕ್ಷಿಸಲು ಶಕ್ತವಾದ ಬಲಭುಜದಲ್ಲಿ ಇಂದ್ರಾಯುಧ ಸಮಾನವಾದ ಖಡ್ಗದಿಂದ ವೈರಿರಾಜರೆಂಬ ಆನೆಗಳ ಕುಂಭಸ್ಥಳಗಳನ್ನು ಸೀಳಿದಾಗ ಉದುರಿದ ವಿಶೇಷವಾದ ಮುತ್ತುಗಳಿಂದ ಮಾಡಲ್ಪಟ್ಟ ಹಾರದಿಂದ ಅಲಂಕೃತವಾದ ಮಹಾಮಹಿಮೆಯ ರಾಶಿಯುಳ್ಳವನಾಗಿದ್ದನು. ಮದಿಸಿದವರಾದ ಸಮಸ್ತ ಸಾಮಂತರ ಹೆಂಗಸರ ಬೈತಲೆಯಲ್ಲಿ ಧರಿಸುವ ಸಿಂಧೂರದಿಂದ ತುಂಬಿದ ಚಿಗುರುಗಳ ರಸವನ್ನು ಬತ್ತುವಂತೆ ಮಾಡುವ ಪಾದನುಹತ್ವವುಳ್ಳವನು. ವಿಸ್ತಾರವಾದ ಕಿರಣಗಳ

ಪುಂಡರೀಕ ಪಾಂಡುರಾಖಂಡಯಶಃ ಶ್ರೀಖಂಡಮಂಡಿತ ನಿಖಿಳದಿಕ್ಕಾಮಿನೀಸ್ತನಕಳಶ ಕನತ್ಕಪೋಳ ಮಂಡಳನುಂ; ಸುಕವಿನಿಕರ ದಾರಿದ್ರ್ಯವಿದ್ರಾವಣದ್ರವಿಣಧಾರಾಧರ ಕರಾಗ್ರ ಪರಿಹಿತ ಸುರಧರಾ ರುಹ ಪ್ರಭಾವನುಂ ; ಬುಧಕದಂಬ ಹೃದ್ಯಾನವದ್ಯವಿದ್ಯಾನದ್ಯಾಶ್ರಯ ಕ್ಷೀರಪಾರಾವಾರನುಂ ; ಅಮಂದಸೌಂದರ್ಯಸಂದೋಹಮಂದೀಕೃತ ಕಂದರ್ಪದರ್ಪನುಂ ; ಅನವರತ ವಿನಮದವನೀಧವ ನಿವಹ ಮಕುಟತಟಘಟಿತಮಣಿಕಿರಣ ಪಟಲಪಾಟಲಿತ ಪದನಖಸುಧಾಕರನುಂ ; ಅಖರ್ವ ಶೌರ್ಯ ಧೈರ್ಯ ಚಾತುರ್ಯ ಮಾಧುರ್ಯ ಸೌಕುಮಾರ್ಯ ಸ್ಥೈರ್ಯ ಗಾಂಭೀರ್ಯ ಪರಿಷ್ಕರಣಗುಣಭೂಷಿತನುಂ ; ಅಭಿನವಶಿವಭಕ್ತಿಸಂಪದಾಮೋದ ಸಮುದಯ ಮಧುರತರ ಹೃದಯಪಯೋಜನುಂ ಎನಿಸಿ ಪೊಗಳ್ತೆವಡೆದು

ಕಂ॥ ಬಲವತ್ಪ್ರತಾಪನಿಧಿ ಜಿತ
ಬಲಪ್ರಭಂ ವಿತತರಣದೆ ವಿತರಣದೆ ಮಹಾ
ಬಲಯುತರನರ್ಥಿಜನಮಂ
ತಲೆವಾಗಿಸುವಂ ಸಮಂತು ತಲೆದೂಗಿಸುವಂ ೨

ಸಮೂಹದ ಪ್ರತಾಪದಿಂದ ಕೂಡಿದ ಸೂರ್ಯನಂತೆ ಇದ್ದು, ಬ್ರಹ್ಮಾಂಡವೆಂಬ ಭಾಂಡದ ಹೊರಗಿನ ಕತ್ತಲೆಯ ಸಮೂಹವನ್ನು ಪರಿಹರಿಸುವವನಾಗಿದ್ದನು. ಅಧಿಕವಾದ ಮಲ್ಲಿಗೆ, ಮಂದಾರಪುಷ್ಪ, ಬೆಳದಿಂಗಳು, ನೊರೆಯ ಉಂಡೆ, ಬಿಳಿ ಕಮಲಗಳಂತೆ ಶ್ವೇತವರ್ಣ ದಿಂದ ಕೂಡಿದ, ಸಮಸ್ತ ಯಶಸ್ಸೆಂಬ ಶ್ರೀಗಂಧದಿಂದ ಶೋಭಿತವಾದ, ಸಕಲ ದಿಕ್ಕೆಂಬ ಸ್ತ್ರೀಯರ ಕುಚಕಲಶಗಳಂತೆ ಹೊಳೆಯುವ ಕಪೋಲಮಂಡಲವುಳ್ಳವನಾಗಿದ್ದನು. ಸತ್ಕವಿಸಮೂಹದ ದಾರಿದ್ರ್ಯವನ್ನೋಡಿಸುವ, ಸುವರ್ಣವನ್ನು ಧಾರಾಕಾರವಾಗಿ ನೀಡುವ ಕೈಯಿಂದ ಕೂಡಿ ಕಲ್ಪವೃಕ್ಷವನ್ನೂ ನಾಚಿಸುವಂಥ ಪ್ರಭಾವವುಳ್ಳವನಾಗಿದ್ದನು. ಜ್ಞಾನಿಗಳ ಸಮೂಹಕ್ಕೆ ಹೃದ್ಯವೂ ದೋಷರಹಿತವೂ ಆದ ವಿದ್ಯೆಗಳೆಂಬ ನದಿಗಳಿಗೆ ಆಶ್ರಯಭೂತವಾದ ಕ್ಷೀರಸಮುದ್ರದಂತಿದ್ದನು. ಅತ್ಯಧಿಕ ಸೌಂದರ್ಯರಾಶಿಯಿಂದ ಕೀಳು ಮಾಡಿದ ಮನ್ಮಥದರ್ಪವನ್ನುಳ್ಳವನಾಗಿದ್ದನು. ಸತತವೂ ನಮಸ್ಕರಿಸಲ್ಪಡುವ ಭೂಪಾಲರುಗಳ ಸಮೂಹದ ಕಿರೀಟದ ಕೊನೆಯಲ್ಲಿ ಕೆತ್ತಿರುವ ರತ್ನಕಿರಣಗಳ ಸಮೂಹ ದಿಂದ ಪಾಟಲವರ್ಣಗೊಂಡ ಚಂದ್ರಸದೃಶ ಉಗುರುಗಳಿಂದ ಕೂಡಿದ ಪಾದಗಳುಳ್ಳವ ನಾಗಿದ್ದನು. ಶ್ರೇಷ್ಠವಾದ ಶೌರ್ಯ, ಧೈರ್ಯ, ಚತುರತೆ, ಮಧುರಭಾವ, ಸುಕುಮಾರತೆ, ಸ್ಥಿರತೆ, ಗಂಭೀರತೆಗಳೇ ಮೊದಲಾದ ಗುಣಸ್ವಭಾವಗಳಿಂದ ಅಲಂಕಾರಗೊಂಡವನಾಗಿ ದ್ದನು. ನೂತನವಾದ ಶಿವಭಕ್ತಿಯ ಸಂಪತ್ತೆಂಬ ಸುವಾಸನಾಭರಿತ ಮಧುರವಾದ ಹೃದಯಕಮಲವನ್ನುಳ್ಳವನಾಗಿದ್ದನು. ಹೀಗೆನಿಸಿ ಶ್ಲಾಘ್ಯನೆನಿಸಿದ್ದನು. ೨. ಸಾಮರ್ಥ್ಯ ದಿಂದ ಕೂಡಿದ ಪ್ರತಾಪಕ್ಕೆ ಆಗರನಾಗಿ, ದೇವೇಂದ್ರನ ಪ್ರತಾಪವನ್ನೂ ಗೆದ್ದಿದ್ದ ಆ ರಾಜಶೇಖರಮಹಾರಾಜನು ಘನತರವಾದ ರಣರಂಗದಲ್ಲಿ ಶೌರ್ಯಶಾಲಿಗಳನ್ನು ಚೆನ್ನಾಗಿ ತಲೆಬಗ್ಗುವಂತೆ ಮಾಡುತ್ತಿದ್ದನು. ದಾನಗುಣದಿಂದ ಬೇಡುವವರನ್ನು ಚೆನ್ನಾಗಿ

ಮ॥ಸ್ರ॥ ಶಶಿಶಂಖಂ ತಾರಕಾಮೌಕ್ತಿಕಮಮರನದೀಸಂಗತಂ ಪೂರ್ವದಿಕ್ಸ
ವ್ಯಶಿಖಾವದ್ವಾಡಬಂ ದಿಗ್ಗಜಜಲಗಜಮುರ್ವೀಧರವ್ರಾತ ಭೀತಾ
ದ್ರಿಶತಂ ನಾಗಾಂಬುನಾಗಂ ಮನುಜಜಳಮನುಷ್ಯಂ ಮಹಾಕೂರ್ಮಕೂರ್ಮಂ
ವಿಶದಂ ತತ್ಕೀರ್ತಿದುಗ್ಧಾಂಬುಧಿ ಗಗನಘನಶ್ರೀಶನಂ ತಾಳ್ದಿ ತೋರ್ಕುಂ ೩

ವ॥ ಅಂತುಮಲ್ಲದೆಯುಂ

ಕಂ॥ ಎಸಳೆ ದೆಸೆ ಮಿಸುನಿವೆಟ್ಟಂ
ಪೊಸಕರ್ಣಿಕೆ ಶರಧಿ ಮಧು ಮಧುವ್ರತಮೆ ಮುಗಿಲ್
ನಿಸದಮೆನೆ ಭುವನಭುವನಜ
ಮೆಸೆದುದು ಭೂಧವನ ಕೀರ್ತಿ ಕಮಳಾಕರದೊಳ್ ೪

ಚಂ॥ ತುರಗಖುರಾಗ್ರಘಾತಕೃತ ಭೂತಳರಂಧ್ರ ವಿನಿರ್ಗತಾಹಿ ರಾ
ಜರುಚಿರ ಶೀರ್ಷರತ್ನದೃಢಬೀಜಕರಾಂಕುರ ತತ್ಪ್ರತಾಪವ
ಲ್ಲರಿ ರವಿರೋಚಿಯೆಂಬ ವಿಷದಿಂ ದಶದಿಕ್ಕನೆ ಪರ್ಬಿ ಪೆತ್ತುದೋ
ಖರಕರಪುಷ್ಪಮುಂ ಕನಕಭೂಧ್ರಬೃಹತ್ಫಳಮುಂ ಮಹೀಶನಾ ೫

ತಲೆದೂಗಿಸುತ್ತಿದ್ದನು. ೩. ಚಂದ್ರನೇ ಶಂಖವಾಗಿ, ನಕ್ಷತ್ರಗಳೇ ಮುತ್ತುಗಳಾಗಿ, ದೇವಗಂಗಾನದಿಯವರೆಗೆ ಹರಡಿದ ಕೀರ್ತಿಯುಳ್ಳವನಾಗಿ, ಪೂರ್ವದಿಕ್ಕಿನ ಎಡಭಾಗದಲ್ಲಿರುವ ಅಗ್ನಿದಿಕ್ಕೇ ಬಡಬಾನಲವಾಗಿ, ದಿಕ್ಕಿನಲ್ಲಿರುವ ಆನೆಗಳೇ ನೀರಾನೆಗಳಾಗಿರಲು, ಗುಡ್ಡಗಳ ಸಮೂಹಗಳು (ಇಂದ್ರನ ವಜ್ರಾಯುಧಕ್ಕೆ) ಹೆದರಿದ ನೂರಾರು ಪರ್ವತಗಳಾಗಿರಲು, ಹಾವು ನೀರುಹಾವುಗಳಾಗಿರಲು, ಮನುಷ್ಯರು ಜಲಮನುಷ್ಯರಾಗಿರಲು, ಆದಿಕೂರ್ಮನೇ ಆಮೆಯಾಗಿರಲು, ಹೀಗೆ ವಿಸ್ತಾರವಾದ ಆ ರಾಜಶೇಖರಮಹಾರಾಜನ ಕೀರ್ತಿಯೆಂಬ ಕ್ಷೀರಸಮುದ್ರವು ಆಕಾಶವೆಂಬ ಘನಶ್ಯಾಮವರ್ಣದ ಶ್ರೀ ವಿಷ್ಣುವನ್ನು ಸ್ಪಷ್ಟವಾಗಿ ಧರಿಸಿ ತೋರುತ್ತಿತ್ತು. (ಅಂದರೆ ರಾಜಶೇಖರನ ಕೀರ್ತಿಯು ಮೂರು ಲೋಕಗಳನ್ನೂ ವ್ಯಾಪಿಸಿತ್ತು ಎಂಬ ಭಾವ). ವ|| ಹಾಗೂ ಅಲ್ಲದೆ ೪. ದಳಗಳೇ ದಿಕ್ಕುಗಳಾಗಿ, ಮೇರುಪರ್ವತವು ಕಮಲಮಧ್ಯದ ಕರ್ಣಿಕಾರವಾಗಿ, ಸಮುದ್ರವೇ ಮಕರಂದವಾಗಿ, ಮುಗಿಲೇ ದುಂಬಿಗಳಾಗಿ, ನಿಶ್ಚಯವೆನ್ನುವಂತೆ ಆ ಮಹಾರಾಜನ ಕೀರ್ತಿಯೆಂಬ ಸರೋವರದಲ್ಲಿ ಭೂಮಿಯೆಂಬ ಕಮಲವು ಶೋಭಿಸುತ್ತಿತ್ತು. ೫. ಆ ರಾಜಶೇಖರಮಹಾರಾಜನ ಕುದುರೆಯ ಕಾಲಿನ ಗೊರಸಿನ ತುಳಿತದಿಂದ ಉಂಟಾದ ಭೂಮಿಯ ತೂತಿನಿಂದ ಹೊರಬಂದ ಆದಿಶೇಷನ ಪ್ರಕಾಶಮಾನವಾದ ರತ್ನವೇ ಗಟ್ಟಿಯಾದ ಬೀಜ. (ಆ ಬೀಜದಿಂದ) ಅಂಕುರಗೊಂಡ ಆತನ ಪ್ರತಾಪವೆಂಬ ಬಳ್ಳಿಯು ಸೂರ್ಯನ ಕಾಂತಿಯೆಂಬ ನಿಮಿತ್ತದಿಂದ ಬೆಳೆದು ಹತ್ತೂ ದಿಕ್ಕುಗಳಿಗೆ ಹಬ್ಬಿತು. (ಅದು) ಸೂರ್ಯನ ಬಿಂಬವೆಂಬ ಹೂವುಗಳನ್ನೂ, ಮೇರುಪರ್ವತವೆಂಬ ದೊಡ್ಡ ಫಲವನ್ನೂ

ವ॥ ಮತ್ತಂ

ಕಂ॥ ಅಮಮ ಮಹೀರಮಣನ ತೇ
ಜಮನೇನೆಂಬೆಂ ಪೊದಳ್ದ ರವಿಶತರುಚಿಯಿಂ
ದಮರ್ದು ಪೊಜಿವಳಯಮಂ ಹೇ
ಮಮಯಮಿದೆನಿಸಿತ್ತಜಾಂಡಮಂಡಳಮನಿತಂ ೬

ಮ॥ಸ್ರ॥ ಪಟುತದ್ದೋರ್ದಂಡಚಂಡೋದ್ಭಟವಿಕಟಮಹಾರಾಹು ಶತ್ರುಕ್ಷಿತೀಶ
ಸ್ಫುಟಕೀರ್ತ್ಯುದ್ಯತ್ಪ್ರತಾಪಪ್ರಬಳ ಕಮಳರಿಪ್ವಾಪ್ತಬಿಂಬಂಗಳಂ ಸಂ
ಘಟಿಸುತ್ತೋರೊರ್ವೆ ನುಂಗಿತ್ತಚಳಜಳಧರದ್ಯೋತಿ ಖಡ್ಗೋಗ್ರ ಜಿಹ್ವೋ
ತ್ಕಟನೋಜಃಕ್ಷ್ವೇಡ ವೈಶ್ವಾನರನಹಿತ ಮಹಾಭೀಕರಂ ಕಂಚುಕಾಢ್ಯಂ ೭

ಕಂ॥ ರಿಪುಬಳಕಮಳಾಕರಮಂ
ನೃಪದ್ವಿಪಂ ಮಿಕ್ಕು ಪೊಕ್ಕು ಕೀಳ್ತಿತ್ತಿತ್ತು
ಗ್ರಪರಶಿರಃಪದ್ಮಂಗಳ
ನಪರಿಮಿತಮದಂ ಕರಾಗ್ರದಿಂ ಭದ್ರಗುಣಂ ೮

ಹೊಂದಿದುದಾಗಿತ್ತು. ವ॥ ಮತ್ತು ೬. ಅಬ್ಬಾ ! ಆ ಭೂಮೀಶ್ವರನ ತೇಜಸ್ಸನ್ನು ಏನೆಂದು ಹೇಳಲಿ ! ಬ್ರಹ್ಮಾಂಡಮಂಡಲದ ಹೊರಭಾಗವನ್ನು ತೇಜೋಮಯವನ್ನಾಗಿ ಮಾಡಿದ್ದರಿಂದ ನೂರಾರು ಸೂರ್ಯರುಗಳ ಕಿರಣಗಳ ಕಾಂತಿಯಿಂದ ವ್ಯಾಪ್ತಗೊಂಡು ಬಂಗಾರವರ್ಣಮಯವನ್ನಾಗಿ ಮಾಡಿದಹಾಗೆ ಇತ್ತು. ೭. ಪ್ರತಾಪವೆಂಬ ವಿಷದ ಅಗ್ನಿಯಿಂದ ಕೂಡಿದ, ಶತ್ರುರಾಜರಿಗೆ ಭಯವನ್ನುಂಟುಮಾಡುವಂತಹ, ಕವಚವನ್ನು ಧರಿಸಿದಂತಹ, ಚಂಚಲವಾದ ಮಿಂಚಿನಂತಹ, ಖಡ್ಗವೆಂಬ ಜಿಹ್ವೆಯಿಂದ ಕೂಡಿದ ಆ ಮಹಾರಾಜನ ರಾಹುಸದೃಶವಾದ ಪ್ರಬಲಭುಜಬಲವು ಆ ಶತ್ರುರಾಜರುಗಳ ಕೀರ್ತಿ ಮತ್ತು ಪ್ರತಾಪಗಳೆಂಬ ಸೂರ್ಯಚಂದ್ರಬಿಂಬಗಳನ್ನು ಒಮ್ಮೊಮ್ಮೆ ಸಂಪೂರ್ಣವಾಗಿ ನುಂಗುವಂತಹುದಾಗಿತ್ತು. ಆ ಮಹಾರಾಜನ ದೋರ್ದಂಡವೇ ಮಹಾರಾಹು. ಅವನ ಕೈಯ್ಯಲ್ಲಿರುವ ಖಡ್ಗವೇ ಉಗ್ರಚಿಹ್ನೆಯಿಂದ ಕೂಡಿದ ನಾಲಗೆ. ಹಾವೂ ಪೊರೆಯಿಂದ ಕೂಡಿತ್ತು. ಬಾಹುವೂ ಕಂಚುಕ ಅಂಗಿಯ ತೋಳಿನಿಂದ ಕೂಡಿತ್ತು. ೮. ವೈರಿರಾಜರ ಸೈನ್ಯವೆಂಬ ಸರೋವರವನ್ನು ಆ ಮಹಾರಾಜನೆಂಬ ಅಪರಿಮಿತ ಮದದಿಂದ ಮಂಗಳಕರ ಗುಣದಿಂದ ಕೂಡಿದ ಆನೆಯು ಹೊಕ್ಕು ತನ್ನ ಕೈಗಳೆಂಬ ಸೊಂಡಿಲಿನಿಂದ ಭಯಂಕರವಾದ ಅವರ ತಲೆಗಳೆಂಬ ಕಮಲಗಳನ್ನು ಕಿತ್ತು ಎತ್ತು

ಮ॥ ಕುಚಕಾಶ್ಮೀರವಿಲೇಪನಂ ಬಿರಿಯೆ ಹೃತ್ಕಾಮಾಗ್ನಿಯಿಂ ಮೌಕ್ತಿಕ
ಪ್ರಚಯಂ ಪಾಱಿ ಸಿಡಿಲ್ದು ತಾಳ್ದುದು ಘನಗ್ರೀಷ್ಮಾತಪಂ ಪೊಯ್ಮೆ ಸೀ
ಳ್ದಚಲದ್ಗಂಧಗಜೇಂದ್ರಕುಂಭದ ಗಳನ್ಮುಕ್ತಾಫಳ ಶ್ರೀಯನಾ
ಖಚರಸ್ತುತ್ಯನರಾಧಿನಾಯಕನ ವೈರಿವ್ರಾತಕಾಂತಾಳಿಯಾ ೯

ಚಂ॥ ನುಡಿಯೆ ಶುಕವ್ರಜಂ ಜಡಿದು ಮುತ್ತುಗುಮಿಾಗಳೆನುತ್ತೆ ಮೌನದಿಂ
ನಿಡುಜಡೆಗಾಣೆ ಕೇಕಿ ಕವಿದೆಯ್ದುಗುಮೆಂದು ಮುಸುಕಿ ಮೇಲುದಂ
ನಡೆಯೆ ಮೃಗೇಂದ್ರನಿಂದು ನಡೆತಂದಪುದೆಂದು ಬಿಗುರ್ತು ನಿಂದು ಪಾ
ವಡರ್ದಳಿವೆಂದೆಯಂತಿರಗಿವರ್ಸುಗಿವರ್ತದರಾತಿಕಾಂತೆಯರ್ ೧೦

ಕಂ॥ ಸರಸಿಜಸಖನಾ ನರಪತಿ
ಯರಿಗಳ ಸೌಧಾಗ್ರದಲ್ಲಿ ಪೊಳೆತೆಳೆವುಲ್ಗಾ
ತುರಿಪ ತುರಂಗಮನರುಣಂ
ಬರಸೆಳೆದು ಮರಳ್ಚಿ ನಡೆವನೆಡದೊಳ್ ಬಲದೊಳ್ ೧೧

ತ್ತಿತ್ತು. ೯. ದೇವತೆಗಳಿಂದ ಹೊಗಳಿಸಿಕೊಳ್ಳುತ್ತಿದ್ದ ಆ ರಾಜಶ್ರೇಷ್ಠನಾದ ರಾಜಶೇಖರಮಹಾರಾಜನ ವೈರಿಗಳ ಸಮೂಹದ ಹೆಂಗಸರುಗಳ ಎದೆಯಲ್ಲಿ ತೊಡೆಯು ಲ್ಪಟ್ಟ ಕುಂಕುಮಕೇಸರಿಗಂಧವು ಹೃದಯದ ಕಾಮಾಗ್ನಿಯಿಂದ ಒಣಗಿ ಬಿರುಕುಬಿಟ್ಟಿತ್ತು. ಮುತ್ತುಗಳ ಸಮೂಹವು ಘನವಾದ ಗ್ರೀಷ್ಮಕಾಲದ ಬಿಸಿಲಿನ ಬೇಗೆಯಿಂದ ಆನೆಯ ಕುಂಭಸ್ಥಳವು ಸೀಳು ಬಿಟ್ಟು, ಆ ಸೀಳಿನಿಂದ ಸಿಡಿಯುತ್ತಿರುವ ಮುತ್ತುಗಳ ಹಾಗೆ ಸಿಡಿದು ಹಾರುತ್ತಿಗುವ ಕಾಂತಿಯುನ್ನು ಹೊಂದಿದ್ದವು. (ಅಂದರೆ ಆ ಸ್ತ್ರೀಯರು ತಮ್ಮ ಪತಿಗಳಿಂದ ಅಗಲಿ ವಿರಹತಾಪಾನಲದಗ್ಧರಾಗುತ್ತಿದ್ದರು ಎಂದುಭಾವ) ೧೦. ಮಾತನಾಡಿ ದರೆ ಗಿಳಿಗಳು ಭರದಿಂದ ಮುತ್ತುತ್ತವೆಂದು ಮೌನದಿಂದಲೂ, ಉದ್ದವಾದ ಜಡೆಯನ್ನು ಕಂಡರೆ ನವಿಲುಗಳು ಕವಿದುಬರುತ್ತವೆ ಎಂದು ಮೇಲುಸೆರಗನ್ನು ಮುಸುಕುಹಾಕಿ ಕೊಂಡು, ಗಜಗಮನದಿಂದ ನಡೆದರೆ ಸಿಂಹವೇ ಇಂದು ನಡೆದು ಬಂದೀತೆಂದು ಹೆದರಿ, ಆಶ್ಚರ್ಯದಿಂದ ನಿಂತುಕೊಂಡು, ಹಾವು ಮೈಗೆ ಅಡರಿದ ಹೇಡಿಯು ಹಾಗೆ ಆ ರಾಜಶೇಖರ ಮಹಾರಾಜನ ವೈರಿರಾಜರ ಕಾಂತೆಯರು ಭಯಪಟ್ಟುಕೊಂಡವರಾಗಿ ಬೆವರೇರುತ್ತಿ ದ್ದರು. (ಅಂದರೆ ಆ ಸ್ತ್ರೀಯರು ಚೆಲುವೆಯರಾಗಿದ್ದರೂ ವಿಧವಾಸ್ತ್ರೀಯರಂತೆ ಆಚರಣೆ ಯುಳ್ಳವರಾಗಿದ್ದರು ಎಂದು ಭಾವ) ೧೧. ಆ ರಾಜಶ್ರೇಷ್ಠನ ವೈರಿಗಳ ಉಪ್ಪರಿಗೆಗಳ ಮೇಲ್ಭಾಗದಲ್ಲಿ ಪೊಳೆತು ಬೆಳೆದು ನಿಂತ ಎಳೆಯ ಹುಲ್ಲಿಗೆ ಆಸೆಪಡುತ್ತಿರುವ ಸೂರ್ಯನ ಕುದುರೆಗಳನ್ನು ಅರುಣನು ಗಟ್ಟಿಯಾಗಿ ಎಳೆದು ಆ ಮನೆಗಳ ಎಡಬಲಭಾಗದಲ್ಲಿ ಹೋಗುತ್ತಿದ್ದನು. (ಅದೇ ಉತ್ತರಾಯಣ ದಕ್ಷಿಣಾಯಣಗಳಾಗಲು ಕಾರಣವೆಂಬ

ಉ॥ ಸುಂದರಿ ಬಾರ ಸಾರಸಕಳಾಯತಲೋಚನೆ ನೋಡದಿರ್ಪುದೇ
ನಿಂದೆಲೆ ರಾಜಪತ್ನಿ ಪೊಸಪಣ್ಗಳ ನಲ್ಗುಟುಕಿಕ್ಕು ಪಂಚಬಾ
ಣಂ ದಯೆಗೆಯ್ಗೆ ಕೇಳ್ನಿನಗೆ ಬಿಂಬಫಳಾಧರೆಯೆಂದು ಸಾರಿಕಾ
ಬೃಂದಮರಾತಿಮಂದಿರದೊಳೆಂಬುದು ಬಂದ ಪುಳಿಂದಿಯರ್ಕಳಂ ೧೨

ಚಂ॥ ಕನಸಿನೊಳೆಯ್ದೆ ಕಂಡು ನೃಪಭೀಷಣಮೂರ್ತಿಯನಲ್ಲಿ ಭೀತಿಗೊಂ
ಡನುವಿಸುತೇಳ್ವ ವೇಳೆಯೊಳೆ ತದ್ವನದೊಳ್ ಮೃಗರಾಜನೆಯ್ದೆ ಗ
ರ್ಜನೆಗುಡೆ ತದ್ರಣಾದ್ಭುತ ವಿಜೃಂಭಿತ ಗರ್ಜನೆಗೆತ್ತು ತೀವ್ರಕಂ
ಪನಮೆರ್ದೆಗಾಗೆ ತಲ್ಲಣಿಸಿ ಮಲ್ಲಳಿಗೊಳ್ವರರಾತಿಭೂವರರ್ ೧೩

ಮ॥ಸ್ರ॥ ಕೃತಪದ್ಮಾನಂದನಾಲಂಬಿತರುಚಿವಿಭವಂ ಮಂಡಲಂಗೊಂಡು ಧಾತ್ರೀ
ಪತಿಮಾರ್ತಾಂಡಂ ಸ:ಗೋತ್ರಸ್ಥಿತನೆಸೆಯೆ ರಿಪುಸ್ತ್ರೀಜನಾಕ್ಷ್ಯುತ್ಪಲಂ ದು
ಸ್ಥಿತಿಯಿಂ ಸಂಕೋಚಮಂ ತಾಳ್ದಿರೆ ಕಳಿದಿಳಿವಿಂದಿಂದಿರಂಬೋಲ್ಪದಾಬ್ಜ
ಚ್ಯುತವೊಪ್ಪಿತ್ತನ್ಯರಾಜಾಸ್ಯಮಯುಸಮಯದೊಳ್ ಕಂಕಣಂ ಕಜ್ಜಳಾಂಕಂ ೧೪

ಭಾವ ; ಶತ್ರುರಾಜರ ಮನೆಗಳೆಲ್ಲ ಹಾಳುಬಿದ್ದಿದ್ದವೆಂದೂ ಭಾವ) ೧೨. ವೈರಿರಾಜರ ಮನೆಯಲ್ಲಿದ್ದ ಶುಕ ಸಾರಿಕೆಗಳ ಸಮೂಹವು ಆ ಮನೆಗೆ ಬಂದ ಬೇಡತಿಯರಿಗೆ "ಸುಂದರಿಯೇ ಬಾರಾ, ಕಮಲಪತ್ರದ ಕಳೆಯಿಂದ ಕೂಡಿದ ನೇತ್ರವುಳ್ಳವಳೇ ಈದಿನ ನಮ್ಮನ್ನು ನೋಡದಿರುವುದಕ್ಕೆ ಕಾರಣವೇನು ? ಎಲೈ ರಾಜಪತ್ನಿಯೇ ನಮಗೆ ಈದಿನ ಹೊಸ ಹಣ್ಣುಗಳ ಸವಿಗುಟುಕನ್ನು ನೀಡು ; ಎಲೆ ತೊಂಡೆಯಹಣ್ಣಿನಂತಹ ತುಟಿಯುವಳೇ ಕೇಳು, ನಿನಗೆ ಆ ಪಂಚಬಾಣನು ದಯೆ ತೋರಿಸಲಿ" ಎನ್ನುತ್ತಿದ್ದವು. (ಅಂದರೆ ವೈರಿರಾಜರ ಮನೆಗಳು ಬೇಡರ ಬಿಡಾರಗಳಾಗಿದ್ದುವು ಎಂದು ಭಾವ) ೧೩. ವೈರಿರಾಜರುಗಳು ಆ ರಾಜನ ಭಯಂಕರ ಮೂರ್ತಿಯನ್ನು ಸ್ಫುಟವಾಗಿ ಕನಸಿನಲ್ಲಿ ಕಂಡು ಭಯಗೊಂಡು ಅಬ್ಬರಿಸಿಕೊಂಡು ಏಳುವ ಸಮಯದಲ್ಲಿಯೇ ಆ ಅರಣ್ಯದಲ್ಲಿ ಸಿಂಹವು ಗರ್ಜನೆಯನ್ನು ಮಾಡಲು, ಆ ರಾಜನ ಅದ್ಭುತವಾದ ಅಧಿಕತರ ರಣಗರ್ಜನೆಯೆಂದು ತಿಳಿದು ಹೃದಯವು ತೀವ್ರವಾಗಿ ನಡುಗುತ್ತಿರಲು ಸಂಕಟಗೊಂಡು ಮೂರ್ಛೆಹೋಗುತ್ತಿದ್ದರು. ೧೪. ಸೂರ್ಯನು ಕಮಲಗಳಿಗೆ ಆನಂದವನ್ನುಂಟುಮಾಡುವ ಕಿರಣಗಳುಳ್ಳವನಾಗಿರುವಂತೆ ರಾಜಶೇಖರನು ಲಕ್ಷ್ಮಿಯಿಂದ ಕೂಡಿದ ತೇಜಸ್ಸಿನ ವೈಭವದಿಂದ ಕೂಡಿದ್ದನು. ಪರರಾಜರುಗಳ ರಾಜ್ಯಗಳನ್ನು ಗೆದ್ದು ಅವುಗಳ ಮಂಡಲಗಳಿಂದ ಆ ಭೂಪಾಲಮಾರ್ತಾಂಡನು ಆವೃತನಾಗಿದ್ದನು. ಸೂರ್ಯನು ತನ್ನ ಕಿರಣಮಂಡಲದಿಂದ ಶೋಭಿಸುತ್ತಿದ್ದನು. ಸೂರ್ಯನು ಉತ್ತಮವಾದ ಪೂರ್ವದಿಕ್ಕಿನಲ್ಲಿರುವ (ಉದಯಾದ್ರಿ) ಪರ್ವತದಿಂದ ಹುಟ್ಟಿದವನೆನಿಸಿದ್ದನು. ಅದರಂತೆ ರಾಜನು ಸತ್ಕುಲಪ್ರಸೂತನೆನಿಸಿದ್ದನು. (ಹೀಗೆ ಆ ರಾಜನು) ಶೋಭಿಸುತ್ತ ವೈರಿಸ್ತ್ರೀಯರ ಕಣ್ಣುಗಳೆಂಬ ಕನ್ನೈದಿಲೆಗಳನ್ನು ಅವರ ಗಂಡಂದಿರ ದುಸ್ಥಿತಿಯಿಂದಾಗಿ ರಾಜನು ಮುಚ್ಚಿಸಿದನು. ಸೂರ್ಯನು

ಕಂ|| ಸುರಧೇನು ಪಯೋಧರಮಂ
ಸುರಕುಜದೆಳೆದಳಿರನಮರಮಣಿಯುಂ ಬೆರಲುಂ
ಕರಮುಂ ನಖಮುಂ ಪರಿಜಿಂ
ವರವಿತರಣದಿಂದೆ ಪಳಿಗುಮಾ ನೃಪಸುತನಾ ೧೫

ವ|| ಎಂಬತಿಶಯಪ್ರಶಸ್ತಿಯಂ ಪಡೆದು

ಮ||ಸ್ರ|| ಪ್ರಣತಪ್ರತ್ಯರ್ಥಿ ಪೃಥ್ವೀಧವನಿವಹ ಕಿರೀಟಾಗ್ರಮಾಣಿಕ್ಯಮಾಲಾ
ಘೃಣಿ ಚಂಚಚ್ಚಂಚಲಾಂಚತ್ಸುರಪಮಣಿಮಹಾಪೀಠ ಮೇಘಸ್ಥಪಾದಂ
ಗುಣಭಾಸ್ವದ್ರತ್ನರತ್ನಾಕರನಭವಲಸದ್ಭಕ್ತನಾ ರಾಜಚೂಡಾ
ಮಣಿ ಪೆಂಪಂ ತಾಳ್ದು ಕಣ್ಗೊಪ್ಪಿದನಮಮ ಕಳಾಕಾಮಿನೀಜೀವಿತೇಶಂ ೧೬

ವ|| ಇಂತೊಪ್ಪುತ್ತುಮಿರ್ದೊಂದು ಸುವಾಸರದ ಸುಪ್ರಭಾತಸಮಯದೊಳ್ ಈಶ್ವ ರಾರ್ಚನಂಗೈದನಂತರಂ

ತನ್ನ ವೈರಿಗಳಾದ ಕನ್ನೈದಿಲೆಗಳನ್ನು ಚಂದ್ರನ ಮುಳುಗುವಿಕೆಯಿಂದ ಮುಚ್ಚಿಸಿದನು. ಪರರಾಜರು ತಮ್ಮ ಸ್ಥಾನದಿಂದ ಚ್ಯುತರಾಗಿ ನಾಶಗೊಳ್ಳುವ ಸಮಯದಲ್ಲಿ ಕಾಡಿಗೆ ಗುರುತಿನ ಕಣ್ಣೀರು ಅವರ ಸ್ತ್ರೀಯರುಗಳ ಕಣ್ಣಿನಿಂದ ಜಗುಳಿ, ಭ್ರಮರಗಳು ಕನ್ನೈದಿಲೆ ಗಳಿಂದ ಚ್ಯುತಿಗೊಂಡು, ಕಮಲಗಳಿಗೆ ಬಂದು ಇಳಿವ ಹಾಗೆ ರಾಜನ ಪಾದಗಳಿಗೆ ಬೀಳು ತ್ತಿದ್ದವು. ಸೂರ್ಯೋದಯವಾಗಲು ಚಂದ್ರನು ತನ್ನ ಸ್ಥಾನದಿಂದ ಚ್ಯುತನಾಗಿ ಮುಳುಗುವ ಸಮಯದಲ್ಲಿ ಕನ್ನೈದಿಲೆಗಳಿಂದ ಕಾಡಿಗೆಯಂತೆ ಕಪ್ಪಾದ ದುಂಬಿಗಳ ಹಿಂಡು ಹಾರಿ ಕಮಲಗಳಿಗೆ ಎರಗುತ್ತಿತ್ತು. ೧೫. ಆ ರಾಜಕುಮಾರನಾದ ರಾಜ ಶೇಖರನ ಬೆರಳು ಮತ್ತು ಕೈ ಹಾಗು ನಖಗಳು ದಾನಗುಣಾಧಿಕ್ಯದಿಂದ ಕ್ರಮವಾಗಿ ಕಾಮಧೇನುವಿನ ಮೊಲೆಗಳನ್ನೂ, ಕಲ್ಪವೃಕ್ಷದ ಎಳೆಯ ತಳಿರನ್ನೂ, ದೇವಲೋಕದ ರತ್ನವಾದ ಚಿಂತಾರತ್ನವನ್ನೂ ಕೀಳುಮಾಡುವಂತಿದ್ದುವು. ವ|| ಹೀಗಿರುವ ಅತಿಶಯವಾದ ಬಿರುದನ್ನು ಧರಿಸಿ ೧೬. ನಮಸ್ಕರಿಸುತ್ತಿರುವ ಶತ್ರುರಾಜರುಗಳ ಸಮೂಹದ ಕಿರೀಟ ಗಳ ತುದಿಯಲ್ಲಿ ಮಾಣಿಕ್ಯವೆಂಬ ರತ್ನಪರಂಪರೆಯ ಕಿರಣಗಳಿಂದ ಮಿನುಗುತ್ತ ಚಂಚಲತೆಯಿಂದ ಕೂಡಿರುವ ಇಂದ್ರನೀಲಮಣಿಯಿಂದ ಮಾಡಿದಂಥ ಮಹಾ ಪೀಠದ ಮೇಲೆ ಮೇಘದಲ್ಲಿ ಇಟ್ಟಿರುವ ಹಾಗೆ ಶೋಭಿಸುವ ಪಾದವುಳ್ಳ, ಸದ್ಗುಣಗಳೆಂಬ ಪ್ರಕಾಶಮಾನವಾದ ರತ್ನಗಳಿಗೆ ಸಮುದ್ರದೋಪಾದಿಯಲ್ಲಿದ್ದು ಪರಮೇ ಶ್ವರನ ಶ್ರೇಷ್ಠಭಕ್ತನೆನಿಸಿದ್ದು, ಕಲೆಗಳೆಂಬ ಕಾಮಿನಿಯರಿಗೆ ಜೀವಿತೇಶನಂತೆ ಇದ್ದು, ಆ ರಾಜಶ್ರೇಷ್ಠನಾದ ರಾಜಶೇಖರನು ಅಬ್ಬಾ! ಘನತೆಯನ್ನು ಹೊಂದಿ ಕಣ್ಣುಗಳಿಗೆ ಶೋಭಿಸುತ್ತಿದ್ದನು. ವ|| ಹೀಗೆ ಒಪ್ಪುತ್ತ ಇದ್ದು ಒಂದು ಸನ್ಮುಹೂರ್ತದ ದಿವಸ

ಮ॥ಸ್ರ॥ ಮಣಿಕೋಟೀರಾಂಶುವೆತ್ತಂ ತುಱುಗೆ ಮಿಱುಗೆ ಹಾರಾಂಶು ಗಂಡಂಗಳೊಳ್ ಮೇ
ಣ್ಮಣಿವೃತ್ತಂ ತೋಱೆ ಕರ್ಣಾಭರಣಕಮನಮುಕ್ತಾಂಶು ದಂತಾಂಶುಕೋದ್ಯ
ನ್ಮಣಿಯಂ ದಂತಾಂಶು ತೀವೃತ್ತೆಸೆಯೆ ಮಿಸುಗೆ ವಕ್ತ್ರಾಂಶು ವಜ್ರಾವಳೀಕಂ
ಕಣವಿಸ್ಫಾರಾಂಶು ವಿಭ್ರಾಜಿಸೆ ಕನಕ ಲಸತ್ಪೀಠದೊಳ್ ಭೂಪನಿರ್ದಂ ೧೭

ಉ॥ ಪಾಡುವ ಗಾಯಕರ್ ಕುಣಿವ ನಚ್ಚಣಿಯರ್ ಕರವೆತ್ತಿ ಕೀರ್ತನಂ
ಮಾಡುವ ಮಾಗಧರ್ ನುತಿಪ ಸತ್ಕವಿಗಳ್ ಮಣಿದೇಳ್ದು ಕಪ್ಪಮಂ
ನೀಡುವ ಮನ್ನೆಯರ್ ಜಯ ಸುಖೀಭವವಾದಕ ಶೈವಕೋವಿದರ್
ಕೂಡಿರೆ ಚೆಲ್ವುವೆತ್ತುದು ಸಭಾಸದನಂ ವಸುಧಾಧಿನಾಥನಾ ೧೮

ಕಂ॥ ಚರಣರಣನ್ಮಂಜೀರ
ಸ್ವರಮುಣ್ಮಿರೆ ಬಂದು ನಿಂದು ಸುಂದರಿಯರ್ ಕೇ
ಕರಕರರುಹರುಚಿ ಬೆರಸು
ತ್ತಿರೆ ಬೀಸಿದರೆಸೆವ ಧವಳತರ ಚಾಮರಮಂ ೧೯

ವ॥ ಮತ್ತಮಾ ಮಣಿಗಣಖಚಿತ ರುಚಿರತರ ಕನಕಮಯ ದಿವ್ಯಸಿಂಹಾಸನದಿಕ್ಕೆಲದೊಳ್ ಬಿಂಕದಿಂ ಕೊಂಕಿನಿಂದು ಕಂಕಣ ಝಣತ್ಕೃತಿ ಪೊಣ್ಮೆ ಜಾಣ್ಮೆಯಿಂದೆಳೆಗಾಳಿಯುಲಿಪದಿಂ

ಪ್ರಾತಃಕಾಲಸಮುಯದ ಶಿವಪೂಜೆಯನ್ನು ಮಾಡಿ ಮುಗಿಸಿದನಂತರ ೧೭. ರತ್ನಗಳ ತುದಿಯ ಪ್ರಕಾಶವು ಎಲ್ಲ ಕಡೆಗೂ ಹಬ್ಬಿರಲು, ಕೊರಳ ಸರದ ಪ್ರಕಾಶವು ಕಪೋಲದಲ್ಲಿ ಮಿನುಗುತ್ತಿರಲು, ಕಿವಿಯ ಆಭರಣಗಳು ಹಾರಾಡುತ್ತಿರಲು, ಮುತ್ತುಗಳ ಲಾವಣ್ಯವು ಕಮನೀಯವಾಗಿರಲು, ಹಲ್ಲುಗಳನ್ನು ಮುಚ್ಚಿರುವ ತುಟಿಯೆಂಬ ಮಣಿಯನ್ನು ಆ ಹಲ್ಲುಗಳ ಕಾಂತಿಯು ತುಂಬಿಕೊಂಡಿರಲು, ಮುಖದ ಕಾಂತಿಯು ಶೋಭಿಸುತ್ತಿರಲು, ವಜ್ರಗಳ ಸಮೂಹದಿಂದ ಕೆತ್ತಲ್ಪಟ್ಟ ಕಂಕಣಗಳ ವಿಸ್ತಾರವಾಗಿ ಹಬ್ಬಿದ ಕಿರಣಗಳು ಪ್ರಕಾಶಿಸುತ್ತಿರಲು ಬಂಗಾರದ ಪೀಠದಲ್ಲಿ ಆ ಮಹಾರಾಜನಾದ ರಾಜಶೇಖರನು ಕುಳಿತಿದ್ದನು. ೧೮. ಹಾಡುತ್ತಿರುವ ಸಂಗೀತಗಾರರು, ಕುಣಿಯುತ್ತಿರುವ ನರ್ತಕಿಯರು, ಕೈಯೆತ್ತಿ ಗುಣಗಾನಮಾಡುವ ಮಾಗಧರು, ಸ್ತೋತ್ರಮಾಡುವ ಸತ್ಕವಿಗಳು, ನಮಸ್ಕರಿಸಿ ಎದ್ದು ಕಪ್ಪಕಾಣಿಕೆಗಳನ್ನು ಅರ್ಪಿಸುವ ಮನ್ನಣೆಗೆ ಯೋಗ್ಯರಾದ ರಾಜಪುತ್ರರು, ಜಯಕಾರ ಮಾಡಿ 'ಸುಖವಾಗಿರು' ಎಂದು (ಆಶೀರ್ವದಿಸುವ) ಶಿವಭಕ್ತಿಕೋವಿದರು, ಇವರುಗಳಿಂದ ಕೂಡಿ ಆ ಮಹಾರಾಜನ ಸಭೆಯು ಚೆಂದವಾಗಿ ಕಾಣುತ್ತಿತ್ತು. ೧೯. ಕಾಲಂದಿಗೆಗಳ ಮಂಜುಳವಾದ ಧ್ವನಿಯು ಚಿರಡುತ್ತಿರಲು, ಸುಂದರಿಯರು ಬಂದು ನಿಂತು ಕಡೆಗಣ್ಣಿನ ಕಾಂತಿಯೊಡನೆ ಉಗುರುಗಳ ಕಿರಣವು ಕೂಡಿಕೊಳ್ಳುತ್ತಿರಲು ಶೋಭಿಸುವ ಬಿಳುಪಾದ ಚಾಮರವನ್ನು ಬೀಸುತ್ತಿದ್ದರು. ವ॥ ಮತ್ತು ಆ ರತ್ನಗಳಿಂದ ಕೆತ್ತಲ್ಪಟ್ಟ ಮನೋಹರವಾದ ಬಂಗಾರದ ದಿವ್ಯಸಿಂಹಾಸನದ ಎರಡೂ ಪಕ್ಕಗಳಲ್ಲಿ ಬಿಂಕದಿಂದ ಬಳುಕಿ ನಿಂತು ಕೈಕಡಗಗಳ ಝಣಝಣವೆನ್ನುವ ಶಬ್ದವು ಉಂಟಾಗುತ್ತಿರಲು ಜಾಣತನದಿಂದ ಎಳೆಗಾಳಿಯ ಬೀಸುವಿಕೆಯಿಂದ ಲಲಿತವಾದ ಮಾವಿನ ಮರ

ಲಲಿತ ರಸಾಲಲತೆ ನೆಗೆದು ಮಂಜುಮಂಜರಿಯಂ ಪಸರಿಪಂತೆ ಸೂಳಱಿದು ತೋಳಂ ನೆಗಪಿ ಚಾಮರಮಂ ಬೀಸುವ ಚಾಮರಗ್ರಾಹಿಣಿಯರಿಂ ಪರಿವಿಡಿಯಿಂ ತರಂಬಿಡಿದು ಕಂದರ್ಪನಂ ಪಿಂದುಗಳೆವಂದಮಂ ತಳೆದುನಿಂದ ರಾಜಪುತ್ರರಿಂದೆಡೆಯಾಡುವ ಪಡಿಯಱಿತಿಯರ ಕಡೆಗಣ್ಣ ಕುಡಿವೆಳಗೆಂಬ ಬಳ್ಳಿಮಿಂಚಿಂಗೆ ಭಯಂಬಡೆದು ಪೆಡಂಮೆಟ್ಟುವ ರಾಜಹಂಸಸಮಾಜ ಮನೋಜೆಯಿಂ ಕರೆದುಚಿತಸ್ಥಾನದೊಳ್ ನಿಲಿಪ ವೇತ್ರಧರರಿಂ ಮುಡಿಯೊಳಿಟ್ಟ ಮುಗುಳ ಮಾಲೆಯ ಪಣೆಗಮರ್ಚಿದ ಮೃಗಮದತಿಲಕದ ಪರಿಮಳಕ್ಕೆ ಬೆರಸಿ ಪರಿಮರಿಯಾಡುವ ಮಱಿದುಂಬಿಗಳ ಬಂಬಲಂ ಪೊಡೆವ ಕರತಳಂ ಕಳ್ತಲೆಯ ಬೆಂಕೊಳ್ವ ಕಮಳದಂತೆ ಕಮನೀಯ ಮಾಗೆ ಬಿಂಬಾಧರದ ಕೆಂಬೆಳಗು ಸುಲಿಪಲ್ಲ ಸೂಸುವೆಳಗಿನೊಡವೆರೆದು ವದನವಿಧುಮಂಡಳದ ಪಾಟಲದ್ಯುತಿಯಂತೆ ಪಸರಿಸಿ ಬೀದಿವರಿಯೆ ಕುಡಿನಿಮಿರ್ದ ಕಡೆಗಣ್ಗಳ್ ಕರ್ಣಪೂರವಾದ ಕನ್ನೈದಿಲೊಳ್ಪಳಂಚುವಂತೆ ಥಳಥಳಿಸಿ ಪೊಳೆಯೆ ತೊಳಪ ನಾಸಿಕೆಯೆಂಬ ಸಂಪಗೆಯ ಬಿರಿ ಮುಗುಳ ಪರಿಸರದೊಳಱಿಯದೆಱಗಿ ಭಯಂಬಡೆದು ಬೆಮರ್ತ ಮೃಗಮದತಿಲಕಮೆಂಬ ಮಱಿ ದುಂಬಿಯ ನುಣ್ಪೆಮರ್ವನಿಯದಱ ಬೆಂಬಳಿಯೊಳಿಳಿದಾಲಂಬಿಪಂತೆ ನಾಸಾಮಣಿ ಮನೋಜ್ಞ

ದಲ್ಲಿರುವ ಲತೆಯು ಕೊಗಾಡಿ ಮನೋಹರವಾದ ಹೂಗೊಂಚಲನ್ನು ಪ್ರಸಾರಗೊಳಿಸುವ ಹಾಗೆ ಕ್ರಮಬದ್ಧವಾಗಿ ತೋಳನ್ನು ಎತ್ತಿ ಚಾಮರವನ್ನು ಬೀಸುವ ಚಾಮರ ಹಿಡಿದ ಹೆಂಗಸರಿಂದ (ಶೋಭಿಸುತ್ತಿದ್ದನು). ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಕ್ರಮವಾಗಿ ಮನ್ಮಥನ ರೂಪವನ್ನು ಕೀಳುಮಾಡುವಂತಹ ರೂಪಧರಿಸಿ ನಿಂತಿರುವ ರಾಜ ಕುಮಾರರಿಂದ ; ಅಲ್ಲಿ ಸುತ್ತಾಡುತ್ತಿರುವ ಬಾಗಿಲು ಕಾಯುವ ಹೆಂಗಸರ ಕಡೆಗಣ್ಣಿನ ಕುಡಿಬೆಳಗೆಂಬ ಸೆಳೆಮಿಂಚಿಗೆ ಭಯಪಟ್ಟು ಹಿಂದಕ್ಕೆ ಸರಿಯುತ್ತಿರುವ ರಾಜಶ್ರೇಷ್ಠರುಗಳ ಸಮೂಹವನ್ನು ವಿನಯವಾಗಿ ಕರೆತಂದು ಉಚಿತಸ್ಥಾನದಲ್ಲಿ ನಿಲ್ಲಿಸುತ್ತಿರುವ ದಂಡಧಾರಿ ಗಳಿಂದ ; ಮತ್ತು ತುರುಬಿನಲ್ಲಿದ್ದ ಮೊಗ್ಗಿನಮಾಲೆಯ, ಹಣೆಗೆ ಹಚ್ಚಿಕೊಂಡ ಕಸ್ತೂರಿ ತಿಲಕದ ಸುವಾಸನೆಗೆ ಸುತ್ತಲೂ ಚಿಟ್ಟಮುರಿಯಾಡುವ ದುಂಬಿಯ ಮರಿಗಳ ಸಮೂಹವು ಇತ್ತು. ಅವನ್ನು ಹೊಡೆದೋಡಿಸಲು ಕಮಲದಂತಹ ಕೈಗಳನ್ನು ಆಡಿಸುತ್ತಿರಲು ಕತ್ತಲೆ ಯನ್ನು ಹೊಂದಿರುವ ಕಮಲದ ಹಾಗೆ ಶೋಭಾಯಮಾನವಾಗಿತ್ತು. ಬಿಂಬಫಲದಂತಿ ರುವ ತುಟಿ, ಕೆಂಪಾದ ಪ್ರಕಾಶ, ಬಿಳಿಯ ಹಲ್ಲುಗಳಿಂದ ಹೊರಸೂಸುತ್ತಿರುವ ಬೆಳಕಿ ನೊಡನೆ ಕೂಡಿ ಮುಖವೆಂಬ ಚಂದ್ರಮಂಡಲದ ಪಾಟಲವರ್ಣದ ಪ್ರಕಾಶದಂತೆ ಸುತ್ತಲೂ ವಿಶಾಲವಾಗಿ ಹರಡಿತ್ತು. ಅಂಚಿನವರೆಗೂ ನಿಮಿರಿ ನಿಂತ ಕಟಾಕ್ಷಗಳ ಕಾಂತಿಯು, ಕಿವಿಯಲ್ಲಿ ಧರಿಸಿರುವ ಕನ್ನೈದಿಲೆಗಳೊಡನೆ ಪ್ರತಿಸ್ಪರ್ಧಿಯಾದ ಹಾಗೆ ಥಳಥಳ ಹೊಳೆಯುತ್ತಿದ್ದವು. ಪ್ರಕಾಶಿಸುವ ಮೂಗೆಂಬ ಅರಳಿದ ಸಂಪಿಗೆಗೆ ತಿಳಿಯದೆ ಬಂದು ಎರಗಿ ಭಯಗೊಂಡು ಬೆವರಿದ (ಹಣೆಯಲ್ಲಿನ) ಕಸ್ತೂರಿತಿಲಕವೆಂಬ ಮರಿ ದುಂಬಿಯು ನುಣುಪಾದ ಬೆವರಿನ ಹನಿಯು ಆ ಸಂಪಗೆಯ ಬೆಂಬಳಿಯಲ್ಲಿ ಇಳಿದು ಆಸರೆ

ಮ॥ಸ್ರ॥ ಮಣಿಕೋಟೀರಾಂಶುವೆತ್ತಂ ತುಱುಗೆ ಮಿಱುಗೆ ಹಾರಾಂಶು ಗಂಡಂಗಳೊಳ್ ಮೇ
ಣ್ಕುಣಿವುತ್ತಂ ತೋಱೆ ಕರ್ಣಾಭರಣಕಮನಮುಕ್ತಾಂಶು ದಂತಾಂಶುಕೋದ್ಯ
ನ್ಮಣಿಯಂ ದಂತಾಂಶು ತೀವುತ್ತೆಸೆಯೆ ಮಿಸುಗೆ ವಕ್ತ್ರಾಂಶು ವಜ್ರಾವಳೀಕಂ
ಕಣವಿಸ್ಫಾರಾಂಶು ವಿಭ್ರಾಜಿಸೆ ಕನಕ ಲಸತ್ಪೀಠದೊಳ್ ಭೂಪನಿರ್ದಂ ೧೭

ಉ॥ ಪಾಡುವ ಗಾಯಕರ್ ಕುಣಿವ ನರ್ತ್ತಣಿಯರ್ ಕರವೆತ್ತಿ ಕೀರ್ತನಂ
ಮಾಡುವ ಮಾಗಧರ್ ನುತಿಪ ಸತ್ಕವಿಗಳ್ ಮಣಿದೇಳ್ದು ಕಪ್ಪಮಂ
ನೀಡುವ ಮನ್ನೆಯರ್ ಜಯ ಸುಖೀಭವವಾದಕ ಶೈವಕೋವಿದರ್
ಕೂಡಿರೆ ಚೆಲ್ವುವೆತ್ತುದು ಸಭಾಸದನಂ ವಸುಧಾಧಿನಾಥನಾ ೧೮

ಕಂ॥ ಚರಣರಣನ್ಮಂಜೀರ
ಸ್ವರಮುಣ್ಮಿರೆ ಬಂದು ನಿಂದು ಸುಂದರಿಯರ್ ಕೇ
ಕರಕರರುಹರುಚಿ ಬೆರಸು
ತ್ತಿರೆ ಬೀಸಿದರೆಸೆವ ಧವಳತರ ಚಾಮರಮಂ ೧೯

ವ॥ ಮತ್ತಮಾ ಮಣಿಗಣಖಚಿತ ರುಚಿರತರ ಕನಕಮಯ ದಿವ್ಯಸಿಂಹಾಸನದಿಕ್ಕೆಲ ದೊಳ್ ಬಿಂಕದಿಂ ಕೊಂಕಿನಿಂದು ಕಂಕಣ ಝಣತ್ಕೃತಿ ಪೊಣ್ಮೆ ಜಾಣ್ಮೆಯಿಂದೆಳೆಗಾಳಿಯಲೆಪದಿಂ

ಪ್ರಾತಃಕಾಲಸಮಯದ ಶಿವಪೂಜೆಯನ್ನು ಮಾಡಿ ಮುಗಿಸಿದನಂತರ ೧೭. ರತ್ನಗಳ ತುದಿಯ ಪ್ರಕಾಶವು ಎಲ್ಲ ಕಡೆಗೂ ಹಬ್ಬಿರಲು, ಕೊರಳ ಸರದ ಪ್ರಕಾಶವು ಕಪೋಲದಲ್ಲಿ ಮಿನುಗುತ್ತಿರಲು, ಕಿವಿಯ ಆಭರಣಗಳು ಹಾರಾಡುತ್ತಿರಲು, ಮುತ್ತುಗಳ ಲಾವಣ್ಯವು ಕಮನೀಯವಾಗಿರಲು, ಹಲ್ಲುಗಳನ್ನು ಮುಚ್ಚಿರುವ ತುಟಿಯೆಂಬ ಮಣಿಯನ್ನು ಆ ಹಲ್ಲುಗಳ ಕಾಂತಿಯು ತುಂಬಿಕೊಂಡಿರಲು, ಮುಖದ ಕಾಂತಿಯು ಶೋಭಿಸುತ್ತಿರಲು, ವಜ್ರಗಳ ಸಮೂಹದಿಂದ ಕೆತ್ತಲ್ಪಟ್ಟ ಕಂಕಣಗಳ ವಿಸ್ತಾರವಾಗಿ ಹಬ್ಬಿದ ಕಿರಣಗಳು ಪ್ರಕಾಶಿಸುತ್ತಿರಲು ಬಂಗಾರದ ಪೀಠದಲ್ಲಿ ಆ ಮಹಾರಾಜನಾದ ರಾಜಶೇಖರನು ಕುಳಿತಿದ್ದನು. ೧೮. ಹಾಡುತ್ತಿರುವ ಸಂಗೀತಗಾರರು, ಕುಣಿಯುತ್ತಿರುವ ನರ್ತಕಿಯರು, ಕೈಯೆತ್ತಿ ಗುಣಗಾನಮಾಡುವ ಮಾಗಧರು, ಸ್ತೋತ್ರಮಾಡುವ ಸತ್ಕವಿಗಳು, ನಮಸ್ಕರಿಸಿ ಎದ್ದು ಕಪ್ಪಕಾಣಿಕೆಗಳನ್ನು ಅರ್ಪಿಸುವ ಮನ್ನಣೆಗೆ ಯೋಗ್ಯರಾದ ರಾಜಪುತ್ರರು, ಜಯಕಾರ ಮಾಡಿ 'ಸುಖವಾಗಿರು' ಎಂದು (ಆಶೀರ್ವದಿಸುವ) ಶಿವಭಕ್ತಿಕೋವಿದರು, ಇವರುಗಳಿಂದ ಕೂಡಿ ಆ ಮಹಾರಾಜನ ಸಭೆಯು ಚೆಂದವಾಗಿ ಕಾಣುತ್ತಿತ್ತು. ೧೯. ಕಾಲಂದಿಗೆಗಳ ಮಂಜುಳವಾದ ಧ್ವನಿಯು ಹೆರಡುತ್ತಿರಲು, ಸುಂದರಿಯರು ಬಂದು ನಿಂತು ಕಡೆಗಣ್ಣಿನ ಕಾಂತಿಯೊಡನೆ ಉಗುರುಗಳ ಕಿರಣವು ಕೂಡಿಕೊಳ್ಳುತ್ತಿರಲು ಶೋಭಿಸುವ ಬಿಳುಪಾದ ಚಾಮರವನ್ನು ಬೀಸುತ್ತಿದ್ದರು. ವ॥ ಮತ್ತು ಆ ರತ್ನಗಳಿಂದ ಕೆತ್ತಲ್ಪಟ್ಟ ಮನೋಹರವಾದ ಬಂಗಾರದ ದಿವ್ಯಸಿಂಹಾಸನದ ಎರಡೂ ಪಕ್ಕಗಳಲ್ಲಿ ಬಿಂಕದಿಂದ ಬಳುಕಿ ನಿಂತು ಕೈಕಡಗಗಳ ಝಣಝಣವೆನ್ನುವ ಶಬ್ದವು ಉಂಟಾಗುತ್ತಿರಲು ಜಾಣತನದಿಂದ ಎಳೆಗಾಳಿಯ ಬೀಸುವಿಕೆಯಿಂದ ಲಲಿತವಾದ ಹೂವಿನ ಮರ

ಲಲಿತ ರಸಾಲಲತೆ ನೆಗೆದು ಮಂಜುಮಂಜರಿಯಂ ಪಸರಿಪಂತೆ ಸೂಳಱಿದು ತೋಳಂ ನೆಗಪಿ ಚಾಮರಮಂ ಬೀಸುವ ಚಾಮರಗ್ರಾಹಿಣಿಯರಿಂ ಪರಿವಿಡಿಯಿಂ ತರಂಬಿಡಿದು ಕಂದರ್ಪನಂ ಪಿಂದುಗಳೆವಂದಮಂ ತಳೆದುನಿಂದ ರಾಜಪುತ್ರರಿಂದೆಡೆಯಾಡುವ ಪಡಿಯಱಿತಿಯರ ಕಡೆಗಣ್ಣ ಕುಡಿವೆಳಗೆಂಬ ಬಳ್ಳಿಮಿಂಚಿಂಗೆ ಭಯಂಬಡೆದು ಪೆಡಂಮೆಟ್ಟುವ ರಾಜಹಂಸಸಮಾಜ ಮನೋಜೆಯಿಂ ಕರೆದುಚಿತಸ್ಥಾನದೊಳ್ ನಿಲಿಪ ವೇತ್ರಧರರಿಂ ಮುಡಿಯೊಳಿಟ್ಟ ಮುಗುಳ ಮಾಲೆಯ ಪಣೆಗಮರ್ಚಿದ ಮೃಗಮದತಿಲಕದ ಪರಿಮಳಕ್ಕೆ ಬೆರಸಿ ಪರಿಮರಿಯಾಡುವ ಮಱಿದುಂಬಿಗಳ ಬಂಬಲಂ ಪೊಡೆವ ಕರತಳಂ ಕಳ್ತಲೆಯ ಬೆಂಕೊಳ್ವ ಕಮಳದಂತೆ ಕಮನೀಯ ಮಾಗೆ ಬಿಂಬಾಧರದ ಕೆಂಬೆಳಗು ಸುಲಿಪಲ್ಲ ಸೂಸುವೆಳಗಿನೊಡವೆರೆದು ವದನವಿಧುಮಂಡಳದ ಪಾಟಲದ್ಯುತಿಯಂತೆ ಪಸರಿಸಿ ಬೀದಿವರಿಯೆ ಕುಡಿನಿಮಿರ್ದ ಕಡೆಗಣ್ಗಳ್ ಕರ್ಣಪೂರವಾದ ಕನ್ನೈದಿಲೊಳ್ಪಳಂಚುವಂತೆ ಥಳಥಳಿಸಿ ಪೊಳೆಯೆ ತೊಳಪ ನಾಸಿಕೆಯೆಂಬ ಸಂಪಗೆಯ ಬಿರಿ ಮುಗುಳ ಪರಿಸರದೊಳಱಿಯದೆಱಗಿ ಭಯಂಬಡೆದು ಬೆಮರ್ತ ಮೃಗಮದತಿಲಕಮೆಂಬ ಮಱಿ ದುಂಬಿಯ ನುಣ್ಪೆಮರ್ವನಿಯುದಱ ಬೆಂಬಳಿಯೊಳಿಳಿದಾಲಂಬಿಪಂತೆ ನಾಸಾಮಣಿ ಮನೋಜ್ಞ

ದಲ್ಲಿರುವ ಲತೆಯು ತೂಗಾಡಿ ಮನೋಹರವಾದ ಹೂಗೊಂಚಲನ್ನು ಪ್ರಸಾರಗೊಳಿಸುವ ಹಾಗೆ ಕ್ರಮಬದ್ಧವಾಗಿ ತೋಳನ್ನು ಎತ್ತಿ ಚಾಮರವನ್ನು ಬೀಸುವ ಚಾಮರ ಹಿಡಿದ ಹೆಂಗಸರಿಂದ (ಶೋಭಿಸುತ್ತಿದ್ದನು). ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಕ್ರಮವಾಗಿ ಮನ್ಮಥನ ರೂಪವನ್ನು ಕೀಳುಮಾಡುವಂತಹ ರೂಪಧರಿಸಿ ನಿಂತಿರುವ ರಾಜ ಕುಮಾರರಿಂದ ; ಅಲ್ಲಿ ಸುತ್ತಾಡುತ್ತಿರುವ ಬಾಗಿಲು ಕಾಯುವ ಹೆಂಗಸರ ಕಡೆಗಣ್ಣಿನ ಕುಡಿಬೆಳಗೆಂಬ ಸೆಳೆಮಿಂಚಿಗೆ ಭಯಪಟ್ಟು ಹಿಂದಕ್ಕೆ ಸರಿಯುತ್ತಿರುವ ರಾಜಶ್ರೇಷ್ಠರುಗಳ ಸಮೂಹವನ್ನು ವಿನಯವಾಗಿ ಕರೆತಂದು ಉಚಿತಸ್ಥಾನದಲ್ಲಿ ನಿಲ್ಲಿಸುತ್ತಿರುವ ದಂಡಧಾರಿ ಗಳಿಂದ ; ಮತ್ತು ತುರುಬಿನಲ್ಲಿದ್ದ ಮೊಗ್ಗಿನಮಾಲೆಯ, ಹಣೆಗೆ ಹಚ್ಚಿಕೊಂಡ ಕಸ್ತೂರಿ ತಿಲಕದ ಸುವಾಸನೆಗೆ ಸುತ್ತಲೂ ಚಿಟ್ಟಮುರಿಯಾಡುವ ದುಂಬಿಯ ಮರಿಗಳ ಸಮೂಹವು ಇತ್ತು. ಅವನ್ನು ಹೊಡೆದೋಡಿಸಲು ಕಮಲದಂತಹ ಕೈಗಳನ್ನು ಆಡಿಸುತ್ತಿರಲು ಕತ್ತಲೆ ಯನ್ನು ಹೊಂದಿರುವ ಕಮಲದ ಹಾಗೆ ಶೋಭಾಯಮಾನವಾಗಿತ್ತು. ಬಿಂಬಫಲದಂತಿ ರುವ ತುಟಿ, ಕೆಂಪಾದ ಪ್ರಕಾಶ, ಬಿಳಿಯ ಹಲ್ಲುಗಳಿಂದ ಹೊರಸೂಸುತ್ತಿರುವ ಬೆಳಕಿ ನೊಡನೆ ಕೂಡಿ ಮುಖವೆಂಬ ಚಂದ್ರಮಂಡಲದ ಪಾಟಲವರ್ಣದ ಪ್ರಕಾಶದಂತೆ ಸುತ್ತಲೂ ವಿಶಾಲವಾಗಿ ಹರಡಿತ್ತು. ಅಂಚಿನವರೆಗೂ ನಿಮಿರಿ ನಿಂತ ಕಟಾಕ್ಷಗಳ ಕಾಂತಿಯು, ಕಿವಿಯಲ್ಲಿ ಧರಿಸಿರುವ ಕನ್ನೈದಿಲೆಗಳೊಡನೆ ಪ್ರತಿಸ್ಪರ್ಧಿಯಾದ ಹಾಗೆ ಥಳಥಳ ಹೊಳೆಯುತ್ತಿದ್ದವು. ಪ್ರಕಾಶಿಸುವ ಮೂಗೆಂಬ ಅರಳಿದ ಸಂಪಿಗೆಗೆ ತಿಳಿಯದೆ ಬಂದು ಎರಗಿ ಭಯಗೊಂಡು ಬೆವರಿದ (ಹಣೆಯಲ್ಲಿನ) ಕಸ್ತೂರಿತಿಲಕವೆಂಬ ಮರಿ ದುಂಬಿಯು ನುಣುಪಾದ ಬೆವರಿನ ಹನಿಯು ಆ ಸಂಪಗೆಯ ಬೆಂಬಳಿಯಲ್ಲಿ ಇಳಿದು ಆಸರೆ

ಮಾಗೆ ಮೀಂಬಳಯಿಗೆಯುಂ ಚೆಂಬೊನ್ನಕುಂಭಮುಂ ಸಂಭ್ರಮದಿನರ್ಚಿಸಿದ ವಿಚಕಿಲ ಮುಕುಲ ಮಾಲೆಯಂತೆ ಕುಚತಟದೊಳ್ ಕಂಠಮಾಲೆ ಲೀಲೆವಡೆಯೆ ಅಳಿವೆದೆಯುಂ ಸಡಿಲ್ಚಿ ನಿಲಿಸಿದ ತನು ಚಾಪಲತೆಯಂತೆ ತನುಲತೆ ನಿಡುಜಡೆಯಿಂ ಕಡುಬೆಡಂಗುವಡೆಯೆ ಬಿಸಿನಿ ಬಿಸಿಲನುಟ್ಟಳೇಬಂತೆ ಬಿಗಿದುಟ್ಟ ಮಿಸುನಿಪಟ್ಟೆ ಮಿಸುಗುತ್ತಿರೆ ಪಿಸಟಂಬರಿದು ಕುಸುಮಶರವಿಸರಮಂ ಪಸರಿಪ ಕಟಾಕ್ಷರೋಚಿಯಿಂ ರಾಜಪುತ್ರರಂ ಮರುಳ್ಗೊಳಿಸಿ ಸಾಲ್ಗೊಂಡು ನಿಂದ ವಾರಾಂಗನೆಯರಿಂ ಮತ್ತಂ ಮೊಳಗುವ ಮದ್ದಳೆಯ ಮೋಹಿಪಾವುಜದಿಂಚರಂಗಱಿವ ಬಂಚದ ಪಾಂಗಱಿದು ಪಾಡುವ ಸಂಗೀತದ ಸೊಳಱಿದೊತ್ತುವ ತಾಳದ ಮಧುರತರ ನಿನದಂಬೆರೆದು ಮೇಳಂಗೊಂಡ ವೇಳೆಯೊಳ್ ಸಮಯಸಮುಚಿತನೈಪಥ್ಯಂಗೆಯ್ದು ಝುಗಝುಗಿಪ ಜವನಿಕೆಯ ಮಱೆಯೊಳ್ ಕಂದರ್ಪವಿವಾಹದೊಳಂದಂಬಡೆದ ಪೊಂದೆಱೆಯುಂ ಮಱೆಗೊಂಡು ನಿಂದ ರತಿಯಂ ಪೋಲ್ತು ನಿಂದಿರ್ಪುದುಂ ನಾಂದಿಯನೋದಿ ಸೂತ್ರಧಾರಕಂ ಭೋಂಕನೆ ತೆಱೆದೆಗೆಯೆ ಶೃಂಗಾರರಸಮಂಗಂ ಬಡೆದಂತೆ ಕಂಗೊಳಿಸಿ ನಿಂದಂಗಪ್ರಭೆ ಮಗುಳ್ದುಂ ತೆಱೆವಿಡಿದಂತಾಗೆ ನಿಜಕಟಾಕ್ಷಶರಮಿರ್ದಂತೆ ಮುಗುಳ್ಗಣೆಗಳೇವಾಳ್ತಿಯೆಂದು ಕಾವನ ಕರತಳದಿನಮಂ ಕವರ್ತೆಗೊಂಡು ಚೆಲ್ಲುವಂತೆ ಪುಷ್ಪಪುಟ

ಯಾಗಿರುವ ಹಾಗೆ ಮೂಗುಬೊಟ್ಟು ಮನೋಹರವಾಗಿತ್ತು. ಮನ್ಮಥನ ಮೀನಿನ ಗುರುತುಳ್ಳ ಧ್ವಜವನ್ನು, ಬಂಗಾರದ ಕುಂಭವನ್ನು ಸಂಭ್ರಮದಿಂದ ಪೂಜಿಸಿದ ಮಲ್ಲಿಗೆಯ ಮೊಗ್ಗುಗಳ ಸರದಂತೆ ಮೊಲೆಗಳ ಮೇಲೆ ಕುತ್ತಿಗೆಯ ಮುತ್ತಿನಸರವು ಲೀಲೆ ಗೊಂಡಿತ್ತು. ದುಂಬಿಗಳೆಂಬ ಹೆಡೆಯನ್ನು ಸಡಿಲಿಸಿ ನಿಲ್ಲಿಸಿದ ತೆಳುವಾದ ಬಿಲ್ಲಿನಂತಿರುವ ಅಂಗಲತೆಯು ಉದ್ದವಾದ ಜಡೆಯಿಂದ ವಿಶೇಷ ಸೊಬಗನ್ನು ಪಡೆದಿತ್ತು. ಕಮಲಿನಿಯು ಬಿಸಿಲನ್ನೇ ಉಟ್ಟಿರುವಳೋ ಎನ್ನುವ ಹಾಗೆ ಬಿಗಿಯಾಗಿ ಉಟ್ಟ ಬಂಗಾರದ ಬಣ್ಣದ ಬಟ್ಟೆಯು ಹೊಳೆಯುತ್ತಿತ್ತು. ಸುತ್ತಲೂ ಮನ್ಮಥನ ಬಾಣಸಮೂಹವನ್ನು ಹರಡು ತ್ತಿರುವ ಕಡೆಗಣ್ಣ ಕಾಂತಿಯಿಂದ ರಾಜಪುತ್ರರನ್ನೆಲ್ಲ ಮರುಳುಗೊಳಿಸಿ ಸಾಲುಸಾಲಾಗಿ ವೇಶ್ಯಾಸ್ತ್ರೀಯರು ನಿಂತಿದ್ದರು. ಮತ್ತು ಧ್ವನಿಮಾಡುತ್ತಿದ್ದ ಮೃದಂಗದ, ಬಾರಿಸಲ್ಪಡು ತ್ತಿದ್ದ ಆವುಜೆಗಳೆಂಬ ಚರ್ಮವಾದ್ಯದ ಇಂಚರವನ್ನು ಹೊರಸೂಸುವ ತಂತ್ರೀವಾದ್ಯದ ರೀತಿಗನುಗುಣವಾಗಿ ಹಾಡುವ ಸಂಗೀತವು ಕ್ರಮವಾಗಿ ಹಾಕುವ ತಾಳಗಳ ಮಧುರ ವಾದ ಧ್ವನಿಯೊಡನೆ ಬೆರೆತು, ಮೇಳಗೊಂಡ ವೇಳೆಯಲ್ಲಿ, ತತ್ಸಮಯಕ್ಕೆ ಉಚಿತವಾದ ರಂಗಮಂದಿರವನ್ನು ಸಜ್ಜುಗೊಳಿಸಿ, ಝುಗಝುಗ ಹೊಳೆಯುತ್ತಿರುವ ತೆರೆಯ ಮರೆಯಲ್ಲಿ ಮನ್ಮಥ ವಿವಾಹಕಾಲದಲ್ಲಿ ಶೃಂಗಾರಗೊಂಡು ಬಂಗಾರದ ತೆರೆಯ ಮರೆಯಲ್ಲಿ ನಿಂತ ರತಿಗೆ ಸಮಾನವಾಗಿ ಪಾತ್ರಧಾರೀ ಸ್ತ್ರೀಯರು ನಿಂತಿದ್ದರು. (ಆಗ) ಸೂತ್ರಧಾರನು ನಾಂದಿಯನ್ನು ಹಾಡಿ, ಒಮ್ಮೆಲೆ ತೆರೆಯನ್ನು ಸರಿಸಲು, ಶೃಂಗಾರರಸವೇ ಮೈವೆತ್ತು ಬಂದಂತೆ ಮನೋಹರವಾಗಿ ನಿಂತ ಅಂಗಪ್ರಭೆಯೇ ಪುನಃ ತೆರೆಹಿಡಿದ ಹಾಗೆ ಆಯಿತು.

**ಹಸ್ತದಿಂ ಪುಷ್ಪಾಂಜಲಿಯಂ ಕಿದರ್ದು ಮೊದಲೊಳ್ ಮೋಹಿಸಿ ಸಭಾಸದರಂಗರಂಗದೊಳ್ ಅಪಾಂಗಪ್ರಭೆ ರಂಜಿಸುತ್ತಿರೆ ಮಂದಾನಿಲನಿನಾಂದೋಳಿಪ ಕನಕಲತೆಯಂತೆ ಆಂದೋಳನ ಶೋಭೆದೋಱಿ ಮಡುಗಟ್ಟಿದ ಮುಖರಸದೊಳ್ ತೇಂಕಿ ತೇಲ್ವ ಚಪಲ ಶಫರಂಗಳೆಂಬಂತೆ ಚಂಚಲಾಕ್ಷಿಗಳೆಸೆಯೆ ಮಿಂಚು ನಚ್ಚಣಿವರಿಜುವಡೆದು ನರ್ತಿಪುದೆಂಬಂತೆ ಚಮತ್ಕೃತಿವೀಱಿ ಮಂಜು ಸಿಂಜಿತಂ ನೆಗಳೆ ಮುಖದೊಳ್ ಗಾನಮಂ ಕೆಯ್ಯೊಳಭಿನಯಮಂ ದೃಷ್ಟಿಯೊಳ್ ರಸಮಂ ಪದತಳದೊಳ್ ತಾಳಮಂ ಬೀಸರಂಬೊಗಲೀಯದೆ ಸೆಱೆವಿಡಿದು ರೂಪು ನೇರು ಲಾಗು ಲವಣಿಯಡಪು ತಿರುಪು ಕೈಮುಱೆ ಕಳಾಸ ಕೂಟವಾನಂಗಳಂ ಸಂಗಳಿಸಿ ರಸಭಾವಂದಪ್ಪದೆ ಗಾಡಿಗಮಕಂಗುದದೆ ಬೆಡಂಗು ಬಿನ್ನಾಣಂ ಬೇರ್ಪಡದೆ ಓಜೆ ಒಯ್ಯಾರಮೋಸರಿಸದೆ ಶುದ್ಧ ದೇಶೀಯ ಕ್ರಮದಿಂ ಚತುರ್ವಿಧನರ್ತನಮಂ ಚತುರಜನ ಮಚ್ಚುವಂತೆ ತೋರ್ಪ ನರ್ತಕಿಯರಿಂ ಮತ್ತಂ—ರಸವಿಸರಂ ಪಸರಿಸೆ ಸೊಂಪು ಪೊಂಪುಳಿವೋಗೆ ರೀತಿ ಕೌತುಕಮನೀಯೆ ಜಾತಿ ಜಾಣ್ಬಡೆಯೆ ಭಾವಂ ಭಾವಜನ ಪೂವಿನಂಬಿನಂತೆ ಮನಮಂ ನಾಂಟೆಯಲಂಕೃತಿ ಚಮತ್ಕೃತಿವೀಱಿ ಗುಣಗಣಮಣಿಯುರಮೆನಿಸೆ ವೃತ್ತಿ ಬಿತ್ತರಂಬಡೆಯೆ ಪಾಕಂ ಲೋಕೋತ್ತರಮೆನಿಸೆ ಶಯ್ಯೆ**

ತಮ್ಮ ಕಟಾಕ್ಷವೆಂಬ ಬಾಣಗಳೇ ಇರುವಾಗ ಪುಷ್ಪಬಾಣಗಳಾವ ಘನ ! ಎಂದು ಅವನ್ನು ಕಾಮನ ಕೈಯಿಂದ ಕಿತ್ತು ಚೆಲ್ಲುವಹಾಗೆ, ಹೂತುಂಬಿದ ಬೊಗಸೆಗಳಿಂದ ಪುಷ್ಪಾಂಜಲಿಯನ್ನು ಪ್ರಥಮತಃ ಮೋಹದಿಂದ ಕಡೆಗಣ್ಣ ಕಾಂತಿ ರಂಜಿಸುತ್ತಿರಲು ಸಭಾಜನಗಳ ದೇಹವೆಂಬ ರಂಗದಲ್ಲಿ ಚೆಲ್ಲಿದರು. ಮಂದಮಾರುತದಿಂದ ಅಲ್ಲಾಡುವ ಸುವರ್ಣಲತೆಯಂತೆ ಮೈಯಲ್ಲಾಟದ ಶೋಭೆಯನ್ನು ತೋರಿಸುತ್ತ, ಮಡುಗಟ್ಟನಿಂತಿರುವ ಮುಖಕಾಂತಿಯೆಂಬ ನೀರಿನಲ್ಲಿ ಮುಳುಗಿ ಏಳುತ್ತಿರುವ ಚಪಲಮೀನುಗಳ ಹಾಗೆ ಚಂಚಲವಾದ ನೇತ್ರಗಳು ಪ್ರಕಾಶಿಸುತ್ತಿದ್ದವು. ಮಿಂಚೇ ನರ್ತಿಸುವ ಸ್ತ್ರೀಯರ ರೂಪ ಧರಿಸಿ ಕುಣಿಯುತ್ತಿದೆಯೋ ಎಂಬಂತೆ ಚಮತ್ಕಾರವನ್ನು ಬೀರುತ್ತ, ಆಭರಣಗಳ ಮಂಜುಳವಾದ ಧ್ವನಿಯು ಹರಡುತ್ತಿರಲು, ಮುಖದಲ್ಲಿ ಸಂಗೀತ, ಕಯ್ಯಲ್ಲಿ ಅಭಿನಯ, ದೃಷ್ಟಿಯಲ್ಲಿ ಶೃಂಗಾರಾದಿರಸ, ಕಾಲಿನಲ್ಲಿ ತಾಳವನ್ನು ಕ್ರಮತಪ್ಪದಂತೆ ಲಯಬದ್ಧಗೊಳಿಸಿ. ರೂಪ, ಜಾಣತನ, ಹಾರಿ ದಿಮ್ಮನೆ ನಿಲ್ಲುವಿಕೆ, ಕುಣಿತ, ಪಾದವಿನ್ಯಾಸ, ಎಡಕ್ಕೆ ಸರ್‍ರನೆ ತಿರುಗುವಿಕೆ, ಹಸ್ತದಮುರಿ, ಹೊಂದಿಕೆ, ಆಲಿಂಗನಾದಿ ನೃತ್ಯಮರ್ಯಾದೆಯನ್ನು ಕೂಡಿಸಿ, ರಸಭಾವಗಳು ತಪ್ಪದಂತೆ, ಸೊಗಸು ಮತ್ತು ಗಮಕಗಳು ಜಾರದಂತೆ, ಬೆಡಗು ಬಿನ್ನಾಣಗಳು ಬೇರ್ಪಡದಂತೆ, ಒಸಪು ಒಯ್ಯಾರಗಳು ತಪ್ಪದಂತೆ, ದೇಸಿಯ ಶುದ್ಧ ಕರ್ನಾಟಕ ಮರ್ಯಾದೆಯ ನೃತ್ಯಕ್ರಮದಿಂದ ನೃತ್ಯಲಾಸ್ಯಾದಿ ನಾಲ್ಕು ವಿಧವಾದ ನರ್ತನವನ್ನು ನಾಟ್ಯಶಾಸ್ತ್ರಬಲ್ಲಿದರಾದ ಜನರು ಮೆಚ್ಚುವ ಹಾಗೆ, ಆಡಿ ತೋರಿಸುತ್ತಿರುವ ನರ್ತಕಿಯರಿಂದಲೂ ಮತ್ತು ಶೃಂಗಾರಾದಿ ನವರಸ ಸಮೂಹವು ಹೊರಹೊಮ್ಮುವಂತೆ ಅಧಿಕವಾದ ಸೊಗಸಿನಿಂದ ವೈದರ್ಭ ಗೌಳ ಪಾಂಚಾಳಾದಿ ಮಾರ್ಗಕ್ರಮವು ಕೌತುಕಗೊಳಿಸುವಂತೆ

ಶಯ್ಯಮಾಗೆ ಬಂಧಮಗುಂದಲೆವಡೆಯೆ ದೋಷಮಂ ದೂರೀಕರಿಸಿ ಭಾಷಾಭೇದದಿಂ ನವೀನ ಮೆನಿಸಿ ಸವಿನುಡಿಗಳಿಂ ಸರಸತರಮೆನಿಸಿ ಗದ್ಯ ಪದ್ಯ ಚಂಪು ಪ್ರಮುಖಪ್ರಬಂಧಂಗಳಂ ಪೇಳ್ದು ಕೇಳ್ವರ ಚಿತ್ತಮಂ ಕವರ್ತೆಗೊಳ್ವ ಕವೀಂದ್ರಬೃಂದದಿಂ ಮತ್ತಂ ಮಧುರಮಂದ್ರ ತಾರಸ್ವರ ಗಳಿಂ ಶ್ರುತಿವೆರಸಿ ಕೇಳ್ವರ ಕಿವಿಗೆ ಸವಿಯಂ ಸೈಗಱೆದು ರಂಗುರಕ್ತಿದೋಱೆ ಶುದ್ಧಮಿಶ್ರ ಸಂಕೀರ್ಣರಾಗಂಗಳಿಂ ರಂಜಿಸಿ ಪಾಡಿ ಮೋಹಿಪ ಸಂಗೀತವಿಶಾರದರಿಂ ಅನೀಶ್ವರಾನ್ಯೇಶ್ವರಾ ನೇಕೇಶ್ವರಾಭಿಮತ ವಾದಿವಾದಮಂ ಶ್ರುತ್ಯುಕ್ತಿಯುಕ್ತಿಗಳಿಂ ನಿರಾಕರಿಸಿ ನಿಜಶಿವಾಧಿಕ್ಯಸ್ಥಾಪನಂ ಗೆಯ್ವ ವೇದ ವೇದಾಂತಾದಿ ಕೋವಿದರಾದ ವಾದಿಗಳಿಂ ಮತ್ತಂ ಪದಪದಾರ್ಥ ವಿಭಾಗಂಗೈದು ಮೃದುಮಧುರೋಚ್ಚಾರಣಂಗಳಿಂ ವ್ಯಕ್ತಿಗೆಯ್ದು ಸೂಕ್ತಿಸುಧಾಬ್ಧಿಯೊಳ್ ಮನಮನವಗಾಹಂ ಗೆಯ್ಸುವವಾ ವಧೂಕವರೇಣ್ಯರಿಂ ಮತ್ತಂ ಮಣಿಮಕುಟಂಗಳೊಂದೊಂದನೊರಸೆ ಸಂದಣಿ ಗೊಂಡು ಮಿಸುಪ ನೊಸಲ್ವೆಱೆಯಂ ಪದಕಮಳದೊಳ್ ಸಂತಂಗೆಯ್ಸುವಂತೆ ಮಣಿಮಣಿದನರ್ಘ್ಯ

ಕಾವ್ಯಜಾತಿ ಪ್ರತಿಭೆಯಿಂದ ಕೂಡಿರಲು, ಸ್ಥಾಯಿ ಸಂಚಾರಾದಿಭಾವವು ಮನ್ಮಥನ ಪುಷ್ಪಬಾಣಗಳಂತೆ ಮನಸ್ಸನ್ನು ನಾಟುತ್ತಿರಲು, ಉಪಮಾದ್ಯಲಂಕಾರಗಳು ಚಮತ್ಕಾರ ಜನಕಗಳಾಗುವಂತೆ ಕಾವ್ಯಗುಣಗಳು ಅಧಿಕಗೊಂಡು, ಕೈಶಕೀ, ಆರಭಟೀ, ಸಾತ್ವಿಕೀ, ಭಾರತೀ ಮೊದಲಾದ ಕಾವ್ಯವ್ಯಕ್ತಿಗಳು ವಿಸ್ತಾರವಾಗುವಂತೆ, ಶರ್ಕರ, ದ್ರಾಕ್ಷಾ, ಕದಳಿ, ನಾರಿಕೇಳಾದಿ ಪಾಕಗಳು ಲೋಕೋತ್ತರಗಳಾಗುವಂತೆ, ಶಬ್ದಶಯ್ಯೆ ಮನೋಹರವೆನಿಸಿ ಕಾವ್ಯಬಂಧವು ಕುಂದಿಲ್ಲದಂತೆ, ದೋಷರಹಿತವಾಗಿ ಬೇರೆ ಬೇರೆ ಭಾಷೆ ಹೊಸ ಹೊಸ ವೆನಿಸುವ ಸವಿನುಡಿಗಳ ರಸಾಭಿವ್ಯಂಜಕಗಳಾದ ಗದ್ಯ, ಪದ್ಯ, ಚಂಪೂ ಪ್ರಬಂಧಗಳನ್ನು ಹೇಳುತ್ತ, ಕೇಳುವವರ ಚಿತ್ತವನ್ನು ಸೆರೆಗೊಳ್ಳುವ ಕವೀಶ್ವರರ ಸಮೂಹದಿಂದಲೂ ಮತ್ತು ಮಧುರವಾದ ಮಂದ್ರ ಮತ್ತು ತಾರಸ್ವರಗಳಿಂದ ಶ್ರುತಿಗೂಡಿ ಕೇಳುವವರ ಕಿವಿಗೆ ಸವಿಯನ್ನುಂಟುಮಾಡಿ, ಅತ್ಯುತ್ಸಾಹದ ಆಸಕ್ತಿಯಿಂದ ಶುದ್ಧ, ಮಿಶ್ರ ಸಂಕೀರ್ಣ ರಾಗ ಗಳಿಂದ ರಂಜನೆಗೊಳಿಸಿ ಹಾಡಿ ಮೋಹಗೊಳಿಸುವ ಸಂಗೀತಶಾಸ್ತ್ರಬಲ್ಲಿದರಿಂದಲೂ, ಈಶ್ವರನೇ ಇಲ್ಲವೆನ್ನುವ, ಶಿವನಲ್ಲದೆ ಬೇರೆ ಈಶ್ವರನೆನ್ನುವ, ಅನೇಕ ಜನ ಈಶ್ವರನೆನ್ನುವ ಅಭಿಪ್ರಾಯದೊಡನೆ ವಾದಮಾಡುವ ವಾದಿಗಳನ್ನು ವೇದೋಪನಿಷತ್ ವಾಕ್ಯಗಳಿಂದ ನಿರಾಕರಣಮಾಡಿ ತಮ್ಮ ಶಿವನೇ ಅಧಿಕನೆಂದು ಸಿದ್ಧಾಂತವನ್ನು ಮೃದುವಾದ ಮಧುರ ವಾದ ಸ್ಪಷ್ಟೋಕ್ತಿಗಳಿಂದ ಸ್ಪಷ್ಟೀಕರಿಸಿ, ಶ್ರೇಷ್ಠ ಆಧಾರವಾಕ್ಯಗಳ ಇಂಗಡಲಿನಲ್ಲಿ ಮನಸ್ಸನ್ನು ಮುಳುಗಿಸುವಂತೆ ಮಾಡುವ ಶ್ರೇಷ್ಠರಾದ ತಾರ್ಕಶಕ್ತಿಯುಳ್ಳವರಿಂದಲೂ, ಮತ್ತು ರತ್ನಖಚಿತಕಿರೀಟಗಳು ಒಂದೊಂದರೊಡನೆ ತಾಕಲಾಡುವಂತೆ ಗುಂಪುಗೂಡಿ ಪ್ರಕಾಶಿಸುವ ಅರ್ಧಚಂದ್ರಾಕಾರದ ಹಣೆಗಳನ್ನು ಪಾದಕಮಲಗಳಲ್ಲಿ ಸಂತೋಷಗೊಳಿಸು ವಂತೆ ವಿನಮ್ರರಾಗಿ ಬಾಗಿ ನಮಸ್ಕಾರಮಾಡಿ, ಅನರ್ಘ್ಯವಾದ ಆನೆ, ಕುದುರೆ, ರಥ, ರತ್ನ ಗಳೇ ಮೊದಲಾದವುಗಳನ್ನು ಕಪ್ಪಕಾಣಿಕೆಯಾಗಿ ಹಿಡಿದು ಕಾರುಣ್ಯವನ್ನು ಪಡೆಯ

ಕರಿತುರಗರಥರತ್ನಾದಿಗಳಂ ಕಪ್ಪಂಬಿಡಿದು ಕರುಣಂಬಡೆಯಲೆಂದು ನಿಂದಂಗ ವಂಗ ಕಳಿಂಗ ತ್ರಿಲಿಂಗ ಮಗಧ ಮಾಳವ ಗೌಳ ಪಾಂಚಾಳ ನೇಪಾಳ ಹಿಂದೂಳ ಕೇರಳ ಕಾಶ್ಮೀರ ಸೌವೀರ ವಿದರ್ಭ ಬರ್ಬರ ಗುರ್ಜರಾದಿ ದೇಶಾಧೀಶ್ವರರಿಂ ಶಕ್ತಿತ್ರಯ ಚತುರುಪಾಯ ಪಂಚತಂತ್ರ ಷಡ್ಗುಣ ಸಪ್ತಾಂಗಕ್ರಮವಿಚಕ್ಷಣರೆನಿಸಿ ಮಂತಣಂಗೊಂಡ ಮಂತ್ರಿಗಳ ಸಂತತಿಯಿಂ ಕೈಯೆತ್ತಿ ರಯ್ಯ ಮನೆ ಪೊಗಳ್ವ ವಂದಿವೃಂದದಿಂ ಪೊಗಳ್ವ ಪಾಠಕಪ್ರತಾನದಿಂ ಸೇರಿ ನಿಂದ ವೀರಭಟವಾರದಿಂ ತರಂಗೊಂಡ ತುರಂಗಿಸಂಘದಿಂ ಓರಣಿಸಿ ನಿಂದ ವಾರಣಾರೋಹಕವ್ಯೂಹದಿಂ ಕಿಕ್ಕಿಂಧತೆಯ ನಪ್ಪುಕೈದ ಮಂದಸೌಂದರ್ಯಮನೊಳಕೊಂಡು ಸುರೇಂದ್ರಸಭೆಯಂತೆ ವಿಬುಧಾಲಂಕೃತಮುಂ ವಿರಿಂಚಿಸಭೆಯಂತೆ ರಾಜಹಂಸರಾಜಿತಮುಂ ದಾಮಸಭೆಯಂತೆ ಸುಪ್ರವೀರವಿಳಸಿತಮುಂ ಹರಿ ಸಭೆಯಂತೆವೋಲ್ ಶ್ರೀಧರರಾಜಿತಮುಂ ಶಿವಸಭೆಯಂತೆ ಸದಾನಂದಿ ಬಂಧುರಮೆನಿಸಿ ನರೇಂದ್ರ ನೊಡ್ಡೋಲಗಮಾ ಲೋಕಕ್ಕೆ ಕೌತುಕಮನಿತ್ತೀ ಲೋಕಕ್ಕಿದೇ ಪಿರಿದೆನಿಸಿ ಪರಿರಂಜಿಸುತಿರ್ದು ದಂತುಮಲ್ಲದೆಯುಂ

ಬೇಕೆಂದು ನಿಂತುಕೊಂಡಿದ್ದ ಅಂಗ, ವಂಗ, ಕಳಿಂಗ, ತ್ರಿಲಿಂಗ, ಮಗಧ, ಮಾಳವ, ಗೌಳ, ಪಾಂಚಾಳ, ನೇಪಾಳ, ಹಿಂದೂಳ, ಕೇರಳ, ಕಾಶ್ಮೀರ, ಸೌವೀರ, ವಿದರ್ಭ, ಬರ್ಬರ, ಗುರ್ಜರಗಳೇ ಮೊದಲಾದ ದೇಶಾಧಿಪರಿಂದಲೂ, ಮಂತ್ರ, ಪ್ರಭು, ಉತ್ಸಾಹ ಶಕ್ತಿ ತ್ರಯಗಳಲ್ಲಿ, ಸಾಮ ದಾನ ಭೇದ ದಂಡೋಪಾಯಗಳಲ್ಲಿ, ಮಿತ್ರಭೇದತಂತ್ರ, ಮಿತ್ರಲಾಭ ತಂತ್ರವೇ ಮೊದಲಾದ ಐದು ತಂತ್ರಗಳಲ್ಲಿ, ಸಂಧಿ, ವಿಗ್ರಹ, ಯಾನ, ಆಸನ, ದ್ವೈದೀ ಭಾವ, ಸಮಾಶ್ರಯವೆಂಬ ಆರು ಗುಣಗಳಲ್ಲಿ, ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲಗಳೆಂಬ ಏಳು ಅಂಗಗಳ ತಿಳುವಳಿಕೆಯಲ್ಲಿ ಬಲ್ಲಿದರೆನಿಸಿ, ಮುಂಭಾಗ ದಲ್ಲಿ ಮಂಡಿಸಿರುವ ಮಂತ್ರಿಗಳ ಸಮೂಹದಿಂದಲೂ, ಕೈಗಳನ್ನು ಮೇಲಕ್ಕೆತ್ತಿ ಸೊಗಸಾಗಿ ಬಿರುದಾವಳಿಗಳನ್ನು ಹೇಳುವ ವಂದಿಮಾಗಧರಿಂದಲೂ, ಹೊಗಳುತ್ತಿರುವ ಸ್ತುತಿಪಾಠಕ ಸಮೂಹದಿಂದಲೂ, ಒಟ್ಟಾಗಿ ಸೇರಿನಿಂತ ವೀರಭಟರುಗಳ ಸಮೂಹದಿಂದಲೂ, ಕ್ರಮ ವಾಗಿ ನಿಂತುಕೊಂಡ ಅಶ್ವಾರೋಹಕ ಸಮೂಹದಿಂದಲೂ, ಶಿಸ್ತಿನಿಂದ ಸಾಲಾಗಿನಿಂತ ಗಜಾರೋಹಕದಳದ ಸಮೂಹದಿಂದಲೂ, ಕಿಕ್ಕಿರಿದು ಸ್ಥಳಾವಕಾಶವಿಲ್ಲದಂತೆ ಅತಿಶಯ ಸೌಂದರ್ಯದಿಂದ (ಆ ಸಭೆ ಕೂಡಿತ್ತು ಅದು) ಸುರೇಂದ್ರನಾದ ದೇವೇಂದ್ರನ ಸಭೆ ದೇವತೆ ಗಳನ್ನೊಳಕೊಂಡಂತೆ ಇದು ವಿದ್ವಾಂಸರಿಂದ ಕೂಡಿತ್ತು. ಬ್ರಹ್ಮನಸಭೆಯು ರಾಜಹಂಸ ಪಕ್ಷಿಯನ್ನೊಳಗೊಂಡಂತೆ ಇದು ರಾಜಶ್ರೇಷ್ಠರಿಂದ ಕೂಡಿತ್ತು. ಶ್ರೀರಾಮಚಂದ್ರನ ಸಭೆ ಅತಿವೀರನಾದ ಹನುಮಂತನೇ ಮೊದಲಾದವರಿಂದ ಕೂಡಿದಂತೆ ಇದು ಮಹಾವೀರರಿಂದ ಕೂಡಿತ್ತು. ಮಹಾವಿಷ್ಣುವಿನ ಸಭೆಯು ಲಕ್ಷ್ಮೀಧರನೆನಿಸಿ- ಶೋಭಿಸುವಂತೆ ಇದು ಸುಪಸ್ಥರಿತವಾಗಿತ್ತು. ಶಿವನ ಸಭೆಯು ಸದಾ ನಂದಿಯಿಂದ ಕೂಡಿರುವಹಾಗೆ ಇದು ಶ್ರೇಷ್ಠವಾದ ಹರ್ಷದಿಂದ ಕೂಡಿದ ಜನರಿಂದ ತುಂಬಿದುದೆನಿಸಿ, ಆ ನರಶ್ರೇಷ್ಠನಾದ

ಮ॥ ಮರುದಾಕೀರ್ಣಲಸದ್ವನಪ್ರಸವತಾರಾರಾಜಿತಂ ಹಂಸಬಂ
ಧುರಸಾಪಾಳಿರುಚಿಪ್ರದಾನಕವಿರಾಜಾಲಂಕೃತಂ ದಿವ್ಯಸಿಂ
ಧುರಸತ್ವಾವಹರಮ್ಯಮಾತ್ರಕಮಲಾಪಾಂಗಪ್ರಭಾಭಾಸುರಂ
ಸರದಂತಂಬರದಂತೆ ರಂಜಿಸಿದುದಾ ರಾಜೇಂದ್ರನೊಡ್ಡೋಲಗಂ ೨೦

ರಾಜಶೇಖರನ ಒಡ್ಡೋಲಗವು ನೋಟಕ್ಕೆ ಕೌತುಕವನ್ನುಂಟುಮಾಡುತ್ತ ಲೋಕದಲ್ಲಿ ಇದೇ ಅತಿ ದೊಡ್ಡದಾದ ರಾಜಸಭೆಯೆನಿಸಿ ವಿರಾಜಮಾನವಾಗಿ ಇತ್ತು. ಅದೂ ಅಲ್ಲದೆ ೨೦. ಆ ರಾಜೇಂದ್ರನೊಡ್ಡೋಲಗವು ಸರೋವರದಂತೆ, ಆಕಾಶದಂತೆ ರಂಜಿಸುತ್ತಿತ್ತು. ಹೇಗೆಂದರೆ, ಸರೋವರವು ವಾಯುವಿನಿಂದ ಕೆದರಲ್ಪಟ್ಟು ಶೋಭಿಸುವ ದಟ್ಟವಾದ ನಕ್ಷತ್ರದೋಪಾದಿಯ ಹೂವುಗಳಿಂದ ರಮಣೀಯವಾಗಿರುತ್ತದೆ. ಆಕಾಶವು ದೇವತೆಗಳಿಂದ ತುಂಬಿ ಶೋಭಿಸುತ್ತ ಅಧಿಕವಾದ ನಕ್ಷತ್ರಗಳಿಂದ ತುಂಬಿ ಶೋಭಿಸುತ್ತದೆ. ಒಡ್ಡೋಲಗವು ಗಾಳಿಯಿಂದ ಚದುರಿಹೋದ ಶ್ರೇಷ್ಠವಾದ ಹೂವುಗಳ ಮುತ್ತುಗಳ ಗೊಂಡೆಗಳಿಂದ ವಿರಾಜಮಾನವಾಗಿತ್ತು. ಸರೋವರವು ಸೂರ್ಯನ ಬಂಧುವೆನಿಸಿದ ಕಮಲದ ಮಕರಂದರಸವನ್ನು ಕುಡಿಯುವಲ್ಲಿ ಆಸಕ್ತಗಳಾದ ಭ್ರಮರಗಳೇ ಮುಖ್ಯವಾಗಿ ಉಳ್ಳ ಜಲಪಕ್ಷಿಗಳಲ್ಲಿ ಶ್ರೇಷ್ಠವಾದ ಹಂಸಪಕ್ಷಿಯಿಂದ ಶೋಭಿಸುತ್ತಿತ್ತು. (ಹಂಸಬಂಧು + ರಸ + ಆಪ + ಅಳಿ) ಅಂಬರವು-ಸೂರ್ಯನಿಂದ ಕೂಡಿರುವ ಆಕಾಶದಲ್ಲಿರುವ ನೀರು ತುಂಬಿದ ಮೇಘಗಳ ಸಮೂಹದಿಂದ ನೀಲವರ್ಣ ಪ್ರಧಾನವಾಗಿದ್ದು ದೇವಕವಿಯಾದ ಶುಕ್ರಾಚಾರ್ಯನಿಂದ ಚಂದ್ರನಿಂದ ಅಲಂಕಾರಗೊಂಡಿರುತ್ತದೆ (ಹಂಸ + ಬಂಧುರ + ಸಾಪ + ಆಳಿ + ರುಚಿ) ಒಡ್ಡೋಲಗವು–ಸೂರ್ಯ ಚಂದ್ರಕುಲದವರಾದ ಭೂಪಾಲಕರುಗಳ ಅನುರಾಗ ಪ್ರಾಧಾನ್ಯತೆಯಿಂದಲೂ ಕವಿಶ್ರೇಷ್ಠರುಗಳಿಂದಲೂ ಶೋಭಿಸುತ್ತಿತ್ತು. (ಹಂಸ ಬಂಧು + ರಸಾ + ಪ + ಆಳಿ + ರುಚಿ) ಸರೋವರವು–ದೇವಯೋಗ್ಯವಾದ ಗಂಗಾನದಿಯ ಪವಿತ್ರಜಲದ ಸತ್ವವನ್ನು ಧರಿಸಿ ರಮ್ಯವಾಗಿರುತ್ತದೆ. ಅಂಬರವು ಶ್ರೇಷ್ಠವಾದ ಐರಾವತದ ಸತ್ವವನ್ನು ಹೊಂದಿ ರಮ್ಯವಾಗಿರುತ್ತದೆ. ಒಡ್ಡೋಲಗವು ದಿವ್ಯವಾದ ಐರಾವತದಂತಹ ಸತ್ವವನ್ನು ಹೊಂದಿದ ಶೂರಜನರಿಂದ ರಮ್ಯವಾಗಿತ್ತು. ಸರೋವರವು ಕಮಲಗಳೆಂಬ ಲಕ್ಷ್ಮಿಯ ಕಡೆಗಣ್ಣಿನ ನೋಟದಂತಹ ಪ್ರಕಾಶದಿಂದ ಶೋಭಿಸುತ್ತದೆ. ಅಂಬರವು ಲಕ್ಷ್ಮಿಯ ಕಡೆಗಣ್ಣಿನ ನೋಟದ ಪ್ರಭೆಯಿಂದ ಶೋಭಾಯಮಾನನಾದ ವಿಷ್ಣುವಿನಿಂದ ಶೋಭಿಸುತ್ತಿರುತ್ತದೆ. ಒಡ್ಡೋಲಗವು ಸಂಪದಾಧಿಷ್ಠಾನ ದೇವತೆಯಾದ ಲಕ್ಷ್ಮಿಯ

ಪೆಱಿಸಾರ್ಗುರ್ಜರ ಕುಳ್ಳಿರಿಲ್ಲಿ ಮಗಧಕ್ಷ್ಮಾಪಾಲ ನೀಂ ಕಾಣ್ಕೆಯಂ
ನೆಱಿ ನೀಡಂಗ ಕಳಿಂಗ ಪಿಂಗು ಕಡೆನಿಲ್ ಕರ್ಣಾಟಕಾಧೀಶ ಬಂ
ದೆಱಗೈ ಕೇರಳ ಪಾಂಡ್ಯ ನೀಂ ಗಳಪದಿರ್ ಪಾಂಚಾಳ ಲಾಳಂಗೆ ನೀಂ
ತೆಱಪಂ ಮಾಡೆನುತಲ್ಲಿ ಕಂಚುಕಿಗಳಾಗಳ್ ಗರ್ಜಿಸುತ್ತೊಪ್ಪಿದರ್ ೨೧

ಇದು ಕಾಶ್ಮೀರಮಹೀಶನಿತ್ತ ಮದವನ್ಮಾತಂಗಸಂಘಾತಮಿಂ
ತಿದು ಕಾಂಭೋಜನರೇಂದ್ರನಟ್ಟಿದ ಹಯವ್ರಾತಂ ಧರಾಧೀಶ ನೋ
ಡಿದು ಪಾಂಚಾಳನಲಂಪಿನಿಂ ಕಳುಪಿದುದ್ಯದ್ರತ್ನಸಂತಾನಮಿಂ
ತಿದು ನೇಪಾಳನೃಪಾಲದತ್ತ ವಿಳಸನ್ಮುಕ್ತಾವಳೀಭೂಷಣಂ ೨೨

ವ॥ ಎಂದು ದೂತರ್ಬೇಱಬೇಱ ಛಪ್ಪನ್ನದೇಶದರಸರ್ ಕಳುಪಿದ ಕಪ್ಪಂಗಳನೊಪ್ಪಿ
ಸುತ್ತುಮಿರ್ಪನ್ನೆಗಂ

ಶಾ॥ ಪ್ರಾಂಚತ್ಕಾಂಚನವೇತ್ರ ಮಂಜುಳಕರಂ ಕೂರ್ಪಾಸವಿಭ್ರಾಜಿತಂ
ಚಂಚತ್ಕುಂಡಲಮಂಡಿತಂ ಗತಿಚಲತ್ಪೀನೋದರಂ ದೀರ್ಘದೇ
ಹಂ ಚಿತ್ರಾಂಬರಸಂವೃತೋರು ಪೃಥುಮಧ್ಯಂ ಮಸ್ತಕಾವೇಷ್ಟಿತೋ
ದಂಚತ್ಪೀತಪಟಂ ಪ್ರಸನ್ನವದನಂ ಬಂದಂ ಪ್ರತೀಹಾರಕಂ ೨೩

ಅಪಾಂಗದ ಪ್ರಭೆಯನ್ನು ಹೊಂದಿ ಶೋಭಿಸುತ್ತಿತ್ತು. ೨೧. "ಗುರ್ಜರಾಧಿಪತಿಯೇ ಹೊರಕ್ಕೆ ಹೋಗು ; ಮಗಧದ ಅರಸೇ ಇಲ್ಲಿ ಕುಳಿತುಕೋ ; ಅಂಗದೇಶದ ಅರಸೇ ನೀನು ವಿಶೇಷ ಕಾಣಿಕೆ ಕೊಡು. ಕಳಿಂಗಾಧಿಪತಿಯೇ ಹಿಂದಕ್ಕೆ ಹೋಗು ; ಕರ್ನಾಟಕದ ದೊರೆಯೇ ನೀನು ಕಡೆಯಲ್ಲಿ ನಿಂತುಕೋ ; ಕೇರಳದರಸೇ ನೀನು ಬಂದು ನಮಸ್ಕಾರ ಮಾಡೆಲೈ ; ಪಾಂಚಾಳದೊರೆಯೆ ನೀನು ವ್ಯರ್ಥವಾಗಿ ಮಾತಾಡಬೇಡ ; ಲಾಳದೇಶದ ದೊರೆಯೆ ನೀನು ವಿರಾಮ ಮಾಡಿಕೊಡು" ಎನ್ನುತ್ತ ಅಲ್ಲಿ ಕಂಚುಕಧಾರಿಗಳಾದ ರಾಜ ಭಟರು ಗರ್ಜನೆಮಾಡುತ್ತ ಶೋಭಿಸುತ್ತಿದ್ದರು. ೨೨. "ಭೂಮೀಶ್ವರನೇ, ಇದು ಕಾಶ್ಮೀರಮಹಾರಾಜನು ಕೊಟ್ಟ ಮದಿಸಿದ ಆನೆಗಳ ಸಮೂಹ. ಇದು ಕಾಂಭೋಜದ ದೊರೆಯು ಕಳುಹಿಸಿಕೊಟ್ಟ ಕುದುರೆಗಳ ಸಮೂಹ. ನೋಡು, ಇದು ಪಾಂಚಾಲ ರಾಜನು ಪ್ರೀತಿಯಿಂದ ಕಳುಹಿಸಿದ ಪ್ರಕಾಶಮಾನವಾದ ರತ್ನಗಳ ಸಮೂಹ. ಇದು ನೇಪಾಳಭೂಪಾಲನು ಕೊಟ್ಟ ಹೊಳೆಯುವ ಮುತ್ತುಗಳ ಆಭರಣ". ವ। ಹೀಗೆಂದು ದೂತರು ಬೇರೆ ಬೇರೆ ೫೬. ದೇಶಗಳ ಅರಸರು ಕಳುಹಿಸಿದ ಕಪ್ಪಕಾಣಿಕೆಗಳನ್ನು ಒಪ್ಪಿಸು ತ್ತಿದ್ದರು. ೨೩. ಬಂಗಾರದ ಹೊದಿಕೆಯಿಂದ ಕೂಡಿದ ಬೆತ್ತದಿಂದ ಕೂಡಿದ ಮನೋ ಹರವಾದ ಕೈಯುಳ್ಳವನೂ, ಉದ್ದವಾದ ಅಂಗಿಯನ್ನು ತೊಟ್ಟು ಪ್ರಕಾಶಮಾನನಾದ ವನೂ, ಹೊಳೆಯುತ್ತಿರುವ ಕರ್ಣಾಭರಣಗಳಿಂದ ಅಲಂಕಾರಗೊಂಡವನೂ, ನಡೆಯುವಿಕೆ ಯಿಂದ ಅಲ್ಲಾಡುತ್ತಿರುವ ದೊಡ್ಡ ಹೊಟ್ಟೆಯನ್ನುಳ್ಳವನೂ, ಎತ್ತರವಾದ ದೇಹವನ್ನುಳ್ಳ ವನೂ, ವಿವಿಧ ಬಣ್ಣದ ವಸ್ತ್ರಗಳಿಂದ ಸುತ್ತಲ್ಪಟ್ಟ ತೊಡೆಯುಳ್ಳವನೂ, ದಪ್ಪನೆಯ ನಡು ವುಳ್ಳವನೂ, ಹಳದಿಬಣ್ಣದ ರುಮಾಲನ್ನು ಎತ್ತರವಾಗಿ ತಲೆಗೆ ಸುತ್ತಿಕೊಂಡಿರುವವನೂ,

ವ॥ ಅಂತು ಬಂದು ನಿಂದು ನಿಜನಿಟಿಲತಟಘಟಿತಕರಪುಟನಾಗಿ ದೇವಾ ಬಿನ್ನಪಮಿಾಗ ಳೊರ್ವನಪೂರ್ವಾಗತ ಕಿರಾತದೂತನಭಿನವಕಾರ್ಯವಿಜ್ಞಾಪನೋತ್ಸುಕಂ ದ್ವಾರದೇಶದೊಳ್ ಬಂದಿ ರ್ದಪನೆಂಬುದುಮವನಿಪನಪಾಂಗಪ್ರೇರಣೆಯಿಂ ಬರವೇಳೆಂಬುದುಮವಂ ಪೋಗಿ ತಳ್ವದಾ ಕ್ರವ್ಯಾಧ ನಾಮವ್ಯಾಧನಂ ಪುಗಿಸಿದಾಗಳ್

ಕಂ॥ ತಳಿರ ತಲೆಗಟ್ಟು ದಂತದ
ಬಳೆ ಕತ್ತುರಿಬೊಟ್ಟು ಮುತ್ತಿನೇಕಾವಳಿ ಬಿಲ್
ಪೊಳೆವಂಬು ಬೆನ್ನ ನಿಡುಬ
ತ್ತಳಿಕೆ ವಿರಾಜಿಸೆ ಪುಳಿಂದನಂದೊಳಪೊಕ್ಕಂ ೨೪

ವ॥ ಅಂತೊಳಪೊಕ್ಕು ಮಹಾಸ್ಥಾನಮಂ ಕಂಡು ಕೌತುಕಂಬಟ್ಟವನತ ಶಿರಸ್ಕಂ ಮೆಲ್ಲ ನೈತಂದನತಿದೂರದೊಳ್ ಮೆಯ್ಯಿಕ್ಕಿಮಣಿದು

ಕಂ॥ ಕತ್ತುರಿ ವೀಣೆಯನಿಭದಲೆ
ಮುತ್ತಂ ಫಣಿಮಣಿಯನಮರ್ದ ಜೇಂಗೊಡಮಂ ಕಂ
ಪೊತ್ತರಿಸುವ ಬಾವನ್ನಮ
ನಿತ್ತಂ ಕಾಣ್ಕೆಯನಿಳಾಧಿಪಂಗೆ ಪುಳಿಂದಂ ೨೫

ವ॥ ಅಂತಿತ್ತು ತನ್ನ ಕಕ್ಷತಳದೊಳಿಱುಂಕಿದ ಪೊಂಬುಲಿಯ ಚರ್ಮದ ಕಕ್ಷಪಾಳಿಕೆಯೊಳಳವಟ್ಟು ನಿಗ್ಗವದ ಕರಂಡಕದೊಳಗೆ ಮುದ್ರಿಸಿರ್ದನರ್ಘ್ಯಮಣಿಯಂ ಬಾಲದಿನಮಣಿಯಂ ತುಡುಂಕುವ ರಾಹುವೆನಿಸಿ ನಿಜಕರಮೆಸೆಯೆ ತುಡುಂಕಿ ತೆಗೆದು ತತ್ಪಾದಪೀಠದೊಳ್ ಇಳಿಪಿದಾಗಳ್

ಪ್ರಸನ್ನ ಮುಖಮುದ್ರೆಯುಳ್ಳವನೂ ಆದ ದ್ವಾರಪಾಲಕನು ರಾಜಶೇಖರ ಮಹಾರಾಜನ ಎದುರಿಗೆ ಬಂದನು. ವ॥ ಆ ರೀತಿ ಬಂದು ನಿಂತು ಹಣೆಯಮೇಲೆ ಎರಡೂ ಕೈಯೆತ್ತಿ ಮುಗಿದು, "ದೇವಾ, ವಿಜ್ಞಾಪಿಸಿಕೊಳ್ಳುವುದೇನಂದರೆ, ಈಗತಾನೆ ಅಪೂರ್ವನಾದ ಕಿರಾತ ದೂತನು ಒಂದು ನೂತನ ಕಾರ್ಯದ ಬಗೆಗೆ ವಿಜ್ಞಾಪನೆಮಾಡಿಕೊಳ್ಳುವ ಉತ್ಸಾಹದಿಂದ ಕೂಡಿದವನಾಗಿ ಬಾಗಿಲಲ್ಲಿ ಬಂದಿದ್ದಾನೆ" ಎನ್ನಲು ಅವನೀಶನು ಸೂಚಿಸಿದ ಕಡೆಗಣ್ಣ ಸಂಜ್ಞೆಯಿಂದಲೇ ಬರಹೇಳೆಂದುದನ್ನರಿತು ಆ ದೂತನು ಹೋಗಿ ತಡಮಾಡದೆ ಆ ಕ್ರವ್ಯಾಧ ನೆಂಬ ಹೆಸರಿನ ದೂತನನ್ನು ಒಳಗೆ ಹೊಗಿಸಿದಾಗ ೨೪. ತಳಿರಿನ ತಲೆಕಟ್ಟು, ದಂತದ ಬಳೆ, ಕಸ್ತೂರಿಯ ತಿಲಕ, ಮುತ್ತಿನ ಏಕಾವಳಿಸರ, ಬಿಲ್ಲು, ಹೊಳೆಯುತ್ತಿರುವ ಬಾಣ, ಬೆನ್ನಿನಲ್ಲಿ ಉದ್ದವಾದ ಬತ್ತಳಿಕೆಗಳಿಂದ ಶೋಭಿಸುವ ಬೇಡನು ಆಗ ಒಳಹೊಕ್ಕನು. ವ॥ ಅಂತು ಒಳಗೆ ಹೋಗಿ ಆಸ್ಥಾನವನ್ನು ನೋಡಿ ಕೌತುಕವನ್ನು ಹೊಂದಿ, ಬಾಗಿದ ಶಿರಸ್ಸುಳ್ಳವನಾಗಿ, ಮೆಲ್ಲನೆ ಸಮಿಾಪಕ್ಕೆ ಬಂದು ನಮಸ್ಕಾರಮಾಡಿ ೨೫. ಕಸ್ತೂರಿಯ ಚೀಲವನ್ನೂ, ಆನೆಯ ಕುಂಭಸ್ಥಳದ ಮುತ್ತುಗಳನ್ನೂ, ಹಾವಿನ ಹೆಡೆಯ ರತ್ನವನ್ನೂ ತುಂಬಿದ ಜೇನುತುಪ್ಪದ ಕೊಡವನ್ನೂ, ವಿಶೇಷ ಸುಗಂಧದ ಶ್ರೀಗಂಧವನ್ನೂ, ಆ ಪುಳಿಂದನು ಮಹಾರಾಜನಿಗೆ ಕಾಣಿಕೆ ಕೊಟ್ಟನು. ವ॥ ಹೀಗೆ ಕಾಣಿಕೆ ಕೊಟ್ಟು, ತನ್ನ ಕಂಕುಳಲ್ಲಿ ಸಿಕ್ಕಿಸಿಕೊಂಡಿದ್ದ ಬಂಗಾರವರ್ಣದ ಹುಲಿಯ ಚರ್ಮ

ಕಂ॥ ಆ ಮಣಿ ಮೆಱೆದುದು ತರುಣನ
ಭೋಮಣಿ ನಿಜ ಸುಪ್ರತಾಪವಿಜಿತಂ ಪರಿತಂ
ದಾ ಮಹಿತರಾಜಶೇಖರ
ಭೂಮಿಶ್ವರನಂಘ್ರಿಕಮಳಮಂ ಸೇವಿಪವೊಲ್ ೨೬

ವ॥ ಮತ್ತಂ

ಕಂ॥ ಹರಿಯುರದೊಳೆಸೆವ ಕೌಸ್ತುಭ
ದಿರವಂ ಪರಿಭವಿಸಿ ಮೆಱೆದುದದು ಹರಿನೀಲ
ಸ್ಫುರಿತ ಪದಾಂಬುಜಪೀಠೋ
ಪರಿಮುಸ್ಥಿತಮರುಣರುಚಿರರುಚಿ ಪರಿಮಿಳಿತಂ ೨೭

ವ॥ ಇಂತೆಸೆವನರ್ಘ್ಯಮಣಿಯಂ ನೃಪಶಿರೋಮಣಿ ನಿರೀಕ್ಷಿಸಿ ಕೌತುಕಮನಾಳ್ದತಿಪ್ರಸನ್ನ ಮಧುರದೃಷ್ಟಿಯಿಂ ನೋಳ್ಪಾಗಳಾ ಕಟಾಕ್ಷಮಭಯಂಗುಡೆ ಕೈಂಕರ್ಯಮನಪ್ಪುಕೈದವಂ ನಿಜಾಗಮನ ವಿಜ್ಞಾಪನೋತ್ಕಂಠತೆಯಿಂದಿಂತೆಂದಂ

ದಿಂದ ಮಾಡಿದ ಹೆಗಲ ಚೀಲದಲ್ಲಿ ಅಳವಡಿಸಿದ್ದ ದಂತದ ಚಿಕ್ಕಪೆಟ್ಟಿಗೆಯಲ್ಲಿ ಮುದ್ರೆ ಮಾಡಿ ಇಟ್ಟಂಥ ಬಹುಬೆಲೆಯ ಮಣಿಯನ್ನು ಎಳೆಯ ಸೂರ್ಯನನ್ನು ನುಂಗುವ ರಾಹು ವೆನಿಸುವ ತನ್ನ ಕೈ ಶೋಭಿಸುತ್ತಿರಲು ಆ ರತ್ನಕ್ಕೆ ತುಡುಕಿ ಹೊರತೆಗೆದು ಆ ಮಹಾ ರಾಜನ ಪಾದಪೀಠಕ್ಕೆ ಇಳಿಸಲಾಗಿ ೨೬. ಆ ಮಣಿಯು ತರುಣಸೂರ್ಯನು ತನ್ನ ಮಹಾಪ್ರತಾಪವನ್ನು ಈ ರಾಜಶೇಖರನು ಗೆದ್ದನೆಂದು ಓಡಿಬಂದು ಆ ರಾಜಶೇಖರ ಭೂಪಾಲನ ಪಾದಕಮಲವನ್ನು ಸೇವಿಸುತ್ತಿರುವನೋ ಎನ್ನುವಂತೆ ಮೆರೆಯುತಿತ್ತು. ವ|| ಮತ್ತು ೨೭. ಇಂದ್ರನೀಲಮಣಿಮಯವಾದ ಪಾದಪೀಠದ ಮೇಲೆ ಇಡಲ್ಪಟ್ಟ ಕೆಂಪುಕಾಂತಿಯಿಂದ ಕೂಡಿದ ಆ ರತ್ನವು ವಿಷ್ಣುವಿನ ವಕ್ಷಸ್ಥಳದಲ್ಲಿರುವ ಕೌಸ್ತುಭಮಣಿಯ ರೀತಿಯನ್ನು ಕೂಡ ಗೆಲ್ಲುವಂತಹುದಾಗಿ ಮೆರೆಯುತ್ತಿತ್ತು. ವ|| ಹೀಗೆ ಶೋಭಿಸುತ್ತಿರುವ ಪರಮ ಶ್ರೇಷ್ಠರತ್ನವನ್ನು ಆ ನೃಪಶಿರೋಮಣಿಯಾದ ರಾಜ ಶೇಖರನು ನೋಡಿ, ಕೌತುಕಗೊಂಡು ಅತ್ಯಂತ ಸಂತೋಷಭರಿತವಾದ ಮಧುರ ನೋಟದಿಂದ ನೋಡುವಾಗ ಆತನ ಕಟಾಕ್ಷನೋಟವು ಅಭಯವನ್ನು ಸೂಚಿ ಸುತ್ತಿರಲು ಕೈಂಕರ್ಯದಿಂದ ತುಂಬಿದ ಮನಸ್ಸಿನ ಆ ಕ್ರವ್ಯಾಥನು ತಾನು ಬಂದ ಕಾರಣದ ವಿಜ್ಞಾಪನೆಯನ್ನು ಮಾಡುವ ಕುತೂಹಲದಿಂದ ಹೀಗೆಂದು ಹೇಳಿದನು.

ಚಂ॥ ಸೊಗಯಿಪ ದಕ್ಷಿಣಾಂಬುಧಿಯ ತೀರದೊಳಿರ್ಪುದು ಬೇಡರೊರ್ಗಿನಿಂ
ನಗರಮದೊಂದು ಸಂದ ಪೆಸರಿಂದೆ ಪುಳಿಂದಪುರಂ ಪೊಡರ್ಪಿನಿಂ
ದಗಣಿತಭಾಗ್ಯದಿಂ ಮೆಱೆವನಾ ಪುರದೊಳ್ ಕಲಿಕಾಲಮೇಘನಾ
ಮಗತ ಕಿರಾತನಾಥನವನೀಶ್ವರ ನಿನ್ನ ಪದಾಬ್ಜಕಿಂಕರಂ ೨೮

ಕಂ॥ ಶೂರನನವರತ ಘನಕಾಂ
ತಾರಾಂತರಚಾರಿ ಕರ್ಕಶಾಂಗಂ ಮೃಗಯಾ
ಧೀರಂ ಧೀವರವರನವ
ನೋರಂತೊಪ್ಪಿರ್ದನಿರ್ಪ ಸಮನಂತರದೊಳ್ ೨೯

ಚಂ॥ ಘನಸಮಯಾತ್ಮನಾಥವಿರಹಾತುರೆ ಭೂವಧು ಭೂಮಿಭೃದ್ಘನ
ಸ್ತನೆ ಶಿಶಿರೋಪಸೇವನೆಯನೊಂದಿರೆ ಬಂದಿರೆ ಚೈತ್ರನಾಗಳಾ
ತನ ಬರವಿಂದೆ ಕಾಮಶಿಖಿ ಪೆರ್ಚಿರೆ ತಾಪಮನಾಂತಳೆಂಬ ಭಾ
ವನೆಯಂನೊಡರ್ಚಿ ಕಾಯ್ಪೆಸಗಿ ಬೇಸಗೆ ಪರ್ಬಿತು ಲೋಕಮೆಲ್ಲಮಂ ೩೦

ಮ॥ ಹರಿರಂಭಾಪರಿರಂಭಿಯಾದನನಿಲಾಪ್ತಂ ಪುಂಡರೀಕಾಶ್ರಯ
ಸ್ಥಿರನಾಚ್ಛಾಯೆಯೊಳೊಂದಿದಂ ಯಮನಮರ್ತ್ಯಾರಾತಿನಾಥಂ ನಿಶಾ
ಚರನಂಭೋಧಿಗತಂ ಜಲಾಧಿಪತಿಯುದ್ಯಾನಾನ್ವಿತಂ ವಾಯು ಶಂ
ಕರಮಿತ್ರಂ ಹಿಮವದ್ಗಿಶಾನಿಲಯನೀಶಾನಂ ಧೃತೇಂದ್ರಾಪಗಂ ೩೧

೨೮. "ಸೊಗಸಾಗಿ ಕಾಣುವ ದಕ್ಷಿಣ ಸಮುದ್ರತೀರದಲ್ಲಿ ಪುಳಿಂದಪುರವೆಂಬ ಪಟ್ಟಣವು ಖ್ಯಾತನಾಮದಿಂದ ಕೂಡಿ, ಬೇಡರುಗಳ ಒಗ್ಗಟ್ಟನಿಂದ ಅಗಣಿತವಾದ ಐಶ್ವರ್ಯಾಭಿವೃದ್ಧಿಯಿಂದ ಮೆರೆಯುತ್ತಿದೆ. ಆ ಪುರಕ್ಕೆ ಒಡೆಯನೂ ನಿನ್ನ ಪಾದಸೇವಕನೂ ಕಿರಾತರಿಗೆಲ್ಲ ಯಜಮಾನನೂ ಆದ ಕಾಲಮೇಘನೆಂಬುವನಿರುವನು. ೨೯. ಆ ಕಾಲಮೇಘನು ಶೂರನೂ, ಸತತ ಕಾಡಿನಲ್ಲಿ ತಿರುಗಾಡುವವನೂ, ಕಠಿಣ ಶರೀರಿಯೂ, ಬೇಟೆಯಲ್ಲಿ ಧೀರನೂ, ಬುದ್ಧಿಶಾಲಿಗಳಲ್ಲೆಲ್ಲ ಬುದ್ಧಿಶಾಲಿಯೂ ಎನಿಸಿ ಶೋಭಿಸುತ್ತಿದ್ದಾನೆ. ಹೀಗಿರುವ ಸಮಯದಲ್ಲಿ : ೩೦. ವರ್ಷಾಕಾಲವೆಂಬ ತನ್ನ ಪತಿಯ ವಿರಹದ ಕಾಮಾತುರದಿಂದ ಕೂಡಿದ ಪರ್ವತಗಳೇ ದಪ್ಪಮೊಲೆಗಳುಳ್ಳವಳಾಗಿರುವ ಭೂಮಿಯೆಂಬ ಸ್ತ್ರೀಯು ಶಿಶಿರ ಋತುವಿನ ಉಪಸೇವನೆಯನ್ನು ಹೊಂದಿದವಳಾಗಿದ್ದಳು. ಆಗ ಚೈತ್ರನು ಬರಲಾಗಿ ಆತನ ಬರುವಿಕೆಯಿಂದ ಅವಳ ಕಾಮಾಗ್ನಿಯು ಹೆಚ್ಚಿ, ತಾಪವನ್ನು ಹೊಂದಿರುವಳೋ ಎಂಬ ಭಾವನೆಯನ್ನುಂಟುಮಾಡುವವಳಾಗಿ, ವಿಶೇಷವಾದ ಬಿಸಿಲುಂಟಾಗಿ ಬೇಸಿಗೆಕಾಲವು ಲೋಕವನ್ನೆಲ್ಲ ಹಬ್ಬಿತು. ೩೧. (ಆ ಬಿಸಿಲಿನ ತಾಪದಿಂದ) ಇಂದ್ರನು ಬಾಳೆಯುಮರದ ಬುಡವನ್ನಾಶ್ರಯಿಸಿದನು. (ರಂಭೆಯೆಂಬ ದೇವಾಂಗನೆಯ ಆಲಿಂಗನದಲ್ಲಿದ್ದನು) ಅಗ್ನಿಯು ಬಿಳಿಯ ಕಮಲದ ಆಸರೆಯಲ್ಲಿ ನಿಲ್ಲುವವನಾದನು (ಪುಂಡರೀಕವೆಂಬ ದಿಗ್ಗಜದ ಆಶ್ರಯಗಲ್ಲಿ ನಿಲ್ಲುವವನಾದನು). ಯಮನು ಅದೇ ನೆರಳಿನ ಆಶ್ರಯ ಪಡೆದನು (ತನ್ನ

ವ|| ಅಂತುಮಲ್ಲದೆಯುಂ

ಕಂ|| ದೆಸೆವೆಣ್ಗಳ್ ಬಿಸುವಿಸಿಲಿಂ
ಬಸವಳಿದುಃಪೆಂದು ಸುಯ್ದು ಬಿಸುಸುಯ್ಯೆಲರೆಂ
ಬೆಸಕವಮನೊಡರ್ಚಿ ಬೀಸಿದು
ದಶದೃಶ ಸೋಷ್ಣಪ್ರಭಂಜನಂ ಬೇಸಗೆಯೊಳ್ ೩೨

ಪೊಡವಿಯುಱಿತಖಿಳಜಳಮಂ
ಕುಡಿದುಂ ತೃಷೆಯಡಗದಾ ಮರೀಚೀಜಳಮಂ
ತಡೆಯದೆ ಕುಡಿಯಲ್ ಮಿಗೆ ಬಾ
ಯ್ವಿಡುವಂತಿರೆ ಬಿರಿದ ಬೀಡೆಗಳ್ ಬಿಡದೆಸೆಗುಂ ೩೩

ಪುಡಿ ತನಿಗೆಂಡದ ಬೂದಿಯ
ಪಡಿ ನೆಲಮಟ್ಟೊಲೆಯ ತೊಲೆಯಲರ್ ಬಿರಯಿಯ ಬಾ
ಯೆಡೆಯೆಲರ್ಗೆಣೆಯರಿಗಿದು ಸರಿ
ಕಡುವಿಸಿಲೆನಿಸಿರೆ ನಿದಾಘಮೇಂ ಪಸರಿಸಿತೋ ೩೪

ತಾಯಿಯಾದ ಛಾಯಾದೇವಿಯ ಆಶ್ರಯವನ್ನು ಪಡೆದನು). ನೈಋತಿಯು ರಾತ್ರಿಯಲ್ಲಿ ಸಂಚರಿಸುವವನಾದನು. (ರಾಕ್ಷಸಸಹಜ ನಿಶಾಚರತ್ವವನ್ನು ಹೊಂದಿದನು). ವರುಣನು ಸಮುದ್ರದಲ್ಲಿ ಮುಳುಗಿದನು. ವಾಯುವು ಉದ್ಯಾನಗಳನ್ನು ಹೊಂದಿಕೊಂಡನು. ಕುಬೇರನು ಹಿಮಾಲಯಬೆಟ್ಟವಿರುವ ಉತ್ತರಭಾಗದ ಶೀತದಲ್ಲಿ ಮನೆಮಾಡಿಕೊಂಡನು. ಈಶಾನನು ಚಂದ್ರ ಮತ್ತು ಗಂಗಾನದಿಗಳನ್ನು ತಲೆಯಲ್ಲಿ ಧರಿಸಿದವನಾದನು. ವ|| ಅದೂ ಅಲ್ಲದೆ ೩೨. ದಿಕ್ಕುಗಳೆಂಬ ಸ್ತ್ರೀಯರು ಬಿಸಿಯಾದ ಬಿಸಿಲಿನ ಜಳದಿಂದ ಸಂಕಟಗೊಂಡು ಉಃಫ್ ಎಂಬುದಾಗಿ ನಿಟ್ಟುಸಿರುಬಿಟ್ಟ ಗಾಳಿಯೋ ಎಂಬ ಕ್ರಿಯೆಗೆ ಸದೃಶವಾಗಿ ಉಷ್ಣದಿಂದ ಕೂಡಿದ ಬಿಸಿಯಾದ ತೀವ್ರಮಾರುತವು ಆ ಬೇಸಿಗೆಯಲ್ಲಿ ಬೀಸಿತು. ೩೩. ಭೂಮಿಯು ಒಣಗಿ ತನ್ನಲ್ಲಿರುವ ಸಮಸ್ತ ನೀರನ್ನು ಕುಡಿದೂ ಕೂಡ ನೀರಡಿಕೆ ತೊಲಗದೆ ಅಲ್ಲಿ ಉಂಟಾದ ಮರೀಚಿಕೆಯ ನೀರನ್ನೇ ಕುಡಿಯಲು ಬಾಯಿಬಿಡುವಂತೆ ಭೂಮಿಯು ಬಿರಿತು ಬೀಡೆಗಳು ಶೋಭಿಸುತ್ತಿದ್ದವು. ೩೪. ಮಣ್ಣಿನ ಧೂಳಿಯು ತನಿಗೆಂಡದ ಮೇಲಿನ ಬೂದಿಯಂತಾಗಿತ್ತು. ನೆಲವು ಅಡಿಗೆಮಾಡಿದ ಒಲೆಗೆ ಸಮಾನವಾಗಿತ್ತು. ಗಾಳಿಯು ವಿರಹಗೊಂಡವರ ಬಾಯಿಂದ ಹೊರಹೊರಡುವ ಗಾಳಿಗೆ ಸಮಾನವಾಗಿತ್ತು. ಅತಿಯಾದ ಈ ಬಿಸಿಲು ಉರಿಗೆ ಸಮಾನವೆನಿಸಿರಲು ಆ ಬೇಸಿಗೆಯು ಏನು

ದಿನಮಣಿಮಣಿಶಾಣೋಪಲ
ವಿನಿಹಿತ ಘೃಷ್ಟಾರ್ಕಕಿರಣಖರಖಡ್ಗಲತಾ
ಜನಿತಸ್ಫುಲಿಂಗಸಂಘಮಿ
ದೆನೆ ತದ್ವಿಸ್ಫುರಿತವಹ್ನಿಕಣತತಿಯೆಸೆಗುಂ ೩೫

ವ॥ ಇಳೆ ಕಾಯ್ಪೇಱಿದುದಬ್ಧಿ ನೀರ್ದೆಗೆದುದಾಶಾದಂತಿ ಬಾಯ್ವಿಟ್ಟುವು
ರ್ಕಳಿದರ್ ದಿಗ್ವರರಂಜಿದರ್ ದಿವಿಜರುರ್ವೀಧ್ರವ್ರಜಂ ಸೀಳ್ದುದು
ಜ್ವಳಮಾದತ್ತಿನಬಿಂಬಮಂಬುಚರಮೆಲ್ಲಂ ಬೇಗೆಗೊಂಡತ್ತು ಬಾಂ
ಬೊಳೆ ಬತ್ತಿತ್ತು ಮರೀಚಿ ಪೊಣ್ಮಿದುದರಣ್ಯಂ ಬೆಂದುದಾ ಗ್ರೀಷ್ಮದೊಳ್ ೩೬

ವ॥ ಅಂತುಮಲ್ಲದೆಯುಂ

ಕಂ॥ ಅಗಶಿಖರಂ ಛಿಳಿಛಿಟಿಲೆನೆ
ಮಿಗೆ ಸಿಡಿದುದು ಧಗಧಗಸ್ವನಂ ನಿಮಿರೆ ವನಂ
ಭುಗಿಲನುರಿದುದು ಖಗವ್ರಜ
ಮೃಗತತಿ ಘರಿಘರಿಲನೆಯ್ದೆ ಬೆಂದುದು ಬಿಸಿಲೊಳ್ ೩೭

ಕೊಳದಂಬು ಬತ್ತೆ ಚುಯ್ಯೆಂ
ದೊಳಗಣ ನಳಿನಾಳಿ ಕರಿಕುವರಿಗುಮೆನುತ್ತಂ
ಜಳಜಸಖಂ ಜಳಕಿರಣಾ
ವಳಿಯಂ ಪಿಳಿದಂತೆವೊಲ್ ಮರೀಚಿಕೆ ಮೆಱೆಗುಂ ೩೮

ಪ್ರಸಾರಗೊಂಡಿತೋ ! ೩೫. ಸೂರ್ಯನೆಂಬ ರತ್ನದ ಸಾಣೆಕಲ್ಲಿನಲ್ಲಿ ಸಾಣೆಹಿಡಿಯಲ್ಪಟ್ಟ ಸೂರ್ಯಕಿರಣಗಳೆಂಬ ಖಡ್ಗಲತೆಯಿಂದ (ಲತೆಯಂತೆ ಉದ್ದವಾದ ಕಿರಣಗಳಿಂದ) ಉಂಟಾದ ಕೆಂಡದ ಕಿಡಿಗಳೋ ಇವು ! ಎನ್ನುವಂತೆ ಬಿಸಿಲುಕಾಲದಲ್ಲಿ ಉಂಟಾಗುವ ಅಗ್ನಿಕಣಗಳ ಸಮೂಹವು ಶೋಭಿಸುತ್ತಿತ್ತು. ೩೬. ಆ ಗ್ರೀಷ್ಮಕಾಲದಲ್ಲಿ ಭೂಮಿಯೆಲ್ಲ ಕಾವೇರಿ ಹೋಯಿತು. ಸಮುದ್ರವು ಬತ್ತಿಹೋಯಿತು. ಅಷ್ಟದಿಕ್ಕುಗಳಲ್ಲಿರುವ ಆನೆಗಳು ಬಾಯಿ ಬಿಟ್ಟವು. ದಿಕ್ಕುಗಳ ಅಭಿಮಾನಿದೇವತೆಗಳಾದ ಇಂದ್ರಾದಿಗಳು ಗರ್ವಭಂಗಹೊಂದಿದರು. ದೇವತೆಗಳು ಅಂಜಿದರು. ಪರ್ವತಸಮೂಹವು ಸೀಳುಬಿಟ್ಟಿತು. ಸೂರ್ಯಮಂಡಲವು ಉಜ್ವಲಗೊಂಡಿತು. ಜಲಚರ ಜೀವರಾಶಿಗಳೆಲ್ಲ ಸುಡತೊಡಗಿದವು. ದೇವಗಂಗೆ ಬತ್ತಿತು. ಜಲದಂತೆ ಭೂಮಿಯಲ್ಲಿ ಭ್ರಮೆಯುಂಟುಮಾಡುತ್ತ ತೋರುವ ಬಿಸಿಲ್ಗುದುರೆಯು ಉಂಟಾಯಿತು. ಅರಣ್ಯವೆಲ್ಲ ಸುಟ್ಟಿತು. ವ॥ ಅದೂ ಅಲ್ಲದೆ ೩೭. ಪರ್ವತದ ತುದಿಗಳು ಛಿಳಿ ಛಿಣಿಲೆಂದು ವಿಶೇಷವಾಗಿ ಸಿಡಿಯತೊಡಗಿದವು. ಧಗ ಧಗವೆನ್ನುವ ಧ್ವನಿಯು ಉಂಟಾಗುತ್ತಿರಲು, ಅರಣ್ಯವು ಭುಗಿಲೆಂದು ಉರಿಯತೊಡಗಿತು. ಪಕ್ಷಿಗಳ ಸಮೂಹವೂ, ಅರಣ್ಯಮೃಗಗಳ ಸಮೂಹವೂ ಘುರಿ ಘುಡಿಲೆನ್ನುತ್ತ ಆ ಬಿಸಿಲಿನಲ್ಲಿ ಸುಟ್ಟುಹೋದವು. ೩೮. ಸರೋವರದ ನೀರು ಬತ್ತಿಹೋಗಲಾಗಿ, ಚುಯ್ ಎಂದು ಆ ಸರೋವರದಲ್ಲಿರುವ ಕಮಲಗಳ ಸಮೂಹವು ಸುಟ್ಟು ಕರಿಮುರಿಯಾಗುವುದೆಂದು

ವ॥ ಮತ್ತಮಲ್ಲಿ

ಉ॥ ನೋಡಿ ಮರೀಚಿಕಾಜಲಮನಂಬುವಿದೆಂದೆಳಸುತ್ತೆ ಬಂದು ಕೈ
ನೀಡಿ ಕಲಂಕಿ ಪೊಕ್ಕು ತೆಗೆದಿಕ್ಕುತೆ ಪುಷ್ಕರಮಂ ನಿಜಾಸ್ಯದೊಳ್
ಬಾಡಿ ಬಳಲ್ದು ಬಲ್ಪಳಿದು ಘೀಳಿಡುತಂಗದೊಳೆತ್ತಲುಂ ಪುಗುಳ್
ಮೂಡಿರೆ ಬೀಳ್ದುದರ್ಕಕರಕಲ್ಪಿತಸಂಜ್ವರನೊಂದು ಕುಂಜರಂ ೩೯

ಕಂ॥ ಬಾಯ್ಬಿಡುತೆಯ್ದಿದ ಮಱಿಯಂ
ತಾಯ್ಬಿಡಿ ನಡೆನೋಡಿ ಬಾಡಿ ತಾಪಂ ಮೊದಲಿಂ
ದಯ್ವಡಿ ನೆಗಳ್ದಿರೆ ತೆಗೆದೇಂ
ಕಯ್ವಿಡಿದೂಡಿದುದೊ ಸೋಷ್ಣಜಳಮಂ ಬಸುಱಿಂ ೪೦

ನಡುನೆತ್ತಿ ಬಿರಿದು ಮುತ್ತುಗ
ಳೊಡೆದುಚ್ಚಳಿಸುತ್ತೆ ಪಾರೆ ಪನಿಗೆತ್ತು ನವಿಲ್
ತುಡುಕಿ ನಿಜಚಂಚುವಂ ಸುಡೆ
ವಿಡುಕಿದುದು ನಿದಾಘತಪ್ತ ಕರಿಸಂಕುಳದಾ ೪೧

ತಳಮಂ ಸುಡೆ ನೆಲನಡಿಯಿಡ
ಲಳವಲ್ಲದೆ ನಿಂದ ಸಿಂಧುರಂಗಳ ನೆಳಲೊಳ್
ಬಳಿಗೊಂಡು ನಿಂದು ಬಿಸಿಲುಪ
ಟಳಮಂ ಕಳಿಗುಂ ಕ್ಷಣಂ ಮೃಗೇಂದ್ರಕದಂಬಂ ೪೨

ಸೂರ್ಯನು ಜಲದ ಕಾಂತಿಯ ಕಿರಣಗಳನ್ನು ಬಿಟ್ಟಿರುವನೋ ಎಂಬಂತೆ ಬಿಸಿಲ್ಗುದುರೆಗಳು ಮೆರೆಯುತ್ತಿದ್ದವು. ವ॥ ಮತ್ತು ಅಲ್ಲಿ ೩೯. ಒಂದು ಆನೆಯು ಆ ಬಿಸಿಲುಗುದುರೆಯನ್ನು ನೀರೆಂದು ಬಯಸಿ ಬಂದು ತನ್ನ ಸೊಂಡಿಲನ್ನು ಚಾಚಿ ಕಲಕಾಡುತ್ತ ಹೊಕ್ಕು ಸೊಂಡಿಲನ್ನು ತನ್ನ ಬಾಯಲ್ಲಿ ಇಟ್ಟುಕೊಳ್ಳುತ್ತಿರಲು, ದ್ರವವಿಲ್ಲದೆ ಬಾಡಿ ಬಳಲಿ ಬಲಗುಂದಿ, ಘೀಳೆಂದು ಕೂಗಿಕೊಂಡು ಶರೀರದಲ್ಲೆಲ್ಲ ತಾಪವು ಅಧಿಕಗೊಳ್ಳಲಾಗಿ ಸೂರ್ಯ ಕಿರಣಗಳಿಂದ ಕಲ್ಪಿತವಾದ ವಿಶೇಷ ತಾಪರೂಪವಾದ ಜ್ವರದಿಂದ ನೆಲಕ್ಕೆ ಬಿದ್ದಿತು. ೪೦. (ಬಿಸಿಲಿನ ಜಳದಿಂದ) ಬಾಯಿಬಿಡುತ್ತ ಸಮೀಪಕ್ಕೆ ಬಂದ ಮರಿಯಾನೆಯನ್ನು ತಾಯಿ ಆನೆಯು ಚೆನ್ನಾಗಿ ನೋಡಿ, ಬಾಡಿ ತಾಪವು ಮೊದಲಿಗಿಂತ ಐದುಪಟ್ಟು ಹೆಚ್ಚಾಗಲು, ತನ್ನ ಬಸುರಿನಲ್ಲಿರುವ ಬಿಸಿಯಾದ ಜಲವನ್ನೇ ಸೊಂಡಿಲಿನಿಂದ ತೆಗೆದು ಕುಡಿಸಿತು. ೪೧. ಬಿಸಿಲಿನ ತಾಪದಿಂದ ಆನೆಗಳ ಸಮೂಹದ ಆ ನಡುನೆತ್ತಿಯು ಬಿರಿತು, ಅಲ್ಲಿರುವ ಮುತ್ತುಗಳು ಸಿಡಿದು ಮೇಲಕ್ಕೆ ನೆಗೆದು ಬೀಳುತ್ತಿರಲು, ನವಿಲು ಅವನ್ನು ನೀರ ಹನಿಯೆಂದು ತಿಳಿದು ಚಂಚುವಿನಿಂದ ತುಡುಕಲಾಗಿ ಚಂಚುವು ಸುಟ್ಟು ಮಿಡುಕಾಡಿದುವು. ೪೨. ಭೂಮಿಯು ತಳವು ಸುಡುತ್ತಿರಲು ಅಡಿಯಿಡಲು ಶಕ್ಯವಿಲ್ಲದ ಸಿಂಹಗಳ ಸಮೂಹವು ನಿಂತುಕೊಂಡಿದ್ದ ಆನೆಗಳ ನೆಳಲಿಗೆ ಬಂದು ನಿಂತುಕೊಂಡು ಕ್ಷಣಕಾಲ ಬಿಸಿಲಿನ ಉಪಟಳ

ಕಡುಗಾದ ಪೆಡೆವಣೆಗೆ ತಲೆ
ಗೊಡಪುತ್ತಂ ಭಯಮನುಳಿದು ಪುಗೆ ಸೋಗೆಯ ಸೊಂ
ಪಡರ್ದ ಪೊಸಪೀಲಿಯೊಳ್ ಫಣಿ
ಬಿಡದುರಿದುದದೆಂದೊಡದನದಾರ್ ಬಣ್ಣಿಸುವರ್ ೪೩

ಪೆಡೆಯುಂ ಕೊಡೆಯಂತಿರೆ ಪಿಡಿ
ದಡಿಯೊಳ್ ನೆೞಲಿಂದ ಮೞಿಯನಾನನದೆಲರಿಂ
ಬಿಡದಾಶ್ವಾಸಿಸಿ ಮಱಿಕಂ
ಬಡೆದೋವುತ್ತಿರ್ದುದುರಗಿ ಪರ್ಬಿದ ಬಿಸಿಲೊಳ್ ೪೪

ಅಳುರ್ವ ಬಿಸಿವಿಸಿಲ ಬೇಗೆಯ
ನಿಳೆ ಸೈರಿಸಲಾಱದಭ್ರ ಗಂಗಾಜಳದೊಳ್
ಮುಳುಗಲಿರದೇಳ್ದವೋಲ್ ಕಂ
ಗೊಳಿಸಿತಃ ಸುಟ್ಟುರೆ ಸರೇಣು ಪಸರಿಸೆ ನಭದೊಳ್ ೪೫

ಚಂ॥ ಸಿಡಿದುದು ದಂತಿದಂತಮದು ಸಂಗಡಮಾಗಿರೆ ಕುಂಭಮೌಕ್ತಿಕಂ
ಪೆಡೆವಣಿ ಪಾಱೆ ನೆತ್ತಿ ಬಿರಿದತ್ತಹಿವೃಂದದ ಸಿಂಹಕೇಸರಂ
ಬಿಡದುರಿದತ್ತು ಪಕ್ಕಿಗಳ ನುಣ್ಗಱಿ ಸೀದುದರಣ್ಯದಲ್ಲಿ ಸಂ
ಗಡಿಸಿದ ರುಕ್ಷರೋಮತತಿ ಬೆಂದುದು ಬೇಸಗೆಯುಗ್ರಮೆಂತುಟೋ ೪೬

ವನ್ನು ಕಳೆದುಕೊಳ್ಳುತ್ತಿದ್ದವು. ೪೩. ಹಾವಿನ ಹೆಡೆಯೊಳಗಿನ ರತ್ನವು ವಿಶೇಷವಾಗಿ ಕಾಯ್ದು ಹೋಯಿತು. ಆ ಹಾವಿಗೆ ತಲೆ ಕೊಡವುತ್ತ, ಭಯವನ್ನೂ ಕೂಡ ಮರೆತು ನವಿಲು ಗಳ ಸೊಂಪಾಗಿ ಬೆಳೆದ ಹೊಸಗರಿಗಳ ಮಧ್ಯದಲ್ಲಿ ಹೊಕ್ಕರೂ (ರತ್ನವು ತಣ್ಣಗಾಗದೆ) ಆ ಹಾವು ಉರಿದು ಹೋಯಿತು. ೪೪. ಆ ಹಬ್ಬಿದ ಬಿಸಿಲಿನಲ್ಲಿ ಒಂದು ಹೆಣ್ಣು ಸರ್ಪವು ಅಡಿಯಲ್ಲಿ ನಿಂತ ಮರಿಗೆ ತನ್ನ ಹೆಡೆಯನ್ನೇ ಛತ್ರಿಯ ಹಾಗೆ ಹಿಡಿದು ತನ್ನ ಮುಖದ ಗಾಳಿಯನ್ನು ಊದಿ ಸಂತೈಸಿ ಮರುಕಗೊಂಡು ಸಂರಕ್ಷಿಸುತ್ತಿತ್ತು. ೪೫. ಅಡರಿರುವ ಬಿಸಿಯಾದ ಬಿಸಿಲಿನ ಬೇಗೆಯನ್ನು ಭೂಮಿಯು ಸೈರಿಸಲಾರದೆ ಆಕಾಶಗಂಗಾಜಲದಲ್ಲಿ ಮುಳುಗುವುದಕ್ಕಾಗಿ ಮೇಲಕ್ಕೆ ನೆಗೆಯುತ್ತಲಿದೆಯೋ ಎನ್ನುವಂತೆ ಧೂಳಿಯಿಂದ ಸಮೇತ ವಾದ ಸುಂಟರಗಾಳಿಯು ಆಕಾಶದಲ್ಲಿ ಕಂಗೊಳಿಸಿತು. ೪೬. ಕಾಡಿನಲ್ಲಿ ಸೇರುವೆ ಗೊಂಡಿದ್ದ ಆನೆಯ ಕೋರೆಗಳು ಸಿಡಿದುವು. ಅದರ ಸಂಗಡಲೇ ಕುಂಭಸ್ಥಳದ ಮುತ್ತು ಗಳೂ ಸಿಡಿಯುತ್ತಿದ್ದವು. ಹಾವುಗಳ ಸಮೂಹದ ಹೆಡೆಯಲ್ಲಿರುವ ರತ್ನವು ಕಾಯ್ದು ಸಿಡಿಯಲು (ಅವುಗಳ) ನೆತ್ತಿಯು ಬಿರಿದುಹೋಯಿತು. ಸಿಂಹಗಳ ಕೇಸರಗಳು ಸುಟ್ಟು ಹೋದವು. ಪಕ್ಷಿಗಳ ನುಣುಪಾದ ಗರಿಗಳು ಕರಿಕುಗೊಂಡವು. ಕರಡಿಗಳ ಮೈಕೂದಲು ಗಳು ಸುಟ್ಟುಹೋದವು. (ಆಹಾ !) ಆ ಬೇಸಿಗೆಯ ಉಗ್ರತೆ ಹೇಗಿತ್ತೊ ! ೪೭. ಬೇಸಿಗೆ

ಮ॥ ಹಿಮತಾಂಬೂಲರಸಾರುಣಾಧರಮುದಂಚದ್ಘರ್ಮವಾರ್ಬಿಂದುಮಿ
ಶ್ರಮುಖಂ ಕೌಸುಮತಾಲವೃಂತಪವನವ್ಯಸ್ತಾಳಕಂ ಚಂದನಾಂ
ಕಮಹೋತ್ತುಂಗಕುಚಂ ನಿತಂಬಶಿಥಿಲಕ್ಷೌಮಾಂಬರಂ ನವ್ಯ ಪು
ಷ್ಪಮನೋಜ್ಞಾಭರಣಂ ನಿದಾಘದೊಳೆ ಕಣ್ಗಿಂಬಾಯ್ತು ಕಾಂತಾಜನಂ ೪೭

ಕೊಳದಬ್ಜವ್ರಜಮಂ ಕರಂ ಕೊರಗಿಪಂ ಸೂರಂ ಸಖಂ ತಾಪಮಿ
ತ್ತಿಳೆಯೊಳ್ ತಾನಿದು ಕಾಲದೊಂದು ಗುಣಮಕ್ಕುಂ ನೋಡಿಮೆಂದಾಯುವಾ
ಸ್ಯಳ ಸತ್ಪಂಕಜಮುಳ್ಕಿಬಂದು ನವಯೋಷಿದ್ವಕ್ತ್ರಪೂರ್ಣೇಂದುವಂ
ಕೆಳೆಗೊಂಡತ್ತೆನೆ ಮಿತ್ರನಾದೊಡಮದೇಂ ಕಾಯ್ವಾತನಂ ಕೂರ್ಪರಾರ್ ೪೮

ಚಂ॥ ಹಿಮಕರಕಾಂತಿ ಕಾಂತಹಿಮಮಿಶ್ರಿತ ಚಂದನಲೇಪಲಿಪ್ತ ಕುಂ
ಕುಮನವಕರ್ದಮಾರ್ದ್ರ ರಮಣೀ ಕಮನೀಯ ಘನಸ್ತನಂಗಳಂ
ಸಮುದಿತ ಮಾನಮಾನಸರೊಱಲ್ದಮರ್ದಪ್ಪಿ ತದಂಗಯುಷ್ಟಿ ಸಂ
ಕ್ರಮಿತ ನಿಜಾಂಗರಲ್ಲಿ ಕಳೆವರ್ ಪೊಸಬೇಸಗೆಯೊಂದು ಬೇಗೆಯಂ ೪೯

ಯಲ್ಲಿ ಸ್ತ್ರೀಯರುಗಳು ಪಚ್ಚಕರ್ಪೂರ ಮಿಶ್ರಿತ ತಾಂಬೂಲರಸದಿಂದ ಕೆಂಪಾದ ತುಟಿಗಳುಳ್ಳವರಾಗಿಯೂ, ಬೆವರೆದ್ದು ಆ ನೀರಿನ ಹನಿಗಳಿಂದ ಮಿಶ್ರಿತವಾದ ಮುಖವುಳ್ಳವರಾಗಿಯೂ, ಹೂವುಗಳಿಂದ ಮಾಡಿದ ಬೀಸಣಿಗೆಯ ಬೀಸುವಿಕೆಯಿಂದ ಅಸ್ತವ್ಯಸ್ತಗೊಂಡ ಮುಂಗುರುಳುಗಳಿಂದ ಕೂಡಿದವರಾಗಿಯೂ, ಎತ್ತರವಾದ ಕುಚಪ್ರದೇಶಕ್ಕೆ ಶ್ರೀಗಂಧವನ್ನು ಲೇಪನಮಾಡಿಕೊಂಡವರಾಗಿಯೂ, ಕಟಿಪ್ರದೇಶದಲ್ಲಿ ಉಟ್ಟ ಪಟ್ಟೆ ವಸ್ತ್ರವನ್ನು ಜಾರಿಸಿಕೊಂಡವರಾಗಿಯೂ, ಹೊಸ ಹೊಸ ಹೂವುಗಳಿಂದ ಮಾಡಿದ ಆಭರಣಗಳನ್ನು ತಣ್ಣಗಾಗುವಂತೆ ಧರಿಸಿರುವವರಾಗಿಯೂ ಕಣ್ಣಿಗೆ ಮನೋಹರವಾಗಿ ಕಾಣುವಂಥವರಾಗಿದ್ದರು. ೪೮. ಕಮಲಮಿತ್ರನಾದ ಸೂರ್ಯನೇ ಸರೋವರದಲ್ಲಿರುವ ಕಮಲಗಳನ್ನು ಕೊರಗಿಹೋಗುವಂತೆ ಮಾಡಿದನು. 'ಇದು ಕಾಲದ ಒಂದು ಗುಣದ ಮಹಿಮೆಯೇ ಆಗಿರುವುದು, ನೋಡಿರಿ' ಎಂದು, ಯುವಕಜನಗಳ ಮುಖವೆಂಬ ಕಮಲಗಳು ಹೆದರಿಬಂದು ನೂತನ ಪ್ರಾಯದ ಸ್ತ್ರೀಯರ ಮುಖವೆಂಬ ಚಂದ್ರನ ಸ್ನೇಹವನ್ನು ಮಾಡಿತ್ತು. ಮಿತ್ರನಾದರೂ ತಾಪವನ್ನುಂಟುಮಾಡುವವನಲ್ಲಿ ಯಾರು ಪ್ರೀತಿಯನ್ನು ತೋರಿಸುತ್ತಾರೆ ? ೪೯. ಚಂದ್ರನ ಕಿರಣಗಳ ಕಾಂತಿಯಂತೆ ಕಾಂತಿಗೊಂಡಿರುವ ಪಚ್ಚಕರ್ಪೂರ ಮಿಶ್ರಿತವಾದ ಶ್ರೀಗಂಧದಿಂದ ಬಳಿಯಲ್ಪಟ್ಟ (ಮತ್ತು) ಕೇಸರಿ ನೂತನವಾದ ದೇವಕರ್ದಮ ಯಕ್ಷಕರ್ದಮಾದಿ ಸುಗಂಧದ್ರವ್ಯಗಳಿಂದ ಬಳಿಯಲ್ಪಟ್ಟು ಆರ್ದ್ರಗೊಂಡಿರುವ ಸ್ತ್ರೀಯರುಗಳ ಮನೋಹರವಾದ ದೊಡ್ಡ ಕುಚಗಳನ್ನು ಸಂತೋಷದಿಂದ ಕೂಡಿದ ಮನಸ್ಸುಳ್ಳವರಾದ ಜನರು ಪ್ರೀತಿಯಿಂದ ಅಪ್ಪಿಕೊಂಡವರಾಗಿ, ಅವರ ಸುಂದರ ದೇಹದ ಆಶ್ರಯದಲ್ಲಿರುವ ತಮ್ಮ ದೇಹವುಳ್ಳವರಾಗಿ ಆ ಹೊಸಬೇಸಗೆಯ ಬೇಗೆಯನ್ನು

ಮ॥ಸ್ರ॥ ಗಿರಿಶೃಂಗೋತ್ತುಂಗ ಚಂಚಚ್ಚಟುಲಖರರುಚಿಗ್ರಾವದಗ್ರಂಗಳೊಳ್ ನಿಂ
ದುರುಕಾಂತಾರಾಂತರಾಳ ಪ್ರಭವದವಭಯಭ್ರಾಂತ ನಾನಾಮೃಗೌಘಂ
ನೆರೆದೆತ್ತಂ ನಿಂದು ತಾಪಂಗಳೆದಿರೆ ಬಳಿಯೊಳ್ ತತ್ತಪಸ್ತೇಜಮೆಂಬಂ
ತಿರೆ ಪರ್ಬಿರ್ದರ್ಕತೇಜಂ ಮೆಱೆದಿರಘಹರಧ್ಯಾನಸಾಂದ್ರರ್ ಮುನೀಂದ್ರರ್ ೫೦

ವ॥ ಇಂತಳವಿಗಳಿದಳುರ್ದ ಘನನಿದಾಘಕಾಲದೊಳ್ ಕಾಲನಿಭ ಕಾಲಮೇಘಂ ಕಾಲ ಮೇಘಂಗಳೆ ಮನುಜರೂಪುವಡೆದಂತೆಸೆವತಿಬಳರೆನಿಪ ಕಿರಾತರ್ವೆರಸು ಬೇಂಟೆವೋಗಲೆಂದು ಸಮದ ಸಮುತ್ಸಕಚಿತ್ತನಾಗಿ

ಮ॥ ಸ್ರ॥ ಸುಲಿಪಲ್ ಕೊಂಕಿರ್ದ ಪುರ್ಬಂಬುದನಿಭತನು ಕೆಂಗಣ್ಗಳೊಳ್ ಮೀಸೆ ಚೆಲ್ವಾ
ಗೆ ಲಸನ್ಮತ್ತೇಭಮುಕ್ತಾಭರಣಮೆಸೆಯೆ ಕೂರ್ಪಾಸಮಂ ತೊಟ್ಟು ಕಟ್ಟಿ
ತ್ತೆ ಲತಾಸಂದೋಹದಿಂ ಕೇಶಮನಮರೆ ಧನುರ್ಬಾಣಮಂ ತಾಳ್ದು ಕಿರ್ಪಿ
ನಲವಿಂ ಮೆಟ್ಟುತ್ತೆ ಕೂರ್ನಾಯ್ವೆರಸಿ ಶಬರರೊಂದಾಗಿ ಬಂದಂ ಪುಳಿಂದಂ ೫೧

ಕಳೆಯುತ್ತಿದ್ದರು. ೫೦. ಪರ್ವತಶೃಂಗಗಳ ತುತ್ತತುದಿಯಲ್ಲಿ ಪ್ರಕಾಶಮಾನವಾಗಿ ಹೊಳೆಯುತ್ತಿರುವ ತೀಕ್ಷ್ಣವಾದ ಕಾಂತಿಯಿಂದ ಕೂಡಿದ ಬಂಡೆಗಳ ಅಗ್ರಭಾಗದಲ್ಲಿ ನಿಂತು, ಪಾಪನಾಶಕನಾದ ಪರಮಾತ್ಮನ ಧ್ಯಾನಾಸಕ್ತರಾದ ಮುನೀಂದ್ರರ ಸುತ್ತಲೂ ಆ ಅರಣ್ಯ ಮಧ್ಯದಲ್ಲಿ ದಾವಾಗ್ನಿಯ ಭಯದಿಂದ ಭ್ರಾಂತಿಗೊಂಡಿದ್ದ ನಾನಾಜಾತಿಯ ಮೃಗ ಸಮೂಹವು ಒಟ್ಟಾಗಿ ಸೇರಿ ಆ ತಪಸ್ವಿಗಳ ಬಳಿಯಲ್ಲಿ ತಮ್ಮ ತಾಪವನ್ನು ಕಳೆದುಕೊಂಡಿರಲಾಗಿ, ಎತ್ತಲೂ ಹಬ್ಬಿರುವ ಬೇಸಿಗೆಕಾಲದ ಸೂರ್ಯನ ತೇಜಸ್ಸು ಆ ತಪಸ್ವಿಗಳ ತಪಸ್ಸಿನ ತೇಜಸ್ಸು ಎಂಬಂತೆ ಹಬ್ಬಿರಲಾಗಿ ಶೋಭಿಸುತ್ತಿದ್ದರು. ವ॥ ಹೀಗೆ ಮಿತಿ ಮೀರಿ ತುಂಬಿದ ಕಡುಬೇಸಿಗೆಯಲ್ಲಿ ಯಮನಂತಹ ಕಾಲಮೇಘನೆಂಬ ಬೇಡನು ಪ್ರಳಯಕಾಲದ ಮೋಡಗಳೇ ಮನುಷ್ಯಾಕಾರ ಪಡೆದಂತೆ ಶೋಭಿಸುವ ಮಹಾಬಲಶಾಲಿಗಳಾದಂತಹ ಬೇಡರೊಡನೆ ಬೇಟೆಯಾಡಲೆಂದು ಮದದಿಂದ ಕೂಡಿದ ಸಂತೋಷಚಿತ್ತನಾಗಿ ೫೧ ಶುಭ್ರವಾದ ಹಲ್ಲುಗಳು, ಕೊಂಕಿದ ಹುಬ್ಬು, ಮೋಡದಂತೆ ಕಪ್ಪಾದ ದೇಹ, ಕೆಂಪಾದ ಕಣ್ಣುಗಳು, ಒಳ್ಳೆಯಮೀಸೆ ಇವುಗಳಿಂದ ಚೆಲುವುಗೊಂಡು, ಆನೆಯ ಕುಂಭಸ್ಥಳದ ಮುತ್ತಿನಸರದ ಆಭರಣಗಳು ಶೋಭಿಸುತ್ತಿರಲು, ಅಂಗಿಯನ್ನು ತೊಟ್ಟುಕೊಂಡು, ಬಳ್ಳಿಗಳ ಸಮೂಹದಿಂದ ಕೂದಲುಗಳನ್ನು ಸಮನಾಗಿ ಕಟ್ಟಿಕೊಂಡವನಾಗಿ, ಬಿಲ್ಲುಬಾಣಗಳನ್ನು ಧರಿಸಿ, ಕಾಲಲ್ಲಿ ಚಪ್ಪಲಿಗಳನ್ನು ಮೆಟ್ಟಿಕೊಂಡು, ಬೇಟೆಯಲ್ಲಿ ಪಳಗಿದ ನಾಯಿಗಳೊಡನೆ ಎಲ್ಲ ಶಬರರಿಂದ ಒಂದುಗೂಡಿ ಆ ಕಾಲಮೇಘನೆಂಬ ಪುಳಿಂದನು

ವ॥ ಮತ್ತಮಾಗಳ್

ಚಂ॥ ಬಿಡುವಲೆ ಸೊರ್ಕುಮದ್ದು ಪದವಿಲ್ಮಿಡಿವಿಲ್ಲೆಲೆಯಂಬು ಮಿಟ್ಟಿ ಪೇ
ರಡಿ ಬಡಿಗೋಲ್ಮು ಪಾಕಮಿಡುಗಲ್ಲೆರೆ ಪೆರ್ಬಲೆ ಕೊಳಿಗಾಳಮಂ
ಟಿಡುವಲೆ ದೀಪದೇಣನುಡಿಗಲ್ಲಿಯಡಾಯುಧಮಡ್ಡಣಂ ಸೊಡರ್
ಗಿಡಗಮೆನಿಪ್ಪವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ ೫೨

ವ॥ ಇಂತೈತರೆ ಪುಳಿಂದಪತಿ ಪುಳಿಂದಪುರದುತ್ತರದಿಶಾಭಾಗದ ಜೀಮೂತವಸನಮೆಂಬ ಗಿರಿಯ ಸಾರ್ಕೆಗೆಯ್ತರ್ಪಿನಮಾ ಗಿರಿಯ ತಪ್ಪಲಲ್ಲಿ

ಮ॥ ಹರಹಸ್ತಾಗ್ರದವೋಲಹೀನ ಕಟಕೋಪೇತಂ ಮರುನ್ಮಾರ್ಗದಂ
ತಿರೆ ಚಂಚತ್ಖಗರಾಜರುಕ್ಷಯುತಮಂಭೋರಾಶಿಯಂತಾತ್ತ ಸಿಂ
ಧುರಸಾಟೋಪಹರಿಪ್ರಯುಕ್ತಮದು ಯಜ್ಞಾಗಾರದಂತುತ್ಕಟ
ಸ್ವರಸಂದೀಪ್ತ ಶಿಖಿದ್ವಿಜಂ ಗಹನಮೊಂದೊಪ್ಪಿತ್ತದೇಂ ಬಣ್ಣಿಪೆಂ ೫೩

ಬಂದನು. ವ|| ಮತ್ತು ಆಗ ೫೨. ಬೀಸುವ ಬಲೆ, ಪ್ರಾಣಿಗಳ ಪ್ರಜ್ಞೆ ತಪ್ಪಿಸುವ ಔಷಧ, ಪದವಿಲ್ಲು (ಪದಸಂಧಾನದಬಿಲ್ಲು), ಮಿಡಿಯುವ ಬಿಲ್ಲು, ಎಲೆಯಾಕಾರದ ತುದಿಯಿರುವ ಬಾಣ, ಮಿಟ್ಟಿ ಎಂಬ ಆಯುಧ, ನಾಯಿ, ಬಡಿಗೋಲು, ಮದ್ದುಹಾಕಿ ಸಿಡಿಸುವ ತಂಬಾಕು, ಕಲ್ಲುಬೀಸುವ ಕವಣೆ, ದೊಡ್ಡಬಲೆ, ಚೂಪಾದ ಗಾಳ, ಬೆನ್ನಂಟಿಹೋಗಿ ಬೀಸುವಬಲೆ, ಬೇಟೆಗಾಗಿ ಸಾಕಿರುವ ಜಿಂಕೆ*, ಕಲ್ಲಿಯ ಉಡಿ, ಅಡಾಯುಧವೆಂಬ ಹೆಸರಿನ ಕತ್ತಿ, ಗುರಾಣಿ, ದೀಪ ಮತ್ತು ಸಾಕಿಕೊಂಡಿರುವ ಗಿಡಗಗಳೇ ಮೊದಲಾದು ವನ್ನು ಹಿಡಿದು ಬೇಟೆಗೆ ಯೋಗ್ಯರಾದ ಬೇಡರು ಬಂದರು. ವ|| ಹೀಗೆ ಬರಲು, ಬೇಡರೊಡೆಯನು ಆ ಬೇಡರ ಪಟ್ಟಣದ ಉತ್ತರಭಾಗದ ಜೀಮೂತವಸನವೆನ್ನುವ ಗುಡ್ಡದ ಸಮೀಪಕ್ಕೆ ಬರುತ್ತಿರಲು ಆ ಗುಡ್ಡದ ಸಾನುಪ್ರದೇಶದಲ್ಲಿ ೫೩. ಅರಣ್ಯ ಪ್ರದೇಶವೊಂದು ಶೋಭಿಸುತ್ತಿತ್ತು. ಅದು ಹರನ ಹಸ್ತಾಗ್ರದಹಾಗೆ ಹಾವುಗಳ ಒಡೆಯನಾದ ಆದಿಶೇಷನೇ (ಅಹಿ + ಇನ) ಕಡಗವಾಗಿ ಉಳ್ಳದ್ದಾಗಿತ್ತು. (ಅರಣ್ಯವು) ಕುಂದಿಲ್ಲದ ತಪ್ಪಲುಪ್ರದೇಶ (ಅಹೀನ+ಕಟಕ)ದಿಂದ ಕೂಡಿತ್ತು. ಆಕಾಶಮಾರ್ಗದಹಾಗೆ ಪ್ರಕಾಶಮಾನನಾದ ಸೂರ್ಯ(ಖಗ) ಚಂದ್ರ (ರಾಜ) ನಕ್ಷತ್ರ (ರುಕ್ಷ)ಗಳಿಂದ ಕೂಡಿತ್ತು. (ಅರಣ್ಯವು) ಶೋಭಿಸುವ ಶ್ರೇಷ್ಠಪಕ್ಷಿಗಳಿಂದಲೂ, ಕರಡಿಗಳಿಂದಲೂ ಕೂಡಿತ್ತು. ಸಮುದ್ರರಾಶಿಯ ಹಾಗೆ, ಹೊಳೆಗಳ ನೀರಿನ ಸಂಗ

---

* ಈ ಜಿಂಕೆಯ ಸಹಾಯದಿಂದ ಬೇರೆ ಜಿಂಕೆಯನ್ನು ಹಿಡಿಯಲು ಸಹಾಯವಾಗುತ್ತದೆ : ಹೇಗೆಂದರೆ ತಾವು ಒಡ್ಡಿದ ಬಲೆಯ ಹತ್ತಿರವೇ ಈ ಜಿಂಕೆಯನ್ನಿಟ್ಟು ತಾವು ಮರೆಯಾಗಿ ಕುಳಿತಿರುತ್ತಾರೆ. ಇದನ್ನು ದೂರದಿಂದ ನೋಡಿದ ಜಿಂಕೆಗಳು ಇದರ ಹತ್ತಿರಕ್ಕೆ ಬಂದು ಬಲೆಯಲ್ಲಿ ಬೀಳುತ್ತವೆ ಮತ್ತು ಹುಲಿಹಿಡಿಯಲು ಬಲೆಯೊಡ್ಡಿ ಈ ಜಿಂಕೆಯನ್ನು ಕಟ್ಟಲೂ ಸಹಾಯ.

ವ॥ ಅಂತುಮಲ್ಲದೆಯುಂ

ಮ॥ಸ್ರ॥ ಪಟುಪಂಚಾಸ್ಯಾಗ್ರಪಾದೋನ್ಮುಖನಖಮುಖ ನಿರ್ಭಿನ್ನಗಂಧೇಭಕುಂಭ
ಸ್ಫುಟಕುಂಭೋನ್ಮುಕ್ತಮುಕ್ತಾಕಣಗಣಕಟದಾನಾಂಬು ಸಮ್ಮಿಶ್ರ ರಕ್ತೋ
ತ್ಕಟಧಾರಾಪಾತಪಂಕಪ್ರಗತ ಮೃಗಪದಪ್ರೇಕ್ಷಣೋಲ್ಲಾಸ ಭಿಲ್ಲೋ
ದ್ಭಟಭಾಷಾಘೋಷಮಿಶ್ರಶ್ರುತಿ ಕಟುವಿಹಗಧ್ವಾನಕಾಂತಂ ವನಾಂತಂ ೫೪

ಮ॥ ಕಟಕಂಡೂತಿ ನಿವಾರಣೈಕಮತಿ ಮತ್ತೇಭೌಘಸಂಘೃಷ್ಟ ತ
ತ್ಕಟದಾನದ್ರವಚಿಹ್ನ ಚಂದ್ರಮಣಿ ಚಂದ್ರೋದ್ಯೋತ ಸದ್ಯಸ್ಸ್ಫುರ
ತ್ಕಟಕೋಪಾಂತ ಚರತ್ಕಿರಾತವನಿತಾ ಕರ್ಣೋತ್ಪಲಾಕರ್ಷಿ ಮ
ರ್ಕಟಶಾಖಾಶ್ರಿತ ಶಾಖಿಪಾದಪಯುತಂ ಕಣ್ಗೊಪ್ಪಿತಾ ಕಾನನಂ ೫೫

ಮದ ಆಟೋಪದಿಂದಲೂ, ನಾರಾಯಣಮೂರ್ತಿಯಿಂದಲೂ ಕೂಡಿತ್ತು. (ಅರಣ್ಯವು) ಆನೆಗಳನ್ನೊಳಗೊಂಡು, ಗರ್ಜಿಸುವ ಸಿಂಹಗಳಿಂದ ಕೂಡಿತ್ತು. ಆ ಅರಣ್ಯವು–ಯಜ್ಞ ಮಂಟಪದಂತೆ_ಅಧಿಕವಾದ ಉದಾತ್ತಾನುದಾತ್ತ ಸ್ವರಿತಸ್ವರಗಳಿಂದ, ತೇಜೋ ವಿಶಿಷ್ಟವೇದೋಪನಿಷನ್ಮಂತ್ರೋಚ್ಚಾರಮಾಡುವ ಬ್ರಾಹ್ಮಣರಿಂದ ಕೂಡಿತ್ತು. (ಅರಣ್ಯವು-) ಅತಿಶಯವಾದ ಅನೇಕ ಬಗೆಯ ಮೃಗಪಕ್ಷಿಗಳ ಧ್ವನಿವಿಶೇಷಗಳಿಂದಲೂ, ನವಿಲು ಮತ್ತು ಇನ್ನಿತರ ಪಕ್ಷಿ ವಿಶೇಷಗಳಿಂದಲೂ ಕೂಡಿ ಒಪ್ಪುವಂತಿತ್ತು. ಅಂಥ ಅರಣ್ಯವನ್ನು ಏನೆಂದು ಬಣ್ಣಿಲಿ! ವ॥ ಅದೂ ಅಲ್ಲದೆ_ ೫೪. ಅತ್ಯಂತ ಚುರುಕಾದ ಸಿಂಹಗಳ ಮುಂಗಾಲುಗಳ ಉಬ್ಬಿನಿಂತ ಉಗುರುಗಳ ತುದಿಗಳಿಂದ ಸೀಳಲ್ಪಟ್ಟ ಆನೆಯ ಸ್ಫುಟವಾದ ಕುಂಭಸ್ಥಳಗಳಿಂದ ಉದುರಿದ ಮುತ್ತುಗಳ ಕಣಗಳ ಸಮೂಹದಿಂದಲೂ, ಆ (ಆನೆಗಳ) ನೆತ್ತಿಯಿಂದ ಮದೋದಕ ಮಿಶ್ರವಾದ ರಕ್ತದ ವಿಶೇಷವಾಗಿ ಸುರಿಯುವಿಕೆಯಿಂದ ಕೆಸರುಗೊಂಡ ನೆಲದಲ್ಲಿ ಜಿಂಕೆಯ ಹೆಜ್ಜೆ ಮೂಡಿದ್ದುವು. ಆ ಹೆಜ್ಜೆಗಳ ಗುರುತುಗಳನ್ನು ಕಂಡು ಉಲ್ಲಾಸದಿಂದ ಮಾತನಾಡಿಕೊಳ್ಳುತ್ತಿದ್ದ ಮಾತಿನ ಧ್ವನಿಯಿಂದ ಮಿಶ್ರಗೊಂಡು ಕಿವಿಗೆ ಅತಿಕಟುವಾದ ಪಕ್ಷಿಗಳ ಚೀರಾಟದ ಧ್ವನಿಯಿಂದ ಕಾಂತಿಗೊಂಡುದಾಗಿ ಆ ಅರಣ್ಯಪ್ರದೇಶವಿತ್ತು. ೫೫. ಕಪೋಲಗಳ ಕಡಿತವನ್ನು ನಿವಾರಣೆಗೊಳಿಸಿಕೊಳ್ಳುವ ಏಕೈಕ ಬುದ್ಧಿಯ ಮದಿಸಿದ ಆನೆಗಳಿಂದ ತಿಕ್ಕಲ್ಪಟ್ಟು ಆ ಆನೆಗಳ ನೆತ್ತಿಯ ಮದೋದಕದ್ರವದ ಚಿಹ್ನೆಯಿಂದ ಕೂಡಿರುವ ಚಂದ್ರಕಾಂತಶಿಲೆಗಳೆಂಬ ಚಂದ್ರನ ಕಿರಣಗಳಿಂದ ಆಗತಾನೆ ಅರುಳುತ್ತಿರುವ ನೈದಿಲೆಗಳನ್ನು ಕಿವಿಯಲ್ಲಿ ಧರಿಸಿ ಆ ತಪ್ಪಲುಪ್ರದೇಶದಲ್ಲಿ ತಿರುಗಾಡುತ್ತಿರುವ ಬೇಡರುಗಳ ಸ್ತ್ರೀಯರಿಂದಲೂ, ಕೊಂಬೆಗಳಲ್ಲಿ ಕುಳಿತಿರುವ ಕೋತಿಗಳಿಂದ ಕೂಡಿರುವ ಗಿಡಗಳಿಂದಲೂ ಕೂಡಿ

ವ|| ಅದಲ್ಲದೆಯುಮಡಸಿ ನಿಡಿದೆನಿಸಿ ಕಡುವೆಳೆದುದ್ದಂಡ ತಾಳತರುಗಳ ಚೋಳಿಕೆಯಿಂ ಗಾಳಿಯುಲೆಪದಿಂ ಘಳಿಲೆನೆ ಪಾಸಱೆಯೊಳೊಡನೆ ಬೀಳ್ವೊಡೆದ ಮಧುಘಟ ಪಟಲ ಪಕ್ವಫಳ ಪ್ರತಾನದ ರಸಂಗಳ್ ಸಂಗಳಿಸಿ ಪರಿದಾಗಳದಂ ಕಂಡು ಕುಡಿದು ನೆಕ್ಕಿಮಿಕ್ಕು ಸೊಕ್ಕೇಱೆ ಪಡಿನೆಳಲಂ ಪಳಿಕಿನೊಡ್ಡುಂಗಲ್ಲೊಳ್ ಕಂಡು ಪೆಣ್ಗೋಡಗಮೆಂದು ಪತ್ತೆಸಾರ್ದುಱುಗಿಸಿ ನೋಡಿ ಒಱೆಯಂ ಬೆರಂಟ ಪುರ್ಬಿಕ್ಕಿ ಪಲ್ಲಂ ಕಿಱಿದು ಪಱೆಕ್ಕೆಂದು ಝಂಕಿಸಿ ಸಮಾನ ವಿಕೃತಿಗಂಡು ಸರ ಸರನೆ ಸಾರೆವೇದು ಕಿಲದೊಳಿಕ್ಕಿರ್ದಾನೆದಲೆಯ ನೆತ್ತರ್ಪುದಿದ ಮುತ್ತಂ ದಾಳಿಂಬಬೀಜಂಗೆತ್ತಿ ಕಳ್ಕನೆ ಮುಕ್ಕಲೊಡನೆ ಪಲ್ಗಳ್ಮುಕ್ಕುವೋಗೆ ನೋಡಿಮೆಂಬಂತೆ ಬೋಡುವಾಯಂ ತೆಱೆದೇಡಿಪ ಕೋಡಗಂಗಳಂ ನೀಡುಂನೋಡಿ ನಗೆಗಡಲೊಳೋಲಾಡುವ ಬೇಡವೆಣ್ಗಳಿಂ ಕರಿಕರಾಗ್ರದಿಂ ಮುಱಿದ ತಳಿರ ತದುಕಿನ ಮರದ ನಿಡುಗೋಡೊಳಱೆಯದೆಱಗಿ ಮಱೆವೆರಸಿ ಕುಳ್ಳಿರ್ದು ಪಸಿಯ ಪಗಿನದೊಳ್ ಕಾಲ್ ಜಿಗಿಲ್ತು ತಳ್ಳಂಕಂಗೊಳ್ವ ಸಮಯದೊಳ್ ತುಟ್ಟತುದಿವರೆಗಂ ಸುರ್ಬುಗೊಂಡು ಪರ್ಬಿದ ಕರ್ಬಳಿಯ ಪೆರ್ಬಳ್ಳಿಯ ಬಳಿಯನಡರ್ದು ಪಿಡಿಯಲೆಳಸಿ ಘಳಿಲನೆ ಸಾರೆವರ್ಪ ಘೋರಲುಬ್ಧಕನಂ ಕಂಡಗಿದು ನೆಗೆಯಲುಜ್ಜುಗಿಸಿ ಪಕ್ಕಮಂ ಬಿದಿರ್ದು ಪಾರಲಳ

ಆ ಅರಣ್ಯವು ಶೋಭಿಸುತ್ತಿತ್ತು. ವ|| ಅದೂ ಅಲ್ಲದೆ ದಟ್ಟವಾಗಿಯೂ ಉದ್ದವಾಗಿಯೂ ಬೆಳೆದ ಎತ್ತರವಾದ ತಾಳೆಮರಗಳ ತುದಿಯಿಂದ ಗಾಳಿಯ ಹೊಡೆತದ ಕಾರಣವಾಗಿ ಅಲ್ಲಿ ಕಟ್ಟಿದ್ದ ಹೆಂಡದ ಮಡಕೆಗಳ ಸಮೂಹವು ಕೆಳಗಿದ್ದ ಕಲ್ಲಿನ ಮೇಲೆ ಬಿದ್ದು ಘಳಿಲ್ಲೆಂದು ಒಡೆದು ಚೆಲ್ಲಿದ ಹೆಂಡದೊಡನೆ, ಮಾಗಿದ ಹಣ್ಣುಗಳ ಸಮೂಹದ ರಸವೂ ಕೂಡಿ ಹರಿಯು ತ್ತಿರಲು ಅದನ್ನು ಕೋತಿಗಳು ಕಂಡು ವಿಶೇಷವಾಗಿ ಕುಡಿದು ನೆಕ್ಕಿ ಮತ್ತುಗೊಂಡು ತಮ್ಮ ಪ್ರತಿಛಾಯೆಯನ್ನು ಸ್ಫಟಿಕಶಿಲೆಯಲ್ಲಿ ಕಂಡು ಅದನ್ನೇ ಹೆಣ್ಣುಕಪಿಯೆಂದು ಹತ್ತಿರಕ್ಕೆ ಹೋಗಿ ದಿಟ್ಟಿಸಿನೋಡಿ ಬರಿಯ ಬೆರಳಾಡಿಸಿ, ಹುಬ್ಬುಗಂಟಿಕ್ಕಿ, ಹಲ್ಲುಕಿರಿದು, ಹರ್‍ರೆಂದು ಅಣಕಿಸಿ, ತನಗೆ ಸಮಾನವಾದ ಆಕಾರವನ್ನೇ ಕಂಡು ಸರಸರನೆ ಹೊರಟು ಬಂದು, ಪಕ್ಕದಲ್ಲೊಂದು ಕಡೆ ಉದುರಿಬಿದ್ದಿದ್ದ ಆನೆಯ ಕುಂಭಸ್ಥಳದ ರಕ್ತಲೇಪಿತವಾದ ಮುತ್ತುಗಳನ್ನು ದಾಳಿಂಬರೆ ಬೀಜಗಳೆಂದು ತಿಳಿದು ಅವನ್ನು ಆರಿಸಿಕೊಂಡು ತಟ್ಟನೆ ತಿನ್ನಲಾಗಿ ಹಲ್ಲುಗಳು ಮುರಿದುಹೋದುವು. (ಅಂಥ) ಬೋಡುಬಾಯನ್ನೇ ತೆರೆದು ನೋಡಿರೆಂಬ ಹಾಗೆ ಅಣಕಿಸುವ ಕೋತಿಗಳನ್ನು ದಿಟ್ಟಿಸಿನೋಡುತ್ತ ನಗೆಗಡಲಲ್ಲಿ ಮುಳು ಗಿರುವ ಬೇಡರಸ್ತ್ರೀಯರಿಂದಲೂ, ಆನೆಯ ಸೊಂಡಿಲತುದಿಯಿಂದ ಮುರಿಯಲ್ಪಟ್ಟ ತಳಿರ ತೊಂಗಲಿನಿಂದ ಕೂಡಿದ ಮರಗಳ ಸೆಳೆಗೊಂಬೆಗಳಲ್ಲಿ ತಿಳಿಯದೆ ತಮ್ಮ ಮರಿಗಳ ಸಮೇತ (ಪಕ್ಷಿಗಳು) ಕುಳಿತುಕೊಂಡಿದ್ದವು. ಹಸಿಯ ಮರದ ಅಂಟಿನಲ್ಲಿ (ಅವುಗಳ) ಕಾಲುಗಳು ಸಿಕ್ಕಿಕೊಂಡಿದ್ದವು. (ಅಂತು ಸಿಕ್ಕಿಕೊಂಡ ಕಾಲುಗಳನ್ನು ಬಿಡಿಸಿಕೊಳ್ಳಲಾರದೆ) ಸಂಕಟ ಪಡುತ್ತಿರುವ ಸಮಯದಲ್ಲಿ, ತುತ್ತತುದಿಯವರೆಗೆ ದಟ್ಟವಾಗಿ ಹಬ್ಬಿದ್ದ ಕಬ್ಬಳಿಯ ದೊಡ್ಡ ಬಳ್ಳಿಗಳನ್ನು ಹಿಡಿದು ಅಡರಿಕೊಂಡು ಮೇಲೇರಿ, ತಮ್ಮನ್ನು ಹಿಡಿಯಲು ಬರುತ್ತಿ

ವ॥ ಅಂತುಮಲ್ಲದೆಯುಂ

ಮ॥ಸ್ರ॥ ಪಟುಪಂಚಾಸ್ಯಾಗ್ರಪಾದೋನ್ಮುಖನಖಮುಖ ನಿರ್ಭಿನ್ನಗಂಧೇಭಕುಂಭ
ಸ್ಫುಟಕುಂಭೋನ್ಮುಕ್ತಮುಕ್ತಾಕಣಗಣಕಟದಾನಾಂಬು ಸಮ್ಮಿಶ್ರ ರಕ್ತೋ
ತ್ಕಟಧಾರಾಪಾತಪಂಕಪ್ರಗತ ಮೃಗಪದಪ್ರೇಕ್ಷಣೋಲ್ಲಾಸ ಭಿಲ್ಲೋ
ದ್ಭಟಭಾಷಾಘೋಷಮಿಶ್ರಶ್ರುತಿ ಕಟುವಿಹಗಧ್ವಾನಕಾಂತಂ ವನಾಂತಂ ೫೪

ಮ॥ ಕಟಕಂಡೂತಿ ನಿವಾರಣೈಕಮತಿ ಮತ್ತೇಭೌಘಸಂಘೃಷ್ಟ ತ
ತ್ಕಟದಾನದ್ರವಚಿಹ್ನ ಚಂದ್ರಮಣಿ ಚಂದ್ರದ್ಯೋತ ಸದ್ಯಸ್ಫುರ
ತ್ಕಟಕೋಪಾಂತ ಚರತ್ಕಿರಾತವನಿತಾ ಕರ್ಣೋತ್ಪಲಾಕರ್ಷಿ ಮ
ರ್ಕಟಶಾಬಾಶ್ರಿತ ಶಾಖಪಾದಪಯುತಂ ಕಣ್ಗೊಪ್ಪಿತಾ ಕಾನನಂ ೫೫

ಮದ ಆಟೋಪದಿಂದಲೂ, ನಾರಾಯಣಮೂರ್ತಿಯಿಂದಲೂ ಕೂಡಿತ್ತು. (ಅರಣ್ಯವು) ಆನೆಗಳನ್ನೊಳಗೊಂಡು, ಗರ್ಜಿಸುವ ಸಿಂಹಗಳಿಂದ ಕೂಡಿತ್ತು. ಆ ಅರಣ್ಯವು–ಯಜ್ಞ ಮಂಟಪದಂತೆ_ಅಧಿಕವಾದ ಉದಾತ್ತಾನುದಾತ್ತ ಸ್ವರಿತಸ್ವರಗಳಿಂದ, ತೇಜೋ ವಿಶಿಷ್ಟವೇದೋಪನಿಷನ್ಮಂತ್ರೋಚ್ಚಾರಮಾಡುವ ಬ್ರಾಹ್ಮಣರಿಂದ ಕೂಡಿತ್ತು. (ಅರ ಣ್ಯವು-) ಅತಿಶಯವಾದ ಅನೇಕ ಬಗೆಯ ಮೃಗಪಕ್ಷಿಗಳ ಧ್ವನಿವಿಶೇಷಗಳಿಂದಲೂ, ನವಿಲು ಮತ್ತು ಇನ್ನಿತರ ಪಕ್ಷಿ ವಿಶೇಷಗಳಿಂದಲೂ ಕೂಡಿ ಒಪ್ಪುವಂತಿತ್ತು. ಅಂಥ ಅರಣ್ಯವನ್ನು ಏನೆಂದು ಬಸಣ್ಣಿಲಿ! ವ|| ಅದೂ ಅಲ್ಲದೆ_ ೫೪. ಅತ್ಯಂತ ಚುರುಕಾದ ಸಿಂಹಗಳ ಮುಂಗಾಲುಗಳ ಉಬ್ಬಿನಿಂತ ಉಗುರುಗಳ ತುದಿಗಳಿಂದ ಸೀಳ ಲ್ಪಟ್ಟ ಆನೆಯ ಸ್ಫುಟವಾದ ಕುಂಭಸ್ಥಳಗಳಿಂದ ಉದುರಿದ ಮುತ್ತುಗಳ ಕಣಗಳ ಸಮೂಹದಿಂದಲೂ, ಆ (ಆನೆಗಳ) ನೆತ್ತಿಯಿಂದ ಮದೋದಕ ಮಿಶ್ರವಾದ ರಕ್ತದ ವಿಶೇಷ ವಾಗಿ ಸುರಿಯುವಿಕೆಯಿಂದ ಕೆಸರುಗೊಂಡ ನೆಲದಲ್ಲಿ ಜಿಂಕೆಯ ಹೆಜ್ಜೆ ಮೂಡಿದ್ದುವು. ಆ ಹೆಜ್ಜೆಗಳ ಗುರುತುಗಳನ್ನು ಕಂಡು ಉಲ್ಲಾಸದಿಂದ ಮಾತನಾಡಿಕೊಳ್ಳು ತ್ತಿದ್ದ ಮಾತಿನ ಧ್ವನಿಯಿಂದ ಮಿಶ್ರಗೊಂಡು ಕಿವಿಗೆ ಅತಿಕಟುವಾದ ಪಕ್ಷಿಗಳ ಚೀರಾಟದ ಧ್ವನಿಯಿಂದ ಕಾಂತಿಗೊಂಡುದಾಗಿ ಆ ಅರಣ್ಯಪ್ರದೇಶವಿತ್ತು. ೫೫. ಕಪೋಲಗಳ ಕಡಿತವನ್ನು ನಿವಾರಣಗೊಳಿಸಿಕೊಳ್ಳುವ ಏಕೈಕ ಬುದ್ಧಿಯ ಮದಿಸಿದ ಆನೆಗಳಿಂದ ತಿಕ್ಕಲ್ಪಟ್ಟು ಆ ಆನೆಗಳ ನೆತ್ತಿಯ ಮದೋದಕದ್ರವದ ಚಿಹ್ನೆಯಿಂದ ಕೂಡಿ ರುವ ಚಂದ್ರಕಾಂತಶಿಲೆಗಳೆಂಬ ಚಂದ್ರನ ಕಿರಣಗಳಿಂದ ಆಗತಾನೆ ಅರುಳುತ್ತಿರುವ ಸ್ಫೈದಿಲೆ ಗಳನ್ನು ಕಿವಿಯಲ್ಲಿ ಧರಿಸಿ ಆ ತಪ್ಪಲುಪ್ರದೇಶದಲ್ಲಿ ತಿರುಗಾಡುತ್ತಿರುವ ಬೇಡರುಗಳ ಸ್ತ್ರೀಯ ರಿಂದಲೂ, ಕೊಂಬೆಗಳಲ್ಲಿ ಕುಳಿತಿರುವ ಕೋತಿಗಳಿಂದ ಕೂಡಿರುವ ಗಿಡಗಳಿಂದಲೂ ಕೂಡಿ

ವ|| ಅದಲ್ಲದೆಯುಮಡಸಿ ನಿಡಿದೆನಿಸಿ ಕಡುವೆಳೆದುದ್ದಂಡ ತಾಳತರುಗಳ ಚೂಳಿಕೆಯಿಂ ಗಾಳಿಯಲೆಪದಿಂ ಘಳಿಲೆನೆ ಪಾಸಱೆಯೊಳೊಡನೆ ಬೀೞ್ದೊಡೆದ ಮಧುಘಟ ಪಟಲ ಪಕ್ವಫಳ ಪ್ರತಾನದ ರಸಂಗಳ್ ಸಂಗಳಿಸಿ ಪರಿದಾಗಳದಂ ಕಂಡು ಕುಡಿದು ನಕ್ಕಿಮಿಕ್ಕು ಸೊಕ್ಕೇಱಿ ಪಡಿನೆಳಲಂ ಪಳಿಕಿನೊಡ್ಡುಂಗಲ್ಲೊಳ್ ಕಂಡು ಪೆಣ್ಗೋಡಗವೆಂದು ಪತ್ತೆಸಾರ್ದುಱುಗಿಸಿ ನೋಡಿ ಒಱೆಯಂ ಬೆರಂಟಿ ಪುರ್ಬಿಕ್ಕಿ ಪಲ್ಲಂ ಕಿಱಿದು ಹಱ್ಱೆಂದು ಝುಂಕಿಸಿ ಸಮಾನ ವಿಕೃತಿಗಂಡು ಸರ ಸರನೆ ಸಾರೆವೆಂದು ಕೆಲದೊಳಿಕ್ಕಿರ್ದಾನೆದಲೆಯ ನೆತ್ತರ್ಪೂದಿದ ಮುತ್ತಂ ದಾಳಿಂಬಬೀಜಂಗೆತ್ತೆತ್ತಿ ಕಳ್ಕನೆ ಮುಕ್ಕಲೊಡನೆ ಪಲ್ಗಳ್ಮುಕ್ಕುವೋಗೆ ನೋಡಿಮೆಂಬಂತೆ ಬೋಡುವಾಯಂ ತೆಱೆದೇಡಿಪ ಕೋಡಗಂಗಳಂ ನೀಡುಂನೋಡಿ ನಗೆಗಡಲೊಳೋಲಾಡುವ ಬೇಡವೆಣ್ಗಳಿಂ ಕರಿಕರಾಗ್ರದಿಂ ಮುಱಿದ ತಳಿರ ತದುಕಿನ ಮರದ ನಿಡುಗೋಡೊಳಱಿಯದೆಱಗಿ ಮಱಿವೆರಸಿ ಕುಳ್ಳಿರ್ದು ಪಸಿಯ ಪಗಿನದೊಳ್ ಕಾಲ್ ಜಗಿಲ್ತು ತಳ್ಳಂಕಂಗೊಳ್ವ ಸಮಯದೊಳ್ ತುಟ್ಟತುದಿವರೆಗಂ ಸುರ್ಬುಗೊಂಡು ಪರ್ಬಿದ ಕರ್ಬಳಿಯ ಪೆರ್ಬಳ್ಳಿಯ ಬಳಿಯನಡರ್ದು ಪಿಡಿಯಲೆಳಸಿ ಘಳಿಲನೆ ಸಾರೆವರ್ಪ ಘೋರಲುಬ್ಧಕನಂ ಕಂಡಗಿದು ನೆಗೆಯಲುಜ್ಜುಗಿಸಿ ಪಕ್ಕವಂ ಬಿದಿರ್ದು ಪಾರಲಳ

ಆ ಅರಣ್ಯವು ಶೋಭಿಸುತ್ತಿತ್ತು. ವ|| ಅದೂ ಅಲ್ಲದೆ ದಟ್ಟವಾಗಿಯೂ ಉದ್ದವಾಗಿಯೂ ಬೆಳೆದ ಎತ್ತರವಾದ ತಾಳೆಮರಗಳ ತುದಿಯಿಂದ ಗಾಳಿಯ ಹೊಡೆತದ ಕಾರಣವಾಗಿ ಅಲ್ಲಿ ಕಟ್ಟಿದ್ದ ಹೆಂಡದ ಮಡಕೆಗಳ ಸಮೂಹವು ಕೆಳಗಿದ್ದ ಕಲ್ಲಿನ ಮೇಲೆ ಬಿದ್ದು ಘಳಿಲ್ಲೆಂದು ಒಡೆದು ಚೆಲ್ಲಿದ ಹೆಂಡದೊಡನೆ, ಮಾಗಿದ ಹಣ್ಣುಗಳ ಸಮೂಹದ ರಸವೂ ಕೂಡಿ ಹರಿಯುತ್ತಿರಲು ಅದನ್ನು ಕೋತಿಗಳು ಕಂಡು ವಿಶೇಷವಾಗಿ ಕುಡಿದು ನೆಕ್ಕಿ ಮತ್ತುಗೊಂಡು ತಮ್ಮ ಪ್ರತಿಛಾಯೆಯನ್ನು ಸ್ಫಟಿಕಶಿಲೆಯಲ್ಲಿ ಕಂಡು ಅದನ್ನೇ ಹೆಣ್ಣುಕಪಿಯೆಂದು ಹತ್ತಿರಕ್ಕೆ ಹೋಗಿ ದಿಟ್ಟಿಸಿನೋಡಿ ಬರಿಯ ಬೆರಳಾಡಿಸಿ, ಹುಬ್ಬುಗಂಟಿಕ್ಕಿ, ಹಲ್ಲುಕಿರಿದು, ಹರ್ರೆಂದು ಅಣಕಿಸಿ, ತನಗೆ ಸಮಾನವಾದ ಆಕಾರವನ್ನೇ ಕಂಡು ಸರಸರನೆ ಹೊರಟು ಬಂದು, ಪಕ್ಕದಲ್ಲೊಂದು ಕಡೆ ಉದುರಿಬಿದ್ದಿದ್ದ ಆನೆಯ ಕುಂಭಸ್ಥಳದ ರಕ್ತಲೇಪಿತವಾದ ಮುತ್ತುಗಳನ್ನು ದಾಳಿಂಬರ ಬೀಜಗಳೆಂದು ತಿಳಿದು ಅವನ್ನು ಆರಿಸಿಕೊಂಡು ತಟ್ಟನೆ ತಿನ್ನಲಾಗಿ ಹಲ್ಲುಗಳು ಮುರಿದುಹೋದುವು. (ಅಂಥ) ಬೋಡುಬಾಯನ್ನೇ ತೆರೆದು ನೋಡಿರೆಂಬ ಹಾಗೆ ಅಣಕಿಸುವ ಕೋತಿಗಳನ್ನು ದಿಟ್ಟಿಸಿನೋಡುತ್ತ ನಗೆಗಡಲಲ್ಲಿ ಮುಳುಗಿರುವ ಬೇಡರಸ್ತ್ರೀಯರಿಂದಲೂ, ಆನೆಯ ಸೊಂಡಿಲತುದಿಯಿಂದ ಮುರಿಯಲ್ಪಟ್ಟ ತಳಿರ ತೊಂಗಲಿನಿಂದ ಕೂಡಿದ ಮರಗಳ ಸೆಳೆಗೊಂಬೆಗಳಲ್ಲಿ ತಿಳಿಯದೆ ತಮ್ಮ ಮರಿಗಳ ಸಮೇತ (ಪಕ್ಷಿಗಳು) ಕುಳಿತುಕೊಂಡಿದ್ದವು. ಹಸಿಯ ಮರದ ಅಂಟಿನಲ್ಲಿ (ಅವುಗಳ) ಕಾಲುಗಳು ಸಿಕ್ಕಿಕೊಂಡಿದ್ದವು. (ಅಂತು ಸಿಕ್ಕಿಕೊಂಡ ಕಾಲುಗಳನ್ನು ಬಿಡಿಸಿಕೊಳ್ಳಲಾರದೆ) ಸಂಕಟ ಪಡುತ್ತಿರುವ ಸಮಯದಲ್ಲಿ, ತುತ್ತತುದಿಯವರೆಗೆ ದಟ್ಟವಾಗಿ ಹಬ್ಬಿದ್ದ ಕಬ್ಬಳಿಯ ದೊಡ್ಡ ಬಳ್ಳಿಗಳನ್ನು ಹಿಡಿದು ಆಡರಿಕೊಂಡು ಮೇಲೇರಿ, ತಮ್ಮನ್ನು ಹಿಡಿಯಲು ಬರುತ್ತ

ವಲ್ಲದೆ ನಡನಡನೆ ನಡುಗಿ ಸಿಡಿಮಿಡಿಗೊಂಡೆಱಕೆಗಳೆಳಲೆ ಕೊರಲ್ಕುಸಿಯೆ ಜೋಲ್ದುನೇಲ್ವ ಪೆರ್ಬಕ್ಕಿಗಳಿಂ ಮತ್ತಮೊಂದೆಡೆಯೊಳ್ ಮಱೆಯನೆಱೆಗೊಳ್ವ ಪಿರಿಯ ಪಾವಂ ಪಿಡಿದ ಕರಿಯಂ ಸೀಳ್ವ ಸಿಂಹಮಂ ಪೋೞ್ವ ಶರಭಮಂ ಮಾಲಾಕಾರದಿಂ ಸಾಲ್ಗೊಂಡೆತ್ತಿ ನಭೋಮಂಡಳಕೆ ಜಿಗಿದೊಗೆದು ನೆಗೆವ ಭೇರುಂಡಂಗಳಿಂ ಪೊಲಂಬುದಪ್ಪಿದ ಮಱಿಯಂ ನೆನೆದು ನೇಹಂ ಮಿಗೆ ಕೆಚ್ಚಲುರ್ವಿ ಮೊಲೆತೊಱೆದೆಚ್ಚು ಪಾಯ್ದುಗುತರ್ಪ ವನಮಹಿಷಿಗಳ ಪಾಲಧಾರೆಯಂ ಮಿಕ್ಕು ನಕ್ಕುತೊಡರ್ಪ ಕಾನನಬಿಡಾಲಂಗಳಿಂ ವನತರುಗಳೊಂದೊಂದನೊರಸೆ ಪುಟ್ಟಿದನಲನಳವಿಗಳೆದೊಗೆದ ಪೆರ್ವೊಗೆಗೆ ಪುಳುಗಳ್ಪೋಗೆ ನಟ್ಟಗೊಂಬಿನೊಳ್ ಮಿಸುಪ ಜೇನವುಟ್ಟೆಗಳ ಮಧುರಸಮಂ ಬಳಿಯ ನಡರ್ದು ಪೀರ್ವ ಮರವಾವುಗಳಿಂ ಪುಲ್ಲಂ ಮೇಯಲೆಳಸಿ ಬಂದು ಮೆಯ್ಯ ತೀಂಟೆಗೆ ಪುಲಿ ಪೊರಳ್ದು ಪೋದ ತಾಣದೊಳ್ ನಿಂದು ಗರ್ಬಿಂಗಗಿದುರ್ಬುಗುಂದಿ ಹಮ್ಮೈದಂಬೋದ ಹರಿಣಂಗಳಿಂ ಪೂಗೊಯ್ವ ಪುಳಿಂದಿ ಪಾಡುವ ಸಂಗೀತದಿಂಚರಕ್ಕೆ ಶ್ರುತಿಗುಡುವಂತೆಸೆವ ಪವನಪೂರಿತ ಕೀಚಕ ರಂಧ್ರನಿನದಕ್ಕೆ ಪೆಡೆಯೆತ್ತಿ ನಿಲುಂಬಿ ನಲಿವ ಫಣಿಗಳಿಂ ಕೋಳ್ಕುಟ್ಟ ದಾಡೆಯಂ ಮಸೆದು

ರುವ ಘೋರರೂಪದ ಬೇಡರನ್ನು ಕಂಡು ಹೆದರಿ ಹಾರಲು ಪ್ರಯತ್ನಿಸಿ, ಪಕ್ಕಗಳನ್ನು ಅರಳಿಸಿ, ಹಾರಲು ಶಕ್ಯವಿಲ್ಲದೆ ಗಡಗಡ ನಡುಗಿ ಸಿಡಿಮಿಡಿಗೊಳ್ಳುತ್ತ ರೆಕ್ಕೆಗಳು ಸೋತು ಹೋಗಿ, ಕೊರಳು ಕುಸಿದು, ಜೋಲುಬಿದ್ದು ನೇತಾಡುತ್ತಿರುವ ದೊಡ್ಡ ದೊಡ್ಡ ಹಕ್ಕಿಗಳಿಂದಲೂ, ಮತ್ತೊಂದು ಕಡೆಯಲ್ಲಿ ಮರೆಯನ್ನು ಆಶ್ರಯಿಸಲಿಚ್ಛಿಸುವ ದೊಡ್ಡ ಹಾವನ್ನು ಹಿಡಿದ ಆನೆಯನ್ನು ಸೀಳುವ ಸಿಂಹ, ಆ ಸಿಂಹವನ್ನು ತುಂಡರಿಸುವ ಶರಭ, (ಅಂಥ ಶರಭವನ್ನು) ಹಿಡಿದು ಮಾಲಾಕಾರವಾಗಿ ಎತ್ತಿ ನಭೋಮಂಡಲಕ್ಕೆ ಜಿಗಿದು ಹಾರುತ್ತಿರುವ ಭೇರುಂಡಗಳಿಂದಲೂ, ಹೊಲಬುದಪ್ಪಿದ ಮರಿಯನ್ನು ನೆನೆದು ಅತಿಶಯ ವಾತ್ಸಲ್ಯದಿಂದ ಕೆಚ್ಚಲುಬ್ಬಿ ಮೊಲೆಗಳು ತೊರೆಸಿ ಸುರಿದು ಪ್ರವಾಹಗೊಂಡಿರುವ ಅರಣ್ಯದ ಎಮ್ಮೆಗಳ ಹಾಲನ್ನು ಹೆಚ್ಚಾಗಿ ಕುಡಿದು ಅವುಗಳ ಹಿಂದೆಯೇ ಬರುತ್ತಿರುವ ಅರಣ್ಯದ ಬೆಕ್ಕುಗಳಿಂದಲೂ, ಅರಣ್ಯವೃಕ್ಷಗಳು ಒಂದರೊಡನೊಂದು ಮಸೆದಾಡಿ ಹುಟ್ಟಿದ ದಾವಾನಲನ ಪರಿಣಾಮವಾಗಿ ಊಹೆಗೆ ನಿಲುಕದೆ ಮೇಲೇಳುತ್ತಿರುವ ದೊಡ್ಡ ಹೊಗೆಗೆ ಹುಳುಗಳೆಲ್ಲ ಹಾರಿಹೋಗಿ ನಡುಹರಿಯಲ್ಲಿ ಶೋಭಿಸುವ ಜೇನುಗೂಡುಗಳಲ್ಲಿರುವ ಮಧುರವಾದ ಜೇನುತುಪ್ಪವನ್ನು ಅಲ್ಲಿಗೆ ಏರಿ ಕುಡಿಯುತ್ತಿರುವ ಮರದಲ್ಲಿರುವ ಹಾವುಗಳಿಂದಲೂ, ಹುಲ್ಲನ್ನು ಮೇಯಲಿಕ್ಕೆಂದು ಇಚ್ಛಿಸಿ ಬಂದು, ಅಲ್ಲಿ ಮೈಕಡಿತದಿಂದ ಹುಲಿಯು ನೆಲದ ಮೇಲೆ ಹೊರಳಾಡಿ ಹೋದ ಸ್ಥಳದಲ್ಲಿ ನಿಂತು, ಹುಲಿಯ ಸಂಬಂಧದ ಆ ವಾಸನೆಗೆ ಹೆದರಿ ಉತ್ಸಾಹಗುಂದಿ ಧೈರ್ಯಗೆಟ್ಟ ಜಿಂಕೆಗಳಿಂದಲೂ, ಹೂಗಳನ್ನು ತಿರಿಯುವ ಬೇಡ ಸ್ತ್ರೀಯರು ಹಾಡುವ ಸಂಗೀತದ ಇಂಪಾದ ಧ್ವನಿಗೆ ಶ್ರುತಿಗೊಡುತ್ತಿರುವಂತೆ ಶೋಭಿಸುವ ತೂತಾದ ಬಿದುರಿನಲ್ಲಿ ಗಾಳಿ ಹೊಕ್ಕು ಧ್ವನಿಯಾಗುತ್ತಿರಲು, ಆ ಧ್ವನಿಗೆ ಹೆಡೆಯೆತ್ತಿ ನಿಗುರಿ ನಿಂತು ನಲಿದಾಡುವ ನಾಗರಹಾವುಗಳಿಂದಲೂ, ಕೋಡುಗಳನ್ನು ಕುಟ್ಟುತ್ತ, ದಾಡೆಗಳನ್ನು

ಮಸಕಂ ಮಿಗೆ ಮೊಗಮಂ ನೆಗಪಿ ತೃಣಮಂ ತುಂಡಿಸಿ ಬಾಲಂ ನಿಮಿರೆ ಕಾಲಂ ತೂಗಿ ಮರ ವಾಯ್ದು ಪರಿದಿದಿರ್ಚಿ ಕಡುಗಮಂ ಪಿಡಿದು ಜಡಿದು ಝುಂಕಿಸಿ ದಂಡೆಗೊಂಡ ಶಬರನಂ ಮಿಡಿಯಿಂ ಬರಿವರೆಗಮೆತ್ತುವ ಸಮುತ್ತುಂಗ ವರಾಹಂಗಳಿಂ ಅಳವಿಗಳಿಯದೈತರೆ ನೆಗೆದೆಱಗಿ ಗಜಱಿಗರ್ಜಿಸಿ ಕುಂಭಿಕುಂಭಸ್ಥಳಮಂ ಕೂರುಗುರ್ಗಳಿಂ ಸೀಳ್ದು ಸಿಱುಂಬಳಾಡಿ ಸಿಡಿಲ್ಸಿಡಿವಂತೆ ನಗಾಧಿತ್ಯಕ್ಕೆ ನೆಗೆವ ಮೃಗೇಂದ್ರಂಗಳಿಂ ವಿಜೃಂಭಿಸಿ ಕಣ್ಗೆ ಕೌತುಕಾವಹಮಾಗಿರ್ದುದಲ್ಲಿ

ಮ॥ ಎಲವಂ ಸಂಪಗೆ ಹೊನ್ನೆ ಚೆನ್ನೆ ಕವಳಂ ಕಾರಾಚಮಾಚಂ ಪುಲಿಂ
ಗಿಲೆರಂ ಗುಗ್ಗುಳ ಮತ್ತಿ ಮತ್ತಿ ಮಧುಕಂ ಮಂಗಾರೆ ಪಚ್ಚಾರಿ ದಿಂ
ಡಲಮಾಲಂ ಬೆಳವಿಂಗಳಂ ಪುಣಸೆ ಜಾಲಂ ಬೇಲಮಂಕೋಲೆ ಬೊ
ಬ್ಬುಲಿ ಮಾವಂಬಟೆ ಕಕ್ಕೆ ಬಿಕ್ಕೆ ಬಕುಳಂ ಬೇವೆತ್ತಕಂ ಕಿಂಶುಕಂ ೫೬

ವ॥ ಮತ್ತಂ

ಚಂ॥ ವರುಣನ ಕುಂತದುತ್ಕರದ ಕೇತುವ ಕೇಕಿವಿಳಾಸದರ್ಭಕೋ
ದರೆಯ ವಿಲೂನನಾಸೆಯ ಸುರೂಪೆಯ ಪಾಣ್ಬೆಯ ಮೇಘನಾದದಿಂ
ದಿರೆಯ ಪಟೀರದೇಳ್ಗೆಯ ಕಪೋತದ ಬೊಟ್ಟನ ಕೆಂಡದಬ್ಬನೀ
ವರನಭಿಧಾನಮಂ ತಳೆದ ಭೂರುಹಮೊಪ್ಪುಗುಮಾ ವನಾಂತದೊಳ್ ೫೭

ಮಸೆಯುತ್ತ, ಅಧಿಕಕೋಪದಿಂದ ಮೂತಿಯನ್ನು ಚಾಚಿ ಹುಲ್ಲನ್ನು ತುಂಡರಿಸುತ್ತ, ಬಾಲವನ್ನು ನಿಗುರಿಸಿ, ಕಾಲುಗಳನ್ನು ತೂಗುತ್ತ ಗಿಡಗಿಡಗಳನ್ನು ಹಾಯುತ್ತ ಪರಚಿ. ಓಡುತ್ತ (ತಮ್ಮ) ಎದುರಿಗೆ ಖಡ್ಗ ಹಿಡಿದು ಝುಳಪಿಸುತ್ತ ಹತ್ತಿರಕ್ಕೆ ಬಂದ ಬೇಡನನ್ನು ಮಿಾಂಟುತ್ತ ಹೆಗಲವರೆಗೆ ಎತ್ತುವ ಎತ್ತರವಾದ ಕಾಡುಹಂದಿಗಳಿಂದಲೂ, ತನ್ನ ಸಾಮರ್ಥ್ಯವನ್ನರಿಯದೆ ಎದುರುಬರುತ್ತಿರುವ (ಆನೆಯ) ಕುಂಭಸ್ಥಳಕ್ಕೆ ನೆಗೆದು ಎರಗಿ ಗಜರಿ ಗರ್ಜನೆಮಾಡಿ ಕುಂಭಸ್ಥಳವನ್ನು ಚೂಪಾದ ಉಗುರುಗಳಿಂದ ಸೀಳಿ, ಸಿರುಂಬಳಾಟ (ರಿಂಗಣಗುಣಿತ?) ವನ್ನಾಡಿ, ಸಿಡಿಲು ಸಿಡಿಯುವಹಾಗೆ ಬೆಟ್ಟದ ಮೇಲ್ಭಾಗಕ್ಕೆ ನೆಗೆಯುತ್ತಿರುವ ಸಿಂಹಗಳಿಂದಲೂ ವಿಜೃಂಭಾಯಮಾನವಾಗಿ ಕಣ್ಣಿಗೆ ಕೌತುಕವನ್ನುಂಟುಮಾಡುತ್ತಿರುವ ಆ ಕಾನನದಲ್ಲಿ ೫೬. ಎಲವ (ಕಂಬಳಿ ಮರ), ಸಂಪಿಗೆ, ಹೊನ್ನೆ, ಚೆನ್ನಂಗಿ, ಕವಳಿ, ಕಾರಾಚಿ, ಮಾಚಿ, ಹುಲಿಗಿಲ, ಬೋರೆ, ಗುಗ್ಗುಳ, ಮತ್ತಿ, ಹಿಪ್ಪೆ, ಮಂಗಾರಿ (ಬಂಗಾರಿ), ಪಚ್ಚಾರಿ (ಆರಿಮರ), ದಿಂಡುಗ, ಆಲ, ಬಿಳಿಧೂಪ, ಹುಣಸಿ, ಜಾಲಿ, ಬಳವಲ (ಬೇಲ), ಅಂಕೋಲೆ, ಬೊಬ್ಬುಳಿ, ಮಾವು, ಅಂಬಟೆ, ಕಕ್ಕೆ, ಬಿಕ್ಕೆ, ಬಕುಳ, ಬೇವು, ಸತ್ತಿಗೆಮರ, ಮುತ್ತಗ ಮೊದಲಾದ ಮರಗಳಿದ್ದವು ವ॥ ಮತ್ತು ೫೭. ಈಟಿಮರ, ಉದ್ದರೇಕುಗಳ ಕತ್ತಾಳೆ, ನವಿಲಾಡಿ ಗಿಡ, ಬಸರಿ, ಮೂಕೊರತಿ, ಚೆನ್ನಂಗಿ, ಪಾದರಿ, ಸಿಡಿಲುಮರ, ಬಿಲ್ವ (ಅಥವಾ ಲಕ್ಕಿ), ಶ್ರೀಗಂಧ, ದೊಡ್ಡಮರ, (ದೊಡ್ಡಿೀಮರ ?) ಹಾರಿವಾಣ (ಹಾಲುವಾಣ), ತಿಲಕವಕ್ಷ, ಇಂಗಳಾರದ, ಎಕ್ಕ (ಅರ್ಕ) ಮೊದಲಾದ ಹೆಸರಿನ ಗಿಡಗಳು ಆ ವನಮಧ್ಯದಲ್ಲಿ ಒಪ್ಪುತ್ತಿ

ಕಂ॥ ಅರಳಿ ಕಡವೊಡವು ತಂಡಸಿ
ಯರನೆಲ್ಲಿ ಬಿದಿರ್ ಪತಂಗಮರುಟಾಳಂ ಪಾ
ದರಿ ಬಾಗೆ ತೇಗು ಪನೆ ಕಂ
ಮರಮೆಸಳೆಯೆನಿಪ್ಪುವಿರ್ಪುವಾ ಪೆರ್ಗಾಡೊಳ್ ೫೮

ಮ॥ ಗರುಡಂ ಗೀಜಗನಂಚೆ ಕೊಂಚೆ ಗಿಡಗಂ ಕರ್ಬಕ್ಕಿ ಪಾರಾವತಂ
ಪರಪುಟ್ಟಂ ಚರಣಾಯುಧಂ ಶಕುನಿ ಕಂಕಂ ತೊಂಡಿಗಂ ಸೋರೆ ತಿ
ತ್ತಿರಿ ಕೋಕಂ ಪಿಕಳಂಬಕಂ ಶಿಖಿ ಶುಕಂ ಬಾನಾಡಿ ಪೆರ್ಬಕ್ಕಿ ಪೆಂ
ಗುರು ಕಾಕಂ ಚಿಲುಕೂಲಿ ರತ್ನಖಗಮಿರ್ಕುಂ ತದ್ವನಾಗೌಘದೊಳ್ ೫೯

ಕಂ॥ ಸುರಪತಿಯ ಬೆಳ್ಗಡಿಯ ರಥ
ಚರಣದ ಪಾವಕನ ಮುನಿಯ ಧರ್ಮಜನ ಲಸ
ತ್ತುರಗದ ಗಜಗಂಡದ ಭಾ
ಸುರವಾದ್ಯದ ಪೆಸರ ಖಗಕುಲಂ ಕರಮೆಸೆಗುಂ ೬೦

ದ್ದವು. ೫೮. ಅರಳಿ, ಕಡವು, ಒಡವು, ತಂಡರಸಿ, ಅರೆನೆಲ್ಲಿ, ಬಿದಿರು, ಪತಂಗ, ಅರಟಾಳ, ಪಾದರಿ, ಬಾಗೆಯ ಮರ, ತೇಗು, ತಾಳೆ, ಕಮರಿ ಮರ, ಎಸಳೆ (ಕಾಡಿಕಡ್ಡಿ) ಮರ_ಮುಂತಾದ ಮರಗಳು ಆ ಮಹಾರಣ್ಯದಲ್ಲಿ ಇರುವುವು. ೫೯. ಆ ವನಮಧ್ಯದಲ್ಲಿರುವ ಗಿಡಗಳ ಸಮೂಹದಲ್ಲಿ, ಗರುಡ, ಗೀಜಗ, ಹಂಸ, ಕ್ರೌಂಚ, ಗಿಡಗ, ಕಬ್ಬಕ್ಕಿ, ಪಾರಿವಾಳ, ಕೋಗಿಲೆ, ಕಾಡುಕೋಳಿ, ಶಕುನವಕ್ಕಿ (ಹಾಲ್ವಕ್ಕಿ), ಕರಿಹದ್ದು, ರಣಹದ್ದು, ಬೆಳವ, ತಿತ್ತಿರಿ (ಟಿಟ್ಟಿಭ), ಚಕ್ರವಾಕ, ಕಾಗೆ, ಬಕಪಕ್ಷಿ (ಕೊಕ್ಕರೆ), ನವಿಲು, ಗಿಳಿ, ಬಾನಾಡಿ, ದೊಡ್ಡಹಕ್ಕಿ, ಹೆಂಗುರುಕಾಗೆ (ದೊಡ್ಡ ಹಿಮ್ಮಡಿಯ ಕಾಗೆ ?), ಚಿಲುಕುಲಿಹಕ್ಕಿ (ಸಂಬಾರಗಾಗೆ ?), ರತ್ನದಂತೆ ಹೊಳೆಯುಳ ಪುಕ್ಕವುಳ್ಳ ಹಕ್ಕಿಗಳು ಇದ್ದುವು. ೬೦. ಗೂಗೆ, ಗೊರವಂಕ, ಚಕ್ರವಾಕ, ನವಿಲು, ಭಾರದ್ವಾಜ ಪಾಂಡವ, ಕೋಗಿಲೆ, ಕಾಗೆ, ಡಿಂಡಿಮ ಹೆಸರಿನ ಪಕ್ಷಿಗಳ ಸಮೂಹವು ಚೆನ್ನಾಗಿ ಶೋಭಿಸುತ್ತಿತ್ತು. ವಿವರಣೆ: ಸುರಪತಿ ಮುಂತಾದವರ ಪರ್ಯಾಯನಾಮವನ್ನು ಪಡೆದ ಹಕ್ಕಿಗಳು ಇದ್ದವು. ಸುರಪತಿ=ಇಂದ್ರ, ಪರ್ಯಾಯ ನಾಮ=ಕೌಶಿಕ. ಕೌಶಿಕ=ಗೂಗೆ. ಹೀಗೆ ಮುಂದೆಯೂ ಅನ್ವಯಿಸಿಕೊಳ್ಳಬೇಕು. ಬೆಳ್ಗಡಿ_ಗೊರವ_ಗೊರವಂಕ ಎಂಬ ಹಕ್ಕಿ, ರಥಚರಣ_ಚಕ್ರ_ಚಕ್ರವಾಕ, ಪಾವಕ_ಶಿಖಿ_ನವಿಲು, ಮುನಿ_ಭಾರದ್ವಾಜ_ಭಾರದ್ವಾಜಹಕ್ಕಿ, ಧರ್ಮಜ_ಪಾಂಡವ_ಬಿಳಿಯ ಹದ್ದು, ತುರಗ_ಗಂಧರ್ವ_ಕೋಗಿಲೆ, ಗಜಗಂಡ_ಕರಟ_ಕಾಗೆ, ಭಾಸುರವಾದ್ಯ_ಖಂಜರಿ

ಹರಿ ಕರಿ ಶಶ ಜಂಬುಕ ವೃಕ
ರುರುಮಾರ್ಜಾಲೋಷ್ಟ್ರ ಶರಭ ಸೈರಿಭ ಶಾಖಾ
ಚರಗವಯುವರಾಹೋರಗ
ತರಕ್ಷು ರುಕ್ಷಾದಿ ಸತ್ವಗಣ್ಯಮರಣ್ಯಂ ೬೧

ಜರದಜಗರಫೂತ್ಕೃತಿ ಕೇ
ಸರಿಭಾತ್ಕೃತಿ ಕರಿಕರಾಗ್ರ ಸೀತ್ಕೃತಿ ಶಾಖಾ
ಚರಕೀತ್ಕೃತಿ ವಿಹಗಸಮು
ತ್ಕರಚೀತ್ಕೃತಿ ತೀವಿ ವಿಪಿನದೊಳ್ ಬಿಡದೆಸೆಗುಂ ೬೨

ವ॥ ಮತ್ತಂ

ಉ॥ ಕೋಡಿಡುವಾನೆಗಳ್ ಪರಿವ ಪುಲ್ಲೆಗಳೊಲ್ದೊಡಗೂಡಿ ಮೇದು ಮೆ
ಲ್ಕಾಡುವ ಸೈರಿಭಂಗಳುಱಿ ಲಂಘಿಪ ಕೇಸರಿಗಳ್ ಧರಿತ್ರಿಯಂ
ತೋಡುವ ಸೂಕರಂಗಳಡಿಯಿಟ್ಟೆಸೆವೆಂಟಡಿಗಳ್ ಕನಲ್ಕೆಯಿಂ
ನೋಡಿ ಕಡಂಗಿ ಗರ಼್ಪ ತರಕ್ಷುಗಳೊಪ್ಪುಗುಮಾ ವನಾಂತದೊಳ್ ೬೩

ವ॥ ಮತ್ತಮಾ ಪೆರಡವಿಯುಲ್ಲಿ

ಕಂ॥ ನೆಲವೊಱೆಯಂ ತಾಂ ತಳೆದೆ
ಮ್ಮಲಸತೆಯಂ ಕಳೆದು ಪೊರೆದುದೀ ಗಿರಿಯೆಂದಾ
ನೆಲದಳದ ಕರಿಗಳೆಳ್ತಂ
ದಲಸದೆ ಸೇವಿಪವೊಲದಱೊಳಾನೆಗಳೆಸೆಗುಂ ೬೪

ಯೆಂಬ ಹಕ್ಕಿ. (ರಂ.) ೬೧. ಸಿಂಹ, ಆನೆ, ಮೊಲ, ನರಿ, ತೋಳ, ಬಿಳಿಮಚ್ಚೆಯ ಜಿಂಕೆ, ಬೆಕ್ಕು, ಒಂಟೆ, ಶರಭ, ಕಾಡೆಮ್ಮೆ, ಕೋತಿ, ಕಾಡಾಕಳು, ಹಂದಿ, ಹಾವು, ಹುಲಿ, ಕರಡಿಯೇ ಮೊದಲಾದ ಪ್ರಾಣಿಗಳಿಂದ ಗಣನೀಯವಾದ ಅರಣ್ಯವು (ಶೋಭಿಸುತ್ತಿತ್ತು). ೬೨. ಮುದಿಯಾದ ಹೆಬ್ಬಾವಿನ ಫೂತ್ಕಾರ, ಸಿಂಹದ ಗರ್ಜನೆ, ಆನೆಯ ಸೊಂಡಿಲಿನ ತುದಿಯ ಸೀತ್ಕಾರ, ಕೋತಿಗಳ ಕೀತ್ಕಾರ, ಪಕ್ಷಿಸಮೂಹದ ಚೀತ್ಕಾರಗಳಿಂದ ತುಂಬಿದ ಆ ಅರಣ್ಯವು ತಪ್ಪದೆ ಶೋಭಿಸುತ್ತಿತ್ತು. ವ|| ಮತ್ತು ೬೩. ಕೋಡುಗಳಿಂದ ತಿವಿಯುವ ಆನೆಗಳು, ಓಡುವ ಜಿಂಕೆಗಳು, ಪ್ರೀತಿಯಿಂದ ಗುಂಪಾಗಿ ಸೇರಿ ಮೇದು ಮೆಲುಕುಹಾಕುವ ಕಾಡುಕೋಣಗಳು, ಹೆಚ್ಚಾಗಿ ಕುಪ್ಪಳಿಸುವ ಸಿಂಹಗಳು, ಭೂಮಿಯನ್ನು ಬಗೆಯುವ ಕಾಡುಹಂದಿಗಳು, ಪಾದಗಳನ್ನೂರಿ ನಿಂತು ಶೋಭಿಸುವ ಶರಭಪಕ್ಷಿಗಳು, ಕೋಪದಿಂದ ನೋಡುತ್ತ ಉತ್ಸಾಹಗೊಂಡು ಗರ್ಜಿಸುತ್ತಿರುವ ಹುಲಿಗಳು ಆ ವನಮಧ್ಯದಲ್ಲಿ ಶೋಭಿಸುತ್ತಿದ್ದವು. ವ|| ಮತ್ತು ಆ ದೊಡ್ಡ ಅಡವಿಯಲ್ಲಿ ೬೪. ಈ ಗಿರಿಯು ನೆಲದ ಹೊರೆಯನ್ನು ತಾನು ಹೊತ್ತು ನಮ್ಮ ಆಲಸ್ಯವನ್ನು ಹೋಗಲಾಡಿಸಿ ರಕ್ಷಿಸಿತು ಎಂದು ಪಾತಾಳದಲ್ಲಿರುವ ದಿಗ್ಗಜಗಳು ಬಂದು ಆಲಸ್ಯವಿಲ್ಲದೆ ಸೇವಿಸು

ಚಂ॥ ಮಱಿ ಪಸಿದೆಯ್ದೆ ತಾಂ ಮೊಲೆಗುಡಲ್ ನೆರೆದಿರ್ಪುದುಮಂಗಸಂಗಮ
ಕ್ಕೆಱಗಲೊಡರ್ಚೆ ಹಸ್ತಿ ಜವದಿಂ ಪಿಡಿ ಮುಂದೆಸೆಗಾಂತು ನಿಂದು ಬಾ
ಯ್ದೆಱೆದದಱಗ್ರಪಲ್ಲವಮನಾಂತಣಲೊಳ್ದಳಿರೂಡಿ ನೇಹವಂ
ಮೆಱೆದದಕಿತ್ತುದಂತೆ ಮೊಲೆಯುಂ ಪತಿಯಿಂ ಸುತನಲ್ತೆ ವೆಗ್ಗಳಂ ೬೫

ಕೊಳದೊಳೆ ಮಿಂದು ಪಂಕಜರಜಂಗಳನಂಗದೊಳೊಟ್ಟಿಕೊಂಡು ಮಂ
ಡಳಿಸಿ ಮದಕ್ಕೆ ಸಾರ್ವ ಮಱದುಂಬಿಯ ನೀಲದ ಮಾಲೆಯಾಂತು ಮಂ
ಜುಳಗತಿ ಮತ್ತಹಸ್ತಿ ಪಿಡಿಯಿರ್ಪೆಡೆಗೆಯ್ದಿ ಭುಜಂಗಲೀಲೆಯಂ
ತಳೆದೆಳೆಮುತ್ತನೊತ್ತೆಗುಡುವಂತಿರೆ ಸೂಸಿತು ವಾಪ್ಯಕೌಘಮಂ ೬೬

ವ॥ ಅದಲ್ಲದೆಯುಂ

ಕಂ॥ ಒಳಗಿದು ತಳೆದುದು ಮುಕ್ತಾ
ಫಳಮಂ ಪೊಱಗಿಂದ್ರನೀಲಮಣಿಗಣಮನೆನು
ತ್ತಿಳೆ ಪೊಗಳೆ ಕಟತಟದ ಮದ
ಕಳಿವಿಂಡೆಱಗಿರೆ ಕರೀಂದ್ರಮೇಂ ರಂಜಿಸಿತೋ ೬೭

ತ್ತಿವೆಯೋ ಎಂಬಂತೆ ಅಲ್ಲಿ ಆನೆಗಳು ಶೋಭಿಸುತ್ತಿದ್ದವು. ೬೫. ಮರಿಯು ಹಸಿದು ಬರಲು ತಾನು ಅದಕ್ಕೆ ಮೊಲೆಗೊಡಲು ತೊಡಗಿರುವುದು. ಗಂಡಾನೆಯು ಸುಸಿಲಿಗೆಳಸಿ ಮೇಲೆಬಿದ್ದು ಬರಲು ಸಿದ್ಧಗೊಂಡಿರಲು ಹೆಣ್ಣಾನೆಯು (ಅದಕ್ಕಾಸ್ಪದಕೊಡದೆ) ಮುಮ್ಮುಖವಾಗಿ ನಿಂತು ಬಾಯಿಯನ್ನು ತೆರೆದು ಮರಿಯ ಸೊಂಡಿಲತುದಿಯನ್ನು ಹಿಡಿದು ದವಡೆಯಲ್ಲಿ ಚಿಗುರನ್ನು ಇಟ್ಟು ಉಣ್ಣಿಸಿ, ವಾತ್ಸಲ್ಯವನ್ನು ವ್ಯಕ್ತಪಡಿಸಿ, ಹಾಗೆ ಅದಕ್ಕೆ ಮೊಲೆಯನ್ನು ಕುಡಿಸುತ್ತಿತ್ತು. ಪತಿಗಿಂತ ಸುತನು ಹೆಚ್ಚಲ್ಲವೆ ? ೬೬. ಸರೋವರದಲ್ಲಿ ನೀರಾಟವಾಡಿ, ಕಮಲದ ರಜವನ್ನು ಮೈಮೇಲೆ ತುಂಬಿಕೊಂಡು, ಮಂಡಲಾಕಾರವಾಗಿ ಮದೋದಕಕ್ಕೆ ಎರಗಲು ಬರುತ್ತಿರುವ ಮರಿದುಂಬಿಗಳೆಂಬ ನೀಲವರ್ಣದ ರತ್ನಗಳ ಮಾಲೆಯನ್ನು ಧರಿಸಿ, ಮಂಜುಳವಾದ ನಡಿಗೆಯಿಂದ ಬರುತ್ತಿರುವ ಮದಿಸಿದ ಆನೆಯು ಹೆಣ್ಣಾನೆಯ ಹತ್ತಿರಕ್ಕೆ ಬಂದು ವಿಟಸಹಜವಿಲಾಸವನ್ನು ಹೊಂದಿ, ಮೃದುವಾದ ಮುತ್ತುಗಳನ್ನು ಒತ್ತೆಕೊಡುತ್ತಿದೆಯೋ ಎಂಬಂತೆ ನೀರಿನ ತುಷಾರ (ಕಣ)ಗಳನ್ನು ಅದರ ಮೇಲೆ ಸೂಸಿತು. ವ|| ಅದೂ ಅಲ್ಲದೆ ೬೭. ಈ ಮದಗಜವು ಒಳಗೆ ಮುತ್ತುಗಳನ್ನೂ, ಹೊರಗೆ ಇಂದ್ರನೀಲಮಣಿಸಮೂಹವನ್ನೂ ಹೊಂದಿರುವುದೋ ಎನ್ನುತ್ತ ಇಳೆಯೆಲ್ಲಾ ಹೊಗಳುವಂತೆ ಗಂಡಸ್ಥಳದ ಮದೋದಕಕ್ಕೆ ದುಂಬಿಗಳೆರಗಿರಲಾಗಿ ಆ ಗಜಶ್ರೇಷ್ಠವು

ಮ॥ ಕರಿ ಪೆರ್ಬಾವನಮರ್ಚಿ ಪುಷ್ಕರದೆ ಬೀಸುತ್ತಿಟ್ಟೊಡಾಕಾಶದೊಳ್
ಗರಳಾಗ್ನಿಸ್ಫುಟ ವಿಸ್ಫುಲಿಂಗತತಿ ಸೂಸುತ್ತಿರ್ಪವೊಲ್ ತೋಱೆ ಮು
ನ್ನೆರೆಗೊಂಡಾಮಿಷಖಂಡಸಂಹತಿ ತಮೋವಿಭ್ರಾಂತಿಯಿಂದಳ್ಕೆ ಭಾ
ಸ್ಕರನೇಳ್ತರ್ಪುದನೊತ್ತಿ ಖಂಡಿಸಿ ಖಗೇಶಂ ರಕ್ಷಿಸಿತ್ತರ್ಕನಂ ೭೮

ಚಂ॥ ಸುರುಚಿರ ಪುಷ್ಕರಾಕರ ಜಲಾಂತರಮಗ್ನ ಕರೀಂದ್ರರುಂದ್ರ ಪು
ಷ್ಕರಮದು ಪುಷ್ಕರಂಬೊಲಿರೆ ತದ್ಭ್ರಮೆಯಿಂದಳಿ ಪಾಯೆ ಪೊಣ್ಮೆ ಘೂ
ತ್ಕರಿಸೆ ಸಿಡಿಲ್ದ ಸೀರ್ಪನಿಗಳೊಪ್ಪಿರೆ ಧೂಮದವೋಲ್ ವಿರಾಜಿಸಿ
ತ್ತರರೆ ತುಫಾಕದಿಂ ನೆಗೆವ ಗುಂಡಿನವೊಲ್ ಝಷಕೇತುವೀರನಾ ೭೯

ಕಂ॥ ಕರಿ ಮುಱಿಯೆ ನಳಿನಮಂ ಪಂ
ಕರುಹಾಕರದೊಳ್ ಮದಾಳಿರವಿಗವಿದಿಡುವಂ
ತಿರೆ ಮೊರೆದು ನೆಗೆಯೆ ತತ್ಸರ
ಮಿರದಳ್ವಂತೂರ್ಮಿರವದಿನೇಂ ರಂಜಿಸಿತೋ ೮೦

ಬರವಂಗೆಯ್ದ ಗಜಂಗಳ
ನಿವಹದ ನಿಗ್ಗವಮದುಡಿದು ಸೂಸಿರೆ ನೆಲದೊಳ್
ತವೆ ಪಸಿದ ಪಲ್ಲಮುಱಿಗಳ್
ತವಕದೆ ಬಿಸಮೆಂದು ತುಡುಕುಗುಂ ತದ್ವನದೊಳ್ ೮೧

ಏನು ಶೋಭಿಸಿತೊ! ೭೮. ಆನೆಯು ಹೆಬ್ಬಾವನ್ನು ಸೊಂಡಿಲಿನಿಂದ ಹಿಡಿದು ಮೇಲೆತ್ತಿ, ಸೊಂಡಿಲಿನಿಂದ ಬೀಸಿ ಆಕಾಶಕ್ಕೆಸೆಯಲು, ಆ ಹಾವು ಮೊದಲು ತಾನು ನುಂಗಿದ ಮಾಂಸದ ತುಂಡುಗಳ ಸಮೂಹವು ವಿಷಾಗ್ನಿಯಿಂದ ಹೊರಹೊಮ್ಮಿದ ಬೆಂಕಿಯ ಕಿಡಿಗಳಂತೆ ತೋರುತ್ತಿರಲು ಸೂರ್ಯನು ರಾಹುವೆಂಬ ಭ್ರಾಂತಿಯಿಂದ ಭಯಪಡುತ್ತಿದ್ದನು. (ಅಷ್ಟರಲ್ಲಿ) ಗರುಡನು ಬಂದು ಆ ಹಾವನ್ನು ಒತ್ತಿ ಖಂಡಿಸಿ ಸೂರ್ಯನನ್ನು ರಕ್ಷಿಸಿದನು. ೭೯. ಶ್ರೇಷ್ಠವಾದ ಸರೋವರದ ನೀರಿನಲ್ಲಿ ಮುಳುಗಿರುವ ಕರಿಶ್ರೇಷ್ಠನ ಆ ಸೊಂಡಿಲ ತುದಿಯು ಕಮಲದ ಹಾಗೆಯೇ ಶೋಭಿಸುತ್ತಿರಲು ಕಮಲವೆಂಬ ಭ್ರಮೆಯಿಂದ ಅಳಿಗಳು ಮುತ್ತುತ್ತ ಆ ಸೊಂಡಿಲ ನಾಳದಲ್ಲಿ ಪ್ರವೇಶಿಸಲು ಆನೆಯು ಘೂತ್ಕಾರ ಮಾಡಿತು. (ಆಗ) ಸಿಡಿದ ಸೀರ್ಪನಿಗಳು ಧೂಮದ ಹಾಗೆ ಕಂಡು, ವೀರನಾದ ಮನ್ಮಥನ ತುಬಾಕಿಯಿಂದ ನೆಗೆಯುತ್ತಿರುವ ಗುಂಡಿನ ಹಾಗೆ, ಅರರೇ ! ವಿರಾಜಿಸುತ್ತಿತ್ತು. ೮೦. ಸರೋವರದಲ್ಲಿರುವ ಕಮಲಗಳನ್ನು ಆನೆಯು ಮುರಿಯಲಾಗಿ, ಅದರಲ್ಲಿರುವ ಮದಿಸಿದ ದುಂಬಿಗಳು ಸೂರ್ಯನಿಗೆ ಮೊರೆಯಿಡುವಂತಿರಲು, ಝೇಂಕಾರ ಮಾಡಿ ಮೇಲೆ ಹಾರಲು, ಆ ಸರೋವರವೇ ತೆರೆಗಳ ಧ್ವನಿಯ ಮೂಲಕ ಅಳುವ ಹಾಗೆ ಏನು ರಂಜಿಸಿತೋ ! ೮೧. ಆ ವನಾಂತರದಲ್ಲಿ ಯುದ್ಧಮಾಡಿದ ಆನೆಗಳ ಸಮೂಹವು ಮುರಿದ ದಂತವುಳ್ಳವುಗಳಾಗಿದ್ದವು. ನೆಲದ ಮೇಲೆ ಮುರಿದು ಬಿದ್ದ ದಂತಗಳನ್ನು ಹಸಿದ ಆನೆಯ ಮರಿಗಳು ಕಂಡು ತವಕದಿಂದ

ಒಡವರ್ಪುದು ಕಡೆವೋಪುದು
ನಡೆನೋಳ್ಪುದು ಪಿಂದೆ ನಿಲ್ವುದತ್ತಿತ್ತಂ ಕೈ
ದುಡುಕುವುದಂತಿಂತೊಲೆವುದು
ಪಿಡಿಗೆ ಮುದಂಬಡೆದುದೊಂದು ಕಳಭಂ ಬನದೊಳ್ ೭೨

ವ|| ಮತ್ತೊಂದು ಮಳಯಜಮಹೀಜದಲ್ಲಿ

ಮ|| ಮರಗೊಂಬಂ ಮುಱಿವಲ್ಲಿ ತಳ್ತ ಮರವಾವೊಂದಾತ್ಮಶುಂಡಾಗ್ರದೊಳ್
ಭರದಿಂ ಪೊಕ್ಕೊಡೆ ಬೀಸಿ ಫೂತ್ಕರಿಸಿ ಕೊಂಬಂ ಪುಷ್ಕರಾಗ್ರಕ್ಕೆ ಸಂ
ಸರಿಪಂತಿಟ್ಟು ಕುನುಂಗಿ ಬಲ್ಪಳಿದು ಫೀಳಿಟ್ಕಳ್ಳಿ ಬಾಯ್ಬಿಟ್ಟು ಶೋ
ಕರಸಂದಾಳ್ದುದಿಭಂ ವೃಥಾನ್ಯಪರಿಭಂಗಂ ಭಂಗಮಂ ಸಾರ್ಚದೇ ೭೩

ಚಂ|| ಕರಮೆಸೆದತ್ತು ತಳ್ತ ಸರಿಯಿಂ ದರಿಯಿಂ ಜರಿಯಿಂ ಮೃಗಂಗಳಿಂ
ತರತರವಾಗಿ ತೋರ್ಪ ಮರದಿಂ ಸರದಿಂ ನೆರೆದಿಂಬುಗೊಂಡ ಭೀ
ಕರತರ ಲುಬ್ಧಕಪ್ರಕರದಿಂ ಝರದಿಂ ಪರಿದಿಂಪನಾಳ್ದ ಭಾ
ಸುರನದಿಯಿಂ ಪೊದಳ್ದ ಮುಱಿಯಿಂ ಹರಿಯಿಂ ಕರಿಯಿಂದೆ ಕಾನನಂ ೭೪

ಕಮಲದ ದಂಟೆಂದು ಭಾವಿಸಿ ತಿನ್ನಲು ದುಡುಕಿ ಬರುತ್ತಿದ್ದವು. ೭೨. ಆ ವನದಲ್ಲಿ ಒಂದು ಆನೆಯಮರಿಯು ತಾಯಿ ಆನೆಯಲ್ಲಿನ ಪ್ರೀತಿಯಿಂದ ಒಡನೆಯೇ ಬರುತ್ತಿತ್ತು. ದೂರ ಸರಿದು ಹೋಗುವುದು, ದಿಟ್ಟಿಸಿ ನೋಡುವುದು, ಹಿಂದೆ ನಿಲ್ಲುವುದು, ಅತ್ತಿತ್ತ ಸೊಂಡಿಲನ್ನು ಆಡಿಸುವುದು. ಅಂತು ಇಂತು ಹೇಗೆ ಹೇಗೋ ತೊನೆದಾಡುವುದು. ಹೀಗೆ ಮಾಡಿ ತಾಯಿಗೆ ಪ್ರೀತಿಯನ್ನುಂಟುಮಾಡುತ್ತಿತ್ತು. ವ|| ಮತ್ತೊಂದು ಶ್ರೀಗಂಧದ ಮರದಲ್ಲಿ ೭೩. ಆ ಶ್ರೀಗಂಧವೃಕ್ಷದ ಕೊಂಬೆಯೊಂದನ್ನು ಮುರಿಯುತ್ತಿರುವ ಸಮಯದಲ್ಲಿ, ಆ ಮರದಲ್ಲಿ ಸೇರಿಕೊಂಡಿರುವ ಹಾವು ಆ ಆನೆಯ ಸೊಂಡಿಲಿನ ರಂಧ್ರದಲ್ಲಿ ಪ್ರವೇಶಮಾಡಲಾಗಿ ಸೊಂಡಿಲನ್ನು ಬೀಸಿ ಫೂತ್ಕಾರಮಾಡಿ ರೆಂಬೆಯನ್ನು ಸೊಂಡಲಿನ ತುದಿಯ ರಂಧ್ರಕ್ಕೆ ಸರಿಯಾಗುನಂತೆ ಇಟ್ಟು, ಕುಗ್ಗಿ ಶಕ್ತಿಗುಂದಿ ಫಿಳಿರ್ ಎಂದು ಧ್ವನಿಮಾಡಿ ಅಂಜಿ ಬಾಯಿ ಬಿಟ್ಟೊರಲಿ ಆನೆಯೊಂದು ಶೋಕರಸವನ್ನು ಹೊಂದಿತು. ವೃಥಾ ಅನ್ಯರ ಭಂಗಮಾಡುವುದು ತನಗೇ ಭಂಗವನ್ನುಂಟುಮಾಡದೇ ? ೭೪. ಕಾನನವು ಸರುವುಗಳಿಂದಲೂ, ಕಂದರಗಳಿಂದಲೂ, ಬೆಟ್ಟಗಳ ನಿಮ್ನೋನ್ನತ ಪ್ರದೇಶಗಳಿಂದಲೂ ಕೂಡಿದ್ದಿತು. ಅನೇಕ ವಿಧವಾಗಿ ತೋರುವ ಮರಗಳಿಂದಲೂ, ಸರೋವರಗಳಿಂದಲೂ ಕೂಡಿ, ಭಯಂಕರಾಕಾರದ ಬೇಡರುಗಳ ಸಮೂಹದಿಂದ ಕೂಡಿಕೊಂಡದ್ದಾಗಿತ್ತು. ಝರಿಗಳಿಂದಲೂ ಶೋಭಾಯಮಾನವಾದ ನದಿಗಳ ಹರಿಯುವಿಕೆಯಿಂದಲೂ ಸೊಗಸುಗೊಂಡು ಇತ್ತು. ತುಂಬಿಕೊಂಡಿರುವ (ಮುಱಿಯೆಂಬ) ಜಿಂಕೆಯಿಂದಲೂ,

ವ॥ ಮತ್ತಮಾ ವನಂ ಘನಾಗಮದಂತೆ ಘನಕದಂಬಮುಕ್ತಕ ವಿಲಸಿತಮುಂ ವಸು ದೇವಭವನದಂತನಿರುದ್ಧಬಲಕೃಷ್ಣ ಸಾರಸಮಂಚಿತಮುಂ ದಾನಧಾರೆಯಂತೆ ಪುಂಡರೀಕ ಗಂಡಕಮಂಡಿತಮುಂ ಯುಧಿಷ್ಠಿರಸದ್ಮದಂತೆ ವೃಕೋದರ ವಿಲಸದರ್ಜುನ ನಕುಲಾಧಿಷ್ಠಿತಮುಂ ಸುಜನಹೃದಯದಂತನೇಕ ಪರಿಪೂರ್ಣ ಗುಣಸಮನ್ವಿತಮುಂ ಕುಜಾತಿಸಮೃದ್ಧಮಾಗಿಯುಂ ದ್ವಿಜಾತಿಮನೋಜ್ಞಮುಂ ಪರಿಗತ ಶಬರೋಪಯುಕ್ತಮಾಗಿಯುಂ ಅವಿಗ್ರಹ

ಸಿಂಹ ಮತ್ತು ಆನೆಗಳಿಂದಲೂ ಶೋಭಿಸುತ್ತಿತ್ತು. ವ॥ ಮತ್ತು ಆ ಅರಣ್ಯವು-ಮಳೆಗಾಲದ ಹಾಗೆ-ಅಧಿಕವಾದ ಕದಂಬವೃಕ್ಷಗಳಿಂದಲೂ, ಮುತ್ತುಗದ ಮರಗಳಿಂದಲೂ ಅಲಂಕಾರಗೊಂಡಿತ್ತು. ಮಳೆಗಾಲವು-ಮೋಡಗಳ ಸಮೂಹದಿಂದ ವರ್ಷಿಸಲ್ಪಟ್ಟ ನೀರಿನ (ಕ) ಹನಿಗಳಿಂದ ಪ್ರಕಾಶಮಾನವಾಗಿರುತ್ತದೆ. ವಸುದೇವನ ಮನೆಯಂತೆ ತಡೆಯಿಲ್ಲದೆ ಇರುವಂಥ ಸಾಮರ್ಥ್ಯದ ಜಿಂಕೆ (ಕೃಷ್ಣಸಾರ)ಗಳಿಂದ ಕೂಡಿದುದಾಗಿತ್ತು ; ವಸುದೇವನ ಮನೆಯು ಅನಿರುದ್ಧನೆಂಬ ಕೃಷ್ಣನ ಮೊಮ್ಮಗನಿಂದಲೂ, ಬಲರಾಮ ಕೃಷ್ಣರುಗಳ ಸತ್ವದಿಂದಲೂ ಕೂಡಿದುದಾಗಿರುತ್ತದೆ. ಅಂದರೆ ಮದೋದಕದ ಧಾರೆಯ ಹಾಗೆ ಹುಲಿಗಳಿಂದಲೂ, ಘೇಂಡಾಮೃಗಗಳಿಂದಲೂ ಕೂಡಿತ್ತು. ವನವು ಆನೆಗಳ ಕುಂಭಸ್ಥಳದಿಂದ ಕೂಡಿತ್ತು. ಯುಧಿಷ್ಠಿರನ ಮನೆಯ ಹಾಗೆ ತೋಳಗಳಿಂದಲೂ ಪ್ರಕಾಶಿಸುವ ತೋರ ಮತ್ತೀ ಮರ, ಮುಂಗುಸಿಗಳಿಂದಲೂ ಕೂಡಿತ್ತು. ಯುಧಿಷ್ಠಿರನ ಮನೆ ಭೀಮಸೇನ, ಶ್ರೇಷ್ಠ ಅರ್ಜುನ, ನಕುಲಾದಿಗಳಿಂದ ಕೂಡಿದ್ದಿತು. ಸುಗುಣಗಳುಳ್ಳ ಜನರ ಹೃದಯದ ಹಾಗೆ-ಅತಿಶಯವಾಗಿ ವ್ಯಾಪಿಸಿರುವ ಲತಾತಂತುಗಳಿಂದ (ಬಳ್ಳಿಗಳಿಂದ) ಕೂಡಿತ್ತು. ಸುಜನ ಹೃದಯವು ಅನೇಕ ಪರಿಪೂರ್ಣವಾದ ಗುಣಗಳಿಂದ ತುಂಬಿರುತ್ತದೆ. ಆ ಅರಣ್ಯ ಕುತ್ಸಿತ ಜಾತಿಯ ಬೇಡರಿಂದ ಸಮೃದ್ಧವಾಗಿದ್ದರೂ, ಬ್ರಾಹ್ಮಣರಿಗೆ (ಬ್ರಹ್ಮಜ್ಞಾನಾಪೇಕ್ಷಿಗಳಿಗೆ) ರಮಣೀಯವಾಗಿತ್ತು. (ವಿರೋಧ) ಅನೇಕ ಜಾತಿಯ ಗಿಡಗಳಿಂದ ಸಮೃದ್ಧವಾಗಿ, ಪಕ್ಷಿ ಸಮೂಹದಿಂದ ಮನೋಹರವಾಗಿತ್ತು. ಸುತ್ತುವರಿದ ಬೇಡರುಗಳಿಂದ ಕೂಡಿದ್ದರೂ, ಯುದ್ಧರಹಿತ ಪೂರ್ಣವಾದ ಸ್ಥಳವುಳ್ಳದ್ದಾಗಿತ್ತು. (ವಿರೋಧ) ಅವಿ ಎಂದರೆ ಬೆಟ್ಟಗಳಿಗೆ ಗ್ರಹ ಅಂದರೆ ಗ್ರಹ ಸಂಬಂಧದ ಪೀಡೆಗಳೇ ಮೊದಲಾದುವುಗಳಿಗೆ ಸಂ ಅಂದರೆ ಲೇಸಾದ ಅಗ್ರಸ್ಥಳವೆನಿಸಿತ್ತು.[1] ದ್ವಿಪ ಎಂದರೆ ಆನೆಗಳಿಂದ ಪ್ರಕಾಶಗೊಂಡಿದ್ದರೂ, ಅಗಣಿತವಾದ ಮೊಂಡಗಳ್ಳಿಗಳಿಂದ ಕೂಡಿತ್ತು (ವಿರೋಧ). ದ್ವಿಪವಿ ಎಂದರೆ ಎರಡು ವಜ್ರಗಳಿಂದ ಕೂಡಿದ್ದರೂ ಅಗಣಿತವಾದ ವಜ್ರಗಳುಳ್ಳದ್ದಾಗಿತ್ತು.[2] ವಿಶಾಲವಾದ ಕಿರಣ

---

1. ಅವಿಗ್ರಹ ಸಮಗ್ರ ಸ್ಥಳ=ಅವಿ-ಕುರಿಗಳನ್ನು, ಗ್ರಹ-ಹಿಡಿಯುವ ತೋಳಗಳಿಂದ ಯುಕ್ತವಾಗಿತ್ತು (ರಂ.)

2. ಎರಡು ವಜ್ರಾಯುಧಗಳಿದ್ದರೂ ವಜ್ರಾಯುಧವಿರಲಿಲ್ಲವೆಂದು ವಿರೋದ (ರಂ).

ಸಮಗ್ರಸ್ಥಳಮುಂ ದ್ವಿಪವಿಲಸಿತಮಾಗಿಯುಮಗಣಿತವಜ್ರೋಪರಂಜಿತಮುಂ ವಿತತಕರಾಕರ್ೋಪಲಸಿತಮಾಗಿಯುಂ ಬಹುಲತಾರಾರಾಜಿತಮುಂ ತತತಾಪಸಮುಚ್ಚಯಮಾಗಿಯುಂ ಅಶೋಕಸಂಗತಮೆನಿಸಿರ್ದುದಂತುಮಲ್ಲದೆಯುಂ

ಮ॥ಸ್ರ॥ ಹರಿಣೀ ಮತ್ತೇಭವಿಕ್ರೀಡಿತ ಲಲಿತ ಮಯೂರಾನ್ವಿತಂ ಛಂದಮಂ ಶಂ
ಬರಭಾಸ್ವತ್ಪುಂಡರೀಕಸ್ಫುರಿತ ಹರಿಮರುದ್ಭ್ರಾಜಿತಂ ವಾರ್ಧಿಯಂ ಬಂ
ಧುರ ಭಾರದ್ವಾಜ ಶಾಂಡಿಲ್ಯಕ ಶುಕವಿಮದಾಗಸ್ತ್ಯಕಂ ತಾಪಸಪ್ರೋ
ತ್ಕರಮಂ ಸೋಮಾರ್ಕರುಕ್ಷಾಂಚಿತಮದು ನಭಮಂ ಪೋಲ್ತು ಚೆಲ್ವಾಯ್ತರಣ್ಯಂ ೭೫

ಗಳುಳ್ಳ ಸೂರ್ಯನಿಂದ ಒಪ್ಪಿರುವುದಾದರೂ ಬಹಳವಾದ ನಕ್ಷತ್ರಗಳಿಂದ ಕೂಡಿತ್ತು (ವಿರೋಧ). ಉದ್ದವಾಗಿ ಬೆಳೆದಿರುವ ರೆಂಬೆಗಳುಳ್ಳ ಎಕ್ಕ (ಅರ್ಕದ) ಗಿಡಗಳಿಂದ ಶೋಭೆಯುಳ್ಳದ್ದಾಗಿಯೂ ಬಹಳವಾದ ಬಳ್ಳಿ (ಲತಾ)ಗಳಿಂದ ರಾರಾಜಿತವಾಗಿತ್ತು. ಪ್ರಸಿದ್ಧವಾದ (ತತ), ತಾಪ (ಸಂತಾಪ)ದ ಸಮೂಹವುಳ್ಳದ್ದಾದರೂ (ಅನೇಕ ತಾಪಗಳನ್ನುಂಟು ಮಾಡುವಂತಹುದಾದರೂ) ಶೋಕರಹಿತದಿಂದ ಕೂಡಿದ್ದು (ವಿರೋಧ). ಅಶೋಕ ವೃಕ್ಷಗಳಿಂದ ಕೂಡಿತ್ತು ಎಂದು ವಿರೋಧ ಪರಿಹಾರ. ೭೫. ಆ ಅರಣ್ಯವು ಹರಿಣಿಯೆಂಬ ವೃತ್ತ, ಮತ್ತೇಭವಿಕ್ರೀಡಿತ, ಲಲಿತ, ಮಯೂರವೃತ್ತಗಳಿಂದ ಕೂಡಿ ಛಂದಶ್ಶಾಸ್ತ್ರವನ್ನು ಹೋಲುತ್ತಿತ್ತು. ಎರಳೆ, ಮದಿಸಿದ ಆನೆಗಳ ಕ್ರೀಡೆ, ಕೋಮಲ ಮಯೂರಗಳು– ಇವುಗಳಿಂದ ಕೂಡಿತ್ತು. ನೀರಿನಲ್ಲಿ ಪ್ರಕಾಶಿಸುವ ಕಮಲಗಳು, ಶೋಭಿಸುವ ಕಪ್ಪೆ, (ನೀರು ಹಾವು), ಜಲಾಭಿಮಾನಿ ದೇವತೆಯರಿಂದ ಕೂಡಿ ಶೋಭಿಸುತ್ತ ಸಮುದ್ರವನ್ನು ಹೋಲುತ್ತಿತ್ತು (ವಿರೋಧ). ಗಂಡುಜಿಂಕೆ (ಶಂಬರ), ಪ್ರಕಾಶಿಸುವ ಆನೆ, ಶೋಭಿಸುವ ಸಿಂಹ (ಕಪಿ), (ಸರ್ಪ), (ಗಿಳಿ), ವನದೇವತೆಯರೇ ಮೊದಲಾದವುಗಳಿಂದ ಅರಣ್ಯವು ಕೂಡಿತ್ತು. ಭಾರದ್ವಾಜ (ಭರದ್ವಾಜ ಋಷಿವಂಶೋತ್ಪನ್ನರು). ಶಾಂಡಿಲ್ಯ, ಶುಕ, ಮದದೂರನಾದ ಅಗಸ್ತ್ಯ ಮುಂತಾದ ತಪಸ್ವಿಗಳ ಸಮೂಹವನ್ನು ಕೂಡಿಕೊಂಡದ್ದಾಗಿತ್ತು. ಕಾಡುಹತ್ತಿ ಗಿಡ, ಬಿಲ್ವ, ಮುತ್ತುಗ, ವಿಶೇಷ ಮದದಿಂದ ಕೂಡಿದ ಅಗಸೆ ಮರಗಳಿಂದ ಕಾಡು ಕೂಡಿದುದಾಗಿತ್ತು. ಸೂರ್ಯ ಚಂದ್ರ ನಕ್ಷತ್ರಗಳಿಂದ ಕೂಡಿದ ಕಾಡು ಆಕಾಶವನ್ನು ಹೋಲುತ್ತಿತ್ತು. ಕಕ್ಕೆಮರ, ಎಕ್ಕದ ಗಿಡ, ಕರಡಿಗಳಿಂದ ಕಾಡು

ಚಂ॥ ವರತರುವಲ್ಲರೀಪ್ರಕರದಿಂ ಕರದಿಂ ಕರೆದಿಂಬುವೆತ್ತು ಸಂ
ಚರಿಸುವ ಕಿನ್ನರಪ್ರಸರದಿಂ ಸರದಿಂ ಸರದಿಂದುಕಾಂತಿನಿ
ರ್ಝರ ಸಲಿಲಂಗಳಿಂ ಬದರಿಯಿಂ ದರಿಯಿಂ ದರಿಯಿಂದಗಲ್ದನಿಂ
ದುರುಮುನಿವೃಂದದಿಂದೆ ಹರಿಯಿಂ ಹರಿಯಿಂ ಹರಿಯಿಂದವೊಪ್ಪುಗುಂ ೭೬

ವ॥ ಸಂತತಮಿಂತೊಪ್ಪುವ ಕಾಂತಾರಾಂತರಾಳದಲ್ಲಿ

ಚಂ॥ ಪಡಿನೆಳಲಂ ಮೃಗೇಂದ್ರನುಱಿ ಚಂದ್ರಶಿಲಾತಳದಲ್ಲಿ ಕಂಡು ಕಾ
ಯ್ಪಡರಲಿದಿರ್ಚೆ ಮತ್ತದುಮಿದಿರ್ಚಿರೆ ಗರ್ಜಿಸೆ ಮೇಘನಾದದಿಂ
ದೊಡನದು ಗರ್ಜಿಸುತ್ತಿರೆ ಪಳಂಚಿ ವಿಲಂಘಿಸಿ ಪಾಯ್ದು ಪೊಯ್ದು ತಾಂ
ಮಡಿದುದು ಶುದ್ಧರಲ್ಲಿ ನಿಜದೋಷಮನೊಂದಿಸೆ ಕೆಟ್ಟುಪೋಗರೇ ೭೭

ಮ॥ಸ್ರ॥ ಮೊಳೆವುಲ್ಲಂ ಮೇದು ಮಧ್ಯಂದಿನದ ಬಿಱುವಿಸಿಲ್ತಾಗೆ ಬೆನ್ನಂ ಭರಂಗೊಂ
ಡೆಳಸುತ್ತಂ ಪಲ್ಲವಾಂಭಃಪ್ಲವದೆ ಮುಳುಗಿ ತತ್ಕರ್ದಮಂ ಪತ್ತೆ ನಿಂದ
ವ್ವಳಿಸುತ್ತೊಂದೊಂದಱೊಳ್ ಕೋಡಿಡುತೆ ಮುಗುಳ್ದು ಮೆಲ್ಲಾಡುತಂ ಕಾಡೊಳೊಪ್ಪಂ
ದಳೆದಿರ್ದತ್ತಭ್ರಕಾಯಂ ಪ್ರಥುಮಹಿಷನಿಕಾಯಂ ಕರಂ ಪ್ರೋತ್ಸುಕಾಯಂ ೭೮

ಚೆಲುವಾಗಿ ಶೋಭಿಸುತ್ತಿತ್ತು. ೭೬. (ಆ ಅರಣ್ಯವು) ಶ್ರೇಷ್ಠವಾದ ಮರಗಳ ಬಳ್ಳಿಗಳ ಸಮೂಹದಿಂದಲೂ, ಕೈಮಾಡಿ ಕರೆದು ಸುಖವಿಲಾಸವನ್ನು ಹೊಂದಿ ಸಂಚಾರ ಮಾಡುತ್ತಿರುವ ಕಿನ್ನರರೆಂಬ ದೇವತಾಜಾತಿಯ ಜನರ ಸಮೂಹದಿಂದಲೂ (ಕೂಡಿತ್ತು.) ಸರೋವರಗಳಿಂದಲೂ, ಹರಿಯುತ್ತಿರುವ ಚಂದ್ರಕಾಂತಶಿಲಾಸಲಿಲದ ಪ್ರವಾಹದಿಂದಲೂ (ಕೂಡಿತ್ತು). ಎಲಚಿಯ ಮರಗಳಿಂದಲೂ, ಕಂದರಗಳಿಂದಲೂ, ಗವಿಗಳಿಂದಲೂ, ಸರ್ವಸಂಗಪರಿತ್ಯಾಗಿಗಳಾದ ಶ್ರೇಷ್ಠರಾದ ಮುನಿಗಳ ಸಮೂಹದಿಂದಲೂ, ಸಿಂಹಗಳು ಆನೆಗಳು ಜಿಂಕೆಗಳು, ಇವೇ-ಮೊದಲಾದುವುಗಳಿಂದಲೂ ಶೋಭಿಸುತ್ತಿತ್ತು. ವ॥ ಈ ಪ್ರಕಾರವಾಗಿ ಸತತವೂ ಶೋಭಿಸುತ್ತಿರುವ ಆರಣ್ಯದ ಮಧ್ಯಭಾಗದಲ್ಲಿ ೭೭. ಒಂದು ಚಂದ್ರಕಾಂತಶಿಲೆಯಲ್ಲಿ ಮೃಗಶ್ರೇಷ್ಠವಾದ ಸಿಂಹವು ತನ್ನ ಪಡಿನೆಳಲನ್ನು ಕಂಡು ಕೋಪವೇರಲಾಗಿ (ಪ್ರತಿಬಿಂಬರೂಪವಾದ ಅದನ್ನು) ಎದುರಿಸಿತು. (ಸಿಂಹವು) ಮೇಘಧ್ವನಿಗೆ ಸಮಾನವಾಗಿ ಗರ್ಜಿಸಲಾಗಿ ಛಾಯಾಗತವಾದ ಸಿಂಹವೂ ಇದರ ಹಾಗೆಯೇ ಗರ್ಜಿಸುತ್ತಿರಲು, ಅದರ ಮೇಲೆ ಬೀಳಲು ಹಾರಿ ಕಲ್ಲಿಗೆ ಹಾಯ್ದು, ಹೊಡೆದು (ಜೀವಂತ) ಸಿಂಹವು ಮರಣವನ್ನಪ್ಪಿತು. ಪರಿಶುದ್ಧರ ಮೇಲೆ ತನ್ನ ದೋಷವನ್ನು ಆರೋಪಮಾಡಿದವರು (ತಾವೇ) ನಾಶವಾಗಿ ಹೋಗಲಾರರೇ ! ೭೮. ದಷ್ಟಪುಷ್ಟವಾಗಿ ಬೆಳೆದು ಮೋಡಗಳಂತೆ ಕಪ್ಪಾದ ದೇಹಕಾಂತಿಯಿಂದ ಕೂಡಿ ಅತ್ಯಂತ ಲವಲವಿಕೆಯಿಂದಿರುವ ಕಾಡುಕೋಣಗಳ ಸಮೂಹವು (ಆ ಅರಣ್ಯದ) ಎಳೆಯ ಹುಲ್ಲನ್ನು ಮೇದು, ಮಧ್ಯಾಹ್ನಕಾಲದ ಸುರಿಯುತ್ತಿರುವ ಬಿಸಿಲು ಭರದಿಂದ (ವಿಶೇಷವಾಗಿ) ಬೆನ್ನಿಗೆ ಚುರು

ಚಂ|| ಕಡುಪಸಿವೆತ್ತ ಪುತ್ತನೆಡೆಯೊಳ್ ಮೊಗವಿಕ್ಕುತಿಱುಂಪೆಗೆಂದು ಮ
ತ್ತೆಡೆವಿಡದೂದುತಿರ್ಪ ನವಮದೊಂದು ಮಹೋರಗಮಾನನಾಗ್ರಮಂ
ಪಿಡಿದಡದರ್ಗಲ್ಲಿ ನೇಲುತಿರೆ ಸುಂಡಿಲವೊಲ್ ನೊರೆ ಪಾಯೆ ಪಲ್ಗಳಂ
ತೊಡನೆಸೆದತ್ತು ಬಲ್ಗರಡಿ ಕಾನನದೊಳ್ ಕರಿಪೋತದಂತೆವೋಲ್ ೭೯

ಕಂ|| ಮಿಡಿವಿಲ್ವಿಡಿದು ಪುಳಿಂದಿಯ
ರಿಡೆ ಗಜಮೌಕ್ತಿಕದ ಮಿಂಟಿಯುಂಬರದೆಡೆಯೊಳ್
ನಡೆದು ಪಗಲುಳ್ಕು ಬೀಳ್ವವೊ
ಲೊಡನೆಸೆದುದು ಮೃಗದ ಕೇಡನಱಿಪಲ್ ಬನದೊಳ್ ೮೦

ವ|| ಇಂತಸದಳಮೆಸೆವಾ ಪೇರಡವಿಯುಂ ಬೇಂಟೆಯಾಡಲೆಂದು ಬಿಯುದರ್ ಸಂದಣಿಸಿ ಪೊಕ್ಕುಮಿಕ್ಕು ಮೀಱಿ ಸಂಭ್ರಮಿಸಿ ಸರುವಿಡಿದು ಹಣಿಯಿರ್ಪೆಡೆಗೆಯ್ತಂದು

ಕಾಗಿ ತಾಕುತ್ತಿರಲು, ಕೆಸರುನೀರಿನಿಂದ ಕೂಡಿದ ಕುಂಟೆಯ ನೀರಿಗೆ ಇಚ್ಛಿಸಿದವುಗಳಾಗಿ ಅಲ್ಲಿ ಮುಳುಗಿ (ಆ ಕುಂಟೆಯ) ಕೆಸರು ಮೈಗೆ ಅಂಟಲು ನಿಂತು ಮೈಯನ್ನು ಕೊಡಹುತ್ತ ಒಂದು ಕೋಣವು ಮತ್ತೊಂದು ಕೋಣದೊಡನೆ ಕೋಡಾಟವಾಡುತ್ತ, ಮೆಲುಕುಹಾಕುತ್ತ ಆ ಕಾಡಿನಲ್ಲಿ ಶೋಭೆಯನ್ನು ಪಡೆದಿದ್ದವು. ೭೯. ವಿಶೇಷವಾಗಿ ಹಸಿವಾಗಲು ಒಂದು ಕರಡಿಯು ಒಂದು ಹುತ್ತದ ತೂತಿನಲ್ಲಿ ಇರುವೆಗಾಗಿ ಮುಖವಿಟ್ಟು ಒಂದೇ ಸಮನಾಗಿ ಊದುತ್ತಿತ್ತು. ಹೀಗಿರುವಾಗ ಒಂದು ದೊಡ್ಡ ಹಾವು ಆ ಕರಡಿಯ ಮುಖದ ಮುಂಭಾಗವನ್ನು ಕಚ್ಚಿ ಹಿಡಿದು ಆನೆಯ ಸೊಂಡಿಲಿನ ಹಾಗೆ ನೇತಾಡತೊಡಗಿತು. ಬಾಯಲ್ಲಿ ನೊರೆ ಬರತೊಡಗಿತು. ಅದರ ಹಲ್ಲುಗಳೇ ಚಿಕ್ಕದಂತಗಳಂತೆ ಕಾಣುತ್ತ ಆ ದೊಡ್ಡ ಕರಡಿಯು ಕಾಡಿನಲ್ಲಿ ಆನೆಯಮರಿಯ ಹಾಗೆ ಶೋಭಿಸುತ್ತಿತ್ತು. ೮೦. ಆ ಅರಣ್ಯದಲ್ಲಿ ಬೇಡಿತಿಯರು ಮಿಡಿಯುವ ಬಿಲ್ಲನ್ನು ಹಿಡಿದುಕೊಂಡು ಆನೆಯ ತಲೆಯಲ್ಲಿನ ಮುತ್ತುಗಳನ್ನು ಗೋಲಿಗಳನ್ನಾಗಿ ಮಾಡಿ ಕವಣೆಯಿಂದ ಮಿಡಿಯುತ್ತಿರಲು, ಅವು ಆ ಅರಣ್ಯದಲ್ಲಿ ಮೃಗನಾಶಸೂಚನೆಯನ್ನು ತಿಳಿಸುವಂತೆ ಹಗಲಿನಲ್ಲಿ ಉಲ್ಕೆಗಳು ಉದುರುತ್ತಿರುವುವೋ ಎಂಬಂತೆ ಕಾಣುತ್ತಿತ್ತು. ವ|| ಹೀಗೆ ಅಸದಳವಾಗಿ ಶೋಭಿಸುವ ಆ ದೊಡ್ಡ ಅಡವಿಯಲ್ಲಿ ಬೇಟೆಯಾಡಲಿಕ್ಕೆಂದು ಬೇಡರುಗಳು ಗುಂಪಾಗಿ ಹೊಕ್ಕು, ವಿಶೇಷ ಸಂಭ್ರಮದಿಂದ ತಗ್ಗಿನ ಪ್ರದೇಶವನ್ನನುಸರಿಸುತ್ತ ಮೃಗಗಳಿರುವ ಪ್ರದೇಶಕ್ಕೆ

ಚಂ॥ ಇದು ಕರಿಪೋದ ತಾಣಮಿದು ಸೈರಿಭಮೆಯ್ದಿದ ದಾರಿ ನೋಳ್ಪೊಡಿಂ
ತಿದು ಪುಲಿಯಿರ್ದ ಬಲ್ಮೆಳೆಯಿದೆಕ್ಕಲನೇಳ್ದಡಿಯಿಟ್ಟ ಬಟ್ಟೆ ನೋ
ಡಿದು ಹರಿ ನಿಂದ ಪಚ್ಚೆಯಿದೆಪೊಕ್ಕ ಮದಾಂಬುವಿದಾಸ್ಯಫೇನಮಿಂ
ತಿದೆ ತನಿಗರ್ಬು ತಳ್ತಿದೆ ಕೆಸರ್ಪರಿಗೊಂಡಿದೆ ಹಸ್ತಿಮೌಕ್ತಿಕಂ ೮೧

ವ॥ ಎಂದು ಕುಱುಪುಗೊಂಡನುಮಿಸುತ್ತೆ ಮತ್ತಮಾಣದೆ

ಮ॥ ಮರಗೊಂಬಂ ಪರಿದೇಱಿನೋಳ್ಪ ಮೆಳೆಯಿಂದಂ ಸೋವುತಲ್ಲಲ್ಲಿ ಬೇ
ಹಿರಿಸುತ್ತಂ ಪೊದಱಿಂ ತೆರಳ್ಚುವಡಿಗಂಡಾರಯ್ವ ನೀರ್ದಾಣದೋ
ವರಿಯೊಳ್ಕಾವ ಕಡಂಗಿ ಕಂಡು ಮಿಗಮಂ ಬೆಂಕೊಂಬ ಬೇಡರ್ ನರೇ
ಶ್ವರ ಕೇಳ್ ಪರ್ಬಿದರಣ್ಯದೊಳ್ ಪರಿದರೇನೆಂಬೆಂ ತದಾಟೋಪಮಂ ೮೨

ಚಂ॥ ಸರಳಿಪ ಪುಲ್ಲೆವೋಡುವ ಮೊಲಂ ಬಿಡದಾಲಿಪ ಹಸ್ತಿ ನಿಲ್ವ ಸೂ
ಕರನಡಿಗೊಳ್ವ ಪೆರ್ಮಱೆಯಡಂಗುವ ಪೆರ್ಬುಲಿ ಪಾರ್ವ ಪಕ್ಕಿಗಳ್
ಕೊರಗುವ ಖಡ್ಗಿ ಲಂಘಿಪ ವೃಕಂ ಮುಱಿದೇಳ್ವ ಮೃಗೇಂದ್ರನೆತ್ತಲುಂ
ನೆರೆದಿರೆ ಕಾಡೊಳುಣ್ಮಿದುದು ಬೇಡರ ಬೇಂಟೆಯ ವಾದ್ಯದಬ್ಬರಂ ೮೩

ಬಂದು ೮೧. "ಇದು ಆನೆಯು ನಡೆದು ಹೋದ ಸ್ಥಳ; ಇದು ಕಾಡುಕೋಣವು ಹೊರಟು ಹೋದ ದಾರಿ; ವಿಚಾರಿಸಿ ನೋಡಿದರೆ ಇದು ಹುಲಿಯು ಇರುವ ದೊಡ್ಡ ಪೊದೆ; ಈ ಪ್ರದೇಶವು ಕಾಡುಹಂದಿಯು ಎದ್ದು ಹೆಜ್ಜೆಯನ್ನಿಟ್ಟ ಹೋದ ಮಾರ್ಗ; ನೋಡು, ಇದು ಸಿಂಹವು ನಿಂತುಕೊಂಡಿದ್ದ ಸ್ಥಳ; ಇದು ಸೋರಿದ ಮದೋದಕ; ಇದು ಬಾಯಿ ಯಿಂದ ಜಗುಳಿಬಿದ್ದ ನೊರೆ; ಇಂತು ಇಲ್ಲಿ ನೂತನವಾದ (ಮೃಗ ಸಂಬಂಧದ) ವಾಸನೆಯು ಹರಡಿದೆ; ಇಗೋ ಇಲ್ಲಿ ಕೆಸರು ಹರಿದಿದೆ; ಇಗೋ ಇಲ್ಲಿ ಆನೆಯ ನೆತ್ತಿಯ ಮುತ್ತುಗಳು!" ವ|| ಹೀಗೆಂದು (ವಿವಿಧ ಪ್ರಾಣಿಗಳ) ಗುರುತು ಹಿಡಿಯುತ್ತ ಅನುಮಾನಗೊಳ್ಳುತ್ತ, ಮತ್ತೂ ಬಿಡದೆ ೮೨. ಮರಗಳ ಕೊಂಬೆಗಳನ್ನು ಹತ್ತಿ ನೋಡುವ, ಆಯಾಯ ಸ್ಥಳಗಳಲ್ಲಿ ಕಾವಲನ್ನಿಡುತ್ತ ನೋಡುವ, ಮೆಳೆಗಳಿಂದ ಪ್ರಾಣಿಗಳು ಹೊರಗೆ ಬರುವಂತೆ ಮಾಡುತ್ತ, ಮೆಳೆಗಳಿಂದ ಹೊರ ಹೊರಡಿಸುತ್ತ, ಹೆಜ್ಜೆಗಳ ಗುರುತು ಹಿಡಿದು ಹುಡುಕುತ್ತ, ನೀರಿರುವ ಸ್ಥಳಗಳ ಸಮೀಪದಲ್ಲಿ ಕಾವಲುಕೂಡುತ್ತ, ಹೊಂಚುಹಾಕಿ ಕುಳಿತು ಮೃಗಗಳನ್ನು ನೋಡಿ ಬೆನ್ನಟ್ಟುವ ಬೇಡರುಗಳು ಅರಣ್ಯದಲ್ಲಿ ಸಂಚರಿಸುತ್ತಿದ್ದರು. ಅವರ ಆಟೋಪ ವನ್ನು ಏನೆಂದು ಹೇಳಲಿ! ೮೩. ಹಾರಿ ಹಾರಿ ಹೋಗುತ್ತಿರುವ ಜಿಂಕೆ, ಓಡುವ ಮೊಲ, ಸ್ಥಳ ಬಿಟ್ಟು ಕದಲದೆ ಧ್ವನಿಯನ್ನು ಆಲಿಸುತ್ತಿರುವ ಆನೆ, ನಿಂತುಕೊಂಡಿರುವ ಹಂದಿ, ಹೆಜ್ಜೆ ಯಿಡುತ್ತಿರುವ ದೊಡ್ಡ ದೊಡ್ಡ ಮಱೆಯೆಂಬ ಜಿಂಕೆ, ಅಡಗಿಕೊಳ್ಳುತ್ತಿರುವ ಹೆಬ್ಬುಲಿ, ಹಾರಿಹೋಗುತ್ತಿರುವ ಪಕ್ಷಿ, ಸಂಕಟಪಡುತ್ತಿರುವ ಖಡ್ಗಮೃಗ (ಘೇಂಡಾಮೃಗ), ಕುಪ್ಪಳಿಸಿ ಹಾರುತ್ತಿರುವ ತೋಳ, ಮೈಮುರಿದು ಮೇಲೇಳುವ ಸಿಂಹ ಮೊದಲಾದವು ಎಲ್ಲಕಡೆಗೂ ಹೀಗೆ ವ್ಯವಹರಿಸುತ್ತಿರಲು ಬೇಡರ ಬೇಟೆಯ ವಾದ್ಯಧ್ವನಿಯು ಎಲ್ಲಕಡೆಗೂ

ನಡೆ ಬಿಡು ನಾಯ್ಗಳಂ ತೊಡು ಸರಳ್ಗಳನಾರ್ದೆಸೆ ಸುತ್ತು ಪತ್ತು ಬೊ
ಬ್ಬಿಡು ಬಡಿಕೋಲ್ಗಳಿಂದಿಡು ಮೊಲಂಗಳನೇಳ್ ಬಲೆವೀಸಿ ಪುಲ್ಲೆಯಂ
ಕೆಡಪು ಕಡಂಗಿ ಪೊಯ್ ಪುಲಿಯನೀಟಿಯೊಳಾಂತಿಡು ಪಂದಿಯಂ ಪಡ
ಲ್ವಡಿಸು ಗಜಂಗಳಂ ಕುಳಿಯೊಳೆಂಬ ರವಂ ಪಿರಿದಾಯ್ತರಣ್ಯದೊಳ್ ೮೪

ವ|| ಆಗಳಲ್ಲಿ ಪೆಱತೊಂದು ತಾಣದಲ್ಲಿ

ಚಂ|| ಚವರಿಮಿಗಕ್ಕೆ ನುಣ್ಗುರುಳನಗ್ಗದ ಹಸ್ತಿಗೆ ನೀಳ್ದ ಹಸ್ತಮಂ
ಕವಲಿರಿದಿರ್ದ ಕೊಂಬಿನ ಮೃಗವ್ರಜಕಿರ್ಬೆರಲಂ ದ್ವಿಪಾರಿಗು
ಣ್ಮುವ ರಸನಾಗ್ರಮಂ ಪುಲಿಗೆ ಕೈಯೆರಡಂ ನಿಮಿರ್ದೆತ್ತಿ ಪಂದಿಗೊ
ಪ್ಪುವ ಮೊಳಕೈಯ ತೋರ್ಪರರೆಬರ್ ಬಿಯದರ್ ಸಲೆ ಸನ್ನೆವೇಂಟೆಯೊಳ್ ೮೫

ವ|| ಆಗಳವರೊಳೊರ್ವ ಪುಳಿಂದಂ ತನ್ನ ಪೆಸರ ಪೇರಡಿಯ ಹಾಸಮಂ ಕಳಿದು ಮೈದಡವಿ ಕೈಚಿಟುಂಕಿಗೈದು ಪುಲ್ಲೆಯಂ ತೋಱಿಬಿಡಲೊಡನೆ

ಕಂ|| ಬೆದರ್ವ ಮನಂ ಬೆರ್ಚುವ ಕ
ಣ್ಣದಿರ್ವಂಗಂ ನಟ್ಟ ಕಿವಿಗಳೊಡನೊಡನಿಳಿವ
ಗ್ಗದ ಸುಯ್ ಪೊಯ್ವಳ್ಳೆ ಪೊದ
ಳ್ದೊದವೆ ಜವಂಗುಂದದೆರಳೆ ಸರಳಿಸಿತಾಗಳ್ ೮೬

ಆ ವನನದಲ್ಲಿ ಉಂಟಾಯಿತು. ೮೪. "ಮುಂದಕ್ಕೆ ನಡೆ ; ನಾಯಿಗಳನ್ನು ಬಿಡು; ಬಾಣಗಳನ್ನು ತೊಡು; ಬೇರಿಟ್ಟು ಬಾಣಬಿಡು ; ಸುತ್ತಲೂ ಮುತ್ತಿ ಬೊಬ್ಬೆಹಾಕು; ಬಡಿಕೋಲುಗಳಿಂದ ಮೊಲಗಳನ್ನು ಹೊಡೆ; ಏಳು ಬಲೆಬೀಸಿ ಜಿಂಕೆಯನ್ನು ಕೆಡವು; ಹುಲಿಯನ್ನು ಕೋಪಗೊಂಡು ಹೊಡೆ; ಹಂದಿಯನ್ನು ಈಟಿಯಿಂದ ಗುರಿಯಿಟ್ಟು ಹೊಡೆ. ಆನೆಗಳನ್ನು ಕಂದಕದಲ್ಲಿ ಬೀಳುವಂತೆಮಾಡು" ಎಂಬ ಧ್ವನಿಯು ಅರಣ್ಯದಲ್ಲಿ ಹೆಚ್ಚಾಯಿತು. ವ|| ಆಗ ಮತ್ತೊಂದು ಸ್ಥಳದಲ್ಲಿ ೮೫. ಆ ಬೇಡರು ಸಂಜ್ಞೆಮಾಡಿ ತೋರಿಸಿ ಆಡುವ ಬೇಟೆಯಲ್ಲಿ ಚಮರಿಮೃಗವಿದೆ ಎಂದು ತೋರಿಸುವ ಸಂಜ್ಞೆಗೆ (ತಮ್ಮ) ನುಣ್ಗುರುಳುಗಳನ್ನು ತೋರಿಸುತ್ತಿದ್ದರು. ಶ್ರೇಷ್ಠವಾದ ಆನೆಗೆ ಉದ್ದವಾದ ತೋಳುಗಳನ್ನೂ, ಕವಲುಗೊಂಡ ಕೊಂಬಿನ ಮೃಗವಾದ ಸಾರಂಗಕ್ಕೆ ಎರಡು ಬೆರಳುಗಳನ್ನೂ, ಸಿಂಹಕ್ಕೆ ಮುಂದಕ್ಕೆ ಚಾಚಿರುವ ನಾಲಿಗೆತುದಿಯನ್ನೂ, ಹುಲಿಗೆ ಎರಡು ಕೈಗಳನ್ನು ನಿಮಿರಿಸಿ ಎತ್ತುತ್ತಲೂ, ಹಂದಿಗೆ ಶೋಭಿಸುವ ಮೊಳಕೈಯನ್ನೂ ಕೆಲವು ಬೇಡರು ತೋರಿಸುತ್ತಿದ್ದರು. ವ|| ಆಗ ಅವರಲ್ಲಿ ಒಬ್ಬ ಬೇಡನು ತನ್ನ ಹೆಸರಿನ ನಾಯಿಯ ಕೊರಳ ಕೋಲನ್ನು ಬಿಚ್ಚಿ ಮೈಮೇಲೆ ಕೈಯಾಡಿಸಿ ಕೈಯ ಚಿಟುಕಿನ ಸಂಜ್ಞೆಮಾಡಿ ಜಿಂಕೆಯನ್ನು ತೋರಿಸಿ ಬಿಟ್ಟಕೂಡಲೆ ೮೬. ಬೆದರಿದ ಮನಸ್ಸು, ಬೆಚ್ಚುವ ಕಣ್ಣು, ನಡುಗುವ ದೇಹ, ನಿಗುರಿಸಿದ ಕಿವಿ, ಮೇಲೆ ಮೇಲೆ ಇಳಿಯುತ್ತಿರುವ ಅತಿಶಯವಾದ ಶ್ವಾಸವಾಯು, ಬಡಿದುಕೊಳ್ಳುತ್ತಿರುವ ಪಕ್ಕೆಗಳ ಹೊಡೆತ ಹೆಚ್ಚಾಗಿ ಉಂಟಾಗುತ್ತಿರಲು, ವೇಗಗುಂದದೆ,

ನೆಗೆವ ಕುಡಿವಾಲಮುಣ್ಮುವ
ಬಗೆ ಬಳ್ಕುವ ನಡುವಗುರ್ವಿಪಾನನಮಿರೆ ತ
ನ್ಮೃಗಮಂ ಬಳಿವಿಡಿದಟ್ಟು
ತ್ತಗಲದೆ ಪಿಡಿದತ್ತು ಜಾಯಿಲಂ ತದ್ವನದೊಳ್ ೮೭

ವ|| ಅಲ್ಲಿ ಕೆಲಂಬರ್ ಕಿರಾತೆಯರ್ ನೆರೆದು

ಕಂ|| ವದನಾಬ್ಜವಿರೋಧಿಯನಾ
ಬಿದುವಂ ಕೆಳೆಗೊಂಡುದಲ್ಲದೆಮ್ಮಾಕ್ಷಣದಂ
ದದ ಕಣ್ಣುೞಿವಮಗೆಂದಿ
ರ್ಪುದಿದೆಂದಿಸುವಂತೆ ಪುಲ್ಲೆಯಂ ಪದೆದೆಚ್ಚರ್ ೮೮

ವ|| ಅದಲ್ಲದೆಯುಂ

ಮ|| ಕಿಡಿ ಪುಟ್ಟುತ್ತಿರೆ ದಾಡೆಯಂ ಮಸೆದು ಕಿಗ್ಗಣ್ಣಿಕ್ಕಿ ನೋಡುತ್ತೆ ಮೈ
ಗೊಡಪುತ್ತಬ್ಬರಮಾಲಿಸುತ್ತೆ ಮೊಗಮಂ ತೂಗುತ್ತೆ ವಾಲಾಗ್ರಮಂ
ಮಿಡುಕುತ್ತುಬ್ಬರಿಸುತ್ತೆ ರೋಮಚಯಮಂ ಮಿಾಂಟುತ್ತೆ ಕಂದಂಗಳಂ
ಕಿಡಪುತ್ತೞಗದೊಳುರ್ದಿ ಬಲ್ಮರಗಳಂ ಬಂದತ್ತದೊಂದೆಕ್ಕಲಂ ೮೯

ಜಿಂಕೆಯು ನೆಗೆನೆಗೆದು ಓಡುತ್ತಿತ್ತು. ೮೭. ನೆಗೆದಾಡುತ್ತಿರುವ ಬಾಲದ ಕೊನೆ, ಉಬ್ಬುವ ಮನಸ್ಸು, ಬಳುಕಾಡುವ ನಡುವು, ಕ್ರೋಧದಿಂದ ವಿಸ್ತಾರವಾದ ಮುಖದಿಂದ ಕೂಡಿದ ಆ ನಾಯಿಯು ಜಿಂಕೆಯನ್ನು ಅಟ್ಟಿಸಿಕೊಂಡು ಹೋಗಿ ತಪ್ಪದೆ ಆ ವನದಲ್ಲಿ ಹಿಡಿಯಿತು. ವ|| ಅಲ್ಲಿ ಕೆಲವರು ಬೇಡಿತಿಯರು ಕೂಡಿ ೮೮. ನಮ್ಮ ಮುಖ ಕಮಲಗಳ ವಿರೋಧಿಯಾದ ಆ ಚಂದ್ರನನ್ನು ಈ ಜಿಂಕೆಯು ಸ್ನೇಹಗೊಂಡದ್ದಲ್ಲದೆ, ನಮ್ಮಂತೆಯೇ ಚಪಲವಾದ ಕಣ್ಣು ಉಂಟು ಎಂದು ಈ ಜಿಂಕೆಯು ತಿಳಿದಿರುವುದು ಎಂದು ಹೊಡೆಯುವಹಾಗೆ ಎಲ್ಲರೂ ಸೇರಿ ಆ ಜಿಂಕೆಯನ್ನು ಹೊಡೆದರು. ವ|| ಅದೂ ಅಲ್ಲದೆ, ೮೯. ಒಂದು ಹಂದಿಯು ತನ್ನ ದಾಡೆಗಳನ್ನು ಕಿಡಿಹುಟ್ಟುವಹಾಗೆ ಮಸೆದು, ತನ್ನ ಕಿರಿದಾದ ಕಣ್ಣುಗಳಿಂದ ನೋಡುತ್ತ, ಮೈಯನ್ನು ಕೊಡವುತ್ತ, ಬೇಡರ ಅಬ್ಬರವನ್ನು ಆಲಿಸುತ್ತ, ಮುಖವನ್ನು ತೂಗಾಡಿಸಿ, ಬಾಲದ ಕೊನೆಯನ್ನು ಮಿಡುಕಾಡಿಸಿ, ಕೂದಲು ಗಳನ್ನು ಎಬ್ಬಿಸಿ ನಿಲ್ಲಿಸುತ್ತ, ಗೆಡ್ಡೆಗೆಣಸುಗಳನ್ನು ಎಬ್ಬುತ್ತ, ದೊಡ್ಡ ಮರಗಳನ್ನು

ವ॥ ಆಗಳ್

ಉ॥ ಪೋಗದಿರೆಂದು ಗರ್ಜಿಪ ಕಿರಾತನ ಮಾತದು ತನ್ನ ಕರ್ಣಮಂ
ತಾಗದ ಮುನ್ನಮುಣ್ಮೆ ಕಿಡಿ ಕಣ್ಕಡೆಯೊಳ್ ಕಿಟಿ ದಾಡೆಗುಟ್ಟಿ ತಾಂ
ತಾಗಲಿದಿರ್ಚೆ ಕೋಡುಡಿದ ಕಾಲನ ಸೈರಿಭದಂತೆ ಬರ್ಪಿನಂ
ತೂಗಿ ಕರಾಗ್ರದಿಂದೆ ಪೊಳೆವಿಟ್ಟಿಯೊಳಿಟ್ಟನದಂ ವನೇಚರಂ ೯೦

ಕಂ॥ ಇಡೆ ಪಣೆಯನಡಸಿ ಕಂದಮ
ನೊಡೆದುಚ್ಚಳಿಸಿರೆ ಸರೋಷಮತಿ ಮಗುಳ್ದಿದಿರಂ
ನಡೆದದಱಣಸಿನ ಮೊನೆಯಿಂ
ದೊಡನಿಕ್ಕಿತು ಪಾಯ್ದು ಪಂದಿಯುವನಂ ವನದೊಳ್ ೯೧

ಚಂ॥ ಕುಸಿದ ಪರಾಂಗಮುಜ್ವಲಿತ ಪಿಂಗಳಲೋಚನಮುಗ್ರದಂಷ್ಟ್ರಮಾ
ರ್ಪೆಸೆವ ಮನಂ ಧರಿತ್ರಿಯೊಳೆ ಚಾಲಿಪ ಬಾಲಮುಗುರ್ವಿಪಾನನಂ
ನಸುನೆಗೆದಿರ್ದ ತೋರತಲೆ ಮುಂಗಡೆ ಸಾರ್ಚಿದ ಕಾಲರಲ್ದ ಮೂ
ಗೆಸೆಯೆ ತರಕ್ಷುದಂಶಶತಸಂವೃತಮಿರ್ದುದದೊಂದು ತಾಣದೊಳ್ ೯೨

ಮೈಯಿಂದ ಉದ್ದಿ ಕೆಡವುತ್ತ ಬಂದಿತು. ವ॥ ಆಗ ೯೦. ಒಬ್ಬ ಬೇಡನು ಹೋಗ ಬೇಡ ಎಂದು, ಮತ್ತೊಬ್ಬ ಕಿರಾತನು ಗರ್ಜಿಸುತ್ತ ಹೇಳುವಮಾತು ತನ್ನ ಕಿವಿಗೆ ಬೀಳುವ ಮೊದಲೇ ಕಣ್ಣಿನ ಕಡೆಯಲ್ಲಿ ಕಿಡಿಗಳನ್ನುದುರಿಸುತ್ತ, ದಾಡೆಗಳನ್ನು ಕುಟ್ಟಿ ಕೋಡಿಲ್ಲದ ಯಮನ ಕೋಣನಂತೆ ಹಂದಿಯೊಂದು ಎದುರಿಸಲು ಬರುತ್ತಿರಲು, ಹೊಳೆಯುವ ಈಟಿಯನ್ನು ಕೈಯಿಂದ ತೂಗಿ ಅದನ್ನು ಹೊಡೆದನು. ೯೧. ಇಟ್ಟ ಈಟಿಯು ಹಣೆಯಲ್ಲಿ ಚುಚ್ಚಿ, ಹಣೆಯ ಗಡ್ಡೆಯನ್ನು ಭೇದಿಸಿ ತಡಹಾಯ್ದು ಇರಲು ಅತ್ಯಂತ ರೋಷ ದಿಂದ ಪುನಃ ಎದಿರುಬಿದ್ದು ನಡೆದು ಮೇಲೆ ಬಿದ್ದು ಆ ಈಟಿಯ ಅಣಸಿನ ತುದಿಯಿಂದ ಹಂದಿಯು ಬೇಡನನ್ನು ತಿವಿದು ಅವನನ್ನು ಕೊಂದಿತು. ೯೨. ಕುಸಿದಂತೆ ಇರುವ ತಲೆ, ಉಜ್ವಳವಾದ ಪಿಂಗಳಬಣ್ಣದ ಕಣ್ಣು, ಉಗ್ರವಾದ ದಾಡೆಹಲ್ಲು, ಸಾಮರ್ಥ್ಯದಿಂದ ಶೋಭಿಸುವ ಮನಸ್ಸು, ಭೂಮಿಯ ಮೇಲೆ ಚಲಿಸುವ ಬಾಲ, ತೆರೆದ ಬಾಯಿ, ಸ್ವಲ್ಪ ಎತ್ತರವಾಗಿದ್ದ ದೊಡ್ಡ ತಲೆ, ಮುಂಭಾಗದಲ್ಲಿ ಚಾಚಿದ ಕಾಲು, ಅರಳಿದ ಮೂಗು–ಹೀಗೆ ಶೋಭಿಸುತ್ತ ನೂರಾರು ನೊಣಗಳಿಂದ ಮುತ್ತಲ್ಪಟ್ಟ ಹುಲಿಯೊಂದು ಒಂದು ಸ್ಥಾನ

ವ॥ ಇಂತತಿಭಯಾವಹಮಾಗಿ ತೋರ್ಪ

ಚಂ॥ ಪುಲಿ ಪೊಱಮಟ್ಟು ಕಣ್ಣದಿರೊಳಬ್ಬರಿಸುತ್ತಿರೆ ಬೊಬ್ಬೆಗೊಟ್ಟು ಗಂ
ಡುಳಿವೆರಸುತ್ತೆ ಪತ್ತಿ ಜಡಿದಾಯುಧದಿಂ ಪೊಡೆದಿಕ್ಕಿ ಮಿಕ್ಕು ನಿ
ಶ್ಚಲನೆನಿಸುತ್ತೆ ನಿಂದಿರೆ ಪುಳಿಂದನನಪ್ಪಿದಳಾಗಳಾತನಾ
ಲಲನೆ ತದೀಯ ದಕ್ಷಿಣಭುಜಾಗ್ರಮನಾ ಜಯಲಕ್ಷ್ಮಿಯೆಂಬಿನಂ ೯೩

ವ॥ ಮತ್ತಮೊಂದೆಡೆಯಲ್ಲಿ

ಚಂ॥ ಮೆಳೆಯೊಳಗಿರ್ದು ಮೇವ ಮಿಗಮಂ ಮಿಗೆ ಪೆರ್ಬುಲಿ ಕಂಡು ಕಾಣದಂ
ತಳವಿಗೆ ತರ್ಗಿ ಕುರ್ಗುತುಸಿರಿಕ್ಕದೆ ಬಂದು ಹಣುಂಗಿ ಪಾರ್ವ ತ
ನ್ನಳವನಭೀಕ್ಷಿಸುತ್ತೆ ಸಲೆ ಗರ್ಜಿಸಿ ಕಾಯ್ದು ಕಡಂಗಿ ಪಾಯ್ದು ಪೊ
ಯ್ದುಳಿಗಿರದಿಕ್ಕಿ ಘುರ್ಘುರಿತ ಕಂಠಮದೀಂಟಿತು ರಕ್ತವಾರಿಯಂ ೯೪

ವ॥ ಅದಲ್ಲದೆಯುಂ

ಉ॥ ಕಟ್ಟದಿರಲ್ಲಿ ಗರ್ಜಿಸೆ ತರಕ್ಷುತರಂ ತರಳಾಯತಾಕ್ಷಿ ಕಂ
ಗೆಟ್ಟಮರ್ದಪ್ಪಲಂಜದಿರೆನುತ್ತವಳಂ ಬಿಗಿದಪ್ಪುತಿರ್ಪನಂ
ತೊಟ್ಟನೆ ಪಾಯೆ ಪಜ್ಜೆಯಿಡದಲ್ಲಿಯೆ ನಿಂದು ಕಡಂಗಿ ಖಡ್ಗದಿಂ
ದಟ್ಟಿ ನೆಲಕ್ಕೆ ಬೀೞ್ವಿನಮದಂ ಸದೆದಂ ಶಬರಾಧಿನಾಯಕಂ ೯೫

ದಲ್ಲಿತ್ತು. ವ॥ ಹೀಗೆ ಅತಿ ಭಯಂಕರವಾಗಿ ಕಾಣುವ ೯೩. ಹುಲಿಯು ಹೊರ ಹೊರಟು ನೇರವಾಗಿ ಎದುರಿನಲ್ಲಿ ಅಬ್ಬರಿಸುತ್ತ ಇರಲಾಗಿ, ಒಬ್ಬ ಗಂಡಸು ಬೊಬ್ಬೆ ಹಾಕಿ ಮೇಲೆ ಬಿದ್ದು ಜಡಿದು ಆಯುಧದಿಂದ ಹೊಡೆದು ಹಾಕಿದನು. ಅಧಿಕತರ ವಾದ ಧೈರ್ಯಶಾಲಿಯೆನಿಸುತ್ತ ನಿಂತ ಆ ಬೇಡನನ್ನು ಆತನ ಹೆಂಡತಿಯು ಬಂದು ಅವನ ಬಲಭುಜವನ್ನು ಜಯಲಕ್ಷ್ಮಿಯು ಆಲಿಂಗಿಸುವಂತೆ ಆಲಿಂಗಿಸಿದಳು. ವ॥ ಮತ್ತೊಂದು ಸ್ಥಳದಲ್ಲಿ ೯೪. ಮೆಳೆಯಲ್ಲಿ ಮೇಯುತ್ತಿದ್ದ ಜಿಂಕೆಯೊಂದನ್ನು ದೊಡ್ಡ ಹುಲಿಯೊಂದು ಕಂಡು ಆ ಜಿಂಕೆಗೆ ಕಾಣದ ಹಾಗೆ, ತನ್ನ ಎತ್ತರವನ್ನು ತಗ್ಗಿಸಿ ಕುಗ್ಗಿ ಉಸಿರನ್ನು ಕೂಡ ಬಿಡದೆ ಬಂದು ಹಣಿಕಿನೋಡುತ್ತ, ಹಾರಿ ಮೇಲೆ ಬೀಳುವ ತನ್ನ ಸಾಮರ್ಥ್ಯವನ್ನು ತಾನೇ ನೋಡಿಕೊಳ್ಳುತ್ತ, ಚೆನ್ನಾಗಿ ಗರ್ಜಿಸಿ ಬಿಸಿಯೇರಿ ಕೋಪ ದಿಂದ ಹೊಡೆದು ಕೆಡವಿ ಘುರ್‌ಘುರೆನ್ನುವ ಕಂಠದಿಂದ ರಕ್ತಜಲವನ್ನು ಕುಡಿಯಿತು. ವ॥ ಅದೂ ಅಲ್ಲದೆ, ೯೫. ಒಬ್ಬ ಶಬರಮುಖಂಡನು ನೇರ ಎದುರಿನಲ್ಲಿಯೇ ಹುಲಿ ಯೊಂದು ಅತಿಶಯವಾಗಿ ಗರ್ಜಿಸಲಾಗಿ, ಚಂಚಲದೃಷ್ಟಿಯ ವಿಶಾಲಾಕ್ಷಿಯಾದ ಅವನ ಹೆಂಡತಿಯು ಹೆದರಿ ಗಟ್ಟಿಯಾಗಿ ಅಪ್ಪಿದಳು. ಹೆದರಬೇಡ ಎನ್ನುವ ಅವಳನ್ನು ಗಟ್ಟಿ ಯಾಗಿ ಅಪ್ಪುತ್ತಿರಲು, ಹುಲಿಯು ಒಮ್ಮೆಲೆ ಇವನ ಮೇಲೆ ಎರಗಲು ಅವನ ಹೆಜ್ಜೆಯನ್ನು ಕಿತ್ತಿಡದೆ ಅಲ್ಲಿಯೇ ನಿಂತು, ಕೋಪಗೊಂಡು ಖಡ್ಗದಿಂದ ಜಡಿದು ನೆಲಕ್ಕೆ ಬೀಳುವಂತೆ

ವ|| ಅಲ್ಲಿ ಮತ್ತೊರ್ವನೆಳೆಜವ್ವನದ ಪುಳಿಂದಂ

ಕಂ|| ಮುನಿದಿರ್ದನಿಯಳ್ ಪುಲಿ ಗ
ರ್ಜನೆಗುಡೆ ಭಯಮುತ್ತು ಕೊರಲನಮರ್ದಪ್ಪಿರೆ ತೊ
ಟ್ಟನೆ ಬಿಟ್ಟಂಬದನುರ್ಚಿರೆ[1]
ಮನದೊಳ್ ಮುದಮಂ ವಿಷಾದಮಂ ಕೈಕೊಂಡಂ ೯೬

ವ|| ಮತ್ತಮೊರ್ವಂ

ಕಂ|| ಎಳೆವೇಡಿತಿಯ ಕುಚಂಗಳ್
ಬಳೆಯೆ ಬಳಂಗುಂದಿ ಮಾಣ್ದನೆಂಬೀ ನೆವಮಂ
ತಳೆದವನೆ ಪೋಲ್ತ ಕುಂಭಂ
ಗಳನಾಂತಾನೆಗಳನೆಯ್ದಿ ಕೊಲ್ಲಂ ಭಿಲ್ಲಂ ೯೭

ಮ|| ಬಲಗಾಲ್ ಪಿಂದೆಸೆಗಾಗೆ ವಾಮಪದಮಂ ಮುಂದಿಟ್ಟು ದೋರ್ಮೂಲಮುಂ
ಮೊಲೆಯಗ್ರಂ ತಲೆದೋಱೆ ತೆಳ್ನಡು ಬಳುಂಕಲ್ ನುಣ್ಗೊರಲ್ ಕೊಂಕೆ ಕೋ
ಮಲೆ ನಿಂದಂಬಕದಗ್ರಹಮಂಬುದುದಿ ಲಕ್ಷ್ಯಂ ಮುಟ್ಟಿಯೊಂದಾಗೆ ತೋ
ಳ್ವಲಮಂ ತೋಱಲೊಡರ್ಚುತೆಚ್ಚಳಿನೆಯುಂ ಭಾಪೆಂಬಿನಂ ದ್ವೀಪಿಯುಂ ೯೮

ಅದನ್ನು ಹೊಡೆದುಕೊಂಡನು. ವ|| ಅಲ್ಲಿ ಮತ್ತೊಬ್ಬ ನವಯುವಕನಾದ ಬೇಡನು ೯೬. ಕೋಪಗೊಂಡಿದ್ದ ಪ್ರಿಯೆಯು ಹುಲಿಯು ಗರ್ಜಿಸಲಾಗಿ ಹೆದರಿ ಬಿಗಿಯಾಗಿ ತನ್ನನ್ನಪ್ಪಿಕೊಳ್ಳಲಾಗಿ, ಕೂಡಲೇ ಬಾಣವು ಹುಲಿಯನ್ನು ಭೇದಿಸಲಾಗಿ ಮನಸ್ಸಿನಲ್ಲಿ ಸಂತೋಷನನ್ನೂ (ಕೋಪಗೊಂಡ ಹೆಂಡತಿಯ ಬಗೆಗೆ) ವಿಷಾದವನ್ನೂ ಹೊಂದಿದವನಾದನು. ವ|| ಮತ್ತೊಬ್ಬನು ೯೭. ಒಬ್ಬ ಭಿಲ್ಲನು ತನ್ನ ಎಳೆ ಹೆಂಡತಿಯ ಕುಚಗಳನ್ನು ಹೋಲುವ ಕುಂಭಸ್ಥಳವಿದ್ದ ಆನೆಯನ್ನು ಕೊಲ್ಲಲಿಲ್ಲ. ಹೆಂಡತಿಯ ಕುಚಗಳು ಬೆಳೆದಂತೆ ಇವನ ಬಲ ಕುಂದಿತು ಎಂಬುದು ಅದಕ್ಕೆ ನೆವವಾಗಿ ಕಾಣಿಸಿತು! (ವಸ್ತುತಃ ಅವನು ಶೃಂಗಾರಭಾವದಿಂದ ಕನಿಕರಗೊಂಡು ಕೊಲ್ಲಲಿಲ್ಲ) ೯೮. ಬಲಗಾಲು ಹಿಂದಿದ್ದು ಎಡಗಾಲನ್ನು ಮುಂದಿಟ್ಟು ತೋಳಿನ ಮೂಲವೂ, ಮೊಲೆಯ ತುದಿಯೂ ಕಾಣುತ್ತ, ತೆಳುವಾದ ನಡುವು ಬಳುಕುತ್ತಿರಲಾಗಿ, ನುಣುಪಾದ ಕುತ್ತಿಗೆಯು ಕೊಂಕುಗೊಂಡು ಕೋಮಲೆಯಾದ ಬೇಡಸ್ತ್ರೀಯು ನಿಂತು ಕಣ್ಣಿನ ತುದಿ ದೃಷ್ಟಿ ಮತ್ತು ಬಾಣದ ತುದಿಯ ಗುರಿಗೆ ಮುಟ್ಟಿ, ಎರಡೂ ಒಂದಾಗಿ, ತೋಳಿನ ಬಲವನ್ನು ತೋರಿಸಲು ಪ್ರಯತ್ನಿಸುತ್ತ ಗಂಡನು

---

1 ಟಿಪ್ಪಣಿ: 'ಅಂಬನುದರ್ಚಿರೆ' ಎಂಬ ಪಾಠಾಂತರವೇ ಸರಿ ಎನಿಸುತ್ತದೆ. ಕಾಂತೆಯ ಆಲಿಂಗನವು ಬಾಣವನ್ನು ಕಳಚಿ ಬೀಳುವಂತೆ ಮಾಡಿತು. ಆದರಿಂದ ವಿಷಾದವೂ ಆಲಿಂಗನದಿಂದ ಸಂತೋಷವೂ ಆಯಿತೆಂದು ಅಭಿಪ್ರಾಯ (ರಂ).

ಮ॥ ಪೊದಱಿಂದಂ ಪೊಱಮಟ್ಟು ಕಟ್ಟಿದಿರೊಳಾರ್ಪಿಂ ಗರ್ಜಿಸುತ್ತಿರ್ಪ ಬ
ಗ್ಗದ ಬಲ್ಗಂಡಿಕೆಗಂಡು ಗಂಡುಗಲಿ ಬೇಡಂ ದಂಡೆಯುಂ ಕೊಂಡು ನಿಂ
ದಿದಿರೊಳ್ ಪಾಯ್ದುದಕಿತ್ತು ಕೈಮುರಿಗೆಯಂ ಕೈಗಣ್ಮಿ ಪೊಕ್ಕಿತ್ತಿ ಖ
ಡ್ಗದೆ ಬೆನ್ನೊಳ್ ಮೊನೆದೋಱೆ ಮಾಱೆ ತಿವಿದಂ ತತ್ಕಾಳಮೇಘಾಹ್ವಯಂ
೯೯

ಚಂ॥ ತೆಗೆನೆಗೆದರ್ಧಚಂದ್ರಶರದಿಂ ತಬರಂ ಕರಿಕಂಠಮೂಲಮಂ
ಬಗೆದಿಸೆ ರಕ್ತಸಿಕ್ತಮದು ಮೌಕ್ತಿಕವೊಂದಮದರ್ೊಪ್ಪೆ ನೆತ್ತಿಯೊಳ್
ನೆಗೆದೆಸೆದತ್ತು ಪಶ್ಚಿಮನಗಾಗ್ರದೊಳೊಂದಿರೆ ಸಂಜೆಗೆಂಪು ತ
ಳ್ತೊಗೆದ ಕುಜಪ್ರಯುಕ್ತ ಮೃಗಲಾಂಛನಲೇಖೆಯಿದೆಂಬ ಮಾಳ್ಕೆಯಿಂ ೧೦೦

ವ॥ ಅದಲ್ಲದೆ ಪೆಱತೊಂದು ಪಥಪ್ರದೇಶದಲ್ಲಿ

ಚಂ॥ ಸುಸಿಲೆಸಗುತ್ತೆ ಸೇದೆದಳೆದಾಗಳೆ ಭಿಲ್ಲಿಯುಮಲ್ಲಿ ಭಿಲ್ಲನುಂ
ಪೊಸಪಿಡಿಗೂಡಲೆಂದು ನಡೆತಂದ ಮದೇಭದ ಕುಂಭಮೌಕ್ತಿಕ
ಪ್ರಸರದ ಲೋಭದಿಂದಿಸಲೆರಳ್ಪರಿಯೊಳ್ಗಱಿಯಂಬು ತುಂಬೆ ಕ
ಣ್ಗೆಸೆದುವದುಣ್ಮದೊಳ್ಗಱಿಗಳಂ ತಳೆದಂಜನಶೈಲವೆಂಬಿನಂ ೧೦೧

ಭಾಪು! ಎನ್ನುತ್ತಿರಲು ಆನೆಯನ್ನು ಬಾಣದಿಂದ ಹೊಡೆದಳು. ೯೯. ಗಂಡುಗಲಿಯಾದ ಆ ಕಾಳಮೇಘನೆಂಬ ಹೆಸರಿನ ಬೇಡನು ಪೊದೆಯಿಂದ ಹೊರಹೊರಟು, ನೇರ ಎದುರಿನಲ್ಲಿ ಪರಾಕ್ರಮದಿಂದ ಗರ್ಜಿಸುತ್ತಿದ್ದ ಹುಲಿಯ ಶೌರ್ಯವನ್ನು ಕಂಡು ಅದರ ಸಮೀಪಕ್ಕೆ ಸೇರಿ, ಅದರ ಮೇಲೆ ಏರಿಹೋಗಿ, ಅದಕ್ಕೆ ತನ್ನ ಕೈಮುರಿಗೆಯನ್ನು ಕೊಟ್ಟು ಕೈಹಚ್ಚಿ ಅದರ ಮೇಲೆಬಿದ್ದು ಖಡ್ಗವನ್ನೆತ್ತಿ ಬೆನ್ನಿನಲ್ಲಿ ಖಡ್ಗವು ಆಚೆಗೆ ಪಾರಾಗುವ ಹಾಗೆ ತಿವಿದನು. ೧೦೦. ಬತ್ತಳಿಕೆಯಿಂದ ಹೊರತೆಗೆದು ಅರ್ಧಚಂದ್ರಾಕಾರದ ಬಾಣವನ್ನು ಹೂಡಿ ಆನೆಯ ಕುತ್ತಿಗೆಯ ಸಮಕ್ಕೆ ಗುರಿಯಿಟ್ಟು ಪ್ರಯೋಗಿಸಲು, ರಕ್ತದಿಂದ ತೊಡೆಯಲ್ಪಟ್ಟ ಒಂದು ಮುತ್ತು ಅದರ ನೆತ್ತಿಯಿಂದ ಮೇಲಕ್ಕೆ ಚಿಮ್ಮಿ ಪಶ್ಚಿಮಪರ್ವತಾಗ್ರದಲ್ಲಿ ಸಂಜೆ ಗೆಂಪುಂಟಾಗಿರಲು (ಆಗ) ಮೂಡಿದ ಕುಜಗ್ರಹ ಸಮೇತವಾದ ಚಂದ್ರಕಳೆಯೋ ಇದು ಎಂಬ ರೀತಿಯಿಂದ ಶೋಭಿಸುತ್ತಿತ್ತು. ವ॥ ಅದೂ ಅಲ್ಲದೆ ಮತ್ತೊಂದು ಮಾರ್ಗದ ಸ್ಥಳದಲ್ಲಿ ೧೦೧. ಸಂಭೋಗಕ್ರಿಯೆಯಿಂದ ಭಿಲ್ಲಿಯೂ ಭಿಲ್ಲನೂ ಆಯಾಸಗೊಂಡ ಸಮಯದಲ್ಲಿ, ಅಲ್ಲಿಗೆ ನೂತನ ಹೆಣ್ಣಾನೆಯೊಡನೆ ಕೂಡುವುದಕ್ಕೆಂದು ಬಂದ ಮದೋನ್ಮತ್ತ ಆನೆಯ ಕುಂಭಸ್ಥಳದ ಮುತ್ತಿನ ಸಮೂಹದ ಲೋಭದಿಂದ ಬಾಣಪ್ರಯೋಗ ಮಾಡಲಾಗಿ ಆ ಆನೆಯ ಎರಡೂ ಪಕ್ಕಗಳಲ್ಲಿ ಗರಿಯುಳ್ಳ ಬಾಣಗಳು ನಟ್ಟು ತುಂಬಿ ಕೊಂಡಿರಲು, ಆ ಆನೆಯು ಒಳ್ಳೆಯ ರೆಕ್ಕೆಗಳನ್ನು ಹೊಂದಿದ ಅಂಜನಪರ್ವತವೋ

ವ॥ ಅಲ್ಲಿಂ ಪೆಱತೊಂದೆಡೆಯೊಳ್

ಮ॥ ಕರಿ ನೀಲಾಚಲದಗ್ರದೊಳ್ಕಱಿಯೆ ಬಲ್ಪಿಂ ಕಾಳಮೇಘಂ ಶರೋ
ತ್ಕರಮಂ ಗರ್ಜಿಸಿ ಜಿಷ್ಣುಚಾಪಮನದಂ ಕೈಕೊಂಡು ತದ್ಧಾತುನಿ
ರ್ಝರಮಾಗಳ್ ಪರಿವಂತೆ ರಕ್ತರಸಪೂರಂ ಸೂಸೆ ಮತ್ತಲ್ಲಿ ಸೀ
ಕರಮೆತ್ತಂ ಸಿಡಿವಂತೆ ತಳ್ತು ಸಿಡಿದತ್ತಾ ರಕ್ತಮುಕ್ತಾಫಳಂ ೧೦೨

ಚಂ॥ ಪಸಲೆಗೆ ಬಂದ ಪುಲ್ಲೆಯನೆರಳ್ದೆಸೆಯೊಳ್ ಕಿಱುವೇಡರಿರ್ವರಾ
ರ್ದಿಸೆ ಸರಿಸಕ್ಕೆ ನಿಂದು ನೆಗೆದತ್ತದು ಸತ್ವರಮಾಗಸಕ್ಕೆ ಬೆ
ಕ್ಕಸವೆನೆ ತಳ್ತು ಪಾಯ್ವ ಕಣೆಗಳ್ ಕೊಱಿದಿಕ್ಕಿದುವಿರ್ವರಂ ನಿರೀ
ಕ್ಷಿಸೆ ಪರನಿರ್ನಿಮಿತ್ತ ಹನನೋದ್ಯಮಮಾತ್ಮವಿನಾಶಕಾರಣಂ ೧೦೩

ಎಲೆವಱಿಯಲ್ಲಿ ಪೂದಿಱಿಯಲೆಂದಿರೆ ನಿಂದು ಪುಳಿಂದಿ ಕಂಡು ಬ
ಲ್ಮೊಲೆಯನದೊರ್ವ ಬಾಲಶಬರಂ ಕರಿಕುಂಭಮಿದೆಂದು ಬಾಣಮಂ
ನಲಿದಿಸೆ ಮಧ್ಯದೊಳ್ ಪೊಡೆಯಲಂತದನಾಕ್ಷಣಮೆಳ್ದ ಸಿಂಹಮಂ
ತಲೆಗಡಿದಲ್ಲಿ ಬೀಳ್ದುದೆನೆ ಸದ್ವಿಧಿಯುಕ್ತರನಾರೊ ಕೋಂದಪರ್ ೧೦೪

ಎನ್ನುವ ಹಾಗೆ ಶೋಭಿಸುತ್ತಿತ್ತು. ವ|| ಅಲ್ಲಿ ಮತ್ತೊಂದು ಸ್ಥಾನದಲ್ಲಿ ೧೦೨. ಕಾಳಮೇಘನೆಂಬ ಬೇಡನು (ವರ್ಷಾಕಾಲ ಮೇಘವು) ಗರ್ಜಿಸಿ, (ಗುಡುಗಿ) ಜಯಶೀಲವಾದ ಧನುಸ್ಸನ್ನು ( ಇಂದ್ರ ಧನುಸ್ಸನ್ನು ) ಕೈಯಲ್ಲಿ ಹಿಡಿದು ಬಾಣ ಪರಂಪರೆಯನ್ನು (ಜಲಧಾರೆಯನ್ನು) ಆನೆಯೆಂಬ ನೀಲಾಚಲದ ತುದಿಯಲ್ಲಿ ಸುರಿಯಲು, ಆ ನೀಲಾದ್ರಿಯ ತುದಿಯಲ್ಲಿರುವ ಗೈರಿಕಾದಿ ಧಾತುಗಳಿಂದ ಕೂಡಿದ ನೀರಿನ ಪ್ರವಾಹವು ಹರಿಯುವ ಹಾಗೆ ರಕ್ತದ್ರವವೆಂಬ ಪ್ರವಾಹವು (ಕೆಂಪಾಗಿರುವ ನೀರಿನ ಪ್ರವಾಹವು) ತುಂಬಿ ಹರಿಯಲು ಆ ಪ್ರವಾಹಸ್ಥಳದಲ್ಲಿ ತುಂತುರುಹನಿಗಳು ಎಲ್ಲ ಕಡೆಗೂ ಸಿಡಿಯುವಂತೆ ನಿಬಿಡವಾಗಿ ರಕ್ತದಿಂದ ತೊಯ್ದ ಮುತ್ತುಗಳು ಸಿಡಿದವು. (ಕಾಳಮೇಘನೆಂಬ ಬೇಡ ಮತ್ತು ಕಾಲವರ್ಣದ ವರ್ಷಾಕಾಲದಮೇಘ–ಇವುಗಳ ಕ್ರಿಯೆಯಲ್ಲಿನ ಸಮಾನತೆ ಇಲ್ಲಿದೆ.) ೧೦೩. ಮೇಯುವುದಕ್ಕೆ ಬಂದ ಒಂದು ಜಿಂಕೆಯನ್ನು ಇಬ್ಬರು ಕಿರಿಬೇಡರು ಎರಡೂ ಪಕ್ಕಗಳಲ್ಲಿ ಸಮಾನವಾಗಿ ನಿಂತು ಆರ್ಭಟಿಸಿ ಬಾಣ ಪ್ರಯೋಗಮಾಡಲು ಒಮ್ಮೆಲೆ ಆ ಜಿಂಕೆಯು ಆಶ್ಚರ್ಯಕರವೆನ್ನುವಂತೆ ಆಕಾಶಕ್ಕೆ ನೆಗೆಯಲಾಗಿ ಏಕಕಾಲದಲ್ಲಿ ಪರಸ್ಪರ ಬಿಟ್ಟ ಬಾಣಗಳು ಅವರಿಬ್ಬರನ್ನೂ ಕತ್ತರಿಸಿ ಹಾಕಿದವು. ವಿಚಾರಿಸಿ ನೋಡಿದರೆ ವೃಥಾ ಪರರನ್ನು ಕೊಲ್ಲುವುದು ತನ್ನ ವಿನಾಶಕ್ಕೆ ಕಾರಣವಾಗುವುದು. ೧೦೪. ಎಲೆಗಳ ಮರೆಯಲ್ಲಿ ಹೂವನ್ನು ತಿರಿಯುವುದಕ್ಕೆಂದು ನಿಂತಿರಲು (ಅವಳ) ದೊಡ್ಡ ಮೊಲೆಗಳನ್ನು ಒಬ್ಬ ಕಿರಿಬೇಡನು ಕಂಡು ಕರಿಯ ಕುಂಭಸ್ಥಲವೆಂದು (ತಿಳಿದು) ನಲಿದು ಬಾಣವನ್ನು ಆ ಕುಂಭಸ್ಥಳದ ಮಧ್ಯದಲ್ಲಿಹೊಡೆಯಬೇಕೆಂದು ಬಿಡಲು, ಆ ಕ್ಷಣವೇ ಅದು ಅಲ್ಲಿ ಮೇಲೆದ್ದ ಸಿಂಹವನ್ನು ತಲೆಗಡಿದು ಬಿದ್ದಿತು! ಉತ್ತಮ ಕಾರ್ಯದಲ್ಲಿ ನಿರತರರಾದವರನ್ನು ಯಾರು ತಾನೆ ಕೊಂದಾರು !

ನಸೆಮುಸಪೊಂದೆ ನುಣ್ಪುಸಲೆಯೊಳ್ ಸುಸಿಲಾಂತಿಸೆವೇಣನಂ ವಿಲಂ
ಬಿಸದಿಸಲೆಂದು ಬಂದನ ಪುಳಿಂದನ ವಕ್ಷಮನುದ್ಗಮಾಸ್ತ್ರದಿಂ
ದಿಸೆ ಕುಸುಮಾಸ್ತ್ರನಾರ್ಪಳಿದು ಕೂರ್ಪಳ ಕೈವಿಡಿದೆಯ್ದಿ ಪಲ್ಲವ
ಪ್ರಸರ ಸಮೇತಮಾದ ಮೆಳೆಯೊಳ್ ಪೊಸ ಪೂವಸೆಯಲ್ಲಿ ಕೂಡಿದಂ ೧೦೫

ಕಂ॥ ಬಿಂಕದ ಶಂಖದ ಮೇಲಣ
ಪಂಕಜರಿಪುಬಿಂಬದಮೃತಫಳದಿನಿರಸಮಂ
ತಾಂ ಕುಡಿದು ಮಿಕ್ಕ ಮಧುರಸ
ಮಂ ಕನಸಿನೊಳಾದೊಡಂಟ ನೋಡಂ ಬೇಡಂ ೧೦೬

ವ॥ ಮತ್ತಮೊರ್ವಂ

ಉ॥ ಕಾಡಲರ್ಗೊಂಚಲಂ ಮುಱಿದು ಸೋಮ್ಮುಡಿಗಿಟ್ಟು ಮರಂದದೊಳ್ಪದಂ
ಗೂಡಿ ಕುರಂಗನಾಭಿಯನುರೋಜಕೆ ಲೇಪಿಸಿ ಪಲ್ಲವಂಗಳಂ
ಜೋಡಿಸಿ ಕಟ್ಟಿ ಪೆರ್ಚಿದ ನಿತಂಬಕೆ ಸಾರ್ಚಿ ಕರೀಂದ್ರಕುಂಭದೊಳ್
ಮೂಡಿದ ಮುತ್ತನೆತ್ತಿ ಸರದಿಂ ಸರಗಟ್ಟಿ ಕೊರಲ್ಗೆ ಕೂರ್ಮೆಯಿಂ ೧೦೭

೧೦೫. ಬಿದೆಯು ತೀವ್ರಗೊಳ್ಳಲು ನುಣ್ಣಗೆ ಬೆಳೆದ ಗರಿಕೆಹುಲ್ಲಿನ ಬೈಲಿನಲ್ಲಿ ಸಂಭೋಗಿ ಸುತ್ತ ಶೋಭಿಸುವ ಜಿಂಕೆಗಳನ್ನು ವಿಳಂಬಮಾಡದೆ ಬಾಣದಿಂದ ಹೊಡೆಯಲೆಂದು ಬಂದ ಬೇಡನ ಹೃದಯವನ್ನು ಮನ್ಮಥನು ತನ್ನ ಉದ್ಗಮವಾದ ಬಾಣಗಳಿಂದ ಹೊಡೆಯಲು ಧೈರ್ಯಗುಂದಿ, ತನ್ನ ಪ್ರಿಯೆಯ ಕೈಹಿಡಿದು ಹೋಗಿ ಚಿಗುರುಗಳಿಂದ ಸಮೇತವಾದ ಮೆಳೆಯಲ್ಲಿ ಹೊಸದಾದ ಹೂವಿನ ಹಾಸಿಗೆಯ ಮೇಲೆ ಕೂಡಿದನು. ೧೦೬. ಗಂಭೀರವಾದ ಶಂಖಾಕೃತಿಯ ಕುತ್ತಿಗೆಯ ಮೇಲಣ ಚಂದ್ರನ ವೈರಿಯಾದ ಕಮಲದಂತದ ಮುಖದ, ತೊಂಡೆಹಣ್ಣಿನಂತಹ ತುಟಿಯ ಅಮೃತಸಮಾನವಾದ ಇನಿರಸವನ್ನು ಕುಡಿದ ಆ ಬೇಡನು ಜೇನುತುಪ್ಪವೇ ಮೊದಲಾದ ಮಧುರರಸಗಳನ್ನು ಕನಸಿನಲ್ಲಿಯೂ ಕೂಡ ಮುಟ್ಟಿ ನೋಡನು! ವ॥ ಮತ್ತೊಬ್ಬನು ೧೦೭. ಮಕರಂದ ರಸಭರಿತವಾದ ಒಳ್ಳೆಯ ಕಾಡಿನ ಹೂಗೊಂಚಲನ್ನು ಮುರಿದು ಸೊಂಪಾದ ತುರುಬಿನಲ್ಲಿ ಇಟ್ಟು, ಗೋರೋಚನವನ್ನು ಮೊಲೆಗೆ ಹಚ್ಚಿ, ಚಿಗುರುಗಳನ್ನು ಜೋಡಿಸಿ ಉಬ್ಬಿದ ಕಟಿಪಶ್ಚಾದ್ಭಾಗಕ್ಕೆ ಕಟ್ಟಿ, ಗಜಶ್ರೇಷ್ಠದ ಕುಂಭಸ್ಥಳದಲ್ಲಿ ಮೂಡಿದಂಥ ಮುತ್ತನ್ನು ಆಯ್ದು

ಮ॥ ತೊಡಿಸುತ್ತಂ ನಡೆನೋಡಿ ಗಾಡಿವಿಗೆ ಬೇಡಂ ಬೇಡಿದೊಳ್ವಣ್ಣನಿ
ತ್ತಡಿಯೊಳ್ ಮುಳ್ಮೊನೆ ನಾಂಟದಂತೆ ನಡೆಸುತ್ತಲ್ಲಲ್ಲಿ ಸಲ್ಲೀಲೆಯಿಂ
ದೊಡಗೂಡುತ್ತೆ ಮಡಲ್ತ ಪೆರ್ಮೆಳೆಗಳೊಳ್ ಚೆಲ್ವಾದರಲ್ವಾಸಿನೊಳ್
ಪಡೆದಂ ಸಮ್ಮುದಮಂ ನಿಜಾಂಗಜಿತ ಚಂಚದ್ವಲ್ಲಿಯೊಳ್ ಭಿಲ್ಲಿಯೊಳ್ ೧೦೮

ವ॥ ಅಲ್ಲಿ ಮತ್ತೊಂದೆಡೆಯೊಳ್ ತಳಿರ್ತಶೋಕೆಯ ತಳದ ತಣ್ಣೆಳಲ ಪಳಿಕಿನ ಪಾಸಱೆಯಲ್ಲಿ

ಚಂ॥ ತೊಳಗುವ ದಂತದೋಲೆ ಸುಲಿಪಲ್ ತಳಿರೊಳ್ಮುಡೆ ಹಸ್ತಿಮಸ್ತಕ
ಸ್ಥಳದೆಳೆಮುತ್ತಿನೆಕ್ಕಸರಮಬ್ಜಪರಾಗದ ಬೊಟ್ಟು ಸೂಡಿದು
ತ್ಪಳದಳಮಾಲೆ ಗುಂಜಿದೊಡವೊಪ್ಪುವ ಪುಲ್ಗಳ ಕಂಕಣಂ ಕರಂ
ಪೊಳೆವಲರ್ಗಣ್ಮುಗುಳ್ಮೊಲೆಗಳೊಪ್ಪೆ ಪುಳಿಂದಿಯರೊಪ್ಪಿತೋಱಿದರ್ ೧೦೯

ವ॥ ಮತ್ತಂ

ಚಂ॥ ನೆಲೆಮೊಲೆಗಳ್ಕದಕ್ಕದಿಸೆ ತಾಳ್ದ ತಳಿರ್ಮುಡಿಯಿಂದೆ ಸೂಸೆ ಕ
ಣ್ಮಲರ್ಗಳ ಕಾಂತಿ ಸಂದಣಿಸೆ ನರ್ತಿಸುತಂತಿರೆ ದಂತದೋಲೆಗ
ಳ್ಗಲಕಿನೆ ಕೈಯ ಸುಣ್ಬಳೆ ಪುಳಿಂದಿಯರಂದದೆ ನಿಂದು ಸೂಪಿಯು
ಜ್ವಲರವಮೊಪ್ಪಿರಲ್ ಚಳಿಸಿದರ್ ಬಿದಿರಕ್ಕಿಯನಲ್ಲಿ ರಾಗದಿಂ ೧೧೦

ಮಾಲಾಕಾರವಾಗಿ ಪೋಣಿಸಿ ಕೊರಳಿಗೆ ಪ್ರೀತಿಯಿಂದ ತೊಡಿಸಿದನು. ೧೦೮. ಚೆನ್ನಾಗಿ (ಅವಳನ್ನು) ನೋಡಿ, ವಿಶೇಷಪ್ರೀತಿಯಿಂದ ಬೇಡನು (ಅವಳು) ಬೇಡಿದಂಥ ಒಳ್ಳೊಳ್ಳೆಯ ಹಣ್ಣನ್ನು ಕೊಟ್ಟು, ಕಾಲಲ್ಲಿ ಮುಳ್ಳುಮೊನೆ ನಾಟದ ಹಾಗೆ ನಡೆಯಿಸುತ್ತ, ಅಲ್ಲಲ್ಲಿ ಅತಿಪ್ರೀತಿಯಿಂದ ಕೂಡುತ್ತ, ಹಬ್ಬಿಕೊಂಡಿರುವ ದೊಡ್ಡ ಮೆಳೆಗಳಲ್ಲಿ ಚೆಲುವಾದ ಹೂವಿನ ಹಾಸಿಗೆಯ ಮೇಲೆ, ತನ್ನ ದೇಹವನ್ನು ಗೆದ್ದ ಚಂಚಲ ಬಳ್ಳಿಯಂತಹ ದೇಹದಿಂದ ಕೂಡಿದ ಭಿಲ್ಲಿಯೊಡನೆ ಆ ಭಿಲ್ಲನು ಅತಿಮುದವನ್ನು ಪಡೆದನು. ವ॥ ಮತ್ತೊಂದು ಸ್ಥಳದಲ್ಲಿ ಚಿಗಿತ ಅಶೋಕವೃಕ್ಷದ ತಳಭಾಗದ ತಂಪಾದ ನೆಳಲ ಸ್ಫಟಿಕಶಿಲೆಯ ಮೇಲೆ ೧೦೯. ಪ್ರಕಾಶಿಸುವ ಆನೆಯ ದಂತದ ಓಲೆ, ಬಿಳಿಯ ಹಲ್ಲು, ಚಿಗುರಿನ ಒಳ್ಳೆಯ ಉಡಿಗೆ, ಆನೆಯ ನೆತ್ತಿಯ ಎಳೆಮುತ್ತುಗಳ ಏಕಾವಳಿಸರ, ಕಮಲ ಪರಾಗದ ಹಣೆಬೊಟ್ಟು (ತಿಲಕ), ಧರಿಸಿದ ಉತ್ಪಲಕುಸುಮದಳದ ಮಾಲೆ, ಗುಲಗಂಜಿಯ ಆಭರಣ, ಹುಲ್ಲಿನ ಕಡಗ, ಹೆಚ್ಚಾಗಿ ಪ್ರಕಾಶಿಸುವ ಹೂವಿನಂತಹ ಕಣ್ಣು, ಮೊಗ್ಗಿನಂತಹ ಮೊಲೆಗಳು ಒಪ್ಪುತ್ತಿರಲು ಬೇಡಸ್ತ್ರೀಯರು ಮನಂಬುಗುವಂತೆ ತೋರುತ್ತಿದ್ದರು. ವ॥ ಮತ್ತು, ೧೧೦. ಸ್ಥಿರವಾಗಿ ಗಟ್ಟಿಯಾಗಿದ್ದ ಮೊಲೆಗಳು ಗದಗದಿಸುತ್ತಿದ್ದವು. ತಳಿರಿನಿಂದ ಅಲಂಕಾರಗೊಂಡ ತುರುಬು ಹೊರಸೂಸುತ್ತಿತ್ತು. ತಾವರೆ ಹೂವಿನಂತಹ ಕಣ್ಣುಗಳ ಕಾಂತಿ ಸಮೂಹಗೊಂಡಿತ್ತು. ದಂತದಿಂದ ಮಾಡಿದ ಓಲೆಗಳು ಕುಣಿಯುತ್ತಿದ್ದವು. ಕೈಯ ಸುಣ್ಣನೆಯ ಬಳೆಗಳು ಗಲ್ಗಲವೆಂದು ಧ್ವನಿಮಾಡುತ್ತಿದ್ದವು. ಹೀಗೆ ಪುಳಿಂದಿಯರು ಅಂದದಿಂದ ನಿಂತು ಸುವ್ವಿಯ ಉಜ್ವಲವಾದ ಧ್ವನಿಯು ಮನೋ

ವ॥ ಅವರೊಳೊರ್ವ ಕಿಱುವೇಡಿತಿ

ಕಂ॥ ತಳಿರಂ ಸುತ್ತಿ ವನೇಚರಿ
ವಿಳಾಸದಿಂ ಗಿರಿನಿತಂಬದೊಳ್ ಮುತ್ತುಗಳಂ
ತಳೆದೆಸೆದಳಪರದಿಗ್ವಧು
ತಳೆವಂತಿರೆ ಸಂಜೆವೆರಸಿ ತಾರಾಗಣಮಂ ೧೧೧

ವ॥ ಪೆಱತೊಂದೆಡೆಯಲ್ಲಿ

ಮ॥ ಮುಡಿಯೊಳ್ ಮೊಲ್ಲೆಯ ಸೂಡಿ ಗುಂಜಿದೊಡವಂ ಕೈಗೆಯ್ದು ಕಸ್ತೂರಿಯಂ
ತೊಡೆದುದ್ವೃತ್ ಕುಚಕುಂಭದೊಳ್ ತಳಿರ್ಗಳಂ ತಾನುಟ್ಟು ಪಚ್ಚೋಲೆದಾ
ಲ್ದೊಡನಾಂತೊಳ್ಗಱಿಯಂಬುಮಂ ಬಿದಿರಬಿಲ್ಲಂ ಬೇಡವೆಣ್ಬಂದು ನಿಂ
ದೆಡೆಯೊಳ್ನಿಲ್ವನನಂಗನಾಂತು ಮುಗುಳಂಬಂ ಪುಷ್ಪಕೋದಂಡಮಂ ೧೧೨

ವ॥ ಇಂತನಂತವಿಳಾಸದಿಂ ಪುಳಿಂದಸುಂದರಿಯರ್ ವಿಹರಿಸುತ್ತಮಿರೆಯಿರೆ

ಚಂ॥ ತಿವಿದು ಮೃಗಾರಿಯಂ ಸದೆದು ಬಲ್ಮಱಿಯಂ ಪೊಡೆದಿಕ್ಕಿ ಸಿಂಹಮಂ
ಕವಿದಿಸುತಾನೆಯಂ ತಱಿದು ಸೈರಿಭಮಂ ಪರಿದಿಟ್ಟು ಪಂದಿಯಂ
ತವಿಸಿ ವೃಕೌಘಮಂ ಬಡಿದು ಬಲ್ಮೊಲನಂ ಬಲೆಗಿಟ್ಟು ಪುಲ್ಲೆಯಂ
ಬವರಿಗೊಳುತ್ತೆ ಬೇಡವಡೆಯಾಡಿದುದಗ್ಗದ ಬೇಂಟೆಯಂ ನೃಪಾ ೧೧೩

ಹೆರವಾಗಿರಲು ಬಿದಿರಕ್ಕಿಯನ್ನು ಸಂತೋಷದಿಂದ ಕುಟ್ಟುತ್ತಿದ್ದರು. ವ॥ ಅವರಲ್ಲಿ ಒಬ್ಬ ಕಿರಿ ವಯಸ್ಸಿನ ಬೇಡಿತಿಯು ೧೧೧. ಪಶ್ಚಿಮದಿಕ್ಕೆಂಬ ಕಾಂತೆಯು ಸಂಧ್ಯಾಸಮಯದ ತಾರಾಗಣಗಳಿಂದ ಕೂಡಿ ಶೋಭಿಸುವ ಹಾಗೆ ತಳಿರುಡೆಯನ್ನುಟ್ಟು, ಗಿರಿಗೆ ಸಮಾನವಾದ ನಿತಂಬಪ್ರದೇಶದಲ್ಲಿ ಮುತ್ತುಗಳನ್ನು ಧರಿಸಿ ಶೋಭಿಸುತ್ತಿದ್ದಳು. ವ॥ ಮತ್ತೊಂದು ಸ್ಥಳದಲ್ಲಿ ೧೧೨. ಮುಡಿಯಲ್ಲಿ ಮಲ್ಲಿಗೆಹೂ ಧರಿಸಿ, ಗುಲಗಂಜಿಯ ಆಭರಣಗಳನ್ನು ಮೈಮೇಲೆ ಧರಿಸಿ, ಕಸ್ತೂರಿಯನ್ನು ಎತ್ತರವಾಗಿದ್ದ ಕುಚಪ್ರದೇಶದಲ್ಲಿ ಲೇಪಿಸಿ, ತಳಿರ್ಗಳ ಉಡಿಗೆಯನ್ನು ಉಟ್ಟುಕೊಂಡು, ಹಸಿರು ಕರ್ಣಾಭರಣವನ್ನು ಧರಿಸಿ, ಗರಿಯಬಾಣ ಮತ್ತು ಬಿದಿರಬಿಲ್ಲನ್ನು ಹೊಂದಿದವರಾಗಿ, ಬೇಡರಪಡೆಯ ಹೆಣ್ಣುಗಳು ಬಂದು ನಿಂತ ಸ್ಥಳದಲ್ಲಿ ಮನ್ಮಥನು ಪುಷ್ಪಬಾಣವನ್ನೂ ಪುಷ್ಪಕೋದಂಡವನ್ನೂ ಧರಿಸಿ ನಿಲ್ಲುತ್ತಿದ್ದನು. ವ॥ ಹೀಗೆ ಅನಂತವಾದ ಸೌಂದರ್ಯದಿಂದ ಬೇಡರ ಸುಂದರಿಯರು ತಿರುಗಾಡುತ್ತ ಇರುತ್ತಿರಲು ೧೧೩. ಹುಲಿಯನ್ನು ತಿವಿದು, ದೊಡ್ಡ ಜಿಂಕೆಗಳನ್ನು ಕೊಂದು, ಸಿಂಹವನ್ನು ಹೊಡೆದುಹಾಕಿ, ಸುತ್ತ ಮುತ್ತಿ ಬಾಣ ಪ್ರಯೋಗಿಸಿ ಆನೆಯನ್ನು ಕೊಂದು, ಕಾಡುಕೋಣವನ್ನು ಕತ್ತರಿಸಿ, ಹಂದಿಯನ್ನು ಮುಗಿಸಿ, ತೋಳಗಳ ಸಮೂಹವನ್ನು ಬಡಿದುಹಾಕಿ, ದೊಡ್ಡ ಮೊಲವನ್ನು ಬಲೆಗಳಲ್ಲಿ ಸಿಕ್ಕಿಸಿ, ಜಿಂಕೆಗಳನ್ನು ನಾಶಪಡಿಸುತ್ತ ಬೇಡರಪಡೆಯು ಶ್ರೇಷ್ಠವಾದ ಬೇಟೆಯನ್ನು

ವ॥ ಇಂತು ಬೇಂಟೆಯಾಡಿದನಂತರಂ

ಉ॥ ಪೊಂಬುಲಿಸಮ್ಮ ಮಾನೆದಲೆಮುತ್ತು ಮೊಲಂಗಳ ಬಿಕ್ಕು ಪೂತಿಪೆ
ಕ್ಕಂಬರಗಾಳಿ ಜೇನ್ಪುಣಿಸೆವಣ್ಪೊಸನಾರ್ ಕಿಡಿದಾಡೆ ನಿಗ್ಗವಂ
ಶಂಬರಮಿಂಬುವೆತ್ತ ಚಮರಂ ಜತು ಪೇರುಡು ಪೀಲಿಯೆಂಬಿವಂ
ತುಂಬಿದ ಕಂಬಿಯಂ ತಳೆದದೇಂ ತಳರ್ದತ್ತೊ ಪುಳಿಂದಸಂಕುಲಂ ೧೧೪

ವ॥ ಇಂತು ಪನ್ನತಿಕೆಯಿಂ ಪಲವೇಂಟೆಯನಾಡಿ ಕಾಡೊಡೆಯಂ ತೋಡಿಲ್ಲದ ತೊಱೆ ವೇಂಟೆಯಾಡಲೆಳಸುತಿಱಿಗೋಳಿ ಹೇಜರಗೋಳಿಡುಗಾಣಂ ಸೊರ್ಕುಸಿಲ್ಕುಱಿಲ್ಕಿಱುಗೋಳಿ ಪೆರ್ಗೋಳಿ ಕೊಡಂಬೆಯಿಡಿರ್ಗಿಱುಗಟ್ಟುಗೆಯರೆಮಡ್ಡಿ ಸೂಸುಗೊಳ್ಗಳೆಂಬಿವಂ ಕೊಂಡು ಪೊಳ್ತಂ ಸನ್ನೆಯುಂ ಜಾತಿಯುಂ ಜವಂಗೆಡದಱಿವ ಬಿನ್ನಣಂಬಡೆದ ಬೇಡರೊಡವರೆ ನೀಡುಂ ಪರಿವ ಪೆರ್ದೊಱೆಗೆಯ್ದಿ ಸಾರ್ದು ಪೆರ್ದೆಪ್ಪಮನೇಱಿ ನಿಂದು ನಿರೀಕ್ಷಿಸಿ ತಾಣಮಱಿದು ಪರೀಕ್ಷಿಸಿ ಸೂಸುಗೋಳಂ ತಳಿದು ತಳ್ವದೆ ಬರ್ಪ ಭರವಂನಱಿದು ಮೂಸಿದೊಡೆ ನಾಸಾಗ್ರಮನುರ್ಚುವ ನಕ್ಕಿದೊಡೆ ನಾಲಗೆಯೊಳ್ ನಡುವ ಪೊಳೆದೊಡೆ ಬೆನ್ನೊಳ್ಮೂಡುವೊರಸಿದೊಡೆ ಬರಿಯುಂ

ಮಹಾರಾಜಾ, ಅಡಿತು. ವ॥ ಹೀಗೆ ಬೇಟೆಯನ್ನಾಡಿದ ಮೇಲೆ ೧೧೪. ಬಂಗಾರ ವರ್ಣದ ಹುಲಿಯ ಚರ್ಮ, ಆನೆಯ ತಲೆಯ ಮುತ್ತುಗಳು, ಮೊಲಗಳ ಮಾಂಸ, ಪುನುಗುಬೆಕ್ಕು, ಅಂಬರಗಾಳಿ (ಅಂಬರಗ=ಹಕ್ಕಿಗಳ, ಆಳಿ=ಸಮುದಾಯ) ಜೇನು ತುಪ್ಪ, ಹುಣಿಸೆಹಣ್ಣು, ಹೊಸದಾದ ನಾರು, ಹಂದಿಯ ದಾಡೆಗಳು, ಆನೆಯ ದಂಡ, ಕೆಚ್ಚನೆಯಗುಡ್ಡ ಸಾರಂಗ, ದಪ್ಪನಾದ ಚಾಮರಗಳು, ಅರಗು, ದೊಡ್ಡಉಡ, ನವಿಲು ಗರಿಯೇ ಮೊದಲಾದುವುಗಳಿಂದ ತುಂಬಿದ ಕಂಬಿಗಳನ್ನು ಹೊತ್ತುಕೊಂಡು, ಆ ಬೇಡರ ಪಡೆ ಅದೇನು ಉತ್ಸಾಹಗೊಂಡಿತ್ತೋ! ವ॥ ಹೀಗೆ ಘನತೆವೆತ್ತ ಹಲವಾರು ಬೇಟೆಗಳನ್ನಾಡಿ, ಆ ಕಾಡಿನ ಯಜಮಾನನಾದ ಕಾಲಮೇಘನು ಅಸದೃಶವಾದ ನದಿಯ ಬೇಟೆಯನ್ನಾಡಲು ಬಯಸಿ, ಮೀನು ಹಿಡಿಯಲು ಉಪಯೋಗಿಸುವ ಕೂಳಿ(ಕುಕ್ಕೆ), ಪಂಜರಕೂಳಿ, ಮಾಂಸದ ತುಂಡನ್ನು ಚುಚ್ಚಿ ನೀರಿನಲ್ಲಿ ಬಿಡುವ ಗಾಳ, ಸೊಕ್ಕು (ಮೈಮರವೆ) ಮಾಡುವ ಗಾಳ, ಉಪಿಲುಗಾಳ, ಚಿಕ್ಕಕೂಳಿ, ದೊಡ್ಡಕೂಳಿ, ಮೀನು ಹಿಡಿಯುವ ಜೋಡುಕೂಳಿ (ಬುಟ್ಟಿ), ಮೀನು ಹಿಡಿಯುವ ಗಾಳವನ್ನು ತುದಿಗೆ ಕಟ್ಟಿದ ಕಟ್ಟಿಗೆ, ಅರೆಮಡ್ಡಿ (?), ಜಲಚರಗಳನ್ನು ಬಶಮಾಡಿಕೊಳ್ಳಲು ಚಲ್ಲುವ ಆಹಾರ ಪದಾರ್ಥಗಳು-ಎಂಬುವುಗಳನ್ನು ತೆಗೆದುಕೊಂಡು ಹೊತ್ತು, ಸಂಜ್ಞೆ, ಜಲಚರಗಳ ಜಾತಿಯನ್ನು ಜಾಗ್ರತೆ ಕೆಡದಂತೆ ತಿಳಿಯುವ ತಿಳಿವಳಿಕೆಯನ್ನು ಹೊಂದಿದ ಬೇಡರು ಬೆನ್ನುಹತ್ತಿ ಬಹಳವಾಗಿ ತುಂಬಿ ಹರಿಯುವ ದೊಡ್ಡಕೊಳೆಗೆ ಹೋಗಿ ಸೇರಿ, ದೊಡ್ಡದಾದ ತೆಪ್ಪವನ್ನು ಏರಿನಿಂತು ನೋಡಿ, ಜಲಚರಗಳಿರುವ ಸ್ಥಳವನ್ನರಿತು ಪರೀಕ್ಷೆಮಾಡಿ, ಸೂಸುಗೂಳನ್ನು ಚಲ್ಲಿ, ತಡಮಾಡದೆ ಬರುತ್ತಿರುವ ವೇಗವನ್ನು ತಿಳಿದು, ಮೂಸಿದೊಡನೆ ಮೂಗಿನ

ಕೊಱೆವ ಉಗುಳ್ದೊಡೆ ಕೀಳ್ದಾಳಿಗೆಯೊಳ್ನಾಂಟುವ ಪಲವುಂ ಬಗೆಯ ಗಾಣಂಗಳಂ ಬಿರ್ದುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬುಗದೆ ಬಿರ್ಪಿ ಬೀಸಿದಾಗಳ್

ಮ॥ ಗಱಿಮೀನ್ ಸೀಗುಡಿ ಗೆಂಡೆಮೀನ್ಪವಳಪಾಯಂ ಬಾಳೆಮೀನ್ಪಾವುಮೀ
ನ್ಕಿಱುಮೀನ್ಕೆಂಗಱಿಯಚ್ಚಿ ಕುಚ್ಚಲತಿಗಂ ಕಾಗೆಂಡೆ ಕೆಂಕಲ್ಸರಿತ್
ಕೊಱವಂ ಚೇಳ್ಪಸಿಗಂ ಸಸಿಲ್ಗೊದಲೆಮೀನ್ಪೊಂಬೊಪ್ಪುಮೀನ್ ಪಂದಿಮೀನ್
ಪೆಱೆಮೀನ್ಪಗ್ಗಡೆ ಬಣ್ಣಮೀನೆನಿಪವೆಲ್ಲಂ ಬೀಳ್ದುವಾ ತಾಣದೊಳ್ ೧೧೫

ವ॥ ಅಂತವೆಲ್ಲಮಂ ಗುದಿಗೆಯ್ದು ಕಾಳಮೇಘಂ ತಡಿಗೆಯ್ದಿ ನಿಂದಿರ್ಪನವಾಗಳೊಂದು ದ್ದಂಡಪ್ರಚಂಡ ಕಂಠೀರವಂ ಗೆಂಟಿನೊಳ್ ವಿಲಯಾಗ್ನಿ ಮೆಯ್ವೆತ್ತುದೆಂಬಗುರ್ವನೊಳಕೊಂಡು ಗರ್ವಿಸಿ ನಿಂದು

ಚಂ॥ ಘನನಿನದಕ್ಕಿದರ್ಗಳಮೆನಿಪ್ಪವೊಲಿಂದ್ರಗಜೇಂದ್ರಮಳ್ಕೆ ಗ
ರ್ಜನೆಗುಡುತೆಳ್ದು ಲಂಘಿಸಿ ವಿಜೃಂಭಿಸಿ ಕುಂಭಶಿರಃಪ್ರದೇಶಮಂ
ಕೊನೆಯುಗುರಿಂದೆ ಸೀಳ್ದು ರುಧಿರೋನ್ಮದಕೃನ್ಮಧುವೀಂಟಿ ಗೆಂಟಿನೊಳ್
ತೊನೆದು ಕುನುಂಗಿ ಕುಪ್ಪಳಿಸಿ ಕಣ್ಗೆಡಿ ಸಾಲಿಡೆ ನೋಡಿ ಬೇಡರಂ ೧೧೬

ತುದಿಯನ್ನೇ ಉಜ್ಜಿ ಬಿಡುವ, ನೆಕ್ಕಿದರೆ ನಾಲಿಗೆಯಲ್ಲಿ ನಡುವಂಥ, ಸಂಚರಿಸಿದರೆ ಬೆನ್ನಿನಲ್ಲಿ ನಾಟುವ, ಒರಸಿದರೆ ಪಾರ್ಶ್ವಭಾಗವನ್ನು ಕೊರೆಯುವ, ಉಗುಳಿದರೆ ಕೆಳದವಡೆಯಲ್ಲಿ ಚುಚ್ಚಿಕೊಳ್ಳುವ, ಅನೇಕ ವಿಧವಾದ ಗಾಣಗಳನ್ನೂ ಬಿಚ್ಚಿಬೀಸುವ ಬಲೆ, ಬಳ್ಳಿಯಾಕಾರದ ಬಲೆ, ಗೋರಿಬಲೆ, ಖಂಡಬಲೆಗಳೆಂಬುವುಗಳನ್ನು ತಡಮಾಡದೆ ಬಿಚ್ಚಿ ಬೀಸಿದಾಗ, ೧೧೫. ಗರಿಮೀನು, ಸೀಗಡಿಮೀನು, ಗೆಂಡೆಮೀನು, ಹವಳದಂತಹ ಬಾಯಿಯುಳ್ಳ ಮೀನು, ಬಾಳೆಮೀನು, ಹಾವುಮೀನು, ಚಿಕ್ಕಮೀನು, ಕೆಂಗರಿಮೀನು, ಅಚ್ಚಿಮೀನು, ಕುಚ್ಚ (ಮಣಿಮೀನು), ಲತಿಗ (ಬಳ್ಳಿಮೀನು), ಕಾಗೆಂಡೆ, ಕೆಂಕಲ್ಲು ಸರಿತ್ತು, ಕೊರವ, ಚೇಳ್ಪಸಿಗ, ಸಸಿಲು, ಗೊದವೆ, ಪೊಂಬೊಪ್ಪು, ಹಂದಿಮೀನು, ಪೆರೆಮೀನು, ಬಗ್ಗಡೆ, ಬಣ್ಣಮೀನುಗಳೆಂಬ ಮೀನುಗಳೆಲ್ಲ ಆ ತಾಣದಲ್ಲಿ ಬಿದ್ದವು. ವ॥ ಆ ರೀತಿ ಅವೆಲ್ಲವನ್ನೂ ಗುಜ್ಜುಗಳನ್ನಾಗಿ ಮಾಡಿಕೊಂಡು ಕಾಳಮೇಘನು ದಂಡೆಗೆ ಹೋಗಿ ನಿಂತಿರಲಾಗಿ, ಒಂದು ಮಹಾಪರಾಕ್ರಮದ ಸಿಂಹವು ದೂರದಲ್ಲಿ ಪ್ರಲಯಕಾಲಾಗ್ನಿಯೇ ರೂಪ ಧರಿಸಿರುವುದೋ ಎಂಬ ತೇಜಸ್ಸನ್ನೊಳಕೊಂಡು ಗರ್ವಗೊಂಡು ನಿಂತು ೧೧೬. ಮೇಘಧ್ವನಿಗಿಂತಲೂ ಶ್ರೇಷ್ಠವಾದುದೆಂಬಂತೆ, ಇಂದ್ರನ ಐರಾವತವೂ ಹೆದರುವಹಾಗೆ ಗರ್ಜನೆ ಮಾಡುತ್ತ ಎದ್ದು ಹಾರಿ, ಪರಾಕ್ರಮವನ್ನು ಪ್ರಕಟಿಸಿ, ಆನೆಯ ಕುಂಭಪ್ರದೇಶವನ್ನು ಉಗುರ್ಗೊನೆಯಿಂದ ಸೀಳಿ, ರುಧಿರವೆಂಬ ಮತ್ತನ್ನುಂಟುಮಾಡುವ ಮದ್ಯಪಾನ ಮಾಡಿ, ದೂರದಲ್ಲಿಯೇ ತೊನೆದಾಡಿ, ಬಾಗಿ ಹಾರಿ, ಕಣ್ಣಿನ

ಚಂ॥ ನೆಗೆದುದು ಪಾಯ್ದು ಪೊಯ್ದು ದೊಡಲಿರ್ಕಡಿಯಾಗಿರೆ ಖಂಡದಿಂಡೆಯಂ
ತೆಗೆತೆಗೆದಿಟ್ಟು ದೊಟ್ಟಜೆಯನೊಟ್ಟಿದುದಟ್ಟಿಯನಟ್ಟಿಗುಂಡುಗೊಂ
ಡುಗಿಬಗಿಮಾಡಿ ಮಾರ್ಮಲೆತ ವೀರಕಿರಾತರನೊಕ್ಕಲಿಕ್ಕಿ ಧಾ
ತ್ರಿಗೆ ಪೊಸರಕ್ತಪೂರಮೆಸಗಿತ್ತದು ಕೇಸರಿ ಕೇಳ್ಧರಾಧಿಪಾ ೧೧೭

ವ॥ ಆಗಳ್

ಚಂ॥ ನಡುಗುವ ಕಾಲ್ಗಳುಬ್ಬರಿಸಿ ಸೂಸುವ ಸುಯ್ ಬೆಮರೇಱಿದಾನನಂ
ಪೊಡೆವೆರ್ದೆ ಪೊಯ್ವ ಕಿರ್ಬರಿ ಸಿಡುಂಬಿನ ಮುಳ್ಗಳ ಗಾಯಮಂಗದೊಳ್
ಬಿಡೆ ಬೆದರ್ವಕ್ಷಿ ಬೆರ್ಚುವ ವನಸ್ಥಿತಿ ತೋಱೆ ಪುಳಿಂದನೈದುತೆ
ಮ್ಮೊಡೆಯನ ಮುಂದೆ ಕೈಮುಗಿದುನಿಂದವನೆಂದನಿದಂ ಧರಾಧಿಪಾ ೧೧೮

ಎಲೆ ಶಬರೇಶ ನೋಡಿದೆಯಿದೇಳ್ತರುತಿರ್ದಪುದಿತ್ತ ನಿನ್ನ ಪೆ
ರ್ಬಲಮುಡಿದಸ್ಥಿಯಿಂ ಸುರಿವ ರೋಹಿತದಿಂ ಕಡಿವೋದ ಕಾಲ್ಗಳಿಂ
ತೊಲಗಿದ ತೋಳ್ಗಳಿಂ ಪಱಿದ ಪೆರ್ಗರುಳಿಂ ಪೊಱಮಟ್ಟ ಖಂಡದಿಂ
ವಿಲಯದ ಮೃತ್ಯುವಂತೆ ತವೆ ಕೊಂದುದು ತಿಂದುದದೊಂದಿಭಾಂತಕಂ ೧೧೯

ವ॥ ಎಂದ ಕಿರಾತದೂತೋಕ್ತಿಯಂ ಕೇಳ್ದು

ಕೋಪದ ಕಿಡಿಗಳು ಸಾಲಿಡುವ ಹಾಗೆ ಬೇಡರನ್ನು ನೋಡಿತು. ೧೧೭. ಧರಾಧಿಪನೇ ಕೇಳು (ಹಾಗೆ ನೋಡಿ) ನೆಗೆಯಿತು ; ಬೇಡರ ಮೇಲೆ ಬಿದ್ದು ಹೊಯ್ದು ದೇಹವನ್ನು ತುಂಡುಮಾಡಿ, ಮಾಂಸಮುದ್ದೆಗಳನ್ನು ತೆಗೆತೆಗೆದಿಟ್ಟು ರಾಶಿಯನೊಟ್ಟಿತು. ಎದುರು ಬಿದ್ದ ವೀರ ಕಿರಾತರ ದೇಹಗಳನ್ನು ಒಟ್ಟಿ ಅವರನ್ನು ಒಕ್ಕಲಿಕ್ಕಿ (ಬಡಿದುಹಾಕಿ) ಭೂಮಿಗೆ ಆ ಸಿಂಹವು ಹೊಸ ರಕ್ತದ ಪ್ರವಾಹವನ್ನೇ ಉಂಟುಮಾಡಿತು. ವ॥ ಆಗ ೧೧೮. ಹೇ ಧರಾಧಿಪತಿಯೇ (ಆಗ) ನಡುಗುವ ಕಾಲುಗಳು, ಉಬ್ಬರಿಸಿ ಹೊರಸೂಸುವ ಉಸಿರು, ಬೆವರು ತುಂಬಿದ ಮುಖ, ಬಡಿದುಕೊಳ್ಳುತ್ತಿರುವ ಎದೆ, ಹಾರುತ್ತಿರುವ ಕಿಬ್ಬೊಟ್ಟೆ (ಅಳ್ಳೆ), ದೇಹದಲ್ಲಿ (ತೆರೆದ) ಪೊದೆಯ ಮುಳ್ಳುಗಳ ಗಾಯ, ಬೆದರುಗಣ್ಣುಗಳ ದೃಷ್ಟಿ, ಭಯಗೊಂಡಿರುವ ಮನಸ್ಸಿನ ಸ್ಥಿತಿ, ಇವು ಕಾಣುತ್ತಿರಲು ಒಬ್ಬ ಪುಳಿಂದನು ಬಂದು ನಮ್ಮ ಒಡೆಯನ ಮುಂದೆ ಕೈಮುಗಿದು ನಿಂತುಕೊಂಡು ಹೀಗೆ ಹೇಳಿದನು : ೧೧೯. ಎಲೈ ಶಬರರೊಡೆಯನೇ, ಅಗೋ ನೋಡು ನೋಡು ! ನಿನ್ನ ದೊಡ್ಡ ಬೇಡ ಪಡೆಯು ಮುರಿದ ಮೂಳೆಗಳಿಂದಲೂ, ಸುರಿಯುವ ರಕ್ತಧಾರೆಯಿಂದಲೂ, ತುಂಡಾದ ಕಾಲುಗಳಿಂದಲೂ, ಕಳೆದುಕೊಂಡ ಕೈಗಳಿಂದಲೂ, ಹರಿದುಹೋದ ದೊಡ್ಡ ಕರುಳು ಗಳಿಂದಲೂ, ಹೊರಹೊರಟ ಮಾಂಸಖಂಡಗಳಿಂದಲೂ (ಕೂಡಿ) ಇತ್ತಕಡೆಗೆ ಬರುತ್ತಿದೆ (ನೋಡು). ಒಂದು ಇಭವೈರಿಯು (ಸಿಂಹವು) ಪ್ರಳಯಕಾಲದ ಮೃತ್ಯುವಿನ ಹಾಗೆ (ನಮ್ಮವರನ್ನು) ಚೆನ್ನಾಗಿ ಕೊಂದಿತು, ತಿಂದುಹಾಕಿತು. ವ॥ ಎಂದು ಹೇಳಿದ ಕಿರಾತ

ಮ॥ಸ್ರ॥ ಘನಕೋಪಾಟೋಪಮಂ ತಾಳ್ದರುಣತರತರತ್ತಾರನೇತ್ರಂ ತತಸ್ಫಂ
ದನಯುಕ್ತೋಷ್ಠಂ ಪ್ರಬದ್ಧಭ್ರುಕುಟಿನಿಟಿಲನುತ್ಕೀರ್ಣಘರ್ಮಾಂಬುಭೀಷ್ಮಾ
ನನನುದ್ಧೃತ್ಖಡ್ಗಮೊಂದಂ ಪಿಡಿದು ಜಡಿದದೇಂ ಧೀರನೋ ಧೀವರಂ ಭೋ
ಕನೆ ಬಂದಂ ದೇವ ಕೇಳ್ ಭೀಕರಕರಿರಿಪುವಿರ್ಪಲ್ಲಿಗಾ ಕಾಳಮೇಘಂ ೧೨೦

ವ॥ ಅಂತು ಪರಿತ್ರಾಸ ನಿರ್ಯಾತ ಕಿರಾತಸಂಜಾತಮೊಡವರೆ ಪನ್ನತಿಕೆಯಿಂ ಬರ್ಪಾಗಳ್ ಮುಂದೆ ಮಂದ್ಯೆಸಿ ಮಡುಗಟ್ಟಿದ ನೆತ್ತರ ಪೆರ್ವೊನಲಿಂ ಕುಪ್ಪಳಿಸಿ ಗುಪ್ಪೆಗೊಂಡ ದೊಂಡೆಗರುಳ್ಗಳಿಂ ಪಿಂಡುಗೊಂಡು ಜೋಡೇಳ್ದ ಕಾಳ್ಮಿದುಳ ಕೋಳ್ಗಿಸಱಿಂದರೆದೆಱೆದ ಕಣ್ಗಳಿಂ ಕಿದರ್ದ ತಲೆನವಿರಿಂದೆ ಜಗಿಜಗಿಯಾದ ಪೊಡೆಯಿಂದರೆಗರ್ಚಿದ ನಾಲಗೆಯಿಂ ಕೆಲದೊಳ್ ಒಕ್ಕ ಬಿಲ್ಸರಳ್ಗಳಿಂ ಕಡಿವಡೆದ ತೋಳ್ಗಳಿಂದುಡಿದ ನಡುಗಳಿಂ ಜರಿದ ಮುಡುಪಿಂ ಪಾಸಿಪಸರಿಸಿದಂತೆ ಬಿಳ್ದ ಪೆರ್ವೆಣಂಗಳಿಂದತಿಭಯಾವಹಮಾದ ಬಟ್ಟೆಯಂ ನಿಟ್ಟಿಸುತ್ತಿರೆ ತೊಟ್ಟನೆ ಕಟ್ಟಿದಿರೊಳತಿ ಭೀಕರಾಕೃತಿವೆತ್ತು ಮುರಿದೇಳ್ದುರಿಗೆದರ್ವ ಕಣ್ಗಳಿಂ ನುಂಗುವಂತೆ ನಿರೀಕ್ಷಿಸಿ ಸಂಧ್ಯಾರುಣಿತ ಪಶ್ಚಿಮಾಚಲ ಗುಹಾವಿವರದಂತಿರ್ಪ ಬಾಯಂ ತೆಱೆದು ಕಲ್ಪಾಂತ ಕಠೋರಘನಘನಧ್ವನಿಯ ನೇಳಿಪಂತೆ ಗಜರಿ ಗರ್ಜಿಸಿ ನಿಂದವ್ವಳಿಸಲುಜ್ಜುಗಿಪಾಗಳ್

ದೂತನ ಮಾತುಗಳನ್ನು ಕೇಳಿ ೧೨೦. ಹೇ ದೇವನೇ ಕೇಳು, ಭಯಂಕರ ಕೋಪಾ ಟೋಪವನ್ನು ಹೊಂದಿ, ಗಿರಗಿರನೆ ತಿರುಗುವ ಕರಿಗುಡ್ಡೆಯ ಕೆಂಪಾದ ಕಣ್ಣುಗಳಿಂದ ಕೂಡಿದವನಾಗಿ, ಆ ಕೋಪದಿಂದ ಅದಿರುತ್ತಿರುವ ತುಟಿಗಳುಳ್ಳವನಾಗಿ, ಚೆನ್ನಾಗಿ ಹುಬ್ಬು ಗಳು ಗಂಟಿಕ್ಕಿದ ಹಣೆಯುಳ್ಳವನಾಗಿ ಹೊರಹೊರಟು, ಸುರಿಯುತ್ತಿರುವ ಬೆವರುಹನಿ ಗಳಿಂದ ಕೂಡಿ, ಭಯಂಕರ ಮುಖವುಳ್ಳವನಾಗಿ, ಶ್ರೇಷ್ಠ ಖಡ್ಗವೊಂದನ್ನು ಹಿಡಿದು ಝಳಪಿಸುತ್ತ–ಅದೇನು ಧೀರನೋ ! ಧೈರ್ಯಶಾಲಿಯೋ ! ಆ ಕಾಳಮೇಘನು ತಟ್ಟನೆ ಆ ಸಿಂಹವಿರುವಲ್ಲಿಗೆ ಬಂದನು. ವ॥ ಆ ರೀತಿ ಭಯದಿಂದ ಓಡಿಬರುತ್ತಿದ್ದ ಬೇಡರು ಇವನ ಬೆನ್ನು ಹತ್ತಲಾಗಿ ಅವರೊಡನೆ ಘನತೆವೆತ್ತು ಬರುತ್ತಿರುವಾಗ ಮುಂಭಾಗದಲ್ಲಿ ದಟ್ಟವಾಗಿ ಮಡುಗಟ್ಟಿದ ನೆತ್ತರಿನ ದೊಡ್ಡ ಪ್ರವಾಹದಿಂದಲೂ, ಹೊರಹೊರಟು ರಾಶಿಯಾಗಿ ಬಿದ್ದ ದೊಡ್ಡ ಕರುಳುಗಳಿಂದಲೂ, ಹಿಂಡುಹಿಂಡಾಗಿ ಹೊರಹೊರಟು ಬಿದ್ದು ಜೊಂಡುಗಟ್ಟಿದ ಕರಿಯಮಿದುಳ ದಟ್ಟವಾದ (ನುಂದವಾದ) ಕೆಸರಿಂದಲೂ, ಅರ್ಧ ತೆರೆದಿದ್ದ ಕಣ್ಣು ಗಳಿಂದಲೂ, ಕೆದರಿದ ತಲೆ, ನವಿರು, ಜಿಗಿಜಿಗಿಯಾದ ಹೊಟ್ಟೆಯಿಂದ ಕೂಡಿ, ಅರೆ ಗಚ್ಚಿದ ನಾಲಗೆ, ಪಕ್ಕಕ್ಕೆ ಜಾರಿಬಿದ್ದ ಬಿಲ್ಲುಬಾಣಗಳಿಂದ ಕೂಡಿ, ಕತ್ತರಿಸಿಹೋದ ತೋಳುಗಳು, ಮುರಿದುಹೋದ ನಡುಗಳು, ಓರೆಯಾಗಿ ಬಿದ್ದಿರುವ ತಲೆಗಳುಳ್ಳವರಾಗಿ, ಹಾಸಿ ಹರಡಿದ ಹಾಗೆ ಬಿದ್ದಿರುವ ದೊಡ್ಡ ದೊಡ್ಡ ಹೆಣಗಳಿಂದ ಅತಿಭಯಂಕರವಾದ ದಾರಿಯನ್ನೇ ನಿರೀಕ್ಷಿಸುತ್ತಿರಲು, ಒಮ್ಮೆಲೆ ನೇರವಾಗಿ ಎದುರಿನಲ್ಲಿ ಅತ್ಯಂತ ಭೀಕರಾಕಾರ ವನ್ನು ಪಡೆದು, ಮೈಯನ್ನು ಮುರಿಯುತ್ತ ಏಳುತ್ತ ಉರಿಯನ್ನೇ ಹೊರಸೂಸುವ ಕಣ್ಣು ಗಳಿಂದ ನುಂಗುವ ಹಾಗೆ ನೋಡುತ್ತ, ಸಂಧ್ಯಾಕಾಲದ ಕೆಂಪುವರ್ಣದಿಂದ ಕೂಡಿದ ಪಶ್ಚಿಮಾದ್ರಿಯ ಗುಹೆಯ ಬಾಯಿಯಂತಿದ್ದ ಬಾಯನ್ನು ತೆಗೆದು, ಪ್ರಳಯಕಾಲದ

ಕಂ॥ ನಡೆನಡೆಯಿದಿರ್ಚಿದಿರ್ಚೊ
ಗ್ಗೊಡೆಯದಿರೊಗ್ಗೊಡೆಯದಿರ್ ಕರಂ ಕರವಾಳಿಂ
ಪೊಡೆಪೊಡೆಯೆನುತ್ತೆ ನಾಲ್ಕುಂ
ಕಡೆಯೊಳ್ ಕವಿದರ್ ಕಿರಾತರವನೀನಾಥಾ ೧೨೧

ವ॥ ಆಗಳ್ ವಿಲಯಾಗ್ನಿ ಮೈವೆತ್ತಂತೆ ಮಾಮಸಕಂ ಮಸಗಿ

ಮ॥ ಜಲಮಂ ಪೊಕ್ಕ ಲುಲಾಯಮಂ ಪರಿದು ಪುತ್ತೇರ್ದ ಭಲ್ಲೂಕಮಂ
ಸಲೆ ಪುಲ್ಗರ್ಚಿದ ಪುಲ್ಲೆಯಂ ಕುಜದ ಕೊಂಬಂ ಸಾರ್ದ ಸತ್ಪಕ್ಷಿಸಂ
ಕುಲಮಂ ಕುಂದದೆ ಕೊಂದಘಕ್ಕಿದೆ ಫಲಂ ನೋಡೆಂಬವೊಲ್ ಬೇಡರಂ
ಬಲಿಗೊಂಡತ್ತು ಬಲಾಹಕಧ್ವನಿವಿಳತ್ಕಂಠೋಗ್ರಕಂಠೀರವಂ ೧೨೨

ವ॥ ಅಂತದಂ ಕಂಡು ಕಾಲಮೇಘಂ ಪ್ರಳಯಕಾಲಮೇಘದಂತೆ ಗಜರಿ ಗರ್ಜಿಸಿ ಕೆರಳ್ದು
ಕಿಡಿಕಿಡಿಯೋಗಿ ನೋಡಿ

ಚಂ॥ ಜಡಿದಸಿಯಂ ಝುಳುಂಪಿಸಿ ಕರಾಗ್ರದೊಳೆತ್ತಿ ಕಡಂಗಿ ಸಾರ್ದು ಬೊ
ಬ್ಬಿಡುತೆ ಪಳಂಚಿ ದಂಡೆಗೊಡುತಾರೆ ಪುಳಿಂದರಮುಂದ ಸತ್ವದಿಂ
ಕಿಡೆಕೆಡೆಯೆಂದು ಪೊಯ್ದನದನಿರ್ಕಡಿಯಾಗಿರೆ ನಿನ್ನ ಭೃತ್ಯನಾ
ಕಡುಗಲಿ ಕಾಳಮೇಘನವನೀಶ್ವರಶೇಖರ ರಾಜಶೇಖರಾ ೧೨೩

ಕಠೋರವಾದ ಮೇಘಧ್ವನಿಯನ್ನು ತಿರಸ್ಕಾರ ಮಾಡುವಂತೆ ಗರ್ಜನೆ ಮಾಡಿ ನಿಂತು ಅಪ್ಪಳಿಸುವುದಕ್ಕೋಸ್ಕರ ಪ್ರಯತ್ನಪಡುತ್ತಿರುವಾಗ, ೧೨೧. ಭೂಮೀಶ್ವರನೇ ಕೇಳು, ನಾಲ್ಕು ಕಡೆಯಲ್ಲಿ ಕಿರಾತರು ನಡೆ ನಡೆ, ಎದುರಿಸು ಎದುರಿಸು, ಒಗ್ಗಟ್ಟೊಡೆಯಬೇಡಿ, ಒಗ್ಗಟ್ಟೊಡೆಯಬೇಡಿ, ಚೆನ್ನಾಗಿ ಖಡ್ಗದಿಂದ ಹೊಡೆಹೊಡೆಯಿರಿ ಎನ್ನುತ್ತ ಮುತ್ತಿದರು. ವ॥ ಆಗ ಪ್ರಳಯಕಾಲದ ಬೆಂಕಿಯೇ ರೂಪ ಧರಿಸಿದಂತೆ ಭಯಂಕರ ಕೋಪವುಂಟಾಗಿ ೧೨೨. ಮೇಘಧ್ವನಿಯಿಂದ ಕೂಡಿದ ಕಂಠದ ಆ ಭಯಂಕರ ಸಿಂಹವು ಜಲವನ್ನು ಹೊಕ್ಕ ಕಾಡುಕೋಣಗಳನ್ನೂ, ಓಡಿಹೋಗಿ ಹುತ್ತವನ್ನೇರಿ ನಿಂತ ಕರಡಿಯನ್ನೂ, ಹುಲ್ಲು ಕಚ್ಚಿದ್ದ ಜಿಂಕೆಗಳನ್ನೂ, ವೃಕ್ಷದ ಕೊಂಬೆಯನ್ನಾಶ್ರಯಿಸಿದ್ದ ಒಳ್ಳೆಯ ಪಕ್ಷಿ ಸಮೂಹ ವನ್ನೂ, ಹೇಸದೆ ಕೊಂದ ಪಾಪಕ್ಕೆ ಇದೇ ಫಲ ನೋಡು ಎನ್ನುವಂತೆ ಬೇಡರನ್ನು ಬಲಿ ಗೊಂಡಿತು. ವ॥ ಅದನ್ನು ಕಂಡು ಕಾಲಮೇಘನು ಪ್ರಳಯಕಾಲದ ಕಪ್ಪಾದ ಮೋಡ ಗಳಂತೆ ಗಜರಿ ಗರ್ಜನೆ ಮಾಡಿ ಕೋಪಗೊಂಡು, ಕಿಡಿಕಿಡಿಯಾಗಿ (ಸಿಂಹವನ್ನು) ನೋಡಿ, ೧೨೩. ಹೇ ಭೂಮೀಶ್ವರ, ನಿನ್ನ ಭೃತ್ಯನಾದ ಕಡುಗಲಿ ಕಾಳಮೇಘನು ಖಡ್ಗವನ್ನು ಹಿರಿದು ಝುಳಪಿಸುತ್ತ, ಕೈತುದಿಯಿಂದೆತ್ತಿ ಉತ್ಸಾಹಗೊಂಡು, ಮುಂದೆ ನಡೆದು ಬೊಬ್ಬೆ ಯಿಟ್ಟು ಮೇಲೆಬಿದ್ದು, ಏಟು ಕೊಡುತ್ತ, ಬೇಡರ ಅತಿಶಯ ಪರಾಕ್ರಮದ ಸತ್ವದಿಂದ ಆ ಸಿಂಹವು ತುಂಡಾಗುವ ಹಾಗೆ ಕಡೆ ಕೆಡೆಯೆಂದು ಹೇಳಿ ಹೊಡೆದುಕೊಂದನು.

ವ॥ ಅಂತು ಪೊಯ್ದನಂತರಂ

ಉ॥ ಸೀಳ್ದು ತದೀಯ ಮಸ್ತಕದ ಮಾಣಿಕಮಂ ನಡೆನೋಡಿ ಕೌತುಕಂ
ದಾಳ್ದಿದನರ್ಘ್ಯಮೆಂದು ಬಗೆಯುತ್ತಿರೆ ಬಂದುದಿದೆಮ್ಮ ದೇಶದಿಂ
ಕೇಳ್ದಿಟಮೆಮ್ಮದೀ ಮಣಿಯೆನುತ್ತಿರದೆಯ್ದಿ ತೊಡಂಕಿ ಸಿಂಹಳ
ಕ್ಕಾಳ್ದನ ಬಂಟರುರ್ವಿ ಮಿಗೆ ಕಾಳೆಗಮಂ ತೆಗೆದರ್ ಧರಾಧಿಪಾ ೧೨೪

ವ॥ ಆಗಳ್

ಮ॥ ಕರೆದೆನ್ನಂ ಕಲಿಕಾಲಮೇಘನೆಲೆ ನೀಂ ಪೋಗಲ್ಲಿಗಾ ರಾಜಶೇ
ಖರನೆಮ್ಮಾಳ್ದನವಂಗೆ ಕಾಣ್ಕೆಗೊಡು ಕೊಳ್ಳೆಂದಿತ್ತು ತದ್ರತ್ನಮಂ
ಭರದಿಂದಂ ಕಳುಪುತ್ತೆ ಮತ್ತವರೊಳಿನ್ನುಂ ಕಾದುತಿರ್ದಪ್ಪನೀ
ಪರಿಯಂ ನಿಮ್ಮಡಿಗಿಂದು ಬಿನ್ನವಿಸಲಾಂ ಬಂದೆಂ ನೃಪಾಲೋತ್ತಮಾ ೧೨೫

ವ॥ ಮತ್ತಮಾ ಸಿಂಹಳಂ

ಕಂ॥ ಈ ಮಣಿಗೋರಗೆಯೆನಿಪ ಮ
ಹಾಮಣಿಯೊಳವೆಂಬ ಬಿಂಕದಿಂದಂಬುಧಿಯೊಳ್
ಶ್ರೀಮಹಿಮೆಯಾಂತೆನಾನೆಂ
ಬೀ ಮದದಿಂದೆನಗೆ ದೊರೆಯದಾರ್ ದೊರೆಯೆಂಬಂ ೧೨೬

ವ॥ ಹೀಗೆ ಹೊಡೆದ ಮೇಲೆ ೧೨೪. ಧರಾಧಿಪನೇ, ಆ ಸಿಂಹದ ತಲೆಯನ್ನು ಸೀಳಿ, ಅಲ್ಲಿರುವ ಮಾಣಿಕ್ಯವೆಂಬ ರತ್ನವನ್ನು ದಿಟ್ಟಿಸಿ ನೋಡಿ ಆಶ್ಚರ್ಯಗೊಂಡು, ಇದು ಅನರ್ಘ್ಯ ವಾದ ವಸ್ತುವಾಗಿದೆ ಎಂದು (ಕಾಲಮೇಘನು) ಯೋಚಿಸುತ್ತಿರಲು, ಸಿಂಹಳದೇಶದ ರಾಜನ ಕಡೆಯ ಶೂರರು ಗರ್ವಿಸಿ ಬಂದು 'ಈ ಸಿಂಹವು ನಮ್ಮ ದೇಶದಿಂದ ಬಂದದ್ದು, ನಿಜವಾಗಿ ಈ ಮಣಿ ನಮ್ಮದು' ಎನ್ನುತ್ತ (ನಮ್ಮೊಡನೆ) ಜಗಳವನ್ನು ತೆಗೆದರು. ವ॥ ಆಗ ೧೨೫. ನೃಪಶ್ರೇಷ್ಠನೇ, ಕಲಿ ಕಾಲಮೇಘನು ನನ್ನನ್ನು ಕರೆದು 'ಎಲೈ ನೀನು ನಮ್ಮ ನ್ನಾಳುವ ಒಡೆಯನಾದ ರಾಜಶೇಖರ ಮಹಾರಾಜನಲ್ಲಿಗೆ ಹೋಗಿ ಕಂಡು, ಅವನಿಗೆ ಈ ರತ್ನವನ್ನು ಕಾಣಿಕೆಯಾಗಿ ಕೊಡು, ತೆಗೆದುಕೋ'. ಎಂದು ಆ ರತ್ನವನ್ನು ಕೊಟ್ಟು ತ್ವರೆಯಿಂದ ನನ್ನನ್ನು ಕಳಿಸಿ, ತಾನು ಅವರೊಡನೆ ಇನ್ನೂ ಯುದ್ಧ ಮಾಡುತ್ತಿದ್ದಾನೆ. ಈ ವಿಷಯವನ್ನು ನಿಮ್ಮ ಪಾದಕ್ಕೆ ಬಿನ್ನವಿಸಿಕೊಳ್ಳಲು ಈಗ ನಾನು ಬಂದೆನು. ವ॥ ಮತ್ತು ಆ ಸಿಂಹಳನು ೧೨೬. ಈ ರತ್ನಕ್ಕೆ ಸರಿಸಮನಾದ ಮಹಾಮಣಿಗಳು (ನನ್ನ ರಾಷ್ಟ್ರದ ಸುತ್ತಲೂಇರುವ) ಸಮುದ್ರದಲ್ಲಿ ಇವೆ. ನಾನು ಸಂಪದ್ಯುಕ್ತವಾದ ಮಹಿಮೆಯನ್ನುಳ್ಳ ವನು ಎಂಬ ಗರ್ವದಿಂದ ಕೂಡಿ ನನಗೆ ಸರಿಸಮಾನರಾದ ಜೊತೆ ಯಾರಿದ್ದಾರೆಂಬ ಮ

ವ॥ ಎಂದುಸಿರ್ದು ಮತ್ತಮಿರದೆ

ಕಂ॥ ದೇವರಡಿಗಂಡು ಕಪ್ಪಮ
ನೀವರ್ ಚಪ್ಪನ್ನದೇಶದರಸರ್ ವಸುರ
ತ್ನಾವಳಿಯನತುಳ ಸಿಂಹಳ
ನೇವೇಳ್ವೆಂ ಗಣಿಸದಾಗಳುಂ ಬೆಱೆತಿರ್ಪಂ ೧೨೭

ವ॥ ಎನೆ ನಿರೀಕ್ಷಿಪರಸಂಗೆ ದೇವಾ ಸಿಂಪಳೇಂದ್ರನೆಂದುಂ ಕಪ್ಪಮಿತ್ತನಲ್ಲೆಂದು ಗಣಕ ಗಣಮಣೆಯುರಂ ನಿಂದು ಕೈಮುಗಿದು ಪೇಳೆ ಕೇಳ್ದು ಕಿರಳ್ದು

ಕಂ॥ ಸೊರ್ಕೊಗೆದಬ್ಧಿಯ ಮಧ್ಯದೊ
ಳುರ್ಕಿದ ಸಿಂಹಳನ ಮದಕಿದೌಷಧಮೆನಿಕುಂ
ತೋರ್ಕೆವಡೆದೆಸೆವ ಬಾಳು ಪೊ
ಣರ್ಕೆಗೆ ಪೊಡೆಯಿಪುದು ಭೇರಿಯಂ ಭರದಿಂದಂ ೧೨೮

ವ॥ ಎಂದು ನಿಜಮಂತ್ರಿವದನಮಂ ನೋಡಿ ಮತ್ತಮಿಂತೆಂದಂ

ಕಂ॥ ಜಲನಿಧಿಯೊಳಿರ್ಪನೆಂಬ
ಗ್ಗಳಿಕೆಯದಂತಿರ್ಕೆ ಮಿಕ್ಕ ಲೋಕಾಂತರದೊಳ್
ಬಳವೆರಸಿ ನಿಂದೊಡಂ ತ
ನ್ನಳವಂ ಬಱಿಕಯ್ದು ತೋರ್ಪನೆನ್ನಯ ಬಳಮಂ ೧೨೯

ದಿಂದ ನುಡಿಯುತ್ತಿದ್ದಾನೆ. ವ॥ ಹೀಗೆ ಹೇಳಿ ಮತ್ತೂ ಬಿಡದೆ ೧೨೭. ಮಹಾಸ್ವಾಮಿಯವರ ಪಾದಗಳನ್ನು ಕಂಡು ೫೬ ದೇಶಗಳ ಅರಸರೂ ಭೂಮಿ ರತ್ನಗಳೇ ಮೊದಲಾದ ಕಾಣಿಕೆಗಳನ್ನು ಕೊಡುತ್ತಿದ್ದಾರೆ. ಸಿಂಹಳ ದೇಶಾಧಿಪತಿಯ ವಿಚಾರವನ್ನೇನು ಹೇಳಲಿ. ಅವನು ತಮ್ಮನ್ನು ಗಣನೆಗೆ ತೆಗೆದುಕೊಳ್ಳದೆ (ಗರ್ವದಿಂದ) ಕೂಡಿದವನಾಗಿದ್ದಾನೆ. ವ॥ ಹೀಗೆನ್ನಲು ತಮ್ಮನ್ನೆಲ್ಲ ನೋಡುತ್ತಿರುವ ಲೆಕ್ಕಿಗರ(ಕರಣಿಕರ) ಸಮೂಹವು ಕೂಡಲೆ ಎದ್ದು ನಿಂತು ಕೈಮುಗಿದು "ದೇವಾ, ಸಿಂಹಳೇಂದ್ರನು ಎಂದೂ ಕಪ್ಪವನ್ನು ಕೊಟ್ಟಿಲ್ಲ" ಎಂದು ಹೇಳಲು ಕೇಳಿ ಕೋಪಗೊಂಡು, ೧೨೮. ಸೊಕ್ಕಿನಿಂದ ಸಮುದ್ರಮಧ್ಯದಲ್ಲಿ ಹೆಚ್ಚಿಕೊಂಡಿರುವ ಈ ಮದಕ್ಕೆ ಲೋಕಕ್ಕೆಲ್ಲ ತೋರಿಕೆಗೊಂಡು ಪ್ರಕಾಶಿಸುವ ನಮ್ಮ ಸ್ಥಿತಿಯು ಮದ್ದೆನ್ನಿಸಿಕೊಳ್ಳುವುದು. ಯುದ್ಧಕ್ಕೆ ಭರದಿಂದ (ಈಗಲೇ) ಭೇರಿಯನ್ನು ಹೊಡೆಯಿಸುವುದು". (ನಮ್ಮ ಅತುಳ ಸಾಮರ್ಥ್ಯವೇ ಅವನ ಗರ್ವಕ್ಕೆ ಮದ್ದು ಎಂಬ ಭಾವ). ವ॥ ಎನ್ನುತ್ತ ತನ್ನ ಮಂತ್ರಿಯ ಮುಖವನ್ನು ನೋಡುತ್ತ ರಾಜಶೇಖರನು ಹೀಗೆ ಹೇಳಿದನು. ೧೨೯. "ಜಲಧಿಮಧ್ಯದಲ್ಲಿರುವನೆಂಬ ಶ್ರೇಷ್ಠತೆಯು ಒತ್ತಟ್ಟಿಗಿರಲಿ. ಮಿಕ್ಕ ಸ್ವರ್ಗಾದಿ ಲೋಕಾಂತರಗಳಲ್ಲಿ ಬಲದಿಂದ ಬೆರಸಿಕೊಂಡಿದ್ದರೂ ಆ ಸಿಂಹಳನ ಸಾಮರ್ಥ್ಯ

ಉ॥ ಇಂತೆನೆ ದೇವ ದೇವಪತಿಮುಖ್ಯ ದಿಶಾಧಿಪರಳ್ಕುತಿರ್ಪರೋ
ರಂತೆ ಭವತ್ಪ್ರತಾಪವಿಭವಕ್ಕೆನೆ ಗಣ್ಯನೆ ಸಿಂಹಳಂ ಮಹಾ
ದಂತಿಗಳಂ ಬೆಗಳ್ಗೊಳಿಪ ಸಿಂಹಕೆ ಲಕ್ಷ್ಯಮೆ ಪುಲ್ಮಿಗಂ ಮಹೀ
ಕಾಂತವರೇಣ್ಯ ಮಾಳ್ಪುದೆನಗೀ ಬೆಸನಂ ಸೆಱೆಗಟ್ಟಿ ತಂದಪೆಂ ೧೩೦

ವ॥ ಎಂದು ನುಡಿದ ಮಿತವಚನಕುಮಾರನ ವದನಾರವಿಂದಮಂ ನೋಡಿ

ಕಂ॥ ವಿತತ ಚತುರಂಗಬಳಸಂ
ಯುತನತಿಸಾಹಸಿ ಸರೋಧಿ ಮಧ್ಯಸ್ಥಿತನು
ದ್ಧತನಾ ಸಿಂಹಳನಲ್ಲದೊ
ಡಿತರರವೋಲ್ ಕಪ್ಪಮಿತ್ತುದೇಂ ಸೇವಿಸನೇ ೧೩೧

ವ॥ ಇಂತೌದ್ಧತ್ಯ ಸಾಹಸಸಮಗ್ರನಾಗಿರ್ಪನಾದೊಡಂ

ಕಂ॥ ನಿನ್ನಿಂ ತೀರದ ಕಜ್ಜಮು
ದಿನ್ನೆನಗೊಂದುಂಟೆ ನಿಜದಿನಂತಾದೊಡಮೇಂ
ನೆನ್ನಯ ಭುಜಕಂಡೂಹೃತಿ
ಯುನ್ನೆಗಳ್ವಿಂ ತೋರ್ಪೆನೆನ್ನ ಸಾಹಸದಿರವಂ ೧೩೨

ವನ್ನು ಇಲ್ಲದಂತೆ ಮಾಡಿ ನನ್ನ ಬಲವನ್ನು ತೋರಿಸುತ್ತೇನೆ". ೧೩೦. ಹೀಗೆನ್ನಲು ಮಂತ್ರಿಯು "ದೇವಾ, ಇಂದ್ರನೇ ಮೊದಲಾದ ದಿಶಾಧಿಪರು ನಿನ್ನ ಶೌರ್ಯಸಂಪನ್ನತೆಗೆ ಕ್ರಮವಾಗಿ ಹೆದರುತ್ತಿರುವರೆನ್ನುವಾಗ ಸಿಂಹಳನೊಂದು ಲಕ್ಷ್ಯವೇ ? ಮಹಾ ಆನೆಗಳನ್ನು ಬೆಗಡುಗೊಳಿಸುವ ಸಿಂಹಕ್ಕೆ ಸಾಮಾನ್ಯ ಜಿಂಕೆಯೊಂದು ಲೆಕ್ಕವೇ! ಮಹೀಕಾಂತ ಶ್ರೇಷ್ಠನೇ, ನನಗೆ ಈ ಆಜ್ಞೆಯನ್ನು ಮಾಡು. (ಆ ಸಿಂಹಳನನ್ನು) ಸೆರೆಹಿಡಿದು ತರುತ್ತೇನೆ." ವ॥ ಎಂದು ಹೇಳಿದ ಮಿತವಚನನೆಂಬ ಮಂತ್ರಿಕುಮಾರನ ಮುಖಕಮಲವನ್ನು ನೋಡಿ, ೧೩೧. "ವಿಸ್ತಾರವಾದ ಚತುರಂಗವಾದ ಸೈನ್ಯದಿಂದ ಕೂಡಿದವನು, ಅತ್ಯಂತ ಸಾಹಸಿಯು, ಸಮುದ್ರ ಮಧ್ಯದಲ್ಲಿರುವವನು, ಮಹಾಗರ್ವಿಷ್ಠನಾಗಿ ಆ ಸಿಂಹಳನು ಆಗಿದ್ದಾನೆ, ಹೀಗಲ್ಲದಿದ್ದರೆ ಇತರರಹಾಗೆ ಕಪ್ಪವನ್ನಿತ್ತು ನಮ್ಮನ್ನು ಸೇವಿಸದೆ ಇರುತ್ತಿದ್ದನೇ ? ವ॥ ಈ ರೀತಿ ಗರ್ವಸಾಹಸಗಳಿಂದ ತುಂಬಿದವನಾದರೂ ಕೂಡ ೧೩೨. ನಿನ್ನಿಂದ ತೀರದ ಕಾರ್ಯ, ನನಗೆ ಇನ್ನೊಂದು ಉಂಟೆ? ನಿಜವಾಗಿ ಅಂತಾದರೂ ಕೂಡ ಏನು (ಅವನೊಡನೆ) ನನ್ನ ಈ ಭುಜಗಳ ತೀಟೆಯನ್ನು ಪ್ರಕಾಶಪಡಿಸಿ, ಪರಾಕ್ರಮದ ರೀತಿಯನ್ನು ತೋರಿಸಿ ಕೊಡುತ್ತೇನೆ." ೧೩೩. ಹೀಗೆಂದು ಅಲ್ಲಿಂದೆದ್ದು ಅಮಾತ್ಯಸಮೇತವಾಗಿ ಭರದಿಂದ ಬಂದು ಆ ರತ್ನವನ್ನು ರಾಜಶೇಖರನು ತನ್ನ ತಂದೆಯ ಮುಂದಿಟ್ಟು, ಆದ್ಯಂತವಾಗಿ ಕಾರ್ಯಸ್ಥಿತಿಯನ್ನು ತಿಳಿಸಿ ವಿಜ್ಞಾಪಿಸಿಕೊಂಡು, ಅತ್ಯಂತ ಹರ್ಷಗೊಂಡು ಪಾದಕಮಲ

ಸ್ರ॥ ಎಂದಲ್ಲಿಂದೆಳ್ದಮಾತ್ಯಂಬೆರಸು ಭರದಿನೈತಂದು ತದ್ರತ್ನಮಂ ತಾಂ
ಮುಂದಿಟ್ಟಾದ್ಯಂತ ಕಾರ್ಯಸ್ಥಿತಿಯನೊಸೆದು ವಿಜ್ಞಾಪನಂಗೆಯ್ದು ಮಂದಾ
ನಂದಂಬೆತ್ತಂಘ್ರಿಕಂಜಕ್ಕೆಱಗಿ ಪರಕೆಯಂ ಕೊಂಡು ಚೋಳೇಂದ್ರನಿಂ ತಾ
ಳ್ದಂದೊಲ್ದಾದೇಶಮಂ ತದ್ರಣಕೆ ತೆರಳಲುದ್ಯುಕ್ತನಾದಂ ಕುಮಾರಂ ೧೩೩

ಉ॥ ಮಾತೆ ಮಹೀಂಧ್ರಜಾತೆ ಮಹನೀಯಸುರಾಸುರಸೇವ್ಯಪಾದಕಂ
ಜಾತೆ ಕಳಾಪ್ರಣೀತೆ ಕಮನೀಯಕಟಾಕ್ಷೆ ಸುರಕ್ಷಿತಾಮರ
ವ್ರಾತೆ ರಸಾಧಿಭೂತೆ ರಮಣೀಯರಮಾರತಿ ಮುಖ್ಯ ಶಕ್ತಿವಿ
ಖ್ಯಾತೆ ವಿನೀತೆ ಭೂತಪತಿವಲ್ಲಭೆ ಪಾಲಿಪುದೆನ್ನನಂಬಿಕೇ ೧೩೪

ಗದ್ಯ॥ ಇದು ವಿನಮದಮರವರ ಮಕುಟತಟಘಟಿಕ ಮಣಿಗಣ ಮಹಾಪ್ರಭಾಪಟಲ ಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರ ರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯ ಕವಿತಾವಿಶಾರದ ಶ್ರೀ ಷಡಕ್ಷರಿದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳಪ್ರಬಂಧದೊಳ್ ಕಿರಾತದೂತಾಗಮನ ಮೃಗಯಾವರ್ಣನಂ

ಅಂತು ಆಶ್ವಾಸ ೫ಕ್ಕಂ ಪದ ೭೫೪ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ

## ಪಂಚಮಾಶ್ವಾಸಂ

### ಸಂಪೂರ್ಣಂ

ಗಳಿಗೆ ನಮಸ್ಕರಿಸಿ, ಆ ಚೋಳನರೇಂದ್ರನಿಂದ ಹರಕೆಗಳನ್ನು ಸ್ವಿಕರಿಸಿ, ಆತನ ಆದೇಶವನ್ನು ಹೊಂದಿ ಆ ರಣಭೂಮಿಗೆ ಹೊರಡಲುದ್ಯುಕ್ತನಾದನು. ೧೩೪. ತಾಯಿಯೇ, ಗಿರಿರಾಜ ಸುತೆಯೇ, ಶ್ರೇಷ್ಠರಾದ ದೇವರಾಕ್ಷಸರಿಂದ ಪೂಜಿಸಿಕೊಳ್ಳುವ ಪಾದಕಮಲವುಳ್ಳವಳೇ, ಶೃಂಗಾರಾದಿ ನವರಸಗಳಿಗೆ ಮೂಲಭೂತಳೇ, ರಮಣಿಯರಾದ ಲಕ್ಷ್ಮಿ ರತಿಯರೇ ಮುಖ್ಯರಾದ ಶಕ್ತಿದೇವತೆಯರಲ್ಲಿ ವಿಖ್ಯಾತಳೇ, ವಿನೀತೆಯೇ, ಶಿವವಲ್ಲಭೆಯೇ, ಅಂಬಿಕೇ ನನ್ನನ್ನು ರಕ್ಷಿಸು. ಗದ್ಯ॥ ಈ ಗದ್ಯಪದ್ಯ ರೂಪವಾದ ಕಾವ್ಯವು ವಿಶೇಷವಾಗಿ ನಮಸ್ಕಾರ ಮಾಡುತ್ತಿರುವ ದೇವಶ್ರೇಷ್ಠರಾದ ವಿಷ್ಣು ಚತುರ್ಮುಖೇಂದ್ರರ ಕಿರೀಟದ ಅಂಚಿನಲ್ಲಿ ಕೆತ್ತಿರುವ ನವರತ್ನ ಸಮುದಾಯದ ಅಧಿಕಪ್ರಕಾಶ ಸಮೂಹದಿಂದ ವ್ಯಾಪಿಸಿರುವ ಮಹಾದೇವನ ಶೋಭಾಮಯವಾದ ಪಾದಗಳಲ್ಲಿರುವ ಉಗುರುಗಳೆಂಬ ಚಂದ್ರನ ದಟ್ಟವಾದ ಕಾಂತಿಯಿಂದ ನಿಬಿಡಗೊಂಡ ಬೆಳದಿಂಗಳಿಗೆ ರಮಣೀಯ ಚಕೋರಪಕ್ಷಿಯಂತಿರುವ ಶೃಂಗಾರಾದಿ ನವರಸಜ್ಞರಾದವರಿಂದ ಮನ್ನಣೆಪಡೆದ ಕನ್ನಡ ಸಂಸ್ಕೃತ ಕವಿತ್ವದಲ್ಲಿ ವಿಶಾರದನೆನಿಸಿದ ತಪೋಜನಿತ ಶೋಭಾಯುಕ್ತನಾದ ಶ್ರೀ ಷಡಕ್ಷರದೇವಕವಿಯಿಂದ ರಚಿಸಲ್ಪಟ್ಟ ರಾಜಶೇಖರನೆಂಬ ದೊರೆಯ ಚರಿತ್ರವೆಂಬ ಶಿವನ ವಿಲಾಸದ ಲೀಲೆಯನ್ನು ಹೇಳುವಂತಹುದಾದ ಚರಿತ್ರೆಯೆಂಬ ವಿಸ್ತಾರವಾದ ಪ್ರಬಂಧದಲ್ಲಿ ಕಿರಾತದೂತನ ಆಗಮನ, ಬೇಟೆಯ ವರ್ಣನೆ

## ಪಂಚಮಾಶ್ವಾಸ

### ಮುಗಿದುದು

# ಷಷ್ಠಾಶ್ವಾಸಂ

ಕಂ॥ ಶ್ರೀ ನಗರಾಜಸುತಾಮಧು
ರಾನನವಿಧುಬಿಂಬಚುಂಬನ ಸ್ವೀಕೃತಪಂ
ಚಾನನನಘಮದಗಜಪಂ
ಚಾನನನೆಮಗೀಗೆ ಸೌಖ್ಯಮಂ ಶಿವಲಿಂಗಂ . ೧

ವ॥ ಆಗಳಾ ರಾಜಶೇಖರನರೇಂದ್ರನ ವಿಜಯಯಾತ್ರೆಗೆ ಸಹಾಯಂ ಬರ್ಪಂತೆ ಶರದಂ ಬರಲೊಡನೆ

ಮ॥ಸ್ರ॥ ಮೊಳೆವೋದತ್ತಬ್ಜಕಂದಂ ಕೊಳದೊಳೆ ಬೆಳೆದಾಳ್ದತ್ತಿಳಾಮಂಡಳಂ ಮಂ
ಡಳಿಗೊಂಡಾಗಳ್ ಮರಾಳಾವಳಿ ನಗದ ಬಿಲದ್ವಾರದಿಂದೇಳ್ದುದಾಶಾ
ವಳಯಂ ತೋರ್ಪಟ್ಟುದಬ್ಜಂ ಪಳಚನಲರ್ದುದಬ್ಜಾರಿಬಿಂಬಂ ಕಳಂಕಂ
ಕಳಿದತ್ತೆಂಬಂತೆ ನೀಡುಂ ತೊಳಗಿತು ತಿಳಿದತ್ತಾಪಗಾವಾರಿಪೂರಂ ೨

ವ॥ ಅಂತುಮಲ್ಲದೆಯುಂ

ಕಂ॥ ಅತಿನಿರ್ಮಲತೆಯನೀ ಮಲಿ
ನತೆಯಾಂತ ಪಯೋದಮಾಲೆಗಾಗಿಪ ಶರದಂ
ವಿತತಸಿತದ್ಯುತಿತತಿರಂ
ಜಿತಚಂದ್ರಂಗೀವನೆಂಬುದೊಂದಚ್ಚರಿಯೇ ೩

೧. ಶ್ರೀ ಪಾರ್ವತೀದೇವಿಯ ಮುಖವೆಂಬ ಚಂದ್ರಬಿಂಬವನ್ನು ಚುಂಬಿಸುವುದಕ್ಕೋಸುಗ ಪಂಚಮುಖಗಳುಳ್ಳವನೂ, ಪಾಪವೆಂಬ ಮದಿಸಿದ ಆನೆಗಳಿಗೆ ಸಿಂಹಪ್ರಾಯನೂ ಆದ ಶಿವಲಿಂಗನು ನಮಗೆ ಸೌಖ್ಯವನ್ನುಂಟುಮಾಡಲಿ. ವ|| ಆಗ ರಾಜಶೇಖರಮಹಾರಾಜನ ವಿಜಯಯಾತ್ರೆಗೆ ಸಹಾಯವೇ ಬರುವಂತೆ ಶರತ್ಕಾಲವು ಬರಲಾಗಿ ೨. ಸರೋವರದಲ್ಲಿ ಕಮಲದ ಗಡ್ಡೆಗಳು ಮೊಳಕೆಗೊಂಡವು. ಭೂಮಿಯು ಬೆಳೆಗಳಿಂದ ಕೂಡಿತ್ತು. ಹಂಸಪಕ್ಷಿಗಳ ಸಮೂಹವು ಗುಂಪುಗೊಂಡು ಬೆಟ್ಟಗಳ ಗುಹೆಯ ದ್ವಾರಗಳಿಂದ ಎದ್ದವು. ದಿಙ್ಮಂಡಲವು ನಿರ್ಮಲವಾದುವು. ಕಮಲಗಳು ಪಳಕ್ಕನೆ ಅರಳಿದವು. ಚಂದ್ರಬಿಂಬವು ಕಳಂಕವನ್ನು ಹೋಗಲಾಡಿಸಿಕೊಂಡುದೆಂಬಂತೆ ವಿಶೇಷವಾಗಿ ಬೆಳಗಿತು. ನದಿಗಳ ನೀರು ನಿರ್ಮಲಗೊಂಡಿತು. ವ|| ಆ ರೀತಿಯಲ್ಲದೆ, ೩. ಅತ್ಯಂತ ಮಲಿನವಾದ ಮೇಘಮಾಲೆಗೆ ಹೆಚ್ಚಾದ ನಿರ್ಮಲತ್ವವನ್ನುಂಟು ಮಾಡುವ ಶರತ್ಕಾಲವು ವಿಸ್ತಾರವಾದ ಶುಭ್ರಕಾಂತಿ ಸಮೂಹದಿಂದ ಕೂಡಿರುವ ಚಂದ್ರ

ಮ॥ಸ್ರ॥ ಘನನಾಮಂ ಲೋಕದೊಳ್ ಪೆರ್ನಗೆಗೆಡೆಯೆನಿಸಿತ್ತಕ್ಕಟಾ ಕೆಮ್ಮನೀ ಮಿ
ತ್ರನ ತೇಜಕ್ಕಡ್ಡಲಾದೆಂ ದ್ವಿಜಗತಿಗೆಡಿಸಿರ್ದೆಂ ಜಗತ್ಪಂಕಮೆನ್ನಿಂ
ಜನಿಸಿತ್ತಾ ರಾಜಹಂಸಾಹಿತನೆನಿಸಿದೆನೆಂದುಂ ಜಡಗ್ರಾಹಿಯಾನಾ
ದೆನೆನುತ್ತಂ ಚಿಂತೆಯಿಂ ಬೆಳ್ಪಡರ್ದುದೆನೆ ತದಬ್ದಂ ಶರನ್ಮೇಘಮಿರ್ಕುಂ ೪

ವ॥ ಮತ್ತಂ

ಕಂ॥ ಅಡ್ಡಮಿರೆ ಕಾರಕಾರ್ಮುಗಿ
ಲೊಡ್ಡಣಮಿಳೆಗಿಳಿಯದೊತ್ತರಿಸಿ ಮುಂದೈಸು
ತ್ತೊಡ್ಡವೊನೆ ನಿಂದ ಚಂದ್ರಿಕೆ
ಯೊಡ್ಡನೆ ಬೆಳ್ಮುಗಿಲದೇಂ ಮನಂಗೊಳಿಸಿದುದೋ ೫

ಚಾಂಬೊಳೆಯೊಳಗಿದು ಮುಳುಗಿ
ರ್ದಂಬುದಮದು ತೊಲಗೆ ನೆಗೆದು ನಿಂದಂಚೆಯಪಿಂ
ಡೆಂಬಂತಿರೆ ಬೆಳ್ಮುಗಿಲದ
ಱಿಂ ಬೀಳ್ವ ತುಷಾರಮದಱ ಗಱಿವನಿಯೆನಿಕುಂ ೬

ನಿಗೆ ಶುಭ್ರತೆಯನ್ನು ಕೊಡುವುದೆಂಬುದು ಆಶ್ಚರ್ಯವೇನಲ್ಲ. ೪. ಘನವೆಂಬ ಹೆಸರು ಪ್ರಪಂಚದಲ್ಲಿ ನಗೆಪಾಟಲಕ್ಕೆ ಕಾರಣವಾಯಿತು. ಅಕ್ಕಟಾ! ವೃಥಾ ಈ ಸೂರ್ಯನ ತೇಜಸ್ಸಿಗೆ ಅಡ್ಡಲಾದೆನು. ಪಕ್ಷಿಗಳ ಹಾರಾಟವನ್ನು ಕೆಡಿಸಿದೆನು. ಜಗತ್ತಿನಲ್ಲಿ ಕೆಸರು ನನ್ನಿಂದಲೇ ಹುಟ್ಟಿತ್ತು. ರಾಜಹಂಸಗಳಿಗೆ ವೈರಿಯೆಂದೆನಿಸಿದೆನು. ನೀರಿನಿಂದ ತುಂಬಿ ಕೊಂಡು ಇರುವವನು ನಾನು ಎನ್ನುತ್ತ ಚಿಂತೆಯಿಂದ ಬಿಳಿಬಣ್ಣಕ್ಕೆ ತಿರುಗಿರುವುದೋ ಎನ್ನುವಂತೆ ಆ ನೀರನ್ನು ಕೊಡುವ ಶರತ್ಕಾಲದ ಮೋಡಗಳು ಇದ್ದುವು. (ಮರ್ಯಾದಾರ್ಹ ವಾದ ನನ್ನ ಹೆಸರು ಲೋಕದ ಜನರಲ್ಲಿ ಅಪಹಾಸ್ಯಕ್ಕೆ ಆಸ್ಪದವಾಯಿತು. ಆಹಾ! ಸ್ನೇಹಿತನ ಮುಖತೇಜಕ್ಕೆ ಪ್ರತಿಬಂಧಕನಾದೆ. ಬ್ರಾಹ್ಮಣಾದಿ ಬುಧರ ಓಡಾಟವನ್ನು ಹಾಳುಮಾಡಿದೆನು. ಜಗತ್ತಿನಲ್ಲಿ ಕಳಂಕವು ನನ್ನಿಂದಲೇ ಹುಟ್ಟಿತು. ಸೂರ್ಯ ಚಂದ್ರರಿಗೆ ವೈರಿ ಎಂದು ಎನಿಸಿದೆನು. ಜಲೋದರ ಅಥವಾ ಮಂದಮತಿಯುಳ್ಳವನು ನಾನು ಎನ್ನುತ್ತ ಚಿಂತೆಯಿಂದ ಬೆಳ್ಳಗಾಯಿತೋ ಎನ್ನುವ ಹಾಗೆ ನೀರನ್ನು ಕೊಡುವ ಶರತ್ಕಾಲದ ಮೋಡವು ಬೆಳ್ಳಗೆ ಇತ್ತು) ವ॥ ಮತ್ತು ೫. ಕಾರ್ಗಾಲದ ಕಪ್ಪಾದ ಮೋಡಗಳ ಸಮೂಹವು ಅಡ್ಡಲಾಗಿದ್ದುದರಿಂದ ಭೂಮಿಗೆ ಇಳಿಯದೆ ಒತ್ತೊತ್ತಾಗಿ ದಪ್ಪಗೊಂಡು ಇರುವ ಬೆಳದಿಂಗಳುಗಳ ಸಮೂಹವೋ ಎನ್ನುವ ಹಾಗೆ ಬಿಳಿಯ ಮೋಡಗಳು ಅದೇನು ಮನೋಹರವಾಗಿದ್ದುವೋ! ೬. ಮೋಡಕ್ಕೆ ಹೆದರಿ ಆಕಾಶಗಂಗೆಯಲ್ಲಿ ಮುಳುಗಿದ್ದು ಮೋಡವು ತೊಲಗಲಾಗಿ ಆಕಾಶಕ್ಕೆ ಹಾರಿ ನಿಂತುಕೊಂಡಿರುವ ಹಂಸಗಳ ಹಾಗೆ ಬಿಳಿಯ ಮುಗಿಲಾಯಿತು. ಅದರಿಂದ ಬೀಳುವ ತುಂತುರುಹನಿಗಳು ಆ ಹಂಸಗಳ ಗರಿಗಳಿಂದ

ಉತ್ಸಾಹ॥ ನಾಕಪುಂಡರೀಕಮಂಬರಾಪಗಾಪಯಸ್ಥಿತಾ
ಸ್ತೋಕ ಪುಂಡರೀಕರಾಜಿಯಂ ಕರಾಗ್ರದಿಂದೆ ಕೀ
ಳ್ತೇಕಕಾಲದಲ್ಲಿ ಚೆಲ್ಲಿದಂತೆವೋಲ್ ಮೃಣಾಳನಾ
ಳೀಕದಂಬ ಶುಭ್ರಮಭ್ರಮಭ್ರದೊಳ್ವಿರಾಜಿಕುಂ ೭

ಮ॥ಸ್ರ॥ ಹರಿದಶ್ವಾಶ್ವಾಸ್ಯದಿಂದಂ ಸುರಿದು ಪರೆದು ಪೆಂಪಾಳ್ದ ಫೇನೌಘವೋ ನಿ
ರ್ಜರಗಂಗಾತೀರರಾಜದ್ಧವಳ ವಿಪುಳಕಂಜಾತಸಂಜಾತವೋ ವಿ
ಸ್ಫುರಿತಾನಂತಪ್ರಮುಕ್ತ ಪ್ರವಿತತ ಸಿತನಿರ್ಮೋಕವೋ ವ್ಯೋಮಲಕ್ಷ್ಮೀ
ಪರಿವೀತಶ್ವೇತ ಚೇಲಾಂಚಲವೊಯೆನೆ ದಲಿಂಬಾಯ್ತು ಶುಭ್ರಾಭ್ರಜಾಲಂ ೮

ಚಂ॥ ತಡಿವಿಡಿದೇಕಪಾದದೊಳೆ ನಿಂದರೆಗಣ್ಮುಗಿದಾತ್ಮಚಂಚುವಂ
ನಿಡುಗೊರಲಿಂ ಮರಲ್ಚಿ ನಿಜಪಕ್ಷದೊಳೊಯ್ಯನೆ ಸಾರ್ಚಿ ಮೌನಮಂ
ಪಿಡಿದೆಡೆಗೆಯ್ದಿದಂಬುಚರಮಂ ಜವದಿಂ ತವೆ ನುಂಗಿ ಸಾರ್ದು ಸಾ
ಲ್ವಿಡಿದೆಡೆಗೊಂಡನೇಕ ಬಕಪಙ್ತಿಗಳಿಂ ಕೆರೆ ತಳ್ತು ರಾಜಿಕುಂ ೯

ಹಾರಿದ ನೀರಿನ ಹನಿಗಳು ಎನಿಸಿದ್ದವು. ೭. ದೇವಲೋಕದ ಪುಂಡರೀಕವೆಂಬ ಆನೆಯು ದೇವಗಂಗಾನದಿಯಲ್ಲಿ ವಿಶೇಷವಾಗಿ ಬೆಳೆದಿದ್ದಂಥ ಬೆಳ್ದಾವರೆಯ ಹೂವುಗಳ ಸಮೂಹವನ್ನು ತನ್ನ ಸೊಂಡಿಲಿನಿಂದ ಕಿತ್ತು ಏಕಕಾಲದಲ್ಲಿ ಹರಡಿ ಬಿಟ್ಟಿರುವುದೋ ಎನ್ನುವಂತೆ ಕಮಲದ ದೇಟದ ಸಮೂಹಗಳ ಹಾಗೆ ಶುಭ್ರವರ್ಣದಿಂದ ಕೂಡಿದ ಮೇಘವು ಆಕಾಶದಲ್ಲಿತ್ತು. ೮. ಸೂರ್ಯನ ಕುದುರೆಗಳ ಮುಖದಿಂದ ಸುರಿದು ಹರಿಯುತ್ತ ಇರುವ ವಿಶೇಷವಾದ ನೊರೆಯ ಸಮೂಹವೋ, ದೇವಗಂಗಾನದಿಯ ತೀರದಲ್ಲಿ ಶೋಭಿಸುತ್ತಿರುವ ಧವಳವರ್ಣದ ಕಮಲಗಳ ಸಮೂಹವೋ, ಪ್ರಕಾಶಮಾನನಾದ ಆದಿಶೇಷನಿಂದ ಬಿಡಲ್ಪಟ್ಟು ಎಲ್ಲ ಕಡೆಗೂ ಹರಡಿರುವ ಬಿಳಿಯ ಪೊರೆಯೋ ಆಕಾಶಲಕ್ಷ್ಮಿಯು ಉಟ್ಟುಕೊಂಡಿರುವ ಬಿಳಿಯ ವರ್ಣದ ಸೀರೆಯ ಸೆರಗೋ ಎನ್ನುವ ಹಾಗೆ ಶುಭ್ರವರ್ಣದ ಮೋಡಗಳ ಸಾಲು ಆಕಾಶದಲ್ಲಿ ತುಂಬಿಕೊಂಡಿತ್ತು. ೯. ದಂಡೆಯುದ್ದಕ್ಕೂ ಒಂದೇ ಕಾಲಿನಿಂದ ನಿಂತು, ಅರ್ಧ ಕಣ್ಣುಗಳನ್ನು ಮುಚ್ಚಿಕೊಂಡು, ತಮ್ಮ ಚಂಚುಪುಟವನ್ನು ಉದ್ದವಾದ ಕೊರಳಿನಿಂದ ಹೊರಳಿಸಿ ತಮ್ಮ ಪಕ್ಕಕ್ಕೆ ಮೆಲ್ಲಗೆ ಚಾಚುತ್ತ ಮೌನನಿಯಮವನ್ನು ಹಿಡಿದು, ಹತ್ತಿರಕ್ಕೆ ಬಂದಂಥ ಜಲಚರಗಳನ್ನು (ಮೀನುಗಳನ್ನು) ವೇಗವಾಗಿ ಹಿಡಿದು ನುಂಗುತ್ತ, ಸಾಲು ಸಾಲಾಗಿ ಸೇರಿ ನಿಂತಿದ್ದ ಅನೇಕ ಬಕಪಕ್ಷಿಗಳ ಸಮೂಹದಿಂದ ಕೆರೆಗಳು ಶೋಭಿಸು

ಮ॥ ಪರಿದ್ಯೈತಂದರಸಂಚೆಯಂ ಕರೆದು ಭೃಂಗೀನಾದದಿಂದಿತ್ತು ಗಂ
ಧರಜಃಪೂರ್ಣಮರಂದದರ್ಘ್ಯಮನಮರ್ಚುತ್ತಂಬುರುಟ್ಪೀಠಮಂ
ಮರುದಾನೀತದಳಾಂಬರಂಬೊದಿಸುಣಲ್ಕಿತ್ತಬ್ಜಬೀಜಂಗಳಂ
ಶರದಂಭೋಜಿನಿ ಮಾಡಿದಳ್ ದ್ವಿಜವರಂಗಾತಿಥ್ಯಸತ್ಕಾರಮಂ ೧೦

ವ॥ ಇಂತೊಗೆತಂದ ಶರದೃತುವಿನೊಳಾ ಕುಮಾರಂ ವಿಜಯಯಾತ್ರೆಗೆ ಪೋಗಲುಜ್ಜುಗಿಸಿ ಪೊಱಮಟ್ಟು ಪೊಱಗಿಕ್ಕಿದ ಪಟ್ಟವಣೆಯನಲಂಕರಿಸಿ ಕುಳ್ಳಿರ್ದಮಾತ್ಯವದನಾರವಿಂದಮಂ ನಡೆನೋಡಿ ಸಮರಪ್ರಸ್ಥಾನಭೇರಿಯಂ ಪೊಡೆಯಿಸೆಂಬುದುಮವಂ ತಂತ್ರಾಧ್ಯಕ್ಷನಪ್ಪ ಮೇಘನಾದನಂ ಬರಿಸಿ ಬೆಸಸುವುದುಮವಂ ಬಂದು ಕನತ್ಕನಕಕೋಣಮಂ ಪಿಡಿದಡಸಿ ಪೊಡೆದಾಗಳ್

ಮ॥ ಕಡಲೇಳುಂ ಕದಡೇಳ್ದು ತುಳ್ಕಿ ಫಣಿರಾಜಂ ಬಳ್ಕಿ ದಿಕ್ಪಾಲಕರ್
ಸೆಡೆಯಲ್ ದಿಕ್ಕರಿವೃಂದಮಳ್ಕಿ ಭಗಣಂ ಪಾಯ್ದುಳ್ಕಿ ಭೂಭೃತ್ಕುಳಂ
ಕಡುಪಿಂ ಕಂಪಿಸೆ ಪದ್ಮಜಾಂಡಘಟಮಂ ತುಂಬಿತ್ತು ಕಲ್ಪಾಂತದು
ಗ್ರಡದಂಭೋದರವಂಬೊಲಿಂಬುವಡೆದಾ ಗಂಭೀರಭೇರೀರವಂ ೧೧

ತ್ತಿದ್ದವು. ೧೦. ಶರತ್ಕಾಲದ ಕಮಲಿನಿಯು ಹರಿದಾಡಿ ತನ್ನ ಹತ್ತಿರಕ್ಕೆ ಬಂದ ರಾಜಹಂಸವನ್ನು ಹೆಣ್ಣುದುಂಬಿಗಳ ಝೇಂಕಾರರವದಿಂದ ಕರೆದು, ಕಮಲವೆಂಬ ಪೀಠವನ್ನು ಕೂಡಲಿಕ್ಕೆ ಕೊಟ್ಟು, ಗಂಧದಿಂದ ಕೂಡಿದ ಪರಾಗ ಮತ್ತು ಮಕರಂದ ಅರ್ಘ್ಯೋದಕವನ್ನು ಕೊಡುತ್ತ, ಗಾಳಿಯಿಂದ ತರಲ್ಪಟ್ಟ ಕಮಲದಳಗಳ ಬಟ್ಟೆಯನ್ನು ಹೊದ್ದಿಸುತ್ತ, ಕಮಲದ ಬೀಜಗಳನ್ನು ಉಣ್ಣಲಿಕ್ಕೆ ಕೊಟ್ಟು, ದ್ವಿಜಶ್ರೇಷ್ಠನೆನಿಸಿದ ಹಂಸಪಕ್ಷಿಗೆ ಆತಿಥ್ಯದ ಸತ್ಕಾರವನ್ನು ಮಾಡುತ್ತಿತ್ತು. (ಬ್ರಾಹ್ಮಣೋತ್ತಮನು ಮನೆಗೆ ಬಂದಾಗ ಅವನಿಗೆ ಕೂಡಲು ಯೋಗ್ಯ ಪೀಠ ಕೊಟ್ಟು, ಅರ್ಘ್ಯಪಾದ್ಯಾಚಮನಾದಿಗಳಿಂದ ಸತ್ಕರಿಸಿ, ಊಟೋಪಚಾರದಿಂದ ಆತಿಥ್ಯಮಾಡಿಸಬೇಕೆಂಬುದು ಇಲ್ಲಿ ಧ್ವನಿತವಾಗುವ ಮತ್ತೊಂದು ರೀತಿಯ ಅರ್ಥ) ವ॥ ಈ ರೀತಿ ಬಂದ ಶರದೃತುವಿನಲ್ಲಿ ಆ ರಾಜಶೇಖರನೆಂಬ ರಾಜಕುಮಾರನು ವಿಜಯಯಾತ್ರೆಗಾಗಿ ಹೋಗಲು ಸಿದ್ಧನಾಗಿ ಹೊರಟು, ಪಟ್ಟಣದ ಹೊರವಲಯದಲ್ಲಿ ಇಡಿಸಿದ ಸಿಂಹಾಸನವನ್ನು ಅಲಂಕಾರಗೊಳಿಸಿ ಕುಳಿತು, ಮಂತ್ರಿಯ ಮುಖಕಮಲವನ್ನು ಚೆನ್ನಾಗಿ ದಿಟ್ಟಿಸಿ ನೋಡಿ, ಯುದ್ಧಪ್ರಯಾಣ ಸೂಚಕ ನಗಾರಿಯನ್ನು ಹೊಡೆಯಿಸೆಂದು ಹೇಳಲಾಗಿ, ಆ ಮಂತ್ರಿಯು ಯುದ್ಧೋದ್ಯೋಗ ಸೂಚನಾಧಿಕಾರಿಯಾದ ಮೇಘನಾದನೆಂಬುವನನ್ನು ಬರಮಾಡಿಕೊಂಡು ಅಪ್ಪಣೆಮಾಡಲಾಗಿ, ಅವನು ಬಂದು ಹೊಳೆಯುತ್ತಿರುವ ಬಂಗಾರದ ಕೋಲನ್ನು ಹಿಡಿದು ಗಟ್ಟಿಯಾಗಿ ಯುದ್ಧವಾದ್ಯವನ್ನು ಬಾರಿಸಿದನು. ೧೧. (ಆ ಹೊಡೆತದಿಂದ) ಸಪ್ತಸಾಗರಗಳು ಕದಡಿ ಉಬ್ಬಿ ತುಳುಕಿದವು. ಫಣಿರಾಜನು ಬಳುಕಿದನು. ಅಷ್ಟದಿಕ್ಪಾಲಕರು ಸೆಟೆದರು. ದಿಗ್ಗಜಗಳು ಹೆದರಿದವು. ನಕ್ಷತ್ರಗಳು ಆದುರಿ ಉದುರಿದವು. ಪರ್ವತಗಳ ಸಮೂಹವು ಈ ಶಬ್ದದ ಕಾಠಿಣ್ಯದಿಂದ ನಡುಗಿದವು. ಕಲ್ಪಾಂತದ ಭಯಂಕರ ಮೇಘದ ಧ್ವನಿಯ

ವ ॥ಅದಂ ಕೇಳ್ದು ಕಡುಸಡಗರಂ ಮಿಕ್ಕು ಮಾರಂಕ ಮಾವುತಂಗಿಕ್ಕಿದ ಬಿರುದಿನ ತೊಡರ್ ಝಣಝಣಿಸಲೇಳ್ದು ಸಪ್ತಮ ಮದಾವಸ್ಥೆಯಿಂ ಮುಂದುಗಾಣದೆ ಪಲ್ಗಂಬಮಂ ಮುಱಿದು ನಿಗಳಮಂ ಪಱಿದು ನಿಟ್ಟೋಟದಿಂ ಬೀದಿವರಿದಾಱಿ ಕಾಱಿರನಱಿಯಟ್ಟಿ ಕೆಂಗಣ್ಮಸಗಿ ಕೇರ್ಗಳಂ ನುರ್ಗಿ ಸಿಲ್ಕಿದರಂ ಸೀಳ್ದು ಕಂಡರಂ ಕಾಲ್ಗೆಡಿಸಿ ಪೊಡೆದು ಕಡಂಗಿ ಕಾಯ್ಪೇಱಿ ದಿಕ್ಕುಂಭಿಗಳಳ್ಕೆ ಬೃಂಹಿತಂಗೆಯ್ದಂಗಡಿಗಳನಣೆದು ಪೊಯ್ದು ಮಾಮರಂ ಮಸಗಿ ಕೋಲಾಹಲ ಮನೆಸಗಿ ಬಾಳೆವಿಮಾನಂತೆ ಭರಿಕಯ್ಯನೆಳಲೊಳ್ಪರಿವ ಕುಸಿದಿಟ್ಟ ಚಕ್ರದಂತೆ ಉನುಂಗಿ ಪರಿವ ಸುಂಟುರೆಗಾಳಿಯಂತೆ ಸುಳಿಸುಳಿದು ಪರಿವ ತೋರಣದೊಳ್ನುಸುಳ್ವಂತೆ ತಲೆದರ್ಗಿ ಪರಿವ ಕಳಕಳಮನಾಲಿಸುತ್ತಡ್ಡವರಿಯೊಳಾಂತು ನಿಂದಿದಿರ್ಚಿ ಪರಿವೊಟ್ಟಜೆಯಿಂ ಸಿಲ್ಕಿದರಂ ಪಿಡಿವ ಜಡಿವ ಜಾಡಿಸುವ ತುಡುಂಕಿ ತೆಗೆವಡಂಗಿಪಾಯ್ವ ಕಡಂಗಿ ಪೊಯ್ದೆತ್ತಿಯಿಳಿಪುವ ಪೊತ್ತು ಪರಿವ ಸುತ್ತಿತೆಗೆವ ಮೆಟ್ಟಿಸೀಳ್ವ ಕಟ್ಟುಬ್ಬಟೆಯ ದುಷ್ಟಗಜಂಗಳಂ ಸರಿಸದೊಳ್ನಿಂದು

ಹಾಗೆ ಹೊರಹೊಮ್ಮಿದ ಆ ಗಂಭೀರ ನಗಾರಿಯ ಧ್ವನಿಯು ಬ್ರಹ್ಮಾಂಡವೆಂಬ ಘಟವನ್ನು ವ್ಯಾಪಿಸಿತು. ವ|| ಆ ಭೇರಿಯ ಧ್ವನಿಯನ್ನು ಕೇಳಿ ಆನೆಗಳು ಸಡಗರದಿಂದ ಎದುರಿಗೆ ಬರುತ್ತಿರುವ ಮಾವಟಿಗನಿಗೆ ಸೊಂಡಿಲೆತ್ತಿ ಮರ್ಯಾದೆಯನ್ನು ತೋರಿಸಲು (ಎದ್ದವು). ಆಗ ಅವುಗಳಿಗೆ ತೊಡಿಸಿದ ಬಿರುದಿನ ತೊಡವುಗಳು ಝಣಝಣತ್ಕಾರ ಮಾಡುತ್ತಿದ್ದವು ಸಂಚಿತ, ತಿಲಕಿತ, ಅರ್ಧಕಪೋಳಿತ, ಅತಿನರ್ತಿಕ, ಅಧೋನಿಬಂಧಿನಿ, ಕ್ರೋಧಿನಿ, ಗಂಧಚಾರಿಣಿ ಎಂಬ ಏಳು ಪ್ರಕಾರದ ಮದದ ಅವಸ್ಥೆಯಿಂದ ದಿಕ್ಕುಗೆಟ್ಟು, ತಮ್ಮನ್ನು ಕಟ್ಟಿದ್ದ ದೊಡ್ಡ ಕಂಬವನ್ನು ಮುರಿದು, ಕಾಲುಸರಪಳಿಯನ್ನು ಹರಿದು, ಬೀದಿಯಲ್ಲಿ ವೇಗವಾಗಿ ಓಡುತ್ತ, ಅಂಕುಶಗಳನ್ನು ಹಿಡಿದು ನಿಂತಿದ್ದ ಕಾವಲುಗಾರರನ್ನು ಬೆನ್ನಟ್ಟಿ, ಕೆಂಪಾದ ಕಣ್ಣುಗಳಿಂದ ಕೂಡಿ, ಗೋಡೆಗಳ ಮೇಲೆ ನುಗ್ಗಿ, ಸಿಕ್ಕವರನ್ನು ಆನೆಗಳು ಸೀಳುತ್ತಿದ್ದವು. ಕಂಡವರನ್ನು ಶಕ್ತಿಗುಂದಿಸಿ, ಹೊಡೆದು ಕೋಪದಿಂದ ಬಿಸಿಯೇರಿ, ದಿಗ್ಗಜಗಳು ಹೆದರುವಂತೆ ಘೀಂಕಾರಮಾಡಿ, ಅಂಗಡಿ ಮುಗ್ಗಟ್ಟುಗಳನ್ನು ತುಳಿದು ಅಪ್ಪಳಿಸಿದವು. ಭಯಂಕರ ಕೋಪವಾವರಿಸಿ, ಕೋಲಾಹಲ ಮಾಡಿ, ಬಾಳೆವಿಮಾನಿನ ಹಾಗೆ ಸೊಂಡಿಲಿನ ನೆಳಲಿನಲ್ಲಿ ಹರಿಯುವ, ಬಾಗಿಬಿಟ್ಟ ಚಕ್ರದ ಹಾಗೆ ನೆಲಕ್ಕೆ ರಾವಿಕೊಂಡು, ಸುಂಟರಗಾಳಿಯಂತೆ ಚಕ್ರಾಕಾರವಾಗಿ ತಿರುತಿರುಗಿ ಓಡುತ್ತಿದ್ದವು. ಬಾಗಿಲಿಗೆ ಕಟ್ಟಿದ ತೋರಣಮಧ್ಯದಲ್ಲಿ ನುಸುಳುವ ಹಾಗೆ ತಲೆತಗ್ಗಿಸಿ ಓಡುವ ಜನರ ಕಲಕಲ ಧ್ವನಿಯನ್ನು ಕೇಳುತ್ತ, ಅಡ್ಡದಾರಿಗೆ ಎದುರಾಗಿ ನಿಂತು, ಓಡುವವರಿಗೆ ಪರಾಕ್ರಮ ತೋರಿಸಿ, ಸಿಕ್ಕಿದವರನ್ನು ಹಿಡಿದು, ಹೊಡೆದು, ಒದ್ದು, ಹಿಡಿದು ನೂಕುವ, ಅಡಗಿ ಮೇಲೆಬೀಳುವ, ಸಿಟ್ಟಿನಿಂದ ಹೊಡೆದು ಮೇಲಕ್ಕೆತ್ತಿ ಇಳಿಸುತ್ತಿರುವ, ಮೈಮೇಲೆ ಹೊತ್ತುಕೊಂಡು ಹರಿದಾಡುವ, ತಿರುಗಿಸಿ ನೂಕುವ, ಕಾಲಿಂದ ಮೆಟ್ಟಿ ಸೀಳಿಹಾಕುವ ವಿಶೇಷ ಉಪಟಳದ ದುಷ್ಟ ಆನೆಗಳನ್ನು ಮಾವುತರು ಹತ್ತಿರಕ್ಕೆ ಬಂದು ನಿಂತು (ಪರಿಚಿತವಾದ) ಧ್ವನಿ ತೋರಿಸಿ, ಎದು

ಸರಂದೋಱಿ ಸಮ್ಮುಖಂಗೆಯ್ದು ಗಜಾರಿಗರ್ಜನೆಯಿಂ ಗಜರಿ ಗರ್ಜಿಸಿ ನೆರೆದುನೋಳ್ಪ ಪುರಜನಮರಿದರಿದೆನೆ ಸರಸರನೆ ಪರಿದು ಭರಿಕಯ್ಯಿಂ ಪಿಡಿದಡರ್ದು ಬಿದುವನಪ್ಪಳಿಸಿ ಚಪ್ಪರಿಸಿ ಕೂರಂಕುಶಮನಿಕ್ಕಿ ಸೆಳೆದೆಳೆದಂಗುಟದ ತುದಿಯಿಂ ಕರ್ಣಮೂಲಮನಣೆದಲಿದು ನೂಂಕಿ ಶಂಕೆಯಿಲ್ಲದೆ ಬಂದು ಪಿಂಡಾನೆಗಳೊಂದುಗೂಡಿ ಶಿಕ್ಷೋಪಕರಣಂಬೆರಸು ಸುಳಿದೇಱುವ ಸುತ್ತ ಮೆಟ್ಟಿಸುವ ವಿಸಟಂಬರಿವಡ್ಡತರದೊಳಿಕ್ಕುವ ಥಟ್ಟುವರಿಯಿಪ ತೇರೈಪ ಬೋಳೈಪ ಬೋಹರದೊಳ್ಸೆಱಿಗೈವ ಚೌಪಟದೇಱಾಟದೊಳ್ ಚದುರಂ ತೋರ್ಪ ಕಯ್ಗೊಲೆ ಬಾಯ್ಗೊಲೆ ಮಯ್ಗೊಲೆ ಕಾಲ್ಗೊಲೆ ಕೋಳ್ಗೊಲೆಯಂ ಕಲಿಪ ಕಡುಬಿನ್ನಣಂಬಡೆದು ಕಟ್ಟಾಳ್ತನಂ ಬೆತ್ತಿಂತು ಗಜಾರೋಹಣಧುರೀಣರಾದಾ ಧೋರಣರ್ನೆರೆನೆರೆದು ಪರಿಪರಿದು ಬೇಱಿಬೇಱಿ ನಿಜ ಗಜಂಗಳಂ ಪಣ್ಣಿ ಕೈಗೈದು ಪೂರ್ವಾಸನಮನವಷ್ಟಂಭಿಸಿ ಸಂಭ್ರಮಂ ಮಿಗೆ ನೆರಪಿದಾಗಳ್ ಕೋಡವೊನೆಯೊಳ್ ತಗುಳ್ಚಿದ ಸೂನಗಿಗತ್ತಿಯ ಕೊನೆಗೊಡಂಕೆಯೊಳ್ ತೊನೆವ ಬಿಳಿಯ ಚಾಮರದ ಬಿದುವೊಳ್ಪರೆದು ಬರ್ಚಿಸಿದ ಸಿಂಧೂರದ ಬರ್ಚಣೆಯ ಪಣೆವಾಸಱಿಯೊಳಮರ್ಚಿ

ರಾಗಿ ಬಂದು ಸಿಂಹಗರ್ಜನೆಯಿಂದ ಧ್ವನಿಮಾಡಿ ಹೆದರಿಸಿ, ಗುಂಪುಗೂಡಿ ನೋಡುವ ಪಟ್ಟಣದ ಜನಗಳು ಆಶ್ಚರ್ಯ ! ಆಶ್ಚರ್ಯವೆನ್ನುತ್ತಿರಲು ಸರಸರನೆ ಓಡಿಬಂದು ಸೊಂಡಿಲನ್ನು ಹಿಡಿದು (ಕುಂಭಸ್ಥಳದ) ಮೇಲೆಕ್ಕೆ ನೆಗೆದು, (ಆ) ಗಂಡಸ್ಥಳವನ್ನು ಅಪ್ಪಳಿಸಿ, ಚಪ್ಪರಿಸಿ ತೀಕ್ಷ್ಣವಾದ ಅಂಕುಶವನ್ನು ಚುಚ್ಚಿ, ಹೊಡೆದು ಎಳೆದು, ಅಂಗುಷ್ಠದ ತುದಿಯಿಂದ ಕಿವಿಯ ಗಡ್ಡೆಯನ್ನು ತಿವಿದು ಒತ್ತಿ, ನೂಕುತ್ತ ಭಯವಿಲ್ಲದೆ ಬಂದು ಹಿಂಡಾಗಿರುವ ಆನೆಗಳನ್ನೆಲ್ಲ ಒಂದುಗೂಡಿಸುತ್ತಿದ್ದರು. ಆ ಮಾವುತರು ಶಿಕ್ಷೆಯನ್ನು ಕೊಡುವ ಸಲಕ ರಣೆಗಳೊಡನೆ ಓಡಿಬಂದು ಆನೆಗಳನ್ನೇರುತ್ತಿದ್ದರು. ಅವರು ಸುತ್ತು ತಿರುಗುವಂತೆ ಮಾಡುವ, ಸುತ್ತುಗಟ್ಟಿ ಓಡುವಂತೆ ಮಾಡುವ, ಅಡ್ಡಲಾಗಿ ಹೆಜ್ಜೆಯಿಟ್ಟು ಹರಿಯುವ, ಗುಂಪುಗಳ ಮೇಲೆ ಹರಿದೋಡುವ, ಗುಂಪುಗೂಡುವ, ಸಮಾಧಾನಮಾಡುವ, ತಗ್ಗು(?) ಗಳಲ್ಲಿ ಕೆಡವಿ ಸೆರೆಹಿಡಿಯುವ (?), ಆನೆಗಳ ಏರಾಟದ ಸ್ಪರ್ಧೆಯಲ್ಲಿ ಚಾತುರ್ಯ ತೋರಿ ಸುವ, ಕೈ, ಬಾಯಿ, ಮೆಯ್ಯಿ, ಕಾಲು, ಮತ್ತು ನೇಣುಗಳಿಂದ ಕೊಲ್ಲುವಿಕೆಯನ್ನು ಕಲಿಸುವ (ಗಜಶಿಕ್ಷಣದ) ವಿಶೇಷಜ್ಞಾನವನ್ನು ಅರಿತುಕೊಂಡ ವಿಶೇಷ ಪೌರುಷಸಂಪನ್ನ ರಾದ ಆನೆಯ ಏರಾಟದಲ್ಲಿ ಪ್ರೌಢರೆನಿಸಿದ ಮಾವಟಿಗರು ನೆರೆನೆರೆದು, ಓಡೋಡಿ ಬಂದು ಬೇರೆ ಬೇರೆಯಾಗಿ ತಮ್ಮತಮ್ಮ ಆನೆಗಳನ್ನು ಹಣ್ಣುಮಾಡಿ (?) ಹತೋಟಿಗೆ ತೆಗೆದು ಕೊಂಡು ಕುತ್ತಿಗೆಯ ಮೇಲೆ ಕುಳಿತು, ವಿಶೇಷ ಸಂಭ್ರಮದಿಂದ ಒಂದುಗೂಡಿಸಿದರು. ಆಗ ಆನೆಗಳ ದಂತಗಳ ತುದಿಯಲ್ಲಿ ಸಿಕ್ಕಿಸಿದ ಕಠಾರಿಯಿಂದ, ಕಿವಿಯ ತುದಿಯಲ್ಲಿ ತೊನೆ ದಾಡುತ್ತಿರುವ ಬಿಳಿಯ ಚಾಮರದಿಂದ, ಚಂದ್ರಾಕೃತಿಯಲ್ಲಿ ವಿಸ್ತಾರವಾಗಿ ಬರೆದ ಸಿಂಧೂ ರದ ಬರವಣಿಗೆಯಿಂದ, ಹಣೆಯ ಪಾರ್ಶ್ವಭಾಗದಲ್ಲಿ ಬರೆದುಮಾಡಿದ ತಮಾಲದ ಬಳ್ಳಿಯಾಕೃತಿಯ ಗೆರೆಗಳಿಂದ, ತಲೆಯನ್ನು ಸುತ್ತುವರಿಯುವಂತೆ ಅಲಂಕಾರಗೊಳಿಸ

ರಚಿಸಿದ ತಮಾಲರೇಖೆಯ ತಲೆವಳಸಿ ನೆಲೆಗೊಳಿಸಿದ ಮಾಣಿಕ್ಯದ ತಲೆಮಾಲೆಯ ಪರಿಸರ ದೊಳೆಳಲೆವಿಟ್ಟ ಕನಕದರಳೆಲೆಮಾಲೆಯ ಕಟತಟದೊಳಿಳಿಪಿದಾಣಿಮುತ್ತಿನಚ್ಛಕುಚ್ಚುಗಳ ಕನಕ ಘಂಟಿಗಳ್ಮಿಳಿರ್ವ ಕೊರಲ ಮಿಸುನಿಯ ತೊಂಗಲ್ವರಜಿಯ ಚಿನ್ನಮಣಿಪುದಿದ ಪಕ್ಕಗಂಟೆಯ ಬೆನ್ನೊಳೆತ್ತಿದ ಕದಳೀಸ್ತಂಭದ ಋಕ್ಷಚರ್ಮದ ಪಕ್ಷರಕ್ಷೆಯ ಮೇಲೆ ಪೊದೆವ ಬೀರಡೌಡೆಯ ಪಿಂಗಾ ಲೊಳೆಳಲ್ವ ಭಾರಿಸಂಕಲೆಯ ಝಣಝಣಿಪ ಪೊನ್ನಂದುಗೆಯ ವಿಳಾಸಮಳವಡೆ ಬಳವೈರಿಯೊಳ್ ಪಳಂಚಲೆಂದು ನೀಲಾಚಲಂಗಳ್ ಸಾಲಿಟ್ಟುವೆಂಬ ಬಿಂಕಮನಂಕಿಸಿ ಕಣ್ಗೆವಂದ ಗಂಧಸಿಂಧುರ ಸಂದೋಹದಿಂ ಮತ್ತಂ ಕಿಳಿರ್ವ ಗೋಳಿಗೆಯದನಿ ಕಿವಿವುಗದ ಮುನ್ನಂ ಮಂದರದೊಳಂದಂಬಡೆದು ನಿಂದ ಬಲ್ಗೆಚ್ಚಿನ ಮುಂಡಿಗೆಯಂ ಮುಱಿದು ಪಿಂಗಾಲ್ಗೆ ತೊಡರ್ಚಿದಗ್ಗದಗ್ಗರಣೆಯಂ ಛಟಛಟನೆ ಕೀಳ್ತು ಕಿಳಿರ್ದು ಪಿಡಿಯಲೊಡರ್ಚೆ ತಡೆದು ತೊಡಂಕಿ ತುಡುಂಕಿದ ಗೋವನಂ ಕೊಡಪಿ ಕೆಡಪಿ ಕಡೆವಾಯ್ದು ನಡುವೀದಿಗೆ ಕಡುವೇಗದಿಂ ಪರಿತಂದು ನಿಂದು ನೆರೆದ ಜನಂ ಕಲ್ಲೊಳಿಟ್ಟ ಕವಡಿಕೆಯ ರಾಶಿಯಂತೆ ಝಲ್ಲನೆ ಕಿದಱೆ ಖರಖುರಾಗ್ರಘಾತಜಾತ ವಿತತ ಧರಾತಳ ರಜಃಪಟಲಂ ರವಿ ಮಂಡಳಮನಂಡಲೆದು ಮುಸುಂಕೆ ವಿಸಟಂಬರಿವ ಸೂಕಳಾಶ್ವಂಗಳನಂಕಣಿಯಂ ಬಗೆಯದೆ

ಲ್ಪಟ್ಟ ಮಾಣಿಕ್ಯದ ತಲೆಮಾಲೆಯಿಂದ, ಎರಡೂಕಡೆಗೆ ಜೋತುಬಿಟ್ಟ ಬಂಗಾರದ ಅರಳೆಲೆ ಯೆಂಬ ಆಭರಣದ ಸರದಿಂದ, ಕುಂಭಸ್ಥಳವಲ್ಲಿ ಜೋಲುಬಿಟ್ಟಿರುವ ದುಂಡುಮುತ್ತುಗಳ ಹೊಸ ಕುಚ್ಚುಗಳಿಂದ, ಬಂಗಾರದ ಗಂಟೆಗಳು ನೇತಾಡುವ ಕೊರಳಿನಿಂದ, ಅಪ್ಪಟ ಬಂಗಾರದೆಳೆಗಳ ಸಮೂಹದಿಂದ, ಹೊಸೆದು ಮಾಡಿದ ಹಗ್ಗಕ್ಕೆ ಬಂಧಿಸಿದ ರತ್ನಕೆತ್ತಿದ ಗಂಟೆಗಳ ಪಕ್ಕಗಳಿಂದ, ಬೆನ್ನಿನಲ್ಲಿ ಎತ್ತಲ್ಪಟ್ಟ ಬಾಳೆಯ ಕಂಬದಿಂದ, ಕರಡಿಯ ಚರ್ಮ ದಿಂದ, ಪಕ್ಕಗಳ ರಕ್ಷಾಕವಚದಿಂದ, ಮೇಲ್ಭಾಗದಲ್ಲಿ ವೀರರಣವಾದ್ಯದಿಂದ, ಹಿಂಗಾಲಲ್ಲಿ ಎಳೆಯುತ್ತ ಬರುತ್ತಿರುವ ದೊಡ್ಡ ಸರಪಳಿಯಿಂದ, ಝಣಝಣತ್ಕಾರ ಮಾಡುತ್ತಿರುವ ಬಂಗಾರದಿಂದ ಮಾಡಿದ ಕಾಲಿನ ಆಭರಣದಿಂದ (ಕೂಡಿ ಈ ಎಲ್ಲ) ಸೌಂದರ್ಯವು ಆನೆ ಗಳಿಗೆ ಹೊಂದಿಕೆಯಾಗಿರಲಾಗಿ, ದೇವೇಂದ್ರನೊಡನೆ ಎದುರಿಸಲೆಂದು ನೀಲಾಚಲಪರ್ವತ ಗಳು ಸಾಲುಗೊಂಡವೋ ಎಂಬ ಗಂಭೀರತೆಯನ್ನು ವ್ಯಕ್ತಪಡಿಸುತ್ತಿದ್ದ ಮದೋನ್ಮತ್ತ ವಾಗಿರುವ ಆನೆಗಳು ನೆರೆದವು. ಮತ್ತು ಹೆಣ್ಣುಕುದುರೆಯ ಹೇಷಾರವದ ಧ್ವನಿಯು ಕಿವಿಗೆ ತಾಗದ ಮುನ್ನವೇ ಅಶ್ವಗಳು ಅಶ್ವಶಾಲೆಯಲ್ಲಿ ಸುಂದರವಾಗಿ ನಿಲ್ಲಿಸಲ್ಪಟ್ಟ, ಬಲು ಕೆಚ್ಚಿನಿಂದ ಕೂಡಿದ ಲಾಳಮುಂಡಿಗೆಯನ್ನು ಮುರಿದು, ಹಿಂಗಾಲಿಗೆ ಬಿಗಿದಿದ್ದ ಶ್ರೇಷ್ಠ ವಾದ ಹಗ್ಗದ ಕುಣಿಕೆಯನ್ನು ಛಟಛಟನೆ ಕಿತ್ತು, ಹೇಷಾರವ ಮಾಡಿ, ಹಿಡಿಯಲು ಸಿದ್ಧ ವಾಗಿ ಬಂದು ಅಡ್ಡಗಟ್ಟಿ ಮೇಲೆ ಬೀಳುತ್ತಿರುವ ಕುದುರೆಗಾವಲಿನವನನ್ನು ಕೊಡವಿ, ಕೆಡವಿ, ಲಾಯದಿಂದ ಹೊರಬಂದು ನಡುಬೀದಿಗೆ ವೇಗವಾಗಿ ಓಡಿಬರುತ್ತಿದ್ದವು. ನಿಂತುಕೊಂಡ ಜನವೆಲ್ಲ ಕವಡಿಯ ರಾಶಿಯನ್ನು ಕಲ್ಲಿನಿಂದ ಹೊಡೆದಾಗ ಅವು ಜಲ್ಲನೆ ಸಿಡಿಯುವಂತೆ ಚೆಲ್ಲಾಪಿಲ್ಲಿಯಾಗುತ್ತಿದ್ದರು. ಕುದುರೆಗಳ ಕಾಲ್ಗೊರಸಿನ ತುದಿಯ ತುಳಿತದಿಂದೆದ್ದ

ಮುಂಕೊಂಡು ತ.ಕಿಸದೇಱಿವಿೞಾಱಿ ಬೀದಿಗೊಂಡು ಪರಿಯಿಪಾಗಳ್ ಮುಂಗಾಲ್ಗಳಿಂ ನೆಗಪಿ ನಿಲ್ವ
ಪಿಂಗಾಲ್ಗಳಂ ಕೀಳ್ತು ದಾಂಟುವ ಪೊಱಕಾಲ್ಗೊಳ್ವ ಮರಳಿ ಮೆಟ್ಟುವ ಬರಿವರಿವ ಸರಳಿಸಿ ಪಾಯ್ವ
ಚಪ್ಪರಿಸುತುಪ್ಪರಿಪ ಮಿಡಿವ ಕಡೆಗಣಿಸಿ ಪಾರ್ವ ದುಂಡಿಪ ದಿಂಡುವಾಯ್ವ ಬವರಿವರಿವ
ಚಮ್ಮಟಿಗೆಗೆ ಚಳಿಯದ ಕಡಿಯಾಣಮಂ ಕೈಗೊಳದ ಬಗೆಯಂ ಬಗೆಯದಂತೆ ಕಂಡು ಮನಮ
ಱಿದು ಮೈಯಱಿದು ಪೊಲಂಬಱಿದು ಪೊಳ್ತಱಿದು ದನಿಯಱಿದು ದೆಸೆಯಱಿದು ಬೋಳೈಸಿ
ಹಜ್ಜೆಗೊಳಿಸಿ ತೊಡೆ ಮಡ ದನಿ ಚಮ್ಮಟಿಗೆಗಳಿನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ
ಕಡಂಗಿ ನಡೆಯಿಪ ಪೊಳಯಿಪ ದೂವಾಳಿಪ ಪೊಱಮಡಿಪಿದಿರೇಱಿಪಡ್ಡಂಬರಿಯಿಪ ರಾಘವಾಘೆ
ಯೊಳ್ ಸರಿಸಂಗೊಂಡೊಂದೊಂದೆ ಮೆಯ್ಯೊಳ್ ಸೂಳಱಿದೇಱುವ ಸುತ್ತೇಱುವ ಬಿತ್ತರಂ
ಬಡೆದ ವಾಹಳಿತನದೊಳ್ ನಳನನಿಳಿಕೈವ ಶಾಳಿಹೋತ್ರನನಾಳಿಗೊಳ್ವ ಘೋಳಾಯಿಲರ್
ನೆರೆದು ಕನತ್ಕನಕಕವಚಮಂ ತೊಟ್ಟು ಕಾಲ್ಗುಪ್ಪಸಮನಿಟ್ಟು ಸೀಸಕಮಂ ಸಿಂಗರಿಸಿ ಬಾಹು
ತಕ್ಕಿಯನಾಂತು ಸಾಮ್ರಾಣಿಯಂ ಬಿಗಿದುಡೆಯೊಳ್ ಪೊಂಜುರಿಗೆಯಂ ಕಟ್ಟಿ ಗಱಿಗಣೆಗಳ್ತುಱು
ಗಿದ ಪೊನ್ನಬತ್ತಳಿಕೆಯಂ ಬೆನ್ನೊಳ್ ತಳೆದು ತರಕಸಮನೆಡವೆಗಲೊಳ್ಕೊಡರ್ಚಿ ಪಂಚವಣ್ಣದ

ವಿಸ್ತಾರಭೂಮಿಯ ಧೂಳಿನ ಸಮೂಹವು ಸೂರ್ಯಮಂಡಲವನ್ನು ಸುತ್ತುವರಿದು ಮುಸು
ಕಿತು. ಸ್ವೇಚ್ಛೆಯಾಗಿ ಓಡುತ್ತಿರುವ ಲಾಯದ ಕುದುರೆಗಳ ಲಗಾಮನ್ನು ಕೂಡ
ಇಚ್ಛಿಸದೆ (ರಾವುತರು) ಮುಂದೆ ಬಂದು ಸ್ವಲ್ಪವೂ ಶಂಕೆಯಿಲ್ಲದೆ ಬತ್ತಲುಗುದುರೆ
ಗಳನ್ನೇ ಹತ್ತಿ ಮಾರ್ಗ ಹಿಡಿಸಿ ಓಡಿಸುತ್ತಿರುವಾಗ ಮುಂಗಾಲುಗಳನ್ನು ಮೇಲೆ ಮಾಡಿ
ಕೇವಲ ಹಿಂಗಾಲುಗಳಿಂದ ನಿಲ್ಲುವ, ಹಿಂಗಾಲುಗಳನ್ನು ಕಿತ್ತು ದಾಟುವ (ಹಾರುವ),
ಕಾಲನ್ನೆತ್ತುವ, ಪುನಃ ಮೆಟ್ಟುವ, ಸುತ್ತುವರಿವ, ನಿಟ್ಟೋಟದಿಂದ ಓಡುವ, ಚಪ್ಪರಿಸಿ
ದಾಗ ಹಾರುವ, ಪುಟಿಯುವ, ಲೆಕ್ಕಿಸದೆ ಜಿಗಿಯುವ, ತುಂಡಿಸುವ, ಉರುಳಿಸುವ, ಸುತ್ತು
ತಿರುಗುವ, ಚರ್ಮದ ಬಾರುಕೋಲಿಗೆ ಲಕ್ಷ್ಯಕೊಡದ, ಲಗಾಮನ್ನು ಹಾಕಿಸಿಕೊಳ್ಳದ
ಅಶ್ವಹೃದಯವನ್ನು ಅರಿಯುವುದಕ್ಕೆ ಸಾಧ್ಯವಿಲ್ಲದಂತೆ ತೋರಿದವು. ಆ ಕುದುರೆಗಳ
ಮನಸ್ಸನ್ನು ಅರಿತು, ಮೆಯ್ಯ ರೀತಿಯನ್ನು ತಿಳಿದು, ಸ್ಥಳವನ್ನರಿತು, ಹೊತ್ತನ್ನು ತಿಳಿದು,
ಧ್ವನಿಯನ್ನರ್ಥಮಾಡಿಕೊಂಡು, ದಿಕ್ಕುಗಳನ್ನು ಅರಿತು, ಮೈಮೇಲೆ ಕೈಯಾಡಿಸಿ
ಸಮಾಧಾನಗೊಳಿಸಿ ಹೆಜ್ಜೆಗಳನ್ನಿಡಿಸುತ್ತ, ತೊಡೆಯ ಒತ್ತುವಿಕೆ, ಹಿಮ್ಮಡದ ಒದೆತ,
ಧ್ವನಿ ಗುರುತು, ಚಮ್ಮಟಿಗೆಗಳ ಪರಿಚಯದಿಂದ ಮೆಲ್ಲಮೆಲ್ಲನೆ ಸ್ವಾಧೀನಪಡಿಸಿಕೊಂಡು
ಹೇಳಿದಂತೆ ಕೇಳುವ ಹಾಗೆ ಮಾಡಿಕೊಂಡು, ಕೋಪದಿಂದ ನಡೆಯಿಸುವ, ಹೊಳೆಯಿ
ಸುವ, ಓಡಿಸುವ, ಹೊರಹೊರಡಿಸುವ, ಎದುರಾಗಿ ಏರಿಹೋಗುವ, ಅಡ್ಡಲಾಗಿ ಓಡಿ
ಸುವ, ರಿಕಾಪು ಮತ್ತು ಲಗಾಮು (ಕಡಿವಾಣ)ಗಳಿಂದ ಅವುಗಳನ್ನು ಅತಿಸಮೀಪಮಾಡಿ
ಕೊಂಡು . ಒಂದೊಂದೇ ಸಲದಂತೆ ಕ್ರಮವರಿತು ಹತ್ತುವ, ಸುತ್ತುತ್ತಿರುವಾಗಲೇ
ಹತ್ತುವ, ಲೋಕವಿಖ್ಯಾತ ಕುದುರೆಯ ಹೃದಯವನ್ನರಿತ ನಳಮಹಾರಾಜನನ್ನೂ

ಪಟ್ಟೆಯ ಬಿರುದಿನ ಬೀರಗಚ್ಚೆಗಟ್ಟಿರ್ದ ಪಿರಿಯ ನೇಜೆಯಮನೋಜೆಯಿಂದೆತ್ತಿಪಿಡಿದು ಸಮರ ಸಮಯಸಮುಚಿತ ನೈಪಥ್ಯಂಬಡೆದಬ್ಬರಿಸಿ ಬೊಬ್ಬೆಗೊಟ್ಟೇಱಿ ಸರಭಸಂ ಪರಿಯಿಪಾಗಳ್ ಪೊನ್ನ ಕಡಿವಾಣದ ರನ್ನ ಮೊಗರಂಬದ ಕಿವಿಯ ಚಾಮರದ ಸುತ್ತುಝುಲ್ಲರಿಯ ನೆತ್ತಿಯ ಬೆಳ್ಗಱಿಯ ನೊಸಲ ಕನ್ನಡಿಯ ರೇವಂತಮಾಲೆಯ ಗರ್ಗರದ ತರಜೆಗತ್ತರಿಯ ಪೊರ್ಕುಳ ಘಂಟೆಯ ಪೊಂಬೆಸೆದ ಗುಬ್ಬಿಯ ಪಾರಿವದ ಸಂಧ್ಯಾರಾಗದ ದೇವಾಂಗದ ನವರಂಗದ ಸುವರ್ಣ ಪಳಿಯ ಪಳದಿಯ ಜೋನೆಗವಳಿಯ ಪಲಬಗೆಯ ಪಲ್ಲಣದ ಪಕ್ಕಜಲ್ಲಿಯ ಪದ್ಮರಾಗದ ಪಾವುಡದ ಪರುಠವಣೆ ಪಸರಿಸೆ ಶರಧಿಮಥನ ಸಮಯದೊಳ್ ಘುಳುಘುಳಿಸಿ ಘಳಿಲನೆ ಪರಿವ ಪೆರ್ದೆರೆಯ ದೊರೆಗೆವಂದು ರಯದಿಂ ಪರಿದು ನೆರೆದು ತರಂಗೊಂಡ ತುರಗಸಂಘಾತದಿಂ ಮತ್ತಂ ಪೂಡಿದ ಹಯಂಗಳ ಜೋಡಿಸಿದ ಚಕ್ರಂಗಳ ಮುಗಿಲೊಳ್ ಪಳಂಚುವ ಪಳಯಿಗೆಯ ಸುವರ್ಣ ದೊಡ್ಡವಲಗೆಯ ನೆಗಪಿನೆಟ್ಟ ಘನತ್ರಿಶೂಲದ ಕೆಲದೊಳಿಳಿಪಿದಂಬಿನ ಪೊದೆಯ ಸಾರ್ಚಿ ನಿಲಿಸಿದ ಶರಾಸನದ ಕೀಳ್ಮೊಳೆಯೊಳಿಳಿಪಿದ ಪಾಱುಂಬಳೆಯ ಸಂಗಳಿಸಿದ ಮುಕುರತೋರಣದ

ಕೀಳುಗೊಳಿಸುವ, ಶಾಲಿಹೋತ್ರನನ್ನು ಅಪಹಾಸ್ಯಮಾಡುವಂತಿರುವ ಕುದುರೆಯ ರಾವುತರು ಸೇರಿ, ಹೊಳೆಯುತ್ತಿರುವ ಬಂಗಾರದ ಜರಿಯ ಅಂಗಿಯನ್ನು ತೊಟ್ಟು, ಕಾಲುಚೀಲಗಳನ್ನು ಧರಿಸಿ, ಶಿರಸ್ತ್ರಾಣವನ್ನು ಧರಿಸಿ ಶೃಂಗಾರಗೊಳಿಸಿಕೊಂಡು, ಭುಜರಕ್ಷೆಯ ತೋಳ್ಗರಿಯನ್ನು ಕಟ್ಟಿಕೊಂಡು, ನಡುಪಟ್ಟಿಯನ್ನು ಬಿಗಿದುಕೊಂಡು, ಉಡಿಗೆಯಲ್ಲಿ ಬಂಗಾರದ ಹಿಡಿಯ ಕಠಾರಿಯನ್ನು ಕಟ್ಟಿ ಇಳಿಬಿಟ್ಟು, ಹಿಂದೆ ಗರಿಗಳುಳ್ಳ ಬಾಣಗಳಿಂದ ತುಂಬಿದ ಬಂಗಾರದ ಬತ್ತಳಿಕೆಯನ್ನು ಬೆನ್ನಲ್ಲಿ ಕಟ್ಟಿಕೊಂಡಿದ್ದರು. ಎಡಹೆಗಲಿನಲ್ಲಿ ತರಕಸ (ಭಲ್ಲೆಯ ?)ವನ್ನು ತೊಡಕಿಸಿಕೊಂಡು, ಐದು ಬಣ್ಣಗಳುಳ್ಳ ಪಟ್ಟಿಯ ಬಿರುದಿನ ವೀರಗಚ್ಚೆ ಕಟ್ಟಿದ್ದ ದೊಡ್ಡ ಪತಾಕೆಯನ್ನು ಕ್ರಮವಾಗಿ ಹಿಡಿದುಕೊಂಡಿದ್ದರು. ಯುದ್ಧ ಸಮಯಕ್ಕೆ ಉಚಿತವಾದ ರಂಗಸ್ಥಳದಲ್ಲಿ (ಊರ ಮುಂದಿನ ಮಾಳದಲ್ಲಿ ?) ಸೇರಿ ಆರ್ಭಟಿಸಿ, ವೀರೋಚಿತ ಬೊಬ್ಬೆಯನ್ನು ಹಾಕಿ ಕುದುರೆಗಳನ್ನೇರಿ ವೇಗವಾಗಿ ಓಡಿಸುತ್ತಿದ್ದರು. ಆಗ ಬಂಗಾರದ ಕಡಿವಾಣದ, ರತ್ನದ ಮೊಗವಾಡದ, ಕಿವಿಯ ಬಳಿ ಅಲಂಕರಿಸಿದ್ದ ಚಾಮರಗಳ, ಸುತ್ತಲೂ ಇಳಿಬಿಟ್ಟಿರುವ ಮುತ್ತಿನ ಕುಚ್ಚುಗಳ, ನೆತ್ತಿಯ ಮೇಲೆ ಕಟ್ಟಿದ ಬಿಳಿಯ ಗರಿಗಳ ಕುಚ್ಚಿನ, ಹಣೆಯ ಮೇಲಿನ ಕನ್ನಡಿಯ, ಗೊಂಡೆಗಳ ಸರದ, ಕೊಪ್ಪೆಯ ತರಿಯುವ ಕತ್ತರಿಯ, ಹೊಕ್ಕುಳಭಾಗದಲ್ಲಿ ಅಲಂಕರಿಸಿರುವ ಗಂಟೆಗಳ, ಬಂಗಾರದ ಬೆಸುಗೆಯ, ಗುಬ್ಬಿಗಳ ಬಣ್ಣದ, ಪಾರಿವಾಳಗಳ ಬಣ್ಣದ, ಸಂಧ್ಯಾಕಾಲದ ಕೆಂಪಿನ ಬಣ್ಣದ, ಬಿಳಿಯ ಬಣ್ಣದ, ಒಂಬತ್ತು ಬಣ್ಣದ, ಬಂಗಾರದ ಬಣ್ಣವನ್ನು ಕೀಳ್ಮಾಡುವ ಹಳದಿ ಬಣ್ಣದ ಜೂಲಿನ, ಹಲವಾರು ಬಗೆಯ ಜೀನುಗಳ, ಪಕ್ಕದಲ್ಲಿ ಇಳಿಬಿದ್ದಿದ್ದ ಜಾಲರಿಗಳ, ಪದ್ಮರಾಗವರ್ಣದ ರಿಕಾಪು (ಪಾವುಡ ?)ಗಳ ಸಮೂಹದಿಂದ ವಿಸ್ತಾರಗೊಂಡು, ಸಮುದ್ರಮಥನ ಕಾಲದಲ್ಲಿ ಘುಳುಘುಳುಸಿ ಘಳಿಲ್ ಎಂದು ಹರಿದು

**ಮುಂಗಡೆಯೊಳಿಕ್ಕುವ ಧವಳಚಾಮರದ ಮೇಲೆ ಮೆಱೆವ ಮೇಘಾಡಂಬರದ ರಣಕಬಳರಕ್ಕೆ ಮರ್ದುಗಳ್ಪುದಿದ ಭರಣಿಗಳ ಪೊಸಸವಗ ಸೀಸಕಂಗಳ ಪೆಟ್ಟಗೆಗಳ ಚಕ್ರಚೀತ್ಕೃತಿಗೆ ಜತಿಗುಡುವ ಮಾಲೆಘಂಟೆಯ ಸಾರಿನಿಂದ ಧೀರಸಾರಥಿಯ ಸಮ್ಮುಖದೊಳ್ ಬಿರುದನುಗ್ಘಡಿಪ ವಂದಿವೃಂದದ ಸಂಭ್ರಮಂಬೆರಸು ನಿಂದ ನಿಜರಥಂಗಳಂ ಬೀರಸಿರಿಯ ಮಣಿಮಂಚಮನೇಱುವಂತೇಱಿ ಮಣಿ ಮಕುಟಕಿರಣಮಿನರುಚಿಯನೊತ್ತರಿಸೆ ಕಲಿತ ಕರ್ಣಾಭರಣಕಾಂತಿ ಕಪೋಲದೊಳ್ ನರ್ತಿಸೆ ತೊಡೆದ ಯಕ್ಷಕರ್ದಮದ ಕಡುಗಂಪಿಂಗೆ ಮದಾಳಿ ಮೊರೆದೆಱಗೆ ಕನಕಕವಚರುಚಿರರುಚಿಯೊಳ್ ಹಾರರುಚಿ ಮಲ್ಲಗಾಳಿಗಮನೊಡರ್ಚೆ ಭುಜವಲ್ಲರಿಯ ಮಂಜರಿಯ ಸಿರಿಯಂ ಭುಜಕೀರ್ತಿ ತಳೆದು ತೆರಂಬೊಳೆಯೆ ಪೊಂದೊಡರ ನುಣ್ಗದಿರ್ ಚರಣಾಂಬುಜಕ್ಕೆ ಪೊಸವಿಸಿಲಂ ಪಸರಿಸೆ ಪಸದನ ಸಿರಿ ಮಿಸುಗೆ ರಥಾರೋಹಣನಿಪುಣತೆಯೊಳ್ ಪಾರ್ಥನಂ ಪಳಿವ ಪಾರ್ಥಿವಸಮುದಯಂ ಮುದಂ ದಳೆದೇಱೆ ಪನ್ನತಿಕೆಯಿಂ ಪರಿಯಿಪಾಗಳಂಬುಧಿಯ ತರಂಗದ ಬೆಂಬಳಿಯೊಳ್ ಪರಿವ ವಹಿತ್ರಂ**

ಬರುತ್ತಿರುವ (ಕ್ಷೀರಸಾಗರದ) ದೊಡ್ಡದೊಡ್ಡ ತೆರೆಗೆ ಸಮನಾಗಿ ವೇಗವಾಗಿ ಓಡಿ ಗುಂಪು ಗೂಡಿದ ಕುದುರೆಗಳ ಸಮೂಹವು ಕಂಗೊಳಿಸಿತ್ತು. ಮತ್ತು ಹೂಡಿದ ಕುದುರೆ, ಜೋಡಿಸಿದ ಚಕ್ರ, ಮುಗಿಲನ್ನು ಮುಟ್ಟೆ ಹಾರಾಡುತ್ತಿದ್ದ ಧ್ವಜಪತಾಕೆ, ಬಂಗಾರದ ಗುರಾಣಿಗಳಿಂದಲೂ, ಎತ್ತಿ ಮೇಲೆ ನೆಡಿಸಿದ ಶ್ರೇಷ್ಠವಾದ ತ್ರಿಶೂಲಾಯುಧ, ಪಕ್ಕದಲ್ಲಿ ಇಳಿಬಿಟ್ಟ ಬತ್ತಳಿಕೆ, ಒತ್ತಿನಲ್ಲಿ ನಿಲ್ಲಿಸಿದ ಬಿಲ್ಲು, ಕೆಳಗಿನ ಮೊಳೆಗಳಿಗೆ ಹಾಕಿರುವ ಚಕ್ರ ಗಳಿಂದಲೂ ; ಕನ್ನಡಿಗಳ ಸಾಲು, ಮುಂಭಾಗದಲ್ಲಿ ಬೀಸುವ ಚಾಮರ, ಮೇಲ್ಭಾಗದಲ್ಲಿ ರುವ ಛತ್ರಿಗಳಿಂದಲೂ ; ರಣರಂಗದ ತಿಂಡಿತಿನಸು, ರಕ್ಷಣೆಯ ಔಷಧಗಳಿಂದ ತುಂಬಿದ ಭರಣಿಗಳಿಂದಲೂ ; ಹೊಸದಾದ ಕವಚ ಮತ್ತು ಶಿರಸ್ತ್ರಾಣ (ತಲೆಯ ಪಾಗು)ಗಳ ಪೆಟ್ಟಿಗೆಗಳಿಂದಲೂ (ರಥಗಳು ತುಂಬಿದ್ದವು). ಚಕ್ರಗಳ ಚೀತ್ಕಾರಕ್ಕೆ ಜೊತೆಗೂಡುವ ಸಾಲುಗಂಟೆಗಳು, ಏರಿ ನಿಂತ ಧೀರ ಸಾರಥಿ, ಮುಂಭಾಗದಲ್ಲಿ ಬಿರುದನ್ನು ಹೊಗಳುವ ವಂದಿಮಾಗಧರುಗಳ ಸಮೂಹ–(ಇವುಗಳಿಂದ) ಸಂಭ್ರಮಗೊಂಡು ನಿಂತಿರುವ ತಮ್ಮ ತಮ್ಮ ರಥಗಳನ್ನು ವೀರಸಿರಿಯ ರತ್ನಖಚಿತವಾದ ಮಂಚವನ್ನು ಹತ್ತುವ ಹಾಗೆ ರಥಾ ರೋಹಣದ ನಿಪುಣತೆಯಲ್ಲಿ ಅರ್ಜುನನನ್ನೂ ಕೀಳ್ಮಾಡುವ ಅರಸುಗಳ ಸಮೂಹವು ಪ್ರೀತಿ ಗೊಂಡು ಏರಿತು. (ಅವರ) ರತ್ನಖಚಿತ ಕಿರೀಟಕಿರಣವು ಸೂರ್ಯನ ಕಿರಣಗಳನ್ನು ಹಿಂದೆ ಸರಿಸಿತು. ಧರಿಸಿದ್ದ ಕರ್ಣಕುಂಡಲಗಳ ಕಾಂತಿಯು ಕಪೋಲದಲ್ಲಿ ಕುಣಿದಾಡುತ್ತಿತ್ತು. ಲೇಪಿಸಿಕೊಂಡ ಯಕ್ಷಕರ್ದಮವೆಂಬ ವಿಶೇಷವಾದ ಗಂಧಕ್ಕೆ ಮದಿಸಿದ ಭ್ರಮರಗಳು ಝೇಂಕಾರ ಮಾಡುತ್ತ ಮುತ್ತುತ್ತಿದ್ದವು. ಬಂಗಾರಮಯವಾದ ಅಂಗಿಯ ಮನೋಹರ ವಾದ ಕಾಂತಿಯೊಡನೆ ಧರಿಸಿದ ಹಾರಗಳ ಕಾಂತಿಯು ಸ್ಪರ್ಧಿಸುತ್ತಿತ್ತು. ಬಾಹುಲತೆಯ ಸಮೂಹದ ಕಾಂತಿಯನ್ನು ತೋಳಿಗೆ ಧರಿಸಿದ ಆಭರಣವು ಹೊಂದಿ ವಿಶೇಷವಾಗಿ ಪ್ರಕಾಶಿಸುತ್ತಿತ್ತು. ಬಂಗಾರದಾಭರಣಗಳ ಶುದ್ಧಕಾಂತಿಯು ಪಾದವೆಂಬ ಕಮಲಗಳಿಗೆ ಪ್ರಾತಃಸೂರ್ಯನ ಬಿಸಿಲನ್ನು ಹರಡಿದಂತಿತ್ತು. (ಈ ರೀತಿ ಅವರ) ಆಭರಣಗಳ ಸಿರಿಯು

ಗಳಂತೆ ತುರಂಗದ ಬೆಂಬಳಿಯೊಳ್ ಪರಿದು ಪಾಳಿವೆತ್ತ ರಥಂಗಳಿಂ ಮತ್ತಂ ರಣರಂಗದೊಳಿದಿರ್ಚಿದ ವೀರನಂ ಸದೆದು ಬಿಸುಡುವ ತೊಡಂಕಿದ ವೀರನನಡಂಗೆಪೊಯ್ವ ವಂಚಿಸಿಪಾಯ್ವ ವೀರನಂ ಸಂಚಮುಱಿದೆಱಗುವ ತೊಲಗದೆ ನಿಂದ ವೀರನಂ ತಲೆಗಡಿದುರುಳ್ಚುವ ಮೂದಲಿಪ ವೀರನಂ ತೌದಲೆಗಾಣಿಪ ಮಾಯದ ವೀರನಂ ನೋಯಲಿಱಿದು ಕೆಡಪುವ ಪರಾಕ್ರಮಕ್ಕೆ ಪಕ್ಕಾದ ಡವಣೆ ವಱಿಯ ಕಾಲಸರಪಳಿಯ ಬಾವುಲಿಯ ಬೊಂಬೆಯ ಭುಜಕೀರ್ತಿಮುಖದ ಬೀರಜೇಗಟೆಯ ಬೆನ್ನಚವರದ ಪಳದಿಯ ಸೀಗುರಿಯ ಪಗಲ ಕೈದೀವಿಗೆಯ ವಜ್ರದಂಕುಶದ ವಿಜಯ ಪತಾಕೆಯ ಪುಲಿಯಚರ್ಮದ ಪಲುಬಿಯುಗಱಿಯ ತೋಳಕಚ್ಚಳಿಯ ತೊಂಗಲ್ಫಂಟೆಯ ಜೋಡುಃಶಂಖದ ಜಗಜಂಪಿನ ಸತ್ತಿಗೆಯ ಪಲಬಿರುದುಗಳ್ನೆಗಳ್ತೆವಡೆಯೆ ಘುಡುಘುಡಿಸಿ ಜಡಿದು ಪಿಡಿದ ಕರವಾಳ ಕಕ್ಕಡೆಯ ಸಬಳದುಲ್ಬಣದ ಕುಂತದ ಕೌಕ್ಷೇಯಕದಡ್ಡಣದಡಾಯುಧದ ಮುಸಲದ ಮುದ್ಗರದ ಪರಶುವಿನ ಪಟ್ಟಿಯದ ಪಾಶದಂಕುಶದ ವಂಕಿಯ ಲೌಡಿಯ ಜವ

ಶೋಭಿಸುತ್ತಿತ್ತು. (ಇಂಥ ರಾಜರು ರಥಗಳನ್ನು) ಪರಾಕ್ರಮದಿಂದ ಓಡಿಸುವಾಗ ಸಮುದ್ರದ ತೆರೆಗಳ ಹಿಂಭಾಗದಲ್ಲಿ ಬರುತ್ತಿರುವ ಹಡಗುಗಳಂತೆ, ಕುದುರೆಯ ಹಿಂಭಾಗದಲ್ಲಿ ಹರಿದು ಸಾಲುಗೊಂಡ ರಥಗಳಿಂದ ಕೂಡಿತ್ತು. ಮತ್ತು ರಣರಂಗದಲ್ಲಿ ಎದುರಿಸಿದ ವೀರನನ್ನು ಬಡಿದು ಬಿಸಾಡುವ, ಯುದ್ಧಕ್ಕೆ ತೊಡರಿದ ವೀರನನ್ನು ಕೊನೆಯಾಗುವಂತೆ ಹೊಡೆಯುವ, ವಂಚನೆಗೊಳಿಸಿ ಮೇಲೆ ಬೀಳುವ ವೀರನನ್ನು ಉಪಾಯವನ್ನರಿತು ಮೇಲೆ ಬೀಳುವ, ತೊಲಗದಂತೆ ಎದುರಿಸಿ ನಿಂತ ವೀರನ ತಲೆಯನ್ನು ಕತ್ತರಿಸಿ ಉರುಳಿಸುವ, ಮೂದಲಿಸುವ ವೀರನನ್ನು ನಾಶಗೊಳಿಸುವ, ಮಾಯಾವಿಯಾದ ವೀರನನ್ನು ನೋಯುವಂತೆ ಇರಿದು ನೆಲಕ್ಕೆ ಕೆಡಹುವ, ಪರಾಕ್ರಮಕ್ಕೆ ಯೋಗ್ಯವಾದ ರಣಹಲಗೆಯ, ಕಾಲಿನಲ್ಲಿ ಹಾಕುವ ಬಿರುದಿನ ಸರಪಳಿಯ, ಕಿವಿಯ ಮುರುವಿನ, ಧರಿಸಿದ ಗೊಂಬೆಯ, ಭುಜಕೀರ್ತಿಯಲ್ಲಿ ಕೆತ್ತಿದ ಮುಖವುಳ್ಳ ಆಭರಣದಿಂದ, ವೀರ ಜಯಗಂಟೆಯ (ಜೇಗಟೆಯ), ಬೆನ್ನಿನಲ್ಲಿನ ಚಾಮರದ, ಹಳದಿಬಣ್ಣದ ಕೊಡೆಯ, ಹಗಲಿನ ದೀವಟಿಗೆಯ, ವಜ್ರಮಯ ಅಂಕುಶದ, ವಿಜಯಸೂಚಕ ಧ್ವಜದ, ಹುಲಿಯ ಚರ್ಮದ, ನವಿಲುಗರಿಯ, ತೋಳಿನಲ್ಲಿ ಹಾಕಿದ ಬಿರುದಿನ ಬಳೆಯ, ಗಂಟೆಗಳ ಕುಚ್ಚಿನ, ಜೋಡು ಶಂಖಗಳ, ಜಗಜಂಪವೆಂಬ ಕುಣಿತ ಕುಣಿಯುವಾಗ ಹಿಡಿದುಕೊಳ್ಳುವ ಕೊಡೆಯ – (ಇವೇ ಮೊದಲಾದ) ಹಲವಾರು ಬಿರುದುಗಳು (ಪದಾತಿದಳದವರಲ್ಲಿ) ಪ್ರಕಾಶಮಾನವಾಗಿ ಶೋಭಿಸುತ್ತಿದ್ದವು, ಘುಡಿಘುಡಿಸಿ ಝಳಪಿಸುತ್ತ ಹಿಡಿದಿರುವ ಖಡ್ಗದ ಕರ್ಕಶದ, ಈಟಿಯ ತೀಕ್ಷ್ಣತೆಯ ಭರ್ಜಿಯ, ನಡುವಿನಲ್ಲಿ ಕಟ್ಟಿದ ಖಡ್ಗದ, ಗುರಾಣಿಯ, ಅಗಲಬಾಯಿಯ ಖಡ್ಗದ ಒಣಕೆ(ಒನಕೆ)ಯಾಯುಧದ, ಗದೆಯ, ಕೊಡಲಿಯ, ಪಟ್ಟಿಯ ಎಂಬ ಆಯುಧದ, ಹಗ್ಗ ಮತ್ತು ಅಂಕುಶದ, ಚಂದ್ರಾಯುಧದ, ದೊಣ್ಣೆಯ, ಕೋರೆಯುಳ್ಳ ಈಟಿಯ,

ದಾಡೆಯು ಚಾಪದ ಚಕ್ರದ ಶರದ ಶೂಲದ ಸೆಲ್ಲೆಹದ ಬಲ್ಲೆಹದ ಪೊಡರ್ಪು ಪಡಿತಳಿಸೆ ಸಿಡಿಲಪಡೆ ಕಾಲನ ಕಾಯ್ಪುಗೊಂಡು ಕಟ್ಟಾಳ್ತನಂಬೆತ್ತಂತೆ ಮೆಱೆದು ನೆರೆದ ಪದಾತಿವ್ಯೂಹದಿಂ ಮತ್ತಂ ಮೊರೆವ ಚಂಬಕವಱೆಯ ಮೊಳಗುವ ಪಳಹದ ಸೂಳೈಪ ನಿಸ್ಸಾಳದ ಪೂರಯಿಪ ಶಂಖದ ಡಮುಡಮೆಂಬ ಡಿಂಡಿಮದ ಭೋರೆಂಬ ಕಪಳೆಯ ಬೊಬ್ಬಿಡುವ ಬೀರಮರ್ದಳೆಯ ಜತಿಗುಡುವ ತಂಬಟದ ಬೆಂಬಳಿವಿಡಿದ ಬೊಂಬುಳಿಯ ಗಿಱ್ಱೆಂಬ ಗಿಱುಗಟೆಯ ನಿಬಿಡತರ ಪಟುರಟನದೊಡನೆ ಘುಡಿಘುಡಿಪ ಸುಭಟಪಟಲಕಳಕಳಂ ರಥಚಕ್ರಚಟುಳಚೀತ್ಕಾರಂ ಮತ್ತಮಾತಂಗ ಸಂಘಾತ ಸಮುದಿತ ಬೃಹದ್ಬೃಂಹಿತಂ ತರಂಗತರಳತುರಂಗಸಂಘ ಹೇಷಾಸಮುದ್ಘೋಷಣಂಬೆರಸಿ ನಭೋಮಂಡಳಮನಳ್ಳಿಱಿದಳುರ್ಕೆಗೊಳೆ ಸೇನಾರಜಂ ಬಾನಂ ಬಾಸಣಿಸೆ ಕರತಳದೊಳೊರೆಗಳೆದು ಝಳಂಪಿಸುವ ಕೈದುಗಳ ಬಳ್ಳಿವೆಳಗು ಬಳಸಿ ಬೆಳೆದು ಕವಲಿಱಿದು ಕವಿಯೆ ನೀಳ್ದ ಪತಾಕೆಗಳ ಪಸರಿಸಿದ ಪಟಪಟಲಂ ಪದ್ಮಸಖರುಚಿಯಂ ಪರಿಭವಿಸೆ ಪೆರ್ಮೆವೆತ್ತು ಕಲ್ಪಾಂತದೊಳ್ ಕವಿತರ್ಪ ಕಡಲಂತೆ ಘುಳುಘುಳಿಸಿ ನೆನೆವ ಮನಕ್ಕಂ ನೋಳ್ಪ ಕಣ್ಗಂ ನುತಿಪ ರಸನೆಗಂ ಅಸದಳಮೆನಿಸಿ ಜಗ

ಬಿಲ್ಲಿನ, ಚಕ್ರದ, ಬಾಣದ, ಶೂಲದ, ಶಂಖಾ ಕೃತಿಯ ಆಯುಧದ ಪ್ರಭೆಯು ಎಲ್ಲ ಕಡೆಗೂ ಪ್ರತಿಫಲಿಸುತ್ತಿರಲು, ಸಿಡಿಲೆಂಬ ಸೈನ್ಯವು ಯಮನ ಕೋಪವನ್ನು ಧರಿಸಿ ಅತ್ಯಂತ ಶೌರ್ಯವನ್ನು ಹೊಂದಿದಂತೆ ಶೋಭಿಸುತ್ತ ಗುಂಪುಗೂಡಿದುದಾಗಿತ್ತು. ಮತ್ತು ಧ್ವನಿ ಮಾಡುವ ಚಂಪಕವೆಂಬ ಚರ್ಮವಾದ್ಯದ, ಮೊಳಗುವ ನಗಾರಿಯ, ಡಮುಡಮುವೆನ್ನುವ ಢಕ್ಕೆಯ, ಭೋರೆನ್ನುವ ಕಹಳೆಯ, ಬೊಬ್ಬಿಡುತ್ತಿರುವ ವೀರಮದ್ದಲೆಗಳ; ಮೇಳಗೂಡುವ ತಮಟೆಯ, ಹಿಂಭಾಗದಲ್ಲಿ ಕೂಡಿರುವ ವಿಶೇಷ ಗದ್ದಲದ, ಗಿರ್ರೆಂದು ಬಾಜಿಸಲ್ಪಡುತ್ತಿರುವ ಕರಡಿಯ ವಾದ್ಯಗಳ ಅತ್ಯಂತ ಸಾಂದ್ರವಾದ (ದಟ್ಟವಾದ) ಸಮರ್ಥ ವಾದ್ಯ ಧ್ವನಿಯೊಡನೆ ಘುಡುಘುಡಿಸುತ್ತಿದ್ದ ಪರಾಕ್ರಮಶಾಲಿಗಳಾದ ಮಹಾಶೂರ ಕಾಲಾಳುಗಳ ಕಳಕಳಧ್ವನಿಯೂ, ರಥಚಕ್ರಗಳ ಕಟುವಾದ ಚೀತ್ಕಾರಧ್ವನಿಯೂ ಮತ್ತು ಆನೆಗಳ ಸಮೂಹದಿಂದ ಹೊರಹೊರಡುತ್ತಿದ್ದ ಭಯಂಕರ ಕೂಗೂ, ಅಲೆಗಳಂತೆ ಚಂಚಲವಾಗಿ ಬರುತ್ತಿದ್ದ ಕುದುರೆಗಳ ಸಮೂಹದ ಹೇಷಾರವದ ಉದ್ಘೋಷಣವೂ ಒಡಗೂಡಿ ಆಕಾಶಮಂಡಲವನ್ನು ಭೇದಿಸಿ ಅಂಜಿಕೆಗೊಳಿಸುವಂತಿತ್ತು. ಸೇನೆಯ ಕಾಲ್ತುಳಿತದಿಂದೆದ್ದ ಧೂಳು (ಆ) ಆಕಾಶವನ್ನೆಲ್ಲ ವ್ಯಾಪಿಸಿತು. (ಸೈನಿಕರು) ಕೈಗಳಲ್ಲಿ ಒರೆಗಳೆದು ಹೊರಬಂದು ಜಳಪಿಸಲ್ಪಡುತ್ತಿದ್ದ ಆಯುಧಗಳ ಮೂಲಕ ಬಳ್ಳಿಮಿಂಚಿನಂತೆ ಹೊರ ಹೊರಟ ಕಿರಣಗಳ ಬೆಳಕು ಎಲ್ಲ ಕಡೆಗೂ ವ್ಯಾಪಿಸಿ ಬೆಳೆದು ಕವಲುಗೊಂಡು (ಶಾಖೆಗಳಾಗಿ) ತುಂಬಿಕೊಂಡಿತು. ಎತ್ತರವಾದ ಪತಾಕೆಗಳಲ್ಲಿದ್ದ ವ್ಯಾಪಿಸಿದ ಪಟಗಳ ಸಮೂಹವು ಸೂರ್ಯಕಾಂತಿಯನ್ನು ತಿರಸ್ಕರಿಸುವಂತೆ ಘನತೆ ಹೊಂದಿತ್ತು. (ಹೀಗೆ) ಪ್ರಳಯಕಾಲದಲ್ಲಿ ಸುತ್ತ ಬಳಸಿಬರುವ ಸಮುದ್ರದ ಹಾಗೆ ಘುಳುಘುಳಿಸಿ ನೆನೆಯುವ ಮನಸ್ಸಿಗೂ, ನೋಡುವ ಕಣ್ಣಿಗೂ, ಹೊಗಳುವ ನಾಲಗೆಗೂ ಅಸಾಧ್ಯವೇದೆನಿಸಿ,

ದಗಲಕ್ಕೆ ತೆಕ್ಕನೆತೀವಿದ ಚತುರಂಗಬಲಮಂ ಚತುರಚಮೂಪತಿ ತೋಱಿದಾಗಳದಂ ಕಂಡು ಕೌತುಕಂಗೊಂಡಾರ್ಪುಮಿಗೆ ರಾಜಶೇಖರರಾಜೇಂದ್ರನೋಜೆಯಿಂದಾಜಿಸನ್ನದ್ಧನಾಗಿ ಯಥೋಚಿತ ನೈಪಥ್ಯಂದಳೆದಮಾತ್ಯಸಮೇತಂ ಪಣ್ಣೆಬಂದಿಭೇಂದ್ರಮನೇಱಿ ಸಮರಸಮುಚಿತ ಸಂಭ್ರಮಂ ಮಿಗೆ ಶುಭಮುಹೂರ್ತದೊಳ್ ಶಿಬಿರಕ್ಕೆ ನಡೆತರ್ಪಾಗಳ್

ಮ॥ಸ್ರ॥ ಬಳವದ್ದೋರ್ದಂಡ ದಂಡಾಧಿಪ ಮಿತವಚನಾಮಾತ್ಯರೊಂದೊಂದಿಭೇಂದ್ರಂ
ಗಳನಾರ್ಪಿಂದೇಱಿ ಪಿಂದೈತರೆ ರವಿಶಶಿವಂಶೋದ್ಭವರ್ ಸದ್ವರೂಥಂ
ಗಳೊಳೊಪ್ಪಂಬೆತ್ತು ಸುತ್ತುತ್ತೊಡವರೆ ಚತುರಂ ಚಾತುರಂಗಾನ್ವಿತಂ ಮಂ
ಜುಳಖಡ್ಗನ್ಯಸ್ತಹಸ್ತಂ ತಳರ್ದನಹಿತಸೇನಾಬ್ಜಿನೀಕುಂಜರೇಂದ್ರಂ ೧೨

ವ॥ ಮತ್ತಂ

ಮ॥ಸ್ರ॥ ಖರಖಡ್ಗಪ್ರಾಂಶು ವಿದ್ಯುದ್ದ್ಯುತಿ ಪರಿಗೆಗಳಂಭೋಧರಂಗಳ್ಗಜಪ್ರೋ
ತ್ಕರಶುಂಭದ್ಬೃಂಹಿತಂ ಪೆರ್ಮೊಳಗು ಮಣಿರಥಶ್ರೇಣಿ ಶಕ್ರಾಯುಧಂ ಬಂ
ಧುರಮಾಗುತ್ತಿರ್ಪಿನಂ ತದ್ರಿಪುಮದದವಮಂ ನಂದಿಸಲ್ ಬರ್ಪ ಕಾರಂ
ತಿಕೆ ಬಂದಂ ಸತ್ಕದಂಬಪ್ರಹಿತಕರಕವಿಖ್ಯಾತನಾ ಭೂಮಿಪಾಲಂ ೧೩

ಭೂಮಿಯ ಅಗಲಕ್ಕೂ ಒತ್ತೊತ್ತಾಗಿ ತುಂಬಿದಂತಿದ್ದ ಚತುರಂಗಬಲವನ್ನು ಚತುರನಾದ ಸೇನಾಪತಿಯು (ರಾಜಶೇಖರ ನರೇಂದ್ರನಿಗೆ) ತೋರಿಸಲಾಗಿ ಅವನು ಅಂಥಾ ಸೈನ್ಯವನ್ನು ನೋಡಿ ಆಶ್ಚರ್ಯಗೊಂಡು, ಸಾಮರ್ಥ್ಯದ ಆಧಿಕ್ಯದಿಂದ ಕೂಡಿ ಯುದ್ಧಕ್ಕೆ ಸಿದ್ಧನಾದನು. ತಕ್ಕ ಅಲಂಕಾರವನ್ನು ಹೊಂದಿದ ಅಮಾತ್ಯ ಸಮೇತವಾಗಿ (ಅಂಬಾರಿ ಸಹಿತ) ಸಿದ್ಧವಾಗಿ ಬಂದ ಪಟ್ಟದಾನೆಯನ್ನೇರಿ, ಯುದ್ಧಸಮಯದ ಉಚಿತ ಉತ್ಸಾಹಾಧಿಕ್ಯದಿಂದ ಶುಭಮಹೂರ್ತದಲ್ಲಿ ಯುದ್ಧಭೂಮಿಯ ಶಿಬಿರಕ್ಕೆ ಬರುತ್ತಿದ್ದನು. ಆಗ ೧೨. ಬಲವತ್ತರ ಭುಜಬಲಪರಾಕ್ರಮಶಾಲಿಯಾದ ದಂಡನಾಯಕನೂ, ಮಿತವಚನನೆಂಬ ಮಂತ್ರಿಯೂ ಪ್ರತ್ಯೇಕವಾಗಿ ಒಂದೊಂದು ಶ್ರೇಷ್ಠ ಆನೆಗಳನ್ನು ಸಂತೋಷದಿಂದ ಏರಿ ಹಿಂದೆ ಬರುತ್ತಿದ್ದರು. ಸೂರ್ಯಚಂದ್ರವಂಶಸಂಭೂತರಾದ ಕ್ಷತ್ರಿಯಕುಲೋತ್ಪನ್ನ ರಾಜರುಗಳು ಶ್ರೇಷ್ಠ ರಥಗಳನ್ನೇರಿ ಅಂದಗೊಂಡು ಸುತ್ತುವರಿದು ಒಡನೆ ಒಡನೆಯೇ ಬರುತ್ತಿದ್ದರು. (ಹೀಗೆ) ಚತುರವಾದ ಚತುರಂಗಬಲ ಸಮೇತನಾಗಿ ಮನೋಹರ ಖಡ್ಗವನ್ನು ಕೈಯಲ್ಲಿ ಹಿಡಿದು ವೈರಿಗಳ ಸೈನ್ಯವೆಂಬ ಸರೋವರಕ್ಕೆ ಮಹಾಗಜದಂತಿರುವ ರಾಜಶೇಖರ ಮಹಾರಾಜನು (ಯುದ್ಧ ಭೂಮಿಗೆ) ಪ್ರಯಾಣ ಬೆಳಸಿದನು. ವ॥ ಮತ್ತು ೧೩. ತೀಕ್ಷ್ಣವಾದ ಖಡ್ಗಗಳ ಪ್ರಕಾಶವೇ ವಿದ್ಯುತ್ತಿನ ಪ್ರಕಾಶ ಅಂದರೆ ಮಿಂಚು ; ಗುರಾಣಿಗಳೇ ಮೋಡಗಳು ; ಆನೆಗಳಿಂದ ವಿಶೇಷವಾಗಿ ಹೊರಹೊಮ್ಮುತ್ತಿದ್ದ ಘೀಂಕಾರವೇ ಗುಡುಗಿನ ಧ್ವನಿ ; ರತ್ನಖಚಿತ ರಥಗಳ ಸಾಲೇ ಇಂದ್ರಧನಸ್ಸು. ಹೀಗೆ ತನ್ನ ವೈರಿಗಳ ಮದವೆಂಬ ದಾವಾನಲವನ್ನು ನಂದಿಸುವುದಕ್ಕೋಸುಗ ಮಳೆಗಾಲವು ಬಂದಹಾಗೆ ಶ್ರೇಷ್ಠವಾದ ಚತುರಂಗಬಲದ ಸಮ್ಮೇಲನದೊಡನೆ ಕವೀಶ್ವರರಿಂದ ಹೊಗಳಲ್ಪಡುವ

ವ॥ ಅಂತು ಬರ್ಪಾಗಳ್

ಮ॥ಸ್ರ॥ ಕಮಠೇಂದ್ರಂ ತೆಕ್ಕೆಗೊಂಡೊಂದಿದ ವಿನಮಿತ ಕಂಠಾಹಿಪಂ ಸಿಂಬಿಯೆಂಬಂ
ತಮರ್ದೊಪ್ಪಂಬೆತ್ತು ಬೆನ್ನಲ್ಲಿರೆ ಬಲಭರಮಂ ತಾಳ್ದು ಬಾಳ್ದಂ ಪತಾಕಾ
ಕ್ರಮಿತಾಕಾಶಾಧ್ವದೊಳ್ ತತ್ಪಟಪಟಲದೊಳಿಟ್ಟಾಸ್ಯಮಂ ತದ್ರಜಃಸಂ
ಕ್ರಮಜಾತಕ್ಲೇಶಮಂ ಮೇಣ್ಕಳಿದರನಿಮಿಷರ್ ನಿರ್ನಿಮೇಷಾಕ್ಷಿಗಾಗಳ್ ೧೪

ಕಂ॥ ಬಳವಿಪುಳಕೇತು ತುಡುಕಿದೊ
ಡಳರ್ದಿಳಿತಂದಿಂದು ತನ್ನೃಪಾಳನ ಮಱೆಯಂ
ಗಳಿಲನೆ ಪುಗಲ್ಕೆ ಬಂದಂ
ತೆಳೆಮುತ್ತಿನ ಮೇಘಡಂಬರಂ ಬಗೆಗೊಳಿಕುಂ ೧೫

ಚಂ॥ ಮದಜಳದಿಂದೆ ಮಳ್ಗಿಪುದು ಭೂರಜಮಂ ಗಜರಾಜಿವಾಜಿ ಮ
ತ್ತದನೆ ಖುರಾಗ್ರದಿಂ ನೆಗೆಪುಗುಂ ಧ್ವಜಪಙ್ಕ್ತಿ ಮುಸುಂಕಿ ಸೂರ್ಯನಂ
ಪದೆದೆಳೆಮುರ್ಬನುರ್ಬಿಪುದು ಮತ್ತದನಾಗಳೆ ಖಡ್ಗಕಾಂತಿ ಪೊ
ಯ್ವುದು ಬಳಿಕೆಂದೊಡೇವೊಗಳ್ವೆನಾ ಜಗತೀಶಜಯಪ್ರಯಾಣಮಂ ೧೬

ಆ ರಾಜಶೇಖರನು ಬಂದನು. ವ|| ಆ ರೀತಿ ಬರುವಾಗ ೧೪. ಶರೀರವನ್ನು ಗುಂಡಾಗಿ ಸುತ್ತಿಕೊಂಡು ಕುಸಿದಗೋಣಿನಿಂದ ಕೂಡಿದ ಆದಿಶೇಷನು ಸಿಂಬಿಯ ಹಾಗೆ ಶೋಭಿಸಿ, ತನ್ನ ಬೆನ್ನಮೇಲೆ ಆ ಮಹಾರಾಜನ ಸೈನ್ಯದ ಭಾರವನ್ನು ಧರಿಸಿ ಆದಿಕೂರ್ಮನು ಬದುಕಿದನು. ದೇವತೆಗಳು ಸೇನೆಯ ಕಾಲ್ತುಳಿತದಿಂದೆದ್ದ ಧೂಳಿನಿಂದುಂಟಾಗುತ್ತಿದ್ದ ಕ್ಲೇಶವನ್ನು ಪತಾಕೆಗಳಿಂದ ಆಕ್ರಮಿಸಲ್ಪಟ್ಟ ಆಕಾಶಮಾರ್ಗದಲ್ಲಿ ಆ ಪತಾಕೆಗಳ ಸಮೂಹದಲ್ಲಿ ತಮ್ಮ ಮುಖಗಳನ್ನು ಮರೆಮಾಡಿಕೊಂಡು ಕಳೆದುಕೊಳ್ಳುತ್ತಿದ್ದರು. ೧೫. ಬಹುದೊಡ್ಡದಾದ ಸೈನ್ಯದ ಧ್ವಜಪತಾಕೆಯೆಂಬ ಕೇತುವು ನುಂಗುತ್ತಿರಲಾಗಿ ಹೆದರಿದ. ಚಂದ್ರನು ಆ ಮಹಾರಾಜನ ಮರೆಹೊಗಲು ಬಂದಂತೆ ಎಳೆಯ ಮುತ್ತಿನಿಂದ ಮಾಡಲ್ಪಟ್ಟ (ಶ್ವೇತವರ್ಣದ) ಛತ್ರಿಯು ಶೋಭಿಸುತ್ತಿತ್ತು. ೧೬. ಆನೆಗಳ ಸಮೂಹವು (ಸೇನೆಯ ಕಾಲ್ತುಳಿತದಿಂದೆದ್ದ) ಭೂಮಿಯ ಧೂಳನ್ನು ತನ್ನ ಮದಜಲದಿಂದ ಇಲ್ಲದಂತೆ ಮಾಡುತ್ತಿತ್ತು. ಕುದುರೆಗಳು ಪುನಃ ಅದನ್ನು ತಮ್ಮ ಖುರಪುಟದ ತುದಿಯಿಂದ ನೆಗೆಯುವಂತೆ ಮಾಡುತ್ತಿದ್ದವು. ಧ್ವಜಗಳ ಸಾಲು ಸೂರ್ಯನನ್ನು ಮುಸುಕಿ ನಸುಮಬ್ಬನ್ನುಂಟುಮಾಡುತ್ತಿತ್ತು. ಪುನಃ ಆ ನಸುಮಬ್ಬನ್ನು ಆಗಲೇ (ಸೈನಿಕರ ಕೈಯ್ಯಲ್ಲಿರುವ) ಖಡ್ಗಗಳ ಕಾಂತಿಯು ಹೊಡೆದುಹಾಕುತ್ತಿತ್ತು, ಎನ್ನುತ್ತಿರುವಾಗ ಆ ಜಗತ್ಪತಿಯಾದ ರಾಜಶೇಖರಮಹಾರಾಜನ ಜಯಪ್ರಯಾಣವನ್ನು ಇನ್ನು ಹೇಗೆ ಹೊಗ

ಮ॥ಸ್ರ॥ ರಿಪುದುರ್ಗಧ್ವಾಂತವಿಧ್ವಂಸನಖರಕರನೀ ಬಂದನೀ ಬಂದನನ್ಯೋ
ರ್ವಿಪಗರ್ವೋರ್ವೀಧ್ರಸಂಭೇದನ ಪವಿಧರನೀ ಬಂದನೀ ಬಂದನುದ್ರಿ
ಕ್ತ ಪರಕ್ಷ್ಮಾಪಪ್ರತಾಪೋತ್ಕದಳಕಳಭನೀ ಬಂದನೀ ಬಂದನೆಂದು
ರ್ವಿ ಪಟುಪ್ರಧ್ವಾನಮಂ ಬೀಱಿದುವು ಕಹಳೆಗಳ್ ಮುಂದೆ ವಿಸ್ತಾರದಿಂದಂ ೧೭

ವ॥ ಮತ್ತಮಾ ಸೈನ್ಯಂ ಉದ್ಯಾನದಂತೆ ಮಹಾಗಜಾತಿಶೋಭಿತಮುಂ ರಣಾಜಿರಂಗದಂತೆ ಮನೋಗಮನವಾಜಿರಂಜಿತಮುಂ ಅಯೋಧ್ಯಾನಗರದಂತೆ ಸಮಾಶ್ರಿತಮಹಾದಶರಥಸಮಂಚಿತಮುಂ ತ್ರಿವಿಕ್ರಮಮೂರ್ತಿಯಂತೆ ವಿಪುಳಪದಾತಿಮಂಡಿತಮುಂ ಘನಾಗಮದಂತೆ ಜಿಷ್ಣುಚಾಪಶರಕರಕೋದಂಚಿತಮುಂ ನಭಸ್ಥಳದಂತೆ ಸಮುಚ್ಚಾಮರಸಮುಂಚಿತಮುಂ ಪೃಥುಳ

ಳಲಿ? ೧೭. ಆ ಮಹಾರಾಜನ ಮುಂದೆ ಅಧಿಕ ಸಂಖ್ಯೆಯಲ್ಲಿ ಕಹಳೆಗಳು "ವೈರಿಗಳ ಗಿರಿ, ಜಲ, ಸೇನಾದುರ್ಗವೆಂಬ ಕತ್ತಲೆಯನ್ನು ವಿಧ್ವಂಸನಗೊಳಿಸುವ ಉಷ್ಣಕರನಾದ ಸೂರ್ಯನು ಇಗೋ ಇಲ್ಲಿಯೇ ಬಂದನು, ಬಂದನು ! ಪರರಾಜರ ಗರ್ವವೆಂಬ ಪರ್ವತಗಳನ್ನು ಸೀಳಿಹಾಕುವ ವಜ್ರಧರನು ಇಗೋ ಇಲ್ಲಿಯೇ ಬಂದನು, ಬಂದನು ! ಉದ್ರೇಕಗೊಂಡ ವೈರಿರಾಜರ ಅಧಿಕಪ್ರತಾಪವೆಂಬ ಬಾಳೆಗೆ ಆನೆಯ ಮರಿಯಂತಿರುವ ರಾಜಶೇಖರ ಮಹಾರಾಜನು ಇಗೋ ಇಲ್ಲಿಯೇ ಬಂದನು, ಬಂದನು !" ಎಂದು ಗಟ್ಟಿಯಾದ ಕೂಗನ್ನು ಬೀರಿದುವು. ವ॥ ಮತ್ತು ಆ ಸೈನ್ಯವು ಉದ್ಯಾನದ ಹಾಗೆ ಮಹಾಗಜಗಳ ಸಮೂಹದಿಂದ ಶೋಭಿತವಾಗಿತ್ತು. (ಉದ್ಯಾನವು ಮಹಾ ಅಗಜಾತಿ ಅಂದರೆ ಅನೇಕ ಜಾತಿಯ ಗಿಡಮರಗಳಿಂದ ಶೋಭಿತವಾಗಿತ್ತು). ರಣಾಜಿರಂಗದ ಹಾಗೆ ಮನೋವೇಗದಲ್ಲಿ ಓಡುವ ಕುದುರೆಗಳಿಂದ ಕೂಡಿತ್ತು. (ಮನೋವೇಗದಿಂದ ಹರಿದುಹೋಗುವ ಹೊಸ ಆಜಿ ಅಂದರೆ ಬಾಣಗಳಿಂದ ಕೂಡಿತ್ತು(. ಅಯೋಧ್ಯಾನಗರದ ಹಾಗೆ ಹತ್ತು ದಿಕ್ಕುಗಳಲ್ಲೂ ರಥವನ್ನು ಹಾರಿಸಬಲ್ಲ ಸಮರ್ಥರಾದ ರಥಿಕರಿಂದ ಕೂಡಿದುದಾಗಿತ್ತು. (ಅಯೋಧ್ಯಾನಗರವು ಹತ್ತು ದಿಕ್ಕುಗಳಲ್ಲೂ ರಥವನ್ನು ಹಾರಿಸುವ ಸಾಮರ್ಥ್ಯದ ದಶರಥಮಹಾರಾಜನಿಂದ ಕೂಡಿದುದಾಗಿತ್ತು). ತ್ರಿವಿಕ್ರಮಮೂರ್ತಿಯ ಹಾಗೆ ದೊಡ್ಡದಾದ ಕಾಲಾಳಿನ ಸೈನ್ಯದಿಂದ ಶೋಭಿತಗೊಂಡಿತ್ತು. (ತ್ರಿವಿಕ್ರಮನು ವಿಪುಲವಾಗಿ ಬೆಳೆದ ಪದ ಅಂದರೆ ಮೂರು ಹೆಜ್ಜೆಗಳಿಂದ ಅತಿಶಯವಾಗಿ ಶೋಭಿಸುವವನಾಗಿದ್ದನು). ಘನಾಗಮನದಂತೆ ಜಯಶೀಲರಾದ ವೀರರ ಕೈಯಲ್ಲಿ ಬಿಲ್ಲು ಬಾಣಗಳಿಂದ ಒಪ್ಪುತ್ತಿತ್ತು. (ವರ್ಷಾಕಾಲವು–ಜಿಷ್ಣುಚಾಪ ಅಂದರೆ ಕಾಮನಬಿಲ್ಲು ಮತ್ತು ಶರ ಅಂದರೆ ನೀರು, ಕರಕ ಅಂದರೆ ಆಣೆಕಲ್ಲುಗಳಿಂದ ಒಪ್ಪುತ್ತದೆ). ನಭಸ್ಥಳದಂತೆ ಮೇಲಕ್ಕೆತ್ತಿ ಬೀಸುತ್ತಿರುವ ಚಾಮರಗಳಿಂದ ಕೂಡಿದುದಾಗಿತ್ತು. (ನಭಸ್ಥಳವು–ಉತ್ಕೃಷ್ಟರಾದ ಅಮರ ಎಂದರೆ ದೇವತೆಗಳಿಂದ ಕೂಡಿದುದಾಗಿರುತ್ತದೆ). ಜನಭರಿತ ಪಟ್ಟಣದ ಹಾಗೆ ಅನೇಕ

ಪುರದಂತೆ ಮಿಳಿತಘಂಟಾಧ್ವನಿ ಕೇತನಾಲಂಬಿತಮುಂ ಸುರಲೋಕದಂತೆ ಮುಃಕ್ತಾಮಯಾತಪತ್ರ ಸ್ತಿಮಿತ ವಿಭವಮುಂ ಸಾಮ್ರಾಜ್ಯದಂತೆ ಸಮುತ್ಕೀರ್ಣ ಧರಾಪರಾಗಮುಃ ಶರಧಿತಟದಂತೆ ಮಹಾಪ್ರಭಾವನೀಪಾಲಂಕೃತಮುಮೆನಿಸಿ ಸಡಗರಿಸಿ ನಡೆತರ್ಪಾಗಳ್

ಮ॥ಸ್ರ॥ ಇದಿರೊಳ್ ಕಣ್ಗೊಪ್ಪಿತಬ್ಜೋದ್ಭವನ ಭವನಮಂ ಮುಟ್ಟಿ ತತ್ಸೃಷ್ಟಿ ಶಿಲ್ಪ
ಕ್ಕಿದೆ ಪಾಳಿಸ್ತಂಭಮೆಂಬಂತಮರೆ ಸುರನದೀಪ್ರವಾಹಂ ಪಟಂಬೋ
ಲ್ಮುದಿಯೊಳ್ ಭಾಸ್ವದ್ವಿಭಾಸ್ವನ್ಮುಕುರಮಿರೆ ಸರನ್ನಿರ್ಝರಂ ಚಾಮರಂಬೋ
ಲ್ಪದೆದೊಪ್ಪಂಬೆತ್ತು ತೋಱುತ್ತಿರೆ ಮಣಿಕಟಕಖ್ಯಾತ ಧಾತ್ರೀಧರೇಂದ್ರಂ ೧೮

ಚಂ॥ ಕಿಲದೊಳೆ ತಳ್ತು ಮೇವ ಮುಗಿಲೊಪ್ಪುವ ಕರ್ಣತಳಂ ರದದ್ವಯಂ
ವಿಳಸಿತ ವಜ್ರಶೃಂಗಯುಗಮಂತದಱಂತರದಲ್ಲಿ ಬಿಳ್ದು ನೇ
ಲ್ದೋಲಿವ ಮಹೋರಗಂ ಕರಮೊಸರ್ದುಗುವಂಬುಮದಾಂಬು ಗುಂಡುಗ
ಲ್ತಲೆ ತನಗಾಗೆ ತದ್ಗಿರಿ ಕರೀಂದ್ರಮದೊಪ್ಪಿತು ಕಣ್ಗೆ ಭೂಪನಾ ೧೯

ಬಗೆಯ ಗಂಟೆಗಳ ಧ್ವನಿ ಮತ್ತು ರಥಗಳ ಮೇಲಿನ ಧ್ವಜಗಳಿಂದ ಕೂಡಿದುದಾಗಿತ್ತು. (ಪಟ್ಟಣವು-ಅನೇಕ ಘಂಟೆಗಳು, ರಸ್ತೆಗಳು ಮತ್ತು ಮನೆಗಳಿಂದ ಕೂಡಿದುದಾಗಿರುತ್ತದೆ). ಸುರಲೋಕದ ಹಾಗೆ ಮುತ್ತಿನ ಅಲಂಕಾರದ ಛತ್ರಿಗಳಿಂದ ಸ್ಥಿರವಾದ ವೈಭವಸಂಪನ್ನವಾಗಿತ್ತು. (ಸುರಲೋಕವು-ರೋಗರಹಿತವೂ ಛತ್ರಿಗಳಿಂದ ಸ್ಥಿರವಾದ ವೈಭವಸಂಪನ್ನ) ಸಾಮ್ರಾಜ್ಯದ ಹಾಗೆ ಮೇಲಕ್ಕೆ ಏರಿರುವ ಭೂಮಿಯ ಧೂಳಿನಿಂದ ಕೂಡಿದುದಾಗಿತ್ತು. (ಸಾಮ್ರಾಜ್ಯವು-ಏರಿಬರುತ್ತಿರುವ ಧರಾಪ ಅಂದರೆ ದೊರೆಗಳ ಅನುರಾಗವನ್ನು ಉಂಟುಮಾಡಿಕೊಳ್ಳುವಂತಹುದು). ಸಮುದ್ರದ ದಡದಹಾಗೆ ಮಹಾಪ್ರಭಾವಶಾಲಿಗಳಾದ ರಾಜರುಗಳಿಂದ ಅಲಂಕಾರಗೊಂಡಿತ್ತು. (ಶರಧಿತಟವು-ದೊಡ್ಡ ಪ್ರಭಾವದ ನೀಪವೃಕ್ಷಗಳಿಂದ ಅಲಂಕಾರಗೊಂಡಿರುತ್ತದೆ). ಹೀಗೆನಿಸಿ ಆ ಮಹಾಸೈನ್ಯವು ನಡೆದುಬರುತ್ತಿರುವಾಗ ೧೮. 'ಮಣಿಕಟಕ' ಎಂಬ ಹೆಸರಿನಿಂದ ಖ್ಯಾತವಾದ ಪರ್ವತವು ಬ್ರಹ್ಮನ ಮನೆಯವರೆಗೂ ಬೆಳೆದು ಮುಟ್ಟಿ, ಆ ಬ್ರಹ್ಮನ ಸೃಷ್ಟಿಯ ಶಿಲ್ಪಕ್ಕೆ ಧ್ವಜಸ್ತಂಭವೋ ಎಂಬಂತೆ ಒಪ್ಪಿತ್ತು. ದೇವನದಿಯಾದ ಗಂಗೆಯೇ ಪಟವಾಗಿಯೂ, ಮೇಲ್ಭಾಗದಲ್ಲಿ ಪ್ರಕಾಶಿಸುವ ಸೂರ್ಯನೇ ಕನ್ನಡಿಯಾಗಿಯೂ, ಅಲ್ಲಿ ಹರಿಯುವ ಪರ್ವತ ಪ್ರವಾಹವೊಂದು ಚಾಮರವಾಗಿಯೂ ಒಪ್ಪಗೊಂಡು ತೋರುತ್ತಿರಲು ಇದಿರಿನಲ್ಲಿ ಕಣ್ಣಿಗೆ ಶೋಭಿಸುತ್ತಿತ್ತು. ೧೯. ಆ ಬೆಟ್ಟದ ಇಕ್ಕೆಲಗಳಲ್ಲಿ ಮುಸುಕಿ ಹರಿದಾಡುತ್ತಿರುವ ಮೋಡಗಳೇ ಕಿವಿಗಳು ; ವಜ್ರಮಯವಾದ ಎರಡು ಶಿಖರಗಳೇ ಎರಡು ಹಲ್ಲುಗಳು ; ಹಾಗೆ ಆ ಬೆಟ್ಟದಮಧ್ಯದಲ್ಲಿ ಇಳಿಬಿದ್ದು ನೇತಾಡುತ್ತ ಒಲೆದಾಡುವ ದೊಡ್ಡ ಹಾವೇ ಸೊಂಡಿಲು ; ಅಲ್ಲಿ ಒಸರಿ ಹೊರಹೊಮ್ಮುತ್ತಿದ್ದ ಜಲವೇ ಮದೋದಕ ; ಗುಂಡುಕಲ್ಲುಗಳೇ ತಲೆಯಾಗಿರಲಾಗಿ ಆ ಭೂಪನ ಕಣ್ಣಿಗೆ ಪರ್ವತವೆಂಬ ಗಜಶ್ರೇಷ್ಠವು ಶೋಭಿಸು

ವ॥ ಆ ನಗದಗ್ರಪ್ರದೇಶದಲ್ಲಿ

ಮ॥ಸ್ರ॥ ವಿಳಸತ್ಸಂಧ್ಯಾರುಣಪ್ರದ್ಯುತಿಗೆ ರುಧಿರ ವಿಭ್ರಾಂತಿಯಿಂ ಬಗ್ಗವಿಂಡ
ವ್ಯಾಳಿಕುಂ ಬಾಯ್ವಿಟ್ಟು ತತ್ಕಾಲದೊಳೊಗೆದ ಸರಕ್ಕೋಡುವಂ ಬೇಡವೆಣ್ಕೈ
ದಳಮಂ ಕೊಂಡೊಯ್ದು ಕೊಯ್ಯಲ್ಕೆಳಸುವಳೆರವಣ್ಣೆಂದು ಶೋಣಾಂಶುಮನ್ಮಂ
ಡಳಮಂ ತಾಳೀಫಳಂಗೆತ್ತೆಳಸಿ ತುಡುಕುಗುಂ ಬಾಲಶಾಖಾಚರಂಗಳ್ ೨೦

ಕಂ॥ ಕಟಕಚರಕರಟಿ ನಿಜಕಟ
ತಟ ಕಂಡೂಹರಣ ಸಮದ ಪುಷ್ಕರದೆ ನಭ
ಸ್ಫುಟಶಶಿಯನಬ್ಜಮೆಂದು
ತ್ಕಟಿಸಿ ತುಡುಂಕಿದೊಡೆ ತನ್ಮದಂ ಕಱಿಯೆನಿಕುಂ ೨೧

ಹರಿಮಣಿಯಱಿಯೊಳ್ಮಿಱುಗು
ತ್ತಿರೆ ವೃತ್ತತೆವೆತ್ತ ದಿನಕರೋಪಲಮಿದು ಭಾ
ಸ್ಕರಬಿಂಬಮೆಂದು ಬಂದಾ
ಗರಣದ ಸಮಯದೆ ವಿಧುಂತುದಂ ಪಿಡಿವುದದಂ ೨೨

ತ್ತಿತ್ತು. ವ|| ಆ ಪರ್ವತದ ಮೇಲ್ಭಾಗದಲ್ಲಿ ೨೦. ಪ್ರಕಾಶಮಾನವಾದ ಸಾಯಂ ಕಾಲದ ಅರುಣವರ್ಣದ ಪ್ರಕಾಶವನ್ನು ರಕ್ತವೆಂಬ ಭ್ರಾಂತಿಯನ್ನು ಹೊಂದಿ ಹುಲಿಗಳ ಹಿಂಡು ಬಾಯಿಬಿಟ್ಟು ಬಂದು ಕುಡಿಯಲು ಯತ್ನಿಸುತ್ತಿದ್ದವು. ಆ ಸಂಧ್ಯಾಕಾಲದಲ್ಲಿ ಕೆಂಪುಛಾಯೆಯಿಂದ ಮೂಡಿದ ನಕ್ಷತ್ರಗಳನ್ನು ಎಲಚಿ (ಜೋರೆ) ಹಣ್ಣೆಂದು ತಿಳಿದು, ಬೇಡರ ಹೆಂಗಸರು ತಮ್ಮ ಚಿಗುರಿನಂತಹ ಕೈಗಳನ್ನು ಚಾಚಿ ಕೊಯ್ಯುವುದಕ್ಕೆ ಹೋಗುತ್ತಿದ್ದರು. ಶೋಣವರ್ಣದಿಂದ ಕೂಡಿದ ಸೂರ್ಯಮಂಡಳವನ್ನು ತಾಳೆಯ ಹಣ್ಣೆಂದು ಬಯಸಿ ಕೋತಿಯ ಮರಿಗಳು ಕೈತುಡುಕುತ್ತಿದ್ದವು. ೨೧. ಆ ಪರ್ವತದಲ್ಲಿ ಸಂಚರಿಸುತ್ತಿದ್ದ ಹೆಣ್ಣಾನೆಯೊಂದು ಆಕಾಶದಲ್ಲಿರುವ ಚಂದ್ರನನ್ನು ಕಮಲವೆಂದು ತಿಳಿ ಯಿತು. ತನ್ನ ಗಂಡಸ್ಥಳದಲ್ಲುಂಟಾದ ಕಡಿತವನ್ನು ಹೋಗಲಾಡಿಸಿಕೊಳ್ಳಲು ಸೊಂಡಿ ಲಿನಿಂದ ತಿಕ್ಕಿಕೊಳ್ಳಲಾಗಿ ಆ ಸೊಂಡಿಲಿಗೆ ಮದೋದಕದ ಕಪ್ಪುಹತ್ತಿತು. ಅಂಥ ಸೊಂಡಿಲಿನಿಂದ ಚಂದ್ರನನ್ನು ತುಡುಕಿದ್ದರಿಂದ ಆ ಮದೋದಕದ ಕಪ್ಪು ಚಂದ್ರನಿಗೆ ತೊಡೆಯಲ್ಪಟ್ಟು ಕಪ್ಪು ಎನಿಸಿತು! ೨೨. ಇಂದ್ರನೀಲಮಣಿಯ ಬಂಡೆಯೊಂದರ ಮಧ್ಯದಲ್ಲಿ ವೃತ್ತಾಕಾರವಾದ ಸೂರ್ಯಕಾಂತಶಿಲೆಯೊಂದು ಮಿನುಗುತ್ತಿತ್ತು. ಅದನ್ನು ಸೂರ್ಯಬಿಂಬವೆಂದೇ ತಿಳಿದು ರಾಹುವು ಬಂದು ಆಗ್ರಹಣದ ಸಮಯದಲ್ಲಿ ಹಿಡಿಯುತ್ತಿತ್ತು.

ವ॥ ಮತ್ತಂ

ಮ॥ಸ್ರ॥ ತಡಿಯೊಳ್ನೀರ್ಗೊಂಬ ಕಾಡಾನೆಗಳೆಸಳೆಗಳಿಂ ತಳ್ತ ಕಂಜಾತದಿಂ ಜಾ
ಣ್ಬಡೆದೆತ್ತಂ ಕೂಡೆ ಕೋಲಾಹಲಮನೆಸಪ ಚಕ್ರಾಳಿಯಿಂ ಪಾಳಿಯಿಂ ಮೆ
ಲ್ನಡೆದೋರ್ಪುದ್ಯನ್ಮರಾಳಾವಳಿಯಿನೊಳಗೆ ಮೇಲ್ವಾಯ್ವ ಮತ್ಸ್ಯಂಗಳಿಂ ಪೆಂ
ಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವ ಪೊಳ್ಚಂ ಪೊದಳ್ದೊಪ್ಪದಿಂದಂ ೨೩

ಕಂ॥ ನೆಲವೆಣ್ಣ ಗಿರಿನಿತಂಬ
ಸ್ಥಲಮದು ತನಿವೆರ್ಚೆ ಕಿಳ್ತು ಕಿಲಸೂಸಿದ ಮೇ
ಖಲೆಯೆನಿಸಿ ಮೆಱೆದುದಂಬೂ
ಜ್ವಲಕಣಮುಕ್ತಾಮನೋಜ್ಞಮಾ ನದಿ ಪದಪಿಂ ೨೪

ವ॥ ಮತ್ತಮಿತ್ತರಂಬಿಡಿದೊತ್ತರಿಸಿ ಬೆಳೆದ ಮರದುಱುಗಲ್ಗಿರದೆಱಗಿ ಮುಱಿವ ಕರಿ ಕರಕಂಜ ನೀರ್ವೊಕ್ಕು ನಡುಗುವಂತೆ ತೆರೆವೊಯ್ಲಿಂ ಕಂಪಿಪದಟ ಪಡಿನೆಳಲ್ ಪರಿರಂಜಿಸೆಯುಂ ನಡುವಗಲೊಳ್ ಕಡುನೀರನೊಳೊಡವೆರೆದ ಬಳಲ್ಕೆಗಳೆಯಲೆಳಸಿ ಘಳಿಲನೊಳಪೊಕ್ಕು ಮೈದೊಳೆದು ನಡುನೀರೊಳೊಗೆದ ನಳಿನಮಂ ಮುಱಿಯಲೆಳಸಿ ಮಗುಳ್ದು ತೆರೆವಿಡಿದೀಸು

ವ॥ ಮತ್ತು ೨೩. ದಂಡೆಯಲ್ಲಿ ನೀರನ್ನು ಕುಡಿಯುತ್ತಿರುವ ಕಾಡಾನೆಗಳಿಂದಲೂ, ಭ್ರಮರಗಳಿಂದ ತುಂಬಿದ ಕಮಲಗಳಿಂದಲೂ ಶೋಭೆಯನ್ನು ಪಡೆದು, ಕೋಲಾಹಲ ವನ್ನು ಮಾಡುತ್ತಿದ್ದ ಚಕ್ರವಾಕಪಕ್ಷಿಗಳ ಸಮೂಹ ಮತ್ತು ಸಾಲುಸಾಲಾಗಿ ಮೆಲ್ನಡಿಗೆ ಯನ್ನು ತೋರಿಸುತ್ತಿದ್ದ ಶ್ರೇಷ್ಠ ಹಂಸಪಕ್ಷಿಗಳು ಮತ್ತು ನೀರೊಳಗಿನಿಂದ ಮೇಲಕ್ಕೆ ಚಿಮ್ಮುತ್ತಿದ್ದ ಮೀನುಗಳ ಸಮೂಹದಿಂದ ಕೂಡಿ, ಸೊಗಸುಗೊಂಡು, ಅಲ್ಲಿ 'ಫೇನಸ್ಮಿತೆ'ಎನಿಸುವ ಹೊಳೆಯೊಂದು ಹೊಳೆಯುತ್ತ ಶೋಭಾಯಮಾನವಾಗಿತ್ತು. ೨೪. ಭೂಮಿಯೆಂಬ ಸ್ತ್ರೀಯಳ ಗಿರಿಗಳೆಂಬ ನಿತಂಬಪ್ರದೇಶವು ನೂತನವಾಗಿ ಹೆಚ್ಚು ಗೊಂಡಿರಲಾಗಿ ತೊಟ್ಟುಕೊಂಡ ಡಾಬು ಕಿತ್ತು ಪಕ್ಕದಲ್ಲಿ ಜಾರಿಬಿದ್ದ ಹಾಗೆ ಉಜ್ವಲ ವಾದ ನೀರಿನ ಕಣಗಳೇ ಮನೋಹರವಾದ ಡಾಬಿನ ಮುತ್ತುಗಳಾಗಿರಲು ಆ ಫೇನಸ್ಮಿತ ವೆಂಬ ನದಿಯು ಒಯ್ಯಾರದಿಂದ ಮೆರೆಯುತ್ತಿತ್ತು. ವ॥ ಮತ್ತು ಎರಡೂ ಕಡೆಗಳಲ್ಲಿ ದಟ್ಟವಾಗಿ ಮರಗಳ ಸಮೂಹಗಳ ಮೇಲೆ ಎರಗಿ (ಟೊಂಗೆಗಳನ್ನು) ಮುರಿಯುವ ಆನೆ ಗಳ ಸೊಂಡಿಲುಗಳಿಗೆ ಹೆದರಿ, (ಆ ಮರಗಳು) ನೀರನ್ನು ಹೊಕ್ಕು ನಡಗುತ್ತಿವೆಯೋ ಎಂಬ ಹಾಗೆ ತೆರೆಗಳ ಅಪ್ಪಳಿಸುವಿಕೆಯಿಂದ ನೀರಿನಲ್ಲಿ ಅಲ್ಲಾಡುತ್ತಿರುವ ಅವುಗಳ ಛಾಯೆಯು ಮನೋಹರವಾಗಿತ್ತು. ಬೇಡರ ಹೆಂಗಸರು ನಡುಹಗಲಿನಲ್ಲಿಯೇ ಪುರುಷ ಸಂಗಮಾಡಿ ಅದರಿಂದುಂಟಾದ ಬಳಲಿಕೆಯನ್ನು ಆ ನೀರಿನಲ್ಲಿ ಹೊಕ್ಕು ಕಳೆದುಕೊಳ್ಳಲು ಇಚ್ಛಿಸಿ ಮೈ ತೊಳೆದುಕೊಂಡು, ನಡುನೀರಿನಲ್ಲಿ ಬೆಳೆದುನಿಂತ ಕಮಲಗಳನ್ನು ಮುರಿಯಲು ಇಚ್ಛಿಸಿ

ವೆಳೆವೇಡತಿಯ ಗುರುತರ ನಿತಂಬಬಿಂಬಮಂ ಮುಳುಂಗಿ ತೋರ್ಪ ಕರಿಣಿಯ ಶಿರಂಗೆತ್ತು ತುಡುಂಕುತೊಡರ್ಚಿ ತಡಿಯೊಳ್ನಿಂದು ನಿಳ್ಕಿನೀಡಿದ ಮದಗಜದ ಕರದ ಮಾರ್ಪೊಳಪು ನಿಜ ಸ್ವಚ್ಛತೆಯಿಂ ರಸಾತಳದಹಿ ಕಣ್ಗೆ ಕಾಣಪಂತೆ ಕಮನೀಯಮಾಗಿಯಂ ಪುಳಿನತಳದೊಳೆಣೆವಕ್ಕಿಗಳು ಡಿದುಡಿದು ಸೂಸಿದ ಮೃದುಮೃಣಾಳನಾಳತಂತುಜಾಲಕದೊಳೊಯ್ಯನೊಯ್ಯನೆ ರಯ್ಯಮೆನೆ ನಡೆವೆಡೆಯೊಳಡಿ ತೊಡಂಕಿ ತಡೆಗೆಡೆವ ತರುಣ ಮರಾಳಂಗಳಂ ಕಂಡು ಗಹಗಹಿಸಿ ನಗುವಂತೆ ಘುಳುಘುಳಿಸಿ ನೊಱೆವಿಂಡು ಪಸರಿಸೆಯುಮಾ ಪೆರ್ವೊಳೆ ಪರಿಯುಡುಗದ ಸಿರಿಯನೊಳಕೊಂಡು ಭೂಮಂಡಳಕ್ಕೆ ಮಂಡನಮೆನಿಸಿ ರಂಜಿಸಿರ್ಪುದದಱ ತೀರದಾ ಮಣಿಕಟಕ ನಗೇಂದ್ರಕಟಕದೊಳ್ ನರೇಂದ್ರಕಟಕಂ ಪಾಳಿಯಿಂ ಪಾಳೆಯಂಗೈದು

ಕಂ॥ ಚತುರಂಭೋನಿಧಿವರೆಗಂ
ಚತುರಂಗಬಲಂ ಪೊದಳ್ದು ಬಿಡೆ ಪದ್ಮಜನೇಂ
ಚತುರನೊ ತದ್ಭಾರಮನಹಿ
ಪತಿ ಪೊರಲೆಂದಂದೊಡರ್ಚಿದಂ ಬಹುಶಿರಮಂ ೨೫

ಪುನಃ ತೆರೆಗಳನ್ನನುಸರಿಸಿ ಈಸುತ್ತಿದ್ದರು. ಆಗ ಅವರ ದಪ್ಪನಾದ ನಿತಂಬದ ಬಿಂಬ ವನ್ನು ಮುಳುಗಿ ಕಾಣುವ ಹೆಣ್ಣಾನೆಯ ತಲೆಯೆಂದು ಮದಗೊಂಡ ಗಂಡಾನೆಗಳು ಭಾವಿಸಿ, ದಂಡೆಯಲ್ಲಿ ನಿಂತುಕೊಂಡು ತುಡುಕಲು ಬಯಸಿ, ಮುಂದಕ್ಕೆ ತಮ್ಮ ಸೊಂಡಿ ಲನ್ನು ಚಾಚಿದ್ದವು. ಹೀಗೆ ಚಾಚಿದ ಅವುಗಳ ಸೊಂಡಿಲಿನ ಪ್ರತಿಚ್ಛಾಯೆಯು, ನೀರಿನ ಸ್ವಚ್ಛತೆಯಫಲವಾಗಿ ರಸಾತಳದಲ್ಲಿರುವ ಆದಿಶೇಷನು ಕಣ್ಣಿಗೆ ಕಾಣುತ್ತಾನೆಯೋ ಎನ್ನು ವಂತೆ ಮನೋಹರವಾಗಿತ್ತು. (ಮತ್ತು ನದಿಯ ದಂಡೆಯಲ್ಲಿ ಹರಡಿದ್ದ) ಮಳಲಿನ ಪ್ರದೇಶದಲ್ಲಿ ಚಕ್ರವಾಕಪಕ್ಷಿಗಳು ಮುರಿಮುರಿದು ಹರಡಿದ್ದ ಎಳೆಯ ಕಮಲದ ದಂಟುಗಳ ನಾರು ಇತ್ತು. ಆ ನಾರಿನ ಎಳೆಗಳಲ್ಲಿ ಕಾಲುತೊಡಕಿ ಮೆಲ್ಲಮೆಲ್ಲನೆ ಸೊಗಸಾಗಿ ನಡೆ ದಾಟುತ್ತಿದ್ದ ತರುಣ ಮರಾಳಗಳು ಕಾಲು ತೊಡಕಿ ಬೀಳುತ್ತಿದ್ದವು. (ಹಾಗೆ ಬೀಳುವ) ಆ ಹಂಸಗಳನ್ನು ಕಂಡು ಗಹಗಹಿಸಿ ನಗುತ್ತಿದೆಯೋ ಎಂಬಂತೆ ನದಿಯು ಘುಳುಘುಳು ಧ್ವಾನಮಾಡುತ್ತ ಬಿಳಿಯ ನೊರೆಯನ್ನು ಹರಡಿ ಹರಿಯುತ್ತಿತ್ತು. ಹೀಗೆ ಆ ದೊಡ್ಡ ಹೊಳೆಯು ಘನತೆಯಿಂದ ಕೂಡಿದ ಸೌಂದರ್ಯವನ್ನು ಹೊಂದಿ, ಭೂಮಂಡಲಕ್ಕೆ ಅಲಂಕಾರಪ್ರಾಯವಾಗಿ ಶೋಭಿಸುತ್ತಿತ್ತು. ಅದರ ದಂಡೆಯ ಮಣಿಮಯವಾದ ಬೆಟ್ಟದ ತಪ್ಪಲುಪ್ರದೇಶದಲ್ಲಿ ರಾಜಶೇಖರ ಮಹಾರಾಜನ ಸೈನ್ಯವು ಸಾಲಾಗಿ ಬೀಡು ಬಿಟ್ಟಿತು.

೨೫. ನಾಲ್ಕು ಸಮುದ್ರಗಳವರೆಗೂ ಆ ಮಹಾರಾಜನ ಚತುರಂಗಬಲವು ಹರಡಿಬಿಟ್ಟಿತ್ತು. ಬ್ರಹ್ಮನು ಅದೇನು ಬುದ್ಧಿವಂತನೋ ! ಆ ಭಾರವನ್ನು ಆದಿಶೇಷನು ಹೊರಲೆಂದೇ

ವ॥ ತನ್ಮಧ್ಯದೇಶದಲ್ಲಿ

ಕಂ॥ ಪಳದಿಯ ಪಚ್ಚೆಯ ಪಟ್ಟೆಯ
ತಳಿರ್ವಟ್ಟೆಯ ಗುಡಿಗಳೊಡನೆ ಬಳಸಿರೆ ಕಣ್ಗೆಂ
ತೊಳಗಿದುದೊ ನಡುವೆ ತನ್ನೃಪ
ತಿಳಕನ ನಲ್ಮಿಸುನಿವೆಸೆದ ಪೊಸಗೂಡಾರಂ ೨೬

ವ॥ ಅಂತದಱೊಳಾ ಕುಮಾರಂ ವಸಿಯಿಸಿರೆಯಿರೆ

ಕಂ॥ ಆ ಸೇನಾರಜದಿಂ ಪರಿ
ಧೂಸರಮಾದುರುನಿಜಾಂಗಮಂ ತೊಳೆಯಲ್ಕೆಂ
ದೋಸರಿಸದೆ ಪೊಕ್ಕಂತಿರೆ
ವಾಸರಕರನಪರವಾರಿನಿಧಿಯೊಳ್ ಪೊಕ್ಕಂ ೨೭

ವ॥ ಆಗಳ್

ಮ॥ಸ್ರ॥ ಒಗೆದಿಂದ್ರಾಶಾದ್ರಿಯಿಂದೆಂಬತುಳ ಪವಿಮಯಸ್ತಂಭದೊಳ್ ಸಂಜೆಯೊಳ್ ನೆ
ಟ್ಟಗಿದರ್ಚಿರ್ದಂಧಕಾರಾಸುರನನಡಸಿ ಸೀಳ್ದೊತ್ತಿ ಪಾಯ್ದೊಳ್ಗದಿರ್ಗೂ
ರುಗುರಿಂ ರಕ್ತಾಂಬುವಿಂ ತಾಂ ನನೆದನೆನಿಸಿ ಕೆಂಪೇಱೆ ನೈಜಾಂಶುರಕ್ತಂ
ಭಗಣಂ ತತ್ಸೀಕರಂಬೊಲ್ಮೆಱೆಯೆ ಶಶಿನೃಸಿಂಹಂ ಕರಂ ಕಣ್ಗೆವಂದಂ ೨೮

ಅದಕ್ಕೆ ಸಹಸ್ರ ಹೆಡೆಗಳನ್ನು ಆ ಪೂರ್ವದಲ್ಲಿಯೇ ಉಂಟುಮಾಡಿದ್ದನು. ವ|| ಆ ಸೇನೆಯ ನಡುಭಾಗದಲ್ಲಿ ೨೬. ಹಳದಿಬಣ್ಣದ, ಪಚ್ಚೆಯಬಣ್ಣದ, ಪಟ್ಟೆಯ ಬಣ್ಣದ, ತಳಿರಿನ ಬಣ್ಣದ ಬಟ್ಟೆಗಳ ಗೂಡಾರ (ಡೇರೆ)ಗಳು ಸುತ್ತಲೂ ಸುತ್ತಿಕೊಂಡಿರಲಾಗಿ (ಅವುಗಳ) ಮಧ್ಯಭಾಗದಲ್ಲಿ ಆ ಮಹಾರಾಜನಾದ ರಾಜಶೇಖರನ ಬಂಗಾರಮಯವಾದ ಬಟ್ಟೆಯ ಹೊಸದಾದ ಗೂಡಾರವು ಕಣ್ಣಿಗೆ ಅದೇನು ಮನೋಹರವಾಗಿತ್ತೋ! ವ|| ಹೀಗೆ ಆ ಬಂಗಾರಮಯವಾದ ಬಟ್ಟೆಯ ಗೂಡಾರದಲ್ಲಿ ಆ ರಾಜಶೇಖರ ಮಹಾರಾಜನು ವಾಸವಾಗಿ ಇರುತ್ತಿರಲು ೨೭. (ಆ ರಾಜಶೇಖರ ಮಹಾರಾಜನ) ಸೈನ್ಯದ ಕಾಲ್ತುಳಿತದಿಂದೆದ್ದ ಧೂಳಿನಿಂದ ಧೂಸರಗೊಂಡ ತನ್ನ ಪವಿತ್ರದೇಹವನ್ನು ತೊಳೆಯುವುದಕ್ಕೆಂದು ತಡಮಾಡದೆ ಹೊಕ್ಕನೋ ಎಂಬ ಹಾಗೆ ಇರಲು, ಸೂರ್ಯನು ಪಶ್ಚಿಮದಿಗ್ಭಾಗದಲ್ಲಿರುವ ಸಮುದ್ರವನ್ನು ಪ್ರವೇಶಿಸಿದನು. ವ|| ಆ ಸಂಧ್ಯಾಸಮಯದಲ್ಲಿ ೨೮. ಚಂದ್ರನೆಂಬ ನಾರಸಿಂಹಮೂರ್ತಿಯು ಪೂರ್ವದಿಕ್ಕೆಂಬ ಎಣೆಯಿಲ್ಲದ ವಜ್ರಮಯವಾದ ಕಂಬದಿಂದ ಸಂಧ್ಯಾಸಮಯದಲ್ಲಿ ಹುಟ್ಟಿ, ನೇರವಾಗಿ ತನಗೆ ಎದುರಿಸಿ ಬಿದ್ದ ಕತ್ತಲೆಯೆಂಬ ಹಿರಣ್ಯಕಶಿಪುವೆಂಬ ರಾಕ್ಷಸನನ್ನು ಕೆಡವಿಕೊಂಡು, ತನ್ನ ಕಾಂತಿಮಯವಾದ ಕಿರಣಗಳೆಂಬ ಚೂಪಾದ ಉಗುರುಗಳಿಂದ ಸೀಳಿ ಮುಕ್ಕಲಾಗಿ, ಆ ರಕ್ತದಿಂದ ತಾನು ನೆನೆದು ಕೆಂಪಾಗಿ ಕಾಣುತ್ತಿರುವೆನೋ ಎನ್ನಿಸಿಕೊಂಡು, ತನ್ನ ಆ ಕೆಂಪುಕಿರಣಗಳಿಂದ ಕೆಂಪುಬಣ್ಣವಾಗಿ

ವ॥ ಇಂತೊಗೆದ ಯಾಮಿನೀ ಪ್ರಥಮಯಾಮದಲ್ಲಿ

ಮ॥ಸ್ರ॥ ಶಿವಪಾದಾಂಭೋಜಮಂ ಪೂಜಿಸಿ ಸಚಿವ ಸಮೇತಂ ಮಹಾಭಕ್ತಿಯಿಂ ಭ
ದ್ರವಿಳಾಸಂಬೆತ್ತು ನಾನಾರಣಕರಣಜಯೋದ್ಯೋಗಪೂಗಪ್ರಸಂಗೋ
ತ್ಸವದಿಂ ಮಾತಂಗವಾಜಿಪ್ರತತಿ ವಿತತ ಸಲ್ಲಕ್ಷಣಾಲಾಪದಿಂ ಶ
ಸ್ತ್ರವಿಶೇಷಾಸ್ತ್ರಪ್ರಪಂಚಪ್ರವಚದೆ ನಿಸೆಯಂ ನೂಂಕಿದಂ ಮಂತ್ರಲಕ್ಷ್ಮಂ ೨೯

ಕಂ॥ ಮನಸಿಜನಿಭಂಗೆ ಸತ್ಯೇಂ
ದ್ರನರೇಂದ್ರತನೂಭವಂಗೆ ಪೂರ್ವಾಂಗನೆ ಪೆಂ
ಪಿನೊಳೆತ್ತಿದ ವಿಜಯಾರತಿ
ಯೆನೆ ಕೆಂಪಿಡಿದರ್ಕಬಿಂಬಮುದಯಿಸಿತಾಗಳ್ ೩೦

ವ॥ ಆ ಸಮಯದೊಳಾ ರಾಜಶೇಖರಂ ರಾಜಶೇಖರಪೂಜೆಗೆಯ್ದು ಯಥೋಚಿತ ಪ್ರಾತರಾಚಾರಮಂ ನಿರ್ವರ್ತಿಸಿ ಮಿತವಚನನೊಡನೆಳ್ದು ನಡೆಗೊಂಡು ದಂಡನಾಥಮುಖ ಮಂಡಲಮಂ ನಡೆನೋಳ್ಪುದುಂ ತದ್ಭ್ರೂವಿಕ್ಷೇಪಣಪ್ರೇರಿತಂ ಮೇಘನಾದನಾದರದಿಂ ಬಂದು ಸಮರಸನ್ನಾಹಭೇರಿಯಂ ಪೊಂಗುಡುಪಂ ಪಿಡಿದಡಸಿ ಪೊಡೆಯಲೊಡನೆ

ಕಾಣುವ ನಕ್ಷತ್ರಗಳು ರಕ್ತದ ಹನಿಗಳೋ ಎಂಬಂತೆ ಕಾಣಿಸಿದವು. ವ॥ ಹೀಗೆ ಉಂಟಾದ ಸಾಯಂಕಾಲದ ಮೊದಲನೆಯ ಜಾವದಲ್ಲಿ ೨೯. ಮಂತ್ರಲಕ್ಷ್ಮನಾದ ಆ ರಾಜಶೇಖರ ಮಹಾರಾಜನು ಸಚಿವನಾದ ಮಿತವಚನ ಸಮೇತವಾಗಿ, ಮಹಾಭಕ್ತಿಯಿಂದ ಶಿವನ ಪಾದಕಮಲವನ್ನು ಪೂಜಿಸಿ, ಶುಭಕರವಾದ ವಿಲಾಸವುಳ್ಳವನಾಗಿ, ನಾನಾ ವಿಧವಾದ ಯುದ್ಧೋದ್ಯೋಗದಲ್ಲಿ ಜಯಸಂಪಾದಿಸುವ ಮಂತ್ರಾಲೋಚನೆಯ ಸಮೂಹದ ಪ್ರಸಂಗದಲ್ಲಿ ಉತ್ಸಾಹದಿಂದ ಕೂಡಿ, ಆನೆ ಕುದುರೆ ಮೊದಲಾದ ಸೇನಾ ಸಮೂಹದ ಕೂಲಂಕಷ ಲಕ್ಷಣಗಳ ಮಾತುಕತೆಗಳನ್ನೂ ಮತ್ತು ಶಸ್ತ್ರಾಸ್ತ್ರ ಸಮೂಹಕ್ಕೆ ಸಂಬಂಧಿಸಿದ ಮಾತುಕತೆಗಳನ್ನೂ ಆಡುತ್ತ ದಿನದ ರಾತ್ರಿಯನ್ನು ಕಳೆದನು. ೩೦. ಮನ್ಮಥಸದೃಶನೂ, ಸತ್ಯೇಂದ್ರಮಹಾರಾಜಕುಮಾರನೂ ಆದ ರಾಜಶೇಖರ ಮಹಾರಾಜನಿಗೆ ಪೂರ್ವದಿಕ್ಕೆಂಬ ಸ್ತ್ರೀಯು ಘನತೆಯಿಂದ ಎತ್ತಿದ ವಿಜಯಸೂಚಕ ಆರತಿಯೋ ಎನ್ನುವ ಹಾಗೆ ಕೆಂಪುಬಣ್ಣದಿಂದ ತುಂಬಿದ ಸೂರ್ಯಬಿಂಬವು ಉದಯಗೊಂಡಿತು. ವ॥ ಆ ಸಮಯದಲ್ಲಿ ರಾಜಶೇಖರ ಮಹಾರಾಜನು ಚಂದ್ರಶೇಖರನಾದ ಶಿವನ ಪೂಜೆಯನ್ನು, ಯಥೋಚಿತವಾದ ಪ್ರಾತಃಕಾಲದ ಆಚಾರವನ್ನು ಮಾಡಿಮುಗಿಸಿ, ಮಿತವಚನನನ್ನೊಡಗೊಂಡು ಎದ್ದು ಹೊರಟು ದಂಡನಾಥನಾದ ಮೇಘನಾದನ ಮುಖ ಮಂಡಲವನ್ನು ದಿಟ್ಟಿಸಿ ನೋಡಲಾಗಿ, ಮಹಾರಾಜನ ಹುಬ್ಬಿನ ಚಲನೆಯ ಸಂಜ್ಞೆಯಿಂದ ಮುಂದಿನ ಕರ್ತವ್ಯವೇನೆಂಬುದನ್ನರ್ಥಮಾಡಿಕೊಂಡು ಆ ಮೇಘನಾದನು ಆದರ ಪೂರ್ವಕನಾಗಿ ಬಂದು ಯುದ್ಧಪ್ರಾರಂಭದ ನಗಾರಿಯನ್ನು ಬಂಗಾರದ ಕೋಲನ್ನು

ಮ॥ ದಿಗಿಭಂಗಳ್ ಕಡುಬೆರ್ಚೆ ಕರ್ಚೆ ರಿಪುವರ್ಗಂ ಪುಲ್ಗಳಂ ತಾಯ್ಮಣ
ಲ್ನೆಗೆವಂತಬ್ಧಿ ತುಳುಂಕೆ ಶಂಕೆಮಿಗೆ ದಿಕ್ಪಾಲರ್ ಕರಂ ಬಳ್ಕೆ ಪ
ನ್ನಗರಾಜಂ ಪೆಡೆತರ್ಗೆ ಕುರ್ಗೆ ಕುಳಭೂಭೃನ್ಮಸ್ತಕಂ ಸೀಳೆ ಧಾ
ತ್ರಿಗೆ ತಾಂ ಪರ್ಬಿದುದುರ್ಬಿ ದಾಂಧಳಧಳಸ್ಫಾರೋರು ಭೇರೀರವಂ ೩೧

ಕಂ॥ ಆ ರವಮಂ ಜಳಧರದ ಮ
ಹಾರವಮಂ ಕೇಳ್ದ ಸಿಂಹದಂತಿರೆ ಕೇಳ್ದಾ
ಧೀರೋತ್ತಮ ಸಿಂಹಳಧರ
ಣೀರಮಣಂ ಕೆರಳ್ದು ನೋಡಿದಂ ನಾಲ್ದೆಸೆಯಂ ೩೨

ವ॥ ಅಂತು ನೋಳ್ಪಾಗಳ್ ನಿಜಸಭಾಸದರೆಲ್ಲರದ್ಭುತಾಕ್ರಾಂತಸ್ವಾಂತರಾಗಿರ್ಪಿನಮೊರ್ವ ಚರಂ ತ್ವರಿತಗತಿಯಿಂ ಬಂದು

ಕಂ॥ ದಡದಡಿಪಡಿ ಪಡಿಮಾತಂ
ಪಡೆಯಲೊಡರ್ಚುವ ಮನಂ ತಡಂಬಡಿಪ ತಳರ್
ನುಡಿಯಡಿಗಡಿಗೊಡನೊಡನಿ
ಟ್ಟೆಡೆಗೊಂಡಿರೆ ನುಡಿದನಾಗಳಾ ಚರಮುಖ್ಯಂ ೩೩

ಕೈಗೆತ್ತಿಕೊಂಡು ಅಪ್ಪಳಿಸಿ ಹೊಡೆದನು. ಆ ಕೂಡಲೇ ೩೧. ದಿಗ್ಗಜಗಳು ವಿಶೇಷ ಭಯಗೊಳ್ಳಲು, ವೈರಿಸಮೂಹವು ಹುಲ್ಲನ್ನು ಬಾಯಿಂದ ಕಚ್ಚಲು, ತಾಯಿಮಳಲು ಉಕ್ಕುವಂತೆ ಸಮುದ್ರವು ತುಳುಕಾಡಲು, ಸಂದೇಹಗೊಂಡು ದಿಕ್ಪಾಲರುಗಳು ವಿಶೇಷವಾಗಿ ಬಳುಕಲು, ಆದಿಶೇಷನ ಹೆಡೆಯು ತಗ್ಗಿ ಕುಗ್ಗಿಹೋಗಲು, ಕುಲಾಚಲಪರ್ವತಗಳ ಮಸ್ತಕವು ಸೀಳಲು, ಅವಾಂತರಗೊಳಿಸುತ್ತಿರುವ ವಿಶೇಷ ಗದ್ದಲದ ನಗಾರಿಯ ಧ್ವನಿಯು ಭೂಮಿಯ ತುಂಬೆಲ್ಲ ವ್ಯಾಪಿಸಿತು. ೩೨. ಮೇಘಧ್ವನಿಯನ್ನು ಕೇಳಿದ ಸಿಂಹದಂತೆ ನಗಾರಿಯ ಆ ಮಹಾಧ್ವನಿಯನ್ನು ಕೇಳಿದ ಉತ್ತಮ ಧೀರಸ್ವಭಾವದ ಸಿಂಹಳಭೂಮಿಪಾಲನು ಕೆರಳಿ ನಾಲ್ಕು ದಿಕ್ಕುಗಳನ್ನೂ ನೋಡಿದನು. ವ॥ ಹಾಗೆ ನೋಡುತ್ತಿರುವಾಗ ತನ್ನ ಒಡ್ಡೋಲಗದಲ್ಲಿರುವವರೆಲ್ಲರೂ ಆಶ್ಚರ್ಯದಿಂದ ಇರುತ್ತಿರಲಾಗಿ (ಅಷ್ಟರಲ್ಲಿ) ಒಬ್ಬ ಚರನು ತ್ವರಿತವಾಗಿ ಓಡಿಬಂದು ೩೩. ದಡಗುಡುತ್ತ ನಡಗುತ್ತಿರುವ ಕಾಲುಗಳು, ನಿಂತುನಿಂತು ಒಂದೇ ಮಾತನ್ನು ಎರಡೆರಡುಸಲ ನುಡಿಯಲು ಬಯಸುವ ಮನಸ್ಸು, ತಡಬಡಿಸುವ ನಿಂತ ಮಾತು, ಪದಪದಕ್ಕೂ ಆದದನ್ನೇ ಹೇಳುವ ಮಾತು

ಚಂ॥ ಎಲೆಎಲೆ ದೇವದೇವ ಪಿರಿದದ್ಭುತಮದ್ಭುತವೇನನೆಂದಪೆಂ
ನೆಲನಿರದೀದುದೋ ದೆಸೆಯೆ ತಾಂ ಬೆಸಲಾದುದೊ ಪೆತ್ತುದೋ ನಭಂ
ಬಲಮಿದ್ದೆ ಬಂದುದದ್ರಿ ಪುಡಿಯಪ್ಪಿನಮುಗ್ಗದರಣ್ಯಮೆಲ್ಲಮುಂ
ನೆಲಸರಿಯಪ್ಪಿನಂ ಘನತರಂಗಿಣಿ ಪಂಕಿಳಮಾಗುತಿರ್ಪಿನಂ ೩೪

ವ॥ ಅದೆತ್ತಣದೆಂಬುದುಮಾತನಿಂತೆಂದಂ

ಮ॥ ಚತುರಂಭೋಧಿಪರೀತ ಭೂತಳದ ಭೂಪರ್ ಕಪ್ಪಮಂ ತರ್ಪರು
ದ್ಧತವೃತ್ತಪ್ರಭವಿಪ್ನುಸಿಂಹಳನದೆಂದುಂ ತೆತ್ತನಲ್ತೆಂದು ಪೇ
ಳೆ ತದುದ್ಯದ್ಗಣಕಾಳಿ ಕೇಳ್ದು ಕೆರಳ್ದಾ ಸತ್ಯೇಂದ್ರಚೋಳೇಂದ್ರಚಂ
ದ್ರತನುಪ್ರೋದ್ಭವ ರಾಜಶೇಖರನರೇಂದ್ರಂ ಬಂದಪಂ ಭೂಮಿಪಾ ೩೫

ವ॥ ಎಂದ ಮಾತಂ ಕೇಳ್ದತ್ಯಂತ ಕೋಪಾರೂಢನಾಗಿ

ಕಂ॥ ಕುಡಿನಿಮಿರ್ದ ಪುರ್ಬು ಕುಣಿವು
ತ್ತೊಡನಿರೆ ನೆಟ್ಟಿಮುರಿದು ಮೀಸೆಯುಂ ಕಣ್ಗಳಂ ಕೆಂ
ಗಿಡಿ ಸಾಲಿಡೆ ಕರವಾಳಂ
ಜಡಿದೆಂತೆಂತೆಲವೊ ಮಗುಳ್ದು ಪೇಳೆನುತೆಳ್ದಂ ೩೬

ಇವುಗಳಿಂದ ಕೂಡಿದ ಆ ಚರಮುಖ್ಯನು ಹೀಗೆ ಹೇಳಿದನು : ೩೪. "ಎಲೆ ಎಲೆ ದೇವ ದೇವನೇ ! ಅತಿಶಯಾದ್ಭುತ ಅದ್ಭುತ ! ಅದನ್ನು ಏನೆಂದು ಹೇಳಲಿ ! ಭೂಮಿಯೇ ತಪ್ಪದೆ ಮರಿಹಾಕಿತೋ ! ದಿಕ್ಕುಗಳೇ ಹಡೆದುವೋ ! ಆಕಾಶವೇ ಹೆತ್ತಿತೋ ! ಎನ್ನು ವಂತೆ, ಪರ್ವತಗಳೆಲ್ಲ ಪುಡಿಪುಡಿಯಾಗಿವೆಯೋ ಎನ್ನುವಂತೆ, ಶ್ರೇಷ್ಠವಾದ ಅರಣ್ಯ ವೆಲ್ಲ ನೆಲಸಮವಾಗಿರುವ ಹಾಗೆ, ಶ್ರೇಷ್ಠನದಿಯಾದ ದೇವಗಂಗೆಯೇ ಕೆಸರಾಗುವ ಹಾಗೆ ಸೈನ್ಯವೊಂದು ಇಗೋ ಬಂದಿದೆ !" ವ॥ 'ಅದೆತ್ತಣದು ?' ಎಂದು ಆ ಸಿಂಹಳೇಂದ್ರನು ಕೇಳಲಾಗಿ ಅವನು ಹೀಗೆಂದು ಹೇಳಿದನು. ೩೫. "ಮಹಾ ರಾಜನೇ, ನಾಲ್ಕು ಸಮುದ್ರಗಳಿಂದ ಸುತ್ತಲ್ಪಟ್ಟ ಸಮಸ್ತ ಭೂಮಂಡಲದ ಅರಸರು ಕಪ್ಪಕಾಣಿಕೆಗಳನ್ನು ತೆರುತ್ತಿರುವರು. ಔದ್ಧತ್ಯದ ನಡೆವಳಿಕೆಯನ್ನು ವ್ಯಕ್ತ ಪಡಿಸುತ್ತಿರುವ ಸಿಂಹಳದೇಶಾಧಿಪತಿಯು ಮಾತ್ರ (ಅವರೆಲ್ಲರಂತೆ) ತೆರುತ್ತಿಲ್ಲವೆಂದು ಅವನ ಶ್ರೇಷ್ಠರಾದ ಕರಣಿಕರು ಹೇಳಿದರು. ಆ ಮಾತನ್ನು ಕೇಳಿ ಕೋಪಗೊಂಡ ಸತ್ಯೇಂದ್ರ ಚೋಳ ಭೂಪಾಲನೆಂಬ ಚಂದ್ರಮನ ಪುತ್ರನಾದ ರಾಜಶೇಖರ ನರೇಂದ್ರನು (ಚತುರಂಗ ಬಲಸಮೇತನಾಗಿ) ಬಂದಿದ್ದಾನೆ." ವ॥ ಹೀಗೆ ಹೇಳಿದ ಮಾತನ್ನು ಕೇಳಿದ ಸಿಂಹಳ ನರೇಂದ್ರನು ಅತ್ಯಂತ ಕೋಪದಿಂದ ಕೂಡಿದವನಾಗಿ ೩೬. ನಿಮಿರಿದ ಕುಡಿಗಳುಳ್ಳ ಹುಬ್ಬುಗಳು ಕುಣಿಯ ತೊಡಗಲಾಗಿ, ಮೀಸೆಯನ್ನು ಚೆನ್ನಾಗಿ ಹುರಿಮಾಡಿಕೊಳ್ಳುತ್ತ, ಕಣ್ಣುಗಳಲ್ಲಿ ಕೆಂಪುಕಿಡಿಗಳು ಸಾಲಿಡುತ್ತಿರಲು, ಖಡ್ಗವನ್ನು ಝಳಪಿಸುತ್ತ 'ಎಲವೋ

ವ॥ ಅಂತೆಳ್ದು ನೆಲನದಿರೆ ಗಜರಿ ಗರ್ಜಿಸಿ

ಕಂ॥ ತಾಂ ಗಡ ಶೂರಂ ಗಡ ಕ
ಪ್ಪಂಗೊಡೆನಾಂ ಗಡ ಕನಲ್ದು ಬರ್ಪಂ ಗಡ ಯು
ದ್ಧಂ ಗಡ ಗೆಲ್ಲಂ ಗಡ ಬಳಿ
ಕಂ ಗೆಲ್ಲದೇಕಿರ್ಪನಿರ್ಪನಮಮ ಸಮರ್ಥಂ ೩೭

ಉ॥ ಲಾಳನನಿಕ್ಕಿ ಮಾಳವನನಳ್ಕಿಸಿ ಗೂರ್ಜರನಂ ಪೊರಳ್ಚಿ ಪಾಂ
ಚಾಳನನೊತ್ತಿ ಮಾಗಧನನರ್ದಿಸಿ ಕೊಂಕಣನಂ ತೆರಳ್ಚಿ ನೇ
ಪಾಳನನಟ್ಟಿ ಕೇರಳನನೋಡಿಸಿ ಬರ್ಬರನಂ ಕಲಂಕಿದೀ
ಚೋಳನ ಚೆನ್ನಪನ್ನತಿಕೆಯುನ್ನತಿ ಕೊಳ್ವುದೆ ಸಿಂಹಳೇಂದ್ರನೊಳ್ ೩೮

ವ॥ ಎಂದು ಮತ್ತಮಿಂತೆಂದಂ

ಚಂ॥ ನಿಜಭುಜದರ್ಪಮಂ ಮುಱಿವೆನೆನ್ನದಟಂ ತವೆತೋರ್ಪೆನಾಂತ ತ
ಧ್ವಜಿನಿಯನಿಕ್ಕಿ ಭೂತಗಣಕೌತಣಮಂ ಮಿಗೆಮಾಳ್ಪೆನಪ್ಸರೋಂ
ಬುಜಮುಖಿಯರ್ಕಳಿಷ್ಟಮನೊಡರ್ಚುವೆನಾಗಸದೊಳ್ ನಿರೀಕ್ಷಿಪ
ಬ್ಜಜಭವನಕ್ಷಿಗಳ್ಗೆ ನವಕೌತುಕಮಂ ರಣದೊಳ್ ನಿಮಿರ್ಚುವೆಂ ೩೯

ಇನ್ನೊಮ್ಮೆ ಅದೇನು ಹೇಳು ?' ಎನ್ನುತ್ತ ಎದ್ದನು. ವ|| ಹಾಗೆ ಮೇಲಕ್ಕೆದ್ದು ನೆಲವು ಅದುರುವಂತೆ ಗಜರಿ ಗರ್ಜನೆಮಾಡುತ್ತ, ೩೭. "ಅವನಂತೆ ! ಶೂರನಂತೆ ! ನಾನು (ಅವನಿಗೆ) ಕಪ್ಪವನ್ನು ಕೊಡುವುದೇ ಇಲ್ಲ ! (ಅದಕ್ಕಾಗಿ) ಕೋಪಗೊಂಡು ಬಂದನಂತೆ! ಯುದ್ಧವಂತೆ ! ಬಳಿಕ ಅವನಿಗೆ ಗೆಲುವಂತೆ ! ಆ ಸಮರ್ಥನು ಇಲ್ಲಿಯವರೆಗೆ ನನ್ನನ್ನು ಗೆಲ್ಲದೆ ಏಕಿದ್ದಾನೆ ! ಏಕಿದ್ದಾನೆ ? ೩೮. ಲಾಳದೇಶದರಸನನ್ನು ಕೊಂದ, ಮಾಳವದ ಅರಸನನ್ನು ಹೆದರಿಸಿದ, ಗೂರ್ಜರ ದೊರೆಯನ್ನು ಹೊರಲಾಡಿಸಿದ, ಪಾಂಚಾಲ ಭೂಮೀಶನನ್ನು ಹಿಚುಕಿದ, ಮಗಧ ಭೂಪಾಲನನ್ನು ಯುದ್ಧದಲ್ಲಿ ಹೊಡೆದುಹಾಕಿದ, ಕೊಂಕಣದ ದೊರೆಯನ್ನು ಓಡಿಸಿದ, ನೇಪಾಳದ ಮಹಾರಾಜನನ್ನು ಬೆನ್ನಟ್ಟಿ ಓಡಿಸಿದ, ಕೇರಳದ ನೃಪಾಲನನ್ನು ಪಲಾಯನಗೊಳಿಸಿದ, ಬರ್ಬರದೇಶಾಧಿಪನನ್ನು ಕಲಕಿದ ಈ ಚೋಳಮಹಾರಾಜನ ಅತಿಶಯ ಶೌರ್ಯೋತ್ಕರ್ಷವು ಸಿಂಹಳಭೂಮೀಶ್ವರನಾದ ನನ್ನಲ್ಲಿ ನಡೆಯುವುದೇ ?" ವ|| ಹೀಗೆ ಹೇಳುತ್ತ ಪುನಃ ಈ ಪ್ರಕಾರ ನುಡಿದನು. ೩೯. "ಆತನ ಭುಜಬಲದ ದರ್ಪವನ್ನಡಗಿಸುತ್ತೇನೆ. ನನ್ನ ಪರಾಕ್ರಮವನ್ನು ತೋರಿಸುತ್ತೇನೆ. ಎದುರಾಗಿ ನಿಂತ ಅವನ ಸೈನ್ಯವನ್ನು ಕೊಂದು ಭೂತಗಣಗಳಿಗೆ ವಿಶೇಷ ಔತಣವನ್ನು ಮಾಡಿಸಿಬಿಡುತ್ತೇನೆ. ದೇವಲೋಕದ ಅಪ್ಸರೆಯರಾದ ಆ ಕಮಲಮುಖಿಯರ ಅಭೀಷ್ಟವನ್ನು ನೆರವೇರಿಸುತ್ತೇನೆ. ಆಕಾಶದಲ್ಲಿ ನೋಡುತ್ತಿರುವ ಕಮಲಭವನಾದ ಆ ಬ್ರಹ್ಮನ

ಸ್ರ॥ ಇಂತೆಂದತ್ಯಂತ ರೋಷಾವೃತಮತಿಯುದಟಿಂದೆಳ್ದು ಭೇರೀರವಂ ದಿ
ಕ್ಕಾಂತಾಸ್ವಾಂತಾತಿಭೀತಿಪ್ರದಮೆನಿಸೆ ತದಂಭೋಧಿಯಿಂದಬ್ಧಿಯೊಂದೇ
ಳ್ವಂತುದ್ಯತ್ಸೇನೆ ಕೋಲಾಹಲಮನೆಸಗಿ ಕೂಡಿರ್ಪಿನಂ ಕೂರ್ಪಿನಿಂ ಭೂ
ಕಾಂತವ್ರಾತಾವೃತಂ ಪೆರ್ವಡಗನಡರ್ದು ತತ್ಸಂಯುತಂ ಬಂದನಾಗಳ್ ೪೦

ವ॥ ಅಂತೆಳ್ತಂದಪರಿಮಿತ ಬಲಜಲಧಿಯಂ ಕಳಿದು ನೆಲನೆಲ್ಲಮನಳುರ್ಕೆಗೊಂಡು ಘುಳುಘುಳಿಸಿ ರಯದಿಂ ಪರಿತರ್ಪಾಗಳ್

ಮ॥ ದಿಗಿಭಂಗಳ್ ಬೆಗಡೊಂದೆ ಭಾನುರಥದಶ್ವಂ ಬೆರ್ಚೆ ಪಾತಾಳಪ
ನ್ನಗರಳ್ಕುತ್ತಿರೆ ಖೇಚರರ್ಬೆದಱೆ ಮತ್ತೇಭಪ್ರತಾನಂ ತುರಂ
ಗಗಣಂ ತೇರ್ಗಳ ಪಙ್ತಿ ಪಾದಚರಬೃಂದಂ ಬೃಂಹಿತಂ ಹೇಷಿತಂ
ಪ್ರಗತಂ ಚೀತ್ಕೃತಿ ಬೊಬ್ಬೆಯುರ್ಬಿರೆ ಕರಂ ಸಾಲ್ಗೊಂಡದೇಂ ಬಂದುದೋ ೪೧

ಚಂ॥ ಖರರುಚಿಬಿಂಬಮಂಬರಧುನೀತರುಣಾಂಬುಜದಂತೆ ತೋಱೆ ವಿ
ಸ್ಫುರಿತಪತಾಕೆ ಮೇಲಲೆಯೆ ಸೂಸುತೆ ಪರ್ಬಿದ ತದ್ರಜಕ್ಕೆ ತಾಂ
ದೊರೆಯೆನಿಸುತ್ತೆ ಸುತ್ತಿಡಿದು ಸಾಸಿರಕಣ್ಬುಗೆ ಸೈನ್ಯರೇಣುವಿಂ
ದಿರನಿರದಂತಱಿಂ ಬಲವಿರೋಧಿ ಸಮಾಹ್ವಯಮಾಂತನಾಗನೇ ೪೨

ಕಣ್ಣುಗಳಿಗೆ ನೂತನಾಶ್ಚರ್ಯವನ್ನು ರಣರಂಗದಲ್ಲಿ ಉಂಟುಮಾಡುತ್ತೇನೆ." ೪೦. ಎಂದು ಹೇಳುತ್ತ ಅತ್ಯಂತ ಕೋಪಾವಿಷ್ಟಮನಸ್ಸಿನಿಂದ ಕೂಡಿ, ಪರಾಕ್ರಮದಿಂದ ಎದ್ದು; ದಿಕ್ಕೆಂಬ ಸ್ತ್ರೀಯರ ಹೃದಯದಲ್ಲಿ ಭಯವುಂಟಾಗುವ ಹಾಗೆ ಯುದ್ಧಸೂಚಕ ನಗಾರಿಗಳನ್ನು ಬಾರಿಸಿದನು. ಆ ಸಮುದ್ರದೊಳಗಿನಿಂದ ಮತ್ತೊಂದು ಸಮುದ್ರವು ಎದ್ದು ಬಂದಂತೆ ಶ್ರೇಷ್ಠವಾದ ಸೇನೆಯು ಕೋಲಾಹಲಧ್ವನಿಯನ್ನುಂಟುಮಾಡುತ್ತ ಕೂಡಿಕೊಳ್ಳಲಾಗಿ, ಆ ಸಿಂಹಳೇಂದ್ರನು ಅನೇಕ ರಾಜರಿಂದ ಸುತ್ತುವರಿಯಲ್ಪಟ್ಟವನಾಗಿ ದೊಡ್ಡ ಹಡಗೊಂದನ್ನೇರಿ ಸಮಸ್ತ ಸೇನಾಸಮೇತವಾಗಿ ಹೊರಟುಬಂದನು. ವ॥ ಹಾಗೆ ಹೊರಟುಬಂದ ಅಪರಿಮಿತ ಸೈನ್ಯವು ಸಮುದ್ರವನ್ನು ದಾಟಿ, ಭೂಮಿಯು ನ್ನೆಲ್ಲ ವ್ಯಾಪಿಸಿ, ಘುಳುಘುಳು ಧ್ವನಿಯನ್ನುಂಟುಮಾಡುತ್ತ ವೇಗವಾಗಿ ಹರಿದು ಬರುವಾಗ ೪೧. ದಿಕ್ಕುಗಳಲ್ಲಿರುವ ಆನೆಗಳು ಅಂಜಿದವು; ಸೂರ್ಯರಥದ ಕುದುರೆಗಳು ಮೆಟ್ಟಿ ಬಿದ್ದವು; ಪಾತಾಳದಲ್ಲಿರುವ ನಾಗರುಗಳು ಹೆದರತೊಡಗಿದರು; ಆಕಾಶ ಗಾಮಿಗಳಾದ ದೇವತೆಗಳು ಭಯಗೊಂಡರು; ಆನೆಗಳ ಸಮೂಹ, ಕುದುರೆಗಳ ಹಿಂಡು, ರಥಗಳ ಸಾಲು, ಕಾಲಾಳುಗಳ ಸಮುದಾಯ, ಆನೆಗಳ ಬೃಂಹಿತ, ಕುದುರೆಗಳ ಹೇಷಾ ರವ, ರಥಗಳ ಚೀತ್ಕಾರ, ಕಾಲಾಳುಗಳ ಚೀರಾಟ ಆಧಿಕ್ಯವಾಗಿರಲು ಕ್ರಮವಾಗಿ ಸಾಲುಗೊಂಡು ಆ ಸಿಂಹಳೇಂದ್ರನ ಸೈನ್ಯವು ಅದೇನು ಬಂದಿತೋ! ೪೨. ಸೂರ್ಯ ಬಿಂಬವು ದೇವಗಂಗಾನದಿಯಲ್ಲಿ ಅರಳಿದ ನೂತನಕಮಲದಂತೆ ತೋರಿತು. ಪ್ರಕಾಶಿಸಲ್ಪಡುತ್ತಿದ್ದ ಪತಾಕೆಯು ಮೇಲ್ಭಾಗದಲ್ಲಿ ಅಲೆಯುತ್ತಿರಲು ಆ ಕಮಲದ ಧೂಳು ಸುರಿಯುತ್ತಿತ್ತು. (ಇಂಥ ಕಮಲರಜಕ್ಕೆ) ನಾನು ಸಮನೇ ಎನಿಸುತ್ತ ಸುತ್ತೆಲ್ಲ

ಕಂ॥ ಗಗನ ಗಹನದೊಳೆ ಗಮಿಯಿಪ
ಖಗಕ್ಕೆ ಪತ್ತೀಂದ್ರ ಧೀವರಂ ಬೀಸಿದ ರೇ
ಣುಗಣ ನವಜಾಲಕೊಳಗಾ
ಯ್ತೊಗುಮಿಗೆಯಿಂದನಿಮಿಷಪ್ರತಾನಂ ಚಿತ್ರಂ ೪೩

ವ॥ ಅಂತೇಳ್ತಂದದ್ಭುತಂ ಮಿಗೆ ತತ್ಸೈನ್ಯಮನತಿದೂರದೊಳಿದಿರ್ಚಿ ಬಿಟ್ಟಿರ್ಪುದು ಮುಭಯಬಲಚಮೂಪತಿ ನಿಯಾಮಿತರ್ ಸಮರಸನ್ನಾಹಭೇರಿಯಂ ತಂತ್ರಾಧ್ಯಕ್ಷರ್ ಕಡಂಗಿ ಪೊಡೆದಾಗಳ್

ಕಂ॥ ಬಳೆದು ನೆಗೆತಂದು ದಾಂಧಳ
ಧಳಂಧಳ ಧ್ವನಿಯಳುರ್ಕೆಗೊಳೆ ಶಬ್ದಗುಣಂ
ತಿಳಿವೊಡದಕಾಯ್ತು ಗಗನ
ಸ್ಥಳಿಗಲ್ಲದೊಡಲ್ಲಿ ಶಬ್ದಮೇಂ ಸಮನಿಕುಮೇ ೪೪

ವ್ಯಾಪಿಸಿ (ಆ ಸಿಂಹಳೇಂದ್ರನ) ಸೈನ್ಯದ ತುಳಿತದಿಂದೆದ್ದ ಧೂಳಿಯು ದೇವೇಂದ್ರನ ಸಹಸ್ರ ಕಣ್ಣುಗಳಲ್ಲೆಲ್ಲ ತುಂಬಿಕೊಂಡಿತು. ಆದ್ದರಿಂದ ಅಂದಿನಿಂದ ಇಂದ್ರನ 'ಬಲವಿರೋಧಿ' ಎಂಬ ಹೆಸರನ್ನು ಹೊಂದಿರಬೇಕಲ್ಲವೆ ? ೪೩. ಬುದ್ಧಿಶಾಲಿಯಾದ ಪಾದಸಂಚಾರದ ಬಲೆಗಾರನು ಆಕಾಶವೆಂಬ ಕಾಡಿನಲ್ಲಿ ಹಾರುತ್ತಿರುವ ಪಕ್ಷಿಗಳಿಗಾಗಿ ಬೀಸಿದ ಧೂಳಿಯ ಸಮೂಹವೆಂಬ ಬಲೆಗೆ ಅತಿಶಯವಾಗಿ ಮೀನುಗಳ ಸಮೂಹವು ಒಳಗಾಯಿತು. ಇದು ವಿಚಿತ್ರ (–ಅರ್ಥಾಂತರ) ಪದಾತಿಸೈನ್ಯಕ್ಕೊಡೆಯನಾದ ಸಿಂಹಳನರೇಂದ್ರನೆಂಬ ಬುದ್ಧಿ ಶಾಲಿಯು–ಆಕಾಶವೆಂಬ ಗಮನಕ್ಕೆ ಅಶಕ್ಯವಾದ ಸ್ಥಳದಲ್ಲಿ ಸಂಚರಿಸುವ ಖಗ (ಸೂರ್ಯ) ನಿಗೆ ಒಡ್ಡಿದ್ದ ಸೈನಿಕರ ಕಾಲ್ತುಳಿತದಿಂದುಂಟಾದ ರೇಣು ಸಮೂಹವೆಂಬ ನೂತನ ಬಲೆಗೆ, ದೇವತೆಗಳ ಸಮೂಹವು ಅತಿಶಯವಾಗಿ ಒಳಗಾಯಿತು. (ಸೂರ್ಯನು ಮುಚ್ಚಿಹೋಗು ವಂತೆ ಸೇನೆಯ ಕಾಲ್ತುಳಿತದಿಂದ ಧೂಳು ವ್ಯಾಪಿಸಿರಲು, ದೇವತೆಗಳೆಲ್ಲ ಆ ಧೂಳಿಯಿಂದ ಆವರಿಸಲ್ಪಟ್ಟರೆಂಬುದು ಭಾವ ೧. ಧೀವರ–i) ಬುದ್ಧಿಶಾಲಿ ii) ಬಲೆಗಾರ ; ೨, ಪತ್ತಿ =i) ಕಾಲಿನಿಂದ ನಡೆಯುವವ, ii) ಒಂದು ರಥ, ಒಂದು ಆನೆ, ಮೂರು ಕುದುರೆ, ಐವರು ಕಾಲಾಳುಗಳಿಂದ ಕೂಡಿದ ಒಂದು ವಿಭಾಗ, iii) ಕಾಲಾಳಿನ ದಳ ; ೩. ಖಗ i) ಪಕ್ಷಿ ii) ಸೂರ್ಯ.) ವ॥ ಈ ರೀತಿ ಅದ್ಭುತವೋ .ಎನ್ನುವಂತೆ ಹೊರಟುಬಂದ ಸಿಂಹಳೇಂದ್ರನ ಸೈನ್ಯವು ಸಮೀಪದಲ್ಲಿಯೇ ಎದುರಾಗಿ ನಿಂತಿರಲಾಗಿ ಎರಡೂ ಸೈನ್ಯಗಳ ಸೇನಾಪತಿಗಳಿಂದ ಗೊತ್ತುಮಾಡಲ್ಪಟ್ಟ ಯುದ್ಧಪ್ರಾರಂಭ ಸೂಚಕ ನಗಾರಿಯನ್ನು ತಂತ್ರಾಧಿಕಾರಿಗಳು ಉತ್ಸಾಹಗೊಂಡು ಹೊಡೆದರು. ೪೪. (ಆ ನಗಾರಿಯ ಧ್ವನಿಯು) ಹೆಚ್ಚಿ ಸೈನಿಕರು ಹಾರಿ ಯುದ್ಧದ ದಾಂದಳೆಯು ಧಳ ಧಳ ಧ್ವನಿಮಾಡಿ ವಿಶೇಷವಾಗಿ ಹೆಚ್ಚುಗೊಂಡಿತು. ವಿಚಾರಿಸಿ ನೋಡಿದರೆ, ಆಕಾಶಕ್ಕೆ ಶಬ್ದಗುಣವುಳ್ಳದ್ದು ಎಂಬ ಹೆಸರು ಅದರಿಂದಲೇ ಆಯಿತು. ಇಲ್ಲದಿದ್ದರೆ ಆಕಾಶದಲ್ಲಿ ಶಬ್ದವೆಲ್ಲಿರುತ್ತಿದೆ ?

ವ॥ ಅನಂತರಮಿಂತಳವಿಗಳಿದ ಕಳಕಳಮನೊಳಕೊಂಡೊಡ್ಡಿನಿಂದುಭಯಬಲದೊಳು ಭಯಬಲಾಧ್ಯಕ್ಷರ್ ಕಡಂಗಿಕೈವೀಸಿದಾಗಳ್ ಪ್ರಚಂಡಪ್ರತಾಪಮಂಡಿತರುದ್ದಂಡ ಕೋದಂಡ ದಂಡಮನಡಸಿ ಪಿಡಿದು ಜೇವೊಡೆದು ಪಿಂಗದೆ ಮುಂಗಡೆಗಾಂತು ತಱಿಸಂದು ನಿಂದು

ಕಂ॥ ಡೊಣೆಯಿಂ ಕಣೆಯಂ ತೆಗೆತೆಗೆ
ದಣಿಯರಮೆನೆ ಪೂಡಿನೋಡಿ ಗುಱಿಯಂ ಮಣಿಕಾಲ್
ಮಣಿಯೆ ಭುಜಮೊಗೆಯೆ ಕುಂಡಲ
ಮಣಿ ಕುಣಿಯೆ ಧನುರ್ಧರರ್ಕಳಧಟಿಂದೆಚ್ಚರ್ ೪೫

ಹೂಂಕೃತಿ ಬಿಲ್ಗಾಱರ ಗುಣ
ಟಂಕೃತಿ ಚಾಪಪ್ರಮುಕ್ತ ಶರನಿಕರ ಮಹಾ
ಭೀಂಕೃತಿ ನೋಳ್ಪಮರರ್ಗೆ ಭ
ಯಂಕೃತಿಗೆಯ್ದುದು ತದೀಯ ರಣಭೂತಳದೊಳ್ ೪೬

ನೆಱಿಸುರ್ಚಿಪಾಯ್ದು ನೆತ್ತ
ರ್ತುಱುಗೆ ಪರಿಕ್ಷುಬ್ಧಬಲಜಲಧಿಯೊಳ್ಕಿಂಬಾ
ವುಱಿ ಮೊಱಿದು ಪಱಿವ ತೆಱದಿಂ
ಗಱಿ ಗಣೆ ನೆಱಿ ಮೊಱಿದು ಪಱಿದುವೆರಡುಂ ಬಲದೊಳ್ ೪೭

(ತಾತ್ಪರ್ಯ–ಯುದ್ಧದ ದಾಂಧಲೆಯಿಂದ ಆದ ಶಬ್ದವು ವ್ಯಾಪಿಸಿತು. ಆದ್ದರಿಂದ ಆಕಾಶವು ಶಬ್ದಗುಣವೆಂಬ ಹೆಸರು ಪಡೆಯಿತು.) ವ॥ ಅನಂತರ ಹೀಗೆ ಹತೋಟಿಗೆ ಮೀರಿದ ಕಳಕಳಧ್ವನಿಯನ್ನು ಒಳಗೊಂಡು, ಎದುರಾಗಿ ನಿಂತು ಎರಡೂ ಸೇನೆಗಳಲ್ಲಿ ಸೇನಾಪತಿಗಳು ಉತ್ಸಾಹಗೊಂಡು ಕೈಯನ್ನು ಬೀಸಿದಾಗ ಪ್ರಚಂಡ ಪರಾಕ್ರಮದಿಂದ ಅಲಂಕೃತರಾದವರು ಬಹುದೊಡ್ಡವೆನಿಸಿದ ಬಿಲ್ಲಿನ ದಂಡಗಳನ್ನು ಅದುಮಿಹಿಡಿದು ಠೇಂಕಾರಗೊಳಿಸುತ್ತ, ಹಿಂಜರಿಯದೆ ಮುಂಭಾಗಕ್ಕೆ ಬಂದು ಎದುರಾಗಿ ನಿಂತುಕೊಂಡು, ೪೫. ಬತ್ತಳಿಕೆಗಳಿಂದ ಬಾಣವನ್ನು ತೆಗೆ ತೆಗೆದು ಶ್ರೀಘ ಶೀಘ್ರವಾಗಿ ಹೂಡಿ, ಗುರಿಯಿಟ್ಟು ನೋಡಿ, ಆ ಧನುರ್ಧಾರಿಗಳಾದ ಶೂರರುಗಳು ಮೊಳಕಾಲನ್ನು ಬಾಗಿಸಿ, ಬಲ ಭುಜವನ್ನೆತ್ತಿ, ಕರ್ಣಕುಂಡಲಗಳು ಕುಣಿದಾಡುತ್ತಿರಲು ಪರಾಕ್ರಮದಿಂದ ಬಾಣಗಳನ್ನು ಬಿಟ್ಟರು. ೪೬. ಆ ಎರಡೂ ಸೈನಿಕರಿಂದ ಕೂಡಿದ ರಣಭೂಮಿಯಲ್ಲಿ ಬಿಲ್ಗಾರರ ಹೂಂಕಾರಧ್ವನಿಯೂ, ಬಿಲ್ಲಿನ ಹೆದೆಯ ಠೇಂಕಾರ ಶಬ್ದವೂ, ಬಿಲ್ಲಿನಿಂದ ಹೊರ ಹೊಂಟ ಬಾಣಗಳ ಸಮೂಹದ ಭೀಂ ಎಂಬ ಮಹಾಧ್ವನಿಯೂ ಆಕಾಶದಲ್ಲಿ ನಿಂತು ನೋಡುತ್ತಿದ್ದ ದೇವತೆಗಳಿಗೆ ಭಯವನ್ನುಂಟುಮಾಡಿತು. ೪೭. ಚೆನ್ನಾಗಿ ದೇಹವನ್ನು ನುಗ್ಗಿ ಪಾರುಗೊಂಡು, ರಕ್ತವು (ಎಲ್ಲೆಲ್ಲೂ) ತುಂಬಿರಲಾಗಿ, ಗರಿಯುಳ್ಳ ಬಾಣಗಳು ಅಲ್ಲೋಲ ಕಲ್ಲೋಲಗೊಂಡ ಸಮುದ್ರದಲ್ಲಿ ಕೆಂಪುಬಣ್ಣದ ಹಾವುಗಳು ಅಧಿಕವಾಗಿ ಬುಸುಗುಡುತ್ತ ಹರಿದಾಡುವ ರೀತಿಯಲ್ಲಿ ಎರಡೂ ಬಲಗಳಲ್ಲಿ ಶಬ್ದಮಾಡುತ್ತ ಹರಿದಾಡಿದುವು.

ಅಂಬೆದೆಯನುರ್ಚೆ ಕಿಳ್ತದ
ಱಿಂ ಬಳಿಕೆಚ್ಚವನನೊರ್ವನಿಸೆ ಕೊಂದುದು ತಾ
ನೆಂಬಾಗಳಾತನಂ ಗುಣ
ಮಂ ಬಿಟ್ಟತಿಚಪಳರಲ್ಲಿ ಗುಣಮಱಸುವುದೇ ೪೮

ಅರಿಗಳಸುಪವನನಂ ತಾ
ನಿರದೊಳಕೈದಾಶುಗತ್ವಮಂ ಪ್ರಕಟಿಸಿದ
ತ್ತರರೆ ಶರಮನ್ಯರೊಡನೊಂ
ದಿರೆ ತದ್ಧರ್ಮಂ ಧರಿತ್ರಿಯೊಳ್ ದೊರೆಕೊಳದೇ ೪೯

ಚಂ॥ ಎಡೆಯೊಳೆ ಬರ್ಪ ಬಾಣಮನೆ ಖಂಡಿಪ ಚಾಪಮನೆರ್ಚು ತೊಟ್ಟನಿ
ರ್ಕಡಿಯನೆ ಮಾಳ್ಪ ತೊಟ್ಟ ಬೆರಲಂ ತವೆ ತುಂಡಿಪ ಬಿಲ್ಲಬಿನ್ನಣಂ
ಬಿಡದೆಡೆಗೊಂಡ ಧನ್ವಿಚಯಮೆಚ್ಚೊಡೆ ಪಾಯ್ದುದು ಪಾಱಿದತ್ತು ತ
ಳ್ತುಡಸಿದುದುರ್ಚಿ ನಟ್ಟುದೊಡನಿಕ್ಕಿದುದುರ್ಕಿದ ಶೂರರಂ ಶರಂ ೫೦

ಕಂ॥ ತಳಿರೊಡೆದಸುಗೆಗಳೊ ದವಾ
ನಳನಡಸಿದ ಪಾದಪಂಗಳೋ ಪೇಳೆನೆ ಕಂ
ಗೊಳಿಸಿದರುರು ಶರಹತಿಪರಿ
ಗಳಿತಕ್ಷತಜಾತಕಲಿತಕಾಯರಜೇಯರ್ ೫೧

೪೮. ಒಬ್ಬನು ಬಾಣವನ್ನು ಬಿಡಲು, ಆ ಬಾಣವು ಇನ್ನೊಬ್ಬನ ಹೃದಯವನ್ನುಹೊಗಲು ಆ ಬಾಣವನ್ನು ಕಿತ್ತನು. ಅದೇ ಬಾಣದಿಂದ ತರುವಾಯ ಆತನು ಪ್ರಯೋಗಮಾಡಲು ಆ ಬಾಣವು ಆ ಮತ್ತೊಬ್ಬನನ್ನು ಸಂಹಾರಮಾಡಿತು. ಗುಣವನ್ನು (ಬಿಲ್ಲಿನ ನಾರಿಯನ್ನು ಬಿಟ್ಟ) ಅತಿ ಚಪಳರಾದವರಲ್ಲಿ ಸದ್ಗುಣವನ್ನು ಹುಡುಕಬಹುದೆ ? ೪೯. ವೈರಿಗಳ ಪ್ರಾಣವಾಯುವನ್ನು ಬಾಣವು (ದೇಹದೊಳ ಹೊಕ್ಕು) ಸ್ವಾಧೀನಪಡಿಸಿಕೊಂಡು ಶೀಘ್ರಗಾಮಿತ್ವವನ್ನು ತೋರಿಸಿತು. ಅರರೆ ! ಅನ್ಯರ ಸಂಸರ್ಗಮಾಡಿದರೆ ಈ ಭೂಮಿಯಲ್ಲಿ ಅವರ ಧರ್ಮವು ಉಂಟಾಗದೆ ಇರುತ್ತದೆಯೆ ? (ಟಿ॥ ಆಶುಗ = ಶೀಘ್ರಗಾಮಿಯೆನಿಸಿದ ವಾಯು. ಅದರ ಸಂಪರ್ಕದಿಂದ ಬಾಣವೂ ಶೀಘ್ರಗಾಮಿಯಾಯಿತೆಂದು ಅಭಿಪ್ರಾಯ. ರಂ.) ೫೦. ತಮ್ಮ ಸಮೀಪಕ್ಕೆ ಬರುವ ಬಾಣವನ್ನು ಕತ್ತರಿಸಿ ಹಾಕುವ, ಕೈಯಲ್ಲಿ ಹಿಡಿದ ಬಿಲ್ಲನ್ನೇ ಬಾಣಬಿಟ್ಟು ತಟ್ಟನೆ ತುಂಡರಿಸುವ, (ಬಾಣಬಿಡುವಾಗ) ಹಿಡಿಯುವ ಬೆರಳನ್ನು (ಗುರಿಯಿಟ್ಟು) ಕತ್ತರಿಸಿಹಾಕುವ, ಬಿಲ್ಗಾರತನದ ಕುಶಲತೆಯನ್ನು ತಪ್ಪದೆ ಅನುಸರಿಸುವವರಾದ ಬಿಲ್ಗಾರರ ಸಮೂಹವು ಬಾಣವನ್ನು ಪ್ರಯೋಗಿಸುತ್ತಿರಲು ಬಾಣವು ಬಿಲ್ಲಿನಿಂದ ಹಾರಿ ಹರಿದುಹೋಗಿ, ದೇಹಕ್ಕೆ ಬಡಿದು ಒಳಹೊಕ್ಕು, ಆ ಕೂಡಲೇ ಸೊಕ್ಕಿದ ಶೂರರನ್ನು ಕೊಂದು ಹಾಕುತ್ತಿತ್ತು. ೫೧. ಶ್ರೇಷ್ಠವಾದ ಬಾಣಗಳ ಹೊಡೆತದಿಂದ ವಿಶೇಷವಾಗಿ ಗಾಯಗಳಾಗಿದ್ದವು. ಆ ಗಾಯಗಳಿಂದ ಥೊರಸ್ಥೊಸುವ ರಕ್ತದಿಂದ ಅವರು ಕೂಡಿದ್ದರು. ಅಂಥ ಅಜೇಯರಾದ ಆ ಶೂರರು

ವ॥ ಇಂತು ಕಡುಗಲಿತನಂ ಕೈಮಿಕ್ಕು ಕಾದುವ ಧನುರ್ಧರರ ಕಡುಪಂ ಕಂಡು ಕಡು ವಹಿಲದಿಂ ಕಾಯ್ಪೇಱಿ ಖಡ್ಗಮುಂ ಪಿಡಿದೊಡ್ಡುಗೊಂಡಡ್ಡಣಕಾಱರಾರ್ದು ಸಾರ್ದು ಸಂರಂಭ ಸಂಭ್ರಮಮಿಂಬುವಡೆಯೆ ತಡೆಯದೆ ಪಡಿತಳಿಸಿ ಗೊಂದಣಿಸಿ ನಿಂದು

ಕಂ॥ ಪೊಡೆಯೆ ಕಡಿವಡೆದ ರುಂಡಮ
ನೆಡಗೈಯಿಂದಡಸಿ ಪಿಡಿದು ಬಿಡದುದ್ಧರಿಸು
ತ್ತೊಡನೆ ನಡೆದಿಕ್ಕಿದನನಿ
ರ್ಕಡಿಗೆಯ್ವುಧಟರ್ಕಳಮರರಂ ಮೆಚ್ಚಿಸಿದರ್ ೫೨

ವ॥ ಅದಲ್ಲದೆಯುಂ

ಚಂ॥ ಕರತಳಖಡ್ಗಮುಂ ಜಡಿದು ಪಾಂಗಱಿದಡ್ಡಣಮೊಡ್ಡಿನಿಂದು ಖೇ
ಚರರರಿದೆಂಬಿನಂ ಪೊಡೆವ ಪೊಯ್ವ ತಱುಂಬುವ ಥಟ್ಟುಮಾಳ್ಪ ಮುಂ
ಬರಿವ ಮರಳ್ಚುವಬ್ಬರಿಪ ಗರ್ವಿಪ ಬೊಬ್ಬಿರಿವಾರ್ವ ಪೋರ್ವ ಮೊ
ಗ್ಗರಿಪ ತೊಡಂಕುವಗ್ಗಲಿಪ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ ೫೩

ವ॥ ಮತ್ತಮಲ್ಲಿ

ಚಿಗಿತುನಿಂತ ಅಶೋಕವೃಕ್ಷಗಳೋ, ಅರಣ್ಯದ ಬೆಂಕಿ ಹತ್ತಿ ಉರಿಯುತ್ತಿರುವ ದೊಡ್ಡ ಗಿಡಗಳೋ ಹೇಳು ! ಎನ್ನುವಂತೆ ಶೋಭಿಸುತ್ತಿದ್ದರು. ವ॥ ಈ ರೀತಿಯಲ್ಲಿ ಕಡುಗಲಿ ತನವನ್ನು ಮಿತಿಮೀರಿ ತೋರಿಸಿ ಯುದ್ಧಮಾಡುತ್ತಿರುವ ಆ ಬಿಲ್ಗಾರರುಗಳ ಶೌರ್ಯವನ್ನು ಕಂಡು ಅತಿಶೀಘ್ರವಾಗಿ ಕಾವೇರಿದ ಕತ್ತಿಗುರಾಣಿಗಳನ್ನು ಹಿಡಿದ, ಖಡ್ಗಧಾರಣಮಾಡಿದ ಸೈನಿಕರ ಸಮೂಹವು ಆರ್ಭಟಿಸುತ್ತ ಮುಂದೆ ಬಂದಿತು. ಅವರು ಅತ್ಯಧಿಕಗೊಂಡ ಉತ್ಸಾಹಪೂರ್ಣರಾಗಿ ಪ್ರತಿಭಟಿಸಿ ಗುಂಪುಗುಂಪಾಗಿ ನಿಂತು ೫೨. (ಖಡ್ಗಗಳಿಂದ) ಹೊಡೆದಾಡುತ್ತಿರಲು, ಕತ್ತರಿಸಿಬಿದ್ದ ಶಿರಸ್ಸನ್ನು ಎಡಗೈಯಿಂದ ಅನುಕಿಹಿಡಿದು, ಎದು ರಾಳಿಗಳು ನಡೆದುಬಂದು ಮೊದಲು ಕಡಿದವನ ಶಿರಸ್ಸನ್ನೇ ಕತ್ತರಿಸಿ ಹಾಕುತ್ತಿದ್ದರು. ಈ ರೀತಿ ಯುದ್ಧಮಾಡುತ್ತ ಆ ಶೂರರುಗಳು ಅಮರಲೋಕದವರನ್ನು ಮೆಚ್ಚಿಸುತ್ತಿದ್ದರು. ವ॥ ಅದೂ ಅಲ್ಲದೆ ೫೩. ಕೈಯಲ್ಲಿರುವ ಖಡ್ಗವನ್ನು ಝಳಪಿಸುತ್ತ ಪಟ್ಟನ್ನುತಿಳಿದು ಗುರಾಣಿಯನ್ನು ಮುಂದಕ್ಕೆ ಚಾಚಿಹಿಡಿದು ನಿಂತು, ದೇವತೆಗಳೂ ಕೂಡ ಆಶ್ಚರ್ಯವೆನ್ನುವ ಹಾಗೆ ಹೊಡೆಯುವ, ಅಪ್ಪಳಿಸುವ, (ಮುಂದೆ ಬರದಂತೆ) ತರುಬುವ, ಹಣ್ಣುಮಾಡುವ, ಮುಂದಕ್ಕೆ ನುಗ್ಗುವ, ಹಿಂದಕ್ಕೆ ಸರಿಸುವ, ಆರ್ಭಟಿಸುವ, ಗರ್ವವನ್ನು ತೋರಿಸುವ, ಚೀರುವ, ಹೋರಾಡುವ, ಒಗ್ಗಟ್ಟಾಗುವ, ತೊಡರುವ, ಶ್ರೇಷ್ಠತೆಯನ್ನು ವ್ಯಕ್ತಪಡಿಸುವ (ಈ ಎಲ್ಲ) ಕೌಶಲ್ಯವು ಒಪ್ಪುವ ಹಾಗೆ ಆರ್ಭಟಿಸಿ ಯುದ್ಧಮಾಡಿದರು. ವ॥ ಮತ್ತು ಅಲ್ಲಿ

ಕಂ॥ ಅಡ್ಡಣವೊಡ್ಡಿದ ಕಾರ್ಮುಗಿ
ಲೊಡ್ಡಣಮಿರದಿಱಿದು ವಂಚಿಪಸಿ ಮಿಂಚುವ ಮಿಂ
ಚೆಡ್ಡಮೆನಿಸಿರೆ ಸಿಡಿಲ್ಪಡೆ
ಯೊಡ್ಡನೆ ಘುಡುಘುಡಿಸಿ ಕಾದಿದರ್ ಕಲಿಸುಭಟರ್ ೫೪

ಕರವಾಳ್ಮೊಱುಮೊನೆಗೊಂಡು
ರ್ಚಿರೆ ಬೆನ್ನೊಳ್ಕೊಡೆ ನಡೆದು ತೊಡರ್ದಿರೆ ಬಿಡದೊ
ರ್ವರೊಳೊರ್ವರ್ ಮುಷ್ಟಾಮು
ಷ್ಟಿರಣಂ ನೆಗಳ್ದುದು ನಖಾನಖೀಸ್ಫುಟಯುದ್ಧಂ ೫೫

ಕರತಳದ ಹರಿಗೆ ಕವಿದೊ
ಪ್ಪಿರೆ ಖರ್ಪರದಂತೆ ಮೇಲೆ ಬಲರೇಣುಧರಾ
ಭರಮಂ ಪೊಱಲುಜ್ಜುಗಿಪು
ದ್ಧುರ ಕೂರ್ಮನನೊರ್ವನಡಿಯೊಳನುಕರಿಸಿರ್ದಂ ೫೬

ಕರುಳದು ಪೊಡೆಯಿಂ ಪೊಱಸೂ
ಸಿರೆ ಸೂಸದೆ ಶೌರ್ಯಮುರ್ವಿ ಕರವಾಳಿಂ ಪೊ
ಯ್ದರಿಯನಿಱಿದಿಕ್ಕಿ ಮಿಕ್ಕ
ರ್ಕರುಳಿಲ್ಲದ ಕಲಿತನಕ್ಕೆ ಪಕ್ಕಾಗಿರ್ದರ್ ೫೭

೫೪. ಅಡ್ಡಲಾಗಿ ಹಿಡಿದು ನಿಂತ ಗುರಾಣಿಗಳೇ ಕಾರ್ಮುಗಿಲ ಸಮೂಹ. ತಪ್ಪದೆ ಅದಕ್ಕೆ ಅಪ್ಪಳಿಸುತ್ತಿರುವ ಮಿಂಚುವ ಖಡ್ಗಗಳೇ ಮಿಂಚುಗಳು, ಅಪ್ಪಳಿಸಿದಾಗ ಉಂಟಾಗುವ ಖಣಿಲ್ ಎಂಬ ಧ್ವನಿಯೇ ಗುಡುಗುಗಳ ಸಮೂಹ. ಹೀಗೆ ಇವು ಗೋಚರಿಸುತ್ತಿರಲು ಇದು ಸಿಡಿಲಿನ ಸೈನ್ಯಸಮೂಹವೋ! ಎನ್ನುವಂತೆ ಯುದ್ಧ ಮಾಡಿದರು. ೫೫. ಖಡ್ಗದ ಚೂಪಾದ ತುದಿಯು ದೇಹದಲ್ಲಿ ನಾಟಿ ಬೆನ್ನಲ್ಲಿ ಪಾರಾಗಿದ್ದರೂ ನಡೆದುಬಂದು, ಮೇಲೆ ಬಿದ್ದು ತೊಡರಿ, ಯುದ್ಧವನ್ನು ಬಿಡದೆ, ಒಬ್ಬರೊಡನೊಬ್ಬರು ಮುಷ್ಟಾಮುಷ್ಟಿ, ನಖಾನಖಿ ಯುದ್ಧವು ಸ್ಫುಟವಾಗಿರುವಹಾಗೆ ಮಾಡುತ್ತಿದ್ದರು. (ಮುಷ್ಟಿ ಮುಷ್ಟಿಗಳಿಂದ ಮಾಡುವ ಯುದ್ಧ ಮುಷ್ಟಾಮುಷ್ಟಿ ; ನಖ—ಉಗುರು. ನಖಗಳಿಂದ ಪರಚಿ ಮಾಡುವ ಯುದ್ಧ ನಖಾನಖಿ.) ೫೬. ಒಬ್ಬನ ಕೈಯ ಗುರಾಣಿಯು ಮೈಮೇಲೆ ಆವರಿಸಿತ್ತು. ನೆಲದ ಮೇಲೆ ಬಿದ್ದಿದ್ದ ಅವನು ಮೇಲ್ಭಾಗದಲ್ಲಿ ಸೈನ್ಯದ ತುಳಿತದಿಂದ ಎದ್ದಿದ್ದ ಧೂಳಿನ ಭೂಭಾಗವನ್ನು ಪ್ರಯತ್ನದಿಂದ ಮೇಲಕ್ಕೆತ್ತಿ ಹಿಡಿಯುವ ಆದಿಕೂರ್ಮನಂತೆ ಕಾಣುತ್ತಿದ್ದನು. ೫೭. ಕರುಳು ಹೊಟ್ಟೆಯಿಂದ ಹೊರಬಂದು ಸುರಿದಿದ್ದರೂ ಶೌರ್ಯಮಾತ್ರ ಹೊರಟು ಹೋಗದೆ, ಉಬ್ಬಿ ಖಡ್ಗದಿಂದ ಹೊಡೆದು ವೈರಿಯನ್ನು ಕೊಂದು ಕೆಡವಿಹಾಕಿ, ಹೃದಯವೇ ಇಲ್ಲದ (ಕರುಳೇ ಇಲ್ಲದ) ಅತಿಶಯವಾದ ಶೌರ್ಯವುಳ್ಳವರೆನಿಸಿ ಯುದ್ಧ

ವ|| ಆಗಳಂತದಂ ಕಂಡು ಸಮರಸಮುತ್ಸುಕಾಂತರಂಗಿಗಳ್ ತುರಂಗಿಗಳ್ ತುಂಗ ತುರಂಗಸಂಘಮಂ ಪಿಂಗದೆ ಮುಂಗಡೆಗೆ ಸಂಗಡಿಸುತೊಡನೆ ಘುಡುಘುಡಿಸುತೊಡಮುಡಸನ್ನೆಯಿಂ ದೌಂಕಿ ನೂಂಕಿದಾಗಳ್

ಕಂ|| ಕುಳಿಗೊಳಿಸಿ ಕೊಳಗಿನಿಂ ಕೊಳು
ಗುಳದಿಳೆಯಂ ನೆಗಪಿ ಮಿಗೆ ತದುದ್ರಜಮಂ ಬಾಂ
ಬೊಳೆಯಂ ಕದಡೇಳಿಸಿ ಮೇ
ಣ್ಕೆಳರ್ದತಿರಯದಿಂದೆ ಪರಿದುವಲ್ಲಿ ಹಯಂಗಳ್ ೫೮

ವ|| ಅಂತುಮಲ್ಲದೆಯುಂ

ಕಂ|| ಶರಧಿಮಥನದೊಳೆ ನೊರೆಗಳ
ನೆರವಿಯನಿರದಾಂತು ಪರಿವ ತೆರೆಗಳ ಸಿರಿಯಂ
ಧರಿಸಿ ಪರಿದುದು ತುರಂಗೋ
ತ್ಕರಮಾನನಫೇನಖಂಡಪಂಡದಿನಾಗಳ್ ೫೯

ಒಟ್ಟಜೆಯಿಂ ಪೆಗಲೊಳ್ತೆಗೆ
ದಿಟ್ಟಗ್ಗದ ಪಟ್ಟೆಯಂಗಳಂ ಝಳಪಿಸಿ ಬೊ
ಬ್ಬಿಟ್ಟಡಸಿ ಪೊಕ್ಕು ಮಿಕ್ಕಾ
ರ್ದಿಟ್ಟಣಿಸಿ ಪಳಂಚಿದರ್ ತುರಂಗಿಗಳದಟರೊಳ್ ೬೦

ಮಾಡುತ್ತಿದ್ದರು. ವ|| ಆಗ ಈ ರೀತಿಯ ಕಾಲ್ದಳದವರ ಯುದ್ಧದ ರೀತಿಯನ್ನು ಕಂಡು ಯುದ್ಧೋತ್ಸಾಹಭರಿತರೂ, ಕುದುರೆಯನ್ನೇರಿದವರೂ ಆದ ರಾವುತರು ತಮ್ಮ ಶ್ರೇಷ್ಠ ವಾದ ಕುದುರೆಗಳ ಸಮೂಹವನ್ನು ಸ್ವಲ್ಪವೂ ಹಿಂಜರಿಯದೆ ಮುಂಭಾಗಕ್ಕೆ ಸಾಗಿಸಿ ಕೊಂಡು ಬಂದು, ಕೂಡಲೆ ಘುಡುಘುಡಿಸುತ್ತ ಆರ್ಭಟ ಮಾಡಿ, ಆ ಕೂಡಲೆ ಹಿಮ್ಮಡಿ ಯಿಂದ ಔಂಕಿ ಸಂಜ್ಞೆಮಾಡಿ ಮುಂದೆ ಓಡಿಸಿದಾಗ ೫೮. ಆ ಯುದ್ಧಭೂಮಿಯನ್ನು ತಮ್ಮ ಖುರಪುಟಗಳಿಂದ ತಗ್ಗುತಗ್ಗಾಗಿ ಮಾಡಿ, ಅಲ್ಲಿನ ಆ ಧೂಳನ್ನು ಮೇಲಕ್ಕೆ ಹಾರಿಸಿ, ದೇವಗಂಗಾನದಿಯನ್ನು ಕಲಕಿ ಕೆಡಿಸಿ, ಹೇಷಾರವವನ್ನು ಮಾಡುತ್ತ ಆ ಕುದುರೆಗಳು ಶೀಘ್ರವಾಗಿ ಓಡಿದವು. ವ|| ಹಾಗೂ ಅಲ್ಲದೆ ೫೯. ಆ ತುರಗಗಳ ಸಮೂಹವು ಮುಖದಲ್ಲಿ ನೊರೆಗಳ ಉಂಡೆಗಳನ್ನು ಧರಿಸದವುಗಳಾಗಿ, ಶರಧಿಮಥನ ಸಮಯದಲ್ಲಿ ನೊರೆಗಳ ಸಮೂಹವನ್ನು ಧರಿಸಿ ಹರಿಯುವ (ಕ್ಷೀರಸಾಗರದ) ತೆರೆಗಳ ಸೌಂದರ್ಯದ ರೀತಿಯನ್ನು ಹೊಂದಿ (ಯುದ್ಧಭೂಮಿಯಲ್ಲಿ) ಓಡಿದುವು. ೬೦. ಅತಿಶಯ ಶೌರ್ಯದಿಂದ ಹೆಗಲಿನ ಮೇಲಿಟ್ಟುಕೊಂಡಿದ್ದ ಶ್ರೇಷ್ಠವಾದ ಪಟ್ಟೆಯಕತ್ತಿಗಳನ್ನು ಝಳ ಪಿಸುತ್ತ ಬೊಬ್ಬೆಹಾಕುತ್ತ ಅಪ್ಪಳಿಸುತ್ತ(ವೈರಿಸೈನ್ಯದಲ್ಲಿ) ಹೊಕ್ಕು ಭಯಂಕರವಾಗಿ ಚೀರಿ, ಗುಂಪುಗುಂಪಾಗಿ ಆ ಕುದುರೆಯೇರಿದ ಶೂರರು ಒಬ್ಬರ ಮೇಲೊಬ್ಬರು

ಕಿಡಿನೆಗೆವ ಕಣ್ಗಳೆತ್ತಿದ
ಕಡುಗಂ ಕಡುಗರ್ಚಿದೌಡು ಗಂಟಿಕ್ಕಿದ ಪು
ರ್ಬಡಿಗಡಿಗೆ ಕುಣಿವ ಮೀಸೆಗ
ಳೊಡನೊಡನೆ ಭಯಾವಹಂ ಹಯಾರೋಹಕರಾ ೬೧

ಚಂ॥ ಒಡೆದುಡಿವಂತೆ ಪೊಯ್ದು ಕರಖೇಟಕಮಂ ಪೊಡೆದಿಕ್ಕಿ ಸೀಸಕಂ
ಪುಡಿಪುಡಿಯಪ್ಪಿನಂ ಕಡಿದು ಕಂದಮನಿರ್ಕಡಿಗೆಯ್ದು ವಾಜಿಯಂ
ಸಿಡಿಯೆ ಶಿರಂ ಕಱುತ್ತು ತಱಿದಬ್ಬರಿಸುತ್ತತುಳಪ್ರತಾಪಮೊ
ರ್ಗುಡಿಸಿದವೊಲ್ ತುರಂಗಿಗಳೆರಳ್ಬಲದೊಳ್ಕಡುಪಾಂತು ಕಾದಿದರ್ ೬೨

ಕಂ॥ ಎರಡುಂ ಬಱಿಗಳ ಪೊಂಬ
ಕ್ಕರಿಕೆಗಳೊಳ್ತುಱುಗಿ ನಟ್ಟು ಗಱಿಗಣೆ ಗಱಿಯಂ
ತಿರೆ ಪುರುಷೋತ್ತಮರೇಱಿದ
ತುರಂಗತತಿ ಗರುಡಬಳಮನೇನಿಳಿಸಿದುದೋ ೬೩

ನಿಡುನೇಜೆಯುದಿನದೊರ್ವಂ
ಜಡಿದಿಱಿದೆತ್ತಿದೊಡೆ ಮತ್ತಮಂ ಕರವಾಳಿಂ
ಪೊಡೆದಂ ಮೇಗಣಿನಾ ಮೊನೆ
ವಿಡಿದಿಳಿತಂದವನನಾ ತುರಂಗಸಮೇತಂ ೬೪

ಬಿದ್ದರು. ೬೧. ಕಿಡಿಗಳು ಹಾರುತ್ತಿರುವ ಕಣ್ಣು, ಎತ್ತಿದ ಖಡ್ಗ, ಬಿಗಿಯಾಗಿ ಕಚ್ಚಿದ ತುಟಿ, ಗಂಟಿಕ್ಕಿದ ಹುಬ್ಬು, ಪದೇ ಪದೇ ಕುಣಿಯುತ್ತಿದ್ದ ಮೀಸೆಗಳು—ಇವುಗಳಿಂದ ಆ ಕುದುರೆಯನ್ನೇರಿ ಯುದ್ಧಮಾಡುತ್ತಿದ್ದ ರಾವುತರು ಹೆಜ್ಜೆಹೆಜ್ಜೆಗೂ ಭಯವನ್ನುಂಟುಮಾಡುವವರಾಗಿದ್ದರು. ೬೨. ಎರಡೂ ಬಲದಲ್ಲೂ ಆ ರಾವುತರು ಕೈಯ ಗುರಾಣಿಯು ಒಡೆದು ಮುರಿದು ಬೀಳುವಹಾಗೆ ಹೊಡೆಯುತ್ತ, ತಲೆಯ ಮೇಲಿನ ಶಿರಸ್ತ್ರಾಣವು ಪುಡಿಪುಡಿಯಾಗುವ ಹಾಗೆ ಹೊಡೆದು ಹಾಕಿ, ಭುಜಗಳನ್ನು ಕಡಿದು ಕುದುರೆಯನ್ನು ಕಡಿದು ಇಭ್ಭಾಗಮಾಡಿ, ತಲೆಯು ಮೇಲಕ್ಕೆ ಸಿಡಿಯುವಂತೆ ಲಕ್ಷ್ಯವಿಟ್ಟು ಹೊಡೆದು ಕತ್ತರಿಸಿ, ಆರ್ಭಟಮಾಡುತ್ತ, ಎಣೆಯಿಲ್ಲದ ಪ್ರತಾಪವೇ ಒಂದುಗೂಡಿರುವುದೋ ಎನ್ನುವಂತೆ ಉಗ್ರತೆಯನ್ನು ಹೊಂದಿ ಕಾದಾಡಿದರು. ೬೩. ಎರಡೂ ಕಡೆಗಳ ಸೇನೆಯ ತುರಂಗಗಳ ವೀರರ ಬಂಗಾರಬಣ್ಣದ ದೇಹಗಳಲ್ಲಿ ತುಂಬಿಕೊಂಡು ನಟ್ಟ ಗರಿಗಳುಳ್ಳ ಬಾಣಗಳು (ಪಕ್ಷಿಯ) ಗರಿಗಳ ಹಾಗೆ ಕಾಣುತ್ತಿರಲು, ಅನೇಕ ಜನ ಶೂರಪುರುಷೋತ್ತಮರುಗಳು ಏರಿದ ಆ ಕುದುರೆಗಳು ಗರುಡಗಳ ಸೈನ್ಯವನ್ನೇ ಭೂಲೋಕಕ್ಕೆ ಇಳಿಸಿದವೋ ಎನ್ನುವಂತೆ ಕಾಣುತ್ತಿದ್ದವು. ೬೪. ಓರ್ವನನ್ನು ಒಬ್ಬ ಕುದುರೆಸವಾರನು ತನ್ನ ಕೈಯ ಉದ್ದವಾದ ಭಲ್ಲೆಯದಿಂದ ತಿವಿದು ಚುಚ್ಚಿ ಎತ್ತಲು, ಆತನು ಮೇಲಿನಿಂದ ಆ ಭಲ್ಲೆಯದ ಮೊನೆಯನ್ನೇ ಹಿಡಿದು ಇಳಿದು ಬಂದು ತನ್ನ ಕಯ್ಯ ಖಡ್ಗದಿಂದ ಕುದುರೆ ಸಮೇತವಾಗಿ ಆ ರಾವುತನನ್ನು

ವ॥ ಅಲ್ಲಿ ನಡೆಸೂಲಂಗಳಂ ಪಿಡಿದು ನಡೆವಂತೆ

ಕಂ॥ ನೇಜೆಯದಿಂದಿಱಿದೆತ್ತಿ ನಿ
ಜೌಜಮನೆ ಬಿಡೌಜಸರ್ಗೆ ತೋರ್ಪಂತಸುಹೃ
ದ್ರಾಜಿಯನೆ ವಾಜಿ ವಾಹಕ
ರಾಜಿ ಮಹಾಜಿಯೊಳೆ ತಳರ್ದುದದ್ಭುತಮೊಗೆಯಲ್ ೬೫

ವ॥ ಇಂತು ತಕ್ಕುಗೆಡದೆ ಮಿಕ್ಕು ಪೊಕ್ಕುಪೊಣರ್ವ ಸಗರ್ವಗಂಧರ್ವವಾಹಕ ಸಮೂಹದ ಸಾಹಸದಾಹವದ ಮೋಹರಮಂ ಕಾಹುರದ ಮೋಡಿಯಂ ನೋಡಿ ನೀಡುಂ ತೋಡಿಲ್ಲದ ಪಾಡು ಪಂಥಂಗೊಡು ಸಮ್ಮದಂಮಿಗೆ ಸಮ್ಮುಖದ ಧೀರಸಾರಥಿಯುಂ ಪುರ್ಬಿಂ ಜರ್ಬಿ ಜವಂಗೆಡದು ಭಯಬಲವರೂಥಿಗಳ್ ನಿಜವರೂಥಯೂಥಂಗಳಂ ಪಿಂಗದೆ ಮುಂಗಡೆಗಾಂತಿದಿರ್ಚಿ ಸಾರ್ಚಿ ಪರಿಯಿಪಾಗಳ್

ಉ॥ ಕಾಲನ ಕಲ್ಲಗಾಣದ ಸಮುದ್ಗತ ಚೀತ್ಕೃತಿಯಂತೆ ಪೊಣ್ಮೆ ಪೆ
ರ್ಗಾಲಿಯ ಚೀತ್ಕೃತಿಧ್ವನಿ ತದುದ್ಭಟ ಹೂಂಕೃತಿಯಂತೆ ತಾಡಿ ತ
ಜ್ಜ್ಯಾಲತೆಯೊಂದು ಠಂಕೃತಿ ವಿಜೃಂಭಿಸೆ ಮೃತ್ಯು ಬಹುತ್ವಮಾಂತವೋ
ಲ್ಸಾಲಿಱಿದೊತ್ತಿದರ್ ಸಮರಪೂರ್ಣಮನೋರಥರಾ ಮಹಾರಥರ್ ೬೬

ಹೊಡೆದನು. ವ|| ಅಲ್ಲಿ ನಡೆಯುವ ಶೂಲಗಳನ್ನೇ ಹಿಡಿದು ನಡೆಯುತ್ತಿರುವಂತೆ, ೬೫. ಕಯ್ಯ ಭಲ್ಲೆಯಿಂದ ಶತ್ರುಸೈನಿಕರನ್ನು ತಿವಿದು ಮೇಲಕ್ಕೆತ್ತಿ ತನ್ನ ಪರಾಕ್ರಮವನ್ನು ದೇವತೆಗಳಿಗೆ ತೋರಿಸುವ ರೀತಿಯಲ್ಲಿ ಕುದುರೆಯನ್ನೇರಿ ಯುದ್ಧ ಮಾಡುವ ಸೈನಿಕರ ಸಮೂಹವು ಆ ಮಹಾಯುದ್ಧದಲ್ಲಿ ಅತ್ಯದ್ಭುತವೆನ್ನುವ ಹಾಗೆ ಎದುರುಬಿದ್ದು ಹೋರಾಡಿತು. ವ|| ಈ ರೀತಿ ಧೈರ್ಯಗೆಡದೆ ಶಕ್ತಿ ಮೀರಿ ಶತ್ರುಸೇನೆಯನ್ನು ಹೊಕ್ಕು ಯುದ್ಧ ಮಾಡುವ ಗಂಡ ಗರ್ವದ ಕುದುರೆಯ ರಾವುತರ ಸಮೂಹದ ಸಾಹಸಮಯವಾದ ಯುದ್ಧದ ಬೆಡಗನ್ನು ಉದ್ವೇಗದ ದೃಷ್ಟಿಯಿಂದ ನೋಡಿ, ರಥಿಕರುಗಳು ಅತಿಶಯವಾಗಿ ಅನುಪಮದ ಪಂಥಗಳನ್ನು ಕಟ್ಟಿ, ವಿಶೇಷಮುದದಿಂದ ಕೂಡಿದವರಾಗಿ ಮುಂಭಾಗದಲ್ಲಿರುವ ಧೀರನಾದ ಸಾರಥಿಯನ್ನು ಹುಬ್ಬಿನ ಕೊನೆಯಿಂದಲೇ ಜಬರಿಸಿ, ಅತ್ಯಂತ ವೇಗದಿಂದ ಉಭಯ ಪಕ್ಷಗಳಲ್ಲಿರುವ ರಥಾರೂಢರಾದ ಸೈನಿಕರುಗಳು ತಮ್ಮ ತಮ್ಮ ರಥಗಳ ಸಮೂಹವನ್ನು ತಪ್ಪದೆ ಮುಂಭಾಗಕ್ಕೆ ಒಯ್ದು ನೇರವಾಗಿ ಎದುರಿಗೆ ಓಡಿಸುತ್ತಿರುವ ಸಮಯದಲ್ಲಿ ೬೬. ಯುದ್ಧದಲ್ಲಿ ಪೂರ್ಣ ಮನಸ್ಸುಳ್ಳವರಾದ ಆ ಮಹಾರಥರ ರಥದ ದೊಡ್ಡ ದೊಡ್ಡ ಗಾಲಿಗಳ ಚೀತ್ಕಾರವು ಪ್ರಳಯಕಾಲದ ಯಮನ ಕಲ್ಲುಗಾಣದ ಚೀತ್ಕಾರದಂತೆಯೂ, ಬಿಲ್ಲಿನ ಹೆದೆಯನ್ನು ಮೀಟಿದಾಗ ಅದರ ಠೇಂಕಾರಧ್ವನಿಯು ಆ ಕಾಲಯಮನ ಅತಿಶಯವಾದ ಹೂಂಕಾರದಂತೆಯೂ ವಿಜೃಂಭಿಸುತ್ತಿರಲಾಗಿ, ಮೃತ್ಯುದೇವತೆಯೇ ಬಹುರೂಪಗಳನ್ನು ಧರಿಸಿ ಬಂದಿರುವಳೋ ಎಂಬಂತೆ ಸಾಲುಸಾಲಾಗಿ ಶತ್ರುಗಳನ್ನು ಕತ್ತರಿಸುತ್ತ

ವ॥ ಅಂತು ನಿಜರಥಂಗಳನೊತ್ತುತಿದಿರ್ಚಿ ನಿಂದು

ಉ॥ ಜೋಡಿಸಿದಶ್ವಕಂಧರಮನೋದೆ ಶರಾಗ್ರದೆ ಖಂಡಿಪಂತೆರ
ಳ್ಮಾಡುವ ನೀಳ್ದ ಕೇತುಮಣಿದಂಡಮನೊಡ್ಡಿದ ಸೂತವಕ್ಷಮಂ
ತೋಡುವ ಮೇಘಡಂಬರಮನಿರ್ಕಡಿಮಾಳ್ಪ ಪೊದಳ್ದ ಲೋಹದೊಳ್
ಜೋಡನಡುರ್ತು ತುಂಡಿಪ ವರೂಥಿಗಳೊಟ್ಟಜೆಯಂ ಪಳಂಚಿದರ್ ೬೭

ಕಂ॥ ಗಱಿಗಣೆಗಳ್ಕಿಱಿನುರ್ಚಿದ
ತೆಱಪೊಳ್ಪೊಱಪಾಯ್ದು ರಕ್ತರಸಖಂಡಂಗಳ್
ತುಱುಗಿರೆ ವರೂಥಿಗಳ್ಕಿಱಿ
ಮೆಱೆದರ್ಕುಸುಮಿತ ಜಪಾಕ್ಷಿ ತೇಜಂಗಳವೋಲ್ ೬೮

ಕಣೆ ಪಣೆಯೊಳ್ ನಡೆ ಕಿಳ್ತಾ
ಕಣೆಯಿಂದೆಚ್ಚವನ ಪಣೆಯನೊಡನಿಸೆ ಕಿಳ್ತಾ
ಕಣೆಯಂ ಮೊದಲಂತೆವೊಲಾ
ಪಣೆಯೊಳ್ನಾಂಟಿಸಿದನವನದೇಂ ಬಿನ್ನಣಿಯೋ ೬೯

ವ॥ ಇಂತದಿರದಿದಿರ್ಚಿ ಪೊಣರ್ಚುವ ವರೂಥಿಗಳ ತಂಡದ ಗಂಡುಗೊಂಡ ಬಂಡಣಮಂ ಕಂಡು ಪಿಂಡುಗೊಂಡು ಮಂಡಳಿಸಿ ದಂಡಿಗಾಂತ ಚಂಡಗಜಾರೋಹಕರುದ್ದಂಡ ವೇದಂಡಂಗಳನಳಂಕಿವೆತ್ತಂಕುಶಮನಿಕ್ಕಿ ಜಂಕಿಸಿ ಭೋಂಕನಣೆದಾರ್ದು ಸಾರ್ದೌಂಕಿ ಕೂಂಕಿ ನೂಂಕಿದಾಗಳ್

ಮುಂಬರಿದರು. ವ|| ಹಾಗೆ ತಮ್ಮ ರಥಗಳನ್ನು ಮುಂದಕ್ಕೆ ಓಡಿಸುತ್ತ ಎದುರಿಸಿ ನಿಂತು, ೬೭. ರಥಕ್ಕೆ ಕಟ್ಟಿದ ಕುದುರೆಗಳ ಕುತ್ತಿಗೆಗಳನ್ನು ಒಂದೇ ಬಾಣದಿಂದ ಕತ್ತರಿಸುತ್ತ, ಎತ್ತರವಾದ ಧ್ವಜಪಟದ ಮಣಿಮಯ ದಂಡವನ್ನು ಎರಡು ತುಂಡಾಗಿ ಮಾಡುತ್ತ, ಮುಂಭಾಗದಲ್ಲಿರುವ ರಥದ ಸಾರಥಿಯ ಎದೆಯನ್ನು ಸೀಳುತ್ತ, ಛತ್ರಿಯನ್ನು ಎರಡು ತುಂಡಾಗುವಂತೆ ಕತ್ತರಿಸುತ್ತ, ಪ್ರಸಿದ್ಧವಾದ ಉಕ್ಕಿನ ಕವಚವನ್ನು ಚುಚ್ಚಿ ಕತ್ತರಿಸುತ್ತ ಆ ರಥಿಕರು ಒಗ್ಗಟ್ಟಿನಿಂದ ಹೊಡೆದಾಡಿದರು. ೬೮. ಗರಿಯ ಬಾಣಗಳು ಪೂರ್ಣವಾಗಿ ತೂತುಗೊಳಿಸಿದ ತೆರಪಿನಲ್ಲಿ (ಪ್ರದೇಶದಲ್ಲಿ) ರಕ್ತ, ಮಾಂಸ ಖಂಡಗಳು ತುಂಬಿರಲಾಗಿ ಆ ರಥಿಕರು ಹೂಬಿಟ್ಟ ದಾಸವಾಳದ ಗಿಡಗಳ ಹಾಗೆ ಶೋಭಿಸಿದರು. ೬೯. ಒಂದು ಬಾಣವು ಒಬ್ಬನ ಹಣೆಯಲ್ಲಿ ನಡಲು, ಅವನು ಅದನ್ನು ಕಿತ್ತು ಹೊಡೆದವನ ಹಣೆಗೇ ನಡುವಂತೆ ಹೊಡೆಯಲಾಗಿ, ಅವನು ಅದನ್ನು ಕಿತ್ತು ಮೊದಲಿನ ಹಾಗೆ ಅದೇ ಸ್ಥಳದಲ್ಲಿ ಹಣೆಯಲ್ಲಿ ನಡುವಂತೆ ಪ್ರಯೋಗಿಸಿದನು. ಅವನು ಅದೆಂಥ ಚಮತ್ಕಾರವುಳ್ಳವನೋ ! ವ|| ಈ ರೀತಿ ಅಂಜದೆ ಎದುರಿಸಿ ಕಾದುತ್ತಿರುವ ರಥಿಕಸಮೂಹದ ಶೌರ್ಯಮಯ ಕಾಳಗವನ್ನು ನೋಡಿ, ಹಿಂಡುಹಿಂಡಾಗಿ ಸುತ್ತುವರೆದು ದಂಡಿನ ಸಮೀಪಕ್ಕೆ ಬಂದ ಕ್ರೂರಸ್ವಭಾವದ ಗಜಾರೋಹರಾದ ಶೂರರು ತಮ್ಮ ಔದ್ಧತ್ಯದಿಂದ ಕೂಡಿದ ಆನೆಗಳನ್ನು ಅಂಕೆಗೆ ತೆಗೆದುಕೊಂಡು ಅಂಕುಶವನ್ನು ಚುಚ್ಚಿ ಗಜರಿ ಒಮ್ಮೆಲೇ ಮುಂದಕ್ಕೆ ನಡೆಯಿಸಿ ಆರ್ಭಟ ಮಾಡುತ್ತ, ವೈರಿಗಳ ಸಮೀಪಕ್ಕೆ ಬಂದು ನುಗ್ಗಿ ಮೇಲೆ ಬೀಳುವಂತೆ

ಮ॥ ನಭದೊಳ್ ಮಿಳ್ಳಿಱಿದಾಡೆ ಸಿಂಗರದ ಸಿಂಧಂ ಡಿಂಡಿಮಧ್ವಾನಮು
ಣ್ಮೆ ಭಟಾನೀಕದ ಬೊಬ್ಬೆ ಪರ್ಬಿರೆ ಲುಠದ್ಘಂಟಾರವಂ ಪೊಣ್ಮೆ ಮೇ
ಣಿಭಯೂಥಂ ಪರಿದತ್ತು ನಿಶ್ಚಳಿತ ಕರ್ಣಂ ಕ್ಷಿಪ್ತಹಸ್ತಂ ರದ
ಪ್ರಭೆ ಚೆಲ್ವಾಗೆ ಮದಾಂಬು ಸೂಸೆ ಸಮರಕ್ರೀಡಾಮಹೋತ್ಸಾಹದಿಂ ೭೦

ಕಂ॥ ನೆಗಪಿ ಭರಿಕೆಯ್ಯನಬ್ದಾಂ
ಬುಗಳಂ ಬರೆ ಪೀರ್ದು ಕರ್ಣಚಾಲನದಿನವಂ
ಮಿಗೆ ಪರಿಯಿಪ ಮದಕರಿಗ
ಳ್ಪಗೆಗೊಂಡೊಡನೊಡ್ಡಿ ನಿಂದುವೆರಡುಂ ಬಲದೊಳ್ ೭೧

ವ॥ ಅಂತೊಡ್ಡಿ ನಿಂದು

ಮ॥ ಭರಿಕೈಯಿಂ ಭರಿಕೈಯನಾಂತು ಮುಱಿದೊತ್ತುತ್ತೆತ್ತಿ ಪತ್ತುತ್ತೆ ದೀ
ರ್ಘತರದಾಗ್ರಂಗಳಿನೊಂದನೊಂದಿಱಿಮ ಜೋದರ್ಬೊಬ್ಬಿಡಲ್ಮೇಲೆ ರ
ಕ್ತರಸಂ ವಕ್ತ್ರದಿನೆಚ್ಚುಪಾಯೆ ಮೊಳಕಾಲೊಳ್ದಂಡೆಗೊಂಡೊಡ್ಡಿ ನಿಂ
ದೆರಡುಂ ಪೆರ್ಬಲದಗ್ಗದಾನೆಗಳ ಮೊತ್ತಂ ತಾಗಿತಂತಾಜಿಯೊಳ್ ೭೨

ಮಾಡಿದಾಗ ೭೦. ಅಲ್ಲಾಡದಿರುವ ಕಿವಿಗಳುಳ್ಳವಾಗಿ, ಬೀಸುವ ಸೊಂಡಿಲುಳ್ಳವಾಗಿಸುವ ಯುದ್ಧದ ಆನೆಗಳ ಹಿಂಡು, ಆಕಾಶದಲ್ಲಿ ಪತಾಕೆಯು ಚಲಿಸುತ್ತಿರಲು, ಡಕ್ಕೆಯ ಶಬ್ದವು ಉಂಟಾಗುತ್ತಿರಲು, ಭಟಸಮೂಹದ ಚೀರಾಟವು ಹಬ್ಬಿರಲು, (ಕೊರಳಲ್ಲಿ) ನೇತಾಡುತ್ತಿರುವ ಗಂಟೆಗಳ ಶಬ್ದವು ಹೊರಹೊಮ್ಮುತ್ತಿರಲು, ಮತ್ತು ಹಲ್ಲುಗಳ ಕಾಂತಿಯು ಚೆಲುವಾಗಿರಲು, ಸೂಸುತ್ತಿರುವ ಮದೋದಕದಿಂದ ಕೂಡಿದ ಯುದ್ಧವೆಂಬ ಕ್ರೀಡಾಮಹೋತ್ಸಾಹದಿಂದ ಮುಂದೆ ಚಲಿಸಿತು. ೭೧. ಎರಡೂ ಬಲದ ಆನೆಗಳು ತಮ್ಮ ಸೊಂಡಿಲನ್ನು ಮೇಲಕ್ಕೆತ್ತಿ ಬರುತ್ತಿದ್ದವು. (ಆಗ) ಮೋಡಗಳಲ್ಲಿರುವ ನೀರನ್ನು ತಮ್ಮ ಚಾಚಿದ ಸೊಂಡಿಲುಗಳಿಂದ ಕುಡಿಯುತ್ತ, ಕಿವಿಗಳ ಚಲಿಸುವಿಕೆಯ ಗಾಳಿಯಿಂದ ಆ ಮೋಡಗಳನ್ನು ಮುಂದಕ್ಕೆ ಹಾರಿಸುತ್ತ, ಮದಿಸಿದ ಆನೆಗಳು ಯುದ್ಧೋತ್ಸಾಹದ ಮನಸ್ಸುಳ್ಳವುಗಳಾಗಿ ಎದುರಿಸಿ ನಿಂತುವು. ವ॥ ಈ ರೀತಿ ಎದುರಿಸಿ ನಿಂತು, ೭೨. ಎರಡೂ ಮಹಾಸೈನ್ಯದ ಶ್ರೇಷ್ಠಗಜಗಳು ತಮ್ಮ ಸೊಂಡಿಲಿನಿಂದ ಇನ್ನೊಂದರ ಸೊಂಡಿಲನ್ನು ಹಿಡಿದು ಮುರಿಯುತ್ತ, ಒತ್ತಿ ಎತ್ತುತ್ತ, ಒಂದರ ಮೇಲೊಂದು ಬೀಳುತ್ತಿದ್ದವು. ಉದ್ದವಾದ ತಮ್ಮ ದಂತಗಳ ತುದಿಯಿಂದ ಒಂದನ್ನೊಂದು ಇರಿಯುತ್ತಿದ್ದವು. ಮಾವಟಿಗರು ಮೇಲೆ ಕುಳಿತು ಚೀರಾಡುತ್ತಿದ್ದರು. ರಕ್ತದರಸವು ಬಾಯಿಂದ ಹೊರ ಹೊರಡುತ್ತಿತ್ತು. ಮೊಳಕಾಲುಗಳಿಂದ ನಡೆಯುತ್ತ ಸಮೀಪಕ್ಕೆ ಬಂದು ಎದುರಿಸುತ್ತ

ವ॥ ಮತ್ತಮಲ್ಲಿ

ಕಂ॥ ಪ್ರತಿರದನಿರದನಹತಿವಿಗ
ಳಿತವಿತತಕ್ಷತಜಜಳಮನುಗುತರ್ಪ ಮದೋ
ದ್ಧತ ಹಸ್ತಿರುಧಿರವೃಷ್ಟಿಯು
ನತಿಶಯಮೆನೆ ಕಱಿವ ಜಳದವೆನೆ ಕಣ್ಗೊಳಿಕುಂ ೭೩

ಉ॥ ಮುಂಬಿಡದೊಕ್ಕು ಕಾಳ್ಪುರಮದಾದ ಮದೋದಕದೊಂದುಗೂಡಿ ರ
ಕ್ತಾಂಬುರದ ಪೃಥಾತಲಪನೋದ್ಗಳಿತಂ ಪರಿಗೊಂಡು ಪಾಯ್ದು ತ
ಳ್ತಂಬುಜಮಿತ್ರಜಾಂಬು ಪರಿಮಿಶ್ರಿತ ಶೋಣನದೀಪ್ರವಾಹಮೆಂ
ದೆಂಬ ಬೆಡಂಗನಂಬರಚರಾಕ್ಷಿಗೆ ಬೀಱಿದುದಾ ರಣೋರ್ವಿಯೊಳ್ ೭೪

ವ॥ ಮತ್ತಮಲ್ಲಿ ರಣದೇವತೆಯನುದ್ದೇಶಿಸಿ

ಉ॥ ಸೂನಗಿಗತ್ತಿ ಬೆನ್ನ ನಡು ಬಾರೊಳೆ ಕೋದಿರೆ ಬೀರ ಸಿಂಗರಂ
ತಾನಪ್ಪುದರ್ೊಪ್ಪೆ ನೇಲ್ದು ಜಡಿದಾತ್ಮಕರಾಸಿಯನುರ್ಬೆ ಬೊಬ್ಬೆಗೊ
ಟ್ಟಾನೆಯ ಕೊಂಬದಾಗೆ ಸಿಡಿವಂಜರಮುದ್ಧೃತ ಹಸ್ತದಂಡಮಾ
ಬಾನೊಳೆ ತಳ್ತು ತೋಱೆ ಸಿಡಿಯಾಡುವ ಮಾಳ್ಕೆಯೊಳೊರ್ವನೊಪ್ಪಿದಂ ೭೫

ಆ ಯುದ್ಧದಲ್ಲಿ ಒಂದರ ಮೇಲೊಂದು ಬಿದ್ದವು. ವ॥ ಮತ್ತು ಅಲ್ಲಿ ೭೩. ವೈರಿ ಗಜದ ಹಲ್ಲಿನ ಚುಚ್ಚುವಿಕೆಯಿಂದ ಉಂಟಾದ ಗಾಯಗಳಿಂದ ವಿಶೇಷವಾಗಿ ಹೊರಹೊರಟು ಬರುತ್ತಿರುವ ಆ ರಕ್ತದ ಮಳೆಯು ಮದೋನ್ಮತ್ತ ಆನೆಗಳೆಂಬ ಮೋಡಗಳಿಂದ ಅತಿಶಯವಾಗಿ ಸುರಿಯುವ ಮಳೆಯೋ ಎಂಬಂತೆ ಶೋಭಿಸುತ್ತಿತ್ತು. ೭೪. ಆ ರಣಭೂಮಿಯಲ್ಲಿ (ಆನೆಗಳು ಒಂದನ್ನೊಂದು) ಹಲ್ಲುಗಳಿಂದ ಹೊಡೆದಾಡಿ ಯುದ್ಧ ಮಾಡುತ್ತಿರುವಾಗ ಅವುಗಳ ಮುಖದಿಂದ ಸುರಿಯುತ್ತಿರುವ ರಕ್ತವು ಮುಂದಕ್ಕೆ ಚಿಮ್ಮಿ ಹರಿಯುತ್ತಿತ್ತು. (ಅದು) ಅವುಗಳ ಸುರಿಯುತ್ತಿರುವ ಮದೋದಕ ಪ್ರವಾಹದೊಡನೆ ಒಂದುಗೂಡಿ, ಅಂಬುಜಮಿತ್ರನಾದ ಸೂರ್ಯಕುಮಾರಿ ಯಮುನಾನದಿಯ ಜಲದೊಡನೆ ಮಿಶ್ರಗೊಂಡ ಶೋಣಾ ಎಂಬ ಹೊಳೆಯ ಪ್ರವಾಹವೋ ಎಂಬ ಸೌಂದರ್ಯವನ್ನು ದೇವತೆಗಳ ನೇತ್ರಕ್ಕೆ ಉಂಟುಮಾಡುತ್ತಿತ್ತು. ವ॥ ಮತ್ತು ಅಲ್ಲಿ ರಣದೇವತೆಯನ್ನು ಕುರಿತು ೭೫. ಒಬ್ಬ ಯೋಧನ ಬೆನ್ನಿನ ಚರ್ಮದಲ್ಲಿ ಸೂನಗಿಯೆಂಬ ಕತ್ತಿ ಸಿಕ್ಕಿಕೊಂಡಿತ್ತು. ಆತನು ಶೌರ್ಯ ವೈಭವದಿಂದ ತನ್ನ ಕತ್ತಿಯನ್ನು ಒಂದು ಆನೆಯ ದಂತಕ್ಕೆ ಹೊಡೆದನು. ಅದು ಅಲ್ಲಿಯೇ ಸಿಕ್ಕಿಕೊಳ್ಳಲು ಈತನು ಜೋತಾಡುತ್ತಿದ್ದನು. ಆನೆಯ ದಂತವೇ ಸಿಡಿವಂಜರವಾಯಿತು. ಈ ಯೋಧನು ಸಿಡಿಯಾಡುತ್ತಿರುವನೋ ಎಂಬಂತೆ ಕಾಣಿಸಿದನು. (ರಂ) (ದೇವರಿಗಾಗಿ ಬೆನ್ನಿನ ಚರ್ಮದಲ್ಲಿ ಶಸ್ತ್ರವನ್ನು ಸಿಕ್ಕಿಸಿಕೊಂಡು ಅದನ್ನು ಒಂದು ಮರಕ್ಕೆ ಹಗ್ಗದಲ್ಲಿ ಕಟ್ಟಿ

ವ॥ ಅದಲ್ಲದೆಯುಂ

ಚಂ॥ ಇದಿರೊಳಿದಿರ್ಚಿನಿಂದ ಕಲಿಯಂ ಕರಿ ತನ್ನ ಕರಾಗ್ರದಿಂ ತುಡುಂ
ಕಿದುದಿರದಿಟ್ಟುದಾಗಸಕೆ ಮೇಣ್ಬರೆ ಕೊಂಬನವುರ್ಚಿ ಸಾರ್ಚಿದ
ತ್ತದಿರದವಂ ಕರಾಸಿಯೊಳೆ ತತ್ಕರವುಂ ಕಡಿದಲ್ಲಿ ಬಿಳ್ದನಾ
ಪದದೊಳೆ ತತ್ಕರೀಂದ್ರಶಿರದೊಳ್ ಸುರನಾರಿಯರೊಯ್ದರಾತನಂ ೭೬

ಉ॥ ಭೂರಿರಥಾಂಗಚೀತ್ಕೃತಿ ಧನುರ್ಗುಣಟಂಕೃತಿ ಮತ್ತವಾರಣ
ಸ್ಫಾರಕರಾಗ್ರಪೂತ್ಕೃತಿ ಭಟಸ್ಫುಟ ಹೂಂಕೃತಿ ವಾಜಿವಾಹಕೋ
ದಾರಕರಾಸಿ ಘಟ್ಟನಟಣತ್ಕೃತಿ ತಾಡಿತ ಖೇಟಕೌಘವಿ
ಸ್ತಾರಚಟಚ್ಚಟತ್ಕೃತಿ ಚಮತ್ಕೃತಿಯಾದುದು ಯುದ್ಧರಂಗದೊಳ್ ೭೭

ಚಂ॥ ಕರತಳಖಡ್ಗಘಟ್ಟನ ಸಮುದ್ಭವ ವಿಸ್ಫುರಿತಸ್ಫುಲಿಂಗವುಂ
ಬರತಳಮುಚ್ಚಳದ್ರುಧಿರ ಶಂಬರಸಂಭೃತಮುರ್ವಿರಂಗದ
ಶ್ವರಥಭಟೇಭಭೂರಿರವ ಸಂಗತಮೆಣ್ದೆಸೆಯಾಗೆ ಲೋಕಭೀ
ಕರವೆನಿಸಿತ್ತು ಭೂತಗಣ ಚಿತ್ತಮಹೋತ್ಸವಕಾರಣಂ ರಣಂ ೭೮

ನೇತಾಡುವ ಒಂದು ಭಯಂಕರ ಭಕ್ತಿಯ ರೀತಿಯೇ ಸಿಡಿಯಾಡುವಿಕೆ.) ೭೬. ಆನೆಯೊಂದು ನೇರವಾಗಿ ಎದುರಿಸಿ ನಿಂತ ಶೂರನೊಬ್ಬನನ್ನು ತನ್ನ ಸೊಂಡಿಲಿನಿಂದ ಸೆಳೆದು ಆಕಾಶಕ್ಕೆ ಬಿಸಾಡಿತು. ಅವನು ಆಕಾಶದಿಂದ ಕೆಳಕ್ಕೆ ಬೀಳುತ್ತಿರುವಾಗ ತನ್ನ ಹಲ್ಲುಗಳನ್ನು ಆನೆ ಚಾಚಿ ನಿಂತುಕೊಂಡಿತು. ಅವನು ಸುಮ್ಮನೆ ಬೀಳದೆ ತನ್ನ ಕೈಯ ಖಡ್ಗದಿಂದ ಆನೆಯ ಸೊಂಡಿಲನ್ನು ಕತ್ತರಿಸಿ ಕೂಡಲೇ ಆನೆಯ ತಲೆಯ ಮೇಲೆ ಬಿದ್ದನು. (ಇಂಥ ಶೂರನಾದ) ಆತನನ್ನು ದೇವಲೋಕದ ಕನ್ಯೆಯರು ಎತ್ತಿಕೊಂಡು ಹೋದರು. ೭೭. ವಿಶೇಷವಾದ ರಥಚಕ್ರಗಳ ಚೀತ್ಕಾರ, ಬಿಲ್ಲಿನ ಹೆದೆಯ ಟೇಂಕಾರ ಮತ್ತು ಆನೆಗಳ ವಿಸ್ತಾರವಾದ ಸುಂಡಿಲಿನ ತುದಿಯ ಫೂತ್ಕಾರ, ಶೂರರುಗಳ ಸ್ಪಷ್ಟವಾದ ಹೂಂಕಾರ, ಕುದುರೆ ಸವಾರರುಗಳ ಅತಿಶಯವಾದ ಕೈಯ ಖಡ್ಗಗಳ ಹೊಡೆತದಿಂದೇಳುವ ಟಣತ್ಕಾರ, ಬಾಣಗಳ ಸಮೂಹದ ಪರಸ್ಪರ ಹೊಡೆತದ ಫಲವಾಗಿ ಹೊರಹೊಮ್ಮುವ ಛಟತ್ಕಾರ, ಇವು ಆ ಯುದ್ಧಭೂಮಿಯಲ್ಲಿ ಚಮತ್ಕಾರದಿಂದ ಕೂಡಿದ್ದವು. ೭೮. ಭೂತ ಪಿಶಾಚಿಗಳ ಚಿತ್ತಕ್ಕೆ ಮಹಾಸಂಭ್ರಮವನ್ನುಂಟುಮಾಡುವುದಕ್ಕೆ ಕಾರಣೀಭೂತವಾದ ಆ ರಣರಂಗವು (ಹೀಗಿತ್ತು :) ಕರತಳದಲ್ಲಿರುವ ಖಡ್ಗಗಳ ತಾಕಲಾಟದಿಂದ ಮೇಲೇಳತಕ್ಕ ಕಿಡಿಗಳ ಸಮೂಹದಿಂದ ಆಕಾಶವು ಪ್ರಕಾಶಮಾನವಾಗಿತ್ತು. ಭೂಮಿಯು, ವಿಶೇಷವಾಗಿ ಹರಿಯುತ್ತಿದ್ದ ರಕ್ತಪ್ರವಾಹದಿಂದ ಕೂಡಿತ್ತು. ಕುದುರೆ, ರಥ, ಆನೆ, ಶೂರ ಕಾಲ್ದಳದವರ ಧ್ವನಿಯ ಸಮೂಹವು ಎಂಟು ದಿಕ್ಕುಗಳಿಗೂ ಹಬ್ಬಿ ಲೋಕಕ್ಕೆ ಭಯಂಕರವೆನ್ನುವ

ಇಡಿಕಿಱಿದಿರ್ದುದೆಲ್ಲೆಡೆಯೊಳಟ್ಟೆಗಳೊಟ್ಟಜೆ ಮೂಳೆಯೋಳಿ ಪೇ
ರಡಗುಗಳೇಱ ಕಾಳಿಜದ ಪಾಳಿ ತೊವಲ್ಗಳ ಸಾಲ್ಗಳಂಗದಂ
ಗಡಿ ಪೊಸಕಂಡದಿಂಡೆ ನೆಣದುಲ್ಪಣಮಂತ್ರದ ಮಂತಣಂ ಸಿಡಿ
ಲ್ದಿಡಿದುರು ರುಂಡಮಂಡಳಿ ಪೆಣಂಗಳ ಜಂಗುಳಿ ನೆತ್ತರೆಳ್ತರಂ ೭೯

ಕಂ॥ ರಿಪುವಿಜಯ ವಿಜಯನಿಭಭಟ
ಚಪಲ ಶರೋತ್ಕರ್ಷವರ್ಷದಿಂ ತೀವಿ ಜನಾ
ಸ್ಯಪರಂಪರೆಯಿಂ ಪಡೆದಂ
ವಿಪುಳಸರಿತ್ಪತಿ ಪೊದಳ್ದ ಶರನಿಧಿವೆಸರಂ ೮೦

ವ॥ ಇಂತಾಗಲೊಡನಾಗಳಿದಿರ್ಚಿ ಪೋಗದೆ ಸಮುಸಮರಂಗೆಯ್ವರಾತಿಬಲಮಂ ಕಂಡು ಕಾಯ್ಪುಗೊಂಡು ರಾಜಶೇಖರರಾಜೇಂದ್ರಂ ಮಿತವಚನಂಬೆರಸು ನಿಜಗಜೇಂದ್ರಮನಣೆದಲೆದು ನೂಂಕಿದಾಗಳ್

ಮ॥ಸ್ರ॥ ಘನಶುಂಡಾದಂಡಪಾತಚ್ಯುತ ಖರಕರಬಿಂಬಂಬೊಲಿಂಬಾಗೆ ಶುಂಭ
ತ್ಕನದುದ್ಯದ್ದರ್ಪಣಂ ಫಾಲದೊಳೆ ಸೃಣಿಚಲತ್ಕುಂಭಕೂಟಾಗ್ರ ಸಂಘ
ಟ್ಟನದಿಂ ಬಿಳ್ದರ್ಧಚಂದ್ರಂಬೊಲಿರೆ ಪೃಥುಶಿರೋಮಧ್ಯದೊಳ್ಮುಕ್ತದಾನಾಂ
ಬುನಿಯುಕ್ತಂ ಕರ್ಣಮಬ್ಜಂ ತೊಡರ್ದವೊಲಿರೆ ಕಣ್ಗೊಪ್ಪಿಬಂದತ್ತಿಭೇಂದ್ರಂ ೮೧

ಹಾಗೆ ಆಗಿತ್ತು. ೭೯. ಆ ರಣರಂಗವು ಎಲ್ಲ ಕಡೆಗೂ ಮುರಿದುಬಿದ್ದ ರುಂಡರಹಿತವಾದ ದೇಹಗಳ ರಾಶಿ, ಮೂಳೆಗಳ ಸಮೂಹ, ದೊಡ್ಡ ದೊಡ್ಡ ಮಾಂಸಗಳ ದಿಬ್ಬಗಳು, ಕರುಳುಗಳ ಸಾಲು, ತೊಗಲುಗಳ ಪಙ್ಕ್ತಿ, ಅವಯವಗಳ ಸಮೂಹ, ಹೊಸ ಹೊಸ ಕಂಡಗಳ ಉಂಡೆಗಳು, ನೆಣದ ಒಟ್ಟಿಲು, ನರಗಳ ಸಮೂಹ, ಸಿಡಿದುಬಿದ್ದ ತಲೆಗಳ ಸಮುದಾಯ, ಹೆಣಗಳ ಜಂಗುಳಿ, ನೆತ್ತರದ ಪ್ರವಾಹ–ಇವುಗಳಿಂದ ತುಂಬಿತ್ತು. ೮೦. ವಿಸ್ತಾರನಾದ ಸಮುದ್ರನಾಥನು ವೈರಿಗಳನ್ನು ಜಯಿಸುವುದರಲ್ಲಿ ಅರ್ಜುನನಿಗೆ ಸಮಾನರಾದ ಈ ಭಟರುಗಳ ಚಪಲವಾದ ಶ್ರೇಷ್ಠ ಬಾಣಗಳ ಎಸೆತದಿಂದ ತುಂಬಿದವನಾಗಿ, ಜನರ ಪರಂಪರೆಯಿಂದ 'ಶರನಿಧಿ' ಎಂಬ ಹೆಸರನ್ನು ಹೊಂದಿದನು. (ಶರ= ನೀರಿಗೆ ಮತ್ತು ಬಾಣಗಳಿಗೆ ನಿಧಿ) ವ|| ಇಂತು ಯುದ್ಧವು ಆಗುತ್ತಿರಲು ಎದುರುಬಿದ್ದು ಹಿಂಜರಿದು ಹೋಗದೆ ಸಮಸಮ ಯುದ್ಧಮಾಡುತ್ತಿರುವ ವೈರಿಗಳ ಸೈನ್ಯವನ್ನು ಕಂಡು ಸಿಟ್ಟಿಗೆದ್ದ ರಾಜಶೇಖರಮಹಾರಾಜನು ಮಿತವಚನ ಸಮೇತನಾಗಿ ತನ್ನ ಗಜಶ್ರೇಷ್ಠವನ್ನು ಗುರಿತೋರಿಸಿ ಚಪ್ಪರಿಸಿ ಮುಂದಕ್ಕೆ ನಡೆಸಿದಾಗ ೮೧. ರಾಜಶೇಖರನ ಆನೆಯು ನುಗ್ಗಿ ಬಂದಿತು. ಅದರ ಹಣೆಯಲ್ಲಿದ್ದ ಕನ್ನಡಿಯು ಸೊಂಡಿಲಿನ ಹೊಡೆತದಿಂದ ಬಿದ್ದ ಸೂರ್ಯಬಿಂಬದಂತೆಯೂ, ಶಿರೋದೇಶದಲ್ಲಿನ ಅಂಕುಶವು ಚಲಿಸುವ ಕುಂಭಸ್ಥಳದ ಸಂಘರ್ಷಣೆಯಿಂದ ಉದುರಿದ ಅರ್ಧಚಂದ್ರನಂತೆಯೂ, ಮದೋದಕದಿಂದ ಕೂಡಿದ ಕಿವಿಯು ಮೋಡದಂತೆಯೂ ಕಂಗೊಳಿಸಿತು. (ಆನೆಯು ಬಹಳ ಎತ್ತರವಾಗಿತ್ತೆಂದು ಅಭಿ

ವ॥ ಆ ಗಜೇಂದ್ರದಗ್ರದೊಳ್ ಪೊಣರ್ಕೆಗಾಂತುಬರ್ಪ ರಿಪುಬಲಬಲಾಹಕ ಪ್ರಬಲ ಜಂಝಾಪ್ರಭಂಜನನಂ ಕಂಡು ಸಿಂಹಳೇಂದ್ರಂ ಸಮರಸಮುತ್ಸಾಹಮಾನಸಂ ಮಾನ ಸಂಯುತಂ ತನ್ನ ಪನ್ನತಿಕೆವೆತ್ತ ಪಾರ್ಥಿವಕುಮಾರರೊಂದುಗೂಡಿ ಗಂಧಸಿಂಧುರಸ್ಕಂಧಾ ರೂಢನಾಗಿ ಕಡುವಹಿಲದಿನಿದಿರ್ಚಿ ಬರ್ಪಾಗಳ್

ಕಂ॥ ಬಡಬನಳುರ್ಕೆಯೊ ಭೈರವ
ನಡರ್ಪೊ ಮಿಳ್ತುವಿನ ದರ್ಪವೋ ವಿಳಯದ ಮುಂ
ಗಡೆಯ ಸಿಡಿಲೇಳ್ಗೆಯೋ ಮಾ
ರ್ಪಡೆಯೋಯೆಂದೆನೆ ಕಱುತ್ತು ತಾಗಿತ್ತಾಗಳ್ ೮೨

ಚಂ॥ ಪೊಡೆದುದು ಪೊಯ್ದುದಟ್ಟಿದುದು ಮೆಟ್ಟಿದುದಿಟ್ಟುದು ಪೊಟ್ಟೆಯಿಂ ಕರು
ಳ್ಗಡಣಸಿ ಪಾಯ್ದನಂ ತುಳಿದುದೆತ್ತಿದುದೊತ್ತಿದುದತ್ತಮಿತ್ತಲಂ
ಕೆಡಪಿದುದೀಳ್ದು ಸೀಳ್ದುದುಱೆ ತೂಳ್ದುದು ಪೇಳ್ದುದು ನೀಳ್ದಹಸ್ತದಿಂ
ಪಡಿಬಲಮಂ ಮಹಾರಣವಿದಾರಣದಾರುಣ ಮತ್ತವಾರಣಂ ೮೩

ಕಂ॥ ಗಿರಿಯನಿಱಿದಿಱಿದು ಕೆಡಪಿದೊ
ಡಿರದದಱಗ್ರದ ಮರಂಗಳುರುಳ್ವಂತಿರೆ ತ
ತ್ಕರಿ ಕರಿಯನಿಱಿದು ಕೆಡಪಿದೊ
ಡುರುಳ್ದರ್ ಜೋದರ್ ತದಗ್ರದಿಂ ರಣಧರೆಯೊಳ್ ೮೪

ಪ್ರಾ(ಯ) (ರಂ) ವ॥ ಈ ರೀತಿಯಿರುವ ಗಜಶ್ರೇಷ್ಠವನ್ನೇರಿ ಯುದ್ಧಕ್ಕೆದುರಾಗಿ ಬರುತ್ತಿರುವ ವೈರಿಗಳ ಸೈನ್ಯವೆಂಬ ಮೇಘಗಳಿಗೆ ಪ್ರಬಲವಾದ ಬಿರುಗಾಳಿಯಂತೆ ಇರುವ ರಾಜಶೇಖರಮಹಾರಾಜನನ್ನು ಸಿಂಹಳಭೂಪಾಲನು ಕಂಡು, ಯುದ್ಧೋತ್ಸಾಹದಿಂದ ಕೂಡಿದ ಮನಸ್ಸುಳ್ಳವನೂ, ಅಭಿಮಾನದಿಂದ ಕೂಡಿದವನೂ ಆಗಿ ಘನತೆಯಿಂದ ಕೂಡಿದ ರಾಜಕುಮಾರರುಗಳಿಂದ ಒಡಗೂಡಿಕೊಂಡು ತನ್ನ ಮದ್ದಾನೆಯ ಮೇಲೇರಿ ಅತಿಶೀಘ್ರವಾಗಿ ಎದುರಾಗಿ ಬಂದನು. ಆಗ, ೮೨. ವಡಭಾಗ್ನಿಯ ಆವರಿಸುವಿಕೆಯೋ, ಪ್ರಳಯ ಕಾಲಭೈರವನ ಆಸರವೋ, ಮೃತ್ಯುವಿನ ಶೌರ್ಯವೋ, ಪ್ರಳಯಕಾಲದ ಮೊದಲಿನ ಸಿಡಿಲುಗಳ ಆರ್ಭಟವೋ, ಎದುರು ಸೈನ್ಯವೋ ಎನ್ನುವ ಹಾಗೆ ಕೋಪಗೊಂಡು ಸೈನ್ಯವು ಮೇಲೆ ಬಿದ್ದಿತು. ೮೩. ಮಹಾರಣರಂಗದಲ್ಲಿ ಸಂಹರಿಸುವ ದಾರುಣ ಕಾರ್ಯದಲ್ಲಿ ನಿರತವಾದ ರಾಜಶೇಖರನ ಮದೋನ್ಮತ್ತವಾದ ಆನೆಯು ಎದುರುಬಲವನ್ನು ತನ್ನ ಉದ್ದವಾದ ಸೊಂಡಿಲಿನಿಂದ ಹೊಡೆಯಿತು, ಅಪ್ಪಳಿಸಿತು, ಅಟ್ಟಿಸಿಕೊಂಡುಹೋಗಿ ಮೆಟ್ಟಿ ಹಾಕಿತು, ಹಿಡಿದು ಬಿಸಾಡಿತು. ಹೊಟ್ಟೆಯ ಕರುಳುಗಳು ಒಟ್ಟಾಗಿ ಹೊರಬರುವಂತೆ ತುಳಿಯಿತು, ಮೇಲಕ್ಕೆತ್ತಿತು, ಅಮುಕಿತು, ಅತ್ತಿತ್ತ ಹೊಡೆದು ಕೆಡವಿತು, ಎಳೆದಾಡಿತು, ಸೀಳಿ ಇಬ್ಭಾಗಮಾಡಿತು, ಹೊಡೆದು ಹೋಳುಹೋಳಾಗಿ ಮಾಡಿತು. ೮೪. ಪರ್ವತಗಳನ್ನು ಇರಿದಿರಿದು ಕೆಡವುತ್ತಿದ್ದಾಗ ಆ ಗಿರಿಯ ಮೇಲಿರುವ ಗಿಡಗಳು ಹೇಗೆ ತಪ್ಪದೆ ಉರುಳುವುವೋ ಅದರ ಹಾಗೆ ರಾಜಶೇಖರನ ಆನೆಯು ಮತ್ತೊಂದು

ವ॥ ಮತ್ತಂ

ಕಂ॥ ಕಡುಪಿಂ ಕರಿ ನಿಜಕರದಿಂ
ಪಿಡಿಪಿಡಿದಿಟ್ಟುದು ಪೊಣರ್ಚಿದರಿಸುಭಟರನಿ
ಟ್ಟೆಡೆಗೊಂಡಚ್ಚರಸಿಯರಿ
ರ್ಪೆಡೆಗಿವಱೊಳಗಾಯ್ದು ಕೊಳ್ಳಿಮೆಂದೊಪ್ಪಿಪವೋಲ್ ೮೫

ವ॥ ಆಗಳ್ ಪ್ರಚಂಡಬಳನೆಂಬ ಸಿಂಹಳನ ಪಡೆವಳಂ ಪಡಿತಳಿಸುತಿದಿರ್ಚಿವರಲವ
ನಾರೋಹಿಸಿರ್ದ

ಕಂ॥ ರಥಮಂ ನುಗ್ಗೊತ್ತುತೆ ಸಾ
ರಥಿಯಂ ತೊಡೆವಿಡಿದಿಭಂ ನಭಕ್ಕಿಡೆ ದಿನಕೃ
ದ್ರಥದೊಳಗೆ ಬಿಳ್ದು ತತ್ಸಾ
ರಥಿಯೆನಿಸಿದನವನನೂರುವರುಣತೆಯಿಂದಂ ೮೬

ವ॥ ಅದಲ್ಲದೆಯುಮಾ ಪಡೆವಳನೂರುದಂಡಮಂ ಕದಳೀಕಾಂಡಮಂ ಮುಱಿವಂತೆ ಮುಱಿ
ದವನ ಭುಜಮಂ ಕರೀರಮಂ ಕೀಳ್ವಂತೆ ಕಿಳ್ತವನ ರುಂಡಮಂ ಪುಂಡರೀಕಮಂ ಪಱಿವಂತೆ
ಪಱಿದು ಕೊಳುಗುಳದಿಳೆಯೆಂಬ ಕೊಳದೊಳ್ತೊಡರ್ದ ನಳಿನನಾಳಂಗಳೆಂಬಂತೆ ನರರ ನರವಾಲೆ

ಆನೆಯನ್ನು ಹೊಡೆದು ಕೆಡವಿದಾಗ ಅದರ ಮೇಲೆ ಕುಳಿತ ಯೋಧರುಗಳು ಆ ರಣ ಭೂಮಿಯಲ್ಲಿ ಆ ಆನೆಯ ಮೇಲಿನಿಂದ ಉರುಳುರುಳಿ ಬೀಳುತ್ತಿದ್ದರು. ವ|| ಮತ್ತು ೮೫. ಅತ್ಯಂತ ಕೋಪದಿಂದ ಆ ಆನೆಯು ತನ್ನ ಸೊಂಡಿಲಿನಿಂದ ಎದುರಿಸಿದ ವೈರಿಗಳಾದ ಶೂರರುಗಳನ್ನು ಹಿಡಿಹಿಡಿದು ಹೊಡೆದು ಕೊಂದು, ಅಪ್ಸರಸ್ತ್ರೀಯರು ಇರುವ ಕಡೆಗೆ ಇವರಲ್ಲಿ ನಿಮಗೆ ಬೇಕಾದವರನ್ನು ಆರಿಸಿಕೊಳ್ಳಿರೆಂದು ಒಪ್ಪಿಸುವ ಹಾಗೆ ಮೇಲಕ್ಕೆ ಬಿಸಾಡುತ್ತಿತ್ತು. ವ॥ ಆಗ 'ಪ್ರಚಂಡ ಬಳ' ಎಂಬ ಹೆಸರಿನ ಸಿಂಹಳ ಮಹಾರಾಜನ ಸೇನಾಪತಿಯು ಪ್ರತಿಭಟಿಸುತ್ತ ಎದುರುಬಿದ್ದು ಬರುತ್ತಿದ್ದನು. ಆತನು ಏರಿದಂಥ ೮೬. ರಥವನ್ನು ರಾಜಶೇಖರನ ಆನೆಯು ನುಚ್ಚುನೂರಾಗುವಂತೆ ತುಳಿಯುತ್ತ, ಸಾರಥಿಯ ತೊಡೆಯನ್ನು (ಸೊಂಡಿಲಿನಿಂದ) ಹಿಡಿದು ಆಕಾಶಕ್ಕೆ ತೂರುತ್ತಿರಲು, (ಆ ಶೂರನು ತೊಡೆ ಮುರಿದುಕೊಂಡು ಹೋಗಿ) ಸೂರ್ಯನ ರಥದಲ್ಲಿ ಹೋಗಿ ಬೀಳುತ್ತಿದ್ದನು. (ಅವನು ಆಗ) ತೊಡೆಯಿಲ್ಲದ ಸೂರ್ಯನ ಸಾರಥಿಯಾದ ಅರುಣನೆಂದೆನಿಸಿದನು. ವ|| ಹಾಗೂ ಅಲ್ಲದೆ ಆ ಪ್ರತಿಬಲದ ಸೇನಾಧಿಕಾರಿಯ ದಂಡೋಪಮವಾದ ತೊಡೆಗಳನ್ನು ಬಾಳೆಯ ಕಂಬವನ್ನು ಮುರಿದುಹಾಕುವ ಹಾಗೆ ಮುರಿಯುತ್ತ, ಅವನ ಭುಜಗಳನ್ನು ಬಿದಿರಿನ ಕಳಲೆಯನ್ನು ಕೀಳುವಂತೆ ಕಿತ್ತು ಹಾಕುತ್ತ, ಅವನ ಶಿರಸ್ಸನ್ನು ಕಮಲದ ಹೂವನ್ನು ಹರಿದು ಹಾಕುವಂತೆ ಹರಿದು ಹಾಕಿತು. ಯುದ್ಧಭೂಮಿಯೆಂಬ

ಮುಂಗಾಲೊಳ್ತೊಡರೆ ಮಾಲೆಸರಪಳಿಯಂತೆ ಬಳ್ಳಿಗರುಳ್ ಪಿಂಗಾಲೊಳೆಳಲ್ದು ಬರೆ ಭರಂಗೊಂಡೋಜೆಯಿಂ ಬರ್ಪ ರಾಜಶೇಖರಕರೀಂದ್ರದಿದಿರೊಳ್ ಸಿಂಹಳೇಂದ್ರಂ ನಿಜಗಜಮಂ ಪರಿಯಿಸಿ ನಿಂದು ಚಂಡಕೋದಂಡಮನಡಸಿ ಪಿಡಿದು

ಚಂ॥ ಪಟುಭುಜನೊತ್ತಿ ಜೇವೊಡೆದು ಸಿಂಜಿನಿಯಂ ಸೆಳೆದಾರ್ದು ಸಾರ್ದು ಸಂ
ಘಟಿಸಿ ತೊಡರ್ಚುತೆಚ್ಚೊಡರಿಸಿಂಹಳನೆಯ್ದುವ ಲೋಕಭೀಕರೋ
ತ್ಕಟರಟನಾಸ್ತ್ರಮಂ ತಱಿದನೊಂದೆ ಶರಾಗ್ರದೆ ಮಧ್ಯದೊಳ್ಮಹಾ
ಭಟರಿರದಾರೆ ನಿರ್ಜರರಿದಚ್ಚರಿಯೆಂದೆನೆ ರಾಜಶೇಖರಂ ೮೭

ವ॥ ಅಂತವಂ ತಱಿದುರುಳ್ಚೆ

ಉ॥ ಕಂಡರೊಳಿಂತುಟಪ್ಪ ಕಡುಸಾಹಸಿ ಕೇಳ್ವರೊಳಿಲ್ಲವೆಂದು ಮುಂ
ಕೊಂಡತುಳಪ್ರತಾಪನಿಧಿ ಸಿಂಹಳಭೂಪತಿ ಮೆಚ್ಚಿ ಚಂಡಕೋ
ದಂಡಮನಾರ್ಪಿನಿಂ ಸೆಳೆದು ಬೊಬ್ಬಿಱಿದೆಚ್ಚನತುಚ್ಛಬಾಣಮಂ
ಖಂಡಿಸಿದಂ ಬಳಿಕ್ಕಮದನಂತರದೊಳ್ ನಿಜಬಾಣದಿಂ ನೃಪಂ ೮೮

ಸರೋವರದಲ್ಲಿ ತೊಡಕು ತೊಡಕಾಗಿ ಹಬ್ಬಿರುವ ತಾವರೆಯ ನಾಳಗಳೋ ಎಂಬಂತಿರುವ ಮನುಷ್ಯರುಗಳ ನರಗಳ ಮಾಲೆಯು ಮುಂಗಾಲಿಗೆ ತೊಡುಕುಹಾಕಿಕೊಂಡಿತ್ತು. ಮಾಲಾಕಾರವಾದ ಸರಪಳಿಯ ಹಾಗೆ ಬಳ್ಳಿಯಂತಿರುವ (ಆ ಸೈನಿಕರ) ಕರುಳುಗಳು ಹಿಂಗಾಲಿಗೆ ತೊಡರಿ ಅವನ್ನು ಎಳೆದುಕೊಂಡು ಬರುತ್ತಿತ್ತು. (ಹೀಗೆ) ಯುದ್ಧೋತ್ಸಾಹದ ಭರಾಟೆಯಿಂದ ಬರುತ್ತಿದ್ದ (ರಾಜಶೇಖರಮಹಾರಾಜನ ಗಜಶ್ರೇಷ್ಠದ ಎದುರಿನಲ್ಲಿ ಸಿಂಹಳರಾಜನು ತನ್ನ ಆನೆಯನ್ನು ಓಡಿಸಿಕೊಂಡು ಬಂದು ನಿಂತು), ತನ್ನ ಭಯಂಕರವಾದ ಬಿಲ್ಲನ್ನು ಬಲವಾಗಿ ಹಿಡಿದುಕೊಂಡು ೮೭. ಸಮರ್ಥವಾದ ಭುಜಗಳುಳ್ಳವನಾದ ಸಿಂಹಳರಾಜನು ತನ್ನ ಬಿಲ್ಲಿನ ಸಿಂಜಿನಿಯನ್ನೆಳೆದು ಠೇಂಕಾರಮಾಡಿ ಪೂರ್ಣವಾಗಿ ಜಗ್ಗಿ ಆರ್ಭಟಿಸಿ ಬಾಣವನ್ನು ಹೆದೆಗೇರಿಸಿ ಪ್ರಯೋಗಿಸಲಾಗಿ, ಸಿಂಹಳ ಮಹಾರಾಜನಿಂದ ಬಿಡಲ್ಪಟ್ಟ ಜಗದ್ಭೀಕರವಾಗಿರುವ ತಾಗಿ ಹಿಂತಿರುಗುವ (ರಟನ) ಅಸ್ತ್ರವನ್ನು ಮಧ್ಯಮಾರ್ಗದಲ್ಲಿ ಒಂದೇ ಬಾಣದಿಂದ ದೇವತೆಗಳೆಲ್ಲ ಇದೊಂದು ಆಶ್ಚರ್ಯ ! ಎನ್ನುತ್ತಿರುವ ಹಾಗೆ ಮತ್ತು ಮಹಾಭಟರುಗಳೆಲ್ಲ (ಹೆದರಿ) ಯುದ್ಧಭೂಮಿಯಿಂದ ಓಡಿಹೋಗುವಂತೆ ರಾಜಶೇಖರನು ಕತ್ತರಿಸಿ ಹಾಕಿದನು. ವ॥ ಅಂತು ಅವನು ಕತ್ತರಿಸಿ ಕೆಡಹಲಾಗಿ ೮೮. ಅಪ್ರತಿಹತ ಶೌರ್ಯನಿಧಿಯಾದ ಸಿಂಹಳೇಂದ್ರನು (ನಾನು) ಕಂಡವರಲ್ಲಿ, ಕೇಳಿದವರಲ್ಲಿ ಇಂತಹ ವಿಶೇಷ ಪರಾಕ್ರಮಿಯು ಇಲ್ಲವೆಂದು ಶ್ಲಾಘಿಸುತ್ತ, ಮುಂದುವರಿದು ಬಂದು ತನ್ನ ಬಿಲ್ಲನ್ನು ಅತ್ಯಂತ ಪರಾಕ್ರಮದಿಂದ ಸೆಳೆದು ಬೊಬ್ಬಿಟ್ಟು ಶ್ರೇಷ್ಠವಾದ ಬಾಣವೊಂದನ್ನು ಪ್ರಯೋಗಿಸಿದನು. ಬಳಿಕ ರಾಜಶೇಖರನು ತನ್ನ ಬಾಣದಿಂದ ಆ

ವ॥ ಅಂತು ಖಂಡಿಸುತಖಂಡಪ್ರತಾಪಂ ಗಂಡುಗೊಂಡಿದಿರ್ಚಿನಿಂದ ಸಿಂಹಳೇಂದ್ರನದಟಂ ಕಂಡು

ಮ॥ಸ್ರ॥ ಪಟುಕೋಪಾಟೋಪಬದ್ಧಭ್ರುಕುಟಿ ವಿಚಲಿತಶ್ಮಶ್ರುಘರ್ಮಾಂಬುಬಿಂದು
ಸ್ಫುಟಫಾಲಂ ಪದ್ಮರಾಗಾರುಣ ವಿಕಟಕಟಾಕ್ಷಂ ಧನುರ್ಜ್ಯಾಲತಾ ಸಂ
ಘಟಿತಾಮೋಘಾಸ್ತ್ರದಿಂ ತತ್ಕರಟಬಿದುವನಾರ್ದೆಚ್ಚಂತೆ ಮುಂ ಧೂ
ರ್ಜಟಿಪುತ್ರಂ ಕ್ರೌಂಚಮಂ ಪಂಚಮೆನೆ ರಿಪುಮಹಾಕಲ್ಪಕಾಲಾಗ್ನಿರುದ್ರಂ ೮೯

ವ॥ ಅಂತೆಚ್ಚ ಶರಂ ಪಿಂಚಕದೊಳ್ ನಟ್ಟುರ್ಚಿ ಪಾಯೆ ಪಡಲಿಡುವ ನಿಜಗಜದಿನಿಳಿಗೆ ಧುಮ್ಮಿಕ್ಕಿ ಹಮ್ಮುಗೆಡದೆ ಧೀರಸಾರಥಿ ಸಾರ್ಚಿದ ರಥಮನೇಱಿದಾಗಳ್ ಧರ್ಮಯುದ್ಧಕ್ಕೆ ಮನವಿತ್ತು ರಾಜಶೇಖರನಮರಗಿರಿಯನಿಳಿದಿಳಾರಥಮನಾರೋಹಿಪ ಭವನ ವಿಭವಮಂ ತಳೆದಿಭ ಮಸ್ತಕದಿನಿಳಿಗವತರಿಸಿ ಮಣಿರಥಮನಾರೋಹಿಸಿ ಸಾರ್ಕೆಗೆ ಪನ್ನತಿಕೆಮಿಗೆ ಪರಿಯಿಪಾಗಳ್ ಸಿಂಹಳೇಂದ್ರಂ ಕೆರಳ್ದು ನೋಡಿ

—

ಬಾಣವನ್ನು ಕತ್ತರಿಸಿ ಹಾಕಿದನು. ವ|| ಈ ರೀತಿ ಖಂಡಿಸುತ್ತ ಅಖಂಡ ಪರಾಕ್ರಮ ಶಾಲಿಯಾದ ರಾಜಶೇಖರನು ಶೌರ್ಯದಿಂದ ಎದುರಿಸಿ ನಿಂತ ಸಿಂಹಳನರೇಂದ್ರನ ಸಾಮರ್ಥ್ಯವನ್ನು ನೋಡಿ, ೮೯. ತೀಕ್ಷ್ಣವಾದ ಕೋಪದ ಅಟ್ಟಹಾಸದಿಂದ ಹುಬ್ಬು ಗಂಟಿಕ್ಕಿ, ಅದುರುತ್ತಿರುವ ಮೀಸೆ, ಬೆವರಿನಿಂದ ಕೂಡಿದ ಸ್ಪಷ್ಟವಾದ ಹಣೆ, ಪದ್ಮರಾಗ ಮಣಿಯು ಹಾಗೆ ಅರುಣ್ಯವರ್ಣದ ಭಯಂಕರ ನೇತ್ರಗಳು ಇವುಗಳಿಂದ ಕೂಡಿ ತನ್ನ ಧನುಸ್ಸಿನ ಹೆದೆಗೆ ಏರಿಸಿದ ಅಮೋಘವಾದ ಬಾಣವನ್ನು ಬಿಟ್ಟು, ಈಶ್ವರಪುತ್ರನಾದ ಷಣ್ಮುಖನು ಕ್ರೌಂಚಪರ್ವತವನ್ನು ಮನೋಹರವೆನ್ನುವಂತೆ ಕತ್ತರಿಸಿದ ಹಾಗೆ, ವೈರಿ ಗಳೆಂಬ ಮಹಾಕಲ್ಪದ ಅವಸಾನಕ್ಕೆ ಕಾಲಾಗ್ನಿರುದ್ರನಂತಿರುವ ರಾಜಶೇಖರಮಹಾ ರಾಜನು ಆ ಸಿಂಹಳೇಂದ್ರನ ಆನೆಯ ಕುಂಭಸ್ಥಳವನ್ನು ಕತ್ತರಿಸಿದನು. ವ|| ಆ ರೀತಿ ಬಿಟ್ಟ ಬಾಣವು ಆನೆಯ ಕುಂಭಸ್ಥಳದಲ್ಲಿ ನಟ್ಟು ಕೊರೆದುಕೊಂಡು ಒಳಗೆ ಹಾಯ್ದು ಹೋಗಲು, ನೆಲಕ್ಕೆ ಬೀಳುವ ತನ್ನ ಆನೆಯಿಂದ (ಆ ಸಿಂಹಳೇಂದ್ರನು) ನೆಲಕ್ಕೆ ಹಾರಿ, ಧೈರ್ಯಗೆಡದೆ ಧೀರನಾದ ಸಾರಥಿಯು ಮುಂದೊಡ್ಡಿನಿಂತ ರಥವನ್ನು ಹತ್ತಿದನು. ಆಗ ರಾಜಶೇಖರ ಮಹಾರಾಜನು ಧರ್ಮಯುದ್ಧಕ್ಕೆ ಮನಸ್ಸುಮಾಡಿ, ಮೇರುಪರ್ವತದಿಂದಿ ಳಿದು, ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡು, ಅದರ ಮೇಲೆ ಆರೋಹಣಮಾಡುವ ಪರಮೇಶ್ವರನ ವೈಭವಕ್ಕೆ ಸಮಾನವಾಗಿ ಆನೆಯಿಂದ ಭೂಮಿಗಿಳಿದು ಮಣಿರಥವನ್ನು ಹತ್ತಿ, ಯುದ್ಧಕ್ಕೆ ವಿಶೇಷಘನತೆಯಿಂದ ರಥವನ್ನು ಓಡಿಸುತ್ತಿರಲು, ಸಿಂಹಳೇಂದ್ರನು

ಕಂ॥ ಬಲಯುತರೇಳ್ನೂರ್ಗಾವುದ
ದಳವಿಯೊಳೋಲೈಪರರಸರಖಿಳರ್ ಕರ್ಪಂ
ಗಳನೀವರೆಂಬ ನಿನ್ನ
ಗ್ಗಳಿಕೆಯದೇಂ ಸಿಂಹಳೇಂದ್ರನೊಳ್ ಕೊಂಡಪುದೇ ೯೦

ಚಂ॥ ಗುಹೆಯೊಳಗಿರ್ದ ಕೇಸರಿಯನಾಸುರದಿಂ ವನದಂತಿ ಸೊರ್ಕಿ ಬಂ
ದಹಹ ಕೆರಳ್ಚಿ ಜೀವಿಕುಮೆ ನೀನದಱಂತಿರೆ ವಾರ್ಧಿಮಧ್ಯಮ
ದ್ಗೃಹದೊಳೆ ಸಂತವೊಪ್ಪುವನನೆನ್ನನೀಳೇಶ್ವರ ನೀಂ ಕೆರಳ್ಚಿ ಮೇ
ಣ್ಪ್ರಹತಿಯನಾನದೆಯ್ದುವೆಯದೆಂತೆಲೆ ತೀರ್ಚದೆ ನಿನ್ನನಿರ್ಪನೇ ೯೧

ವ॥ ಎನೆ ಸಮರಷಣ್ಮುಖಂ ಸರೋಷಹಸನಮುಖನಾಗಿ ಮಗುಳ್ದಿಂತೆಂದಂ

ಕಂ॥ ಜಳನಿಧಿಯನುಳಿದು ನೀಂ ಕೊಳು
ಗುಳಕೆಯ್ದಿದೆ ಕೈದುಗೊಂಡು ಮದವಿಹ್ವಳ ಸಿಂ
ಹಳ ಭಾಪು ತೋರ್ಪೆನೆಲೆ ಕೈ
ಚಳಕಮನೊಂದಿನಿತು ಸೈರಿಸೈ ರಣದೆಡೆಯೊಳ್ ೯೨

ಸಿಂಹಳಭೂಪತಿ ನಿಜದೆ ನೃ
ಸಿಂಹಂ ನೀನಲ್ತೆ ನಿನ್ನನಾವಹದೆಡೆಯೊಳ್
ಸಂಹರಿಸಿ ಶರಭವಿಕ್ರಮ
ಮಂ ಹರಸುತನಾದುದರ್ಕೆ ತೋರ್ದಪೆನೀಗಳ್ ೯೩

ಕೋಪದಿಂದ ನೋಡಿ, ೯೦. "ಏಳುನೂರು ಗಾವುದ ಪರಿಮಿತಿಯಲ್ಲಿರುವ ಬಲಯುತರಾದ ಅರಸರು ಓಲೈಸಿ ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದಾರೆ ಎನ್ನುವ ನಿನ್ನ ಶ್ರೇಷ್ಠತೆಯದು ಸಿಂಹಳೇಂದ್ರನಲ್ಲಿ ನಡೆದೀತೆ ? (ಅಂದರೆ ನಾನು ಎಲ್ಲರಂತೆ ನಿನಗೆ ಕಪ್ಪವನ್ನು ಕೊಡುವವನಲ್ಲ ಎಂಬ ಭಾವ) ೯೧. ಗುಹೆಯಲ್ಲಿರುವ ಸಿಂಹವನ್ನು ಮದದಿಂದ ಅರಣ್ಯದ ಆನೆಯು ಬಂದು ಸೊಕ್ಕಿನಿಂದ ಕೆಣಕಿ ಅಹಾ ! ಜೀವಿಸಲು ಶಕ್ಯವೇ ? ನೀನು ಅದರ ಹಾಗೆಯೆ ಸಮುದ್ರಮಧ್ಯದಲ್ಲಿ ನನ್ನ ಮನೆಯಲ್ಲಿ ಸಂತೋಷದಿಂದಿರುವಂಥ ನನ್ನನ್ನು ಎಲೈ ಅರಸನೇ, ಕೋಪಗೊಳಿಸಿ ನನ್ನ ವಿಶೇಷವಾದ ಹೊಡೆತವನ್ನು ತಿನ್ನದೆ ಹಿಂದಕ್ಕೆ ಹೋಗುವೆಯಾ ! ನಿನ್ನನ್ನು ತೀರಿಸದೆ ಇರುತ್ತೇನೆಯೆ ?" ವ|| ಹೀಗೆಂದು ಸಿಂಹಳೇಂದ್ರನು ಹೇಳಲು ಸಮರದಲ್ಲಿ ಷಣ್ಮುಖನಿಗೆ ಸಮಾನವಾದ ರಾಜಶೇಖರಮಹಾರಾಜನು ಕೋಪದಿಂದ ಕೂಡಿದ ನಗುಮುಖದವನಾಗಿ ಪುನಃ ಹೀಗೆ ಹೇಳಿದನು : ೯೨. "ಮದದಿಂದ ಮದಿಸಿದ ಎಲೈ ಸಿಂಹಳಾಧೀಶನೇ, ಸಮುದ್ರವನ್ನು ಬಿಟ್ಟು ನೀನು ಆಯುಧ ಹಿಡಿದು ಯುದ್ಧಕ್ಕೆ ಬಂದಿದ್ದೀಯೆ. ಭಾಪು ! ಸ್ವಲ್ಪಮಟ್ಟಿಗೆ ರಣಮುಖದಲ್ಲಿ ನನ್ನ ಕೈಚಳಕವನ್ನು ತೋರಿಸುತ್ತೇನೆ, ಸೈರಿಸಿಕೋ. ೯೩. ಸಿಂಹಳಭೂಪತಿಯೇ, ನಿಜವಾಗಿಯೂ ನೀನು ನರಸಿಂಹನೇ ಆಗಿದ್ದೀಯೆ, ಅಲ್ಲವೆ ? ಹರನ ವರಪ್ರಸಾದಬಲದಿಂದ ಹುಟ್ಟಿ ಹರನಪುತ್ರನೇ ಎನಿಸಿದ ನಾನು ನಿನ್ನನ್ನು ಯುದ್ಧಮುಖದಲ್ಲಿ ಸಂಹಾರಮಾಡಿ

ವ॥ ಎಂದು ಮುಟ್ಟಿ ಮೂಧಲಿಸಿ

ಕಂ॥ ಪೃಥುಳಭುಜಬಳವಿಜಿತ ದಶ
ರಥಸುತನಪ್ರತಿಮಗುಣಗಣಾಂಕಂ ಗುಣಮಂ
ಪ್ರಥಿತ ಶರಾಸನಕೇಱಿಸಿ
ಪೃಥಿವೀಶ್ವರಪುತ್ರನೊತ್ತಿ ಜೇವೊಡೆಯಲೊಡಂ ೯೪

ಮ॥ ಅದಱುದ್ಯಧ್ವನಿ ಪೊಯ್ಯೆ ಮೇಗಣುಡುಜಾಳಂ ಕಳ್ಕನೊಕ್ಕಂತದೊ
ಕ್ಕುದು ಚಂಚತ್ಸುಮನಃಪ್ರಮುಕ್ತಸುಮನೋವರ್ಷಂ ಪ್ರತಿಧ್ವಾನಮ
ಣ್ಮೆದುದೆಂಬಂತಿರೆ ಪೊಣ್ಮೆದತ್ತಮರಭೇರೀದಾಂಧಳಧ್ವಾನಮ
ಭ್ರದೊಳಾ ಬಲ್ಪಿನುಗೊಲ್ದು ಪೂಡಿದನಮೋಘತ್ರಾಣಮಂ ಬಾಣಮಂ ೯೫

ವ॥ ಅಂತು ಪೂಡಿ ನೀಡಡಿಗೊಂಡು ತೆಗೆನೆಱೆದು ನಿಂದಾಗಳ್

ಉ॥ ಕರ್ಣಸಹಾಯಮಂ ಪಡೆಯದಂದಿರದೆಯ್ದಿದ ಸರ್ಪಬಾಣಮಾ
ಪೂರ್ಣಮನೋರಥಂಬಡೆದುದಿಲ್ಲೆನುತಂ ಬಿದುರತ್ನಮಂಡನಾ
ಕೀರ್ಣರುಚಿಪ್ರಬದ್ಧಕವಚಾನ್ವಿತ ಕರ್ಣಸಹಾಯಮಂ ಗುಣೋ
ದೀರ್ಣತೆಯಿಂದೆ ಪೊಂದಿತೆನೆ ತನ್ನಿಕಟಸ್ಥಿತಮೇಂ ಮನೋಜ್ಞಮೋ ೯೬

(ಶರಭಾವತಾರಮಾಡಿ ನಾರಸಿಂಹನನ್ನು ಕೊಂದ ಶಿವನ ಹಾಗೆ) ಶರಭಾವತಾರದ ಪರಾ ಕ್ರಮವನ್ನೇ ಈಗ ತೋರಿಸುತ್ತೇನೆ." ವ।। ಎಂದು ಮನಮುಟ್ಟಿ ಪೂದಲಿಕೆ ಮಾಡಿ ೯೪. ಅಧಿಕವಾದ ತೋಳ್ಬಲದಿಂದ ದಶರಥಕುಮಾರನಾದ ಶ್ರೀರಾಮಚಂದ್ರನನ್ನು ಮೀರಿಸಿದಂತಹವನೂ, ಪ್ರತಿಯಿಲ್ಲದ ಗುಣಗಳ ಸಮೂಹವೇ ಗುರುತಾಗುಳ್ಳವನೂ, ರಾಜ ಪುತ್ರನೂ ಆದ ಆ ರಾಜಶೇಖರಮಹಾರಾಜನು ಪ್ರಸಿದ್ಧವಾದ ತನ್ನ ಬಿಲ್ಲಿಗೆ ಹೆದೆಯನ್ನೇ ರಿಸಿ ಒತ್ತಿಹಿಡಿದು ಠೇಂಕಾರ ಮಾಡಿದೊಡನೆಯೇ, ೯೫. ಆ ಬಿಲ್ಲಿನ ಠೇಂಕಾರ ಧ್ವನಿಯ ಹೊಯ್ಲಿನಿಂದ, ಆಕಾಶದಲ್ಲಿದ್ದ ನಕ್ಷತ್ರಸಮೂಹವು ಮಿಂಚುತ್ತಿರುವ ಹೂವು ಗಳನ್ನು ದೇವತೆಗಳು ಉದುರಿಸುತ್ತಿರುವರೋ ಎಂಬಂತೆ ತಟ್ಟನೆ ಉದುರಿದುವು. ಆ ಧನುಷ್ಟಂಕಾರಧ್ವನಿಯಿಂದ ಪ್ರತಿಧ್ವನಿಯುಂಟಾಯಿತೋ ಎಂಬಂತೆ, ದೇವಲೋಕದ ಭೇರಿಗಳ 'ದಾಂಧಳ' ಎನ್ನುವ ಧ್ವನಿಯು ಯಥಾರ್ಥವೆಂಬ ರೀತಿಯಲ್ಲಿ ಉಂಟಾಯಿತು. ಅಂತಹ ಘನವಾದ ಧನುಸ್ಸಿಗೆ ಅಕ್ಕರೆಯಿಂದ ಅಮೋಘಶಕ್ತಿಯ ಒಂದು ಬಾಣವನ್ನು (ಆ ರಾಜಶೇಖರನು) ಹೂಡಿದನು. ವ।। ಹಾಗೆ ಮಾಡಿ, ಮುಂದಕ್ಕೆ ಕಾಲು ಚಾಚಿ ಬಾಗಿಸಿ ನಿಂತು, ಸಿಂಜಿನಿಯನ್ನು ಜಗ್ಗಿ ಗುರಿಯುಟ್ಟು ನಿಂತಾಗ ೯೬. ಹಿಂದೆ ಕರ್ಣಾರ್ಜುನ ಯುದ್ಧಸಮಯದಲ್ಲಿ ಸರ್ಪಬಾಣವು (ಎರಡನೆಯ ಸಲ) ಕರ್ಣನ ಸಹಾಯವನ್ನು ಪಡೆಯದಿದ್ದುದರಿಂದ 'ಮನೋರಥವನ್ನೀಡೇರಿಸಿಕೊಳ್ಳಲಾಗಲಿಲ್ಲ' ಎಂದು ಈ ರಾಜ ಶೇಖರನ ಬಾಣವು, ಬಿಗಿದು ಧರಿಸಿದ ಕವಚವುಳ್ಳ ರಾಜಶೇಖರನ ಕರ್ಣದ ನೆರವನ್ನು ಪಡೆಯಲೋಸ್ಕರ ಹೆದೆಯ ಎಳೆಯುವಿಕೆಯಿಂದ ಮತ್ತು ಗುಣದ ಅತಿಶಯದಿಂದ ಕರ್ಣದ

ವ॥ ಅಂತಾ ಬಾಣಮಂ ರಿಪುಮುಖವಿದಾರಣ ವೀರಭದ್ರಂ ರೌದ್ರಂ ಮಿಗೆ ಮಾಣ
ದೆಚ್ಚಾಗಳ್

ಕಂ॥ ಕಡಿದುದವನೆಚ್ಚ ಕಣೆಗಳ
ನೆಡೆಯೊಳ್ ಪಡಿತಳಿಸಿ ಪೊಕ್ಕು ತತ್ಸೂತನ ಪೇ
ರೊಡಲನೊಡೆದುರ್ಚಿ ಪಾಯ್ದುದು
ಬಿಡೆ ನೆತ್ತರ ಸೆಱೆ ತದಂಗದಿಂ ತತ್‌ಕ್ಷಣದೊಳ್ ೯೭

ವ॥ ಅದಂ ಕಂಡು ಕೌತುಕಂಬಟ್ಟು ಬೆರಲೆತ್ತಿ ಪೊಗಳ್ದಾಶುಗಾಶನನಿಭಾಶುಗವನಾಶು
ಗಾಸನದೊಳೋಸರಿಸದೆ ತೊಡರ್ಚಿ ಸಾರ್ಚಿ ತೆಗೆನೆಱೆದು ನಿಂದು

ಕಂ॥ ಮಣಿಗೆಳಸಿ ಕೆಮ್ಮನೆಮ್ಮೊಳ್
ಮಣೆಯದಿದಿರ್ಚಿದೆ ನರೇಂದ್ರಸುತ ನಿನಗೀ ಕೂ
ರ್ಗಣೆಯಿತ್ತಪುದು ನವವ್ರಣ
ಮಣಿಯಂ ಕೊಳ್ಳೆಂದು ಸಿಂಹಳಂ ಪದೆದೆಚ್ಚಂ ೯೮

ನಡುಗೆ ಸುರರೊಡನೆ ಕಿಡಿಗಳ
ಗಡಣಮನುಗುತರ್ಪ ಭೀಕರಾಸ್ತ್ರಮನದನಿ
ರ್ಕಡಿಗೈವವೋಘಶರಮಂ
ತುಡುತೆಚ್ಚಂ ರಾಜಶೇಖರಂ ಸಿಂಹಳನಂ ೯೯

ಬಳಿ ಇದ್ದ ಸ್ಥಿತಿ ಅದೆಷ್ಟು ಮನೋಜ್ಞವಾಯಿತೋ ! (ಕಿವಿಯವರೆಗೆ ಆತನು ಬಾಣ ವನ್ನು ಎಳೆದಿದ್ದನು ಎಂದು ತಾತ್ಪರ್ಯ. ಕರ್ಣಶಬ್ದದ ಅರ್ಥದ್ವಯವನ್ನಾಶ್ರಯಿಸಿ ಚಮತ್ಕಾರವನ್ನು ತೋರಿಸಲಾಗಿದೆ) (ರು) ವ|| ಆ ರೀತಿ ಆ ಬಾಣವನ್ನು ವೈರಿಗಳ ಯಜ್ಞವಿಧ್ವಂಸನಕಾರಣನಾದ ವೀರಭದ್ರಸ್ವರೂಪನಾದ ರಾಜಶೇಖರನು ವಿಶೇಷ ವಾದ ರೌದ್ರದಿಂದ ತಡಮಾಡದೆ ಪ್ರಯೋಗಿಸಿದಾಗ ೯೭. ಆ ಬಾಣವು ಆ ಸಿಂಹ ಳೇಂದ್ರನು ಬಿಟ್ಟ ಬಾಣಗಳನ್ನೆಲ್ಲ ಮಧ್ಯದಲ್ಲಿಯೇ ಕತ್ತರಿಸಿತು. ಮುಂದಕ್ಕೆ ಪ್ರತಿಭಟಿಸಿ ಹೋಗಿ, ಆ ಸಿಂಹಳೇಂದ್ರನ ರಥದ ಸಾರಥಿಯ ದೊಡ್ಡ ಶರೀರವನ್ನು ಭೇದಿಸಿ ಒಳಹೊಕ್ಕು ಆತನ ಶರೀರದಿಂದ ಧಾರಾಕಾರವಾಗಿ ರಕ್ತದ ಪ್ರವಾಹವು ತತ್‌ಕ್ಷಣವೇ ಹೊರಹೊಮ್ಮು ವಂತೆ ಮಾಡಿ ಪಾರುಗೊಂಡು ಹೋಯಿತು. ವ|| ಅದನ್ನು ಕಂಡು ಆಶ್ಚರ್ಯಗೊಂಡಿ ಕೈಬೆರಳನ್ನು ಮೇಲಕ್ಕೆತ್ತಿ ಆ ಸಿಂಹಳನು ಹೊಗಳಿ, ಆ ಸರ್ಪಾಸ್ತ್ರಕ್ಕೆ ಸಮಾನವಾದ ಬಾಣಕ್ಕೆ ಸರಿದೊರೆಯಾದ ಬಾಣವೊಂದನ್ನು ತನ್ನ ಬಿಲ್ಲಿನ ಹೆದೆಗೆ ಹೂಡಿ ಗುರಿಯಿಟ್ಟು, ಹಿಂಜರಿಯದೆ ಹೆದೆಯನ್ನು ಹಿಂದಕ್ಕೆ ಜಗ್ಗಿ ನಿಂತುಕೊಂಡು, ೯೮. "ಎಲೈ ನರೇಂದ್ರ ಕುಮಾರನೇ ರತ್ನಗಳಿಗೆ ಆಸೆಪಟ್ಟು ನನ್ನಲ್ಲಿ ವಿಧೇಯತೆಯಿಂದ ವರ್ತಿಸದೆ ಎದುರಿಸಿ ದ್ದೀಯೆ. ನಿನಗೆ ನನ್ನ ಈ ತೀಕ್ಷ್ಣವಾದ ಬಾಣವು ನೂತನ ಗಾಯಗಳೆಂಬ ರತ್ನಗಳನ್ನು ಕೊಡುತ್ತದೆ, ಸ್ವೀಕರಿಸು" ಎನ್ನುತ್ತ ಸಿಂಹಳೇಂದ್ರನು ಮುಂಬರಿದು ಬಾಣ ಪ್ರಯೋಗಿಸಿ ದನು. ೯೯. (ಸಿಂಹಳನ ಉಗ್ರವಾದ ಬಾಣಪ್ರಯೋಗಕ್ಕೆ) ದೇವತೆಗಳು ನಡಗಿ

ಎಚ್ಚೊಡಿಳೆ ನಡುಗೆ ಸೆಡೆಯೆ ವಿ
ಯಚ್ಚರರಂಬದು ಪೊದಳ್ದು ಕೆನ್ನೀರ ಪೊನಲ್
ಬೆಚ್ಚನೆ ಪಾಯ್ತುರೆ ವಕ್ಷಮ
ನುಚ್ಚಳಿಸಿದೊಡಹಿತನೃಪತಿ ಮೂರ್ಛಿತನಾದಂ ೧೦೦

ವ॥ ಆಗಳದಂ ಕಂಡು ಕನಲ್ಕೆಗೊಂಡು ಮಂಡಳಿಸುತಿಂದ್ರಮನ್ಯು ಭದ್ರಕೇತು ಹಿರಣ್ಯ ಕವಚಂ ಚಂಡಬಾಹು ಪ್ರಚಂಡವರ್ಮಂ ಸಿಂಹಸೇನಂ ಕುಲಿಶದಂತಂ ಲೋಹಿತಾಕ್ಷಂ ಪಿಂಗ ಳೇಕ್ಷಣಂ ಕಾಲನೇಮಿ ಭೀಮನಾದನಾದಿತ್ಯವರ್ಮಂ ವಿಕ್ರಮಬಾಹು ಮೊದಲಾದ ಪಾರ್ಥಿ ವರ್ ನಿಜವರೂಥಂಗಳನೇಱಿ ವಿಪುಳಪ್ರಚಂಡ ಧನುರ್ದಂಡಮಂ ತಿರುವೊಯ್ದು ಜೇವೊಡೆದು ಘುಡುಘುಡಿಸಿ ಸಿಡಿಲಪಡೆಯಂತೆ ಮೋಹರಿಸಿ ಶರವರ್ಷಮಂ ಕಱೆವುತ್ತೆ ನಿಜಬಲಂಬೆರಸು ಕಡಗಿಂ ಕವಿಯಲೊಡನೆ

ಮ॥ಸ್ರ॥ ಕಡುಪಿಂ ಕಾಯ್ಪೇಱಿ ಸಿಂಗಾಡಿಯನೆ ಸೆಳೆದು ಮೈಯುರ್ವಿ ಕೈಯಿಕ್ಕಿ ತೋಡು
ತ್ತೊಡನಂಬಂ ಬೆನ್ನ ಪೊಂಬತ್ತಳಿಕೆಯೊಳಧಟಿಂ ಪೂಡಿ ಪೂಣ್ದೆಚ್ಚು ಕಾಲಾ
ಳ್ಕೆಡೆವನ್ನಂ ಪಾಯ್ವ ಚಂಚದ್ರಥಚಯಮುಡಿವನ್ನಂ ಗಜಾಶ್ವಪ್ರತಾನಂ
ಮಡಿವನ್ನಂ ಮಾಣದೆಚ್ಚಂ ಮದವದರಿ ಮಹೀಭೃನ್ಮಹೀಭೃನ್ಮಹೇಂದ್ರಂ ೧೦೧

ತ್ತಿದ್ದರು. ಕೆಂಡಗಳ ಕಿಡಿಗಳನ್ನು ಉಗುಳುತ್ತಿರುವ ಆ ಭಯಂಕರವಾದ ಸಿಂಹಳನ ಬಾಣವನ್ನು ಎರಡುತುಂಡು ಮಾಡುವ ಮಹಾಸ್ತ್ರವನ್ನು ರಾಜಶೇಖರನು ಹೂಡಿ ಸಿಂಹಳನ ಮೇಲೆ ಪ್ರಯೋಗಿಸಿದನು. ೧೦೦. (ಹೀಗೆ ರಾಜಶೇಖರನು) ಬಾಣಪ್ರಯೋಗ ಮಾಡಲು ಇಳೆ ನಡುಗಿತು. ಆಕಾಶಗಾಮಿಗಳಾದ ದೇವತೆಗಳು ಆಶ್ಚರ್ಯದಿಂದ ಸೆಡೆದು ನಿಂತರು. ಆ ಬಾಣವು ಹಾರಿಹೋಗಿ ರಕ್ತದ ಪ್ರವಾಹವು ಬಿಸಿಗೊಂಡು ಹರಿಯ ತೊಡ ಗಲು ವೈರಿರಾಜನಾದ ಸಿಂಹಳೇಂದ್ರನ ಎದೆಯನ್ನು ಭೇದಿಸಲಾಗಿ ಅವನು ಮೂರ್ಛೆ ಗೊಂಡನು. ವ॥ ಆಗ ಅದನ್ನು ಕಂಡು ಕೋಪಗೊಂಡು ಸುತ್ತುವರಿದ ಇಂದ್ರಮನ್ಯು, ಭದ್ರಕೇತು, ಹಿರಣ್ಯಕವಚ, ಚಂಡಬಾಹು, ಪ್ರಚಂಡವರ್ಮ, ಸಿಂಹಸೇನ, ಕುಲಿಶದಂತ, ಲೋಹಿತಾಕ್ಷ, ಪಿಂಗಳೇಕ್ಷಣ, ಕಾಲನೇಮಿ, ಭೀಮನಾದ, ಆದಿತ್ಯವರ್ಮ, ವಿಕ್ರಮ ಬಾಹು ಮೊದಲಾದ ಅರಸರುಗಳು ತಮ್ಮ ತಮ್ಮ ರಥಗಳನ್ನು ಏರಿ, ದೊಡ್ಡವೂ ಕ್ರೂರವೂ ಆದ ಬಿಲ್ಲುಗಳನ್ನು ಹಿಡಿದು ಹೆದೆಯನ್ನೇರಿಸಿ ಠಂಕಾರಮಾಡುತ್ತ ಘುಡುಘುಡಿಸುತ್ತ ಆರ್ಭಟಿಸಿ, ಸಿಡಿಲುಗಳ ಸೇನೆಯೋ ಎಂಬಂತೆ (ವ್ಯೂಹಾಕಾರವಾಗಿ) ಗುಂಪುಗೂಡಿ, ಬಾಣ ಗಳ ಮಳೆಯನ್ನು ಕರೆಯುತ್ತ ತಮ್ಮ ಸೈನ್ಯಸಮೇತವಾಗಿ ಕೋಪಗೊಂಡು ಸುತ್ತಲೂ ಮುತ್ತಲಾಗಿ ೧೦೧. ಮದೋನ್ಮತ್ತರಾದ ಶತ್ರುರಾಜರೆಂಬ ಬೆಟ್ಟಗಳಿಗೆ ಇಂದ್ರಸಮಾನ ವಾದ ರಾಜಶೇಖರನು ಅತಿಶಯವಾಗಿ ಕೋಪಗೊಂಡು ತನ್ನ ಬಿಲ್ಲಿನ ನಾರಿಯನ್ನು ಸೆಳೆದು ಮೈಯುಬ್ಬಿನಿಂದ ಬೆನ್ನಿನಲ್ಲಿರುವ ಬಂಗಾರದ ಬತ್ತಳಿಕೆಗೆ ಕೈಹಾಕಿ ಬಾಣವೊಂದನ್ನು ಹೊರತೆಗೆದು, ಪರಾಕ್ರಮದಿಂದ ಹೂಡಿ, ಪ್ರತಿಜ್ಞೆಮಾಡಿ ತಪ್ಪದೆ ಕಾಲಾಳುಗಳನ್ನು ನೆಲಕ್ಕೆ ಕೆಡವುವಂತೆ, ಹೊಳೆಯುತ್ತಿರುವ ರಥಸಮೂಹವನ್ನು ಮುರಿದುಹಾಕುವಂತೆ,

ವ॥ ಅಗಳ್ ಮಿತವಚನನುಚಿತಹಯಾರೂಢನಾಗಿ ಕರತಲದೊಳ್ ಕಾಲಜಿಹ್ವೆಯಂ ಪೋಲ್ವ ಕರವಾಳಮಂ ಜಡಿದು ಝಳಂಪಿಸಿ ಜಳದ ಪಟಲದೊಳ್ಪೊಕ್ಕ ಜಂಝಾಪವನನಂತೆ ಮಿಕ್ಕು ಪೊಕ್ಕು

ಚಂ॥ ಪಡಲಿಡೆ ತೇರ್ಗಳಂ ಪೊಡೆದು ಸಾರಥಿಯಂ ತಿವಿದಶ್ವಕಂಧರಂ
ಕಡಿಯೆರಡಪ್ಪಿನಂ ತಱಿದು ಖಂಡಿಸಿ ತದ್ಧ್ವಜಮಂ ಪೊರಳ್ಚಿ ಮುಂ
ಗಡೆಯ ಭಟರ್ಕಳಂ ರಥದ ಚಕ್ರಮನಿರ್ಕಡಿಗೈದು ಸಾಹಸಂ
ಬಡೆದಿದಿರಾಂತ ತದ್ರಥಿಕರಂ ತಲೆಗೊಂಡನಖಂಡವಿಕ್ರಮಂ ೧೦೨

ಕರಿಶಿರಮಂ ವಿದಾರಿಸೆ ಕರಾಗ್ರದ ಖಡ್ಗದೆ ವಜ್ರಪಾತದಿಂ
ಗಿರಿ ಬಿರಿವಂತೆ ಮೇಣ್ಬಿರಿದುದಂತದಱಂತರದೊಳ್ಪೊದಳ್ದ ಕೇ
ಸುರಿಯಿರವೆಂಬಿನಂ ರುಧಿರವಾರಿಪೊಸರ್ತುದು ತದ್ರಸಾರ್ದ್ರಬಂ
ಧುರತರಮೌಕ್ತಿಕಂ ಸಿಡಿವ ಕೆಂಗಿಡಿಯಂತಿರೆ ಪಾಱಿತಾಜಿಯೊಳ್ ೧೦೩

ಕರಿಗಳ ಘಟ್ಟು ಪಟ್ಟಪಱಿವಾಜಿಗಳೋಜೆಯ ಪೌಜು ಗಾಜುಗೋ
ಜಿರದಿದಿರಾಗಿ ಮೊಗ್ಗರಿಸಿದಗ್ಗದ ತೇರ್ಗಳ ನುರ್ಗುನುರ್ಗು ಬಿ
ತ್ತರದೊಳೆ ಪಿಂಡುಗೊಂಡ ಭಟಮಂಡಳಿ ತಂಡದೆ ತುಂಡುತುಂಡದಾ
ಗಿರೆ ಕಡಿದೊಕ್ಕಲಿಕ್ಕಿದನುದಗ್ರ ಸಮಗ್ರ ಮಹೋಗ್ರ ವಿಗ್ರಹಂ ೧೦೪

ಆನೆ ಕುದುರೆಗಳ ಸಮೂಹವು ಸಾಯುವಂತೆ ಪ್ರಯೋಗಿಸಿದನು. ವ|| ಆಗ ಮಿತ ವಚನನು ಯೋಗ್ಯ ಕುದುರೆಯನ್ನೇರಿ, ಕಯ್ಯಲ್ಲಿ ಕಾಲನ ನಾಲಗೆಯಂತಿರುವ ಖಡ್ಗ ವನ್ನು ಹಿಡಿದು ಝಳಪಿಸುತ್ತ, ಮೇಘಸಮೂಹದಲ್ಲಿ ಹೊಕ್ಕ ಜಂಝಾಮಾರುತನಂತೆ ಮಿಗಿಲುಗೊಂಡು ವೈರಿಸೈನ್ಯದಲ್ಲಿ ಹೊಕ್ಕನು. ೧೦೨. ಅಖಂಡಪರಾಕ್ರಮಿಯಾದ ಮಿತವಚನನು ಮುರಿದುಬೀಳುವಂತೆ ತೇರುಗಳನ್ನು ಹೊಡೆದು, ಸಾರಥಿಯನ್ನು ಇರಿದು, ಎರಡು ಹೋಳಾಗುವಂತೆ ಕುದುರೆಯ ಕುತ್ತಿಗೆಯನ್ನು ಕತ್ತರಿಸಿ, ರಥದ ಧ್ವಜವನ್ನು ಮುರಿದುಹಾಗಿ, ಮುಂದೆಬಂದ ಶೂರರನ್ನು ನೆಲಕ್ಕೊರಗಿಸಿ, ರಥಚಕ್ರಗಳನ್ನು ತುಂಡು ಗೊಳಿಸಿ, ಸಾಹಸದಿಂದ ಎದುರಿಸಿದ ರಥಿಕರ ತಲೆಗಳನ್ನು ಕತ್ತರಿಸಿದನು. ೧೦೩. ಆ ಯುದ್ಧದಲ್ಲಿ (ಮಿತವಚನನು) ಆನೆಯ ತಲೆಯನ್ನು ಕೈಯ ಖಡ್ಗದಿಂದ ಕತ್ತರಿಸಲು ವಜ್ರದ ಪೆಟ್ಟಿನಿಂದ ಪರ್ವತಗಳು ಬಿರಿಯುವ ಹಾಗೆ ಅವು ಬಿರಿತವು. ಆ ತಲೆಯಲ್ಲಿ ವ್ಯಾಪಿಸಿದ್ದ ಕೆಂಪಾದ ಉರಿಯ ರೀತಿಯಲ್ಲಿ ರಕ್ತಪ್ರವಾಹವು ಒಸರಿತು. ಆ ರಕ್ತದಿಂದ ನೆನೆದ ಮನೋಜ್ಞವಾದ ಮುತ್ತುಗಳು ಕೆಂಗಿಡಿಗಳು ಸಿಡಿಯುವಂತೆ ಹಾರಿದುವು. ೧೦೪. ಶ್ರೇಷ್ಠನೂ, ಸಮಗ್ರವಾದ ಮಹಾಯುದ್ಧ ವಿದ್ಯಾವಿಶಾರದನೂ ಆದ ಆ ಮಿತ ವಚನನು ಆನೆಗಳ ಸಮೂಹವು ಬಟ್ಟಬಯಲಾಗುವ ಹಾಗೆಯೂ, ಅಶ್ವಗಳ ಸಮೂಹವು ಚಲ್ಲಾಪಿಲ್ಲಿಯಾಗುವಂತೆಯೂ, ಎದುರಾಗಿ ಆರ್ಭಟಿಸಿ ಬರುತ್ತಿದ್ದ ಶ್ರೇಷ್ಠವಾದ ರಥಗಳು ನುಗ್ಗಾಗುವ ಹಾಗೆಯೂ, ವಿಸ್ತಾರವಾಗಿಯೂ, ಹಿಂಡುಹಿಂಡಾಗಿಯೂ (ಇರುವ) ಶೂರರುಗಳ ಸಮೂಹವು ತಂಡೋಪತಂಡವಾಗಿ ತುಂಡುತುಂಡಾಗುವಂತೆಯೂ

ವ॥ ಅದಲ್ಲದೆಯುಂ ಅಲ್ಲಿ

ಚಂ॥ ಇಱಿದರಿದಿರ್ಚಿದರ್ಪೊಡೆದರಿಟ್ಟರುರುಳ್ಚಿದರೊತ್ತಿ ತತ್ತಱಿಂ
ದಱಿದರಡರ್ತು ಸೀಳ್ದರಱಿಯಟ್ಟಿದರೊಟ್ಟಿದರಟ್ಟಿಯುಂ ಕೊರ
ಲ್ಗೊಱಿದರದಿರ್ಚಿದರ್ಸದೆದರಣ್ಮಿದರಿಕ್ಕಿದರೆಚ್ಚರಾರ್ದು ಬೊ
ಬ್ಬಱಿದರಡಂಗೆ ಪೊಯ್ದರರಿಸೈನ್ಯಮನಾಹವದೊಳ್ ಮಹಾಭಟರ್ ೧೦೫

ವ॥ ಆಗಳ್ ಪ್ರಳಯಮೇಘಜ್ಯೋತಿಯೊಳಿದಿರ್ಚಿದಂಜನಾದ್ರಿಗಳೆಂಬಂತೆ ಕುಂಭಿಗಳ್ ಕುಂಭಿನಿಯೊಳ್ಕುಂಬಿಟ್ಟು ಕೆಡೆಯೆಯುಂ ಶರಭದೊಳಾಂತ ಸಿಂಗಂಗಳಂತೆ ತುರಂಗಂಗಳ್ಪಿಂಗಡೆಯೊಳ್ಮುಂಗಡೆಯೊಳುರುಳೆಯುಂ ಜಂಝಾಪವನನೊಳೊಡ್ಡಿನಿಂದ ನೀರತೇರ್ಗಳಂತೆ ತೇರ್ಗಳ್ ನುರ್ಗುನುಱಿಗೊಂಡು ಪಡಲಿಡೆಯುಂ ದವಶಿಖಿಯೊಳ್ಪೊಣರ್ಕೆಗೊಂಡ ಪಾದಪಂಗಳಂತೆ ಪದಾತಿಗಳ್ ಪನ್ನತಿಕೆಗೆಟ್ಟು ಮಡಿಯೆಯುಂ ಮಿತವಚನಂ ತನಗಿದಿರಾಂತ ರಿಪುಬಲಮನಿಂತು ತವಿಸಿದಾಗಳ್

ಉ॥ ತುಂಗಮತಂಗಜಪ್ರಕರ ಮಸ್ತಕಮೌಕ್ತಿಕರಾಶಿ ರಾಜಲೋ
ಕಂಗಳ ಮೌಳಿಮಂಡಿತಮಣಿಪ್ರಕರಂ ನೃಪಚಾಪಮುಕ್ತಬಾ
ಣಂಗಳ ಪಾತದಿಂ ಸುರಿದಸೃಙ್ನದಿಯೊಳ್ಬೆರೆದೆಯ್ದೆ ಕೂಡೆ ರ
ತ್ನಂಗಳವಂಗೆ ಮೇಣ್ಪೊರೆದುವಲ್ಲದೊಡಬ್ಧಿಗಮೆಂತು ಸಾರ್ದುವೋ ೧೦೬

ಕಡಿದು ನಾಶಗೊಳಿಸಿದನು. ವ|| ಅದೂ ಅಲ್ಲದೆ ಆ ರಣರಂಗಸ್ಥಳದಲ್ಲಿ ೧೦೫. ಮಹಾಶೂರರಾದ ಭಟರುಗಳು ಯುದ್ಧದಲ್ಲಿ ಶತ್ರುಸೈನ್ಯವನ್ನು ತಿವಿದರು ; ಎದುರಿಸಿದರು ; ಹೊಡೆದುಹಾಕಿದರು ; ಅಪ್ಪಳಿಸಿದರು ; ಉರುಳಿಸಿದರು ; ಅಮುಕಿ ತರ ತರನೆ ಕೊಯ್ದುಹಾಕಿದರು ; ಮೇಲೇರಿಬಿದ್ದು ಸೀಳಿಹಾಕಿದರು ; ಹಿಂದಕ್ಕೋಡಿಸಿದರು; ಹೆಣಗಳನ್ನು ಒಟ್ಟಿದರು; ಕುತ್ತಿಗೆಗಳನ್ನು ಕತ್ತರಿಸಿದರು ; ಅದುರುವಂತೆ ಮಾಡಿದರು ; ತುಳಿದರು ; ಶೌರ್ಯ ತೋರಿಸಿದರು ; ಗುದ್ದಿಹಾಕಿದರು ; ಬಿಸಾಡಿದರು ; ಆರ್ಭಟಿಸಿ ಬೊಬ್ಬಿಟ್ಟರು ; ಅಡಗಿಕೊಳ್ಳುವ ಹಾಗೆ ಹೊಡೆದರು. ವ|| ಆಗ ಪ್ರಳಯಕಾಲದ ಮೋಡಗಳ ಮಿಂಚಿನೊಡನೆ ಎದುರಿಸಿ ನಿಂತ ಅಂಜನಪರ್ವತಗಳೋ ಎಂಬಂತೆ ಆನೆಗಳು ಭೂಮಿಯಲ್ಲಿ ಬಾಗಿ ಹಣೆ ಹಚ್ಚಿ ಬೀಳುತ್ತಿರಲು, ಶರಭಪಕ್ಷಿಯೊಡನೆ ಎದುರಿಸಿ ನಿಂತ ಸಿಂಹಗಳ ಹಾಗೆ ತುರಂಗಗಳು ಹಿಂಭಾಗದಲ್ಲೂ ಮುಂಭಾಗದಲ್ಲೂ ಉರುಳಿ ಬೀಳುತ್ತಿರಲು, ಜಂಝಾಮಾರುತಕ್ಕೆ ಎದುರಿಸಿ ನಿಂತ ಮೋಡಗಳಹಾಗೆ ರಥಗಳು ನುಚ್ಚುನೂರಾಗಿ ಹರಡಿ ಬೀಳುತ್ತಿರಲು, ಅರಣ್ಯದ ಬೆಂಕಿಯೊಡನೆ ಸೆಣಸುತ್ತಿರುವ ಗಿಡಗಳಹಾಗೆ ಕಾಲ್ದಳವು ಶೌರ್ಯಗುಂದಿ ಸತ್ತು ಬೀಳುತ್ತಿರಲು, ಮಿತವಚನನು ತನಗೆ ಎದುರಾಗಿ ನಿಂತ ವೈರಿಸೈನ್ಯವನ್ನು ಈ ರೀತಿ ನಾಶಮಾಡಿದನು. ಆಗ ೧೦೬. ಉನ್ನತಗಳಾದ ಮದ್ದಾನೆಗಳ ಸಮೂಹದ ತಲೆಯ ಮುತ್ತುಗಳ ರಾಶಿಯು, ರಾಜರುಗಳ ಶಿರದಲ್ಲಿ ಅಲಂಕಾರಗೊಂಡ ರತ್ನಗಳ ಸಮೂಹವು, ರಾಜರುಗಳಾದವರ ಬಿಲ್ಲಿನಿಂದ ಬಿಡಲ್ಪಟ್ಟ ಬಾಣಗಳ ಹೊಡೆತ

ಕಂ॥ ಪಡಲಿಟ್ಟ ಪಡೆಯ ನೆತ್ತರ
ಮಡುವಿನೊಳುಡಿದುಡಿದು ಕೆಡೆದ ಕರಿದಂತಂಗಳ್
ತಡಿವಿಡಿದ ಸುಭಟಶಿರಮುಂ
ಪಡೆದವು ತದ್ವಿಸಬಿಸಪ್ರಸೂನದ ಸಿರಿಯಂ ೧೦೭

ಘುಳುಘುಳಿಸಿ ಪರಿವ ನೆತ್ತರ
ಪೊಳೆಯೊಳ್ನೆಱೆ ಮುಳುಗಿ ಪಂದೊವಲ ಧೋತ್ರಮನು
ಟ್ಟೆಳೆ ನರದ ಜನ್ನಿವಾರಮ
ನಳವಡಿಸುತ್ತಲ್ಲಿ ಬೊಮ್ಮರಕ್ಕಸರೆಸೆದರ್ ೧೦೮

ತಳಿರುಡೆಯೆನೆ ಪಂದೊವಲು
ಟ್ಟೆಳಲತೆಯೆನೆ ನರವನೊತ್ತಿ ಸುತ್ತುತೆ ಗುಂಜಾ
ಫಳಮೆನೆ ತಳೆದಿಭಮುಕ್ತಾ
ವಳಿಯಂ ಮರುಳಮಮ ಶಬರಿಯೆನಿಸಿತ್ತದಱೊಳ್ ೧೦೯

ವ॥ ಆಗಳ್

ಕಂ॥ ತಿಳಿಯೆ ನಿಜಮೂರ್ಛೆ ಮುರಿದಾ
ಗಳೆ ಪರಿತರ್ಪಾತ್ಮಬಳಮನೀಕ್ಷಿಸಿ ಭಯವಿ
ಹ್ವಳಸಿಂಹಳನಾ ಕೊಳುಗುಳ
ದಿಳೆಯಂ ಬೆಂಗೊಟ್ಟು ಜಗುಳ್ದನತಿಜವದಿಂದಂ ೧೧೦

ದಿಂದ ಸುರಿದ ರಕ್ತದ ನದಿಗಳಲ್ಲಿ ಕೂಡಿ ಹರಿದುಹೋಗಿದ್ದರಿಂದ ಆ ಸಮುದ್ರನಿಗೆ ದೊರೆತುವು. ಹೀಗೆ ಸಮುದ್ರಕ್ಕೆ ಸೇರದಿದ್ದರೆ ಆ ಸಮುದ್ರಕ್ಕೆ ರತ್ನಗಳು ಎಲ್ಲಿಂದ ದೊರೆಯುತ್ತಿದ್ದವೋ. ೧೦೭. ನೆಲದಲ್ಲಿ ಹರಡಿದ ಸೈನ್ಯದ ನೆತ್ತರದ ಮಡುವಿನಲ್ಲಿ ಮುರಿದು ಮುರಿದು ಬಿದ್ದಿರುವ ಆನೆಯ ದಂತಗಳು, ದಂಡೆಯುದ್ದಕ್ಕೂ ಬಿದ್ದಿರುವ ಶೂರಭಟರ ತಲೆಗಳು ಆ ರಕ್ತದ ಮಡುವಿನಲ್ಲಿ ಬೆಳೆದ ಕಮಲಗಳ ಶೋಭೆಯನ್ನು ಹೊಂದಿದ್ದವು. ೧೦೮. ಘುಳುಘುಳಿಂದು ಹರಿಯುತ್ತಿರುವ ನೆತ್ತರಿನ ಹೊಳೆಯಲ್ಲಿ ಚೆನ್ನಾಗಿ ಮುಳುಗಿ ಹಸಿಯ ತೊಗಲೆಂಬ ಧೋತ್ರವನ್ನುಟ್ಟು, ಎಳೆಯ ನರಗಳ ಜನಿವಾರವನ್ನು ಧರಿಸಿ ಅಲ್ಲಿ ಬ್ರಹ್ಮರಾಕ್ಷಸರು ಶೋಭಿಸಿದರು. ೧೦೯. ಚಿಗುರೋ ಎಂಬಂತೆ ಹಸಿಯ ಚರ್ಮವನ್ನು ಉಟ್ಟುಕೊಂಡು, ಎಳೆಯ ಬಳ್ಳಿಯೋ ಎಂಬಂತೆ ನರಗಳನ್ನು ಬಿಗಿಯಾಗಿ ಸುತ್ತಿಕೊಂಡು, ಗುಲಗಂಜಿಯೋ ಎಂಬಂತೆ ಆನೆಗಳ ಕುಂಭಸ್ಥಳದ ಮುತ್ತುಗಳನ್ನು ಧರಿಸಿಕೊಂಡು, ಭೂತಗಳು ಅಬ್ಬಾ! ಶಬರಿಯರಹಾಗೆ ಆ ಯುದ್ಧಭೂಮಿಯಲ್ಲಿ ತೋರುತ್ತಿದ್ದವು. ವ॥ ಆಗ ೧೧೦. (ಅಷ್ಟು ಹೊತ್ತಿಗೆ) ಸಿಂಹಳನು ತನ್ನ ಮೂರ್ಛೆಯಿಂದ ಎಚ್ಚತ್ತವನಾಗಿ, ಯುದ್ಧವನ್ನು ಬಿಟ್ಟು ಓಡುತ್ತಿರುವ ತನ್ನ ಸೈನ್ಯವನ್ನು ನೋಡಿ, ಭಯಗೊಂಡು ನಡುಗಿ ಆ ರಣ

ವ॥ ಅಂತು ಜಗುಳ್ದು ಜಳಧಿಮಧ್ಯದೊಳ್ ಸಬಳ ದುರ್ಬಳನಸ್ತಮಯ ಸೂರ್ಯನಂತೆ ತೇಜಂಗುಂದಿ ಪೊಕ್ಕು ಪೋಪಾಗಳರಿವಿಜಯ ವಿಕ್ರಮಾರ್ಕನಮೋಘಬಾಣಮಂ ಕೇಣದಿಂ ಪ್ರಾಣಂಗೊಳಲೆಂದು ಮಾಣದೆ ಬಾಣಾಸನದೊಳ್ ತೊಡರ್ಚುವಾಗಳ್

ಉ॥ ಶಕ್ರಮುಖಾಮರರ್ಕಳಿಲೆ ನಿನ್ನದ್ರಟಿಂಗಗಿದೊಂದು ಗೋಂಟಿನೊಳ್
ಸಕ್ರಮಮಿರ್ಪರಿನ್ನುಮೆನೆ ಸಿಂಹಳನಾಂಪನೆ ಗಾಂಪುದೋಱಿ ಭೂ
ಚಕ್ರಕೆ ಪೊಕ್ಕನಳ್ಕಿ ಕಡಲಂ ತೊಡದಿರ್ ತವಿಪಂಬನಿಂದುನಿ
ರ್ವಕ್ರ ಪರಾಕ್ರಮಾಕ್ರಮಿತ ವಿಕ್ರಮ ವಿಕ್ರಮ ರಾಜಶೇಖರಾ ೧೧೧

ವ॥ ಎಂಬ ಮಿತವಚನನ ಹಿತವಚನಮನಾಕರ್ಣಿಸಿ ಸುಪರ್ಣಪರಾಕ್ರಮನಾ ಕರ್ಣಾಂತಮುಗಿದ ಕೂರ್ಗಣೆಯನುಪಸಂಹರಿಸಿದಾಗಳಾ ಸಿಂಹಳಂ ಪಡಂಗೇಱಿ ಕಡಲೊಳ್ಬೆಂಗೊಟ್ಟು ಪೋಗಲೊಡನೆ

ಚಂ॥ ಅತುಳಿತ ತತ್ಪ್ರತಾಪ ಬಡಬಂಗಗಿದಂತಿರೆ ಸಿಂಹಳೇಂದ್ರನ
ಪ್ರತಿಮ ಮದಾಬ್ಧಿ ಮೈದೆಗೆದವೊಲ್ಮುಳಿಸಿಂದಮೆ ರಾಜಶೇಖರ
ಕ್ಷಿತಿಪತಿ ಶೈವಮಂತ್ರನಿಧಿ ನೋಳ್ಪುದುಮಳ್ಕಿ ಪಯೋಧಿ ಭಟ್ಟಿಗೊ
ಟ್ಟತಿಶಯಮಾಗೆ ನೀರ್ದೆಗೆದುದಾ ರಿಪುಸೀಮೆಯೆ ಸೀಮೆಯಪ್ಪಿನಂ ೧೧೨

ರಂಗಕ್ಕೆ ಬೆನ್ನು ತೋರಿಸುತ್ತ ಅತಿವೇಗದಿಂದ ಓಡಿಹೋದನು. ವ|| ಈ ರೀತಿ ಯುದ್ಧ ಭೂಮಿಯಿಂದ ಜಾರಿಕೊಂಡು ತನ್ನ ಸೇನಾಸಮೇತನಾಗಿ ದುರ್ಬಲನಾದ ಆ ಸಿಂಹಳೇಂದ್ರನು ಸಂಧ್ಯಾಕಾಲದ ಸೂರ್ಯನಂತೆ ತೇಜೋವಿಹೀನನಾಗಿ ಸಮುದ್ರವನ್ನು ಹೊಕ್ಕು ಓಡುತ್ತಿರುವಾಗ ಅರಿವಿಜಯ ವಿಕ್ರಮಾರ್ಕನೆನಿಸಿದ ರಾಜಶೇಖರನು ಅಮೋಘವಾದ ಬಾಣವನ್ನು ಕೋಪದಿಂದ ಪ್ರಾಣವನ್ನೇ ತೆಗೆದುಕೊಳ್ಳಬೇಕೆಂದು ತಪ್ಪದೆ ಹದೆಯಲ್ಲಿ ಹೂಡಿದಾಗ, ೧೧೧. ಮಿತವಚನನು "ಭೋ! ಋಜುವಾದ ಪರಾಕ್ರಮದಿಂದ ಕೂಡಿದವನೂ, ತ್ರಿವಿಕ್ರಮನ ಪರಾಕ್ರಮಕ್ಕೆ ಸಮಾನನೂ ಆದ ರಾಜಶೇಖರನೇ, ನಿನ್ನ ಪರಾಕ್ರಮಕ್ಕೆ ಇಂದ್ರನೇ ಮೊದಲಾದ ದೇವತೆಗಳು ಹೆದರಿ ಒಂದು ಮೂಲೆಯಲ್ಲಿ ತೆಪ್ಪಗೆ ಇರುವರೆನ್ನುವಾಗ ಸಿಂಹಳನು ನಿನುಗೆ ತಡೆಯತಕ್ಕವನೇ? ಹೆದರಿ ಹೇಡಿತನವನ್ನು ತೋರಿಸಿ ತನ್ನ ದೇಶದೊಳಕ್ಕೆ ಓಡಿಹೋದನು. ಸಮುದ್ರವನ್ನು ಸಂತಾಪಗೊಳಿಸುವ ಬಾಣವನ್ನು ಈಗ ನೀನು ತೊಡಬೇಡ" ಎಂದು ಹೇಳಿದನು. ವ|| ಹೀಗೆಂದು ಹೇಳಿದ ಮಿತವಚನ ಮಂತ್ರಿಯ ಹಿತನುಡಿಯನ್ನು ಕೇಳಿ ಗರುಡನ ಪರಾಕ್ರಮದಂತೆ ಪರಾಕ್ರಮುವನ್ನುಳ್ಳ ರಾಜಶೇಖರನು ಕಿವಿಯುವರೆಗೆ ಜಗ್ಗಿದ ತೀಕ್ಷ್ಣವಾದ ಬಾಣವನ್ನು ಉಪಸಂಹಾರ ಮಾಡಲಾಗಿ, ಆ ಸಿಂಹಳನು ಹಡಗನ್ನೇರಿ ಸಮುದ್ರದಲ್ಲಿ (ರಣರಂಗಕ್ಕೆ) ಬೆನ್ನು ತೋರಿಸಿ (ಓಡಿ) ಹೋಗಲಾಗಿ, ೧೧೨ ಸಿಂಹಳಭೂಪತಿಯ ಅಪ್ರತಿಮವಾದ ಮದವೆಂಬ ಸಾಗರವು ಅಸಮಾನವಾದ ರಾಜಶೇಖರನ ಪ್ರತಾಪವೆಂಬ ಬಡಬಾನಲಕ್ಕೆ ಹೆದರಿದಹಾಗೆ ಇರಲು, ಶಿವಮಂತ್ರ ನಿಧಿಯಾದ ರಾಜಶೇಖರಮಹಾರಾಜನು ಕೋಪದಿಂದ ಆ ಸಮುದ್ರವನ್ನು

ಕಂ॥ ಪರಿಗತ ಪದ್ಮಮಹಾಪ
ದ್ಮರುಚಿರ ವರಶಂಖ ಮಕರ ಕಚ್ಛಪ ನೀಲ
ಸ್ಫುರಿತ ಮುಕುಂದಂ ಕುಂದದ
ಶರನಿಧಿಯಕ್ಷೇಂದ್ರನಿಧಿಯಿದೆನೆ ಸೊಗಯಿಸುಗುಂ ೧೧೩

ಪೊಸಬಿಸಿಲದು ಪೆಱದೆಗೆದಿರೆ
ಕಿಸುಸಂಜೆಯುಮುಡುಸಮೂಹಮುಂ ಮಿಸುಪವೊಲೇ
ನೆಸೆದುದೊ ಪವಳಂ ಮುಕ್ತಾ
ವಿಸರಂ ಜಾಂಬವಜಳಂ ಪೆಡಂಮೆಟ್ಟಲೊಡಂ ೧೧೪

ಅಘಟಿತಮಿದಲ್ತೆ ಮುನ್ನಂ
ರಘುವಂಶಭವಂಗವೇನಿದಿತ್ತುದೆ ಪಥಮಂ
ಪ್ರಘನಪ್ರತಾಪ ಮಹಿಮಾ
ಲಘುತರನಿವನಬ್ಧಿಯಂ ಪೆಡಮ್ಮೆಟ್ಟಿಸಿದಂ ೧೧೫

ವ॥ ಎಂದಂಬರದೊಳಂಬರಚರರ್ ಪೊಗಳುತ್ತುಮಿರೆ ನಿಜಬಳಂ ಮುದಂಬಡುತ್ತುಮಿರೆ ಪಡಿಬಳಂ ಕಂಗೆಡುತ್ತುಮಿರೆ ಕಿಡುವೇಗದಿಂ ಕಮಳಾವತಿಯೆಂಬ ನಿಜದುರ್ಗಮನವಂ

ನೋಡಲಾಗಿ, ಅದು ಹೆದರಿ ಮೈದೆಗೆದ ಹಾಗೆ ಆ ವೈರಿಯಸೀಮೆಯೇ ಬೈಲಾಗಿರುವಹಾಗೆ ಆಶ್ಚರ್ಯವೆನ್ನುವಂತೆ ನೀರನ್ನು ತೆಗೆದು ಮಾರ್ಗವನ್ನು ಕೊಟ್ಟಿತು. ೧೧೩. ಆ ಸಮುದ್ರವು ಕುಬೇರನ ನವನಿಧಿಗಳಂತೆ ಸೊಗಸಾಗಿ ತೋರುತ್ತಿತ್ತು. ಹೇಗೆಂದರೆ, ಕುಬೇರನು ಪದ್ಮ ಮಹಾಪದ್ಮವೆಂಬ ನಿಧಿಯುಳ್ಳವನು, ರಮ್ಯವಾದ ವರ, ಶಂಖ, ಮಕರ, ಕಚ್ಛಪ, ನೀಲ, ಪ್ರಕಾಶಿಸುವ ಮುಕುಂದ, ಕುಂದ ಮುಂತಾದ ನವನಿಧಿಗಳುಳ್ಳವನು. ಸಮುದ್ರವು ಕಮಲ, ಸಹಸ್ರದಳದ ಕಮಲ (ಮಹಾಪದ್ಮ), ಶಂಖಗಳು, ಮೊಸಳೆ, ಆಮೆ, ನೀಲಮಣಿ ಮತ್ತು ಶ್ರೀವಿಷ್ಣುವಿನಿಂದ ಕೂಡಿ, ಎಂದೂ ಕುಂದದ ನೀರಿನ ರಾಶಿಯಿಂದ ಇರುತ್ತದೆ. ೧೧೪. ಹೊಸಬಿಸಿಲು ಹಿಮ್ಮೆಟ್ಟಲಾಗಿ ಕೆಂಪಾದ ಸಂಧ್ಯಾರಾಗ ಮತ್ತು ನಕ್ಷತ್ರಗಳ ಸಮೂಹ ಪ್ರಕಾಶಿಸುವ ಹಾಗೆ ಹವಳ, ಮುತ್ತುಗಳ ಸಮೂಹ, ಬಂಗಾರ–ಇವು ಜಲವು ಹಿಂದೆ ಸರಿದೊಡನೆ ಏನು ಶೋಭಿಸಿದವೋ ! ೧೧೫. "(ಸಮುದ್ರವು ರಾಜಶೇಖರನಿಗೆ ದಾರಿಮಾಡಿ ಕೊಟ್ಟಿದ್ದು) ಇದು ಅಘಟಿತ ಘಟನೆಯಲ್ಲವೆ ? ಪೂರ್ವದಲ್ಲಿ ರಘುವಂಶಸಂಭವನಾದ ರಾಮಚಂದ್ರನಿಗೆ ಮಾರ್ಗವನ್ನು ಕೊಟ್ಟಿತೇನು ? ಮಹಾಘನ ಪ್ರತಾಪಶಾಲಿಯಾದ ಮಹಿಮೆಯಿಂದ ಗುರುತರನಾದ ಈ ರಾಜಶೇಖರನು ಸಮುದ್ರವನ್ನು ಹಿಂದಕ್ಕೆ ಸರಿಸಿದನಲ್ಲವೇ !" ವ|| ಹೀಗೆಂದು ಆಕಾಶದಲ್ಲಿ ದೇವತೆಗಳು ಹೊಗಳುತ್ತಿರಲು ಆತನ ಸೈನ್ಯವು ಸಂತೋಷಗೊಳ್ಳುತ್ತಿತ್ತು. ವೈರಿಗಳ ಸೈನ್ಯವು ಕಂಗೆಡುತ್ತಿತ್ತು. ಅತಿ ವೇಗದಿಂದ ಕಮಳಾವತಿಯೆಂಬ ತನ್ನ ದುರ್ಗವನ್ನು ಸಿಂಹಳನು ಹೊಗಲಾಗಿ, ಕೋಪ

ಪೋಗಿ ಪೊಕ್ಕಾಗಳ್ ಕುಪಿತ ರಿಪುಪನ್ನಗ ಸುಪರ್ಣಂ ಬೆನ್ನನೆ ಪೋಗಿ ಪನ್ನತಿಕೆಯಿಂ ತನ್ನ ಬಲಂಬೆರಸು ಸುತ್ತಿಪತ್ತಿದಾಗಳ್

ಚಂ॥ ಉರಿವರಿವೆಣ್ಣೆ ಪಂದಿದಲೆ ಪೆರ್ದೊಲೆ ಬಲ್ಮೊನೆಗಲ್ಯಶಾನುವೊಳ್
ಬೆರಸಿದ ಪುಲ್ಲದೂಂದೆ ಪೆಟಲುಪ್ಪಿಪ ಪೆರ್ದಿದಿ ಮರ್ದಿವೆಂಬಿವಂ
ಸುರಿದಿಳಿವಾಯ್ಕಿ ನೂಂಕಿ ಸೆಳೆದಿಟ್ಟೊಡನಲ್ಲಳಿವಿಟ್ಟು ಸೂಸೆ ಪೊ
ಯ್ದರಿಭಟರಿಂತು ಕಾದುತಿರೆ ಮುತ್ತಿದರಳ್ಕದೆ ತನ್ಮಹಾಭಟರ್ ೧೧೬

ವ॥ ಇಂತು ವೊತ್ತಂಬೆತ್ತು ಮುತ್ತಿಲೆಗ್ಗೆಗಳಗ್ಗಳಿಸಿರ್ಪಾಗಳಾ ಸಿಂಹಳೇಂದ್ರಂ ಘೂರ್ಮಿಸಿ ನಿಜಬಳಂಬೆರಸು ಕಾಳಗಕ್ಕೆ ಪೊಱಮಡಲುಜ್ಜುಗಿಸಿ ಸಜ್ಜುಗೆಯ್ವುತ್ತಿರ್ಪಿನಮಾಗಳ್ ನೀತಿಭೂಷಣನೆಂಬ ಮಂತ್ರಿಪಂ ಕೃತಾಂಜಲಿಪುಟನಾಗಿ ವಿನಯದಿಂದಿಂತೆಂದಂ

ಚಂ॥ ಅವಧರಿಸಾಣ್ಮ ಸಿಂಹಳನರೇಶ್ವರ ಮದ್ವಚಮಂ ಮನುಷ್ಯ ಭೂ
ಧವನಿವನೆಂದು ನೀಂ ಬಗೆಯದಿರ್ ಶಿವಮಂತ್ರಭವಂ ಮಹಾಪ್ರಭಾ
ವವಿದಿತ ಶೌರ್ಯನಾತನೊಳೆ ನಿಲ್ವುದು ಗೆಲ್ವುದು ಮಾರ್ಗಮಾಗದೀ
ಭುವನದೊಳಂತಱಿಂದೆಸಗು ಸಂಧಿಯ ನೀಂ ಬಿಡು ತದ್ವಿರೋಧಮಂ ೧೧೭

ಗೊಂಡ ವೈರಿಗಳೆಂಬ ಹಾವುಗಳಿಗೆ ಗರುಡಸ್ವರೂಪನಾದ ರಾಜಶೇಖರನು ಬೆನ್ನಟ್ಟಿ ಹೋಗಿ ಸಾಮರ್ಥ್ಯದಿಂದ ತನ್ನ ಸೇನೆಯೊಡನೆ ಆ ಪಟ್ಟಣವನ್ನು ಸುತ್ತಿ ಮುತ್ತಿಗೆ ಹಾಕಿದನು. ೧೧೬. ರಾಜಶೇಖರನ ಸೈನ್ಯದವರು ಸಿಂಹಳೇಂದ್ರನ ನಗರಕ್ಕೆ ಮುತ್ತಿಗೆ ಹಾಕಲಾಗಿ ಆ ವೈರಿಭಟರು ಕಾಯ್ದ ಎಣ್ಣೆ ಸುರಿದು, ಹಂದಿಯ ತಲೆಯನ್ನು ಇಳಿಹಾಕಿ, ದೊಡ್ಡ ತೊಲೆಯನ್ನು ನೂಕಿ, ಚೂಪುಗಲ್ಲಿನಿಂದ ಹೊಡೆದು, ಬೆಂಕಿಯನ್ನು ಹಚ್ಚಿದ ಹುಲ್ಲು ಚಲ್ಲಿ, ಪೆಟ್ಲುಪ್ಪು ವಿದ್ದಿದ ಮದ್ದನ್ನು ಸುರಿದು ಬೆಂಕಿಯಿಟ್ಟು ಹೊಡೆಯುತ್ತ ಈ ರೀತಿ ಯುದ್ಧ ಮಾಡುತ್ತಿದ್ದರು. ರಾಜಶೇಖರನ ಸೈನ್ಯದವರು ಹೆದರದೆ ಮುತ್ತಿಗೆ ಹಾಕಿದರು. ವ॥ ಈ ರೀತಿ ಸಮೂಹಗೊಂಡು ಪಟ್ಟಣವನ್ನು ಮುತ್ತಿ ಲಗ್ಗೆಯು ಬಲವಾಗಿರುವ ಸಮಯದಲ್ಲಿ ಆ ಸಿಂಹಳನರೇಂದ್ರನು ಆರ್ಭಟಿಸುತ್ತ ತನ್ನ ಸೇನಾಸಮೇತನಾಗಿ ಯುದ್ಧಮಾಡುವುದಕ್ಕೆ ಹೊರಹೊರಡಲು ಮನಸ್ಸುಮಾಡಿ ಸಜ್ಜುಗೊಳಿಸುತ್ತಿರುವ ಸಮಯದಲ್ಲಿ, ನೀತಿಭೂಷಣನೆಂಬ ಮಂತ್ರೀಶನು ಎರಡೂ ಕೈಗಳನ್ನು ಮುಗಿದು ವಿನಯಪೂರ್ವಕವಾಗಿ ಹೀಗೆ ಹೇಳಿದನು : ೧೧೭. "ಪ್ರಭುವಾದ ಸಿಂಹಳನರೇಶ್ವರನೇ, ನನ್ನ ಮಾತನ್ನು ಕೇಳು. ಈ ರಾಜಶೇಖರಮಹಾರಾಜನನ್ನು ಮನುಷ್ಯನಾದ ರಾಜನೆಂದು ನೀನು ತಿಳಿಯಬೇಡ. (ಇವನು) ಶಿವಮಂತ್ರದಿಂದ ಹುಟ್ಟಿದವನು. ಅತ್ಯಂತ ಮಹಿಮೆಯಿಂದ ಕೂಡಿದ ಶೌರ್ಯವುಳ್ಳವನು. ಅವನೊಡನೆ ಎದುರಿಸಿ ನಿಲ್ಲುವುದು, ಗೆಲ್ಲುವುದು ಈ ಭೂಮಿಯಲ್ಲಿ ಕ್ರಮವಾಗಲಾರದು. ಆದ್ದರಿಂದ (ಇವನೊಡನೆ) ವಿರೋಧವನ್ನು

ವ॥ ಅದಲ್ಲದೆಯುಂ

ಮ॥ ಪಿಡಿವರ್ ಬಾಡಬವಹ್ನಿಯಂ ಮಿಡಿವರಾದಿತ್ಯೇಂದುಬಿಂಬಂಗಳಂ
ಕುಡಿವರ್ ಸಪ್ತಸಮುದ್ರಮಂ ಪೊಡೆವರಾಶಾದಂತಿಯಂ ಕಿಳ್ತುಮೇ
ಲಿಡುವರ್ ಮೇರುವನೊತ್ತಿಸುತ್ತಿ ತೊಡುವರ್ ಶೇಷಾಹಿಯಂ ಪಾಯ್ದು ಪೊ
ಯ್ದೊಡೆವರ್ ಪದ್ಮಭವಾಂಡಮಂ ಮೃಡಸಭಕ್ತರ್ ಬಲ್ಲಿದರ್ ಭೂವರಾ ೧೧೮

ಕಂ॥ ಪಡೆ ಪಡಲಿಡೆ ಪಡಗೇಱಿ
ತ್ತೊಡನೈತರೆ ನೀನುಮಾತನುಂ ಬೆಂಕೊಳಲಾ
ಕಡಲಳ್ಕಿ ಬಟ್ಟೆಗೊಟ್ಟುದು
ಗಡ ನಡೆನೋಳ್ಪಾಗಳಾತನೇಂ ಜಾವಳನೇ ೧೧೯

ವ॥ ಅಂತುಮಲ್ಲದೆಯುಂ

ಕಂ॥ ಅತಿಸಾಹಸಿ ಸತ್ಯವಚೋ
ನ್ವಿತನಧಿಕ ದಯಾಳು ಧಾರ್ಮಿಕಂ ಪರಹಿತ ಪಂ
ಡಿತನುಚಿತಜ್ಞಂ ತಜ್ಜ್ಞೋ
ನ್ನತಾವೃತಂ ತನ್ನೃಪಾತ್ಮಜಂ ಸಂಧೇಯಂ ೧೨೦

ಕಂ॥ ಮಾಯಾವಿ ದೈವವಿಮುಖನ
ಪಾಯಾಸ್ಪದನಾಪ್ತರಹಿತನತಿ ಚಪಲನುಪಾ
ದೇಯ ಜಡಮತಿಯತಿಹತೋ
ಪಾಯಂ ಸಂಧೇಯನಲ್ತವಂ ರಣಜೀಯಂ ೧೨೧

ಬಿಟ್ಟು, ನೀನು ಸಂಧಿಯನ್ನು ಮಾಡು. ವ॥ ಅದೂ ಅಲ್ಲದೆ, ೧೧೮. ರಾಜಶ್ರೇಷ್ಠನಾದ ಸಿಂಹಳೇಂದ್ರನೇ, ಮೃಡಭಕ್ತರು ಮಹಾಬಲನಂತರು. ಅವರು ಪಡಬಾಗ್ನಿಯನ್ನು ಹಿಡಿಯುವರು. ಚಂದ್ರ ಸೂರ್ಯಬಿಂಬಗಳನ್ನೇ ಹಾರಿಸುತ್ತಾರೆ. ಸಪ್ತ ಸಮುದ್ರಗಳನ್ನು ಕುಡಿಯುತ್ತಾರೆ. ಅಷ್ಟದಿಗ್ಗಜಗಳನ್ನು ಹೊಡೆದು ಹಾಕುವರು. ಮೇರುವನ್ನು ಕಿತ್ತು ಆಕಾಶದಲ್ಲಿ ಇಡುವರು. ಆದಿಶೇಷನನ್ನು ಒತ್ತಿ ಹಿಡಿದು ಆಭರಣವಾಗಿ ಸುತ್ತಿಕೊಳ್ಳುವರು. ಬ್ರಹ್ಮಾಂಡವನ್ನು ಹಾಯ್ದು ಹೊಡೆದು ಒಡೆಯುವರು. ೧೧೯. ನಮ್ಮ ಸೈನ್ಯವೆಲ್ಲ ನೆಲಕ್ಕೆ ಬಿದ್ದು, ನೀನು ಹಡಗನ್ನೇರಿ ಬರಲು, ಆ ರಾಜಶೇಖರನು ಬೆನ್ನಟ್ಟಿ ಬರಲು, ಸಮುದ್ರವು ಹೆದರಿ ದಾರಿಕೊಟ್ಟಿತಲ್ಲವೆ ? ವಿಚಾರಿಸಿ ನೋಡಿದರೆ ಆ ರಾಜಶೇಖರನು ಸಾಮಾನ್ಯ ವ್ಯಕ್ತಿಯಲ್ಲ ! ವ॥ ಅದೂ ಅಲ್ಲದೆ, ೧೨೦. ಆ ರಾಜಶೇಖರನು ಅತ್ಯಂತ ಸಾಹಸವುಳ್ಳವನು ; ಸತ್ಯವಚನದಿಂದ ಕೂಡಿದವನು ; ಅತ್ಯಂತ ದಯಾಭರಿತನು ; ಧರ್ಮಾತ್ಮ ; ಪರೋಪಕಾರಿ ; ಸಮದರ್ಶಿ ; ಯುಕ್ತಕಾರ್ಯವನ್ನು ತಿಳಿದವನು ; ಎಲ್ಲವನ್ನೂ ತಿಳಿದವನು ; ಉನ್ನತ ವ್ಯಕ್ತಿಗಳಿಂದ ಕೂಡಿದವನು. ಇಂಥ ಈ ಸತ್ಯೇಂದ್ರಚೋಳ ಕುಮಾರನು ಸಂಧಿಗೆ ಯೋಗ್ಯನು. ೧೨೧. ಮಾಯಾವಿಯೂ, ದೈವಾನುಗ್ರಹದಿಂದ ದೂರನಾದವನೂ, ಮೋಸಗಾರನೂ, ಆಪ್ತರಾದ ಜನರುಗಳಿಂದ ದೂರನಾದವನೂ, ಚಾಂಚಲ್ಯ

ಕ್ಷಿತಿಯೊಳ್ಸಮನೆನಿಪ ಮಹೀ
ಪತಿಯೊಳ್ ಸಲೆ ಸಂಧಿಗೆಯ್ವುದಾಗದು ತನ್ನಿಂ
ದತಿಬಳನಜೇಯನೆನಿಪು
ನ್ನತನೊಳ್ ನುತಮಲ್ತೆ ಸಂಧಿಕಾರ್ಯಂ ನೃಪತೀ ೧೨೨

ಎಲ್ಲಂದದಿಂದೆ ಕಾರ್ಯದ
ಗೆಲ್ಲಂಗಾಣಲ್ಕೆ ಬಲ್ಲೊಡಾತನೆ ಬಲ್ಲಂ
ಬಲ್ಲಹ ಮೇಣಱಿಯದೊಡವ
ನಲ್ಲದೆ ಗಾವಿಲನಿಳಾಗ್ರದೊಳ್ ಪೆಱನೊಳನೇ ೧೨೩

ಮ॥ ಅತಿ ಕೋಪಾತುರನಾಪ್ತವಾಕ್ಯಬಧಿರಂ ಮಾಯಾವಿ ಸಂಘಾತ ಸಂ
ಗತಿರಕ್ತಂ ರತಿಲಂಪಟಂ ಮದಯುತಂ ಮಾನಾತ್ಯಯಾಭೀತನು
ದ್ಧತವೃತ್ತಂ ಗತಧೈರ್ಯನಾರ್ಯವಿಮುಖಂ ನಿದ್ರಾಳು ತಾನಾದ ಭೂ
ಪತಿಗಾದ್ಯೆಸಿರಿ ಗಾಳಿಗೊಡ್ಡಿದ ಸೊಡರ್ಪಾೞಾಗದೇಂ ಪೋಕುಮೇ ೧೨೪

ಕಂ॥ ಅದಱಿಂದೆ ನೀತಿವಿದನ
ಪ್ಪುದು ನರಪತಿ ವಿಬುಧರೊರೆದವೋಲ್ ನಡೆವುದು ತ
ಪ್ಪದೆ ಸಿರಿ ಜಸವಂ ಬೆರೆವುದು
ಪುದುವಾಳ್ವುದು ಬಾಳ್ಸದಾರ್ಯತತಿ ಮೆಚ್ಚುವಿಸಂ ೧೨೫

ಸ್ವಭಾವದವನೂ, ಜಡಸ್ವಭಾವವನ್ನು ಪಡೆದವನೂ, ಅತಿಯಾದ ನಷ್ಟೋಪಾಯನೂ ಸಂಧಿಗೆ ಯೋಗ್ಯನಲ್ಲ. ಅವನು ರಣದಲ್ಲಿ ಗೆಲ್ಲಲ್ಪಡಬೇಕಾದವನು. ೧೨೨. ಈ ಭೂಮಿಯಲ್ಲಿ ತನಗೆ ಸಮಾನನಾದ ಅರಸನಲ್ಲಿ ಸಂಧಿಮಾಡಿಕೊಳ್ಳುವುದು ಕೂಡದು ; ತನ್ನಿಂದ ಅತಿ ಬಲವಂತನೆನಿಸಿ, ಜಯಿಸುವುದಕ್ಕೆ ಶಕ್ಯನಲ್ಲದ ಶ್ರೇಷ್ಠನಾದ ಅರಸನೊಡನೆ ಸಂಧಿಮಾಡಿ ಕೊಳ್ಳುವ ಕಾರ್ಯವು ಶ್ಲಾಘ್ಯವಲ್ಲವೇ, ಮಹಾರಾಜಾ ? ೧೨೩. ಸಮಸ್ತ ರೀತಿಯಿಂದಲೂ ಕಾರ್ಯವನ್ನು ಗೆಲ್ಲಬಲ್ಲವನೇ ತಿಳಿದವನೆನಿಸುವನು. ಆ ಮರ್ಮವನ್ನು ತಿಳಿಯದಂಥವನು ಮೂರ್ಖನಲ್ಲದೆ ಈ ಭೂಮಿಯಲ್ಲಿ ಬೇರೆ ಮೂರ್ಖರುಂಟೆ? ೧೨೪. ಅತಿ ಕೋಪಿಷ್ಠನೂ, ತನಗೆ ಆಪ್ತರಾದ ಯಥಾರ್ಥವಾದಿಗಳ ಮಾತನ್ನು ಕೇಳುವುದರಲ್ಲಿ ಕಿವುಡನೂ, ಕಪಟಿಗಳಾದ ಜನರ ಸಂಬಂಧದಲ್ಲಿ ಅಭಿಲಾಷೆಯುಳ್ಳವನೂ, ಸ್ತ್ರೀಲಂಪಟನೂ, ಮದಿಸಿದವನೂ, ಮಾನಮರ್ಯಾದೆಗಳನ್ನು ಕಳೆದುಕೊಳ್ಳುವಲ್ಲಿ ಹೆದರದವನೂ, ಗರ್ವದ ನಡನಳಿಕೆಯವನೂ, ಧೈರ್ಯವಿಹೀನನೂ, ಪೂಜ್ಯರಾದ ಜನರಿಂದ ದೂರವಾದವನೂ, ಸದಾ ನಿದ್ರೆಯಲ್ಲಿರುವವನೂ ಆದ ಅರಸನಿಗೆ ದೊರಕಿದ ಐಶ್ವರ್ಯವು ಗಾಳಿಗೊಡ್ಡಿದ ದೀಪ. ಅದು ಹಾಳಾಗದೆ ಹೋಗುತ್ತದೆಯೆ ? ೧೨೫. ಆದ್ದರಿಂದ ಮಹಾರಾಜನೇ, ನೀನು (ಈಗ) ನೀತಿಯನ್ನು ತಿಳಿದವನಾಗಬೇಕು ; ಜ್ಞಾನಿಗಳು ಹೇಳಿದಂತೆ ನಡೆಯಬೇಕು ; ಆಗ ತಪ್ಪದೆ ನಿನ್ನ ಐಶ್ವರ್ಯವು ಯಶಸ್ಸನ್ನು ಕೊಡುವುದು. ಪೂಜ್ಯರಾದ ಜನರು ಒಪ್ಪುವ

ಕಲೆಯಱಿಯದ ವಿಟನಾತ್ಮನ
ನೆಲೆಯಱಿಯದ ಯೋಗಿ ವೇದಮಱಿಯದ ಪಾರ್ವಂ
ಬಲವಱಿಯದ ದಳಪತಿ ನಯು
ದೊಲವಱಿಯದ ನೃಪತಿ ಬಲ್ಲರಂ ಮಚ್ಚುಕುಮೇ ೧೨೬

ಸರಸಗುಣಶಾಲಿ ದೋಷಾ
ಕರರಹಿತಂ ಸ್ವಪ್ರಸಿದ್ಧಮತಿ ಬಂಧುರಮಂ
ಬುರುಹಮದು ಮಿತ್ರರುಚಿ ವಿ
ಸ್ಫುರಿತಂ ಸಿರಿಗಾದುದಲ್ತೆ ಮನೆ ಮನುಜೇಂದ್ರಾ ೧೨೭

ಸೋದರಿಯು ಮನೆಗೆ ಪಗೆ ಪಗೆ
ಗಾದಂ ನೆಲೆ ಸಲೆ ಕಲಂಕಿ ದೋಷಾಕರನಾ
ಹ್ಲಾದಿ ಗತಮಿತ್ರತೇಜದೊ
ಳಾದಾ ರಾಜಂಗಮೇಂ ಕ್ಷಯಂ ಸಮನಿಸದೇ ೧೨೮

ಹಾಗೆ ಸುಖವಾಗಿ ಬಾಳಬೇಕು. ೧೨೬. ಕಲಾಜ್ಞಾನವರಿಯದ ವಿಟನೂ, ತನ್ನ ಆತ್ಮದ ನೆಲೆಯನ್ನು ತಿಳಿಯದ ಯೋಗಿಯೂ, ವೇದಜ್ಞಾನವಿಲ್ಲದ ಬ್ರಾಹ್ಮಣನೂ, ತನ್ನ ಸೇನಾಸಾಮರ್ಥ್ಯವನ್ನರಿಯದ ಸೇನಾಪತಿಯೂ, ನೀತಿಯನ್ನರಿಯದ ನೃಪನೂ ಜ್ಞಾನಿಗಳನ್ನು ಮೆಚ್ಚಿಸುವನೇ ? ೧೨೭. ಮನುಜಶ್ರೇಷ್ಠನೇ, ಶೃಂಗಾರಾದಿ ರಸಗಳಿಂದಲೂ, ಶಾಂತಿ ದಾಂತಿ ಗುಣಗಳಿಂದಲೂ ಯುಕ್ತನೂ, ದೋಷಸಮೂಹದಿಂದ ದೂರನೂ, ಸ್ವಶಕ್ತಿಯಿಂದ ಪ್ರಸಿದ್ಧಗೊಂಡ ಬುದ್ಧಿಶಕ್ತಿಯಿಂದ ಕೂಡಿದವನೂ, ಕಮಲದ ಹಾಗೆ ಮಿತ್ರರುಗಳ ಆಸಕ್ತಿಯಿಂದ ವಿಕಾಸಗೊಳ್ಳುವವನೂ ಆದವನು ಲಕ್ಷ್ಮಿಯ ವಾಸಸ್ಥಾನಕ್ಕೆ ಕಾರಣನೆನಿಸುವನು. (ಕಮಲದ ಪರ ಅರ್ಥ) ಕಮಲವು ನೀರಿನಲ್ಲಿದ್ದು, ಕಮಲತಂತುಗಳಿಂದ ಕೂಡಿರುತ್ತದೆ. ಕತ್ತಲೆಯನ್ನುಂಟುಮಾಡುವ ಚಂದ್ರನಿಂದ ದೂರವಾದದ್ದು ಸುಂದರವಾದದ್ದು, ಬಂಧುರವಾದ ಸೂರ್ಯಕಿರಣ ಸಂಬಂಧದಿಂದ ವಿಕಸನಗೊಳ್ಳುವಂತಹುದು. ಆದುದರಿಂದಲೇ ಅದು ಲಕ್ಷ್ಮಿಯ ನೆಲೆಮನೆಯಾಯಿತು. ೧೨೮. ತನ್ನ ಒಡಹುಟ್ಟಿದವಳಾದ ಲಕ್ಷ್ಮಿಯ ಮನೆಯಾದ ಕಮಲಕ್ಕೆ ಶತ್ರುವೂ, ಹಗೆಯಾದ ರಾಹುವಿನ ಗ್ರಹಣಕ್ಕೆ ಆಶ್ರಯನಾದವನೂ, ಕಲಂಕವುಳ್ಳವನೂ (ಕಪ್ಪುಳ್ಳವನೂ), ರಾತ್ರಿಗೆ ಆಕರನಾದವನೂ, ಮುಳುಗಿಹೋದ ಮಿತ್ರತೇಜದಿಂದ ಬೆಳಗುವವನೂ ಆದ ಚಂದ್ರನಿಗೆ ನಾಶವು (ಕ್ಷಯ)ಉಂಟಾಗದಿರುವುದೇ ? ಅದರ ಹಾಗೆ ರಾಜನಿಗೂ ಕೂಡ,

ಎಡರಂ ಪಱಿಪೊಡೆ ಸಿರಿಯಂ
ಪಡೆವೊಡೆ ಪಳಿಪೊರ್ದವಮಳಗುಣಗಣಮಂ ತಾ
ಳ್ವಡೆ ಜಸಮನಾಂತು ಬಾಳ್ವಡೆ
ನುಡಿಯಂ ಕೇಳ್ವುದು ಜನಾಧಿಪಂ ಬುಧಜನರಾ ೧೨೯

ಕ್ಷಿತಿನಾಥ ನೀತಿವಿದ್ಯಾ
ಚತುರ್ಮುಖಂಗಮಮ ನಿನಗೆ ನೃಪನೀತಿಗುಣೋ
ನ್ನತಿಯಂ ಪೇಳ್ವುದು ಕಂತುಗೆ
ರತಿಕೃತಿ ಚತುರತೆಯನೊಸೆದು ಪೇಳ್ವವೊಲಕ್ಕುಂ ೧೩೦

ನಯಜಲಧಿ ನಿನ್ನೊಳೀಪ
ನ್ನಯಪಯಮಂ ಪಡೆದು ಮುನ್ನಮಿಾ ರಸನಾಬ್ದಂ
ರಯದಿಂ ಸೂರಿಯಲ್ ಶ್ರುತಿಶು
ಕ್ತಿಯೊಳೀಗಳ್ ಸಫಳಭಾವಮಂ ತಳೆಯದೆ ಪೇಳ್ ೧೩೧

ದೇವನೃಪತಿ ನೀತಿಸಾರಮ
ನಾವಂ ನಿನ್ನಂತೆ ಬಲ್ಲನೀ ಭುವನದೊಳಿ
ನ್ನೀ ವಿಜ್ಞಾಪನಮಂ ಪರಿ
ಭಾವಿಸಿ ಸಂತಕ್ಕೆ ನಡೆ ಸಮುನ್ನತಸತ್ವಾ ೧೩೨

೧೨೯. ವಿಪತ್ತಿನಿಂದ ದೂರವಾಗಬೇಕೆನ್ನುವ, ಐಶ್ವರ್ಯವನ್ನು ಹೊಂದಬೇಕೆಂಬುವ ನಿಂದೆಗೆ ಗುರಿಯಾಗದೆ ಶ್ರೇಷ್ಠವಾದ ಗುಣಗಳ ಸಮೂಹವನ್ನು ಪಡೆಯಬೇಕೆನ್ನುವ, ಯಶಸ್ಸಿನಿಂದ ಬಾಳಬೇಕೆನ್ನುವ ಅರಸನು ಜ್ಞಾನಿಗಳಾದ ಜನರ ಮಾತನ್ನು ಕೇಳಬೇಕು. ೧೩೦. ಭೂನಾಥನೇ, ಅಮಮ! ನೀತಿಶಾಸ್ತ್ರದಲ್ಲಿ ಚತುರ್ಮುಖ (ಬ್ರಹ್ಮ) ಸದೃಶನಾದ ನಿನಗೆ ರಾಜನೀತಿಗುಣಗಳ ಶ್ರೇಷ್ಠತೆಯನ್ನು ನಾನು ಹೇಳುವುದು ಮನ್ಮಥನಿಗೆ ರತಿ ಸಂಬಂಧವಾದ ಕ್ರಿಯೆಗಳ ವಿಷಯದಲ್ಲಿ ಚತುರತೆಯನ್ನು ಉತ್ಸಾಹದಿಂದ ಹೇಳಿದ ಹಾಗಾಗುತ್ತದೆ. ೧೩೧. ನೀತಿಗೆ ಸಮುದ್ರಪ್ರಾಯನಾದ ಹೇ ಸಿಂಹಳೇಂದ್ರನೇ, ನಿನ್ನಿಂದಲೇ ಅಲ್ಪಸ್ವಲ್ಪ ನೀತಿಯೆಂಬ ಸ್ವಲ್ಪನೀರನ್ನು ಪಡೆದ ಈ ನಾಲಗೆಯೆಂಬ ಮೇಘವು ನಿನ್ನ ಕಿವಿಗಳೆಂಬ ಶುಕ್ತಿಸಂಪುಟ (ಕಪ್ಪೆಚಿಪ್ಪು) ಕ್ಕೆ ಈಗ ವೇಗವಾಗಿ ನೀತಿಯಮಳೆಯನ್ನು ಸುರಿಸಿ, ಅದು ಮುತ್ತನ್ನು ಪಡೆಯುವಿಕೆಯೆಂಬ ಸಾಫಲ್ಯವನ್ನು ಪಡೆಯಲಿಕ್ಕಿಲ್ಲವೇ ಹೇಳು! ೧೩೨. ಅತ್ಯಧಿಕ ಸತ್ವವುಳ್ಳ ಸ್ವಾಮಿಯಾದ ಸಿಂಹಳೇಂದ್ರನೇ, ಈ ಭೂಮಿಯಲ್ಲಿ ನೀತಿಯ ಸಾರವನ್ನು ನಿನ್ನ ಹಾಗೆ ತಿಳಿದವನಾವನಿದ್ದಾನೆ? ನನ್ನ ಈ ವಿಜ್ಞಾಪನೆಯನ್ನು ಪರ್ಯಾ

ವ॥ ಎಂದನೇಕವಿಧದಿನಾ ನೀತಿಭೂಷಣಮಂತ್ರಿಪಂ ಸಾಭಿಪ್ರಾಯ ಹಿತಮಿತ ಪ್ರಚುರವಚನ ನಿಚಯದಿನೊಡಂಬಡಿಸುತ್ತಲ್ಲಿಂ ತಳ್ವದೆ ಕೊಳುಗುಳದೆಡೆಗೆ ತಳರ್ದು ತನ್ಮಂತ್ರಿಪನಂ ಸಂಧಿಸಿ ಸಂಧಿಕಾರ್ಯೋಚಿತ ವಚನನಿಚಯದಿನೊಪ್ಪುಗೊಳಿಸಿ ತತ್ಸಮೇತಂ ಬಂದು ಮಣಿರಥದೊಳಿರ್ಪ ರಾಜ ರಾಜಶೇಖರರಾಜೇಂದ್ರಂಗೆ ಮಣಿಮಕುಟಂ ಮಣಿದು ಬದ್ಧಾಂಜಲಿಯಾಗಿ ನಿಂದಿರ್ಪುದುಂ ನಿಜಮಂತ್ರಿವದನವಿಜ್ಞಾಪನ ವಿದಿತಾಖಿಳವೃತ್ತಾಂತನುಪಶಾಂತಚಿತ್ತನಾಗಿ ನಡೆನೋಳ್ಪಾಗಳ್

ಕಂ॥ ಅಳಿಯೆ ತಮಮಿಂದು ಚೆಂಗದಿ
ರ್ಗಳನುಳಿದಮಳಾಂಶುಗಳಿವವೊಲ್ ರಿಪುಗರ್ವಂ
ಕಳಿಯೆ ಗತರಾಗನಯನಾಂ
ಚಳರುಚಿಯಂ ತನ್ಮುಖಾಬ್ಜಮೇಂ ಸೂಸಿದುದೋ ೧೩೩

ವ॥ ಆಗಳಾ ನೀತಿಭೂಷಣನಿಂತೆಂದಂ

ಕಂ॥ ಯುವರಾಜ ರಾಜಶೇಖರ
ಭವದಾಹವವಿಕ್ರಮಕ್ಕೆ ಕೌತುಕಮಾಳ್ದಿ
ಮ್ಮವನೀಶಂ ಮಚ್ಚಿ ಮಹೋ
ತ್ಸವಮನನಾಗುತ್ತೆ ಮತ್ತೆ ಕಳುಪಿದನೆನ್ನಂ ೧೩೪

ಲೋಚಿಸಿ ಸಂಧಿಗೆ ತೆರಳು." ವ॥ ಹೀಗೆಂದು ಅನೇಕರೀತಿಯಿಂದ ಆ ನೀತಿಭೂಷಣನೆಂಬ ಮಂತ್ರೀಶ್ವರನು ಅರ್ಥಗರ್ಭಿತ ಅಭಿಪ್ರಾಯವನ್ನು ಹಿತವೂ ಮಿತವೂ ಆದ ಪ್ರಸಿದ್ಧ ವಚನಗಳನ್ನು ಹೇಳಿ ಒಡಂಬಡಿಸಿ, ಅಲ್ಲಿಂದ ತಡಮಾಡದೆ ಯುದ್ಧಭೂಮಿಗೆ ಹೋಗಿ ರಾಜಶೇಖರನ ಮಂತ್ರಿಯಾದ ಮಿತವಚನನನ್ನು ಸಂಧಿಸಿ, ಸಂಧಿಕಾರ್ಯಕ್ಕೆ ಉಚಿತವಾದ ಮಾತುಗಳಿಂದ ಆತನನ್ನು ಒಪ್ಪಿಸಿದನು. ಆ ಮಿತವಚನ ಸಮೇತನಾಗಿ ಬಂದು ಮಣಿರಥದಲ್ಲಿದ್ದ ರಾಜಶೇಖರ ರಾಜೇಂದ್ರನಿಗೆ ತನ್ನ ರತ್ನಖಚಿತ ಕಿರೀಟವನ್ನು ಬಾಗಿಸಿ ಕೈಮುಗಿದು ನಿಂತುಕೊಳ್ಳಲಾಗಿ, ರಾಜಶೇಖರನು ತನ್ನ ಮಂತ್ರಿಯು ವಿಜ್ಞಾಪಿಸಿಕೊಂಡ ಅಖಿಳ ಸಮಾಚಾರವನ್ನು ತಿಳಿದು, ಸಮಾಧಾನಹೊಂದಿದ ಮನಸ್ಸುಳ್ಳವನಾಗಿ ಆ ನೀತಿಭೂಷಣನನ್ನು ದಿಟ್ಟಿಸಿ ನೋಡುತ್ತಿದ್ದನು. ಆಗ ೧೩೩. ಕತ್ತಲೆಯು ಹೋಗಲು ಚಂದ್ರನು ಕೆಂಬಣ್ಣವನ್ನು ತೊರೆದು ವಿಮಲಕಿರಣವನ್ನು ಸೂಸುತ್ತಾನೆ. ಅಂತೆಯೇ ರಿಪುಗರ್ವವಳಿಯಲು ರಾಜಶೇಖರನ ಮುಖಕಮಲವು ಕಣ್ಣಿನ ಕೆಂಪನ್ನು ತೊರೆದು ಶುಭ್ರವಾದ ಕಾಂತಿಯನ್ನು ಸೂಸಿತು. (ರಾಜಶೇಖರನು ಕೋಪವನ್ನು ತೊರೆದು ಪ್ರಸನ್ನ ದೃಷ್ಟಿಯಿಂದ ನೋಡಿದನು). ವ॥ ಆಗ ಆ ನೀತಿಭೂಷಣನು ಹೀಗೆ ಹೇಳಿದನು : ೧೩೪. "ಯುವರಾಜನಾದ ರಾಜಶೇಖರನೇ, ನಿಮ್ಮ ಯುದ್ಧದಲ್ಲಿ ತೋರಿದ ಪರಾಕ್ರಮಕ್ಕೆ ಆಶ್ಚರ್ಯಗೊಂಡ ನಮ್ಮ ಮಹಾರಾಜನಾದ ಸಿಂಹಳೇಂದ್ರನು ಮೆಚ್ಚಿ ಅತ್ಯಂತ ಉತ್ಸಾಹ

ಎಮಗಂ ತಮಗಂ ಸಲ್ಲದು
ಸಮರಂ ಕಂಡಪೆವು ಕಪ್ಪಮಿತ್ತಪೆವೆಂಬೀ
ಕ್ರಮಮಂ ಬಿನ್ನವಿಸಲ್ಕೆಂ
ದು ಮದೀಶ್ವರನೆನ್ನನಟ್ಟಿದಂ ಯುವರಾಜಾ ೧೩೫

ವ॥ ಎಂಬುದುಮಾ ಧೀರೋದಾತ್ತ ಸಾರ್ವಭೌಮಂ ನಿಜಸಚಿವ ವದನಾರವಿಂದಮಂ ನೋಡಲೊಡನೆ

ಮ॥ಸ್ರ॥ ಎರೆದರ್ಗಿಲ್ಲೆನ್ನದೀವಗ್ಗಳಿಕೆ ಮಱಗೆ ಬಂದಾತನಂ ಕಾವ ಪೆಂಪಾಂ
ತರಿಯಂ ಸೀಳ್ದಿಕ್ಕುವಾಪಾರ್ಪಾಶ್ರಿತರನನುದಿನಂ ಪಾಲಿಪೊಂದೊಳ್ಪು ಗೌರೀ
ವರಭಕ್ತವ್ರಾತಮಂ ಮನ್ನಿಪ ಬಗೆ ತೊದಳೊಂದಿಲ್ಲದೊಳ್ವಾತು ಶಾಸ್ತ್ರೋ
ತ್ಕರ ಪಾಂಡಿತ್ಯಂ ಭವದ್ವಂಶಜರೊಳಿದು ನಿಬದ್ಧಂ ನಿತಾಂತಂ ಪ್ರಸಿದ್ಧಂ ೧೩೬

ವ॥ ಎಂದುಳ್ಳುದನುಪಚಾರಮಿಲ್ಲದೆ ನುಡಿದು ಮತ್ತಮಿಂತೆಂದಂ

ಕಂ॥ ಭುವನತ್ರಯದೊಳ್ ನಿನ್ನೊಳ್
ಬವರಂಗೊಳಲಾರ್ಸಮರ್ಥರದಱಿಂದವನೀ
ಧವ ಸಿಂಹಳೇಂದ್ರನೊಳ್ಸಂ
ಧಿವಿಧಾನಮನೊಪ್ಪುಕೈ ದಯಾಳುಗಳರಸಾ ೧೩೭

ವನ್ನು ಹೊಂದಿದವನಾಗಿ ನನ್ನನ್ನು ಇಲ್ಲಿಗೆ ಕಳುಹಿಸಿದ್ದಾನೆ. ೧೩೫. ಯುವರಾಜನೇ, ನಮಗೂ ನಿಮಗೂ ಯುದ್ಧವು ಆಗಬಾರದು. ತಮ್ಮನ್ನು ಕಾಣುತ್ತೇವೆ. ಕಪ್ಪವನ್ನು ಕೊಡುತ್ತೇವೆ ಎಂದು ನಮ್ಮ ಮಹಾರಾಜನು ತನ್ನ ಮನಸ್ಸಿನ ಈ ರೀತಿಯನ್ನು ಬಿನ್ನವಿಸಲಿಕ್ಕೆಂದು ಇಲ್ಲಿಗೆ ಕಳುಹಿಸಿದ್ದಾನೆ." ವ|| ಹೀಗೆಂದು ಹೇಳಿದ (ಆ ನೀತಿಭೂಷಣನೆಂಬ ಸಿಂಹಳನ ಮಂತ್ರಿಯ ಮಾತನ್ನು ಕೇಳಿ) ಧೀರೋದಾತ್ತಸ್ವಭಾವದ ರಾಜಶೇಖರಸಾರ್ವಭೌಮನು ತನ್ನ ಮಂತ್ರಿಯ ಮುಖಕಮಲವನ್ನು ನೋಡಿದ ಕೂಡಲೆ ೧೩೬. "ಬೇಡಿದವರಿಗೆ ಇಲ್ಲವೆನ್ನದೆ ಕೊಡುವ ಘನತೆ, ಬೆನ್ನುಬಿದ್ದವನನ್ನು ರಕ್ಷಿಸುವ ಹಿರಿಮೆ, ಎದುರಿಸಿದ ವೈರಿಯನ್ನು ಸೀಳಿಹಾಕುವ ಸಾಮರ್ಥ್ಯ, ಆಶ್ರಿತರಾದವರುಗಳನ್ನು ಸದಾ ಪಾಲಿಸುವ ಸಜ್ಜನಿಕೆ, ಶಿವಭಕ್ತರ ಸಮೂಹವನ್ನು ಮನ್ನಣೆ ಮಾಡುವ ರೀತಿ, ಒಂದು ಹುಸಿಯೂ ಇಲ್ಲದಂಥ ಒಳ್ಳೆಯ ಮಾತು, ಶಾಸ್ತ್ರಗಳಲ್ಲಿ ಅತಿಶಯ ಪಾಂಡಿತ್ಯ, ಇವು ನಿನ್ನ ವಂಶಸ್ಥರಾದ ಹಿರಿಯರಲ್ಲಿ ಕೂಡಿಕೊಂಡಿರುವ ಅಂಶ ಅತಿಪ್ರಸಿದ್ಧವಾದ ವಿಷಯ." ವ|| ಹೀಗೆಂದು ಇದ್ದುದನ್ನು ಇದ್ದಹಾಗೆ, ಅತಿಶಯೋಕ್ತಿಗೆ ಎಡೆಯಿಲ್ಲದಂತೆ ಹೇಳಿ ಪುನಃ ಹೀಗೆಂದನು : ೧೩೭. "ಮೂರು ಲೋಕದಲ್ಲಿ ನಿನ್ನೊಡನೆ ಯುದ್ಧಮಾಡಲು ಸಮರ್ಥರಾರಿದ್ದಾರೆ ? ಆದ್ದರಿಂದ ಎಲೈ ದಯಾಳುಗಳ ಅರಸನೇ, ಸಿಂಹಳಭೂಪಾಲನಲ್ಲಿ ಸಂಧಿ

ವ॥ ಎಂಬ ವಿಜ್ಞಾಪನದಿಂ ತನ್ಮನಃಪ್ರಸನ್ನತೆವಡೆದು ಬಂದ ಸಚಿವನನುಚಿತೋಕ್ತಿಗಳಿಂ ಮನ್ನಿಸಿ ಗಳಿಲನೆ ಕಳುಪಲವಂ ಬಂದೀ ವೃತ್ತಾಂತಮನೆಲ್ಲಮನುನ್ನತೋತ್ಸವಂ ಬಿನ್ನಪಂಗೆಯ್ಯಲೊಡನೊಡಂಬಟ್ಟವಂಗೆ ಬಹುಭೂಷಣಾಭರಣಂಗಳಂ ಮಚ್ಚುಗೊಟ್ಟು ಪಟ್ಟವಣೆಯಿಂದೇಳ್ದು ಪಟ್ಟಣಮಂ ಶೃಂಗರಿಸಿ ನಿಜಸಚಿವ ಸಾಮಂತ ದಂಡನಾಥ ಮಂಡಳಿಕರ್ವೆರಸು ವಿತತ ಕರಿ ತುರಗ ರಥ ಸುಭಟ ಪಟಲಪರಿವೃತಂ ಪಟಹ ಡಿಂಡಿಮ ಶಂಖ ತಾಳ ಕಹಳಾ ಬಹುಳನಾದ ಬಧಿರೀಕೃತ ದಿಶೇಂದ್ರಂ ಸಿಂಹಳೇಂದ್ರಂ ಸಾಂದ್ರಹರ್ಷಮನಾಂತು ನಡೆದಿದಿರ್ಗೊಂಡು ರಾಜಶೇಖರರಾಜೇಂದ್ರನಂ ರಾಜವೀಧಿಯೊಳೋಜೆವಿಗೆ ತರ್ಪಾಗಳ್

ಸ್ರ॥ ಶ್ರೀಮತ್ ಪ್ರಾಲೇಯಶೈಲೋದ್ಭವೆ ಶಿವೆ ಭುವನಾರಾಧ್ಯೆ ಕಲ್ಯಾಣಿ ಸಾಕ
ಲ್ಯಾಮರ್ತ್ಯಶ್ರೇಣಿ ರಕ್ಷಾಕರೆ ಭವಹರೆ ಶರ್ವಾಣಿ ಗೀರ್ವಾಣಮೌಳಿ
ಸ್ತೋಮಪ್ರೋದ್ಭಾಮ ರತ್ನವ್ರಜ ಶಬಳರುಚಿಸ್ನಿಗ್ಧಪಾದಾಬ್ಜೆ ದೇವೀ
ಪ್ರೇಮಂಬೆತ್ತೆನ್ನನಾಗಳ್ ಪೊರೆ ಪುರಹರಚೇತಃಸರೋರಾಜಹಂಸೀ ೧೩೮

ವಿಧಾನವನ್ನು ಒಪ್ಪಿಕೋ." ವ॥ ಹೀಗೆಂದು ಅರಿಕೆ ಮಾಡಿಕೊಂಡು ಆ ರಾಜಶೇಖರನ ಮನಸ್ಸಿನ ಪ್ರಸನ್ನತೆಯನ್ನು ಪಡೆದು, ಮಿತವಚನನು ಸಿಂಹಳೇಂದ್ರನ ಮಂತ್ರಿಯನ್ನು ಉಚಿತ ವಚನಗಳಿಂದ ಮನ್ನಣೆಮಾಡಿ ಆ ಕೂಡಲೆ ಕಳಿಸಿಕೊಡಲು, ಅವನು ಸಿಂಹಳೇಂದ್ರನಲ್ಲಿಗೆ ಬಂದು ಈ ಸಮಾಚಾರವನ್ನೆಲ್ಲ ಅಧಿಕವಾದ ಉತ್ಸಾಹದಿಂದ ಹೇಳಲಾಗಿ, ರಾಜನು ಆ ಕೂಡಲೆ ಒಡಂಬಟ್ಟು ಅವನಿಗೆ ಅನೇಕ ಭೂಷಣ ಆಭರಣಗಳನ್ನು ಬಹುಮಾನವಾಗಿ ಕೊಟ್ಟು, ಸಿಂಹಾಸನದಿಂದೆದ್ದು ಪಟ್ಟಣವನ್ನು ಶೃಂಗಾರಗೊಳಿಸಿ, ತನ್ನ ಸಚಿವ ಸಾಮಂತ, ಸೇನಾಪತಿ, ಮಾಂಡಳಿಕರನ್ನೊಳಗೊಂಡು, ವಿಸ್ತಾರವಾದ ಆನೆ, ಕುದುರೆ, ರಥ, ಕಾಲಾಳುಗಳ ಸೇನೆಯಿಂದ ಸುತ್ತುವರಿಯಲ್ಪಟ್ಟವನಾಗಿ, ದೊಡ್ಡ ನಗಾರಿ, ಚಿಕ್ಕ ನಗಾರಿ, ಶಂಖ, ತಾಳ, ಕಹಳೆಗಳೆ ಮೊದಲಾದುವುಗಳ ಬಹು ದೊಡ್ಡಧ್ವನಿಯಿಂದ ದಿಕ್ಪಾಲರುಗಳ ಕಿವಿಗಳು ಕಿವುಡಾಗುವ ಹಾಗೆ ಇರಲು, ಆ ಸಿಂಹಳರಾಜನು ಅತ್ಯಂತ ಹರ್ಷವನ್ನು ಹೊಂದಿ ನಡೆದು ಬಂದ ರಾಜಶೇಖರರಾಜೇಂದ್ರನನ್ನು ಎದುರುಗೊಂಡು ರಾಜಬೀದಿಯಲ್ಲಿ ತೇಜೋವಿಶೇಷದಿಂದ ಕೂಡಿ ಕರೆತರುತ್ತಿರುವಾಗ ೧೩೮. ಶ್ರೀಯುತನಾದ ಹಿಮವಂತನ ಪುತ್ರಿಯೂ, ಮಂಗಳಕರಳೂ, ಭುವನದ ಜನಗಳಿಂದ ಆರಾಧಿಸಲ್ಪಡುವವಳೂ, ಕಲ್ಯಾಣವನ್ನುಂಟುಮಾಡುವವಳೂ, ಸಮಸ್ತ ದೇವತಾಸಮೂಹ ರಕ್ಷಕಳೂ, ಜನನ ಮರಣರೂಪ ಸಂಸಾರದಿಂದ ವಿಮುಕ್ತಗೊಳಿಸುವವಳೂ, ಶಿವನ ಪತ್ನಿಯೂ, ದೇವತೆಗಳ ಶಿರಗಳ ಮೇಲಿರುವ ಕಿರೀಟರತ್ನಗಳ ಚಿತ್ರವಿಚಿತ್ರ ಬಣ್ಣಗಳ ಕಾಂತಿಯಿಂದ ಸುಂದರಗೊಂಡ ಪಾದವುಳ್ಳವಳೂ, ಶಿವನ ಮನಸ್ಸೆಂಬ ಸರೋವರದ ರಾಜಹಂಸ ಪಕ್ಷಿ

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣಮಹಾಪ್ರಭಾಪಟಲಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯ ಕವಿತಾವಿಶಾರದ ಶ್ರೀ ಷಡಕ್ಷರದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳಪ್ರಬಂಧದೊಳ್ ರಾಜಶೇಖರ ವಿಜಯವರ್ಣನಂ

ಅಂತು ಆಶ್ವಾಸ ೬ಕ್ಕಂ ಪದ ೭೮೨ಕ್ಕಂ ಮಂಗಳ ಮಹಾಶ್ರೀ

## ಷಷ್ಠಾಶ್ವಾಸಂ

ಸಂಪೂರ್ಣಂ

ಯಂತಿರುವ ಪಾರ್ವತೀದೇವಿಯು ಪ್ರೇಮಗೊಂಡು ನನ್ನನ್ನು ಸದಾ ಪೊರೆಯಲಿ. ಗದ್ಯ॥ ಈ ಪದ್ಯ ಗದ್ಯರೂಪವಾದ ಪ್ರಬಂಧವು ವಂದಿಸುತ್ತಿರುವ ದೇವಶ್ರೇಷ್ಠರಾದವರ ಕಿರೀಟದಲ್ಲಿ ಕೆತ್ತಿರುವ ರತ್ನಸಮೂಹದ ಅಧಿಕ ಪ್ರಭೆಯ ಸಮುದಾಯದಿಂದ ಸುತ್ತಲ್ಪಟ್ಟಿರುವ ಪರಮೇಶ್ವರನ ಶೋಭಾಮಯ ಪಾದಗಳ ಉಗುರುಗಳೆಂಬ ಚಂದ್ರರುಗಳ ದಟ್ಟವಾದ, ವಿಶಾಲ ಕಾಂತಿಯ ಬೆಳದಿಂಗಳಿಗೆ ಪ್ರಕಾಶಮಾನವಾದ ಚಕೋರದಂತಿರುವ ರಸಜ್ಞರಾದ ಜನರಿಂದ ಮನ್ನಿಸಲ್ಪಟ್ಟ ಉಭಯಭಾಷಾ ಕವಿತೆಯಲ್ಲಿ ವಿಶಾರದನಾದ ಷಡಕ್ಷರದೇವನಿಂದ ರಚಿಸಲ್ಪಟ್ಟ ರಾಜಶೇಖರ ವಿಳಾಸವೆಂಬ ಮಹಾಪ್ರಬಂಧದಲ್ಲಿ ರಾಜಶೇಖರ ವಿಜಯ ವರ್ಣನಂ.

## ಷಷ್ಠಾಶ್ವಾಸ

ಮುಗಿದುದು

# ಸಪ್ತಮಾಶ್ವಾಸಂ

ಕಂ॥ ಶ್ರೀ ಧರಣೀಧರಜಾಕುಚ
ಭೂಧರಕೃತಧಾತು ನಿಜಕರಾರುಣರುಚಿಗಂ
ಗಾಧರನೆಮ್ಮಂ ಪೊರೆಗೆ ಪ
ಯೋಧರ ಶಿತಿಕಂಧರಂ ಸದಾಶಿವಲಿಂಗಂ ೧

ಕರಿ ಕಾರ್ಮುಗಿಲಂತಿರೆ ಬ
ಜ್ಜರದಂಕುಶಮಮರ್ದ ವಜ್ರದಂತಿರೆ ಮೇಲಿಂ
ದಿರನಾರೋಹಿಸಿ ಬರ್ಪಂ
ತಿರೆ ಬಂದಂ ರಾಜಶೇಖರಕ್ಷಿತಿಪಾಲಂ ೨

ಚಂ॥ ಇನರುಚಿಯಂ ಪಳಂಚಲೆಯೆ ಮೌಳಿಮಣಿಪ್ರಭೆ ಗಂಡಭಿತ್ತಿಯಂ
ಘನಮಣಿಕುಂಡಲಾಂಶು ಮಿಗೆ ಚಿತ್ರಿಸೆ ವಕ್ತ್ರಮರೀಚಿ ಪೂರ್ಣಚಂ
ದ್ರನ ಕದಿರಂ ಪಗಲ್ತಿರೆ ತನುದ್ಯುತಿ ತಳ್ವದೆ ನೋಳ್ಪ ಕಾಮಿನೀ
ಜನಮನದೊಳ್ಮನೋಜಜನನಂಬಡೆವುತ್ತಿರೆ ಬಂದನಾ ನೃಪಂ ೩

೧. ಶೋಭಾಯುಕ್ತೆಯಾದ ಪಾರ್ವತಿಯ ಪರ್ವತ ಸದೃಶ ಉರೋಜಗಳ ಮೇಲೆ ಇರುವ ಗೈರಿಕಾದಿ ಧಾತುಗಳಿಂದ ಕೆಂಪಾದ ಕೈಬಣ್ಣವುಳ್ಳವನೂ, ಗಂಗಾಧರನೂ, ಮೇಘದಂತೆ ಕಪ್ಪಾದ ಕುತ್ತಿಗೆಯುಳ್ಳವನೂ ಆದ ಶಿವಲಿಂಗನು ನಮ್ಮನು ಸದಾ ಪಾಲಿಸಲಿ. ೨. (ಆ ರಾಜಶೇಖರನು ಆನೆಯನ್ನೇರಿ ಸಿಂಹಳರಾಜನ ಪುರಪ್ರವೇಶ ಮಾಡುವಾಗ ಹೀಗೆ ಕಂಡನು :) ಆನೆಯೇ ಕಾರ್ಮುಗಿಲಾಗಿಯೂ, ವಜ್ರದಿಂದ ಮಾಡಿದ ಅಂಕುಶವೇ ಶೋಭಾಮಯ ವಜ್ರದಂಡವಾಗಿಯೂ, ಮೇಲೆ ಕುಳಿತಿರುವವನೇ ದೇವೇಂದ್ರನಾಗಿಯೂ ಬರುವ ಹಾಗೆ ಇರಲು, ರಾಜಶೇಖರಭೂಪಾಲನು ಆನೆಯ ಮೇಲೆ ಬಂದನು. ೩. ಆ ನೃಪನ ಕಿರೀಟದಲ್ಲಿರುವ ರತ್ನಪ್ರಭೆಯು ಸೂರ್ಯಪ್ರಭೆಯನ್ನು ತಾಕಲು, ಶ್ರೇಷ್ಠವಾದ ರತ್ನದ ಕರ್ಣಾಭರಣಗಳ ಪ್ರಕಾಶವು ಕಪೋಲಗಳೆಂಬ ಗೋಡೆಯನ್ನು ಚಿತ್ರವಿಚಿತ್ರಗೊಳಿಸಿರಲು, ಮುಖದ ಮತ್ತು ದೇಹದ ಕಿರಣಗಳು ಪೂರ್ಣಚಂದ್ರನ ಕಿರಣಗಳನ್ನು ತಿರಸ್ಕರಿಸುತ್ತಿರಲು, ನೋಡುವ ಸ್ತ್ರೀಯರ ಮನಸ್ಸಿನಲ್ಲಿ ಮನ್ಮಥನು ಬಾಣವನ್ನು

ವ॥ ಅಂತು ಬರ್ಪಾಗಳ್

ಉ॥ ಪಾಡುವ ಗೀತಮಂ ನಿಲಿಸಿ ವೀಣೆಯನಾಳಿಯ ಕಯ್ಯೊಳಿತ್ತು ಮ
ತ್ತಾಡುವ ನೆತ್ತಮಂ ಬಿಸುಟಲಂಕೃತಿಯಂ ರಯದಿಂದೊಡರ್ಚಿ ಮೇ
ಳಾಡುವ ನೃತ್ಯಮಂ ತೊಲಗಿ ಕೇಳ್ವಿನಿಗಬ್ಬಮನೊತ್ತಿಬಂದವ
ರ್ನೋಡಿದರಾ ಕುಮಾರಕನನಾ ಪುರದಂಗನೆಯರ್ವಿಳಾಸದಿಂ ೪

ವ॥ ಮತ್ತಮವರೊಳೊರ್ವಿಚ್ಚೆಗಾರ್ತಿ

ಉ॥ ಕೆಂಬರಲೋಲೆ ಕೇತಕಿಯ ಸೋರ್ಮುಡಿ ಕೆಂದಳಿರುದ್ಧ ಕರ್ಣಪೂ
ರಂ ಬಗೆಗೊಂಬ ಮಲ್ಲಿಗೆಯ ಚೋಲ್ಲೆಯಮಬ್ಜಗುಣಾಂಬರಂ ಸುವ
ರ್ಣಾಂಬುಜ ಕರ್ಣಿಕಾರಚಿತಕಾಂಚಿ ತೆರಂಬೊಳೆದೊಪ್ಪೆ ಪೂತ ಮಾ
ವಂ ಬಿಡದೇಱಿ ನೋಳ್ಪ ರತಿಯಂತಿರೆ ಸೌಧಮನೇಱಿ ನೋಡಿದಳ್ ೫

ವ॥ ಮತ್ತಮೊಂದು ಭರ್ಮಹರ್ಮ್ಯದಗ್ರಪ್ರದೇಶದಲ್ಲಿ

ಚಂ॥ ನಿಱಿವಿಡಿದುಟ್ಟು ಚೀನಲಲಿತಾಂಬರಮಂ ಪೊಸಮುತ್ತುದೊಟ್ಟು ಮೇ
ಣ್ಮಿಱುಗುವ ವಜ್ರದೋಲೆಗಳ ಪಾಲೆಗಳೊಳ್ತಳೆದಣ್ಬುಗೆಯ್ದು ಬಾಂ
ದೊಱೆನೊರೆಯಂತೆ ತೋರ್ಪ ಸಿರಿಖಂಡಮನೊರ್ವ ಬೆಡಂಗಿ ವೀಣೆಯಂ
ನೆಱೆ ಪಿಡಿದೇಱಿ ವಾಣಿಯೆನೆ ಜಾಣೆ ಜಲಕ್ಕನೆ ನಿಂದು ನೋಡಿದಳ್ ೬

ಹೂಡುತ್ತಿರಲು ಬಂದನು. ವ|| ಆ ರೀತಿ ಬರುತ್ತಿರುವಾಗ ೪. ಆ ಪಟ್ಟಣದ ಸ್ತ್ರೀಯರು ಹಾಡುವ ಸಂಗೀತವನ್ನು ನಿಲ್ಲಿಸಿ, ವೀಣೆಯನ್ನು ದಾಸಿಯರ ಕೈಯಲ್ಲಿ ಕೊಡುತ್ತ, ಮತ್ತು ಆಡುವ ಪಗಡೆಯಾಟವನ್ನು ತಿರಸ್ಕರಿಸಿ, ಆಡುವ ನೃತ್ಯವನ್ನು ಬಿಟ್ಟು ಕೊಟ್ಟು, ಕೇಳತಕ್ಕ ಇನಿದಾದ ಕಾವ್ಯವಾಚನವನ್ನು ಬಿಟ್ಟು, ಅಲಂಕಾರ ಮಾಡಿಕೊಂಡು ಸಂಭ್ರಮದಿಂದ (ಓಡೋಡಿ) ಬಂದು ಆ ರಾಜಶೇಖರಕುಮಾರನನ್ನು ನೋಡಿದರು. ವ|| ಆ ಹೆಂಗಸರುಗಳಲ್ಲಿ ಒಬ್ಬ ಕಾಮಿನಿ, ೫. ಕೆಂಪಾದ ಹೂವಿನ ಓಲೆ, ಕೇದಗೆಯ ಹೂವಿನ ತುರುಬು, ಕೆಂಪು ಚಿಗುರಿನ ಶ್ರೇಷ್ಠವಾದ ಕರ್ಣಭೂಷಣ, ಮನಸ್ಸನ್ನು ಸೆಳೆಯುವ ಮಲ್ಲಿಗೆಹೂವಿನ ಕುಪ್ಪಸ, ಕಮಲದದೇಟಿನ ನಾರಿನಿಂದ ಮಾಡಿದ ಬಟ್ಟೆ (ಸೀರೆ), ಬಂಗಾರವರ್ಣದ ಕಮಲದ ಕರ್ಣಿಕಾರದಿಂದ ಮಾಡಿದ ಡಾಬು–ಮೊದಲಾದುವು ಪ್ರಕಾಶಮಾನವಾಗಿ ಒಪ್ಪುತ್ತಿರಲು, ಅವಳು ಹೂವು ಬಿಟ್ಟ ಮಾವಿನ ಮರವನ್ನೇರಿ ನೋಡುವ ರತಿಯಂತೆ ಸೌಧವೊಂದನ್ನೇರಿ ನೋಡಿದಳು. ವ|| ಇನ್ನೊಂದು ಸುವರ್ಣ ಮಯ ಉಪ್ಪರಿಗೆಯ ಮೇಲ್ಭಾಗದ ಪ್ರದೇಶದಲ್ಲಿ ನಿಂತು ೬. (ಓರ್ವ) ಜಾಣೆಯಾದ ಸುಂದರ ಸ್ತ್ರೀಯು ಲಲಿತವಾದ ಚೀನಾಂಬರವನ್ನು ನಿರಿಗೆ ಹಿಡಿದುಟ್ಟುಕೊಂಡು, ಕಾಂತಿ ಯಿಂದ ಕೂಡಿದ ಹೊಸಮುತ್ತಿನ ತೊಡವುಗಳನ್ನು ತೊಟ್ಟು, ಮಿಂಚುತ್ತಿರುವ ವಜ್ರ ಮಯ ಓಲೆಗಳನ್ನು ಕಿವಿಗಳಲ್ಲಿ ಧರಿಸಿ, ಆಕಾಶಗಂಗಾನದಿಯ ನೊರೆಯಂತೆ ತೋರುವ ಶ್ರೀಗಂಧವನ್ನು ತೊಡೆದುಕೊಂಡು, ಸರಸ್ವತಿಯೋ ಎನ್ನುವಂತೆ ವೀಣೆಯನ್ನು ಕೈಯಲ್ಲಿ

ಪೃಥ್ವಿ॥ ಕನತ್ಕನಕಭೂಷಣಂದಳೆದು ಕುಂಕುಮಕ್ಷೋದಮಂ
ಘನಸ್ತನಕೆ ಲೇಪಿಸುತ್ತೊಡನೆ ತಾಳ್ದು ಪೊಂಬಟ್ಟೆಯಂ
ವನೇರುಹಮನೋಜೆಯಿಂ ಪಿಡಿದು ನಿಂದು ಹರ್ಮ್ಯಾಬ್ಜದೊಳ್
ಜನೇಶಸುತನಂ ರಮಾವಧುವೆನಲ್ಕೆಆಳ್ನೋಡಿದಳ್ ೭

ವ॥ ಮತ್ತಮೊರ್ವಳ್ಮಾಧುರ್ಯಮನೋಹರೆ

ಮ॥ಸ್ರ॥ ಮುಡಿಯಿಂ ಪೂಮಾಲೆ ಸೂಸುತ್ತಿರೆ ಪೊಡರೆ ನಿತಂಬದ್ವಯಂ ಮುಂಗುರುಳ್ಸಾ
ಲ್ವಿಡಿದೆತ್ತಂ ನರ್ತಿಸುತ್ತೊಪ್ಪಿರೆ ಚಳಧವಳಾಪಾಂಗವಿಂಬಾಗೆ ಕಂಪಂ
ಬಡೆದುತ್ತುಂಗಸ್ತನಂಗಳ್ಮಿಸುಗೆ ನಿಜಿ ಕರಂ ಜಾಱೆ ನೈಪಥ್ಯಮಂ ತಾಂ
ತೊಡೆದಿರ್ದಿರ್ದಂತೆ ಬಂದಂದವನಿಪತಿಯನಬ್ಜಾಕ್ಷಿ ನೋಡುತ್ತಮಿರ್ದಳ್ ೮

ವ॥ ಮತ್ತಮೊರ್ವಳಖರ್ವಸಗರ್ವ ತಾರುಣ್ಯವತಿ

ಚಂ॥ ಅಳಿದಳಕಾಳಿ ಕಂಪಿಸುವ ನುಣ್ನೊಡೆ ಸೂಸುವ ಸುಯ್ಪುಮರ್ತ ಕೋ
ಮಳತನು ಗುಜ್ಜುಗೊಂಡ ಮೊಲೆವುರ್ಬಿ ಬೆಳರ್ತಧರಂ ಸಡಿಲ್ದ ಮಂ
ಜುಳವಸನಂ ಸರಾಗನಯನಾಂಚಳಮೊಪ್ಪಿರೆ ಕಂತುಕೇಳಿಯಾಂ
ತೆಳೆಯುಳೊಱಲ್ದು ಬಂದು ಮಣಿವಾಗಿಲೊಳೀಕ್ಷಿಸಿದಳ್ ಮಹೀಶನಂ ೯

ಧರಿಸಿಕೊಂಡೇ ತಟ್ಟನೆ ಬಂದು ನಿಂತು ನೋಡಿದಳು. ೭. ಮತ್ತೊಬ್ಬ ಹೆಂಗಸು ಮಿನುಗು ತ್ತಿರುವ ಸುವರ್ಣಮಯ ಆಭರಣಗಳನ್ನು ಧರಿಸಿ, ಕುಂಕುಮಕೇಸರಿಯ ಧೂಳನ್ನು ದೊಡ್ಡ ದೊಡ್ಡ ಕುಚಗಳಿಗೆ ಲೇಪಿಸಿಕೊಂಡು, ಬಂಗಾರದ ಜರಿಯ ಸೀರೆಯನ್ನುಟ್ಟು, ಕಯ್ಯಲ್ಲಿ ಕಮಲಪುಷ್ಪವನ್ನು ಶೀವಿಯಿಂದ ಹಿಡಿದುಕೊಂಡು ಉಪ್ಪರಿಗೆಯೆಂಬ ಕಮಲ ದಲ್ಲಿ ನಿಂತು ಶ್ರೀ ಲಕ್ಷ್ಮಿಯೋ ಎಂಬಂತೆ ಆ ರಾಜಕುಮಾರನನ್ನು ನೋಡಿದಳು. ವ॥ ಮತ್ತೊಬ್ಬ ಮಾಧುರ್ಯ ಮತ್ತು ಮನೋಹರತೆಯಿಂದ ಕೂಡಿದ ತರುಣಿ ಬಂದಾಗ, ೮. ಕಮಲದಂತಹ ಕಣ್ಣುಳ್ಳ ಆ ಮನೋಹರೆಯ ಮುಡಿಯಿಂದ ಹೂಮಾಲೆ ಜಾರಿ ಬೀಳುತ್ತಿತ್ತು ; ನಿತಂಬಗಳು ಚಲಿಸುತ್ತಿದ್ದವು ; ಮುಂಗುರುಳುಗಳು ಸಾಲುಸಾಲಾಗಿ ಸುತ್ತಲೂ ನರ್ತಿಸುತ್ತ ಶೋಭಿಸುತ್ತಿದ್ದವು ; ಚಂಚಲವಾದ ಧವಳವರ್ಣದ ಕಡೆಗಣ್ಣ ನೋಟವು ಇಂಬುಗೊಂಡಿತ್ತು ; ನಡುಗುತ್ತಿರುವ ದಪ್ಪನಾದ ಮೊಲೆಗಳು ಹೊಳೆಯು ತ್ತಿದ್ದವು ; ಉಟ್ಟ ನಿರಿಯು ಜಾರಿತ್ತು. ಹೀಗಿರುವ ಅವಳು ಬಾಗಿಲ ಜವನಿಕೆಯನ್ನು ತೆಗೆದುಹಾಕಿ, ಇದ್ದಿದ್ದಹಾಗೆಯೇ ಬಂದು ರಾಜಶೇಖರಮಹಾರಾಜನನ್ನು ನೋಡುತ್ತಿ ದ್ದಳು. ವ॥ ಮತ್ತೊಬ್ಬ ಅಧಿಕ ಗರ್ವದಿಂದ ಕೂಡಿದ ತರುಣ ಹೆಂಗಸು ೯. (ತಾನು) ಸಂಭೋಗಕ್ರಿಯೆಯಲ್ಲಿ ತೊಡಗಿದ್ದರಿಂದ ಎಳೆಯ ಪ್ರಾಯದ ಅವಳ ಚಲ್ಲಾಪಿಲ್ಲಿಯಾದ ಮುಂಗುರುಳು, ನಡುಗುವ ನುಣ್ಣನೆಯ ತೊಡೆ, ದೀರ್ಘವಾದ ಉಸಿರು, ಬೆವರಿದ ಕೋಮಲ ದೇಹ, ತಗ್ಗಿದ ಮೊಲೆ, ಉಬ್ಬಿಕೊಂಡು ಬೆಳ್ಳಗಾದ ತುಟಿ, ಸಡಿಲಿದ ಮನೋ ಹರ ಸೀರೆ, ಕೆಂಪಾಗಿ ಅನುರಾಗವನ್ನು ಸೂಚಿಸುವ ಕಣ್ಣು, ಇವುಗಳಿಂದ ಮನೋಹರ

ಮ॥ ಕುರುಳಂ ಕೂರುಗುರಿಂದೆ ನೇವರಿಸುತಂ ಹಸ್ತಾಬ್ಜಲೀಲಾಬ್ಜಮಂ
ತಿರುಪುತ್ತಂ ಕಚಗಂಧಕಾರ್ದಳಿಪ ಭೃಂಗವ್ರಾತಮಂ ಸೋವುತಂ
ಪರಪುತ್ತಂ ನವಪುಷ್ಪವೃಷ್ಟಿಯನಪಾಂಗದ್ಯೋತಿಯಿಂದೊರ್ವ ಸೌಂ
ದರಿ ಬಂದೀಕ್ಷಿಸಿದಳ್ ಪ್ರಸೂನವಿಶಿಖಶ್ರೀರೂಪನಂ ಭೂಪನಂ ೧೦

ವ॥ ಮತ್ತಂ

ಚಂ॥ ಮುಡಿ ಬಿಡುತಂದು ಸೂಸೆ ಮುಗುಳಂ ಮೊಲೆ ಮೇಲುದನೊತ್ತೆ ಬಳ್ಕೆ ತೆ
ಳ್ನಡು ಕಡೆಗಣ್ಣ್ವಿಳಾಸಮನೆ ಸೂಸೆ ರವಂಗುಡೆ ಕಾಂಚಿ ಬಿಣ್ಪಿನಿಂ
ಜಡಿಯೆ ನಿತಂಬಬಿಂಬ ಮಿಳಿರ್ದೊಪ್ಪಿರ್ಕೆ ಬಲ್ನಿಱಿ ನೀೞ್ ಸಾರೆವಂ
ದಡರ್ದೆಳೆಮುತ್ತಿನುಪ್ಪರಿಗೆಯಂ ನಡೆನೋಡಿದಳಾ ನರೇಂದ್ರನಂ ೧೧

ಮ॥ ಕಡೆಗಣ್ಕಂತುಶರಾಸನಕ್ಕೆ ಸುಮನೋಬಾಣಂಗಳಂ ನೀಡೆ ಸೋ
ರ್ಮುಡಿ ಸಾರ್ದಾಳಿಡಿಗಳ್ಗೆ ಸಾರ್ಚೆ ಕುಸುಮಾಮೋದಂಗಳಂ ಚೆಲ್ವ ಮೆ
ಲ್ನುಡಿ ಪಾಂಡಿತ್ಯಮನೀಯೆ ಕಯ್ಯ ಗಿಳಿಗೊಲ್ದ್ಯೈತಂದರಾಯಂಚೆಗೊ
ಳ್ನಡೆಯಂ ಮೆಲ್ಲಡಿ ಬೀಱೆ ಬಂದು ಪೆಱಳೊರ್ವಳ್ ಭೂಪನಂ ನೋಡಿದಳ್ ೧೨

ವಾಗಿ ಶ್ರಮದಿಂದಲೇ ಬಂದು, ಬಾಗಿಲಲ್ಲಿಯೇ ನಿಂತು ಆ ರಾಜಶೇಖರ ಮಹೀಪತಿಯನ್ನು ನೋಡಿದಳು. ೧೦. ಓರ್ವ ಚೆಲುವೆಯಾದ ಹೆಂಗಸು ತನ್ನ ಮುಂಗುರುಳುಗಳನ್ನು ಚೂಪಾಗಿ ಬೆಳೆಸಿದ್ದ ಉಗುರುಗಳಿಂದ ಸರಿಪಡಿಸಿಕೊಳ್ಳುತ್ತ, ಕಮಲದಂತಹ ಹಸ್ತದಲ್ಲಿ ಲೀಲೆಗಾಗಿ ಹಿಡಿದಿದ್ದ ಕಮಲಪುಷ್ಪವನ್ನು ತಿರುಗಿಸುತ್ತ, (ಅದರಿಂದ) ಸೋರ್ಮುಡಿ ಯಲ್ಲಿದ್ದ ಹೂವುಗಳ ಸುಗಂಧಕ್ಕೆ ಝೇಂಕಾರ ಮಾಡುತ್ತ ಮುತ್ತುತ್ತಿದ್ದ ದುಂಬಿಗಳನ್ನು ಹೊಡೆದು ಓಡಿಸುತ್ತ, ಕಡೆಗಣ್ಣಿನ ಕಾಂತಿಯಿಂದ ನೂತನ ಪುಷ್ಪಗಳನ್ನೇ (ಎಲ್ಲ ಕಡೆಗೂ) ಹರಡುತ್ತಿರುವಳೋ ಎಂಬಂತೆ ಕೂಡಿ, ಪುಷ್ಪಬಾಣನಾದ ಮನ್ಮಥ ಕಾಂತಿಯ ರೂಪವುಳ್ಳ ರಾಜಶೇಖರಮಹಾರಾಜನನ್ನು ನೋಡಿದಳು. ವ॥ ಮತ್ತು ೧೧. ಮುಡಿಯು ಬಿಚ್ಚಿ ಮುಡಿದ ಮೊಗ್ಗುಗಳು ಉದುರುತ್ತಿರಲು, ಮೊಲೆಗಳು ತಮ್ಮ ಮೇಲಿನ ಸೆರಗನ್ನು ಜಾರಿಸಿರಲು, ತೆಳುವಾದ ನಡುವು ಬಳುಕುತ್ತಿರಲು, ಕಣೆಗಣ್ಣುಗಳು ವೈಯಾರ ವನ್ನು ಹೊರಚಿಮ್ಮುತ್ತಿರಲು, ಡಾಬು (ಗೆಜ್ಜೆಗಳ) ಧ್ವನಿಮಾಡುತ್ತಿರಲು, ದಪ್ಪನಾದ ದುಂಡು ನಿತಂಬಗಳು ಅಲ್ಲಾಡುತ್ತಿರಲು, ಉಟ್ಟ ಸೀರೆಯ ನಿರಿಗೆಗಳು ಕೆಳಸರಿದು ಶೋಭಿಸು ತ್ತಿರಲು ಓರ್ವ ಚಲುವೆಯು ಹೊರಹೊರಟು ಬಂದು ಎಳೆಯ ಮುತ್ತಿನಿಂದ ಅಲಂಕರಿಸಿದ್ದ ಉಪ್ಪರಿಗೆಯನ್ನೇರಿ ಆ ರಾಜಶೇಖರ ನರೇಂದ್ರನನ್ನು ದಿಟ್ಟಿಸಿ ನೋಡಿದಳು. ೧೨. ಮತ್ತೊ ಬ್ಬಳು ಕಡೆಗಣ್ಣಿನ ದೃಷ್ಟಿಯು ಮನ್ಮಥನ ಬಿಲ್ಲಿಗೆ ಪುಷ್ಪಬಾಣಗಳನ್ನು ಕೊಡುತ್ತಿರಲು, ಸೊಂಪಾದ ಮುಡಿಯು ಮುತ್ತಿದ ಭ್ರಮರಗಳಿಗೆ ಹೂವಿನ ಸುಗಂಧವನ್ನು ನೀಡುತ್ತಿರಲು, ಚೆಲುವಾದ ಮೃದುನುಡಿಗಳು ಕೈಯಲ್ಲಿರುವ ಗಿಳಿಗಳಿಗೆ ವಾಕ್ಪಾಂಡಿತ್ಯವನ್ನು ಹೇಳು ತ್ತಿರಲು, ಮಂದಗಮನವು ಒಲಿದು ಹತ್ತಿರಕ್ಕೆ ಬಂದ ಅರಸಂಚೆಗಳಿಗೆ ಒಳ್ಳೆಯ ನಡಿಗೆ ಯನ್ನು ಕಲಿಸುತ್ತಿರಲು ಬಂದು, ಆ ರಾಜಶೇಖರಭೂಪಾಲನನ್ನು ನೋಡಿದಳು.

ಕುಡಿಮಿಂಚಂ ಮುಱಿದಂತಿರಾಗೆ ಕಡೆಗಣ್ಣೋಟಂ ಮೃದುಸ್ಮೇರಮಿಂ
ಗಡಲಂ ತುಳ್ಕಿದ ಮಾಳ್ಕೆಯಿಂದೊಗೆಯೆ ಜೇನ್ಸೈಸೋನೆಯಂ ಸೂಸೆ ಮ
ಲ್ಪುಡಿ ಪಾದಾರುಣರೋಚಿ ಚೆಂದಳಿರ್ಗಳಂ ಸಾಲಿಟ್ಟವೊಲ್ತೋಱೆ ಬಂ
ದುಡುರಾಜಾನನೆ ರಾಜಶೇಖರನನೊರ್ವಳ್ ಕೂರ್ಮೆಯಿಂ ನೋಡಿದಳ್ ೧೩

ವ॥ ಇಂತು ನೀಱೆಯರ್ ನೆರೆನೆರೆದು ನೆಲೆವಾಡಂಗಳ ನೆಲೆನೆಲೆಯೊಳ್ ನೋಡುತ್ತು ಮಿರೆಯಿರೆ

ಕಂ॥ ಸೆಳೆದುದವರಾಸ್ಯರುಚಿ ನವ
ಸಳಿಳಚಳಚ್ಚಪಳನಯನ ಶಫರಂಗಳನಾ
ನಳಿನದಳಧವಳನಯನೋ
ಜ್ವಳರುಚಿಜಾಳಕಮಿಳಾತಳಾಧಿಪಸುತನಾ ೧೪

ವ॥ ಆಗಳಿತ್ತಲಾ ಸಿಂಹಳೇಂದ್ರನಂತಃಪುರ ಸರೋವರಬಾಲಹಂಸಿ ಸರ್ವಮಂಗಳಾ ವರದಿಂದುದಯಿಸಿದ ಸರ್ವಮಂಗಳೆಯೆಂಬ ತದ್ರಾಜಪುತ್ರಿ ರತಿವಿಳಾಸಮಂ ತಳೆದತಿವಿನೋದದಿಂ ಕೇಳೀವನದ ಕೆಂದಳಿರ್ವಂದರದೊಳವಳಯದ ಕುಸುಮಮಂಟಪದೊಳಲರ್ವಸೆಯೊಳ್ಪಸದನಂ

೧೩. ನಕ್ಷತ್ರರಾಜನಾದ ಚಂದ್ರಸದೃಶ ಮುಖವುಳ್ಳ ಓರ್ವಳು, ಕಡೆಗಣ್ಣಿನ ನೋಟವು ಸೆಳೆಮಿಂಚನ್ನು ಮುರಿದಿರುವಂತೆ ಇರಲು, ಮೃದುನುಡಿಗಳು ಜೇನಿನ ಮಳೆಯನ್ನೇ ಸುರಿಸುತ್ತಿರುವಂತಿರಲು, ಪಾದಗಳ ಕೆಂಪು ಕಾಂತಿಯು ಕೆಂಪಾದ ಚಿಗುರುಗಳನ್ನು ಸಾಲಾಗಿ ಜೋಡಿಸಿರುವಂತೆ ತೋರಲು, ಬಂದು ಪ್ರೀತಿಯಿಂದ ಆ ರಾಜಶೇಖರನನ್ನು ನೋಡಿದಳು. ವ|| ಈ ರೀತಿಯಲ್ಲಿ ಚಲುವೆಯರು ಗುಂಪುಗುಂಪಾಗಿ (ಅಲ್ಲಲ್ಲಿ) ಸೌಧಗಳ ಮಾಳಿಗೆಗಳಲ್ಲಿ ಸೇರಿ ನೋಡುತ್ತ ಇರಲಾಗಿ, ೧೪. ಆ ಭೂಪಾಲನಾದ ಸತ್ಯೇಂದ್ರ ಚೋಳಮಹಾರಾಜನ ಸುತನಾದ ರಾಜಶೇಖರನ ಕಮಲದದಳದಂತೆ ಧವಳವರ್ಣ ದಿಂದ ಕೂಡಿದ ಕಣ್ಣುಗಳ ಉಜ್ವಲವಾದ ಪ್ರಕಾಶವೆಂಬ ಬಲೆಯು ಆ ಹೆಂಗಸರ ಮುಖದ ಕಾಂತಿಯೆಂಬ ಹೊಸ ನೀರಿನಲ್ಲಿರುವ ಅತಿಚಪಲವಾದ ಕಣ್ಣುಗಳೆಂಬ ಶಫರ ಮೀನುಗಳನ್ನು ಸೆಳೆಯಿತು. ವ|| ಆಗ ಇತ್ತ ಕಡೆಗೆ ಸಿಂಹಳಮಹಾರಾಜನ ಅಂತಃ ಪುರವೆಂಬ ಸರೋವರದ ಬಾಲಹಂಸಪಕ್ಷಿಯಂತಿದ್ದ, ಸರ್ವಮಂಗಳಾದೇವಿಯ ವರ ಪ್ರಸಾದದಿಂದ ಹುಟ್ಟಿದ ಸರ್ವಮಂಗಳೆಯೆಂಬ ಹೆಸರಿನ ಆ ಮಹಾರಾಜನ ಪುತ್ರಿಯು ಆಟದ ವಿಲಾಸದಲ್ಲಿ ಮುಳುಗಿ, ಸಂತೋಷದಿಂದ ತಮ್ಮ ವಿಹಾರದ ಉದ್ಯಾನವನ ದಲ್ಲಿದ್ದಳು. ಅಲ್ಲಿ ಕೆಂಪಾದ ಚಿಗುರಿನ ಹಂದರದ ಒಳಭಾಗದಲ್ಲಿರುವ ಹೂವಿನ ಮಂಟಪ ದಲ್ಲಿರುವ ಹೂವಿನ ಹಾಸಿಗೆಯಲ್ಲಿ ಅಟ್ಟಹಾಸದಿಂದ ಕುಳಿತುಕೊಂಡಿದ್ದಳು. ಅಲ್ಲಿ

ಗೊಂಡು ಕುಳ್ಳಿರ್ದು ಸೌಂದರ್ಯಶಾರದೆಯೆಂಬ ಸಖಿಯು ಸಂಗೀತವಮನಾಲಿಸುತ್ತಿರ್ಪಿನಮಾಳೀಜನಂ ಪರಿತಂದು ಸಂದಣಿಸಿ ನಿಂದು

ಮ॥ ಜಲಜಾತಾಯತಲೋಚನಂ ಕುಮುದಿನೀಕಾಂತಾನನಂ ಕಾಂತಿಮಂ
ಜುಲಕಾಯಂ ನವಯೌವನಾಂಕನತಿಸೌಂದರ್ಯಾನ್ವಿತಂ ರಾಜಸಂ
ಕುಳದೊಳ್ಮೇಲಿದ ನೀಜನೈತರುತಮಿರ್ಪಂ ನೋಡಲೇಳೆಂದು ಪೇ
ಳೆ ಲಸತ್ಸಿಂಹಳರಾಜನಂದನೆ ಮನಂದಂದೇಳ್ದಳಂದೀಕ್ಷಿಸಲ್ ೧೫

ಚಂ॥ ಅರಗಿಳಿವಿಂದು ತೊಂಡುಗೆಡೆವಂತಿರೆ ನುಣ್ನುಡಿ ಸೋಗೆ ಸಾಗಿ ಸೈ
ವರಿವವೊಲೊಪ್ಪೆ ಸೋರ್ಮುಡಿ ತಳಿರ್ತೊಳಪಂತಿರೆ ಕೆಂದಳಂ ಕಳ
ಸ್ವರಮದು ಕೋಕಿಳಸ್ವರದವೋಲಿರೆ ಬಲ್ಮೊಲೆ ಪೂದೊಡಂಬೆಯಂ
ತಿರೆ ಬನಮಯ್ದುವಂತೆಸೆಯೆ ಪೆಣ್ಬಡೆ ಬಂದಳದೊಂದು ಬಿಂಕದಿಂ ೧೬

ವ॥ ಅಂತು ವನಲಕ್ಷ್ಮಿ ವಸಂತನಂ ನೋಡಲೆಳಸುವಂತೆ ಸುಜನವನವಸಂತನಂ ಭೂಕಾಂತನಂ ಕಾಂತೆ ನೋಡಲೆಳಸಿ ಗಳಿಲನೆಳ್ತಂದು

'ಸೌಂದರ್ಯ ಶಾರದೆ' ಎಂಬ ಹೆಸರಿನ ತನ್ನ ಸಖಿಯು ಸಂಗೀತವನ್ನು ಕೇಳುತ್ತಿದ್ದಳು. ಆ ಸಮಯದಲ್ಲಿ ಪರಿಚಾರಿಕೆಯರಾದ ಹೆಂಗಸರು ಓಡಿಬಂದು ಗುಂಪಾಗಿ ನಿಂತು ೧೫. "ಕಮಲದಂತೆ ವಿಶಾಲವಾದ ಕಣ್ಣುಳ್ಳವನೂ, ಚಂದ್ರನಂತೆ ಮುಖವುಳ್ಳವನೂ, ಕಾಂತಿಯಿಂದ ಕೂಡಿದ ಮನೋಹರ ಶರೀರಸೌಂದರ್ಯವುಳ್ಳವನೂ, ನೂತನ ಯೌವನದ ಗುರುತಿನವನೂ, ಅತ್ಯಂತ ಸೌಂದರ್ಯದಿಂದ ಕೂಡಿದವನೂ, ರಾಜಸಮೂಹದಲ್ಲಿ ಶ್ರೇಷ್ಠನೆನಿಸಿದವನೂ ಆದ ಸುಂದರನು ಬರುತ್ತಿದ್ದಾನೆ, ನೋಡಲು ಏಳು" ಎಂದು ಹೇಳಲಾಗಿ, ಆ ಶೋಭಿಸುವ ಸಿಂಹಳೇಂದ್ರನ ಕುಮಾರಿಯು ನೋಡುವ ಮನದಾಸೆಯಿಂದ ಎದ್ದಳು. ೧೬. ಅವಳ ನುಣ್ಣನೆಯ ಮಾತುಗಳು ಅರಗಿಳಿಗಳ ಮಾತಿನಂತೆ ಮನೋಹರವಾಗಿತ್ತು, ಉದ್ದನೆಯ ಮುಡಿಯು ನವಿಲಿನ ಗರಿಗಳ ಗುಚ್ಛವೇ ಸಾಗಿಬರುವಂತಿತ್ತು. ಕೆಂಪಾದ ಕೈಗಳು ಚಿಗುರಿನ ಹೊಳಪಿನಂತೆ ಇದ್ದುವು. ಧ್ವನಿಯು ಕೋಗಿಲೆಯ ಧ್ವನಿಯಂತಿತ್ತು. ದಪ್ಪನೆಯ ಮೊಲೆಗಳು ಹೂಗೊಂಚಲಿನಂತೆ ಇದ್ದುವು. ಹೀಗೆ ಒಪ್ಪಿ ಆ ಉದ್ಯಾನವನವೇ ಬರುತ್ತಿರುವಂತೆ ಶೋಭಿಸುತ್ತ ಆದೊಂದು ಗಂಭೀರತೆಯನ್ನು ಹೊಂದಿ ಆ ಸರ್ವಮಂಗಳೆಯು (ರಾಜಶೇಖರನನ್ನು ನೋಡಲು) ಬಂದಳು. ವ॥ ಆ ರೀತಿ ವನಲಕ್ಷ್ಮಿಯು ವಸಂತನನ್ನು ನೋಡಬಯಸುವಂತೆ ಸಜ್ಜನರೆಂಬ ವನಕ್ಕೆ ವಸಂತನಂತಿರುವ

ಚಂ॥ ನೆಲೆವೊಲೆಗಳ್ ಕದಕ್ಕದಿಸೆ ಸೂಸೆ ಬಳಲ್ಮುಡಿ ಪುಷ್ಪಬೃಂದಮಂ
ಕಲರುತಿ ಕಿಂಕಿಣೀಕಲಿತ ಕಾಂಚಿರವಂಗುಡೆ ನೂಪುರಂ ಪೊದ
ಳ್ದುಲಿಯೆ ನಿತಂಬಮುಂ ಜಡಿಯೆ ತೆಳ್ನಡು ಬಳ್ಕೆ ಸಖೀಕದಂಬಕಂ
ನಲಿದೊಡನೇಱೆ ನೀಱೆ ಬಿಡದೇಱಿದಳೊಯ್ಯನೆ ರಮ್ಯಹರ್ಮ್ಯಮಂ ೧೭

ವ॥ ಅಂತೇಱುವಾಗಳ್ಸಡಗರಿಸುತೊಡನಾರೋಹಿಪ ಮಡದಿಯರ ಮುಡಿಮುಡಿಗಳೊಡನೊಡನೊರಸಲೊಡನೊಗೆದು ನೆಗೆವ ಪುಡಿಗತ್ತುರಿಯ ಪರಾಗಪಟಲಂ ಪರೆದು ಪರಕಲಿಸಿ ಹಸನ ರುಚಿಚಂದ್ರಿಕೆಗಗಿದು ನೆಗೆವ ತಮಃಪಟಲದಂತೆ ಪರಿರಂಜಸೆಯುಂ ತನುಸಹಜ ಸರಸ ಸುರಭಿಗೆ ಱಗಲವ್ವಳಿಪಳಿಪ್ರತಾನದನೂನ ಗಾನಧ್ವನಿಯನಾಕರ್ಣಿಸಿದ ಕರ್ಣಮದಕ್ಕೆ ಮಚ್ಚುಗೊಟ್ಟಪುದೆಂಬ ಮಾಳ್ಕೆಯಿಂ ಕಮಳ ಕಮನೀಯ ಕರ್ಣಪೂರಂ ಜಗುಳ್ದು ಬೀಳುತ್ತಿರೆಯುಂ ಬಿಂಬಾಧರದ ಕೆಂಬೆಳಪಂ ತಳೆದು ಕೆಂಬರಲಂತೆ ತೊಳತೊಳಪ ನಾಸಾಭರಣಮೌಕ್ತಿಕಂ ಸಂಜೆಗೆಂಪು ಪುದಿದ ಶುಕ್ರನಂತೆ ಮೆಱೆದಲುಂಗುತ್ತಮಿರೆಯುಂ ಥಳಥಳಿಸಿ ಬಳೆದು ಬಳ್ಳಿವರಿದು ಪರೆದು ಪಸರಿಪ

ಆ ಭೂಮೀಶನನ್ನು ನೋಡಲು ಬಯಸಿ ತಟ್ಟನೆ ಎದ್ದು ಬಂದು ೧೭. ಕಾಠಿಣ್ಯದಿಂದ ಕೂಡಿದ ಮೊಲೆಗಳು ಅದುರುತ್ತಿರಲು, ಚಲಿಸುತ್ತಿರುವ ಮುಡಿಯು ಹೂವುಗಳ ಸಮೂಹವನ್ನು ಸುರಿಸುತ್ತಿರಲು, ಗೆಜ್ಜೆಗಳನ್ನು ಬಿಗಿದ ನಡುಪಟ್ಟಿಯು (ಡಾಬು) ಮಂಜುಳಧ್ವನಿಯನ್ನುಂಟುಮಾಡುತ್ತಿರಲು, ಕಾಲಂದಿಗೆಗಳು ಝಣತ್ಕಾರವನ್ನು ಹರಡುತ್ತಿರಲು, ಪೊರವಾರಗಳು ಒಂದಕ್ಕೊಂದು ತಾಗುತ್ತಿರಲು, ತೆಳುವಾದ ನಡುವು ಬಳುಕುತ್ತ ಇರಲು ಸಖೀಜನರ ಸಮೂಹದೊಡನೆ ಆ ಸುಂದರಿಯಾದ ಸರ್ವಮಂಗಳೆಯು ತಟ್ಟನೆ ಮನೋಹರವಾದ ಸೌಧವನ್ನೇರಿದಳು. ವ॥ ಹೀಗೆ ಹರ್ಮ್ಯವನ್ನೇರುವಾಗ ಸಡಗರಗೊಂಡು ತನ್ನೊಡನೆ ಆರೋಹಿಸುವ ಆ ಸ್ತ್ರೀಯರುಗಳ ಮುಡಿಮುಡಿಗಳು ಒಡನೊಡನೆ ತಾಕಲಾಡುತ್ತಿರಲು, ಆ ಕೂಡಲೆ ಅವುಗಳಿಂದ ಹೊರಹೊರಟು ನೆಗೆಯುತ್ತಿರುವ ಪುಡಿಗತ್ತುರಿಯ ಧೂಳಿನ ಸಮೂಹವು ಉದುರಿ ವಿಸ್ತಾರಗೊಳ್ಳುತ್ತಿರಲು, ಹಲ್ಲುಗಳ ಕಾಂತಿಯೆಂಬ ಬೆಳದಿಂಗಳಿಗೆ ಹೆದರಿ ಓಡಿಹೋಗುವ ಕತ್ತಲೆಯ ಸಮೂಹದಂತೆ ಶೋಭಿಸುತ್ತಿತ್ತು. ದೇಹದ ಸಹಜವೂ ಸರಸವೂ ಆದ ಸುಗಂಧಕ್ಕೆ ಎರಗಲು ಮೇಲೆಬಿದ್ದು ಬರುತ್ತಿರುವ ದುಂಬಿಗಳ ಸಮೂಹದ ಅಧಿಕವಾದ ಝೇಂಕಾರವನ್ನು ಆಲಿಸಿದ ಕಿವಿಯು ಅದಕ್ಕೆ ಬಹುಮಾನವನ್ನೀಯುವುದೋ ! ಎಂಬ ರೀತಿಯಿಂದ ಕಿವಿಯಲ್ಲಿ ಧರಿಸಿದ್ದ ಮನೋಹರವಾದ ಕಮಲದ ಹೂವು ಜಾರಿ ಬೀಳುತ್ತಿದ್ದವು. ತೊಂಡೆಯಹಣ್ಣಿನಂತಹ ತುಟಿಯ ಕೆಂಪು ಹೊಳಪು ಪ್ರತಿಫಲಿಸಿದ ಕಾರಣವಾಗಿ ಕೆಂಪು ಹರಳಿನ ಹಾಗೆ ಪ್ರಕಾಶಿಸುತ್ತಿರುವ ಮೂಗುಬೊಟ್ಟಿನ ಮುತ್ತು ಸಂಜೆಗೆಂಪಿನಿಂದ ಆಚ್ಛಾದಿತವಾದ ಶುಕ್ರಗ್ರಹದ ಹಾಗೆ ಮೆರೆದು ಅಲುಗಾಡುತ್ತಿತ್ತು. ಥಳಥಳಿಸುತ್ತ ಬೆಳೆದು ಕುಡಿಚಾಚಿ ಮುಂಬರಿದು

ಕಟಾಕ್ಷರುಚಿರರುಚಿಯೆಂಬ ವದನವಿಧು ವಿಮಳಪ್ರಭಾಪಟಲಂ ಕನತ್ ಕನಕಮಯ ಮಣಿ ಭೂಷಣಾಂಶು ವಿಸರದರುಣತರುಣಾತಪದೊಳ್ಮಲ್ಲಗಾಳೆಗಮನೊಡರ್ಚೆ ಕಂಡು ಕಡುನಡುಗುವ ಜಕ್ಕವಕ್ಕಿಗಳಂತೆ ನೆಲೆಮೊಲೆಗಳ್ ಕದಕ್ಕದಿಸೆಯುಂ ಮೃದುಳತರ ಬಾಹಾಮೃಣಾಳನಾಳದೊಳೊಗೆ ದರವಿಂದದ ಸಿರಿಯನೊಳಕೈದ ಲೀಲಾರವಿಂದದಮಂದಗಂಧಸಂದೋಹಕ್ಕೆ ಮೊಱೆದೆಱಗುವಿಂದಿಂ ದಿರಬೃಂದದೊಳ್ ಸೆಣಸಲೆಳಸಿ ನೆಗೆವಂತೆ ಚೂರ್ಣಾಳಕಂ ಪಣೆವಿಡಿದು ಕುಣಿವುತ್ತಿರೆಯುಂ ಮದನಮರಾಳನಾಡುವ ಮಳಲೊಟ್ಟಿಲೆಂಬಂತಿಂಬುವಡೆದು ನಿತಂಬಬಿಂಬಂ ನಿಜಭಾರಮಂ ಪೊರಲಾಱದೆ ದಡದಡಿಪ ನುಣ್ನೊಡೆಗೆ ವಿಪುಳತರ ಕುಚಭಾರಮಂ ತಳೆದ ಬಡನಡುವಂ ತೋಱಿ ಪುರುಡಿಸಿ ಜಡಿವಂತೆ ಮಣಿಮೇಖಲೆ ಝಣಝಣಿಸುತ್ತಿರೆಯುಂ ಸೋಮರ್ಡಿಯೆಂಬ ಕಾರ್ಮುಗಿಲಿಂದಿಳಿವ ಮುಗುಳ್ವಳೆಗೆ ಚಿಗುರ್ತು ಸೊಂಪೇಱಿದ ಪಸಲೆಯಂತೆಸೆವ ಪಸುರ್ಮಣಿಯ ಸೋಪಾನಕ್ಕೆ ಪದತಳಮಲಕ್ತಕರಸದಿನಲ್ಲಿಗಲ್ಲಿಗಂದಂಗೊಳಿಸಿದ ಕೆಂಬರಲ ಸಿರಿಯಂ ನಿರವಿಸು ತ್ತಿರೆಯುಂ ಅತಿವಿಳಾಸದಿಂ ಯುವರಾಜವದನರಾಜಮಂಡಲದರ್ಶನೋತ್ಸುಕೆಯಾಗಿ ಕುವಲ ಯಾಕ್ಷಿಯುದಱ ಮೇಲ್ನೆಲೆಗೆಳ್ತಂದಾಗಳ್

ಪ್ರಸಾದಗೊಂಡ ಕಡೆಗಣ್ಣಿನ ಮನೋಹರ ಕಾಂತಿಯೆಂಬ ಮುಖಚಂದ್ರನ ಶ್ರೇಷ್ಠಪ್ರಭೆಯ ಸಮೂಹವು, ಹೊಳೆಯುತ್ತಿರುವ ಸುವರ್ಣಮಯ ರತ್ನಾಭರಣ ಕಿರಣಗಳ ಸಮೂಹದ ಕೆಂಪುಬಣ್ಣವೆಂಬ ಎಳೆಬಿಸಿಲಿನೊಡನೆ ಮಲ್ಲಗಾಳಗವನ್ನು ಮಾಡುತ್ತಿರಲು, ಅದನ್ನು ಕಂಡು ನಡುಗುತ್ತಿರುವ ಚಕ್ರವಾಕ ಪಕ್ಷಿಗಳ ಹಾಗೆ ಕಠಿಣವಾದ ಕುಚಗಳು ನಡುಗುತ್ತಿದ್ದವು. ಮೃದುವಾದ ಬಾಹುಗಳೆಂಬ ಕಮಲದದೇಟಿನಲ್ಲಿ ಅರಳಿದ ಕಮಲದ ಸೌಂದರ್ಯವನ್ನು ಪಡೆದ ಲೀಲೆಗಾಗಿ ಹಿಡಿದಿದ್ದ ಕಮಲಪುಷ್ಪದ ಒಟ್ಟವಾದ ಸುಗಂಧ ಸಮೂಹಕ್ಕೆ ಝೇಂಕರಿಸುತ್ತ ಮುತ್ತುತ್ತಿರುವ ಭ್ರಮರ ಸಮೂಹದೊಡನೆ ಕಾಳಗ ಮಾಡಲು ಬಯಸಿ ಹಾರುತ್ತಿವೆಯೋ ಎಂಬಂತೆ ಹಣೆಯಗಲಕ್ಕೂ ಚದುರಿದ ಮುಂಗುರುಳುಗಳು ಕುಣಿದಾಡು ತ್ತಿದ್ದವು. ಮನ್ಮಥನೆಂಬ ಹಂಸಪಕ್ಷಿಯು ಕ್ರೀಡಿಸುವ ಮಳಲ ರಾಶಿಯೋ ಎಂಬಂತಿರುವ ವಿಸ್ತಾರವಾದ ನಿತಂಬಮಂಡಲವು ತಮ್ಮ ಭಾರವನ್ನು ಹೊರಲಾರದೆ ನಡುಗುವ ನುಣ್ತೊಡೆಗಳಿಗೆ ದಪ್ಪನೆಯ ಮೊಲೆಗಳ ಭಾರವನ್ನು ಹೊತ್ತ ತೆಳ್ಳನೆಯ ನಡುವನ್ನು ತೋರಿಸಿ, ಹುರುಡುಂಟು ಮಾಡಿ ಗದ್ದರಿಸುವುವೋ ಎಂಬಂತೆ ರತ್ನಖಚಿತವಾದ ಡಾಬಿನ ಗೆಜ್ಜೆಗಳು ಝಣ ಝಣತ್ಕಾರ ಮಾಡುತ್ತಿದ್ದವು. ಉದ್ದವಾದ ಮುಡಿಯೆಂಬ ಕಪ್ಪಾದ ಮೋಘದಿಂದ ಸುರಿಯುವ (ಮಲ್ಲಿಗೆಯ) ಮೊಗ್ಗೆಂಬ ಮಳೆಗೆ ಚಿಗುರಿ ಸೊಂಪುಗೊಂಡು, ಹುಲ್ಲು ಬೆಳೆದ ಭೂಮಿ (ಶಾದ್ವಲ) ಯಂತೆ ಶೋಭಿಸುವ ಪಚ್ಚೆಗಲ್ಲುಗಳ ಮೆಟ್ಟಲಿಗೆ (ಅವಳ) ಅಂಗಾಲುಗಳಿಗೆ ಕೊಡೆದ ಅಲಕ್ತಕ (ಅರಗು) ರಸವು ಹತ್ತಿ, ಅಲ್ಲಲ್ಲಿ (ಆ ಮೆಟ್ಟಲುಗಳು) ಕೆಂಪಾಗಿ ತೋರಿ ಅಂದಗೊಂಡು ಮಾಣಿಕ್ಯದ ಸೊಬಗನ್ನುಂಟುಮಾಡು ತ್ತಿದ್ದವು. ಯುವರಾಜನಾದ ರಾಜಶೇಖರಮಹಾರಾಜನ ಮುಖಚಂದ್ರಮಂಡಲದ ದರ್ಶನದಲ್ಲಿ ಉತ್ಸಾಹಗೊಂಡವಳಾಗಿ ನನ್ನೈದಿಲೆಯಂತೆ ಕಣ್ಣುಳ್ಳವಳಾದ ಆ ಸರ್ವ

ಕಂ॥ ಆ ಮಣಿಹರ್ಮ್ಯದ ಮುಂದಣ
ಸೋಮಾಶ್ಮದ ವೇದಿಕಾಗ್ರದೊಳ್ ನಿಂದವಳು
ದ್ದಾಮನಯನಾಂಶು ಪಸರಿಸೆ
ಕೋಮಲೆ ತದ್ರಾಜವೀಥಿಯದನೀಕ್ಷಿಸಿದಳ್ ೧೮

ಚಂ॥ ಹಿಮಕರಕಾಂತಿಯಂ ಕವರ್ದುವಲ್ಲದೆ ತನ್ಮೃಗನೇತ್ರಶೋಭೆಯಂ
ಕಮಳದ ಚೆಲ್ವುಮಂ ಸೆಳೆದುವಲ್ಲದೆ ಮತ್ತದಱೊಂದು ಲಕ್ಷ್ಮಿಯಂ
ಭ್ರಮರದ ಕರ್ಪುಮಂ ತೆಗೆದುವಲ್ಲದೆ ಮೇಣದು ಪಾರ್ವ ಲೀಲೆಯಂ
ಪ್ರಮದೆಯ ಕಣ್ಗಳೀಳ್ದಿದುಕೊಂಡವೊಲಾದುದು ಕಣ್ಗೆ ನೋಳ್ಪರಾ ೧೯

ವ॥ ಆ ಪ್ರಸ್ತಾವದೊಳಾ ರಾಜವೀಥಿಯಲ್ಲಿ

ಚಂ॥ ತೊಳಪ ಕಿರೀಟರತ್ನಕರಮಂಬರಮಂ ಮಿಗೆ ಚಿತ್ರಿಸುತ್ತೆ ಕಂ
ಗೊಳಿಸೆ ಮುಖೇಂದುಮಂಡಳಮರೀಚಿ ವಧೂನಯನೋತ್ಪಳಂಗಳಂ
ಕೆಳೆಗೊಳಿಸುತ್ತಲರ್ಚೆ ನಿಜರೂಪು ಮನೋಜನನಂಗಹೀನನೆಂ
ದಿಳೆ ನುಡಿವಂತೆ ಮಾಡಿ ನಡೆತಂದನಿಭಾಗ್ರದೊಳಾ ನರಾಧಿಪಂ ೨೦

ಮಂಗಳೆಯು ಮೇಲುಮಹಡಿಗೆ ಹತ್ತಿ ಬಂದಾಗ, ೧೮. ಆ ರತ್ನಮಯವಾದ ಸೌಧದ ಮುಂಭಾಗದಲ್ಲಿರುವ ಚಂದ್ರಕಾಂತಶಿಲೆಯ ಜಗುಲಿಯ ಅಗ್ರಭಾಗದಲ್ಲಿ ನಿಂತ ಆ ಕೋಮಲೆಯಾದ ಸರ್ವಮಂಗಳಾದೇವಿಯು ತನ್ನ ಗಂಭೀರವಾದ ಕಣ್ಣಿನ ಕಿರಣಗಳು ಎಲ್ಲೆಡೆಗೂ ಪ್ರಸಾರಗೊಳ್ಳುತ್ತಿರಲು ಆ ರಾಜಶೇಖರನು ಒರುತ್ತಿರುವ ರಾಜಬೀದಿಯನ್ನು ನೋಡಿದಳು. ೧೯. ಆ ಯೌವನಮದದಿಂದ ಕೂಡಿದ ಸರ್ವಮಂಗಳೆಯ ಕಣ್ಣುಗಳು ಚಂದ್ರನ ಕಾಂತಿಯನ್ನು ಕಸಿದುಕೊಂಡದ್ದಲ್ಲದೆ, ಅಲ್ಲಿರುವ ಜಿಂಕೆಯ ನೇತ್ರದ ಚಾಂಚಲ್ಯದ ಶೋಭೆಯನ್ನೂ ಕೂಡ ಕಸಿದುಕೊಂಡವು. ಕಮಲದ ಚೆಲುವನ್ನು ಸೆಳೆದುವಲ್ಲದೆ ಆ ಕಮಲದಲ್ಲಿರುವ ಸಂಪತ್ತನ್ನೂ ಕೂಡ ಸೆಳೆದುವು. ದುಂಬಿಯ ಕಪ್ಪನ್ನೂ ಮತ್ತು ಆ ದುಂಬಿಯು ಹಾರುವ ಲೀಲೆಯನ್ನೂ ಆ ಕಣ್ಣುಗಳು ಬಲಾತ್ಕಾರವಾಗಿ ಎಳೆದುಕೊಂಡಿರುವುವೋ ಎಂಬಂತೆ ನೋಡುವವರ ಕಣ್ಣಿಗೆ ಕಾಣುತ್ತಿದ್ದವು. ವ|| ಆ ಸಮಯದಲ್ಲಿ ಆ ರಾಜಬೀದಿಯಲ್ಲಿ ೨೦. ಆನೆಯ ಅಂಬಾರಿಯಲ್ಲಿ ನರಶ್ರೇಷ್ಠನಾದ ರಾಜಶೇಖರನು ಪ್ರಕಾಶಿಸುವ ಕಿರೀಟಗಳಲ್ಲಿರುವ ರತ್ನಸಮೂಹವು ಆಕಾಶವನ್ನು ಚಿತ್ರವಿಚಿತ್ರಗೊಳಿಸಲು, ಮುಖವೆಂಬ ಚಂದ್ರಮಂಡಳ ಕಿರಣಗಳು ಸ್ತ್ರೀಯರುಗಳ ಕಣ್ಣುಗಳೆಂಬ ಕನ್ನೈದಿಲೆಗಳನ್ನು ಅರಳಿಸಿ ಕೆಳೆಗೊಳಿಸುತ್ತಿರಲು, ತನ್ನ ರೂಪವು ಮನಸಿಜನಾದ ಮನ್ಮಥನ ರೂಪವನ್ನು ಅನಂಗನೆಂದು ಕೀಳ್ಮಾಡಿ ಮಾತನಾಡುವಂತೆ ಮಾಡುತ್ತಾ

ವ॥ ಅಂತು ನಡೆತರ್ಪಾಗಳ್

ಮ॥ ನಗೆಗಣ್ಬೂಸೆ ಸುಧಾಮರೀಚಿರುಚಿಯಂ ಘರ್ಮಾಂಭಸಂ ಪೊಣ್ಮೆ ನು
ಣ್ಗೊಗ್ರದೊಳ್ ಚಿತ್ತದೊಳಾಗೆ ಕೌತುಕರಸಂ ಪೀನೋರುಗಳ್ಕಂಪನಂ
ಬುಗೆ ಲೀಲಾಕಮಲಂ ಕರಾಂಬುಜದಿನಾಗಳ್ಬೂಸೆ ಕಂಜಾಸ್ತ್ರನಂ
ನಗುವಂತೊಪ್ಪುವನಂ ಮೃಗಾಕ್ಷಿ ನಡೆನೋಡುತ್ತಿರ್ದಳಾ ಭೂಪನಂ ೨೧

ವ॥ ಇಂತನಿಮಿಷದೃಷ್ಟಿಯಿಂ ನಿಂದು ನಿರೀಕ್ಷಿಪ ಸಖೀಜನಮಧ್ಯದೊಳ್ತನ್ನನನೂನಸ್ನೇಹ ರಸಭರಭರಿತ ಕಟಾಕ್ಷದಿನಭೀಕ್ಷಿಸುತ್ತಮಿರ್ಪ

ಕಂ॥ ಕಾಮಿನಿಯಂ ತನುಜಿತಸೌ
ದಾಮಿನಿಯಂ ಸೌಧದಗ್ರದೊಳ್ ಕಂಡನಿಳಾ
ಭಾಮಿನಿಯರಸಂ ಮುರರಿಪು
ಗೋಮಿನಿಯಂ ಕಾಣ್ಬವೋಲ್ ಸರೋರುಹದೆಡೆಯೊಳ್ ೨೨

ವ॥ ಅಂತು ಕಂಡತಿವಿತತಕೌತುಕರಸಪ್ರವಾಹದೊಳ್ ಮುಳುಂಗಿ ಮೋಹಿಸಿ ನಿಂದು

ಕಂ॥ ಅಮರಾಂಗನೆಯಿವಳಲ್ಲದೊ
ಡೆಮೆಯಿಕ್ಕದ ದೀರ್ಘನಯನಮಾ ಸೌಂದರ್ಯಂ
ಸಮನಿಪುದೆ ನೋಳ್ಪೊಡೆಂದಾ
ರಮಣಿಯನಾ ನೃಪಕುಮಾರನೀಕ್ಷಿಸುತೆಂದಂ ೨೩

ಬಂದನು. ವ॥ ಆ ರೀತಿ ಬರುತ್ತಿರುವಾಗ ೨೧. ಮೃಗನಯನೆಯಾದ ಆ ಸರ್ವಮಂಗಳೆಯು ಬರುತ್ತಿರುವ ನಗೆಗಣ್ಣುಗಳ ಬೆಳದಿಂಗಳ ಕಾಂತಿಯನ್ನು ಸೂಸುತ್ತಿರುವಂತೆ ನುಣ್ಣನೆಯ ಮುಖದಲ್ಲಿ ಬೆವರಿನ ಹನಿಗಳು ಹೊರಹೊಮ್ಮುತ್ತಿರಲು, ಹೃದಯದಲ್ಲಿ ಕುತೂಹಲದರಸವು ಉಂಟಾಗುತ್ತಿರಲು, ದಪ್ಪನೆಯ ತೊಡೆಗಳು ನಡುಗುತ್ತಿರಲು, ಕಮಲದಂತಹ ಕೈಯಿಂದ ಲೀಲೆಗಾಗಿ ಹಿಡಿದಿದ್ದ ಕಮಲವು ಜಾರುತ್ತಿರಲು, ನಗುತ್ತಿರುವಂತೆ ಕಾಣುವ ಮನ್ಮಥನಂತಹ ರಾಜಶೇಖರನನ್ನು ದಿಟ್ಟಿಸಿನೋಡುತ್ತಿದ್ದಳು. ವ॥ ಹೀಗೆ ರೆಪ್ಪೆ ಮಿಳುಕಿಸದೆ ಇರುವ ದೃಷ್ಟಿಯಿಂದ ನಿಂತು ನೋಡುತ್ತಿರುವ ಸಖೀಜನರ ಮಧ್ಯದಲ್ಲಿ ತನ್ನನ್ನು ಅಧಿಕತಮ ಸ್ನೇಹರಸಭರಿತವಾದ ಕಡೆಗಣ್ಣುಗಳಿಂದ ನೋಡುತ್ತಿದ್ದ, ೨೨. ತನ್ನ ದೇಹದ ಹೊಳಪಿನಿಂದ ಮಿಂಚನ್ನು ಗೆದ್ದ ಚೆಲುವೆಯಾದ ಆ ಸರ್ವಮಂಗಳೆಯನ್ನು ಇಳಾಧಿನಾಥನಾದ ರಾಜಶೇಖರನು ವಿಷ್ಣುವು ಕಮಲದಲ್ಲಿರುವ ಲಕ್ಷ್ಮಿಯನ್ನು ಕಂಡಹಾಗೆ, ಸೌಧದ ಮೇಲ್ಭಾಗದಲ್ಲಿ ಕಂಡನು. ವ॥ ಹಾಗೆ ಕಂಡು ಅತ್ಯಂತ ಹೆಚ್ಚಾದ ಕುತೂಹಲವೆಂಬ ರಸಪ್ರವಾಹದಲ್ಲಿ ಮುಳುಗಿ ಮೋಹಗೊಂಡು ನಿಂತು, ೨೩. ಆ ರಮಣಿಯಾದ ಸರ್ವಮಂಗಳೆಯನ್ನು ರಾಜಶೇಖರನು ನೋಡುತ್ತ ದೇವಕನ್ನೆಯು ಇವಳಾಗಿರದಿದ್ದರೆ ರೆಪ್ಪೆ ಬಡಿಯದ ಉದ್ದವಾದ ಕಣ್ಣುಗಳೂ, ಈ ಸೌಂದರ್ಯವೂ ವಿಚಾರಿಸಿ ನೋಡಿದರೆ ಇವಳಿಗೆ ಉಂಟಾಗುತ್ತಿತ್ತೆ ? ಎಂದುಕೊಂಡನು.

ಪಡೆಯದೆ ಬಗೆಗಚ್ಚರಿಯುಂ
ಪಡೆಯದೆ ನಿಜಸೃಷ್ಟಿಗತುಳತರ ನವಯಶಮಂ
ಪಡೆಯದೆ ಹರ್ಷಮನತನುಗೆ
ಪಡೆದನೆ ಕನ್ನಿಕೆಯನೀಕೆಯಂ ಕಮಳಭವಂ ೨೪

ವ॥ ಎಂದು ಬಗೆಯೊಳ್ಪಗೆದು ಭಾವಿಸಿ ಪೊಗಳ್ತೆವಡೆದವಳವಯವಸೌಂದರ್ಯಮನಾ ಕಳಾ
ನಿಳಯಂ ಬೇಱಬೇಱ ಪರೀಕ್ಷಿಪಾಗಳ್

ಕಂ॥ ಆ ಸರ್ವಮಂಗಳೆಯ ಶೋ
ಭಾಸೌಭಾಗ್ಯಮನದಾವನಭಿವರ್ಣಿಪನಾ
ವಾಸುಕಿವಾಣೀವರವರ
ವಾಸವಸಚಿವರ್ಗಮಾದೊಡಂ ತೀರ್ದಪುದೇ ೨೫

ಉ॥ ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊ
ಳ್ಭಾವಿಸೆ ಬಾಳೆಗಂಬಮೊಗೆದಂದು ಲತಾಗ್ರದೊಳದ್ರಿಪುಟ್ಟಿದಂ
ದಾ ವಿಧುಬಿಂಬಮಿಂಬವಳಮಂ ಪಡೆದಂದು ತದಗ್ರದಲ್ಲಿ ಭೃಂ
ಗಾವಳಿ ಮೂಡಿದಂದು ಸತಿಯಂಗಮನಾಂ ಪೊಗಳಲ್ಕೆ ಸಾಲ್ವಪೆಂ ೨೬

೨೪. ತನ್ನ ಮನಸ್ಸಿಗೆ ಆಶ್ಚರ್ಯವನ್ನು ಪಡೆಯದೆ, ತನ್ನ ಸೃಷ್ಟಿಗೆ ಅನುಪಮವಾದ ನೂತನ ಯಶಸ್ಸನ್ನು ಪಡೆಯದೆ, ಮನ್ಮಥನಿಗೆ ಅಧಿಕತರವಾದ ಹರ್ಷವನ್ನು ಪಡೆಯದೆ ಈ ಕನ್ನಿಕೆ ಯನ್ನು ಸುಮ್ಮನೆ ಬ್ರಹ್ಮನು ಪಡೆದನೆ ? (ಇವಳ ಸೃಷ್ಟಿಯಿಂದ ಬ್ರಹ್ಮನಿಗೆ ಆಚ್ಚರಿಯೂ ಅವನ ಸೃಷ್ಟಿಗೆ ಕೀರ್ತಿಯೂ, ಮನ್ಮಥನಿಗೆ ಹರ್ಷವೂ ಆದವೆಂದು ಆಶಯ.ರಂ) ವ|| ಎಂದು ತನ್ನ ಮನಸ್ಸಿನಲ್ಲಿ ತಿಳಿದು ಯೋಚಿಸಿ, ವಿಖ್ಯಾತವಾದ ಅವಳ ಅವಯವಗಳ ಸೌಂದರ್ಯ ವನ್ನು ಕಲೆಗಳಿಗೆ ಆಶ್ರಯಸ್ಥಾನನಾದ ರಾಜಶೇಖರನು ಬೇರೆ ಬೇರೆಯಾಗಿ ಪರೀಕ್ಷಿಸಿ ನೋಡುವಾಗ ೨೫. ಆ ಸರ್ವಮಂಗಳೆಯ ಶೋಭೆಯ ಸೌಭಾಗ್ಯವನ್ನು ಯಾವನು ತಾನೆ ವರ್ಣಿಸಿಯಾನು? ಆ ಆದಿಶೇಷ, ಬ್ರಹ್ಮ, ಶ್ರೇಷ್ಠನಾದ ಇಂದ್ರ, ಸಚಿವ ಬೃಹಸ್ಪತಿ ಯರುಗಳಿಗಾದರೂ ಶಕ್ಯವೇ ? ೨೬. ತಾವರೆಯ ಹೂವಿನಲ್ಲಿ ನಕ್ಷತ್ರವು ಜನನ ಗೊಂಡಂದು, ಅಂದರೆ ತಾವರೆಯಂತಿರುವ ಮುಖದಲ್ಲಿ ನಕ್ಷತ್ರದಂತಿರುವ ಕಣ್ಣುಗುಡ್ಡೆಯು ಉತ್ಪತ್ತಿಯನ್ನು ಪಡೆದಾಗ, ಬೆಟ್ಟದ ಮೂಲದಲ್ಲಿ ಭಾವಿಸಿನೋಡಿದಾಗ ಬಾಳೆಯ ಕಂಬವು ಹುಟ್ಟಿದಂದು, ಅಂದರೆ ಬೆಟ್ಟದಂತಿರುವ ಕಟಿಪಶ್ಚಾತ್ ಭಾಗಗಳಿಂದ ಬಾಳೆಯ ಕಂಬದಂತಿರುವ ತೊಡೆಗಳು ಹುಟ್ಟಿರುವಾಗ ; ಬಳ್ಳಿಯ ಕೊನೆಯಲ್ಲಿ ಪರ್ವತವು ಹುಟ್ಟಿ ದಂದು, ಅಂದರೆ ಬಳ್ಳಿಯಂತೆ ಬಳುಕುತ್ತಿರುವ ಕಿರಿನಡುವಿನ ಮೇಲ್ಭಾಗದಲ್ಲಿ ಪರ್ವತದಂತೆ ದಪ್ಪವಾದ ಮತ್ತು ಕಠಿಣವಾದ ಮೊಲೆಗಳು ಹುಟ್ಟಿರುವಾಗ ; ಚಂದ್ರಮಂಡಲವು ಸುಂದರವಾದ ಹವಳವನ್ನು ಪಡೆದಂದು, ಅಂದರೆ-ಚಂದ್ರಮಂಡಲದಂತಿರುವ ಮುಖದಲ್ಲಿ ಹವಳದಂತೆ ಕೆಂಪುಬಣ್ಣದ ತುಟಿಯನ್ನು ಪಡೆದಿರುವಾಗ ; ಆ ವಿಧುಮಂಡಲದಂತಿರುವ

ಕಂ॥ ಕುಸುಮಶರನಸುಗೆ ಸರಮಂ
ಮಸೆಯೆ ಸುಧಾಕಿರಣಬಿಂಬಶಾಣೋಪಲದೊ
ಳ್ಮಸಗಿ ಪನಿಪತ್ತಿ ತುದಿಯೊ
ಳ್ಮಿಸುಗುವುದೆನೆ ಮೆಱೆದುವವಳ ಪದತಳದುಗುರ್ಗಳ್ ೨೭

ಬಳೆದಡರ್ದ ತುಂಗಕುಚಗಿರಿ
ಗಳ ಮಱೆಯೊಳ್ ಕಾಣದಾಸ್ಯಶಶಿಯಂ ವಿರಹಾ
ಕುಳಮೆಳೆದಳಿರೊಳ್ತಾರಾ
ವಳಿ ನಿಂದವೊಲೆಸೆದುದವಳ ಪದನಖನಿಕರಂ ೨೮

ಅಂದುಗೆಯ ಕಳನಿನಾದದೊ
ಳೊಂದಿದ ಸೌಂದರಿಯ ಮಂದಗತಿಯತಿಶಯಮಂ
ಕುಂದದೆ ಮಾಡೆಂದಜನಂ
ಬಂದೇಗಳ್ವೊತ್ತು ಸೇವಿಪುದು ಕಳಹಂಸಂ ೨೯

ಲಲನೆಯ ನುಣ್ದೊಡೆ ತಮ್ಮಂ
ಗೆಲೆ ಸೋಲ್ತೊಡನೆಯ್ದಿ ಪೊಕ್ಕು ಭಯಭರದಿಂದಂ
ತಲೆವಾಗಿ ನೀರೊಳಿನ್ನುಂ
ನೆಲಸಿರ್ದಪುವಲ್ತೆ ಬಾಳೆಗಳ್ಪನದೆಡೆಯೊಳ್ ೩೦

ಮುಖದ ಮೇಲ್ಭಾಗದಲ್ಲಿ ಭೃಂಗಗಳ ಸಮೂಹವು ಮೂಡಿದಾಗ, ಅಂದರೆ ಹಣೆಯ ಮೇಲೆ ಭೃಂಗಗಳಂತೆ ಕಪ್ಪಾದ ಮುಂಗುರುಳುಗಳು ಹುಟ್ಟಿರುವಾಗ, ಆ ಸರ್ವಮಂಗಳೆಯ ಅಂಗಾಂಗ ಸೌಂದರ್ಯವನ್ನು ನಾನು ವರ್ಣಿಸಬಲ್ಲೆನು! ೨೭. ಪುಷ್ಪಬಾಣನಾದ ಮನ್ಮಥನು ತನ್ನ ಅಶೋಕವೆಂಬ ಬಾಣವನ್ನು ಚಂದ್ರಮಂಡಲವೆಂಬ ಸಾಣೆ ಹಿಡಿಯುವ ಕಲ್ಲಿನಲ್ಲಿ ಸಾಣೆ ಹಿಡಿದಾಗ ಅದರ ಹನಿಗಳ ಸಮೂಹವು ತುದಿಯಲ್ಲಿ ಪ್ರಕಾಶಿಸುವುದೋ ಎನ್ನುವ ಹಾಗೆ ಅವಳ ಪಾದತಳದಲ್ಲಿರುವ ಉಗುರುಗಳು ಶೋಭಿಸುತ್ತಿದ್ದವು. ೨೮. ಆ ಸರ್ವ ಮಂಗಳೆಯ ಪಾದದಲ್ಲಿರುವ ಉಗುರುಗಳು ಬೆಳೆದು ಮುಂದಕ್ಕೆ ಚಾಚಿರುವ ಉನ್ನತವಾದ ಮೊಲೆಗಳೆಂಬ ಗುಡ್ಡಗಳು ಮರೆಯಾಗಲಾಗಿ ಮುಖವೆಂಬ ಚಂದ್ರನನ್ನು ಕಾಣದೆ ವಿರಹಾಕುಲಗೊಂಡ ನಕ್ಷತ್ರಗಳು ಎಳೆಯ ತಳಿರಿನಲ್ಲಿ ಮಲಗಿಕೊಂಡಹಾಗೆ ಇದ್ದುವು. ೨೯. ಕಾಲಂದುಗೆಯ ಅವ್ಯಕ್ತಮಧುರವಾದ ಧ್ವನಿಯಿಂದ ಕೂಡಿದ ಆ ಚೆಲುವೆಯಾದ ಸರ್ವಮಂಗಳೆಯ ಮಂದಗಮನದ ಅತಿಶಯಕ್ಕಿಂತ ನನ್ನ ಗತಿಗೆ ಕುಂದುಬಾರದಹಾಗೆ ಮಾಡು ಎಂದು ಬ್ರಹ್ಮನಲ್ಲಿ ಬಂದು ಸದಾಕಾಲವೂ ರಾಜಹಂಸವು ಓಲೈಸುತ್ತಿತ್ತು. ೩೦. ಚೆಲುವೆಯಾದ ಸರ್ವಮಂಗಳೆಯ ನುಣ್ಣನೆಯ ತೊಡೆಗಳು ತಮ್ಮನ್ನು ಗೆಲ್ಲಲಾಗಿ ಸೋತ ಬಾಳೆಗಳು ಅತ್ಯಧಿಕ ಭಯದಿಂದ ಕೂಡಲೆ ಹೋಗಿ ನೀರನ್ನು ಹೊಕ್ಕು ತಲೆ

ಕರಿಶಿರದ ಪಿರಿಯ ಸಿರಿಯುಂ
ಪರಿಭವಿಸಿದೊಡವಳ ಸುಘನಜಘನಂ ಮಿಗೆ ತ
ತ್ಕರಚರಣಸೋದರಂಗಳ
ನರುಣಾಂಬುಜಪಲ್ಲವಂಗಳಂ ಪಱಿದಿಡುಗುಂ ೩೧

ಬಡಬಾಸೆಯೆಂಬಸಿತಫಣಿ
ಯೆಡೆಗೊಂಡುದು ಸಿಂಪವಿಜಯಿಯೆನಿಸಿರ್ದೀಗ
ಳ್ಪಿಡಿಗೊಳಗಾದೆನೆನುತ್ತುಂ
ಬಡವಾಯ್ತೆನೆ ಮಧ್ಯಮೆಸೆದುದಾ ಮಾನಿನಿಯಾ ೩೨

ಸ್ತನಕನಕಕಲಶನಿಧಿಯಂ
ಮನಸಿಜಸಾಧಕನೆಯುಗುಳ್ದು ನೆಗಪಿದ ಕುಳಿಯೆಂ
ದೆನೆ ಸುಳಿನಾಭಿ ವಿಳಾಸಾ
ವನಿ ವನಿತಾಮಣಿಯ ತೆಳ್ವಸಿಱಿೊಳೆಸೆದಿರ್ಕುಂ ೩೩

ಸುಲಲಿತ ಜಘನಸ್ಥಲಮೇ
ಖಲೆಯಗ್ರದೊಳೆಸೆವ ಮಂಜುಮಣಿದೀಪದ ಕ
ಜ್ಜಲರೇಖೆ ನೆಗೆದುದೆನೆ ಕ
ಣ್ಗೊಲವಿತ್ತುದು ರೋಮರಾಜಿ ರಾಜಾನನೆಯಾ ೩೪

ಬಾಗಿಸಿ ತೋಟಗಳಲ್ಲಿ ನೆಲಸಿರುವುವಲ್ಲವೆ? ೩೧. ಅವಳ ಘನವಾದ ಜಘನವು ಆನೆಯ ಕುಂಭಸ್ಥಳದ ಶೋಭೆಯನ್ನು ತಿರಸ್ಕರಿಸಿತ್ತು. ಆದರಿಂದ (ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ) ಆನೆಯು ಸರ್ವಮಂಗಳೆಯ ಕೈಕಾಲುಗಳಿಗೆ (ಸೋದರವಾದ) ಸದೃಶವಾದ ಕೆಂಪು ಕಮಲ ಮತ್ತು ಚಿಗುರುಗಳನ್ನು ಹರಿದೆಸೆಯುತ್ತದೆ! ೩೨. "ತೆಳುವಾದ ರೋಮರಾಜಿಯೆಂಬ ಕಪ್ಪುಹಾವು ನನ್ನಲ್ಲಿ ಎಡೆ ಮಾಡಿಕೊಂಡಿತು. ಸಿಂಹವಿಜಯಿಯಾದ ನಾನು ಈಗ ಒಂದು ಪಿಡಿಗೆ=ಹೆಣ್ಣಾನೆಗೆ–ಕೈ ಮುಷ್ಟಿಗೆ ಸಿಕ್ಕಿದೆನು" ಎಂಬ ಚಿಂತೆಯಿಂದ ಆ ಮಾನಿನಿಯ ನಡು ಬಡವಾಯಿತೆಂಬಂತೆ ಕಂಡಿತು. ೩೩. ಮನ್ಮಥನೆಂಬ ಅಂಜನಸಿದ್ಧಿಯ ಸಾಧಕನು ಮೊಲೆಗಳೆಂಬ ಬಂಗಾರದ ಕಲಶಗಳೆಂಬ (ಭೂಮಿಯಲ್ಲಿ ಹುದುಗಿದ್ದ) ನಿಧಿಯನ್ನು ಅಗೆದುತೆಗೆದಾಗ ಉಂಟಾದ ತಗ್ಗೆಂಬ ಹಾಗೆ ವಿಲಾಸಮಯ ಭೂಮಿಯಂತೆ ಇರುವ ಆ ಸುಂದರಿಯ ತೆಳುವಾದ ಹೊಟ್ಟೆಯಲ್ಲಿ ಸುಳಿಹೊಕ್ಕಳು ಶೋಭಿಸುತ್ತಿತ್ತು. ೩೪. ಚಂದ್ರಮುಖಿಯಾದ ಸರ್ವಮಂಗಳೆಯ ಹೊಟ್ಟೆಯ ಮೇಲಿನ ಕೂದಲಿನ ಸಾಲು, ಆಕೆಯ ಲಲಿತವಾದ ಜಘನಪ್ರದೇಶದಲ್ಲಿರುವ ಡಾಬಿನ ರಮ್ಯವಾದ ರತ್ನವೆಂಬ ದೀಪದ ಕುಡಿಯಿಂದುಂಟಾದ ಕಾಡಿಗೆಯ ಗೆರೆಯಂತೆ ಕಣ್ಣಿಗೆ ಪ್ರೀತಿಯನ್ನುಂಟುಮಾಡುತ್ತಿತ್ತು.

ವ॥ ಮತ್ತಂ

ಕಂ॥ ಜಗಮಮಂ ಜಯಿಸುವೊಡೀಕೆಯ
ನಗೆಮೊಗಮೇ ಸಾಲ್ವುದೆಂದು ಮದನಂ ಧನುವಿಂ
ತೆಗೆದಿಳಿಪಿದಳಿಪೆದೆಯೊಯೆನೆ
ಸೊಗಯಿಸಿದುದು ಬಾಸೆ ತರುಣಹರಿಣೇಕ್ಷಣೆಯಾ ೩೫

ಸ್ಮರಸಿದ್ಧಂ ಮೋಹನಯಂ
ತ್ರರಚನೆಯನೊಡರ್ಚಲೆಂದು ಮೂಗೆರೆದೆಗೆದಂ
ತರಳೆಯುದರಪತ್ರದೊಳೆನೆ
ಕರಮೆಸೆಗುಂ ತ್ರಿವಳಿ ಕಮಳದಳಲೋಚನೆಯಾ ೩೬

ತರಳೆಯ ತ್ರಿವಳಿಯ ಪೋಲ್ವೆಯ
ತರಂಗಮಂ ಪಡೆವೆನೆಂದು ಸುರನದಿ ಪಲವುಂ
ತೆರೆಗಳನೆ ಪಡೆದು ಪಡೆಯದೆ
ಪರಿದೆರೆಯಂ ಮಾಂಜಿ ಮಗುಳ್ದು ಪಡೆದಪ್ಪುದಿನ್ನುಂ ೩೭

ಎಲೆ ನಡು ಬಡವಾಗದಿರೆಂ
ದಲರಂಬಂ ಬರೆದ ಸುಮರಜೋರಕ್ಷೆಯಂ ಮಂ
ಜುಲರೇಖೆಗಳೆನೆ ಮೆಱೆಗುಂ
ವಲಿಗಳ್ಮೋಮಲೆಗೆ ಹಾರರುಚಿರುಚಿರಂಗಳ್ ೩೮

ವ॥ ಮತ್ತು ೩೫. ಈ ಜಗತ್ತನ್ನು ಗೆಲ್ಲಲು ಈ ಸರ್ವಮಂಗಳೆಯ ನಗುಮೊಗ ವೊಂದೇ ಸಾಕು, ಎಂದು ಕಾಮನು ತನ್ನ ಧನುಸ್ಸಿನಿಂದ ತೆಗೆದಿಟ್ಟ ಹೆದೆಯೋ ಎನ್ನುವ ಹಾಗೆ ಆ ಮೃಗನೇತ್ರೆಯ ಬಾಸೆಯು ಶೋಭಿಸುತ್ತಿತ್ತು. ೩೬. ಮನ್ಮಥನೆಂಬ ಸಿದ್ಧ ಪುರುಷನು ವಶೀಕರಣ ಯಂತ್ರರಚನೆಯನ್ನು ಮಾಡಲಿಕ್ಕೆಂದು ಆ ಸುಂದರಿಯ ಉದರ ವೆಂಬ ಭೂರ್ಜಪತ್ರದಲ್ಲಿ ಮೂರುಗೆರೆಗಳನ್ನೆಳೆದನೋ ಎಂಬಂತೆ ಕಮಲನೇತ್ರೆಯಾದ ಸರ್ವಮಂಗಳೆಯ ಹೊಟ್ಟೆಯ ಮೇಲೆ ತ್ರಿವಳಿಗಳು ಶೋಭಿಸುತ್ತಿದ್ದವು. ೩೭. ತರಳೆ ಯಾದ ಸರ್ವಮಂಗಳೆಯ ತ್ರಿವಳಿಗಳಿಗೆ ಸಮಾನವಾದ ತೆರೆಗಳನ್ನು ಪಡೆಯುತ್ತೇನೆಂದು ದೇವಗಂಗಾನದಿಯು ಹಲವಾರು ತೆರೆಗಳನ್ನುಂಟುಮಾಡಿ ಆ ಚೆಲುವಿಕೆಗೆ ಸಮಾನವಾದ ತೆರೆಗಳನ್ನು ಪಡೆಯಲಾಗದೆ ಪುನಃ ಪುನಃ ತೆರೆಗಳನ್ನು ಅಳಿಸಿ ಅಳಿಸಿಹಾಕುತ್ತಿದೆ! ೩೮. ಆ ಸರ್ವಮಂಗಳೆಯ ಧರಿಸಿದ ಮುಕ್ತಾಹಾರಕಾಂತಿಯಿಂದ ಕಾಂತಿಗೊಂಡ ತ್ರಿವಳಿಗಳು ಮನ್ಮಥನು 'ಎಲೈ ನಡುವೇ ಬಡವಾಗಬೇಡ' ಎನ್ನುತ್ತ ಹೂವುಗಳ ಧೂಳಿ ನಿಂದ ರಕ್ಷೆಯ ಮಂಜುಲವಾದ ಗೆರೆಗಳನ್ನು ಎಳೆದಿರುವನೋ ಎನ್ನುವಂತೆ ಮೆರೆಯುತ್ತಿ

ಮೊಗಸಸಿ ಪೊರ್ಕುಳ್ಗೊಳದಿಂ
ತೆಗೆದೆತ್ತುತೆ ಕನಕಕಮಳಕಳಿಕೆಗಳಂ ತಾ
ರಗೆಯಂ ಕಾಪಿಟ್ಟಂದದೆ
ಸೊಗಯಿಸಿದವು ಹಾರಮಣಿಯಿನವಳ ಕುಚಂಗಳ್ ೩೯

ನವನವಮಣಿಮಯಮಾಲಿಕೆ
ಕವಿದಿರೆ ಕಾಶ್ಮೀರಗಂಧಗೈರಿಕಗತ ತ
ದ್ಯುವತಿಯ ಸ್ತನಮಂಡಲಮದು
ವಿವರಿಸೆ ರೋಹಣಗಿರೀಂದ್ರಮಪ್ಪುದು ಪುಸಿಯೇ ೪೦

ಎಳೆಯುಳ ನಳಿತೋಳಂದಂ
ದಳೆವೆನೆನುತ್ತೆಳಸಿ ತಳೆಯದಳಲಿಂ ಜಳದೊ
ಳ್ಮುಳುಗಿತು ಮೃಣಾಳಮಿಷ್ಟಮ
ನಿಳೆಯೊಳ್ತಳಿ ದೀರ್ಘಸೂತ್ರನೇಂ ಪಡೆದಪನೇ ೪೧

ಮೃದುಲತೆಯಿಂ ಬಿಸಕಾಂಡದ
ಮೃದುಲತೆಯಂ ಜಯಿಸುವವಳ ಬಾಹಾಲತೆಯೊಳ್
ಪುದಿದೆಳೆದಳಿರಂ ಪೋಲ್ತಿ
ಪ್ಪುದಿದೆನೆ ಕರಮೆಸೆದುದವಳ ಕರಸರಸಿರುಹಂ ೪೨

ದ್ದವು. ೩೯. ಆಕೆಯ ಸ್ತನಗಳು, ಮುಖವೆಂಬ ಚಂದ್ರನು ಆಕೆಯ ಹೊಕ್ಕುಳೆಂಬ ಕೊಳದಿಂದ ಬಂಗಾರಮಯಗಳಾದ ಕಮಲದ ಮೊಗ್ಗುಗಳನ್ನು ತೆಗೆದು ಇಟ್ಟು, ಅವುಗಳ ಕಾವಲು ಕೆಲಸಕ್ಕೆ ಇರಿಸಿದ ನಕ್ಷತ್ರಗಳಂತೆ ಕಾಣುವ ಮುತ್ತಿನಸರಗಳಿಂದ ಶೃಂಗಾರಗೊಂಡಿದ್ದವು. ೪೦. ಯುವತಿಯಾದ ಸರ್ವಮಂಗಳೆಯ ಕುಚಮಂಡಲವು ನೂತನವಾದ ನವರತ್ನಗಳ ಮಾಲಿಕೆಯಿಂದ ಆವರಿಸಿ, ಕುಂಕುಮಕೇಸರಿ (ಕಾಶ್ಮೀರ), ಶ್ರೀಗಂಧ, ಗೈರಿಕಾದಿ ಧಾತುಗಳ ಬಣ್ಣದಿಂದ ಕೂಡಿತ್ತು ; ವಿಚಾರಿಸಿನೋಡಿದರೆ, ರೋಹಣಪರ್ವತದಂತೆ ಇತ್ತೆಂಬುದು ಸುಳ್ಳಲ್ಲ. ೪೧. ಎಳೆಯಳಾದ ಸರ್ವಮಂಗಳೆಯ ನೀಳವಾದ ತೋಳಿನ ಚೆಂದವನ್ನು ಪಡೆಯಬೇಕೆಂದು ಮೃಣಾಳವು ಬಯಸಿ ಪಡೆಯಲು ಶಕ್ಯವಿಲ್ಲದೆ ಸಂಕಟದಿಂದ ಜಲದಲ್ಲಿ ಮುಳುಗಿತು ! ದೀರ್ಘಸೂತ್ರನು (ದೀರ್ಘವಾದ ಎಳೆಯುಳ್ಳ ತಾವರೆದಂಟು ಮತ್ತು ಮಾಡಬೇಕಾದ ಕಾರ್ಯವನ್ನು ಜಾಗ್ರತೆಯಾಗಿ ಮಾಡದವನು) ತನ್ನಿಷ್ಟಸಿದ್ಧಿಯನ್ನು ಮಾಡಿಕೊಳ್ಳಲಾರನೆಂದು ತಿಳಿ. ೪೨. ತಾವರೆಯ ದಂಟನ್ನು ಮೃದುತ್ವದಿಂದ ಸೋಲಿಸಿದ ಅವಳ ಬಾಹುಲತೆಯಲ್ಲಿ ಒಪ್ಪುವ ಎಳೆದಳಿರೋ ಎಂಬಂತೆ

ಎಳೆದಳಿರಂಬಿದು ಮಱುವೊನೆ
ಗೊಳಲಾಱದು ಧೀರರೆರ್ದೆಯನೆಂದತನುವದ
ಕ್ಕಳವಡಿಸಿದನೆನೆ ಕೃತಕ
ದಳಮಂ ತುದಿಗೊಂಡು ಕರಜವೊಪ್ಪಿದುದವಳಾ ೪೩

ನೆಱೆವೆಱೆವೊಗದ ಮೃಗಾಕ್ಷಿಯ
ಮಿಱುಗುವ ನಖರುಚಿಗೆ ಸೋಲ್ತು ಮರನೇಱುತ್ತುಂ
ಗಱಿವೂವಿನ ಕಿಱುಗಱಿಗ
ಳ್ತುಱುಗಿದ ಬಹುಕಂಟಕಂಗಳೊಳ್ ನೆಲಸಿರ್ಕುಂ ೪೪

ಮುಗುದೆಯ ವೊಗದಾವರೆಯದು
ಮುಗಿವುದೊ ನಗುವುದೊ ಪರೀಕ್ಷಿಸೆಂದಟ್ಟಲೊಡಂ
ಮೃಗಧರನಬ್ಜಮನದನದು
ಮಿಗೆ ಸೆಱೆವಿಡಿದಂತೆ ಕಂಠವೊಪ್ಪಿದುದವಳಾ ೪೫

ಹರಿಣನುಮಂ ಪುತ್ತಂ ವಟ
ತರುವಂ ತೊಱೆದಕ್ಷಿಫಣಿಫಲಂಗಳನಾಂತಂ
ತಿರೆ ನೇತ್ರಭ್ರೂಬಿಂಬಾ
ಧರಂಗಳಿಂದವಳ ವದನವಿಧು ಕರವೆಸೆಗುಂ ೪೬

ಅವಳ ಕರಕಮಲವು ಶೋಭಿಸುತ್ತಿತ್ತು. ೪೩. ಮನ್ಮಥನು ಎಳೆಯ ತಳಿರಿನ ಬಾಣವು ಧೀರರ ಎದೆಯನ್ನು ನಾಟಿ ಪಾರಾಗಿಬರಲಾರದೆಂದು (ಭಾವಿಸಿ) ಆ ಚಿಗುರಿನಂತಿರುವ ಬೆರಳುಗಳ ತುದಿಗೆ ಕೇತಕೀಪುಷ್ಪದ ದಳವನ್ನು ಅಳವಡಿಸಿದನೋ ಎನ್ನುವಂತೆ ಆ ಸರ್ವಮಂಗಳೆಯ ಬೆರಳುಗಳಲ್ಲಿ ಬೆಳೆದ ಉಗುರುಗಳು ಶೋಭಿಸುತ್ತಿದ್ದವು. ೪೪. ಪೂರ್ಣ ಚಂದ್ರನಂತಹ ಮುಖದ ಆ ಮೃಗಾಕ್ಷಿಯಾದ ಸರ್ವಮಂಗಳೆಯ ಹೊಳೆಯುತ್ತಿರುವ ಉಗುರಿನ ಕಾಂತಿಗೆ ಕೇದಗೆಗರಿಯು ಪರಾಭವಹೊಂದಿ ಮರವನ್ನೇರಿ ಗರಿಹೂವಿನ ಕಿರಿಯ ಗರಿಗಳಲ್ಲಿ ತುಂಬಿರುವ ಬಹು ಮುಳ್ಳುಗಳಲ್ಲಿ ನೆಲಸಿರುವುದು. ೪೫. ಮುಗ್ಧೆಯಾದ ಆ ಸರ್ವಮಂಗಳೆಯ ಮುಖಕಮಲವು ಮುಕುಳಿತವಾಗಿದೆಯೋ ಅರಳಿದೆಯೋ (ನಗುವುದೋ) ಪರೀಕ್ಷಿಸಿ ನೋಡಿಕೊಂಡು ಬಾ ಎಂದು ಚಂದ್ರನು ಶಂಖ (ಅಬ್ಜ)ವನ್ನು ಕಳುಹಿಸಿಕೊಡಲು, ಆ ಶಂಖವನ್ನು ಆ ಮುಖವೆಂಬ ತಾವರೆಯು ಸೆರೆಹಿಡಿದಿದೆಯೋ ಎಂಬಂತೆ ಅವಳ (ಶಂಖಾಕೃತಿಯ) ಕುತ್ತಿಗೆಯು ಒಪ್ಪಿರುವುದು. ೪೬. ಹರಿಣವನ್ನು ತೊರೆದು ಕಣ್ಣುಗಳೂ, ಹುತ್ತವನ್ನು ತೊರೆದು ಹಾವೂ, ಆಲದ ಮರವನ್ನು ಬಿಟ್ಟು ಹಣ್ಣುಗಳೂ ಇವಳ ಮುಖವನ್ನು ಸೇರಿದ ಹಾಗೆ, ಸರ್ವಮಂಗಳೆಯ ಚಂದ್ರಸದೃಶ ಮುಖವು ಚಪಲವಾದ ಮಿಂಚುವ ಕಣ್ಣುಗಳಿಂದಲೂ, ದೀರ್ಘವಾದ ಹುಬ್ಬುಗಳಿಂದಲೂ,

ಅರವಿಂದದ ಸಿರಿ ಮೇಣಿರು
ಳಿರುಳೆರೆಯನ ಸಿರಿಯೆ ಪಗಲೊಳಳಿಗುಮಿವೆರಡಂ
ಸರಿ ಮಾಳ್ಪುದೆಂತೊ ಸಿರಿ ಬಂ
ದೆರವಿಲ್ಲದೆ ನೆಲಸಿನಿಂದ ತರಳೆಯ ಮೊಗದೊಳ್ ೪೭

ಎನ್ನಂ ಪಡೆದಂಬುಜಮಂ
ಮುನ್ನಂ ಮುಗಿಯಿಪ ಮೃಗಾಂಕನಂ ಜಯಿಸೆಂದಾ
ಕನ್ನೆಯ ಮೊಗಕ್ಕೆ ಕಡುಚೆ
ಲ್ವನ್ನಳಿನಜನೀಯೆ ಕಂದುಗುಂ ಕುಮುದಾಪ್ತಂ ೪೮

ಮುಗುದೆಯ ಮೊಗಸಸಿಯೊಳ್ ಬಿದಿ
ಮಿಗಮಂ ನಿರ್ಮಿಸುವೆನೆಂದು ಬಗೆದದಱಿಂದಂ
ಬಗೆವುಗೆ ಮರಳ್ದು ಲೋಚನ
ಯುಗಮಂ ಸಮೆದಂತೆ ಮೆಱೆದುವವಳಲರ್ಗಂಗಳ್ ೪೯

ವನಿತೆಯ ವದನಶ್ರೀ ಚಂ
ದನರಸಮಂ ನಳಿನದಳದೆ ತೀವಿದಳೆನೆ ಲೋ
ಚನರುಚಿಯಿರೆ ತಾರಕಮದು
ನೆನೆಯಿಪುದದಱೆಡೆಯೊಳೆಱಗಿ ತೇಲ್ವಳಿಶಿಶುವಂ ೫೦

ತೊಂಡೆಹಣ್ಣಿನಂಥ ಕೆಂಪಾದ ತುಟಿಗಳಿಂದಲೂ ಹೆಚ್ಚಾಗಿ ಶೋಭಿಸುತ್ತಿತ್ತು. ೪೭. ತಾವರೆಯ ಕಾಂತಿ ರಾತ್ರಿಯಲ್ಲಿರದು. ಚಂದ್ರನ ಕಾಂತಿ ಹಗಲಿನಲ್ಲಿರದು. ಆ ತರುಣಿಯ ಮುಖದಲ್ಲಿ ಸದಾ ರಂಜಿಸುವ ಕಾಂತಿ ನೆಲಸಿದೆ. ಹಾಗಿಲ್ಲದಿದ್ದರೆ ಅವೆರಡರ ಲೋಪವನ್ನು ಸರಿಪಡಿಸುವುದಾದರೂ ಹೇಗೆ ಸಾಧ್ಯವಿತ್ತು ?* ೪೮. 'ನನಗೆ ಜನ್ಮವಿತ್ತ ಕಮಲವನ್ನು ಮುಕುಳಿತಗೊಳಿಸುವ ಚಂದ್ರನನ್ನು ಮೊದಲು ಗೆಲ್ಲು' ಎಂದು ಆ ಕನ್ನೆಯಾದ ಸರ್ವ ಮಂಗಳೆಯ ಮುಖಕ್ಕೆ ಕಡುಚೆಲುವಿಕೆಯನ್ನು ಬ್ರಹ್ಮನು ಕೊಡಲು ಚಂದ್ರನು ಕಲಾ ಹೀನನಾದನು ! ೪೯. ಆ ಮುಗ್ಧೆಯಾದ ಸರ್ವಮಂಗಳೆಯ ಮುಖವೆಂಬ ಚಂದ್ರನಲ್ಲಿ ಬ್ರಹ್ಮನು ಜಿಂಕೆಯನ್ನು ಸೃಷ್ಟಿಸುತ್ತೇನೆಂದು ಯೋಚಿಸಿ, ಮುಖದ ಅಂದವು ಮನಸ್ಸಿನಲ್ಲಿ ನಾಟಲು, ಪುನಃ ಜಿಂಕೆಯ ಕಣ್ಣಿನಂತಹ ಎರಡು ಕಣ್ಣುಗಳನ್ನು ವಿರಚಿಸಿದಂತೆ ಆವಳ ಕಮಲದಂತಹ ಕಣ್ಣುಗಳು ಶೋಭಿಸಿದವು. ೫೦. ಆ ಸರ್ವಮಂಗಳಾದೇವಿಯ ಮುಖದಲ್ಲಿರುವ ಕಾಂತಿಯೆಂಬ ಚಂದನರಸವನ್ನು ಕಮಲದಳದಲ್ಲಿ ತುಂಬಿದಳೋ ಎನ್ನು ವಂತೆ ಕಣ್ಣಿನ ಹೊಳಪು ಇರಲು, ಆ ಕಮಲದದಳದ ಎಡೆಯಲ್ಲಿ ಎರಗಿ ತೇಲುತ್ತಿರುವ ಭ್ರಮರಶಿಶುವನ್ನು ಜ್ಞಾಪಿಸುವಂತೆ ಕರಿಯ ಗುಡ್ಡೆ (ಆ ಕಣ್ಣಿನಲ್ಲಿ) ಶೋಭಿಸುತ್ತಿತ್ತು.

---

*ಚಂದ್ರಂ ಗತಾ ಪದ್ಮಗುಣಾನ್ನ ಭುಂಕ್ತೇ....(ಕುಮಾರಸಂಭವ) ಎಂಬ ಶ್ಲೋಕದೊಡನೆ ಹೋಲಿಸಿ. (ಱಂ)

ಸೊಗಯಿಪ ಸಂಪಗೆ ಮುಗುಳದು
ಮುಗುದೆಯ ಮೂಗಿಂ ಪರಾಭವಂಬಡೆದಳಲಿಂ
ಮೃಗನಯನೆಯ ಕುರುಳೊಡನಾ
ಡಿಗಳೆನಿಪಳಿಗಳನೆ ತಗುಳ್ವುದಿನ್ನುಂ ಮುನ್ನುಂ ೫೧

ಉದಯಿಪ ಪೂರ್ಣೇಂದುವ ಕೆಂ
ಪೊದವಿದ ಕಳೆದೆಗೆದಮರ್ಚಿದಂತೆವೊಲೆಸೆಗುಂ
ಸುದತಿಯ ಬಾಯ್ದೆಱೆವೊಸರ್ದಮೃ
ತದ ಪನಿಗಳ ಪಙ್ತಿಯಂತೆ ಪಲ್ಗಳ್ಮೆಱೆಗುಂ ೫೨

ಚೆಂದಳಿರ್ದಂಪಂ ಬಿಂಬದೊ
ಳೊಂದಿದ ಕೆಂಪಂ ಪಯೋರಸದೊಳಮರ್ದಿಂಪಂ
ಕುಂದದ ರನ್ನದಲಂಪಂ
ತುಂದೊಂದೆನಿಸಿದವೊಲಧರವೊಪ್ಪಿದುದವಳಾ ೫೩

ಅಲರದ ಕುಂದದ ಚೆಂದದ
ಸುಲಲಿತ ಕುಟ್ಮಳಮನಾಯ್ದು ತೊಯ್ದು ಮರ್ದಿನೊಳಾ
ಲಲನೆಯ ಚೆಂದುಟಿದಳಿರೆಡೆ
ನಲಿನಜನಿಟ್ಟಂತೆ ದಂತಮೇಂ ರಂಜಿಸಿತೋ ೫೪

೫೧. ಸೊಗಸನ್ನುಂಟುಮಾಡುವ ಸಂಪಗೆಯ ಮೊಗ್ಗು ಆ ಸುಂದರಿಯ ಮೂಗಿನಿಂದ ಸೋಲನ್ನನುಭವಿಸಿ, ದುಃಖದಿಂದ ಆ ಮೃಗನಯನೆಯ ಮುಂಗುರುಳುಗಳಿಗೆ ಸಮಾನತೆ ಹೊಂದಿದ ಭ್ರಮರಗಳೊಡನೆ ಈಗಲೂ, ಮುಂದೆಯೂ ಸಹ ಹಗೆತನ ಹೊಂದಿರುವುದು. ೫೨. ಉದಯಿಸುತ್ತಿರುವ ಪೂರ್ಣಚಂದ್ರನ ಕೆಂಪು ಕೂಡಿದ ಕಾಂತಿಯನ್ನು ದೂರ ಮಾಡಿ, ಅದರಿಂದಲೇ ಸಿದ್ಧಪಡಿಸಿದಂತೆ ತುಟಿಗಳು ಪ್ರಕಾಶಿಸುತ್ತಿದ್ದವು. ಆ ತುಟಿಯಿಂದ ಸುರಿದ ಅಮೃತದ ಹನಿಗಳ ಪಂಕ್ತಿಯಂತೆ ಹಲ್ಲುಗಳು ಮೆರೆಯುತ್ತಿದ್ದವು. ೫೩. ಕೆಂಪಾದ ತಳಿರಿನಲ್ಲಿರುವ ತಂಪು, ತೊಂಡೆಯ ಹಣ್ಣಿನಲ್ಲಿದ್ದ ಕೆಂಪು, ಹಾಲಿನಲ್ಲಿದ್ದ ಇಂಪು, ಕುಂದಿಲ್ಲದ ರತ್ನದ ಪ್ರಕಾಶ, ಇವನ್ನು ತಂದು ಒಂದನ್ನಾಗಿ ಮಾಡಿದ ಹಾಗೆ ಅವಳ ತುಟಿಗಳು ಒಪ್ಪಿದ್ದುವು. ೫೪. ಅರಳದೆಯಿರುವ ಚೆಂದವಾದ ಕುಂದವೆಂಬ ಹೆಸರಿನ ಮಲ್ಲಿಗೆ (ಕೋಲುಮಲ್ಲಿಗೆ)ಯ ಮನೋಹರವಾದ ಮೊಗ್ಗುಗಳನ್ನು ಆಯ್ದು ತಂದು ಬ್ರಹ್ಮನು ಆ ಸರ್ವಮಂಗಳೆಯ ಕೆಂಪಾದ ತಳಿರಿನಂತಹ ತುಟಿಗಳ ಪಕ್ಕದಲ್ಲಿ ಸಾಲಾಗಿ ಜೋಡಿಸಿದಂತೆ

ಕಿವಿದೊಡವಿನ ಮುಕ್ತಾತತಿ
ನವೋಡುಗಣಮೆನಿಸೆ ಕಱಿಯೆ ಮಕರಿಕೆಯೆನೆ ತ
ದ್ಯುವತಿಯ ನಯನೋತ್ಪಳದಂ
ದವನೀಕ್ಷಿಸಲ್ಕೆದಿದಿಂದುವೆನೆ ಕದಪೆಸೆಗುಂ ೫೫

ಕುರುಳೊಳ್ ತೀವಿದ ಕತ್ತುರಿ
ಯ ರಜಂ ಮೊಗರಸದೊಳುದಿರ್ದು ನಱುಸುಯ್ಯೆಲರಿಂ
ಪರೆದು ತೆರೆಮಸಗಿ ನಿಂದಂ
ತಿರೆ ಕೊಂಕಿಂ ಭ್ರೂಯುಗಂ ವಿರಾಜಿಪುದವಳಾ ೫೬

ಸೆಱೆವಿಡಿದುದು ಮುಖಕಮಳಂ
ಪೆಱಪಿಂಗದು ಚಿಕುರತಿಮಿರಮೆನ್ನನಿದೆಂದೇಂ
ಮುಱುಗಿ ಬಡವಾದನೊ ಪೇ
ಳ್ನಿಱಿವೆಱೆಯೆನೆ ಪೆಱೆನೊಸಲ್ ಮೃಗೇಕ್ಷಣೆಗೆಸೆಗುಂ ೫೭

ಅಗಲದೆ ಮೊಗದಾವರೆಯೊ
ಳ್ಸೊಗಯಿಪ ಮೃಗಮದಲಲಾಮ ಮಧುಪದಶಿಶುಗ
ಳ್ಪಗೆಗೊಳಿಸಿ ಬಳಿಯೊಳಾಡುವ
ಬಗೆಯೆನಿಸಿದುವವಳ ಪಣೆಯೊಳಲೆವಳಕಂಗಳ್ ೫೮

ಅವಳ ಹಲ್ಲುಗಳು ಅದೇನು ರಂಜಿಸಿದುವೋ ! ೫೫. ಕರ್ಣಾಭರಣಗಳಲ್ಲಿರುವ ಮುತ್ತುಗಳ ಸಮೂಹವು ನೂತನವಾದ ನಕ್ಷತ್ರಗಳ ಸಮೂಹವಾಗಿಯೂ, ಮಕರಿಕಾಪತ್ರ (ಗಲ್ಲದ ಮೇಲೆ ಕಸ್ತೂರಿ ಕೇಸರಿಗಳಿಂದ ಬರೆಯಿಸಿಕೊಂಡ ಮೊಸಳೆಯ ಚಿತ್ರ)ವು ಕಲಂಕದಂತೆಯೂ ತೋರುತ್ತಿರಲು, ಆ ಯುವತಿಯ ನೇತ್ರಗಳೆಂಬ ಕನ್ನೈದಿಲೆಗಳ ಸೊಬಗನ್ನು ನೋಡಲು ಬಂದ ಚಂದ್ರನಂತೆ ಅವಳ ಕಪೋಲಗಳು ಶೋಭಿಸುತ್ತಿದ್ದವು. ೫೬. ಮುಂಗುರಳುಗಳಲ್ಲಿ ವ್ಯಾಪಿಸಿದ್ದ ಕಸ್ತೂರೀತಿಲಕದ ಧೂಳು ಮುಖಲಾವಣ್ಯವೆಂಬ ನೀರಿನಲ್ಲುದುರಿ, ಅವಳ ಸೂಕ್ಷ್ಮವಾದ ಉಸುರಿನ ಗಾಳಿಯಿಂದ ಆ ನೀರಿನಲ್ಲಿ ತರಂಗಗಳೆದ್ದು, ಉದುರಿದ್ದ ಆ ಕಸ್ತೂರಿ ಒಟ್ಟುಗೂಡಿ, ವಕ್ರವಾಗಿ ಇರುವುದೋ ಎಂಬ ಹಾಗೆ ಆ ಸರ್ವಮಂಗಳೆಯ ಎರಡೂ ಹುಬ್ಬುಗಳು ಪ್ರಕಾಶಿಸುತ್ತಿದ್ದವು. ೫೭. ಆ ಮೃಗನೇತ್ರೆಯ ಅರ್ಧಚಂದ್ರಾಕಾರವಾದ ಹಣೆಯು, ಮುಖಕಮಲವು ನನ್ನನ್ನು ಸೆರೆಹಿಡಿಯಿತು. ಮುಂಗುರುಳುಗಳ ಕತ್ತಲೆ ನನ್ನಿಂದ ತೊಲಗಲಿಲ್ಲವೆಂದು ಪೂರ್ಣಚಂದ್ರನು ಮರುಗಿ ಬಡವಾದನೋ ಎಂಬಂತೆ ಪ್ರಕಾಶಿಸುತ್ತಿತ್ತು ೫೮. ಆ ಸರ್ವಮಂಗಳೆಯ ಹಣೆಯಲ್ಲಿ ಆಲೆದಾಡುತ್ತಿದ್ದ ಮುಂಗುರುಳು ಎಡಬಿಡದೆ ಅವಳ ಮುಖವೆಂಬ ಕಮಲದಲ್ಲಿರುವ ಕಸ್ತೂರಿತಿಲಕವೆಂಬ ಭ್ರಮರದ ಮರಿಗಳಂತೆ ಆ ಮುಖಕಮಲದ ಬಳಿಯಲ್ಲೇ ಸುಳಿ

ವನಿತೆಯ ತನುತಸು ಪರಿಚಂ
ದನಶಾಖೆಯುನಡರ್ದು ಬಾಸೆಶಿಸುವೆಲ್ಲಿದುದೇ
ದೆನುತೆಱಗಿ ನೋಳ್ಪ ಭುಜಗಾಂ
ಗನೆಯೆನೆ ಫಣಿವೇಣಿ ಜಾಣೆಗೇನೊಪ್ಪಿದುದೋ ೫೯

ವ|| ಅಂತುಮಲ್ಲದೆಯುಂ

ಚಂ|| ಹಿಮಕರಬಿಂಬವಕ್ತ್ರೆಗೆ ಮೃಗಾಯುತಲೋಚನಮಬ್ಜಗಂಧಿಗು
ತ್ತಮ ಮದಭೃಂಗಕುಂತಳಮುದಾರಶುಕೀಮೃದುವಾಣಿಗಚ್ಚದಾ
ಡಿಮರದನಾಳಿ ಶೈಲಜಘನಸ್ಥಳಿಗೊಪ್ಪುವ ಸಿಂಹಮಧ್ಯಮೊ
ಪ್ಪುಮನಿರದೀವುದಚ್ಚರಿಯೆ ಕೋಕಕುಚದ್ವಯೆಗಬ್ಜಪಾಣಿಗಳ್ ೬೦

ನುಡಿ ನುಡಿವೆಣ್ಗೆ ಜಾಣ್ನುಡಿಗಳಂ ಕಲಿಸಲ್ಸಲೆ ಸಾಲ್ವುದೊಪ್ಪುವೊ
ಳ್ನಡೆ ಸಡೆವಕ್ಕಿಗಳ್ಗೆ ನಡೆಯಂ ನೆರಪಲ್ಕೆಱದಿರ್ಪುದೆಯ್ದೆ ಕ
ಣ್ಗಡೆ ಕುಡಿಮಿಂಚನುರ್ಕುಡಿಯಲಾರ್ಪುದು ಬಾಳೆಯ ಭಾಳವರ್ಣಮಂ
ತೊಡೆ ತೊಡೆದಪ್ಪುದಾಂತೊಡೆ ಶುಭಾವಹಭಾವ ಭವಾಧಿದೇವಿಯಾ ೬೧

ದಾಡುವ ರೀತಿಯಲ್ಲಿ ಅಲ್ಲಾಡುತ್ತಿದ್ದವು. ೫೯. ಆ ವನಿತೆಯ ಕೃಶವಾದ ಶರೀರವೆಂಬ ಶ್ರೀಗಂಧದ ಮರದ ಕೊಂಬೆಯನ್ನು ನಾಗಕನ್ನಿಕೆಯೆಂಬ ಹೆಂಗಸು ಹತ್ತಿ, ಬಾಸೆಯೆಂಬ ತನ್ನ ಶಿಶುವು ಎಲ್ಲಿದೆ ? ಎಂದೆನ್ನುತ್ತ ಎರಗಿ ನೋಡುತ್ತಿರುವಳೋ ಎನ್ನುವಂತೆ ಸರ್ಪಾಕಾರದ ಜಡೆಯು ಆ ಜಾಣೆಗೆ ಅದೇನು ಒಪ್ಪಿತ್ತೋ ! ವ|| ಹೀಗೂ ಅಲ್ಲದೆ, ೬೦. ಚಂದ್ರಬಿಂಬದಂತಹ ಮುಖವುಳ್ಳ ಸರ್ವಮಂಗಳೆಗೆ ಎರಳೆಗಣ್ಣುಗಳೂ, ಕಮಲದ ಸುವಾಸನೆಯಂತಹ ಅಂಗದ ಸುವಾಸನೆಯುಳ್ಳ ಅವಳಿಗೆ ಭೃಂಗದಂತಹ ಮುಂಗುರುಳೂ, ಹೆಣ್ಣುಗಿಣಿಯ ಮಾತಿನಂತಹ ಅತಿಶಯ ಚಲುವಾದ ಮಾತುಗಳುಳ್ಳ ಅವಳಿಗೆ ದಾಡಿಮ ಬೀಜದಂತಹ ಹಲ್ಲುಗಳ ಸಾಲುಗಳೂ, ಪರ್ವತದಂತೆ ದಪ್ಪನಾದ ಕಟಿಪಶ್ಚಾದ್ಭಾಗಗಳುಳ್ಳ ಅವಳಿಗೆ ಸಿಂಹದ ನಡುವಿನಂತೆ ಇರುವ ಚಿಕ್ಕನಡುವೂ, ಚಕ್ರವಾಕ ಪಕ್ಷಿಗಳ ಹಾಗೆ ಕುಚದ್ವಯಗಳನ್ನುಳ್ಳ ಅವಳಿಗೆ ಕಮಲದಂತಹ ಕೈಗಳೂ ಅಂದವನ್ನು ಈಯುತ್ತಿರುವುದು ಆಶ್ಚರ್ಯವೇನಲ್ಲ. ೬೧. ಶುಭಕರಭಾವದಿಂದ ಕೂಡಿದ ಸಂಸಾರಾಭಿಮಾನಿದೇವತೆಯಾದ ಗೌರಿಯಂತಿರುವ ಆ ಸರ್ವಮಂಗಳಾದೇವಿಯ ನುಡಿಗಳು ಸರಸ್ವತಿಗೆ ಚತುರವಚನಗಳನ್ನು ಕಲಿಸಲು ಸಾಕಾಗುವಂತಿದ್ದವು ; ಶೋಭಿಸುವ ಮಂದಗಮನವು ಹಂಸಪಕ್ಷಿಗೆ ನಡಿಗೆಯನ್ನು ತಿಳಿಪಡಿಸಲು ಸರಿಯಾಗಿತ್ತು ; ಕಡೆಗಣ್ಣಿನ ಕಾಂತಿಯು ಸೆಳೆಮಿಂಚನ್ನು ಗೆಲ್ಲಲು ಸಮರ್ಥವಾಗಿತ್ತು ; ತೊಡೆಗಳು ಬಾಳೆಗೆ ಅತಿಶಯ ನುಣುಪಾದ

ವ॥ ಮತ್ತಮಾ ತರುಣಿ ಗಿರಿಸುತೆಯಂತೆ ಶಶಿಕಳಾಧರೆಯುಂ ; ರಮೆಯಂತತನುಜನ್ಮ ಸ್ಥಳಿಯುಂ ; ಭಾರತಿಯಂತೆ ಪದ್ಮಜಾತ್ಯಾಮೋದಾವಹೆಯುಂ ; ವನಸ್ಥಳಿಯಂತೆ ಪೃಥುಲ ಕುಚಾಲಂಕೃತೆಯುಂ ; ನರ್ತಕಿಯಂತೆ ಮಂಜುಲಾಸ್ಯಮನೋಜ್ಞೆಯುಂ ; ಈಶಾನದಿಸೆಯಂತೆ ಸುಪ್ರತೀಕಸಮನ್ವಿತೆಯುಂ ; ಸುಗ್ರೀವಾಭಿರಾಮೆಯಾಗಿಯುಮಲಂಕಾರಾತಿಶೋಭಿತೆಯು ಮುದಿತಾರುಣಕಲ್ಲೋಲಸಿತೆ[1]ಯಾಗಿಯುಮಪೂರ್ವಸ್ವಭಾವೆಯುಂ ; ಧೃತಕುಂಭಜಘನಸ್ಥಿತೆ

ಬಣ್ಣವನ್ನು ತೊಡೆಯಲು ಸಮರ್ಥವಾಗಿತ್ತು. ವ|| ಮತ್ತು ಆ ಸರ್ವಮಂಗಳಾ ದೇವಿಯು ಪಾರ್ವತಿಯಂತೆ ಶಶಿಕಳಾಧರೆಯುಂ, ಪಾರ್ವತಿಯು ಚಂದ್ರರೇಖೆಯಂತೆ ಆಕಾರವುಳ್ಳವಳು ; ಸರ್ವಮಂಗಳೆಯು ಅಮೃತಕಳೆಯನ್ನು ಅಧರದಲ್ಲಿ ಉಳ್ಳವಳು ; ರಮೆಯಂತೆ ಅತನುಜನ್ಮಸ್ಥಳಿಯು, ರಮೆಯು (ಮಹಾಲಕ್ಷ್ಮಿಯು) ಮನ್ಮಥನ ಹುಟ್ಟಿಗೆ ಮೂಲಕಾರಣಳು ; ಸರ್ವಮಂಗಳೆಯು, ಮನ್ಮಥವಿಕಾರವು ಮನಸ್ಸಿನಲ್ಲುಂಟಾಗುವಂತೆ ಮಾಡುವ ಆಕಾರವನ್ನುಳ್ಳವಳು ; ಭಾರತಿಯ ಹಾಗೆ ಸರಸ್ವತಿಯು ಬ್ರಹ್ಮನಿಗೆ ಅತಿ ಆಮೋದವನ್ನುಂಟುಮಾಡುವವಳು ; ಸರ್ವಮಂಗಳೆಯು ಪದ್ಮಿನೀಜಾತಿಯ ಸ್ತ್ರೀಯೆನಿಸಿ ಆನಂದವನ್ನುಂಟುಮಾಡುವವಳು ; ವನಸ್ಥಳದ ಹಾಗೆ ವನಸ್ಥಳವು ದೊಡ್ಡ ಲಕುಚ (ಕಾಡುಲಿಂಬೆ) ವೃಕ್ಷಗಳಿಂದ ಅಲಂಕಾರಗೊಂಡಿರುತ್ತದೆ ; ಸರ್ವಮಂಗಳೆಯು ದೊಡ್ಡ ಪೃಥುಲವಾದ ಕುಚಗಳಿಂದ ಅಲಂಕಾರಗೊಂಡವಳು ; ನರ್ತಕಿಯ ಹಾಗೆ, ನರ್ತಕಿಯು ರಮ್ಯ (ಮಂಜು)ವಾದ 'ಲಾಸ್ಯ'ವೆಂಬ ಹೆಸರಿನ ನೃತ್ಯದಿಂದ ಮನೋಹರೆ ; ಸರ್ವಮಂಗ ಳೆಯು, ಮಂಜುಳವಾದ ಮುಖ (ಆಸ್ಯ)ದಿಂದ ಮನೋಹರೆ ; ಈಶಾನ್ಯದಿಕ್ಕಿನಹಾಗೆ, ಈಶಾನ್ಯದಿಕ್ಕು ಅಷ್ಟದಿಗ್ಗಜಗಳಲ್ಲೊಂದಾದ 'ಸುಪ್ರತೀಕ'ವೆಂಬ ಆನೆಯಿಂದ ಕೂಡಿ ದುದು ; ಸರ್ವಮಂಗಳೆಯು, ಒಳ್ಳೆಯ (ಸು), ಅವಯವ (ಪ್ರತೀಕ)ಗಳಿಂದ ಸಮನ್ವಿತ ಳಾದವಳು ; (ಮುಂದೆ ವಿರೋಧಾಭಾಸ) ಸುಗ್ರೀವನೆಂಬ ಕಪಿರಾಜನಿಂದ ಮನೋಹರ ಳಾದರೂ ಅ+ಲಂಕಾ+ಆರಾತಿ ರಾಮನಿಂದ ಶೋಭಿತೆಯಲ್ಲ. ಸರ್ವಮಂಗಳೆ ಉತ್ತಮ ವಾದ ಗ್ರೀವ (ಕುತ್ತಿಗೆ)ಯಿಂದ ಮನೋಹರಳಾಗಿ ಅತಿಯಾದ ಅಲಂಕಾರದಿಂದ ಶೋಭೆ ಗೊಂಡವಳು ; ಉದಯವಾಗುತ್ತಿರುವ ಅರುಣನ ಕಿರಣಗಳಿಂದ ಪ್ರಕಾಶಮಾನಳಾದರೂ ಅಪೂರ್ವ (ಪೂರ್ವದಿಕ್ಕು ಅಲ್ಲದ) ಸ್ವಭಾವವುಳ್ಳವಳು ; ಅರುಣಕಾಂತಿಯುಳ್ಳ ಕೈಗಳಿಂದ ಪ್ರಕಾಶಿಸುವವಳಾದರೂ ನೂತನ (ಅಪೂರ್ವ)ವಾದ ಸ್ವಭಾವದಿಂದ ಕೂಡಿದವಳು ; ಕುಂಭಜನಾದ ಅಗಸ್ತ್ಯಮುನಿಯ ಘನವಾದ ಸ್ಥಿತಿಯನ್ನು ಧರಿಸಿದವಳಾದರೂ ಅತಿ ಲಾವಣ್ಯ ಅಂದರೆ ಅತ್ಯಂತ ಉಪ್ಪುನೀರಿನ ಸ್ಥಾನಕ್ಕೆ ಆಶ್ರಯಳಾದ ಸಮುದ್ರವಾದವಳು; ಆನೆಯ ಕುಂಭಸ್ಥಳಗಳಂತಹ ಕಟಿಪಶ್ಚಾತ್ ಭಾಗಗಳನ್ನು ಧರಿಸಿದವಳಾದರೂ ಅತಿ ಸೊಬಗಿಗೆ ಆಸರೆಯಾದವಳು ; ರಂಭೆಯೆಂಬ ಅಪ್ಸರೆಯುಳ ಅಧಿಕವಾದ ವಿಭವದಿಂದ ಕೂಡಿದವಳಾದರೂ ವಿಸ್ತಾರವಾದ ಭೂಮಂಡಲದಲ್ಲಿ ಪೂಜ್ಯಗುಣಗಳ ಉದಯಕ್ಕೆ

---

1 'ಅರುಣಕರೋಲ್ಲಸಿತೆ' ಎಂಬುದು ಶುದ್ಧಪಾಠ (ರಂ)

ಯಾಗಿಯುಮತಿಲಾವಣ್ಯನಿಧಾನೆಯುಂ ; ರಂಭೋರುವಿಭವಾನ್ವಿತೆಯಾಗಿಯುಂ ವಿತತ ಭೂ[1]ಮಹಿತಗುಣೋದಯೆಯುಂ ; ನಳಿನನೇತ್ರವಿಲಸಿತೆಯಾಗಿಯುಂ ಅನಂತಮಣಿಕಿರಣ[2] ಮನೋಜ್ಞೆಯುಂ ಎನಿಸಿರ್ದಳೆಂತುಮಲ್ಲದೆಯುಂ

ಮ॥ಸ್ರ॥ ಗತಿಯಿಂದಂ ರಾಜಹಂಸದ್ವಿಜವಿಜಯಿನಿಯಾಗಿರ್ದು ಮಾತಂಗಮಂ ನಿ
ರ್ಜಿತ ಸಜ್ಜೈವಾತೃಕಪ್ರದ್ಯುತಿಯೆನಿಸಿ ನಿಜಾಪಾಂಗದಿಂದಂ ಕ್ಷಣತ್ವಿ
ಟ್ತ್ವಿತಿಯಂ ಸೌಂದರ್ಯದೂರೀಕೃತ ಸಕಲ ವಧೂವೃಂದೆಯಾಗಿರ್ದು ಭೂಭೃ
ತ್ಸುತೆ ತಾಂ ತ್ರೈದೃಶ್ಯಯೋಷಿಜ್ಜನಮನನುದಿನಂ ಗೆಲ್ವುದಾಶ್ಚರ್ಯಮೇ ದಲ್[3] ೬೨

ವ॥ ಮತ್ತಂ

ಚಂ॥ ಇದು ಕುಸುಮಾಸ್ತ್ರನಸ್ತ್ರಮಿದು ದರ್ಪಕನಾರ್ಪು ಮನೋಜನೋಜೆ ನೋ
ಡಿದು ನನೆವಿಲ್ಲಬಲ್ಲಹನ ಚೆಲ್ವಿದು ಕಾವನ ಜೀವರತ್ನಮಿಂ
ತಿದು ರತಿಕಾಂತನಾಂತ ಪೊಸ ಕೂರಸಿ ತಾನಿದು ಮಾರವೀರನ
ಗ್ಗದ ಸದಲಂಕೃತಿಧ್ವಜಮಿದೆಂದೆನಿಸಿರ್ದುದು ರೂಪು ನೀಜೆಯಾ ೬೩

ಕಾರಣಳಾದವಳು ; ಕದಳಿಯ ಕಂಬಗಳಂತೆ ತೊಡೆಗಳ ನುಣುಪಾದ ಗುಣವುಳ್ಳವ ಳಾದರೂ ವಿಸ್ತಾರ ಭೂಮಂಡಲದಲ್ಲಿ ಪೂಜ್ಯಗಳಾದ (ಮಹಿತ) ಕುಲೀನತ್ವಾದಿ ಗುಣಗಳ ಉತ್ಪತ್ತಿಗೆ ಕಾರಣಳಾದವಳು ; ಕಮಲಗಳಿಗೆ ನೇತ್ರಸ್ವರೂಪನಾದ ಸೂರ್ಯನಿಂದ ಪ್ರಕಾಶಿಸುವವಳಾದರೂ ಅನಂತಮಣಿ ಎಂದರೆ ಸೂರ್ಯನ ಕಿರಣಗಳಿಂದ ಮನೋಜ್ಞ ವಾದವಳು; ಕಮಲದಂತಿರುವ ಕಣ್ಣುಗಳಿಂದ ಮನೋಹರೆಯಾಗಿದ್ದರೂ ಅನೇಕ ರತ್ನಗಳ ಕಾಂತಿಯಿಂದ ರಮಣೀಯಳಾದವಳು ಎನಿಸಿದ್ದಳು. ಅದೂ ಅಲ್ಲದೆ, ೬೨. ಆ ರಾಜ ಪುತ್ರಿಯು ತನ್ನ ನಡಿಗೆಯಿಂದ ರಾಜಹಂಸಪಕ್ಷಿಗಳನ್ನೂ ಮತ್ತು ರಾಜಶ್ರೇಷ್ಠರನ್ನೂ ದ್ವಿಜರನ್ನೂ ಗೆದ್ದವಳಾಗಿರುವಾಗ, ಆನೆಯನ್ನೂ ಒಬ್ಬ ಚಂಡಾಲನನ್ನೂ ಗೆಲ್ಲುವುದು ಅಚ್ಚರಿಯೆ ? ತನ್ನ ಅಪಾಂಗದಿಂದ ಚಂದ್ರನ ಕಾಂತಿಯನ್ನೂ ಚಿರಂಜೀವಿಗಳ ಕಾಂತಿ ಯನ್ನೂ ಗೆದ್ದಿರುವಾಗ ಮಿಂಚಿನ ಕ್ಷಣಕಾಲ ಪ್ರಕಾಶಿಸುವವರ ಕಾಂತಿಯನ್ನೂ ಗೆಲ್ಲುವುದ ರಲ್ಲಿ ಹೆಚ್ಚೇನು ? ತನ್ನ ಸೌಂದರ್ಯದಿಂದ ಸಕಲ ಸ್ತ್ರೀಯರನ್ನೂ ಜಯಿಸಿರುವಾಗ ದೇವತಾಸ್ತ್ರೀಯರನ್ನೂ ಮೂವತ್ತುಮೂರು ಸ್ತ್ರೀಯರನ್ನೂ ಜಯಿಸುವುದರಲ್ಲಿ ಅಚ್ಚರಿ ಯೇನು ? ವ॥ ಮತ್ತು ೬೩. ಆ ಸುಂದರಿಯ ರೂಪವು, ಇದು ಕುಸುಮಾಸ್ತ್ರ ನಾದ ಮನ್ಮಥನ ಬಾಣ ; ದರ್ಪಕನ ಪರಾಕ್ರಮ ; ಮನೋಜನ ತೇಜ ; ನನೆವಿಲ್ಲ ಬಲ್ಲಹನ ಚೆಲ್ವು ; ಕಾಮನ ಜೀವರತ್ನ ; ರತಿಪತಿಯು ಧರಿಸಿರುವ ಹೊಸ ಹರಿತವಾದ

---

1 ವಿರೋಧ ಸ್ಫುಟವಾಗಿಲ್ಲ. ಪಾಠಾಂತರವಿರಬಹುದು (ರಂ)
2 'ಅಮೃತಮಣಿಕಿರಣ' ಎಂಬ ಪಾಠಾಂತರವಿದ್ದರೆ ಸರಿ (ರಂ)
3 ಟಿಪ್ಪಣಿ :—ಮಾತಂಗ = ಆನೆ ; ಚಂಡಾಲ. ಜೈವಾತೃಕ = ಚಂದ್ರ; ಚಿರಂಜೀವಿ. ಕ್ಷಣತ್ವಿಟ್ = ಮಿಂಚು; ಕ್ಷಣಕಾಲದ ಪ್ರಕಾಶವುಳ್ಳದ್ದು. ತ್ರೈದಶ್ಯ = ದೇವತೆ ; ಮೂವತ್ತುಮೂರು.

ಕಂ॥ ಕಱಿದಳೆಯದಿಂದುಕಳೆ ಕಳೆ
ದೊಱೆಯದ ಚಂದ್ರಿಕೆ ಪಗಲ್ಪಗಲ್ ಮುಗಿದು ಮುದಂ
ಮುಱಿಯದ ಕೋಮಳೆ ಕೋಮಳೆ
ಬಱಿಯದ ಸಿಂಗರದ ಪೊಳೆ ಪೊಳೆಯುತೆಸೆದಿರ್ದಳ್ ೭೪

ವ॥ ಇಂತು ನಿರತಿಶಯ ಸೌಂದರ್ಯ ಮಾಧುರ್ಯಮಂ ಬೀಱಿ ಕಾಂತೆ ಕಾಂತಿವೆತ್ತು ಕಂಗೊಳಿಸುತ್ತುಮಿರೆಯಿರೆ

ಚಂ॥ ಗುರುಜಘನಸ್ಥಳೀಪುಳಿನದೊಳ್ ಪರಿದಾಡಿ ವಳಿತ್ರಯೋರ್ಮಿಯೊಳ್
ಪಿರಿದಡರ್ದಾಡಿ ನಾಭಿಸುಳಿಯೊಳ್ಸುಳಿದಾಡಿ ತಮಾಲನೀಲ ಭಾ
ಸುರತರ ರೋಮರಾಜಿ ನವಶೈವಲದೊಳ್ ನಡೆದಾಡಿ ತನ್ಮುಖಾಂ
ಬುರುಹರಸಪ್ರವಾಹದೆ ಮುಳುಂಗಿದುವಕ್ಷಿಝಷಂಗಳಾತನಾ ೭೫

ವ॥ ಮತ್ತಮಾಗಳ್

ಮ॥ಸ್ರ॥ ಲಲನಾನೇತ್ರತ್ರಿಭಾಗಪ್ರಭವ ಸಿತರುಚಿಶ್ವೇತರುಗ್ಲೋಹಿತಜ್ಯೋ
ತಿ ಲಸದ್ಧಾತ್ರೀಶಪುತ್ರಾಂಗದೊಳೆ ಪಸರಿಸುತ್ತೆಯ್ದೆ ಕಣ್ಗೊಪ್ಪಿದತ್ತು
ಜ್ವಲ ತನ್ನೇತ್ರಾಂಚಲಸ್ಥ ಸ್ಮರನಿಸೆ ಪರಿತಂದೊತ್ತಿ ಪಾಯ್ವುರ್ಪ ನೀಲೋ
ತ್ಪಲ ಚಂಚನ್ಮಲ್ಲಿಕಾಶೋಕ ವಿಶಿಖತತಿಯೊಂದೆಂಬ ಪಾಂಗಿಂದಳುಂಬಂ ೭೬

ಖಡ್ಗ ; ಮಾರನೆಂಬ ವೀರನ ಶ್ರೇಷ್ಠ ಅಲಂಕಾರಗೊಂಡ ಧ್ವಜ ಎಂದು ಎನಿಸಿತ್ತು. ೭೪. ಈ ಸರ್ವಮಂಗಳೆಯೆಂಬ ಯುವತಿಯು ಕಪ್ಪುಚಿಹ್ನೆಯಿಲ್ಲದ ಚಂದ್ರಕಳೆ ; ಕಾಂತಿಯನ್ನು ತೊರೆಯದೆ ಇರುವಂಥ ಚಂದ್ರಿಕೆ ; ಪ್ರತಿ ಹಗಲಿನಲ್ಲಿ ಮುಚ್ಚಿಕೊಳ್ಳದ ನೈದಿಲೆ ; ಎಂದೂ ಇಂಗದ ಶೃಂಗಾರದ ಹೊಳೆ ಎನಿಸಿ ಮೆರೆಯುತ್ತಿದ್ದಳು. ವ|| ಈ ರೀತಿ ಅಧಿಕ ಚೆಲುವನ್ನೂ ಮಧುರತೆಯನ್ನೂ ಹೊರಸೂಸಿ ಸೊಬಗಿನಿಂದ ಪ್ರಕಾಶಿಸುತ್ತಿರಲು, ೭೫. ಆ ರಾಜಶೇಖರನ ಕಣ್ಣುಗಳೆಂಬ ಮೀನುಗಳು ಆ ಸರ್ವಮಂಗಳೆಯ ದೊಡ್ಡ ದೊಡ್ಡ ಕಟಿಪಶ್ಚಾದ್ಭಾಗಗಳೆಂಬ ಮರಳಿನ ಪ್ರದೇಶದಲ್ಲಿ ಹರಿದಾಡಿ, ತ್ರಿವಳಿಗಳೆಂಬ ತೆರೆಗಳಲ್ಲಿ ಹೆಚ್ಚು ಸಮಯದವರೆಗೆ ಏರಿ ಆಡುತ್ತ, ಹೊಕ್ಕುಳೆಂಬ ಸುಳಿಯಲ್ಲಿ ಸುಳಿದಾಡಿ, ಹೊಂಗೆಯ ತೊಂಗಲಿನಂತೆ ನೀಲವರ್ಣದಿಂದ ಕೂಡಿದ ಬಾಸೆಗಳ ಸಾಲೆಂಬ ಹಾವಸೆಯಲ್ಲಿ ನಡೆದಾಡಿ, ಮುಖಕಮಲದ ಶೃಂಗಾರರಸಪ್ರವಾಹದಲ್ಲಿ ಮುಳುಗಿದವು. ವ|| ಮತ್ತು ಆಗ ೭೬. ಆ ಸರ್ವಮಂಗಳಾದೇವಿಯ ಕಣ್ಣುಗಳ ತ್ರಿಭಾಗಗಳಾದ ಕರಿಗುಡ್ಡೆ, ಬಿಳಿಗುಡ್ಡೆ, ಅಂಚಿನಲ್ಲಿರುವ ಕೆಂಪು, ಇವುಗಳಿಂದ ಜನಿಸಿದ ಕಪ್ಪು, ಬಿಳುಪು, ಕೆಂಪುಪ್ರಕಾಶಗಳು ಆ ರಾಜಶೇಖರನ ಅಂಗದಲ್ಲಿ ಪ್ರಸಾರಗೊಳ್ಳುತ್ತಿತ್ತು. ಅವಳ ಉಜ್ವಲವಾದ ನೇತ್ರಗಳ ಕಡೆಯಲ್ಲಿರುವ ಮನ್ಮಥನು ನೀಲೋತ್ಪಲ, ಮಿಂಚುವಮಲ್ಲಿಗೆ, ಅಶೋಕಗಳಾದ ತನ್ನ ಬಾಣಗಳ ಸಮೂಹವನ್ನು ಪ್ರಯೋಗಿಸಿದನೋ ಎಂಬಂತೆ ಅವಳ

ವ॥ ಆ ಪ್ರಸ್ತಾವಮಂ ಸಾರ್ದು ಸಂಭ್ರಮಿಸಿ ನಿಂದು

ಉ॥ ಕರ್ಬಿನಬಿಲ್ಲೆ ತುಂಬಿವೆದೆಯಂ ಪದೆದೇಱಿಸಿ ಗಂಡಗಾಡಿಯಿಂ
ದುರ್ಬಿ ಸರೋಜಕೋರಕದ ಕೂರ್ಗಣೆಯಂ ತವೆತೊಟ್ಟು ಲಕ್ಷ್ಯಮಂ
ದೋರ್ಬಲಶಾಲಿ ನೋಡಿ ಸೆಳೆದೆಚ್ಚನವಂದಿರನೊರ್ಮೆ ತೊಟ್ಟನಂ
ದಿರ್ಬಗಿಯಾಗೆ ತನ್ಮನಮನಂಗಧನುರ್ಧರನಾ ಕ್ಷಣಾರ್ಧದೊಳ್ ೬೭

ಕಂ॥ ಗಡಿಗೆಟ್ಟುದು ಕಣ್ಬೇಟಂ
ನಡೆಗೆಟ್ಟುದು ಚಿತ್ತವೃತ್ತಿ ಧೃತಿವಲ್ಲಿ ವಲಂ
ಕುಡಿಗೆಟ್ಟುದು ನವವಿರಹಂ
ತಡೆಗೆಟ್ಟುದು ತನ್ನೃಪಾತ್ಮಜಂಗಾಕ್ಷಣದೊಳ್ ೬೮

ಅರಸನ ಹೃದಯಪಟಾಭ್ಯಂ
ತರದೊಳ್ನವರಾಗರಸದಿನಾ ಕನ್ನೆಯ ನು
ಣ್ಪರಿಜಂ ಬರೆದಂಗಜನೇಂ
ಪರಿಕಿಸೆ ಮುಂ ಚಿತ್ರಿಕರ್ಕಳೊಡನಾಡಿದನೋ ೬೯

ಆ ನೋಟ ಅಧಿಕವಾಗಿ ಶೋಭಿಸುತ್ತಿತ್ತು. ವ|| ಅಂಥ ಆ ಸನ್ನಿವೇಶವನ್ನು ಹೊಂದಿ ಸಂಭ್ರಮಗೊಂಡು ನಿಂತುಕೊಂಡು ೬೭. ಮನ್ಮಥನೆಂಬ ಬಲಶಾಲಿಯಾದ ಧನುರ್ಧಾರಿಯು ತನ್ನ ಕಬ್ಬಿನ ಬಿಲ್ಲಿಗೆ ದುಂಬಿಗಳೆಂಬ ಹೆದೆಯನ್ನು ಕಟ್ಟಿ, ಪೌರುಷದ ಸಂಭ್ರಮದಿಂದ ಉಬ್ಬಿ, ಕಮಲದ ಮೊಗ್ಗಿನ ತೀಕ್ಷ್ಣ ಬಾಣವನ್ನು ತೊಟ್ಟು ಗುರಿಯಿಟ್ಟು ನೋಡಿ, ಕಿವಿಯವರೆಗೆ ಹೆದೆಯನ್ನು ಜಗ್ಗಿ, ಅವರಿಬ್ಬರ ಮೇಲೆ ಏಕಕಾಲದಲ್ಲಿ ಪ್ರಯೋಗಿಸಲು, ತಟ್ಟನೆ ಅವರಿಬ್ಬರ ಮನಸ್ಸು ಎರಡು ಭಾಗವಾಗಿ ಹೋಯಿತು. ೬೮. ಆ ರಾಜಕುಮಾರನಾದ ರಾಜಶೇಖರನ ಕಣ್ಣೊಲುಮೆಯು ಎಲ್ಲೆಮೀರಿತು; ಮನಸ್ಸಿನ ರೀತಿ ಶಕ್ತಿಗುಂದಿತು (ದಾರಿತಪ್ಪಿತು); ಧೈರ್ಯವೆಂಬ ಬಳ್ಳಿಯು ಕುಡಿಮುರುಟಿದಂತಾಯಿತು; ನೂತನವಾದ ವಿರಹವು ಆ ಕ್ಷಣದಲ್ಲಿಯೇ ತಡೆಯಿಲ್ಲದೆ ವ್ಯಾಪಿಸಿತು ೬೯. ಅರಸನ ಹೃದಯವೆಂಬ ಪಟಲದಮೇಲೆ ನೂತನವಾದ ಅನುರಾಗವೆಂಬ ರಸದಿಂದ ಮನೋಹರವಾದ ಚಿತ್ರವನ್ನು ಬರೆದಂಥ ಮನ್ಮಥನು ವಿಚಾರಿಸಿ ನೋಡಿದರೆ ಈ ಪೂರ್ವದಲ್ಲಿ ಚಿತ್ರಗಾರರೊಡನಾಡಿಯಾಗಿದ್ದನೋ ಏನೋ !

ವ|| ಆಗಳರಸಂ ತನ್ನೊಳಿಂತೆಂದಂ

ಮ|| ಬಗೆಯಂ ಬಲ್ಸೆಱೆಗೆಯ್ದುದೀಗಳಿವಳೀ ಮಾಧುರ್ಯಮೀ ಮೆಯ್ಯ ನು
ಣ್ಪೊಗರೀ ಕಣ್ಗಳ ಕಾಂತಿಯಾ ಮುಖಶಶಿಪ್ರದ್ಯೋತಮಾ ಕಂಜದೊ
ಳ್ಮುಗುಳಂ ಪೋಲ್ವ ಕುಚಂಗಳೀ ಪೃಥುಳವೃತ್ತಶ್ರೋಣಿಯಾ ಬೇಟದು
ಜ್ಜುಗಮೀ ವಿಭ್ರಮಮೀ ವಿನೋದದೊದವೀ ಸೌಂದರ್ಯಮಾ ಸದ್ಗುಣಂ ೭೦

ಕಂ|| ಈ ಲಲನೆಯ ಸೌಂದರ್ಯಂ
ಸೋಲಿಸಿದುದು ಗಡ ಮದೀಯ ಮನವನದಾರ್ಗಂ
ಸೋಲದುದಂ ಶಿವಶಿವ ಶಶಿ
ಮೌಳಿಯ ಮಾಯೆಯುನದಾರೊ ಮಿಾಱಲ್ಬಲ್ಲರ್ ೭೧

ವ|| ಎಂದು ವಿಸ್ಮಯಂಬಡೆದು ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂತೈಸಿಕೊಂಡು ಧೀರೋದಾತ್ತ ಸಾರ್ವಭೌಮಂ ಮುಂದಣ್ಗೆ ನಡೆತರುತ್ತಂ ನಿಜನಯನಪಥಮಂ ಮಿಾಱಲೊಡನೆ

ಚಂ|| ಪಡಿದೆಱೆದಂತೆ ಪಾರಿತೆರ್ದೆ ಜುಮ್ಮನೆ ಮೈನವಿರುರ್ವಿ ಮೂಡಿದ
ತ್ತಿಡಿಕಿಱಿದಿರ್ದ ಬಲ್ಮೊಲೆಗಳಿಟ್ಟೆಡೆಯೊಳ್ ಬೆವರುಣ್ಮಿದತ್ತು ಮೇ
ಣ್ಡಡದಡಿಸಿತ್ತು ನುಣ್ದೊಡೆ ರದಚ್ಛದಮಿರ್ಪೃಡುಗಿತ್ತು ಸುಯ್ಗೆ ಕಾ
ಯ್ಪುಡರ್ದುದೊಡಲ್ಗೆ ಮೆಲ್ಲನಡಿಯಿಟ್ಟುದು ಮೂರ್ಛೆ ಮೃಗಾಯತಾಕ್ಷಿಯಾ ೭೨

ವ|| ಆಗ ಆ ಅರಸನು ಹೀಗೆ ಹೇಳಿಕೊಂಡನು : ೭೦. 'ಕನ್ಯೆಯ ಈ ಮಧುರತೆ, ದೇಹದ ಈ ನುಣುಪಾದ ಕಾಂತಿ, ಈ ನೇತ್ರಗಳ ಹೊಳಪು, ಈ ಮುಖಚಂದ್ರನ ಪ್ರಭೆ, ಕಮಲದ ಶ್ರೇಷ್ಠ ಮೊಗ್ಗನ್ನು ಹೋಲುವ ಈ ಮೊಲೆಗಳು, ದಪ್ಪನೆಯ ಗುಂಡು ಪೊರ ವಾರಗಳು, ಈ ಬೆಡಗಿನ ನೋಟವೇ ಮೊದಲಾದ ಕಾರ್ಯಗಳು, ಈ ಹಾವ ಭಾವಗಳು, ಈ ವಿನೋದ, ಈ ಸೌಂದರ್ಯ, ಈ ಸದ್ಗುಣಗಳು (ನನ್ನ) ಮನಸ್ಸನ್ನು ಹಿಡಿದು ಹಾಕಿದುವು. ೭೧. ಈ ಲಲನೆಯ ಸೌಂದರ್ಯವು ಯಾರಿಗೂ ಸೋಲದ ನನ್ನ ಮನಸ್ಸನ್ನು ಸೋಲಿಸಿ ಬಿಟ್ಟಿತೇ ! ಶಿವಶಿವ ! ಪರಮೇಶ್ವರನ ಮಾಯೆಯನ್ನು ಯಾರು ತಾನೇ ಮೀರಲು ಸಮರ್ಥರು !' ವ|| ಹೀಗೆಂದುಕೊಂಡು ಆಶ್ಚರ್ಯಹೊಂದಿ ಚದುರಿಹೋದ ಕಣ್ಣುಗಳೇ ಮೊದಲಾದ ಇಂದ್ರಿಯಗಳನ್ನು ನಿದಾನವಾಗಿ ಸಮಾಧಾನಗೊಳಿಸಿಕೊಂಡು, ಧೀರೋದಾತ್ತ ಸಾರ್ವಭೌಮನಾದ ರಾಜಶೇಖರನು ಮುಂದಕ್ಕೆ ನಡೆದು ಬರುತ್ತ ತನ್ನ ಕಣ್ಣೋಟದ ಮಾರ್ಗವನ್ನು ಅತಿಕ್ರಮಿಸಿದ ಕೂಡಲೆ ೭೨. ಮೃಗಾಯತಾಕ್ಷಿಯಾದ ಸರ್ವಮಂಗಳೆಗೆ ಪಡಿದೆರೆದ[1] (?) ಹಾಗೆ ಎದೆಯು ಹಾರಿತು ; ಜುಮ್ಮೆಂದು ಮೈನವಿರೆದ್ದು ಮೂಡಿದವು ; ಒತ್ತೊತ್ತಾಗಿದ್ದ ದೊಡ್ಡ ಮೊಲೆಗಳ ಸಂದಿನಲ್ಲಿ ಬೆವರು ಹೊರಹೊಮ್ಮಿತು ; ನುಣ್ದೊಡೆ ಗಳು ದಡಗುಟ್ಟಿ ನಡುಗಿದವು ; ದಂತಕಾಂತಿಯು ಹಸಿಯಾರಿಹೋಯಿತು; ಉಸಿರು

1. ಕದವನ್ನು ತೆರೆದ ಹಾಗೆ ? (ರಂ)

ವ॥ ಅಂದವಳಂದವಳಿದಂದವಂ ಕಂಡು ಕಳಾರವೆ ಮೊದಲಾದ ಕೆಳದಿಯರ್ ವಿಸ್ಮಯಂ ಬಟ್ಟು ವಿರಹತಾಪಮಂ ತವಿಪ ಬಗೆಯಂ ಬಗೆದಲ್ಲಿಂ ಮೆಲ್ಲನೆ ಕೆಂದಳಿರಾಂದೋಳನದೊಳಿರಿಸಿ ಕೇಳೀವನಕ್ಕೆ ಕೊಂಡು ಪೋಗಲೊಡನೆ

ಚಂ॥ ಇನಿಯನಗಲ್ಕೆಗಿರ್ಚು ಸುಡೆ ಸೈರಿಸಲಾಱದೆ ಮುಗ್ಧೆ ಬಂದು ನಂ
ದನದೆಡೆ ನಿಂದು ಬೆಚ್ಚನುಸುರೊತ್ತಿದೊಡಾಗಳೆ ಕಂದಿಸಿತ್ತು ಮೇ
ಳ್ಮನುಗುವ ತುಂಬಿಯಂ ಬಳಸಿ ಬಗ್ಗಿಪ ಕೋಗಿಲೆಯಂ ಮೃಗಾಂಕನಂ
ಮನಸಿಜಮಾರುತರ್ತನುವನಾಂತೊಡೆ ಕುಂದಿಸದೇನದಿರ್ಕುಮೇ ೭೩

ವ॥ ಆ ನಂದನವನದೊಳಾಳೀಜನಮವಳಂ ಶಿಶಿರೋಪಚಾರಂಗೆಯ್ಯಲೆಂದು ಪೊಸ ಕುಸುಮಮಂಟಪಕ್ಕೆ ತಂದು

ಚಂ॥ ಸರಸ ರಸಾಲ ಸಲ್ಲಲಿತ ಪಲ್ಲವತಲ್ಪದೊಳಿಟ್ಟು ಪಚ್ಚೆಗ
ರ್ಪುರವನಮರ್ಚುತೆಚ್ಚಿ ನಿಡುಗಣ್ಗೆ ಸರೋಜದಳಂಗಳಂ ಪಯೋ
ಧರದೆಡೆಯಲ್ಲಿ ತಂದಿಳಿಪಿ ಸೂಸಿ ಹಿಮಾಂಬುವನೆಯ್ದೆ ಪುಷ್ಪಚಾ
ಮರಮನೆ ಬೀಸಿ ಚಂದನಮನಂಗದೆ ಪೂಸಿ ವಿಳಾಸಿನೀಜನಂ ೭೪

ಬಿಸಿಗೊಂಡಿತು. (ದೇಹದಲ್ಲಿ ಮೂರ್ಛೆಯು ಮೆಲ್ಲನೆ ಅಡಿಯಿಟ್ಟಿತು). ವ|| ಆಗಿನ ಅವಳ ಸೌಂದರ್ಯವು ಅಳಿದುಹೋದ ರೀತಿಯನ್ನು ಕಂಡು ಕಳಾರವೆಯೇ ಮೊದಲಾದ ಗೆಳತಿಯರು ಸೋಜಿಗಗೊಂಡು ಅವಳ ವಿರಹತಾಪವನ್ನು ನಿವಾರಿಸುವ ರೀತಿಯನ್ನು ಯೋಚಿಸಿ, ಅಲ್ಲಿಂದ ಮೆಲ್ಲನೆ ತಳಿರು (ಚಿಗುರು) ಹಾಸಿದ ಮೇನೆ (ಪಲ್ಲಕ್ಕಿ)ಯಲ್ಲಿರಿಸಿ ಕೊಂಡು ಕೇಳೀವನಕ್ಕೆ ತೆಗೆದುಕೊಂಡು ಹೋಗಲಾಗಿ ೭೩. ಇನಿಯನಾದ ರಾಜ ಶೇಖರನ ಅಗಲಿಕೆಯ ಕಿಚ್ಚು ಸುಡತೊಡಗಲು ಸೈರಿಸಲು ಅಸಮರ್ಥಳಾಗಿ, ಆ ಸುಂದರಿ ಕ್ರೀಡಾವನದೆಡೆಯಲ್ಲಿ ನಿಂತು, ಒಳಗಿನಿಂದ ಬಿಸಿಯಾದ ಶ್ವಾಸವಾಯುವು ಒತ್ತಿ ಬರಲಾಗಿ, ಮಿನುಗುವ ತುಂಬಿಯನ್ನು (ತುಂಬಿಗೆ–ಸಮಾನವಾದ ಮುಂಗುರುಳನ್ನು) ಸುತ್ತುವರಿದು ಧ್ವನಿ ಮಾಡುವ ಕೋಗಿಲೆಯನ್ನು, (ಕೋಗಿಲೆಯ ಕಂಠಕ್ಕೆ ಸಮಾನವಾದ ಧ್ವನಿಯನ್ನು), ಚಂದ್ರನನ್ನು (ಚಂದ್ರನಿಗೆ ಸಮಾನವಾದ ಮುಖವನ್ನು) ಬಾಡುವಂತೆ ಮಾಡಿತು. ಮನ್ಮಥ ಮತ್ತು ಅವನ ಸಂಬಂಧವಾದ ವಾಯುಗಳು ದೇಹವನ್ನು ಪ್ರವೇಶಿಸಿದರೆ ಕಂದಿಸ ದೇನು ಸುಮ್ಮನೆ ಬಿಡುವರೇ ? ವ|| ಆ ನಂದನವನದಲ್ಲಿ ಪರಿಚಾರಿಕೆಯರು ಅವಳನ್ನು ಶೈತ್ಯೋಪಚಾರಮಾಡಲೆಂದು ಹೊಸ ಹೂವಿನ ಮಂಟಪಕ್ಕೆ ತಂದು, ೭೪. ರಸಭರಿತ ವಾದ (ಹಸಿಯ) ಮಾವಿನ ಮೃದುವಾದ ಚಿಗುರಿನ ಹಾಸಿಗೆಯ ಮೇಲೆ ಮಲಗಿಸಿ, ಪಚ್ಚ ಗರ್ಪೂರವನ್ನು ಉಜ್ಜುತ್ತ, ಅಗಲವಾದ ಕಣ್ಣುಗಳಿಗೆ ಹಚ್ಚುತ್ತ, ಕಮಲದ ದಳಗಳನ್ನು ಸ್ತನಗಳ ಮೇಲೆ ತಂದು ಹರಡಿ, ತಣ್ಣೀರನ್ನು ಮೈಮೇಲೆ ಚಿಮುಕಿಸುತ್ತ, ಹೂವಿನ (ತೊಂಗಲಿನಿಂದ ಮಾಡಿದ) ಚಾಮರವನ್ನು ಬೀಸಿ, ಶ್ರೀಗಂಧವನ್ನು ದೇಹಕ್ಕೆಲ್ಲ ತೊಡೆದು

ಕಂ॥ ಪರಿಹರಿಸಲೆಂದು ವಿರಹ
ಜ್ವರಮಂ ಶಿಶಿರೋಪಚಾರಮೆಸಗಿದೊಡದು ತಾಂ
ಪಿರಿದಾದುದಕಟ ಮಧುರಾ
ಧರೆಗದನಂತಿಂತುಟೆಂದು ಬಣ್ಣಿಪರೊಳರೇ ೭೫

ಮ॥ಸ್ರ॥ ಬಿಸುಸುಯ್ಯಿಂದಿರ್ಪುಗುಂದಿರ್ದಧರಕಿಸಲಯಂ ರಕ್ತನೇತ್ರಾಂಚಲಭಾ
ಷ್ಪಸರಿದ್ವ್ಯಾಲಗ್ನಕೀರ್ಣಭ್ರುಮರಕಮಮೃತಾಪಾಂಡುಗಂಡಸ್ಥಲಂ ಶೂ
ನ್ಯಸಮಾಲೋಕಂ ತನುತ್ವಂಬಡೆದ ತನು ವೃಥಾನಲ್ಪಸಂಕಲ್ಪಚಿತ್ತಂ
ಮುಸುಕಿರ್ದಾಲಸ್ಯಭಾವಂ ನೆಗಳ್ದಿರೆ ವಿರಹಾಕ್ರಾಂತೆ ತತ್ಕಾಂತೆಯಿರ್ದಳ್ ೭೬

ಕಂ॥ ತೀವಿದ ತಾಪಕ್ಕಿಕ್ಕಿದ
ಭಾವನ್ನದ ಬಿಟ್ಟಬೊಟ್ಟು ವದನದ್ಯುತಿಯಂ
ತಾವರೆವಗೆಯುಂ ಕಳಲೆಂ
ದಾ ವೇಳೆಯುನಱಿದುಬಂದು ನಿಂದವೊಲೆಸೆಗುಂ ೭೭

ಅಸಿಯಳಸಿವೊಡಲೊಳೊರಸಿದ
ರಸವೊಸರ್ವ ಸುಚಂದನಂ ಕರಂ ಕಣ್ಗೆಸೆಗುಂ
ಕುಸುಮಾಸ್ತ್ರನ ಕುಸುಮಶರ
ಪ್ರಸರದ ಹತಿಗಳ್ಕಿ ಕವಚಮಂ ತಾಳಿದವೋಲ್ ೭೮

(ಶೈತ್ಯೋಪಚಾರ ಮಾಡುತ್ತಿದ್ದರು). ೭೫. ಮಧುರವಾದ ತುಟಿಗಳುಳ್ಳ ಆ ಸರ್ವ ಮಂಗಳೆಗೆ ವಿರಹತಾಪವನ್ನು ಪರಿಹಾರ ಮಾಡುವುದಕ್ಕೆಂದು ಶೈತ್ಯೋಪಚಾರವನ್ನು ಮಾಡಲಾಗಿ ಆ ವಿರಹತಾಪವು ಇನ್ನೂ ಅಧಿಕವಾಯಿತು ಆ ಸ್ಥಿತಿಯನ್ನು ಹಾಗೆ ಹೀಗೆ ಎಂದು ವರ್ಣಿಸುವವರು ಯಾರಾದರೂ ಉಂಟೆ ? ೭೬. ಬಿಸಿಯುಸಿರಿನಿಂದ ತುಟಿಗಳು ಬಸವಳಿದ ಚಿಗುರಿನಂತಿದ್ದವು. ಕೆಂಪಾಗಿದ್ದ ಕಡೆಗಣ್ಣಿನ ಭಾಗವು ಕಣ್ಣೀರಿನ ಪ್ರವಾಹದಿಂದ ಕೂಡಿದ್ದವು. ಮುಂಗುರುಳು ಚಲ್ಲಾಪಿಲ್ಲಿಗೊಂಡಿದ್ದವು. ಕೆನ್ನೆಗಳು ಅಮೃತಕ್ಕೆ ಸಮಾನವಾದ ಬಿಳಿಯ ಬಣ್ಣ ಹೊಂದಿದ್ದವು. ನೋಟವು ಶೂನ್ಯವಾಗಿತ್ತು. ದೇಹವು ಕೃಶಗೊಂಡಿತ್ತು. ವ್ಯರ್ಥವಾದ ಅಧಿಕ ಸಂಕಲ್ಪವುಳ್ಳ ಚಿತ್ತವಾಗಿತ್ತು. ಆಲಸ್ಯ ಭಾವವು ಮುಸುಕಿ ವಿರಹದಿಂದ ಆವರಿಸಲ್ಪಟ್ಟವಳಾಗಿ ಆ ಸರ್ವಮಂಗಳೆಯು ಇದ್ದಳು. ೭೭. ತುಂಬಿದ ವಿರಹತಾಪಕ್ಕಾಗಿ ಹಚ್ಚಿದ ಶ್ರೀಗಂಧದ ಬೊಟ್ಟು, ಅವಳ ಮುಖದ ಕಾಂತಿಯನ್ನು ಕದಿಯಲು ಸಮಯವರಿತು ಬಂದಿರುವ ತಾವರೆ ಹಗೆಯಾದ ಚಂದ್ರನಂತಿತ್ತು. ೭೮. ಕೃಶಾಂಗಿಯಾದ ಅವಳ ತೆಳ್ಳನೆಯ ದೇಹದಲ್ಲಿ ಲೇಪಿಸಿದ ರಸವನ್ನು ಒಸರಿಸುವ ಶ್ರೀಚಂದನವು ಮನ್ಮಥನ ಪುಷ್ಪಬಾಣಗಳ ಹೊಡೆತಕ್ಕೆ ಹೆದರಿ ಧರಿಸಿದ ಕವಚವೋ

ಮಾನಿನಿಯ ಪೀನತತ ಕುಚ
ಮಿಾನಧ್ವಜಕುಂಭಿಕುಂಭಮದು ವಿರಹಗ್ರೀ
ಷ್ಮಾನಲನಿಂ ಬಿಱಿದಂತೆವೊ
ಲೇನೊಪ್ಪಿತೊ ಬಿಱಿಯೆ ತಾಳ್ದ ಕುಂಕುಮಪಂಕಂ ೭೯

ಅರೆವಿರಿದ ಸಂಪಗೆಯ ಸುರು
ಚಿರ ಮುಕುಲಂಬೊಕ್ಕು ಬಿಸುಪನಾಂತಿಳಿವೆಲರಂ
ತಿರೆ ಬಿಸುಸುಯ್ಯುಸದತಿಯ ಭಾ
ಸುರನಾಸಿಕೆಯಿಂದೆ ಸೂಸುತಂ ಸೊಗಯಿಸುಗುಂ ೮೦

ವಿರಹಶಿಖಿ ಸುಟ್ಟೊಡಗಿದೊಳ
ಗಿರಲಾಱದೆ ಕಂದಿ ಕುಂದಿ ನೆಗೆದುದು ಬಗೆಯಿಂ
ಬರ ಬಗೆೞಂ ಬಂದುದೊ ಮಧು
ಕರನವಳುರದಲ್ಲಿ ಚಂದನಸ್ಥಿತಪಕ್ಷಂ ೮೧

ಅಂದರವಿಂದಸಖಂ ಕಾ
ಳಿಂದಿಯ ನೆಲೆ ಪಡೆದನೆಂದು ಪುರುಡಿಂ ಪಡೆದಂ
ಮಂದಾಕಿನಿಯಂ ಬಿದುವೆಂ
ಬಂದದಿನವಳಾಸ್ಯಬಾಷ್ಪನದಿ ಕಳೆದಿಳಿಗುಂ ೮೨

ಎಂಬ ಹಾಗೆ ಶೋಭಿಸಿತು. ೭೯. ಮನ್ಮಥನ ಆನೆಯ ಗಂಡಸ್ಥಲದಂತಿರುವ ಆ ಸರ್ವ ಮಂಗಳೆಯ ದಪ್ಪನೆಯ ಮೊಲೆಗಳು ವಿರಹವೆಂಬ ಗ್ರೀಷ್ಮಕಾಲದ ಬಿಸಿಯಿಂದ ಬಿರಿತಿರುವುವೋ ಎನ್ನುವ ಹಾಗೆ, ಅವುಗಳ ಮೇಲೆ ಹಚ್ಚಿದ್ದ ಕುಂಕುಮಕೇಸರಿಯ ಗಂಧವು ಬಿರಿತಿತ್ತು. ೮೦. ಅರ್ಧ ಅರಳಿದ ಮನೋಹರವಾದ ಸಂಪಗೆಯ ಹೂವಿನ ಮೊಗ್ಗನ್ನು ಹೊಕ್ಕು ಬಿಸಿ ಹೊಂದಿ ಹಿಂದಕ್ಕೆ ಬಂದ ಗಾಳಿಯ ಹಾಗೆ ಬಿಸಿಯಾದ ಉಸಿರು ಆ ಸುದತಿಯಾದ ಸರ್ವಮಂಗಳೆಯ ಮೂಗಿನಿಂದ ಹೊರಸೂಸುತ್ತ ಸೊಗಸನ್ನುಂಟುಮಾಡುತ್ತಿತ್ತು. ೮೧. ಅವಳ ಎದೆಗೆ ಹಚ್ಚಿದ ಗಂಧದಲ್ಲಿ ರೆಕ್ಕೆಯನ್ನು ಸಿಕ್ಕಿಸಿಕೊಂಡಿದ್ದ ದುಂಬಿಯು, ವಿರಹಾಗ್ನಿಯು ಸುಡುತ್ತಿರಲಾಗಿ ಒಳಗಿರಲಾರದೆ ಹೊರಗೆ ಬಂದ ಅವಳ ಮನಸ್ಸೋ ಎಂಬಂತೆ ಅದನ್ನು ನೋಡಿದವರ ಮನಸ್ಸಿಗೆ ಗೋಚರಿಸಿತು. ೮೨. ಹಿಂದೆ ಕಮಲಮಿತ್ರನಾದ ಸೂರ್ಯನು ಕಾಳೀಂದಿನದಿಯನ್ನು ಪಡೆದನು, ಎಂದು ಸ್ಪರ್ಧೆಯಿಂದ ಈಗ ಗಂಗಾನದಿಯನ್ನು ಚಂದ್ರನು ಪಡೆದನೋ ಎನ್ನುವಂತೆ ಅವಳ ಮುಖದಿಂದ ಕಣ್ಣೀರಿನ

ವ|| ಮತ್ತಂ

ಕಂ|| ಬಗೆವನೆಯೊಳಿರ್ಪ ರತಿಪನ
ನೊಗೆದುತ್ಕುಚಗಿರಿಯ ವಿರಹಶಿಖಿಧವಶಿಖಿ ಚು
ರ್ಚುಗುಮೆಂದು ಮುಖಮೃಗಾಂಕಂ
ಮಿಗೆ ಸುಧೆಗಱೆವಂತೆ ಕಱೆದುದವಳಶ್ರುಜಲಂ ೮೩

ಶಾ|| ನಾರೀಚಾರುಕುಚಂಗಳಂ ಮಿಗೆ ಮುಸುಂಕಿಟ್ಟಬ್ಜಪತ್ರಂಗಳೊ
ಳ್ನೀರಂ ಸಿಂಪಿಸೆ ನೀಱೆಯರ್ಕಣಗಣಂ ಚಾಂಚಲ್ಯಮಂ ಪೊತ್ತು ತ
ಳ್ತೋರಂತಲ್ಲಿ ವಿರಾಜಿಸಿತ್ತು ಸುಡುಗುಂ ಕಾಮಾಗ್ನಿ ತಾನೆಂದು ತ
ನ್ನೀರೇಜಚ್ಛದಜೀವನಂ ಭಯದಿನಾಗಳ್ಕಂಪನಂಬೆತ್ತವೊಲ್ ೮೪

ಉ|| ಅಂಗನೆಯಂಗದಂಗಜಮಹಾಶಿಖಿಗಾಜ್ಯಮದಾದುದಾಲಿನೀ
ರ್ತುಂಗಕುಚಾರ್ದ್ರಚಂದನರಸಂ ಘಟಪಾಕವಿಲೇಪನಂಬೊಲಾ
ಯ್ತಿಂಗಳವಾಯ್ತು ಚಂದಳಿರೆಲರ್ತಿದಿಯೊಂದೆಲರಂದಮಾಯ್ತು ಬೆ
ಳ್ದಿಂಗಳೆ ತಳ್ತ ದಳ್ಳುರಿಯದಾಯ್ತೆನೆ ತಾಪಮದೇನಳುಂಬವೋ ೮೫

ಚಂ|| ಅಸಿಯಳ ಸೋಷ್ಣನಿಶ್ವಸಿತ ಸೌರಭಲೋಭದೆ ನಾಸಿಕಾಗ್ರದೊ
ಳ್ಪಸಿದ ಮದಾಳಿ ಬಂದೆಱಗೆ ತಾಂ ಸುಡೆ ಕರ್ಬಿನೆ ಕಂದಿ ಕುಂದಿ ಸಾ
ದರ್ಸವಶದಿಂದೆ ಸಂದೆಱಗಲಣ್ಮದೆ ತತ್ಸಮಚಾರುಚಂಪಕ
ಪ್ರಸವದೊಳಿನ್ನುಮಿಲ್ಲಿಯರವಿಂದ ಮರಂದದೊಳಳ್ದು ಜೀವಿಕುಂ ೮೬

ಹೊಳೆ ಹೊರಹೊರಟು ಇಳಿಯುತ್ತಿತ್ತು. ವ|| ಮತ್ತು ೮೩. ಮನೋಮಂದಿರದಲ್ಲಿರುವ ಮನ್ಮಥನನ್ನು ತಿರಸ್ಕರಿಸಿ, ಎತ್ತರವಾದ ಮೊಲೆಗಳೆಂಬ ಪರ್ವತದಲ್ಲಿನ ವಿರಹದ ಕಿಚ್ಚೆಂಬ ದಾವಾಗ್ನಿಯು ತಗುಲುವುದೆಂದು ಮುಖವೆಂಬ ಚಂದ್ರನು ವಿಶೇಷವಾಗಿ ಅಮೃತವರ್ಷವನ್ನು ಸುರಿಸುವಂತೆ ಅವಳ ಕಣ್ಣೀರು ಕರೆದುವು. ೮೪. ಆ ಸರ್ವಮಂಗಳೆಯ ಮನೋಹರವಾದ ಕುಚಗಳನ್ನು ಮುಚ್ಚಿ ಇಟ್ಟ ಕಮಲಪತ್ರಗಳ ಮೇಲೆ ಸಖೀಜನರು ನೀರನ್ನು ಸಿಂಪಡಿಸುತ್ತಿರಲು, ಆ ನೀರಿನ ಕಣಗಳ ಸಮೂಹವು ಕಂಪನಗೊಂಡು ಮನ್ಮಥಾಗ್ನಿಯು ಸುಟ್ಟುಹಾಕುವುದು ಎಂದು ಭಯದಿಂದ ಕಮಲದಳದ ಜೀವನವು (ನೀರು–ಜೀವ) ನಡುಕವನ್ನು ಹೊಂದಿದ ಹಾಗೆ ಶೋಭೆಗೊಂಡಿತ್ತು. ೮೫. ಆ ಸರ್ವಮಂಗಳೆಯ ಕಣ್ಣೀರು ಅಂಗದಲ್ಲಿರುವ ಮನ್ಮಥಸಂಬಂಧವಾದ ವಿರಹಾಗ್ನಿಗೆ ತುಪ್ಪದಂತಾಯಿತು ; ಎತ್ತರವಾದ ಮೊಲೆಗಳ ಮೇಲೆ ಬಳಿಯಲ್ಪಟ್ಟ ಶೀತವಾದ ಚಂದನದ ರಸವು ಗಡಿಗೆಯಲ್ಲಿ ಬೇಯಿಸಿ ತೊಡೆದ ಬಿಸಿರಸದ ಹಾಗಾಯಿತು ; ಕೆಂಪಾದ ತಳಿರು ಬೆಂಕಿಯ ಕೆಂಡವಾಯಿತು ; ಶ್ವಾಸವಾಯುವು (ಕಮ್ಮಾರ ಶಾಲೆಯ) ತಿದಿಯ ಒಂದು ರೀತಿಯಾಗಿತ್ತು ; ಬೆಳದಿಂಗಳೇ ಬೆಂಕಿಯ ದೊಡ್ಡ ಉರಿಯು ಹತ್ತಿದ ಹಾಗೆ ಆಯಿತು. ಆ ವಿರಹತಾಪವು ಅದೇನು ಅಧಿಕವಾದುದೋ ! ೮೬. ಹಸಿದು ಹೋದ ಮದಸಿದ ದುಂಬಿಗಳು ಕೃಶಾಂಗಿಯಾದ ಆ ಸರ್ವಮಂಗಳೆಯ ಬಿಸಿಯಾದ ಶ್ವಾಸವಾಯುವಿನಲ್ಲಿ ಸುಗಂಧದ ಲೋಭದಿಂದ

ಕರಿಮುರಿವೋದವಾರ್ದಣಿಗುವಾಣಿಡಿಗಳ್ತಳಿವಾಲಿ ನೀರ್ಪಯೋ
ಧರದೆಡೆಕಾಯ್ದ ಘಟ್ಟಗೆಱೆದಂತಿರೆ ಚುಯ್ಯನೆ ಬತ್ತಿದತ್ತು ಮೇ
ಲಿರಿಸಿದ ಪಲ್ಲವಂ ಮೃದುಮೃಣಾಳಕುಳಂ ಸಿರಿಗಂಪು ಪುಷ್ಪಮಂ
ಜರಿವುರಿ ಪತ್ತಿ ಪೊತ್ತಿ ಪೊಗೆದತ್ತು ತಲೋದರಿಯಂಗತಾಪದಿಂ ೮೭

ವ॥ ಆಗಳವಳ್ಗೆ ಶಿಶಿರೋಪಚಾರಮಂ ಮಾಳ್ಪ ಮುಗ್ಧೆಯರ್ಗೆ ವಿಧಗ್ದೆಯರ್ ಸಂಜ್ಞೆಗೆಯ್ದು

ಚಂ॥ ಘನಕಚೆಯಂಚೆಯಂ ತೊಲಗಿಸೀಯಲರಂ ಫಣಿವೇಣಿ ಪಾಱಿಸೀ
ಜಿನುಗುವ ತುಂಬಿವಿಂಡನೆಲೆ ಚಂಪಕನಾಸಿಕೆ ನೂಂಕು ಮತ್ತಕೀ
ರನನಿರದಟ್ಟು ಮಂಜುಳವಿಡೂರಜಭೂಷಣೆ ಚಂದ್ರಕಾಂತಿಯಂ
ಕನಕಪರಿಷ್ಕೃತಿದ್ಯುತಿಕೃತಾತಪೆ ನೀಂ ತಡೆಯೆಂದರಾಳಿಯರ್ ೮೮

ಮೂಗಿನ ತುದಿಯಲ್ಲಿ ಬಂದು ಎರಗಲು, (ಶ್ವಾಸವಾಯುವಿನ ಬಿಸಿಯಿಂದ) ಅವು ಸುಟ್ಟು ಹೋಗಲು ಕರ್ರಗಾಗಿ ಕಂದಿ ಕುಂದಿ, ಅಲ್ಲಿಂದ ಹೊರಟು ಅವಸರದಿಂದ ಅವಳ ಮೂಗಿಗೆ ಸಮಾನವಾದ ಸಂಪಿಗೆಹೂವಿನಲ್ಲಿಗೆ ಬಂದು, ಅವುಗಳ ಮೇಲೆ ಎರಗಲು ಸಾಧ್ಯವಾಗದೆ, ಕಮಲಪುಷ್ಪದ ಮಕರಂದದಲ್ಲಿ ತಮ್ಮ ಶರೀರವನ್ನು ಮುಳುಗಿಸಿ (ಇನ್ನೂ) ಜೀವಂತವಾಗಿ ರುವುವು! ೮೭. ಕೃಶಾಂಗಿಯಾದ ಸರ್ವಮಂಗಳೆಯ ಶರೀರದಲ್ಲುಂಟಾದ ವಿರಹವೆಂಬ ಬೆಂಕಿ ಯಿಂದ ಝೇಂಕರಿಸಿ ಮುತ್ತುವ ದುಂಬಿಗಳು ಕರಿಕುಗೊಂಡವು. ಕುಚಪ್ರದೇಶದ ಮೇಲೆ ಹರಿದುಬರುತ್ತಿದ್ದ ಕಣ್ಣೀರು ಕಾಯ್ದ ಕಬ್ಬಿಣದ ಘಟ್ಟಿಯ ಮೇಲೆ ಬಿದ್ದ ಹಾಗೆ ಚುಯ್ ಎನ್ನುತ್ತ ಬತ್ತುತ್ತಿತ್ತು ; ಕುಚಪ್ರದೇಶದ ಮೇಲೆ ಹಾಕಿದ ಚಿಗುರು, ಕೋಮಲವಾದ ತಾವರೆಯ ದಂಟಿನ ಸಮೂಹ, ಶ್ರೀಗಂಧ, ಹೂಗೊಂಚಲು–ಮೊದಲಾದುವುಗಳಲ್ಲಿ ಬೆಂಕಿ ಹತ್ತಿ ಹೊಗೆದೋರುತ್ತಿತ್ತು. ವ॥ ಆಗ ಅವಳಿಗೆ ಶೈತ್ಯೋಪಚಾರವನ್ನು ಮಾಡುವ ಮುಗ್ಧೆಯರಾದ ಸೇವಕಿಯರಿಗೆ ಜಾಣೆಯರು ಸಂಜ್ಞೆಮಾಡುತ್ತ ೮೮. ಹೀಗೆಂದರು : ಮೇಘದಂತೆ ಕಪ್ಪಾದ ಮತ್ತು ದಟ್ಟವಾದ ಕೂದಲುಳ್ಳವಳೇ, ಹಂಸವನ್ನು ಇಲ್ಲಿಂದ ಹೊರಡಿಸು. (ಏಕೆಂದರೆ–ಮೇಘೋದಯವಾದರೆ ಹಂಸಗಳು ಇರುವುದಿಲ್ಲ ; ನೀನು ಮೇಘದಂತೆ ಕಪ್ಪಾದ ಕೂದಲುಳ್ಳವಳಾದ್ದರಿಂದ ವಿರಹತಾಪಕ್ಕೆ ಉತ್ತೇಜಕಳಾದ ಹಂಸ ಪಕ್ಷಿಯು ಸರ್ವಮಂಗಳೆಯ ಬಳಿಯಲ್ಲಿ ಇರಕೂಡದು ; ಇದ್ದರೆ ಅಧಿಕತಾಪವಾಗುವುದೆಂಬ ಭಾವ.) ಎಲೈ, ಸರ್ಪದಂತೆ ಹೆರಳುಳ್ಳವಳೇ, ಈ ಮಂದಮಾರುತವನ್ನು ಇಲ್ಲಿಂದ ಹಾರಿಸು. (ಏಕೆಂದರೆ–ಎಲರನ್ನು ಆಹಾರವನ್ನಾಗಿ ಮಾಡಿ ತಿನ್ನುವ ಸರ್ಪವು ಇರುವಾಗ ಮಂದಮಾರುತನು ಇರಲಾರನು ; ವಿರಹತಾಪಪೀಡಿತಳಾದ ಈ ಸರ್ವಮಂಗಳೆಯ ಬಳಿಯಲ್ಲಿ ವಿರಹತಾಪಕ್ಕೆ ಉತ್ತೇಜಕವಾದ ಮಂದಮಾರುತನು ಇರಕೂಡದು ; ಇದ್ದರೆ ತಾಪವು ಅಧಿಕವಾಗುವುದೆಂಬ ಭಾವ) ಎಲೈ ಸಂಪಿಗೆ ಹೂವಿನಂತಹ ನಾಸಿಕೆಯುಳ್ಳ ವಳೇ, ಝೇಂಕಾರ ಮಾಡುತ್ತಿರುವ ದುಂಬಿಗಳ ಸಮೂಹವನ್ನು ಆಚೆಗೆ ತಳ್ಳು ;

ವ॥ ಮತ್ತಂ

ಚಂ॥ ಅಲರ್ಗಳ ಜೊಂಪಮಂ ಪಿಡಿದು ಬೀಸದಿರಿಂದುನಿಭಾಸ್ಯೆ ಜೊನ್ನಮಂ
ದಲಸುವಳಂಗಜಾತಶರಲೋಚನೆ ಪೂಗಳನಿಕ್ಕದಿರ್ಮಾರೋ
ಜ್ವಲಶರಮೆಂದು ಕಂದುವಳುದಂಚಿತಪಲ್ಲವಪಾಣಿಪಲ್ಲವಾ
ವಲಿಯನೆ ಪಾಸದಿರ್ಮದನವಹ್ನಿಶಿಖಾತತಿಯೆಂದು ಬೆರ್ಚುವಳ್ ೮೯

(ಏಕೆಂದರೆ–ನೀನು ಸಂಪಿಗೆ ಹೂವಿನಂತಹ ಮೂಗುಳ್ಳವಳಾದ್ದರಿಂದ ಸಂಪಿಗೆ ಹೂವಿರುವಲ್ಲಿ ದುಂಬಿಗಳು ಪಾಸಿಸಿ ಜೀವಿಸಲಾರವು ; ವಿರಹತಾಪಕ್ಕೆ ಉತ್ತೇಜಕ ಸಾಮಗ್ರಿಗಳಲ್ಲಿ ಒಂದಾದ ದುಂಬಿವಿಂಡು ವಿರಹತಾಪದಿಂದ ಪೀಡಿತಳಾದ ಸರ್ವಮಂಗಳೆಯ ಬಳಿ ಇರ ಬಾರದು ಎಂದು ಭಾವ.) ಎಲೈ, ಮಂಜುಳವಾದ ವೈಡೂರ್ಯರತ್ನಗಳ ಆಭರಣಗಳನ್ನು ಹಾಕಿರುವವಳೇ, ಮದಿಸಿದ ಗಿಳಿಗಳನ್ನು ಇಲ್ಲಿ ಇರಗೊಡದೆ ಆಚೆಗೆ ಹೊರಡಿಸು. (ಏಕೆಂದರೆ –ನೀನು ವೈಡೂರ್ಯರತ್ನಭೂಷಣವುಳ್ಳವಳಾಗಿರುವುದರಿಂದ ವೈಡೂರ್ಯಪ್ರಕಾಶದಲ್ಲಿ ಗಿಳಿಗಳು ಜೀವಿಸಿರಲಾರವು ; ವಿರಹತಾಪಕ್ಕೆ ಕಾರಣವಾದ ಗಿಳಿಯ ನುಡಿ (ಕಲಕೀರ)ಯು ಈ ಸರ್ವಮಂಗಳೆಯ ಕಿವಿಗೆ ಬೀಳಬಾರದು. ಇದ್ದರೆ ವಿರಹತಾಪ ಹೆಚ್ಚುವುದೆಂಬ ಭಾವ). ಎಲೈ, ಬಂಗಾರದ ಆಭರಣಗಳ ಪ್ರಕಾಶದಿಂದ ಬಿಸಿಲನ್ನುಂಟುಮಾಡಿರುವವಳೇ, ಚಂದ್ರನ ಪ್ರಕಾಶವನ್ನು ನೀನು ತಡೆ ; (ಏಕೆಂದರೆ–ಬಿಸಿಲಿದ್ದಾಗ ಚಂದ್ರಕಾಂತಿ ಬದುಕಲಾರದು. ವಿರಹೋತ್ತೇಜಕವಾದ ಚಂದ್ರಪ್ರಕಾಶವು ಸರ್ವಮಂಗಳೆಯ ಬಳಿ ಪ್ರಸರಿಸಕೂಡದು ; ಪ್ರಸರಿಸಿದರೆ ಅವಳಿಗೆ ವಿರಹತಾಪವು ಅಧಿಕವಾಗುವುದೆಂಬ ಭಾವ) ಇತ್ಯಾದಿಯಾಗಿ ಹೇಳಿದರು. (ತಾಪಕ್ಕೆ ಕಾರಣವಸ್ತುಗಳಾದ ಹಂಸ, ತಂಗಾಳಿ, ತುಂಬಿ, ಗಿಳಿ, ಚಂದ್ರಿಕೆ ಗಳು ಹೋದರೆ ತಾಪವು ತಾನಾಗಿ ಕಡಿಮೆಯಾಗುವುದು. ಇವಕ್ಕೆ ಕ್ರಮವಾಗಿ ಮೇಘ, ಸರ್ಪ, ಸಂಪಿಗೆ, ವೈಡೂರ್ಯ, ಬಿಸಿಲುಗಳು ವಿರೋಧಿಗಳೆಂದು ಕವಿಸಮಯ) ವ॥ ಮತ್ತು ೮೯. ಎಲೈ ಚಂದ್ರಕಾಂತಿಗೆ ಸಮನಾದ ಕಾಂತಿಯುಳ್ಳವಳೇ, (ನೀನು) ಹೂಗೊಂಚಲು ಹಿಡಿದು ಬೀಸಬೇಡ. (ಆಚೆಗೆ ಹೋಗು. ಏಕೆಂದರೆ—ನಿನ್ನ ಮುಖವನ್ನು ಚಂದ್ರನೆಂದು ಹೂಗೊಂಚಲನ್ನು ಬೆಳದಿಂಗಳೆಂದು) ಈ ಸರ್ವಮಂಗಳೆಯು ಅಧಿಕ ತಾಪದಿಂದ ಆಲಸ್ಯಗೊಳ್ಳುವಳು. ಎಲೈ, ಮನ್ಮಥನ ಶರವಾದ ಕಮಲದಂತಹ ಕಣ್ಣುಳ್ಳವಳೇ, ನೀನು ಹೂವುಗಳನ್ನು (ಇವಳ ಮೇಲೆ) ಹಾಕದೆ ಸುಮ್ಮನೆ ಇರು. (ಏಕೆಂದರೆ–ನೀನು ಮನ್ಮಥನ ಬಾಣವಾದ ಪದ್ಮದಂತೆ ಕಣ್ಣುಳ್ಳವಳಾದ್ದರಿಂದಲೂ, ಮನ್ಮಥ ಬಾಣಗಳಾದ ಪುಷ್ಪಗಳನ್ನೆಸೆಯುವುದರಿಂದಲೂ ಅವನ್ನು) ಕಾಮನ ಹೂವುಗಳ ತೀಕ್ಷ್ಣವಾದ ಬಾಣಗಳೆಂದು ತಿಳಿದು ಅವಳು ಇನ್ನೂ ಹೆಚ್ಚು ಕಂದುತ್ತಾಳೆ. ಎಲೈ ಚಿಗುರಿನ ಹಾಗೆ ಎದ್ದು ಕಾಣುವ ಕೈಯುಳ್ಳವಳೇ, (ನೀನು) ಪಲ್ಲವಗಳ ಸಮೂಹವನ್ನು ಘಾಸಬೇಡ. (ಏಕೆಂದರೆ–ಆ ಚಿಗುರು ಕೆಂಪಾಗಿರುವ ಕಾರಣ ಅದನ್ನು) ಕಾಮಾಗ್ನಿಯ

ವ॥ ಎಂದುಸಿರ್ದು ಮತ್ತಮಿರದೆ

ಮ॥ ಅರವಿಂದಾನನೆಗಬ್ಜಲೋಚನೆಗೆ ಪದ್ಮಾಮೋದನಿಶ್ವಾಸೆಗಂ
ಬುರುಹದ್ವಂದ್ವಸಮಾನಪಾಣಿಗೆ ಪಯೋರುಟ್ಪಾದೆಗಂಭೋಜ ಭಾ
ಸುರಕೋಶಸ್ತನೆಗೀ ಲತಾಂಗಿಗೆ ಸರೋಜಾತಾರಿ ತಾಂ ಕಾಯ್ವುದ
ಚ್ಚರಿಯಲ್ತೀ ಕಳಹಂಸಿನೀ ಮಧುಕರಂ ಪೇಳ್ಕಾಯ್ವುದೇಂ ತಕ್ಕುದೇ ೯೦

ತಳಿರುಂ ತಾಮರಸಂ ಮದಾಳಿಕುಳಮುಂ ಮಂದಾನಿಲಂ ಮಾಮರಂ
ಕಳೆಯಾಣ್ಮಂ ಕಳಹಂಸಮಂಡಳಿ ಸರೋಜಾತಾಕರಂ ಷಟ್ಪದಂ
ಕಳಕಂಠಂ ಕದಳೀದಳಂ ಮಳಯಜಂ ಮಾಧುರ್ಯಗೀತಂ ಮನೋ
ಜ್ಞಳತಾಗೇಹಮುಮೆಲ್ಲಮೀಕೆಗೆ ಕರಂ ಕಾಯ್ದಪ್ಪುವೇಗೆಯ್ವಳೋ ೯೧

ಚಂ॥ ವಿರಹಶಿಖಿಪ್ರತಪ್ತತರುಣೀತತಲೋಚನರೋಚಿಯಿಂ ಸುಧಾ
ಕರರುಚಿ ಸೋಷ್ಣಮಾಗುತಿಳಿವೀ ಬಿಸುಸುಯ್ಯುಡೆ ಬೆಚ್ಚನಾಗಿ ತಂ
ಬೆರಲಿರದಾಳಿಯರ್ತಳಿವ ನೀರ್ತನುತಾಪದೆ ಕಾಯ್ದುವೆಲ್ಲಮೀ
ತರಳೆಗೆ ತಾಪಮಾಗುಮಿವಳೆಂತೊಳ್ಳಬಿಯರ್ಬಳಿದೂಖನೇಬಿಪರ್ ೯೨

ಶಿಖೆಯ (ಜ್ವಾಲೆಗಳ ನಾಲಗೆ) ಸಮೂಹವೆಂದು ತಿಳಿದು ಭಯಪಡುತ್ತಾಳೆ." (ಹೀಗೆ ಆ ಜಾಣೆಯರಾದ ಸ್ತ್ರೀಯರು ಮುಗ್ಧೆಯರಿಗೆ ಹೇಳುತ್ತಿದ್ದರು.) ವ|| ಹೀಗೆ ಹೇಳಿ ಪುನಃ ತಪ್ಪದೆ (ಹೀಗೆ ಹೇಳುತ್ತಾರೆ :) ೯೦. "ಕಮಲದಂತಹ ಮುಖವುಳ್ಳ, ಕಮಲದಂತಹ ಕಣ್ಣುಳ್ಳ, ಕಮಲದ ಸುವಾಸನೆಯಂತಹ ನಿಶ್ವಾಸವುಳ್ಳ, ಕಮಲಗಳೆರಡರಂತೆ ಎರಡು ಕೈಯುಳ್ಳ, ಕಮಲದಂತಹ ಕಾಲುಗಳುಳ್ಳ, ಕಮಲದ ಮೊಗ್ಗಿನಂತಹ ಸ್ತನಗಳುಳ್ಳ, ಈ ಬಳ್ಳಿಯಂತಹ ದೇಹವುಳ್ಳವಳನ್ನು ಕಮಲವೈರಿಯಾದ ಚಂದ್ರನು ಕಾಯುವುದು ಆಶ್ಚರ್ಯವಲ್ಲವೆ ? ಈ ಕಳಹಂಸಪಕ್ಷಿ, ಈ ದುಂಬಿಗಳು ಕಾಯುವುದು ತಕ್ಕವುಗಳೇನು ಹೇಳು ?–(ಇಲ್ಲಿ 'ಕಾಯುವುದು' ಶಬ್ದವು–ಸಂರಕ್ಷಿಸುವುದು ಮತ್ತು ಬಿಸಿಗೊಳಿಸುವುದು ಎಂಬ ದ್ವಂದ್ವಾರ್ಥವುಳ್ಳದ್ದು.* ಸರ್ವಮಂಗಳೆಯ ಅನೇಕ ಅಂಗಭಾಗಗಳು ಕಮಲ ಸದೃಶಗಳೇ ಆಗಿರುವಾಗ ಆ ಕಮಲಕ್ಕೆ ವೈರಿಯಾದ ಚಂದ್ರನು ಅವಳನ್ನು ಕಾಯುವುದು ಆಶ್ಚರ್ಯವಲ್ಲವೆ ? ಹೀಗಿರುವಾಗ ಹಂಸ ಮತ್ತು ದುಂಬಿಗಳು ಕಾಯುವುದು ತಕ್ಕದ್ದಲ್ಲ–ಹೇಳು ?–ಎಂದು ಭಾವ) ೯೧. ತಳಿರು (ಚಿಗುರು), ಕಮಲ, ಮದಾಳಿಗಳ ಸಮೂಹ, ಮಂದಮಾರುತ, ಸೀಮಾವಿನಮರ, ಷೋಡಶಕಲೆಗಳ ಒಡೆಯನಾದ ಚಂದ್ರ, ರಾಜಹಂಸ ಸಮೂಹ, ಸರೋವರ, ಭ್ರಮರಗಳು, ಕೋಗಿಲೆ, ಬಾಳೆಯ ಎಲೆ (ಬಾಳೆಯ ಸುಳಿ), ಶ್ರೀಗಂಧ, ಮನೋಹರ ಸಂಗೀತ, ಚಿತ್ತಾನಂದಕರವಾದ ಲತಾಗೃಹ ಇವುಗಳೇ ಈಕೆಗೆ ತಾಪವನ್ನುಂಟುಮಾಡುತ್ತಿರುವುವು. ಏನು ಮಾಡುವಳೋ ! ೯೨. ವಿರಹಾಗ್ನಿಯಿಂದ ತಪ್ತಳಾದ ಈ ತರುಣಿಯ ಲೋಚನಕಾಂತಿಯಿಂದ ಬೆಳದಿಂಗಳೂ ಬಿಸಿಯಾಗು

* ದ್ವಂದ್ವಾರ್ಥದ ಔಚಿತ್ಯವೇನೂ ಕಾಣಸದು. ಬಿಸಿಗೊಳಿಸುವುದು–ಪೀಡಿಸುವುದು ಎಂಬ ಅರ್ಥವೇ ಸಾಕೆನಿಸುತ್ತದೆ (ರಂ).

ವ॥ ಇಂತನೇಕ ವಿವಿಧಾಲಾಪಂಗಳವಱಿಕೊಳ್ಳೆಗಳುತ್ತಮಿರ್ಪಿನಮಾಗಳ್ ಗಳಗಳನೆ ಕಳಿದೀಪ ಒಕ್ಕುಳ ಬಾಷ್ಪಜಳಪೂರದಿಂ ತೊಳೆದು ಕಳೆದಂತೆ ನಿದ್ರೆ ನೆಲೆಗೆಟ್ಟು ತೊಲಗೆ ; ಅಲರ ಬಿಜ್ಜಣಿಗೆಯಿಂ ಬೀಸೆ ಬೀಸರಂಬೋದಂತೆ ಹಸನಂ ಹಸಂಗೆಡೆ; ಕಂದರ್ಪಂ ಬೆಸಸೆ ಮಂದಾನಿಲಂ ಪುಗುತಂದೊಳಗೆ ಪೊಳೆವ ವಿರಹದಹನಜ್ವಾಲೆಯುಂ ಮೇಲೆ ಮೇಲೆ ಪೆರ್ಚಿಸುತ್ತದಱ ಬಿಸುಪನಾಂತಿ ಆತರ್ಪಂತೆ ನಾಸಾವಿವರದಿಂ ಸೂಸುವ ಬಿಸುಸುಯ್ ಬೀದಿವರಿಯೆ ; ಬಳಸಿಬಂದು ಬಗ್ಗಿಪ ಕೆಂಗಣ್ಬಕ್ಕಿಗಳ್ಗೆ ಕಾಯ್ದಂತೆ ಕಡೆಗಣ್ಕಡುಗೆಂಪುವಡೆಯೆ ; ಆಳವಿಗಳೆದು ಕೆಳದಿಯರ್ತಳಿವ ತುಹಿನ ಜಳದೊಡಗೂಡಿ ಮದನಾಗ್ನಿಯಿಂ ಪೊಗೆವ ಪಸಿಯ ಬಿಸವಿಸರದ ಪಸರಿಸಿದ ಪೊಗೆ ಸುರಿವಂತೆ ಕಾಳ್ಪುರಮಾಗಿ ಕಣ್ಣನೀರ್ಕವಿತರೆ ರಾಕಾಸುಧಾಕರಂ ಮುಖರುಚಿಯಂ ಕವರ್ದು ನಿಜರುಚಿಯನಿತ್ತಂತೆ ಸಿರಿವೊಗಂ ಬೆಳ್ಪೇಱೆ; ಮನದೊಳಿರ್ಪ ಮನದನ್ನನಂ ಮನಸಿಜನ ನನೆಯಂಬು ನಾಂಟದಂತಡ್ಡಮಿಟ್ಟಪಳೆನೆ ಕುಚಮಧ್ಯಕ್ಕೆ ಸಾರ್ಚಿದ ಕರಂ ಕರಮೆಸೆಯೆ ; ಚಿಂತಾಭಾರಮಂ ಪೊಱ

ವುದು ! ಇವಳ ಬಿಸಿಯುಸಿರಿನಿಂದ ತಂಗಾಳಿ ಬೆಚ್ಚಗಾಗುವುದು. ಈ ಸಖಿಯರು ಹಚ್ಚುವ ತಣ್ಣೀರು ತನುತಾಪದಿಂದ ಕಾವೇರುವುದು. ಹೀಗಾಗಿ ಬೆಳದಿಂಗಳು ಮೊದಲಾದುವೆಲ್ಲವೂ ಈಕೆಗೆ ತಾಪವನ್ನೇ ಕೊಡುತ್ತಿವೆ. ಇವುಗಳು ಪ್ರಯೋಜನವಿಲ್ಲವೆಂದು ಈ ಸಖಿಯರು ವ್ಯರ್ಥವಾಗಿ ದೂರುತ್ತಿದ್ದಾರೆ !” ವ॥ ಈ ರೀತಿ ಅನೇಕ ವಿಧವಾದ ಸಂಭಾಷಣೆಗಳು ಆ ಸಖಿಯರಲ್ಲಿ ನಡೆಯುತ್ತಿರುವಾಗ–ಗಳಗಳನೆ ಕೈಮಿಕ್ಕಿ (ಕಳಿ) ಇಳಿವ ಅಧಿಕವಾದ ಕಣ್ಣೀರಿನ ತುಂಬುಪ್ರವಾಹದಿಂದ ಕೊಚ್ಚಿಹೋದ ಹಾಗೆ ನಿದ್ರೆಯು ತೊಲಗಿತು. ಹೂವಿನಿಂದ ಮಾಡಿದ ಬೀಸಣಿಗೆಯಿಂದ ಗಾಳಿಯನ್ನು ಬೀಸಲಾಗಿ ನಗೆಯು ಹೊರಗಚ್ಚಾಗಿ ಹಾರಿಹೋದ ಹಾಗೆ ಹೊರಟುಹೋಯಿತು. ಮನ್ಮಥನ ಅಪ್ಪಣೆಗನುಸಾರವಾಗಿ ಮಂದಮಾರುತವು ದೇಹದೊಳಗೆ ಹೊಕ್ಕು ಮೊಳಕೆಯೊಡೆಯುತ್ತಿರುವ ವಿರಹಸಂಬಂಧವಾದ ಸುಡುವ ಅಗ್ನಿಯನ್ನು ಮೇಲೆ ಮೇಲೆ (ಗಾಳಿ ಹಾಕಿ) ಹೆಚ್ಚುಗೊಳಿಸುತ್ತ ಬಿಸಿಯನ್ನು ಹೊಂದಿ (ಹೊರಗೆ) ಬರುವಂತೆ ಮೂಗಿನ ಹೊರಳೆಗಳಿಂದ ಹೊರಸೂಸುವ ಬಿಸಿಯುಸಿರು ಬೀದಿವರಿಯಿತು. ಸುತ್ತಲೂ ಬಂದು ಧ್ವನಿಮಾಡುವ ಕೋಗಿಲೆಗಳಿಗೆ ಕೋಪಗೊಂಡ ಹಾಗೆ (ಕಾಯ್ದಂತೆ) ಕಡೆಗಣ್ಣುಗಳು ಅತಿಶಯವಾಗಿ ಕೆಂಪಾದುವು. ಮಿತಿಮೀರಿ ಗೆಳತಿಯರು ಚಿಮುಕಿಸುವ ತಂಪಾದ ನೀರಿನ ಸಂಗಡ ಸೇರಿ ಮನ್ಮಥಾಗ್ನಿಯಿಂದ ಹೊಗೆಯನ್ನುಂಟುಮಾಡುವ ಹಸಿಯ ಕಮಲದ ದಂಟುಗಳ ಸಮೂಹದಿಂದ ಸುತ್ತಲೂ ವ್ಯಾಪಿಸಿದ ಹೊಗೆ ಸುರಿಯುವ ಹಾಗೆ ಪ್ರವಾಹರೂಪವಾಗಿ ಕಣ್ಣೀರು ಸುರಿಯುತ್ತಿದ್ದವು. ಪೂರ್ಣಚಂದ್ರನು (ಅವಳ) ಮುಖದ ಕಾಂತಿಯನ್ನು ಕಸಿದುಕೊಂಡು ತನ್ನ ಬಿಳಿಯ ಕಾಂತಿಯನ್ನು (ಮಾತ್ರ) ಕೊಟ್ಟ ಹಾಗೆ ಶೋಭಾಯಮಾನವಾದ ಮುಖವು ಬಿಳುಪೇರಿತ್ತು. ಮನಸ್ಸಿನಲ್ಲಿರುವ ಮನೋವಲ್ಲಭನಾದ ರಾಜಶೇಖರನನ್ನು ಮನ್ಮಥನ ಪುಷ್ಪಬಾಣಗಳು ನಾಟದ ಹಾಗೆ ಅಡ್ಡ ಹಿಡಿದಿರುವಳೋ ಎನ್ನುವಂತೆ

ಲಾರದಳವಳಿವ ಶಿರಕ್ಕಾಂಕೆಗೊಟ್ಟಪಳಿನೆ ತೆಳ್ಗದಂಪಂ ಕೈದಳಿರ್ತಳೆಯೆ ; ತನುನಾಮಮಂ ಸಾರ್ಥಕಂ ಮಾಳ್ಪಂತೆ ತನು ತನುತ್ವಂಬಡೆಯೆ; ಕಂತುಗ್ರಹದ ಕಾಟಕ್ಕಳ್ಕಿ ಭಸಿತಮಂ ಧರಿಸಿದಂತಲರ ಮಲಯಜದ ರಜಂ ನಿಜಾಂಗದೊಳ್ ಕಂಗೊಳಿಸೆ ; ಘನತಾಪಕ್ಕೆ ಸೆಡೆದು ಘನಕವಚಂದೊಟ್ಟಂತೆ ಕಂದಿದ ಚಂದನದಣ್ಪು ತೋಱೆ ; ಮಿಾಱಿದ ತನುತಾಪದಿಂ ನೊಂದು ಬೆಂದು ಸಸಿಜೊನ್ನಕ್ಕೆ ಬೆರ್ಚಿ ಬಸಂತಂಗೆ ಬೆರಲ್ಗಚ್ಚಿ ಕಳಕಂಠಂಗಳ್ಕಿ ಗಿಳಿವಿಂಡಿಂಗೆ ಬಳ್ಕಿ ತಳಿರ್ಗೆ ತಲ್ಲಣಂಗೊಂಡು ಮಲಯಜಕ್ಕೆ ಮಲ್ಲಳಿಗೊಂಡು ಮಂದಾನಿಲಂಗಳರ್ದು ಕಂದರ್ಪಂಗೆ ಪೆಳರ್ದು ಕುಸುಮವಿಸರಕ್ಕಗಿದು ಬಿಸಕಾಂಡಕ್ಕೆ ಸುಗಿದು ಪೋಂಬಾಳೆಯಿಂ ಮಱವಟ್ಟು ತುಂಬಿಗಳಿಂ ಕಂಗೆಟ್ಟು ಕಮಳದಿಂ ಕಂದಿ ಕುಮುದದಿಂ ಕುಂದಿ ತಿಳಿಗೊಳಮಂ ಬಯ್ದು ಕಳಹಂಸಂಗೆ ಸುಯ್ದು ಎಳಲತೆಗೆ ತಲೆವಾಗಿ ಪುಳಿನಕ್ಕೆ ಮಾಱುವೋಗಿ ಮಾವಂ ನೋಡದೆ ಪೂವಂ ಸೂಡದೆ ಸಖಿಯರಂ ಪರೀಕ್ಷಿಸದೆ ಮುಕುರಮಂ ನಿರೀಕ್ಷಿಸದೆ ಕುರುಳಂ ನೇವರಿಸದೆ ಶರೀರಮಂ ಸಿಂಗರಿಸದೆ ಜಳಕಮಂ ಪಾಱದೆ ತಿಳಕಕ್ಕೆ ಸೇರದೆ ಊಟಕ್ಕೆಳಸದೆ ಆಟವಂ ಬಳಸದೆ ಕಾಯ್ಪೇಱಿದ ಕನಕಪುತ್ರಿಕೆಯಂತೆ

ಕುಚಗಳ ಮಧ್ಯಭಾಗದಲ್ಲಿ ಇರಿಸಿದ ಕೈಯು ಅತಿ ಶೋಭೆಗೊಂಡಿತ್ತು. ಚಿಂತೆಯ ಭಾರವನ್ನು ಹೊರಲಾರದೆ ಶಕ್ತಿಗುಂದುತ್ತಿರುವ ತಲೆಗೆ ಆಸರೆಯಾಗಿರಿಸಿದ ಹಾಗೆ ನುಣ್ಣನೆಯ ಕಪೋಲಕ್ಕೆ ತಳಿರಿನಂತ ಕೈಯನ್ನು ಕೊಟ್ಟಿದ್ದಳು. ದೇಹಕ್ಕಿರುವ 'ತನು' ಎಂಬ ಹೆಸರನ್ನು ಅರ್ಥಪೂರ್ಣವುಳ್ಳದ್ದನ್ನಾಗಿ ಮಾಡಬೇಕೆಂದು ಆಕೆಯ ದೇಹವು ಕೃಶಗೊಂಡಿತ್ತು. ಮನ್ಮಥಗ್ರಹದ ಕಾಟಕ್ಕೆ ಹೆದರಿ ಭಸ್ಮವನ್ನು ಧರಿಸಿರುವಳೋ ಎಂಬಂತೆ ಹೂವಿನ ಮತ್ತು ಶ್ರೀಗಂಧದ ಧೂಳು ತನ್ನ ಶರೀರದಲ್ಲಿ ಕಂಗೊಳಿಸುತ್ತಿತ್ತು. ವಿಶೇಷವಾದ ತಾಪಕ್ಕೆ ಸೆಡೆದು ದಪ್ಪನೆಯ ಕವಚವನ್ನು ತೊಟ್ಟಹಾಗೆ ಶ್ರೀಗಂಧದ ಕೆಸರು ಕಂದಿ ಹೋಗಿತ್ತು. ಕೈಮಿಕ್ಕಿ ಹೋಗಿರುವ ವಿರಹಸಂಬಂಧದ ದೇಹದ ತಾಪದಿಂದ ನೊಂದು, ಬೆಂದು ಚಂದ್ರನ ಬೆಳದಿಂಗಳಿಗೆ ಹೆದರಿದ್ದಳು. ವಸಂತನಿಗಾಗಿ ಬೆರಳನ್ನು (ಭಯದಿಂದ) ಕಚ್ಚಿ, ಕೋಗಿಲೆಗೆ ಅಳುಕಿ, ಗಿಳಿವಿಂಡುಗಳಿಗೆ ಬಳುಕಿ, ತಳಿರುಗಳಿಗೆ ಸಂಕಟಪಟ್ಟು, ಶ್ರೀಗಂಧಕ್ಕೆ ಬೆರಗುಗೊಂಡು, ಮಂದಮಾರುತಕ್ಕೆ ಹೆದರಿ, ಮನ್ಮಥನಿಗೆ ಹಿಂಜರಿದು, ಹೂವುಗಳ ಸಮೂಹಕ್ಕೆ ಅಂಜಿ, ಕಮಲದ ದಂಟಿಗೆ ಹೆದರಿ, ಹೂಬಿಟ್ಟ ಬಾಳೆಗೆ ಮರಗಟ್ಟಿದಂತಾಗಿ, ದುಂಬಿಗಳಿಗೆ ಕಂಗೆಟ್ಟು, ಕಮಲದಿಂದ ಕಂದಿ, ಕನ್ನೈದಿಲೆಯಿಂದ ಕುಂದಿ, ತಿಳಿನೀರಿನ ಸರೋವರವನ್ನು ಬೈದು, ರಾಜಹಂಸಗಳಿಗೆ ನಿಟ್ಟುಸಿರುಬಿಟ್ಟು, ಎಳೆಯ ಚಿಗುರಿಗೆ ತಲೆಬಗ್ಗಿಸಿ, ಮಳಲಿಗೆ ಶರಣಾಗತಳಾಗಿ. ಮಾಮರವನ್ನು ನೋಡದೆ, ಹೂವನ್ನು ಧರಿಸದೆ, ಸಖಿಯರುಗಳನ್ನು ಪರೀಕ್ಷೆಮಾಡದೆ, ಕನ್ನಡಿಯನ್ನು ನೋಡಿಕೊಳ್ಳದೆ, ಮುಂಗುರುಳುಗಳನ್ನು ಸರಿಪಡಿಸಿಕೊಳ್ಳದೆ, ಶರೀರವನ್ನು ಶೃಂಗಾರ ಮಾಡಿಕೊಳ್ಳದೆ, ಸ್ನಾನವನ್ನು ಅಪೇಕ್ಷಿಸದೆ, ತಿಲಕವಿಟ್ಟುಕೊಳ್ಳುವುದಕ್ಕೆ ಇಚ್ಛಿಸದೆ, ಊಟಕ್ಕೆ ಬಯಸದೆ, ಆಟವಾಡಲು ಕಾಲವನ್ನು ವಿನಿಯೋಗಿಸದೆ, ಕಾಯೇರಿದ ಬಂಗಾರದಗೊಂಬೆಯಂತೆ,

ಬೇಱೊಂದು ಸೌಂದರ್ಯಕ್ಕೆ ಪಕ್ಕಾಗಿ ನಿಜಕಾಂತನಾಟಮಂ ಕೂಟಮಂ ಮೀಂಟುಜವ್ವನದ ಬೇಟ ಗಾರ್ತಿ ಕೂರ್ತು ಬಗೆದು ಬಯಸಿ ಬಗೆಯೊಳ್ ಭಾವಿಸುತಿರ್ದಳಾ ಪ್ರಸ್ತಾವದೊಳ್

ಚಂ॥ ಗುರುಕುಚದಲ್ಲಿ ಸಾಂದ್ರತರ ಕುಂಕುಮಪಂಕಮನಿಟ್ಟು ಪಲ್ಲವಾ
ಧರೆಗಿರದಾಳಿಯರ್ಬಿರಿದ ಮಲ್ಲಿಗೆಮೊಗ್ಗೆಯನಲ್ಲಿ ಸಾರ್ಚೆ ತಾ
ನರುಣತೆವೆತ್ತು ಕಾಣಿಸಿತು ಕಾಮನೃಪಂ ಕಡುಗಾಸುತೆಚ್ಚ ಬ
ಲ್ಸರಲೆನೆ ಮೂರ್ಛೆಯಿಂ ಮುಗಿದ ಕಣ್ಮಲರಿಂದೊಱಗಿರ್ದ ನೀಱೆಯಾ ೯೩

ವ॥ ಇಂತು ಸಮ್ಮದಂಗುಂದಿ ಹಮ್ಮದಂಬೋದ ಸರ್ವಮಂಗಳೆಗೆ ಕೆಳದಿಯರ್ಮದನ ದಹನಸಂತಾಪಪರಿಹರಣಚಣ ಸಮುಚಿತೋಪಚಾರಕ್ಕೆ ತಕ್ಕ ಪರಿಚಾರಂಗೆಯ್ವುತ್ತುಮಿರ್ದ ರನ್ನೆವರಮಿತ್ತಲ್ ವಿಪುಳ ವಿಭವಂ ಮಿಗೆ ಮುಂಬಂದ ರಾಜಶೇಖರನರೇಂದ್ರಂಗೆ ವಿವಿಧೋಪ ಚಾರಂಗೆಯ್ದನಂತರಮಂತಃಪುರದೊಳವಳಯದ ಕೇಳೀವನಾಂತಸ್ಥಳ ವಿಳಸಿತ ಮಣಿಮಯ ಪ್ರಾಸಾದಮಂ ಬಿಡುದಾಣಂ ಮಾಡಿಕೊಟ್ಟು ಮಜ್ಜನ ಭೋಜನಾದಿ ಸಮುಚಿತೋಪಚಾರಕ್ಕೆ ತಕ್ಕ ಪರಿಚಾರಕಜನಮಂ ನಿಯಾಮಿಸಿ ನಿಜರಮಣಿಯೊಡನೆ ಕನಕಪೀಠಮನಳಂಕರಿಸಿ ಸಿಂಹ

ಬೇರೊಂದು ರೀತಿಯ ಸೌಂದರ್ಯಕ್ಕೆ ಮನಸ್ಸುಗೊಟ್ಟು, ತನ್ನ ಕಾಂತನಾಗುವವನ ಆಟ ವನ್ನೂ ಕೂಟವನ್ನೂ ಆ ಏರುತ್ತಿರುವ ಯೌವ್ವನದ ಬೆಡಗುಗಾತಿಯಾದ ಸರ್ವ ಮಂಗಳೆಯು ಅತಿಪ್ರೀತಿಯಿಂದ ಬಯಸಿ ಮನಸ್ಸಿನಲ್ಲಿ ಭಾವಿಸುತ್ತಿದ್ದಳು. ಆ ಸಮಯ ದಲ್ಲಿ ೯೩. ಮೂರ್ಛೆಗೊಂಡು ಮುಚ್ಚಿದ ಪುಷ್ಪಸದೃಶ ಕಣ್ಣುಗಳಿಂದ ಕೂಡಿ ಮಲಗಿ ಕೊಂಡಿದ್ದ ಆ ಸರ್ವಮಂಗಳೆಯ ದಪ್ಪನಾದ ಮೊಲೆಗಳ ಮೇಲೆ ಗೆಳತಿಯರು ದಟ್ಟವಾದ ಕುಂಕುಮಕೇಸರಿಯ ಕೆಸರನ್ನು ಬಳಿದರು. ತಳಿರಿನಂತೆ ಕೆಂಪಾದ ತುಟಿಗಳಿಂದ ಕೂಡಿದ ಆವಳಿಗೆ ಅರಳಿದ ಮಲ್ಲಿಗೆಯ ಹೂವನ್ನು ಕುಂಕುಮಕೇಸರಿಯ ಲೇಪದಲ್ಲಿ ಸೇರಿಸಲಾಗಿ, ಆ ಹೂವು ಕೆಂಪುಬಣ್ಣವನ್ನು ಹೊಂದಿ, ಮನ್ಮಥನೃಪನು ಹೆಚ್ಚಾಗಿ ಕಾಯಿಸಿ (ಕೆಂಪಾಗು ವಂತೆ ಕಾಯಿಸಿ ಹದಗೊಳಿಸಿ) ಪ್ರಯೋಗಮಾಡಿದ ದೊಡ್ಡ ಬಾಣವೋ ಎನ್ನುವಂತೆ ಕಾಣಿಸಿತು. ವ|| ಈ ರೀತಿ ಸಂತೋಷಗುಂದಿ ಮೂರ್ಛೆಹೋದ ಸರ್ವಮಂಗಳೆಗೆ ಗೆಳತಿಯರು ಮನ್ಮಥದಹನ ಸಂತಾಪವು ಪರಿಹಾರವಾಗುವಂತೆ ಸಮರ್ಥವಾದ ಉಪ ಚಾರಕ್ಕೆ ತಕ್ಕುದಾದ ಸೇವೆಯನ್ನು ಮಾಡುತ್ತಿದ್ದರು. ಅಷ್ಟರೊಳಗೆ ಇತ್ತ ಅನಂತ ವೈಭವದಿಂದ ಮೆರವಣಿಗೆಯಲ್ಲಿ ಮುಂದಕ್ಕೆ ಬಂದ ರಾಜಶೇಖರನರೇಂದ್ರನಿಗೆ ವಿವಿಧ ವಾದ ಉಪಚಾರವನ್ನು ಮಾಡಿದರು. ಅನಂತರ ಅಂತಃಪುರದ ಒಳಭಾಗದಲ್ಲಿ ಕೇಳೀವನದ ಮಧ್ಯದ ಪ್ರಕಾಶಮಾನವಾದ ರತ್ನಮಯ ಉಪ್ಪರಿಗೆಯ ಅರಮನೆ ಯನ್ನು ಬಿಡಾರ ಮಾಡುವ ಸ್ಥಾನವನ್ನಾಗಿ ಕಲ್ಪಿಸಿದರು. ಸ್ನಾನ ಊಟ ಮೊದ ಲಾದ ಸಮುಚಿತ ಉಪಚಾರಕ್ಕಾಗಿ ತಕ್ಕವರಾದ ಸೇವಕರನ್ನು ಗೊತ್ತುಮಾಡಿ, ತನ್ನ ಹೆಂಡತಿಯೊಡನೆ ಸುವರ್ಣಮಯವಾದ ಆಸನದಲ್ಲಿ ಕುಳಿತುಕೊಂಡು ಆ

ಳೇಂದ್ರಂ ಕುಳ್ಳಿರ್ದೀ ಕುಮಾರಂಗೆ ನಿಜಕುಮಾರಿಯಂ ಪರಿಣಯಂಗೆಯ್ಯಲ್ವೇಳ್ಕುಮೆಂದು ನುಡಿವ ಸಮನಂತರದೊಳ್ ಸೌಂದರ್ಯಶಾರದೆಯೆಂಬ ಸರ್ವಮಂಗಳೆಯ ಕೆಳದಿ ಪರಿತಂದಿರ್ವರಡಿದಾವರೆಯಂ ಕುರುಳ್ದುಂಬಿಗಳಿನೋಲಗಿಸಿ ಕರಾರವಿಂದಮಂ ಮುಗಿದು ನೀದು

ಉ॥ ಎಂದು ನರೇಂದ್ರಪುತ್ರನನಭೀಕ್ಷಿಸಿದಳ್ಭವದೀಯ ಪುತ್ರಿಯಂ
ದಿಂದಮನಂಗಬಾಣಹತಿಯಿಂ ಬಗೆಗುಂದಿ ಬಳಲ್ದು ಪಾಡದೇ
ನೊಂದುಮನಾಡದಂಚೆ ಗಿಳಿ ಕೋಗಿಲೆಯಿಂಚರಕಳ್ಕಿ ಬಳ್ಕಿ ಪೂ
ರ್ಣೇಂದುನಿಭಾಸ್ಯೆ ನೊಂದಪಳಿವಳ್ಗೆಸಪ್ಪುದುಗಮೇಂ ಮಹೀಶ್ವರಾ ೯೪

ಕಂ॥ ಅಲರೆಲರಳಿ ಗಿಳಿ ಮಧುವಿಧು
ನಲಿನಂ ಪುಲಿನಂ ಮರಂದಬೃಂದಂ ಕುಂದಂ
ಕಲಗಲ ಕಲಕಲ ಘನವನ
ಮಲೆಗುಂ ಭವದೀಯ ತನುಜೆಯಂ ಮನುಜೇಂದ್ರಾ ೯೫

ಚಂ॥ ತರುಣಿಯ ವಕ್ತ್ರ ನೇತ್ರ ಪದಪಾಣಿ ದರಸ್ಮಿತಕಾಂತಿಗಳ್ಗೆ ಸೋ
ಲ್ತುರುತರ ಕಂಜಕೈರವ ನವಾಮ್ರ ವಿರಾಜದಶೋಕಮಲ್ಲಿಕಾ
ಶರನಿಕರಂ ಕರಂ ಸ್ಮರನಿಷಂಗಮನೆಯ್ದೆ ವಿರೋಧಭಾವ ಸಂ
ಸ್ಮರಣದೆ ತನ್ನಿತಂಬಿನಿಯಸುಂಗೊಳಲುಜ್ಜುಗಿಸಿರ್ಪುದುರ್ವಿಪಾ ೯೬

ಸಿಂಹಳೇಂದ್ರನು ತನ್ನ ಹೆಂಡತಿಯನ್ನು ಕುರಿತು 'ನಮ್ಮ ಮಗಳನ್ನು ಈ ರಾಜಶೇಖರ ಕುಮಾರನಿಗೆ ಲಗ್ನಮಾಡಿಕೊಡಬೇಕು' ಎಂದು ನುಡಿಯುತ್ತಿರುವಷ್ಟರಲ್ಲಿಯೇ ಸೌಂದರ್ಯ ಶಾರದೆ ಎಂಬ ಹೆಸರುಳ್ಳ ಸರ್ವಮಂಗಳೆಯ ಗೆಳತಿಯೋರ್ವಳು ಓಡಿಬಂದು ರಾಜದಂಪತಿಗಳ ಪಾದಕಮಲಗಳಲ್ಲಿ ತನ್ನ ತುಂಬಿಯಂತಿರುವ ಮುಂಗುರುಳನ್ನು ಚಲ್ಲಿ (ನಮಸ್ಕರಿಸಿ), ಕರಕಮಲಗಳನ್ನು ಮುಗಿದು (ಹೀಗೆ) ಬಿನ್ನವಿಸಿಕೊಂಡಳು ೯೪. "ಮಹೀಪಾಲನೇ, ತಮ್ಮ ಕುಮಾರಿಯು ಎಂದು ನರೇಂದ್ರಪುತ್ರನಾತ ರಾಜಶೇಖರಮಹಾರಾಜನನ್ನು ನೋಡಿದಳೋ ಅಂದಿನಿಂದ ಮನ್ಮಥಬಾಣಗಳ ಹೊಡೆತದಿಂದ ಧೈರ್ಯಗುಂದಿ, ಬಳಲಿ, ಹಾಡದೆ, ಏನೊಂದೂ ಮಾತನಾಡದೆ, ಹಂಸ, ಗಿಳಿ, ಕೋಗಿಲೆಗಳ ಮಧುರಧ್ವನಿಗೆ ಹೆದರಿದವಳಾಗಿದ್ದಾಳೆ. ಆ ಪೂರ್ಣಚಂದ್ರಸದೃಶಮುಖಿಯು ನೊಂದುಹೋಗಿದ್ದಾಳೆ. ಇವಳಿಗಾಗಿ ಏನು ಮಾಡಬೇಕು ? ೯೫. ಮನುಜಶ್ರೇಷ್ಠನೇ, ಹೂವು, ಎಳೆಗಾಳಿ, ಭ್ರಮರ, ಗಿಳಿ, ಚಂದ್ರ, ಕಮಲ, ಮಳಲು, ಮಕರಂದ ಸಮೂಹ, ಕುಂದಮಲ್ಲಿಗೆ, ಸವಿಮಾತು, ಅವ್ಯಕ್ತಮಧುರಧ್ವನಿ, ಉದ್ಯಾನ–ಇವು ತಮ್ಮ ಕುಮಾರಿಯನ್ನು ಶ್ರಮಗೊಳಿಸುತ್ತಿವೆ. ೯೬. ಉರ್ವೀಶ್ವರನೇ, ಆ ಸರ್ವಮಂಗಳೆಯ ಮುಖ, ಕಣ್ಣು, ಕಾಲು, ಕೈ, ಮುಗುಳುನಗೆ, ಕಾಂತಿಗಳೇ ಮೊದಲಾದುವುಗಳಿಗೆ ಸೋತುಹೋಗಿರುವ ಶ್ರೇಷ್ಠವಾದ ಕಮಲ, ಕನ್ನೈದಿಲೆ, ನೂತನ ಸೀಮಾವಿನ ಚಿಗುರು, ಪ್ರಕಾಶಿಸುವ ಅಶೋಕ ಚಿಗುರು, ಮಲ್ಲಿಗೆಗಳೆಂಬ ಮನ್ಮಥನ ಪಂಚಬಾಣಗಳು ಅವನ ಬತ್ತಳಿಕೆಯನ್ನು ಸೇರಿ, ವಿಶೇಷ ವಿರೋಧಭಾವವನ್ನುಂಟುಮಾಡುತ್ತ ಆ ಕುಮಾರಿಯ ಪ್ರಾಣವನ್ನೇ ಹರಣಮಾಡಲು

ವ॥ ಅದುಕಾರಣದಿಂ ದಶಮದೆಸೆಗೆ ಪಕ್ಕಾಗದ ಮುನ್ನಂ ತಕ್ಕುದಂ ನೆಗಳಲ್ವೇಳ್ಕು ಮೆಂದು ನುಡಿಯಲೊಡನರಸಂ ಮನೋರಥಕ್ಕನುಗುಣಮಾದ ಮಗಳ ಬಗೆಗೆ ಸಂತಸಂಬಟ್ಟು

ಕಂ॥ ಈ ಕುವರಿಗೆ ಬಗೆವಡೆ ಮ
ತ್ತಾ ಕುವರನೊಳಲ್ಲದೊಲ್ಮೆ ಸಮನಿಕುಮೆ ವಲಂ
ಶ್ರೀ ಕುಮುದಿನಿಗೊದವುಗುಮೆ ಕ
ಲಾಕಾಂತನೊಳಲ್ಲದಾತ್ಮಹರ್ಷೋತ್ಕರ್ಷಂ ೯೭

ವ॥ ಎಂದಿನಿಯಳೊಡನೆ ಸಾದರಂ ಮಿಗೆ ಪೊಗಳ್ದು ಸಿಂಹಳೇಂದ್ರಂ ಸಾಂದ್ರ ಹರ್ಷದಿಂದಿರ್ದು ಮಱುದಿವಸದುದಯಸಮಯದೊಳ್ ಏಕಾಂತಭವನದೊಳ್ ಮಣಿಪೀಠದೊಳ್ಕುಳ್ಳಿರ್ದು ನಿಜಾಮಾತ್ಯನೊಡನೆ ತತ್ಪರಿಣಯಪ್ರಸಂಗಂಗೆಯ್ವುತ್ತಮಿರ್ಪಾಗಳ್ ಪತಿಮೋಹಿ ಮಂತ್ರಿಪಂ ರಾಜಶೇಖರಪ್ರೇಷಿತನಲ್ಲಿಗೇಳ್ತಂದು ನಿಜವಿನಯಮಂ ಮೆಱೆದು ತನ್ನರೇಂದ್ರ ಸನ್ಮಾನಿತನುಚಿತ ವಚನದಿನಿಂತೆಂದಂ

ಕಂ॥ ವರರಾಜಶೇಖರಂಗಾ
ಗಿರಿವರನಿತ್ತಂತೆ ಸರ್ವಮಂಗಳೆಯಂ ಭೂ
ವರರಾಜಶೇಖರಂಗೆಲೆ
ನರೇಂದ್ರ ಕೊಡು ಸರ್ವಮಂಗಳೆಯನನುನಯದಿಂ ೯೮

ಪ್ರಯತ್ನಿಸುತ್ತಿರುವ್ರವು." ವ|| ಆದ್ದರಿಂದ ಆಕೆ ವಿರಹದ ದಶಮಾವಸ್ಥೆಗೆ ಈಡಾಗದ ಮೊದಲು ತಕ್ಕ ವ್ಯವಸ್ಥೆಯನ್ನು ಮಾಡಬೇಕೆಂದು ಆ ಸೌಂದರ್ಯ ಶಾರದೆ ಯೆಂಬ ಸಖಿಯು ಹೇಳಲಾಗಿ, ಅರಸನು ತನ್ನ ಮನೋರಥಕ್ಕೆ ಅನುಗುಣವಾದ ಮಗಳ ಸ್ಥಿತಿಗೆ ಸಂತೋಷಗೊಂಡವನಾಗಿ, ೯೭. "ಈ ಕುವರಿಯಾದ ಸರ್ವಮಂಗಳೆಗೆ ವಿಚಾರಿಸಿ ನೋಡಿದರೆ ಮತ್ತೆ ಆ ರಾಜಶೇಖರ ರಾಜಕುಮಾರನೊಳಲ್ಲದೆ ಒಲುಮೆ ಸಂಭವಿಸಲು ಶಕ್ಯವೇ! ಶೋಭಾಯುಕ್ತ ಕನ್ನೈದಿಲೆಗೆ ಷೋಡಶಕಲಾಪ್ರಪೂರ್ಣನಾದ ಚಂದ್ರನಲ್ಲಲ್ಲದೆ ಅನ್ಯತ್ರ ಹರ್ಷೋತ್ಕರ್ಷವು ಉಂಟಾದೀತೇ!" ವ|| ಹೀಗೆಂದು ತನ್ನ ಹೆಂಡತಿಯೊಡನೆ ಅತ್ಯಾದರದಿಂದ (ರಾಜಶೇಖರನ ಬಗೆಗೆ) ಹೊಗಳಿ, ವಿಶೇಷವಾದ ಹರ್ಷದಿಂದ ಇದ್ದು, ಮರುದಿವಸದ ಉದಯದ ಸಮಯದಲ್ಲಿ ಏಕಾಂತಸ್ಥಳದ ರತ್ನಖಚಿತ ಸಿಂಹಾಸನದ ಮೇಲೆ ಕುಳಿತುಕೊಂಡು ತನ್ನ ಮಂತ್ರಿಯೊಡನೆ ಆ ತನ್ನ ಕುಮಾರಿಯಾದ ಸರ್ವಮಂಗಳೆಯ ವಿವಾಹ ಸಂಬಂಧದ ಪ್ರಸ್ತಾಪವನ್ನು ಮಾಡುತ್ತಿರುವ ಸಮಯದಲ್ಲಿ, ರಾಜಶೇಖರಮಹಾರಾಜನಿಂದ ಕಳುಹಿಸಲ್ಪಟ್ಟ ಪತಿಮೋಹಿಯೆಂಬ ಮಂತ್ರೀಶ್ವರನು ಸಿಂಹಳೇಂದ್ರನಲ್ಲಿಗೆ ಬಂದು, ಅಲ್ಲಿ ತನ್ನ ವಿನಯವನ್ನು ಯಥೋಚಿತವಾಗಿ ವ್ಯಕ್ತಪಡಿಸಿ, ಆ ಮಹಾರಾಜನಿಂದ ಮಾಡಲ್ಪಟ್ಟ ಸನ್ಮಾನವನ್ನು ಸ್ವೀಕರಿಸಿ ತತ್ಕಾಲೋಚಿತವಾದ ಮಾತುಗಳಿಂದ ಹೀಗೆ ಹೇಳಿದನು : ೯೮. "ಶ್ರೇಷ್ಠ ಚಂದ್ರಧರನಾದ ಪರಮೇಶ್ವರನಿಗೆ ಆ ಗಿರಿರಾಜನು ತನ್ನ ಮಗಳಾದ ಸರ್ವಮಂಗಳೆ (ಪಾರ್ವತಿ) ಯನ್ನು ಕೊಟ್ಟಹಾಗೆ, ಭೂಮೀಶ್ವರನಾದ ಈ ರಾಜಶೇಖರಮಹಾರಾಜನಿಗೆ, ಎಲೈ ನರಶ್ರೇಷ್ಠನಾದ ಸಿಂಹಳೇಶ್ವರನೇ ನಿನ್ನ ಕುಮಾರಿ

ಳೇಂದ್ರಂ ಕುಳ್ಳಿರ್ದೀ ಕುಮಾರಂಗೆ ನಿಜಕುಮಾರಿಯಂ ಪರಿಣಯಂಗೆಯ್ಯಲ್ವೇಳ್ಕುಮೆಂದು ನುಡಿವ ಸಮನಂತರದೊಳ್ ಸೌಂದರ್ಯಶಾರದೆಯೆಂಬ ಸರ್ವಮಂಗಳೆಯ ಕೆಳದಿ ಪರಿತಂದಿರ್ವರಡಿದಾವರೆಯಂ ಕುರುಳ್ದುಂಬಿಗಳಿನೋಲಗಿಸಿ ಕರಾರವಿಂದಮಂ ಮುಗಿದು ನೀದು

ಉ॥ ಎಂದು ನರೇಂದ್ರಪುತ್ರನನಭೀಕ್ಷಿಸಿದಳ್ಭವದೀಯ ಪುತ್ರಿಯಂ
ದಿಂದಮನಂಗಬಾಣಹತಿಯಿಂ ಬಗೆಗುಂದಿ ಬಳಲ್ದು ಪಾಡದೇ
ನೊಂದುಮನಾಡದಂಚೆ ಗಿಳಿ ಕೋಗಿಲೆಯಿಂಚರಕಳ್ಕಿ ಬಳ್ಕಿ ಪೂ
ರ್ಣೇಂದುನಿಭಾಸ್ಯೆ ನೊಂದಪಳಿವಳ್ಗೆಸಪ್ಪುಜ್ಜುಗಮೇಂ ಮಹೀಶ್ವರಾ ೯೪

ಕಂ॥ ಅಲರೆಲರಳಿ ಗಿಳಿ ಮಧುವಿಧು
ನಲಿನಂ ಪುಲಿನಂ ಮರಂದಬೃಂದಂ ಕುಂದಂ
ಕಲಗಲ ಕಲಕಲ ಘನವನ
ಮಲೆಗುಂ ಭವದೀಯ ತನುಜೆಯಂ ಮನುಜೇಂದ್ರಾ ೯೫

ಚಂ॥ ತರುಣಿಯ ವಕ್ತ್ರ ನೇತ್ರ ಪದಪಾಣಿ ದರಸ್ಮಿತಕಾಂತಿಗಳ್ಗೆ ಸೋ
ಲ್ತುರುತರ ಕಂಜಕೈರವ ನವಾಮ್ರ ವಿರಾಜದಶೋಕಮಲ್ಲಿಕಾ
ಶರನಿಕರಂ ಕರಂ ಸ್ಮರನಿಷಂಗಮನೆಯ್ದೆ ವಿರೋಧಭಾವ ಸಂ
ಸ್ಮರಣದೆ ತನ್ನಿತಂಬಿನಿಯಸುಂಗೊಳಲುಜ್ಜುಗಿಸಿರ್ಪುದುರ್ವಿಪಾ ೯೬

ಸಿಂಹಳೇಂದ್ರನು ತನ್ನ ಹೆಂಡತಿಯನ್ನು ಕುರಿತು 'ನಮ್ಮ ಮಗಳನ್ನು ಈ ರಾಜಶೇಖರ ಕುಮಾರನಿಗೆ ಲಗ್ನಮಾಡಿಕೊಡಬೇಕು' ಎಂದು ನುಡಿಯುತ್ತಿರುವಷ್ಟರಲ್ಲಿಯೇ ಸೌಂದರ್ಯ ಶಾರದೆ ಎಂಬ ಹೆಸರುಳ್ಳ ಸರ್ವಮಂಗಳೆಯ ಗೆಳತಿಯೋರ್ವಳು ಓಡಿಬಂದು ರಾಜದಂಪತಿಗಳ ಪಾದಕಮಲಗಳಲ್ಲಿ ತನ್ನ ತುಂಬಿಯಂತಿರುವ ಮುಂಗುರುಳನ್ನು ಚಲ್ಲಿ (ನಮಸ್ಕರಿಸಿ), ಕರಕಮಲಗಳನ್ನು ಮುಗಿದು (ಹೀಗೆ) ಬಿನ್ನವಿಸಿಕೊಂಡಳು ೯೪. "ಮಹೀಪಾಲನೇ, ತಮ್ಮ ಕುಮಾರಿಯು ಎಂದು ನರೇಂದ್ರಪುತ್ರನಾತ ರಾಜಶೇಖರಮಹಾರಾಜನನ್ನು ನೋಡಿದಳೋ ಅಂದಿನಿಂದ ಮನ್ಮಥಬಾಣಗಳ ಹೊಡೆತದಿಂದ ಧೈರ್ಯಗುಂದಿ, ಬಳಲಿ, ಹಾಡದೆ, ಏನೊಂದೂ ಮಾತನಾಡದೆ, ಹಂಸ, ಗಿಳಿ, ಕೋಗಿಲೆಗಳ ಮಧುರಧ್ವನಿಗೆ ಹೆದರಿದವಳಾಗಿದ್ದಾಳೆ. ಆ ಪೂರ್ಣಚಂದ್ರಸದೃಶಮುಖಿಯು ನೊಂದುಹೋಗಿದ್ದಾಳೆ. ಇವಳಿಗಾಗಿ ಏನು ಮಾಡಬೇಕು ? ೯೫. ಮನುಜಶ್ರೇಷ್ಠನೇ, ಹೂವು, ಎಳೆಗಾಳಿ, ಭ್ರಮರ, ಗಿಳಿ, ಚಂದ್ರ, ಕಮಲ, ಮಳಲು, ಮಕರಂದ ಸಮೂಹ, ಕುಂದಮಲ್ಲಿಗೆ, ಸವಿಮಾತು, ಅವ್ಯಕ್ತಮಧುರಧ್ವನಿ, ಉದ್ಯಾನ–ಇವು ತಮ್ಮ ಕುಮಾರಿಯನ್ನು ಶ್ರಮಗೊಳಿಸುತ್ತಿವೆ. ೯೬. ಉರ್ವೀಶ್ವರನೇ, ಆ ಸರ್ವಮಂಗಳೆಯ ಮುಖ, ಕಣ್ಣು, ಕಾಲು, ಕೈ, ಮುಗುಳುನಗೆ, ಕಾಂತಿಗಳೇ ಮೊದಲಾದುವುಗಳಿಗೆ ಸೋತುಹೋಗಿರುವ ಶ್ರೇಷ್ಠವಾದ ಕಮಲ, ಕನ್ನೈದಿಲೆ, ನೂತನ ಸೀಮಾವಿನ ಚಿಗುರು, ಪ್ರಕಾಶಿಸುವ ಅಶೋಕ ಚಿಗುರು, ಮಲ್ಲಿಗೆಗಳೆಂಬ ಮನ್ಮಥನ ಪಂಚಬಾಣಗಳು ಅವನ ಬತ್ತಳಿಕೆಯನ್ನು ಸೇರಿ, ವಿಶೇಷ ವಿರೋಧಭಾವವನ್ನುಂಟುಮಾಡುತ್ತ ಆ ಕುಮಾರಿಯ ಪ್ರಾಣವನ್ನೇ ಹರಣಮಾಡಲು

ವ॥ ಅದುಕಾರಣದಿಂ ದಶಮದೆಸೆಗೆ ಪಕ್ಕಾಗದ ಮುನ್ನಂ ತಕ್ಕುದಂ ನೆಗಳಲ್ವೇಳ್ಕು ಮೆಂದು ನುಡಿಯಲೊಡನರಸಂ ಮನೋರಥಕ್ಕನುಗುಣಮಾದ ಮಗಳ ಬಗೆಗೆ ಸಂತಸಂಬಟ್ಟು

ಕಂ॥ ಈ ಕುವರಿಗೆ ಬಗೆವಡೆ ಮ
ತ್ತಾ ಕುವರನೊಳಲ್ಲದೊಲ್ಮೆ ಸಮನಿಕುಮೆ ವಲಂ
ಶ್ರೀ ಕುಮುದಿನಿಗೊದವುಗುಮೆ ಕ
ಲಾಕಾಂತನೊಳಲ್ಲದಾತ್ಮಹರ್ಷೋತ್ಕರ್ಷಂ ೯೭

ವ॥ ಎಂದಿನಿಯಳೊಡನೆ ಸಾದರಂ ಮಿಗೆ ಪೊಗಳ್ದು ಸಿಂಹಳೇಂದ್ರಂ ಸಾಂದ್ರ ಹರ್ಷ ದಿಂದಿರ್ದು ಮಱುದಿವಸದುದಯಸಮಯದೊಳ್ ಏಕಾಂತಭವನದೊಳ್ ಮಣಿಪೀಠ ದೊಳ್ಕುಳ್ಳಿರ್ದು ನಿಜಾಮಾತ್ಯನೊಡನೆ ತತ್ಪರಿಣಯಪ್ರಸಂಗಂಗೆಯ್ವುತ್ತಮಿರ್ಪಾಗಳ್ ಪತಿ ಮೋಹಿ ಮಂತ್ರಿಪಂ ರಾಜಶೇಖರಪ್ರೇಷಿತನಲ್ಲಿಗೆಯ್ತಂದು ನಿಜವಿನಯಮಂ ಮೆಱೆದು ತನ್ನ ರೇಂದ್ರ ಸನ್ಮಾನಿತನುಚಿತ ವಚನದಿನಿಂತೆಂದಂ

ಕಂ॥ ವರರಾಜಶೇಖರಂಗಾ
ಗಿರಿವರನಿತ್ತಂತೆ ಸರ್ವಮಂಗಳೆಯಂ ಭೂ
ವರರಾಜಶೇಖರಂಗೆಲೆ
ನರೇಂದ್ರ ಕೊಡು ಸರ್ವಮಂಗಳೆಯುನನುನಯದಿಂ ೯೮

ಪ್ರಯತ್ನಿಸುತ್ತಿರುವುವು." ವ|| ಆದ್ದರಿಂದ ಆಕೆ ವಿರಹದ ದಶಮಾವಸ್ಥೆಗೆ ಈಡಾಗದ ಮೊದಲು ತಕ್ಕ ವ್ಯವಸ್ಥೆಯನ್ನು ಮಾಡಬೇಕೆಂದು ಆ ಸೌಂದರ್ಯ ಶಾರದೆ ಯೆಂಬ ಸಖಿಯು ಹೇಳಲಾಗಿ, ಅರಸನು ತನ್ನ ಮನೋರಥಕ್ಕೆ ಅನುಗುಣವಾದ ಮಗಳ ಸ್ಥಿತಿಗೆ ಸಂತೋಷ ಗೊಂಡವನಾಗಿ, ೯೭. "ಈ ಕುವರಿಯಾದ ಸರ್ವಮಂಗಳೆಗೆ ವಿಚಾರಿಸಿ ನೋಡಿದರೆ ಮತ್ತೆ ಆ ರಾಜಶೇಖರ ರಾಜಕುಮಾರನೊಳಲ್ಲದೆ ಒಲುಮೆ ಸಂಭವಿಸಲು ಶಕ್ಯವೇ! ಶೋಭಾಯುಕ್ತ ಕನ್ನೈದಿಲೆಗೆ ಷೋಡಶಕಲಾಪ್ರಪೂರ್ಣನಾದ ಚಂದ್ರನಲ್ಲಲ್ಲದೆ ಅನ್ಯತ್ರ ಹರ್ಷೋತ್ಕರ್ಷವು ಉಂಟಾದೀತೇ!" ವ|| ಹೀಗೆಂದು ತನ್ನ ಹೆಂಡತಿಯೊಡನೆ ಅತ್ಯಾದರ ದಿಂದ (ರಾಜಶೇಖರನ ಬಗೆಗೆ) ಹೊಗಳಿ, ವಿಶೇಷವಾದ ಹರ್ಷದಿಂದ ಇದ್ದು, ಮರುದಿವಸದ ಉದಯದ ಸಮಯದಲ್ಲಿ ಏಕಾಂತಸ್ಥಳದ ರತ್ನಖಚಿತ ಸಿಂಹಾಸನದ ಮೇಲೆ ಕುಳಿತು ಕೊಂಡು ತನ್ನ ಮಂತ್ರಿಯೊಡನೆ ಆ ತನ್ನ ಕುಮಾರಿಯಾದ ಸರ್ವಮಂಗಳೆಯ ವಿವಾಹ ಸಂಬಂಧದ ಪ್ರಸ್ತಾಪವನ್ನು ಮಾಡುತ್ತಿರುವ ಸಮಯದಲ್ಲಿ, ರಾಜಶೇಖರಮಹಾರಾಜ ನಿಂದ ಕಳುಹಿಸಲ್ಪಟ್ಟ ಪತಿಮೋಹಿಯೆಂಬ ಮಂತ್ರೀಶ್ವರನು ಸಿಂಹಳೇಂದ್ರ ನಲ್ಲಿಗೆ ಬಂದು, ಅಲ್ಲಿ ತನ್ನ ವಿನಯವನ್ನು ಯಥೋಚಿತವಾಗಿ ವ್ಯಕ್ತಪಡಿಸಿ, ಆ ಮಹಾರಾಜನಿಂದ ಮಾಡ ಲ್ಪಟ್ಟ ಸನ್ಮಾನವನ್ನು ಸ್ವೀಕರಿಸಿ ತತ್ಕಾಲೋಚಿತವಾದ ಮಾತುಗಳಿಂದ ಹೀಗೆ ಹೇಳಿದನು : ೯೮. "ಶ್ರೇಷ್ಠ ಚಂದ್ರಧರನಾದ ಪರಮೇಶ್ವರನಿಗೆ ಆ ಗಿರಿರಾಜನು ತನ್ನ ಮಗಳಾದ ಸರ್ವಮಂಗಳೆ (ಪಾರ್ವತಿ) ಯನ್ನು ಕೊಟ್ಟಹಾಗೆ, ಭೂಮೀಶ್ವರನಾದ ಈ ರಾಜಶೇಖರಮಹಾರಾಜನಿಗೆ, ಎಲೈ ನರಶ್ರೇಷ್ಠನಾದ ಸಿಂಹಳೇಶ್ವರನೇ ನಿನ್ನ ಕುಮಾರಿ

ವ॥ ಎಂದ ಪಾತಿಂಗೆ ಮನೋರಥಂ ಕೈಸಾರ್ದಂತೆ ಸಂತಸಂಬಟ್ಟು ಕೊಟ್ಟೆಂ ಕೊಟ್ಟೆನೆಂದು ಸಿಂಹಳೇಂದ್ರಂ ನುಡಿದು ಮೌಹೂರ್ತಿಕರಂ ಬರಿಸಿ ಶುಭಲಗ್ನಮಂ ಬೆಸಗೊಂಡು ಮಗಳಪರಿಣಯಕ್ಕೆ ತಕ್ಕ ಕಲ್ಯಾಣಮಂಟಪಮಂ ಕೌತುಕಾವಹಮಪ್ಪಂತೆ ಮಯಮಾಂಡವ್ಯರಂ ಪೞಿವ ಶಿಲ್ಪವಿದ್ಯಾವಿಶಾರದರಿಂ ರಚಿಸುತ್ತಿರ್ದನಾಗಳ್ ಪತಿಮೋಹಿ ಮಂತ್ರಿಪನಲ್ಲಿಂದೇಳ್ತಂದು ಕುಮಾರಂಗಱಿಪಿ ತದನುಜ್ಞೆಯಿಂ ಧರ್ಮಾವತಿಗೆಯ್ತಂದು ಸತ್ಯೇಂದ್ರನರೇಂದ್ರಂಗೆ ಪೊಡಮಟ್ಟು ನೆಗಳ್ದ ಕಜ್ಜಮನೆಲ್ಲಮಂ ಬಿನ್ನಪಂಗೆಯ್ದು ಮತ್ತಮಿಂತೆಂದಂ

ಕಂ॥ ಮಣಿಯದ ಸಿಂಹಳಸಗ್ಗದ
ಮಣಿಯಂ ಮಣಿದಿತ್ತುಮಾತ್ಮಭವೆಯೆನಿಸುವ ಪೆ
ಣ್ಮಣಿಯುಂ ನೃಪಕುಳಚೂಡಾ
ಮಣಿ ಯುವರಾಜಂಗೆ ಮದುವೆಯಂ ಮಾಡಿದಪಂ ೯೯

ಉ॥ ಸಿಂಗರದಿಕ್ಕೆ ಮಂಗಳದ ಮೈಸಿರಿ ಜಾಣ್ಮೆಯ ಗೊತ್ತು ಕಾಮಶಾ
ಸ್ತ್ರಂಗಳ ಕೋಶಮಿಂಪಿನ ತವರ್ಮನೆ ಸೈಪಿನ ಸೀಮೆ ಚಿತ್ತಜಾ
ತಂಗಧಿದೇವಿ ಸತ್ಕಳೆಗಳಾಗರಮೇಳ್ಗೆಯಡರ್ಪ ಸಚ್ಚರಿ
ತ್ರಂಗಳ ಬೀಡು ಶೈವಮತದರ್ಪಣಮಾತನ ಪುತ್ರಿ ಭೂವರಾ ೧೦೦

ಯಾದ ಸರ್ವಮಂಗಳೆಯೆಂಬುವಳನ್ನು ಪ್ರೀತಿಯಿಂದ ಕೊಡು." ವ॥ ಹೀಗೆಂದು ಪತಿಮೋಹಿಯು ಹೇಳಿದ ಮಾತಿಗೆ ಸಿಂಹಳೇಂದ್ರನು ಮನೋರಥವು ಕೈಗೂಡಿದಹಾಗೆ ಸಂತೋಷಪಟ್ಟು 'ಕೊಟ್ಟೆಂ ಕೊಟ್ಟೆಂ' ಎಂದು ನುಡಿದು, ಜೋತಿಷಿಯನ್ನು ಬರಮಾಡಿ ಕೊಂಡು ಶುಭಲಗ್ನವನ್ನು ಕೇಳಿ, ಮಗಳ ವಿವಾಹಕ್ಕೆ ಯೋಗ್ಯವಾದ ಕಲ್ಯಾಣಮಂಟಪ ವನ್ನು ನೋಡಿದವರಿಗೆ ಕೌತುಕವಾಗುವ ಹಾಗೆ, ಮಯ ಮತ್ತು ಮಾಂಡವ್ಯರನ್ನು ಕೀಳ್ಮಾಡುವಂತಹ ಶಿಲ್ಪವಿದ್ಯಾನಿಪುಣರಿಂದ ಮಾಡಿಸಿದನು. ಆಗ ಪತಿಮೋಹಿ ಮಂತ್ರೀ ಶ್ವರನು ಅಲ್ಲಿಂದ ಹೊರಟು ರಾಜಶೇಖರನಿಗೆ (ಎಲ್ಲ ವಿಷಯವನ್ನು) ತಿಳಿಸಿ, ಆತನ ಆಜ್ಞೆ ಯನ್ನುಪಡೆದು ಧರ್ಮಾವತಿಗೆ ಬಂದು ಸತ್ಯೇಂದ್ರಮಹಾರಾಜನಿಗೆ ನಮಸ್ಕರಿಸಿ, ನಡೆದ ಕಾರ್ಯವನ್ನೆಲ್ಲ ವಿಜ್ಞಾಪಿಸಿಕೊಂಡು, ಮತ್ತು ಹೀಗೆ ಹೇಳಿದನು. ೯೯. "ಪ್ರಭುವೇ, ವಿಧೇಯ ನಾಗಲೊಪ್ಪದ ಸಿಂಹಳೇಂದ್ರನು ವಿಧೇಯನಾಗಿ ಶ್ರೇಷ್ಠವಾದ ರತ್ನವನ್ನೂ, ಔರಸ ಪುತ್ರಿ ಯಾದ ಸ್ತ್ರೀರತ್ನವನ್ನೂ ಕೊಟ್ಟು, ನೃಪಕುಲಚೂಡಾಮಣಿಯೆನಿಸಿದ ಯುವರಾಜ ರಾಜ ಶೇಖರಮಹಾರಾಜನಿಗೆ ಮದುವೆಯನ್ನು ಮಾಡುವವನಾಗಿದ್ದಾನೆ. ೧೦೦. ಭೂಮಿಾ ಶ್ವರನೇ, ಆ ಸಿಂಹಳೇಂದ್ರನ ಪುತ್ರಿಯಾದ ಸರ್ವಮಂಗಳೆಯು ಶೃಂಗಾರದ ವಾಸಸ್ಥಳ; ಶುಭದ ದೇಹಸೌಂದರ್ಯ; ಜಾಣ್ಮೆನಕ್ಕೆ ನಿಶ್ಚಿತಸ್ಥಾನ; ಕಾಮಶಾಸ್ತ್ರದ ಬೊಕ್ಕಸ; ಮಧುರ ತೆಗೆ ತವರುಮನೆ ; ಪುಣ್ಯದ ಗಡಿಯರೇಖೆ ; ಮನ್ಮಥನ ಅಧಿದೇವತೆ ; ಒಳ್ಳೆಯ ಲಕ್ಷಣ ಗಳಿಗೆ ಮೂಲಸ್ಥಾನ; ಏಳಿಗೆ (ಅಭಿವೃದ್ಧಿ) ಗೆ ಆಧಾರ; ಸಚ್ಚರಿತ್ರೆಯ ನೆಲೆದಾಣ ; ಶಿವ

ವ॥ ಮತ್ತಂ

ಚಂ॥ ನಗೆ ನಡೆ ಮಾಂದ್ಯಮಾಳ್ದಿರೆ ಕುರುಳ್ಕುಡಿನೋಟ ಮರಾಳಭಾವದೊ
ಳ್ಪುಗೆ ಪೊಸಜವ್ವನಂ ಜಘನಮುಂ ತನಿವೆರ್ಚೆ ಕದಂಪು ಕಣ್ಪೊಗ
ರ್ಪೊಗರಿಡೆ ಲಜ್ಜೆಯುಂ ಲಲಿತಲೀಲೆ ಪೊದಳ್ದಿರೆ ಸೊಂಪುದಾಳ್ದು ಮೇ
ಣ್ಪೊಸಗಯಿಸೆ ಮೈಮೊಗಂ ಕುವರಿಗೊಪ್ಪಿದುದುರ್ವಿದ ಯೌವನೋದಯಂ ೧೦೧

ಕಂ॥ ತೊಳಗುವ ನಗೆಮೊಗಮುಜ್ವಳ
ಕಳಶಸ್ತನಮಳಿಚಳಾಳಕಂ ತಳಿರ್ದುಟಿ ಕೋ
ಮಳತನುಲತೆ ಘನಜಘನಂ
ಸೆಳೆನಡು ಕಳಹಂಸಗಮನಮೆಳೆಯಳ್ಗೆಸೆಗುಂ ೧೦೨

ರತಿ ಬಗೆಗೆ ಬರ್ಪಳಾ ಭಾ
ರತಿ ನುಡಿಯಂ ಮಿಾಱಿ ನಡೆಯಳಿಂದಿರೆ ಚತುರ
ಸ್ಥಿತಿಯಂ ಮೈವಳಿಯೊಳ್ಸಂ
ದತಿಶಯಮೆನೆ ನಡೆವಳಾ ಮಹೀಭೃತ್ಸುತೆಯಾ ೧೦೩

ವ॥ ಎಂದವಳ ರೂಪಾತಿಶಯಮುಮಂ ಸತ್ಯೇಂದ್ರನರೇಂದ್ರಂಗೆ ವಿಜ್ಞಾಪನಂಗೆಯ್ದು ತತ್ಪರಿಣಯಕರಣಲಬ್ಧಾಭ್ಯನುಜ್ಞನಾಗಿ ಮಗುಳ್ದು ಕಮಳಾವತಿಗೇಳ್ತಂದು ಸಚಿವೇಂದ್ರಂ ನರೇಂದ್ರಪುತ್ರಂಗೆಲ್ಲಮಂ ಬಿನ್ನಪಂಗೆಯ್ದಾಗಳ್

ಸಂಬಂಧವಾದ ಮತದ ಕನ್ನಡಿ. ವ|| ಮತ್ತು ೧೦೧. ಮಂದಹಾಸ, ಮಂದಗಮನ ಗಳಿಂದ ಕೂಡಿರುವವಳೂ, ಕುರುಳು ಮತ್ತು ಕಡೆಗಣ್ಣ ನೋಟಗಳಿಂದ ಹಂಸದ ರೀತಿ ಯನ್ನು ಹೊಂದಿರುವವಳೂ, ಹೊಸ ಯೌವನ ಹೊಂದಿರುವವಳೂ, ನಿತಂಬಿನಿಯೂ, ಕೆನ್ನೆ ಮತ್ತು ಕಣ್ಣುಗಳು ಪ್ರಕಾಶಮಯವಾಗಿ ಶೋಭೆಗೊಂಡಿರುವವಳೂ, ಲಜ್ಜಾ ಭಾವ (ನಾಚಿಕೆಯ ಸ್ವಭಾವ), ಮಾರ್ದವಗಳಿಂದ ಮನೋಹರವಾಗಿ ಪ್ರಕಾಶಿಸುವವಳೂ ಆಗಿ ದ್ದಾಳೆ. ಕೋಮಲತೆಯಿಂದ ದೇಹ ಮತ್ತು ಮುಖಗಳು ಸೊಗಸುಗೊಂಡಿರಲು ಆ ಕುಮಾರಿಗೆ ಅಧಿಕವಾದ ಯೌವನವು ಉದಯಗೊಂಡು ಶೋಭಿಸುತ್ತಿದ್ದಾಳೆ. ೧೦೨. ಪ್ರಕಾಶಮಾನವಾದ ನಗೆಮುಖ, ಉಜ್ವಲಗೊಂಡ ಕಲಶದೋಪಾದಿಯಲ್ಲಿರುವ ಸ್ತನಗಳು, ದುಂಬಿಯಂತೆ ಕದಲಾಡುತ್ತಿರುವ ಮುಂಗುರುಳು, ತಳಿರಿನಂತಹ ತುಟಿಗಳು, ಕೋಮಲವಾದ ಬಳ್ಳಿ ದೇಹ, ದೊಡ್ಡವಾದ ಕಟಿಪಶ್ಚಾದ್ಭಾಗಗಳು, ತೆಳುವಾದ ನಡು, ಹಂಸದ ನಡಿಗೆ, ಇವು ಆ ಎಳೆಯ ಕನ್ನೆಗೆ ಶೋಭೆಗೊಂಡಿವೆ. ೧೦೩. ಆ ರಾಜಕುಮಾ ರಿಯ ರೂಪಾತಿಶಯಕ್ಕೆ ರತಿಯು ಸಮಾನತೆ ಪಡೆಯುವಳು. ಮಾತಿನಲ್ಲಿ ಸರಸ್ವತಿಯು ಮಿಾರಿ ನಡೆಯುವುದಿಲ್ಲ ; ಚಾತುರ್ಯದ ರೀತಿಯಿಂದ ಲಕ್ಷ್ಮಿಯು ಹೊಂದಿಕೆಯಾಗುವಳು. ಹೀಗೆ ಸೇರಿ (ವಿಶೇಷ ಗುಣಸ್ವಭಾವಗಳಿಂದ) ಅತಿಶಯವೋ ಎನ್ನುವಂತೆ ಆ ಕುಮಾರಿಯ ನಡೆನುಡಿ ಇದೆ." ವ|| ಎಂದು ಆ ಸರ್ವಮಂಗಳೆಯ ರೂಪಾತಿಶಯವನ್ನು ಸತ್ಯೇಂದ್ರ ಚೋಳಮಹಾರಾಜನಿಗೆ ವಿಜ್ಞಾಪಿಸಿಕೊಂಡನು. ಆ ಸರ್ವಮಂಗಳೆ ಮತ್ತು ರಾಜಶೇಖರರ ವಿವಾಹವನ್ನು ನೆರವೇರಿಸುವುದಕ್ಕೆ ಅಪ್ಪಣೆಯನ್ನು ಪಡೆದವನಾಗಿ ತಿರುಗಿ ಕಮಳಾವತಿ

ಕಂ॥ ಪೊಗಸಸಿಗೆ ಸುಪ್ರಸನ್ನತೆ
ನೆಗಳ್ದುದು ಹೃದಯಾಬ್ಜಮಲರ್ದು ಸಾಮೋದತೆಯಂ
ಮಿಗೆ ತಳೆದುದು ಚಿತ್ರಂ ಗಡ
ಬಗೆವೊಡೆ ತನ್ನೃಪಕುಮಾರ ಕುಸುಮಾಯುಧನಾ ೧೮೪

ವ॥ ಮತ್ತಮಾಗಳ್

ಮ॥ಸ್ರ॥ ಶಿವಪಾದಾಂಭೋಜಮಂ ಭಕ್ತಿಯೊಳೆ ಭಜಿಸುತಂ ಶೈವಕಾವ್ಯಂಗಳಂ ಶಾಂ
ಭವಲೀಲಾಸತ್ಕಥಾಸಂತತಿಯನೊಸಗೆಯಿಂ ಕೇಳುತಂ ಭವ್ಯ ವಿದ್ವ
ನ್ನಿವಹಕ್ಕಾನಂದದಿಂದಂ ವಸುವಸನಮಣಿಶ್ರೇಣಿಯಂ ಮಾಣದೀವು
ತ್ತವನಿರ್ದಂ ಭೂರಿ ಭೂಮೀಶ್ವರ ನತಚರಣಾ ಭಾರತೀಭಾಗಧೇಯಂ ೧೮೫

ಪೃಥ್ವಿ॥ ಸುರೇಂದ್ರಪರಿಪೂಜಿತೆ ಸುಗುಣರಾಜಿವಿಭ್ರಾಜಿತೇ
ಕರೀಂದ್ರವದನಾಂಬಿಕೆ ಕಲಿತ ಪದ್ಮಪತ್ರಾಂಬಿಕೇ
ಹರೀಂದ್ರವರವಾಹನೆ ಹರಕೃತೋರುಸಂಮೋಹನೇ
ಗಿರೀಂದ್ರತನುಸಂಭವೆ ಗತಿ ಭವತ್ಪದಂ ಶಾಂಭವೀ ೧೮೬

ನಗರಕ್ಕೆ ಬಂದು ಆ ಸಚಿವಶ್ರೇಷ್ಠನು ರಾಜಶೇಖರಮಹಾರಾಜನಿಗೆ ನಡೆದ ವೃತ್ತಾಂತ ವೆಲ್ಲವನ್ನೂ ವಿಜ್ಞಾಪಿಸಿಕೊಂಡನು. ಆಗ ೧೮೪. ನೃಪಕುಮಾರನೆಂಬ ಆ ಕುಸು ಮಾಯುಧಸದೃಶನಾದ ರಾಜಶೇಖರನ ಮುಖವೆಂಬ ಚಂದ್ರನಿಗೆ ಸುಪ್ರಸನ್ನತೆಯುಂಟಾ ಯಿತು; ಹೃದಯವೆಂಬ ಕಮಲವು ಅರಳಿ ಆನಂದವನ್ನು ಹೊಂದಿತು. ವಿಚಾರಿಸಿದರೆ ಇದು ಚಿತ್ರವಲ್ಲವೆ? (ಏಕೆಂದರೆ–ಚಂದ್ರನಿಗೂ ಕಮಲಕ್ಕೂ ಪರಸ್ಪರ ಶತ್ರುತ್ವವಿದ್ದರೂ ಚಂದ್ರಪ್ರಸನ್ನತೆಯಲ್ಲಿ ಕಮಲದ ವಿಕಾಸವು ಚಿತ್ರವೆಂದು ಭಾವ.) ವ॥ ಮತ್ತು ಆಗ ೧೮೫. ಅನೇಕ ಜನ ರಾಜರುಗಳಿಂದ ನಮಸ್ಕರಿಸಿಕೊಳ್ಳಲ್ಪಡುವ ಚರಣಗಳುಳ್ಳವನೂ, ಸರಸ್ವತಿಯ ಭಾಗ್ಯಸ್ವರೂಪನೂ ಎನಿಸಿದ ಆ ರಾಜಶೇಖರನು ಭಕ್ತಿಯಿಂದ ಶಿವನ ಪಾದ ಕಮಲಗಳನ್ನು ಧ್ಯಾನಿಸುತ್ತ, ಶಿವಸಂಬಂಧವಾದ ಕಾವ್ಯಗಳನ್ನೂ, ಶಿವಲೀಲೆಯ ಒಳ್ಳೆಯ ಕಥೆಗಳ ಸಮೂಹವನ್ನೂ ಉತ್ಸವದಿಂದ ಕೇಳುತ್ತ, ಶ್ರೇಷ್ಠ ವಿದ್ವಾಂಸರ ಸಮೂಹಕ್ಕೆ ಆನಂದ ದಿಂದ ಭೂಮಿ, ವಸ್ತ್ರ, ರತ್ನಾದಿ ಸಮೂಹವನ್ನು ತಪ್ಪದೆ ಕಾಣಿಕೆಯಾಗಿ ಕೊಡುತ್ತ ಇದ್ದನು. ೧೮೬. ಸುರಶ್ರೇಷ್ಠರಾದ ದೇವೇಂದ್ರಾದಿ ವಿಶೇಷವಾಗಿ ಪೂಜೆಗೊಳ್ಳುವವಳೂ, ಸದ್ಗುಣಸಮೂಹದಿಂದ ಪ್ರಕಾಶಿಸುವವಳೂ, ಗಣಪತಿಗೆ ತಾಯಿಯಾಗಿರುವವಳೂ, ಪದ್ಮಪತ್ರದಂತಹ ನೇತ್ರಗಳಿಂದ ಕೂಡಿರುವವಳೂ, ಶ್ರೇಷ್ಠ ಸಿಂಹವಾಹನೆಯೂ, ಶಿವನಲ್ಲಿ ಅಧಿಕವಾದ ಮೋಹವುಳ್ಳವಳೂ ಗಿರಿರಾಜಪುತ್ರಿಯಾಗಿರುವವಳೂ, ಶಾಂಭವಿಯೂ

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣ ಮಹಾಪ್ರಭಾಪಟಲ ಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರ ರುಚಿರಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯ ಕವಿತಾವಿಶಾರದ ಶ್ರೀ ಷಡಕ್ಷರದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳ ಪ್ರಬಂಧದೊಳ್ ಸರ್ವಮಂಗಳ ದರ್ಶನಾ ವರ್ಣನಂ

ಅಂತು ಆಶ್ವಾಸ ೭ಕ್ಕಂ ಪದ ೯೮೮ಕ್ಕಂ ಮಂಗಳ ಮಹಾಶ್ರೀ

**ಸಪ್ತಮಾಶ್ವಾಸಂ**

**ಸಂಪೂರ್ಣಂ**

ಆದ ನಿನ್ನ ಪಾದವೇ ನನಗೆ ಗತಿ. ಗದ್ಯ॥ ಈ ಗದ್ಯ ಪದ್ಯರೂಪದ ಪ್ರಬಂಧವು ವಂದಿಸುತ್ತಿರುವ ದೇವತಾ ಶ್ರೇಷ್ಠರಾದವರುಗಳ ಕಿರೀಟದ ತಟದಲ್ಲಿ ಕೆತ್ತಲ್ಪಟ್ಟ ರತ್ನ ಸಮೂಹದ ಅಧಿಕವಾದ ಪ್ರಭೆಯ ಸಮೂಹದಿಂದ ಬಳಸಿರುವ ಪರಮೇಶ್ವರನ ಶೋಭಾಯುಕ್ತವಾದ ಪಾದಗಳ ಉಗುರುಗಳೆಂಬ ಚಂದ್ರನ ದಟ್ಟವಾದ ಕಾಂತಿಯೆಂಬ ಬೆಳದಿಂಗಳಿಗೆ ಒಪ್ಪುವ ಚಕೋರಪಕ್ಷಿಯಂತಿರುವವನೂ ಶೃಂಗಾರಾದಿ ನವರಸಜ್ಞರಾದ ಜನರಿಂದ ಮನ್ನಣೆ ಹೊಂದಿದವನೂ ಆದ ಉಭಯಭಾಷಾಕವಿತಾವಿಶಾರದ ಶ್ರೀ ಷಡಕ್ಷರದೇವನಿಂದ ರಚಿಸಲ್ಪಟ್ಟದ್ದಾದ ರಾಜಶೇಖರ ವಿಳಾಸವೆಂಬ ವಿಸ್ತಾರವಾದ ಗ್ರಂಥದಲ್ಲಿ ಸರ್ವಮಂಗಳೆಯ ದರ್ಶನ ವರ್ಣನೆ.

**ಸಪ್ತಮಾಶ್ವಾಸ**

**ಮುಗಿದುದು**

# ಅಷ್ಟಮಾಶ್ವಾಸಂ

ಕಂ॥ ಶ್ರೀಮದುಮಾ ಮಧುರಾಧರ
ಸೋಮಕಳಾರಸ ರಸಜ್ಞರಸನಂ ಪ್ರಮಥ
ಸ್ತೋಮಾವೃತ ಕನಕಾಚಳ
ಧಾಮಂ ಕೊಡುಗೆಮಗೆ ಸೌಖ್ಯಮಂ ಶಿವಲಿಂಗಂ ೧

ವ॥ ಆಗಳಿತ್ತಲ್

ಉ॥ ಮುತ್ತಿನತೋರಣಂ ಕನಕವೇದಿಕೆ ಪಚ್ಚೆಯ ಕುಟ್ಟಿಮಸ್ಥಳಂ
ಸುತ್ತಿಡಿದಿರ್ದ ಮಾಣಿಕದ ಲಂಬಣಮಾಲೆ ನವೀನಚೀನದಿಂ
ಬಿತ್ತರವೆತ್ತ ಮೇಲ್ಗುಡಿ ನಿಮಿರ್ಚಿದ ಬಜ್ಜರಗಂಬಮಿಂಬುಗೊಂ
ಡುತ್ತಮನೀಲಪುತ್ರಿಕೆ ವಿರಾಜಿತಮಾಯ್ತು ವಿವಾಹಗೇಹದೊಳ್ ೨

ಚಂ॥ ಬಳಸಿರೆ ಕಟ್ಟೆ ಬಿಟ್ಟ ಪೊಸಮಲ್ಲಿಗೆಮಾಲೆ ಮರಂದಬಿಂದುಗ
ಳ್ತುಳುಕುವಿನಂ ಮಧುವ್ರತವಿತಾನವೊಱಲ್ದೆಱಗಿರ್ದುದಲ್ಲಿ ಸಾ
ಲ್ಗೊಳಿಸಿದ ಮೌಕ್ತಿಕಪ್ರಸರಮಂ ಹರಿನೀಲಮಣಿಪ್ರತಾನದೊ
ಳ್ಕೆಳೆಗೊಳಿಸುತ್ತೆ ತೆತ್ತಿಸಿದವೊಲ್ ಮೆಱೆದಿರ್ದುದು ಮಂಟಪಾಗ್ರದೊಳ್ ೩

೧. ಶೋಭಾವಹಳಾದ ಉಮಾದೇವಿಯ ಮಧುರವಾದ ಅಧರದಲ್ಲಿರುವ ಅಮೃತ ರಸದ ರುಚಿಯನ್ನರಿತ ನಾಲಗೆಯನ್ನುಳ್ಳವನೂ, ಪ್ರಮಥಗಣಗಳೆಂಬ ದೇವತೆಗಳ ಸಮೂಹದಿಂದ ಸುತ್ತುವರಿಯಲ್ಪಟ್ಟವನೂ, ಮೇರುಪರ್ವತವನ್ನೇ ಆವಾಸಸ್ಥಾನವನ್ನಾಗುಳ್ಳವನೂ ಆದ ಶಿವಲಿಂಗನು ನಮಗೆ ಸದಾ ಸೌಖ್ಯವನ್ನು ಕೊಡಲಿ. ವ॥ ಆಗ ಇತ್ತ ಕಡೆಯಲ್ಲಿ (ಸಿಂಹಳನ ಅರಮನೆಯಲ್ಲಿ) ೨. ಮದುವೆಯ ಮಂಟಪವು ಮುತ್ತಿನ ತೋರಣಗಳು, ಬಂಗಾರದ ಹಸೆಯ ಜಗುಲಿ, ಪಚ್ಚೆರತ್ನದಿಂದ ಮಾಡಿದ ನೆಲಗಟ್ಟು, ಸುತ್ತಲೂ ತುಂಬಿದ ಮಾಣಿಕ್ಯದ ಜೋತಾಡುವ ಮಾಲೆಗಳು, ಹೊಸ ರೇಷ್ಮೆಬಟ್ಟೆಯಿಂದ ಮಾಡಿದ ಅಗಲವಾದ ಮೇಲುಗುಡಿ, ರಮ್ಯವಾದ ವಜ್ರದಿಂದ ಮಾಡಿದ ಕಂಬಗಳು, ನೀಲರತ್ನದಿಂದ ಕೆತ್ತಿದ್ದ ಉತ್ತಮವಾದ ಗೊಂಬೆಗಳು—ಇವುಗಳಿಂದ ವಿರಾಜಮಾನವಾಗಿತ್ತು. ೩. ಆ ವಿವಾಹಮಂಟಪದ ಮೇಲುಭಾಗದಲ್ಲಿ ಮಲ್ಲಿಗೆಯ ಹೂಗಳನ್ನು ಸರಗೊಳಿಸಿ ಕಟ್ಟಿ ಸುತ್ತಲೂ ಇಳಿಬಿಡಲಾಗಿತ್ತು. ಅವುಗಳಿಂದ ಮಕರಂದದ ಹನಿಗಳು ತುಳುಕುತ್ತಿದ್ದವು. ಆ ಮಕರಂದಕ್ಕೆ ದುಂಬಿಗಳ ಹಿಂಡು ಎರಗಿ (ಮುತ್ತಿ) ತ್ತು. ಇದು ಸಾಲುಸಾಲಾಗಿ ಕಟ್ಟಿದ ಮುತ್ತಿನ ಸಮೂಹವನ್ನು ಇಂದ್ರನೀಲಮಣಿಗಳ ಸಮೂಹ

ವ॥ ಮತ್ತಂ

ಕಂ॥ ಹರಿನೀಲದ ಭಿತ್ತಿಯೊಳಂ
ಬುರುಹಾನನೆ ಕೂಡೆ ಕುಂಕುಮದ ಕಾರಣೆಯಂ
ವಿರಚಿಸಿದಳರರೆ ಮುಂಗಾರ್
ಸಿರಿ ಸೆಳೆಮಿಂಚಂ ಪಯೋದದೊಳ್ ಪುಟ್ಟಿಪವೊಲ್ ೪

ಚಂ॥ ರಜನಿ ನಭಃಪ್ರದೇಶದೊಳುಡುವ್ರಜಮಂ ರಚಿಪಂತೆ ಸಾರನೀ
ರಜನಿ ಮರಂದಬಿಂದುತತಿಯಂ ದಳದೊಳ್ತಳಿಪಂತೆ ಕಾಂತಮು
ಕ್ತಿಜಮಣಿಬೃಂದಮಂ ಸುರಿದು ನೀಲದ ಪಚ್ಚೆಯ ಕುಟ್ಟಿಮಂಗಳೊ
ಳ್ನಿಜಕರದಿಂದೆ ರಂಗಮನೊಡರ್ಚಿದಳೊರ್ವಳುದಾತ್ತಲೀಲೆಯಿಂ ೫

ವ॥ ಮತ್ತಮದು ಘನಕನಕಮಯಸ್ತಂಭಸಹಸ್ರದಗ್ರದೊಳ್ ನೆಲೆಗೊಳಿಸಿ ಕಟ್ಟಿದ ಪೊಂಬಟ್ಟೆಯ ವಿತಾನದ ಪರಿಸರದೊಳ್ ನಿಱಿವಿಡಿದೆಳಲೆವಿಟ್ಟ ತಳಿರ್ವಟ್ಟೆಯ ಚಿತ್ರಾವಳಿಯ ಮೇಲ್ಕಟ್ಟಿನ ಮುತ್ತಿನ ಲಂಬಣಂಗಳ ತೆತ್ತಿಸಿದ ಕೆಂಬರಲ್ಗಳ ಸಾಲಱಿದು ತೊಡರ್ಚಿದ ಝಲ್ಲಿಗಳ ಕೀಲಿಸಿದ ಪೊನ್ನ ಬಿಂಗಾರಿಗಳ ಸಾಲ್ಗೊಳಿಸಿದ ಮಾಣಿಕದಿಂಡೆಗಳ ಕೀಲ್ಗೊಳಿಸಿ ನಿಮಿರ್ಚಿದ

ದೊಡನೆ ಕೂಡಿಸಿ ಕೆತ್ತಿದಹಾಗೆ ಮೆರೆಯುತ್ತಿತ್ತು. ವ॥ ಮತ್ತು ೪. ಇಂದ್ರನೀಲ ಮಣಿಯಿಂದ ಮಾಡಿದ ಗೋಡೆಯೊಂದರಲ್ಲಿ ಒಬ್ಬ ಕಮಲಮುಖಿಯು ಕುಂಕುಮ ಕೇಸರಿಯಿಂದ ಕಾರಣೆಯ ಗೆರೆಗಳನ್ನು ಮಾಡಿದ್ದಳು. ಅರರೇ ! (ಅದು) ಮುಂಗಾರು ಸಿರಿಯು ಮೋಡಗಳಲ್ಲಿ ಕೋಲುಮಿಂಚನ್ನು ಹುಟ್ಟಿಸಿದ ಹಾಗೆ ವಿರಾಜಮಾನವಾಗಿತ್ತು. ೫. ಓರ್ವ ಸ್ತ್ರೀಯು, ರಾತ್ರಿದೇವತೆಯು ಆಕಾಶದಲ್ಲಿ ನಕ್ಷತ್ರಗಳ ಸಮೂಹವನ್ನು ರಚನೆ ಮಾಡುವಹಾಗೆ, ಸಾರಭೂತವಾದ ಕಮಲಪುಷ್ಪವು ಮಕರಂದದ ಹನಿಗಳ ಸಮೂಹ ವನ್ನು ತನ್ನ ಎಲೆಯಲ್ಲಿ ಹೊಂದಿರುವ ಹಾಗೆ, ಕಾಂತಿಯುಕ್ತವಾದ ಮುತ್ತಿನ ಮಣಿಗಳ ಸಮೂಹವನ್ನು ನೀಲಮಣಿಯ (ಮತ್ತು) ಪಚ್ಚೆರತ್ನಗಳಿಂದ ಮಾಡಿದ ನೆಲಗಟ್ಟಿನಲ್ಲಿ ಸುರಿದು ತನ್ನ ಕೈಗಳಿಂದ ಅಧಿಕ ವಿಲಾಸದಿಂದ ಕೂಡಿ ರಂಗವಲ್ಲಿಗಳನ್ನು ರಚಿಸುತ್ತಿದ್ದಳು. ವ॥ ಮತ್ತು ಆ ವಿವಾಹಮಂಟಪವು ಶ್ರೇಷ್ಠವಾದ ಬಂಗಾರದ ಸಹಸ್ರ ಕಂಬಗಳಿಂದ ಕೂಡಿ ಆ ಕಂಬಗಳ ಮೇಲ್ಭಾಗದಲ್ಲಿ ಕ್ರಮಗೊಳಿಸಿ ಕಟ್ಟಿದ ಬಂಗಾರದ ಜರಿಯ ಬಟ್ಟೆಗಳ ಸಮೂಹದಿಂದ ಕೂಡಿತ್ತು ; ಅದರ ಬದಿಯಲ್ಲಿ ನಿರಿಗೆ ನಿರಿಗೆಗಳಿಂದ ಜೋತುಬಿಟ್ಟ ತಳಿರಿನ ಬಣ್ಣದ ಬಟ್ಟೆಯ ಚಿತ್ರಸಮೂಹದಿಂದಲೂ, ಚಿತ್ರಚಿತ್ರವಾದ ಬಟ್ಟೆಗಳ ಮೇಲುಕಟ್ಟಿ ನಿಂದಲೂ ಕೂಡಿತ್ತು ; ಮುತ್ತಿನ ತೋರಣ, ಕೆತ್ತಿದ ಕೆಂಪುರತ್ನ, ಸಾಲು ಸಾಲಾಗಿ ತೊಡರಿಸಿದ ಝಾಲರಿ, ಅಲ್ಲಲ್ಲಿ ಕೂಡಿಸಿದ ಬಂಗಾರದ ಗಿಂಡಿ, ಸಾಲು ಸಾಲಾಗಿ ಸೇರಿಸಿದ್ದ

ಪಚ್ಚೆಯ ಕುಚ್ಚುಗಳ ತೊಡರ್ಚಿದ ಕುಸುಮಮಾಲಿಕೆಗಳ ನೆಗಳ್ಚಿದ ಚಿತ್ರಪುತ್ರಿಕೆಗಳ ಬಿಗಿದ ಮಣಿದರ್ಪಣಂಗಳ ಗಗನಮಂ ತುಡುಂಕುವ ಪತಾಕೆಗಳ ಮುಗುಳ್ಪಳೆಯಂ ಸುರಿವ ಜಂತ್ರದ ಮುಗಿಲ್ಗಳ ತೆಗೆದು ತರಂಗೊಳಿಸಿದ ಪಂಚವಣ್ಣಿಗೆಯ ಪಟ್ಟೆಯ ಸಿಂಗರಿಸಿದ ಮಕರತೋರಣದ ಸಂಗಳಿಸಿದ ನನೆಯ ಸೂಸಕಂಗಳ ಸಸಿಗಲ್ಲ ನೆಲಗಟ್ಟಿನ ಪೊಸಬಜ್ಜರದ ವೇದಿಕೆಯ ನವನೀಲದ ಭಿತ್ತಿಯ ಪವಳದ ಬಾಗಿಲ್ವಾಡದ ಗೋಮೇಧಿಕ ಕವಾಟದ ಹೇಮಮಯಾರ್ಗಳ ಸ್ತಂಭದ ಸುತ್ತಿ ಕಟ್ಟಿದ ಕನಕಗಂಟೆಯ ಬಿತ್ತರಂಬಡೆದ ಮಾಣಿಕ್ಯಕಲಶದ ವೈಡೂರ್ಯದ ಲೋವೆಯ ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ ತರಂಬಿಡಿದ ರಾಜಪುತ್ರರಿಂ ಮಂತಣಂಬಡೆದ ಮಂತ್ರಿಗಳಿಂ ತಿಂತಿಣಿಗೊಳ್ವ ರಾಜಪುರುಷರಿಂ ಬಣ್ಣಿಪ ಸತ್ಕವೀಂದ್ರರಿಂ ಕಣ್ಣಿಟ್ಟು ಕೌತುಕಂಬಡುವ ಕಳಾವಿದರಿಂ ಎಡೆಯಾಡುವೆಳೆವೆಣ್ಗಳಿಂ ಗುಡಿಗಟ್ಟುವ ಪೌರಜನರಿಂ ಗಳಿಗೆವಟ್ಟಲನಾರೈವ ಜೋಯಿಸರಿಂದೊಳಗೆ ಪಸದನಂಗೊಂಬ ವಿದಗ್ಧೆಯರಿಂ ನೆರಪಿದ ಮಂಗಳ ಸಾಧನಂಗಳಿಂ ಸರಸಗೀತಮಂ ಪಾಡುವ ಗಾಯಕರಿಂ ಮೊಳಗುವ ಮಂಗಳವಱ್ಗಳಿಂ ತೊಳಗುವ ಮಣಿದೀಪಿಕೆ

ಮಾಣಿಕ್ಯದ ಬದುವು, ಒಂದಕ್ಕೊಂದಕ್ಕೆ ಸೇರಿಸಿ ಮಾಡಿದ ಪಚ್ಚೆರತ್ನದ ಗೊಂಡೆ, (ಇವುಗಳಿಂದ ಕೂಡಿತ್ತು.) ಹೂಮಾಲಿಕೆಗಳನ್ನು ತೊಡರಿಸಿತ್ತು ; ಆಶ್ಚರ್ಯಕರವಾದ ಗೊಂಬೆಗಳನ್ನು ಮಾಡಲಾಗಿತ್ತು; ರತ್ನಗಳ ಕನ್ನಡಿಗಳನ್ನು ಬಿಗಿದಿತ್ತು ; ಆಕಾಶವನ್ನು ಮುಟ್ಟುವ ಧ್ವಜಗಳನ್ನು ಕಟ್ಟಿತ್ತು. ಮೊಗ್ಗುಗಳ ಮಳೆಯನ್ನು ಸುರಿಸುವ ಯಂತ್ರದ ಮೋಡಗಳನ್ನು ಮಾಡಲಾಗಿತ್ತು. ಐದು ಬಣ್ಣದ ಹಿಟ್ಟುಗಳಿಂದ ತರತರವಾಗಿ ಪಟ್ಟೆಗಳನ್ನು ತೆಗೆಯಲಾಗಿತ್ತು ; ಮಕರಾಕಾರದ ತೋರಣಗಳನ್ನು ಕಟ್ಟಿ ಸಿಂಗಾರಗೊಳಿಸಲಾಗಿತ್ತು ; ಹೂವುಗಳ ಜಾಳಿಗೆಗಳನ್ನು ಜೋಡಿಸಲಾಗಿತ್ತು ; ಚಂದ್ರಕಾಂತಶಿಲೆಯ ನೆಲಗಟ್ಟು, ಹೊಸ ವಜ್ರದ ಜಗುಲಿ, ನೀಲರತ್ನದ ಗೋಡೆ, ಹವಳದ ಬಾಗಿಲುವಾಡ, ಗೋಮೇಧಿಕ ರತ್ನದ ಕದಗಳು, ಬಂಗಾರಮಯವಾದ ಅಗುಳಿಯ ಕಂಬ, ಸುತ್ತಲೂ ಕಟ್ಟಿದ ಬಂಗಾರದ ಗಂಟೆ, ವಿಸ್ತಾರವಾಗಿರುವ ಮಾಣಿಕ್ಯದ ಕಲಶ, ವೈಡೂರ್ಯದ ಸೂರು, ಹೀಗೆ ಚೆಲುವಿಕೆಯನ್ನು ಪಡೆದಿರುವ ವಿವಾಹಮಂಟಪದ ಮಧ್ಯದಲ್ಲಿ ಪಂಡಿತರು, ಸಾಲುಗೊಂಡ ರಾಜಪುತ್ರರು, ಮಂತ್ರಿಗಳ ಸಮೂಹ, ಒತ್ತೊತ್ತಾಗಿರುವ ರಾಜಪುರುಷರು, ವರ್ಣಿಸುವ ಶ್ರೇಷ್ಠಕವಿಗಳು, ಕಂಡು ಆಶ್ಚರ್ಯಗೊಳ್ಳುವ ಕಲಾವಿದರು, ಸುತ್ತಾಡುವ ಎಳೆವಯಸ್ಸಿನ ನಾರಿಯರು, ಗುಂಪುಗೂಡಿದ ಪೌರಪ್ರಜೆಗಳು, ಗಳಿಗೆಬಟ್ಟಲನ್ನು ನೋಡುತ್ತ ಕೂಡುವ ಜೋತಿಷಿಗಳು (ಇವರುಗಳಿಂದ ಕೂಡಿತ್ತು). ಒಳಭಾಗದಲ್ಲಿ ಪ್ರೌಢೆಯರಾದ ಸ್ತ್ರೀಯರು ಕುಳಿತಿದ್ದರು. ಮಂಗಳಸಾಮಗ್ರಿಗಳನ್ನು ಜೋಡಿಸಿಡಲಾಗಿತ್ತು. ರಸಭರಿತ ಸಂಗೀತ ಹಾಡುವ ಗಾಯಕರಿದ್ದರು. ಮಂಗಳವಾದ್ಯಗಳು ಮೊಳಗುತ್ತಿದ್ದವು. ಪ್ರಕಾಶಿಸುವ ಮಣಿದೀಪಗಳನ್ನು ಇಡಲಾಗಿತ್ತು. ಇದೆಲ್ಲವನ್ನೂ

ಗಳಿಂ ನೋಡಿ ನಲಿವ ಕುಮಾರಿಯರಿಂ ಕೂಡೆ ಸಡಗರಿಪ ವಿಳಾಸಿನಿಯರಿಂ ತೆಱಂಬೊಳೆವ ಕಾಂಡ ಪಟದಿಂ ತುಱುಗಿ ಸುರಿವ ಕರ್ಪೂರರಜದಿಂ ಪರಿಮಳಕ್ಕೆಱಗುವ ಪೞಮೆವಱಿಗಳಿಂ ಪುರುಳಿಗೂಡಿ ಗಳಪುವ ಕೇಳೀಶುಕಂಗಳಿಂ ಕೆದರ್ದ ಕುಸುಮಂಗಳಿಂ ಪದಂಗೊಳಿಸಿದ ಪನ್ನೀರ್ಗೊಡಂಗಳಿಂ ಮುತ್ತಿನ ರಂಗವಲ್ಲಿಗಳಿಂ ಬಿತ್ತರಿಸಿದ ಚಿತ್ರಂಗಳಿಂ ಪೊಱಗೆ ನೇಮಿಸಿದ ನವಿಲುಯ್ಯಲೆಯಿಂ ಕಿಱುವೆಂಡಿರ ಕೇಳಿಗೆ ಸಮೆದ ಮಣಿರಾಟಳದಿಂದೆಸೆಯುವೆತ್ತು ವಸಂತರಾಜನ ವಿಳಾಸಮಂಟಪದಂತೆ ಕುಸುಮಶರನ ಕೇಳೀನಿಳಯದಂತೆ ಕಾಣ್ಬರ ಕಣ್ಗೆ ಕೌತುಕಮನೊದವಿ ನುತಿಪರ ರಸನೆಗತರ್ಕ್ಯ ಮೆನಿಸಿ ವಸುಧೆಗೆ ಬಿಸುವಂದಮನೀವ ಪಸದನಂಬಡೆದ ಪೊಸಪಸುರ್ವಂದರೊಸಗೆ ಮಿಗೆ ಮಿಸುಗು ತ್ತಿರ್ದುದಂತುಮಲ್ಲದೆಯುಂ

ಚಂ॥ ಅದು ಪರಿಶೋಭಿಸಿತ್ತು ಮಧುವಿಂ ವಿಧುವಿಂ ವಧುವಿಂ ಪರಾಗಮಂ
ಕೆದರ್ವ ಲಸತ್ಪ್ರಸೂನಸರದಿಂ ತರದಿಂ ನೆರೆದಿಂಬುಗೊಂಡ ಕೋ
ವಿದಕುಲದಿಂ ನರೇಂದ್ರಸುತರಿಂ ಹಿತರಿಂ ನುತರಿಂ ಕವೀಂದ್ರರಿಂ
ಸದಮಳಶೈವವಿಪ್ರತತಿಯಿಂ ಶ್ರುತಿಯಿಂ ಕ್ರತುವಿಂದೆ ಮಂಟಪಂ ೬

ನೋಡಿ ನಲಿದಾಡುವ ಹೆಣ್ಣು ಹುಡುಗಿಯರಿದ್ದರು. ಅವರೊಡನೆ ಸಡಗರವನ್ನು ವ್ಯಕ್ತ ಪಡಿಸುವ ಮುತ್ತೈದೆಯರಿದ್ದರು. ಅತ್ಯಂತ ಹೊಳೆಯುತ್ತಿರುವ ತೆರೆಯಿತ್ತು. ದಟ್ಟವಾಗಿ ಸುರಿಯುತ್ತಿರುವ ಪಚ್ಚೆಕರ್ಪೂರಧೂಳಿಯಿಂದಲೂ, ಸುಗಂಧಕ್ಕೆ ಮುತ್ತುವ ದುಂಬಿಗಳ ಮರಿಗಳಿಂದಲೂ, ಗುಂಪುಗೂಡಿ ಧ್ವನಿಮಾಡುವ ಸಾಕಿದ ಗಿಳಿಗಳಿಂದಲೂ, ಸುತ್ತಲೂ ಚೆಲ್ಲಿದ್ದ ಹೂವುಗಳಿಂದಲೂ, ಪನ್ನೀರಿನಿಂದ ತುಂಬಿದ ಕೊಡಗಳಿಂದಲೂ, ಮುತ್ತಿನ ರಂಗವಲ್ಲಿಗಳಿಂದಲೂ, ವಿಸ್ತಾರವಾಗಿ ಬರೆದ ಚಿತ್ರಗಳಿಂದಲೂ, ಹೊರಭಾಗದಲ್ಲಿ ನವಿಲಿನಾಕಾರದ ತೂಗುಮಂಚವುಳ್ಳ ಜೋಕಾಲಿಗಳಿಂದಲೂ, ಕಿರಿಯ ವಯಸ್ಸಿನ ಹೆಣ್ಣುಗಳ ಆಟಕ್ಕೆ ಮಾಡಿದ ರತ್ನಮಯ ತಿರುಗುವ ಉಯ್ಯಾಲೆಗಳಿಂದಲೂ ಶೋಭೆ ಗೊಂಡಿರುವ ಆ ವಿವಾಹಮಂಟಪವು, ವಸಂತವೆಂಬ ರಾಜನ ವಿಲಾಸಾರ್ಥವಾಗಿ ಮಾಡಿದ ಮಂಟಪದ ಹಾಗೆ, ಪುಷ್ಪಬಾಣನಾದ ಮನ್ಮಥನ ಕ್ರೀಡಾಭವನದಂತೆ, ನೋಡುವವರ ಕಣ್ಣಿಗೆ ಕೌತುಕವನ್ನುಂಟುಮಾಡಿ, ಸ್ತೋತ್ರಮಾಡಲು ನಾಲಿಗೆಗೆ ಅಸಾಧ್ಯವೆನಿಸಿ, ಭೂಮಂಡಲಕ್ಕೆ ಆಶ್ಚರ್ಯವನ್ನುಂಟುಮಾಡುವಂತೆ ಅಲಂಕಾರವನ್ನು ಪಡೆದಿತ್ತು. ಆ ಹೊಸ ಹಸಿರುವಾಣಿ ಚಪ್ಪರದ ಸಿರಿಯು ಅತ್ಯಧಿಕವಾಗಿ ಪ್ರಕಾಶಿಸುತ್ತಿತ್ತು. ಹಾಗೂ ಅಲ್ಲದೆ, ೬. ಆ ಮಂಟಪವು ಜೇನುತುಪ್ಪದಿಂದಲೂ, ಪಚ್ಚೆಕರ್ಪೂರದಿಂದಲೂ, ಮಧು ವಿನಿಂದಲೂ ಕೂಡಿತ್ತು ; ಪರಾಗವನ್ನು ಸುರಿಸುವ ಶ್ರೇಷ್ಠ ಪುಷ್ಪಸರಗಳಿಂದ ಸಾಲು ಗೊಂಡಿತ್ತು. ಗುಂಪಾಗಿ ಸೇರಿರುವ ತಿಳಿದವರ ಸಮೂಹದಿಂದ ಕೂಡಿತ್ತು. ರಾಜ ಪುತ್ರರಿಂದ, ಹಿತವನ್ನು ಬಯಸುವ ಬಂಧುಗಳಿಂದ, ಹೊಗಳುವವರಿಂದ, ಕವೀಶ್ವರರಿಂದ ಕೂಡಿತ್ತು. ಪರಿಶುದ್ಧರಾದ ಶಿವಾರಾಧಕರಾದ ಬ್ರಾಹ್ಮಣ ಸಮೂಹದಿಂದ, ವೇದ ಮಂತ್ರಘೋಷಣೆಯಿಂದ, ವಿವಾಹಕ್ರಿಯೆಯಿಂದ ಕೂಡಿ ಶೋಭೆಗೊಂಡಿತ್ತು.

ಅರಲಸರಂಗಳಂ ಸವೆವ ಲಾಜೆಯನೋಜೆಯೊಳಾಯ್ವ ಪುಷ್ಪಮಂ
ಜರಿಗೆ ಹಿಮೋದಕಂದಳಿವ ಕಸ್ತುರಿಸಾರಣೆಗೆಯ್ವ ಚಿತ್ರಮಂ
ಬರೆವ ಕದಂಬಮಂ ನೆಗಳ್ವ ನೀವಿಯನೊತ್ತುವ ಪುಷ್ಪಪುತ್ರಿಕಾ
ವಿರಚನೆಗೆಯ್ವ ನೀರೆಯರದೇನೆಸೆದಿರ್ದರೊ ಮಂಟಪಾಗ್ರದೊಳ್ ೭

ವ॥ ಮತ್ತಮಲ್ಲಿ

ಚಂ॥ ಮುಡಿ ಮುಡಿ ತಾಗಿ ಸೊಸೆ ಮುಡಿದುಳ್ಳಲರೆಲ್ಲೆಡೆಯೊಳ್ಚಳಂಚಿ ಪೊಂ
ಗೊಡಮೆರಡೊಂದನೊಂದೊರಸೆ ತದ್ರಜಮೊಕ್ಕುದೆನಿಪ್ಪ ಭಾವಮಂ
ಕುಡೆ ನಿಬಿಡಪ್ರಕಂಪಿತ ಕುಚಚ್ಯುತಕುಂಕುಮರೇಣು ತಮ್ಮ ಕೇ
ಸಡಿಗಳ ಕೆಂಪು ಕೆಂದಳಿರ ಸಾಲಿಡೆ ಸಂಚರಿಪರ್ಲತಾಂಗಿಯರ್ ೮

ವ॥ ಮತ್ತಮಾ ಮಂಟಪಂ ಮಧುಸಮಯದಂತೆವೋಲ್ ಪ್ರಮದಾಳಿ ಸುಮನೋ ಮನೋಜ್ಞಮುಂ ದಿವದಂತನಂತ ಮಣಿಕಿರಣಾಲಂಕೃತಮುಂ ಸಮುದ್ರದಂತೆ ಸದಾ ವಿಭವಾನ್ವಿತಮುಂ

೭. ಆ ಮಂಟಪದ ಮುಂಭಾಗದಲ್ಲಿ ಹೊಸರಗಳನ್ನು ಕಟ್ಟುವ, ಬತ್ತದರಳುಗಳನ್ನು ಕ್ರಮವಾಗಿ ಆಯುತ್ತಿರುವ, ತಣ್ಣೀರನ್ನು ಹೊಗೊಂಚಲುಗಳಿಗೆ ಚಿಮುಕಿಸುವ, ಕಸ್ತೂರಿಯಿಂದ ಸಾರಣೆಮಾಡುವ, ಚಿತ್ರಗಳನ್ನು ಬರೆಯುತ್ತಿರುವ, ಸುಗಂಧ (ಕದಂಬ) ದ್ರವ್ಯವನ್ನು ತಯಾರಿಸುವ, ನಿರಿಗೆಯ ಗಂಟನ್ನು ಜೋಡಿಸಿಕೊಳ್ಳುವ, ಹೂವುಗಳಿಂದ ಗೊಂಬೆಗಳನ್ನು ಮಾಡುವ ಸುಂದರಿಯರು ಅದೇನು ಶೋಭಿಸುತ್ತಿದ್ದರೋ ! ವ॥ ಮತ್ತು ಅಲ್ಲಿ ೮. ಒಬ್ಬರ ಮುಡಿಗಳು ಇನ್ನೊಬ್ಬರ ಮುಡಿಗೆ ತಗುಲಿ ಮುಡಿದ ಪುಷ್ಪಗಳು ಎಲ್ಲ ಕಡೆಗೂ ಚೆಲ್ಲಿದ್ದವು. ಬಂಗಾರದ ಕೊಡಗಳು ಒಂದರೊಡನೊಂದು ತಾಕಲಾಡಿದಾಗ ಆ ಬಂಗಾರದಪುಡಿಯು ಸುರಿಯುತ್ತಿರುವುದೋ ಎಂಬ ರೀತಿಯನ್ನು ಉಂಟುಮಾಡುವ ಅಲುಗುವ ಒತ್ತೊತ್ತಾಗಿರುವ ಮೊಲೆಗಳ ಮೇಲೆ ಹಚ್ಚಿದ ಕುಂಕುಮ ಕೇಸರಿಯ ಧೂಳು ಸುರಿಯುತ್ತಿರಲು, ತಮ್ಮ ಕೆಚ್ಚನೆಯ ಕಾಲುಗಳ ಕೆಂಪು ಕೆಂಪಾದ ತಳಿರು ಸಾಲುಗೊಂಡಿದೆಯೋ ಎಂಬಂತೆ ಕಾಣುತ್ತಿರಲು ಲತಾಂಗಿಯರಾದ ಸ್ತ್ರೀಯರು ಸಂಚಾರಮಾಡುತ್ತಿದ್ದರು. ವ॥ ಮತ್ತು ಆ ವಿವಾಹಮಂಟಪವು ವಸಂತಸಮಯದ ಹಾಗೆ–ಪ್ರೌಢರಾದ ಸ್ತ್ರೀಯರುಗಳ ಸಮೂಹದಿಂದ ಮನೋಹರವಾಗಿತ್ತು ; (ವಸಂತಸಮಯವು) ವಿಶೇಷವಾಗಿ ಮದಿಸಿದ ಅಳಿ (ಪ್ರ+ಮದ+ಅಳಿ) ಗಳಿಂದ ಕೂಡಿರುತ್ತದೆ. ದಿವದಂತೆ–ಅನೇಕವಾದ ರತ್ನಗಳ ಕಿರಣಗಳಿಂದ ಅಲಂಕಾರಗೊಂಡಿತ್ತು ; ದಿವ ಅಂದರೆ ಆಕಾಶವು, ಅನಂತಮಣಿ ಎಂದರೆ ಸೂರ್ಯನ ಕಿರಣಗಳಿಂದ ಅಲಂಕೃತವಾಗಿರುತ್ತದೆ. ಸಮುದ್ರದಂತೆ-ಸಪತ್ನೀಕರಾದ ಗೃಹಸ್ಥರ (ಸದಾರ) ವೈಭವದಿಂದ ಕೂಡಿತ್ತು ; ಸಮುದ್ರವು–

**ಸಂಧ್ಯಾಸಮಯದಂತೆ ಸಭಾನುರಾಗರಂಜಿತಮುಂ ಸತ್ಯಲೋಕದಂತೆ ಸುಧೀರಾಜಾನ್ವಿತಮುಂ ಪುರಂಧರಪುರದಂತೆ ಸದಾ ರಂಭಾನ್ವಿತ ವಿಬುಧಮಿಳಿತಮುಂ ಅಯೋಧ್ಯಾನಗರದಂತೆ ಮಹಾಲಂ ಕಾರಾತಿಶೋಭಿತಮುಂ ತಪೋವನದಂತೆ ಸದರ್ಥವೇದ್ಯುಪಶೋಭಿತಮುಂ ಪಾಂಚಾಲಿಕೋದಂಚಿತ ಮಾಗಿಯುಂ ಕಲಶಜಾತ ಸಮನ್ವಿತಮುಂ ಸದಾಮೋದರಮಣೀವಿಲಸಿತಮಾಗಿಯುಂ ಅಜ**

ಸದಾ ಸೂರ್ಯಪುತ್ರಿಯಾದ ಯಮುನಾನದಿ (ಸದಾ+ರವಿ+ಭವ+ಅನ್ವಿತ) ಯಿಂದ ಕೂಡಿರುತ್ತದೆ. ಸಂಧ್ಯಾಸಮಯದ ಹಾಗೆ–ಸಭ್ಯರಾದವರ ಪ್ರೀತಿವಿಶ್ವಾಸ ಗಳಿಂದ ಕೂಡಿತ್ತು ; ಸಂಧ್ಯಾಸಮಯವು ಸೂರ್ಯಸಂಬಂಧವಾದ ಆರುಣ್ಯವರ್ಣ (ಸ+ಭಾನು+ರಾಗ) ದಿಂದ ಕೂಡಿ ರಂಜಿಸುತ್ತಿರುತ್ತದೆ. ಸತ್ಯಲೋಕದಹಾಗೆ–ಜ್ಞಾನಿ (ಸುಧೀ)ಗಳಿಂದಲೂ, ರಾಜವಂಶೀಯರಾದವರಿಂದಲೂ ಕೂಡಿತ್ತು ; ಸತ್ಯಲೋಕವು (ಅಂದರೆ ಬ್ರಹ್ಮಲೋಕವು) ಜ್ಞಾನಿಯಾದ ಬ್ರಹ್ಮನಿಂದ (ಸುಧೀರ+ಅಜ) ಕೂಡಿರುತ್ತದೆ. ಪುರಂದರಪುರದಂತೆ (ದೇವೇಂದ್ರನ ಅಮರಾವತಿಯಂತೆ) ಸದಾಕಾಲವೂ ಬಾಳೆಯಕಂಬ ದಿಂದಲೂ, ಬ್ರಾಹ್ಮಣರುಗಳಿಂದಲೂ ಕೂಡಿತ್ತು ; ಪುರಂದರಪುರವು–ಸದಾ ರಂಭೆಯೆಂಬ ಅಪ್ಸರಸ್ತ್ರೀಯರಿಂದಲೂ, ದೇವತೆಗಳಿಂದಲೂ ಕೂಡಿರುತ್ತದೆ. ಅಯೋಧ್ಯಾನಗರದ ಹಾಗೆ–ವಿಶೇಷವಾದ ಅಲಂಕಾರದ ಅತಿಶಯ (ಆಧಿಕ್ಯ)ದಿಂದ ಶೋಭಿತವಾಗಿತ್ತು ; ಅಯೋಧ್ಯೆಯು ಶ್ರೇಷ್ಠನಾದ ಲಂಕೆಯ ವೈರಿ (ಲಂಕಾ+ಅರಾತಿ) ಯಾದ ಶ್ರೀರಾಮನಿಂದ ಕೂಡಿರುತ್ತದೆ. ತಪೋವನದ ಹಾಗೆ–ವಿವಾಹಾರ್ಥವಾಗಿ ರಚಿಸಲ್ಪಟ್ಟ ಜಗುಲಿಯಿಂದ ಶೋಭಾಯಮಾನವಾಗಿತ್ತು ; ತಪೋವನವು–ಬ್ರಹ್ಮವಿಷಯ ಕವಾದ (ಸತ್), ಅರ್ಥ(ಅಭಿಪ್ರಾಯ) ವನ್ನು ತಿಳಿಯುವ (ವೇದಿ) ವರಾದ ಮುನೀಶ್ವರರುಗಳಿಂದ ಶೋಭೆಗೊಂಡಿರುತ್ತದೆ. (ಮುಂದೆ ವಿರೋಧಾಭಾಸ)– ಪಾಂಚಾಲಿಕಾ ಎಂದರೆ ದ್ರೌಪದಿಯಿಂದ ಶೋಭಿಸುವಂತಹುದಾಗಿದ್ದರೂ, ದ್ರೋಣಾ ಚಾರ್ಯ (ಕಲಶಜಾತ)ರಿಂದ ಸಮನ್ವಿತವಾಗಿತ್ತು ; (ವಿರೋಧಪರಿಹಾರ)–ಪುತ್ಥಳಿಗಳಿಂದ (ಪಾಂಚಾಲಿಕಾ) ಮಾಡಿದುದು–ಮತ್ತು ಕುಂಭಗಳ ಸಮುದಾಯ(ಕಲಶ+ಜಾತ) ದಿಂದ ಕೂಡಿತ್ತು. (ವಿವಾಹಮಂಟಪ) ದಾಮೋದರ (ವಿಷ್ಣು) ಮತ್ತು ಅವನ ಕೌಸ್ತುಭ ಮಣಿಯಿಂದ ಕೂಡಿರುವ ಕಾರಣ ಪ್ರಕಾಶಿಸುವುದಾದರೂ, ಜಡವಸ್ತುವಿಗೆ (ನೀರಿಗೆ) ಆಶ್ರಯವಾದ ಸಮುದ್ರವಲ್ಲ. (ವಿರೋಧ ಪರಿಹಾರ) ಒಳ್ಳೆಯ ಆಮೋದದಾಯಿಕೆಯ ರಾದ ಹೆಂಗಸರಿಂದ (ಸತ್+ಆಮೋದ+ರಮಣೀ) ಪ್ರಕಾಶಿಸುವುದಾದರೂ, ಜಡರಲ್ಲದ (ಅಜಡ) ಚೇತನಾತ್ಮಕ ಜನರಿಗೆ ಆಶ್ರಯವುಳ್ಳದ್ದಾಗಿ ವಿರಾಜಿಸುವವಂತಹುದು (ವಿವಾಹ ಮಂಟಪ). ಹುಲಿಗೆ(ಚಿತ್ರಕಾಯ) ಆಶ್ರಯವಾದುದಾದರೂ, ಎರಳೆಯು ವಿಶೇಷಗರ್ವದ

ಡಾಶ್ರಯಮುಂ ಚಿತ್ರಕಾಯಾಶ್ರಿತಮಾಗಿಯುಂ ಮೃಗಮದಸಮೃದ್ಧಿಭಾಜನಮುಂ ಪ್ರವಾಲ ದಂಡಮಂಡಿತಮಾಗಿಯುಂ ಅಸಂಜನಾತ್ಮಜಾತಮುಂ ಸಮಧುರ ವಿತತಾಬ್ಜೋಪಲಸಿತಮಾಗಿಯುಂ ಮುಕ್ತಾಳಿವಿತಾನಮುಂ ಶಿವಪ್ರಭಾವಾಶ್ರಿತಮಾಗಿಯುಮತನುವಿಳಾಸಾಸ್ಪದಮೆನಿಸಿರ್ದುದಲ್ಲಿ

ಕಂ॥ ಭಗಣಂ ಬಳಸಿರೆ ಕಿಱುವೆ
ಳ್ಮುಗಿಲೊಪ್ಪುವ ತೆಱದೆ ಸುತ್ತಿ ಮುತ್ತಿನ ಮಣಿಸಾಲ್
ಸೊಗಯಿಸೆ ನಡುವೆಸೆದುದು ಝಗ
ಝಗಿಸುತೆ ಬಜ್ಜರದ ಪಟ್ಟವಣೆ ವೇದಿಕೆಯೊಳ್ ೯

ಹೆಚ್ಚುವಿಕೆಗೆ (ಮೃಗ+ಮದ+ಸಮೃದ್ಧಿ) ಆಶ್ರಯವಾಗಿರುವುದು ; (ವಿರೋಧ ಪರಿಹಾರ) ವಿಚಿತ್ರವಾದ ತೇಜೋವಿಶೇಷ ಶರೀರಿಗಳಿಗೆ (ಚಿತ್ರಕಾಯರಿಗೆ) ಅಂದರೆ ರಾಜರುಗಳಿಗೆ ಆಶ್ರಯವುಳ್ಳದ್ದಾಗಿಯೂ, ಕಸ್ತೂರಿ (ಮೃಗಮದ)ಯ ಹೆಚ್ಚಿಗೆಗೆ ಆಧಾರವಾದುದಾ ಗಿತ್ತು. ಅಂದರೆ ಕಸ್ತೂರಿ ಮೊದಲಾದ ಸುಗಂಧ್ರವ್ಯಭೂಯಿಷ್ಠವಾಗಿತ್ತು. (ವಿವಾಹ ಮಂಟಪ). ದಂಡಾಕಾರವಾದ ಬಾಲ (ಪ್ರಕೃಷ್ಟವಾದ ವಾಲ-ಪ್ರ+ವಾಲ)ದಿಂದ ಅಲಂಕಾರವಾದುದಾಗಿದ್ದರೂ, ಅಂಜನಾದೇವಿಯಿಂದ ಸಂಭೂತನಾದ ಹನುಮಂತನಲ್ಲ; (ವಿರೋಧ ಪರಿಹಾರ)ಹವಳವಿಕಾರವಾದ ದಂಡಗಳಿಂದ ಅಲಂಕಾರಗೊಂಡಿದ್ದರೂ, ತಮೋಗುಣದೂರರಾದ, ಅಂದರೆ ಜ್ಞಾನಿಗಳಾದ ಬ್ರಾಹ್ಮಣರೇ ಮೊದಲಾದವರು ಗಳಿಂದ ಕೂಡಿತ್ತು (ವಿವಾಹಮಂಟಪ). ಮಕರಂದದ ರುಚಿಯಿಂದ ಕೂಡಿದುದೂ ಸೂರ್ಯ ನಿಂದ ವಿಕಸಿತಗೊಳಿಸಲ್ಪಡುವುದೂ ಆದ ಕಮಲ (ಸಮಧು+ರವಿ+ತತ+ಅಬ್ಜ+-ಉಪಲಸಿತ) ದಿಂದ ಶೋಭಾಯಮಾನವಾದುದಾದರೂ, ಅಳಿಗಳ ಸಮೂಹ ವನ್ನು ದೂರೀಕರಿಸಿದುದಾಗಿತ್ತು (ಮುಕ್ತ+ಅಳಿ+ವಿತಾನ); (ವಿರೋಧಪರಿಹಾರ)–ಮನೋಹರವಾದ (ಸಮಧುರ) ವಿಸ್ತಾರ ಪದ್ಮರಾಗಶಿಲೆಯಿಂದ ವಿರಾಜಮಾನ ವಾಗಿಯೂ, ಮುತ್ತುಗಳ ಸಮೂಹದ ಮೇಲುಕಟ್ಟನ್ನುಳ್ಳುದಾಗಿತ್ತು (ವಿವಾಹ ಮಂಟಪ)–ಶಿವನ ಪ್ರಭಾವಕ್ಕೆ ಆಸರೆಯುಳ್ಳದ್ದಾಗಿಯೂ, ಮನ್ಮಥ (ಅತನು)ನ ವಿಲಾಸಕ್ಕೆ ಆಸ್ಪದವೆನಿಸಿತ್ತು ; (ವಿರೋಧ ಪರಿಹಾರ) ಮಂಗಲ (ಮಾಂಗಲ್ಯ)ದ ಪ್ರಭಾವ (ಮಹತ್ವ) ಕ್ಕೆ ಆಶ್ರಯವಾಗಿಯೂ, ವಿಶೇಷವಾದ (ಅತನು) ವಿನೋದಕ್ಕೆ (ವಿಲಾಸ) ಆಸ್ಪದನಾದುದಾಗಿತ್ತು (ವಿವಾಹ ಮಂಟಪ)–ಅಂಥ ವಿವಾಹಮಂಟಪ ದಲ್ಲಿ ೯. ನಕ್ಷತ್ರಗಳ ಸಮೂಹದಿಂದ ಆವರಿಸಿರುವ ಚಿಕ್ಕದಾದ ಶುಭ್ರ ಮೇಘವು ಪ್ರಕಾಶಿಸುವ ರೀತಿಯಲ್ಲಿ, ಸುತ್ತಲೂ ಆವರಿಸಿದ್ದ ಮುತ್ತಿನ ಮಣಿಗಳ ಸಾಲು ಗಳು ಶೋಭಿಸುತ್ತಿರಲು, ಮಧ್ಯದಲ್ಲಿ ವಜ್ರದ ಹಸೆಮಣೆಯು ವೇದಿಕೆಯ ಮೇಲೆ ಝಗ

ವ|| ಅದಱ ಮುಂಗಡೆಯಲ್ಲಿ

ಕಂ|| ಬಳಸಿರೆ ಮೃಣಾಳಗುಣಮು
ಗ್ಗಳಿಸಿರೆ ಮಣಿದರ್ಪಣಂ ಮಹೌಷಧಿಗಳ್ಕಂ
ಗೊಳಿಸಿರೆ ಪಲ್ಲವತತಿ ಸಂ
ಗಳಿಸಿರೆ ಮಣಿಪೂರ್ಣಕುಂಭಮೊಪ್ಪಿದುದದಱೊಳ್ ೧೦

ಚಂ|| ದಧಿ ಜವೆ ದೂರ್ವೆ ಲಾಜೆ ಪೊಸಸಂಕು ಸರೋರುಹತಂತುರೋಚನಂ
ಮಧುಮಣಿಮಾಲೆ ಮಾದಳದಪಣ್ಕದಳೀಫಳಮಿಕ್ಷುಬಾಸಿಗಂ
ಸುಧೆ ಸಿರಿಗಂಪು ಕುಂಕುಮರಸಂ ಕಳಮಾಕ್ಷತೆ ರತ್ನದರ್ಪಣಂ
ವಿಧುಮಣಿ ಪೂರ್ಣಕುಂಭಮೆಸೆದತ್ತು ವಿವಾಹಗೃಹಾಂತರಾಳದೊಳ್ ೧೧

ವ|| ಇಂತನಂತಾನಂತರ್ಗಂ ನುತಿಸಲಸದಳವಾದ ಶೋಭಾವಹ ಶುಭಮಂಟಪಂ ವಧೂವರರ ಬರವಂ ಬಯಸುತಿರ್ದುದಾ ಸಮಯದೊಳ್ ಸಿಂಹಳೇಶ್ವರನ ಬೆಸದಿಂ ಕಳಾವಿದೆಯರಾದ ಕೆಳದಿಯರೆಲ್ಲಂದೊಸಗೆ ಮರುಳ್ಗೊಂಡು ಬಂದು ಸಂದಣಿಸಿ ನಿಂದು

ಝುಗಿಸುತ್ತ ಪ್ರಕಾಶಮಾನವಾಗಿತ್ತು. ವ|| ಆ ಹಸೆಮಣೆಯ ಮುಂಭಾಗದಲ್ಲಿ ೧೦. ತಾವರೆದಂಟಿನ ನಾರಿನಿಂತಿರುವ ದಾರವು ಸುತ್ತುವರಿಯಲ್ಪಟ್ಟಿತ್ತು. ರತ್ನಮಯವಾದ ಕನ್ನಡಿಯು ಪ್ರಶಸ್ತವಾಗಿ ಇತ್ತು. ಮಹೌಷಧಿಗಳು (ದೃಷ್ಟಿದೋಷ, ವಿಷದೋಷಾದಿ ಸಂಭವಿಸಬಹುದಾದ ದೋಷ ಪರಿಹಾರಾರ್ಥವಾಗಿ ಅನೇಕ ರೀತಿಯ ಗಿಡಮೂಲಿಕೆಗಳು ಮತ್ತು ವಿವಾಹಕಾಲದಲ್ಲಿ ಬೇಕಾಗುವ ನವವಿಧ ಧಾನ್ಯಗಳೇ ಮೊದಲಾದ ಔಷಧಿಗಳು) ಕಂಗೊಳಿಸುತ್ತಿದ್ದವು. ಚಿಗುರುಗಳ (ಅತ್ತಿ, ಆಲ, ಬಸರಿ, ಅಶ್ವತ್ಥ, ಮಾವು ಮೊದಲಾದ ಪುಣ್ಯಾಹಕ್ಕೆ ಬೇಕಾದ ಚಿಗುರುಗಳ) ಸಮೂಹವು ಸಿದ್ಧವಾಗಿತ್ತು. ರತ್ನಮಯವಾದ ಜಲಪೂರಿತ ಕುಂಭವು ಅಂದವಾಗಿ ಇತ್ತು. ೧೧. ಆ ವಿವಾಹ ಗೃಹದ ಒಳಭಾಗದಲ್ಲಿ ಮೊಸರು, ಯವಧಾನ್ಯ, ಗರಿಕೆ, ಅರಳು, ಹೊಸಶಂಖ, ಕಮಲದ ಎಳೆ, ಗೋರೋಚನ, ಜೇನುತುಪ್ಪ, ರತ್ನಹಾರ, ಮಾದಳದಹಣ್ಣು (ಮಾತುಲುಂಗ), ಬಾಳೆಹಣ್ಣು, ಕಬ್ಬು, ಬಾಸಿಂಗ, ಸುಣ್ಣ, ಶ್ರೀಗಂಧ, ಕುಂಕುಮಕೇಸರಿಯ ಕೆಸರು, ಭತ್ತದ ಅಕ್ಷತೆಗಳು, ರನ್ನಗನ್ನಡಿ, ಚಂದ್ರಕಾಂತಮಣಿ, ಪೂರ್ಣಕುಂಭ (ನೀರು ತುಂಬಿದ ಕಲಶ) ಇವೇ ಮೊದಲಾದುವು ಶೋಭಿಸುತ್ತಿದ್ದವು. ವ|| ಈ ರೀತಿ ಅನೇಕ ಆದಿಶೇಷರಿಗೂ ವರ್ಣಿಸಲಶಕ್ಯವಾದ ಶೋಭೆಯ ಆ ಮಂಟಪವು ಗಂಡು ಹೆಣ್ಣುಗಳ ಬರುವಿಕೆಯನ್ನೇ ನಿರೀಕ್ಷಿಸುತ್ತಿತ್ತು. ಆ ಸಮಯದಲ್ಲಿ ಸಿಂಹಳೇಶ್ವರನ ಅಪ್ಪಣೆಯ ಪ್ರಕಾರ, ಕಲಾವಿಶಿಷ್ಟೆಯರೆನಿಸಿದ ಗೆಳತಿಯರು ಹೊರಟು ಆ ಉತ್ಸವದ ವೈಭವಕ್ಕೆ ಮೋಹಿತರಾಗಿ,

ಕಂ॥ ಒದವಿದ ಯೌವನರಾಜ್ಯಾ
ಭ್ಯುದಯಕ್ಕಭಿಷೇಕಿಪಂತೆ ಮದನನ ಬೆಸದಿಂ
ಸುದತಿಯರಾ ಯುವತಿಗೆ ಮಾ
ಡಿದರೊಲವಿಂ ಪರಿಮಳಾಂಬುವಿಂ ಮಜ್ಜನಮಂ ೧೨

ವ॥ ಅನಂತರಂ

ಕಂ॥ ಉಗುರ್ಗದಿರಳಕಾಳಿಗೆ ಮ
ಲ್ಲಿಗೆಗುಡೆ ಬಿಡೆ ಬಿದಿರ್ದು ಬಿರ್ಚಿ ಬಿಡದಾರಿಸಿ ಪೋ
ಣ್ಮಗಮಗಿಪ ಮೃಗಮದದ ರೇ
ಣುಗಳಂ ತಳಿದಾಳಿ ಕಟ್ಟಿದರ್ಸೋರ್ಮುಡಿಯಂ ೧೩

ದಿನಲಕ್ಷ್ಮಿಗಿಂದ್ರದಿಗ್ವಧು
ವಿನಯದೆ ಪೊಂಬಿಸಿಲನುಡಿಸಿದಂತಿರೆ ಪದ್ಮಾ
ನನೆಗೆ ಪೆಜಿಳ್ಪೊಂಬಟ್ಟೆಯ
ನನುಗೊಳಿಸಿದಳವಳ ಜಘನಾಚಳದೊಳ್ ೧೪

ಎಳೆನೇಸರ ಕೆಂಬೆಳಗಂ
ತಳೆದಬ್ಜಿನಿಯಂತೆ ಕಾಂತೆ ಕುಂಕುಮದಣ್ಪಂ
ತಳೆದೆಸೆದಳ್ತನುಲತೆಯೊ
ಳ್ತೊಳಗುವ ಪೊಸಪೊನ್ನ ಪುತ್ಥಳಿಯನೇಳಿಸುತಂ ೧೫

ಗುಂಪಾಗಿ ಬಂದು ಸೇರಿದರು. ೧೨. ಮನ್ಮಥನ ಅಪ್ಪಣೆಯಂತೆ ಒದಗಿಬಂದಿರುವ ತಾರುಣ್ಯ ರಾಜ್ಯಾಧಿಪತ್ಯಕ್ಕಾಗಿ ಅಭಿಷೇಕ ಮಾಡುವಂತೆ ಮುತ್ತೈದೆಯರಾದ ಚಲುವೆಯರು ಆ ಸರ್ವಮಂಗಳೆಗೆ ಸುಗಂಧಜಲದಿಂದ (ಮಂಗಳ) ಸ್ನಾನವನ್ನು ಪ್ರೀತಿಯಿಂದ ಮಾಡಿಸಿದರು. ವ॥ ಆಮೇಲೆ ೧೩. ಉಗುರುಗಳ ಕಾಂತಿಯು ಸರ್ವಮಂಗಳೆಯ ಮುಂಗುರುಳುಗಳೆಂಬ ಅಳಿಗಳ ಸಮೂಹಕ್ಕೆ ಮಲ್ಲಿಗೆಯನ್ನು ಕೊಡುತ್ತಿರುವ ಹಾಗೆ ಶೋಭಿಸುತ್ತಿರಲು, ಆ ಸುದತಿಯರು ಅವಳ ಕೂದಲುಗಳನ್ನು ಬಿಚ್ಚಿ ಆರಿಸಿ ಮಗಮಗಿಸುವ ಕಸ್ತೂರಿ ಹುಡಿಯನ್ನು ಹಚ್ಚಿ, ಉದ್ದವಾದ ಮುಡಿಯನ್ನು ಕಟ್ಟಿದರು. ೧೪. ಹಗಲೆಂಬ ಲಕ್ಷ್ಮಿಗೆ ಪೂರ್ವದಿಕ್ಕೆಂಬ ಸ್ತ್ರೀಯು ವಿನಯದಿಂದ ಹೊಂಬಿಸಿಲನ್ನು ಉಡಿಸಿದಂತೆ ಇರಲು, ಆ ಕಮಲಮುಖಿಯಾದ ಸರ್ವಮಂಗಳೆಯ ಜಘನಗಳ ಮೇಲುಭಾಗಕ್ಕೆ ಬಂಗಾರವರ್ಣದ ಪೀತಾಂಬರವನ್ನು ಉಡಿಸಿದರು. ೧೫ ಬಾಲಸೂರ್ಯನ ಕೆಂಪಾದ ಬಿಸಿಲನ್ನು ಹೊಂದಿದ ಕಮಲಿನಿಯ ಹಾಗೆ ಆ ಸರ್ವಮಂಗಳೆಯು ತನ್ನ ಲತೆಯಂತಿರುವ ದೇಹಕ್ಕೆ ಕುಂಕುಮಕೇಸರಿಯ ಕೆಸರನ್ನು ತೊಡೆದುಕೊಂಡು, ಹೊಸ ಬಂಗಾರದ ಪುತ್ಥಳಿಯನ್ನೂ ಕೀಳುಮಾಡುವಂತೆ ಪ್ರಕಾಶಿಸಿದಳು.

ವಿರಹಿಜನದೆರ್ದೆಯ ನೆತ್ತ
ರ್ವೊರೆದಂಗಜನಸುಗೆ ಸರದ ಚೆಲ್ವಂ ತಳೆದ
ತ್ತರರೆ ನವಯಾವಕದ್ರವ
ಪರಿಲಿಪ್ತಂ ಚರಣತಳಮದಬ್ಜಾನನೆಯಾ ೧೬

ಅಡಿಯಿದು ನಳಿನದೆ ಜಯಮಂ
ಪಡೆದುದು ನಡೆಯಿಂದಮಾ ಮರಾಳದ ಮದಮಂ
ತೊಡೆದುದೆನುತಬಳೆ ಬಿರಿದಿನ
ತೊಡರಂ ತೊಡಿಪಂತೆ ತೊಡಿಸಿದಳ್ನೂಪುರಮಂ ೧೭

ಸ್ಮರಕರಿಯ ಶಿರದ ಸಿರಿಯಂ
ಗುರುಜಘನಂ ಕಳ್ದುದೆಂದು ಕಾಪನ ಬೆಸದಿಂ
ತರಳೆ ಮಿಗೆ ಕಟ್ಟಿದಪಳೆನೆ
ಸುರುಚಿರ ಕಟಿಸೂತ್ರಮಂ ತೊಡರ್ಚಿದಳೊರ್ವಳ್ ೧೮

ಇನೆಯನ ಮನೋಮಯೂರಂ
ಬಿನದಿಸುಗೆ ನಿತಂಬಗಿರಿ ನಿತಂಬದೊಳೆನುತಂ
ವನಿತೆ ಸೆಳೆಮಿಂಚನಿಟ್ಟಪ
ಳೆನೆ ಕಾಂಚನಕಾಂಚಿಯಂ ಕರಂ ಕೈಗೆಯ್ದಳ್ ೧೯

೧೬. ಆ ಕಮಲಮುಖಿಯು ನೂತನ ಅರಗಿನರಸವನ್ನು ಕೊಡೆದುಕೊಂಡ ಪಾದ ತಳವು ವಿರಹಿಗಳಾದ ಜನರ ಎದೆಯನೆತ್ತರಿಂದ ಕೂಡಿರುವ ಮನ್ಮಥನ ಅಶೋಕವೆಂಬ ಬಾಣದ ಚೆಲುವನ್ನು ಹೋಂದಿತ್ತು. ೧೭. 'ಈ ಪಾದವು ಕಮಲವನ್ನು ಗೆದ್ದಿತು, ಗಮನದಿಂದ ಹಂಸದ ಗರ್ವವನ್ನು ತೊಡೆದು ಹಾಕಿತು' ಎನ್ನುತ ಬಿರುದಿನ ಬಳೆಯೆಂಬ ಆಭರಣವನ್ನು ತೊಡಿಸುವರೋ ಎನ್ನುವಂತೆ ನೂಪುರವನ್ನು ಓರ್ವಳು ತೊಡಿಸಿದಳು. ೧೮. ಮನ್ಮಥನೇರುವ ಆನೆಯ ಕುಂಭಸ್ಥಳದ ಸೌಂದರ್ಯವನ್ನು ಸರ್ವಮಂಗಳೆಯ ದೊಡ್ಡ ಪೊರವಾರಗಳು ಕದ್ದಿವೆ, ಎಂದು ಆ ಕಾಮನ ಅಪ್ಪಣೆಯಿಂದ ಈ ಕೋಮಲೆಗೆ ಕಟ್ಟು ವಳೋ ಎನ್ನುವ ಹಾಗೆ ಉಡುದಾರವನ್ನು ಒಬ್ಬಳು ಕಟ್ಟಿದಳು. ೧೯. ತನ್ನ ಪ್ರಿಯನ ಮನಸ್ಸೆಂಬ ನವಿಲು ಈ ಸರ್ವಮಂಗಳೆಯ ಜಘನಗಳೆಂಬ ಬೆಟ್ಟದ ತಪ್ಪಲುಪ್ರದೇಶದಲ್ಲಿ ವಿನೋದಪಡಲಿ ಎನ್ನುತ್ತ ಓರ್ವ ಸ್ತ್ರೀಯು ಸೆಳೆಮಿಂಚನ್ನು ಜೋಡಿಸಿದಳೋ ಎನ್ನುವ

ವದನವಿಧುರುಚಿ ಮುಸುಂಕಿದೊ
ಡದಿರದಿರೆಂದಬಳೆ ತುಡಿಪವೋಲೆಳೆವಿಸಿಲಂ
ಸುದತಿಯ ಕುಚಚಕ್ರಕೆ ತೊಡಿ
ಸಿದಳೊಲವಿಂ ಮಿಸುಪ ಮಿಸುನಿರವಕೆಯನೊರ್ವಳ್ ೨೦

ಸ್ತನಕನಕಕಮಳಕಳಿಕೆಗ
ಳನೆ ತಳೆದ ಮೃಣಾಳಮೆನಿಸಿ ತೋರ್ಪವೊಲೊರ್ವ
ಳ್ವನಿತೆಯುರದಲ್ಲಿ ಪೊಸಮು
ತ್ತಿನ ಘನನಕ್ಷತ್ರಮಾಲೆಯಂ ತೆಗೆದಿಟ್ಟಳ್ ೨೧

ವ॥ ಆಗಳ್

ಕಂ॥ ಸ್ತನಗಿರಿಯೊಳುದಯಿಪಂ ಕಾಂ
ತನಖಕ್ಷತ ತರುಣಚಂದ್ರನೆಂದುಡುಗಣಮೊ
ಯ್ಯನೆ ಬಂದು ಮುನ್ನಮಿರ್ದಪು
ದೆನೆ ತಾರಾಹಾರಮಿಂಬುವೆತ್ತುದು ಸತಿಯಾ ೨೨

ಸಂಪಗೆಯ ದುಂಡುದಂಡೆಗ
ಲಂಪಿಂ ಮಲ್ಲಿಗೆಯ ದಂಡೆಯುಂ ಕೆಳೆಗೊಳಿಪಂ
ತಿಂಪಡರೆ ತೋಳ್ಗೆ ಮೌಕ್ತಿಕ
ದಿಂ ಪುದಿದುರುಬಾಹುಪೂರಮಂ ಪದೆದಿತ್ತಳ್ ೨೩

ಹಾಗೆ ಬಂಗಾರದ ಡಾಬನ್ನು ನಡುವಿಗೆ ಚೆನ್ನಾಗಿ ಅಳವಡಿಸಿದಳು. ೨೦. 'ನಿನ್ನ ಮುಖ ವೆಂಬ ಚಂದ್ರನ ಕಿರಣಗಳು ಮುಸುಕುಲಾಗಿ ಅದಿರದೆ ಇರಲಿ' ಎನ್ನುವ ಓರ್ವ ಅಬಲೆಯು ತೊಡಿಸುತ್ತಿರುವಳೋ ಎನ್ನುವ ಹಾಗೆ ಆ ಸರ್ವಮಂಗಳೆಯ ಮೊಲೆಗಳೆಂಬ ಚಕ್ರವಾಕ ಗಳಿಗೆ ಶೋಭಿಸುವ ಬಂಗಾರಜರಿಯ ಕುಪ್ಪಸವನ್ನು ತೊಡಿಸಿದಳು. ೨೧. ಮೊಲೆ ಗಳೆಂಬ ಬಂಗಾರದ ಕಮಲದ ಮೊಗ್ಗುಗಳನ್ನು ಹೊಂದಿದ ಕಮಲದ ದೇಟುಗಳೋ ಎಂಬುವ ಹಾಗೆ ತೋರುವ ಹೊಸಮುತ್ತುಗಳ ಶ್ರೇಷ್ಠ ನಕ್ಷತ್ರಮಾಲಿಕೆಯನ್ನು ಒಬ್ಬ ವನಿತೆಯು ಆ ಸರ್ವಮಂಗಳೆಯ ಎಡೆಗೆ ತಂದಿಟ್ಟಳು. ವ॥ ಆಗ ೨೨. ಮೊಲೆಗಳೆಂಬ ಉದಯಾಚಲದಲ್ಲಿ ಕಾಂತನ ನಖಕ್ಷತ (ಉಗುರಿನ ಗಾಯ) ವೆಂಬ ತರುಣಚಂದ್ರನು ಉದಯಗೊಳ್ಳುವನು, ಎಂದು ಥಟ್ಟನೆ ನಕ್ಷತ್ರಗಳ ಸಮೂಹವು ಮೊದಲೇ ಬಂದು ಸೇರಿರುವುವೋ ಎನ್ನುವಂತೆ ಆ ಸರ್ವಮಂಗಳೆಯ ಎದೆಗೆ ನಕ್ಷತ್ರಮಾಲಿಕೆಯು ಶೋಭೆ ಯನ್ನು ತಂದಿತು. ೨೩. ಸಂಪಗೆಹೂವುಗಳ ದುಂಡುದಂಡೆಗೆ ಪ್ರೀತಿಯಿಂದ ಮಲ್ಲಿಗೆ ಹೂವಿನ ದಂಡೆಯು ಕೂಡುವಹಾಗೆ ಮನೋಹರತೆಯನ್ನುಂಟುಮಾಡುವ ಬಾಹುಗಳಿಗೆ ಮುತ್ತುಗಳನ್ನು ಹುದುಗಿಸಿದ ಶ್ರೇಷ್ಠವಾದ ನಾಗಾಭರಣವನ್ನು ಒಬ್ಬಳು ಪ್ರೀತಿಯಿಂದ

ಇನಕರಮುಡುಗಣಮಂ ಕ
ರ್ಚಿ ನೆಲಕ್ಕಿಳಿತಂದು ನಳಿನಕಿತ್ತಪುದೆನೆ ಕಾ
ಮಿನಿಯ ಕರಾಗ್ರದೊಳಿಡೆ ಕಾಂ
ಚನವಲಯಂ ಮೌಕ್ತಿಕಾನ್ವಿತಂ ಕಂಗೊಳಿಕುಂ ೨೪

ಚೆಂಗುಡಿ ಗುಡಿಯೆಡೆಯೆಡೆಯೊ
ಳ್ಪಿಂಗದೆ ನೆಗೆದೇಱಿ ನಿಂದ ಮಣಿಗಳಿವೆಂಬೊಂ
ದಂಗಮನೊಡರ್ಚಿ ಮಾಣಿಕ
ದುಂಗುರಮಂ ನುಣ್ಬೆರಳ್ಗಳೊಳ್ಕೈಗೆಯ್ದಳ್ ೨೫

ನುತಸುಕರ ಪದ್ಮರಾಗಂ
ಕ್ಷಿತಿಯೊಳ್ ರವಿಯಿಂದೆ ಮೆಱೆವುದುಚಿತಮದೀಗ
ಳ್ನುತ ಸುಕರ ಪದ್ಮರಾಗ
ಸ್ಥಿತಿಯಿಂ ರವಿರಾಗವಾಂಪುದಿದು ಚಿತ್ರತರಂ ೨೬

ಸ್ತನಕನಕಕಂಜಕೋರಕ
ಮನಿಶಂ ವಿಕಸನಮನಾನದಿರ್ಕೆಂದು ಪಳ
ಚ್ಚನೆ ಮೂಡುವಿಂದುವಿಟ್ಟಪ
ಳೆನೆ ಕಟ್ಟಿದಳೈದೆದಾಳಿಯಂ ಪೆಱಳೊರ್ವಳ್ ೨೭

ಇಟ್ಟಳು. ೨೪. ಸೂರ್ಯಕಿರಣಗಳು ನಕ್ಷತ್ರಗಳ ಸಮೂಹವನ್ನು ಕಚ್ಚಿಕೊಂಡು ಬಂದು ನೆಲಕ್ಕೆ ಇಳಿತಂದು ಕಮಲಕ್ಕೆ ಕೊಟ್ಟವೋ ಎನ್ನುವಹಾಗೆ ಆ ಸರ್ವಮಂಗಳೆಯ ಮುಂಗೈಗೆ ಒಬ್ಬಳು ಮುತ್ತುಗಳನ್ನು ಹುದುಗಿಸಿದ ಬಂಗಾರದ ಕಡಗವನ್ನು ಇಡಲಾಗಿ ಅದು ಶೋಭೆಗೊಂಡಿತ್ತು. ೨೫. ಹವಳದ ಕುಡಿಗಳಂತಿರುವ ಬೆರಳುಗಳೆಂಬ ಪ್ರತಿಯೊಂದು ಕುಡಿಯ ಎಡೆಯಲ್ಲಿಯೂ ತಪ್ಪದೆ ಹತ್ತಿನಿಂದ ರತ್ನಗಳೋ ಎಂಬ ಒಂದು ಸೌಂದರ್ಯವನ್ನುಂಟುಮಾಡುತ್ತ ಮಾಣಿಕ್ಯರತ್ನವನ್ನು ಕೆತ್ತಿದ ಉಂಗುರಗಳನ್ನು ಆ ಸರ್ವಮಂಗಳೆಯ ಎಲ್ಲ ನುಣ್ಬೆರಳುಗಳಿಗೂ ಒಬ್ಬಳು ಇಟ್ಟಳು. ೨೬. ನುತವೂ ಸುಂದರಕಾಂತಿಯುಳ್ಳದ್ದೂ ಆದ ಪದ್ಮದರಾಗವು=ವಿಕಾಸವು ರವಿಯಿಂದ ಆಗುವುದೆಂಬುದು ಲೋಕದಲ್ಲಿ ಉಚಿತವಾದದ್ದು. ಆದರೆ ನುತಸುಕರ ಪದ್ಮರಾಗ ಸ್ಥಿತಿಯಿಂ=ಸ್ತುತವಾದ ಸುಂದರ ಕರದಲ್ಲಿ ವಿರಾಜಿಸುವ ಪದ್ಮರಾಗದ ಸ್ಥಿತಿಯಿಂದ, ರವಿರಾಗವಾಂಪುದು=ಸೂರ್ಯನೇ ಅರಳುವುದು-ಸೂರ್ಯನ ಕಾಂತಿಯನ್ನು ಪಡೆಯುವುದು ವಿಚಿತ್ರ. (ಪದ್ಮರಾಗಮಣಿಗಳಿಂದ ಸರ್ವಮಂಗಳೆಯ ಕೈ ಸೂರ್ಯಬಿಂಬದಂತೆ ಪ್ರಕಾಶಿಸಿತು.) ೨೭. ಮೊಲೆಗಳೆಂಬ ಬಂಗಾರದ ಕಮಲದ ಮೊಗ್ಗುಗಳು ಯಾವಾಗಲೂ ಅರಳದೆಯಿರಲಿ ಎಂದು ತಟ್ಟನೆ ಮೂಡುವ ಚಂದ್ರನನ್ನು ಇರಿಸುವಳು ಎಂಬಂತೆ ಮತ್ತೊಬ್ಬಳು ಐದೆದಾಳಿಯನ್ನು ಕಟ್ಟಿದಳು.

ವನಿತೆಯ ಕಣ್ನೈದಿಲ ಸಿರಿ
ಗನುಕೂಲಮಿದೆಂದು ಚಂದ್ರಬಿಂಬದ್ವಯಮಂ
ಮನಸಿಜಜಯರಮೆ ಸಾರ್ಚಿದ
ಳೆನೆ ತೊಡಿಸಿದಳೆಸೆವ ಮುತ್ತಿನೋಲೆಗಳೆರಡಂ ೨೮

ಹಸನರಸವೆಂಬ ಸುಧೆ ತೆರೆ
ಮಸಗೆ ಸಿಡಿಲ್ದದಱ ತೋರಪನಿ ತಳ್ತವೊಲೊ
ರ್ವಸಿಯಳಿಡೆ ಮಿಸುಪ ಮುತ್ತಿನ
ಪೊಸಮೂಕುತಿ ಮೆಱೆದುದಾಸ್ಯದೊಳ್ ಸ್ಮಿತಮುಖಿಯಾ ೨೯

ಸುರರ್ಗೀಯಲಾಗದೆಲೆ ಚಂ
ದಿರಕಲೆಗಳನೆಂದು ಬೇದು ಪೊಡೆಯಳ್ತಲೆಯಿ
ಟ್ಟಿರದೆಱೆವ ಶುಕ್ರನೆನೆ ಭಾ
ಸುರನಾಸಾಮಣಿ ವಿರಾಜಿಸಿತು ಮೊಗಸಸಿಯೊಳ್ ೩೦

ಇಂದೀವರದಸಿತರಜಂ
ಪೊಂದಿದುದೆಲರಲೆಯೆ ತುದಿಯನೆನಿಸುತ್ತೊರ್ವಳ್
ಚಂದಿರವೊಗದೆಳೆಯಳ ನಯ
ನೇಂದೀವರಕಾಗಳೆಚ್ಚಿದಳ್ ಕಜ್ಜಳಮಂ ೩೧

ಮನ್ಮಥನ ವಿವಾಹಪೂರ್ವದಲ್ಲಿ ತಾಂತ್ರಿಕವಾಗಿ 'ಐದೆದಾಳೆ' ಯೆಂಬ ಹೆಸರಿನ ಆಭರಣ ವನ್ನು (ತಂದೆಯ ಮನೆಯವರು ವಧುವಿಗೆ ತೊಡಿಸುವ ಪದ್ಧತಿ ಇದೆ) ೨೮. ವಿಜಯವೆಂಬ ಲಕ್ಷ್ಮಿಯು, ಸರ್ವಮಂಗಳೆಯ ನೇತ್ರಗಳೆಂಬ ನೈದಿಲೆಗಳಿಗೆ ಅನುಕೂಲಕರವಾದುದೆಂದು ಭಾವಿಸಿ, ಎರಡು ಚಂದ್ರಮಂಡಲಗಳನ್ನು ಇರಿಸಿದಳೋ ಎಂಬ ಹಾಗೆ ಅವಳ ಎರಡೂ ಕಿವಿಗಳಿಗೆ ಎರಡು ವಜ್ರದ ಓಲೆಗಳನ್ನು ಮತ್ತೊಬ್ಬಳು ಇರಿಸಿದಳು. ೨೯. ಮುಗುಳು ನಗೆಯೆಂಬ ಅಮೃತರಸದ ತೆರೆಯುಂಟಾಗಲು, ಅದರಿಂದ ಸಿಡಿದ ದಪ್ಪನೆಯ ಹನಿಯೋ ಎಂಬಂತಿರುವ ಮುತ್ತಿನ ಹೊಸದಾದ ಮೂಗುತಿಯನ್ನು ಒಬ್ಬ ಕೃಶಾಂಗಿಯು ಸರ್ವ ಮಂಗಳೆಯ ಮೂಗಿಗೆ ಇಡಲು, ಅದು ಅವಳ ಮುಗುಳ್ನಗೆಯ ಮುಖದಲ್ಲಿ ಪ್ರಕಾಶಮಾನ ವಾಗಿತ್ತು. ೩೦. ಎಲೈ ಚಂದ್ರನೇ. ದೇವತೆಗಳಿಗೆ ನಿನ್ನ ಷೋಡಶಕಲೆಗಳನ್ನು ಕೊಡಲಾಗ ದೆಂದು ಶುಕ್ರಾಚಾರ್ಯನು ಚಂದ್ರನಲ್ಲಿಗೆ ಬಂದು, ಆ ಚಂದ್ರನ ಹೊಟ್ಟೆಯ ಬಳಿ ಶಿರಸ್ಸನ್ನಿಟ್ಟು ಹೇಳುವನೋ ಎನ್ನುವಂತೆ ಆ ಸರ್ವಮಂಗಳೆಯ ಚಂದ್ರನಂತಿರುವ ಮುಖದಲ್ಲಿ ಆ ಮೂಗು ತಿಯು ಶೋಭಿಸುತ್ತಿತ್ತು. ೩೧. ಕನ್ನೈದಿಲೆ ಕಪ್ಪುಧೂಳು ಗಾಳಿಯ ಅಲೆತದಿಂದ ತುದಿಯ ವರೆಗೆ ಬಂದಿರುವುದು, ಎನ್ನುವಹಾಗೆ ಇರಲು ಓರ್ವಳು ಚಂದ್ರಮುಖಿಯಾದ ಎಳೆಯ ಪ್ರಾಯದ ಸರ್ವಮಂಗಳೆಯ ಕಣ್ಣುಗಳೆಂಬ ಕನ್ನೈದಿಲೆಗಳಿಗೆ ಕಾಡಿಗೆಯನ್ನು ಹಚ್ಚಿದಳು.

ಮೊಗಮೆಂಬ ಪೂರ್ಣಚಂದ್ರನೊ
ಳೊಗೆದಳಿಕಾರ್ಧೇಂದು ಪೆತ್ತುದೆನೆ ಸಸಿಗೆರೆಯಂ
ಮಿಗೆಮೆಱೆವ ಭಸಿತತಿಲಕಮ
ನುಗುಗೊರ್ನೆಯಿಂ ತಿರ್ದಿ ರಚಿಸಿದಳ್ ಪೆಱಳೊರ್ವಳ್ ೩೨

ಅಲರ್ದೆಸೆವ ಕರ್ಣಪೂರೋ
ತ್ಪಲದಸಿತರಜಂ ಕಳಲ್ದು ಪಸರಿಸಿತೆನೆ ಕೋ
ಮಲೆಯ ಕದಪಿನೊಳೆ ಬರೆದ
ಳ್ನಲಿನೇಕ್ಷಣೆ ಮಿಸುಪ ಮಕರಿಕಾಪತ್ರಿಕೆಯಂ ೩೩

ವದನೋದಿತೇಂದುವಿನ ಚೆಂ
ಗದಿರಿದಿರೇರ್ವಂತೆ ಸಿಂಧುರಂ ತಳ್ತಿರೆ ತ
ತ್ಸುದತಿಯ ಚಿಕುರತಮಂ ಕೊ
ಟ್ಟುದೆನಲ್ಬಟ್ಟೆಯನದರ್ಕೆ ಬೈತಲೆ ಮೆಱೆಗುಂ ೩೪

ರಜನೀಮುಖವಿಧುವೆನೆ ಧೃತ
ರಜನೀಮುಖವಿಧು ಪೊರ್ದಳ್ದ ಕಾರ್ತಸ್ವರನೀ
ರಜ ಮಧುರತೆದಾಳ್ದಿರೆ ನೀ
ರಜ ಮಧುರತೆಯಳಿನಿ ಪಾಯ್ದುದೆನೆ ಕುರುಳೆಸೆಗುಂ ೩೫

೩೨. ಮುಖವೆಂಬ ಪುರ್ಣಚಂದ್ರನಲ್ಲಿ ವಿರಾಜಿಸುವ ಹಣೆಯೆಂಬ ಅರ್ಧಚಂದ್ರನು ಚಂದ್ರ ಲೇಖೆಯನ್ನು ಹೊರಸೂಸಿದನೋ ಎಂಬಂತೆ ಕಾಣುವ ಭಸ್ಮತಿಲಕವನ್ನು ಇನ್ನೊಬ್ಬಳು ರಾಜಕುಮಾರಿಯ ಹಣೆಯಲ್ಲಿ ಉಗುಗೋರ್ನೆಯಿಂದ ತಿದ್ದಿ ಹಚ್ಚಿದಳು. ೩೩. ಅರಳಿ ಶೋಭಿಸುವ ಕರ್ಣಪೂರವಾಗಿ ಧರಿಸಿದ್ದ ನೀಲೋತ್ಪಲದ ಧೂಳಿಯು ಕದಲಿ ಪ್ರಸಾರಗೊಂಡಿತೋ ಎನ್ನುವಹಾಗೆ ಆ ಕೋಮಲೆಯಾದ ಸರ್ವಮಂಗಳೆಯ ಕೆನ್ನೆಯ ಮೇಲೆ ಕಮಲನೇತ್ರೆಯೊಬ್ಬಳು ಅಂದವಾಗಿರುವ ಮಕರಪತ್ರಿಕೆಯನ್ನು (ಮೊಸಳೆಯ ಆಕಾರದ ಚಿತ್ರವನ್ನು) ಬರೆದಳು. ೩೪. ಮುಖವೆಂಬ ಆಗತಾನೆ ಹುಟ್ಟಿದ ಚಂದ್ರನ ಕೆಂಪಾದ ಕಿರಣಗಳು ಇದಿರು ಏರುತ್ತಿರುವ ರೀತಿಯಲ್ಲಿ ಸಿಂಧೂರವು ಇರಲಾಗಿ, ಆ ಸುದತಿಯ ಮುಂಗುರುಳುಗಳೆಂಬ ಕತ್ತಲೆಯು ಆ ಚಂದ್ರಕಿರಣಕ್ಕೆ ಮಾರ್ಗವನ್ನು ಕೊಟ್ಟಿರುವುದೋ ಎನ್ನುವಹಾಗೆ (ಸಿಂಧೂರ ಹಚ್ಚಿದ) ಬೈತಲೆ ರಂಜಿಸಿತು. ೩೫. ಸಾಯಂಕಾಲಸಮಯದ ಚಂದ್ರನೋ ಎನ್ನುವ ಹಾಗೆ ಕುಂಕುಮವನ್ನು ಧರಿಸಿದ ಆ ಸರ್ವಮಂಗಳೆಯ ಮುಖವೆಂಬ ಚಂದ್ರನು ಪ್ರಸಿದ್ಧವಾದ ಬಂಗಾರದ ಕಮಲದ ಮನೋಹರತೆಯನ್ನು ಹೊಂದಿರಲಾಗಿ (ಕಾರ್ತಸ್ವರ ನೀರಜ ಮಧುರತೆ), ಕಮಲಪುಷ್ಪದ ಮಕರಂದದಲ್ಲಿ (ನೀರಜ ಮಧು) ಆಸಕ್ತಿಯುಳ್ಳ ಹೆಣ್ಣು ದುಂಬಿಯು ಆವರಿಸಿರುವುದೋ ಎನ್ನುವ ಹಾಗೆ ಅವಳ ಕೂದಲುಗಳು ಪ್ರಕಾಶಿಸಿದವು.

ಮ॥ಸ್ರ॥ ದರಹಾಸಜ್ಯೋತ್ಸ್ನೆಯಿಂ ತಳ್ತೆಸೆವ ವದನಪೂರ್ಣೇಂದುವಂ ಸಾರ್ದು ನೀಲಾ
ಬ್ಜರುಹಂಗಳ್ಕಂಗಳಾಕಾರಮಸೆ ಪಡೆದು ಚೆಲ್ವಾದುವೆಂದಲ್ಲಿ ತಾಮುಂ
ಪುರುಡಿಂದಂತಪ್ಪ ಚೆಲ್ವಂ ತಳೆಯಲೆಳಸಿ ಕಾದಿರ್ಪುವೆಂಬಂತೆ ಶೋಭಾ
ಕರಕಾಂತಾಕರ್ಣದೊಳ್ಕಣ್ಗೊಳಿಸಿದುವು ಲಸತ್ಕರ್ಣಪೂರೋತ್ಪಲಂಗಳ್ ೩೭

ಕಂ॥ ಮುಡಿ ನವಿಲ ಸಖ್ಯದಿಂದಂ[1]
ಕುಡಿಮಿಂಚಮರ್ದಪ್ಪಿ ನಿಂದುದೆನೆ ಮೆಱೆವಿನಮಾ
ಮಡದಿಗೆ ಸೂಡಿದಳೊರ್ವಳ್
ಬೆಡಂಗುವಡೆದೆಸೆವ ಸಂಪಗೆಯ ಮಾಲಿಕೆಯಂ ೩೭

ಉ॥ ಕಾರ್ಮುಗಿಲಗ್ರದೊಳ್ ಪೊಳೆವ ಭಾಸ್ಕರಬಿಂಬಮನುನ್ಮಯೂಖಮಾ
ಲೋರ್ಮಿಯನೊರ್ಮೆ ಪೋಲ್ತಿರೆ ಮಣಿವ್ರಜಮಂಡಿತಮೊಂದಿ ತೋಡಿಲಾ
ಸೋರ್ಮುಡಿಯಲ್ಲಿ ನಲ್ಮಿಸುನಿದಂಡೆ ಮೃಗಾಕ್ಷಿಗೆ ತತ್ಸಖೀಜನಂ
ಕೂರ್ಮೆಯೊಳಿಟ್ಟು ಸಿಂಗರಿಸಿ ವೀಕ್ಷಿಸಿ ತಾಳ್ದುದು ರಾಗದೇಳ್ಗೆಯಂ ೩೮

ವ॥ ಆಗಳ್

೩೭. ಆ ಸರ್ವಮಂಗಳೆಯ ಮುಗುಳುನಗೆಯೆಂಬ ಬೆಳದಿಂಗಳಿನಿಂದ ಕೂಡಿ ಶೋಭಿಸುವ ಮುಖವೆಂಬ ಪೂರ್ಣಚಂದ್ರನನ್ನು ನೀಲೋತ್ಪಲಗಳು ಹೊಂದಿ, ಕಣ್ಣುಗಳ ಆಕಾರವನ್ನು ಪಡೆದು ಸುಂದರಗಳಾದುವು, ಎಂಬುದಾಗಿ (ತಿಳಿದು) ತಾವೂ ಕೂಡ ಸ್ಪರ್ಧೆಯಿಂದ ಅಂತಹ ಸೌಂದರ್ಯವನ್ನು ಆ ಮುಖದಲ್ಲಿ ಹೊಂದಲು ಬಯಸಿ ಕಾದುಕೊಂಡ್ಡು ಕುಳಿತಿವೆಯೋ ಎನ್ನುವ ಹಾಗೆ ಕಾಂತಿಗೆ ಆಧಾರಭೂತಳಾದ ಅವಳ ಕಿವಿಯಲ್ಲಿ ಧರಿಸಿದ್ದಂತಹ ಕರ್ಣಪೂರಕಗಳಾದ ಉತ್ಪಲಗಳು ಪ್ರಕಾಶಿಸುತ್ತಿದ್ದವು. ೩೭. ಮುಡಿಯೆಂಬ ನವಿಲಿನ ಸ್ನೇಹದಿಂದ ಅದನ್ನು ಮಿಂಚು ಆಲಿಂಗಿಸಿಕೊಂಡಿದೆಯೋ ಎಂಬಂತೆ ಕಾಣುತ್ತಿರಲು, ಒಬ್ಬಳು ಬೆಡಗಿನ ಸಂಪಿಗೆಯ ಮಾಲೆಯನ್ನು ಅವಳ ಮುಡಿಗೆ ಮುಡಿಸಿದಳು. ೩೮. ರತ್ನಸಮೂಹದಿಂದ ಅಲಂಕೃತವಾದ ಮುಕ್ತಿಮಯ ಬಂಗಾರದ ಜಡೆಬಿಲ್ಲೆಯು ಕಪ್ಪಾದ ಮೋಡಗಳ ಮುಂಭಾಗದಲ್ಲಿ ಹೊಳೆಯುವ ಕಿರಣರಂಜಿತವಾದ ಸೂರ್ಯಬಿಂಬವನ್ನು ಹೋಲುತ್ತ, ಸರ್ವಮಂಗಳೆಯ ಉದ್ದವಾದ ಮುಡಿಯಲ್ಲಿ ಹೊಳೆಯುತ್ತಿತ್ತು. ಆ ಮೃಗನೇತ್ರೆಯ ಸಖೀಜನರು ಆ ಆಭರಣವನ್ನು ಪ್ರೀತಿಯಿಂದ ಇಟ್ಟು ಶೃಂಗಾರಗೊಳಿಸಿ ನೋಡಿ ವಿಶೇಷವಾಗಿ ಸಂತೋಷಗೊಂಡರು. ವ॥ ಆಗ ೩೯. ಆ ಸರ್ವಮಂಗಳೆಯು

---

1. ಟಿಪ್ಪಣಿ :–ಮೇಘದ ಸ್ನೇಹದ ನವಿಲು. ಆದ್ದರಿಂದ ಮೇಘದ ಮಡದಿಯಾದ ಮಿಂಚಿಗೆ ನವಿಲಿನಲ್ಲಿ ಸ್ನೇಹ.

ಚಂ॥ ಅನುದಿನಮಿಕ್ಷುಚಾಪನೆಳೆವೆಂಡಿರ ಪೆರ್ವೊಲೆವೆಟ್ಟನಲ್ಲಿ ನೆ
ಟ್ಟನೆ ನೆಲೆಗೊಂಡು ತನ್ನ ತನುಧರ್ಮಮನೆಲ್ಲಮನೊತ್ತಿ ನಿಷ್ಠೆಯಿಂ
ನೆನೆಯೆ ನಿಜಪ್ರಸನ್ನೆಯೆನಿಸಿರ್ದಧಿದೇವತೆಯಂತೆ ಕಾಂತೆ ಕಾ
ಮಿನಿಯರ ಕಣ್ಗೆ ಕಾಣಿಸಿದಳುಜ್ವಲಭೂಷಣವಾಂತು ಚೆಲ್ವಿನಿಂ ೭೯

ವ॥ ಮತ್ತಂ

ಚಂ॥ ಮಸೆದಲರಂಬನಂಬಕಮರೀಚಿ ವಲಂ ಗೆಲೆ ಪಾರ್ವಣೇಂದುವಂ
ಮಿಸುಪ ಮೊಗಂ ಕರಂ ಪಳಿಯೆ ಪಂಕಜಕೋಶಮನುತ್ಕುಚಂ ವಿಡಂ
ಬಿಸೆ ಗಜಕುಂಭಮಂ ಜಘನಮೇಳಿಸೆ ನುಣ್ದೊಡೆ_ಬಾಳೆಯಂ ಬಳುಂ
ಕಿಸೆ·ತಳಿರಂದಮಂ ತೆಗಳೆ ಮೆಲ್ಲಡಿ ಕನ್ನಿಕೆ ಕಣ್ಗೆ ತೋಱಿದಳ್ ೮೦

ಮ॥ಸ್ರ॥ ಕರಪಂಕೇಜಂಗಳೇಂ ಕಂಕಣದಿನೆಸೆವುದಾಶ್ಚರ್ಯಮೇ ಪಾಣಿಶಾಖೋ
ತ್ಕರಚಂಚದ್ವಿದ್ರುಮೌಘಂ ಮಿಸುಪುದು ಪಿರಿದೇ ರತ್ನಯುಕ್ತೋರ್ಮಿಕಾಬಂ
ಧುರಮಾ ವಕ್ತ್ರೇಂದುಬಿಂಬಂ ಮೆಱೆವುದರಿದೇ ನಕ್ಷತ್ರಮಾಲಾವೃತಂ ತ್ವ
ಚ್ಚರಣಾಬ್ಜಂ ಹಂಸಕಾರಾಜಿತಮೆನಿಪುದೇಂ ಚಿತ್ರಮೇ ಪೇಳ್ಮೃಗಾಕ್ಷೀ[1] ೮೧

ಉಜ್ವಲವಾದ ಆಭರಣಗಳನ್ನು ಧರಿಸಿ ಹೇಗೆ ಕಂಡಳೆಂದರೆ, ಪ್ರತಿದಿನವೂ ಮನ್ಮಥನು ಎಳೆಯ ಹರೆಯದ ಹುಡುಗಿಯರ ಸ್ತನಗಳೆಂಬ ಬೆಟ್ಟಪ್ರದೇಶದಲ್ಲಿ ಸರಿಯಾಗಿ ನೆಲೆಗೊಂಡವನಾಗಿ, ತನ್ನ ದೇಹಶಕ್ತಿಯೆಲ್ಲವನ್ನೂ ವಿನಿಯೋಗಿಸಿ ಏಕನಿಷ್ಠೆಯಿಂದ ಧ್ಯಾನಿಸಿದನು, (ಆಗ ಅವನಿಗೆ) ಪ್ರಸನ್ನಳಾದ ಅಧಿದೇವತೆಯೋ ಎಂಬ ಹಾಗೆ ಆ ಸಖೀಜನರ ಕಣ್ಣುಗಳಿಗೆ ಕಾಣಿಸಿದಳು. ವ॥ ಮತ್ತು ೮೦. ಕಣ್ಣುಗಳ ಪ್ರಕಾಶವು ಮನ್ಮಥನ ಸಾಣೆಹಿಡಿದ (ಮಸೆದ) ಬಾಣಗಳನ್ನು ಗೆಲ್ಲುವಂತಿದ್ದವು ; ಶೋಭಿಸುವ ಮುಖವು ಹುಣ್ಣಿಮೆಯ ಚಂದ್ರನನ್ನು ಗೆಲ್ಲುವಂತಿತ್ತು ; ತೋರ ಮೊಲೆಗಳು ಕಮಲದ ಮೊಗ್ಗನ್ನು ಹಾಸ್ಯ ಮಾಡುವಂತಿದ್ದವು ; ಆನೆಯ ಕುಂಭಸ್ಥಳವನ್ನು ಜಘನಗಳು ಹಾಸ್ಯಮಾಡುವಂತಿದ್ದವು ; ತೊಡೆಗಳು ಬಾಳೆಯ ಮರವನ್ನು ಬಳುಕಿಸುವಂತಿದ್ದವು ; ಮೃದುವಾದ ಪಾದಗಳು ಚಿಗುರುಗಳನ್ನು ತಿರಸ್ಕರಿಸುವಂತಿದ್ದವು ಎಂಬಂತೆ ಸರ್ವಮಂಗಳೆ ಕಣ್ಣಿಗೆ ಕಂಡಳು. ೮೧. "ನಿನ್ನ ಕರಕಮಲಗಳು ಕೈಬಳೆಯಿಂದ_ಜಲಕಣದಿಂದ ಶೋಭಿಸುವುದು ಅಚ್ಚರಿಯಲ್ಲ. ನಿನ್ನ ಕೈಬೆರಳುಗಳೆಂಬ ಹವಳದ ರಾಶಿಯು ರತ್ನಯುಕ್ತವಾದ ಉಂಗುರದಿಂದ_ಅಲೆಗಳಿಂದ ಸುಂದರವಾಗಿರುವುದು ಆಶ್ಚರ್ಯವಲ್ಲ. ಮುಖವೆಂಬ ಚಂದ್ರಮಂಡಲವು (ಇಪ್ಪತ್ತೇಳು ಮುತ್ತುಗಳಿಂದ ರಚಿತವಾದ) ನಕ್ಷತ್ರಮಾಲೆಯಿಂದ_ನಕ್ಷತ್ರಸಮೂಹದಿಂದ, ಹಾಗೆಯೇ ಪಾದಕಮಲವು ಕಾಲ್ಗಡಗದಿಂದ_ಹಂಸಗಳಿಂದ ವಿರಾಜಿಸುವುದು ವಿಸ್ಮಯಕರವೆ? ಹೇಳು,

---

1. ಟಿಪ್ಪಣಿ :– ಕಂಕಣ = ಕೈಬಳೆ, ಜಲಕಣ. ಊರ್ಮಿಕ = ಉಂಗುರ, ಅಲೆ. ನಕ್ಷತ್ರಮಾಲಾ = ಇಪ್ಪತ್ತೇಳು ಮುತ್ತುಗಳಿರುವ ಹಾರ, ನಕ್ಷತ್ರ ಸಮೂಹ,

ವ॥ ಎಂದು ಕಳಾರವೆ ಪೊಗಳುತ್ತವಿರೆ ಮತ್ತೊರ್ವಳ್ ಮುಕುರಮುಖಿ ಸಖೀ ಮುಖೇಂದುಗಿಂದುಬಿಂಬಮಂ ಸರಿಯಿಟ್ಟು ಪರೀಕ್ಷಿಪಳೆನೆ ಮಣಿಮುಕುರಮನೆತ್ತಿ ಪಿಡಿಯಲೊಡನೆ

ಕಂ॥ ಒಳಕೈದುದವಳ ಮುಖಮಂ
ಜಳ ವಿಧುಮಂಡಳಮನಮಳಮಣಿಮುಕುರಮಿಳಾ
ತಳದೊಳ್ ಪೆರರಿರ್ದಿರವಂ
ತಿಳುಪುವ ವಿಮಳರ್ಗಧೀನವಾಗದರೊಳರೇ ೪೨

ವ॥ ಇಂತುಮಾ ಸರ್ವಮಂಗಳಾಮಹಾದೇವಿ ಪಸದನಂಬಡೆದು ಸಖೀಜನಮಧ್ಯದೊಳ್ ಸಂಭ್ರಮದಿನಿರ್ಪನಮಿತ್ತಲ್

ಉ॥ ಸನ್ನುತಿವೆತ್ತ ತನ್ನೃಪಸುತಂಗೆ ವಿಳಾಸಿನಿಯರ್ ವಿಳಾಸದಿಂ
ದನ್ನವಗಂಧತೈಲಮನೆ ಪೂಸಿ ಕಚೌಘಕೆ ಸಂರ್ಚಿ ನಲ್ಮೆಯಿಂ
ರನ್ನದ ಪೀಠಮಂ ಮೊಳಗೆ ವಾದ್ಯರವಂ ವಿವಿಧೋತ್ಸವಂಗಳಿಂ
ಪನ್ನಗವೇಣಿಯರ್ಸುರಿದು ಸೂಸಿದರೊಲ್ದು ಸುಗಂಧವಾರಿಯಂ ೪೩

ಕಂ॥ ತರುಣ ಸುರತರುಗೆ ಸುರಿವಂ
ತಿರೆ ಸುರತರುಣಿಯರಮರ್ತ್ಯನದಿಯುದಕಮನಾ
ತರುಣಿಯರರಸಂಗೊಳ್ಗ
ರ್ಪ್ಪೂರವೆರೆದಮಳಾಂಬುವಿಂದೆ ಜಳಕಂಗೆಯ್ದರ್ ೪೪

ಮೃಗಾಕ್ಷಿ." ವ|| ಹೀಗೆಂದು ಕಳಾರವೆಯೆಂಬ ಸಖಿಯು ಹೊಗಳುತ್ತಿರಲಾಗಿ, ಮುಕುರ ಮುಖಿಯೆಂಬ ಮತ್ತೊಬ್ಬಳು ಸಖಿಯಾದ ಸರ್ವಮಂಗಳೆಯ ಮುಖಚಂದ್ರನಿಗೆ ಚಂದ್ರ ಮಂಡಲವನ್ನು ಹೋಲಿಸಿ ಪರೀಕ್ಷಿಸುತ್ತಿರುವಳೋ ಎನ್ನುವ ಹಾಗೆ ರನ್ನಗನ್ನಡಿಯನ್ನು ಮುಖಕ್ಕೆ ಸರಿಯಾಗಿ ಎತ್ತಿ ಹಿಡಿದ ಕೂಡಲೆ, ೪೨. ಆ ಶ್ರೇಷ್ಠವಾದ ರತ್ನದ ಕನ್ನಡಿಯು ಆ ಸರ್ವಮಂಗಳೆಯ ಮುಖಮಂಡಳವೆಂಬ ಚಂದ್ರಮಂಡಲವನ್ನು ತನ್ನೊಳಗೆ ಮಾಡಿ ಕೊಂಡಿತು. ಈ ಭೂಮಂಡಲದಲ್ಲಿ ಇನ್ನೊಬ್ಬರು ಇರುವಂಥ ರೀತಿಯನ್ನು ತಿಳಿಸುವ ಪರಿಶುದ್ಧರಿಗೆ ಅಧೀನವಾಗದಿರುವವರು ಉಂಟೆ ? ವ|| ಈ ರೀತಿ ಆ ಸರ್ವಮಂಗಳಾ ದೇವಿಯು ಅಲಂಕಾರಗೊಂಡು ಸಖೀಜನರುಗಳ ಮಧ್ಯದಲ್ಲಿ ಸಡಗರದಿಂದ ಇರುತ್ತಿರುವಾಗ, ಇತ್ತ ಕಡೆಗೆ, ೪೩. ವಿಖ್ಯಾತನಾದ ಆ ಸತ್ಯೇಂದ್ರಮಹಾರಾಜನ ಸುತನಾದ ರಾಜ ಶೇಖರನಿಗೆ ಆ ವಿಲಾಸಿನಿಯರಾದ ಸಖೀಜನರುಗಳು ಪ್ರೀತಿಯಿಂದ ರತ್ನಮಣಿ ಚೌಕದ ಮೇಲೆ ಕುಳ್ಳಿರಿಸಿ, ಅವನ ತಲೆಯ ಕೂದಲುಗಳಿಗೆ ನೂತನವಾದ ಸುಗಂಧಪೂರಿತ ಎಣ್ಣೆಯನ್ನು ಹಚ್ಚಿದರು. ವಾದ್ಯಧ್ವನಿಯು ಮೊಳಗುತ್ತಿತ್ತು. ವಿವಿಧ ವೈಭವಗಳಿಂದ ಪನ್ನಗವೇಣಿಯರಾದ ಮುತ್ತೈದೆಯರು ಪರಿಮಳೋದಕವನ್ನು ತುಂಬಿ ತುಂಬಿ ಪ್ರೀತಿ ಯಿಂದ ಸುರಿದು ಮಂಗಳಸ್ನಾನ ಮಾಡಿಸಿದರು. ೪೪. ಎಳೆಯದಾದ ಕಲ್ಪವೃಕ್ಷಕ್ಕೆ ದೇವಗಂಗಾನದಿಯ ನೀರನ್ನು ದೇವಲೋಕದ ಸ್ತ್ರೀಯರುಗಳು ಸುರಿಯುವ ರೀತಿಯಲ್ಲಿರಲು, ಆ ತರುಣಿಯರು ರಾಜಶೇಖರಮಹಾರಾಜನಿಗೆ ಶ್ರೇಷ್ಠ ಕರ್ಪೂರಮಿಶ್ರವಾದ ನೀರಿನಿಂದ

ವ॥ ಅನಂತರಂ

ಕಂ॥ ಸಿಂಗರಿಸಿದನಖಿಳಕಳಾ
ಸಂಗತನಲರ್ವಿಲ್ಲನಂಗಮಂ ಸಿಂಗರಿಪಂ
ತಿಂಗದಿರಂ ಸಾಂಗ ಮನೋ
ಜಂಗೆಣೆಯೆನೆ ಮಿಸುಪ ಕುವರನಂ ಸಖನೊರ್ವಂ ೪೫

ವ॥ ಮತ್ತಮಾಗಳ್

ಮ॥ಸ್ರ॥ ವರಿಸಲ್ ಶ್ರೀಕಾಂತೆ ತಾಂ ತಂದಿಳಿಪಿದ ವಿಳಸನ್ಮಲ್ಲಿಕಾಮಾಲ್ಯಮೆಂಬಂ
ತಿರೆ ಹಾರಂ ವಕ್ಷದೊಳ್ ಪಂಕಜಕೆ ಬಳಸಿನಿಂದಂಚೆಯುಂಡಂಗಳೆಂಬಂ
ತಿರೆ ಮುಕ್ತಾಕಂಕಣಂ ಕೈಮೊದಲೊಳುಡುಗಳಂ ಕಟ್ಟಿ ವಕ್ತ್ರಾಬ್ಜಮಿಟ್ಟಂ
ತಿರೆ ಕರ್ಣಾಲಂಬಿ ನುಣ್ಮುತ್ತುಗಳ ತೊಡವು ಚೆಲ್ವಾದನಾ ರಾಜಪುತ್ರಂ ೪೬

ಉ॥ ಕೊಂಕಿದ ಪುರ್ಬು ನೀಳ್ದ ನಗೆಗಣ್ಕಳೆವೆತ್ತ ಮುಖೇಂದು ಶಂಖಮಂ
ಝುಂಕಿಪ ನುಣ್ಗೊರಲ್ಪೊಳಪುರಸ್ಥಳಮಾಯತ ಬಾಹುಕಾಂತಿಯಿಂ
ಪಂಕಜಮಂ ಕರಂ ತೆಗಳ್ವ ಕೆಂದಳವೊಳ್ನಡು ಬಾಳೆಗಂಬಮಂ
ಮಾಂಕರಿಸುತ್ತೆ ತೋರ್ಪ ತೊಡೆ ಮೆಲ್ಲಡಿ ರಂಜಿಕುಮಾ ಕುಮಾರನಾ ೪೭

ಸ್ನಾನವನ್ನು ಮಾಡಿಸಿದರು. ವ॥ ಆಮೇಲೆ ೪೫. ಚಂದ್ರನು ಮನ್ಮಥನ ದೇಹ ವನ್ನು ಅಲಂಕಾರ ಮಾಡಿದ ರೀತಿಯಲ್ಲಿ ಸಮಸ್ತ ಕಳೆಗಳಿಂದ ಸಂಗತನಾದ ಒಬ್ಬ ಸಖನು ದೇಹ ಧರಿಸಿ, ಮನ್ಮಥನಿಗೆ ಸಮಾನನಾಗಿ ಕಾಣುವ ಈ ರಾಜಶೇಖರನೆಂಬ ಶೋಭಿಸುವ ಕುಮಾರನ ದೇಹವನ್ನು ಶೃಂಗಾರಗೊಳಿಸಿದನು. ವ॥ ಆಗ ಪುನಃ ೪೬. ಸಂಪತ್ತಿನ ಅಭಿಮಾನಿದೇವತೆಯಾದ ಸ್ತ್ರೀಯು ತಾನು ವರಿಸುವುದಕ್ಕೋಸುಗ ತೆಗೆದುಕೊಂಡು ಬಂದ ಶುಭ್ರವಾದ ಮಲ್ಲಿಗೆಯ ಮಾಲೆಯೋ ಎಂಬಂತಿರುವ ಮುತ್ತಿನ ಹಾರವು ಆತನ ಎದೆಯ ಮೇಲೆ ಇತ್ತು. ಕಮಲದ ಸುತ್ತಲೂ ಸುತ್ತುವರಿದು ನಿಂತ ಹಂಸಪಕ್ಷಿಗಳ ತತ್ತಿಗಳೋ ಎಂಬಂತಿರುವ ಮುತ್ತಿನ ಕೈಕಡಗಗಳು (ಕಮಲ ಸದೃಶವಾದ) ಮುಂಗೈಯಲ್ಲಿ ಇದ್ದುವು. ಮುಖಕಮಲವು ನಕ್ಷತ್ರಗಳನ್ನು ಕಟ್ಟಿ ಇಟ್ಟಹಾಗೆ ಕಿವಿಯಲ್ಲಿ ನೇತಾಡು ವಂತೆ ಹಾಕಿದ ಲಾವಣ್ಯಯುಕ್ತವಾದ ಮುತ್ತುಗಳ ಅಭರಣದಿಂದ ಕೂಡಿತ್ತು. (ಈ ರೀತಿ ಯಲ್ಲಿ) ಆ ರಾಜಪುತ್ರನು ಚೆಲುವುಗೊಂಡಿದ್ದನು. ೪೭. ಆ ಕುಮಾರನಾದ ರಾಜ ಶೇಖರನ ಕೊಂಕಿದ ಹುಬ್ಬು, ವಿಶಾಲವಾದ ನಗೆಗಣ್ಣುಗಳು, ಕಲಾಪೂರ್ಣವಾದ ಚಂದ್ರಸದೃಶ ಮುಖ, ಶಂಖವನ್ನು ಕೀಳ್ಮಾಡುವ ನುಣ್ಣನೆಯ ಕುತ್ತಿಗೆ, ಹೊಳಪಿನಿಂದ ಕೂಡಿರುವ ಎದೆಯ ಪ್ರದೇಶ, ಉದ್ದವಾದ ಬಾಹುಗಳು, ಕಾಂತಿಯಿಂದ ಕಮಲವನ್ನು ತಿರಸ್ಕರಿಸುವ ಕೆಂಪಾದ ಅಂಗೈಗಳು, ಒಳ್ಳೆಯ ನಡು, ಬಾಳೆಯ ಕಂಬಗಳನ್ನು ತಿರಸ್ಕರಿಸು ವಂತೆ ತೋರುವ ತೊಡೆಗಳು, ಮೃದುವಾದ ಪಾದಗಳು ಶೋಭಿಸಿದವು,

ಮಣಿವಿಭೂಷಣ॥ ಕಾವನಾ ಕುವರನಂಗದ ಚೆಲ್ವಿಕೆಗಂಡು ರಾ
ಜೀವಲೋಚನೆಯರೆನ್ನಿರವಂ ಪಳಿಕೆಯ್ವರೆಂ
ದೇ ವಿಚಾರಿಸುತೆ ನಾಣ್ಚುತೆ ಮೆಯ್ಗರೆದಿರ್ಪನಾ
ಪೀವರಸ್ತನ ಮಹೀಧರ ಮಧ್ಯದೊಳೀಗಳುಂ ೪೮

ಚಂ॥ ಪೊದೆದ ನವೀನ ಚೀನವಸನಂ ತಳೆದುಜ್ವಳರತ್ನಭೂಷಣಂ
ಪದೆದು ಕಿರೀಟಮಧ್ಯದೊಳಮರ್ಚಿದ ರತ್ನದ ಶೇಖರಂ ನಿಜಾಂ
ಗದೊಳಿರದಣ್ಪುಗೈದ ಸಿರಿಗಂಪು ಕರಾಬ್ಜದೊಳಾಂತ ಮಾತುಳಂ
ಗದ ಫಳವೊಪ್ಪೆ ಬಂದನವನೀಶ್ವರಪುತ್ರನುದಾತ್ತವೈಭವಂ ೪೯

ಕಂ॥ ಮೀಳಿರ್ವ ಪತಾಕಾವಳಿ ಮೇ
ಲಳುರ್ಕೆಗೊಳೆ ಮೌಕ್ತಿಕಾತಪತ್ರಪ್ರಕರಂ
ತೊಳಗೆ ಬಳಸಿರ್ದ ನೃಪಮಂ
ಡಳಿಯೊಳ್ ಕರಿಯೇಱಿ ನೃಪತಿ ಬರ್ಪವಸರದೊಳ್ ೫೦

ವ॥ ಮತ್ತಂ

ಕಂ॥ ದೆಸೆಯಂ ತುಂಬಿರೆ ತೂರ್ಯ
ಪ್ರಸರಧ್ವನಿ ತೀವೆ ಬಹುಳ ಕಹಳಾರವಮಿ
ರಸೆಯಿಂಬಿಲ್ಲೆಂಬಂತಿರೆ
ಮುಸುಂಕೆ ಕರಿ ತುರಗ ರಥ ಪದಾತಿಗಳಾಗಳ್ ೫೧

೪೮. ಮನ್ಮಥನು ಆ ರಾಜಶೇಖರಕುಮಾರನ ದೇಹದ ಚೆಲುವನ್ನು ನೋಡಿದ ಮೇಲೆ ಸುಂದರಿಯರು ನನ್ನ ಸೌಂದರ್ಯವನ್ನು ಕಂಡು ತಿರಸ್ಕಾರಮಾಡುವರೆಂದು ಯೋಚಿಸಿ, ನಾಚಿಕೆಗೊಂಡವನಾಗಿ ತರುಣಿಯರ ಮೊಲೆಗಳ ಮಧ್ಯದಲ್ಲಿ ಈಗಲೂ ಅಡಗಿಕೊಂಡಿರುವನು. ೪೯. ಅಧಿಕ ವೈಭವಸಂಪನ್ನನಾಗಿ ಆ ಸತ್ಯೇಂದ್ರಚೋಳಮಹಾರಾಜಪುತ್ರನಾದ ರಾಜಶೇಖರನು ಮೈಮೇಲೆ ನೂತನವಾದ ರೇಷ್ಮೆಯ ಮೇಲುಹೊದಿಕೆಯನ್ನು ಹೊದ್ದಿದ್ದನು. ಪ್ರಕಾಶಮಾನವಾದ ರತ್ನಾಭರಣಗಳನ್ನು ಧರಿಸಿದ್ದನು. ತಲೆಯ ಮೇಲೆ ಹಾಕಿಕೊಂಡ ಕಿರೀಟದ ಮಧ್ಯದಲ್ಲಿ ಕೆತ್ತಿದ ರತ್ನಪದಕವು ಇತ್ತು. ದೇಹಕ್ಕೆ ಸುಗಂಧದ್ರವ್ಯಗಳು ತೊಡೆಯಲ್ಪಟ್ಟದ್ದುವು. ಕಯ್ಯಲ್ಲಿ ಹಿಡಿದ ಮಾದಳ ಫಲವು ಶೋಭಿಸುತ್ತಿರಲು ಆತನು ಬಂದನು. ೫೦. ಮೇಲ್ಭಾಗದಲ್ಲಿ ಪತಾಕೆಗಳ ಸಮೂಹವು ಹಾರಾಡುತ್ತಿತ್ತು. ಮುತ್ತಿನಿಂದ ಮಾಡಿದ ಛತ್ರಿಗಳು ವ್ಯಾಪಿಸಿ ಝುಗಝುಗಿಸುತ್ತಿದ್ದವು. ಹೀಗೆ ಅರಸರುಗಳ ಸಮೂಹ ಮಧ್ಯದಲ್ಲಿ ಆನೆಯನ್ನೇರಿ ಆ ರಾಜಶೇಖರಮಹಾರಾಜನು ಬರುತ್ತಿರುವ ಸಮಯದಲ್ಲಿ, ವ॥ ಮತ್ತು ೫೧. ದಿಕ್ಕುಗಳನ್ನೆಲ್ಲ ತುತೂರಿಯ ಸಮೂಹದ ಧ್ವನಿಯು ತುಂಬಿತ್ತು ; ಅನೇಕ ಕಹಳೆಗಳ ಧ್ವನಿಯು ವ್ಯಾಪಿಸಿತ್ತು ; ಆನೆ ಕುದುರೆ ರಥ ಕಾಲಾಳುಗಳ ಸಮೂಹವು ಈ ಭೂಮಿಯೇ ಇಂಬಿಲ್ಲವೋ ಎನ್ನುವ ರೀತಿಯಲ್ಲಿ ಮುಸುಕಿತ್ತು. ಹೀಗಿರುವಾಗ ೫೨. ಆ ಸಿಂಹ

ಮ॥ಸ್ರ॥ ಕರಕಂಜಾತಕ್ಕೆ ಪುಟ್ಟಿರ್ದಬುಜಮೆನಿಸೆ ಲೀಲಾಂಬುಜಂ ತುಂಬಿ ಬಿಂಬಾ
ಧರರಾಗಂ ಸೂಸಿತೆಂಬಂದದೊಳೆ ಪೊಳೆಯೆ ಕೆಂಬಲ್ಗಳೊಳ್ಗೆಂಪು ಪಾದಾಂ
ಬುರಹಪ್ರಸ್ಯಂದಮೊಕ್ಕಂತಿರೆ ನಖರುಚಿ ಸಮ್ಮಿಶ್ರಿತಾಲಕ್ತಕಂ ಬಂ
ದರಮಂದಾನಂದದಿಂದಂದಿದಿರನವನಿಪಾಲಾಜ್ಞೆಯಿಂ ಕಾಂತೆಯರ್ಕಳ್ ೫೨

ವ॥ ಅಂತುಮಲ್ಲದೆಯುಂ

ಮ॥ಸ್ರ॥ ಸ್ತನಯುಗ್ಮಂ ಪೂರ್ಣಕುಂಭದ್ವಯಮಳಿಚಳಪೂರ್ಣಾಳಕಂ ತೋರಣಂ ಕಾಂ
ಚನಕಾಂಚೀದಾಮ ಚಂಚದ್ದ್ಯುತಿಯುರಿವನಲಂ ದರ್ಪಣಂಗಂಡಮಬ್ಜಾ
ನನಮಬ್ಜಂ ಶಂಖಮುದ್ಯದ್ಗಳಮಧರದಳಂ ಬಿಂಬಮಿಂತಾಗೆ ಕಾಂತಾ
ಜನಮಂದೈತಂದುದಿಷ್ಟಾಪ್ತಿಯನಱಿಪುವ ಮಾಂಗಲ್ಯಮೆಂಬಂದದಿಂದಂ ೫೩

ವಿಸರಜ್ಜಾಂಬೂನದೀಪೂರದೊಳೆ ಬೆರೆದ ಗಂಗಾಪ್ರವಾಹಂಬೊಲಿಂಬಾ
ಗೆ ಸುಧಾಧಾಮಪ್ರಭಾಭಾಸುರಮದು ಬಿಸಿಲೊಳ್ಪೀವಿ ನೇತ್ರಾಂಶುಮಂಜೀ
ರಸಮುದ್ಯನ್ನಾದಮಿಾ ಭೂಮಿಯ ತಳೆದಹಿಪಂಗೆಚ್ಚರಂ ಪೇಳ್ವವೋಲ್ ರಂ
ಜಿಸೆ ತತ್ಪೀನಸ್ತನಪ್ರೋಜ್ಜ್ವಘನವಹನದೊಳ್ಪೆಂಡಿರೈತಂದರಾಗಳ್ ೫೪

ಳೇಂದ್ರನ ಆಜ್ಞೆಗನುಸಾರವಾಗಿ ಸುಂದರಿಯರಾದ ಸ್ತ್ರೀಯರುಗಳು ಕೈಗಳೆಂಬ ಕಮಲಗಳಲ್ಲಿ ಹುಟ್ಟಿದ ಕಮಲವೋ ಎನ್ನುವ ರೀತಿಯಲ್ಲಿ ಲೀಲಾಕಮಲಗಳನ್ನು ಹಿಡಿದು, ತೊಂಡೆ ಹಣ್ಣಿನಂತಿರುವ ತುಟಿಗಳ ಕೆಂಪುಬಣ್ಣವು ತುಂಬಿ ಸೂಸಿರುವುದೋ ಎಂಬ ಅಂದವನ್ನು ಹೊಂದಿ, ಕೆಂಪಾದ ಹಲ್ಲುಗಳ ಮನೋಹರವಾದ ಕೆಂಪು ಹೊಳೆಯುತ್ತಿರಲು, ಉಗುರುಗಳ ಕಾಂತಿಯಿಂದ ಕೂಡಿರುವ ಲಾಕ್ಷಾರಸವು ತಾವರೆಯಂತಿರುವ ಪಾದಗಳಿಂದ ಸುರಿದು ಹೊರಸೂಸುವಂತಿರಲು, ವಿಶೇಷವಾದ ಆನಂದದಿಂದ ತುಂಬಿ ಆಗ ವರನಾದ ರಾಜಶೇಖರನನ್ನು ಎದುರುಗೊಳ್ಳಲು ಬರುತ್ತಿದ್ದರು. ವ॥ ಹಾಗು ಅಲ್ಲದೆಯೂ ೫೩. (ಆ ಸ್ತ್ರೀಯರುಗಳ) ಎರಡೆರಡು ಮೊಲೆಗಳೇ ನೀರುತುಂಬಿದ ಎರಡೆರಡು ಕಲಶಗಳು ; ದುಂಬಿಗಳ ಹಾಗೆ ಹಾರಾಡುತ್ತಿರುವ ಕೊಂಕು ಕೊಂಕಾದ ಮುಂಗುರುಳುಗಳೇ ತೋರಣಗಳು ; ಬಂಗಾರಮಯವಾದ ನಡುಪಟ್ಟಿಯ ಹೊಳೆಯುತ್ತಿರುವ ಪ್ರಕಾಶವೇ ಜ್ವಲಿಸುತ್ತಿರುವ ಅಗ್ನಿಯು (ದೀಪಗಳು) ; ಅವರ ಕೆನ್ನೆಗಳೇ ಕನ್ನಡಿಗಳು ; ಕಮಲಸದೃಶವಾದ ಮುಖವೇ ಕಮಲಪುಷ್ಪಗಳು ; ಕುತ್ತಿಗೆಗಳೇ ಪ್ರಕಾಶಮಾನವಾದ ಶಂಖಗಳು ; ಕೆಳದುಟಿಗಳೇ ತೊಂಡೇಹಣ್ಣುಗಳು. ಹೀಗೆ ಆ ಸ್ತ್ರೀಯರುಗಳು ಇಷ್ಟಸಿದ್ಧಿಗಾಗಿ ಹೋಗುವವನಿಗೆ ಮಂಗಲಶಕುನಗಳಂತೆ ಆ ರಾಜಶೇಖರನ ಎದುರು ಬಂದರು. ೫೪. ಚಂದ್ರನ ಕಾಂತಿಯಂತೆ ಹೊಳೆಯುತ್ತಿರುವ ನೇತ್ರಗಳ ಕಿರಣಗಳು ಬಿಸಿಲಿನಲ್ಲಿ ವ್ಯಾಪಿಸಿ, ಹರಿಯುತ್ತಿರುವ ಜಂಬೂನದಿಯ ಪ್ರವಾಹದಲ್ಲಿ ಬೆರೆತ ಗಂಗಾನದಿಯ ಪ್ರವಾಹದ ಹಾಗೆ ವಿಶಾಲವಾಗಿರಲಾಗಿ, ಕಾಲಲ್ಲಿ ಹಾಕಿದ ಕಾಲಂದಿಗೆಗಳಿಂದ ಹೊರಡುತ್ತಿದ್ದ ಮಂಜುಳಧ್ವನಿಯು ಈ ಭೂಮಿಯ ಭಾರವನ್ನು ಹೊತ್ತ ಆದಿಶೇಷನಿಗೆ ಎಚ್ಚರಿಕೆಯನ್ನು ಹೇಳುತ್ತಿರುವ ಹಾಗೆ ಆ ಸ್ತ್ರೀಯರುಗಳು ದಪ್ಪನೆಯ ಮೊಲೆಗಳು ಮತ್ತು

ವ॥ ಮತ್ತಂ

ಚಂ॥ ತರಳಕಟಾಕ್ಷರೋಚಿ ಪೊಸಲಾಜೆಯ ಸೂಸೆ ಮೃದುಸ್ಮಿತಂ ಸಿತಾಂ
ಬುರುಹದೆ ತೋರಣಂಗೊಳಿಸೆ ವಾದ್ಯರವಂಗುಡೆ ಸಿಂಚಿತಂ ಚಲ
ಚ್ಚರಣನಖಾಂಶು ಪಾಸೆ ಮಡಿಯಂ ಗುಡಿಗಟ್ಟಿ ಚಳಾಳಕಂ ಪಯೋ
ಧರಕಳಶಕ್ಕೆ ಚೆಂದಳಿರನೊಂದಿಸೆ ಚೆಂದುಟಿಗೆಂಪು ಕಾಂತೆಯರ್ ೫೫

ಕಂ॥ ಇದಿರ್ಗೊಂಡರಮರನಾರಿಯ
ರಿದಿರ್ಗೊಂಬಂತಮರರಾಜನಂ ಕಣ್ಗದಿರ್ಗ
ಳ್ಪುದಿದಿರೆ ಸುರಕರಿಯಿರವಂ
ಮದಗಜಮದು ಪೋಲೆ ಮೇಲೆ ಮೆಱೆವವನಿಪನಂ ೫೬

ವ॥ ಆಗಳ್ ಸಸಂಭ್ರಮಂ ನೆರೆದು ನೆಲವನೆಯ ನೆಲೆನೆಲೆಗಳೊಳ್ ನಿರೀಕ್ಷಿಪಬಳೆಯರ ನೀಳ್ದ ಕಡೆಗಣ್ಣ ಕದಿರ್ದುಱುಗಲೆಂಬರಲ ಸರಿಯ ಪಿರಿಯ ಸಿರಿಯಿಂ ಸಕಳ ರಾಜಕಿರೀಟಕೋಟಿ ಘಟಿತಮಣಿಗಣರುಚಿರರುಚಿನಿಚಯ ತರುಣದಿನಕರಕರನಿಕರ ದಳಿತಧವಳನಳಿನಂಗಳೆಂಬಂತೆ ನಿಲುಂಬಿನಿಂದ ಧವಳಾತಪತ್ರಪ್ರತಾನದಿಂ ದಶದಿಶೆಯೊಳ್ ಪರಕಲಿಸಿ ಪರ್ಬಿದ ಪಟಹ ಡಿಂಡಿಮ ಶಂಖ ಕಹಳಾ ಮುರಜಾ ಮೃದಂಗ ಢಕ್ಕಾದಿ ವಾದ್ಯನಿನಾದದಿಂ ಮುಂದೆ ಸಂದಣಿಸಿ ಕೈಯೆತ್ತಿ

ಜಘನಗಳನ್ನು ಹೊತ್ತು ರಂಜಿಸುತ್ತ ಇರಲು ಆಗ ಬಂದರು. ವ|| ಮತ್ತು ೫೫. ಆ ಸ್ತ್ರೀಯರುಗಳು ಚಂಚಲವಾದ ಕಡೆಗಣ್ಣುಗಳ ಕಾಂತಿಯೆಂಬ ನೂತನವಾದ ಬತ್ತದರಳುಗಳನ್ನು ಚೆಲ್ಲುತ್ತಿರಲು, ಮುಂದಹಾಸವು ಬಿಳಿಯ ಕಮಲಗಳ ತೋರಣದಂತೆ ಆಗಿರಲು, ಕಾಲಂದಿಗೆಗಳ ಮಂಜುಳಧ್ವನಿಯು ವಾದ್ಯಧ್ವನಿಯಂತೆ ಆಗಿರಲು, ಚಲಿಸುತ್ತಿರುವ ಕಾಲುಗುರುಗಳ ಕಾಂತಿಯು ದಾರಿಯಲ್ಲಿ ಮಡಿಯನ್ನು ಹಾಸಿದ ಹಾಗೆ ಆಗಿರಲು, ಚಲಿಸುತ್ತಿರುವ ಮುಂಗುರುಳು ಗುಡಿಗಳನ್ನು ಹಿಡಿದ ಹಾಗಿರಲು, ಮೊಲೆಗಳೆಂಬ ಕಲಶಗಳಿಗೆ ಕೆಂದುಟಿಗಳ ಕೆಂಪುಬಣ್ಣವು ಕೆಂಪು ತಳಿರನ್ನು ಹೊದಿಸಿದಂತೆ ಇರಲು (ಅವರು) ಬರುತ್ತಿದ್ದರು. ೫೬. ಆ ರಾಜಶೇಖರನು ಏರಿರುವ ಆ ಮದ್ದಾನೆಯು ದೇವಗಜವಾದ ಐರಾವತದಂತೆ ಇರಲು, ಅದರ ಮೇಲೆ ಕುಳಿತ ರಾಜಶೇಖರನು ದೇವೇಂದ್ರನ ಹಾಗೆ ಕಾಣುತ್ತಿರಲು, ದೇವತಾಸ್ತ್ರೀಯರು ದೇವೇಂದ್ರನನ್ನು ಎದುರುಗೊಳ್ಳುವ ಹಾಗೆ ಹೆಂಗಸರ ನೇತ್ರಕಾಂತಿಗಳಿಂದ ಆಚ್ಛಾದಿತನಾದ ಆ ರಾಜಶೇಖರಭೂಪಾಲನನ್ನು ಅವರು ಎದುರುಗೊಂಡರು. ವ|| ಆಗ ಆ ಪಟ್ಟಣದ ಸ್ತ್ರೀಯರು ಅತಿಸಂಭ್ರಮದಿಂದ ಮೇಲುಪ್ಪರಿಗೆಯ ಪ್ರತಿಯೊಂದು ಅಂತಸ್ತಿನಲ್ಲಿಯೂ ನೆರೆದು ನಿಂತು ನೋಡುತ್ತಿದ್ದರು. ಅವರ ನೀಳವಾದ ಕಡೆಗಣ್ಣೋಟವೆಂಬ ಪುಷ್ಪವೃಷ್ಟಿಯು ಅತಿಶಯ ಶೋಭೆಯಿಂದ ಕೂಡಿತ್ತು ; ಸಮಸ್ತ ರಾಜರುಗಳ ಕಿರೀಟದ ರತ್ನಸಮೂಹದ ಮನೋಹರವಾದ ಕಿರಣಗಳ ಸಮೂಹವೆನ್ನುವ ಬಾಲಸೂರ್ಯನ ಕಿರಣಗಳ ಸಮೂಹದಿಂದ ಅರಳಿದ ಬಿಳಿಯ ಕಮಲಗಳೋ ಎಂಬಂತೆ ಎತ್ತಿ ಹಿಡಿದ ಶ್ವೇತ ಛತ್ರಿಗಳು ಇದ್ದುವು. ದಶದಿಕ್ಕುಗಳಲ್ಲೆಲ್ಲ ವ್ಯಾಪಿಸಿ ತುಂಬಿರುವ ಮದ್ದಳೆ, ನಗಾರಿ, ಶಂಖ, ಕಹಳೆ, ಮೃದಂಗ, ಢಕ್ಕೆಗಳೇ ನೊದಲಾದ

ಪೊಗಳ್ವ ವಂದಿವೃಂದನ ಕೋಲಾಹಲಧ್ವಾನದಿಂ ಪಿಂದೆ ಗೊಂದಣಗೊಂಡು ತುರಂಗಮನೇಱಿ ಬರ್ಪ ದಂಡನಾಥಮಂಡಳಿಕರ ತಂಡದಿಂದೆಡಬಲದೊಳ್ ಬೀಸುವ ಧವಳಚಾಮರದ ನೆಗಪುವ ಸೀಗುರಿಯ ಪಿಡಿದು ಬರ್ಪ ನವರತ್ನದ ನಡೆತೋರಣದ ನಭಮನಳ್ಳಿರಿದು ಮಿಳಿರ್ವ ಪಳಯಿಗೆಗಳ ವಿಳಾಸದಿಂ ಮಿಕ್ಕು ಪೊಕ್ಕು ಕಿಕ್ಕಿಱಿಗಿಱಿದು ಬರ್ಪ ಕರಿ ತುರಗ ರಥ ಪದಾತಿಗಳ ಪೆರ್ಮೆಯಿಂ ವಿಸ್ತರಿಸಿದ ವಸ್ತುಕಾರಕದ ಕನಕಪಾತ್ರೆಗಳಂ ಮಣಿಭರಣಂಗಳಂ ಪುದಿದ ಪೆಟ್ಟಿಗೆಗಳಂ ಪರಿಮಳಪ್ರಕರ ಪರಿಮಿಳಿತ ಭಾಜನಂಗಳನೋಜೆಯಿಂ ಪಿಡಿದೆಡವಿಡದೆ ಗಡಣಂಗೊಂಡು ಬರ್ಪ ಮಡದಿಯರಿಂದತಿಸಂಭ್ರಮಂ ನೆಗಳೆ ಸುರೇಂದ್ರನಂತೆ ವಿಭವಮಂ ನರೇಂದ್ರತನೂಭವಂ ತಾಳ್ದು ಮಿತವಚನ ಸಮೇತಂ ಬಂದು ರಾಜಗೃಹದ ಬಹಿರ್ದ್ವಾರದೇಶದೊಳ್ಗಜಸ್ಕಂಧದಿನಿಳಿಗವತರಿಸಿ ಸಚಿವಂ ಕೈಗುಡೆ ನಡೆತಂದು ಮಹೋತ್ಸವಂ ಮಿಗೆ ಮಾಂಗಲ್ಯಮಂಟಪಮಂ ಪೊಕ್ಕು ಮಧುಪರ್ಕಮಂ ಕೈಕೊಂಡು ಪುಣ್ಯಾಹಮೆಂಬ ಪುರೋಹಿತರೊಡನೆ ಭದ್ರವೇದಿಕೆಯನಲಂಕರಿಸಿ ಸದ್ರತಿಯಿಂದಿರ್ಪಾಗಳ್ ಸುಮುಹೂರ್ತಂ ಸಾರ್ತಂದುದೆಂದು ಸಿಂಹಳೇಂದ್ರಂಗೆ ಪುರೋಹಿತಂ ನಿರವಿಸೆ ಕೇಳ್ದು ಕುವರಿಯಂ ಕರೆತರ್ಪುದೆಂದು ಸಚಿವಂಗೆ ಪೇಳಲೊಡನವಂ ಭೆಳಿಲನೆ ಪೋಗಿ ಮುನ್ನಮೆ ಪಸದನಂಗೊಂಡು ಪಸೆವೆಣ್ಣೆನಿಸಿರ್ದ ಕನ್ನೆಯಂ ಕರೆದುತರ್ಪಾಗಳ್

ಲಾದ ವಾದ್ಯಗಳ ಧ್ವನಿ ಇದ್ದಿತು. ಮುಂಭಾಗದಲ್ಲಿ ಗುಂಪುಗೂಡಿ ಕೈಯೆತ್ತಿ ಹೊಗಳುತ್ತಿರುವ ಸ್ತುತಿಪಾಠಕ ಸಮೂಹದ ಕಲ ಕಲ ಧ್ವನಿಯಿಂದ ಮೆರವಣಿಗೆ ವಿರಾಜಿಸುತ್ತಿತ್ತು. ಹಿಂಭಾಗದಲ್ಲಿ ಗುಂಪು ಗುಂಪಾಗಿ ಕುದುರೆಗಳನ್ನು ಹತ್ತಿ ಬರುತ್ತಿದ್ದ ದಂಡಾಧಿಪರ ಮಾಂಡಲಿಕರುಗಳ ಸಮೂಹದಿಂದ ಕೂಡಿತ್ತು. ಎಡಬಲಗಳಲ್ಲಿ ಬಿಳಿಯ ಚಾಮರಗಳನ್ನು ಬೀಸುತ್ತಿದ್ದರು. ಸೀಗುರಿಗಳನ್ನು ಎತ್ತಿಹಿಡಿದಿದ್ದರು. ನವರತ್ನದ ನಡೆದೋರಣಗಳನ್ನು (ಮಕರದೋರಣಗಳನ್ನು) ಹಿಡಿದು ಬರುತ್ತಿದ್ದರು. ಆಕಾಶವನ್ನು ಭೇದಿಸಿ ಸುಂದರ ಧ್ವಜಗಳು ಗುಂಪುಗೂಡಿದ್ದುವು. ಅಧಿಕ ಸಂಖ್ಯೆಯಲ್ಲಿ ಆನೆ ಕುದುರೆ ರಥ ಕಾಲಾಳುಗಳು ಹೆಮ್ಮೆಯಿಂದ ಕಿಕ್ಕಿರಿದು ಸೇರಿ ಬರುತ್ತಿದ್ದರು. ಅವಶ್ಯಕ ವಸ್ತುಗಳ ಸಮೂಹದಿಂದ ತುಂಬಿದ ಬಂಗಾರದ ಪಾತ್ರೆಗಳನ್ನೂ, ರತ್ನಾಭರಣಗಳು ತುಂಬಿದ ಪೆಟ್ಟಿಗೆಗಳನ್ನೂ, ಸುಗಂಧದ್ರವ್ಯ ಸಮೂಹದಿಂದ ಕೂಡಿರುವ ಪಾತ್ರೆಗಳನ್ನೂ ಓರಣವಾಗಿ ಹಿಡಿದು, ಒಂದೇ ಸಮನೆ ಗುಂಪುಗೂಡಿ ಬರುತ್ತಿರುವ ಸ್ತ್ರೀಯರುಗಳಿಂದ ಅತ್ಯಂತ ಸಂಭ್ರಮ ವುಂಟಾಗುತ್ತಿತ್ತು. (ಹೀಗೆ) ದೇವೇಂದ್ರನಂತೆ ಐಶ್ವರ್ಯವನ್ನು ಆ ಸತ್ಯೇಂದ್ರಚೋಳ ಮಹಾರಾಜನ ಸುತನಾದ ರಾಜಶೇಖರನು ಹೊಂದಿ; ಮಿತವಚನನೊಡನೆ ಬಂದು ಅರಮನೆಯ ಮುಂಭಾಗದ ಮಹಾದ್ವಾರದಲ್ಲಿ ಆನೆಯಿಂದ ಭೂಮಿಗೆ ಇಳಿದನು. (ಆಗ) ಸಚಿವನು ಕೈಗುಡಲಾಗಿ (ಅವನ ಕೈಹಿಡಿದು) ನಡೆದುಬಂದು ಅತ್ಯಂತ ಉತ್ಸವದಿಂದ ವಿವಾಹಮಂಟಪವನ್ನು ಹೊಕ್ಕು ಮಧುಪರ್ಕದ ಉಪಚಾರವನ್ನು ಸ್ವೀಕರಿಸಿ, ಪುಣ್ಯಾಹ ವೆಂದೆನ್ನುತ್ತಿದ್ದ ಪುರೋಹಿತನೊಡನೆ ಮಂಗಳಮಯವಾದ ವಿವಾಹವೇದಿಕೆಯನ್ನೇರಿ ಕುಳಿತು, ಯೋಗ್ಯವಾದ ಅನುರಾಗಗೂಡಿ ಇರುವಾಗ ಸುಮುಹೂರ್ತವು ಸಮಿಾಪಿಸಿ ತೆಂದು ಸಿಂಹಳೇಂದ್ರನಿಗೆ ಪುರೋಹಿತನು ಹೇಳಿದನು. (ಅದನ್ನು) ಕೇಳಿ ಸಿಂಹಳೇಂದ್ರನು

ರಥೋದ್ಧತ॥ ಸುತ್ತಿ ತಳ್ತ ಸುದತಿಜನೇಕ್ಷಣೋ
ದಾತ್ತಕಾಂತಿ ನವದುಗ್ಧವಾರ್ಧಿಯಂ
ತೆತ್ತಮುರ್ವೆ ಸಿರಿಯಲ್ಲಿ ಬರ್ಪವೋ
ಲ್ವೃತ್ತಪೀನಕುಚೆ ಬರ್ಪಳೊಪ್ಪಿದಳ್ ೫೭

ಮ॥ಸ್ರ॥ ಮಣಿಭೂಷಾಭಾನು ಭಾನುಪ್ರಭೆಯನರುಣಿಮಂ ಮಾಡೆ ಚಂಚತ್ಕಟಾಕ್ಷೇ
ಕ್ಷಣರೋಚಿರ್ಮಾಲೆ ಮಿಂಚಂ ಕಲಿಸೆ ಮಿಸುಪ ವಕ್ತ್ರಾಂಶು ದಿಗ್ಭಾಗದೊಳ್ಪೂ
ರ್ವಣಚಂದ್ರದ್ಯೋತಮಂ ಮೇಣ್ಪರಪೆ ಮೃದುಪದನ್ಯಾಸಕಿಂಚಿಚ್ಚಲತ್ಕಂ
ಕಣಕಾಂಚೀಕಿಂಕಿಣೀ ನಿಕ್ವಣಿತಯುತೆ ವರಾಭ್ಯರ್ಣಮಂ ಸಾರ್ದಳಾಗಳ್ ೫೮

ಕಂ॥ ಮೊಳಗುವ ಭೇರಿಯ ಶಂಖದ
ಪಳಹದ ಮದ್ದಳೆಯ ಘನಮೃದಂಗದ ಪಟುಕಾ
ಹಳಿಯ ಬಹುವಿಧದ ವಾದ್ಯದ
ಕಳಕಳಮೆಣ್ದೆಸೆಯನಮರ್ದದೇಂ ಮುಸುಕಿದುದೋ ೫೯

ಸಿರಿಯ ಹರಿಯೆಡೆಯೊಳಬ್ಧಿಯೊ
ಳಿರದೇಳ್ವ ಸುವರ್ಣಕಂಜರಜದೊಡವೆರೆದೊ
ಳ್ದಿರೆಗೆ ದೊರೆಯಾದುದು ವಧೂ
ವರರೆಡೆಯೊಳ್ಮಿಸುಪ ಮಿಸುನಿದೆರೆ ಮಣಿಗೃಹದೊಳ್ ೬೦

ಮಗಳನ್ನು ಕರೆತರಬೇಕೆಂದು ಸಚಿವನಿಗೆ ಹೇಳಿದ ಕೂಡಲೇ ಅವನು ಥಟ್ಟನೆ ಹೋಗಿ, ಮೊದಲೇ ಅಲಂಕಾರಗೊಂಡು ಹಸೆಯ ಹೆಣ್ಣೆಂದೆನಿಸಿದ್ದ ಸರ್ವಮಂಗಳೆಯನ್ನು ಕರೆದು ಕೊಂಡು ಬರುವಾಗ, ೫೭. ಸುತ್ತಮುತ್ತಲೂ ಆವರಿಸಿರುವ ಸ್ತ್ರೀಯರುಗಳ ನೇತ್ರಗಳ ಅತಿಶಯ ಕಾಂತಿಯೆಂಬ ನೂತನ ಕ್ಷೀರಸಮುದ್ರವು ಎಲ್ಲ ಕಡೆಗೂ ಉಕ್ಕಿರಲು, ಲಕ್ಷ್ಮಿಯು ಅಲ್ಲಿಗೆ ಬರುವ ಹಾಗೆ ಬರುತ್ತಿರುವ ಸರ್ವಮಂಗಳೆ ಶೋಭಿಸಿದಳು. ೫೮. ಕೆಂಪು ರತ್ನಾಭರಣಗಳ ಪ್ರಕಾಶವು ಸೂರ್ಯಪ್ರಕಾಶವನ್ನು ಕೆಂಪುಬಣ್ಣದ್ದನ್ನಾಗಿ ಮಾಡುತ್ತಿರಲು, ಚಂಚಲವಾದ ಕಡೆಗಣ್ಣ ನೋಟಗಳ ಕಿರಣಮಾಲೆಯು ಕೋಲ್ಮಿಂಚ ನ್ನುಂಟುಮಾಡುತ್ತಿರಲು, ಶೋಭಿಸುವ ಮುಖಕಾಂತಿಯು ಎಲ್ಲ ದಿಕ್ಕುಗಳಲ್ಲೂ ಪೌರ್ಣಿಮೆಯ ಚಂದ್ರನ ಕಾಂತಿಯನ್ನು ಹರಡುತ್ತಿರಲು, ಮೃದುವಾಗಿ ಹೆಜ್ಜೆಯನ್ನಿಡು ತ್ತಿರುವಾಗ ಸ್ವಲ್ಪಮಾತ್ರ ಅಲುಗುತ್ತಿದ್ದ ಕೈಕಡಗ, ನಡುಪಟ್ಟಿಯ ಗೆಜ್ಜೆಗಳ ಮಂಜುಳ ವಾದ ಧ್ವನಿಯನ್ನುಂಟುಮಾಡುತ್ತಿರುವವಳಾಗಿ ಮದುವಣಿಗನ ಸಮಿಾಪಕ್ಕೆ ಆ ಸರ್ವಮಂಗಳೆ ಬಂದಳು. ೫೯. ಧ್ವನಿಮಾಡುತ್ತಿದ್ದ ನಗಾರಿ, ಶಂಖ, ಪಟಹ, ಮದ್ದಳೆ, ಶ್ರೇಷ್ಠಮೃದಂಗದ, ಪಟುವಾದ ಕಹಳೆಯೇ ಮೊದಲಾದ ಅನೇಕವಿಧ ವಾದ್ಯಗಳ ಕಲ ಕಲವು ಎಂಟು ದಿಕ್ಕುಗಳನ್ನೂ ವ್ಯಾಪಿಸಿ ಅದೇನು ತುಂಬಿಕೊಂಡಿತೋ ! ೬೦. ಮಣಿ ಮಯವಾದ ಆ ವಿವಾಹಗೃಹದಲ್ಲಿ-ಕ್ಷೀರಸಮುದ್ರದಲ್ಲಿ ಲಕ್ಷ್ಮಿ ಮತ್ತು ವಿಷ್ಣುಗಳ ಮಧ್ಯದಲ್ಲಿ ತಪ್ಪದೆ ಮೇಲೇಳುತ್ತಿರುವ ಸುವರ್ಣವರ್ಣದ ಕಮಲದ ಹೂವಿನ ಧೂಳಿನಿಂದ ಕೂಡಿದ ಶ್ರೇಷ್ಠವಾದ ಅಲೆಗೆ, ಸರ್ವಮಂಗಳೆ ರಾಜಶೇಖರರ ನಡುವೆ ಇರುವ ಬಂಗಾರ

ಜವನಿಕೆ ನಡುವಿರೆ ನೋಡ
ಲ್ತವಕದಿನೋರೋರ್ವರಂ ಸಮುನ್ನತದೇಶ
ಕ್ಕವತರಿಸಿದರೆನೆ ಮುದದಿಂ
ದವರಾಗಳ್ಮೆಟ್ಟನಿಂದು ಮೆಟ್ಟಕ್ಕಿಗಳಂ ೬೧

ಪದೆದಿಟ್ಟರ್ ಜೀರಿಗೆ ಬೆ
ಲ್ಲದಿನೊರ್ವರನೊರ್ವರತುಳತರ ಸಂಭ್ರಮದಿಂ
ಮದವರ್ಕಳ್ನಿಜನಖರುಚಿ
ಕೆದಱುತ್ತಿರೆ ಕೂಡೆ ಮಲ್ಲಿಕಾಮಂಜರಿಯಂ ೬೨

ನಳಿನಮುಡುಗಳನೆ ಸೆಱೆವಿಡಿ
ದೆಳೆನೇಸರ್ಗೀವ ತೆಱದೆ ಕರಮದು ಮಕುಟೋ
ಜ್ವಳ ಮಣಿಶೇಖರದೆಡೆಯೊ
ಳ್ತಳಿದುದು ಪೊಸಮುತ್ತಿನಕ್ಷತೆಯನಾ ವಧುವಾ ೬೩

ಕಂದದ ಕುಂದದ ನನೆಯಂ
ಕಂದರ್ಪಂ ರತಿಯ ಮುಡಿಗೆ ಸೂಸುವವೋಲ್ಭೂ
ಕಂದರ್ಪಂ ಸೂಸಿದನೊಲ
ವಿಂದವಳ ಕಚೌಘದಲ್ಲಿ ಧವಳಾಕ್ಷತೆಯಂ ೬೪

ಜರಿಯಿಂದ ಕೂಡಿದ ತೆರೆ ಬಟ್ಟೆಯು ಸಮನಾಗಿತ್ತು. ೬೧. ತೆರೆಯು ಅವರಿಬ್ಬರ ಮಧ್ಯ ದಲ್ಲಿರಲು ಒಬ್ಬರನ್ನೊಬ್ಬರು ನೋಡುವ ಕಾತರದಿಂದ ಎತ್ತರವಾದ ಸ್ಥಳಕ್ಕೆ ಏರಿದರೋ ಎನ್ನುವಂತೆ ಸಂತೋಷದಿಂದ ಅವರು ಆಗ ಮೆಟ್ಟಕ್ಕಿಗಳನ್ನು ಮೆಟ್ಟನಿಂತರು. ೬೨. ಆ ಮದುಮಕ್ಕಳಿಬ್ಬರೂ ಅತುಳವಾದ ಸಂಭ್ರಮದಿಂದ ಕೂಡಿ, ತಮ್ಮ ಉಗುರಿನ ಕೊನೆಯ ಕಾಂತಿಯು ಕೆದರುತ್ತಿರಲು, ಸಂತೋಷದಿಂದ ಒಬ್ಬರಮೇಲೊಬ್ಬರು ಜೀರಿಗೆ ಬೆಲ್ಲವನ್ನು ಹಾಕಿ, ಮಲ್ಲಿಗೆಯ ಹೂಗೊಂಚಲನ್ನು ಒಬ್ಬರಮೇಲೊಬ್ಬರು ಇರಿಸಿದರು. ೬೩. ಕಮಲವು ನಕ್ಷತ್ರಗಳನ್ನು ಸೆರೆಹಿಡಿದು ಸೂರ್ಯನಿಗೆ ಒಪ್ಪಿಸುವ ರೀತಿಯಲ್ಲಿ, ಆ ಸರ್ವಮಂಗಳೆಯ ಕೈಯೆಂಬ ಕಮಲವು ಹೊಸಮುತ್ತಿನ ನಕ್ಷತ್ರಗಳೆಂಬ ಅಕ್ಷತೆಗಳನ್ನು ಕಿರೀಟವೆಂಬ ಉಜ್ವಳ ಸೂರ್ಯನಿಗೆ ತಳಿಯಿತು. ೬೪. ಕುಂದಿಲ್ಲದ ಮಲ್ಲಿಗೆಯ ಹೂವನ್ನು ಮನ್ಮಥನು ರತಿದೇವಿಯ ತುರುಬಿಗೆ ತುಂಬುವ ಹಾಗೆ ಭೂಲೋಕದ ಮನ್ಮಥನಾದ ರಾಜಶೇಖರನು ಆ ಸರ್ವಮಂಗಳೆಯ ಕೂದಲುಗಳ ಸಮೂಹದಲ್ಲಿ ಅಂದರೆ ಅವಳ ತಲೆಯಮೇಲೆ ಅತಿಶುಭ್ರವಾದ ಅಕ್ಷತೆಗಳನ್ನು ಚಲ್ಲಿದನು. ೬೫. ಗಾಳಿ ಬೀಸಿದಾಗ ಪುಷ್ಪ ಪರಾಗಪೂರ್ಣವಾದ ಮಾವಿನ ತಳಿರು ಸರಿಯುವಂತೆಯೂ ಅಶೋಕವೃಕ್ಷದ ತಳಿರು

ಚಂ॥ ಎಲರಲೆದೆತ್ತಿ ನೂಂಕಿ ತೊಲಗುತ್ತಿರೆ ಪುಷ್ಪಪರಾಗಪೂಗಮಾ
ವ್ರುಲತೆಯು ಪಲ್ಲವಂ ಮಿಸುಪಶೋಕೆಯು ನುಣ್ದಳಿರೊಂದುವಂತೆ ಚೆ
ಲ್ವಲರೆ ಸುವರ್ಣಕಾಂಡಪಟವೋಸರಿಸುತ್ತಿರೆ ಸನ್ಮುಹೂರ್ತಮು
ಜ್ವಲಿಸೆ ವಧೂವರರ್ಕಳ ಕರಗ್ರಹಣಂ ಬಗೆಗೊಂಡುದಾಕ್ಷಣಂ ೬೫

ಕಂ॥ ತೆರೆ ಸರಿಯೆ ಸಂಜೆ ಸರಿವಂ
ತಿರೆ ವರವದನೇಂದುವಂ ನಿರೀಕ್ಷಿಸಿ ತಾರಾ
ತರುಣಿ ಮುದವಾಂಪ ಮಾಳ್ಕೆಯೊ
ಳರಸಿ ಮುದಂಬೆತ್ತು ಬೀಱಿದಳ್ನಿಜರುಚಿಯಂ ೬೬

ವ॥ ಆಗಳ್

ಮ॥ಸ್ರ॥ ನನೆಯಂ ಪೇಱೆರ್ದ ಮಲ್ಲೀಲತೆಗಮುಮರ್ದು ಸತ್ಕೋರಕಂಬೆತ್ತ ಚೂತಾ
ವನಿಜಕ್ಕಂ ಚೈತ್ರನಚ್ಛಾಂಬುವೆನೆ ಸುರಿಪವೋಲ್ ಸ್ವೇದವಾರ್ಬಿಂದು ರೋಮಾಂ
ಚನಮಂ ಕೈಕೊಂಡು ನಿಂದಾತ್ಮಜೆಗವೊಡನೆ ಜಾಮಾತೃಗಂ ಸಿಂಹಳೇಂದ್ರಂ
ಮನವೊಲ್ದೀರಂತೆ ಕೈನೀರೆಱೆದನಭಿನವಸ್ವರ್ಣಕುಂಭಾಂಬುವಿಂದಂ ೬೭

ಉ॥ ಪಾಡೆ ಶೋಭನಮನಂಗನೆಯರ್ಕಳ್ಮಂಗಳಪಾಟಕರುರ್ವಿ ಕೊಂ
ಡಾಡೆ ಭೋರ್ಗಱೆದು ವಾದ್ಯನಿನಾದಂ ತೀವಿರೆ ಭೂವರಬಾಂಧವ
ರ್ನೋಡೆ ಸಂತಸದಿನಾಗಮಘೋಷಂ ಪೊಣ್ಮಿರೆ ಜಾಣ್ಮೆಗೆ ಹೋಮಮಂ
ಮಾಡೆ ಭೂಸುರರಿಳಾಪತಿಪುತ್ರಂ ಕೈವಿಡಿದಂ ಕಮಳಾಕ್ಷಿಯಂ ೬೮

ಸರಿಯುವಂತೆಯೂ ಸೊಗಸಾಗಲು, ದಂಪತಿಗಳ ನಡುವೆ ಇದ್ದ ಸುವರ್ಣಮಯವಾದ ತೆರೆ ಸರಿಯಿತು. ಸುಮುಹೂರ್ತ ಒದಗಿತು. ವಧೂವರರ ಪಾಣಿಗ್ರಹಣ ನಡೆಯಿತು. ೬೬. ದಂಪತಿಗಳ ಮಧ್ಯದ ಕಾಂಡಪಟದ ತೆರೆಯು ಸಂಜೆಯು ಹರಿಯುವಂತೆ ಸರಿಯಲು, ವರನ ಮುಖವೆಂಬ ಚಂದ್ರನನ್ನು ನೋಡಿ ತಾರೆಯೆಂಬ ತರುಣಿ ಸಂತೋಷವನ್ನು ಹೊಂದುವ ಹಾಗೆ ಸರ್ವಮಂಗಳೆ ಹರ್ಷಹೊಂದಿ, ತನ್ನ ಕಾಂತಿಯನ್ನು ಬೀರಿದಳು. ೬೭. ಚೈತ್ರರಾಜನು ಹೂವುಗಳಿಂದ ತುಂಬಿದ ಮಲ್ಲಿಗೆಯ ಬಳ್ಳಿಗೂ, ಒಳ್ಳೆಯ ಮೊಗ್ಗುಗಳನ್ನು ಬಿಟ್ಟ ಮಾವಿನಮರಕ್ಕೂ ನಿರ್ಮಲವಾದ ನೀರನ್ನು ಸುರಿಯುವ ಹಾಗೆ, ಬೆವರು ಮತ್ತು ರೋಮಾಂಚನಗಳನ್ನು (ಸಾತ್ವಿಕಭಾವದ ಆಧಿಕ್ಯದಿಂದ) ಹೊಂದಿದವನಾಗಿ ತನ್ನ ಕುಮಾರಿಗೂ, ಅಳಿಯನಿಗೂ ಸಿಂಹಳರಾಜ್ಯಾಧಿಪತಿಯು ಅತ್ಯಂತ ಪ್ರೀತಿಯಿಂದ ನೂತನವಾದ ಬಂಗಾರದ ಕಲಶವನ್ನೆತ್ತಿ ಧಾರೆಯ ನೀರನ್ನು ಎರೆದನು. ೬೮. (ಆಗ) ಹೆಂಗಸರು ಶೋಭನ ಪದಗಳನ್ನು ಹಾಡುತ್ತಿದ್ದರು ; ಮಂಗಳಪಾಠಕರು ಉಬ್ಬಿ ಕೊಂಡಾಡುತ್ತಿದ್ದರು ; ವಾದ್ಯಧ್ವನಿಗಳು ಭೋರ್ಗರೆಯುತ್ತ ವ್ಯಾಪಿಸಿದ್ದವು ; ಸಂತೋಷದಿಂದ ಬಂದ ರಾಜರುಗಳೂ ಬಂಧುಬಾಂಧವರೂ ನೋಡುತ್ತಿದ್ದರು ; ಮಂತ್ರಘೋಷವು ಹೊರಹೊಮ್ಮುತ್ತಿತ್ತು ; ಮಿಗಿಲಾದ ಜಾಣ್ಮೆಯಿಂದ ಬ್ರಾಹ್ಮಣರು ಹೋಮವನ್ನು ಮಾಡುತ್ತಿದ್ದರು. ಸತ್ಯೇಂದ್ರಚೋಳರಾಜಪುತ್ರನಾದ ರಾಜಶೇಖರನು ಕಮಲಾಕ್ಷಿ

ವ॥ ಅಲ್ಲಿಂ ಬಳಿಯಿಂ

ಕಂ॥ ನಡೆಮುಡಿಯೊಳೊಯ್ಯನೊಯ್ಯನೆ
ನಡೆವ ವಧೂವರರದೇಂ ವಿರಾಜಿಸಿದರೊ ಬೆ
ಳ್ಪಡರ್ದ ಪುಳಿನಸ್ಥಳದೊಳಡಿ
ಯಿಡುತೊಡನೈದುವ ಮರಾಳದಂಪತಿಗಳವೋಲ್ ೬೯

ಚಂ॥ ಶ್ರುತಿವಿಹಿತಕ್ರಿಯಾಕುಶಲಶೈವಮತಾಶ್ರಿತ ಶಾಸ್ತ್ರವಿತ್ಪುರೋ
ಹಿತಕೃತ ಹೋಮಕುಂಡದೆಡೆಗೆಳ್ತರುತಂ ಮದವರ್ಕಳಂಬಿಕಾ
ಪತಿಯುತಮಿಂತಿದೆಂದು ಬಲವಂದು ಜಯಸ್ವನಸರ್ವವಾದ್ಯಸಂ
ತತಿ ರುತಿತೀವೆ ಮಂಡಿಸಿದರಿಕ್ಕಿದ ಮೆಲ್ವಸೆಯೊಳ್ವಿಳಾಸದಿಂ ೭೦

ಕಂ॥ ನನೆವಾಸೆನೆ ಮುತ್ತಿನ ಪಸೆ
ಮನಸಿಜನೆನೆ ಕುವರನಲ್ಲಿ ನೆಲಸಿರೆ ಲಜ್ಜಾ
ವನತಾಂಗಿ ಕೆಲದೊಳಿಳುಪಿದ
ನನೆವಿಲ್ಲೆನೆ ಸುಗುಣವತಿ ಕರಂ ಮೆಱೆದಿರ್ದಳ್ ೭೧

ಮೆಲ್ಲನೆ ನಲ್ಲನನೀಕ್ಷಿಪ
ನಲ್ಲಳ ಕಣ್ಗದಿರ್ಗಳೆಸೆದುವಾಕೆಯ ಕಡೆಗ
ಣ್ಣಲ್ಲಿ ನೆಲಸಿದ ಮನೋಜಂ
ಮಲ್ಲಿಗೆ ಬಿರಿಮುಗುಳ ಸೇಸೆಯಂ ಸೂಸುವವೋಲ್ ೭೨

ಯಾದ ಸರ್ವಮಂಗಳೆಯ ಕೈಹಿಡಿದನು. ವ|| ಆಮೇಲೆ ೬೯. ಹಾಸಿದ ನಡೆ ಮುಡಿಯಮೇಲೆ ಮೆಲ್ಲಮೆಲ್ಲನೆ ನಡೆಯುತ್ತಿದ್ದ ಆ ವಧೂವರರುಗಳು ಬಿಳುಪಾಗಿರುವ ಮಳ ಲಿನ ಪ್ರದೇಶದಲ್ಲಿ ಹೆಜ್ಜೆಯನ್ನಿಡುತ್ತ ಒಂದನ್ನೊಂದು ಅನುಸರಿಸಿ ಬರುತ್ತಿರುವ ಹಂಸ ಪಕ್ಷಿಗಳ ಜೋಡಿಯ ಹಾಗೆ ಅದೇನು ಶೋಭೆಗೊಂಡರೋ ! ೭೦. ವೇದದಲ್ಲಿ ಹೇಳಿದ ರೀತಿಯಲ್ಲಿ ಕ್ರಿಯೆಗಳನ್ನು ಮಾಡುವುದರಲ್ಲಿ ಕುಶಲರಾದ ಶೈವಮತದವರಾದ, ಶಾಸ್ತ್ರ ಜ್ಞಾನವನ್ನು ಹೊಂದಿದ ಪುರೋಹಿತರಿಂದ ಮಾಡಲ್ಪಟ್ಟ ಹೋಮಕುಂಡದ ಸಮೀಪಕ್ಕೆ ಆ ಮದುಮಕ್ಕಳು ಎದ್ದು ಬರುತ್ತ, ಪಾರ್ವತಿಯು ತನ್ನ ಪತಿಯಾದ ಶಿವನನ್ನು ಪಡೆದ ಕ್ರಮವು ಇದೇ ಎಂದು ಆ ಕುಂಡವನ್ನು ಪ್ರದಕ್ಷಣೆಹಾಕಿ, ಜಯಜಯಕಾರವೂ, ಸಕಲ ವಾದ್ಯಧ್ವನಿಯೂ ತುಂಬಿರಲು, ಇರಿಸಿದ್ದ ಶ್ರೇಷ್ಠವಾದ ಹಸೆಯಮೇಲೆ ಸಂಭ್ರಮ ದಿಂದ ಕುಳಿತುಕೊಂಡರು. ೭೧. ಮುತ್ತಿನಿಂದ ಮಾಡಲ್ಪಟ್ಟ ವಿವಾಹಸಂಬಂಧದ ಹಸೆಯು ಮೊಗ್ಗುಗಳ ಮನೆಯೆನ್ನುವ ಹಾಗೆ, ಅಲ್ಲಿ ರಾಜಶೇಖರನೇ ಮನ್ಮಥನೆನ್ನುವ ಹಾಗೆ ಕುಳಿತುಕೊಂಡಿರಲು, ನಾಚಿಕೆಯಿಂದ ಸ್ವಲ್ಪ ಬಾಗಿದ ಶರೀರವುಳ್ಳ ಸುಗುಣಶಾಲಿನಿ ಸರ್ವಮಂಗಳೆಯು ಪಕ್ಕದಲ್ಲಿ ಇರಿಸಿದಂಥ ಹೂವಿನಬಾಣವೋ ಎಂಬ ಹಾಗೆ ವಿಶೇಷ ವಾಗಿ ಶೋಭಿಸುತ್ತಿದ್ದಳು. ೭೨. ಮೆಲ್ಲಮೆಲ್ಲನೆ ತನ್ನ ಪತಿಯಾದ ರಾಜಶೇಖರನನ್ನು ನೋಡುವ ನಲ್ಲಳಾದ ಸರ್ವಮಂಗಳೆಯ ಕಣ್ಣಿನಕಾಂತಿಗಳು-ಆಕೆಯ ಕಡೆಗಣ್ಣಿ

ವ॥ ಮತ್ತಮಲ್ಲಿ

ಉ॥ ಮಾಣಿಕವಚ್ಚಮಂ ತಳೆದು ಕುಂಕುಮದಣ್ಪನಮರ್ಚಿ ಕಾಯದೊಳ್
ಶೋಣ ನವೀನವಾಸಮನಲಂಪಿನೊಳುಟ್ಟೆಳೆಮುತ್ತುದೊಟ್ಟು ಕ
ಲ್ಯಾಣಿಯರಾಗಳಾರತಿಯ ಪೊಂಬರಿಯಾಣಮನಾಂತು ನಿಂದು ಮೇ
ಣ್ಕಾಣಿಸಿದರ್ಭೇಂದುಮತಿ ಸಂಜೆ ಬಹುತ್ವಮನಾಂತು ನಿಂದವೋಲ್ ೭೩

ಚಂ॥ ಮನದನುರಾಗದಿಂ ವನಿತೆ ನೋಳ್ಪುದುಮಲ್ಲಿ ವರಾನನಾಬ್ಜಮಂ
ತನುಪುಳಕಂಗಳಂ ತಳೆಯೆ ನೇತ್ರದೊಳುಣ್ಮೆ ಸುಖಾಶ್ರು ಮೆಲ್ಲಮೆ
ಲ್ಲನೆ ಬೆಮರುಣ್ಮೆ ಜಾಣ್ಮೆಯೊಳವಂ ಮಱಸುತ್ತಿರೆ ದೂರಿದತ್ತು ಕಂ
ಪನಕೃತ ಕಂಕಣಸ್ವನಮುಮಾಸ್ಯವಿಕಾಸಮುಮಾತ್ಮರಾಗಮಂ ೭೪

ವ॥ ಆಗಳ್

ಕಂ॥ ಪರಸುವ ಮುತ್ತೈದೆಯರಾ
ದರಿಸುವ ಕುಲವೃದ್ಧರತುಳ ಮಂಗಳಮಂ ಬಿ
ತ್ತರಿಸುವ ವಿಬುಧರ್ ನೆರೆದೊ
ತ್ತರಿಸುವ ನಲ್ವೆಂಡಿರೆಸೆದರಾ ಮಂಟಪದೊಳ್ ೭೫

ನಲ್ಲಿ ವಾಸವಾಗಿರುವ ಮನ್ಮಥನು ಮಲ್ಲಿಗೆಯ ಅರೆಬಿರಿದಿರುವ ಹೂವಿನ ಸೇಸೆಯನ್ನು ಸೂಸುತ್ತಿರುವನೋ ಎನ್ನುವ ಹಾಗೆ ಪ್ರಕಾಶಿಸುತ್ತಿದ್ದುವು. ವ॥ ಮತ್ತು ಅಲ್ಲಿ ೭೩. ಮಾಣಿಕ್ಯರತ್ನದ ತೊಡವುಗಳನ್ನು ಧರಿಸಿ, ಕುಂಕುಮ ಕೇಸರಿಯ ಕೆಸರನ್ನು ಹಚ್ಚಿಕೊಂಡು ಮೈಯಲ್ಲಿ ಕೆಂಪುವರ್ಣದ ಹೊಸದಾದ ಸೀರೆಯನ್ನುಟ್ಟು, ಎಳೆಯ ಮುತ್ತಿನಾಭರಣಗಳನ್ನು ಧರಿಸಿ, ಹೊನ್ನಿನ ಹರಿಯಾಣಗಳಲ್ಲಿ ಮಂಗಳಾರತಿಯನ್ನು ಮುತ್ತೈದೆಯರು ಹಿಡಿದುನಿಂತು, ನಕ್ಷತ್ರ ಸಹಿತವಾದ ಚಂದ್ರನಿಂದ ಕೂಡಿದ ಸಂಜೆ ಬಹುತ್ವವನ್ನು ಹೊಂದಿದ ಹಾಗೆ ಕಾಣಿಸಿಕೊಂಡರು. ೭೪. ಪತಿಯ ಮುಖವೆಂಬ ಕಮಲವನ್ನು ಸುಂದರಿಯಾದ ಸರ್ವಮಂಗಳೆಯ ಮನೋನುರಾಗದಿಂದ ಆ ವಿವಾಹದ ಮಂಟಪದಲ್ಲಿ ನೋಡಲಾಗಿ ಅವಳ ದೇಹವು ರೋಮಾಂಚನವನ್ನು ಹೊಂದಿತು. ಕಣ್ಣುಗಳಿಂದ ಆನಂದ ಬಾಷ್ಪಗಳು ಉದುರಿದುವು. ಮೆಲ್ಲಮೆಲ್ಲಗೆ ಬೆವರು ದೇಹದಿಂದ ಹೊರಟಿತು. ಜಾಣತನದಿಂದ ಆ ಸಾತ್ವಿಕಭಾವದ ಫಲವಾಗಿ ಉಂಟಾಗಿದ್ದ ರೋಮಾಂಚನಾದಿಗಳನ್ನು ಕಾಣಗೊಡದಂತೆ ಮಾಡುತ್ತಿರಲು, (ಕೈಯ) ಕಂಪನ (ನಡುಗುವಿಕೆ)ದ ಫಲವಾಗಿ ಉಂಟಾಗುತ್ತಿದ್ದ ಕೈಕಡಗಗಳ ಧ್ವನಿ ಮತ್ತು ಮುಖವಿಕಾಸವು ತನ್ನ ಅನುರಾಗವನ್ನು ಹೇಳುವಂತೆ ಇತ್ತು. ವ॥ ಆಗ ೭೫. ಆ ವಿವಾಹಮಂಟಪದಲ್ಲಿ (ವಧೂವರರಿಗೆ) ಹರಕೆಗಳನ್ನು ಮಾಡುವ ಮುತ್ತೈದೆಯರು, ಆದರವನ್ನು ತೋರ್ಪಡಿಸುವ ವೃದ್ಧಜನಗಳು, ಮಂಗಳವನ್ನು ಮಾಡುವ ಜ್ಞಾನಿಗಳು, ಒತ್ತಾಗಿ ಸೇರಿ ನಲಿವನ್ನು ವ್ಯಕ್ತಪಡಿಸುವ ಸ್ತ್ರೀಯರುಗಳು

ಘನಕಚ ಘನಕುಚಭಾರದೆ
ವನಿತೆಯರುಱಿ ಬಾಗುವಂತೆ ಬಾಗುತೆ ಕರದಿಂ
ದನವದ್ಯೆಯರಾಗಳ್ ಮು
ತ್ತಿನ ಸೇಸೆಯನಿಕ್ಕಿ ಪರಸಿದರ್ ಮನದೊಲವಿಂ ೭೬

ವ॥ ಆ ಸಮಯದೊಳಖಿಳಕಳಾವಿದೆಯರಾದ ಕೆಳದಿಯರುಂ ನೆರೆದ ನರೇಂದ್ರಪುರಂಧ್ರಿಯರುಮಭೀಕ್ಷಿಸಿ

ಕಂ॥ ಶಿವೆಯ ವರದಿಂದೆ ಪುಟ್ಟಿದ
ಕುವರಿಯಿವಳ್ ತತ್ಪ್ರಸಾದದಿಂದಲ್ತೆ ಮನೋ
ಭವನನಿಳಿಕೆಯ್ವ ಚೆಲ್ವಿನ
ಯುವರಾಜನೊಳೊಲ್ದಿವೆತ್ತು ಪಸೆನಿಂದಿರ್ದಳ್ ೭೭

ವ॥ ಅಂತುಮಲ್ಲದೆಯುಂ

ಕಂ॥ ಇವರ ರೂಪಿವರ ವಿಭ್ರಮ
ಮಿವರತಿ ಲಾವಣ್ಯಮಿವರ ಸೊಬಗಿವರ ಕಳಾ
ನಿವಹಜ್ಞತೆಯಿವರ ಗುಣಂ
ವಿವರಿಸೆ ಮತ್ತಿವರೊಳಲ್ಲದನ್ಯರೊಳೊಳವೇ ೭೮

ವ॥ ಎಂದು ಮಗುಳ್ದು ಮಗುಳ್ದೀಕ್ಷಿಸಿ ಪೊಗಳುತ್ತಮಿರೆ

ಶೋಭಿಸುತ್ತಿದ್ದರು. ೭೬. ಉದ್ದವಾದ ಮುಡಿ, ದಪ್ಪನೆಯ ಮೊಲೆಗಳು, ಇವುಗಳ ಭಾರದಿಂದ ಹೆಚ್ಚಾಗಿ ಬಾಗಿರುವರೋ ಎಂಬಂತೆ, ಪರಿಶುದ್ಧೆಯರಾದ ಸ್ತ್ರೀಯರುಗಳು ಬಾಗಿ, ಕೈಗಳಿಂದ ಮುತ್ತಿನ ಅಕ್ಷತೆಗಳನ್ನು (ವಧೂವರರ) ಮೇಲೆ ಹಾಕಿ ಮನಸ್ಸಿನ ಪ್ರೀತಿಯಿಂದ ಆಶೀರ್ವಾದ ಮಾಡಿದರು. ವ॥ ಆ ಸಮಯದಲ್ಲಿ ಸಮಸ್ತಕಲೆಗಳನ್ನು ತಿಳಿದವರಾದ ಸಖಿಯರುಗಳೂ, ನೆರೆದಂಥ ರಾಜರುಗಳ ಪತ್ನಿಯರುಗಳೂ (ವಧೂವರರನ್ನು) ನೋಡಿ ೭೭. "ಈ ಸರ್ವಮಂಗಳೆಯು ಪಾರ್ವತಿಯ ವರದಿಂದ ಹುಟ್ಟಿದವಳು, ಪಾರ್ವತಿಯ ವರಪ್ರಸಾದದಿಂದಲ್ಲವೆ (ಇವಳು) ಮನ್ಮಥನ ರೂಪನ್ನು ಕೀಳ್ಮಾಡುವ ಚೆಲುವನಾದ ಯುವರಾಜನಲ್ಲಿ ಅನುರಾಗಗೊಂಡು ಅವನೊಡನೆ ಹಸೆಯನ್ನೇರಿದುದು ! ವ॥ ಅದೂ ಅಲ್ಲದೆಯೂ, ೭೮. ಈ ಸರ್ವಮಂಗಳೆ ಮತ್ತು ರಾಜಶೇಖರರ ರೂಪ, ಇವರುಗಳ ವಿಲಾಸ, ಇವರುಗಳ ಅತಿಶಯವಾದ ಸೌಂದರ್ಯ, ಇವರುಗಳ ಸೊಬಗು, ಇವರುಗಳ ವಿದ್ಯಾಸಮೂಹಗಳ ತಿಳುವಳಿಕೆ, ಇವರುಗಳ ಸದ್ಗುಣ, ಇವುಗಳನ್ನು ವಿಚಾರ ಮಾಡಿನೋಡಿದರೆ ಇವೆಲ್ಲವು ಇವರಲ್ಲಿಯೇ ಇರುವುವಲ್ಲದೆ ಬೇರೆಯವರಲ್ಲಿ ಇರುವುವೆ ?" ವ॥ ಎಂದು (ಆ ವಧೂವರರನ್ನು) ಪುನಃ ಪುನಃ ನೋಡಿ ಹೊಗಳುತ್ತಿರಲಾಗಿ

ಕಂ॥ ಸರಿಯಿಟ್ಟು ನೋಳ್ಪವೋಲ್ಪಂ
ಕರುಹಮನವಳಡಿಗೆ ತನ್ನ ಕರಮಿಡುತರಸಂ
ಸರಸಂ ಮಿಗೆ ಮೆಟ್ಟಿಸಿದಂ
ದರಹಾಸಂ ಮೊಳೆಯೆ ಸಪ್ತಪದಿಗಳನಾಗಳ್ ೭೯

ಉ॥ ಮಂಗಳದುತ್ಸವಂ ನೆಗಳೆ ಸಿಂಹಳಭೂಪತಿ ರೋಹಣಾದ್ರಿಯಂ
ತಾಂ ಗೆಲೆವಂದು ಕಾನಕನಗೇಂದ್ರದವೋಲ್ಸಲೆ ಸಂದು ನಿಂದ ರ
ತ್ನಂಗಳ ರಾಶಿಯಂ ಮಿಸುಪ ಪೊಂಗಳ ರಾಶಿಯನಲ್ಲಿ ದೇವಭೂ
ಜಂಗಳ ಪೆರ್ಮೆ ಕೀಳ್ಪಡೆ ಬುಧಪ್ರಕರಕ್ಕವನಿತ್ತನಳ್ತಿಯಿಂ ೮೦

ವ॥ ಆಗಳಾ ಸಿಂಹಳೇಂದ್ರನರ್ಧಾಂಗಿ ಕಳಾಧರೆ ಮಗಳುಮನಳಿಯನುಮನಭೀಕ್ಷಿಸಿ ಸಂತಸಂಬಟ್ಟು

ಕಂ॥ ಹಿಮ ಮೃಗಮದ ಕುಂಕುಮ ಕ
ರ್ದಮ ಸುಮನೋಮಾಲ್ಯ ವೀಟಕಾಭೂಷಣವ್ರಂ
ದಮನಮಳಾಂಬರಮುಂ ನೃಪ
ರಮಣಿಯ ಸಮುದಯಕೆ ಪೊನ್ನ ಪಾತ್ರೆಯೊಳಿತ್ತಳ್ ೮೧

೭೯. ಕಮಲವನ್ನು ಆ ಸರ್ವಮಂಗಳೆಯ ಕಾಲುಗಳಿಗೆ ಹೋಲಿಸಿ (ಒರೆಹಚ್ಚಿ) ನೋಡುತ್ತಿರುವನೋ ಎನ್ನುವ ಹಾಗೆ ರಾಜಶೇಖರನು ಅವಳ ಕಾಲುಗಳಿಗೆ ತನ್ನ (ಕಮಲದಂತಹ) ಕೈಗಳನ್ನಿಟ್ಟು, ಅತಿಶಯ ಅನುರಾಗರಸದಿಂದ ಕೂಡಿದವನಾಗಿ, ಮುಖದಲ್ಲಿ ಮಂದಹಾಸವು ಮಿನುಗುತ್ತಿರಲು, 'ಸಪ್ತಪದಿ' ಎಂಬ ಹೆಸರಿನ ವಿವಾಹ ವಿಧಿಯ ಏಳು ಹೆಜ್ಜೆಗಳನ್ನು ತನ್ನೊಡನೆ ನಡೆಸಿದನು. ೮೦. ವಿವಾಹಮಹೋತ್ಸವವು ಮುಗಿಯಲಾಗಿ ರೋಹಣಾಚಲವನ್ನು ಗೆಲ್ಲಲು ಬಂದು ನಿಂತ ಮೇರುಪರ್ವತವೋ ಎನ್ನುವ ಹಾಗೆ ಆಗಿ, ಆ ಸಿಂಹಳಭೂಪತಿಯು ಆ ವಿವಾಹಮಂಟಪದಲ್ಲಿ ರತ್ನಗಳ ರಾಶಿಯನ್ನೂ, ಪ್ರಕಾಶಿಸುವ ಬಂಗಾರದ ರಾಶಿಯನ್ನೂ ಕಲ್ಪವೃಕ್ಷಗಳ ಘನತೆ (ದಾನಗುಣದ ಘನತೆ)ಯನ್ನೇ ಕೀಳುಗೊಳಿಸುವಂತೆ ವಿದ್ವಾಂಸರಿಗೆ ಪ್ರೀತಿಯಿಂದ ದಾನಮಾಡಿದನು. ವ|| ಆಗ ಸಿಂಹಳೇಂದ್ರಪತ್ನಿಯಾದ ಕಳಾಧರೆಯು ಮಗಳು ಮತ್ತು ಅಳಿಯನನ್ನು ನೋಡಿ ಸಂತೋಷಗೊಂಡು, ೮೧. ಪಚ್ಚಕರ್ಪೂರ, ಕಸ್ತೂರಿ, ಕುಂಕುಮ, ಶ್ರೀಗಂಧ, ಹೂಮಾಲೆಗಳು, ತಾಂಬೂಲ, ಆಭರಣಗಳ ಸಮೂಹಗಳನ್ನೂ, ಶ್ರೇಷ್ಠವಾದ ಉಡುಗೊರೆಯನ್ನೂ, ರಾಜಪತ್ನಿಯರ ಸಮೂಹಕ್ಕೆ ಆ ಸಿಂಹಳೇಂದ್ರಪತ್ನಿಯಾದ ಕಳಾಧರೆಯು ಬಂಗಾರದ ಪಾತ್ರೆ

ವ॥ ಇಂತು ಯಥೋಚಿತವಿಧಾನಂ ಪರಿಣಯಂಬಡೆದನಂತರಮನೂನಸ್ನೇಹರಸಭರಿತಾಂತಃಕರಣಂ ಕುಮಾರಕುಸುಮಾಯುಧಂ ಸಸಂಭ್ರಮಂ ಸಜ್ಜುಗೈದ ಶಯ್ಯಾಗೃಹದ ಪಜ್ವಳಿಪ ಪರಿಮಳ ಪರಿಮಿಳಿತ ಕುಸುಮಸರ ವಿಸರ ಪರಿವೃತ ಕನಕಪರ್ಯಂಕತಳದ ಮೃದುಳ ಧವಳತಳ್ಪಸ್ಥಳದೊಳ್ಗಾಡಿಯಿಂ ನಲ್ಲಳ ಬರವಂ ಬಯಸುತ್ತೆ ಕುಳ್ಳಿರ್ದ ಪ್ರಸ್ತಾವದಲ್ಲಿ

ಮ॥ ವದನೇಂದುದ್ಯುತಿ ಪೊಣ್ಮೆ ಸೋರ್ಮುಡಿಯ ಕಂಪಿಂಗೆಯ್ದೆ ಭೃಂಗಾಳಿ ಪಿಂ
ಗದೆ ಪೀನಸ್ತನಮುಂ ಕದಕ್ಕದಿಸೆ ಮಧ್ಯಂ ಬಳ್ಕೆ ಮಂಜೀರನಾ
ದದೊಳೊಂದಾಗಿ ಪಳಂಚೆ ಕಾಂಚಿನಿನದಂ ಸಾರ್ತಂದಳಿಂದೀವರಾ
ಕ್ಷಿ ದರಸ್ಮೇರಮರೀಚಿ ಸೂಸೆ ಸುಧೆಯಂ ತನ್ಮಂದಿರಪ್ರಾಂತಮಂ ೮೨

ವ॥ ಇಂತೆಳ್ತಂದ ಸರ್ವಮಂಗಳಾದೇವಿಯೊಡನೆ ಕಳಾವಿದೆಯರಾದ ಕೆಳದಿಯರೊಡನೆಳ್ತಂದತಿಶಯಪ್ರಮೋದದಿನಾ ಕುವರಿಯನಾ ಯುವರಾಜನ ಕೆಲದೊಳ್ ಕುಳ್ಳಿರಿಸಿ ಸರಸಾಲೋಕನದಿಂದವಲೋಕಿಸಿ ತಂಗಿ ನಲ್ಲಂಗೆ ತಾಂಬೂಲಂಗುಡುವುದೆಂದು ಪೇಳ್ದೊಂದೊಂದು ನೆವದಿನೆಲ್ಲರ್ ಮೆಲ್ಲನೆ ತೊಲಗಲೊಡನೆ ಚಲ್ಲದಿಂ ನಲ್ಲಳ ಲಜ್ಜಾನತಮಾದ ನಗೆಮೊಗಮಂ

ಯಲ್ಲಿ ಇಟ್ಟು ಇಟ್ಟು ಕೊಟ್ಟಳು. ವ॥ ಈ ರೀತಿ ಯಥಾಯೋಗ್ಯವಾದ ವಿಧಾನಗಳಿಂದ ಕೂಡಿದ ವಿವಾಹಮಹೋತ್ಸವವನ್ನು ನೆರವೇರಿಸಿ ಪರಿಪೂರ್ಣವಾದ ಸ್ನೇಹರಸಭರಿತವಾದ ಅಂತಃಕರಣದಿಂದ ಕೂಡಿದ, ಮನ್ಮಥಸಮಾನವಾದ ರಾಜಶೇಖರಕುಮಾರನು ಅತಿಸಂಭ್ರಮಗೊಂಡವನಾಗಿ ವ್ಯವಸ್ಥೆಗೊಳಿಸಿದ್ದ ಪ್ರಜ್ವಲಿಸುತ್ತಿರುವ, ಸುಗಂಧ ದ್ರವ್ಯಗಳಿಂದ ಸುಗಂಧಮಯವಾದ ಹೂಮಾಲೆಗಳ ಸಮೂಹದಿಂದ ಸುತ್ತಲೂ ಅಲಂಕರಿಸಲ್ಪಟ್ಟ ಮಲಗುವ ಮನೆ (ಶಯ್ಯಾಗೃಹ)ಯ ಮಂಚದ ಮೇಲೆ (ಹಾಸಿದ್ದ) ಮೃದುವಾದುದೂ, ಬಿಳಿಯ ಬಣ್ಣದ್ದೂ ಆದ ಹಾಸಿಗೆಯಲ್ಲಿ ಸಂಭ್ರಮದಿಂದ ಪ್ರಿಯೆಯಾದ ಸರ್ವಮಂಗಳೆಯು ಬರುವ ಮಾರ್ಗವನ್ನೇ ಇಚ್ಛಿಸುತ್ತ ಕುಳಿತುಕೊಂಡಿದ್ದ ಸಮಯದಲ್ಲಿ, ೮೨. ಮುಖವೆಂಬ ಚಂದ್ರನ ಕಾಂತಿಯು ಹೊರಹೊಮ್ಮಿತು : ನೀಳವಾದ ಜಡೆಯ ಕಂಪಿಗೆ ಭ್ರಮರಸಮೂಹವು ಬರುತ್ತಿದ್ದವು; ದಪ್ಪನೆಯ ಮೊಲೆಗಳು ಗದಗದಿಸುತ್ತಿದ್ದವು. ನಡುವು ಬಳುಕಾಡುತ್ತಿತ್ತು ; ಕಾಲಂದಿಗೆಗಳ ಧ್ವನಿಯೊಡನೆ ಡಾಬಿನ ಗೆಜ್ಜೆಗಳ ಧ್ವನಿಯು ಒಂದಾಗಿ ಸೇರಿಕೊಂಡಿತ್ತು ; ಮಂದಹಾಸದ ಕಾಂತಿಯು ಅಮೃತವನ್ನು ಹೊರ ಚೆಲ್ಲುತ್ತಿತ್ತು. (ಹೀಗೆ) ನೈದಿಲೆಗಣ್ಣಿನವಳಾದ ಆ ಸರ್ವಮಂಗಳಾದೇವಿಯು ಆ ಶಯ್ಯಾಗೃಹ ಪ್ರದೇಶವನ್ನು ಕುರಿತು ಬಂದಳು. ವ॥ ಈ ರೀತಿ ಬಂದ ಸರ್ವಮಂಗಳಾದೇವಿಯೊಡನೆ ಕಲಾನಿಪುಣೆಯರೆನಿಸಿದ ಸಖಿಯರು ಬಂದು, ಅತ್ಯಂತ ಆನಂದದಿಂದ ಆ ಕುಮಾರಿಯನ್ನು ಯುವರಾಜನಾದ ರಾಜಶೇಖರನ ಪಕ್ಕದಲ್ಲಿ ಕುಳ್ಳಿರಿಸಿ, ಸಾನುರಾಗದಿಂದ ಕೂಡಿದ ದೃಷ್ಟಿಯಿಂದ ನೋಡಿ, 'ತಂಗೀ, ಪ್ರಿಯನಿಗೆ ತಾಂಬೂಲವನ್ನು ಕೊಡು.' ಎಂದು ಹೇಳುತ್ತ, ಒಂದೊಂದು ನೆಪದಿಂದ ಎಲ್ಲರೂ ಮೆಲ್ಲಮೆಲ್ಲನೆ ಅಲ್ಲಿಂದ ಹೊರಟು

ಸಂದಣಿಪ ಕಟಾಕ್ಷದಿನಡರಿ ನೋಡಿ ಕಾಮಕೇಳಿಗೆ ಮನಂದಂದೊಯ್ಯನೆ ಕೆಯ್ಯಂ ಪಿಡಿದು ರಯ್ಯಮೆನೆ ಮೆಯ್ಯಂ ಸೋಂಕಿ ಕುರುಳಂ ನೇವರಿಸಿ ಕರಾಂಗುಲಿಯಂ ಚಿಟುಂಕಿಸಿ ನೇಮದಾಣ ಮಸಂಟ ಗಲ್ಲಮಂ ಪಿಡಿದಲುಂಗಿ ಬಿಂಬಾಧರಮಂ ಚುಂಬಿಸಿ ಲಜ್ಜೆ ಪಜ್ಜೆದೆಗೆವಂತೆ ಜಾಣ್ಮೆಯಂ ಮೆಱೆದು ಮದನೋದ್ರೇಕಂ ಮನದೊಳೊದವಿದ ಪದಮಂ ಮೊಳೆವ ಪುಳಕದಿಂ ನೆಗೆವ ಬೆಮರಿಂ ಮೇಲ್ವರಿವಪಾಂಗದಿಂ ತಿಳಿದು ಮೋಹವಱಿದು ಮುದ್ದಿಸಿ ತವಕವಱಿದು ತಳ್ಕಿಸಿ ಲಲ್ಲೆಯಱಿದು ಭುಲ್ಲವಿಸಿ ಸೋಲವಱಿದು ಸೊರ್ಕುಗೊಳಿಸಿ ಕಾಲವಱಿದು ಕಳೆಯೇಱಿಸಿ ಕಳಾನಿಳಯಂ ಕಡಂಗಿ ಸುಸಿಲಜಕ್ಕವಕ್ಕಿಯಂತೆ ಸುಸಿಲೆಸಗಲುಜ್ಜುಗಿಸಿರ್ಪನ್ನೆಗಂ

ಚಂ॥ ಬಳಿವರೆ ಪೊರ್ದಿ ಸೋಂಕಲೊಡನಂಗಮನೊಂದಿನಿಸಿತ್ತು ತಳ್ಕೆಗಂ
ಡೆಳಸಿರೆ ತೋಳ್ಗಳಂ ನೆಗಪಿ ಮೆಲ್ಲನೆ ಚುಂಬಿಸಲೊಂದೆ ವಕ್ತ್ರಮಂ
ಡಳಮನಮರ್ಚಿ ಸಾದರಮೆ ಕೂಡಲೊಡರ್ಚಿರೆ ಲಜ್ಜೆಯೊಕ್ಕು ಮೈ
ವಳಿಯೊಳೆ ಸಂದು ಮೈಗುಡುತವಳ್ಪಿಡಿದಳ್ಮನಮಂ ಮನೋಜ್ಞನಾ ೪೩

ಹೋದರು. ಆ ಕೂಡಲೆ ರಾಜಶೇಖರನು ನಗುತ್ತ ಪ್ರಿಯೆಯಾದ ಸರ್ವಮಂಗಳೆಯ ನಾಚಿಕೆಯಿಂದ ಬಾಗಿದ್ದ ನಗೆಮುಖವನ್ನು ಸಮುರಸಗೊಳ್ಳುವ ಕಡೆಗಣ್ಣಿನಿಂದ ನೋಡಿ, ಮನ್ಮಥವಿಲಾಸಕ್ಕೆ ಮನಸ್ಸುಮಾಡಿ, ಕೂಡಲೆ ಅವಳ ಕೈಯನ್ನು ಹಿಡಿದು ಅನುಕೂಲವಾಗುವ ರೀತಿಯಲ್ಲಿ ದೇಹವನ್ನು ಸೋಂಕಿದನು. ಮುಂಗುರುಳನ್ನು ಸರಿಪಡಿಸಿದನು. ಅವಳ ಕೈಬೆರಳುಗಳ ಚಿಟುಕೆಮುರಿದನು. ಕಲಾಸ್ಥಾನವನ್ನು ಮುಟ್ಟಿದನು. ಗಲ್ಲವನ್ನು ಹಿಡಿದು ಅಲುಗಾಡಿಸಿದನು. ತೊಂಡೆಯ ಹಣ್ಣಿನಂತಿರುವ ತುಟಿಯನ್ನು ಚುಂಬಿಸಿ ನಾಚಿಕೆಯು ಓಡಿಹೋಗುವಂತೆ ಜಾಣತನವನ್ನು ಪ್ರಕಟಿಸಿ, ಅವಳ ಮನಸ್ಸಿನಲ್ಲಿ ಕಾಮೋದ್ರೇಕವು ಉಂಟಾದುದನ್ನು ಮೊಳೆದೋರಿದ ರೋಮಾಂಚನ, ಹೊರಹೊಮ್ಮುವ ಬೆವರು (ಮತ್ತು) ತನ್ನ ಮೇಲೆ ಹರಿಯುತ್ತಿರುವ ಕಡೆಗಣ್ಣಕಾಂತಿ ಇವುಗಳಿಂದ ತಿಳಿದನು. (ಅವಳ) ಮೋಹವನ್ನರಿತು ಮುದ್ದಿಸಿದನು, ಕಾತರವನ್ನು ತಿಳಿದು ಅಪ್ಪಿಕೊಂಡನು, ಪ್ರೀತಿಯನ್ನರಿತು ಉತ್ಸಾಹಗೊಳಿಸಿದನು, ಸೋತುದನ್ನು ಅರಿತು ಸೊಕ್ಕನ್ನುಂಟುಮಾಡಿದನು, ಸಮಯವನ್ನು ತಿಳಿದು ಕಳೆಗೊಳ್ಳುವಂತೆ ಮಾಡಿದನು. (ಹೀಗೆ) ಆ ರತಿಕಲಾನಿಲಯನಾದ ರಾಜಶೇಖರನು ಉತ್ಸಾಹಗೊಂಡು ಭೋಗಿಸುವ ಚಕ್ರವಾಕಗಳಂತೆ ಭೋಗಿಸಲು ಪ್ರಾರಂಭಿಸಿದಾಗ, ೮೩. ಆ ಸರ್ವಮಂಗಳೆಯು ಪತಿಯು ಬಳಿಗೆ ಬಂದಾಗ ಅವನಿಗೆ ಹೊಂದಿಕೊಂಡು, ಮುಟ್ಟಲು ಬಂದಾಗ ಕೂಡಲೇ ಅವನ ಸ್ಪರ್ಶಕ್ಕೆ ಒಂದಿಷ್ಟು ದೇಹವನ್ನು ಚಾಚಿಕೊಟ್ಟು, ಅಪ್ಪಿಕೊಳ್ಳಲಪೇಕ್ಷಿಸಿದಾಗ ತೋಳುಗಳನ್ನು (ಅನುಕೂಲವಾಗುವಂತೆ) ಮೇಲಕ್ಕೆತ್ತುತ್ತ, ಮೆತ್ತಗೆ ಮುದ್ದಿಡಲು ಯತ್ನಿಸಿದಾಗ ಮುಖಮಂಡಲವನ್ನು (ಅನುಕೂಲವಾಗುವಂತೆ) ಕೊಟ್ಟು, ಆದರಪೂರ್ವಕವಾಗಿ ಕೂಟಗೊಳ್ಳಲು ಸಿದ್ಧನಾದಾಗ ನಾಚಿಕೆಗೂಡಿ ಅವನ ಮೈಬಳಿಯಲ್ಲಿ ಸೇರಿ ಮೈಯನ್ನು ಚಾಚುತ್ತ ಕೊಟ್ಟು.

ಮ॥ ರತಿರಾಗಂಬೆತ್ತು ಕಾಂತಂ ತೆಗೆದು ಬಿಗಿದು ತಳ್ಕೈಸೆ ನೀವೀಭರಂ ಜಾ
ಱಿ ತದೀಯಾಂಗಕ್ಕಪಾಂಗದ್ಯುತಿ ವಸನಮನಾಶಿತ್ತು ಲುಪ್ತಾಂಗರಾಗೋ
ನ್ನತ ವಕ್ಷೋಜಕ್ಕೆ ಹಸ್ತಾರುಣ ರುಚಿ ಘುಸೃಣಕ್ಷೋದಮಂ ಸಾರ್ಚೆ ಲೀಲಾ
ಚ್ಯುತ ಹಾರಗ್ರೀವೆಯೊಳ್ ಸ್ವೇದಲವಸರಮನಿತ್ತೊಲ್ದು ಕೂಡುತ್ತಮಿರ್ದಂ ೮೪

ಚಂ॥ ಒಳಪುಗುವಂತೆ ಬಟ್ಟಮೊಲೆಗಳ್ನಿಜವಕ್ಷದೊಳಾಳೆ ಸೊರ್ಕ್ರ ಸಂ
ಗಳಿಸಿರೆ ತೋಳ್ಗಳಿಂ ಬಿಗಿದು ತಳ್ಕಿಸಿ ನಾಣ್ಬಡೆ ಜಾಘ್ನದೋಱಿ ಚಂ
ದಳಿರ್ದುಟಿಯುಂ ಕರ್ದುಂಕಿ ಕಳೆವರ್ಚಿಸಿ ಮುದ್ದಿಸಿ ಲಲ್ಲೆಗೆಯ್ದು ತ
ನ್ನಳ ಮನಮಂ ಮರಳ್ಚಿದನದೇಂ ರತಿಕೋವಿದನೋ ಕುಮಾರಕಂ ೮೫

ಮನದನುರಾಗಮೇಳ್ತರದ ಕಾತರಮಂ ಪಡೆದೀಯೆ ಸೋಂಕಿನಿಂ
ಜನಿಯಿಪ ಸೊರ್ಕು ಸೋಲಮನಮರ್ಚೆ ಸುಧಾಧರದಿಂಪು ಕಂಠನಿ
ಸ್ವನಮನೊಡರ್ಚೆ ತಳ್ಕೆ ತನಿನೇಹಮನುರ್ವಿಸೆ ತಳ್ತ ಕೂಟಮೊಂ
ದಿನಿತಱಿವಂ ಕಳಲ್ಚೆ ನೆರೆದರ್ ಪರಮೋತ್ಸವದಿಂ ವಧೂವರರ್ ೮೬

ಮನೋಹರನಾದ ಆ ರಾಜಶೇಖರನ ಮನಸ್ಸನ್ನು ಸೆರೆಗೆಯ್ದಳು. ೮೪. ರತಿಕ್ರೀಡೆ ಯಲ್ಲಿ ಅನುರಾಗಗೊಂಡು ಗಂಡನು ಬರಸೆಳೆದು ಬಿಗಿದು ಅಪ್ಪಿಕೊಳ್ಳಲು ಸೀರೆಯ ಉಡುಗಂಟು ಸಡಿಲಗೊಂಡು ಸೀರೆ ಕಳಚಿತು. ಅವಳ ದೇಹಕ್ಕೆ ತನ್ನ ಕಡೆಗಣ್ಣ ನೋಟದ ಪ್ರಕಾಶವನ್ನೇ ಬಟ್ಟೆಯನ್ನಾಗಿ ಮಾಡಿದನು. ಅಳಿಸಿಹೋದ ಅಂಗರಾಗಾದಿಗಳಿಂದ ಕೂಡಿದ ಉನ್ನತವಾದ ಮೊಲೆಗಳಿಗೆ ತನ್ನ ಕೈಯ ಅರುಣಕಾಂತಿಯೆಂಬ ಕುಂಕುಮಕೇಸರಿಯ ಧೂಳನ್ನು ಹಚ್ಚುತ್ತಿದ್ದನು. ರತಿಲೀಲಾ ಸಮಯದಲ್ಲಿ ಜಾರಿಹೋದ ಹಾರದಿಂದ ಕೂಡಿದ ಕುತ್ತಿಗೆಯಲ್ಲಿ ಬೆವರಿನ ಹನಿಗಳ ಸರವನ್ನು ಕೊಟ್ಟು ಪ್ರೀತಿಯಿಂದ ಭೋಗಿಸುತ್ತಿದ್ದನು. ೮೫. ಆ ರಾಜಶೇಖರಕುಮಾರನು ಆ ಸರ್ವಮಂಗಳೆಯ ವೃತ್ತಾಕಾರವಾದ ದಪ್ಪನೆಯ ಮೊಲೆಗಳು ತನ್ನ ವಕ್ಷಸ್ಥಳದಲ್ಲಿ ಮುಳುಗಿಹೋಗುವಂತೆ ರತಿಸಂಬಂಧವಾದ ಮದದಿಂದ ಕೂಡಿ ತೋಳುಗಳಿಂದ ಬಿಗಿಯಾಗಿ ಅಪ್ಪಿಕೊಂಡನು. ಸರ್ವಮಂಗಳೆಯ ನಾಚಿಕೆಯನ್ನು ತೊರೆಯುವಂತೆ ಜಾಣತನವನ್ನು ತೋರಿಸಿದನು. ಕೆಂಪನೆಯ ತಳಿರಿನಂತಹ ತುಟಿಗಳನ್ನು ಚಪ್ಪರಿಸಿದನು. ಅವಳಲ್ಲಿ ರತಿಕಲೆಯನ್ನು ಅಧಿಕಗೊಳಿಸಿದನು. ಮುದ್ದುಮಾಡಿ ಪ್ರೀತಿಯಮಾತನಾಡಿ ತನ್ನವಳಾದ ಅವಳ ಮನಸ್ಸನ್ನು ರತಿಕ್ರೀಡೆಯ ಕಡೆಗೆ ತಿರುಗಿಸಿದ ಅವನು ಏನು ರತಿಜ್ಞಾನ ಶ್ರೇಷ್ಠನೋ ! ೮೬. ಆ ವಧೂವರರು ಮನಸ್ಸಿನ ರತಿಸಂಬಂಧದ ಪ್ರೀತಿಯು ಹಿಂದೆಂದೂ ಆಗದ ರೀತಿಯಲ್ಲಿ ತೀವ್ರಾಭಿಲಾಷೆಯನ್ನುಂಟುಮಾಡುತ್ತಿತ್ತು. ಸ್ಪರ್ಶದಿಂದುಂಟಾದ ಸೊಕ್ಕು ಪರಸ್ಪರ ಸೋತುಹೋದ ಭಾವನವನ್ನುಂಟುಮಾಡಿತು. ಅಮೃತಯುತವಾದ ತುಟಿಯ ರಸದ ರುಚಿಯು ಗಳಧ್ವನಿಯನ್ನುಂಟುಮಾಡುತ್ತಿತ್ತು. ಅಪ್ಪುಗೆಯು ನೂತನ ಸ್ನೇಹವನ್ನು ಅಧಿಕಗೊಳಿಸುತ್ತಿತ್ತು. ಕೂಡಿದ ಕೂಟವು ತಿಳುವಳಿಕೆಯನ್ನೆಲ್ಲ ಹೋಗಲಾಡಿಸಿತ್ತು.

ವ॥ ಅಂತುಮಲ್ಲದೆಯುಂ

ಮ॥ ಬೆರಸುತ್ತುಂ ಬಿಗಿಯಪ್ಪಿ ಕೂಡುವೆಡೆಯೊಳ್ ಕಂಠೋತ್ಥಿತಧ್ವಾನಮುಂ
ಕರಸಂತಾಡನಮುಂ ಕಚಗ್ರಹಣಮುಂ ದಂತಕ್ಷತಂಗೆಯ್ವುದುಂ
ಕರಜಾತಾಹತಿಯುಂ ಪೊದಳ್ದ ರತದೊಳ್ ಸೊರ್ಕೇಱಿ ಕಣ್ಮುಚ್ಚಿ ನಿ
ರ್ಭರದಿಂ ಮೈಮಱಿಪೊಂದದಂತೆಸೆಗುವಂತೋರೋರ್ವರೊಳ್ತೋಱಿದರ್ ೮೭

ಚಂ॥ ಅಳಿಪಿ ನಿರೀಕ್ಷಿಪಾಸೆವಡುತಂ ಬಿಗಿದಪ್ಪುವ ನೇಹದಿಂ ಪದಂ
ಗಳಿಯಿಸೆ ಪಾಯ್ದು ಚುಂಬಿಪ ಕಡಂಗಿ ಕರಾಗ್ರದೆ ಪೊಯ್ವ ಬೇಟವು
ಗ್ಗಳಿಸೆ ನಖಾಗ್ರದಿಂದಿಱಿವ ತೋಳ್ತೊಡೆ ತಳ್ತಿರೆ ಕೂಡುವಳ್ತಿವ
ಟ್ಟಳಸುವನೇಕ ಭಾವರಸವೊಪ್ಪಿದುದಾಕೆಗೆ ಕಂತುಕೇಳಿಯೊಳ್ ೮೮

ಕಂ॥ ಮಣಿತಂ ತನುವೊಳ್ಗಳದೊಳ್
ಮಣಿತಂ ನೆಗಳ್ದಿರೆ ವಿಳಾಸಮುಮರ್ದೊಪ್ಪಿರೆ ಪೆ
ಣ್ಮಣಿ ತನ್ನವರತಿಚಿಂತಾ
ಮಣಿ ತನ್ನರಪತಿಗೆ ತನ್ನ ಪರಿಜೆನೆ ನೆರೆದಳ್ ೮೯

ಅವರು ಅತ್ಯುತ್ಸವದಿಂದ ಕೂಡಿದರು. ವ॥ ಅದೂ ಅಲ್ಲದೆ, ೮೭. ಒಬ್ಬರನ್ನೊಬ್ಬರು ಬೆರೆಸುತ್ತ ಬಿಗಿದು ಅಪ್ಪಿ ಕ್ರೀಡಿಸುವ ಸಮಯದಲ್ಲಿ ಕಂಠದಿಂದ ಹೊರಬರುವಂತೆ (ಗಳ) ಧ್ವನಿಯನ್ನೂ, ಕೈಗಳಿಂದ (ಹುಸಿ) ಪೆಟ್ಟನ್ನೂ, ಮುಂಗುರುಳು ಹಿಡಿಯುವುದನ್ನೂ, ಹಲ್ಲಿನಿಂದ ಪರಸ್ಪರ ಕಚ್ಚುವುದನ್ನೂ, ಗುರುಗಳಿಂದ ಗಾಯಗೊಳಿಸುವುದನ್ನೂ ಮಾಡುತ್ತಿದ್ದರು. ಸಂಘಟಿಸಿರುವ ರತಿಕ್ರೀಡೆಯಲ್ಲಿ ಮದೋನ್ಮತ್ತರಾಗಿ ಕಣ್ಣನ್ನು ಮುಚ್ಚಿ ಬೇರೆ ಯಾವುದರ ಪರಿಜ್ಞಾನವೂ ಇಲ್ಲದವರಂತೆ, ಮರಗಟ್ಟಿಹೋಗಿ ವ್ಯವಹರಿಸುತ್ತ ಅವರಿಬ್ಬರೂ ಪರಸ್ಪರ ತೋರಿಸಿಕೊಂಡರು. ೮೮. ಮನ್ಮಥಕೇಳಿಯಲ್ಲಿ ಆ ಸರ್ವಮಂಗಳೆ ವ್ಯಾಮೋಹಗೊಂಡು ಪತಿಯನ್ನು ನೋಡುವ ಆಸೆಪಡುತ್ತ, ಬಿಗಿದು ಅಪ್ಪಿಕೊಳ್ಳುವ ಸ್ನೇಹದಿಂದ, ಸ್ಥಾನಪಲ್ಲಟವಾದಾಗ ಮೇಲೆ ಎರಗಿ ಚುಂಬನ ಮಾಡುವ, ಹುಸಿಕೋಪಗೊಂಡು ಕೈಬೆರಳುಗಳಿಂದ ಹೊಡೆಯುವ, ಅಗಲಿಕೆಯು ಅಧಿಕವಾದಾಗ ಉಗುರಿನಿಂದ ಚೂರುವ (ಇರಿಯುವ), ತೋಳು ತೊಡೆಗಳು ಹೊಂದಿಕೊಂಡಾಗ ಸಂಭೋಗಿಸುವ ಇಚ್ಛೆಪಡುವ, ಈ ರೀತಿ ಅನೇಕ ಭಾವರಸಗಳು ಆ ಸರ್ವಮಂಗಳೆಗೆ ಒಪ್ಪಿಗೆಯಾಗಿತ್ತು. ೮೯. ದೇಹದಲ್ಲಿ ಬಳುಕಾಟವೂ, ಕಂಠದಲ್ಲಿ ಸುರತಧ್ವನಿಯೂ ಉಂಟಾಗುತ್ತಿರಲು, ರತಿಕಾಲದ ಪರಿಹಾಸವು ಮನೋಹರವಾಗಿ ಒಪ್ಪಿಗೆಯಾಗಿರಲು, ನೂತನ ರತಿಚಿಂತಾಮಣಿಯಾದ ಸರ್ವಮಂಗಳೆಯೆಂಬ ಸ್ತ್ರೀರತ್ನವು ಆ ನೃಪಶ್ರೇಷ್ಠನಾದ ರಾಜಶೇಖರನಿಗೆ ಆ ಚಿಂತಾರತ್ನ

ಮ॥ ಗಳನಾದಂ ನೆರವಾಗೆ ದೈನ್ಯನಿನದಂ ಕೈಗಣ್ಮೆ ಮಂದಸ್ಮಿತೋ
ಜ್ವಳವಕ್ತ್ರಂ ಪೊಸತಾಗೆ ನೇತ್ರಯುಗಳಂ ಬೆಂಡೇಳೆ ರೋಮಾಂಚಕಂ
ಚುಳಿತಾಂಗಂ ಬೇಮರೇೞೆ ಸುಯ್ನೆಮಿರೆ ಲೀಲಾವೇಗವಿಂಬಾಗೆ ಮಂ
ಜುಳಸೌಖ್ಯಂ ತನಿವೆರ್ಚೆ ಮೆರ್ಚೆ ನೆರೆದರ್ ಕಾದಲ್ಮೆಯಿಃ ಕಾದಲರ್ ೯೦

ವ॥ ಮತ್ತಂ

ಚಂ॥ ಮುನಿಸೆಡೆಗೊಳ್ಳದಿರ್ಪ ಕಲಹಂ ಕಿನಿಸಿಲ್ಲದ ಪುರ್ಬುಗಂಟು ನೆ
ಟ್ಟನೆ ಬಹುಭಾರಮಂ ತಳೆಯದಾದ ಬಳಲ್ಕೆ ಪೊದಳ್ದು ನಿದ್ರೆವೊಂ
ದಿನಿಸಿರದುರ್ವಿಪಾಯ್ವ ನಿಡುಸುಯ್ತಣಿವಿಲ್ಲದ ತೃಪ್ತಿ ಭಂಗವುಃಂ
ಟೆನಿಸದ ಸೋಲಮಂಜಿಕೆಯಿನಾಗದ ಕಂಪಮಳುಂಬವೋಪರೊಳ್ ೯೧

ಉ॥ ಚುಂಬನದಿಂಪು ಸೋರ್ಮುಡಿಯ ಕಂಪು ಮೃದೂಕ್ತಿಯಲಂಪು ತಳ್ಕೆ ಚೆ
ಲ್ವೆಂಬಿವು ಪೆರ್ಚೆ ಸೌಖ್ಯಮೆನೆ ಸಾರ್ಚೆ ನಿಜಾಕ್ಷಕಮುರ್ಚೆ ತೋೞೆ ಬೇ
ಟಂ ಬಿಡದುರ್ವೆ ಬಿನ್ನಣಮೆ ಪರ್ವೆ ಸುಸಿಲ್ ತನಿಗೊರ್ವೆ ಭೂಮನೋ
ಜಂ ಬಗೆದಂದು ಕಾಂತೆಯೊಡನಂದು ಮುದಂಬಡೆದೊಂದುತೊಪ್ಪಿದಂ ೯೨

ರೀತಿಯಲ್ಲಿ ಭೋಗ ನೀಡಿದಳು. ೯೦. ಗಳಧ್ವನಿಯು ಬಿಡುವುಗೊಳ್ಳಲು, ದೈನ್ಯಸ್ವರವು ಉಂಟಾಗುತ್ತಿರಲು, ಮುಗುಳ್ನಗೆಯಿಂದ ಪ್ರಕಾಶಗೊಂಡ ಮುಖವು ಹೊಸ ಮುಖದಂತಾಯಿತು. ಎರಡೂ ಕಣ್ಣುಗಳು ತೇಲುಗಣ್ಣಾದುವು. ರೋಮೋದ್ಗಮದಿಂದ ಕೂಡಿದ್ದ ದೇಹವು ಬೆವರೇರಿತು. ನಿಟ್ಟುಸಿರು ಅಧಿಕಗೊಂಡಿತು. ರತಿಲೀಲೆಯ ವೇಗವು ಅಧಿಕವಾಯಿತು. ಮನಮೋಹಕ ಸೌಖ್ಯವು ತನಿಗೊಂಡು ಹೆಚ್ಚಿತು. (ಹೀಗೆ) ಒಬ್ಬರನ್ನೊಬ್ಬರು ಮೆಚ್ಚಿಕೊಂಡು ಸ್ನೇಹದಿಂದ ಆ ದಂಪತಿಗಳು ಸಂಭೋಗದಲ್ಲಿ ನಿರತರಾಗಿದ್ದರು. ವ॥ ಮತ್ತು ೯೧. ಸಿಟ್ಟಿಗೆಡೆಯಿಲ್ಲದ ಜಗಳ, ಕೋಪವಿಲ್ಲದ ಹುಬ್ಬುಗಂಟು, ಅಧಿಕವಾದ ಭಾರವನ್ನು ಹೊರದೆ ಆದ ಬಳಲಿಕೆ, ಸ್ವಲ್ಪವೂ ನಿದ್ರೆಯಿಲ್ಲದಿದ್ದರೂ ಉಬ್ಬಿ ಹಾಯುವ ನಿಟ್ಟುಸಿರು, ತಣಿವೇ ಇಲ್ಲದ ತೃಪ್ತಿ, ಭಂಗವು ಉಂಟು ಎನಿಸದಂಥ ಸೋಲುವಿಕೆ, ಅಂಜಿಕೆಯಿಂದ ಆಗದೆ ಇರುವ ನಡುಕ, (ಇವು) ಒಲುಮೆಗೊಂಡ ಅವರಲ್ಲಿ ಅಧಿಕವಾಗಿ ಉಂಟಾಯಿತು. ೯೨. ಚುಂಬಿಸುವಿಕೆಯ ಹಿತ, ನೀಳವಾದ ಜಡೆಯ ಸುವಾಸನೆ, ಮೃದುಮಾತುಗಳ ಸೊಗಸು, ಅಪ್ಪುವಿಕೆಯ ಹಿತ ಎಂಬ ಈ ದೈಹಿಕ ಮಾನಸಿಕ ಹಿತಗಳು ಅಧಿಕವಾಗಿ, ಸೌಖ್ಯದ ಅನುಭವವನ್ನು ಮನಕ್ಕೆ ಉಂಟುಮಾಡಿ, ಪರಸ್ಪರ ಇಂದ್ರಿಯಗಳಿಗೆ (ಸುಖವನ್ನು) ಒದಗಿಸಿ ತೋರುತ್ತಿದ್ದವು. ವಿಚಹಕ್ಕೆಡೆಯಿಲ್ಲದೆ ಇವು ಅಧಿಕಗೊಂಡವು. ಕುಶಲತೆ ಹೆಚ್ಚಾಯಿತು. ಸಂಭೋಗವು ತನಿಗೊಂಡ ಹಾಗೆ ಆ ಭೂಮನ್ಮಥನೆನಿಸಿದ ರಾಜಶೇಖರಮಹಾರಾಜನು ಮನಸ್ಸಿನಲ್ಲಿ ಭಾವಿಸುತ್ತ, ಪತ್ನಿಯಾದ

ವ॥ ಇಂತು ಸಂತಸಂ ಮಿಗೆ ಸಮಂತು ಕಂತುಸುಖಸಾಮ್ರಾಜ್ಯಮನನುಭವಿಪ ದಂಪತಿಗಳ್ಗೆ ಮಾಸಂಗಳ್ ದಿವಸಂಗಳಾಗಿ ದಿವಸಂಗಳ್ ನಿಮಿಷಂಗಳಾಗಿ ಸಲುತ್ತಮಿರೆಯಿರೆ

ಮ॥ಸ್ರ॥ ಅಪರಾಶಾಕುಂಭಿ ಶುಂಭತ್ಕರಟತಟಗಳದ್ದಾನಸಂಭ್ರಾಂತ ಭೃಂಗೌ
ಘಪಯೋದಾಲಂಬಿಜೃಂಭಜ್ಜಲಧಿಜಲಲವಾಶ್ಲಿಷ್ಟಮುನ್ನಿದ್ರಕೈತ
ಕ್ಯಪರಾಗಶ್ರೇಣಿ ಚಂಚಚ್ಚಪಲಮುಪಲಸತ್ತಾಳಸಂಘೃಷ್ಟಭಾಂಡೌ
ಘ ಪಟುಧ್ವಾನಾಬ್ದರಾವಂ[1] ಸುಳಿದುದು ಪವನಂ ಕಾರಿದೆಂಬಂತಳುಂಬಂ ೯೩

ವ॥ ಆಗಳ್

ಚಂ॥ ಅಲರ್ದುದು ಕಾಡಮಲ್ಲಿಗೆ ಮುಗುಳ್ತುದು ಜಾದಿ ಕದಂಬಕುಟ್ಮಳಂ
ಬಲಿದುದು ಪೂದೊಡಂಬೆಯನೊಡರ್ಚಿತು ಕೇತಕಿ ಕೇಕಿ ನಣ್ಪಿನಿಂ
ನಲಿದುದು ಹಂಸೆ ಪಾಱಲನುಗೆಯ್ದುದು ಚಾದಗೆ ರಾಗಮಾಂತುದು
ಜ್ವಲತೆಯನಪ್ಪುಕೈದುದು ವಿಯೋಗಿಗಳಂಗದೊಳಂಗಜಾನಲಂ ೯೪

ಸರ್ವಮಂಗಳೆಯಲ್ಲಿ ಪ್ರೀತಿ ಪಡೆಯುತ್ತ ಶೋಭಿಸುತ್ತಿದ್ದನು. ವ॥ ಈ ರೀತಿ ಅತಿಶಯ ಸಂತೋಷದಿಂದ ಚೆನ್ನಾಗಿ ರತಿಸುಖಸಾಮ್ರಾಜ್ಯದ ಸುಖವನ್ನು ಅನುಭವಿಸುತ್ತಿರುವ ದಂಪತಿಗಳಿಗೆ ತಿಂಗಳುಗಳು ದಿವಸಗಳಾಗಿ, ದಿವಸಗಳು ನಿಮಿಷಗಳಾಗಿ ಕಳೆಯುತ್ತಿರಲಾಗಿ, ೯೩. ಪಶ್ಚಿಮ ದಿಕ್ಕಿನ ಆನೆಗಳ ಮದೋದಕದಲ್ಲೆರಗಿದ ದುಂಬಿಗಳಿಗೆ ಗಾಬರಿಯನ್ನುಂಟು ಮಾಡುವ ಮೋಡವುಳ್ಳದ್ದೂ, ಕ್ಷೋಭೆಗೊಂಡ ಸಮುದ್ರಜಲಕಣಗಳಿಂದ ಕೂಡಿದ್ದೂ, ಅರಳಿದ ಕೇದಗೆಗಳ ಪರಾಗವನ್ನು ಪಡೆದದ್ದೂ, ಮಿಂಚಿನಿಂದ ಸಹಿತವಾದುದೂ, ತಾಳೆ ಮರಗಳ ಘರ್ಷಣೆಯಿಂದ ವಾದ್ಯಧ್ವನಿಯಿಂದ ಸಮುದ್ರದಂತೆ ಭೋರ್ಗರೆಯುವುದೂ ಆದ ಗಾಳಿ ಈಗ ಮಳೆಗಾಲ ಬಂದಿತೆಂದು ಸೂಚಿಸುತ್ತ ವಿಶೇಷವಾಗಿ ಬೀಸಿತು. ವ॥ ಆಗ ೯೪. (ಆಗ) ಕಾಡುಮಲ್ಲಿಗೆಗಳು ಅರಳಿದವು ; ಜಾಜಿಯು ಮೊಗ್ಗುಗಳನ್ನು ಬಿಟ್ಟಿತು ; ನೀಪವೃಕ್ಷದ ಮೊಗ್ಗುಗಳು ಕೇದಗಿಯು ಹೂವಿನ ತೊಂಡಿಲನ್ನು ಉಂಟುಮಾಡಿತು. ಉತ್ಸಾಹದಿಂದ ನವಿಲು ನಲಿದಾಡಿತು. ಹಂಸಪಕ್ಷಿಯು ಹಾರಿ ಹೋಗುವುದಕ್ಕೆ (ಮಾನಸ ಸರೋವರಕ್ಕೆ) ಸಿದ್ಧವಾಯಿತು. ಚಾತಕಪಕ್ಷಿಯು ಸಂತೋಷಗೊಂಡಿತು. ಕಾಮಾಗ್ನಿಯು ವಿರಹಿಗಳ ಶರೀರದಲ್ಲಿ ಉಜ್ವಲತೆಯನ್ನು

---

1. ಟಿಪ್ಪಣಿ : ಮೂಲದಲ್ಲಿ 'ಅಬ್ದರಾವಂ' ಎಂಬ ಪಾಠವಿದೆ. 'ಅಬ್ಧಿರಾವಂ' ಎಂಬ ಪಾಠವನ್ನು ಊಹಿಸಿ ಅರ್ಥವನ್ನು ಬರೆಯಲಾಗಿದೆ (ರಂ)

ಸುಳಿಗೊಳುತೆತ್ತೆ ಸುಟ್ಟುರೆ ಧರಾರಜಮಂ ಕಿಳಗೊಂದೆ ದಂಡದಂ
ತುಳಿದ ತತಾತಪಂ ಬಳಸಿ ಪಲ್ಲವದಂತಿರೆ ಬಾನಮಧ್ಯದೊ
ಳ್ತೊಳಗುವ ಭಾನುಭರ್ಮಕಳಶಂಬೊಲದೊಪ್ಪಿರೆ ಬಟ್ಟಬಲ್ಮುಗಿ
ಲ್ತಳೆದುದು ಕಾಲಭೂಪತಿಯ ಪೀಲಿಯ ಸತ್ತಿಗೆಯೊಂದು ಲೀಲೆಯಂ ೯೫

ಮ॥ಸ್ರ॥ ಗಗನಶ್ರೀಯುಟ್ಟ ನೀಲಾಂಬರವೊ ರವಿಸುಧಾಧಾಮಬಿಂಬಂಗಳಂ ಮು
ತ್ತಿಗೆಯಂ ಮಾಳ್ಪಂಧಕಾರವ್ರಜವೊ ಸುರನದೀಸ್ನಾತ ದೇವಾಂಗನಾವೃ
ಷ್ಟಿಗಳದ್ವಾರ್ಬಿಂದು ಚಂಚತ್ಕಚನಿಚಯವೊ ಜಂಭಾರಿಕುಂಭೀಂದ್ರದಾನಾಂ
ಬುಗೆ ಪಾಯ್ವಿಂದಿಂದಿರಶ್ರೇಣಿಯೊಯೆನೆ ನೆಜಿದತ್ತಭ್ರನೀಲಾಭ್ರಜಾಲಂ ೯೬

ಕಂ॥ ಧೃತಚಂಚಲಮತಿಚಪಲ
ಸ್ಥಿತಿ ಜಡಭರಿತಂ ಕಟುಸ್ವರಂ ಬರೆ ಮೇಘಂ
ನುತಹಂಸಂ ತಳರ್ದುದು ಮಲಿ
ನತರಂ ಬರೆ ಶುಚಿ ಸುವೃತ್ತನೇನಿರ್ದಪನೇ ೯೭

ಪಡೆಯಿತು ೯೫. ಭೂಮಿಯ ಧೂಳನ್ನು ಸುಂಟರಗಾಳಿಯು ಸುಳಿಸುಳಿಯಾಗಿ ಮೇಲಕ್ಕೆತ್ತಿ ದಂಡದಂತೆ ಮಾಡಿತು. ಎಳೆಯ ಬಿಸಿಲು ಸುತ್ತಲೂ ಚಿಗುರಿನಂತೆ ಆಯಿತು. ಆಕಾಶಮಧ್ಯದಲ್ಲಿ ಪ್ರಕಾಶಿಸುವ ಸೂರ್ಯನು ಬಂಗಾರದ ಕಲಶದ ಹಾಗೆ ಒಪ್ಪಿರಲಾಗಿ, ಬಟ್ಟನೆಯ ಮೋಡವು ಕಾಲವೆಂಬ ಮಹಾರಾಜನ ನವಿಲು ಗರಿಯಿಂದ ಮಾಡಿದ ಕೊಡೆಯೋ ಎನ್ನುವ ಹಾಗೆ ಪ್ರಕಾಶಮಾನವಾಗಿ ಇತ್ತು. ೯೬. ಆಕಾಶವೆಂಬ ಲಕ್ಷ್ಮಿಯುಟ್ಟ ನೀಲವಸ್ತ್ರವೋ, ಸೂರ್ಯಚಂದ್ರಮಂಡಲಗಳಿಗೆ ಮುತ್ತಿಗೆಯನ್ನು ಹಾಕುವ ಕತ್ತಲೆಯ ಸಮೂಹವೋ, ದೇವಗಂಗಾನದಿಯಲ್ಲಿ ಸ್ನಾನಮಾಡಿದ ದೇವತಾಸ್ತ್ರೀಯರ ಜಾರಿಬೀಳುತ್ತಿರುವ ನೀರಿನ ಹನಿಗಳಿಂದ ಕೂಡಿದ ತಲೆಗೂದಲುಗಳೋ, ಜಂಭವೈರಿಯಾದ ದೇವೇಂದ್ರನ ಐರಾವತದ ಮದೋದಕಕ್ಕೆ ಮುತ್ತುವ ಭ್ರಮರ ಸಮೂಹವೋ ಎನ್ನುವಂತೆ ಆಕಾಶದಲ್ಲಿ ನೀಲವರ್ಣದ ಮೋಡಗಳ ಸಮೂಹವು ಸೇರಿತು. ೯೭. ಚಂಚಲಮತಿಯನ್ನುಳ್ಳ (ಮಿಂಚನ್ನುಳ್ಳ), ಚಪಲಸ್ವಭಾವವುಳ್ಳ(ಚಲನೆಯ ಸ್ವಭಾವವನ್ನುಳ್ಳ), ಜಡಸ್ವಭಾವದ (ನೀರಿನಿಂದ ಕೂಡಿದ), ಕ್ರೂರಸ್ವರವನ್ನುಳ್ಳ (ತೀಕ್ಷ್ಣ ಗುಡುಗಿನ ಶಬ್ದವನ್ನುಳ್ಳ) ಮೇಘವು ಬರಲಾಗಿ ಶ್ರೇಷ್ಠಹಂಸವು ಹೊರಟಿತು. ಮಲಿನನಾದವನು ಬಂದರೆ ಪರಿಶುದ್ಧನೂ, ಸಚ್ಚರಿತ್ರನೂ ಇರುತ್ತಾನೆಯೆ ? (ಚಂಚಲ, ಚಪಲ, ಜಡ, ಕ್ರೂರ–ಸ್ವಭಾವಗಳನ್ನುಳ್ಳವರಿಂದ ಸಜ್ಜನರಿಗೆ ಬಾಧೆ ಎಂಬ ಧ್ವಂದ್ವಾರ್ಥ ವ್ಯಕ್ತ

ಗಱಿ ನೆಱೆಯದೆ ಕಿಱುವಱಿಗಳ
ನಿಱುಂಕಿ ಪಕ್ಷದೊಳೆ ಪಾಱಲಾಱದೆ ಪಿರಿದುಂ
ಮಱುಗುವ ಮರಾಳಗಳ ನು
ಣ್ಗಱಿವೊತ್ತೆಡೆವಿಡದೆ ತಳರ್ದುವಂಚೆಗಳಾಗಳ್ ೯೮

ಮ॥ ರವಿಚಂದ್ರಪ್ರಚುರಪ್ರಭಾಪ್ರಚಯಮಂ ಮೇಘಂ ಮುಸುಂಕುತ್ತೆ ಕಾ
ಷ್ಣ್ಯವಿಶಿಷ್ಟಂ ತಟಿದಂಕುರಾಲ್ಪರುಚಿಯಂ ಬೀಱಿತ್ತುದಗ್ರಸ್ಫುರ
ತ್ಕವಿಕಾವ್ಯಪ್ರಕಟಪ್ರಭಾವಮನದಂ ಕೀಳ್ಗಬ್ಬಿಗಂ ಗುಪ್ತಿಗೈ
ದವರಾತ್ಮೀಯ ಕೃತಿಪ್ರಭಾವತೆ[1]ಯ ನಾದಂ ತೋರ್ಪವೊಲ್ ಧಾತ್ರಿಯೊಳ್ ೯೯

ಚಂ॥ ಘನಕರಿಗಿಕ್ಕಿದಂಕುಶಮಿದಬ್ದ ಮುಕುಂದನ ನಂದಕಾಯುಧಂ
ವನದ ತಮಾಲ ಕಾನನದ ಕಾನಕವಲ್ಲರಿ ವಾರಿಭೃದ್ವನಾಂ
ಜನನಗದಾವಪಾವಕಶಿಖಾತತಿ ಮೇಘಮಹಾಂಧಕಾಖ್ಯ ದೈ
ತ್ಯನ ಖರದಂಷ್ಟ್ರಮುಳ್ಕಿದುದು ಮಿಂಚು ಮುಗಿಲ್ಮಗುಳಂಬನೀಕ್ಷಣಂ ೧೦೦

ವಾಗುವುದು). ೯೮. ಪುಕ್ಕರೆಕ್ಕೆಗಳು ಬಲಿಯದ ಚಿಕ್ಕಮರಿಗಳನ್ನು ತಮ್ಮ ಪಕ್ಷ ಸಂಪುಟದಲ್ಲಿ ಅಪ್ಪಿಕೊಂಡು ಹಾರಲು ಅಸಮರ್ಥವಾಗಿ ಹೆಚ್ಚಾಗಿ ಮರುಗುತ್ತಿರುವ ಹೆಣ್ಣುಹಂಸಗಳಿಗೆ ತಮ್ಮ ನುಣ್ಣನೆಯ ಗರಿಗಳಿಂದ ಒತ್ತಾಸೆಗೊಟ್ಟು ಸಹಾಯ ಮಾಡುತ್ತ ಗಂಡುಹಂಸಗಳು ಹೆಣ್ಣುಹಂಸಗಳನ್ನು ಅನುಸರಿಸಿ ಹಾರಿದುವು. ೯೯. ಶ್ರೇಷ್ಠ ತರವಾಗಿ ಪ್ರಕಾಶಗೊಂಡ (ಪ್ರಸಿದ್ಧಗೊಂಡ) ಸತ್ಕವಿಯ ಕಾವ್ಯಪ್ರಕಟನೆಯ ಪ್ರಭಾವ ವನ್ನು ಕೀಳುದರ್ಜೆಯ ಕವಿಯು ಮರೆಮಾಚಿ, ತನ್ನ (ಕೀಳು) ಕಾವ್ಯದ ಪ್ರಭಾವವನ್ನು ಹೆಚ್ಚುಮಾಡಿ ಭೂಮಿಯಲ್ಲಿ ತೋರಿಸಿಕೊಳ್ಳುವ ಹಾಗೆ ಮೋಡವು ಸೂರ್ಯಚಂದ್ರರ ವಿಖ್ಯಾತವಾದ ಪ್ರಭೆಯ ಸಮೂಹವನ್ನು ಮುಸುಕಿ ಮರೆಮಾಡಿ ಕೃಷ್ಣ (ಕರಿ) ಬಣ್ಣ ದಿಂದ ಕೂಡಿದ ಮಿಂಚಿನಬಳ್ಳಿಯ ಕ್ಷಣಿಕವಾದ ಸ್ವಲ್ಪ ಬೆಳಕನ್ನು ಬೀರಿತು. ೧೦೦. ಈ ಮಿಂಚು ಮೋಡವೆಂಬ ಆನೆಗೆ ಇಕ್ಕಿದ ಅಂಕುಶ, ಮೋಡವೆಂಬ ಮುಕುಂದನ ನಂದಕ ವೆಂಬ ಖಡ್ಗ ; ಅರಣ್ಯದ ತಮಾಲವೃಕ್ಷಗಳ ಗುಂಪಿನಲ್ಲಿರುವ ಬಂಗಾರದ ಲತೆ (ಬಂಗಾರ ದಂತೆ ಹೊಳೆವ ಒಂದು ಬಳ್ಳಿ), ಮೇಘವೆಂಬ ಅಂಜನಾದ್ರಿಯ ಕಾಡುಗಿಚ್ಚಿನ, ಜ್ವಾಲೆ ಮೇಘವೆಂಬ ಅಂಧಕಾಸುರನ ತೀಕ್ಷ್ಣವಾದ ಕೋರೆಹಲ್ಲು, ಮುಗಿಲೆಂಬ ಮನ್ಮಥನ

1. ಇಲ್ಲಿ ಪ್ರಭಾವಶಬ್ದವೇ ಭಾವವಾಚಿಯಾಗಿರುವುದರಿಂದ 'ತೆ' ಎಂಬುದು ಅಧಿಕ(ರಂ)

ಕಂ॥ ಅಂಬುಜರಿಪುಬಿಂಬದ ಬೆಳ
ಗಂ ಬಂಧಿಸಿ ಮರ್ಬುವೀಟಿ ಮಿಂಚುತೆ ಪಥದೊ
ಳ್ಬಾಂ ಬರಿಸಿ ನೆರೆಯಿಪಾ ಕಾ
ದಂಬಿನಿ ಪಾಣ್ಬೆಯರ ಕೆಳದಿಯಾಗಲ್ವೇಳ್ಕುಂ ೧೦೧

ಚಂ॥ ಅಡಿಗಡಿಗುರ್ವಿ ಮಿಂಚುವೆಳೆಮಿಂಚು ಮರುದ್ಭಟನೆತ್ತಿ ಬೇಗದಿಂ
ಪೊಡೆವ ಸುವರ್ಣಕೋಣಮೆನೆ ತಳ್ತಿರೆ ತಾನೊಗೆದತ್ತು ಕಾರ್ಮುಗಿಲ್
ಗಡಣಮೆನಿಪ್ಪ ದಂತಿತತಿಯಗ್ರದ ಡಿಂಡಿಮನಾದದಂತೆ ಪೆ
ರ್ಗುಡುಗು ನಿದಾಘನಂ ತಗುಳಲೈದಿದ ನೀರದಕಾಲರಾಜನಾ ೧೦೨

ವ॥ ಅಂತುಮಲ್ಲದೆಯುಂ

ಉ॥ ಅಂಬುಧಿಸಂಗಸಂಜನಿತ ಶಂಬರ ನಿರ್ಭರಗರ್ಭೆ ಬಂದು ಕಾ
ದಂಬಿನಿ ತತ್ಪ್ರಸೂತಿಸಮಯಂ ಬರೆ ಪುಷ್ಕರಗೇಹದೊಳ್ಕರಾ
ಲಂಬಿತ ಹೇಮರಜ್ಜುವೆನೆ ಮಿಂಚಿರೆ ಮುಂಚೆ ನರಲ್ವ ರಾವದಂ
ತೇಂ ಬಗೆಗೊಂಡುದೋ ಗುಡುಗು ಸೂತಿ ಮರುತ್ಪ್ರತತೋದದೇಳ್ಗಿಯಿಂ ೧೦೩

ವಂಶಸ್ಥ॥ ಸ್ಫುರದ್ಧನು ಶ್ರೀಕರ ಚಂಚಲೇಕ್ಷಣಂ
ಶರಧ್ಯುಪಾತ್ತೋರು ಶರಂ ಘನಸ್ವನಂ
ಹರಿಪ್ರಭಂ ನೀರದರಾಜನಟ್ಟಿದಂ
ಧರಾತಿಸಂತಾಪದನಂ ನಿದಾಘನಂ ೧೦೪

ನೋಟ ಎನ್ನುವ ಹಾಗೆ ಮಿಂಚು ಮಿಂಚಿತು. ೧೦೧. ಕಮಲವೈರಿಯಾದ ಚಂದ್ರ ಮಂಡಲದ ಬೆಳಕನ್ನು ಬಂಧಿಸಿ, ಕತ್ತಲೆಯನ್ನು ಎಲ್ಲ ಕಡೆಗೂ ಹರಡಿ, ಮಿಂಚನ್ನು ಮಾರ್ಗದಲ್ಲಿ ಉಂಟುಮಾಡುತ್ತ ಆ ಕಾದಂಬಿನಿ (ಮೋಡವು) ಜಾರಸ್ತ್ರೀಯರನ್ನು (ಪುರುಷರೊಡನೆ) ಕೂಡಿಸುವ ಸಖಿಯಾಗಿರಬಹುದೆಂದು ತೋರುತ್ತದೆ. ೧೦೨. ಬೇಸಗೆ ಯೆಂಬ ರಾಜನ ಮೇಲೆ ಯುದ್ಧಕ್ಕೆ ಮಳೆಗಾಲದ ರಾಜನು ಹೊರಟನು. ಹೆಜ್ಜೆ ಹೆಜ್ಜೆ ಗೂ ಮಿಂಚುವ ಎಳೆಮಿಂಚು ಮರುತ್ (ಗಾಳಿ) ಎಂಬ ಭಟನು ಎತ್ತಿಹೊಡೆವ ಸುವರ್ಣಮಯ ವಾದ ಕೋಲಿನಂತೆ ಕಾರ್ಮುಗಿಲೆಂಬ ಆನೆಗಳೆದುರಿಗೆ ಡಿಂಡಿಮನಾದದಂತೆ ಗುಡುಗು ಕೇಳಿಸಿತು. ವ॥ ಅದೂ ಅಲ್ಲದೆ ೧೦೩. ಸಮುದ್ರವೆಂಬ ಪುರುಷನ ಸಂಗದ ಫಲವಾಗಿ ಉದಕದಿಂದ ತುಂಬಿ ಗರ್ಭವತಿಯೆನಿಸಿದ ಮೇಘಮಾಲೆಯು ಪ್ರಸವಗೊಳ್ಳುವ ಸಮಯವು ಬರಲಾಗಿ ಆಕಾಶವೆಂಬ ಹೆರಿಗೆಯಮನೆಯಲ್ಲಿ, ಕೈಯಿಂದ ಮಿಂಚೆಂಬ ಬಂಗಾರದ ಸರಪಳಿಯನ್ನು ಹಿಡಿದಿರುವುದೋ ಎನ್ನುವಂತೆ ಇರಲು, ಪ್ರಸೂತಿವಾಯು ಅಧಿಕವಾಗಿ ಒತ್ತುತ್ತಿರುವ ಕಾರಣವಾಗಿ, ಗುಡುಗು ಆ ಗರ್ಭವತಿಯಾದ (ಸ್ತ್ರೀಯು ಪ್ರಸವವೇದನೆಯಿಂದ) ನರಳುತ್ತಿರುವ ಧ್ವನಿಯ ಹಾಗೆ ಕಾಣಿಸಿತು. ೧೦೪. ಹೊಳೆಯು ತ್ತಿರುವ ಇಂದ್ರಧನುಸ್ಸಿನ ಪ್ರಭೆಯನ್ನು ಆ ಮೋಡವು ಉಂಟುಮಾಡುತ್ತಿತ್ತು ; ಅದು ಮಿಂಚೆಂಬ ಕಣ್ಣುಗಳನ್ನುಳ್ಳುದಾಗಿತ್ತು ; ಸಮುದ್ರದಿಂದ ಪಡೆದಿರುವ ಅಧಿಕವಾದ ನೀರಿ

ಕಂ॥ ಗಱಿ ಮೂಡಿದಂತೆ ಕೆಲದೊಳ್
ಕಿಱುಮುಗಿಲಿರೆ ಜಲದ ನೀಲಗಿರಿ ನೆಗೆಯೆ ಕಱು
ತ್ತೆಱಗಿದ ವಜ್ರಿಯ ವಜ್ರದ
ಬಿಱುವೊಯ್ಲರವಕ್ಕೆ ಬಱಸಿಡಿಲ್ಸರಿಬರ್ಕುಂ ೧೦೫

ಮ॥ ವರುಣಾಶಾಬ್ಧಿ ಪಯಃಪ್ರವಾಹ ವಿತತಸ್ನಾನಂ ವಿನಿರ್ಧೂತ ಧಾ
ತ್ರಿರಜಃ ಪ್ರೋತ್ಪಿಹಿತಾಂಗನುದ್ಧೃತ ಘನಕ್ಷ್ಮಾಜವ್ರಜಂ ಭೂಧರೋ
ತ್ಕರಸಂಚಾರಿ ಕದಂಬ ಸನ್ಮಧು ಮದಾಂಭೋವಾಪವುಂ ಭೋದಸಿಂ
ಧುರಮಂ ಪಾಯ್ದು ಪಳಂಚಿ ಪೊಯ್ದುದು ರಟಜ್ಝಂಝಾ ಮರುತ್ಕುಂಜರಂ ೧೦೬

ಚಂ॥ ಗಜದಜಿನಂ ಮುಗಿಲ್ಗಜರಿ ಗರ್ಜಿಪ ರುಂಡ ಕದಂಬಘೋಷಮು
ಭ್ರಜಪಟುಘೋಷಮುತ್ಕಟತಟಿತ್ತತಿಯುತ್ಫಣಿತಾಹಿ ಶೀರ್ಷರ
ತ್ನಜಘೃಣಿಮಾಲೆ ಫಾಲಶಿಖಿ ಮೇಘಶಿಖಾವಹನಾಗೆ ನರ್ತಿಪಂ
ಗಜರಿಪುವೊಲ್ ಘನಾಗಮಮದೇಂ ಬಗೆಗೊಂಡುದೊ ನೋಟಕರ್ಕಳಾ ೧೦೭

ನಿಂದ ಕೂಡಿತ್ತು ; ಗುಡುಗಿನ ಧ್ವನಿಯಿಂದ ಕೂಡಿತ್ತು ; ವಿಷ್ಣುವಿನ ಕಾಂತಿಯನ್ನು ಉಳ್ಳುದಾಗಿತ್ತು. ಇಂಥ ಮೇಘವೆಂಬ ರಾಜನು ಭೂಮಿಯಲ್ಲಿ ಪ್ರಜೆಗಳಿಗೆ ಸಂತಾಪವನ್ನುಂಟುಮಾಡುತ್ತಿದ್ದ ಬೇಸಿಗೆಯನ್ನು ಅಟ್ಟಿದನು. (ರಾಜನಪರವಾಗಿ) ಶೋಭಿಸುವ ಬಿಲ್ಲನ್ನು ಕೈಯಲ್ಲಿ ಹಿಡಿದು, ಚಪಲಕಣ್ಣುಗಳಿಂದ ಕೂಡಿ, ಬತ್ತಳಿಕೆ (ಶರಧಿ)ಯಿಂದ ಹೊರತೆಗೆಯಲ್ಪಟ್ಟ ಬಾಣಗಳುಳ್ಳವನಾಗಿ, ಗಂಭೀರ ಧ್ವನಿಯನ್ನು ಮಾಡುತ್ತ, ನಾರಾಯಣನ ತೇಜಸ್ಸಿನಿಂದ ಕೂಡಿದವನಾಗಿ ರಾಜನು ಬೇಸಿಗೆಯ ತಾಪದಂತೆ ತೀಕ್ಷ್ಣತಾಪಕಾರಿಗಳಾದ ಜನರಿಂದ ಧರೆಯ ಸಂಕಟಗಳನ್ನು ನಿವಾರಿಸಿದನು. ೧೦೫. ಪಕ್ಕದಲ್ಲಿ ಗರಿಗಳು ಮೂಡಿರುವುವೋ ಎನ್ನುವ ಹಾಗೆ ಚಿಕ್ಕಚಿಕ್ಕ ಮೋಡಗಳಿರಲು, ಮೋಡವೆಂಬ ನೀಲಗಿರಿಪರ್ವತವು ಮೇಲಕ್ಕೆ ಹಾರಲು, ಕೋಪಗೊಂಡು ಮೇಲೆಬಿದ್ದು ಹೊಡೆದ ಇಂದ್ರನ ವಜ್ರಾಯುಧದ ಬಲವಾದ ಹೊಡೆತದ ಧ್ವನಿಗೆ ಬರಸಿಡಿಲಿನ ಧ್ವನಿ ಸರಿಯಾಗುವಂತಿತ್ತು. ೧೦೬. ಪಶ್ಚಿಮದಿಕ್ಕಿನಲ್ಲಿರುವ ಸಮುದ್ರಪ್ರವಾಹದಲ್ಲಿ ಸ್ನಾನಮಾಡಿ, ಭೂಮಿಯಲ್ಲಿ ಎದ್ದ ಧೂಳನ್ನು ಮೈಮೇಲೆ ತುಂಬಿಕೊಂಡು, ಗಿಡಮರಗಳನ್ನು ಕಿತ್ತು ಉರುಳಿಸುತ್ತ, ಗುಡ್ಡಗಳಲ್ಲಿ ಸಂಚರಿಸುತ್ತ, ಕದಂಬವೃಕ್ಷಗಳ ಒಳ್ಳೆಯ ಪುಷ್ಪರಸವೆಂಬ ಮದೋದಕವನ್ನು ಹೊಂದಿ, ವೇಗವಾಗಿ ತಿರುಗುತ್ತಿರುವ ಜಂಝೂಮಾರುತನೆಂಬ ದೊಡ್ಡ ಆನೆಯು ಮೋಡಗಳೆಂಬ ಆನೆಯಮೇಲೆ ಸಂಘಟಿಸಿ ಬಿದ್ದು ಅದನ್ನು ಹೊಡೆದು ಹಾಕಿತು. (ಬಿರುಗಾಳಿಯು ಮೋಡಗಳನ್ನು ಓಡಿಸಿಕೊಂಡು ನೀರನ್ನು ಸುರಿಸುತ್ತ ಸಾಗುತ್ತಿರುವ ದೃಶ್ಯ ಕಾಣುತ್ತಿತ್ತೆಂದು ಕವಿಯ ಆಶಯು). ೧೦೭. ಮೋಡಗಳೇ ಗಜದ ಚರ್ಮವಾಗಿಯೂ, ಮೋಡಗಳ ಪಟುವಾದ ಧ್ವನಿಯೇ ಗರ್ಜಿಸುತ್ತಿರುವ ರುಂಡಮಾಲೆಗಳ ಶಬ್ದವಾಗಿಯೂ, ಉದ್ದುದ್ಧವಾದ ಮಿಂಚುಗಳ ಸೆಳಕುಗಳೇ ಮೇಲಕ್ಕೆ ಹೆಡೆಯೆತ್ತಿ ನಿಂತ

ಕಂ॥ ಕಡಲ ವಿಷವಿಾಂಟಿದೊಡೆ ತ
ನ್ನೊಡಲಂ ಬಿಡದದಸೆ ಕರ್ಪುವೆತ್ತಂಗದಿನಾ
ಗಡೆ ಜೀವನಮಂ ಬಿಟ್ಟುದು
ಜಡದಂ ಮೃಡನುಳಿದನೆಂದೊಡುಳಿದರ್ಗಳವೇ ೧೦೮

ನೆರೆದು ಘನಘನಮದೇಭೋ
ತ್ಕರವಿಾಂಟಿ ಮರುತ್ತರಂಗಿಣೀ ಜಳಮಂ ಫೂ
ತ್ಕರಿಸೆ ಸಿಡಿದಿಳಿವ ಕಣಗಣ
ದಿರವೆನಿಸಿದುದರರೆ ಸುರಿವ ಪೆರ್ಮಳೆ ನಭದಿಂ ೧೦೯

ಸುರಚಾಪ ಚಂಪಕಸ್ರಜ
ಕುರವಣಿಸುತ್ತಸಿತಜಳದ ಮದ ಮಧುಪಸಮು
ತ್ಕರಮೆರಗಿದಂತೆ ಮೆಱೆದುದು
ಪರಿಕಿಸದಾತ್ಮೀಯ ಜೀವನವ್ಯಯಭಯಮಂ ೧೧೦

ನುಂಗೆ ರವಿರುಚಿಯನದು ತ
ನ್ನಂಗುಳ್ನುಡೆ ಶೀತಜಲವಿಧುಂತುದನುಗುಳ್ವಾ
ಪಾಂಗನನುಕರಿಸಿ ಮಿಂಚುತ
ಡಂಗುವ ಸೆಳೆಮಿಂಚದೇಂ ಮನಂಗೊಳಿಸಿದುದೋ ೧೧೧

ಆದಿಶೇಷನ ತಲೆಯ ರತ್ನಗಳಿಂದ ಹೊರಹೊರಟ ಕಿರಣಗಳ ಮಾಲೆಯಾಗಿಯೂ, ಸಿಡಿಲುಗಳೇ ಹಣೆಗಣ್ಣಿನ ಬೆಂಕಿಯಾಗಿರಲು ತಾಂಡವನೃತ್ಯಮಾಡುತ್ತಿರುವ ಶಿವನ ಹಾಗೆ ವರ್ಷಾಕಾಲವು ನೋಡುವವರಿಗೆ ಏನು ಮನೋಹರವಾಗಿತ್ತೋ ! ೧೦೮. ಮೋಡವು ಸಮುದ್ರದ ವಿಷವನ್ನು (ನೀರನ್ನು)ಕುಡಿಯಲಾಗಿ ಆ ವಿಷವು ಅದರ ಶರೀರವನ್ನು ವ್ಯಾಪಿಸಿ ಕಪ್ಪಾದ ಶರೀರವುಳ್ಳದ್ದಾಗಿ ತನ್ನ ಜೀವನವನ್ನೇ (ನೀರನ್ನೇ) ಬಿಟ್ಟಿತು. ಆದರೆ ಶಿವನು (ಅಂಥ ವಿಷವನ್ನು ಕುಡಿದು) ಉಳಿದನೆಂದರೆ ಉಳಿದವರಿಗೆ ಹಾಗೆ ಬದುಕಲು ಶಕ್ಯವೇ ! ೧೦೯. ಸಾಂದ್ರವಾದ ಮೋಡಗಳೆಂಬ ಮದಿಸಿದ ಆನೆಗಳು ಸೇರಿ ದೇವಗಂಗಾನದಿಯ ನೀರನ್ನು ಕುಡಿದು ಫೂತ್ಕಾರಮಾಡಲಾಗಿ ಸಿಡಿದುಬೀಳುತ್ತಿರುವ ನೀರಹನಿಗಳ ರೀತಿಯೋ ಎಂಬಂತೆ ಅಬ್ಬಾ ! ಆಕಾಶದಿಂದ ಸುರಿಯುವ ದೊಡ್ಡಮಳೆ ತೋರಿತು. ೧೧೦. ಕಪ್ಪಾದ ಮೇಘಗಳೆಂಬ ಮದಿಸಿದ ದುಂಬಿಗಳ ಸಮೂಹವು ಇಂದ್ರಧನುಸ್ಸೆಂಬ ಸಂಪಿಗೆಯ ಮಾಲೆಗಳಿಗೆ ತನ್ನ ಜೀವನದ (ನೀರಿನ) ನಾಶಭಯವನ್ನು ಪರೀಕ್ಷಿಸದೆ ಮೇಲೆ ಬೀಳುವ ಹಾಗೆ ಮಳೆಗಾಲವು ರಂಜಿಸಿತು. ೧೧೧. ಕಪ್ಪಾದ ಮೇಘವೆಂಬ ರಾಹುವು ಸೂರ್ಯನ ತೇಜಸ್ಸನ್ನು ನುಂಗಲು, ಆ ತೇಜಸ್ಸು ತನ್ನ ಗಂಟಲುನಾಳವನ್ನೇ ಸುಡಲು ಉಗುಳುತ್ತಿರುವುದೋ ಎಂಬ ರೀತಿಯನ್ನು ಅನುಸರಿಸಿ ಮಿಂಚಿ ಮಿಂಚಿ ಅಡಗುವ ಸೆಳೆಮಿಂಚು

ಮೆಲ್ಸರಿ ಸೂಳ್ಸರಿ ಮುಗಿಲೊ
ಳ್ಗಲ್ಸರಿ ತೆಳ್ಸರಿ ಕರಂ ಪೊಸಲ್ಪರಿಯಿಪ ಬಂ
ಬಲ್ಸರಿ ಬಲ್ಸರಿ ಕಾಲ್ಸರಿ
ಸಾಲ್ಸರಿ ಸಲೆ ಸುರಿದು ಕಱಿದುವಿರುಳುಂ ಪಗಲುಂ ೧೧೨

ಘುಡುಘುಡು ಚಿಳಿಛಿಡಿಲೆಂದು
ಗ್ಘಡದ ಸಿಡಿಲ್ದನಿಯೆ ಪೊಡೆಯೆ ಗಗನಸ್ಥಳದಿಂ
ದುಡುಗಳ್ಪಳಪಳನುದುರ್ವವೊ
ಲೆಡೆವಿಡದಿಳಿವಾಲಿವರಲ ಮಳೆ ಬಗೆಗೋಳಿಕುಂ ೧೧೩

ವಂಶಸ್ಥ॥ ವಿಯತ್ತಳ ಶ್ರೀವಧುವಂ ಘನಾಗಮ
ಪ್ರಿಯಂ ಸರಾಗಂ ಬಿಗಿದಪ್ಪೆ ಕೀಳ್ತು ತ
ತ್ಪಯೋಧರಸ್ಥಂ ಮಣಿವೊಕ್ಕವೋಲ್ಪನೋ
ದಯೋಪಳಂ ಸೂಸಿದುದಿಂದ್ರಗೋಪಮಂ ೧೧೪

ಮ॥ ಸುರಜಾತದ್ವಿಪವೈರಿ ಮಿಕ್ಕು ನೆಗೆದಭ್ರಾರಣ್ಯದಭ್ರೋರು ಸಿಂ
ಧುರ ಕುಂಭಸ್ಥಳಮಂ ಸಿಡಿಲ್ದನಿ ನಿಜಧ್ವಾನಂಬೊಲಿಂಬಾಗೆ ಬಂ
ಧುರ ವಿದ್ಯುತ್ಕರಜಾಗ್ರದಿಂದುಗಿದು ಸೀಳಲ್ಮೌಕ್ತಿಕಾಸ್ರಕ್ಕಣೋ
ತ್ಕರಮೆತ್ತಂ ಸುರಿವಂತೆ ಸೂಸಿತು ಘನಗ್ರಾವೇಂದ್ರ ಗೋಪವ್ರಜಂ ೧೧೫

ಅದೇನು ಮನೋಹರವಾಗಿತ್ತೋ! ೧೧೨. ಮೆಲ್ಲಗೆ ಬೀಳುವ ಹನಿಮಳೆ, ಬಿಟ್ಟು ಬಿಟ್ಟು ಬೀಳುವ ಮಳೆ, ಮುಗಿಲಿನಲ್ಲಿ ಬೀಳುವ ಮಳೆ, ತೆಳ್ಳಗೆ ಬೀಳುವ ಮಳೆ, ಚೆನ್ನಾಗಿ ಪ್ರವಾಹವನ್ನುಂಟುಮಾಡುವಂಥ ಒತ್ತೊತ್ತಾದ ಹನಿಗಳ ದೊಡ್ಡ ಮಳೆ, ಬಲವಾದ ಮಳೆ, ಕಾಲ್ಸರಿ (?), ಸಾಲುಸಾಲಾಗಿ ಬೀಳುವ ಮಳೆ ಹೆಚ್ಚಾಗಿ ಸುರಿಯುತ್ತ ಹಗಲೂ ರಾತ್ರಿಯೂ ಬೀಳುತ್ತಿತ್ತು. ೧೧೩. ಆಕಾಶಸ್ಥಳದಿಂದ 'ಘುಡುಘುಡು, ಛಿಳಿಛಿಡಿಲ್' ಎಂದು ಅತಿಶಯವಾಗಿ ಸಿಡಿಲಿನ ಧ್ವನಿಯು ಹೊಡೆಯುತ್ತಿರಲು, (ಅದರ ಆ ಅಬ್ಬರಕ್ಕೆ) ನಕ್ಷತ್ರಗಳ ಸಮೂಹವು ಒಂದೇ ಸಮನೆ ಪಳಪಳ ಎಂದು ಉದುರಿದುವೋ ಎನ್ನುವ ಹಾಗೆ ಆಣೆಕಲ್ಲುಗಳ ಮಳೆ ಶೋಭಿಸುತ್ತಿತ್ತು. ೧೧೪. ವರ್ಷಾಕಾಲವೆಂಬ ನಾಯಕನು ಆಕಾಶತಳವೆಂಬ ಲಕ್ಷ್ಮಿಯನ್ನು ಅನುರಾಗದಿಂದ ಕೂಡಿ ಬಿಗಿಯಾಗಿ ಅಪ್ಪಿಕೊಳ್ಳಲಾಗಿ, ಆವಳ ಎದೆಯಮೇಲೆ ಹಾಕಿಕೊಂಡ ರತ್ನಹಾರವು ಹರಿದು ರತ್ನಗಳು ಉದುರುವುವೊ ಎಂಬಂತೆ ಆಣೆಕಲ್ಲುಗಳು ದೀಪದಹುಳುಗಳನ್ನು ಸುರಿಸಿತು. ೧೧೫. ಇಂದ್ರಧನುಸ್ಸು (ಕಾಮನ ಬಿಲ್ಲು) ಎಂಬ ಸಿಂಹವು ಮಿತಿಮೀರಿ ಹಾರಿ, ಆಕಾಶವೆಂಬ ಕಾಡಿನಲ್ಲಿರುವ ಮೋಡಗಳೆಂಬ ಅಧಿಕವಾದ ಆನೆಯ ಕುಂಭಸ್ಥಳಗಳನ್ನು ಗರ್ಜಿಸಿ ಸೀಳಿತು. (ಆಗ) ಸಿಡಿಲಿನ ಧ್ವನಿಯೇ ತನ್ನ ಗರ್ಜನೆಯಾಗಿ ಶೋಭೆಗೊಂಡಿತು; ಮಿಂಚೇ ಆ ಸಿಂಹದ ಉಗುರುಗಳಾಗಿ ಪ್ರಕಾಶಿಸಿದವು. ಹೀಗೆ ಸೀಳಲು ಆ ಕುಂಭಸ್ಥಳದಲ್ಲಿದ್ದ ಮುತ್ತುಗಳು ರಕ್ತದಿಂದ ಸಿಕ್ತವಾದವುಗಳಾಗಿದ್ದವು. ಅಂಥ ಮುತ್ತುಗಳು ಎಲ್ಲ ಕಡೆಗೂ ಸುರಿಯುತ್ತ

ಉ॥ ಎನ್ನ ಸಹಾಯದಿಂ ನೆರೆದು ತಾಳ್ದ ಘನತ್ವಮಿಸಸ್ಮದೀಯ ಮಿ
ತ್ರೋನ್ನತತೇಜಮಂ ತವಿಪನೆಂದನಿಲಂ ಮುಗಿಲಂ ಕನಲ್ದು ಪೊ
ಯ್ದನ್ನೆಗಳಲ್ ಘನಧ್ವನಿ ಕಳಲ್ದುದಿರ್ದತ್ತು ಘನೋಪಳಾಚ್ಛದಂ
ತನ್ನಿಜಮಲ್ಲದಿರ್ದೊಡಿಳೆಯಲ್ಲದು ನೀರದ ನಾಮಮಾಂಪುದೇ ೧೧೬

ಕಂ॥ ಎಳಸಿ ನಿಜಚಂಚುಪುಟದೊ
ಳ್ತಳೆದಿನೆಯಳ್ಗೆಱೆದು ಮಱಿಗಳಂ ತಣಿಪಿ ಮನಂ
ಗೊಳುತಳುಪಿ ಸೆಳೆದು ಜಳಕಣ
ಕುಳಮಂ ಪೀರ್ದತ್ತು ಚಾತಕಂ ಚದುರಿಂದಂ ೧೧೭

ಉ॥ ಮಂಗಳವಾದ್ಯಮಬ್ದರವಮುಣ್ಮುವ ಮಿಂಚದು ದೀಪಮಾಲೆಯು
ತ್ತುಂಗ ಪಯೋದಮಿಟ್ಟ ತೆರೆ ತೋರಣಮಿಂದಿರವಿಲ್ಲುಸವೃಷ್ಟಿಯೇ
ಸಂಗತಧಾರೆಯಾಲಿವರಲೊಪ್ಪುವ ಮುತ್ತಿನ ಸೇಸೆಯಾಗೆ ಕಾ
ರುಂ ಗಗನಸ್ಥಳೀರಮೆಯುಮೊಂದಿದರೊಂದು ವಿವಾಹಲೀಲೆಯಂ ೧೧೮

ವ॥ ಮತ್ತಮಾ ಘನಸಮಯಂ ಗದಾಧರಮೂರ್ತಿಯಂತೆ ಘನಶ್ರೀ ಮನೋಜ್ಞಮುಂ ನಳಿನಭವಾಂಗದಂತೆ ಕಾದಂಬವಿತತಾಮೋದವಾಹಮುಂ ಗರೋದಯ ಸಮಯದಂತೆ ಸುರ

ವೆಯೋ ಎನ್ನುವ ಹಾಗೆ ಆ ಆಣೆಕಲ್ಲಿನ ಮಳೆಯು ಎಲ್ಲ ಕಡೆಗೂ ದೀಪದ ಹುಳುಗಳ ಸಮೂಹವನ್ನು ಸುರಿಯಿತು. ೧೧೬. 'ನನ್ನ ಸಹಾಯದಿಂದ ಘನತ್ವವನ್ನು ಹೊಂದಿದ ಈ ಮೋಡವು ನಮ್ಮ ಸೂರ್ಯನ ತೇಜಸ್ಸನ್ನು ಹಾಳುಮಾಡುತ್ತಿರುವನು'. ಎಂದುಕೊಂಡು ಗಾಳಿಯು ಮೋಡಗಳ ಮೇಲೆ ಕೋಪಗೊಂಡು ಹೊಡೆಯಿತು. (ಆ ಹೊಡೆತದಿಂದಲೇ) ಮೇಘಧ್ವನಿಯು (ಗುಡುಗು) ಉಂಟಾಗಿ ಆ ಮೋಡಗಳಿಂದ ಆಣೆಯಕಲ್ಲುಗಳೆಂಬ ಅದರ ಹಲ್ಲುಗಳು ಉದುರಿದುವು. ಅದು ಸತ್ಯಸಂಗತಿ. (ಇಲ್ಲದಿದ್ದರೆ) ಭೂಮಿಯಲ್ಲಿ ಈ ಮೋಡವು 'ನೀರದ' ಅಂದರೆ ಹಲ್ಲು ಇಲ್ಲದುದು ಎಂಬ ಹೆಸರನ್ನು ಹೇಗೆ ಪಡೆಯುತ್ತಿತು ? (ನೀರದ—ನೀರನ್ನು ಕೊಡುವಂತಹುದು ; ನೀರದ_ರದಗಳು ಎಂದರೆ ಹಲ್ಲುಗಳು ಇಲ್ಲದ್ದು-ಎಂಬ ದ್ವಂದ್ವಾರ್ಥವುಳ್ಳದ್ದು. ೧೧೭. ಚಾತಕಪಕ್ಷಿಯು ಅಶಿಸಿ ತನ್ನ ಚಂಚು ವಿನ ತುದಿಯಿಂದ ನೀರನ್ನು ಹೀರುತ್ತ, ತನ್ನ ಇನಿಯಗಳಿಗೆ ಮತ್ತು ಮರಿಗಳಿಗೆ ನೀಡಿ ತಣಿಸಿ, ತೃಪ್ತಿಗೊಳ್ಳುತ್ತ ಸಂತೋಷದಿಂದ ನೀರಿನ ಹನಿಗಳನ್ನು ಚಾತುರ್ಯದಿಂದ ನೀರಿನ ಹನಿಗಳನ್ನು ಚಾತುರ್ಯದಿಂದ ಹೀರುತ್ತಿತ್ತು. ೧೧೮. ಮಂಗಳವಾದ್ಯವೇ ಮೇಘದ ಧ್ವನಿ ; ಹೊರಹೊಮ್ಮುವ ಮಿಂಚೇ ದೀಪಗಳ ಮಾಲೆ ; ಉನ್ನತವಾದ ಮೋಡವೇ ಹಿಡಿದ ಕಾಂಡಪಟವೆಂಬ ತೆರೆ ; ಇಂದ್ರಧನುಸ್ಸೇ ತೋರಣ ; ಒಳ್ಳೆಯ ಮಳೆಯೇ ಧಾರೆಯ ನೀರು (ಧಾರೆಯೆರೆಯುವ ನೀರು) ; ಒಪ್ಪುವ ಆಣೆಕಲ್ಲುಗಳೇ ಮುತ್ತಿನ ಅಕ್ಷತೆಗಳು. ಹೀಗೆ ಆಗಿರಲು ಮುಂಗಾರು ಎಂಬ ವರನು ಗಗನಸ್ಥಳವೆಂಬ ಸ್ತ್ರೀಯೂ ಒಂದು ರೀತಿಯ ವಿವಾಹಲೀಲೆಯನ್ನು ಪಡೆದರು. ವ|| ಮತ್ತು ಆ ವರ್ಷಾಕಾಲವು ವಿಷ್ಣುವಿನ ಹಾಗೆ_ಮೇಘಗಳ ಚೆಲುವಿನಿಂದ ಕೂಡಿತ್ತು ; ವಿಷ್ಣುವು ಶ್ರೇಷ್ಠಳಾದ ಲಕ್ಷ್ಮಿ ಯಿಂದ ಕೂಡಿರುತ್ತಾನೆ. ಬ್ರಹ್ಮನ ಶರೀರದ ಹಾಗೆ_ಕದಂಬವೃಕ್ಷಗಳ ವಿಶೇಷವಾದ

ಚಾಪಲತಾನ್ವಿತಮುಂ ಪ್ರದೋಷಕಾಲದಂತೆ ನೀಲಕಂಠ ತಾಂಡವಾಡಂಬರಮುಂ ವಿಧುಂತುದ ನಂತೆ ಸಂತರ್ಜಿತ ರಾಜಹಂಸಮಂಡಳಮುಂ ಘನನೀಲಾಂಬರಾಚ್ಛಾದಕನಾಗಿಯುಂ ಸಿತವಾರಿ ದೋಪ ಲಸಿತದ್ಯುತಿಯುಂ ಪ್ರಬಲ ಕೀಲಾಲಕ್ಷಣರುಚಿಯುತಮಾಗಿಯುಂ ವನಸಮೃದ್ಧಿದಮುಂ ಪರಕಬಂಧ ಸಂಸಕ್ತ ಸರಕ್ತ ಶಿಳೀಮುಖಮಿಳಿತಮಾಗಿಯುಂ ಅಪ್ರಕಟಿತಪ್ರಭಾವಮುಂ ಕೃತವಜ್ರ ನಿರ್ಘೋಷಮಾಗಿಯುಂ ಗೋತ್ರಾತಿಹಿತಕರಮುಂ ವಿಪಕ್ಷಗತಿವಿರೋಧಕಮಾಗಿಯುಂ ಪರಿಗತಭಂಗವಾಹಿನೀಕಮುಮೆನಿಸಿರ್ದುದಂತುಮಲ್ಲದೆಯುಂ

(ಹೂವಿನ) ಸುವಾಸನೆಯನ್ನು ಹೊಂದಿದುದಾಗಿತ್ತು ; ಬ್ರಹ್ಮನು–ಪ್ರಸಿದ್ಧವಾದ ಕಳ ಹಂಸದ ಏರುವಿಕೆ (ವಾಹನ)ಯಿಂದ ಸಂತೋಷಗೊಂಡವನು. ಗರಳ (ವಿಷ—ಗರ)ದ ಉದಯದ ಸಮಯದ ಹಾಗೆ–ಇಂದ್ರಧನುಸ್ಸಿನಿಂದ ಕೂಡಿರುವುದು ; ವಿಷದ ಉದಯದ ಸಮಯವು (ಸಮುದ್ರಮಥನ ಕಾಲದಲ್ಲಿ ಉದಯವಾದ ವಿಷದ ಉದಯದ ಸಮಯವು) ದೇವತೆಗಳ ಚಾಪಲ್ಯ (ಸುರ—ಚಾಪಲತಾ)ದಿಂದ ಕೂಡಿದುದು. ಪ್ರದೋಷಕಾಲದ ಹಾಗೆ–ನವಿಲುಗಳ ತಾಂಡವಕುಣಿತದ ಆಡಂಬರದಿಂದ ಕೂಡಿತ್ತು ; ಪ್ರದೋಷ ಕಾಲವು–ಶಿವನ ಸಂಧ್ಯಾಕಾಲದ ತಾಂಡವನೃತ್ಯದಿಂದ ಕೂಡಿರುತ್ತದೆ. ರಾಹುವಿನ ಹಾಗೆ–ರಾಜಹಂಸಮಂಡಲಕ್ಕೆ ಭಯವನ್ನುಂಟುಮಾಡುವಂತಹುದಾಗಿತ್ತು. ರಾಹು ಚಂದ್ರ (ರಾಜ) ಮತ್ತು ಹಂಸ (ಸೂರ್ಯ) ರುಗಳಿಗೆ ಹೆದರಿಕೆಯನ್ನುಂಟುಮಾಡು ತ್ತಾನೆ. (ಮುಂದೆ ವಿರೋಧಾಭಾಸ) ಘನವಾದ ನೀಲಾಂಬರದಿಂದ ಆಚ್ಛಾದಿಸಲ್ಪಟ್ಟವ ನಾಗಿಯೂ ಬಿಳಿಯ ಮೋಡಗಳ ಕಾಂತಿಯಂತೆ ಶೋಭಿಸುವಂತಹುದು. ಘನವಾದಂಥ ಕಪ್ಪಾದ ಆಕಾಶವನ್ನು (ನೀಲಾಂಬರ) ಆವರಿಸಿಕೊಂಡುದುದಾದರೂ ಬಿಳಿಯ ಆಣಿಕಲ್ಲು ಗಳಿಂದ (ವಾರಿದ + ಉಪಲ + ಸಿತ) ಶೋಭಿಸುವಂತಹುದು. ಪ್ರಬಲವಾದ ಅಗ್ನಿಯ (ಕೀಲಾಲ) ಪ್ರಕಾಶದಿಂದ ಕೂಡಿದ್ದರೂ ಉದಕಸಮೃದ್ಧಿಯನ್ನುಂಟುಮಾಡುವಂತಹುದು; ಪ್ರಬಲ (ಅತಿಶಯ) ಜಲ ಮತ್ತು ಮಿಂಚುಗಳಿಂದ ಕೂಡಿದ್ದರೂ ಅರಣ್ಯವನ್ನು ಸಮೃದ್ಧಿ ಗೊಳಿಸುವಂತಹುದು. ಶತ್ರುಗಳ ಅಟ್ಟೆ (ಮುಂಡ) ಗಳಲ್ಲಿ ಹೊಕ್ಕು ರಕ್ತಮಯವಾದ ಬಾಣ (ಶಿಳೀಮುಖ) ಕೂಡಿರುವುದಾದರೂ ಪ್ರಸಿದ್ಧವಲ್ಲದ ಸಾಮರ್ಥ್ಯವುಳ್ಳದ್ದು; ಶ್ರೇಷ್ಠ ವಾದ (ಪರ) ಉದಕ (ಕಬಂಧ) ದಲ್ಲಿ ಕೂಡಿ ಸಾನುರಾಗ (ಸರಕ್ತ) ವುಳ್ಳ ಹೆಣ್ಣುಕಪ್ಪೆ (ಶಿಳೀಮುಖ) ಮೊದಲಾದುವುಗಳಿಂದ ಕೂಡಿದುದಾದರೂ ಪ್ರಸಿದ್ಧವಲ್ಲದ ಜಡಸ್ವಭಾವ ವುಳ್ಳದ್ದು. ವಜ್ರಾಯುಧನಿರ್ಘೋಷ (ಧ್ವನಿ) ವುಳ್ಳದ್ದಾದರೂ (ಕೃತವಜ್ರನಿರ್ಘೋಷ) ಬೆಟ್ಟ (ಗೋತ್ರ) ಗಳಿಗೆ ಅತಿ ಹಿತವನ್ನುಂಟುಮಾಡುವಂತಹುದು; ಗುಡುಗಿನ ಧ್ವನಿಯುಳ್ಳ ದ್ದಾದರೂ (ಕೃತವಜ್ರನಿರ್ಘೋಷ) ಭೂಮಿ (ಗೋತ್ರ)ಗೆ ಅತಿಹಿತವನ್ನುಂಟುಮಾಡು ವಂತಹುದು. ಶತ್ರುಗಳ (ವಿಪಕ್ಷ) ಗಮನಕ್ಕೆ ನಿರೋಧ (ಪ್ರತಿಬಂಧಕ) ಮಾಡುವಂತ ಹುದಾದರೂ ಸೈನ್ಯದ ಭಂಗವನ್ನುಂಟುಮಾಡದಂತಹುದು; ಪಕ್ಷಿಗಳ (ವಿ) ರೆಕ್ಕೆ (ಪಕ್ಷ) ಗಳ ಗಮನಕ್ಕೆ ವಿರೋಧವುಳ್ಳದ್ದಾದರೂ, ತೆರೆಗಳನ್ನುಳ್ಳ (ಪರಿಹರಭಂಗ) ಪ್ರವಾಹವುಳ್ಳ

ಕಂ॥ ಜಳಮಯಮಿಳೆ ಜಳದಮಯಂ
ಜಳಧರಮಾರ್ಗಂ ತಟಿನ್ಮಯಂ ದಿಗ್ವಳಯಂ
ಕೆಳೆಗೊಳೆ ನವಸೃಷ್ಟಿಯನೇಂ
ತಳೆದುದೊ ಭುವನಂ ಘನಾಗಮಾಂಬುಜಭವನಿಂ ೧೧೯

ಫಣಿಯಂ ತುಂಡಿಸಿ ವಿಷಮಂ
ನೊಣೆದಾನುಂ ನೀಲಕಂಠನಾದೆನೆನುತ್ತಂ
ಕುಣಿವಂತೆ ವಿಷಧರದ ಮುಂ
ದಣಿಯರದಿಂ ಕೇಗಿ ಕುಣಿವ ನವಿಲೆಸೆದಿರ್ಕುಂ ೧೨೦

ಗಱಿ ಪೊಂಪುಳಿವೋದಂತಿರೆ
ನೆಱೆನೆಟ್ಟನೆ ನಿಲೆ ಮುದಶ್ರು ಗಱಿಗಣ್ಗಳೊಳೇ
ನೊಱೆತುದೊ ಪೇಳೆನೆ ಕಿಱುವನಿ
ತುಱುಗಿರೆ ಮತ್ತೊಂದು ನವಿಲದೇಂ ನರ್ತಿಸಿತೋ ೧೨೧

ಉ॥ ಚಾದಗೆಯಂತೆ ಮುಂಬನಿಯನೇಂ ಬರೆ ಪೀರ್ದುದೆ ವಲ್ಲಿಯಂತಿದೇಂ
ತೋದುದೆ ವಾರಿಯಿಂ ಕಡವಿನಂತೆ ಮುಗುಳ್ತುದೆ ತತ್ಸಹಾಯದಿಂ
ಕೇದಗೆಯಂತೆ ಪೂತುದೆ ಮುಗಿಲ್ಗಳ ಪಂಗಿನಿತುಂಟೆ ಕೇಕಿಯಾ
ಹ್ಲಾದದೆ ಕಂಡು ನರ್ತಿಪುದಿದಲ್ತೆ ಸಮಾನವಯಃಪ್ರವರ್ತನಂ ೧೨೨

ದ್ದಾಗಿ ಆ ಮೋಡವು ಇತ್ತು. ಅದೂ ಅಲ್ಲದೆ, ೧೧೯. ಭೂಮಿ ಜಲಮಯವಾಗಿ, ಆಕಾಶಮಾರ್ಗವು ಮೋಡಗಳ ಮಯವಾಗಿ, ದಿಕ್ಕುಗಳ ಸಮೂಹವು ಮಿಂಚುಗಳ ಮಯ ವಾಗಿ ಕೂಡಿಕೊಂಡಿರಲು, ವರ್ಷಾಕಾಲವೆಂಬ ಬ್ರಹ್ಮನಿಂದ ಭೂಮಿಯು ನವಸೃಷ್ಟಿ ಯನ್ನೇ ಹೊಂದಿದಂತ್ತಿತ್ತು. ೧೨೦. ಹಾವನ್ನು ತುಂಡರಿಸಿ, ಅದರ ವಿಷವನ್ನು ಕುಡಿದು ನಾನೂ ನೀಲಕಂಠನಾದೆನು ಎನ್ನುತ್ತ (ಶಿವನಂತೆ ತಾನೂ) ಕುಣಿಯುತ್ತಿದೆಯೋ ಎನ್ನುವ ಹಾಗೆ ಮೇಘಗಳ (ವಿಷಧರ) ಮುಂದೆ ಅತಿಶಯವಾಗಿ ಕೇಕೆಯನ್ನು ಹಾಕುತ್ತ ಕುಣಿ ಯುತ್ತಿರುವ ನವಿಲುಗಳು ಶೋಭಿಸುತ್ತಿದ್ದವು. ೧೨೧. ಮತ್ತೊಂದು ನವಿಲಿನ ಸ್ಫುಟ ವಾಗಿ ಎದ್ದುನಿಂತ ಗರಿಗಳು ರೋಮಾಂಚನಗೊಂಡಂತೆ ಇತ್ತು. ಗರಿಗಳ ಕಣ್ಣುಗಳಲ್ಲಿ ಕಿರಿ ದಾದ ನೀರಿನ ಹನಿಗಳು ತುಂಬಿ ಅವು ಸುತ್ತಲೂ ಸೂಸುತ್ತಿದ್ದವು; ಆ ನೀರಿನ ಹನಿಗಳೇ ಆನಂದಬಾಷ್ಪಗಳಂತೆ ತೋರುತ್ತಿರಲು, ನವಿಲು ನೃತ್ಯಮಾಡುತ್ತಿತ್ತು. ೧೨೨. ಚಾದಗೆ ಯೆಂಬ ಪಕ್ಷಿಯಹಾಗೆ ನೆಲದ ಮೇಲೆ ಬೀಳುವ ಮೊದಲು ಈ ನವಿಲು ನೀರಿನ ಹನಿಯನ್ನು ಕುಡಿಯಿತೇ? ಬಳ್ಳಿಯಹಾಗೆ ಈ ನವಿಲು ನೀರಿನಿಂದ ನೆನೆಯಿತೆ? ಕಡಬದಮರದ ಹಾಗೆ ಮೋಡಗಳ ಸಹಾಯದಿಂದ ಮೊಗ್ಗುಗೊಂಡಿತೇ? ಕೇದಗಿಯ ಹಾಗೆ ಪುಷ್ಪಿಸಿತೇ ? ಮೋಡ ಗಳ ಹಂಗು ಈ ನವಿಲಿಗೆ ಸ್ವಲ್ಪವಾದರೂ ಉಂಟೆ ? ನವಿಲು ಕೇವಲ ಸಂತೋಷದಿಂದ ಕುಣಿ ಯುತ್ತದೆ. ಇದು ಸಮಾನಚಿತ್ತಸಮುನ್ನತಿಯುಳ್ಳವರಿಗೆ ವಯಸ್ಸಿಗೆ ಅನುಗುಣ ವಾದ (ಸಹಜವಾದ) ಪ್ರವರ್ತನೆಯೇ ಆಗಿದೆಯಲ್ಲವೇ?[1] (ಸ್ವಲ್ಪವೂ ಮೋಡದ ಹಂಗು

1. ಸಮಾನ–ಅಭಿಮಾನಶಾಲಿಯಾದ, ವಯ–ನವಿಲೆಂಬ, ಪಕ್ಷಿಯ ಪ್ರವರ್ತನಂ– ಸಹಜಪ್ರವೃತ್ತಿ ಕುಣಿಯುವುದೇ (ರಂ)

30

ಚಂ॥ ಸರಸಸುಗಂಧಬಂಧುರ ಧಳದ್ದಳ ನೂತನ ಕೇತಕೀಸುಮಾ
ವರಣ ಫಣಿಪ್ರಮುಕ್ತಗರಳೋಪಮ ಮತ್ತಮಧುವ್ರತಾಳಿ ಪ
ಟ್ಚರಣಗಳತ್ತದೀಯರಜಮುಣ್ಮುವ ಮಿಂಚೆನೆ ಗಾವರಂ ಘನ
ಸ್ವರಮೆನಲಲ್ಲಿ ತಳ್ತು ಕೆಳೆಗೊಂಡೆಳೆಗಾವರ್ಮಗಿಲಂತೆ ರಂಜಿಕುಂ ೧೨೩

ವ॥ ಮತ್ತಮಾಗಳ್

ಮ॥ ತಳರಲ್ಕೆಂದಡಿಯಿಟ್ಟು ಜಾಱಿ ಜವದಿಂ ಕೈಯೂಱಿ ಬಿಳ್ದೆಳ್ದು ಪಂ
ಕಿಳುಮಾದಂಶುಕಮಂ ಪೊನಲ್ವರಿವ ನೀರೊಳ್ಕರ್ಚಿ ಮೈಸಾರ್ಚಿ ಪ
ಲ್ಗಳ ನಾದಂ ಪುಳಕಾಂಕುರಂ ಮೊಳೆಯೆ ಮೇಣಾರ್ಕೈದು ಕಾಲಿಟ್ಟುಕೋ
ಲ್ಗಳನಾಂತ್ಯೆದುವ ಪಾಂಥರಂ ನಗುವರಾ ಹರ್ಮ್ಯಾಗ್ರದಬ್ಜಾಕ್ಷಿಯರ್ ೧೨೪

ಕಂ॥ ಬೆಳೆದೆಳೆವುಲ್ಕರಮೆಸೆದ
ತ್ತಿಳೆ ಮಳೆಯಿಂ ನಾಂದು ಸೇಡುವಡೆದಿರೆ ಮೊಳೆತ
ರ್ಗಳ ಪುಳಕಾಂಕುರಮೆನೆ ಸಂ
ಚಳದಳವನದಿಂದೆ ಕಂಪಿಪಂತಿರೆ ತೋರ್ಕುಂ ೧೨೫

ಉಳಿದ ಗಿಡಮರ ಪಕ್ಷಿಗಳಿಗಿದ್ದ ಹಾಗೆ ನವಿಲಿಗೆ ಇಲ್ಲದೆ ಅದು ಕೇವಲ ಚಿತ್ತಸಮುನ್ನತಿಯಿಂದ ಯಾವ ಫಲಾಪೇಕ್ಷೆಯಿಲ್ಲದೆ ಸಹಜವಾಗಿ ಕುಣಿಯುತ್ತದೆ—ಎಂಬ ಭಾವ). ೧೨೩. ರಸ ಭರಿತ ಸುಗಂಧದಿಂದ ಕೂಡಿ ದಳ ದಳವಾಗಿ ಅರಳಿರುವ ಹೊಸ ಕೇದಗಿಯ ಹೂವುಗಳಿಗೆ ಸುತ್ತುವರಿದಿರುವ ಹಾವುಗಳಿಂದ ಹೊರಹೊರಟ (ಬಿಡಲ್ಪಟ್ಟ) ವಿಷಕ್ಕೆ ಸಮಾನವಾದ (ಕರಿಯಬಣ್ಣದ) ಮದಿಸಿದ ದುಂಬಿಗಳ ಆರೂ ಕಾಲುಗಳಿಂದ ಕೇದಗಿಹೂವುಗಳ ಧೂಳು ಉದುರುತ್ತಿತ್ತು. ಆ ರಜವು (ಧೂಳು) ಹೊರಹೊಮ್ಮುವ ಮಿಂಚೋ ಎಂಬ ಹಾಗೆ (ಮತ್ತು) ಅವುಗಳ ಝೇಂಕಾರಧ್ವನಿಯು ಗುಡುಗೋ ಎನ್ನುವಂತಿರಲು, ಭ್ರಮರಸಮೂಹವು ಆ ಕೇದಗಿಯ ವನದಲ್ಲಿ ಕೂಡಿಕೊಂಡು, ಕೇದಗಿಯ ವನದ ಮಿತ್ರತ್ವವನ್ನು ಪಡೆದಿರುವ ಎಳೆಯ ಮೋಡದ ಹಾಗೆ ಪ್ರಕಾಶಿಸುತ್ತಿತ್ತು. ವ॥ ಮತ್ತು ಆಗ ೧೨೪. ಆ ಪಟ್ಟಣದ ದಾರಿಯಲ್ಲಿ ದಾಟುವುದಕ್ಕೆಂದು ಹೆಜ್ಜೆಯನ್ನಿಟ್ಟು ಜಾರಿ ಬೇಗನೆ ಕೈಯನ್ನು ನೆಲಕ್ಕೂರಿ ಬಿದ್ದು, ಎದ್ದು ಕೆಸರಾದ ಬಟ್ಟೆಯನ್ನು ಪ್ರವಾಹವಾಗಿ ಹರಿಯುತ್ತಿರುವ (ಬೀದಿಯ) ನೀರಿನಲ್ಲಿ ತೊಳೆದುಕೊಂಡು (ಪುನಃ) ಮೈಮೇಲೆ ಹಾಕಿಕೊಂಡು (ಚಳಿಯ ಕಾರಣವಾಗಿ) ಹಲ್ಲುಗಳ ಮೊರೆತ ಮತ್ತು ರೋಮಾಂಚನಗಳು ಏಳುತ್ತಿರಲು, ಪುನಃ ಯೋಗ್ಯಸ್ಥಳವನ್ನು ಹುಡುಕಿ ಹೆಜ್ಜೆಯನ್ನಿಟ್ಟು, ಹಿಡಿದ ಕೋಲುಗಳನ್ನು ಊರುತ್ತ ಹೋಗುವ ದಾರಿಹೋಕರನ್ನು ಉಪ್ಪರಿಗೆಯಲ್ಲಿ ನಿಂತು ಕಮಲಾಕ್ಷಿಯರು ನೋಡಿ ನಗುತ್ತಿದ್ದರು. ೧೨೫. ಭೂಮಿ ಮಳೆಯಿಂದ ತೊಯ್ದಿತ್ತು. ಬೆಳೆದ ಎಳೆಯ ಹುಲ್ಲು ಚಳಿಯಿಂದ ಸೇಡುಗೊಂಡ ಭೂಮಿಯ ಮೈಯಲ್ಲಿ ನವಿರೆದ್ದ ಹಾಗೆ ಶೋಭಿಸುತ್ತಿತ್ತು. ಅರಣ್ಯದ ಗಿಡ ಮರಗಳ ಎಲೆಗಳು ಅಲ್ಲಾಡುತ್ತಿರಲು, ಭೂಮಿಯು ಚಳಿಯಿಂದ ನಡುಗುವ ಹಾಗೆ

ವ॥ ಇಂತೊಗೆತಂದ ಸಕಳಜನಮನೋನಯನಹರ್ಷಪ್ರದಮಾದ ವರ್ಷಾಕಾಲದೊಳೆನೆಯಾಳೊಡನೆ ಸಡಗರಂ ಮಿಗೆ ಗಗನಮಂ ತುಡುಂಕುವ ಭರ್ಮಹರ್ಮ್ಯಮನಾರೋಹಿಸಿ ಮೇಲ್ನೆಲೆಯ ಕನಕಪರ್ಯಂಕಪೀಠದೊಳ್ಸಾಡಿಯಿಂ ಕುಳ್ಳಿರ್ದು ಗವಾಕ್ಷ ವಿವರ ವಿನಿಹಿತ ಕಟಾಕ್ಷನಾಗಿ

ಮ॥ಸ್ರ॥ ಇದೆ ನಿನ್ನೀ ಕೇಶಪಾಶಕ್ಕಗಿದು ನೆಗೆದವೊಲ್ಕಾಮುರ್ಗಿಲ್ಮಿಂಚು ತಾನಿಂ
ತಿದೆ ನಿನ್ನುದ್ಯತ್ಕಟಾಕ್ಷದ್ಯುತಿಗೆ ಬೆದರ್ದುದೆಂಬಂತೆ ಚಾಂಚಲ್ಯಮಂ ತಾ
ಳ್ದಿದೆ ನಿನ್ನೀ ಭ್ರೂವಿಳಾಸಕ್ಕಳರ್ದು ಕರಗುವಂತಿಂದ್ರಚಾಪಂ ಕಳಾಸಂ
ಪದೆ ನೋಡೆಂದಂದು ತೋಱುತ್ತೆಸೆದನಭಿನವಶ್ರೀವಧೂಟೀಭುಜಂಗಂ ೧೨೬

ಲಲಿತಪದ॥ ದುರ್ವಹಜಗದ್ಧರೇ ಸುಪರ್ವನುತವೈಭವೇ ಸಗರ್ವದಿತಿಜಾಪಹೆಯಖರ್ವ ಗುಣಹಾರೇ
ಗೀರ್ವರ ಸಮರ್ಚಿತೇ ಯಜುರ್ವಿನುತ ಸತ್ಪದೇ ಹವಿರ್ವಿಧಿವಿಧಾಯಿಕೆ ಮಹೌರ್ವ ಶಿಖಿನೇತ್ರೇ
ಸರ್ವಮುನಿಭಾವಿತೇ ಸದೋರ್ವಿಜನಸೇವಿತೇ ವಪುರ್ವಿಜಿತವಲ್ಲರಿಯಪೂರ್ವ ಸುಚರಿತ್ರೇ
ನಿರ್ವೃತಿಪದಾಸ್ಪದೇ ಚತುರ್ವಿಧಫಲಪ್ರದೇ ಸಶರ್ವತನು ಪಾಲಿಪುದು ಪರ್ವತ ತನೂಜೇ ೧೨೭

ತೋರುತ್ತಿತ್ತು. ವ॥ ಹೀಗೆ ಸಕಲಜನರ ಮನಕ್ಕೂ ಕಣ್ಣಿಗೂ ಹರ್ಷವನ್ನುಂಟು ಮಾಡುತ್ತ ಬಂದ ಮಳೆಗಾಲದಲ್ಲಿ ಹೆಂಡತಿಯೊಡನೆ ಸಡಗರದಿಂದ ಆ ರಾಜಶೇಖರನು ಆಕಾಶವನ್ನು ಮುಟ್ಟುವಂತಿದ್ದ ಸುವರ್ಣಮಯ ಮಹಡಿಯನ್ನು ಹತ್ತಿ, ಮೇಲಿನ ಅಂತಸ್ತಿನ ಬಂಗಾರದ ಮಂಚದ ಮೇಲೆ ಇರುವ ಹಾಸಿಗೆಯಲ್ಲಿ ಸಂಭ್ರಮದಿಂದ ಕುಳಿತು ಕಿಡಿಕಿಯ ಸಂದಿನಲ್ಲಿಟ್ಟ ಕಡೆಗಣ್ಣ ನೋಟವುಳ್ಳವನಾಗಿ, ೧೨೬. ನೂತನ ಯೌವನಶ್ರೀಯುಳ್ಳ ಮದುಮಗಳಾದ ಸರ್ವಮಂಗಳೆಯನ್ನು ಕೈಹಿಡಿದು ರಮಿಸುವ ಆ ರಾಜಶೇಖರನು (ಮಹಡಿಯ ಮೇಲೆ ಕುಳಿತು) "ನಿನ್ನ ಈ ಪಾಶಕ್ಕೆ ಸಮಾನವಾದ ಕೂದಲುಗಳ ಸಮೂಹಕ್ಕೆ ಹೆದರಿ ಅಂತರಿಕ್ಷಕ್ಕೆ ಹಾರಿದೆಯೋ ಎಂಬಂತೆ ಕರಿಯ ಮೋಡವು ಇರುತ್ತದೆ. ನಿನ್ನ ಪ್ರಕಾಶಿಸುತ್ತಿರುವ ಕಡೆಗಣ್ಣುಗಳ ಕಾಂತಿಗೆ ಮಿಂಚು ಬೆದರಿದೆಯೋ ಎಂಬಂತೆ ಚಪಲತೆಯನ್ನು ಹೊಂದಿ ಇದೆ. ನಿನ್ನ ಈ ಹುಬ್ಬುಗಳ ಸೌಂದರ್ಯಕ್ಕೆ ಹೆದರಿ ಕರಗುತ್ತಿದೆಯೋ ಎನ್ನುವ ಹಾಗೆ ಕಾಮನಬಿಲ್ಲು ಕರಗಿ ಹೋಗುತ್ತಿದೆ. ಎಲೈ ಕಳಾಪರಿಪೂರ್ಣಳೇ, ನೋಡು" ಎಂದು ತೋರಿಸುತ್ತ ಶೋಭಿಸುತ್ತಿದ್ದನು. ೧೨೭. ಧರಿಸಲಶಕ್ಯವಾದ ಜಗತ್ತನ್ನು ಧರಿಸಿರುವವಳೇ, ದೇವತೆಗಳ ಶ್ಲಾಘನೆಗೆ ಕಾರಣವಾದ ವೈಭವವುಳ್ಳವಳೇ, ಗರ್ವಿಷ್ಠರಾದ ದೈತ್ಯರನ್ನು ಸಂಹರಿಸಿದವಳೇ, ಅತ್ಯಧಿಕಗಳಾದ ಗುಣಗಳ ಹಾರವುಳ್ಳವಳೇ, ಗೀರ್ವರನಾದ ಬೃಹಸ್ಪತಿಯಿಂದ ಪೂಜಿಸಲ್ಪಡುವವಳೇ, ಯಜುರ್ವೇದದಿಂದ ಪ್ರತಿಪಾದ್ಯಳಾದವಳೇ, ಹವಿಸ್ಸಿನ ವಿಧಿವಿಧಾನಗಳನ್ನು ನಿಯಮನ (ವಿಧಾಯಿಕೆ)ಗೊಳಿಸುವವಳೇ, ವಡಬಾಗ್ನಿನೇತ್ರ

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣ ಮಹಾಪ್ರಭಾಪಟಲಪರಿವೃತ ಪರಶಿವಶ್ರೀಪಾದನಖಚಂದ್ರ ಸಾಂದ್ರರುಚಿರಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯಕವಿತಾವಿಶಾರದ ಶ್ರೀ ಷಡಕ್ಷರಿದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳ ಪ್ರಬಂಧದೊಳ್ ಸರ್ವಮಂಗಳಾ ವಿವಾಹಾದಿ ವರ್ಣನಂ

ಅಂತು ಆಶ್ವಾಸ ೮ಕ್ಕಂ ಪದ ೧೧೨೫ಕ್ಕಂ ಮಂಗಳ ಮಹಾಶ್ರೀ

## ಅಷ್ಟಮಾಶ್ವಾಸಂ

### ಸಂಪೂರ್ಣಂ

ಸ್ವರೂಪಳೇ, ಸಮಸ್ತ ಋಷಿಗಳಿಂದ ಧ್ಯಾನಿಸಲ್ಪಡುವವಳೇ, ಸತ್ವಶಾಲಿಗಳಾದ ಭೂಮಿಯ ಜನರಿಂದ ಸೇವಿಸಲ್ಪಡುವವಳೇ, ಬಳ್ಳಿಯನ್ನು ಗೆದ್ದ ದೇಹಲತೆಯುಳ್ಳವಳೇ, ಅಪೂರ್ವ ಚರಿತ್ರೆಯುಳ್ಳವಳೇ, ಸುಖಪ್ರದಳೇ, ಧರ್ಮಾರ್ಥಕಾಮಮೋಕ್ಷಫಲವನ್ನು ಕೊಡುವವಳೇ, ಪರಮೇಶ್ವರನ ಅರ್ಧಾಂಗಿಯೇ, ಪರ್ವತಪುತ್ರಿಯೇ (ನಮ್ಮನ್ನು) ರಕ್ಷಿಸು. ಗದ್ಯ॥ ಈ ಗದ್ಯ ಪದ್ಯ ರೂಪವಾದ ಪ್ರಬಂಧವು ವಂದಿಸುತ್ತಿರುವ ದೇವತಾ ಶ್ರೇಷ್ಠರಾದವರುಗಳ ಕಿರೀಟ ತಟದಲ್ಲಿ ಕೆತ್ತಲ್ಪಟ್ಟ ರತ್ನಸಮೂಹದ ಅಧಿಕವಾದ ಪ್ರಭೆಯ ಸಮೂಹದಿಂದ ಬಳಸಿರುವ ಪರಮೇಶ್ವರನ ಶೋಭಾಯುಕ್ತವಾದ ಪಾದಗಳ ಉಗುರುಗಳೆಂಬ ಚಂದ್ರನ ದಟ್ಟವಾದ ಕಾಂತಿಯೆಂಬ ಬೆಳುದಿಂಗಳಿಗೆ ಒಪ್ಪುವ ಚಕೋರಪಕ್ಷಿಯಂತಿರುವವನೂ, ಶೃಂಗಾರಾದಿ ನವರಸಜ್ಞರಾದ ಜನರಿಂದ ಮನ್ನಣೆಹೊಂದಿದವನೂ ಆದ ಉಭಯಕವಿತಾವಿಶಾರದ ಶ್ರೀಷಡಕ್ಷರಿದೇವನಿಂದ ರಚಿಸಲ್ಪಟ್ಟಿರುವ ರಾಜಶೇಖರ ವಿಳಾಸವೆಂಬ ವಿಸ್ತಾರವಾದ ಗ್ರಂಥದಲ್ಲಿ ಸರ್ವಮಂಗಳೆಯ ವಿವಾಹವರ್ಣನೆ

## ಅಷ್ಟಮಾಶ್ವಾಸ

### ಮುಗಿದುದು

# ನವಮಾಶ್ವಾಸಂ

ಕಂ॥ ಶ್ರೀಮದಪರ್ಣಾನನ ನವ
ತಾಮರಸಾಮೋದ ಮದಮಧುವ್ರತನಭವಂ
ಸಾಮಜಮರ್ದನನಮರಲ
ಲಾಮಂ ಪೊರೆಗೆಮ್ಮನಾವಗಂ ಶಿವಲಿಂಗಂ ೧

ಮ॥ ಶಿವಲೀಲಾ ಕಥನಾವಳೀಶ್ರವಣದಿಂ ತತ್ಪಾದಪೂಜಾಸಮು
ತ್ಸವದಿಂ ಶೈವಪುರಾತನವ್ರಜ ಪುರಾಣಾಕರ್ಣನೋತ್ಸಾಹದಿಂ
ಶಿವಯೋಗೀಂದ್ರ ಸಮರ್ಚನೈಕಸುಖದಿಂ ಕಾಂತಾಸಮೇತಂ ಮಹೀ
ಧವನೊಪ್ಪಿರ್ದನಶೇಷ ಸಜ್ಜನಮನಃಪದ್ಮಪ್ರಭಾವಲ್ಲಭಂ ೨

ವ॥ ಇಂತುಮಾ ನೃಪಂ ದಿವಸಂಗಳೆವುತ್ತಮಿರ್ಪನ್ನೆಗಂ

ಮಾಲಿನಿ॥ ಸುರಕರಿಕರಮುಕ್ತಾಂಭಃಕಣಂ ಮಂಜಿದೆಂಬಂ
ತಿರೆ ತಳೆದು ಶಿಖಾವದ್ಗರ್ವಮಂ ನುರ್ಗಿ ನೀಲಾಂ
ಬುರುಹ ಸುರಭಿಯೊಂದುತ್ತೈದಿದಂ ಮಾಗಿ ಬರ್ಪಂ
ತಿರೆ ಧೃತಘನಸಾರಾವೋದಸಾರಃ ಸಮೀರಂ ೩

೧. ಶೋಭಾಯುಕ್ತಳಾದ ಪಾರ್ವತಿಯ ಮುಖವೆಂಬ ನೂತನ ತಾವರೆಯು ಆಮೋದಕ್ಕೆ ಮದಿಸಿದ ಭ್ರಮರದೋಪಾದಿಯಲ್ಲಿರುವ ಪರಮೇಶ್ವರನೂ, ಗಜಾಸುರ ಸಂಹಾರಕನೂ, ದೇವತೆಗಳಲ್ಲಿ ತಿಲಕಪ್ರಾಯನೂ ಆದ ಶಿವಲಿಂಗಮೂರ್ತಿಯು ನಮ್ಮನ್ನು ಸದಾ ಕಾಪಾಡಲಿ. ೨. ಕಾಂತೆಯಾದ ಸರ್ವಮಂಗಳಾ ಸಮೇತನಾಗಿ, ಸಜ್ಜನರ ಮನಸ್ಸೆಂಬ ಕಮಲಗಳಿಗೆ ಸೂರ್ಯಪ್ರಾಯನಾದ ರಾಜಶೇಖರಮಹಾರಾಜನು ಶಿವನ ಲೀಲೆಗಳ ಕಥಾಶ್ರವಣ ಮಾಡುವುದರಿಂದಲೂ, ಶಿವನ ಪಾದಪೂಜೆಮಾಡುವ ವಿಶೇಷೋತ್ಸಾಹದಿಂದಲೂ, ಶೈವಪುರಾತನರುಗಳ (ಪ್ರಸಿದ್ಧವಾದ ಅರುವತ್ತುಮೂವರು ಶಿವಭಕ್ತರುಗಳ) ಪುರಾಣಗಳನ್ನು ಕೇಳುವ ಉತ್ಸುಕತೆಯಿಂದಲೂ, ಶಿವಯೋಗೀಶ್ವರರುಗಳ ಪೂಜೆಯ ಏಕೈಕಸುಖದಿಂದಲೂ ಒಪ್ಪಿದ್ದನು. ವ॥ ಈ ರೀತಿಯಾಗಿ ಆ ರಾಜಶೇಖರ ಮಹಾರಾಜನು ದಿನಗಳನ್ನು ಕಳೆಯುತ್ತಿರುವಷ್ಟರಲ್ಲಿ ೩. ದೇವಗಜವಾದ ಐರಾವತದ ಸೊಂಡಿಲಿನಿಂದ ಹೊರಹೊರಟ ನೀರಿನ ಕಣಗಳೋ ಎಂಬ ಹಾಗೆ ಕಾಣುವ ಹಿಮ ಇರಲು, ಅಗ್ನಿಯ ಗರ್ವವನ್ನು ಹಾಳುಮಾಡಿ, ನೀಲೋತ್ಪಲಗಳ ಸುಗಂಧವನ್ನು ಹೊಂದಿ ಚಳಿಗಾಲವು ಬರುವುದನ್ನು ಸೂಚಿಸುತ್ತಾ ಕರ್ಪೂರ ಸುಗಂಧಸಾರಯುಕ್ತವಾದ ಗಾಳಿ

ಚಂ॥ ನೆಗೆದುಡುಜಾಲದಂತೆ ಪೊಸವೊಲ್ಲೆಯ ಬಲ್ಮುಗುಳೊಪ್ಪೆ ಪದ್ಮಮಂ
ಮಿಗೆ ತೊಱೆದಲ್ಲಿ ಲಕ್ಷ್ಮಿ ನಿಲೆ ನೈದಿಲೊಳುರ್ಬಿದ ಮರ್ಬು ಪಿಂಗದಂ
ತಗಲಿರೆ ಕಾರ್ಮುಗಿಲ್ನೆಗಳೆ ಜೊನ್ನದವೋಲ್ ಪೊಸಮಂಜು ವಾರ್ಧಿ ಪೆ
ರ್ಚುಗೆಯನಮರ್ಚೆ ತಾಳ್ದನುದಿತೋದಯಮಂ ಹಿಮಕಾಲಚಂದ್ರಮಂ ೪

ಕಂ॥ ಘನರಾಹುವಿಂದುವಂ ತಿಂ
ದು ನಭಸ್ಥಳದೊಳೆ ಮಗುಳ್ಚಿದಂತೆವೊಲೆಸೆಗುಂ
ವನಧರಮದರಾಮೃತರಸ
ಸೊನೆ ಸುರಿತರ್ಪಂತೆ ಮಂಜದೇಂ ರಂಜಿಸಿತೋ ೫

ಧರಣಿಪನ ಕೀರ್ತಿವಧು ವಿ
ಸ್ಫುರಿತ ನಭಃಕಬರಿಯಲ್ಲಿ ಗೊಜ್ಜಗೆಯ ಸರೋ
ತ್ಕರವಾಂತವೊಲೆ ಸಿತಾಭ್ರಂ
ನೆರೆದಿರೆ ಮಂಜದಱ ಮಧುಕಣಂಬೊಲ್ ಸುರಿಗುಂ ೬

ವ॥ ಮತ್ತಮಾಗಳ್

ಮ॥ ಇಳೆಯಂ ಮುಚ್ಚಿ ಮುಸುಂಕಿ ನಿಷ್ಕಲತೆಯಿತ್ತಾಶಾಧಿಪರ್ಗೊಂಟುಗೊಂ
ಟೊಳೆ ಸಾರ್ವಂತಿರೆ ಮಾಡಿ ವಹ್ನಿಸಖನಾನೆಂಬೊಂದಹಂಕಾರಮಂ
ತಳೆದಾ ಮಾರುತನಂ ಕರಂ ಪಿಡಿದು ತನ್ನೈಕಿಲ್ಗಳಿಂ ನಾಂದಿ ಸಂ
ಚಳನಂ ಮಾಡಿ ತದಾಪ್ತನುರ್ಕೆ ಮುಱದೇಂ ಪರ್ಬಿತ್ತೊ ಹೈಮಾಗಮಂ ೭

ಬೀಸುತ್ತ ಬಂದಿತು. ೪. ಆಕಾಶದಲ್ಲಿ ನೆಗೆದ ನಕ್ಷತ್ರಸಮೂಹವೋ ಎಂಬಂತೆ ನೂತನ ವಾಗಿ ಮಲ್ಲಿಗೆಬಳ್ಳಿಗಳಲ್ಲಿ ಅಧಿಕವಾಗಿ ಮೊಗ್ಗೆಗಳು ಒಪ್ಪಿದುವು. ಲಕ್ಷ್ಮಿಯು ಕಮಲ ವನ್ನು ಬಿಟ್ಟು ಕನ್ನೈದಿಲೆಯಲ್ಲಿ ನೆಲೆಸಿದಳು. ಹೆಚ್ಚಿದ ಮಬ್ಬು ಸರಿದಂತೆ ಕಪ್ಪಾದ ಮೋಡವು ಹೊರಟುಹೋಯಿತು. ನೂತನ ಮಂಜು ಬೆಳದಿಂಗಳಂತೆ ಆಯಿತು, (ಹೀಗೆ) ಸಮುದ್ರವನ್ನು ಹೆಚ್ಚಿಸುವಂತೆ ಮಾಡುತ್ತ ಮಾಗಿಕಾಲದ ಚಂದ್ರನು ಚೆಲುವಾದ ನೂತನೋ ದಯವನ್ನು ತಾಳಿದನು. ೫. ಆ ಮಂಜು ಘನನಾದ ರಾಹುವು ಚಂದ್ರನನ್ನು ನುಂಗಿ ಆಕಾಶಸ್ಥಳದಲ್ಲಿ ಉಗುಳಿದಂತೆ ಶೋಭಿಸುತ್ತಿತ್ತು. ಮತ್ತು ಮೇಘವು ತನ್ನ ಅಮೃತ ರಸವನ್ನು ಸುರಿಸುವಂತೆ ಅದು ಏನು ರಂಜಿಸಿತೋ ! ೬. ಆ ರಾಜಶೇಖರಮಹಾ ರಾಜನ ಕೀರ್ತಿಯೆಂಬ ಹೆಂಗಸು ವಿಶೇಷವಾಗಿ ಸ್ಫುರಿಸುತ್ತಿರುವ ತನ್ನ ಆಕಾಶವೆಂಬ ತುರುಬಿನಲ್ಲಿ ಶ್ರೇಷ್ಠವಾದ ಗೊಜ್ಜಗೆ (ಇರುವಂತಿಗೆ ?)ಯ ಸರವನ್ನು ಧರಿಸಿರುವ ಹಾಗೆ ಬಿಳಿಯಮುಗಿಲು ಕೂಡಿರಲು, ಅದರ ಅಮೃತಕಣವೋ ಎನ್ನುವ ಹಾಗೆ ಮಂಜು ಸುರಿಯುತ್ತಿತ್ತು. ವ|| ಮತ್ತು ಆಗ, ೭. ಹೇಮಂತಋತುವಿನ ಆಗಮನವು ಭೂಮಿಯನ್ನೆಲ್ಲ ಮುಚ್ಚಿ ಮುಸುಕಿ, ನಿಷ್ಕಲತೆಯನ್ನುಂಟುಮಾಡಿ, ದಿಕ್ಪಾಲಕರೆಲ್ಲ ತಮ್ಮ ತಮ್ಮ ದಿಕ್ಕುಗಳ ಮೂಲೆ ಮೂಲೆಗಳಲ್ಲಿ ಸೇರುವಂತೆ ಮಾಡಿತು. ತಾನು ಅಗ್ನಿಮಿತ್ರನು ಎಂಬ ಅಹಂಕಾರದಿಂದ ಕೂಡಿದ್ದ ಗಾಳಿಯನ್ನು ಹಿಡಿದು ತನ್ನ ಮಂಜಿನ ಕಣಗಳಿಂದ

ವ॥ ಅಂತುಮಲ್ಲದೆಯುಂ

ಮ॥ಸ್ರ॥ ಪಿಕಜಿಹ್ವಾಸ್ತಂಭಮಂ ಪನ್ನಗನ ಪಟುಗತಿಸ್ತಂಭಮಂ ಮಾಡಿ ಮತ್ತ
ರ್ಕಕರಸ್ತಂಭಾಗ್ನಿ ಸಂಸ್ತಂಭಮನೆ ನೆಗಳ್ದು ಮೇಘಾಗಮೋಚ್ಚಾಟಸಂಗೈ
ದು ಕರಂ ಕಾಂತೌಘಸಮ್ಮೋಹನಮನೊದವಿ ಸುಧಾರುಗ್ವಶೀಕಾರನಿರ್ನಾ
ಯಕನನ್ಯಾಂಗಪ್ರವೇಶಂ ಹಿಮಸಮಯ ಮಹಾಸಿದ್ಧನೊಪ್ಪಿರ್ದನಾಗಳ್ ೮

ಕಂ॥ ಪಗೆಯ ಕೆಳೆಯುಡುಗಿದುದು ಗಡ
ಪಗೆಯಂ ಕೆಳೆಗೊಂಡ ನಳಿನಿ ಕೊರಗಿದಳೆಂದೇ
ನಗುವುದೆನೆ ನೈದಿಲೆ ಪಗ
ಲ್ಮುಗಿಯದು ಬೆಳ್ದಿಂಗಳೆಂದು ಭಾವಿಸಿ ಹಿಮಮಂ ೯

ಮಂಜಿರೆ ನರೆಫನೆ ಕೊರಗಿರೆ
ಕಂಜಂ ತೆರೆವಿಡಿದು ಸುರ್ಕಿದಾನನಮೆನೆ ಚ
ಕ್ರಂ ಜಗುಳ್ದಿರೆ ಮೊಲೆಯೆನೆ ಹಿಮ
ದಿಂ ಜರೆಗೊಂಡಂತೆ ದಿವಸರಮೆ ಕಳೆಗೆಟ್ಟಳ್ ೧೦

ಮಿದ್ದಿತು. (ಹೀಗೆ) ಸಂಚಾರಮಾಡಿ ಆ ಗಾಳಿಯು ಆಪ್ತಸಖನೆನಿಸಿದ್ದ ಅಗ್ನಿಯ ಸೊಕ್ಕನ್ನು ಮುರಿದುಹಾಕುತ್ತ ಚಳಿಗಾಲವು ಹಬ್ಬಿತು. ವ॥ ಹಾಗೂ ಅಲ್ಲದೆ ೮. ಹೇಮಂತ ಋತುವೆಂಬ ಸಿದ್ಧಪುರುಷನು ಕೋಗಿಲೆಗಳ ಜಿಹ್ವೆಯನ್ನು ಸ್ತಂಭನಗೊಳಿಸಿದನು. ಹಾವಿನ ಓಟದ ಸ್ತಂಭನಮಾಡಿದನು. ಮತ್ತು ಸೂರ್ಯಕಿರಣಗಳ ಸ್ತಂಭನ, ಅಗ್ನಿಯ ಸ್ತಂಭನಗಳನ್ನು ಮಾಡಿದನು. ಮೋಡಗಳ ಬರುವಿಕೆಯನ್ನು ಉಚ್ಚಾಟನಗೊಳಿಸಿದನು. ಚೆನ್ನಾಗಿ ಸ್ತ್ರೀಯರಲ್ಲಿ ಮೋಹವನ್ನುಂಟುಮಾಡಿದನು. ಚಂದ್ರಕಿರಣಗಳ ವಶೀಕರಣ ನಿರ್ನಾಯಕನೆನಿಸಿದ್ದನು. ಅನ್ಯರ ಅಂಗಪ್ರವೇಶಮಾಡಿದನು. ೯. ನೈದಿಲೆಯು 'ತನ್ನ ಶತ್ರುವಾದ ಸೂರ್ಯನ ಕಾಂತಿಯು ಕುಂದಿತಲ್ಲವೆ ! ಸೂರ್ಯಸ್ನೇಹಿತೆಯಾದ ಕಮಲಿನಿಯು ಕೊರಗಿದಳಲ್ಲವೇ !' ಎಂದು ನಗುವುದೋ ಎನ್ನುವ ಹಾಗೆ ಆ ಹಿಮುವನ್ನು ಬೆಳದಿಂಗಳೆಂದೇ ಭಾವಿಸಿ ಮುಚ್ಚಿಕೊಳ್ಳಲೇ ಇಲ್ಲ. ೧೦. ದಿವಸವೆಂಬ ಲಕ್ಷ್ಮಿಯು ಹರಡಿರುವ ಮಂಜೇ ನರೆಗೂದಲಾಗಿ, ಕೊರಗಿಹೋಗಿ ತೆರೆಗಳ ಮೇಲೆ ಇರುವ ಕಮಲವೇ ಸುಕ್ಕುಗಟ್ಟಿದ ಮುಖವುಳ್ಳವಳಾಗಿ, ವೃದ್ಧಿಯಿಲ್ಲದೆ ಇರುವ ಚಕ್ರವಾಕಪಕ್ಷಿಗಳೇ ಜೋಲುಬಿದ್ದ ಮೊಲೆಗಳು ಎನಿಸಿ ಚಳಿಯಕಾರಣದಿಂದ ಮುದುಕಿಯು ಹಾಗೆ ಕಳೆಗೆಟ್ಟಿದ್ದಳು.

ಮರದೊಳೆಸೆವೊಂದು ನೆವದಿಂ
ಮರನಡರ್ದಂ ಶಿಖಿ ದಿವಾಕರಂ ನೀರ್ಪೊಕ್ಕಂ
ಪರಿಗತಬಿಂಬವ್ಯಾಜದಿ
ನರರೆ ಹಿಮಾಗಮಮಹೀಶನೇಂ ಕಡುಗಲಿಯೋ ೧೧

ರಯದಿಂ ಮುಸುಂಕುತಿರ್ಪತಿ
ಶಯಹಿಮಮಂ ಕಳಿಯಲೆಂದಿನಂ ಶಿಖಿಯ ಸಮಾ
ಶ್ರಯಮೆಸಗಿ ಕಳಿಯನೆನಲಾ
ಶ್ರಯಾಶನಾಶ್ರಯದಿನಿಷ್ಟಮೇಂ ಸಮನಿಪುದೇ ೧೨

ಹಿಮಕರಮುಖಿಯರ ಸೇವನೆ
ಹಿಮಮಂ ಬಱಿಕೆಯ್ದುದ ಹಿಮಕರಸೇವನೆಯಿಂ
ಹಿಮಮಳಿದುದಿಲ್ಲವೆನೆ ಕಾ
ಲಮಹಿಮೆಯಾವಂಗದೇನನೆಸಗದೊ ಜಗದೊಳ್ ೧೩

೧೧. ಹಿಮರೂಪನಾದ ಮಹಾರಾಜನು ಬರಲಾಗಿ, ಅರರೇ! ಮರಗಳಲ್ಲಿ ಶೋಭಿಸಬೇಕೆಂಬ ನೆಪದಿಂದ ಶಿಖಿಯು-ನವಿಲು ಮತ್ತು ಬೆಂಕಿಯು ಮರವನ್ನು ಅಡರಿದನು. ಬಿಂಬದ ವ್ಯಾಜಪಡೆದು ಸೂರ್ಯನು ನೀರನ್ನು ಹೊಕ್ಕನು.[1] ಆ ಹೇಮಂತರಾಜನು ಅದೆಂಥ ಕಡುಗಲಿಯೋ! ೧೨. ಸೂರ್ಯನು ವೇಗದಿಂದ ತನಗೆ ಆವರಿಸುತ್ತಿದ್ದ ಅತಿಶಯವಾದ ಹಿಮವನ್ನು ಕಳೆದುಕೊಳ್ಳಲೆಂದು, ಅಗ್ನಿಯಿರುವ ದಿಕ್ಕನ್ನು ಆಶ್ರಯಿಸಿ, ಅಂದರೆ ದಕ್ಷಿಣಾಯನಗತನಾಗಿಯೂ ಕೂಡ ಆ ಮಂಜಿನ ಬಾಧೆಯನ್ನು ತೊಲಗಿಸಿಕೊಳ್ಳದಾದನು, ಎಂಬುದಾಗಿ ಹೇಳುತ್ತಿರಲು, ಅಗ್ನಿ (ಆಶ್ರಯಾಶನ) ಯನ್ನು ಆಶ್ರಯಿಸುವುದರಿಂದ ಇಷ್ಟಾರ್ಥವು ನೆರವೇರುವುದೇ ? (ಆಶ್ರಯಿಸಿದವರನ್ನೇ ನುಂಗುವ ಅಗ್ನಿಯನ್ನು ಆಶ್ರಯಿಸಿದವರ ಇಷ್ಟಾರ್ಥವು ನೆರವೇರಲಾರದು–ಎಂದು ಭಾವ) ೧೩. ಹಿಮಕರಮುಖಿಯರಾದ (ಚಂದ್ರಮುಖಿಯರಾದ) ಸ್ತ್ರೀಯರ ಆಸರೆಯು ಹಿಮವನ್ನು ಇಲ್ಲದಂತೆ ಮಾಡಿತು. ಉಷ್ಣಕರನಾದ ಸೂರ್ಯಸೇವನೆಯಿಂದ ಹಿಮವು ಹೋಗಲಿಲ್ಲ! ಹೀಗಿರಲು

---

1 ಶಿಖಿಯೆಂಬ ಶಬ್ದಚ್ಛಲದಿಂದ ಹೀಗೆ ವರ್ಣಿಸಿದೆ. ನೀರಿನಲ್ಲಿ ಸೂರ್ಯನ ಪ್ರತಿಬಿಂಬ ಕಾಣಿಸಿದ್ದರಿಂದ ಸೂರ್ಯನು ನೀರಲ್ಲಿ ಅಡಗಿದನೆಂದು ಹೇಳಿದೆ (ರಂ).

ಹರನುರಿಗಣ್ಣುಡೆ ಮೞಿೞ್ವೊ
ಕ್ಕರಲಂಬನ ಬಿಸುಪುಗಳೆದು ಪೊೞೆದುದು ತರುಣೀ
ಗುರುಕುಚಮಿದು ಚಳಿಗಳೆದುದು
ವರಂಗೆ ಮರೆವುಗೆ ಸುವೃತ್ತರೇಂಗೆಯ್ಯರೊ ಪೇೞ್ ೧೪

ಸಸಿ ಬಾಂಬೊಳೆಯುಂ ಬಾನೊಳ್
ಬಿಸುಟುಂ ಬಿಡದಾನೆದೊವಲನಿರ್ಮಡಿಕೆಯೊಳೊಂ
ದಿಸಿ ಪೊದೆದ ಗಜೆಯನಾಲಿಂ
ಗಿಸಿ ಗಿರಿಶಂ ಮೆೞೆವನೆಂದೊಡದನೇನೆಂಬೆಂ ೧೫

ಹರಿವಿಧಿಗಳುಳಿದು ಸಳಿಳಾ
ಕರಸರಸೀರುಹಂಗಳಂ ರಮಾವಾಗ್ದೇವೀ
ಪರಿರಂಭಣಯುತರಿರ್ದ
ರ್ಸುರುಚಿರ ವೈಕುಂಠ ಸತ್ಯಲೋಕಾಂತರದೊಳ್ ೧೬

ಮ॥ ಚಳಿವೆಟ್ಟಾಣ್ಮನ ಪುತ್ರಿ ಸುರ್ಕಿ ಚಳಿಯಿಂ ಮೈಸಾರ್ದು ತಾನಪ್ಪಿ ಸಂ
ಚಳಿಸಲ್ ಶರ್ವನ ದೇಹದಿಂ ಸಿರಿ ಸರೋಜಾತಾಕ್ಷವಕ್ಷಸ್ಥೆ ನಿ
ಶ್ಚಳೆಯಾದಳ್ನುಡಿವೆಣ್ಚತುರ್ಮುಖಮುಖಾಂತರ್ವಾಸೆಯಾಗಿರ್ಪಳಿ
ನ್ನುಳಿದೀ ಲೋಕದ ಪೆಂಡಿರೇನುಳಿವರೇ ತಳ್ತಪ್ಪದಾತ್ಮೇಶರಂ ೧೭

ಜಗತ್ತಿನಲ್ಲಿ ಕಾಲಮಹಿಮೆಯು ಯಾವನಿಗೆ ಏನು ತಾನೆ ಮಾಡುವುದಿಲ್ಲ ! ೧೪. ಪರಮೇಶ್ವರನ ಅಗ್ನಿನೇತ್ರವು ಸುಡುತ್ತಿರಲು ಬೆನ್ನುಬಿದ್ದ ಕಾಮನ ತಾಪವನ್ನು ತರುಣಿಯ ದಪ್ಪನಾದ ಮೊಲೆಗಳು ಹೋಗಲಾಡಿಸಿ ಕಾಪಾಡಿದುವು. ಉತ್ತಮರ ಮರೆಬಿದ್ದರೆ (ಅ) ಒಳ್ಳೆಯ ಚರಿತ್ರೆಯುಳ್ಳವರು ಏನು ಮಾಡರೋ ಹೇಳು ! (ಶಿವಪತ್ನಿಯಾದ ಪಾರ್ವತಿಯು ಶಿವನ ಉರಿಗಣ್ಣು ಸುಡುತ್ತಿರಲು ಶರಣಾಗತನಾದ ಮನ್ಮಥನ ತಾಪವನ್ನು ಹೋಗಲಾಡಿಸಿ ರಕ್ಷಣೆ ಮಾಡಿದಳು. ಗಾತ್ರವುಳ್ಳ ಮೊಲೆಯ ಮರೆಹೊಕ್ಕ ವಲ್ಲಭನಿಗೆ ಉಂಟಾದ ಚಳಿಯನ್ನು ಹೋಗಲಾಡಿಸಿತು. ಸುವೃತ್ತರು (ಗುಂಡಾದ ಮೊಲೆಗಳು) ಏನು ಮಾಡುವುದಿಲ್ಲ ಹೇಳು—ಎಂಬ ಅರ್ಥಾಂತರ ಧ್ವನಿತವಾಗುವುದು). ೧೫. ಶಿವನು ಚಂದ್ರ ಮತ್ತು ಗಂಗೆಯರನ್ನು ಆಕಾಶದಲ್ಲಿಯೇ ಬಿಸಾಡಿ, ಆನೆಯ ತೊಗಲನ್ನು ತ್ಯಜಿಸದೆ ಎರಡು ಪದರುಮಾಡಿ ಹೊದ್ದುಕೊಂಡು, ಪಾರ್ವತಿಯನ್ನು ಆಲಿಂಗಿಸಿಕೊಂಡು ಮೆರೆಯುವವನಾದನು ಎನ್ನುವಾಗ ಚಳಿಯ ಮಹಿಮೆಯನ್ನು ಏನೆಂದುಹೇಳಲಿ ! ೧೬. ವಿಷ್ಣು ಬ್ರಹ್ಮರುಗಳು (ಕ್ರಮವಾಗಿ) ಸಮುದ್ರ ಮತ್ತು ಕಮಲಗಳನ್ನು ತ್ಯಜಿಸಿ, ಮನೋಹರವಾದ ವಿಷ್ಣುಲೋಕ ಮತ್ತು ಬ್ರಹ್ಮಲೋಕಗಳಲ್ಲಿ ಲಕ್ಷ್ಮಿ ಮತ್ತು ಸರಸ್ವತಿಯರನ್ನು ಆಲಿಂಗಿಸಿಕೊಂಡವರಾಗಿ ಇದ್ದರು. ೧೭. ಹಿಮವಂತನ ಮಗಳು ಚಳಿಯಿಂದ ಉಡುಗಿ ಶಿವನ ಬಳಿಗೆ ಹೋಗಿ ಅವನನ್ನು ಅಪ್ಪಿಕೊಂಡು ಅವನ ದೇಹದಿಂದ ಕದಲದಂತಾದಳು. ಲಕ್ಷ್ಮಿಯು ವಿಷ್ಣುವಿನ ವಕ್ಷಸ್ಥಳದಲ್ಲಿ ಸೇರಿದವಳೆನಿಸಿ ನಿಶ್ಚಲತೆಯನ್ನು ಹೊಂದಿದಳು.

ಕಂ॥ ಪುದಿದ ಹಿಮವೊಡಲೊಳಿಳಿತಂ
ದುದುರಾಗ್ನಿಯನೆಯ್ದೆ ನಂದೆವೊಯ್ದುದು ನಿಜಮ
ಲ್ಲದೊಡೆಂತು ತೋರ್ಪುದೋ ಪೇ
ಳ್ಮೊದಲಿಲ್ಲದ ಪೊಗೆ ಪೊದಳ್ದು ಜನದಾನನದೊಳ್ ೧೮

ಮೃಡನ ಕಿಡಿಗಣ್ಣ ಕಡುಬಿಸು
ಪಡಂಗಿಸಿತ್ತೈಕಿಲಿದು ಮನೋರಮೆ ನೋಡೆಂ
ದಡಿಗಡಿಗೆ ರತಿಯ ಕರಮಂ
ಪೊಡೆದಾರ್ದಿನ್ನಂಜೆನೆಂದು ನಲಿವಂ ಮದನಂ ೧೯

ಕುಮುದಮಲರ್ಚಿ ಹಿಮರುಚಿ
ಗೆ ಮಹೋತ್ಸವಮಿತ್ತುದಬ್ಜಮಂ ಕೊರಗಿಸಿ ತಿ
ಗ್ಮಮರೀಚಿಯನದು ಮಸುಳಿಸಿ
ತು ಮಹೀಜನಮಾತ್ಮಸಮಕೆ ಮಾಳ್ಪುದು ಹಿತಮಂ ೨೦

ಬೆರಲೈಕಿಲಿಂ ಮುರುಂಟಿರೆ
ವಿರಹಿಯ ಹೃದಯಸ್ಥ ವಿರಹವಹ್ನಿಗೆ ಕೈಯಂ
ಸ್ಮರನೊಡ್ಡಿ ಕಾಸಿ ಬಿಲ್ಲಂ
ತಿರುವೊಯ್ದು ಸುತಿರ್ಪನಸಿತಶರರುಹಶರದಿಂ ೨೧

ಸರಸ್ವತಿಯು ಬ್ರಹ್ಮನ ಬಾಯಿಯಲ್ಲಿ ಸೇರಿಕೊಂಡವಳಾಗಿ ಇರತೊಡಗಿದಳು. ಇನ್ನುಳಿದ ಈ ಲೋಕದ ಸ್ತ್ರೀಯರುಗಳು ತಮ್ಮ ಗಂಡಂದಿರನ್ನು ಅಪ್ಪಿಕೊಂಡು ಕೂಡದೆ ಇರುತ್ತಾರೆಯೇ! ೧೮. (ಜನತೆಯನ್ನು) ಆವರಿಸಿದ್ದ ಚಳಿಯು ಮೊದಲು ದೇಹದೊಳಗೆ ಇಳಿದು ಬಂದು, ಉದರಾಗ್ನಿಯನ್ನು ಅದು ನಂದಿಹೋಗುವ ಹಾಗೆ ಹೊಡೆಯಿತು. ಇದು ಸತ್ಯಸಂಗತಿಯಲ್ಲದಿದ್ದರೆ, ಮೊದಲಿಲ್ಲದ ಹೊಗೆ ಜನರ ಮುಖದಲ್ಲಿ ಹೊರಹೊಮ್ಮಿ ಅದು ಹೇಗೆ ಕಾಣಿಸಿಕೊಳ್ಳುವುದೋ ಹೇಳು ! ೧೯. ಮನ್ಮಥನು 'ಮನೋಹರಳಾದ ರತಿಯೇ, ಈ ಹಿಮವು ಶಿವನ ಉರಿಗಣ್ಣಿನ ವಿಶೇಷವಾದ ಝಳವನ್ನು ಅಡಗಿಸಿತು, ನೋಡು' ಎಂದು ಅಡಿಗಡಿಗೆ ರತಿಯಕೈಯನ್ನು ತಟ್ಟಿ ಆರ್ಭಟಿಸಿ, 'ಇನ್ನು ಮುಂದೆ ಶಿವನಿಗೆ ಭಯಪಡುವುದಿಲ್ಲ' ಎಂದು ನಲಿಯುತ್ತಿದ್ದನು. ೨೦. ಆ ಹಿಮವು ನೈದಿಲೆಯನ್ನು ಅರಳಿಸಿ ಚಂದ್ರಕಿರಣಗಳಿಗೆ ಅಧಿಕವಾದ ಪ್ರಾಶಸ್ತ್ಯವನ್ನು ಕೊಟ್ಟು, ಪದ್ಮವನ್ನು ಕೊರಗಿಸಿ ಬಿಸಿಯಾದ ಸೂರ್ಯಕಿರಣಗಳನ್ನು ಕಾಂತಿಗೆಡಿಸಿತು. ಈ ಭೂಮಿಯ ಜನವು ತಮಗೆ ಸಮವಾಗಿರುವವರಿಗೆ ಕ್ಷೇಮವನ್ನು ಮಾಡುವುದು. ೨೧. ಬೆರಳು ಹಿಮದಿಂದ ಸೇಡುಗಟ್ಟಿ ಮುದುಡಿಕೊಂಡಿರಲು ವಿರಹಿಗಳ ಮನಸ್ಸಿನಲ್ಲಿರುವ ವಿರಹಾಗ್ನಿಯಲ್ಲಿ ಮನ್ಮಥನು ಕೈಯೊಡ್ಡಿ ಕಾಸಿಕೊಂಡು, ಬಿಲ್ಲನ್ನು ಜೇವೊಡೆದು, ನೀಲೋತ್ಪಲವೆಂಬ ಬಾಣದಿಂದ

ವ॥ ಆ ಕಾಲದೊಳ್

ಮ॥ಸ್ರ॥ ನಡುಕಂ ಕೈಮಿಾಱೆ ದಂತಚ್ಛದವೊಡೆದುಹುಹುಧ್ವಾನಮುಂ ಪೊಣ್ಮೆ ಮೆಯ್ಯೊ
ಳ್ಪಿಡದೆತ್ತಂ ತೋಱೆ ರೋಮೋದ್ಗಮಮುಮರ್ದಿರೆ ಸೀತ್ಕಾರಮಂಗ್ಯೆವೆರಲ್ಕಾ
ಲ್ಕಡಿವೆತ್ತಂ ತಾಗೆ ತಳ್ತೈಕಿಲ ಭರದ ಪಡಲ್ವಟ್ಟು ಗೇಣಾಗಿ ಪಾಂಥ
ರ್ತೊಡೆ ತೋಳ್ಗಳ್ಗೂಡೆ ಜಾನುಪ್ರಹಿತಶಿರರದೇನಿರ್ದರೋ ಶೀತಭೀತರ್ ೨೨

ವ॥ ಮತ್ತಮವರೊಳೊರ್ವ ಮುಗ್ಧಾಧ್ವಗಂ

ಸ್ವಾಗತ॥ ಗೇರಪಣ್ಣನಿದು ಕೆಂಡಮೆನುತ್ತಂ
ಸಾರಿ ಮೇಲೆ ತೃಣಮಿಟ್ಟದನೂದಲ್
ಸೇರಿ ಬಾಯ ಪೊಗೆ ತಳ್ತಿರೆ ಕಂಡಾ
ದಾರಿಗಂ ಮುದದಿನೂದುತಮಿರ್ದಂ ೨೩

ಕಂ॥ ಚಳಿಗಾಱದೆ ಪೇರಾಲದ
ಕೆಳಗಿರ್ಪನಿತಱೊಳೆ ಚಪಲಕಪಿ ನಿಡುಗೋಡಂ
ಸೆಳೆದಲುಗೆ ಸೂಸುವೆಲೆವನಿ
ಗಳಿನೊರ್ವಂ ನೆನೆದು ನಡುಗಿ ಸಿಡಿಮಿಡಿಗೊಂಡಂ ೨೪

ಹೊಡೆಯುತ್ತಿದ್ದನು. ವ|| ಆ ಕಾಲದಲ್ಲಿ ೨೨. ಶೀತದಿಂದ ಭಯಗೊಂಡ ದಾರಿ ಹೋಕರು ಚಳಿಯಿಂದ ನಡುಗುವಿಕೆಯು ಮಿತಿಮಿಾರಿರಲು, ತುಟಿಗಳು ಬಿರಿತು, ಹುಹು ಅನ್ನುವ ಧ್ವನಿಯು ಹೊರಹೊಮ್ಮುತ್ತಿತ್ತು. ದೇಹದೊಳಗೆ ಎಲ್ಲೆಲ್ಲೂ ಕೂದಲುಗಳು ಎದ್ದುನಿಂತು, ಸೀತ್ಕಾರ ಶಬ್ದವು ಅಧಿಕಗೊಂಡಿತ್ತು. ಅಂಗೈಬೆರಳುಗಳು ಮರಗಟ್ಟಿ ದಂತಾಗಿರಲು, ಚಳಿಯ ಭರದಿಂದ ಮುದುಡಿಕೊಂಡು ಗೇಣುದ್ದವಾಗಿ ತೊಡೆ ತೋಳು ಗಳನ್ನು ಕೂಡಿಸಿಕೊಂಡು, ಮೊಳಕಾಲ ಸಂದಿಯಲ್ಲಿ ತಲೆಯಿಟ್ಟು ಅವರು ಅದೇನು ಇದ್ದರೋ. ವ|| ಮತ್ತು ಅವರಲ್ಲಿ ಒಬ್ಬ ಮುಗ್ಧನಾದ ದಾರಿಹೋಕನು, ೨೩. (ನೆಲದ ಮೇಲೆ ಬಿದ್ದ) ಗೇರುಹಣ್ಣನ್ನು ಕೆಂಡವೆಂದು ತಿಳಿದು ಹತ್ತಿರ ಹೋಗಿ, (ಅದರಮೇಲೆ) ಹುಲ್ಲನಿಟ್ಟು ಊದಲು ಬಾಯಿಯಿಂದ ಹೊರಡುವ ಹೊಗೆ ತುಂಬಿ ಕೊಳ್ಳಲು ಸಂತೋಷಗೊಂಡವನಾಗಿ ಆ ದಾರಿಗನು ಊದುತ್ತಲೇ ಇದ್ದನು. ೨೪. ಚಳಿ ಯನ್ನು ತಡೆಯಲಾರದೆ ಒಬ್ಬ ದಾರಿಹೋಕನು ದೊಡ್ಡದಾದ ಆಲದಮರದ ಕೆಳಗೆ ಇರುವಷ್ಟರಲ್ಲಿ, ಮೇಲಿದ್ದ ಚಪಲ ಕಪಿಯೊಂದು ಸೆಳೆಗೊಂಬೊಂದನ್ನು ಎಳೆದು ಅಲುಗಾಡಿಸು ತ್ತಿರಲಾಗಿ, ಉದುರುತ್ತಿದ್ದ ಎಲೆಯ ಮೇಲಿನ ನೀರಿನಿಂದ ತೊಯ್ದು ನಡುಗುತ್ತಾ ಸಂಕಟ

ಇಡಿದಿಂಧನದೊಳೆ ಫಣಿವೊಳ
ಗಡಂಗೆ ಮಣಿಗಂಡು ಕೆಂಡವೆಂದೊರ್ವಂ ಕೈ
ದುಡುಕೆ ಮೊಱೆದೇಳೆ ಭಯದಿಂ
ಕಡುಚಳಿಯಿಂದೊರ್ವ ಸೆಡೆದು ನಡುಗುತ್ತಿರ್ದಂ ೨೫

ಹಾದಿಯೊಳೂದಿದನೊರ್ವಂ
ಬೂದಿ ಕರಂ ಪಾಱೆ ಕೆಂಡಮಂ ಕಂಡವಿದೆಂ
ದಾದರಿಸಿ ಕುಕ್ಕಿ ಕೊಕ್ಕಿಂ
ಮೇದುದದಂ ಕಾಗೆ ಮಾಗಿಯೇನತಿಶಯಮೋ ೨೬

ಪುಲ್ಲಿಕ್ಕಿಪೋಗೆ ಪಥಿಕ
ರ್ಮೆಲ್ಲನೆ ಸುಡಲಾಱದಗ್ನಿ ಹಿಮಸಮಯ ಮಹೀ
ವಲ್ಲಭನತ್ರಾಣನಗಿದೇಂ
ಪುಲ್ಲಂ ಕರ್ಚಿದುದೊ ಪೇಳೆನಲ್ ತಳ್ತೆಸೆಗುಂ ೨೭

ಗಱಿಗೆದಱಿ ಬಿದಿರ್ದು ಕೊಕ್ಕಿಂ
ದಱಿದಱಿದೆಳೆವಿಸಿಲನೆಳಸಿ ಸೇಡುಂಗೊಂಡೇಂ
ತುಱುಗಿರ್ದುವೊ ತುದಿಗೋಡೊ
ಳ್ಮಱಿ ಬೆಱೆತಿರೆ ನೋಡಿ ಬಾಡುತಂ ವಿಹಗಂಗಳ್ ೨೮

ಗೊಳ್ಳುತ್ತಿದ್ದನು. ೨೫. ಗುಂಪಾಗಿ ಬಿದ್ದಿದ್ದ ಸೌದೆಯ ಅಡಿಯಲ್ಲಿ ಹಾವೊಂದು ಅಡಗಿ ಇತ್ತು. (ಅದರ ಹೆಡೆಯ) ರತ್ನವನ್ನು ಒಬ್ಬನು ಕಂಡು ಕೆಂಡವೆಂದು ಭಾವಿಸಿ ಕೈಯಿಟ್ಟನು. ಅದು ಬುಸುಗುಡುತ್ತ ಮೇಲಕ್ಕೇಳಲು ಭಯದಿಂದಲೂ, ಹೆಚ್ಚಾದ ಚಳಿಯಿಂದಲೂ ಸೆಡೆದು ನಡುಗುತ್ತ ಇದ್ದನು. ೨೬. ದಾರಿಹೋಕನೊಬ್ಬನು ಕೆಂಡದ ಮೇಲಿನ ಬೂದಿಯನ್ನು ಊದಿದನು. ಆ ಬೂದಿಯೆಲ್ಲ ಹಾರಿಹೋಯಿತು. ಆ ಕೆಂಡವನ್ನು ಒಂದು ಕಾಗೆಯು ಮಾಂಸವೆಂದು ಭಾವಿಸಿ ಆದರಗೊಂಡು ತನ್ನ ಚಂಚುವಿನಿಂದ ಕುಕ್ಕಿ ಕುಕ್ಕಿ ಅದನ್ನು ತಿಂದಿತು. ಮಾಗಿಯು ಅದೇನು ಅತಿಶಯವಾದದ್ದೋ ! (ಕೆಂಡವನ್ನು ಅದು ಕುಕ್ಕಿ ತಿಂದು ನುಂಗಿದರೂ ಕೆಂಡದಿಂದ ಚಂಚು ಸುಡಲಾರದಷ್ಟು ಚಳಿ ಪ್ರಖರವಾಗಿತ್ತೆಂದು ಭಾವ) ೨೭. ಬೆಂಕಿಯ ಮೇಲೆ ಪಥಿಕರು ಹುಲ್ಲನ್ನು ಹಾಕಿ ಹೋಗಲು ಅಗ್ನಿಯು ಅದನ್ನು ಸುಡಲಾರದೆ ಹಿಮಗಾಲವೆಂಬ ಮಹಾರಾಜನ ಭಯದಿಂದ ಹುಲ್ಲನ್ನು ಕಚ್ಚಿಕೊಂಡಿರುವುದೋ ಹೇಳು ಎನ್ನುವ ಹಾಗೆ ಹುಲ್ಲಿನಿಂದ ಕೂಡಿದ ಅಗ್ನಿಯು ಶೋಭಿಸುತ್ತಿತ್ತು. ೨೮. ಮರಗಳ ತುದಿಯ ಮೇಲೆ ಹಕ್ಕಿಗಳು ನೆರೆದು ಗರಿಗೆದರಿ, ಕೊಕ್ಕುಗಳಿಂದ ಕುಕ್ಕಿಕೊಳ್ಳುತ್ತ ಎಳೆಬಿಸಿಲಿಗಾಗಿ ಕಾಯುತ್ತ ಕುಳಿತಿದ್ದವು. (ಚಳಿ ಹೋಗದ ಕಾರಣ) ಮತ್ತೆ ಮುದುಡಿಕೊಂಡು ತಮ್ಮ ಮರಿಗಳನ್ನು ನೋಡುತ್ತ ಬಾಡುತ್ತ ಇದ್ದವು. (ರಂ)

ಸ್ರ॥ ಏಳುತ್ತಂ ಮೆಲ್ಲನಲ್ಲಿಂ ಮಱಿಯುಮರ್ದಿರೆ ಕಿಳ್ಪೊಟ್ಟೆಯೊಳ್ ಸುರ್ಕುವೆತ್ತಾ
ಬಾಳಂ ಮೇಣ್ಬಳ್ಕೆ ನೋಡುತ್ತಸವಸದೆ ಬಿಸಿಲ್ಗೆತ್ತು ಜೀರ್ಣಾಚ್ಛದಂಗಳ್
ಮೇಳಂಗೊಂಡೊಪ್ಪೆ ಶಾಖಾಗ್ರದೊಳಡರ್ದಲುಗಲ್ಸೂಸೆ ಮೇಲ್ಪೈಕಿಲೆತ್ತಂ
ನಾಳೀಜಂಘಂ ಕರಂ ಪಲ್ದೆಱೆದು ನಡುಗಿ ಪಱಿಂದು ಪುರ್ಬಿಕ್ಕಿತಾಗಳ್ ೨೯

ಕಂ॥ ಮೂಡಣೆಲರೂದೆ ಜವದಿಂ
ದೋಡುಗುಮಿಾ ಹಿಮಸುಧಾಬ್ಧಿಯಗ್ರದೊಳೆನಿಪೊಂ
ದಾಡಂಬರಮಂ ಜನದೊಳ್
ಮಾಡಿ ಕರಂ ತರಣಿ ತಳರ್ದುದಂಬರತಳದೊಳ್ ೩೦

ಉರಿಗಣ್ಣಿಂದುರಿದಂಗಜ
ನುರುಳ್ದಿರ್ಪಂ ಯುವತಿ ಸರಸಹೃದಯಪಯೋಜಾ
ಕರದೊಳಗಲ್ಲದೊಡವರುರು
ತರ ಕುಚದೊಳ್ಬಿಸುಪು ಪೊಣ್ಮುಗುಮೆ ಪೊಗೆವುಸುರೊಳ್ ೩೧

ಮ॥ ಪುಳಕಂ ಕಾಯದೊಳುಣ್ಮೆ ಕಂಪನಮದುಂ ಕೈಗಣ್ಮೆ ದಂತಚ್ಛದ
ಸ್ಖಳಿತಂ ಚೀತ್ಕೃತಿ ಪೊಣ್ಮೆ ಬಂದು ನೆಱೆ ನಿಂದಾತ್ಮೇಶನಂ ಕಾಣುತ
ನ್ನಳ ಸಂಗಕ್ಕೊಳಗಾಗಿ ಬಂದನೆನುತುಂ ಕಾಯ್ಪೇಱೆ ತೋಳ್ವಾಸದಿಂ
ದೆಳೆದಾ ಕೋಮಳೆಯೊರ್ವಳೆತ್ತಿಬಿಗಿದಳ್ ಶೀತಾತುರಂ ಪೋಪಿನಂ ೩೨

೨೯. ಹೆಣ್ಣುಕೋತಿಯೊಂದು ಹೊಟ್ಟೆಯ ಕೆಳಗೆ ತನ್ನ ಮರಿಯನ್ನು ಅವಚಿಕೊಂಡಿರಲು ಚಳಿಯಿಂದ ಸುಕ್ಕುಗಟ್ಟಿ ಹೋಗಿತ್ತು. ಆ ಮರಿಯೂ ಚಳಿಯಿಂದ ಬಳ್ಕಿ ಹೋಗಿರುವುದನ್ನು ಕಂಡು ಸಂಕಟಗೊಂಡಿತು. ಅಲ್ಲಿಂದ ಎದ್ದು ಬಿಸಿಲನ್ನು ಕಾಸಿಕೊಳ್ಳಲು ಬಯಸಿ ಮೇಲಕ್ಕೇರಿತು. ಅಲ್ಲಿ ಒತ್ತುಗೊಂಡಿದ್ದ ಹಣ್ಣೆಲೆಗಳನ್ನು ಬಿಸಿಲೆಂದು ಭಾವಿಸಿತು. ಮೇಲೇರುವಾಗ ರೆಂಬೆ ಕಂಪಿಸಿ ಹಿಮವು ಎಲ್ಲ ಕಡೆಯಿಂದಲೂ ಮೈಮೇಲೆ ಬೀಳಲಾಗಿ ಹಲ್ಲನ್ನು ತೋರೆದು, ಹೆದರಿ, ಹರ್ರೆನ್ನುತ್ತ ಹುಬ್ಬುಗಂಟಿಕ್ಕಿತು. ೩೦. ಮೂಡಗಾಳಿಯು ಬೀಸಲಾಗಿ, ವೇಗವಾಗಿ ಹಿಮಸಮುದ್ರದ ಅಗ್ರಭಾಗದಲ್ಲಿ ಆಡಂಬರಗೊಂಡು ಹಡಗೊಂದು ಹೋಗುತ್ತಿದೆಯೋ ಎಂಬ ಕಲ್ಪನೆಯನ್ನು ಜನರಲ್ಲಿ ಉಂಟುಮಾಡುತ್ತ, ಆಕಾಶವನ್ನು ಹಿಂದೆ ಹಾಕುತ್ತ ಸೂರ್ಯನು ಹೋಗುತ್ತಿದ್ದನು. (ಇಲ್ಲಿ ತರಣಿ ಎಂಬ ಶಬ್ದವನ್ನು ಸೂರ್ಯ ಮತ್ತು ಹಡಗುಗಳ ಪರವಾಗಿಯೂ ಮಾಡಬೇಕು). ೩೧. ಶಿವನ ಉರಿಗಣ್ಣಿನಿಂದ ಉರಿದ ಮನ್ಮಥನು ಸ್ತ್ರೀಯರುಗಳ ಶೃಂಗಾರದಿಂದ ಕೂಡಿರುವ ಹೃದಯವೆಂಬ ಕಮಲಸರೋವರದಲ್ಲಿ ಹೋಗಿ ಬಿದ್ದಿದ್ದಾನೆ. ಹಾಗಾಗದಿದ್ದರೆ, ಅವರ ಶ್ರೇಷ್ಠ ಕುಚಗಳಲ್ಲಿ ಬಿಸುಪೂ ಬಾಯಿಂದ ಹೊಗೆಯೂ ಹೊರಹೊರಡುತ್ತಿತ್ತೇ. ೩೨. ಚಳಿಯ ಕಾರಣದಿಂದ ಒಬ್ಬನ ದೇಹದಲ್ಲಿ ರೋಮಾಂಚನವಾಗಿತ್ತು. ಅತಿಶಯವಾದ ನಡುಗುವಿಕೆಯು ತಲೆದೋರಿತ್ತು. ತುಟಿಗಳಿಂದ (ಚಳಿಯ ಪರಿಣಾಮವಾಗಿ) ಚೀತ್ಕಾರವು ಬರುತ್ತಿತ್ತು. (ಈ ರೀತಿ ಆತನು) ಬಂದು ತನ್ನ ಸತಿಯ ಎದುರಿಗೆ ನಿಂತನು. ಹೀಗೆ

ಕಂ॥ ವಿಚಕಿಲಗಂಧಿಯರ ಲಸ
ತ್ಕುಚಕುಲಗಿರಿದುರ್ಗದಲ್ಲಿ ನೆಲಸಿ ತದಂಗ
ಪ್ರಚುರಘುಸೃಣಾಂಗರಾಗಕ
ವಚವಾಂತರನ್ನೆಕಿಲರಸನೇಗೈದಪನೋ ೩೩

ಮ॥ ಗಿರಿಸಾನುಪ್ರಸರಚ್ಛುರೋತ್ಕರ ತರಂಗಾಕೀರ್ಣವಾರ್ಬಿಂದು ಬಂ
ಧುರಮುಕ್ತಾಫಲಮಾಲಿಕಾಸಿತರುತ್ಪ್ರಾಲೇಯಶುಭ್ರಾಂಬರಾ
ವರಣರ್ಶ್ವೇತವಿಭೂತಿಚಂದನ ವಿಲಿಪ್ತಾಂಗರ್ಶಿವೈಕ್ಯರ್ಮುನೀ
ಶ್ವರರಿರ್ದರ್ಪರವುಕ್ತಿಕಾಂತೆಯೊಲಿಸಲ್ಪಾಳ್ದಂತೆ ನೈಪಥ್ಯಮಂ ೩೪

ಹಿಮವಚ್ಛೈಲತರಂಗಿಣೀತಟಪಟುಪ್ರಾಲೇಯವಾರ್ಬಿಂದು ಸಂ
ಕ್ರಮಿತೋದ್ಯತ್ಪುಳಿನಸ್ಥಳಂಗಳೊಳೆ ನಿಂದಾನಂದದಿಂದೊಂದೆ ಸಂ
ದು ಮನೋವೃತ್ತಿ ಮಹೇಶ್ವರಾಂಘ್ರಿಯೊಳೆ ರೋಮಾಂಚಂಗಳುಂ ಕಂಪಮುಂ
ಬೆಮರುಂ ತಳ್ತಿರೆ ಶೈವಯೋಗಿವರರಿರ್ದರ್ ವೀತಶೀತಾತುರರ್ ೩೫

ವ॥ ಇಂತತಿಶಯಪ್ರಭಾವವಿಭವಂಬಡೆದೇಳ್ತಂದ ಹೇಮಂತಸಮಯದಲ್ಲಿ

ನಿಂತ ತನ್ನ ಗಂಡನನ್ನು ಕಾಣುತ್ತ, ಈತನು ಅನ್ಯಸ್ತ್ರೀಸಂಗಮಾಡಿ ಬಂದಿರುವನೆಂದು ತಿಳಿದು ಕೋಪಗೊಂಡು, ತನ್ನ ತೋಳುಗಳೆಂಬ ಹಗ್ಗಗಳಿಂದಲೇ ಎಳೆದು ಬಿಗಿದಳೋ ಎಂಬಂತೆ ಚಳಿಯ ಆತುರದಿಂದ ಗಂಡನನ್ನು ಅಪ್ಪಿಕೊಂಡಳು. ೩೩. ಮಲ್ಲಿಗೆಹೂ ಗಳಂತೆ ಸುಗಂಧವನ್ನು ಬೀರುವ ಸ್ತ್ರೀಯರ ಪ್ರಕಾಶಿಸುವ ಮೊಲೆಗಳೆಂಬ ಕುಲಾಚಲ ಪರ್ವತಗಳ ಕೋಟೆಯಲ್ಲಿ ನೆಲಸಿ, ಆ ಸ್ತ್ರೀಯರ ಅವಯವಗಳಲ್ಲಿ ತುಂಬಿರುವ ಕುಂಕುಮಕೇಸರಿಯೆಂಬ ಕವಚವನ್ನು ತೊಟ್ಟುಕೊಂಡಿರುವವರಿಗೆ ಈ ಹಿಮರಾಜನು (ಚಳಿರಾಜನು) ಏನುಮಾಡಿಯಾನು! ೩೪. ಬೆಟ್ಟದ ತಪ್ಪಲುಪ್ರದೇಶದಲ್ಲಿ ಹರಿಯು ತ್ತಿರುವ ಶ್ರೇಷ್ಠಪ್ರವಾಹದ ತರಂಗಗಳಿಂದ ಸಿಡಿದು ಹಾರಿದ ನೀರಿನ ಕಣಗಳೆಂಬ ಮುತ್ತಿನ ಸರಗಳ ಕಾಂತಿಯಿಂದ ಕೂಡಿದವರಾಗಿಯೂ, ಶುಭ್ರವಾದ ವಸ್ತ್ರಗಳನ್ನು ಹೊದ್ದವ ರಾಗಿಯೂ, ಭಸ್ಮ ಮತ್ತು ಚಂದನಗಳನ್ನು ಮೈಗೆ ಧರಿಸಿದವರಾಗಿಯೂ, ಶಿವೈಕ್ಯಾನು ಸಂಧಾನಶೀಲರಾಗಿಯೂ ಇರುವಂಥ ಮುನಿಶ್ರೇಷ್ಠರುಗಳು ಮುಕ್ತಿಕಾಂತೆಯನ್ನು ಒಲಿಸುವುದಕ್ಕೋಸುಗ ಸುಂದರವೇಷವನ್ನು ಧರಿಸಿರುವರೋ ಎಂಬಂತೆ ಇದ್ದರು. ೩೫. ಹಿಮದಿಂದ ಕೂಡಿರುವ ಬೆಟ್ಟಗಳಲ್ಲಿ ಹರಿಯುವ ನದಿಗಳ ತೀರಪ್ರದೇಶದಲ್ಲಿ (ಚಳಿ ಯಿಂದ) ಬಹುಪಟುವಾದ ಹಿಮಕಣಗಳಿಂದ ಕೂಡಿರುವ ಶ್ರೇಷ್ಠವಾದ ಮಳಲಿನ ಸ್ಥಳ ಗಳಲ್ಲಿ ನಿಂತು, ಆನಂದದಿಂದ ಕೂಡಿದ ಮನಸ್ಸಿನಿಂದ ಏಕಾಗ್ರಚಿತ್ತರಾಗಿ ಶಿವಯೋಗಿಗಳು ಪರಮೇಶ್ವರಪಾದಗಳಲ್ಲಿ ಮನಸ್ಸನ್ನು ನಿಲ್ಲಿಸಿದ್ದರು. (ಆದ್ದರಿಂದ ಅವರಿಗೆ) ರೋಮಾಂ ಚನವೂ, ನಡುಕವೂ, ಬೆವರೂ (ಸಾತ್ವಿಕ ಭಕ್ತಿಭಾವದ ಫಲವಾಗಿ) ಉಂಟಾಗಿದ್ದವು. (ಹೀಗೆ ನಿಂತು) ಶೀತಬಾಧೆಯನ್ನು ಕಳೆಯುತ್ತಿದ್ದರು. ವ॥ ಹೀಗೆ ಅತಿಶಯ ಪ್ರಭಾವ

ಚಂ॥ ರಮಣಿಯ ಕುಂಕುಮಾಂಕಿತತನುಪ್ರಭೆ ಚೆಂಬಿಸಿಲಾಗಿ ತದ್ರತ
ಶ್ರಮಜನಿತೋಷ್ಣ ತುಂಗಕುಚಯುಗ್ಮಮೆ ವಕ್ಷದೊಳೊಪ್ಪೆ ತಳ್ತು ತ
ದ್ವಿಮಳಿನ ದೋರ್ಲತಾಕನಕಚಂಪಕದಾಮಮೆ ಕಂತದೇಶದೊಳ್
ಸಮನಿಸೆ ನೂಂಕಿದಂ ಹಿಮದಕಾಲಮನಾ ನರನಾಥಚಂದ್ರಮಂ ೩೭

ವ॥ ಇಂತು ಸಂತಸಂ ಮಿಗೆ ಶರಣಜನವನವಸಂತಂ ಕಾಂತೆಯೊಡನುಮಾಕಾಂತನಡಿದಾವರೆಯಂ ಭಕ್ತಿಯಿಂ ಭಜಿಸುತ್ತಮಿರ್ದು ನಿಜದೇಶಕ್ಕೆ ಪೋಗಲೆಳಸಿ ಲಲನೆಗಱುಪಿ ಘಳಿಲನೆ ಸಿಂಹಳೇಂದ್ರಂಗೆ ಸಚಿವೇಂದ್ರನಿಂ ಪೇಳಿಸಲೊಡನವಂ ಕೇಳ್ದು ನಿಜರಮಣಿಗಿಂತೆಂದಂ

ಕಂ॥ ಇನ್ನೆವರಮೆಮ್ಮ ಮಾತಂ
ಮನ್ನಿಸಿ ಜಾಮಾತೃವಿರ್ದನಿದೆ ಸಾಲ್ಗುಮವಂ
ಗಿನ್ನಿರವೇಳ್ವುದು ಕಜ್ಜದ
ಬಿನ್ನಣಮಲ್ತಬಳೆ ಕಳುಪುವುದು ನಿಜಸುತೆಯಂ ೩೭

ವ॥ ಎಂದು ಕಾಂತೆಯನೆಂತಕ್ಕೆ(?) ತಿಳುಪುತ್ತಿರ್ವರೇಕಚಿತ್ತರಾಗಿ ನಿಜಕುಮಾರಿಯನೊಡವೋಪಂತು ಮಾಡಿ ಶುಭಮುಹೂರ್ತದೊಳ್ಮಗಳುಮನಳಿಯನುಮಂ ಬರಿಸಿ ಪಟ್ಟವಣೆಯೊಳ್ಕುಳ್ಳಿ

ಯುತವಾದ ಐಸಿರಿಯನ್ನು ಪಡೆದು ಬಂದಿರುವ ಹಿಮುಸಮಯದಲ್ಲಿ ೩೬. ಆ ನರನಾಥ ಚಂದ್ರಮನಾದ ರಾಜಶೇಖರನು ಪ್ರಿಯೆಯಾದ ಸರ್ವಮಂಗಳೆಯ ಕುಂಕುಮ ಕೇಸರಿಯಿಂದ ಲೇಪಿಸಲ್ಪಟ್ಟ ದೇಹಪ್ರಭೆಯೇ ಎಳೆ ಬಿಸಿಲಾಗಿ, ಅವಳಲ್ಲಿ ಅನುರಾಗಗೊಂಡು ಕ್ರೀಡಾಸಕ್ತನಾದುದರ ಫಲವಾಗಿ ಉಂಟಾದ ಶ್ರಮದಿಂದ ಕಾವುಗೊಂಡ ಅವಳ ದಪ್ಪನೆಯ ಮೊಲೆಗಳೆರಡನ್ನು ಒಪ್ಪವಾಗಿ ಎದೆಯಲ್ಲಿ ಧರಿಸಿದವನಾಗಿ, ಅವಳ ನಿರ್ಮಲವಾದ ಬಾಹುಲತೆಗಳೆಂಬ ಕೆಂಡಸಂಪಗೆಯ ಮಾಲೆಯು ಕುತ್ತಿಗೆಯಲ್ಲಿ ಕೂಡಿಕೊಂಡಿರಲು ಹಿಮಗಾಲವನ್ನು ಆ ನರೇಶ್ವರನು ಕಳೆದನು. ವ॥ ಹೀಗೆ ಮಿಗಿಲಾದ ಸಂತೋಷದಿಂದ ಶರಣರುಗಳೆಂಬ ವನಕ್ಕೆ ವಸಂತಪ್ರಾಯನಾದ ರಾಜಶೇಖರನು ಹೆಂಡತಿಯಾದ ಸರ್ವಮಂಗಳೆಯೊಡನೆ ಪರಮೇಶ್ವರನ ಪಾದಕಮಲಗಳನ್ನು ಭಕ್ತಿಯಿಂದ ಭಜಿಸುತ್ತಿದ್ದು, ತನ್ನ ದೇಶಕ್ಕೆ ಹೋಗಲಪೇಕ್ಷಿಸಿ, ಹೆಂಡತಿಗೆ ತಿಳಿಸಿ ಕೂಡಲೇ ಸಿಂಹಳರಾಜನಿಗೆ ಸಚಿವನ ಮೂಲಕ ಈ ಅಭಿಪ್ರಾಯವನ್ನು ಹೇಳಿಸಲಾಗಿ, ಅವನು ಕೇಳಿ ತನ್ನ ಹೆಂಡತಿಯೊಡನೆ ಹೀಗೆಂದನು: ೩೭. "ಇಂದಿನವರೆಗೆ ನಮ್ಮ ಮಾತಿಗೆ ಮನ್ನಣೆಯಿತ್ತು. ನಮ್ಮ ಅಳಿಯನಾದ ರಾಜಶೇಖರನು ನಮ್ಮ ಮನೆಯಲ್ಲಿ ಇದ್ದನು. ಇದೇ ಸಾಕು. ಇನ್ನೂ ಇರಬೇಕೆಂದು ಹೇಳುವುದು ಸೊಗಸಾದ ಮಾತಾಗದು. ಮಡದಿ, ಮಗಳನ್ನು ಇನ್ನು ಕಳಿಸುವುದು." ವ॥ ಹೀಗೆಂದು ಕಾಂತೆಗೆ (ಮಗಳ ಕಳುಹುವಿಕೆಯ ವಿಷಯವಾಗಿ) ತಿಳಿಸುತ್ತ ಇಬ್ಬರೂ ಏಕಚಿತ್ತರಾಗಿ, ತಮ್ಮ ಕುಮಾರಿಯನ್ನು ಪತಿಯೊಡನೆ ಹೋಗುವಂತೆ ಮಾಡಿ ಶುಭ

ರಿಸಿ ಮಂಗಳಾಳಂಕಾರಂಗಳಿನಲಂಕರಿಸಿ ತಣಿವಿಲ್ಲದೆ ಮಗುಳ್ದು ಮಗುಳ್ದು ನೋಡಿ ಪಲವರಕೆಯಂ ಪಲವುಸೂಳ್ ಪರಸಿ ಕಳುಪುವಾಗಳಾ ಕಳಾಧರೆ ನಿಜತನೂಜೆಯ ಮೊಗದಾವರೆಯನಮಂದ ಸ್ನೇಹರಸ ತರಂಗಿತ ಕಟಾಕ್ಷದಿನಭೀಕ್ಷಿಸಿ

ಉ॥ ತಂಗಿ ನಿಜೇಶ್ವರಂಗೆ ಬಗೆದಂತಿರೆ ನೀಂ ಬೆಸಕೈವುದತ್ತೆಮಾ
ವಂಗಳ ಮಾತುಮಂ ಮಱಿದು ವಿಾಱದಿರಾರ್ಯಹಿತೋಕ್ತಿಗಳ್ಗೆ ಚಿ
ತ್ತಂಗುಡು ಬಂಧುವರ್ಗದುಪಚಾರಮನಾಂತಿರುಮೇಶಭಕ್ತಿಯಂ
ಪಿಂಗದಿರೊಳ್ಪಸಂಬಡೆದು ಬಾಳ್ದಿಮಗೀವುದತಿಪ್ರಮೋದಮಂ ೩೮

ವ॥ ಎಂದು ಬುದ್ಧಿವೇಳ್ದು ಶೇಷಾಕ್ಷತೆಯನಿಕ್ಕಿ ಪರಸಿ

ಚಂ॥ ಚವರದ ಕುಂಚದಾರತಿಯ ಸೆಜ್ಜೆಯ ಮಜ್ಜನದಂಗರಾಗದು
ತ್ಸವದ ಸುಗಂಧವೀಟಿಕೆಯ ಸಿಂಗರದೊಳ್ ನಿಜಿಗೈವ ಮಾಲೆಗ
ಟ್ಟುವ ತೊಡೆದಟ್ಟುವಿಂಚರದೆ ಪಾಡುವ ಕನ್ನಡಿದೋರ್ಪ ಬೋನಮಂ
ಸವಿವಡಿಯೂಡುವಾಳಿಯರುಮಂ ಪದೆದಿತ್ತಳವಳ್ ವಿಳಾಸದಿಂ ೩೯

ಮುಹೂರ್ತದಲ್ಲಿ ಮಗಳನ್ನೂ ಅಳಿಯನನ್ನೂ ಬರಮಾಡಿಕೊಂಡು, ಭದ್ರಪೀಠದಲ್ಲಿ ಕುಳ್ಳಿರಿಸಿ, ಮಂಗಳಕರವಾದ ಅಲಂಕಾರಗಳಿಂದ ಅಲಂಕಾರಗೊಳಿಸಿ, ತೃಪ್ತಿಯಿಲ್ಲದೆ ಪುನಃ ಪುನಃ ನೋಡಿ ನೋಡಿ, ಹಲವಾರು ಹರಕೆಗಳನ್ನು ಹಲವು ಸಲ ಮಾಡಿ ಕಳುಹಿಸುವಾಗ ಕಳಾಧರೆಯೆಂಬ ಸಿಂಹಳೇಂದ್ರನ ಪತ್ನಿಯು ತನ್ನ ಮಗಳ ಮುಖವೆಂಬ ಕಮಲವನ್ನು ಅತ್ಯಧಿಕವಾದ ಸ್ನೇಹವೆಂಬ ತರಂಗಗಳುಳ್ಳ ದೃಷ್ಟಿಯಿಂದ ನೋಡಿ ೩೮. "ತಂಗೀ, ನಿನ್ನ ಪ್ರಾಣನಾಥನು ಅಪೇಕ್ಷೆಪಟ್ಟ ರೀತಿಯಲ್ಲಿ ಇದ್ದು, ಅವನ ಆಜ್ಞೆಯನ್ನು ಪಾಲಿಸು. ಅತ್ತೆ ಮಾವಂದಿರುಗಳ ಮಾತನ್ನು ಮರೆತೂ ಕೂಡ ಮಿಾರಬೇಡ. ಹಿರಿಯರ ಹಿತನುಡಿಗಳಿಗೆ ಚಿತ್ತಗೊಡು. ಬಂಧುಬಳಗದವರ ಉಪಚಾರವನ್ನು ಮಾಡಿಕೊಂಡು ಇರು. ಪರಮೇಶ್ವರನಲ್ಲಿ ಭಕ್ತಿಯನ್ನಿಟ್ಟು ತಪ್ಪದೆ ನಡೆ. ಹೀಗೆ ಒಳ್ಳೆಯ ಯಶಸ್ಸಿನಿಂದ ಬಾಳಿ (ಹೆತ್ತವರಾದ) ನಮಗೆ ವಿಶೇಷ ಸಂತೋಷವನ್ನುಂಟು ಮಾಡು". ವ॥ ಎಂದು ಬುದ್ಧಿಯನ್ನು ಹೇಳಿ ಮಂಗಲಾಕ್ಷತೆಗಳನ್ನು ಮೈಮೇಲೆ ಚೆಲ್ಲಿ ಹರಸಿದಳು. ೩೯. ತಾಯಿಯು ಸರ್ವಮಂಗಳೆಗೆ ಚಾಮರವನ್ನು ಬೀಸುವ, ಆಭರಣಗಳನ್ನು ಸ್ವಚ್ಛಪಡಿಸುವ, ಆರತಿಯನ್ನು ಸಜ್ಜುಗೊಳಿಸುವ, ಹಾಸಿಗೆಯನ್ನು ಸಿದ್ಧಗೊಳಿಸುವ, ಸ್ನಾನ ಮಾಡಿಸುವ, ಮಂಗಳ ದ್ರವ್ಯಗಳನ್ನು ಹಚ್ಚುವ, ಉತ್ಸವಗಳನ್ನುಂಟುಮಾಡುವ, ಸುಗಂಧ ತಾಂಬೂಲವನ್ನು ಸಿದ್ಧಪಡಿಸುವ, ಶೃಂಗಾರಸಮಯದಲ್ಲಿ ಬಟ್ಟೆಗಳನ್ನು ನಿರಿಗೆಗೊಳಿಸಿ ಅಲಂಕರಿಸುವ, ಹೂಮಾಲೆಗಳನ್ನು ಕಟ್ಟುವ, ತೊಡೆಗಳನ್ನು ಹಿಸುಕುವ, ಮಧುರಸ್ವರದಿಂದ ಹಾಡುವ, ಕನ್ನಡಿಯನ್ನು ಹಿಡಿಯುವ, ಅಡಿಗೆ ಮಾಡುವ, ಅಂಗಾಲುಗಳನ್ನು ತಿಕ್ಕುವ ದಾಸಿಯರನ್ನು

ವ॥ ಮತ್ತಂ

ಮ॥ಸ್ರ॥ ರಸಚಿತ್ರಂ ರತ್ನಭೂಷಾವಳಿ ಮೃದುವಸನಶ್ರೇಣಿ ಮುಕ್ತಾತಪತ್ರ
ಪ್ರಸರಂ ಪೊಂಬಟ್ಟೆ ಬಟ್ಟಲ್ಕನಕಕಳಶಮಾದರ್ಶಮಾಂದೋಳನಂ ದಂ
ತಿಸಮೂಹಂ ವಾಜಿವೃಂದಂ ಮೃಗಮದಘನ ಕಾಶ್ಮೀರ ಪತ್ರಾಳಿ ಕೇಳೀ
ಲಸದುದ್ಯತ್ಕೀರಪಾರಾವತ ಶಿಖಿ ಹರಿಣೀ ಹಂಸಶಾರೀಪ್ರತಾನಂ ೪೦

ಮಣಿಮಂಚಂ ದಿವ್ಯನವ್ಯಾಂಬರ ಮೃದುತರತಲ್ಪಂ ಮೃಗೇಂದ್ರಾಸನಂ ಸ
ದ್ಗುಣಭಾಸ್ವದ್ವೇಣುವೀಣಾನಿಪುಣತರ ವಧೂವೃಂದಮುದ್ಗಾಯಕೀಸ್ತ್ರೀ
ಗಣಮುದ್ಯನ್ನರ್ತಕೀಸಂಚಯಮಖಿಳಕಳಾವಿದ್ವಧೂಟೀಸಮೂಹಂ
ಪ್ರಣಯಪ್ರೌಢಪ್ರಹಾಸ್ಯೋಚಿತಹಿತಮಿತ ಸಲ್ಲಾಪಕಾಂತಾಕದಂಬಂ ೪೧

ವ॥ ಎಂಬಿವೆಲ್ಲಮುಮಂ ಮಗಳ್ಗೆ ಬಳಿವಳಿಗೊಟ್ಟೊಡವೋಪಂತು ನಿಯಾಮಿಸಿ ಸಿಂಹ ಳೇಂದ್ರಂ ಮಂಗಳತೂರ್ಯತ್ರಯರವಂ ವಿಜೃಂಭಿಸೆ ನಿಜಪುರಮಂ ಪೊಱಮಟ್ಟು ಕಿಱಿದಂತರಮಂ ಕಳುಪಿ ಮಗುಳ್ದು ಕಮಲಾವತಿಯುಂ ಪೊಕ್ಕಿರ್ದನಿತ್ತಲ್ ರಾಜಶೇಖರನರೇಂದ್ರಂ ವಿಮಳತರ

ಸಂತೋಷಗೊಂಡು ಸಂಭ್ರಮದಿಂದ ಕೊಟ್ಟಳು. ವ॥ ಮತ್ತು ೪೦. ತೈಲರಸದಿಂದ ಬರೆದ ಚಿತ್ರಗಳು, ರತ್ನಗಳ ಒಡವೆಗಳು, ಮೃದುವಾದ ಬಟ್ಟೆಮುತ್ತಿನ ಕೊಡೆಗಳು, ಬಂಗಾರ ಜರಿಯ ಬಟ್ಟೆಗಳು, ಬಟ್ಟಲುಗಳು, ಬಂಗಾರದ ಕೊಡ, ಕನ್ನಡಿಗಳು, ಪಲ್ಲಕ್ಕಿ, ಆನೆಗಳು, ಕುದುರೆಗಳ ವೃಂದ, ಕಸ್ತೂರಿ, ಪಚ್ಚಕರ್ಪೂರ, ಕುಂಕುಮಕೇಸರಿ, ಮನರಂಜನೆಗಾಗಿ ಒಳ್ಳೆಯ ಗಿಳಿಗಳು, ಪಾರಿವಾಳಗಳು, ನವಿಲು, ಜಿಂಕೆ, ಶಾರಿಕೆಗಳ ಸಮೂಹಗಳನ್ನು (ಮಗಳಿಗೆ ಆ ಕಳಾಧರೆಯು) ಕೊಟ್ಟಳು. ೪೧. ರತ್ನಖಚಿತವಾದ ಮಂಚ, ದಿವ್ಯವಾದ ನೂತನವಸ್ತ್ರ, ಮೃದುವಾದ ಹಾಸಿಗೆ, ಸಿಂಹಪೀಠ, ಒಳ್ಳೆಯ ಗುಣವಂತೆಯರೂ, ಕೊಳಲ ವೀಣೆಗಳ ವಾದನದಲ್ಲಿ ನಿಪುಣೆಯರೂ ಆದ ಸ್ತ್ರೀಯರುಗಳ ಸಮೂಹ, ಉತ್ತಮ ಸಂಗೀತ ನಿಪುಣೆಯರಾದ ಸ್ತ್ರೀಯರ ಸಮೂಹ, ನರ್ತಕಿಯರು, ಸಮಸ್ತ ಕಲಾವಿದೆಯರಾದ ಹೆಂಗಸರು, ವಿಶ್ವಾಸ ಪ್ರೌಢಿಮೆ ಉತ್ತಮ ಹಾಸ್ಯ, ಉಚಿತವೂ ಹಿತಮಿತವೂ ಆದ ಮಾತುಗಳಿಂದ ಕೂಡಿದ ಕಾಂತೆಯರುಗಳ ಸಮೂಹ ವ॥ ಇವೇ ಮೊದಲಾದುವನ್ನು ಮಗಳಿಗೆ ಬಳುವಳಿಯಾಗಿ ಕೊಟ್ಟು, ಒಡಗೊಂಡು ಹೋಗುವ ಹಾಗೆ ಗೊತ್ತುಮಾಡಿ, ಸಿಂಹಳೇಂದ್ರನು, ಮಂಗಳಕರವಾದ ನೃತ್ಯ ಗೀತ ವಾದ್ಯಧ್ವನಿಯು ವಿಜೃಂಭಿಸುತ್ತಿರಲು, ತನ್ನ ಪಟ್ಟಣದಿಂದ ಹೊರ ಹೊರಟು ಸ್ವಲ್ಪ ದೂರ ಕಳುಹಿಸಿ ಹಿಂತಿರುಗಿ ಕಮಳಾವತಿಗೆ ಬಂದನು. ಇತ್ತ ರಾಜಶೇಖರನರೇಂದ್ರನು ಶ್ರೇಷ್ಠವಾದ ನದಿಗಳ ದಂಡೆಗಳು, ದೊಡ್ಡ

ತರಂಗಿಣೀತಟ ವಿಪುಳಗಿರಿಕಟಕ ವಿವಿಧಕಾಸಾರ ಪರಿಸರಸ್ಥಿತದಳ ಫಳಕುಸುಮ ವಿಸರವಿಳಸಿತ ದಿವ್ಯ ತರುಮನೋಜ್ಞನಂದನಂಗಳೊಳ್ ಬೀಡುವಿಡುತ್ತಮಿನಿಯಳೊಡನೆ ಬಿನದಿಸುತ್ತಂ ಮೆಲ್ಲಮೆಲ್ಲ ನೇಳ್ತಂದು ನಿಜರಾಜಧಾನಿಯಂ ಸಂಭ್ರಮಂ ಮಿಗೆ ಪುಗುತರ್ಪನ್ನೆಗಂ

ರಗಳೆ॥ ಆ ವೇಳೆಯೊಳತಿಸಂಭ್ರಮಮೆಸೆದಿರೆ । ಪೂವಲಿ ಪುರವೀಥಿಗಳೊಳ್ ನೆಱೆದಿರೆ
ಪವಳದ ರನ್ನದ ಗುದಿಗಳ ಗುಡಿಗಳ್ । ನವಮೌಕ್ತಿಕರಂಗದ ದಾಂಗುಡಿಗಳ್
ಮೆಱೆದವು ಮಿಱುಗುವ ಮಿಸುನಿಯ ತೋರಣ। ಮಱೆಕೆಯ ಪುರಜನದುತ್ಸವ ದೋರಣ
ಮಾನೆಯ ಮೇಲಣ ಪಳಯಿಗೆ ಮಿಳಿರ್ದಿರೆ। ನಾನಾವಿಧ ವಾದ್ಯಧ್ವನಿಯುಳುರ್ದಿರೆ
ಕರೆದುವು ಬಿರಿದಿನ ಕಹಳೆಗಳಾಗಳ್ । ಪರೆದುದು ಪಳಹದ ರವಮೆಣ್ದೆಸೆಯೊಳ್
ಗಿರಿಬಂಧುರ ಸಿಂಧುರತತಿ ನಡೆತರೆ । ಚರವೃಂದದ ಕುಂದದ ಕಳಕಳವಿರೆ
ಪೊಸಮೇಳದ ತಾಳದ ಮೃದುನಿನದಂ। ಪಸರಿಸೆ ಗೀತರವಂ ಕಡುಬಿನದಂ
ಬಡೆದಿದಿರ್ವಂದುದು ರಾಜಪ್ರಜೆಯಂ । ಬಿಡದೊಡವಂದುದು ನಾರೀನಿಚಯಂ
ಕಳಶಂ ಕನ್ನಡಿ ವೀಜನತತಿಯಂ । ತಳೆದಿಳಿಕೈವುತೆ ಚೆಲ್ವಿಂ ರತಿಯಂ

ದೊಡ್ಡ ಗುಡ್ಡಗಳ ತಪ್ಪಲುಪ್ರದೇಶಗಳು, ವಿವಿಧ ಸರೋವರಗಳು, ಕಾಸಾರಗಳು, ಕಾಸಾರಗಳ ಸುತ್ತಮುತ್ತಲಿರುವ ಎಲೆ ಹಣ್ಣು ಹೂ ಸಮೂಹದಿಂದ ಪ್ರಕಾಶಗೊಂಡ ದಿವ್ಯ ತರುಗಳು, ಮನೋಹರ ಉದ್ಯಾನಗಳಲ್ಲಿ ಬೀಡುಬೀಡುತ್ತ, ಹೆಂಡತಿಯೊಡನೆ ವಿನೋದ ಗೊಳ್ಳುತ್ತ ಮೆಲ್ಲಮೆಲ್ಲನೆ ಹೊರಟುಬಂದು ತನ್ನ ರಾಜಧಾನಿಯನ್ನು ಸಂಭ್ರಮದಿಂದ ಪ್ರವೇಶಿಸಿದನು. ರಗಳೆ॥ ಆತನು ತನ್ನ ರಾಜಧಾನಿಯನ್ನು ಪ್ರವೇಶಿಸುವ ವೇಳೆಯಲ್ಲಿ ಪಟ್ಟಣದಲ್ಲಿ ಅತಿಸಂಭ್ರಮವು ಶೋಭಿಸುತ್ತಿತ್ತು. ಪುರದ ಬೀದಿಗಳು ಹೂದಂಡೆಗಳಿಂದ ಕಟ್ಟಲ್ಪಟ್ಟಿದ್ದವು. ಹವಳ ರತ್ನಗಳ ಗುಜ್ಜು ಗಳನ್ನು ಕಟ್ಟಿದ್ದರು. ನೂತನ ಮುತ್ತುಗಳ ರಂಗ ವಲ್ಲಿ ಗೆರೆಗಳು ಸಾಲಿಟ್ಟಿದ್ದವು. ಬಂಗಾರದ ತೋರಣಗಳು ಮಿಂಚುತ್ತ ಮೆರೆಯುತ್ತಿದ್ದವು. ಮರ್ಯಾದೆ ತೋರಿಸುವ ಪಟ್ಟಣದ ಜನವು ಉತ್ಸಾಹದಿಂದಲೂ ಕ್ರಮದಿಂದಲೂ ಕೂಡಿತ್ತು. ಮನೆ ಮನೆಗಳ ಮೇಲೂ ಧ್ವಜಗಳು ಹಾರಾಡುತ್ತಿದ್ದವು. ಅನೇಕ ವಿಧ ವಾದ್ಯಗಳು ಮೊಳಗುತ್ತಿದ್ದವು. ಕಹಳೆಗಳು ಬಿರುದನ್ನು ಕರೆಯುತ್ತಿದ್ದವು. ಪಟಹಧ್ವನಿಯು ಎಂಟು ದಿಕ್ಕುಗಳಲ್ಲೂ ಹರಿಯುತ್ತಿತ್ತು. ಪರ್ವತಾಕಾರದ ಬಂಧುರವಾದ ಆನೆಗಳು ಎದುರ್ಗೊಳ್ಳಲು ನಡೆದು ಬರುತ್ತಿದ್ದವು. ಕಾಲ್ದಳದವರ ಕಲಕಲಧ್ವನಿಯು ಕುಂದದಂತೆ (ಕುಂದಿಲ್ಲ ದಂತೆ) ಇತ್ತು. ನೂತನ ನಾಗಸ್ವರ, ತಾಳವಾದ್ಯದ ಮೃದುವಾದ ಧ್ವನಿಯಾಗುತ್ತಿತ್ತು. ಸಂಗೀತಧ್ವನಿಯ ವಿಶೇಷ ವಿನೋದವು ಹರಡಿತ್ತು. (ಇವೆಲ್ಲವುಗಳಿಂದ ಕೂಡಿ) ರಾಜ ರುಗಳ ಸಮೂಹ ಎದುರುಬಂದಿತು. ಅವರೊಡನೆ ಸ್ತ್ರೀಸಮೂಹವೂ ಬಂತು. (ಆ ಸ್ತ್ರೀಯರು) ಕಳಶ, ಕನ್ನಡಿ, ಬೀಸಣಿಗೆಗಳನ್ನು ಕೈಯಲ್ಲಿ ಹಿಡಿದು ರತಿರೂಪವನ್ನೂ

ಸಲೆ ವಾರಾಂಗನೆಯರ್ ಬರುತಿರ್ದರ್ । ಕೆಲರಾರತಿವಿಡಿದೈತರುತಿರ್ದರ್
ಮುತ್ತಿನ ಸತ್ತಿಗೆ ವೊತ್ತಂಬೆತ್ತಿರೆ । ಸುತ್ತಿ ತುರಂಗಿಗಳೊತ್ತರಿಸುತ್ತಿರೆ
ಒಂದೆಸೆ ವಂದಿಜನಂ ಜಯಜಯಮೆನೆ । ಮುಂದೆಸೆ ಬಂದೆಸೆದವರತಿಶಯಮೆನೆ
ಕಡೆಗಂಗಳ ಕುಡಿವೆಳಗೆಡೆವುಗುತಿರೆ। ನಿಡುಮುಡಿ ಮುಗುಳಂ ಪುರುಡಿಸುತೊಗುತಿರೆ
ಪೆಣ್ಬಡೆ ಸೂಸಿತು ವಾಜಿವ್ರಜಮಂ । ತಣ್ಬಿಸಿಲೆನೆ ಪಟವಾಸದ ರಜಮಂ
ತನುರುಚಿನಿರ್ಜಿತ ಸೌಧಾಮಿನಿಯರ್ । ಘನಸಂಭ್ರಮದರೆಬರ್ಕಾಮಿನಿಯರ್
ಸೆಲೆವನೆ ನೆಲೆನೆಲೆಗಳನೇಱುತ್ತಂ । ಕಲಿತ ಕಟಾಕ್ಷದ ರುಚಿವೀರುತ್ತಂ
ನೋಡುತ್ತಿರೆ ಕರಿವರಮಸ್ತಕದೊಳ್ । ತೋಡಿಲ್ಲದೆ ಬಗೆಗೊಗೆದುತ್ಸುಕದೊಳ್
ಯುವತಿಸಹಿತಮವನೀಶ್ವರತನಯಂ । ಸುವಿಳಾಸ ತಿರಸ್ಕೃತ ಪರಿತನಯಂ
ಪಿರಿದುತ್ಸವದಿಂದೇಳ್ತಂದಾಗಳ್ । ಭರದಿಂದರಮನೆಯಂ ಪೊಗುವಾಗಳ್

ಚಂ॥ ಜಡಿಯೆ ಘನಸ್ತನಂ ಪೊಡರೆ ಪೂರ್ಣನಿತಂಬಮಪಾಂಗಕಾಂತಿ ಮುಂ
ಙಿಡೆ ಕುಸುಮಾಸ್ತ್ರಮಂ ಕಿದರೆ ತಣ್ಗದಿರಂ ರದನಾಂಶು ಬಳ್ಕೆ ತೆ
ಳ್ನಡು ಮುಡಿ ಸೂಸೆ ಬಲ್ಮುಗುಳನಂದಿದಿರ್ವಂದು ಮಹೋತ್ಸವಂ ಮಾನ
ಕ್ಕೆಡೆಗುಡೆ ರತ್ನದಾರತಿಯನೆತ್ತಿದುದೊಲ್ದು ವಿಳಾಸಿನೀಜನಂ ೪೨

ತಿರಸ್ಕಾರ ಮಾಡುವಂತೆ ಕಾಣುತ್ತಿದ್ದರು. ಜೊತೆಗೆ ತಾರಾಂಗನೆಯರೂ ಬರುತ್ತಿದ್ದರು. ಕೈಯಲ್ಲಿ ಕೆಲವರು ಆರತಿಯನ್ನು ಹಿಡಿದಿದ್ದರು. ಮುತ್ತಿನ ಛತ್ರಿಗಳ ಸಮೂಹವು ತುಂಬಿತ್ತು. ಸುತ್ತಮುತ್ತ ಕುದುರೆಸವಾರರು ಆವರಿಸಿ ಒತ್ತರಿಸಿ ಬರುತ್ತಿದ್ದರು. ಸ್ತುತಿ ಪಾಠಕರು ಮುಂಭಾಗದ ಒಂದು ಕಡೆಯಲ್ಲಿ ಜಯಜಯ ಎಂದು ಧ್ವನಿಮಾಡುತ್ತ ಅತಿಶಯವಾಗಿ ಶೋಭಿಸುತ್ತಿದ್ದರು. ಸ್ತ್ರೀಯರು ಕಟಾಕ್ಷಕಾಂತಿಯ ಕುಡಿಬೆಳಕನ್ನು ಪ್ರಸಾರಗೊಳಿಸಿ, ಉದ್ದವಾದ ಹೆರಳಿನಲ್ಲಿರುವ ಮಲ್ಲಿಗೆಮೊಗ್ಗುಗಳೊಡನೆ ಸ್ಪರ್ಧಿಸುತ್ತ, ಬತ್ತದರಳುಗಳನ್ನು ಸುರಿಸುತ್ತ ಬರುತ್ತಿದ್ದರು. ಅವರು ತಣ್ಣನೆಯ ಬಿಸಿಲೋ ಎಂಬಂತೆ ಪರಿಮಳರಜವನ್ನು ಚೆಲ್ಲುತ್ತಿದ್ದರು. ದೇಹಕಾಂತಿಯಿಂದ ಸೆಳೆಮಿಂಚನ್ನು ಗೆದ್ದ, ಅತ್ಯಂತ ಸಂಭ್ರಮದ ಅನೇಕ ಜನ ಕಾಮಿನಿಯರು ಉಪ್ಪರಿಗೆಮನೆಗಳ ಅಂತಸ್ತುಗಳನ್ನೇರಿ ತಮ್ಮ ಮನೋಹರವಾದ ಕಡೆಗಣ್ಣಿನ ಕಾಂತಿಯನ್ನು ಬೀರುತ್ತ ನೋಡುತ್ತಿದ್ದರು. ಆಗ ರಾಜ ಪುತ್ರನಾದ ರಾಜಶೇಖರನು ತನ್ನ ಕಾಂತೆಯೊಡನೆ ಆನೆಯನ್ನೇರಿ ಬರುತ್ತ, ಕುಂದಿಲ್ಲದೆ ಆ ಎಲ್ಲ ಸ್ತ್ರೀಯರ ಮನಸ್ಸಿಗೆ ಹರ್ಷವನ್ನುಂಟುಮಾಡುತ್ತ, ತನ್ನ ಸೌಂದರ್ಯದಿಂದ ಮನ್ಮಥ ನನ್ನೂ ತಿರಸ್ಕರಿಸುವನೋ ಎನ್ನುವಂತೆ ಕಾಣುತ್ತ ಬರುತ್ತಿದ್ದನು. ಹೀಗೆ ವಿಶೇಷವಾದ ಉತ್ಸುಕತೆಯಿಂದ ಆ ರಾಜಶೇಖರನು ಒಂದು ಅರಮನೆಯನ್ನು ಪ್ರವೇಶಿಸುವಾಗ ೪೨. ವಿಲಾಸಿನಿಯರು ತಮ್ಮ ದಪ್ಪನೆಯ ಮೊಲೆಗಳು ಅಲ್ಲಾಡುತ್ತಿರಲು, ದೊಡ್ಡ ದೊಡ್ಡ ನಿತಂಬಗಳು ಚಲಿಸುತ್ತಿರಲು, ಕಡೆಗಣ್ಣ ಕಾಂತಿಯು ಮುಂದಕ್ಕೆ ಚಾಚಿ ಪುಷ್ಪ ಬಾಣಗಳೆಂಬಂತೆ ಇರಲು, ಹಲ್ಲಿನ ಕಾಂತಿಯು ಬೆಳದಿಂಗಳನ್ನು ಹರಡಿದಂತಿರಲು, ತೆಳ್ಳನೆಯ ನಡು ಬಳುಕುತ್ತಿರಲು, ಮುಡಿಯು ಮುಡಿದ ಹೂಗಳನ್ನು ಸುರಿಸುತ್ತಿರಲು,

ವ॥ ಇಂತು ಸಖೀಜನಮೆಸಗುವ ಮಂಗಳೋಪಚಾರಂಗಳಂ ಕೈಕೊಳುತ್ತಂ ನಿಜಜನನೀ ಜನಕರಿರ್ಪೆಡೆಗೆ ರಮಣಿವೆರಸೇಳ್ತಂದು ಪೊಡಮಟ್ಟು ನಿಂದಾಗಳಮೃತಮತಿಮಹಾದೇವಿ ಸತ್ಯೇಂದ್ರಚೋಳೇಂದ್ರರಿರ್ವರುಂ ಸಲಪರಿಕೆಯಿತ್ತು ಪರಿತೋಷದಿಂ ಬರಿಸಿ ಕುಳ್ಳಿರಿಸಿ ಸರಸ ಪ್ರಸನ್ನ ಸ್ನಿಗ್ಧಮಧುರತರ ಕಟಾಕ್ಷಂಗಳಿನಭೀಕ್ಷಿಸಿ ಸಮಯೌವನ ರೂಪಲಾವಣ್ಯ ಸೌಶೀಲ್ಯ ಸಂಪದಕ್ಕೆ ಸಂತಸಂಬಟ್ಟು ಸಮುಚಿತಮಂಗಳಂಗಳಂ ರಚಿಸಿ ಸುಮುಹೂರ್ತದೊಳ್ ಮನೆ ದುಂಬಿಸಲೊಡನೆ ನಿಜನಿತಂಬಿನಿಯೊಳ್ಕೂಡಿ ಸಾರತರ ಸಂಸಾರಸುಖಮನನುಭವಿಸುತ್ತಮಾ ರಾಜಶೇಖರಂ ಹರಚರಣಪೂಜಾಸಾಮ್ರಾಜ್ಯದುರಂಧರಂ ಶರಣಜನಸಂತಾನಸಂತಾನಂ ಪರಮ ಹರುಷದಿನಿರುತ್ತಮಿರ್ಪಾಗಳ್

ಮ॥ ಕಳಕಂಠೀಕಳನಾದಕಾಹಳಿಮಿಳದ್ಭೃಂಗಾವಳೀರಾವ ಮಂ
ಜುಳಗೀತಂ ಶುಕವಂದಿವೃಂದನಿನದಂ ಮಂದಾನಿಲಾಂದೋಳಿತೋ
ಜ್ವಳವಲ್ಲೀಮೃದುಲಾಸ್ಯವೊಪ್ಪಿರೆ ವನಶ್ರೀವಲ್ಲಭಂ ಸಂಮದಂ
ದಳೆದೇಳ್ತಂದನಮಂದವೈಭವಯುತಂ ಚೈತ್ರಕ್ಷಮಾಧೀಶ್ವರಂ ೪೩

ಮನಸ್ಸಿನಲ್ಲಿ ಅತ್ಯುತ್ಸಾಹಗೊಂಡವರಾಗಿ ಎದುರುಬಂದು ಪ್ರೀತಿಯಿಂದ ರತ್ನದಾರತಿಯನ್ನು ಬೆಳಗಿದರು. ವ॥ ಈ ರೀತಿ ಸಖೀಜನಗಳು ಮಾಡುತ್ತಿರುವ ಮಂಗಳಕರವಾದ ಉಪಚಾರಗಳನ್ನು ಸ್ವೀಕರಿಸುತ್ತ, ತನ್ನ ತಾಯಿತಂದೆಯರಿರುವಲ್ಲಿಗೆ ಹೆಂಡತಿ ಸಹಿತವಾಗಿ ಬಂದು, ಅವರಿಗೆ ನಮಸ್ಕಾರಮಾಡಿ ನಿಂತಾಗ (ತಾಯಿಯಾದ) ಅಮೃತಮತಿ ಮಹಾದೇವಿ ಮತ್ತು (ತಂದೆಯಾದ) ಸತ್ಯೇಂದ್ರಚೋಳೇಂದ್ರರಿಬ್ಬರೂ ಒಳ್ಳೆಯ ಹರಕೆಗಳನ್ನು ಮಾಡಿ ಸಂತೋಷದಿಂದ ಬರಮಾಡಿಕೊಂಡು ಕುಳ್ಳಿರಿಸಿದರು. ರಸಭರಿತವೂ, ಪ್ರಸನ್ನತೆಯಿಂದ ಕೂಡಿದುದೂ, ಸ್ನಿಗ್ಧವೂ, ಮಧುರವೂ ಆದ ನೇತ್ರಗಳಿಂದ ಅವರನ್ನು ನೋಡಿದರು. (ನೂತನ ದಂಪತಿಗಳ) ಯೌವನ, ರೂಪ, ಲಾವಣ್ಯ, ಸೌಶೀಲ್ಯಗಳ ಸಂಪತ್ತು ಜೊತೆಗೂಡಿದುದಕ್ಕೆ ಹರ್ಷಗೊಂಡರು. ಉಚಿತವಾದ ಶುಭಕಾರ್ಯಗಳನ್ನು ಸಜ್ಜುಗೊಳಿಸಿ ಸುಮುಹೂರ್ತದಲ್ಲಿ ಮನೆದುಂಬಿಸಿಕೊಂಡರು. ಆಮೇಲೆ ತನ್ನ ಧರ್ಮಪತ್ನಿಯೊಡನೆ ಸಾರಭೂತವಾದ ಸಂಸಾರಸುಖವನ್ನು ಅನುಭವಿಸುತ್ತ ಆ ರಾಜಶೇಖರನು ಪರಮೇಶ್ವರಪೂಜಾಸಾಮ್ರಾಜ್ಯಭಾರವನ್ನು ಹೊತ್ತು, ಶರಣಜನರ ಸಮೂಹಕ್ಕೆ ಕಲ್ಪವೃಕ್ಷಪ್ರಾಯನಾಗಿ ಪರಮಸಂತೋಷದಿಂದ ಇರುತ್ತಿರುವಾಗ ೪೩. ಅವ್ಯಕ್ತಮಧುರವಾದ ಕೋಗಿಲೆಯ ನಾದವೆಂಬ ಕಹಳೆಯ ನಾದದಿಂದ, ಗುಂಪುಗೊಂಡ ಭೃಂಗಗಳ ಝೇಂಕಾರಧ್ವನಿಯ ಮಧುರ ಸಂಗೀತದಿಂದ, ಗಿಳಿಗಳ ಧ್ವನಿಯೆಂಬ ಸ್ತುತಿಪಾಠಕರಿಂದ, ಮಂದಮಾರುತನಿಂದ ತೂಗಾಡುತ್ತಿರುವ ಬಳ್ಳಿಗಳ ನೃತ್ಯದಿಂದ ಒಪ್ಪಿರಲು, ಅರಣ್ಯವೆಂಬ ಲಕ್ಷ್ಮಿಗೆ ಪತಿಯಂತಿರುವ ಚೈತ್ರಭೂಪಾಲನು

ವ॥ ಅಂತುಮಲ್ಲದೆಯುಂ

ಮ॥ಸ್ರ॥ ವನಿತಾವಕ್ತ್ರಾಂಬುಜಂ ಮುಂತಲರೆ ಸರಸಿಜಂ ಪಿಂತೆ ಕಾಂತಾಕಪೋಲೇಂ
ದುನವಪ್ರದ್ಯೋತಮಂ ಮುಂ ತಳೆಯೆ ಹಿಮಕರಂ ಪಿಂತೆ ಭಾಮಾಮನಶ್ಚೂ
ತನಗಂ ಮುಂ ಪಲ್ಲವಂಬೆತ್ತಿರೆ ಸರಸರಸಾಲವ್ರಜಂ ಪಿಂತೆ ತನ್ವೀ
ತನುವಲ್ಲೀಶ್ರೇಣಿ ಮುಂ ರಂಜಿಸೆ ವನಲತೆ ತಾಂ ಪಿಂತೆ ಬಂದಂ ಬಸಂತಂ ೪೪

ಮ॥ ಮಲಯೋರ್ವೀಧರ ತುಂಗಶೃಂಗವಿಚರದ್ವಿದ್ಯಾಧರೀ ಕೋಮಳಾಂ
ಗಲತಾ ಸೌರಭಶಾಲಿ ವಾಮನಕರಾಕೀರ್ಣೋದಕೋದ್ಯತ್ಕಣಾ
ವಲಿ ಮಾರ್ಗಸ್ಥಿತ ಚಂದನಾಗಗತನಾಗಾಪೀತಶೇಷಂ ಧರಾ
ತಲಕಾನಂದಮನೊಂದಿಸುತ್ತೆ ಸುಳಿದಂ ಮತ್ತಲ್ಲಿ ಮಂದಾನಿಲಂ ೪೫

ಮ॥ಸ್ರ॥ ನಗಿಸುತ್ತಂ ಮಲ್ಲಿಕಾಕಾಮಿನಿಯನಳಿರವವ್ಯಾಜದಿಂ ಸೋಂಕಿ ಮೆಯ್ಯೊ
ಳ್ನೆಗಪುತ್ತಂ ಚೈತ್ರದೂತೀಯುವತಿಗೆ ಮುಕುಳವ್ಯಾಜದಿಂ ಘರ್ಮವಾರ್ಬಿಂ
ದುಗಳಂ ಮೇಣ್ ಚೂತವಲ್ಲೀವನಿತೆಗೆ ಪಡೆವುತ್ತಂಕುರವ್ಯಾಜದಿಂ ನೆ
ಟ್ಟಗೆ ರೋಮಾಂಚಂಗಳಂ ಸದ್ವಿಟನೆನೆ ಸುಳಿದಂ ವೇಗದೂರಂ ಸಮೀರಂ ೪೬

ಸಂತೋಷಗೊಂಡು ಅಧಿಕ ವೈಭವಯುತನಾಗಿ ಬಂದನು. ವ|| ಅದೂ ಅಲ್ಲದೆ, ೪೪. ಮೊದಲು ವನಿತೆಯರ ಮುಖಕಮಲವು ಅರಳಿತು. ಆಮೇಲೆ ತಾವರೆ ಅರಳಿತು ಕಾಂತೆಯರ ಕಪೋಲಚಂದ್ರನು ಮೊದಲು ಕಾಂತಿಯನ್ನು ಪಡೆದನು. ಆಮೇಲೆ ಚಂದ್ರನು ಪಡೆದನು. ತರುಣಿಯರ ಮನಸ್ಸೆಂಬ ಮಾವಿನಮರ ಮೊದಲು ಚಿಗುರಿತು. ಅನಂತರ ಮಾವಿನಮರ ಚಿಗುರಿತು. ಮೊದಲು ತರುಣಿಯರ ದೇಹವೆಂಬ ಬಳ್ಳಿ ರಂಜಿಸಿತು. ಅನಂತರ ವನಲತೆ ರಂಜಿಸಿತು. ಹೀಗೆ ವಸಂತನು ಬಂದನು. (ವಸಂತಾಗಮನವಾಗುವುದೆಂದು ಸ್ತ್ರೀಯರು ಆನಂದದಿಂದ ಮೊದಲೇ ಹಿಗ್ಗಿದರು ಎಂದು ಆಶಯ. ರಂ) ೪೫. ಮತ್ತು ಆ ವಸಂತಋತುವಿನಲ್ಲಿ ಮಲಯಪರ್ವತದ ಎತ್ತರವಾದ ಶಿಖರಗಳಲ್ಲಿ ಸಂಚರಿಸುತ್ತಿರುವ ವಿದ್ಯಾಧರಸ್ತ್ರೀಯರ ಕೋಮಲವಾದ ಲತೆಯಂತಿರುವ ದೇಹದ ಸುವಾಸನೆಯಿಂದಲೂ, ವಾಮನವೆಂಬ ಹೆಸರಿನ ದಿಗ್ಗಜದ ಸೊಂಡಿಲಿನ ಫೂತ್ಕಾರದಿಂದ ಪ್ರಸಾರಗೊಂಡ ನೀರಿನ ಕಣಗಳಿಂದಲೂ ಕೂಡಿ, ಮಾರ್ಗದ ಚಂದನವೃಕ್ಷದಲ್ಲಿರುವ ಹಾವುಗಳಿಂದ ಸೇವಿತವಾಗಿ ಉಳಿದ ಮಂದಮಾರುತವು ಭೂಭಾಗಕ್ಕೆ ಆನಂದವನ್ನುಂಟುಮಾಡುತ್ತ ಸುಳಿಯಿತು.[1] ೪೬. ಆ ಮಂದಮಾರುತವು ಮಲ್ಲಿಗೆಯೆಂಬ ಕಾಮಿನಿಯನ್ನು ದುಂಬಿಗಳ ಝೇಂಕಾರವೆಂಬ ನೆಪದಿಂದ ನಗಿಸುತ್ತಿತ್ತು. ಚೈತ್ರದೂತಿಯೆಂಬ ಯೌವನವತಿಗೆ ಮೊಗ್ಗುಗಳ ನೆಪದಿಂದ ಬೆವರಿನ ಹನಿಗಳನ್ನುಂಟುಮಾಡುತ್ತಿತ್ತು. ಮತ್ತು ಸೀಮಾವಿನಮರವೆಂಬ ಹೆಂಗಸಿಗೆ ಚಿಗುರಿನ ನೆಪದಿಂದ ರೋಮಾಂಚನಗಳನ್ನುಂಟುಮಾಡುತ್ತಿತ್ತು. ಹೀಗೆ ಒಳ್ಳೆಯ ವಿಟನೋ ಎನ್ನುವ ಹಾಗೆ ವೇಗವಿಲ್ಲದ

---

1 ಸುಗಂಧಿಯಾಗಿ ತಂಪಾಗಿದ್ದ ಮಾರುತವು ಮೆಲ್ಲನೆ ಬೀಸಿತು ಎಂದರ್ಥ (ರಂ).

ವ॥ ಮತ್ತಮಾಗಳ್

ಚಂ॥ ತಳಿರ್ವೆಳೆಮಾವು ಪಲ್ಲವಿಪಶೋಕೆ ಮುಗುಳ್ತದಿಮುರ್ಕ್ತೆ ಮೊಗ್ಗೆಯಂ
ತಳೆಯಲೊಡರ್ಚಿ ನಿಂದ ಪೊಸಮಲ್ಲಿಗೆ ಪುಷ್ಪಮನಾಂತ ಚಂಪಕಂ
ಪಳಿಯೆಲೆಯಿಕ್ಕಿ ಸಣ್ಣನನೇಯೇಱಿದ ಪಾಟಳಿ ಪೂವನಾಂತು ಕಂ
ಗೊಳಿಸುವ ಕರ್ಣಿಕಾರಮಲರ್ದೀವಿದ ಮುತ್ತಮಃದೆತ್ತ ನೋಳ್ಪೊಡಂ ೪೭

ಮೊಡವಿಗಳಂತೆ ಮೂಡೆ ಪೊಸಮೊಗ್ಗೆಗಳಾ ಮಧುದೂತಿಯಲ್ಲಿ ಸೊಂ
ಪಿಡಿದಿರೆ ವಲ್ಲರೀತನು ಸಮಸ್ತ ಬಕಸ್ತನಮಲ್ಲಿ ಪೊಣ್ಮೆ ಕ
ರ್ಪಡರ್ದ ತಮಾಲವಲ್ಲಿ ಬಡಬಾಸೆವೊಲೊಪ್ಪಿರೆ ಪದ್ಮಲೋಚನಂ
ಬಿಡದಲರ್ದೊಪ್ಪೆ ಜವ್ವನಮನಾಂತವೊಲಾ ವನಲಕ್ಷ್ಮಿ ತೋಱಿದಳ್ ೪೮

ಕಂ॥ ಗಿಳಿಗಳೆಱಂಕೆಯ ಪಚ್ಚೆಯ
ನಳಿಮಾಲೆಯ ನೀಲಮಾಲೆಯಂ ಮಾವಿನ ಚಂ
ದಳಿರ್ಗೆಂಪಂ ಬನಸಿರಿ ತಾಂ
ತಳೆದಾ ಮಾಧವಮನೋಜ್ಞೆಯೆನಿಸುತ್ತೆಸೆದಳ್ ೪೯

ಸಮೀರ (ಮಂದಮಾರುತವು) ಬೀಸುತ್ತಿತ್ತು. ವ॥ ಮತ್ತು ಆಗ ೪೭. (ಆ ವಸಂತ ಋತುವಿನಲ್ಲಿ) ಚಿಗಿತ ಎಳೆಮಾಮರಗಳು, ಚಿಗುರಿದ ಅಶೋಕವೃಕ್ಷಗಳು, ಮುಗುಳು ಬಿಟ್ಟ ಅದಿಮುರ್ಕ್ತೆ, ಮೊಗ್ಗನ್ನು ಬಿಡಲು ಸಿದ್ಧವಾಗಿ ನಿಂತ ಹೊಸ ಮಲ್ಲಿಗೆಯ ಬಳ್ಳಿ, ಹೂಬಿಟ್ಟ ಸಂಪಿಗೆಯ ಮರಗಳು, ಹಳೆಯ ಎಲೆಗಳನ್ನು ಉದುರಿಸಿ ಚಿಕ್ಕ ಹೂವುಗಳನ್ನು ಬಿಟ್ಟ ಪಾದರಿಮರಗಳು, ಹೂ ಬಿಟ್ಟು ಮನೋಹರವಾಗಿ ತೋರುವ ಕರ್ಣಿಕಾರಮರ ಗಳು, ಹೂ ತುಂಬಿನಿಂತ ಮುತ್ತುಗದ ಮರಗಳು ಎಲ್ಲೆಲ್ಲಿ ನೋಡಿದರೂ ಕಣ್ಣಿಗೆ ಕಾಣು ತ್ತಿದ್ದವು. ೪೮. ಆ ವಸಂತಋತುವಿನ ದಾದಿಯೆನಿಸಿದ ಮಧುದೂತಿಯೆಂಬ ಬಳ್ಳಿಯ ದೇಹವು ಸೊಂಪಾಗಿರಲು, ಮುಖದಲ್ಲಿ ಎದ್ದ ಮೊಡವೆಯ ಗುಳ್ಳೆಗಳಂತೆ ಹೊಸ ಮೊಗ್ಗುಗಳು ಬಿಟ್ಟಿದ್ದವು. ಹೂವುಗಳ ಗೊಂಚಲುಗಳು ಮೊಲೆಗಳ ಹಾಗೆ ಹೊರ ಹೊಮ್ಮಿದ್ದವು. ಕಪ್ಪಾಗಿ ಕಾಣುವ ಹೊಂಗೆಯ ಸಾಲು ಆ ತನುಲತೆಯ ಹೊಟ್ಟೆಯ ಮೇಲಿನ ಕೂದಲುಸಾಲುಗಳಂತೆ ಒಪ್ಪಿದ್ದವು. ಕಣ್ಣಿನಂತಿರುವ ಕಮಲವು ಅರಳಿ ಒಪ್ಪಗೊಂಡಿತ್ತು. ಹೀಗೆ ಆ ವನಲಕ್ಷ್ಮಿಯು ಯೌವನವನ್ನು ಹೊಂದಿರುವಳೋ ಎಂಬಂತೆ ಕಣ್ಣಿಗೆ ಕಂಡಳು. ೪೯. ಬನಸಿರಿಯು ಗಿಳಿಗಳ ರೆಕ್ಕೆಯ ಪಚ್ಚೆಯ ಮಾಲೆ ಯನ್ನೂ, ದುಂಬಿಗಳ ಸಮೂಹದ ನೀಲಮಣಿಗಳ ಮಾಲೆಯನ್ನೂ, ಮಾವಿನ ಕೆಂಪಾದ ಚಿಗುರೆಂಬ ಕೆಂಪುರತ್ನಸಮೂಹವನ್ನೂ ಹೊಂದಿ ಆ ಮಧುಮಾಸಪುರುಷನ

ವ॥ ಅದಲ್ಲದೆಯುಮಲ್ಲಿ

ಮ॥ ಮದನಂ ಪೂಸರಲಿಂದೆ ಪೊಣ್ದಸೆ ತಪಃಸಂಯುಕ್ತ ಕಾರ್ಕಶ್ಯಚಿ
ತ್ತದೆ ತಾಂ ನಾಂದದಿದೆಂದು ಬಂದು ಮಧುವೆಂದೆಂಬೋಜನಂದೊಟ್ಟಿ ಮು
ತ್ತದ ಪೂಗೆಂಡಮನಲ್ಲಿ ಬಲ್ಸರಲ ಮಾಡಲ್ಮೇಲಯಃಪಿಂಡಮಂ
ಡದ ಸಾಲಿಟ್ಟದನೂದಿದಂತೆ ಮೆಱೆಗುಂ ಭೃಂಗಾಳಿಯಿಂ ಗಾಳಿಯಿಂ ೫೦

ಮಧುಸೇವನೆಯಿಂ ಸೊರ್ಕುತೆ
ಮಧುಪಂ ಸುಮನಃಪ್ರಚಯಮನಲೆದೊಡೆ ಶಿಖಿಯೊಳ್
ಮಧುರಿಪುಜನ ಬೆಸದಿನದಂ
ಮಧು ದಂಡಿಪ ತೆಱದೆ ಮುತ್ತಲದಱೊಳಗೆಸೆಗುಂ ೫೧

ವ॥ ಮತ್ತಮದಲ್ಲದೆಯುಂ

ಉ॥ ಅಂಗಜಭೂಭುಜಂ ವಿಜಯಯಾತ್ರೆಗೆ ಪೋಗಲೊಡರ್ಚೆ ಚೈತ್ರನು
ತ್ತುಂಗ ಪಿಕಧ್ವನೀಸ್ಫುಟ ಮಹಾಪಟಹಧ್ವನಿಗೆಯ್ಯೆ ಕೇಳ್ದು ಚೂ
ತಂಗಳೆನಿಪ್ಪ ವೀರಭಟರೇಳೆ ನವಾಂಕುರ ರೋಮರಾಜಿ ಸ
ರ್ವಾಂಗದೊಳಂದು ಪಲ್ಲವಲಸತ್ಕವಚಾವಳಿದೊಟ್ಟು ತೋಱಿದರ್ ೫೨

ಕಾಂತಿಯೋ ಎಂಬುದಾಗಿ ಶೋಭಿಸುತ್ತಿದ್ದಿತು. ವ॥ ಅದೂ ಅಲ್ಲದೆ ಅಲ್ಲಿ ೫೦. ಮನ್ಮಥನು ಪುಷ್ಪಬಾಣಗಳನ್ನು ಪ್ರಯೋಗಮಾಡಲಾಗಿ ತಪೋಮಗ್ನರಾಗಿರುವ ಮುನಿಗಳ ಕಠಿಣ ಚಿತ್ತದಲ್ಲಿ ನಾಟಲಿಲ್ಲವೆಂದು ಮಧುವೆಂಬ ಕಮ್ಮಾರನು ಬಂದನು. ಆತನು ಮುತ್ತುಗದ ಹೂಗಳೆಂಬ ಕೆಂಡವನ್ನು ಒಟ್ಟಿ, ಒಲವುಳ್ಳ ಬಾಣಗಳನ್ನು ಮಾಡಲಿಕ್ಕೆ ಉಕ್ಕಿನ ಗಟ್ಟಿಯನ್ನು ಇಟ್ಟು ಊದುತ್ತಿರುವನೋ ಎಂಬಂತೆ ಭ್ರಮರಸಮೂಹದಿಂದಲೂ ಗಾಳಿಯಿಂದಲೂ ರಂಜಿಸಿತು.[1] ೫೧. ಭೃಂಗವೊಂದು ಮಕರಂದಸೇವನೆಮಾಡಿ, ಸೊಕ್ಕೇರಿ ಹೂವುಗಳ ಸಮೂಹಕ್ಕೆ ಅಲೆದಾಡುತ್ತಿರಲು, ಮನ್ಮಥನ ಅಪ್ಪಣೆಯ ಮೇರೆಗೆ ವಸಂತನು ಆ ದುಂಬಿಯನ್ನು ಬೆಂಕಿಯಲ್ಲಿ ಹಾಕಿ ಶಿಕ್ಷೆ ಕೊಡುತ್ತಾನೆಯೋ ಎನ್ನುವ ಹಾಗೆ ಮುತ್ತುಗದ ಹೂವಿನಲ್ಲಿ ದುಂಬಿಯು ಶೋಭಿಸುತ್ತಿತ್ತು. ವ॥ ಇದೂ ಅಲ್ಲದೆ, ೫೨. ಮನ್ಮಥನೆಂಬ ಭೂಮೀಶ್ವರನು ವಿಜಯಯಾತ್ರೆಗೆ ಹೋಗಲು ಸಿದ್ಧನಾಗಲಾಗಿ, ವಸಂತಮಾಸವೆಂಬ ಪುರುಷನು ಕೋಗಿಲೆಯ ದೀರ್ಘವಾದ ಧ್ವನಿಯೆಂಬ ಸ್ಫುಟವಾದ ನಗಾರಿಯ ಭಾರಿ ಧ್ವನಿಯನ್ನು ಮಾಡಿದನು. ಅದನ್ನು ಕೇಳಿ ಮಾಮರಗಳೆಂಬ ವೀರಭಟರು ನೂತನವಾದ ತೆನೆಗಳೆಂಬ ರೋಮರಾಜಿಗಳು ದೇಹದಲ್ಲೆಲ್ಲ ಎದ್ದು ನಿಲ್ಲಲು, ತಳಿರೆಂಬ ಪ್ರಕಾಶಿಸುವ ಅಂಗಿಗಳನ್ನು (ಯುದ್ಧೋಪಯೋಗದ ಅಂಗಿಗಳನ್ನು) ತೊಟ್ಟುಕೊಂಡವರಾಗಿ ತೋರಿದರು. (ಮಾಮರಗಳು ತೆನೆ, ತಳಿರು ಮೊದಲಾದುವುಗಳಿಂದ ಶೋಭಿಸ

1. ಮುತ್ತುಗದ ಹೂವೇ ಕೆಂಡ. ಅದರ ಮೇಲಿರುವ ದುಂಬಿಗಳ ಹಿಂಡು ಕಬ್ಬಿಣ ಬೀಸುವ ಗಾಳಿಯೋ ಕುಂಬಾರನು ಊದುವ ಗಾಳಿ (ರಂ)

ಜೇವಣಶಾಲೆ ತುಂಬಿಗಳ ಪುಷ್ಪಕಳಂಬನ ಶಸ್ತ್ರಶಾಲೆ ಕೀ
ರಾವಳಿ ಕೋಕಿಲಾವಳಿಗಳಗ್ಗದ ಪಾಠದ ಪಟ್ಟಶಾಲೆ ಮ
ಲ್ಲೀವಧು ಲಾಸ್ಯಮಭ್ಯಸಿಪ ನರ್ತನಶಾಲೆ ನವೀನ ಚೈತ್ರಲ
ಕ್ಷ್ಮೀವರಚಿತ್ರಶಾಲೆ ಮಧುಭೂಭುಜನೋಲಗಶಾಲೆ ಮಾಮರಂ ೫೩

ವ॥ ಮತ್ತಂ

ಚಂ॥ ಗಿಳಿ ಗಿಳಿದಾಳಿ ಚೆಂದಳಿರೆ ಚೆಂದಿರಗಾವಿಯ ನೂತನಾಂಬರಂ
ಸುಳಿಯದೆ ನಿಂದ ತುಂಬಿಗಳ ಸಾಲ್ಪವಿಭೃನ್ಮಣಿಮಾಲೆ ಪುಷ್ಪಸಂ
ಕುಳದ ರಜಂ ಸುಗಂಧದ ರಜಂ ತನಗಾಗಿರೆ ತಾಳ್ದು ಮಲ್ಲಿಕಾ
ಲಳನೆಯೊಳೇಂ ಮನಂಬಿಡಿದನೋ ಬನದೊಳ್ಸಹಕಾರಪಲ್ಲವಂ ೫೪

ಅಳಿಕುಳ ಝೇಂಕೃತಿ ಪ್ರಚುರ ಕಿಂಕಿಣಿಕಾರಣಿತಂ ಶುಕಸ್ವನಾ
ಕುಳ ವಿಕಟಾಟ್ಟಹಾಸನಿನದಂ ಸುಮನಸ್ಫುಟಹಾಸರೋಚಿ ಸ
ತ್ಫಳಮಣಿಮಾಲ್ಯನುದ್ಗತ ರಜೋಭಸಿತಂ ಮಧುಮತ್ತನಲ್ಲಿ ಕೋ
ಕಿಳರವಶೃಂಗನಾದನೆಸೆದಂ ತಳಿರ್ಗೈಯ ರಸಾಲಭೈರವಂ ೫೫

ತೊಡಗಿದುವೆಂಬ ಭಾವ) ೫೩. ಮಾಮರವು ತುಂಬಿಗಳ ಭೋಜನಶಾಲೆ, ಪುಷ್ಪ ಬಾಣನಾದ ಮನ್ಮಥನ ಶಸ್ತ್ರಗಳ ಶಾಲೆ, ಗಿಳಿ ಕೋಗಿಲೆಗಳ ಸಮೂಹದ ವಿದ್ಯಾಭ್ಯಾಸ ಮಾಡುವ ನೃತ್ಯಶಾಲೆ, ಮಲ್ಲಿಗೆಯೆಂಬ ಸ್ತ್ರೀಯು ನೃತ್ಯವನ್ನು ಅಭ್ಯಾಸ ಮಾಡುವ ನೃತ್ಯಶಾಲೆ, ನೂತನ ಚೈತ್ರಮಾಸವೆಂಬ ಲಕ್ಷ್ಮಿಯ ಶ್ರೇಷ್ಠವಾದ ಚಿತ್ರ ಕಲಾಶಾಲೆ, ವಸಂತನೆಂಬ ಅರಸನ ಸಭಾಭವನ. ವ॥ ಮತ್ತು ೫೪. ಗಿಳಿಯು 'ಗಿಳಿದಾಳಿ' ಎಂಬ ತಾಳಿಯಾಗಿರಲು, ಕೆಂಪಾದ ಚಿಗುರು ಕೆಂಪನೆಯ ಹೊಸ ವಸ್ತ್ರವಾಗಲು, ಹಾರಾಡದೆ ನಿಂತಿರುವ ತುಂಬಿಗಳ ಸಾಲು ಇಂದ್ರನೀಲಮಣಿ (ಪವಿಭೃನ್ಮಣಿ)ಗಳ ಮಾಲೆಯಾಗಿರಲು, ಹೂಗಳ ಸಮೂಹದ ಧೂಳು ಸುಗಂಧದ ಹುಡಿಯಾಗಿರಲು, ಆ ವನದಲ್ಲಿ ಸೀಮಾವಿನ ಮರವೆಂಬ ಪುರುಷನು ಮಲ್ಲಿಗೆಯ ಬಳ್ಳಿಯೆಂಬ ಸ್ತ್ರೀಯಲ್ಲಿ ಏನು ಮನಸ್ಸಿಟ್ಟನೋ ! ೫೫. ತುಂಬಿಗಳ ಸಮೂಹದಿಂದ ಹೊರಹೊಮ್ಮುವ ಝೇಂಕಾರಧ್ವನಿಯೇ ಕಾಲಿನಲ್ಲಿ ಕಟ್ಟಿದ ಕಿರುಗಂಟೆಗಳ ಧ್ವನಿಯಾಗಿ, ಗಿಳಿಗಳ ಧ್ವನಿಯೇ ಕರಾಳವಾದ ಅಟ್ಟಹಾಸದ ಧ್ವನಿಯಾಗಿ, ಹೂವುಗಳೇ ಸ್ಫುಟವಾದ ನಗೆಯ ಕಾಂತಿಯಾಗಿ, ಒಳ್ಳೆಯ (ಪಕ್ವವಾದ) ಹಣ್ಣುಗಳೇ ರತ್ನಗಳ ಸರಗಳಾಗಿ, ಪುಷ್ಪಗಳ ಧೂಳಿಯೇ ಧರಿಸಿರುವ ಭಸ್ಮದಂತಾಗಿ, ಕೋಗಿಲೆಯ ಧ್ವನಿಯೇ ಕೊಂಬನ್ನು ಊದುವ ಧ್ವನಿಯಾಗಿ ತೋರುತ್ತಿರಲು, ತಳಿರೆಂಬ ಕೈಗಳಿಂದ ಕೂಡಿ ಮಧುಪಾನ ಮಾಡಿ ಮತ್ತನಾದ ಭೈರವನೋ ಎಂಬ ಹಾಗೆ ಸೀಮಾವಿನ ಮರವು ಶೋಭಿಸುತ್ತಿತ್ತು.

ತಳಿರ್ಗಳೆ ದಟ್ಟಿಯಾಗೆ ಕೊನರೆಂಬ ಬೆರಲ್ಗದು ವಜ್ರಮುಷ್ಟಿಯುಂ
ತಳವಡೆ ತೋಱಿಮಾಮಿಡಿ ಶಿಖಂಡಕದಂತಿರೆ ಮಧ್ಯದಲ್ಲಿ ಕಂ
ಗೊಳಿಪಳಿವಿಂಡು ತದ್ರಜಮೆ ಮೃದ್ರಜದಂತಿರೆ ಕೋಕಿಳಸ್ವರಂ
ಕಳಕಳಮಾಗೆ ಮಾಮರಮದೊಪ್ಪಿತು ಮಾಮರ ಮಲ್ಲನಂತೆವೊಲ್ ೫೭

ಕಳರವಮಿತ್ತುದೆನ್ನ ಕಲಕಂಠನ ಕಂಠಕೆ ತನ್ನ ಕೋರಕಂ
ಗಳ ರಸದಿಂದೆ ಪಣ್ಗಳ ರಸಂಗಳಿನೆನ್ನ ಶುಕಾಳಿಗಳ್ಗೆ ಮಂ
ಜುಳಮಧುರೋಕ್ತಿಯಿತ್ತುದದುಮಲ್ಲದೆ ಪಲ್ಲವಬಾಣಮೀವುದೆ
ನ್ನಳಿಯನೆ ಪೂಗಳಿಂ ಪೊರೆವುದೆಂದದನಾ ಮದನಂ ನಿರೀಕ್ಷಿಪಂ ೫೭

ಉ॥ ಚೆಂದಳಿರಂದವೆತ್ತ ಪೊಸ ಕಾಸೆ ಮದಾಳಿಗಳಿಂಚರಂ ಲಯಂ
ಗುಂದದ ಕಿಂಕಿಣೀಕ್ವಣಿತಮುದ್ಗತ ಕೋರಕಹಸ್ತಶಾಖೆಯೊ
ಳ್ಪಿಂದಲಝೊಂಪಮೇ ಪಿಡಿದ ಚಾಮರಮಾಗಿರೆ ದೇಸಿವೆತ್ತು ತ
ನ್ನಂದನರಂಗದೊಳ್ ಕುಣಿದಳಾಮ್ರಲತಾನಟಿ ಮೆಚ್ಚೆ ಮನ್ಮಥಂ ೫೮

೫೭. ತಳಿರುಗಳೇ ಚಲ್ಲಣವಾಗಿರಲು, ಕೊನರು (ಕೊಂಬೆಗಳ ತುದಿ)ಗಳೆಂಬ ಬೆರಳಿಗೆ ವಜ್ರ ಮುಷ್ಟಿಯ ಹಿಡಿತದಹಾಗೆ ದಪ್ಪನಾದ ಮಾವಿನ ಮಿಡಿಗಳು ಅಳವಟ್ಟಿರಲು, ಮಧ್ಯದಲ್ಲಿ ಕಾಕಪಕ್ಷ (ಚಂಡಿಕೆ)ದ ಹಾಗೆ ಶೋಭಿಸುವ ದುಂಬಿಗಳ ಹಿಂಡು ಇರಲು, ಆ ದುಂಬಿಗಳ ಮೈಗೆ ಹತ್ತಿದ್ದ ಪುಷ್ಪಧೂಳಿಯೇ ಹುಡಿಮಣ್ಣಾಗಿರಲು, ಕೋಗಿಲೆಯ ಧ್ವನಿಯೇ ಜನರ ಕಲಕಲಧ್ವನಿಯಾಗಿರಲು, ಮಾವಿನಮರವು ಮನ್ಮಥನ ಜಟ್ಟಿ (ಕುಸ್ತಿಯ ಜಟ್ಟಿ)ಯ ಹಾಗೆ ಶೋಭಿಸುತ್ತಿತ್ತು. ೫೭. "ನನ್ನ ಕೋಗಿಲೆಗೆ ತನ್ನ ಮೊಗ್ಗುಗಳ ರಸದಿಂದ ಮಧುರವಾದ ಧ್ವನಿಯನ್ನು ಕೊಟ್ಟಿತು. ಹಣ್ಣಿನ ರಸದಿಂದ ನನ್ನ ಗಿಳಿಗಳಿಗೆ ಮಂಜುಳವೂ ಮೃದುವಾದುವೂ ಆದ ಮಾತುಗಳನ್ನು ಕೊಟ್ಟಿತು. ಅಲ್ಲದೆ ನನಗೆ ಚಿಗುರಿನ ಬಾಣಗಳನ್ನು ಕೊಟ್ಟಿತು. ನನ್ನ ದುಂಬಿಗಳನ್ನು ಹೂವುಗಳಿಂದ (ಹೂವುಗಳ ಮಕರಂದದಿಂದ) ಕಾಪಾಡುವುದು" ಎಂದು ಆ ಮಾವಿನಮರವನ್ನು ಮನ್ಮಥನು ನೋಡುತ್ತಿದ್ದನು. ೫೮. ಕೆಂಪಾದ ಚಿಗುರೇ ಅಂದವಾದ ಹೊಸ ಕಾಚವಾಗಿತ್ತು. ಮದಿಸಿದ ದುಂಬಿಗಳ ಝೇಂಕಾರವು ಲಯಾನುಗುಣವಾದ ಗೆಜ್ಜೆಗಳ ಶಬ್ದವಾಗಿತ್ತು. ಎದ್ದು ನಿಂತು ಕಾಣುವ ಮೊಗ್ಗುಗಳೇ ಕೈಗಳು, ಬಾಹುಗಳೆಂಬ ರೆಂಬೆಯಲ್ಲಿರುವ ಹೂಗಳ ಗೊಂಚಲುಗಳೇ ಚಾಮರವಾಗಿರಲು ದೇಶಿ (ದೇಶದ ಪದ್ಧತಿಯನ್ನನುಸರಿಸುವ)ಯನ್ನು ಪಡೆದು, ನಂದನವೆಂಬ ರಂಗಸ್ಥಳದಲ್ಲಿ ಮಾವುಮರವೆಂಬ ನರ್ತಕಿಯು ಮನ್ಮಥನು ಮೆಚ್ಚುವ ಹಾಗೆ ಕುಣಿ

ಕಂ॥ ಪಲ್ಲವದೊಳಿರ್ದು ಕೋಗಿಲೆ
ಮೆಲ್ಲನೆ ದನಿಗೆಯ್ಯೆ ತತ್ಪ್ರಸೂನದೊಳಳಿಗಳ್
ಮೆಲ್ಲುಲಿಗುಡೆ ಮಾವುಂ ಪೊಸ
ಮಲ್ಲಿಗೆಯುಂ ಕೂಡಿ ಪಾಡುವಂತಿರೆ ತೋರ್ಕುಂ ೪೯

ವ॥ ಅದಲ್ಲದೆಯುಂ

ಮ॥ಸ್ರ॥ ಗಿಳಿಗಳ್ ಮತ್ತೊಂದು ಪಣ್ಣಂ ತುಡುಕುಗುಮಳಿಗಳ್ ಪೋಗಿ ಮತ್ತೊಂದು ಪೂವೊ
ಳ್ಕಳಿವೆಂಡಂ ಪೀರ್ಗುಮಿಾ ಕೋಕಿಳಶಿಶುಗೆಲೆ ನೀನಲ್ಲದಾರುಂಟು ನಿನ್ನೊ
ಳ್ತಳಿರೆಂದಿಂಗಪ್ಪುದೆಂದೇ ಬಯಸಿ ಮಧುಗೆ ಮೌನವ್ರತಂಗೊಂಡುದೈ ಕೇ
ಳೆಳೆಮಾವೇ ಪತ್ತಱಿಕೊಳ್ಳಾಣದಿರಿದನೆನುತಂ ಕಾಯಜಂ ಕೈಯೊಳಿತ್ತಂ ೬೦

ವ॥ ಮತ್ತಂ

ಚಂ॥ ಅಳಿಕುಳಮೆಲ್ಲ ಪೀರ್ದೊಡಱೆಯಾಗದ ಸನ್ಮಧು ಮಂದಮಾರುತಂ
ಸೆಳೆದೊಡೆ ಕುಂದದಿರ್ಪ ನಱುಗಂಪಲರೊಳ್ ಗಿಳಿವಿಂಡು ಪೀರ್ದೊಡಂ
ಕಳಿಯದೆ ತುಂಬಿ ತೋರ್ಪ ರಸವಾ ಪೊಸಪಣ್ಣೊಳನೇಕ ಕೋಕಿಳಾ
ವಳಿ ಮುಱಿದೊಟ್ಟಿ ಪಿಂಗದ ತಳಿರ್ಕಿಱುಮಾಮರದೊಳ್ಮನೋಹರಂ ೬೧

ದಳು. ೪೯. ಕೋಗಿಲೆಯು ಚಿಗುರಿನಲ್ಲಿದ್ದು ಮೆಲ್ಲಗೆ ಧ್ವನಿಯನ್ನು ಮಾಡಲು, ಅದರ ಹೂವಿನಲ್ಲಿದ್ದುಕೊಂಡು ದುಂಬಿಗಳು ಮೃದುವಾಗಿ ಝೇಂಕರಿಸುತ್ತಿರಲು, ಮಾವೂ ಮತ್ತು ಮಲ್ಲಿಗೆಯೂ ಕೂಡಿ ಹಾಡುತ್ತಿರುವುವೋ ಎಂಬ ಹಾಗೆ ಕಾಣುತ್ತಿರುವುದು. ವ॥ ಅದೂ ಅಲ್ಲದೆ ೬೦. "ಎಲೈ ಎಳೆಯ ಮಾವಿನಮರವೇ (ನಿನ್ನಲ್ಲಿ ಹಣ್ಣು ಮುಗಿದರೆ) ಗಿಳಿಗಳು ಬೇರೊಂದು ಹಣ್ಣನ್ನು ಕಚ್ಚಿತಿನ್ನುತ್ತವೆ. ಅಳಿಗಳು (ದುಂಬಿಗಳು) ಮತ್ತೊಂದು ಹೂವಿನಲ್ಲಿ ಕಳಿತ ಮಕರಂದವನ್ನು ಕುಡಿಯುವುವು. ಈ ಕೋಗಿಲೆಯ ಮರಿಗೆ ನೀನಲ್ಲದೆ ರಕ್ಷಕರು ಇನ್ನಾರಿದ್ದಾರೆ ? ನಿನ್ನಲ್ಲಿ ತಳಿರು ಎಂದು ಕಾಣಿಸೀತೆಂದು ಮಧುಮಾಸ ಬರುವುದನ್ನೇ ಕಾಯುತ್ತ ಇದುವರೆಗೆ ಮೌನವ್ರತವನ್ನು ಕೈಗೊಂಡಿತ್ತು. ಆದ್ದರಿಂದ ಇದನ್ನು ಹತ್ತರಲ್ಲೊಂದೆಂದು (ಸಾಮಾನ್ಯ ದೃಷ್ಟಿಯಲ್ಲಿ) ನೋಡಬೇಡ" ಎನ್ನುತ್ತ ಮನ್ಮಥನು ಕೋಗಿಲೆಯ ಮರಿಯನ್ನು ಅದರ ಕೈಗೆ ಇತ್ತನು ! ವ॥ ಮತ್ತು ೬೧. ದುಂಬಿಗಳೆಲ್ಲ ಕುಡಿದರೂ ಕೊರತೆಯಾಗದ ಒಳ್ಳೆಯ ಮಕರಂದವೂ, ಹೂವುಗಳಲ್ಲಿ ಮಂದಮಾರುತವು ಸೆಳೆದರೂ ಕಡಿಮೆಯಾಗದ ಸುವಾಸನೆಯೂ, ಗಿಳಿಗಳ ಸಮೂಹವು ಹೀರಿದರೂ ಹಣ್ಣಿನಲ್ಲಿ ಕಡಿಮೆಯಾಗದ ತುಂಬಿಕೊಂಡು ತೋರುವ ಹಣ್ಣಿನ ರಸವೂ, ಕೋಗಿಲೆಗಳ ಸಮೂಹವು ಮುರಿದು ರಾಶಿಮಾಡಿದರೂ ಹಿಂಗದೆ ಇರುವ ಚಿಗುರುಗಳೂ

ಕಂ॥ ಅಲಗೊರ್ಂಬಿನಲ್ಲಿ ತುಂಬಿಗ
ಳುಲಿ ಮೊಳೆವೆರ್ಳೆದಳಿರನಾಂತ ಕೊಂಬುಗಳೊಳ್ಕೋ
ಗಿಲೆಗಳ ಕಳರುತಿ ಪಣ್ಗಳ್
ನೆಲಸಿದ ನಿಡುಗೊಂಬಿನಲ್ಲಿ ಪುರುಳಿಗಳ ರವಂ ೬೨

ಅಳಿಗಳೊಡನೊಡನೆ ದನಿಗುಡೆ
ಗಿಳಿಗಳ್ನಲಿನಲಿದು ಮಾರವೀರನ ಬಿರಿದಾ
ವಳಿಯಂ ಪಾಡುತ್ತಾಡಿವು
ವೆಳಗಾಳಿಗೆ ತೊನೆವ ತಳಿರ್ಗಳುಯ್ಯಲನಾಗಳ್ ೬೩

ವ॥ ಇಂತೊಪ್ಪುವ ಮಧುಮದನ ಮನೋಹರಂಗಳಾದ ಮಾಮರಂಗಳಲ್ಲದೆಯುಂ

ಕಂ॥ ಅಸುಗೆ ತಳಿರ್ತು ವಿಯೋಗಿಗ
ಳಸುಗೆ ಕರಂ ಮುಳಿಗುಮೆಂದು ಮುಳಿದೊದೆಯೆ ವಧೂ
ವಿಸರಂ ತತ್ಪದಯಾವಕ
ರಸಮಮರ್ದವೊಲೆಸೆದುದದಟ ಚೆಂದಳಿರ್ದುಱುಗಲ್ ೬೪

ಸಿರಿವುಳ್ಳೊಡಳಿಗಳಿಂದೀ
ವರದೊಳ್ಬಿಡದಿರ್ದು ತೊಲಗೆ ತೊಲಗುತೆ ವಿಕಚಾಂ
ಬುರುಹದೊಳೆ ನೆಲಸೆ ನೆಲಸಿದೆ
ವರಕೆ ಗತಶ್ರೀಕನಪ್ಪನಂ ಸೇವಿಪರಾರ್ ೬೫

ಉಳ್ಳುದಾಗಿ ಎಳೆಯ ಮಾವಿನಮರವು ಮನೋಹರವಾಗಿತ್ತು. ೬೨. ಹೂ ತುಂಬಿರುವ ರೆಂಬೆಗಳಲ್ಲಿ ತುಂಬಿಗಳ ಝೇಂಕಾರವೂ, ಗೊಂಚಲು ಗೊಂಚಲಾಗಿ ತುಂಬಿರುವ ಎಳೆ ಚಿಗುರಿನ ಕೊಂಬೆಗಳಲ್ಲಿ ಕೋಗಿಲೆಗಳ ಅವ್ಯಕ್ತ ಮಧುರಧ್ವನಿಯೂ, ಹಣ್ಣುಗಳಿಂದ ತುಂಬಿರುವ ಉದ್ದವಾದ ಕೊಂಬೆಗಳಲ್ಲಿ ಗಿಳಿಗಳ (ಚಪ್ಪರಣೆಯ) ಧ್ವನಿಯೂ (ಉಂಟಾಗುತ್ತಿತ್ತು). ೬೩. ದುಂಬಿಗಳು ಒಡನೊಡನೆ ಝೇಂಕಾರಧ್ವನಿ ಮಾಡುತ್ತಿರಲು, ಗಿಳಿಗಳು ನಲಿನಲಿದು ಮನ್ಮಥನೆಂಬ ವೀರನ ಬಿರುದಾವಳಿಯನ್ನು ಉಗ್ಘಡಿಸುತ್ತಿರಲು, ಎಳೆಗಾಳಿಗೆ ತೊನೆದಾಡುವ ತಳಿರುಗಳೆಂಬ ಜೋಕಾಲಿಯನ್ನು ಆಡಿದವು. ವ॥ ಹೀಗೆ ಒಪ್ಪುತ್ತಿರುವ ವಸಂತ ಮತ್ತು ಮನ್ಮಥರುಗಳ ಮನೋಹಾರಿಗಳಾದ ಮಾಮರಗಳಲ್ಲದೆಯೂ, ೬೪. ಅಶೋಕವೃಕ್ಷಗಳು ಚಿಗುರಿ ವಿರಹಿಗಳಾದವರ ಪ್ರಾಣಹಾನಿಯನ್ನು ಮಾಡುವುವು ಎಂದು ಕೋಪಗೊಂಡು ಸ್ತ್ರೀಸಮೂಹವು ಒದೆಯಲಾಗಿ, ಅವರ ಕಾಲಿನಲ್ಲಿರುವ ಅಲಕ್ತ ರಸವು ಹತ್ತಿದ ಹಾಗೆ ಅದರ ಕೆಂಪಾದ ಚಿಗುರಿನ ಗೊಂಚಲು ಶೋಭಿಸಿತು. ೬೫. ನೈದಿಲೆಗಳಲ್ಲಿ ಸಿರಿಯಿದ್ದಾಗ (ಅರಳಿ ಮಕರಂದದಿಂದ ಕೂಡಿದ್ದ ಸಿರಿಯಿದ್ದಾಗ) ಭ್ರಮರಗಳು ಅದನ್ನು ತ್ಯಜಿಸದೆ ಇರುತ್ತವೆ. ಆ ಸಿರಿಯು ಹೋಗಲು ತಾವೂ ತೊಲಗುತ್ತವೆ. ಆ ಸಿರಿಯು ಅರಳಿದ ಕಮಲದಲ್ಲಿ ನೆಲಸಲು ದುಂಬಿಗಳು ಅಲ್ಲಿಯೆ ಹೋಗಿ ನೆಲಸಿದುವು.

ಬನಸಿರಿ ಸುರವರಲೋಕದ
ಬನಸಿರಿಗುಱಿ ತೋಱಲೆಂದು ನಿಜವಿಭವಮನಂ
ದನುನಯದಿಂ ಕಟ್ಟಿದ ಕಾಂ
ಚನತೋರಣಮೆನಿಸಿ ಕರ್ಣಿಕಾರಂ ಮೆಱಗುಂ ೬೬

ಚಂ॥ ಇದು ಮಧುದತ್ತಮೌಕ್ತಿಕವೊ ಮಂಜುಳಚೂತ ಭುಜಂಗಸಂಗದಿಂ
ದೊದವಿದ ಘರ್ಮವಾರಿಕಣವೋ ರತಿದೇವಿ ವಿನೋದದಿಂದೆ ಸೂ
ಸಿದ ಜಳಯಂತ್ರ ಚಂದನಗತೋದಕ ಶೀಕರವೋ ಮದಾಳಿವೃಂ
ದದ ಕೃತಪುಣ್ಯದೊಂದುರುಳಿಯೋ ಪೊಸಮಲ್ಲಿಗೆ ತಾಳ್ದ ಮೊಗ್ಗೆಯೋ ೬೭

ವ॥ ಎನಿಸಿ ರಂಜಿಸೆ

ಕಂ॥ ಕಳೆದುದು ಮಧುಮದಮಧುಪಂ
ಗಳ ವಿಪುಳ ಭ್ರಾಂತಿಯಂ ನಿಜಪ್ರಸವರಸಂ
ಗಳಿನಾ ವಿಚಕಿಲಲತೆ ನಿ
ರ್ಮಳರೆಡೆಗೈದಿದೊಡೆ ಮಾಡರೇ ಪರಹಿತಮಂ ೬೮

ಅರರೇ ! ಶ್ರೀರಹಿತನನ್ನು ಆಶ್ರಯಿಸುವವರು ಯಾರಿದ್ದಾರೆ ? ೬೬. ಆ ಉದ್ಯಾನವನ ಲಕ್ಷ್ಮಿಯು ಇಂದ್ರಲೋಕದ ವನದ ಸಿರಿಗೆ ತನ್ನ ವೈಭವವನ್ನು ತೋರಿಸಲೆಂದು ಸಂತೋಷ ದಿಂದ ಕಟ್ಟಿದ ಬಂಗಾರಮಯವಾದ ತೋರಣವೋ ಎನ್ನುವ ಹಾಗೆ ಕರ್ಣಿಕಾರ ವೃಕ್ಷವು ಪ್ರಕಾಶಿಸುತ್ತಿತ್ತು. ೬೭. ಕಾಣುವ ಈ ಉದ್ಯಾನವು ವಸಂತನೆಂಬ ರಾಜನು ಕೊಟ್ಟ ಮೌಕ್ತಿಕವೋ, ಮನೋಹರನಾದ ಮಾಮರನೆಂಬ ವಿಟನ ಸಂಯೋಗದಿಂದ ಉಂಟಾದ ಬೆವರಿನ ಹನಿಯೋ, ರತಿದೇವಿಯು ವಿನೋದದಿಂದ ಪಿಚಕಾರಿಯಿಂದ ಹೊಡೆದ ಸುಗಂಧಿ ಯಾದ ನೀರಿನ ಕಣವೋ, ಮದಿಸಿದ ದುಂಬಿಗಳ ಸಮೂಹವು ಮಾಡಿದ ಪುಣ್ಯಫಲದ ರಾಶಿಯೋ, (ಅಥವಾ) ಮಲ್ಲಿಗೆಯ ಬಳ್ಳಿಯು ಹೊಸದಾಗಿ ತಾಳಿದ ಮೊಗ್ಗೆಯೋ (ಎಂಬಂತೆ ಮಲ್ಲಿಗೆಯ ಬಳ್ಳಿಯು ಮೊಗ್ಗುಗಳನ್ನು ಬಿಟ್ಟಿತ್ತು) ವ|| ಹೀಗೆ ರಂಜಿಸಿರಲಾಗಿ ೬೮. ಆ ಮಲ್ಲಿಗೆಯ ಬಳ್ಳಿಯು ಮಕರಂದದ ಮದವನ್ನು ಬಯಸುವ ದುಂಬಿಗಳ ಮದ್ಯ ಪಾನದಿಂದ ಮತ್ತೇರಿದ ಹೊಡಗುಡುಕರ, ಹೆಚ್ಚಿನ ಅಲೆದಾಟವನ್ನು ಹೆಚ್ಚಾದ ತಲೆ ತಿರು ಗುವ ಭ್ರಮೆಯನ್ನು ತನ್ನ ಹೂಗಳಿಂದ ಹೋಗಲಾಡಿಸಿತು. ನಿರ್ಮಲರಾದವರ ಬಳಿಗೆ ಹೋದರೆ ಅವರು ಪರೋಪಕಾರವನ್ನು ಮಾಡದಿರುವರೆ? (ಮಲ್ಲಿಗೆಬಳ್ಳಿಯಲ್ಲಿ ಯಥೇಷ್ಟ ವಾಗಿ ಮಕರಂದವು ದೊರಕಿದ್ದರಿಂದ ದುಂಬಿಗಳು ಅಲೆದಾಟವನ್ನು ನಿಲ್ಲಿಸಿದವೆಂದು

ಮ॥ ತರುಣಾಮ್ರಕ್ಕೊಳಗಾದವೊಲ್ಲೊಲಗಳೆಂದುಂ ಬಂದ ತಂಗಾಳಿಯಂ
ಭರದಿಂದಪ್ಪುವಳಲ್ಲಿ ಜಾರೆ ವಸನಂಬೋಲ್ ಜೀರ್ಣಪರ್ಣಂ ಸುಮಾ
ಧರಮಂ ಚುಂಬಿಪ ತುಂಬಿಗೀವಳಿವಳಾಗಳ್ಪಾಟಳೀಸಾರಿ ಪಾ
ದರಿಯೆಂದೊಳ್ಪೆಸರಿಟ್ಟನೀಕೆಗಜನೆಂದಂಗೋದ್ಭವಂ ಮೆಚ್ಚುವಂ ೧೯

ವ॥ ಆ ನಂದನಾಂತರಾಳದಲ್ಲಿ

ಚಂ॥ ತಿಳಿಗೊಳದಲ್ಲಿ ಸುತ್ತಿ ಸುಳಿದೆತ್ತಿ ಸರೋಜಪರಾಗಪೂಗಮಂ
ಘಳಿಲನೆ ಪೊಳ್ತು ಬರ್ಪೆಡೆಯೊಳುಯ್ಯಲನಾಡುವ ಗಾಡಿಕಾರ್ತಿಯ
ರ್ಕಳ ಪೊಜವಾರ್ಗಳಪ್ಪಳಿಸೆ ತೊಪ್ಪನೆ ಬೀಳ್ದಿಲರೆಯ್ದೆ ನೊಂದು ಸಂ
ಚಳಗತಿಯಿಂ ಮದಾಳಿನಿನದಚ್ಛಲದಿಂ ನರಳುತ್ತೆ ಬರ್ಪನಂ ೨೦

ಮ॥ ಗಿಳಿವಾತಿಂದುಪಚಾರಮಾಡಿ ತಳಿರ್ಗೈಯಿಂದಿತ್ತ ಬಾರೆಂದು ಕೋ
ಕಿಳಚಂಚೂದಳಿತೋರುಕೋರಕರಸಸ್ನೇಹಂಗಳಿಂ ನೀವಿ ನಿ
ಷ್ಪಾಳ ಭೃಂಗೀರವದಿಂದೆ ಮಂತ್ರಿಸಿ ರಸಾಲಂ ರಕ್ಷೆಗೈದಾತನಂ
ಕೆಳೆಗೊಂಡಂ ತನಗಾತನಂದೆಸಗೆ ಲೇಸಂ ಮುಯ್ಯನೀವಂತೆವೋಲ್ ೨೧

ಅಭಿಪ್ರಾಯ)[1] ೧೯. ಈ ಪಾಟಲಿ (ಪಾದರಿ) ಯೆಂಬ ನಾರಿಯು ತರುಣನಾದ ಚೂತ ವೃಕ್ಷಕ್ಕೆ ಒಲಿದು ಬೇರೆಡೆಗೆ ಹೋಗುವುದಿಲ್ಲ. ಆದರೆ ಬರುತ್ತಿರುವ ತಂಗಾಳಿಯನ್ನು ಭರದಿಂದ ಆಲಿಂಗಿಸುವಳು. ಆಗ ಹಣ್ಣೆಲೆಗಳೆಂಬ ಉಟ್ಟ ವಸ್ತ್ರವು ಜಾರುವುದು. ಪುಷ್ಪ ಗಳೆಂಬ ತನ್ನ ತುಟಿಯನ್ನು ಭ್ರಮರಗಳಿಗೆ ಚುಂಬಿಸಲು ಕೊಡುವಳು. ಆದ್ದರಿಂದ ಈ ಪಾಟಲಿಯು ಹಾದರ (ವ್ಯಭಿಚಾರ) ವನ್ನು ಮಾಡುತ್ತಿರುವುದರಿಂದ ಇದಕ್ಕೆ ಬ್ರಹ್ಮನು 'ಪಾದರಿ' ಎಂದು ಒಪ್ಪುವ ಹೆಸರಿಟ್ಟನೆಂದು ಮನ್ಮಥನು ಬ್ರಹ್ಮನನ್ನು ಮೆಚ್ಚುವನು! ವ|| ಆ ನಂದನದ ಒಳಭಾಗದಲ್ಲಿ ೨೦. ತಿಳಿನೀರಿನ ಸರೋವರದಲ್ಲಿ ವಾಯುವು ಸುತ್ತಾಡಿ ಸುಳಿದಾಡಿ, ಅಲ್ಲಿರುವ ಕಮಲಗಳ ಪರಾಗದ ಸಮೂಹವನ್ನು ಹೊತ್ತುಕೊಂಡು ತಟ್ಟನೆ ಬರುತ್ತಿತ್ತು. ಅಲ್ಲಿಯೇ (ಸಮೀಪದಲ್ಲಿ) ಉಯ್ಯಾಲೆಯನ್ನು ಆಡುತ್ತಿರುವ ಸುಂದ ರಾಂಗನೆಯರ ಪೃಷ್ಟಭಾಗಗಳು ಅದನ್ನು ಅಪ್ಪಳಿಸಿದವು. ಆಗ ದೊಪ್ಪೆಂದು ಬಿದ್ದ ಈ ಗಾಳಿಯು ತುಂಬಾ ನೊಂದುಕೊಂಡು ನರಳುತ್ತಿದೆಯೋ ಎಂಬಂತೆ ಭ್ರಮರಗಳ ಧ್ವನಿ ಯುಂಟಾಗುತ್ತಿತ್ತು. ಆದ್ದರಿಂದ ಗಾಳಿ ನಡುಗುವ ನಡಿಗೆಯಿಂದ ಬರುತ್ತಿತ್ತು. (ಅಂದರೆ ಗಾಳಿಯು ಶೈತ್ಯ, ಸೌರಭ್ಯ, ಮಾಂದ್ಯಯುತವಾಗಿತ್ತೆಂದು ಭಾವ) ೨೧. (ಹೀಗೆ ನೋವಿನಿಂದ ನರಳುತ್ತ ಬರುತ್ತಿರುವ ಗಾಳಿಯನ್ನು) ಮಾವಿನಮರವು ತನಗೆ ಹಿಂದೆ ಉಪ ಕಾರಮಾಡಿದನೆಂದು ಸ್ಮರಿಸಿಕೊಂಡು, ಆ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡು ತ್ತಿದೆಯೋ ಎನ್ನುವಹಾಗೆ ಗಿಳಿಗಳ ಮಾತಿನಿಂದ ಉಪಚಾರಮಾಡಿ, ತಳಿರೆಂಬ ಕೈಯಿಂದ ಇತ್ತ ಬಾ ಎಂದು ಕರೆದು, ಕೋಗಿಲೆಗಳು ತಮ್ಮ ಕೊಕ್ಕಿನಿಂದ ಕುಕ್ಕಿ ಸುರಿಸಿದ ದಪ್ಪನೆಯ

1. ಟಿಪ್ಪಣಿ : ಮಧುಪ=ದುಂಬಿ ; ಹೆಂಡಗುಡುಕ. ಭ್ರಾಂತಿ=ಅಲೆದಾಟ ; ಭ್ರಮೆ. (ರಂ)

ಉ॥ ಮಾವಿನೊಳೇಱಿ ಮಲ್ಲಿಗೆಗೆ ಪಾಱಿ ಮರಂದದೊಳಳ್ದು ಜಾಱಿ ಕೆಂ
ದಾವರೆಗೋಡಿ ಕೇಸರದೊಳಾಡಿ ಕರಂ ಮಧುವೀಂಟಿ ಪಾಡಿ ಮೆ
ಲ್ಲಾವರಮೆತ್ತಿ ಮಾಧವಿಯನೊತ್ತಿ ಮಹೋತ್ಸವದಿಂದೆ ಸುತ್ತಿ ಭೃಂ
ಗಾವಳಿ ಧೂಳಿಯುಕ್ತ ಕುಸುಮಾಳಿಯೊಳಾಂತುದು ಚಾರುಕೇಳಿಯಂ ೭೨

ವ॥ ಮತ್ತಮತನುತೇಜದೊಡನೆ ಚಂಪಕನಿಕಾಯಂ ಪೆಂಪುವಡೆಯೆ ರತಿಯ ಮೊಗದೊಡನೆ ಸುರಯಿ ಸೊಂಪುವಡೆದಲರೆ ಜತಿಗಳ ಧೃತಿಯೊಡನೆ ಜಾತಿ ಬೀತಿರೆ ಮುನಿದಿನಿಯಳ ಕಾಲ್ಗೆಱಗಿ ಪಲ್ಗಿಱಿವ ಕಾಮಿಜನವದನದೊಡನೆ ದಾಡಿಮಂ ಬಿಱಿಯೆ ಪಥಿಕರ ಮುಖದೊಡನರನೇಱಿಲ್ ಪಣ್ತು ಕಪ್ಪಲಿಸೆ ಕೊಳದ ಜಳಂಗಳೊಡನೆ ತಿಳಿವೆಳ್ದಿಂಗಳುಜ್ವಳಿಸೆ ವಿರಹಿ ಸಂತಾಪದೊಡನೆ ತಪನದ್ಯುತಿ ಕಡುವಿಸುಪುದಳೆದು ವಿಜೃಂಭಿಸೆ ಬಂದ ಭುವನಜನಮನೋಜ್ಞಮಾದ ಮಧುಮಾಸದಲ್ಲಿ

ಚಂ॥ ಅಳಿಮುಳಿಸೆಂಬ ಪಣ್ಣೆಲೆ ಕಳಲ್ದುದು ಸದ್ರತಿಯುತ್ಸವಾಂಕುರಂ
ಮೊಳೆತುದು ರಾಗಮೆಂಬ ತಳಿರೊತ್ತಿದುದುನ್ಮದ ಕುಟ್ಮಳಾಳಿ ಸಂ
ಗಳಿಸಿದುದಲ್ಲಿ ಮೋಹಕುಸುಮಂ ಪೊಸತಾಗಲರ್ದತ್ತು ಸಂಗ ಸ
ತ್ಫಳಮುಮರ್ದತ್ತು ಕಾದಲ ಬನಂಗಳೊಳೆಯ್ದೆ ಮನೋಜಮಾರುತಂ ೭೩

ಮೊಗ್ಗುಗಳ ರಸದಿಂದ ನೀವಿಸಿ, (ನರಗಳನ್ನು ತಿಕ್ಕಿ ಕೂಡಿಸಿ), ದುಂಬಿಗಳ ಝೇಂಕಾರರವದಿಂದ ಮಂತ್ರ ಹಾಕಿಸಿ ರಕ್ಷಣೆಮಾಡಿ ಆತನ ಸ್ನೇಹಮಾಡಿದನು. ೭೨. ಭೃಂಗಕುಲವು ಉದ್ಯಾನವನದಲ್ಲಿ ಮಾವಿನಮರದ ಮೇಲೆ ಏರಿ, ಮಲ್ಲಿಗೆ ಇದ್ದಲ್ಲಿಗೆ ಹಾರಿ, ಮಕರಂದ ರಸದಲ್ಲಿ ಮುಳುಗಿ, ಅಲ್ಲಿಂದ ಜಾರಿಕೊಂಡು ಕೆಂದಾವರೆಯಿದ್ದಲ್ಲಿಗೆ ಓಡಿಹೋಗಿ, (ಆ ಕಮಲದ) ಕೇಸರಗಳಲ್ಲಿ ಆಡಿ, ಚೆನ್ನಾಗಿ ಮಕರಂದವನ್ನು ಕುಡಿದು ಹಾಡುತ್ತ, ಮೆಲ್ಲಗೆ ಝೇಂಕಾರಶಬ್ದವನ್ನೆತ್ತಿ, ಮಾಧವೀಪುಷ್ಪವನ್ನು ಒತ್ತಿ, ಅತ್ಯುತ್ಸಾಹದಿಂದ ಸುತ್ತಾಡಿ, ಪರಾಗದಿಂದ ತುಂಬಿರುವ ಹೂವುಗಳಲ್ಲಿ ಮನೋಹರವಾದ ಕೇಳಿಯನ್ನು ಮಾಡುತ್ತಿತ್ತು. ವ|| ಮತ್ತು ಮನ್ಮಥನ ಕಳೆಯೊಡನೆ ಸಂಪಿಗೆಯ ಸಮೂಹವು ಅಭಿವೃದ್ಧಿ (ಘನತೆ) ಯನ್ನು ಪಡೆಯಿತು. ರತಿದೇವಿಯ ಮುಖದೊಡನೆ ಸುರಗಿಯಮರವು ಸೊಂಪಾಗಿ ಅರಳಿತು. ಯತಿಗಳ ಧೈರ್ಯದೊಡನೆ ಜಾಜಿಯ ಹೂ ಬೀತುಹೋಯಿತು. ಕೋಪಗೊಂಡ ಪ್ರೇಯಸಿಯ ಕಾಲಿಗೆ ನಮಸ್ಕರಿಸಿ ಹಲ್ಲನ್ನು ಕಿರಿಯುವ ಕಾಮುಕಜನಮುಖದೊಡನೆ ದಾಳಿಂಬೆಯು ಬಿರಿತಿತು. ದಾರಿಹೋಕರ ಮುಖದೊಡನೆ ನೇರಿಲೆಯ ಮರ ಹಣ್ಣು ಬಿಟ್ಟು ಕಪ್ಪಾಯಿತು. ಸರೋವರದ ನೀರಿನೊಡನೆ ತಿಳಿಬೆಳದಿಂಗಳು ಉಜ್ವಲಗೊಂಡಿತು. ವಿರಹಿಜನರ ಸಂತಾಪದೊಡನೆ ಸೂರ್ಯನ ಕಿರಣಗಳು ಹೆಚ್ಚಾದ ಬಿಸುಪನ್ನು ಹೊಂದಿ ಪ್ರಬಲಿಸುತ್ತಿರಲು ಲೋಕದ ಜನಕ್ಕೆ ಮನೋಹರವಾಗಿ ಬಂದ ಆ ವಸಂತಕಾಲದಲ್ಲಿ, ೭೩. ಸ್ತ್ರೀ ಪುರುಷರೆಂಬ ಬನಗಳಲ್ಲಿ ಮನ್ಮಥನೆಂಬ ಮಾರುತವು ಬರಲಾಗಿ, ಅವರಲ್ಲಿರುವ ಹುಸಿಮುನಿಸು ಎಂಬ ಹಣ್ಣೆಲೆ ಉದುರಿತು. ಶ್ರೇಷ್ಠ ರತಿದೇವಿಯೆಂಬ ಉತ್ಸಾಹದ ಮೊಳಕೆಯೊಡೆಯಿತು. ಅನುರಾಗವೆಂಬ ಚಿಗುರು ಚಿಗಿತಿತು. ಮದನೋನ್ಮಾದವೆಂಬ

ವ॥ ಆದಲ್ಲದೆಯುಮಲ್ಲಿ

ಚಂ॥ ಕೊನರನೆ ಕೊಕ್ಕಿನಿಂ ಸೆಳೆದು ಖಂಡಿಸಿ ಸೋರ್ವ ರಸಪ್ರವಾಹಮಂ
ಮನಮೊಸೆದೀಂಟಿ ಗಂಟಲೊಳೆ ನುಣ್ದನಿ ಪೊಣ್ಮೆ ವಿಯೋಗಿವೀಥಿಜೀ
ವನಮುದು ಕಂಪನಂಗೊಳೆ ಪುಗಿಲ್ ಪುಗಿಲೆಂಬ ಪಿಕಸ್ವನಂಗಳಂ
ಮನಸಿಜನೊಲ್ದು ಕೇಳ್ದು ಭುಜಪೊಯ್ದು ಬೆರಲ್ಮಿಡಿದಾ ವಸಂತನಂ ೭೪

ಮ॥ ಪೊಗಳ್ದಿಂದಂ ಚತುರಂಗಸೈನ್ಯಮನಿತಂ ನೀಂ ಕೂಡು ನೀಡಿತ್ತ ಮೂ
ಜಗಮಂ ಮೋಹಿಪ ಪುಷ್ಪಚಾಪಸುಮನೋಬಾಣಂಗಳಂ ಕೈಗೆ ಯೋ
ಗಿಗಣಂ ಮಾರ್ಮಲೆತಿರ್ಪುದೆತ್ತ ಬಿಡದತ್ತಲ್ಪೋಪಮೇಳೆಂದು ಸಂ
ಪಗೆಜೋಡಂ ಮಿಗೆ ತೊಟ್ಟು ದಿಗ್ವಿಜಯಯಾತ್ರಾರಂಭಮಂ ತಾಳ್ದಿದಂ ೭೫

ವ॥ ಆಗಳ್

ಪೃಥ್ವಿ॥ ವಸಂತವನಪಾಲಕಂ ತಳಿರ ತೋರಣಶ್ರೇಣಿಯಿಂ
ರಸಂಬಿಡಿದ ಪಣ್ಗಳಿಂದಲರ್ದ ಪುಷ್ಪಗುಚ್ಛಂಗಳಿಂ
ಮುಸುಂಕಿ ವನಮೆಲ್ಲಮಂ ಕರೆದು ಕಾಮನಂ ಪ್ರೇಮದಿಂ
ಜಸಂಬಡೆದ ಬಾಣಮಂ ಪಿಡಿದು ಕಾಣ್ಕೆಯಂ ನೀಡಿದಂ ೭೬

ಮೊಗ್ಗುಗಳ ಸಾಲು ಸೇರಿತು. ಮೋಹವೆಂಬ ಹೂವು ನೂತನವಾಗಿ ಅರಳಿತು. ಸಂಯೋಗವೆಂಬ ಒಳ್ಳೆಯ ಹಣ್ಣು ಉಂಟಾಯಿತು. ವ॥ ಅದೂ ಅಲ್ಲದೆ ಅಲ್ಲಿ, ೭೪. ಚಿಗುರನ್ನು ತನ್ನ ಚಂಚುವಿನಿಂದ ಸೆಳೆದು ಅದನ್ನು ಕತ್ತರಿಸಿ, ಸೋರುತ್ತಿರುವ ರಸಪ್ರವಾಹವನ್ನು ಸಂತೋಷದಿಂದ ಕುಡಿದು, ಗಂಟಲಿನಿಂದ ಮಧುರವಾದ ಧ್ವನಿಯು ಹೊರಹೊಮ್ಮಲು, ವಿಯೋಗಿ ಸಮೂಹದ ಜೀವನವೇ ನಡುಗುವ ಹಾಗೆ ಪುಗಿಲ್, ಪುಗಿಲ್ ಎಂದು (ಇದರಲ್ಲಿ ಪ್ರವೇಶಿಸಬೇಡಿ ಪ್ರವೇಶಿಸಬೇಡಿ ಎಂದು) ಧ್ವನಿಮಾಡುತ್ತಿರುವ ಕೋಗಿಲೆಗಳ ಧ್ವನಿಯನ್ನು ಮನ್ಮಥನು ಪ್ರೀತಿಯಿಂದ ಕೇಳಿ, ತನ್ನ ಭುಜಗಳನ್ನು ತಟ್ಟಿಕೊಳ್ಳುತ್ತ, ಬೆರಳುಗಳನ್ನು ಮಿಡಿದುಕೊಳ್ಳುತ್ತ, ಆ (ಚತುರಂಗಬಲ ಸಮೇತನಾಗಿ) ಬಂದಂಥ ವಸಂತಮಾಸವೆಂಬ ಪುರುಷನನ್ನು ೭೫. ಹೊಗಳುತ್ತ "ನೀನು ಈ ಎಲ್ಲ ಚತುರಂಗಬಲವನ್ನೂ ಕೂಡಿಕೊಂಡಿರು. ಮೂರುಲೋಕಗಳನ್ನೂ ಮೋಹಗೊಳಿಸುವಂಥ ಹೂವಿನ ಬಿಲ್ಲನ್ನೂ, ಐದೂ ಪುಷ್ಪಬಾಣಗಳನ್ನೂ ಇತ್ತ ನನ್ನ ಕೈಗೆ ಕೊಡು. ಯೋಗಿಗಳ ಸಮೂಹವು ನಮಗೆ ಮಾರ್ಮಲೆದು ನಿಂತಿದೆ. (ಅವರನ್ನು) ಎತ್ತಕಡೆಗೂ ಹೋಗಗೊಡದಂತೆ ಮಾಡೋಣ. ಅವರಿದ್ದಲ್ಲಿಗೆ ಹೋಗೋಣ ಏಳು" ಎಂದು ಸಂಪಗೆ ಹೂವೆಂಬ ಕವಚವನ್ನು ತೊಟ್ಟು ದಿಗ್ವಿಜಯದ ಯಾತ್ರೆಗೆ ಆರಂಭಮಾಡಿದನು. ವ॥ ಆಗ, (ಹೀಗೆ ಮನ್ಮಥನು ವಿಜಯ ಯಾತ್ರೆಗೆ ಹೊರಡುವ ಸಮಯದಲ್ಲಿ) ೭೬. ವಸಂತನೆಂಬ ವನಪಾಲಕನು ತಳಿರುಗಳೆಂಬ ತೋರಣದ ಸಾಲುಗಳನ್ನು, ರಸಭರಿತವಾದ ಹಣ್ಣುಗಳಿಂದ ಅರಳಿದ ಹೂವಿನ ಗೊಂಚಲುಗಳಿಂದ ಅರಣ್ಯವನ್ನೆಲ್ಲ ಅಲಂಕಾರಗೊಳಿಸಿ, ವಿಶ್ವಾಸದಿಂದ ಮನ್ಮಥನನ್ನು ಬರಮಾಡಿಕೊಂಡು, ಯಶಸ್ಸನ್ನು ಪಡೆದಂಥ ಬಾಣವನ್ನು

ವ॥ ಇಂತು ವಿಶ್ವಜನಮನಮಂ ಬನಮನೊರ್ವೆ ಸೊಂಪೇಱಿಸುತ್ತುಂ ಬಂದ ಬಸಂತ ಮಾಸದೊಳೊಂದು ವಾಸರದುಷಃಕಾಲದೊಳುಮಾಕಾಂತನಂ ಪೂಜಿಸಿದನಂತರಂ

ಮ॥ಸ್ರ॥ ರಮಣೀಸಸ್ಮೇರವಕ್ತ್ರಾಂಬುರುಹವಿಸರದೊಳ್ ಕಾಮಿನೀದೋರ್ಲತಾ ವಿ
ಭ್ರಮದೊಳ್ಕಾಂತಾಕಚಾಳಿಪ್ರಚಯದೊಳಬಳಾಂಘ್ರಿಪ್ರವಾಳೌಘದೊಳ್ ಚಂ
ದ್ರಮುಖೀ ಸಂಗೀತ ಚಂಚತ್ಪಿಕಕಳರುತಿಯೊಳ್ಮಾನಿನೀಮಂದಹಾಸೋ
ದ್ಗಮದೊಳ್ಮಾನಿರ್ದನಾಸ್ಥಾನದೊಳತುಳವನಸ್ಪರ್ಧಿಯೊಳ್ಭೂವಸಂತಂ ೭೭

ಉತ್ಸಾಹ॥ ಕುಂದ ಮಂದಹಾಸ ಮಂಜುಳಾಂಬುಜಪ್ರಭಾನನೇ
ಚಂದನೇಂದುಗೌರಶಂಕರಾಂಕಪೀಠಿಕಾಶ್ರಿತೇ
ನಂದಿಶೇಂದಿರಾದಿಶಕ್ತಿ ವಂದಿತಾಂಘ್ರಿಪಂಕಜೇ
ಚಂದವೊಂದೆ ರಕ್ಷಿಸೆನ್ನನಿಂದು ಸರ್ವಮಂಗಳೇ ೭೮

ಗದ್ಯ ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣ ಮಹಾಪ್ರಭಾಪಟಲ ಪರಿವೃತ ಪರಶಿವಶ್ರೀಪಾದನಖಚಂದ್ರಸಾಂದ್ರ ರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯ

(ಅರವಿಂದ ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ ಮೊದಲಾದ ಬಾಣಗಳನ್ನು) ಕೈಯಲ್ಲಿ ಹಿಡಿದು ಕಾಣಿಕೆಯಾಗಿ ನೀಡಿದನು. ವ॥ ಈ ರೀತಿ ವಿಶ್ವದ ಜನರ ಮನಸ್ಸನ್ನೂ ಬನವನ್ನೂ ಒಂದೇ ಸಮಯದಲ್ಲಿ ಸೊಂಪೇರಿಸುತ್ತ ಬಂದಂಥ ವಸಂತಮಾಸದಲ್ಲಿ, ಒಂದು ದಿವಸದ ಪ್ರಾತಃಕಾಲದಲ್ಲಿ ಉಮಾಕಾಂತನಾದ ಪರಮೇಶ್ವರನನ್ನು ಪೂಜಿಸಿದ ಮೇಲೆ, ೭೭. ಅನುಪಮನಾಗಿ ವಸಂತಕಾಲದ ಬನದೊಡನೆ ಸ್ಪರ್ಧಿಸುವವನೋ ಎನ್ನುವಂತೆ ಆಸ್ಥಾನದಲ್ಲಿ ಭೂಮಿಯ ವಸಂತನೆನಿಸಿದ ಆ ರಾಜಶೇಖರನು ಸ್ತ್ರೀಯರುಗಳ ಕಿರುನಗೆಯ ಮುಖಕಮಲ ಸಮೂಹದಿಂದಲೂ, ಹೆಂಗಸರ ಬಾಹುಗಳೆಂಬ ಲತೆಗಳ ವಿನೋದಾದಿಗಳಿಂದಲೂ, ಅಂಗನೆಯರ ಕೂದಲುಗಳೆಂಬ ದುಂಬಿಗಳ ಸಮೂಹದಿಂದಲೂ, ಅಬಲೆಯರ ಅಂಘ್ರಿಗಳೆಂಬ ಚಿಗುರುಗಳಿಂದಲೂ, ಚಂದ್ರನಿಗೆ ಸಮಾನಮುಖವುಳ್ಳ ಸ್ತ್ರೀಯರ ಸಂಗೀತದಂತೆ ಪ್ರಕಾಶಿಸುವ ಕೋಗಿಲೆಗಳ ಕಲಕಂಠಧ್ವನಿಯಿಂದಲೂ, ಮಾನಿನಿಯರ ಮಂದಹಾಸವೆಂಬ ಮಲ್ಲಿಗೆಮೊಗ್ಗುಗಳಿಂದಲೂ ಕೂಡಿದವನಾಗಿ ಇದ್ದನು. ೭೮. ಮಲ್ಲಿಗೆಯಂತಹ ಮಂದಹಾಸವುಳ್ಳವಳೇ, ಮಂಜುಳವಾದ ಕಮಲದ ಪ್ರಭೆಯಂತೆ ಮುಖವುಳ್ಳವಳೇ, ಶ್ರೀಗಂಧದಂತೆ ಚಂದ್ರನಂತೆ ಬಿಳಿಯದಾದ ಶಂಕರನ ತೊಡೆಯೆಂಬ ಆಸನವನ್ನು ಆಶ್ರಯಿಸಿದವಳೇ, ಸ್ತುತ್ಯರಾದ ಲಕ್ಷ್ಮಿ, ಶಕ್ತಿಯರುಗಳಿಂದ ನಮಸ್ಕರಿಸಲ್ಪಡುವ ಪಾದಕಮಲವುಳ್ಳವಳೇ, ಚೆಂದವಾಗಿರುವ ಹಾಗೆ ನನ್ನನ್ನು, ಸರ್ವಮಂಗಳೆಯೇ, ರಕ್ಷಿಸು. ಗದ್ಯ॥ ಈ ಗದ್ಯಪದ್ಯ ರೂಪವಾದ ಪ್ರಬಂಧವು ವಂದಿಸುತ್ತಿರುವ ದೇವತಾಶ್ರೇಷ್ಠರಾದವರುಗಳ ಕಿರೀಟತಟದಲ್ಲಿ ಕೆತ್ತಲ್ಪಟ್ಟ ರತ್ನಸಮೂಹದ ಅಧಿಕವಾದ ಪ್ರಭೆಯ ರಾಶಿಯಿಂದ ಬಳಸಿರುವ ಪರಮೇಶ್ವರನ ಶೋಭಾಯುಕ್ತವಾದ ಪಾದಗಳ ಉಗುರು

ಮಾನ ಸರಸಜನಮಾನಿತೋಭಯಕವಿತಾವಿಶಾರದ ಶ್ರೀ ಷಡಕ್ಷರಿದೇವ ವಿರಚಿತಮಪ್ಪ ರಾಜ ಶೇಖರ ವಿಳಾಸ ವಿಪುಳಪ್ರಬಂಧದೊಳ್ ಹೇಮಂತ ವಸಂತಋತುವರ್ಣನಂ

ಅಂತು ಆಶ್ವಾಸ ೯ಕ್ಕಂ ಪದ ೧೧೦೩ಕ್ಕಂ ಮಂಗಳ ಮಹಾಶ್ರೀ

## ನವಮಾಶ್ವಾಸಂ

ಸಂಪೂರ್ಣಂ

ಗಳೆಂಬ ಚಂದ್ರನ ದಟ್ಟವಾದ ಕಾಂತಿಯೆಂಬ ಬೆಳದಿಂಗಳಿಗೆ ಒಪ್ಪುವ ಚಕೋರಪಕ್ಷಿಯಂತಿರುವವನೂ, ಶೃಂಗಾರಾದಿ ನವರಸಜ್ಞರಾದ ಜನರಿಂದ ಮನ್ನಣೆ ಹೊಂದಿದವನೂ ಆದ ಉಭಯಕವಿತಾವಿಶಾರದ ಶ್ರೀ ಷಡಕ್ಷರಿದೇವನಿಂದ ರಚಿಸಲ್ಪಟ್ಟಿರುವ ರಾಜಶೇಖರ ವಿಳಾಸವೆಂಬ ವಿಸ್ತಾರವಾದ ಗ್ರಂಥದಲ್ಲಿ ಹೇಮಂತ ಮತ್ತು ವಸಂತಋತುವರ್ಣನೆ

## ನವಮಾಶ್ವಾಸ

ಮುಗಿದುದು

# ದಶಮಾಶ್ವಾಸಂ

ಕಂ॥ ಶ್ರೀ ಗಿರಿರಾಜಸುತಾಸುಖ
ಸಾಗರ ರಾಕಾಶಶಾಂಕನಕಳಂಕನ ಶೇ
ಷಾಗಮನುತನಭವಂ ಬಿಡ
ದೀಗೆಮಗೆ ನಿಜಾಂಘ್ರಿಭಕ್ತಿಯಂ ಶಿವಲಿಂಗಂ ೧

ವ॥ ಅಂತುಮಾ ಯುವರಾಜಂ ರಾಜಿಸುತ್ತಿರ್ಪನಮೊರ್ವಂ ದ್ವಾರಪಾಲನಿವಾರಿತಂ ವೇತ್ರಧರನಿವೇದಿತನಾ ಮಹಾಸ್ಥಾನಮಂ ಪೊಕ್ಕು ಪೊಡೆವಟ್ಟು ಕೈಯಂ ಮುಗಿದುನಿಂದು

ಮ॥ಸ್ರ॥ ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ ಪಚ್ಚೆಯಂ ಬಾಳೆವಣ್ಣೊ
ಳ್ಗೊನೆಯಂ ದಾಳಿಂಬವಣ್ಣಂ ಸುರಯಿಯನುರುಚಾಂಪೇಯಮಂ ಚೈತ್ರದೂತೀ
ಘನಗುಚ್ಛವ್ರಾತಮಂ ಪಾಟಳಿಯನೆಸೆವಶೋಕಪ್ರಸೂನಾಳಿಯಂ ಮಾಂ
ಗೊನರಂ ಮಾಧೂಫಳಶ್ರೇಣಿಯನರೆವಿಚಿದಂಭೋಜಮಂ ಕೂರ್ಮೆಯಿಂದಂ ೨

ವ॥ ಅಂತಿತ್ತು ಸಂತಸಂ ಮಿಗೆ

ಚಂ॥ ಮುಗುಳ ತೊಡಂಬೆ ಮಾಧವಿಗೆ ಮಾಮರದೊಳ್ ಕಳಿಕಾಳಿ ಚೆಲ್ವ ಮ
ಲ್ಲಿಗೆಗೆ ಪೊದಳ್ದ ಪೂಗುಡಿ ಪಯೋಜನಿಗುಳ್ಳರಲೀಪ್ರವೃತ್ತ ಸಂ
ಪಗೆಗಲರ್ಜೊಂಪಮುದ್ಗಮದ ಮಂಜರಿ ಪಾಟಳಿಗಾಗೆ ಬಂದನಿಂ
ದಗಣಿತ ಕೋಕಿಳಾಳಿಕುಳಸಂಮದಕಾರಿ ಮನೋಜ್ಞಮಾಧವಂ ೩

೧. ಗಿರಿರಾಜಸುತೆಯಾದ ಪಾರ್ವತಿಯ ಸುಖವೆಂಬ ಸಾಗರಕ್ಕೆ ಪೌರ್ಣಿಮೆಯ ಚಂದ್ರನಂತಿರುವವನೂ, ಕಲಂಕರಹಿತನೂ, ಸಮಸ್ತ ಆಗಮಗಳಿಂದ ಸ್ತುತಿಸಲ್ಪಡುವವನೂ, ಭವರಹಿತನೂ ಆದ ಶಿವಲಿಂಗನು ತನ್ನ ಪಾದದಲ್ಲಿ ಭಕ್ತಿಯನ್ನು ನಮಗೆ ಕೊಡಲಿ. ವ॥ ಆ ರೀತಿಯಲ್ಲಿ ಯುವರಾಜನು ವಿರಾಜಮಾನನಾಗಿರುವಾಗ, ಮೊದಲು ದ್ವಾರಪಾಲನಿಂದ ತಡೆಯಲ್ಪಟ್ಟು, ವೇತ್ರಧಾರಿಯಿಂದ ರಾಜನಿಗೆ ನಿವೇದಿತನಾಗಿ (ಅನುಮತಿಯನ್ನು ಪಡೆದ) ವನಾಧ್ಯಕ್ಷನು ಮಹಾಸ್ಥಾನವನ್ನು ಹೊಕ್ಕು ನಮಸ್ಕಾರ ಮಾಡಿ ಕೈಗಳನ್ನು ಮುಗಿದು ನಿಂತು, ೨. ಮಲ್ಲಿಗೆಯ ಹೂವು, ಪಚ್ಚೆ, ಬಾಳೆ ಹಣ್ಣಿನ ಗೊನೆ, ದಾಳಿಂಬೆಯ ಹಣ್ಣು, ಸುರಗಿ, ಶ್ರೇಷ್ಠ ಸಂಪಿಗೆ, ಮಾವಿನ ಮರದ ಶ್ರೇಷ್ಠವಾದ ಹಣ್ಣುಗಳ ಗೊಂಚಲು, ಪಾದರಿಯ ಹೂವು, ಶೋಭಿಸುವ ಅಶೋಕ ವೃಕ್ಷದ ಹೂ, ಮಾವಿನ ಕೊನರು, ಮಾವಳದ ಹಣ್ಣು, ಅರ್ಧ ಅರಳಿದ ಕಮಲ ಇವನ್ನು ಪ್ರೀತಿಯಿಂದ ಕಾಣಿಕೆ ಕೊಟ್ಟನು. ವ॥ ಹಾಗೆ ಕಾಣಿಕೆಯನ್ನು ಕೊಟ್ಟು ಸಂತೋಷದಿಂದ (ಹೀಗೆಂದನು) : ೩. "ಮಹಾರಾಜ, ಕೋಗಿಲೆ ಮತ್ತು ದುಂಬಿಗಳಿಗೆ ಅತಿಮದವನ್ನು (ಅತಿಸಂತೋಷವನ್ನು) ಉಂಟುಮಾಡುವ ವಸಂತಋತುವು ಪ್ರಾರಂಭವಾಗಿದೆ. ಮಾಧವೀವೃಕ್ಷಕ್ಕೆ ಮೊಗ್ಗೆಗಳ ಗೊಂಚಲು, ಮಾವಿನ ಮರಕ್ಕೆ ಮೊಗ್ಗುಗಳ ಸಮೂಹ,

ಎಳೆದಳಿರಿಂದ್ರಗೋಪಮಳಿಮಾಳಿಕೆ ನೀಲದಮಾಲೆ ಮಲ್ಲಿಕಾ
ಸುಳಳಿತ ಕುಟ್ಮಳಸ್ತಬಕಮೊಪ್ಪುವ ಮುತ್ತಿನ ಕುಚ್ಚು ಕೀರಮಂ
ಡಳಿಯಮುಖಂ ಪ್ರವಾಳಮದಿರ್ಮುತ್ತಿಯ ಪೂಗುಡಿ ಚಾಮರಂ ಸಮು
ಜ್ವಳಿಸಿರೆ ಚೈತ್ರವಾರ್ಧಿಯ ವಹಿತ್ರಮಿದೇದೆನಿಸಿತ್ತು ನಂದನಂ ೪

ಕಂ॥ ಆ ನಂದನಮಂ ವಿಜಿತ ಮ
ಹಾಸಂದನಮಂ ನಿಜಾಂತರಾಳಾಶ್ರಿತ ಲೋ
ಕಾನಂದನಮಂ ತೋಷಿತ
ಮಾಸಂದನಮಂ ನಿರೀಕ್ಷಿಸಲ್ ನಡೆ ನೃಪತೀ ೫

ವ॥ ಎಂದು ಬಿನ್ನಪಂಗೆಯ್ದು ತೋಟವಾಳಂಗೆ ಪಸಾಯಮನಿತ್ತು ಪಟ್ಟವಣೆಯಿಂದೆೞ್ದೋಲಗಮಂ ಪರೆಯಿಸಿ ವನಕೇಳೀಲೋಲಮಾನಸಂ ಮಾನವೇಶ್ವರಂ ಮಹೋತ್ಸವಂಬೆರಸಂತಃಪುರಕೆೞ್ತಂದು ಸರ್ವಮಂಗಳಾದೇವಿಯಿರ್ಪ ಮಣಿಮಯಮಂದಿರದೊಳಗನೆ ಪೊಕ್ಕು ನಿರೀಕ್ಷಿಪಾಗಳ್

ಚೆಲುವಿನ ಮಲ್ಲಿಗೆಗೆ ಉಂಟಾದ ಹೂಗೊಂಚಲು, ಕಮಲಕ್ಕೆ ಉಂಟಾದ ವಿಕಾಸ, ಇಂಪುಗೊಂಡ ಸಂಪಿಗೆಯ ಮರಕ್ಕೆ ಹೂಗಳ ಗುಜ್ಜು, ಪಾದರಿಯಮರಕ್ಕೆ ಮೊಗ್ಗುಗಳ ಗೊಂಚಲೇಳಿಕೆ ಉಂಟಾಗಿದೆ. ೪. ಎಳೆಯ ತಳಿರೇ ಮಂಚವಾಗಿ, ದುಂಬಿಗಳ ಸಾಲೇ ನೀಲರತ್ನಗಳ ಸರವಾಗಿ, ಮಲ್ಲಿಗೆಯ ಸುಲಲಿತವಾದ ಮೊಗ್ಗುಗಳ ಗೊಂಚಲು ಶೋಭಿಸುವ ಮುತ್ತಿನ ಗೊಂಚಲಾಗಿ, ಗಿಳಿಸಮೂಹದ ಮುಖಭಾಗವೇ ಹವಳವಾಗಿ, ಎಳೆಯ ಮುತ್ತುಗದ ಹೂವಿನ ಗೊಂಚಲು ಚಾಮರವಾಗಿ ಚೆನ್ನಾಗಿ ಪ್ರಕಾಶಗೊಂಡಿರಲು, ಚೈತ್ರ ಮಾಸವೆಂಬ ಸಮುದ್ರದ ಹಡಗೋ ಎಂದೆಂಬ ಹಾಗೆ ನಂದನವು ಕಾಣಿಸುತ್ತದೆ. ೫. ದೇವಲೋಕದ ದೇವೇಂದ್ರನ ನಂದನವನವನ್ನು ಜಯಿಸಿದಂತಹುದಾಗಿ ತನ್ನೊಳಗೆ ಪ್ರವೇಶಮಾಡಿದವರಿಗೆ ಆನಂದವನ್ನುಂಟುಮಾಡುವುದಾಗಿ, ಮನ್ಮಥನನ್ನು ಸಂತೋಷಗೊಳಿಸುವಂತಹುದಾಗಿರುವ ಆ ನಂದನವನ್ನು ನೋಡಲು, ಮಹಾರಾಜನೇ, ನಡೆ.” ವ॥ ಹೀಗೆಂದು ವಿಜ್ಞಾಪಿಸಿಕೊಂಡ ವನಪಾಲಕನಿಗೆ ಉಡುಗೊರೆಗಳನ್ನಿತ್ತು, ಸಿಂಹಾಸನದಿಂದ ಎದ್ದು ಸಭೆಯನ್ನು ವಿಸರ್ಜನೆಗೊಳಿಸಿ, ವನವಿಹಾರಲೋಲನೆನಿಸಿದ ಮನಸ್ಸಿನ ಆ ದೊರೆಯು ಅತ್ಯುತ್ಸಾಹದಿಂದ ಕೂಡಿ ಅಂತಃಪುರಕ್ಕೆ ಬಂದು ಸರ್ವಮಂಗಳಾದೇವಿಯಿರುವ

---

1. ಇಂದ್ರಗೋಪ ಶಬ್ದಕ್ಕೆ ಮಂಚವೆಂಬ ಅರ್ಥ ದುರ್ಲಭ. ಇಂದ್ರಗೋಪವೆಂಬ ಹುಳು ಮಳೆಗಾಲದಲ್ಲಿ ಪ್ರಸಿದ್ಧ. ಮೂಲದಲ್ಲಿ ‘ಇಂದ್ರಚಾಪ’ ಎಂಬ ಪಾಠಾಂತರವಿರಬೇಕು (ಠಂ).

ಚಂ॥ ತೊಳಗುವ ಭೂಷಣಪ್ರಭೆ ಮುಖೇಂದುಲಸದ್ಯುತಿ ಕಾಯಕಾಂತಿ ಕಂ
ಗೊಳಿಸೆ ಕರಾಗ್ರಕಂಕಣಝಣತ್ಕೃತಿ ಪೊಣ್ಮೆ ಮೃಗಾಕ್ಷಿಯೊರ್ವಳು
ಜ್ವಳತರಮಾದ ಪೊಂದೆರೆಯನೋಸರಿಸುತ್ತಿರೆ ಕಂಡನಿಂದುಮು
ಡಳಮುಖಿಯುಂ ಮನೋರಮೆಯುನಾ ನೃಪರೂಪಿನ ಮೀನಕೇತನಂ ೬

ವ॥ ಆ ಪ್ರಸ್ತಾವದೊಳ್

ಕಂ॥ ಉಲಿಯೆ ಕಲಕಾಂಚಿ ಮುಡಿಯಿಂ
ದಲರುಗೆ ಬಡನಡು ಬಳುಂಕೆ ಪೊಡರೆ ನಿತಂಬಂ
ನೆಲೆವೊಲೆಗಳಲುಗೆ ಬಿಡದೇ
ಳ್ವ ಲತಾಂಗಿಯ ಕಯ್ಯನೊಯ್ಯನರಸಂ ಪಿಡಿದಂ ೭

ವ॥ ಅಂತು ಪಿಡಿದೇಳಲೀಯದೆ ಮಣಿಮಂಚದೊಳವಳ್ಗೂಡಿ ಗಾಡಿಯಿಂ ಕುಳ್ಳಿರ್ದು

ಕಂ॥ ಕುರುಳಂ ಕೊರುಗುರಿಂ ನೇ
ವರಿಸುತೆ ಮಣಿಹಾರಮಂ ಕರಾಬ್ಜದೆ ತಿರುಪು
ತ್ತರಸಿಯ ಮೊಗದಾವರೆಯಂ
ನರಪತಿ ನಡೆನೋಡಿ ನೇಹದಿಂದಿಂತೆಂದಂ ೮

ರತ್ನಮಯ ಅರಮನೆಯೊಳಗೆ ಹೊಕ್ಕು ನೋಡುತ್ತಿರುವಾಗ ೬. ಪ್ರಕಾಶಿಸುವ ಆಭರಣಗಳ ಪ್ರಭೆ, ಚಂದ್ರನಂತಿರುವ ಮುಖದ ಕಿರಣಗಳ ಕಾಂತಿ, ಶರೀರದ ಕಾಂತಿ–ಇವು ಕಂಗೊಳಿಸುತ್ತಿರಲು, ಮುಂಗೈಯಲ್ಲಿ ಕಡಗಗಳ ಜಣತ್ಕಾರವು ಹೊರಹೊಮ್ಮುತ್ತಿರಲು, ಮೃಗನಯನೆಯಾದ ಓರ್ವ ಪರಿಚಾರಿಕೆಯು ಬಂಗಾರದ ಜರಿಯ ಪರದೆಯನ್ನು ಸರಿಸುತ್ತಿದ್ದ ಹಾಗೆ ನೃಪರೂಪದ ಮನ್ಮಥನಾದ ರಾಜಶೇಖರನು ಚಂದ್ರಮುಖಿಯೂ ತನ್ನ ಮನೋರಮೆಯೂ ಆದ ಸರ್ವಮಂಗಳೆಯನ್ನು ನೋಡಿದನು. ವ॥ ಆ ಸಂದರ್ಭದಲ್ಲಿ ೭. ಗೆಜ್ಜೆಯ ನಡುಪಟ್ಟಿಯು (ಗೆಜ್ಜೆಯ ಒಡ್ಯಾಣವು) ಅವ್ಯಕ್ತ ಮಧುರವಾಗಿ ಧ್ವನಿ ಮಾಡಲು, ಮುಡಿದ (ಮಲ್ಲಿಗೆಯ) ಹೂವುಗಳು ಮುಡಿಯಿಂದ ಉದುರಿ ಬೀಳುತ್ತಿರಲು, ತೆಳುವಾದ ನಡುವು ಬಳುಕುತ್ತಿರಲು, ಕಟಿಪಶ್ಚಾದ್ಭಾಗಗಳು ಅಲ್ಲಾಡುತ್ತಿರಲು, ಕಠಿಣವಾದ ದಪ್ಪನೆಯ ಮೊಲೆಗಳು ಚಲಿಸುತ್ತಿರಲು, ಪತಿಗೆ ತೋರಿಸುವ ಮರ್ಯಾದೆಯನ್ನು ತಪ್ಪದೆ, ಮೇಲೇಳಲುಯತ್ನಿಸಿದ ಆ ಲತಾಂಗಿಯ ಕಯ್ಯನ್ನು ರಾಜಶೇಖರನು ಮೆಲ್ಲಗೆ ಹಿಡಿದನು. ವ॥ ಆ ರೀತಿ ಸರ್ವಮಂಗಳೆಯ ಕೈಗಳನ್ನು ಹಿಡಿದು ಏಳಲು ಅವಕಾಶ ಕೊಡದೆ ಅವಳೊಡನೆಯೇ ಅದೇ ರತ್ನಖಚಿತ ಮಂಚದ ಮೇಲೆ ಸಂಭ್ರಮದಿಂದ ಕುಳಿತು, ೮. ಆ ಸರ್ವಮಂಗಳೆಯ ಮುಂಗುರುಳನ್ನು ತನ್ನ ಉಗುರುಗಳ ಕೊನೆಯಿಂದ ಸರಿಪಡಿಸುತ್ತ, ಕಮಲದಂತಹ ಕೈಗಳಿಂದ (ಅವಳ ಕೊರಳ) ರತ್ನಹಾರವನ್ನು ಸರಿಯಾಗಿ ಮಾಡುತ್ತ, ರಾಣಿಯಾದ ಅವಳ ಮುಖಕಮಲವನ್ನು ಆ ರಾಜಶೇಖರಮಹಾರಾಜನು ದಿಟ್ಟಿಸಿ ನೋಡುತ್ತ ಸ್ನೇಹದಿಂದ ಹೀಗೆ ಹೇಳಿದನು :

ವಿನುತ ಮಧುಲಕ್ಷ್ಮಿ ನಿಜನಂ
ದನಾವಲೋಕನಮನೆಳಸಿ ಮಾಧವಯುತೆ ಭೋಂ
ಕನೆ ಬಂದು ನಿಂದು ಚಂದ್ರಾ
ನನೆ ನಿನ್ನಂ ಕರೆದಪಳ್ಪಿಕಸ್ವನಮಿಷದಿಂ ೯

ವ॥ ಆದುಕಾರಣದಿಂ

ಚಂ॥ ಕಳರವಮಂ ಪಿಕಾಂಗನೆಗೆ ಮಂಜುಮೃದೂಕ್ತಿಗಳಂ ಪೊದಳ್ದ ಪೆ
ಣ್ಗಿಳಿಗೆ ನವೀನಯಾನಮನಸೂನ ಮರಾಳಿಗೆ ಶಿಕ್ಷೆಗೆಯ್ಯಲೋ
ಪಳಿ ನಡೆ ನಂದನಕ್ಕೆ ವನಲಕ್ಷ್ಮಿಗೆ ಕೌತುಕಮಪ್ಪಿನಂ ನಿರಾ
ಕುಳಮೆನಗುತ್ಸವಂ ಬಳೆವಿನಂ ಮೃಗಶಾಬಪಿಲೋಲಲೋಚನೇ ೧೦

ವ॥ ಎನೆ ನಿಜವಲ್ಲಭೆಯತಿಪ್ರಸನ್ನ ಮಧುರತರ ಕಟಾಕ್ಷಪಾತದಿನುಚಿತ ವಚನನಿಚಯದಿ ನೊಡಂಬಟ್ಟುದಂ ಪ್ರಕಟಿಸಲೊಡನವಳ್ಗೂಡಿ ಗಾಡಿಯಿಂದೆಳ್ದನಂತರಂ ಕಾಂತಾಜನಂಬೆರಸು ಪೊಱಮಟ್ಟು ಚೈತ್ರೋದ್ಯಾನಕೇಳೀಪ್ರಸ್ಥಾನಭೇರಿಯಂ ಪೊಯ್ಸಲೊಡಂ

ಕಂ॥ ಘನರಾಜಹಂಸಗಮನ
ಕ್ಕನುಕೂಲಮಿದೆಂದು ಗಗನದೊಡನುಸಿರ್ವವೊಲಾ
ಘನರಾಜಹಂಸಗಮನಮ
ನೆನಸುಂ ಪರ್ಬಿದುದು ಪಟಹಪಟುರವಪಟಲಂ ೧೧

೯. "ಚಂದ್ರಮುಖಿ, ಶ್ಲಾಘ್ಯಳಾದ ವಸಂತಮಾಸವೆಂಬ ಲಕ್ಷ್ಮಿಯು ತನ್ನ ನಂದನವನ (ಮಗನ)ದ ಅವಲೋಕನವು ನಿನ್ನಿಂದಾಗಬೇಕೆಂದು ಬಯಸಿ ವಸಂತನಿಂದ ಕೂಡಿದವ ಳಾಗಿ ತಟ್ಟನೆಬಂದು ನಿಂತು ಕೋಗಿಲೆಯ ಧ್ವನಿಯೆಂಬ ವ್ಯಾಜದಿಂದ ನಿನ್ನನ್ನು ಕರೆಯು ತ್ತಿರುವಳು! ವ॥ ಆದ್ದರಿಂದ, ೧೦. ಹೇ ಮೃಗಲೋಚನೆ, ಕಲರವವನ್ನು ಕೋಗಿಲೆ ಯೆಂಬ ಅಂಗನೆಗೆ, ಮಂಜುಳವಾದ ಮೃದುಮಾತುಗಳನ್ನು ಶೋಭಿಸುವ ಹೆಣ್ಣುಗಿಳಿ ಗಳಿಗೆ, ನವೀನವಾದ ನಡಿಗೆಯನ್ನು ಹೆಣ್ಣುಹಂಸಕ್ಕೆ ಕಲಿಸುವುದಕ್ಕಾಗಿ ನಂದನ ವನಕ್ಕೆ ನಡೆ. ವನಲಕ್ಷ್ಮಿಗೆ, ಕೌತುಕವನ್ನುಂಟುಮಾಡು. ನನ್ನ ಮನಸ್ಸಿಗೆ ಉತ್ಸಾಹವು ಬೆಳೆಯುವಂತೆ ಮಾಡು, ನಡೆ." ವ॥ ಹೀಗೆಂದು ಹೇಳಲು ತನ್ನ ಪ್ರಾಣೇಶ್ವರಿಯು ಪ್ರಸನ್ನವೂ, ಮಧುರತರವೂ ಆದ ಕಡೆಗಣ್ಣಿನ ನೋಟದಿಂದ ಮತ್ತು ತತ್ಕಾಲೋಚಿತ ಮಾತುಗಳಿಂದ ಒಪ್ಪಿಗೆಕೊಟ್ಟುದನ್ನು ಪ್ರಕಟಿಸಲಾಗಿ, ಕೂಡಲೆ ಅವ ಳೊಡನೆಕೂಡಿ ಸಂಭ್ರಮದಿಂದ ಎದ್ದು, ಅನೇಕ ಸ್ತ್ರೀಸಮೂಹದೊಡನೆ ಕೂಡಿ ಹೊರ ಹೊರಟು ಚೈತ್ರಮಾಸದ ಉದ್ಯಾನಕೇಳೀಸೂಚಕವಾದ ಭೇರಿಯನ್ನು ಹೊಡೆಯಿಸಿ ದನು. ಒಡನೆ ೧೧. ಆ ಭೇರಿಯ ಸಮರ್ಥವಾದ ಧ್ವನಿಯು ಶ್ರೇಷ್ಠವಾದ ರಾಜಹಂಸ ನಾದ ರಾಜಶೇಖರನ ಗಮನಕ್ಕೆ ಅನುಕೂಲ ಸಮಯವೆಂದು [ಶ್ರೇಷ್ಠ ರಾಜಹಂಸನೆನಿಸಿದ ಪಕ್ಷಿಯ ವನವಿಹಾರಕ್ಕೆ ಪ್ರಶಸ್ತ ಸಮಯವೆಂದು ಅಥವಾ ಈ ಪ್ರದೇಶವು ಮೇಘ (ಘನ) ಗಳ, ಚಂದ್ರ(ರಾಜ), ಸೂರ್ಯ (ಹಂಸ) ರುಗಳ ಪ್ರಯಾಣಕ್ಕೆ ಸಮ್ಮುಖವೆಂದು] ಆಕಾಶ

ವ॥ .ಆಗಳ್ ಪಣ್ಣಿಬಂದ ಸಿಂಧುರೇಂದ್ರಮನಿಂದ್ರಾಣಿವೆರಸು ಕಾರ್ಮುಗಿಲನಾರೋಹಿಪ ಮಹೇಂದ್ರನಂತೆ ನರೇಂದ್ರಚಂದ್ರಂ ನಿಜಮನೋಹರಿಯೊಡನಾರೋಹಿಸಿ ರಾಜವೀಥಿಯೊಳ್ ಬರ್ಪಾಗಳ್

ಚಂ॥ ಇದು ಮಧುಮಿತ್ರಮತ್ತಗಜರಾಜಿಯೊ ನೋಡಿದು ಪುಷ್ಪಚಾಪಸೌ
ಖ್ಯದ ಸುರವಲ್ಲರೀತತಿಯೊ ಭಾವಿಪೊಡಿಂತಿದು ಕಾಮತತ್ತ್ವಸಾ
ರದ ನವಕೋಶರಾಶಿಯೊ ವಿಚಾರಿಪೊಡಿಂತಿದು ದರ್ಪಕಪ್ರತಾ
ಪದ ಪರಿಜೊಂದು ಸಂದಣಿಯೊ ಪೇಳೆನೆ ಬಂದುದು ಭಾಮಿನೀಜನಂ ೧೨

ಕಂ॥ ಪಿಡಿಗಳನೇಱೆ ಕೆಲಂಬ
ರ್ಮಡದಿಯರರೆಬರ್ಸುಖಾಸನಂಗಳೊಳೆ ಕೆಲ
ರ್ಪಿಡಿಗುದುರೆಗಳೊಳ್ ಪೆಱವ
ರ್ಪೊಡವಿಯೊಳಡಿಯಿಟ್ಟು ತಳರ್ದರತಿಸಂಭ್ರಮದಿಂ ೧೩

ಚಂ॥ ಪರಿಕಿಪುದೀಗಳೀ ಗಜದ ಕುಂಭದ ಚೆಲ್ವುಮನೆನ್ನದೊಂದು ಭಾ
ಸುರತೆಯನೆಂದು ತದ್ಗುರುಪಯೋಧರಮೆಚ್ಚರಿಪಂತೆ ಬೆನ್ನನೊ
ತ್ತೆ ರುಚಿರತನ್ಮುಖೇಂದುವನಭೀಕ್ಷಿಸಲೈದಿದ ಚಂದ್ರಬಿಂಬದಂ
ತಿರೆ ಧವಳಾತಪತ್ರಮಿಭದಗ್ರದೆ ಬಂದನವಂ ವಧೂಯುತಂ ೧೪

ದೊಡನೆ ಹೇಳುವ ಹಾಗೆ ವಿಶಾಲವಾದ ಆಕಾಶವನ್ನು ತುಂಬಿ (ಘನರಾಜಹಂಸ ಗಮನ ಮನೆನಸುಂ) ಹಬ್ಬಿತು. ವ॥ ಆಗ ಸಿದ್ಧವಾಗಿ ಬಂದ ಗಜಶ್ರೇಷ್ಠವನ್ನು ಇಂದ್ರಾಣಿ ಸಮೇತವಾಗಿ ದೇವೇಂದ್ರನು ಕರಿಯ ಮೇಘಗಳನ್ನೇರುವ ಹಾಗೆ ಆ ನರೇಂದ್ರಚಂದ್ರನು ನಿಜರಮಣಿಯಾದ ಸರ್ವಮಂಗಳೆಯೊಡನೆ ಹತ್ತಿ ರಾಜಬೀದಿಯಲ್ಲಿ ಬರುವಾಗ, ೧೨. ಈ ಆನೆಯು ಮನ್ಮಥನ ಮದ್ದಾನೆಗಳ ಸಾಲೋ, ವಿಚಾರಿಸಿ ನೋಡಿದರೆ ಇದು ಮನ್ಮಥನ ಸೌಖ್ಯದ ಕಲ್ಪವೃಕ್ಷದ ಸಮೂಹವೋ, ಯೋಚಿಸಿ .ನೋಡಿದರೆ ಕಾಮ ರಹಸ್ಯದ ಸಾರಭೂತವಾದ ಹೊಸ ಬೊಕ್ಕಸದ ರಾಶಿಯೋ, ವಿಚಾರಿಸಿ ನೋಡಿದರೆ ಇದು ಮನ್ಮಥನ ಪರಾಕ್ರಮವಿಶೇಷದ ಒಂದು ಆಕೃತಿಯ ಸಮೂಹವೋ ಹೇಳು ? ಎನ್ನುವ ಹಾಗೆ (ಈ ರಾಜ ದಂಪತಿಗಳ ಹಿಂದೆ) ಸ್ತ್ರೀಸಮೂಹವು ಬಂದಿತು. ೧೩. ಕೆಲ ಸ್ತ್ರೀಯರು ಹೆಣ್ಣಾನೆಗಳನ್ನೇರಿ, ಕೆಲವು ಸ್ತ್ರೀಯರು ಮೇಣೆ, ಪಲ್ಲಕ್ಕಿಗಳನ್ನೇರಿ, ಕೆಲವರು (ಸವಾರರು) ಹಿಡಿದಿರುವ ಕುದುರೆಗಳ ಮೇಲೇರಿ, ಕೆಲವರು ನೆಲದ ಮೇಲೆ ನಡೆಯುತ್ತ ಅತಿಸಂಭ್ರಮದಿಂದ (ಉದ್ಯಾನವನಕ್ಕೆ) ಹೊರಟರು. ೧೪. ಈ ಆನೆಯ ಕುಂಭಸ್ಥಳದ ಚೆಲುವಿಕೆಯನ್ನೂ ನನ್ನ ಚೆಲುವಿಕೆಯ ಪ್ರಕಾಶವನ್ನೂ ಪರೀಕ್ಷಿಸಲು ಇದೇ ಸಮಯವೆಂದು ದಪ್ಪನೆಯ ಮೊಲೆಗಳು ಪತಿಯಾದ ರಾಜಶೇಖರನಿಗೆ ಎಚ್ಚರಿಕೆ ಕೊಡುವಂತೆ, ಅವು ಅವನ ಬೆನ್ನನ್ನು ಒತ್ತುವ ಹಾಗೆ ಸರ್ವಮಂಗಳೆಯು ಕುಳಿತುಕೊಂಡಿದ್ದಳು. ಮನೋಹರವಾದ ಅವಳ ಮುಖಚಂದ್ರನನ್ನು ನೋಡಲಿಕ್ಕೆಂದು ಬಂದ ಚಂದ್ರಮಂಡಲವೋ ಎಂಬಂತೆ ಮೇಲುಭಾಗದಲ್ಲಿ ಶ್ವೇತಛತ್ರವು ಶೋಭಿಸುತ್ತಿತ್ತು. ಹೀಗೆ ಆ ರಾಜಶೇಖರನು ತನ್ನ ವಧು

ವ|| ಅಂತನಂತಸಂಭ್ರಮಮಿಂಬುವಡೆಯೆ ಕುಂಭಿನೀಕಾಂತನಾ ವನೋಪಕಂಠಮಂ ಮುಟ್ಟಿವರೆ ತೊಟ್ಟನೆ ಕಟ್ಟಿದಿರೊಳ್

ಚಂ|| ಅಳಿಕುಳ ಪಕ್ಷತಿಕ್ಷಪಿತ ಪದ್ಮಪರಾಗ ಪರಾಗಮುದ್ಧಕೋ
ಕಿಳಕಳನಾದಬೃಂಹಿತಮಮಂದಮರಂದ ಮದಾಂಬು ತತ್ಸರ
ಸ್ಥಳಜಳಕೇಳಿಗೆಯ್ದು ಪೊಱಮಟ್ಟುದಿದೆಂಬುದನಿಂಬುಕೆಯ್ದು ಕೋ
ಮಳ ಮಳಯಾನಿಳಾಂಗಜಗಜಂ ಪರಿದತ್ತಿದಿರೊಳ್ಮಹೀಶನಾ ೧೫

ವ|| ಅದಂ ಮನದೆಗೊಂಡು ಮದಗಜಸ್ಕಂಧದಿನಿಳಿತಂದು ಫಳಕುಸುಮ ಪರಿರಚಿತ ಚಾರುತರ ತೋರಣಾನ್ವಿತ ತದುದ್ಯಾನಪ್ರತೋಳಿಕಾದ್ವಾರಮಂ ಪೊಕ್ಕು ಸವ್ಯಪಾರ್ಶ್ವಗ ಸರ್ವ ಮಂಗಳಾಪಾಂಗಸಂಗತನುಂ ವನವಿಹರಣ ಸಮುಚಿತ ಪರಿಮಿತ ಪರಿಜನಾವೃತನುಂ ವನಪಾಲಪುರಃಪ್ರದರ್ಶಿತಾನಂತ ತರುಲತಾ ಸಂದೋಹ ಸಂದರ್ಶನಾನಂದಕಂದಳಿತ ಹೃದಯಾರ ವಿಂದನುಂ ನಿಜವದನತನು ಸಹಜ ಸೌರಭ್ಯ ಸಮಾಕೃಷ್ಟ ಮದವದಳಿ ಪರಿಸರಣಕರಣ ಚರಣ ಚರಕರ ಪರಿವೀಜ್ಯಮಾನ ಧವಳಚಾಮರ ಜನಿತ ಪವನ ಪರಿಪತಿತಾನೇಕ ಸರಜಃಕುಸುಮರಸ ವಿಸರ

ವಾದ ಸರ್ವಮಂಗಳೆಯೊಡನೆ ಆನೆಯನ್ನೇರಿ ಬಂದನು. ವ|| ಆ ರೀತಿ ಅತ್ಯಧಿಕ ಸಂಭ್ರಮ ದಿಂದ ಕೂಡಿ ಭೂರಮಣನಾದ ರಾಜಶೇಖರನು ಉದ್ಯಾನವನದ ಸಮೀಪಕ್ಕೆ ಬಂದು ಮುಟ್ಟಲಾಗಿ, ಒಮ್ಮೆಲೆ ಎದುರಿಗೆ ೧೫. ದುಂಬಿಗಳ ರೆಕ್ಕೆಗಳಿಂದ ಸಿಡಿಸಲ್ಪಡುವ ಕಮಲದ ಪರಾಗವೆಂಬ ಧೂಳಿಯಿಂದ ಕೂಡಿ, ಕೋಗಿಲೆಗಳ ಕಳನಾದವೆಂಬ ಗಟ್ಟಿಯಾದ ಬೃಂಹಿತ ದಿಂದ ಕೂಡಿ, ಅಧಿಕವಾದ ಮಕರಂದವೆಂಬ ಮದೋದಕದಿಂದ ಕೂಡಿಕೊಂಡು ಶೋಭಿ ಸುತ್ತ, ಮನ್ಮಥನ ಮದ್ದಾನೆಯೋ ಎಂಬಂತೆ ಮೃದುವಾದ ಮಲಯಮಾರುತವು ಆ ರಾಜ ಶೇಖರನ ಎದುರಿನಲ್ಲಿ ಬೀಸಿತು. ವ|| ಅದನ್ನು ಮನಸ್ಸಿಗೆ ತಂದುಕೊಂಡು, ತನ್ನ ಆನೆಯ ಕುತ್ತಿಗೆಯಿಂದ ಇಳಿದುಬಂದು, ಫಲಪುಷ್ಪಗಳಿಂದ ಸುತ್ತಲೂ ಅಲಂಕಾರಗೊಂಡ ಮನೋ ಹರವಾದ ತೋರಣಗಳಿಂದ ಕೂಡಿದ ಆ ಉದ್ಯಾನವನದ ರಾಜಮಾರ್ಗದ ಹೆಬ್ಬಾಗಿಲನ್ನು ಹೊಕ್ಕು, ಎಡಭಾಗದಿಂದ ಬರುತ್ತಿರುವ ಸರ್ವಮಂಗಳೆಯ ಕಡೆಗಣ್ಣಿನ ನೋಟದಿಂದ ಕೂಡಿದವನಾಗಿ, ವನದಲ್ಲಿ ವಿಹಾರಮಾಡಲು ಯೋಗ್ಯವಾದ ಉಚಿತ ಪರಿಜನರುಗಳಿಂದ ಕೂಡಿ, ಆ ವನದ ವಿವರವನ್ನು ವಿವರಿಸುವ ವನರಕ್ಷಕನನ್ನು ಮುಂದುಗೊಂಡು ಅನಂತ ವಾದ ಗಿಡ ಮರ ಬಳ್ಳಿಗಳ ಸಮೂಹದ ನೋಟದಿಂದ ಅರಳಿದ ಹೃದಯಕಮಲವುಳ್ಳವನಾ ದನು. ತನ್ನ ಮುಖ ಮತ್ತು ದೇಹದ ಸಹಜವಾದ ಸುಗಂಧಕ್ಕೆ ಆಕರ್ಷಿತಳಾಗಿ ಬಂದ ಮದಿಸಿದ ದುಂಬಿಗಳನ್ನು ತೊಲಗಿಸಲು ಸೇವಕವರ್ಗದವರು ಕೈಯಲ್ಲಿ ಬಿಳಿಯ ಚಾಮರ ಹಿಡಿದು ಬೀಸುತ್ತಿದ್ದರು. ಆ ಚಾಮರಗಳಿಂದ ಹುಟ್ಟಿದ ಗಾಳಿಯಿಂದ ಹಾರಿದ ಧೂಳು ಸಮ್ಮೇಳವಾದ ಹೂವುಗಳ ಮಕರಂದಧಾರೆಯಿಂದ ನೆಲವು ತೋಯ್ದು ಕೆಸರಾಗಿತ್ತು, ಆ

ಕರ್ದಮಿತ ಧರಣೀಭಾಗನುಂ ಸರ್ವಸಚಿವಪ್ರಸಾರಿತ ಕರಪಲ್ಲವನ್ಯಸ್ತಹಸ್ತಕಮಳನುಂ ಲೀಲಾವಲೋಕನ ಸಾಂದ್ರಚಂದ್ರಿಕಾ ನಿರಸ್ತ ನಿಬಿಡತರ ತರುಪಲ್ಲವಪ್ರಕರ ಯವನಿಕಾಂತರ್ಗತತತತಮಸ್ತೋಮನುಮಾಗಿ ನಡೆತರ್ಪಾಗಳ್

ಕಂ|| ನಗೆಮೊಗಮಲರ್ದಂಬುಜಮಂ
ನಗೆ ನಗೆಗಣ್ಣಗೆ ನವೀನದಳಿತೋತ್ಪಳಮಂ
ನಗೆ ಬೆಳ್ದಿಂಗಳ ಸಿರಿಯಂ
ನಗೆ ನಡೆತಂದಳ್ ನರೇಂದ್ರವಧು ನಂದನದೊಳ್ ೧೬

ವ|| ಮತ್ತಂ

ಚಂ|| ಮಣಿಯುನೆ ಕಾತಕಲ್ಪಲತೆ ಸಿಂಜನಿಯಂ ತೆಗೆದಿಟ್ಟ ಪುಷ್ಪಮಾ
ರ್ಗಣನ ಧನುಃಶಲಾಕೆ ಮುಗುಳೇಱಿದ ಮಲ್ಲಿಗೆ ಸುತ್ತುತಂ ನಭೋ
ಮಣಿರುಚಿಯು ತೆಱಂಬೊಳೆವ ಪದ್ಮಿನಿ ತಾನೆನಿಸುತ್ತೆ ತಾಳ್ದ ಸ
ನ್ಮಣಿಪಿಣಿಲಚ್ಚಮುತ್ತು ಕನಕಾಂಬರದಿಂ ಕಮಲಾಕ್ಷಿ ತೋಱಿದಳ್ ೧೭

ವ|| ಇಂತೊಪ್ಪಿ ಬರ್ಪ ನಿಜವಲ್ಲಭೆವೆರಸು ಬರೆವರೆ

ಚಂ|| ತಳಿರ್ಗಳನಾಂತು ನಿಂದಸುಗೆ ಕುಟ್ಮಳಪಙ್ತಿ ಪೊದಳ್ದ ಚಂಪಕಂ
ವಿಳಸಿತಮಾದ ಪೂಗುಡಿಗಳಿಂದೆಡೆಗೊಂಡದಿರ್ಗಂತಿ ಕಾಯ್ಗಳಿಂ
ತಳೆದು ನಿಲುಂಬಿ ನಿಂದ ಪೊಸತೆಂಗುಫಳಂಗಳ ಬಣ್ಪನಾಳ್ದು ಸಂ
ಗಳಿಸಿದ ಮಾವು ತೀವಿದ ಬಸಂ ಬಗೆಗೊಂಡಿರೆ ಕಂಡನಾ ನೃಪಂ ೧೮

ಕೆಸರಿನಲ್ಲಿ ಅಡಿಯಿಡುತ್ತ ಹಾಸ್ಯಕ್ಕಾಗಿ ನಿಯಮಿತನಾದ ಸಚಿವನ ಚಾಚಿದ ಪಲ್ಲವದಂತಹ ಕೈಯಲ್ಲಿ ಕೈಯಿಟ್ಟು ನಡೆದುಬರುವವನಾಗಿದ್ದನು. ವಿಲಾಸದಿಂದ ನೋಡುವ ನೋಟವೆಂಬ ದಟ್ಟವಾದ ಬೆಳದಿಂಗಳಿನಿಂದ, ನಿಬಿಡವಾದ ಗಿಡಮರಗಳ ಚಿಗುರೆಂಬ ಪರದೆಯ ಒಳಗೆ ವ್ಯಾಪ್ತವಾದ ಅಂಧಕಾರ ಸಮೂಹವನ್ನು ಕಳೆಯುವವನಾಗಿ ನಡೆದುಬರುತ್ತಿರುವಾಗ ೧೬. ಆ ಸರ್ವಮಂಗಳೆಯ ನಗೆಮೊಗವು ಅರಳಿದ ಕಮಲವನ್ನು ನಗಿಸುತ್ತಿತ್ತು. ನಗೆಮುಖದಲ್ಲಿರುವ ನಗೆಗಣ್ಣುಗಳು ನೂತನವಾಗಿ ಅರಳಿರುವ ಕನ್ನೈದಿಲೆಯನ್ನು ನಗಿಸುತ್ತಿದ್ದವು. ಮಂದಹಾಸವು ಬೆಳದಿಂಗಳ ಸೌಂದರ್ಯವನ್ನು ನಗಿಸುತ್ತಿತ್ತು. ಈ ರೀತಿಯಿಂದ ಆ ರಾಜಶೇಖರಪತ್ನಿಯು ನಂದನವನದಲ್ಲಿ ನಡೆದುಬಂದಳು. ವ|| ಮತ್ತು ೧೭. ಆ ಸರ್ವಮಂಗಳೆ ಶ್ರೇಷ್ಠರತ್ನಗಳನ್ನೂ, ಹೆರಳನ್ನೂ, ಅಚ್ಚ ಮುತ್ತುಗಳನ್ನೂ, ಕನಕವರ್ಣದ ಸೀರೆಯನ್ನೂ ಧರಿಸಿದ್ದಳು. ಆದ್ದರಿಂದ ಅವಳು ಕ್ರಮವಾಗಿ ರತ್ನಗಳನ್ನು ಬಿಟ್ಟಿರುವ ಕಲ್ಪಲತೆಯಂತೆ, ಹೆದೆಯನ್ನಿಳಿಸಿದ ಮನ್ಮಥನ ಚಾಪದಂಡದಂತೆ, ಮೊಗ್ಗುಗಳನ್ನು ಬಿಟ್ಟ ಮಲ್ಲಿಗೆಬಳ್ಳಿಯಂತೆ, ಚಲಿಸುವ ಸೂರ್ಯನಂತೆ ಕಂಗೊಳಿಸಿದಳು. ಕಮಲಾಕ್ಷಿಯಾದ್ದರಿಂದ ತಾವರೆಯ ಬಳ್ಳಿಯಂತೆಯೂ ಕಾಣಿಸಿದಳು. (೨೦) ವ|| ಹೀಗೆ ಒಪ್ಪುತ್ತ ಬರುತ್ತಿರುವ ತನ್ನ ಹೆಂಡತಿಯಾದ ಸರ್ವಮಂಗಳೆಯೊಡನೆ ರಾಜಶೇಖರನು ಬರಲು ೧೮. ಚಿಗುರನ್ನು ಹೊತ್ತುನಿಂತ ಅಶೋಕ, ಮೊಗ್ಗುಗಳ ಸಾಲುಗಳಿಂದ ಶೋಭಿಸುವ ಸಂಪಿಗೆ, ಪ್ರಕಾಶಮಾನವಾದ ಹೂಗೊಂಚಲುಗಳಿಂದ ತುಂಬಿದ ಅದಿರ್ಗಂತಿ, ಕಾಯಿಗಳನ್ನು ಬಿಟ್ಟು

ಸುರಯಿಃಯ ಸೊರ್ಕುಗಂಪು ಪೊಸಸಂಪಗೆಯೊಳ್ಪುಸುಗಂಪು ತೋರ್ಪ ಪಾ
ದರಿಗಳ ತಣ್ಪುಗಂಪು ಸರಸೀರುಹದೊಳ್ ತನಿಗಂಪು ಮಲ್ಲಿಕೋ
ತ್ಕರದ ಬೆಡಂಗುಗಂಪು ಮಧುದೂತಿಯ ತಳ್ತನಿಗಂಪು ಚೂತವ
ಲ್ಲರಿಯಲರಚ್ಚಗಂಪು ಬಗೆಗೊಂಡುದು ತದ್ವನದೊಳ್ ನರೇಂದ್ರನಾ ೧೯

ಕಂ॥ ಎಲರಲೆಯೆ ನೆಗೆದು ಬಾಗೊಲೆ
ದಲಗೊಂಚಲ್ ಧವಳಚಾಮರಕ್ಕೆಣೆವರೆ ಸ
ಲ್ಲಲಿತ ಮಧುದೂತಿ ತಾನಿದು
ಗೆಲೆವಂದುದು ಚೈತ್ರಚಾಮರಗ್ರಾಹಿಣಿಯಂ ೨೦

ವ॥ ಎಂದರಸಿಯ ಕೆಳದಿಯರಪ್ಪ ಕಳಾರವೆ ನುಡಿಯೆ ನೋಡುತಂ ನಡೆಯೆ ಸೌಂದರ್ಯ ಶಾರದೆಯೆಂಬಳಿಂತೆಂದಳ್

ಕಂ॥ ಮಲ್ಲಿಗೆಯ ಮುಕುಳಕುಳ ಮಿಡಿ
ದೆಲ್ಲೆಡೆಯೊಳ್ ತೋಱಿ ಮಿಳಿರ್ದು ಬಳಸಿರೆ ವಿಳಸ
ತ್ಪಲ್ಲವತತಿ ಮೆಱೆದುದು ರತಿ
ವಲ್ಲಭಮುಕ್ತಾತಪತ್ರಮೆನೆ ತರುಣಾಮ್ರಂ ೨೧

ಎತ್ತರವಾಗಿ ಬೆಳೆದ ತೆಂಗು, ಫಲಭಾರವನ್ನು ಧರಿಸಿ ನಿಂತ ಮಾವು, ಇವುಗಳಿಂದ ತುಂಬಿದ ಆ ನಂದನವು ಮನಸ್ಸನ್ನು ಸೆಳೆಯುತ್ತಿರಲು ಅರಸನು ನೋಡಿದನು. ೧೯. ಸೊಕ್ಕನ್ನುಂಟುಮಾಡುವಂತಹ ಸುರಗಿಯ ಹೂವಿನ ಸುಗಂಧ, ಹೊಸದಾದ ಸಂಪಿಗೆ ಹೂವಿನ ಬಿಸುಪನ್ನುಂಟುಮಾಡುವ ಕಂಪು, ಪಾದರಿಹೂಗಳ ತಂಪನ್ನುಂಟುಮಾಡುವ ಸುವಾಸನೆ, ಕಮಲದ ಹೂವುಗಳ ತನಿಯಾದ ಕಂಪು, ಅತಿಶಯವಾದ ಮಲ್ಲಿಗೆಯ ಸೌಂದರ್ಯಭಾವವನ್ನು ಮನಸ್ಸಿಗೆ ಉಂಟುಮಾಡುವ ಸುವಾಸನೆ, ಮಾಮರವು ಹೊಂದಿ ರುವ ಹೂಗಳ ಮಧುರವಾದ ಕಂಪು, ಮಾಮರಕ್ಕೆ ಹಬ್ಬಿದ ಬಳ್ಳಿಗಳು ಬಿಟ್ಟ ಹೂವಿನ ಶುದ್ಧವಾದ ಸುವಾಸನೆ ಆ ವನದಲ್ಲಿ ನರೇಂದ್ರನಾದ ರಾಜಶೇಖರನ ಮನಸ್ಸಿಗೆ ಹಿಡಿಸಿತು. ೨೦. ಮಾಮರದಲ್ಲಿ ಗಾಳಿಯು ಬೀಸಲು ಹಾರಾಡಿ ಬಾಗಿ ಒಲೆದಾಡುತ್ತಿದ್ದ ಹೂವಿನ ಗೊಂಚಲುಗಳು ಬಿಳಿಯ ಬಣ್ಣದ ಚಾಮರಕ್ಕೆ ಸಮಾನವಾಗಿ ಕಾಣುತ್ತಿರಲು, ಅತಿ ಕೋಮಲೆಯಾದ ಮಧುದೂತಿಯು ವಸಂತಮಾಸವೆಂಬ ರಾಜನ ಚಾಮರಗ್ರಾಹಿಣಿ ಯನ್ನು ಗೆಲ್ಲುವುದಕ್ಕೋಸುಗ ಬಂದ ಹಾಗೆ ಇತ್ತು. ವ॥ ಹೀಗೆಂದು ಆ ಅರಸಿಯಾದ ಸರ್ವಮಂಗಳೆಯ ಸಖಿಯಾದ 'ಕಳಾರವೆ' ನುಡಿಯಲಾಗಿ, ಅವಳು ಅದನ್ನು ನೋಡುತ್ತ ನಡೆಯುತ್ತಿರುವಾಗ 'ಸೌಂದರ್ಯಶಾರದೆ' ಎಂಬುವಳಿಗೆ ಹೀಗೆ ಹೇಳಿದಳು : ೨೧. ಈ ತರುಣ ಮಾವಿನಮರವು (ತನಗೆ ಹಬ್ಬಿದ ಮಲ್ಲಿಗೆಯ ಬಳ್ಳಿಯಲ್ಲಿನ) ಮಲ್ಲಿಗೆಯ ಮೊಗ್ಗು ಗಳ ಸಮೂಹದಿಂದ ಎಲ್ಲ ಕಡೆಗಳಲ್ಲೂ ಕಿಕ್ಕಿರಿದು ತುಂಬಿಕೊಂಡಿರಲು, ರತಿಪತಿಯಾದ ಮನ್ಮಥನ ಮುತ್ತುಗಳಿಂದ ಮಾಡಿರುವ (ಶ್ವೇತ) ಛತ್ರಿಯಹಾಗೆ ಸುತ್ತಲೂ ಬಳಸಿ

ವ॥ ಮತ್ತಂ

ಕಂ॥ ಕಾಮನ ಸಾಮಜಮಿದು ಮಧು
ಭೂಮೀಶನ ಕೋಶಮತುಳ ವಿಚಕಿಲಲತಿಕಾ
ಕಾಮಿನಿಯರಸಂ ಮಾಮರ
ಮೀ ಮರಮನ್ಯಕ್ಷಿತಿಜಮೇಂ ಮಾಮರಮೇ ೨೨

ವ॥ ಅವಳ ಜಾಣ್ಮಾತುಗೇಳ್ದು ಚೆನ್ನಾದುದೆಂದು ಮೆಚ್ಚುತಂ ಬರ್ಪಲ್ಲಿ

ಮ॥ಸ್ರ॥ ಪ್ರಿಯದಿಂದಪ್ಪಿರ್ದ ಮಲ್ಲೀವಧುವ ತನುಸುಖಕ್ಕೊಲ್ದು ಪ್ರೈಯಿತ್ತು ಚೂತ
ಪ್ರಿಯನಾಗಳ್ಕೋರಕಂ ಪೊಂಪುಳಿಯೆನಿಸೆ ಕರಂ ಕಂಪನಂ ಪೊಣ್ಮೆ ಘರ್ಮೋ
ದಯತೋಯಂಬೊಲ್ ಮರಂದಂ ಸುರಿಯೆ ತವೆ ತದೀಯಾಳಿಮಾಲಾಲಕಶ್ರೀ
ಣಿಯನಾಂದಂತಿರ್ದುವಂತೊಪ್ಪಿದುದಲೆವ ತಳಿರ್ತಳ್ತಿರಲ್ಪಾಣಿಯಿಂದಂ ೨೩

ವ॥ ಅದಂ ನಿಂದುನೋಳ್ಪರಸಂಗೆ ನರ್ಮಸಚಿವನಿಂತೆಂದಂ

ಮ॥ ಅಳಿ ನೀಲಂ ಮಿಡಿ ಪಚ್ಚೆ ಕೀರಮುಖಮುದ್ಯತ್ಪದ್ಮರಾಗಂ ಕೊನ
ರ್ವಿಳಸದ್ವಿದ್ರುಮಮಲ್ಲಿ ತಳ್ತಿಸೆವ ಮಲ್ಲೀಕುಟ್ಮಳಂ ಮುತ್ತು ಚೆಂ
ದಳಿರಂದಂಬಡೆದಿರ್ದ ಪಟ್ಟೆಯೆನೆ ಚೈತ್ರಂ ಪಂಚರತ್ನಂಗಳಿಂ
ಕೆಳೆಯಂ ಪಂಚಶರಂಗೆ ನಿರ್ಮಿಸಿದ ಗೂಡಾರಂಬೊಲೀ ಮಾಮರಂ ೨೪

ಶೋಭಿಸುವ ಚಿಗುರಿನ ಸಮೂಹದಿಂದ ಕೂಡಿ ಕಣ್ಣಿಗೆ ಮೆರೆಯುತ್ತಿರುವುದು. ವ॥ ಮತ್ತು ೨೨. ಈ ಮಾಮರವು ಮನ್ಮಥನ ಮದ್ದಾನೆ, ವಸಂತನೆಂಬ ರಾಜನ ಭಂಡಾರ, ಅನುಪಮವಾದ ಮಲ್ಲಿಗೆಯ ಬಳ್ಳಿಯೆಂಬ ಕಾಮಿನಿಯರ ಅರಸು. ಈ ಮರವು ಬೇರೆ ಮರವೇನು ? ಅಲ್ಲ ಮಾಮರವೇ ! ವ॥ ಅವಳ ಜಾಣತನದ ಮಾತು ಕೇಳಿ, ಚೆನ್ನಾಗಿ ಹೇಳಿದಳೆಂದು ಮೆಚ್ಚುತ್ತ ಅಲ್ಲಿಂದ ಬರುವಲ್ಲಿ ೨೩. ಪ್ರೀತಿಯಿಂದ ಅಪ್ಪಿದಂತಹ ಮಲ್ಲಿಗೆಯೆಂಬ ಸ್ತ್ರೀಯಳ ದೇಹಸುಖಕ್ಕೆ ಒಲಿದು, ಮಾವೆಂಬ ಪ್ರಿಯನು, ಮಲ್ಲಿಗೆಯ ಮೊಗ್ಗುಗಳೇ ರೋಮಾಂಚನವೆನ್ನುವಂತೆ ಇರಲು, ಚಲಿಸುವಿಕೆಯೆಂಬ ನಡುಕವು ಹೊರಹೊಮ್ಮುತ್ತಿರಲು, ಬೆವರಿನ ಹನಿಗಳೆಂಬಂತೆ ಮಕರಂದವು ಸುರಿಯುತ್ತಿರಲು, ದುಂಬಿಗಳ ಸಮೂಹವೇ ಆ ಮಲ್ಲಿಗೆಯ ಬಳ್ಳಿಯೆಂಬ ಸ್ತ್ರೀಯ ಮುಂಗುರುಳಾಗಿರಲು ಅವನ್ನು ತನ್ನ ತಳಿರೆಂಬ ಕೈಗಳಿಂದ ತಿದ್ದುತ್ತಿರುವನೋ ಎಂಬ ಹಾಗೆ ಶೋಭಿಸುತ್ತಿತ್ತು. ವ॥ ಅದನ್ನು ನಿಂತು ನೋಡುವ ಅರಸನಿಗೆ ವಿದೂಷಕನು ಹೀಗೆಂದು ಹೇಳಿದನು : ೨೪. "ದುಂಬಿಗಳೇ ನೀಲಮಣಿಗಳು, ಮಿಡಿಗಳೇ ಪಚ್ಚೆಗಳು, ಗಿಳಿಯ ಚಂಚುವೇ ಪ್ರಕಾಶಮಾನವಾದ ಪದ್ಮರಾಗಮಣಿ, ಕೊನರುಗಳೇ ಶೋಭಿಸುವ ಹವಳ, ಅದರಲ್ಲಿ ತುಂಬಿಕೊಂಡು ಶೋಭಿಸುವ ಮಲ್ಲಿಗೆಯ ಮೊಗ್ಗುಗಳೇ ಮುತ್ತು, ಕೆಂಪಾದ ಚಿಗುರೇ ಅಂದವಾದ ಬಟ್ಟೆ ಎನ್ನುವ ಹಾಗೆ ಚೈತ್ರರಾಜನು ಪಂಚರತ್ನಗಳಿಂದ ಗೆಳೆಯನಾದ ಮನ್ಮಥನಿಗೆ ನಿರ್ಮಾಣ

ವ॥ ಮೆಱೆದಪುದೆಂಬ ನುಡಿಯನವಧರಿಸಿ ನಡೆವಾಗಳ್ ಮತ್ತೊಂದು ಸುಮುಮಿಳಿತ ರಸಾಲರಸಾರುಹದ ಕೆಳಗೆ

ಚಂ॥ ಅರಲ ಪರಾಗಮೆಂಬ ಪೊಸಬೇಳ್ವಿಯ ಬೂದಿಯನಿಟ್ಟು ಮಲ್ಲಿಕಾ
ತರುಣಿಯ ಭೃಂಗನೀಲಮಣಿಮಾಲೆಯನೊಯ್ವೆಲರೆಂಬ ಚೋರನಂ
ಪರಭೃತನಂದು ಕಂಡು ಮಿಗೆ ಕೂಗೆ ಭಯಂಬಡೆದೇಳ್ದು ಕಣ್ಣನೀ
ರ್ಸುರಿವವೊಲಾಕೆ ತದ್ವಿಕಚಪುಷ್ಪಗಳನ್ಮಧುಬಿಂದು ತೋಱುಗುಂ ೨೫

ವ॥ ಅದಲ್ಲದೆಯುಮದಱ ಕೆಲದಲ್ಲಿ

ಕಂ॥ ತಳಿರ್ಗೊಂಬಿಂ ಮೇಗಣ್ಗೊಗೆ
ವಳಿಮಾಲೆ ಮನೋಜ್ಞಮಾದುದಾಮ್ರಂ ಮಲ್ಲೀ
ಲಳನೆಯೊಡವೆರೆದೆಲರನುಱೆ
ಮುಳಿದಿಱಿಯಲ್ ಜಡಿದು ಕೈದುವೆನೆ ಕರತಲದಿಂ ೨೬

ವ॥ ಅದಂ ನಿರೀಕ್ಷಿಪರಸಂಗೆ ದೇವಿ ನುಡಿದಪಳೆಂದು ಕಳಾರಮೆಯಿಂತೆಂದಳ್

ಕಂ॥ ಎಲರಲುಗಿದೊಡಲರ್ವುಡಿ ತ
ನ್ನಲರ್ಗಣ್ಗೊಳ್ ಸೂಸೆ ಮಲ್ಲಿಕಾವಧು ಬಂದುಂ
ಬಲಿವೂದುವಂತೆಸೆಯೆ ಬಾ
ಷ್ಪಲವಂ ಸುರಿವಂತೆ ಮಧುಕಣಂ ಬಿಡೆ ಮೆಱೆದಳ್ ೨೭

ಮಾಡಿದ ಗೂಡಾರವೋ ಎಂಬ ಹಾಗೆ ಈ ಮಾವಿನಮರವು ವ॥ ಶೋಭಿಸುತ್ತಿದೆ" ಎಂಬ ಮಾತನ್ನು ಕೇಳಿ ನಡೆಯುತ್ತಿರುವಾಗ, ಮತ್ತೊಂದು ಹೂತುಂಬಿದ ಮಾವಿನ ಮರ (ರಸಾಲ + ರಸಾ + ರುಹ)ನ ಕೆಳಗೆ. ೨೫. ಹೂಗಳ ಧೂಳೆಂಬ ಹೊಸ ಮಂಕು ಬೂದಿ (ಮಂತ್ರದಬೂದಿ)ಯನ್ನು ಹಚ್ಚಿಕೊಂಡು, ಮಲ್ಲಿಗೆಯೆಂಬ ತರುಣಿಯ ಭೃಂಗವೆಂಬ ನೀಲರತ್ನಗಳ ಮಾಲೆಯನ್ನು ಒಯ್ಯುವ ಗಾಳಿಯೆಂಬ ಕಳ್ಳನನ್ನು ಕೋಗಿಲೆಯು ಕಂಡು, ಗಟ್ಟಿಯಾಗಿ ಕೂಗಿಕೊಳ್ಳಲು ಭಯಗೊಂಡು ಎದ್ದ ಮಲ್ಲಿಗೆಯೆಂಬ ವಧುವು ಕಣ್ಣೀರು ಸುರಿಸುವಳೋ ಎಂಬಂತೆ ಆ ಬಳ್ಳಿಯಲ್ಲಿ ಅರಳಿದ ಹೂವುಗಳಿಂದ ತೊಟ್ಟಿಕ್ಕುವ ಮಕರಂದವು ಶೋರುತ್ತಿತ್ತು. ವ॥ ಅದೂ ಅಲ್ಲದೆ ಅದರ ಪಕ್ಕದಲ್ಲಿ ೨೬. ಮಲ್ಲಿಗೆಯೆಂಬ ಸ್ತ್ರೀಯೊಡನೆ ಸಂಗವನ್ನು ಮಾಡಿದ ಗಾಳಿಯನ್ನು (ಕಂಡು) ಕೋಪಗೊಂಡು ಕೊಲ್ಲಲು ಮಾಮರವು ಕೈಯಿಂದ ಆಯುಧವನ್ನು ಹಿಡಿಗು ಜಡಿಯುತ್ತಿದೆಯೋ ಎನ್ನುವ ಹಾಗೆ ಚಿಗುರಿನಿಂದ ಕೂಡಿರುವ ಕೊಂಬೆಯಿಂದ ಮೇಲಕ್ಕೆ ಹಾರುತ್ತಿರುವ ದುಂಬಿಗಳ ಸಮೂಹವು ಮನೋಹರವಾಗಿ ಕಾಣುತ್ತಿತ್ತು. (ಕೊಂಬೆಯೇ ಕೈ. ದುಂಬಿಗಳ ಹಿಂಡು ಖಡ್ಗ. ರಂ). ವ॥ ಅದನ್ನು ನೋಡುತ್ತಿರುವ ಅರಸನಿಗೆ ಸರ್ವಮಂಗಳಾದೇವಿ ಹೀಗೆ ಹೇಳುತ್ತಿದ್ದಾಳೆ, ಎಂದು ಕಳಾರಮೆಯೆಂಬ ಸಖಿಯು ಹೀಗೆ ಹೇಳಿದಳು: ೨೭. "ಗಾಳಿಯು ಅಲುಗಲಾಗಿ ಪುಷ್ಪಧೂಳಿಯು ತನ್ನ (ಮಾವಿನ) ಹೂವೆಂಬ ಕಣ್ಣಿನಲ್ಲಿ ಬೀಳಲು, ಮಲ್ಲಿಗೆಯೆಂಬ ಸ್ತ್ರೀಯು ಬಂದು ಕಣ್ಣಲ್ಲಿ ಊದುವಳೋ ಎಂಬ ಹಾಗೆ ಶೋಭಿಸುತ್ತಿದೆ. ಬಾಷ್ಪಗಳ

ವ|| ಎಂಬುದುಮದಕ್ಕೆ ಮಚ್ಚುತಿರ್ಪಿನಂ ಪೆಱತೊಂದು ಮಲ್ಲಿಕಾವಲ್ಲಿಯುಂ ತೋಱಿ ತಾನುಮಿಂತೆಂದಳ್

ಮ|| ಅಳಿವಿಂಡಿಂಗಲರ್ವಂಡನಲ್ಲಿ ಗಿಳಿಗಳ್ಗಿಂಬಾದ ಪಣ್ಣಂ ಪಿಕಾ
ವಳಿಗಾ ಕೋರಕಮಂ ಪ್ರಸೂನವಿಳಸತ್ಸೌರಭ್ಯಮಂ ಮಾರುತಂ
ಗೆಳೆಮಾವಿತ್ತುದಿದಕ್ಕೆ ಮಿಕ್ಕ ಮರನೊಂದುಂ ಸಾಟಿಯಲ್ತೆಂದು ಮಂ
ಜುಳಮಲ್ಲೀವಧು ಬಣ್ಣಿಪಳ್ ಪ್ರಗತಭೃಂಗೀನಿಸ್ವನವ್ಯಾಜದಿಂ ೨೮

ವ|| ಎನೆ ಚೆನ್ನಾದುದೆಂದು ಮುಂತಣ್ಗೆ ನಡೆತಂದೊಂದು ರಸಾಲಸರಳಶಾಖಾಗ್ರದೊಳ್ ತನಿವಣ್ಣಂ ಮನದನ್ನಳೊಡನೆ ಸವಿವರಗಿಳಿಯುಂ ನಿಜಾಪಾಂಗಪಲ್ಲವದಿಂ ನಲ್ಲಳ್ಗೆ ತೋಱಿ

ಚಂ|| ಎಳೆದಳಿರಂ ಕದರ್ಪಂಕಿ ಕನರೊಂದಿದ ತದ್ರುಸಮಿಾಂಟಿದತ್ತು ಕೋ
ಕಿಳನಳಿಧೂಳಿಯೊಳ್ಪೆರೆದ ಪುಷ್ಪರಸಂಗಳನುಂಡುದಿಲ್ಲಿ ಕೇ
ಳ್ಗಿಳಿಯುಮೊಲೇನಿವೆಲ್ಲವಿನಿವಣ್ಣನಿದಂ ಸವಿದಪ್ಪವೇಯೆನು
ತ್ತೆಳಸಿ ಮನೋಜನಿಟ್ಟನಿದು ಪಂಡಿತವಕ್ಕಿಯೆನುತ್ತೆ ನಾಮಮಂ ೨೯

ವ|| ಎಂದದಱ ಪರಿಸರದೊಳ್ಸೊಂಪುವಡೆದಲರ್ದ ಚಂಪಕಮಂ ತೋಱಿ

ಹನಿಗಳು ಸುರಿಯುವ ಹಾಗೆ ಮಕರಂದ ಕಣಗಳು ಉದುರುತ್ತಿವೆ. (ಹೀಗೆ ಆ ಮಲ್ಲಿಗೆ ಎಂಬ ವಧುವು) ಮೆರೆಯುತ್ತಿದ್ದಾಳೆ." ವ|| ಹೀಗೆಂದು ಹೇಳಲು ಅದಕ್ಕೆ ಮೆಚ್ಚುತ್ತಿರಲಾಗಿ, ಬೇರೊಂದು ಮಲ್ಲಿಗೆಯ ಬಳ್ಳಿಯನ್ನು ತೋರಿ ತಾನು ಹೀಗೆ ಹೇಳಿದಳು. ೨೮. "ಈ ಉದ್ಯಾನದಲ್ಲಿ ದುಂಬಿಗಳ ಹಿಂಡಿಗೆ ಹೂವಿನ ಮಕರಂದವನ್ನೂ, ಗಿಳಿಗಳಿಗೆ ರಸಭರಿತವಾದ ಹಣ್ಣನ್ನೂ, ಕೋಗಿಲೆಗಳಿಗೆ ಚಿಗುರನ್ನೂ, ಮಾರುತಕ್ಕೆ ಹೂಗಳ ಶೋಭಿಸುವ ಸುಗಂಧವನ್ನೂ ಈ ಎಳೆಯ ಮಾಮರವು ಕೊಡುತ್ತಿರುವುದು. ಈ ಮಾವಿನಮರಕ್ಕೆ ಉಳಿದ ಯಾವ ಮರವೂ ಸಮನಲ್ಲ, ಎಂದು ಮನೋಹರಳಾದ ಮಲ್ಲಿಗೆಯೆಂಬ ವಧುವು ಝೇಂಕರಿಸುತ್ತಿರುವ ದುಂಬಿಗಳ ಧ್ವನಿಯ ನೆಪದಿಂದ ಬಣ್ಣಿಸುತ್ತಿದ್ದಾಳೆ." ವ|| ಎನ್ನಲು ರಾಜಶೇಖರನು ಚೆನ್ನಾಯಿತು ಎಂದು ಮುಂದಕ್ಕೆ ನಡೆತಂದು, ಒಂದು ಮಾವಿನ ಸರಳವಾದ ಕೊಂಬೆಯ ತುದಿಯಲ್ಲಿ ರಸಭರಿತವಾದ ಹಣ್ಣನ್ನು ತನ್ನ ಹೆಂಡತಿಯೊಡನೆ ತಿನ್ನುವ ಅರಗಿಳಿಯನ್ನು ತನ್ನ ಕಡೆಗಣ್ಣೆಂಬ ಚಿಗುರಿನ ಪ್ರಕಾಶದಿಂದ ಹೆಂಡತಿಯಾದ ಸರ್ವಮಂಗಳೆಗೆ ತೋರಿಸಿ ೨೯. "ಕೋಗಿಲೆಗಳು ಈ ಮಾವಿನ ಎಳೆಯ ಚಿಗುರನ್ನು ಕದರ್ಪಕಿ ಒಗರಾದ ಅದರ ರಸವನ್ನು ಕುಡಿಯುತ್ತದೆ. ದುಂಬಿಯು ಧೂಳಿನಿಂದ ಕೂಡಿದ ಹೂವಿನ ರಸವನ್ನು ಇಲ್ಲಿ ಕುಡಿಯುತ್ತದೆ. ಕೇಳು, ಗಿಳಿಯ ಹಾಗೆ ಇವೆಲ್ಲ ಮಧುರವಾದ ಹಣ್ಣಿನ ರಸದ ರುಚಿಯನ್ನು ಸವಿದುವೆ ? (ಇಲ್ಲ)" ಎನ್ನುತ್ತ "ಬುದ್ಧಿಪೂರ್ವಕವಾಗಿ ಇದಕ್ಕೆ 'ಪಂಡಿತವಕ್ಕಿ' ಎಂದು ಮನ್ಮಥನು ಹೆಸರಿಟ್ಟನು.!" ವ|| ಎಂದು ಹೇಳುತ್ತ ಅದರ ಪರಿಸರದಲ್ಲಿ

ಉ॥ ಪಾಱುವ ಪಾಯ್ವ ಸಂದಣಿಪ ಸುತ್ತುವ ಪತ್ತುವ ಭೋಂಕನೆಯ್ದುವಿಂ
ಪೇಱಿದ ಪೂದೊಡಂಬೆಯೆನೆ ನೋಡುವ ಪಾಡುವ ಜೋಲ್ವ ಬೀಳ್ವ ಬಾ
ಯೂಱುವ ಮತ್ತೆ ಮತ್ತೆ ಮಧುವೀಂಟುವ ಸೊಕ್ಕುವಳಿಪ್ರತಾನಮಂ
ಜಾಱಿಸಿದತ್ತು ಸಂಪಗೆ ಮಧುಪ್ರಿಯರುಜ್ವಲಸೇವ್ಯರಕ್ಕುಮೇ ೩೦

ವ॥ ಎಂದು ಚತುರಜನಚಕ್ರೇಶ್ವರಂ ನುಡಿದು ನಡೆವಾಗಳದಱ ಮುಗುಳಂ ಬಗೆದು ಭಾವಿಸಿ ನಿಜಸಖಿಗೆ ದೇವಿಯಿಂತೆಂದಳ್

ಕಂ॥ ಅಳಿನೀಸಿಂಜನಿಗಿದು ತಾ
ನಳವಡದೆಂದುೞಿದು ಕಳೆದು ಚಂಪಕದಲರಂ
ಕೆಳದಿ ಮನೋಜಂ ತಳ್ವದೆ
ತಳೆದಂ ಮಿಕ್ಕಲರ ತಳಿರ ಶರಸಮುದಯಮಂ ೩೧

ವ॥ ಎಂಬ ನುಡಿಯಂ ಕೇಳ್ದು ಮೆಚ್ಚುತ್ತಲ್ಲಿಂ ತಳರ್ದು ಮಧುಲಕ್ಷ್ಮೀ ಮಧುರತರ ವಿಳಾಸಮಂ ಬಗೆಗೊಂಡು ಪೊಗಳುತಂ ಬರೆವರೆ ವನಮಧ್ಯದ ತೆಱಂಬೊಳೆವ ತೆಱಪಿನೊಳಳವಟ್ಟ ಕೊಳವೇರ್ಗಳ ಕೇರ್ಗಳೊಳಗೆ ತಮಾಲದೆಳೆದಳಿರಂ ಕೊಱೆದು ಚಿತ್ರಪತ್ರಮಪ್ಪಂತೆ ಪತ್ರಿಸಿ ನಟ್ಟ

ಸೊಂಪಾಗಿ ಬೆಳೆದು ಹೂ ಬಿಟ್ಟ ಸಂಪಿಗೆ ಮರವನ್ನು ತೋರಿಸಿ ೩೦. ಹಾರುವ, ಮೇಲೆ ಬೀಳುವ, ಗುಂಪು ಸೇರುವ, ಸುತ್ತಾಡುವ, ಹತ್ತುವ, ಥಟ್ಟನೆ ಹೋಗುವ, ಸೊಂಪಾಗಿರುವ ಹೂಗೊಂಚಲನ್ನು ನೋಡುವ, ಹಾಡುವ, ಜೋತಾಡುವ, ಕೆಳಗೆಬೀಳುವ, ಪುನಃ ಪುನಃ ಮಧುವನ್ನು ಕುಡಿಯುವ, ಸೊಕ್ಕು ಏರುವ (ಗರ್ವವೇರುವ) ದುಂಬಿಗಳ ಸಮೂಹವನ್ನು ಈ ಸಂಪಿಗೆಯು ಓಡಿಸಿತು. ಮಧುವಿನಲ್ಲಿ (ಮದ್ಯದಲ್ಲಿ) ಪ್ರಿಯರಾದವರು ಉಜ್ಜಲವಾದ ಗುಣಗಳುಳ್ಳವರನ್ನು ಸೇವಿಸಲು ತಕ್ಕವರಾಗುತ್ತಾರೆಯೆ ? (ಮದ್ಯಪಾನ ಮಾಡುವವರು ಶ್ರೇಷ್ಠರಾದವರ ಹತ್ತಿರಕ್ಕೆ ಬರಲು ಯೋಗ್ಯತೆಯುಳ್ಳವರಾಗುವುದಿಲ್ಲವೆಂಬ ಭಾವ) ವ॥ ಹೀಗೆಂದು ಚತುರ ಜನರಿಗೂ ಚಕ್ರವರ್ತಿಯೆನಿಸಿದ ರಾಜಶೇಖರನು ನುಡಿದು ನಡೆಯುವಾಗ, ಅದರ (ಚಂಪಕದ) ಮೊಗ್ಗನ್ನು ಉದ್ದೇಶಿಸಿ ಸರ್ವಮಂಗಳೆಯು ತನ್ನ ಸಖಿಗೆ ಹೀಗೆ ಹೇಳಿದಳು : ೩೧. "ಗೆಳತಿಯೇ, (ದುಂಬಿಗಳಿಗೂ ಸಂಪಿಗೆ ಹೂವಿಗೂ ವಿರೋಧವಿರುವ ಕಾರಣ) ಅಳಿಗಳೇ ಸಿಂಜಿನಿಯಾಗಿ (ಬಿಲ್ಲನಾರಿಯಾಗಿ) ಉಳ್ಳ ಮನ್ಮಥನಿಗೆ ಈ ಹೂವು ಹೊಂದಿಕೆಯಾಗುವುದಿಲ್ಲವೆಂದು ಇದನ್ನು ಬಿಟ್ಟು ಉಳಿದ ಮಲ್ಲಿಗೆ ಮೊದಲಾದ ಹೂವುಗಳನ್ನೂ ಚಿಗುರನ್ನೂ ಬಾಣ ಸಮೂಹವನ್ನಾಗಿ ಮಾಡಿಕೊಂಡನು." ವ॥ ಎಂಬ ಮಾತನ್ನು ಕೇಳಿ ಮೆಚ್ಚುತ್ತ ಆ ಪ್ರದೇಶದಿಂದ ಹೊರಟು, ವಸಂತಲಕ್ಷ್ಮಿಯ ಅತಿರಮ್ಯವಾದ ಸೊಗಸನ್ನು ಮನಸ್ಸಿನಲ್ಲಿ ಭಾವಿಸಿ ಹೊಗಳುತ್ತ ಬಂದರು. ಆ ನಂದನವನ ಮಧ್ಯದ ವಿಶೇಷವಾಗಿ ಪ್ರಕಾಶಿಸುವ ಬಯಲಿನಲ್ಲಿ ಸಿದ್ಧವಾಗಿದ್ದಂಥ ಲಾವಂಚದ ಜೇರಿನ ತಡಿಕೆಗಳಲ್ಲಿ ಹೊಂಗೆಯ ಎಳೆಯ ಚಿಗುರನ್ನು ಕೊರೆದು ಎಲೆಗಳ ಚಿತ್ರಗಳಾಗಿರುವಂತೆ

ಪೊಂಬಾಳೆಯ ಬಾಳ್ಗಂಬಂಗಳಿಂ ಸೋಗೆವೆರಸಿದ ಪುಂಡ್ರೇಕ್ಷುದಂಡಂಗಳನಮರ್ಚಿ ಬಾಳವೇರ್ಗಳಿಂ ಬಿಗಿದೆಡೆದೆಡೆಯೊಳ್ ಸಂಪಗೆಯ ಬಿಱಿಮುಗುಳ್ಗಳಂ ತೆತ್ತಿಸೆ ನಿಬಿಡಮೆನಿಸಿ ನಿಮಿರ್ಚಿದ ಪೊಂಗೇದಗೆ ನುಣ್ಗಱಿಯ ಬಲ್ಪಂತೆಗಳಿಂ ಚಂದನರಸಂಗಳಿಂ ತೊಯ್ದೆಳೆಯ ದವನದ ಮೇಲ್ಪೊದಕೆಯಿಂದೊಳಗೆ ಬಾಳೆಲೆಯ ಪಲಗೆಗಳ ಪರಿಸರದೊಳೊಂದಿ ಸಂದುವಿಡದಂತೆ ತರಂಗೊಳಿಸಿ ರಚಿಸಿದ ಕರ್ಣಿಕಾರದ ಪಲಗೆಗಟ್ಟಿನೆಡೆಯೆಡೆಯೊಳಳವಟ್ಟ ಎಸಳ್ಗಳಂ ನೆಗಪಿ ಕೀಲಿಸಿದ ಪೊಂದಾವರೆಯ ಮೊಗ್ಗೆಗಳ ನುಣ್ಪೊಗರಿಗಳಿಂ ಮಲ್ಲಿಗೆಮುಗುಳ ಸೂಸಕಂಗಳಂ ತೊಡರ್ಚಿ ನಿಮಿರ್ಚಿದ ಚೂತಪಲ್ಲವದ ಚುಂಚುಲೋವೆಯಿಂ ಸರಸ ಪರಿಮಳಕೆ ಸಾಲ್ಗೊಂಡೆಱಗಲವ್ವಳಿಪಳಿಪ್ರತಾನಮನೊಳಗಣ್ಗೆ ಪುಗಲೀಯದೆ ಸೋದು ಕಳೆವೆಳಕೌಂಗಿನ ಬಾಗಿಲ್ವಾಡದ ಕಾಪಿನ ಚಾಂಪೇಯ ನಿರ್ಮಿತಮಾದ ಜಂತ್ರದ ಪುತ್ತಳಿಗಳಿಂ ಕುಂಕುಮರಸದೊಳಳ್ದಿದ ಕುಮುದಮುಕುಳದ ಮೊಳೆಗಳಂ ತೊಡರ್ಚಿ ಮಾಡಿದ ಮೃಣಾಳನಾಳದಮಳ್ಗದಂಗಳಿಂ ರಂಜಿಸಿ ಕಂಪಿನ ಕರಂಡಕಮುಂ ತಣ್ಪಿನ ತವರ್ಮನೆಯುಂ ಸಿಂಗರದ ಲೀಲಾಭುವನಮುಮೆನಿಸಿರ್ದ ವಸಂತಮಂಟಪದ ಮಧ್ಯದ ಮಕರಂದಕಸದ ತುಂತುರಂ ತೂಱುವ ಪಜ್ವಳಿಪ ಗೊಜ್ಜಗೆಯಲರ್ಜಂತ್ರದ ಬೆಳ್ಮುಗಿಲ ಕೆಳಗಳ

ಹತ್ತಿಸಿ, ನಟ್ಟ ಅಡಿಕೆಯ ಹೊಂಬಾಳೆಯಿಂದ ಕೂಡಿದ ಬಾಳೆಯ ಕಂಬಗಳಿಂದಲೂ, ಹಸುರೆಲೆಯಿಂದ ಕೂಡಿದ ಸಟಪಟೆ ಕಬ್ಬಿನ ಕೋಲುಗಳನ್ನು ಜೋಡಿಸಿ, ಬಾಳದ ಬೇರುಗಳಿಂದ ಬಿಗಿದು, ಅಲ್ಲಲ್ಲಿಗೆ ಸಂಪಗೆಯ ಅರಳುವ ಮೊಗ್ಗುಗಳನ್ನು ಹತ್ತಿಸಿ, ಅದರಲ್ಲಿ ನಿಬಿಡವಾಗಿ ನಿಗುರಿನಿಂತಿರುವ ಬಂಗಾರವರ್ಣದ ನುಣ್ಣನೆಯ ಗರಿಗಳನ್ನು ಸಿಕ್ಕಿಸಿದ ದೊಡ್ಡ ದೊಡ್ಡ ಜಂತೆಗಳಿದ್ದವು. ಶ್ರೀಗಂಧದ ರಸದಲ್ಲಿ ತೋಯಿಸಿದ ಎಳೆಯ ದವನದ ಮೇಲು ಹೊದಿಕೆಯಿಂದ ಕೂಡಿ, ಒಳಭಾಗದಲ್ಲಿ ಬಾಳೆ ಎಲೆಯ ಹಲಗೆಗಳ ಸಮೀಪದಲ್ಲಿ ಸಂದು ಬಿಡದ ಹಾಗೆ ಸೇರಿಸಿ ಕ್ರಮಗೊಳಿಸಿ ರಚಿಸಿದ ಕರ್ಣಿಕಾರಪುಷ್ಪಗಳ ಹಲಗೆಗಟ್ಟಿನ ಆಯಾ ಸ್ಥಳ ಸ್ಥಳಗಳಲ್ಲೂ ಜೋಡಿಸಿದ, ಹೊರಹೊಮ್ಮಿದ ಎಸಳುಗಳುಳ್ಳ ಹೊನ್ನಿನ ಬಣ್ಣದ ಕಮಲಗಳ ನುಣ್ಣನೆಯ ಕಾಂತಿ ಹರಡಿತ್ತು. ಮಲ್ಲಿಗೆಯ ಮೊಗ್ಗುಗಳ ಜಾಲರಿಗಳಲ್ಲಿ ಮಾವಿನ ಚಿಗುರುಗಳನ್ನು ಸಿಕ್ಕಿಸಿ ಮಾಡಿದ ಸೂರುಗಳಿಂದ ಉದ್ಯಾನವು ಕೂಡಿತ್ತು. ಸರಸವಾದ ಸುಗಂಧಕ್ಕೆ ಸಾಲು ಸಾಲಾಗಿ ಬಂದು ಎರಗುವ ದುಂಬಿಗಳ ಸಮೂಹವನ್ನು ಒಳಭಾಗಕ್ಕೆ ಬಿಡದ ಹಾಗೆ ಕಳೆಗೊಂಡ ಎಳೆಯ ಅಡಿಕೆ ದಬ್ಬೆಗಳ ಬಾಗಿಲಿನಲ್ಲಿ ನಿಂತು ಕಾಯಲು ಸಂಪಿಗೆಹೂವುಗಳಿಂದ ಮಾಡಿದ ಕೀಲುಗೊಂಬೆಗಳನ್ನು ಇಡಲಾಗಿತ್ತು. ಕುಂಕುಮದ ರಸದಲ್ಲಿ ನೆನೆಸಿದ ನೈದಿಲೆಯ ಮೊಗ್ಗೆಗಳ ಮೊಳೆಗಳನ್ನು ಹೊಡೆದು ಮಾಡಿದ ತಾವರೆಯ ದಂಟಿನ ಶ್ರೇಷ್ಠ ಕದಗಳಿಂದ ಕೂಡಿತ್ತು. (ಹೀಗೆ) ಶೋಭಿಸುತ್ತ ಕಂಪಿನಿಂದ ಕೂಡಿದ ಭರಣಿಯೂ, ತಂಪಿನ ತವರುಮನೆಯೂ, ಶೃಂಗಾರದ ಲೀಲಾಗೃಹವೆನಿಸಿದ್ದ ವಸಂತಕಾಲದ ಮಂಟಪದ ಮಧ್ಯದಲ್ಲಿ ಪುಷ್ಪರಸದ ತುಂತುರು ಹನಿಯನ್ನು ಹಾರಿಸಲು ಪ್ರಜ್ವಲಿಸುವ ದುಂಡುಮಲ್ಲಿಗೆಯ ಹೂವುಗಳ ಯಂತ್ರಗಳಿದ್ದವು.

ವಡಿಸಿದ ಸುರಯಿಯರಲ ಪರಾಗದ ಪೊಂಜಗುಲಿಯ ಮೇಲಣಸುಗೆದಳಿರ್ವಾಸಿನೊಳಿರಸಿವೆರಸಿ ಕುಳ್ಳಿರ್ದು ನರೇಂದ್ರಂ ಚಂದ್ರಧರಪೂಜೆಗೆ ಮನಂದಂದು ಸುಂದರೀಜನಮಂ ಬನದೊಳ್ ಪೂಗೆಯ್ಯಲ್ಬೆಸಸಿ ಗಾನವಿದ್ಯಾಧರಿಯೆಂಬ ವೀಣಾಪಾಣಿಯ ಮೊಗಮಂ ನಡೆನೋಡಿದಾಗಳ್

ಮ॥ ಗಮಕಂ ತಳ್ತಿರೆ ಠಾಯೆ ಮಿಂಚಿರೆ ಚಮತ್ಕಾರಂ ಕರಂ ಪೊಣ್ಮೆ ದೇ
ಸಿ ಮನಂಬೊಕ್ಕಿರೆ ಮೂರ್ಚ್ಛನಾಪ್ರಸರಮುಂ ಚೆಲ್ವಾಗೆ ಪಂಚಪ್ರಪಂ
ಚಮದಿಂಬಾಗಿರೆ ತೇನತೇನಮೊದವಲ್ತಾನಂ ಲಯಂ ಮುಂಚೆ ಸಂ
ಭ್ರಮದಿಂ ಬಾಜಿಸಿದಳ್ ಬಜಾವಣೆಯಿನಂದಂಬೆತ್ತವಳ್ವೀಣೆಯಂ ೩೨

ವ॥ ಅದಂ ಕೇಳ್ದು ಮೆಚ್ಚುತ್ತಿರ್ದನಿತ್ತಲ್ವಿಲಾಸಿನೀಜನಂ ಪರಿತಂದು ಪೂಗೊಯ್ಯ ಲೆಂದು ಮನಂದಂದು ಸಂದಣಿಸಿ ನಿಂದು

ಚಂ॥ ನಡು ನಸುಬಳ್ಕೆ ನೇತ್ರರುಚಿ ನಿಳ್ಕೆ ಮುಖೇಂದುಮರೀಚಿ ತುಳ್ಕೆ ಪೊಂ
ಗೊಡವೊಲೆ ಪೊಣ್ಮೆ ಘರ್ಮಜಳಮುಣ್ಮೆ ಮನೋಭವನಣ್ಮೆ ಬಟ್ಟಬಲ್ಮಡಿ
ಕಡುಜಾಱೆ ಮಂದಗತಿ ಮಿಱೆ ಮದಾಳಿಗಳೊಂದಿ ಪಾಱೆ ಮೇ
ಣ್ಪಡಿಯೆ ನಿತಂಬಮೈದಿದುದಳುಂಬಮುದಾತ್ತ ವಧೂಕದಂಬಕಂ ೩೩

(ಅಂಥ) ಹೂವಿನ ಬಿಳಿಯ ಮುಗಿಲ ಕೆಳಗೆ ಸುರಗಿಯ ಹೂವುಗಳ ಪರಾಗದಿಂದ ಬಂಗಾರವರ್ಣದ ಜಗುಲಿಯನ್ನು ಮಾಡಲಾಗಿತ್ತು. ಅದರ ಮೇಲೆ ಅಶೋಕದ ಚಿಗುರನ್ನು ಹಾಸಿತ್ತು. (ಅಂತಹ) ಹೂವಿನ ಹಾಸಿಗೆಯ ಮೇಲೆ ಸರ್ವಮಂಗಳೆ ಸಹಿತ ವಾಗಿ ರಾಜಶೇಖರನು ಕುಳಿತು, ಪರಮೇಶ್ವರನ ಪೂಜೆಗೆ ಮನಸ್ಸುಮಾಡಿ, ಸುಂದರಿಯು ರಾದ ಸ್ತ್ರೀಯರಿಗೆ ಹೂಗಳನ್ನೆತ್ತಿ ತರಲು ಅಪ್ಪಣೆಮಾಡಿ, 'ಗಾನವಿದ್ಯಾಧರಿ' ಎಂಬ ವೀಣಾಪಾಣಿಯ ಮುಖವನ್ನು ದಿಟ್ಟಿಸಿ ರಾಜನು ನೋಡಿದನು. ೩೨. ಆಗ ಗಮಕದ ಮರ್ಯಾದೆಯಿಂದ ಕೂಡಿ ರತ್ಯಾದಿ ಸ್ಥಾಯಿಭಾವಗಳು ಅತಿಶಯವಾಗಿರುವ ಹಾಗೆ ನುಡಿಸುವ ಚಮತ್ಕಾರವು ಚೆನ್ನಾಗಿ ವ್ಯಕ್ತವಾಗುತ್ತಿತ್ತು. ದೇಶಿ (ದೇಶೀಯ ಸಂಗೀತ ಪದ್ಧತಿ) ಮನಸ್ಸಿನಲ್ಲಿ ಮೂಡಿತ್ತು. ಸ್ವರಾರೋಹಣ ಅವರೋಹಣದ ಕ್ರಮಕ್ಕನುಗುಣ ವಾದ ತಂತಿಯ ಮಿಡಿತಗಳ ಪ್ರಸರಣವು ಚೆಲುವುಗೊಂಡಿತ್ತು. ಪಂಚಮಸ್ವರದ ಪ್ರಪಂಚವೇ ಹರಡಿಕೊಂಡ ಹಾಗೆ ಕ್ರಮವಾದ ರಾಗಾಲಾಪಗಳು ಸೇರಿಬರುತ್ತಿತ್ತು. ತಾನ ಲಯಗಳನ್ನು ಹೊಂದಿಸಿ ಸಂಭ್ರಮಗೊಂಡು ರಾಗತಾಳಗಳ ಜೋಡಣೆಯಿಂದ ಕೂಡಿ, ಅವಳು ಅಂದವಾಗಿ ವೀಣೆಯನ್ನು ಬಾರಿಸಿದಳು. ವ॥ ಆ ವೀಣಾವಾದನವನ್ನು ಕೇಳಿ ರಾಜಶೇಖರನು ಮೆಚ್ಚುತ್ತಿದ್ದನು. ಇತ್ತ ವಿಲಾಸಿನಿಯರಾದ ಸ್ತ್ರೀಯರು ಓಡಿ ಬಂದು ಹೂಗಳನ್ನು ಎತ್ತಲೆಂದು ಮನಸ್ಸುಮಾಡಿ ಗುಂಪಾಗಿ ಸೇರಿ ನಿಂತುಕೊಂಡು, ೩೩. ನಡುವು ಸ್ವಲ್ಪ ಬಳುಕುತ್ತಿರಲು, ಕಣ್ಣಕಾಂತಿ ಮುಂಬರಿದಿರಲು, ಮುಖಚಂದ್ರನ ಕಿರಣಗಳು ತುಂಬಿ ತುಳುಕುತ್ತಿರಲು, ಬಂಗಾರದ ಕೊಡಗಳಂತಿರುವ ಮೊಲೆಗಳು ಉಬ್ಬಿ ಕೊಂಡು ಕಾಣುತ್ತಿರಲು, ಮೈಯಲ್ಲಿ ಬೇವರೇರಿರಲು, ಮನ್ಮಥಸಂಬಂಧವಾದ ವಿಕಾರವು ...

ವ॥ ಅಂತು ಎಯ್ದೆವಂದು ಕುಸುಮಾಕರವನಮಧ್ಯದೊಳ್ನಿಂದು

ಕಂ॥ ಚೆಂದಳಿರ ಕರಂಡಕಮರ
ವಿಂದದಳಸ್ಫುಟಕೆ ಕದಳಿಯೆಲೆವಡಲಿಗೆ ಚೆ
ಲ್ವೊಂದಿರೆ ಕರದೊಳ್ತಳೆದೊಲ
ವಿಂದಂ ನೆರೆನೆರೆದು ಪರೆದು ಪೂಗೊಯ್ವೆಡೆಯೊಳ್ ೩೪

ಕರತಳದರುಣದ್ಯುತಿ ತ
ಳ್ತಿರೆ ಬಂದುಗೆಗೆತ್ತು ನೋಡೆ ಕಣ್ಗದಿರಳುರ್ದೊ
ಪ್ಪಿರೆ ಶಂಕೆ ತೊಲಗೆ ಮಲ್ಲಿಗೆ
ಯರಲಂ ಮನವೊಲ್ದು ಕೊಯ್ದಳೆಳೆವೆಣ್ಣೊರ್ವಳ್ ೩೫

ವ॥ ಮತ್ತಂ

ಕಂ॥ ವನವನಧಿಯಲ್ಲಿ ಜನಿಸಿದ
ಘನವಮೌಕ್ತಿಕದಂತೆ ಮೆಱೆವ ಮಲ್ಲಿಗೆಮುಗುಳಂ
ವನಜಾಲಯೆಯಂತೊಪ್ಪುವ
ವನಜಾನನೆಯೊರ್ವಳಾಯ್ದಳತಿಸಂಭ್ರಮದಿಂ ೩೬

ಪ್ರಬಲಿಸಿರಲು, ದುಂಡನೆಯ ದೊಡ್ಡ ತುರುಬು ಬಿಚ್ಚುತ್ತಿರಲು, ಮಂದಗಮನವು ಹಾರಿಹೋಗಿರಲು, ಮದಿಸಿದ ದುಂಬಿಗಳು (ಹೂವುಗಳಿಂದ) ಹಾರಿಹೋಗುತ್ತಿರಲು, ಪೊರವಾರಗಳು ಅಲ್ಲಾಡುತ್ತಿರಲು, ಉದಾತ್ತಸ್ವಭಾವದ ಆ ಸ್ತ್ರೀಸಮೂಹವು ತ್ವರೆಯಾಗಿ (ಹೂಗೊಯ್ಯಲು ಬನಕ್ಕೆ) ಬಂದಿತು. ವ|| ಈ ರೀತಿ ಬನವನ್ನು ಕುರಿತು ಶೋಭೆಗೊಳ್ಳುವಂತೆ ಬಂದು ಹೊಕ್ಕು, ಆ ಮನೋಹರವಾದ ಉದ್ಯಾನದ ಮಧ್ಯದಲ್ಲಿ ನಿಂತುಕೊಂಡು ೩೪. ಕೆಂಪಾದ ತಳಿರಿನ ಬುಟ್ಟಿ, ಕಮಲದಳಗಳ ಹೂಬುಟ್ಟಿ (ದೊನ್ನೆ), ಬಾಳೆಯೆಲೆಯಲ್ಲಿ ಮಾಡಿದ ಹಡಲಿಗೆ (ಬುಟ್ಟಿ) ಇವುಗಳನ್ನು ಚಲುವಾಗಿರುವ ಹಾಗೆ ಕೈಯಲ್ಲಿ ಹಿಡಿದುಕೊಂಡು, ಗುಂಪಾಗಿ ಸೇರಿ ಸೇರಿ, ಹರಿದಾಡಿ ಹೂಗಳನ್ನು ತಿರಿಯುವ ಸಮಯದಲ್ಲಿ ೩೫. ಹೆಣ್ಣುಮಗಳೋರ್ವಳು ಮಲ್ಲಿಗೆಯ ಹೂವನ್ನು ಕೊಯ್ಯಲುಹೋದಳು. ಇವಳ ಕೈಯ ಕೆಂಪಿನ ಪ್ರಕಾಶದಿಂದ ಅದು ಕೆಂಪಾಗಲು ಬಂದುಗೆಯೆಂದು ತಿಳಿದಳು. ದಿಟ್ಟಿಸಿ ನೋಡಲು ಕಣ್ಣಿನ ಕಾಂತಿಯು ವಿಕಾಸಗೊಂಡು ಪುನಃ ಬೆಳ್ಳಗೆ ಕಾಣಲು ಶಂಕೆಯು ತೊಲಗಿ ಮಲ್ಲಿಗೆಯೇ ಎಂದು ಭಾವಿಸಿ ಮನಸ್ಸಂತೋಷದಿಂದ ಕೊಯ್ದಳು ವ|| ಮತ್ತು ೩೬. ಉದ್ಯಾನವೆಂಬ ಸಮುದ್ರದಲ್ಲಿ ಹುಟ್ಟಿದ ಶ್ರೇಷ್ಠ ಮುತ್ತುಗಳ ಹಾಗೆ ಶೋಭಿಸುವ ಮಲ್ಲಿಗೆಯ ಮೊಗ್ಗುಗಳನ್ನು ಲಕ್ಷ್ಮಿ (ವನಜ+ಆಲಯೆ)ಯಂತೆ ಒಪ್ಪುವ ಕಮಲಮುಖಿ

ಅಳಿಗೆ ಪಗೆಯಾದೊಡೇನೆ
ನ್ನಳಕಾಳಿಗೆ ಕೆಳೆಯಿದೆಂದು ಸಂಪಗೆಯ ಸಮು
ಜ್ವಳ ಮುಕುಳಕುಳಮನಾಯ್ದಳ್
ಕಳಶಸ್ತನೆ ಕರಜರುಚಿರರುಚಿ ತುಳ್ಕುವಿನಂ ೩೭

ಮಿಸುನಿಯೊಳೆಸಗಿದ ಪೂವೆನೆ
ಮಿಸುಗುವ ನವಕರ್ಣಿಕಾರಮಂ ಕೊಯ್ವಳ ಬೆ
ಳ್ಪೆಸೆವ ಕರಜಾಂಶು ತಳ್ತಿರೆ
ರಸಲಿಪ್ತಂ ಕನಕಚಪಕಮೆನೆ ಕಣ್ಗೊಳಿಕುಂ ೩೮

ಮೊದಲೊಳ್ಸಂಪಗೆಯರಲಂ
ಸುದತಿ ಕರಂ ಕೊಯ್ದು ಮುಡಿದು ಬಳಿಕುಳಿದಲರಂ
ಚದುರೆಸೆವಿನಮೊರ್ವಳ್ಮೃಗ
ಮದಗಂಧಿ ಗಜೇಂದ್ರಯಾನೆ ತಿಱಿದಳದೊರ್ವಳ್ ೩೯

ವ|| ಪೆಱತೊಂದು ಚಂದನಮಹೀಜದಲ್ಲಿ

ಕಂ|| ಜಡೆ ಮರವಾವೆಂದು ನವಿ
ಲ್ವಿಡಿಯಲೊಡರ್ಚಿರೆ ವರಾಂಗಿ ಬೆದರ್ದೀಕ್ಷಿಸೆ ಕ
ಣ್ಗಡೆವೆಳಗುಗಂಡು ಮಿಂಚೆಂ
ದೊಡನದು ಗಱಿಗೆದರ್ದು ನರ್ತಿಸಿತಾಗಳ್ ೪೦

ಯೋರ್ವಳು ಅತಿಸಂಭ್ರಮದಿಂದ ತಿರಿದುಕೊಂಡಳು. ೩೭. ಸಂಪಗೆಯು ದುಂಬಿಗೆ ಹಗೆ ಯಾದರೇನು ? ನನ್ನ ಜಡೆಮುಡಿಗೆ ಸ್ನೇಹವುಳ್ಳದ್ದೆಂದು ಕುಂಭದಂತಹ ಮೊಲೆಯುಳ್ಳ ಓರ್ವಳು ಉಗುರಿನ ಕಾಂತಿಯು ತುಳುಕುವುದೋ ಎಂಬಂತೆ ಉಜ್ವಲವಾದ ಸಂಪಗೆಗಳ ಮೊಗ್ಗುಗಳನ್ನು ಉಗುರಿನಿಂದ ಉಡಿದು ಆಯ್ದುಕೊಂಡಳು. ೩೮. ಬಂಗಾರದಿಂದ ಮಾಡಿದ ಹೂವೋ ಎನ್ನುವಂತೆ ಶೋಭಿಸುವ ಹೊಸದಾಗಿ ಅರಳಿದ ಕರ್ಣಿಕಾರವನ್ನು ಕೊಯ್ಯುವ ಅವಳ ಉಗುರುಗಳ ಕಾಂತಿಯು ಅದರ ಮೇಲೆ ಬೀಳಲು (ಅದು ಬಿಳುಪಾಗಿ) ಗಂಧರಸ (ಅಥವಾ ಪಾದರಸ)ದಿಂದ ಬಳಿಯಲ್ಪಟ್ಟ ಬಂಗಾರದ ಬಟ್ಟಲಿನಂತೆ ಶೋಭಿಸು ತ್ತಿತ್ತು. ೩೯. ಸುದತಿಯೂ, ಕಸ್ತೂರಿಗಂಧದಂತಹ ವಾಸನೆಯುಳ್ಳವಳೂ, ಗಜ ಶ್ರೇಷ್ಠದ ನಡಿಗೆಯುಳ್ಳವಳೂ ಆದ ಒಬ್ಬಳು ಮೊದಲು ಸಂಪಿಗೆಹೂಗೊಯ್ದು ಚಮತ್ಕಾರ ವಾಗಿ ಮುಡಿದುಕೊಂಡು ಬಳಿಕ ಉಳಿದ ಹೂವುಗಳನ್ನು ತಿರಿದುಕೊಂಡಳು. ವ|| ಮತ್ತೊಂದು ಚಂದನವೃಕ್ಷದಲ್ಲಿ ೪೦. (ಹತ್ತಿರಕ್ಕೆ ಬಂದ) ಸ್ತ್ರೀಯ ಜಡೆಯನ್ನು ಮರದ ಹಾವೆಂದು ತಿಳಿದು ನವಿಲೊಂದು ಬಂದು ಹಿಡಿಯಲು ಸಿದ್ಧವಾಗಿತ್ತು. ಆ ಸುಂದರಿಯು ಹೆದರಿ ನೋಡಲಾಗಿ ಅವಳ ಕಣ್ಣಿನ ಬೆಳಕನ್ನು ಕಂಡು ಮಿಂಚೆಂದು ಭಾವಿಸಿ ಕೂಡಲೇ (ಮಳೆಗಾಲ ಬಂದಿತೆಂದು) ಗರಿಗೆದರಿ ನರ್ತಿಸಲು ಮೊದಲು ಮಾಡಿತು !

ವ॥ ಮತ್ತಮೊಂದೆಡೆಯೊಳ್

ಕಂ॥ ಮರದೆಲೆವೊದಱೊಳ್ಪೊಕ್ಕಿಗಱಿ
ದಿರುತರಲಂ ಕೊಯ್ಯಲೊರ್ವಳಿಡೆ ಕೈಯನದಂ
ತರುಣಿ ಪೆಱಳ್ತಳಿರ್ಗೆತ್ತೇಂ
ಕರಮಿಟ್ಟಳೊ ಕಿಲದ ಕೆಳದಿಯರ್ನಗೆ ಬನದೊಳ್ ೪೧

ವ॥ ಮತ್ತಮೊರ್ವಳ್

ಕಂ॥ ತಳಿರ್ಗೊಯ್ಯಲೆಂದು ಕನಕೋ
ಜ್ವಳರುಚಿ ತನುವಡದರ್ದು ನವತಮಾಲದ ತರುವಂ
ಸೆಳೆಮಿಂಚು ಜಳದಮಂಡಳ
ದೊಳೆ ಥಳಥಳಿಪಂತೆ ಕಣ್ಗದೇಂ ತೊಳಗಿದಳೋ ೪೨

ವ॥ ಆ ಶೋಭಾವತಿಯಲ್ಲದೆಯುಂ

ಕಂ॥ ತರುಣ ತಮಾಲದ ತರುವಂ
ತರುಣಿ ಕರಂ ಪತ್ತಿ ಪೊಕ್ಕವಳ್ ನೆನಯಿಸಿದಳ್
ಸ್ಮರನಸಿಲತೆಯಂ ಕಾರೊಱೆ
ಗಿರದೊಳಪುಗಿಪೊಂದು ಭಾವಮುಂ ಬನದೆಡೆಯೊಳ್ ೪೩

ಚೆಂದಳಿರೊಂದೆ ಮೈ ಮೊಗ
ಮಂದೊಗೆದುದು ಕುಂಕುಮಾಂಕಿತಂ ಸಂಜೆಯು ಕೆಂ
ಪೊಂದಿರೆ ಮೂಡುವ ಪರಿಪೂ
ರ್ಣೇಂದುಗೆ ಪಡಿಯೆನಿಸುತಸುಗೆಯುಡರ್ದಂಗನೆಯಾ ೪೪

ವ॥ ಮತ್ತೊಂದು ಸ್ಥಳದಲ್ಲಿ ೪೧. ಮರವೊಂದರ ಎಲೆಗಳ ಹೊದರಿನಲ್ಲಿ ಒಬ್ಬ ಹೆಂಗಸು ಅಡಗಿಕೊಂಡು ಹೂವನ್ನು ಕೊಯ್ಯಲು ಕೈಯನ್ನು ಇಡಲಾಗಿ, ಮತ್ತೊಬ್ಬ ತರುಣಿಯು ಅದು (ಆ ಕೈಯು) ಮರದ ಚಿಗುರೆಂದು ಭಾವಿಸಿ ಅಲ್ಲಿಗೆ ತಾನೂ ಕೈಯಿಕ್ಕಲಾಗಿ ಪಕ್ಕದಲ್ಲಿದ್ದ ಸಖಿಯರು ನಗುತ್ತಿದ್ದರು. ವ॥ ಮತ್ತೊಬ್ಬಳು ೪೨. ಬಂಗಾರದಂತೆ ಪ್ರಕಾಶಮಾನವಾದ ಮೈಕಾಂತಿಯುಳ್ಳ ಸುಂದರಿಯೊಬ್ಬಳು ಚಿಗುರುಗಳನ್ನು ಕೊಯ್ಯಲಿಕ್ಕೆಂದು ನೂತನವಾಗಿ ಚಿಗಿತ ಹೊಂಗೆಯ ಮರವನ್ನು ಏರಿರಲು, ಅವಳು ಸೆಳೆಮಿಂಚು ಮೇಘಮಂಡಲದಲ್ಲಿ ಹೊಳೆಯುವಂತೆ ಕಣ್ಣಿಗೆ ಅದೇನು ಪ್ರಕಾಶಿಸಿದಳೋ ! (ಹೊಂಗೆಯ ಮರವೇ ಮೋಡಗಳು, ಆ ಸ್ತ್ರೀಯೇ ಮಿಂಚು–ಆಗಿತ್ತೆಂದು ಭಾವ) ವ॥ ಆ ಶೋಭಾವತಿಯಲ್ಲದೆಯೂ ೪೩. ಓರ್ವ ತರುಣಿಯು ವನದ ಪ್ರದೇಶದಲ್ಲಿರುವ ತರುಣತಮಾಲದ ಮರವನ್ನು ಹತ್ತಿ, ಅದರ ಒಳಹೊಕ್ಕು, ಮನ್ಮಥನ ಖಡ್ಗವು ಕಪ್ಪಾದ ಒರೆಯಲ್ಲಿ ಸೇರಿಕೊಳ್ಳುವ ಸಂದರ್ಭವನ್ನು ನೆನಪು ಮಾಡಿಕೊಟ್ಟಳು. ೪೪. ಅಶೋಕವೃಕ್ಷವೊಂದನ್ನು ಹತ್ತಿ ಕುಳಿತ ಹೆಂಗಸೋರ್ವಳು ಕೆಂಪಾದ ಚಿಗುರಿನ ಮಧ್ಯದಲ್ಲಿ ಸೇರಿಕೊಂಡಿದ್ದಳು. ಚಿಗುರಿನಿಂದ ಅವಳ ದೇಹವು ಮರೆಯಾಗಿತ್ತು. ಕುಂಕುಮದಿಂದ ಅಂಕಿತವಾದ ಮುಖ

ವ॥ ಪೆಱತೊಂದೆಡೆಯೊಳೊರ್ವ ಪೃಥುನಿತಂಬೆ

ಕಂ॥ ಜಡಿವ ನಿತಂಬಂ ಮುಡಿ ಮೊಲೆ
ಯುಡರಲ್ಪಿಡದಿರೆ ವರಾಂಗಿಯಶುಗೆಯು ಮರದೊಳ್
ಪಡೆದಳ್ಪುಡದೊಳ್ಪದೆದೊದೆ
ದೊಡನಿಡಿದೆಳೆದಳಿರನದಱೊಳವಳತಿಭರದಿಂ ೪೫

ವ॥ ಆ ತಳಿರಂ ತನ್ನ ಸೋರ್ಮುಡಿಯೊಳ್ಮುಡಿದು ನಳಿನಾಕರಕ್ಕೆ ಬಂದು

ಕಂ॥ ಕೊಳದೊಳಲರ್ದಬ್ಜದಲರಂ
ನಳಿನೇಕ್ಷಣೆ ಮುಱಿವೆನೆಂದು ಪುಗೆ ತೆಱೆವೊಯ್ಲಿಂ
ಮುಳುಗುತ್ತೇಳುತೆ ಭಯದಿಂ
ತಳಹೊಳಗೊಳ್ವಂತೆ ಕಣ್ಗದೇಂ ರಂಜಿಸಿತೋ ೪೬

ವ॥ ಪೆಱತೊಂದು ತಾಣದೊಳ್ಮಾಮರನಂ ಪರ್ಬಿದ ಮಲ್ಲಿಗೆಯಲ್ಲಿಗೈತಂದು

ಚಂ॥ ಬಿಡುಮುಡಿ ಸೂಸೆ ಮುಂ ತಳೆದ ಪೂಗಳನೀಗಳೆ ನವ್ಯಪುಷ್ಪಮಂ
ಮುಡಿಸೆನಗೆಂಬವೋಲ್ ಕಲಿತ ಕಂಕಣನಿಕ್ವಣಮುಣ್ಮೆ ತತ್ಕರಂ
ಜಡಿವವೊಲಲ್ಲಿ ಪಲ್ಲವಮನಾ ಲತೆಯೊಳ್ಪುರುಡಿಂದೆ ಕೋರಕಂ
ಬಡಿವವೊಲೇಳೆ ಮೈಬೆಮರದೊರ್ವಳರಲ್ದಿಱಿದಳ್ವಿಳಾಸದಿಂ ೪೭

ಮಾತ್ರ ಕಾಣುತ್ತಿತ್ತು. (ಆಗ ಅವಳು) ಸಂಧ್ಯಾಕಾಲದ ಕೆಂಪುಛಾಯೆಯಿಂದ ಕೂಡಿರುವ ಪೂರ್ಣಚಂದ್ರನಿಗೆ ಸಮಾನವಾಗಿ ಕಾಣಿಸಿಕೊಂಡಳು. (ಅಶೋಕದ ಕೆಂಪು ಚಿಗುರೇ ಸಂಧ್ಯಾರಾಗ ; ಅವಳ ಮುಖವೇ ಚಂದ್ರ). ವ|| ಮತ್ತೊಂದು ಕಡೆಯಲ್ಲಿ ಓರ್ವ ನಿತಂಬಿನಿ, ೪೫. ಒಸೆದಾಡುವ ನಿತಂಬಗಳೂ, ಮುಡಿಯೂ, ಮೊಲೆಗಳೂ (ಭಾರದ ಕಾರಣದಿಂದ) ಅಶೋಕವೃಕ್ಷವನ್ನು ಹತ್ತುವುದಕ್ಕೆ ಅವಕಾಶವಿಲ್ಲದಂತೆ ಮಾಡಲಾಗಿ, ಅದರ ಬುಡವನ್ನು ಕಾಲಿನಿಂದ ಒಡೆದ ಕೂಡಲೆ ತುಂಬಾ ಚಿಗಿತ ಎಳೆಯ ತಳಿರನ್ನು ಅದರಿಂದ ಅವಳು ಭರದಿಂದ ಪಡೆದಳು. (ಸ್ತ್ರೀಯರು ಒದ್ದರೆ ಆ ವೃಕ್ಷ ಚಿಗುರುತ್ತದೆಂಬು ಕವಿ ಸಮಯ) ವ|| ಆ ತಳಿರನ್ನು ತನ್ನ ದೊಡ್ಡ ತುರುಬಿನಲ್ಲಿ ಮುಡಿದುಕೊಂಡು ಸರೋವರಕ್ಕೆ ಬಂದು, ೪೬. ಕೊಳದಲ್ಲಿ ಅರಳಿರುವ ಕಮಲದ ಹೂವನ್ನು ಮುರಿಯುವೆನೆಂದು ಆ ಕಮಲಾಕ್ಷಿಯು ಅದರಲ್ಲಿ ಹೊಗಲು, ತೆರೆಗಳ ಹೊಡೆತದಿಂದ ಮುಳುಮುಳುಗಿ ಏಳುತ್ತ ಭಯದಿಂದ ತಳಮಳಗೊಳ್ಳುವ ಹಾಗೆ ತಾವರೆಯು ಅದೇನು ಕಣ್ಣಿಗೆ ರಂಜಿಸಿತೋ ! ವ|| ಮತ್ತೊಂದು ಸ್ಥಳದಲ್ಲಿ ಮಾವಿನಮರಕ್ಕೆ ಹಬ್ಬಿದ ಮಲ್ಲಿಗೆಯಲ್ಲಿಗೆ ಬಂದಳು. ೪೭. ಅವಳ ಬಿಚ್ಚಿದ ಮುಡಿಯು ಈಗಲೇ ನನಗೆ ಹೊಸ ಹೂವುಗಳನ್ನು ಮುಡಿಸು ಎನ್ನುವ ಹಾಗೆ ಮೊದಲು ಮುಡಿದ ಹೂಗಳನ್ನು ಉದುರಿಸಿ ಕೆಡಹುತ್ತಿತ್ತು. ಆ ಸುಂದರಿಯ ಕರವು ಚಿಗುರುಗಳನ್ನು ತನ್ನಂತೆ ಇರುವುದೆಂದು ತಿಳಿದು ಹೊಡೆಯುತ್ತದೆಯೋ ಎಂಬಂತೆ ಕೈಯಲ್ಲಿರುವ ಕಂಕಣವು ಧ್ವನಿಮಾಡುತ್ತಿತ್ತು. (ಕೋಮಲ ಶರೀರವು ತನ್ನಂತೆ

ವ॥ ಪೆಱತೊಂದೆಡೆಯೊಳ್

ಉ॥ ಮಲ್ಲಿಗೆ ಮೇಲೆ ಪರ್ಬಿ ಮುಗುಳೊತ್ತಿರೆ ಕೊಯ್ಯಲೊಡರ್ಚಿನಿಂದ ಸಂ
ಫುಲ್ಲ ಸರೋರುಹಾಕ್ಷಿಯ ಘನಸ್ತನಮಂಟಿರೆ ಕೊಂಬುವೊಲ್ಲಸ
ತ್ಪಲ್ಲವಪಾಣಿಯುಂ ತರುಣಚೂತ ಯುವಾಂಗಮೆ ಕಂಪಿಪಂತದೇಂ
ನಿಲ್ಲದೆ ಪಾಯೆ ಕಂಪಿಸುತೆ ಕಣ್ಗೆಸೆದಿರ್ದುದೊ ನೋಟಕರ್ಕಳಾ ೪೮

ಕಂ॥ ಅಳಿವೆರಸಿದಲರಗೊಂಚಲ
ನೆಳೆವೆಣ್ಣಿಡಿದಿರೆ ಕರಾಗ್ರದೊಳ್ ಮೆಱೆದುದು ಮಂ
ಜುಳಶಶಿಮಂಡಳಮಂ ನವ
ನಳಿನಂ ಸೆಱೆವಿಡಿಯೆ ತೋರ್ಪವೊಲ್ ಬನದೆಡೆಯೊಳ್ ೪೯

ಪೂಗುಡಿಯನುಡಿವೆಡೆಯೊಳೆ ಪ
ರಾಗಂ ಪರಕಲಿಸೆ ಮೆಯ್ಯೊಳಾ ಮದಗೊಂಬಂ
ಬಾಗೊತ್ತಿ ತಳಿರನುಡಿವ
ಳ್ಪೊಗಣೆಯನ ಕರಿಣಿಯಂತಿರೇನೊಪ್ಪಿದಳೋ ೫೦

ರಥೋದ್ಧತ॥ ನಲ್ಲಳೊರ್ವಳೆಳೆಮಾವಿನಲ್ಲಿ ಸ
ತ್ಪಲ್ಲವಪ್ರಕರಮಂ ಕರಾಗ್ರದಿಂ
ಮೆಲ್ಲನೊತ್ತಿ ಮುಱಿದಾಸೆ ಕಂದಿತಾ
ಪಲ್ಲವಕ್ಕೆ ಮೊದಲಾ ಕರಾಂಬುಜಂ ೫೧

ಕೃಶವಾಗಿರುವ ಆ ಮಲ್ಲಿಗೆಯ ಬಳ್ಳಿಯು ಮೇಲಿನ ಸ್ಪರ್ಧೆಯಿಂದ) ಮೊಗ್ಗುಗಳನ್ನು ಬಿಟ್ಟಿರುವುದೋ ಎಂಬ ಹಾಗೆ ಬೆವರಿನ ಹನಿಗಳಿಂದ ಕೂಡಿತ್ತು. ವ|| ಮತ್ತೊಂದು ಕಡೆಯಲ್ಲಿ, ೪೮. ಒಂದು ಮಾವಿನ ಮರಕ್ಕೆ ಮಲ್ಲಿಗೆಯ ಬಳ್ಳಿ ಹಬ್ಬಿ ಮೊಗ್ಗುಗಳನ್ನು ಬಿಟ್ಟಿತ್ತು. ಅವನ್ನು ಕೀಳಲು ಒಬ್ಬ ಕಮಲಾಕ್ಷಿಯು ಮರಕ್ಕೆ ತಾಗಿನಿಂತಳು. ಅವಳ ಘನ ಸ್ತನಗಳು ಮರಕ್ಕೆ ಒತ್ತಿದವು. ಚಿಗುರಿನಂತಹ ಕೋಮಲವಾದ ಕೈ ಕೊಂಬೆಗಳನ್ನು ತಾಕಿದವು. ಮಾವಿನಮರ ಅಲ್ಲಾಡಿತು. ಆಗ ಮಾವಿನ ಗಿಡವೆಂಬ ಯುವಕನ ದೇಹವು (ಸಾತ್ತ್ವಿಕ ಭಾವದಿಂದ) ನಡುಗುವಂತೆ ಅದೆಷ್ಟು ಚೆಲುವಾಯಿತೊ ! ೪೯. ದುಂಬಿಯಿಂದ ಕೂಡಿದ ಹೂಗೊಂಚಲನ್ನು ಓರ್ವ ಎಳೆಯ ಹೆಂಗಸು ಮುರಿದು ಕೈಯಲ್ಲಿ ಹಿಡಿದಿರಲು, ಅದು ಮನೋಹರವಾದ ಚಂದ್ರಮಂಡಲವನ್ನು ನೂತನ ಕಮಲವು ಆ ನಂದನದ ಹತ್ತಿರದಲ್ಲಿಯೇ ಸೆರೆಹಿಡಿದ ಹಾಗೆ ಕಾಣುತ್ತ ಶೋಭಿಸಿತು. (ಅವಳ ಕೈಯೇ ಕಮಲ. ಹೂಗೊಂಚಲೇ ಚಂದ್ರಮಂಡಲ) ೫೦. ಓರ್ವ ಲಲನೆ ಹೂವಿನ ಗೊಂಚಲನ್ನು ಮುರಿಯುವ ಸನ್ನಿವೇಶದಲ್ಲಿ ಆ ಹೂವಿನಲ್ಲಿರುವ ಪುಷ್ಪಧೂಳು ಮೆಯ್ಯನ್ನೆಲ್ಲ ಮೆತ್ತಿಕೊಂಡಿತ್ತು. ಕೊಂಬೆಯನ್ನು ಬಾಗಿಸಿ ಒತ್ತಿಹಿಡಿದು ತಳಿರನ್ನು ಕೊಯ್ಯುತ್ತಿದ್ದಳು. ಮನ್ಮಥನ ಹೆಣ್ಣಾನೆಯಂತೆ ಅವಳು ತೋರಿದಳು. ೫೧. ಪ್ರಿಯಳಾದ ಓರ್ವಳು ಎಳೆಯ ಮಾವಿನಮರದಲ್ಲಿ ಒಳ್ಳೆಯ ಚಿಗುರುಗಳ ಸಮೂಹವನ್ನು ಕೈಯ ತುದಿಯಿಂದ ಮೆಲ್ಲನೆ ಒತ್ತಿ ಮುರಿದು ಧರಿಸಲು, ಆ ಪಲ್ಲವವು ಬಾಡುವುದಕ್ಕೆ ಮೊದಲೇ

ಕಂ॥ ಮಗಮಗಿಪ ಬೆಮರನಾಂತೇಂ
ಸೊಗಯಿಸಿದಳೊ ಕಣ್ಗೆ ಕಮಳೆ ಕಮಳಮರಂದಂ
ಮಿಗೆ ಪತ್ತಿರೆ ತೋರ್ಪವೊಲಾ
ಮೃಗಾಕ್ಷಿ ಮೃಗೆಱಗೆ ಪರಮೆಗಳ್ ಬನದೆಡೆಯೊಳ್ ೫೨

ಮ॥ಸ್ರ॥ ಕರದಿಂದೊರ್ಕೊಂಬನಿಂಬಾಗಿರೆ ಪಿಡಿದೆಳೆಯಳ್ನೀಳ್ಕೆ ಮತ್ತೊಂದು ಕೈದಾ
ವರೆಯಂ ಮೇಲೆತ್ತಿ ಪೂಗೊಯ್ವೆಡೆಯೊಳವಳ ವಕ್ತ್ರಾಬ್ಜಮಂ ಮುತ್ತೆ ಭೃಂಗೋ
ತ್ಕರಮಾಗಳ್ಬೆರ್ಚಿ ಕೊಂಬಂ ಬಿಡೆ ತರು ಕರುಣಂಬೆತ್ತವೊಲ್ ಪಲ್ಲವಶ್ರೀ
ಕರದಿಂದಂ ಸೋದದಂ ಪಾಯ್ದೊಲೆವ ನೆವದೆ ಪುಷ್ಪೌಘಮಂ ಸೂಸಿತಾಗಳ್ ೫೩

ವ॥ ಮತ್ತೊಂದಾಮ್ರಮಹೀಜದಲ್ಲಿ

ಕಂ॥ ತಳಿರ್ಗೊಯ್ವೆಳೆಯಳ ಚೆಂದುಟಿ
ದಳಿರಂ ತಳಿರ್ಗೆತ್ತು ಕರ್ದುಂಕಿದುದು ಪಿಕನೀ ಮಂ
ಜುಳಪಲ್ಲವಮೆಲ್ಲಮನೀ
ಗಳೆ ಪರಿದಪಳೆಂದು ಮುಳಿಸಿನಿಂ ಕರ್ದುಂಕುವವೊಲ್ ೫೪

ವ॥ ಮತ್ತಮೋರ್ವಳ್ ಮತ್ತಕಾಶಿನಿ ಪೆಱತೊಂದು ಸರಳಚೂತಶಾಖಾಂತರದೊಳ್

ಅವಳ ಕರಕಮಲವು ಬಾಡಿತು. (ಪಲ್ಲವಕ್ಕಿಂತ ಕೈ ಹೆಚ್ಚು ಮೃದುವಾಗಿತ್ತೆಂದು ಭಾವ) ೫೨. ಮೃಗಾಕ್ಷಿಯಾದ ಒಬ್ಬಳು ಗಮಗಮಿಸುತ್ತಿರುವ ಬೆವರನ್ನು ಹೊಂದಿದ್ದಳು. ಆ ವಾಸನೆಗೆ ಭ್ರಮರಗಳು ಮುತ್ತುತ್ತಿದ್ದವು. ಲಕ್ಷ್ಮಿಯು ಕಮಲದ ಮಕರಂದವು ಹತ್ತಿದಾಗ ಕಾಣುವ ಹಾಗೆ ನಂದನದ ಹತ್ತಿರದಲ್ಲಿ ಆಗ ಅದೇನು ಶೋಭಿಸುತ್ತಿದ್ದಳೋ ! ೫೩. ಒಬ್ಬ ಎಳೆಯ ಸ್ತ್ರೀಯು ಕೈಯಿಂದ ಕೊಂಬೆಯೊಂದನ್ನು ಗಟ್ಟಿಯಾಗಿ ಹಿಡಿದು ನಿಗುರಿನಿಂತು, ಮತ್ತೊಂದು ಕರಕಮಲಮಲವನ್ನು ಮೇಲಕ್ಕೆತ್ತಿ ಅದರಲ್ಲಿರುವ ಹೂವನ್ನು ಕೊಯ್ಯುತ್ತಿರುವ ಸಮಯದಲ್ಲಿ ಅವಳ ಮುಖಕಮಲವನ್ನು ದುಂಬಿಗಳು ಮುತ್ತಿದವು. (ಆಗ) ಹೆದರಿ ಅವಳು ಆ ಕೊಂಬೆಯನ್ನು ಬಿಟ್ಟಳು. ಆ ಮರವು (ಅವಳಿಗಾಗಿ) ಕರುಣ ವನ್ನು ಹೊಂದಿದಹಾಗೆ ಚಿಗುರುಗಳ ಕೈಗಳಿಂದ ಆ ದುಂಬಿಗಳ ಹಿಂಡನ್ನು ಓಡಿಸಿ, ಹತ್ತಿ ರಕ್ಕೆಬಂದು ಪ್ರೀತಿದೋರುವ ನೆವದಿಂದ ಅಲ್ಲಾಡಿ ಹೂಗಳ ಸಮೂಹವನ್ನು ಸುರಿಸಿತು. (ಬಾಗಿಸಿದ ಕೊಂಬೆಯನ್ನು ಕೈ ಬಿಟ್ಟಾಗ ಬಿರುಸಿನಿಂದ ಹಾರಿದ ಕೊಂಬೆಯಿಂದ, ಹೂ ಉದುರುವುದೂ, ದುಂಬಿಗಳು ಹಾರುವುದೂ ಸ್ವಾಭಾವಿಕ. ಆ ಚಿತ್ರವಿಲ್ಲಿದೆ) ವ॥ ಮತ್ತೊಂದು ಮಾವಿನ ಮರದಲ್ಲಿ ೫೪. ತಳಿರನ್ನು ಕೊಯ್ಯುತ್ತಿರುವ ಎಳೆಯ ಹುಡುಗಿಯ ಕೆಂಪಾದ ತುಟಿಯನ್ನು ತಳಿರೆಂದೇ ಭಾವಿಸಿ ಕೋಗಿಲೆಯೊಂದು (ಈ ಮರದ) ಮನೋಹರವಾದ ಚಿಗುರನ್ನೆಲ್ಲ ಇವಳು ಹರಿಯುವಳೆಂದು ಸಿಟ್ಟಿನಿಂದ ಕುಕ್ಕಿತೋ ಎನ್ನುವಹಾಗೆ (ಅವಳ ತುಟಿಯನ್ನು) ಕುಕ್ಕಿತು (ಕರ್ದುಂಕಿತು). ವ॥ ಮತ್ತೊಬ್ಬ

ಕಂ॥ ಪೂಗೊಯ್ಯಲೆತ್ತೆ ತೋಳಂ
ಮೇಗಣ್ಗನಿಸೊಗೆದ ದಕ್ಷಿಣಸ್ತನಮುಕುಳಂ
ಪೂಗಣೆಯನೀಕ್ಷಿಪರನಿಸ
ಲಾಗಳ್ತೆಗೆದಬ್ಜಬಾಣಮೆನೆ ಕಣ್ಗೊಳಿಕುಂ ೫೫

ವ॥ ವಿಳಾಸವತಿ ಮತ್ತವೊರ್ವಳ್

ಚಂ॥ ಸೆಳೆನಡು ಬಳ್ಕೆ ತೋರವೊಲೆ ಮೇಲುದನೊಯ್ಯನೆ ನೂಂಕೆ ಕಣ್ಣ ಸು
ಣ್ಣೆಳಗಡರ್ದೊಪ್ಪೆ ಪೀನಜಘನಂ ಜಡಿವುತ್ತಿರೆ ಬಾಹುಮೂಲಮುಂ
ಪೊಳೆಯೆ ಬಳಲ್ದು ಜಾಱೆ ಮುಡಿ ಮುಗ್ಧೆ ಪದಾಗ್ರದೆ ನಿಂದು ನೀಳ್ಕಿ ಕೆಂ
ದಳಮನಮರ್ಚಿ ಕೊಯ್ದಳೆಳೆಮಾವಿನ ಕೆಂದಳಿರಂ ವಿಳಾಸದಿಂ ೫೬

ಕಂ॥ ಎಳೆಯಳೆಳೆದಳಿರನುಜ್ವಳ
ಕಳಶಮನರ್ಚಿಪವೊಲಿಳಿಪಿದಳ್ಕುಚದೊಳ್ಮಂ
ಜುಳಹೃದಯಸ್ಥಿತ ಮದನಂ
ಗೆಳಸಿತ್ತಪಳೆನೆ ರಸಾಲಪಲ್ಲವಶರಮಂ ೫೭

ವ॥ ಆ ವಿಳಾಸಾನ್ವಿತೆಯರುಮಲ್ಲದೆ ಮತ್ತೆ ಕೆಲಂಬರ್ ವಿಧಗ್ಧೆಯರ್ನೆರೆದು

ಯುವತಿಯು ಬೇರೊಂದು ಸರಳವಾದ ಮಾಮರದ ಕೊಂಬೆಯ ಮಧ್ಯದಲ್ಲಿ ೫೫. ಹೂ ಗೊಯ್ಯಲೆಂದು ತೋಳನ್ನು ಮೇಲಕ್ಕೆತ್ತಲಾಗಿ ಆಗ ಮೊಗ್ಗಿನಂತಹ ಬಲಗಡೆಯ ಮೊಲೆಯು ಸ್ವಲ್ಪ ಹೊರ ಚಾಚಿ ತೋರುತ್ತಿತ್ತು. (ಅದು) ಮನ್ಮಥನು ನೋಡುವವರನ್ನು ಹೊಡೆಯಲು ಆಗ ಹೊರತೆಗೆದ ಕಮಲ (ಅರವಿಂದ) ದ ಬಾಣವೋ ಎನ್ನುವ ಹಾಗೆ ಶೋಭಿಸುತ್ತಿತ್ತು. ವ॥ ಮತ್ತೊಬ್ಬ ವಿಲಾಸವತಿಯು ೫೬. ತೆಳ್ಳನೆಯ ನಡುವು ಬಳುಕುತ್ತಿರಲು, ದಪ್ಪನೆಯ ಮೊಲೆಗಳು ಮೇಲಿನ ಸೆರಗನ್ನು ಮೆಲ್ಲಗೆ ನೂಕುತ್ತಿರಲು, ಕಣ್ಣಿನ ನುಣ್ಣನೆಯ ಕಾಂತಿಯು ಎತ್ತಲೂ ವ್ಯಾಪಿಸಿಸಲು, ದಪ್ಪನೆಯ ನಿತಂಬಗಳು ಅಲ್ಲಾಡುತ್ತಿರಲು, ಬಾಹುವಿನ ಮೊದಲ ಭಾಗವು ಹೊಳೆಯುತ್ತಿರಲು, ಮುಡಿಯು ಬಳಲಿ ಬಿಚ್ಚುತ್ತಿರಲು, ತುದಿಗಾಲಿನಿಂದ ನಿಗುರಿನಿಂತು, ಕೆಂಪಾದ ಅಂಗೈಯನ್ನು ಚಾಚಿ, ಎಳೆಯ ಮಾಮರದ ಕೆಂಪಾದ ಚಿಗುರುಗಳನ್ನು ಸಂಭ್ರಮದಿಂದ ಕೊಯ್ಯುತ್ತಿದ್ದಳು. ೫೭. ಓರ್ವ ಬಾಲೆಯು ಹೃದಯಸ್ಥಿತನಾದ ಮನ್ಮಥನಿಗೆ ಅಪೇಕ್ಷಿಸಿ, ಅವನಿಗೆ ಮಾವಿನ ಚಿಗುರೆಂಬ ಬಾಣವನ್ನು ಕೊಡುತ್ತಿರುವಳೋ ಎಂಬಂತೆಯೂ, ಪ್ರಕಾಶಮಾನವಾದ ಕಳಶಗಳನ್ನು ಅರ್ಚಿಸುವ ಹಾಗೆಯೂ ಮಂಜುಳವಾದ ಎಳೆಯ ಚಿಗುರನ್ನು ತನ್ನ ಮೊಲೆಗಳ ಮೇಲೆ ಇರಿಸಿಕೊಂಡಳು. ವ॥ ಆ ವಿಳಾಸದಿಂದ ಕೂಡಿದ ಸ್ತ್ರೀಯರಲ್ಲದೆ ಮತ್ತೆ ಕೆಲವು ಪ್ರಾಢೆ

ರಗಳೆ॥ ಅಲ್ಲಿ ಮಾಮರದಲ್ಲಿ ಮಲ್ಲಿಕಾಲತೆಯಲ್ಲಿ.
ಎಳೆಯಸುಗೆ ಮರದಲ್ಲಿ ಜಳರುಹಾಕರದಲ್ಲಿ
ಸಂಪಗೆಯ ತರುಗಳೊಳ್ ಸೊಂಪಿಡಿದ ಸುರಯಿಯೊಳ್
ಪಾದರಿಯಮರದಲ್ಲಿ ಮಾಧವಿಯ ಲತೆಯಲ್ಲಿ
ತಿಳಕ ಬಕುಳಾದಿ ತರುನಿವಹದಾರವೆಗಳೊಳ್
ದಳಫಳಕುಸುಮವಿಸರವಿಡಿದ ವಿಟಪಂಗಳೊಳ್
ಪೂಗೊಯ್ಯಲೆಂದಬಲೆಯರ್ನೆರೆದು ಬಗೆದಂದು
ಬೇಗದಿಂ ಪರಿತಂದು ಪರಿತೋಷದಿಂ ನಿಂದು
ಕಡೆಗಣ್ಣ ಕುಡಿವೆಳಗು ಬಿಡದಡರೆ ನಡೆನೋಡಿ
ನಿಡುಗೊಂಬನೆಡಗೈಯೊಳಡಿಸಿ ಪಿಡಿದೊಳ್ಗಾಡಿ
ವೆರಸಿ ನೆಲೆವೊಲೆಯೊಗೆಯೆ ಬಲಗೈಯ ನಿಮಿರ್ದೆತ್ತಿ
ಕರಕರಜ ರುಚಿರರುಚಿ ತಳಿರಲರ್ಗಳಂ ಮುತ್ತಿ
ಮುಸುಕುತಿರೆ ಮುಡಿಸಡಿಲೆ ಪೊಸಮುಗುಳ್ಗಳಂ ತಿಱಿದು
ಮಿಸುಪ ಕಿಸಲಯಮನೊಸಗೆ ಮಿಗೆ ನೆಱೆ ಪಱಿದು
ನನೆಗೊನೆಯನಲರ್ದಲರ ಕೊನರ್ಗಳಂ ಕೊಯ್ಕೊಯ್ದು
ವನಜದಳದೊಳ್ಕದಳಿಯೆಲೆಯೆಲೆಗಳೊಳ್ ಪೊಯ್ದು

ಯರು ಕೂಡಿಕೊಂಡು ರಗಳೆ|| ಆ ವನದಲ್ಲಿರುವ ಮಾಮರದಲ್ಲಿ, ಮಲ್ಲಿಗೆಯ ಬಳ್ಳಿಯಲ್ಲಿ, ಎಳೆಯ ಅಶೋಕವೃಕ್ಷದಲ್ಲಿ, ಸರೋವರದಲ್ಲಿ, ಸಂಪಿಗೆ ಮರಗಳಲ್ಲಿ, ಸೊಂಪಾಗಿ ಬೆಳೆದ ಸುರಗಿಯ ಮರದಲ್ಲಿ, ಪಾದರಿ ಮರದಲ್ಲಿ, ಕಾಡು ಇರುವಂತಿಗೆಯ ಬಳ್ಳಿ (ಮಾಧವೀಲತೆ) ಯಲ್ಲಿ, ತಿಲಕ, ಬಕುಳವೇ ಮೊದಲಾದ ಗಿಡಗಳ ಸಮೂಹದ ಬನಗಳಲ್ಲಿ, ಎಲೆ, ಹೂವು, ಹಣ್ಣುಗಳ ಸಮೂಹದಿಂದ ಕೂಡಿದ ಮರಗಳಲ್ಲಿ ಹೂಗಳನ್ನು ಕೊಯ್ಯುವುದಕ್ಕೆಂದು ಮಾನಸ್ಸುಮಾಡಿ ಕೂಡಿಕೊಂಡು ಬೇಗ ಬೇಗ ಓಡಿ ಬಂದು ಸಂತೋಷದಿಂದ ನಿಂತು ಕೊಂಡರು. (ಅವರು) ಕಡೆಗಣ್ಣುಗಳ ಕಾಂತಿಯು ಸುತ್ತಲೂ ವ್ಯಾಪಿಸುವಂತೆ ಎಲ್ಲಕಡೆಗೂ ನೋಡಿದರು. ಎಡಗೈಯಿಂದ ಉದ್ದವಾದ ಕೊಂಬೆಗಳನ್ನು ಗಟ್ಟಿಯಾಗಿ ಹಿಡಿದು ಒಳ್ಳೆಯ ಸಂಭ್ರಮದಿಂದ (ಹೂಗೊಯ್ಯಲು) ಬಲಗೈಯನ್ನು ಮೇಲಕ್ಕೆತ್ತಿದರು. ಆಗ ಅವರ ಸ್ತನವು ಹೊರ ಹೊರಟು ಕಾಣುತ್ತಿತ್ತು. ಕೈಯ ಬೆರಳುಗಳ ಮನೋಹರವಾದ ಕಾಂತಿಯು ಚಿಗುರು ಮತ್ತು ಹೂಗಳನ್ನು ಮುತ್ತಿ ಮುಸುಗಿತ್ತು. ಮುಡಿಯು ಬಿಚ್ಚಿಹೋಗಲಾಗಿ ಹೊಸ ಹೂವುಗಳನ್ನು ಕೊಯ್ದುಕೊಂಡು ಬಂದರು. ಶೋಭಿಸುವ ಚಿಗುರುಗಳನ್ನು ಅತಿ ಉತ್ಸಾಹದಿಂದ ಹರಿದರು. ಮೊಗ್ಗಿನ ಗೊನೆ, ಅರಳಿದ ಹೂಗಳ ಟೊಂಗೆಗಳನ್ನು ಕೊಯ್ದು, ಕೊಯ್ದ ಕಮಲದ ದಳದ ಜೊನ್ನೆ, ಬಾಳೆಯೆಲೆಗಳಲ್ಲಿ ಸುರಿದರು. ಅತಿ ತಣ್ಣನೆಯ ತಣ್ಣೀ

ಕುಳಿರ್ವ ಹಿಮಜಳದೆ ಚಳೆಯಂಗೊಟ್ಟು ಬೇಱಾಯ್ದು
ನಳಿನದಳೆಯೆಳೆಗಳಿಂ ಗಳಿಲನೆ ಸರಂಗೆಯ್ದು
ಸುಯ್ಗಂಪು ಮೆಯ್ಗಂಪು ಬಾಯ್ಗಂಪು ಬೆರಸುತಿರೆ
ಕಯ್ಗಂಪು ಕೆಂದಾವರೆಯ ಸಿರಿಯನೊರಸುತಿರೆ
ಮಲ್ಲಿಗೆಯ ಹಾರಮಂ ಪಲ್ಲವದ ಪದಕಮಂ
ಸಲ್ಲಲಿತ ಮಂಜರಿಯ ಕರ್ಣಾವತಂಸಮಂ
ಸುರಯಿಯುರಿವಿಱಿದರಲ ಮುಡಿಯ ಮುತ್ತಿನ ಬಳೆಯ
ನುರುತರದ ಸರಸಿಜದ ಕರ್ಣಿಕೆಯ ಮುದ್ರಿಕೆಯ
ನೆಸವ ಪೊಸಬಂದುಗೆಯ ಮಿಸುಪ ಮುಗುಳಂದುಗೆಯ
ನಸುಗೆಯರಲುಂಗುರಮನುತ್ಪಳದ ಮಂಟಗೆಯ
ನುಜ್ವಳಿಪ ಗೊಜ್ಜಗೆಯ ಸಜ್ಜುಕದ ಚಳಿಕಿಗೆಯ
ನಜ್ಜಗೆಯ ಪಜ್ಜಳಿಪ ಬಜ್ಜರದ ಬಾಪುರಿಯ
ನಾಂಪರೊಳಲಂಪೆಸೆವ ಸಂಪಗೆಯ ಮೇಖಲೆಯ
ನಿಂಪಡರ್ದ ಸುರಹೊನ್ನೆ ಮುಗುಳ ಮೃದುಕಂಠಿಕೆಯ
ನೆಸಗಿ ಮಿಕ್ಕಲರ್ಗಳಿಂ ಬಾಸಿಗಗಳಂ ರಚಿಸಿ
ಪೊಸಜವ್ವನೆಯರಲ್ಲಿ ಪೋಲ್ತೆತ್ತಿ ಸಡಗರಿಸಿ
ಶಿವಪೂಜೆಗಳವಟ್ಟ ಕುಸುಮಮಂ ಬೇಱಾಯ್ದು
ತವೆ ಬಹುವಿಚಿತ್ರತರ ಮಾಲಿಕೆಗಳಂ ಸವೆದು

ರನ್ನು ಚಿಮುಕಿಸಿದರು. ಅವುಗಳನ್ನು ಬೇರೆಯಾಗಿ ವಿಂಗಡಿಸಿ ಕಮಲದ ನಾರಿನ ಎಳೆಗಳಿಂದ ತಟ್ಟನೆ ಸರಗಳನ್ನು ಮಾಡಿದರು. ಉಸುರಿನಲ್ಲಿ, ಮೈಯಲ್ಲಿ, ಬಾಯಲ್ಲಿ ಸುವಾಸನೆ ಬೆರಸಿತು. ಕೈಯ ಕೆಂಪು ಕೆಂದಾವರೆಯ ಕಾಂತಿಯನ್ನು ಹೋಗಲಾಡಿಸಿತು. (ಹೀಗಿರಲು) ಮಲ್ಲಿಗೆಯ ಹಾರ (ಅದಕ್ಕೆ) ಚಿಗುರಿನ ಪದಕ, ಮನೋಹರವಾದ ಹೂವಿನ ಗೊಂಚಲಿನ ಕಿವಿಯ ತೊಡಿಗೆ, ಸುರಗಿಯ ಅರ್ಧ ಅರಳಿದ ಹೂಗಳ ತುರುಬಿನ ಮುತ್ತಿನ ಬಲೆ, ಶ್ರೇಷ್ಠ ವಾದ ಕಮಲದ ಕರ್ಣಿಕಾರದ ಉಂಗುರಗಳನ್ನು (ಮಾಡಿದರು.) ಶೋಭಿಸುವ ಹೊಸ ಬಂದುಗೆಮೊಗ್ಗುಗಳಿಂದ ಕಾಲಂದುಗೆಗಳನ್ನೂ, ಅಶೋಕ ಪುಷ್ಪದ ಉಂಗುರವನ್ನೂ, ಕನ್ನೈದಿಲೆಯ ಕಾಲುಂಗುರವನ್ನೂ, ಪ್ರಜ್ವಳಿಸುವ ದುಂಡುಮಲ್ಲಿಗೆಯ ಮೊಗ್ಗು (ಸಜ್ಜುಕ) ಗಳ ಕೈಕಡಗಳನ್ನೂ (ಮಾಡಿದರು). ಇರವಂತಿಗೆಯ ಪ್ರಜ್ವಲಿಸುವ ವಜ್ರ ಬಾಹುಪೂರಗಳನ್ನು ಧರಿಸಿದವರಿಗೆ ಸೊಗಸುಂಟಾಗುವಂತಹ ಸಂಪಗೆಹೂಗಳ ಒಡ್ಯಾಣವನ್ನೂ (ಮಾಡಿದರು.) ಇಂಪಿನಿಂದ ಕೂಡಿರುವ ಸುರಹೊನ್ನೆಯ ಮೊಗ್ಗುಗಳ ಮೃದುವಾದ ಕಂಠಹಾರವನ್ನು ಮಾಡಿ, ಉಳಿದ ಹೂವುಗಳಿಂದ ಬಾಸಿಂಗಗಳನ್ನು ರಚಿಸಿದರು. ನೂತನ ತರುಣಿಯರಾದ ಅವರು (ಅವೆಲ್ಲವನ್ನೂ) ಬೇರೆ ಬೇರೆ ಮಾಡಿ, ಸಡಗರದಿಂದ ಶಿವಪೂಜೆಗೆ ಬೇಕಾಗುವ ಹೂವುಗಳನ್ನೂ ಆರಿಸಿ ಬೇರೆಮಾಡಿ, ಅವುಗಳಿಂದ ವಿಚಿತ್ರವಾದ ಮಾಲೆಗಳನ್ನು

ಮುಡಿಯುಳಿಯೆ ನಡು ಸೆಳೆಯೆ ಸುಯ್ಯಿನಿಂಜಿ ಮೆಯ್ಪೆಮರೆ
ತೊಡೆ ಸೆಡೆಯೆ ಅಡಿ ಪಡೆಯೆ ಪುಗುಳ್ಗಳಂ ಮುಗುಳ್ಗಳಂ
ಸೂಸುತಂ ಬೀಸುತಂ ನಳಿತೋಳ ನಳಿಜಾಳ
ಮೆಳಸಿ ಬರೆ ಬಳಸಿ ನೆರೆದಾವರಿಸಿ ಗಾವರಿಸಿ
ಕರದಿಂದಮರವಿಂದದರಲಿಂದೆ ಭರದಿಂದೆ
ಪೊಡೆವುತಂ ನಡೆವುತಂ ಬಳ್ಕುತುಂ ತುಳ್ಕುತಂ
ಕಣ್ಪೆಳಗ ತಣ್ಪೆಳಗನೈತಂದು ಸೈತಂದು
ಭೂಪತಿಗೆ ಕೈಮುಗಿದು ಪೂಪುಟಗೆಯಂ ತೆಗೆದು
ಹರುಷದಿಂ ನೋಡುತಿರೆ ಕರತಳಕೆ ನೀಡುತಿರೆ

ವ॥ ಆಗಳಾ ರಾಜಶೇಖರನರೇಂದ್ರ ಪ್ರಭಾತಪದ್ಮದಂತಿರಾಮೋದಾಂತರಂಗನಾಗಿ ಕಲ್ಪತರುಸಸ್ಯದಂತೆ ಸುರಭಿಪಯದೊಳ್ಮುಳುಂಗಿ ಶಾರದಶಶಾಂಕನಂತೆ ವಿಮಳಾಂಬರದಿನ ಲಂಕರಿಸಿ ಯಾಮಿನೀವ್ಯೋಮದಂತೆ ಸಿತರುಚಿದಾಳ್ದು ಧನಂಜಯನಂತೆ ರುದ್ರಾಕ್ಷದಿಂ ರಂಜಿಸಿ ಪರಮೇಷ್ಠಿಯಂತೆ ಪದ್ಮಾಸನವನವಷ್ಟಂಭಿಸಿ ಬೃಹಸ್ಪತಿಯಂತೆ ಸುಮನೋಜಯಮೂಲ ಮಂತ್ರಮಂ ಬಗೆಯೊಳನುಗೊಳಿಸಿ ನಗರಾಜನಂತಚಲಾಂಗನಾಗಿ ಧನ್ವಿಯಂತೆ ಲಕ್ಷ್ಯೈಕಾಗ್ರ ಚಿತ್ತನೆನಿಸಿ ಕಲ್ಯಾಣಗೃಹದಂತೆ ಶಿವಪ್ರಭಾವಮಂ ಪಡೆದಿನಿಸಾನುಂ ಬೇಗಮಿರ್ದು

ಹೆಣೆದರು. ಮುಡಿಯು ಕಾಣದಹಾಗೆ (ಹೊದೊಟ್ಟುಕೊಂಡು), ನಡುವು ಬಳುಕುವಂತೆ (ಹೊತ್ತುಕೊಂಡು), ತೇಗುವಹಾಗೆ, ಮೈಬೆವರುವಂತೆ, ತೊಡೆಗಳು ಸೆಡೆಯುವಂತೆ ಕಾಲಲ್ಲಿ ಗುಳ್ಳೆಗಳೇಳುವಂತೆ, ಮೊಗ್ಗುಗಳನ್ನು ಉದುರಿಸಿಕೊಳ್ಳುತ್ತ, ಉದ್ದವಾದ ತೋಳುಗಳನ್ನು ಬೀಸುತ್ತ (ಬರುತ್ತಿದ್ದರು). ದುಂಬಿಗಳ ಸಮೂಹವು ಸುಗಂಧಕ್ಕೆ ಆಶಿಸಿ ಗುಂಪುಗೂಡಿ ಮುತ್ತುತ್ತಿತ್ತು. ಅವನ್ನು ಕೈಯಿಂದ, ಕಮಲದಹೂವಿನಿಂದ ಭರದಿಂದ ಹೊಡೆಯುತ್ತ ಬಳುಕುತ್ತ, ಕಡೆಗಣ್ಣ ಕಾಂತಿಯನ್ನು ಹೊರಚೆಲ್ಲುತ್ತ, ಮೆಲ್ಲನೆ ಬಂದು ರಾಜಶೇಖರ ಮಹಾರಾಜನಿಗೆ ಕೈಮುಗಿದು ಹೂಗಳ ಪುಟಕೆಗಳನ್ನು ತೆಗೆದು ಅವನ ಕೈಗೆ ಕೊಟ್ಟರು. ಅವನು ಹರ್ಷಪಟ್ಟು ನೋಡುತ್ತಿದ್ದನು. ವ॥ ಆಗ ಆ ರಾಜಶೇಖರ ನರಶ್ರೇಷ್ಠನು ಪ್ರಾತಃಕಾಲದ ಕಮಲದ ಹಾಗೆ ಆಮೋದಗೊಂಡ ಹೃದಯವುಳ್ಳವನಾಗಿ ಕಲ್ಪವೃಕ್ಷಸಸ್ಯದ ಹಾಗೆ ಸುಗಂಧಮಿಶ್ರವಾದ ನೀರಿನಲ್ಲಿ ಸ್ನಾನಮಾಡಿ, ಶರತ್ಕಾಲದ ಚಂದ್ರನ ಹಾಗೆ ಧವಳವಸ್ತ್ರದಿಂದ ಅಲಂಕಾರಗೊಂಡವನಾಗಿ (ಶರತ್ಕಾಲದ ಚಂದ್ರನು ಪರಿಶುದ್ಧವಾದ ಅಂದರೆ ಮೋಡಾದಿಗಳಿಲ್ಲದ ಆಕಾಶವನ್ನು ಅಲಂಕರಿಸಿದಹಾಗೆ), ರಾತ್ರಿಯ ಕಾಲದ ಆಕಾಶದ ಹಾಗೆ ಬಿಳಿಯಬಣ್ಣದ ಭಸ್ಮದ ಪ್ರಕಾಶವನ್ನು ಮೈಗೆ ಉಂಟುಮಾಡಿಕೊಂಡು, (ರಾತ್ರಿಯ ಆಕಾಶವು ನಕ್ಷತ್ರಗಳ ಬಿಳಿಯ ಬಣ್ಣದ ಕಿರಣಗಳನ್ನು ಧರಿಸಿರುವ ಹಾಗೆ), ಅರ್ಜುನನ ಹಾಗೆ ರುದ್ರನ ಅಕ್ಷಿರೂಪಗಳೆನಿಸಿದ ರುದ್ರಾಕ್ಷಿಗಳನ್ನು ಧರಿಸಿ ರಂಜನೆಗೊಂಡು (ಬೆಂಕಿಯು ರುದ್ರನ ಅಕ್ಷಿರೂಪವಾಗಿ, ಅಂದರೆ ಅವನ ಹಣೆಗಣ್ಣನ್ನು ಆಶ್ರಯಿಸಿಕೊಂಡಿರುವ ಕಾರಣದಿಂದ ಅದರ ಹಾಗೆ ರಂಜನೆಗೊಂಡು), ಪರಮೇಷ್ಠಿ (ಬ್ರಹ್ಮ)ಯ ಹಾಗೆ ಪದ್ಮಾಸನಾಸೀನನಾಗಿ (ಬಹ್ಮನು ಕಮಲವನ್ನು ಆಸನವನ್ನಾಗಿ ಮಾಡಿಕೊಂಡಿರುವ

ಮ॥ ಶಿವಲಿಂಗಾಂಘ್ರಿಯನೊಲ್ದು ಪೂಜಿಸಿದನುದ್ಯತ್ಸೌರಭಾಂಭಸ್ಸರೋ
ಭವಮುಖ್ಯ ಪ್ರಸವಾತಿಶೋಭಿತ ಸುಗಂಧಾಚ್ಛಾಕ್ಷತ ಸ್ನಿಗ್ಧಧೂ
ಪವಿರಾಜದ್ರುಚಿ ದೀಪಸತ್ಫಳ ಮಹಾನ್ನೈವೇದ್ಯಮುದ್ವೀಟಿಕಾ
ಳಿ ವಿಳಾಸಾಸ್ಪದಗೀತವಾದ್ಯರವದಿಂ ಭೂಭಾಮಿನೀಭೂಷಣಂ ೫೮

ವ॥ ಅಂತು ಪೂಜಿಸಿ ಪರಮಭಕ್ತಿಯಿಂ ಪ್ರದಕ್ಷಿಣ ನಮಸ್ಕಾರಂಗಳಂ ರಚಿಸಿ

ಚಂ॥ ಧನಪತಿಮಿತ್ರಗಾತ್ರರುಚಿನಿರ್ಜಿತಮಿತ್ರ ಕರಾಲಕಾಲಮ
ರ್ದನ ಗರಕಾಲಕಂಧರ ಧರಾಧರಧನ್ವ ಶಶಾಂಕಖಂಡಮಂ
ಡನ ಸದಖಂಡಚಿನ್ಮಯ ನತವ್ರಜಪಾಲಕಪಾಲಶೂಲರಂ
ಜನಕರ ದೇವದೇವ ಜಗತೀಧರಮಂದಿರ ಮಂಗಳಾಕರಾ ೫೯

ಹಾಗೆ), ಬೃಹಸ್ಪತ್ಯಾಚಾರ್ಯನ ಹಾಗೆ ಶ್ರೇಷ್ಠವಾದ ಮನಸ್ಸನ್ನು ಗೆಲ್ಲುವ ಮೂಲಮಂತ್ರವಾದ ಪಂಚಾಕ್ಷರಿಯನ್ನು ಮನಸ್ಸಿನಲ್ಲಿ ಭಾವಿಸಿಕೊಂಡು (ಬೃಹಸ್ಪತಿಯು ಸುಮನ ಅಂದರೆ ದೇವತೆಗಳ ಗೆಲುವಿಗೆ ಬೇಕಾದ ಮೂಲಮಂತ್ರವನ್ನು ಮನಸ್ಸಿನಲ್ಲಿ ಯೋಚಿಸುವ ಹಾಗೆ), ನಗರಾಜನಾದ ಹಿಮವಂತನ ಹಾಗೆ ಅಚಲವಾದ ದೇಹವುಳ್ಳವನಾಗಿ (ಹಿಮವಂತನು ಎಂದೂ ಚಲಿಸದಂತಹ ಆಕಾರವುಳ್ಳವನು ; ಅವನ ಹಾಗೆ), ಧನುರ್ಧಾರಿ (ಬಿಲ್ಗಾರ)ಯ ಹಾಗೆ ಧ್ಯಾನಕ್ಕೆ ಲಕ್ಷ್ಯನಾದ ಪರಮೇಶ್ವರನಲ್ಲಿ ನಟ್ಟುಹೋದ ಚಿತ್ತವುಳ್ಳವನಾಗಿ (ಬಿಲ್ಗಾರನು ಬಾಣದಿಂದ ತಾನು ಹೊಡೆಯಬೇಕಾದ ವಸ್ತುವಿನಲ್ಲಿ ತದೇಕಚಿತ್ತನಾಗಿ ನೋಡುವಹಾಗೆ), ಕಲ್ಯಾಣ (ಮಂಗಳ) ಗೃಹದ ಹಾಗೆ ಮಂಗಲಕಾರಕವಾದ ಶಿವನ ಅನುಗ್ರಹರೂಪವಾದ ಪ್ರಭಾವವನ್ನು ಪಡೆದು (ಕಲ್ಯಾಣಕಾರಕವಾದ ಗೃಹವು ಮಂಗಲ (ಶಿವ) ಪರಂಪರೆಗಳ ಪ್ರಭಾವದಿಂದ ಕೂಡಿರುವಹಾಗೆ) ಸ್ವಲ್ಪಹೊತ್ತು (ಧ್ಯಾನದಲ್ಲಿ ಕುಳಿತು) ಇದ್ದನು. ೫೮. ಭೂಮಿಯೆಂಬ ಅಂಗನೆಗೆ ಭೂಷಣಪ್ರಾಯನಾದ ರಾಜಶೇಖರನು ಶಿವಲಿಂಗಪಾದಗಳನ್ನು ಶ್ರೇಷ್ಠವಾದ ಸೌರಭಮಿಶ್ರವಾದ ನೀರು, ಕಮಲವೇ ಮುಖ್ಯವಾದ ಹೂವು, ಶೋಭಿಸುವ ಸುಗಂಧ, ಗೊನೆಮುರಿಯದ ಅಕ್ಕಿಯಕಾಳು (ಅಕ್ಷತ), ದಟ್ಟಸುವಾಸನೆಯ ಧೂಪ, ಪ್ರಕಾಶಿಸುವ ಕಾಂತಿಗೊಂಡ ದೀಪ, ಶ್ರೇಷ್ಠ ಹಣ್ಣುಗಳ ನೈವೇದ್ಯ, ಉತ್ತಮ ತಾಂಬೂಲಾದಿಗಳು, ವಿಲಾಸಕ್ಕೆ ಆಸ್ಪದವಾದ ಗೀತೆ ವಾದ್ಯರವ ಇವೇ ಮೊದಲಾದುವುಗಳಿಂದ ಒಲುಮೆಯಿಂದ ಪೂಜಿಸಿದನು. ವ॥ ಆ ರೀತಿ ಪೂಜಿಸಿ, ಪರಮಭಕ್ತಿಯಿಂದ ಪ್ರದಕ್ಷಿಣೆ ನಮಸ್ಕಾರಾದಿಗಳನ್ನುಮಾಡಿ ೫೯. "ಕುಬೇರಮಿತ್ರನೇ, ದೇಹಕಾಂತಿಯಿಂದ ಸೂರ್ಯನನ್ನು ಗೆದ್ದವನೇ, ಭಯಂಕರನಾದ ಯಮನ ಗರ್ವಭಂಗಗೊಳಿಸಿದವನೇ, ಕಾಳಕೂಟವಿಷದ ಕಪ್ಪಾದ ಕಂಠವುಳ್ಳವನೇ, ಧರೆಗೆ ಆಧಾರಭೂತವಾದ ಮೇರುವನ್ನು ಧನುಸ್ಸನ್ನಾಗಿ ಹಿಡಿದವನೇ, ಚಂದ್ರಲೇಖೆಯಿಂದ ಆಲಂಕಾರಗೊಂಡವನೇ, ಅಖಂಡ ಜ್ಞಾನ (ಚಿತ್)ಸ್ವರೂಪನೇ, ಆನತಜನಸಮೂಹರಕ್ಷಕನೇ, ಕಪಾಲ, ಶೂಲಗಳಿಂದ ರಂಜನೆಗೊಂಡ ಕರವುಳ್ಳವನೇ, ಕೈಲಾಸ(ಜಗತೀಧರ) ವನ್ನೇ ಮನೆಯಾಗಿ

ವ॥ ಎಂದು ಪೊಗಳ್ದು ಪೊಡಮಟ್ಟು ಮುದಂದಳೆದು

ಉ॥ ಆ ನರನಾಥನಾ ಕುಸುಮಭೂಷಣಮಂ ಪದೆದಿತ್ತು ಪಾರ್ವತೀ
ಜಾನಿಗೆ ತಾನುಮಾತ್ಮರಮೆಯುಂ ಬಳಿಯಂ ತಳೆದಿರ್ಪಿನಂ ಪರಿ
ಮ್ಲಾನಸಖೀಮುಖಾಬ್ಜಮನಭೀಕ್ಷಿಪ ನಲ್ಲಳಪಾಂಗದಿಂಗಿತಂ
ಮಾನಸದೊಳ್ ತೊಡರ್ಚಿದುದು ತಣ್ಗೊಳದೊಳ್ ಜಳಕೇಳಿಯಾಂಪುದಂ ೬೦

ವ॥ ಆಗಳಾ ಯುವರಾಜಂ ನಿಜರಮಣಿಯಾನನಾಬ್ಜಮಂ ನಿರೀಕ್ಷಿಸಿ

ಚಂ॥ ಸರಸಿಜವಕ್ತ್ರೆ ಚಕ್ರಮಿಥುನಸ್ತನೆ ಬಾಳಮೃಣಾಳಬಾಹುವ
ಲ್ಲರಿ ಕುಮುದಾಕ್ಷಿ ಭೃಂಗಕಚಿ ಶೈವಲಮಂಜುಳ ರೋಮರಾಜಿ ಬಂ
ಧುರಪುಳಿನೋಲ್ಲಸಜ್ಜಘನೆ ನಿನ್ನಿರವಂ ತಳೆದೊಪ್ಪುತಿರ್ಪ ತ
ತ್ಸರಸಿಗೆ ಮಾಡಲಿಂದು ನವಸಂಗತಿಯಂ ನಡೆ ಮನ್ಮನೋರಮೇ ೬೧

ವ॥ ಎಂಬುದುಮತೀವ ಹರ್ಷೋದಯಮನೊಳಕೊಂಡು ತೊಳಪ ಕಟಾಕ್ಷರುಚಿ ಮಂದ ಸ್ಮಿತದ್ಯುತಿಗೂಡಿ ತದ್ವಾಣಿಗೆ ಪಸಾಯಮನಿತ್ತಂತೆ ಮೇಲ್ವಾಯ್ದು ಪಸರಿಸಿಯುಂ ನಿನ್ನ ಮೆಲ್ನಡೆಗೆ

ಉಳ್ಳವನೇ, ಮಂಗಳಕರನೇ" ವ॥ ಹೀಗೆಂದು ಹೊಗಳಿ ಸಾಷ್ಟಾಂಗನಮಸ್ಕಾರಮಾಡಿ, ಸಂತೋಷಗೊಂಡು, ೬೦. ಆ ನರಶ್ರೇಷ್ಠನಾದ ರಾಜಶೇಖರನು ಶಿವನಿಗೆ ಪುಷ್ಪಾಲಂಕಾರ ವನ್ನು ಸಂತೋಷಗೊಂಡು ಮಾಡಿ, ತಾನೂ ತನ್ನ ಹೆಂಡತಿಯಾದ ಸರ್ವಮಂಗಳೆಯೂ, ಶಿವನ ಸಾಮೀಪ್ಯವನ್ನು ಹೊಂದಿ ಇರುವಾಗ, ತಂಗೊಳದಲ್ಲಿ ಜಲಕ್ರೀಡೆಯಾಡದೆ ಇರುವುದರಿಂದ ಸಖಿಯರು ಬಾಡಿಹೋದ ಮುಖವುಳ್ಳವರಾಗಿರುವುದನ್ನು ಸರ್ವಮಂಗ ಳೆಯು ಕಡೆಗಣ್ಣಿನ ಕಾಂತಿಯಿಂದ ನೋಡಿದಳು. ಆ ಕಡೆಗಣ್ಣಿನ ಇಂಗಿತವು ಮನಸ್ಸಿ ನಲ್ಲಿ ಉದ್ಭವವಾಯಿತು. (ಜಲಕ್ರೀಡೆಗೆಳಸಿರುವ ಇವರೆಲ್ಲರ ಇಷ್ಟಾರ್ಥ ನೆರವೇರಿಸ ಬೇಕೆಂಬ ಅಭಿಪ್ರಾಯವು ರಾಜಶೇಖನಲ್ಲುಂಟಾಯಿತೆಂದು ಭಾವ). ವ॥ ಆಗ ಆ ಯುವ ರಾಜನು ತನ್ನ ಹೆಂಡತಿಯ ಮುಖಕಮಲವನ್ನು ನೋಡಿ, ೬೧. "ಕಮಲಮುಖಿ, ಚಕ್ರವಾಕ ಮಿಥುನಗಳಂತಿರುವ ಕುಚವುಳ್ಳವಳೇ, ಎಳೆಯ ಮೃಣಾಳದಂತಿರುವ ಬಾಹು ಲತೆಯುಳ್ಳವಳೇ, ಕನ್ನೈದಿಲೆಯಂತೆ ಕಣ್ಣುಳ್ಳವಳೇ, ದುಂಬಿಗಳಂತಿರುವ ಮುಂಗುರುಳಿನ ವಳೇ, ಶೈವಲದಂತಿರುವ ಕೂದಲುಳ್ಳವಳೇ, ದಟ್ಟವಾದ ಮಳಲಿನ ರಾಸಿಯಂತಹ ಉಲ್ಲಾ ಸಕರ ಜಘನಪ್ರದೇಶವುಳ್ಳವಳೇ, ನನ್ನ ಮನೋಹರಳೇ, ನಿನ್ನ ಹಾಗೆಯೇ ಇರುವಿಕೆ ಯನ್ನು ಪಡೆದು ಒಪ್ಪುತ್ತಿರುವ ಆ ಸರೋವರಕ್ಕೆ ಇಂದು ನೂತನವಾಗಿ ಜಲಕ್ರೀಡೆಯ ಸಂಬಂಧ ಪಡೆಯಲು ನಡೆ" (ಎಂದು ಹೇಳಿದನು.) ವ॥ ಹೀಗೆಂದು ಪತಿಯಾದ ರಾಜ ಶೇಖರನು ಹೇಳಲಾಗಿ ಸರ್ವಮಂಗಳೆಯು ಅತಿಹರ್ಷಗೊಂಡು ಬೆಳಗುವ ಕಡೆಗಣ್ಣ ಕಾಂತಿ ಯೊಡನೆ ಕಿರುನಗೆಯ ಬೆಳಕುಗೂಡಿ, ಆ ಮಾತಿಗೆ ಕಾಣಿಕೆಯನ್ನಿತ್ತಹಾಗೆ ಉತ್ಸಾಹ ಗೊಂಡವಳಾದಳು. ನಿನ್ನ ಮಂದಗಮನಕ್ಕೆ ಮತ್ಸರಪಡುವ ಹಂಸಪಕ್ಷಿಯೊಡನೆ ಸ್ಪರ್ಧಿ

ಮಚ್ಚರಿಪ ಅಂಚೆಯೊಳ್ಪಳಂಚುವೆನೆಂದು ಭಾಷೆಗುಡುವಂತೆ ಪಾಯವಟ್ಟಂ ದನಿಗುಡುತ್ತು ಮಿರೆಯುಂ ಪೂದುಱುಂಬಿಂಗೆಱಗಿ ಪಾಡುವ ಪರಮೆವಱಿಗಳಿಂಚರಕ್ಕೆ ಮೆಚ್ಚಿ ತಲೆವೊಲಿದಪ್ಪುದೆಂಬಂತೆ ಕರ್ಣಪೂರಂ ಕಂಪಿಸೆಯುಂ ಜಳಕೇಳಿಯ ಪೊರ್ಕುಳಿಯೊಳ್ ಗುರುಪಯೋಧರಭಾರಮ ನಾಂಪುದೆನಗಸದಳಮೆಂದು ಬಳುಂಕುವಂತೆ ಬಡನಡು ಬಳುಂಕೆಯುಂ ಸರಸಿಯಂ ಪೊಕ್ಕಪೆನೆಂಬ ಸಂಭ್ರಮದಿಂ ಕುಣಿವಂತೆ ಕುಚಚಕ್ರಯುಗಂ ಕದಕ್ಕದಿಸೆಯುಂ ಅಮರಸಾಮಜದೊಡನನೇಕ ಕರಿಣಿಗಳ್ವೆರಸು ನೀರಾಟಕ್ಕೆ ತಳರ್ವಭ್ರಮುಮೆಂಬಂತೆ ಮನಃಪ್ರಿಯನೊಡನನೇಕ ಸಖಿಯರ್ವೆರಸು ಸಂಭ್ರಮಂ ಮಿಗೆ ಸಲಿಲಕೇಳಿಗೆಳಸಿ ಸರ್ವಮಂಗಳಾದೇವಿ ತನ್ನಂದನದೊಳ್ ನಡೆತಂದು ಕಾಸಾರ ತೀರದ ನುಣ್ಪಸಲೆಯನಲಂಕರಿಸಿ ನಿಂದು ನೀಡುಂ ನಿರೀಕ್ಷಿಪಾಗಳ್

ಮ॥ ಮರುದುದ್ಧೂತ ಪಯಃಪ್ರಕೀರ್ಣಕಣಲಾಜಂ ಮೇಲೆ ಸಾಲಿಟ್ಟು ಪ
ಟ್ಚರಣಶ್ರೇಣಿಯುಮೊಂದೆ ರತ್ನರಚಿತೋದ್ಯತ್ ತೋರಣಶ್ರೀಯನೂ
ರ್ಮಿರವಂ ವಾದ್ಯಮದಾಗಲಾರತಿಯ ಚೆಲ್ವಂ ಪೋಲೆ ಪದ್ಮಂ ಮಹೀ
ಶ್ವರನಂ ತಾನಿದಿರ್ಗೊಂಬುದೆಂಬ ಬಗೆಯಂ ತಾಳ್ದತ್ತು ಪದ್ಮಾಕರಂ ೬೨

ಸುತ್ತೇನೆಂದು ಪ್ರತಿಜ್ಞೆ ಮಾಡುವಹಾಗೆ ಪಾದದಲ್ಲಿ ಹಾಕಿರುವ ಕಾಲ್ಕಡಗಳು ಧ್ವನಿಮಾಡುತ್ತಿದ್ದವು. ಹೂಮುಡಿದ ತುರುಬಿಗೆ ಮುತ್ತಿ ಝೇಂಕಾರ ಮಾಡುವ ದುಂಬಿಯ ಮರಿಗಳ ಝೇಂಕಾರಕ್ಕೆ ಮೆಚ್ಚಿ ತಲೆದೂಗಿದಳೆಂಬಂತೆ ಕಿವಿಯಲ್ಲಿ ಧರಿಸಿದ್ದ ಓಲೆಯು ಕಂಪಿಸುತ್ತಿದ್ದಿತು. ಜಲಕ್ರೀಡೆಯ ಹೋರಾಟದಲ್ಲಿ (ಪ್ರಕ್ರಿಯೆಯಲ್ಲಿ) ಭಾರವಾದ ಮೊಲೆಗಳ ಭಾರವನ್ನು ಧರಿಸುವುದು ನನಗೆ ಅಸಾಧ್ಯವೆಂದು ಬಳುಕುವ ಹಾಗೆ ಬಡನಡುವು ಬಳುಕುತ್ತಿತ್ತು. ಸರೋವರವನ್ನು ಪ್ರವೇಶಿಸುತ್ತೇನೆಂಬ ಸಂಭ್ರಮದಿಂದ ಕುಣಿಯುವ ಹಾಗೆ ಚಕ್ರವಾಕ ಮಿಥುನಗಳಂತಿರುವ ಮೊಲೆಗಳು ಕದಕದ ಎಂದು ಅಲ್ಲಾಡುತ್ತಿದ್ದವು. ದೇವಲೋಕದ ಐರಾವತದೊಡನೆ ಅನೇಕ ಹೆಣ್ಣಾನೆಗಳೊಡನೆ ಸೇರಿ ನೀರಾಟಕ್ಕೆ ತೆರಳುವ ಐರಾವತಪತ್ನಿಯಾದ ಅಭ್ರಮುವಿನ ಹಾಗೆ ಮನಃಪ್ರಿಯನಾದ ರಾಜಶೇಖರನೊಡನೆ ಅನೇಕ ಸಖಿಯರಿಂದ ಕೂಡಿ, ಅತಿಶಯ ಸಂಭ್ರಮದಿಂದ ಜಲಕೇಳಿಗೆ ಬಯಸಿ, ಸರ್ವಮಂಗಳಾದೇವಿಯು ಆ ನಂದನವನಕ್ಕೆ ನಡೆದು ಬಂದು, ಸರೋವರದ ದಂಡೆಯಲ್ಲಿರುವ ನುಣುಪಾದ ಹಾಸುಗಲ್ಲನ್ನು ನಿಂತು ಅಲಂಕರಿಸಿ ದಿಟ್ಟಿಸಿ ನೋಡುತ್ತಿದ್ದಾಗ, ೬೨. ವಾಯುವಿನ ಹೊಡೆತದಿಂದ ಮೇಲಕ್ಕೆ ಹಾರಿದ ನೀರಿನ ಹನಿಗಳು ಬತ್ತದ ಅರಳು, ಮೇಲ್ಭಾಗದಲ್ಲಿ ದುಂಬಿಗಳ ಸಾಲು ರತ್ನದಿಂದ ಮಾಡಿದ ಸುಂದರ ತೋರಣ, ತೆರೆಗಳ ಅಪ್ಪಳಿಸುವಿಕೆಯ ಧ್ವನಿಯು ವಾದ್ಯ, ಆರತಿಯ ತಟ್ಟೆಯ ಚೆಲುವನ್ನು ಕಮಲವು ಹೊಂದಿತ್ತು. ಹೀಗೆ ಆ ಸರೋವರವು ಭೂಮೀಶ್ವರನಾದ ರಾಜಶೇಖರನನ್ನು ಎದುರುಗೊಳ್ಳುತ್ತಿದೆಯೋ ಎಂಬ ರೀತಿಯನ್ನು ಹೊಂದಿತ್ತು.

ವ॥ ಮತ್ತಮಾ ತಿಳಿಗೊಳಂ

ಕಂ॥ ಲುಲಿತ ಜಲಲವಲಲಿತ ನವ
ಜಲರುಹದಳ ವಿಸರಲಸಿತ ವಿಮಳಮರಾಲಾ
ವಲಿಕಲಿತ ನಳಿನಮಧುಮದ
ಚಲದಲಿಕುಲಮಿಲಿತ ಮಂದಮಾರುತಮಹಿತಂ ೬೩

ವ॥ ಮತ್ತಂ

ಉ॥ ಬಾಲಮಧುವ್ರತಪ್ರತತಿ ಪಾಡೆ ರತೋದ್ಧತ ಚಕ್ರಚಕ್ರಪ
ಕ್ಷಾಳಿಯೆ ತಾಳಮಾಗಿರೆ ಸರೋಜಿನಿ ನರ್ತಿಸೆ ನೀರಪಕ್ಕಿಗಳ್
ಲೀಲೆಯೊಳೊಂದುತುಗ್ಘಡಿಸೆ ಸೀಗುರಿಯಾಗಿರೆ ವೀಚಿಮಾಲೆ ತಾ
ನೋಲಗಸಾಲೆಯಾದುದು ಕೊಳಂ ಕಮಳಾಸನರಾಜಹಂಸನಾ ೬೪

ಹರಿಣಿ॥ ದರದಳದರವಿಂದಬೃಂದಗಂಧಾ
ದರಸರದುನ್ಮದ ಭೃಂಗನಾದಗೀತಂ
ತರಳತರ ತರಂಗರಂಗದಂಗಂ
ಸರಸಿ ಸುವಾಸಿನಿಯಂತೆ ಕಣ್ಗೆ ತೋರ್ಕುಂ ೬೫

ವ॥ ಮತ್ತು ಆ ತಿಳಿಗೊಳವು ೬೩. ಮೇಲೆ ಹಾರುತ್ತಿರುವ ನೀರಿನ ಕಣಗಳಿಂದಲೂ, ರಮ್ಯವಾದ ಹೊಸ ಕಮಲಗಳ ಎಸಳುಗಳಿಂದಲೂ, ಅಲಂಕಾರಯುತವಾದ ಶುಭ್ರವಾದ ಹಂಸಪಕ್ಷಿಗಳಿಂದಲೂ, ಕಮಲಗಳ ಮಕರಂದರಸಪಾನಮಾಡಿ ಮತ್ತಗೊಂಡಿರುವ ದುಂಬಿಗಳಿಂದಲೂ, ಮಂದಮಾರುತದಿಂದ ಕೂಡಿದುದಾಗಿಯೂ ರಮ್ಯವಾಗಿತ್ತು. ವ॥ ಮತ್ತು ೬೪. ಎಳೆಯ ದುಂಬಿಗಳ ಸಮೂಹವು ಹಾಡುತ್ತಿರಲು, ಪ್ರೌಢಚಕ್ರವಾಕ ಮಿಥುನಗಳ ಕ್ರೀಡೆಯ ಸಮಯದ ರೆಕ್ಕೆಗಳ ಬಡಿತವೇ ತಾಳವಾಗಿರಲು, ಕಮಲವು ನರ್ತನಮಾಡುತ್ತಿರಲು, ನೀರುಹಕ್ಕಿಗಳು ಲೀಲೆಯಿಂದ ಒಂದುಗೂಡಿ ಸ್ತುತಿವಾಚನ ಮಾಡುತ್ತಿರಲು, ತೆರೆಗಳ ಮಾಲೆಗಳೇ ಚಾಮರಗಳಾಗಿರಲು ಆ ಸರೋವರವು ಕಮಲದಲ್ಲಿ ಕುಳಿತಿದ್ದ ರಾಜಹಂಸಪಕ್ಷಿಯ ಓಲಗಶಾಲೆಯಂತೆ ಆಯಿತು. ೬೫. ಸ್ವಲ್ಪ ಅರಳಿರುವ ಕಮಲಗಳ ಸಮೂಹದ ಸುಗಂಧದ ಮೇಲಿರುವ ಆದರದಿಂದ ಆಕರ್ಷಿಸಲ್ಪಟ್ಟು ಬರುತ್ತಿರುವ ಮದಿಸಿದ ದುಂಬಿಗಳ ನಾದವೆಂಬ ಸಂಗೀತವುಳ್ಳದ್ದಾಗಿ, ಅಲ್ಲಾಡುತ್ತ ಮಿಂಚುವ ವೀಚಿ (ತೆರೆ) ಗಳ ಅವಯವಗಳನ್ನುಳ್ಳದ್ದಾಗಿ ಆ ಸರೋವರವು ಸುಂದರಸ್ತ್ರೀಯ ಹಾಗೆ ಕಣ್ಣಿಗೆ ಕಾಣು ...

ಮ॥ ತಡಿಯೊಳ್ನಿಂದ ತಟಿತ್ಕಟಾಕ್ಷೆಯ ಕಟಾಕ್ಷಜ್ಯೋತ್ಸ್ನೆಯಿಂ ತೀವಿ ಪಾ
ಲ್ಗಡಲಂ ಪೋಲ್ತಿರೆ ತತ್ಸರಂ ನೊರೆಯಸಾಲ್ ಶೇಷಾಹಿಯಂ ಪೋಲೆ ಮೇ
ಲೆಡೆಗೊಂಡೊಪ್ಪುವ ನೀಲನೀರಜವನಂ ಸ್ವರ್ಣಾಂಬುಜೋದ್ಯದ್ರಜಂ
ಕುಡೆ ಪೀತಾಂಬರಲಕ್ಷ್ಮಿಯಂ ಮಲಗಿದಂಭೋಜಾಕ್ಷನಂತೊಪ್ಪುಗುಂ ೬೬

ವ॥ ಮತ್ತಮಲ್ಲಿ

ಕಂ॥ ಬಿರಯಿಗಳನೆಚ್ಚು ರಕ್ತಂ
ಬೊರೆದರಲಂಬಂ ಸರೋಂಬುವೊಳ್ತೊಳೆಯಲ್ಕೆಂ
ದರಲಂಬನಿಳಿಪಿದಂತಿರೆ
ತರುಣಿಯ ಸರಕ್ತಕೇಕರಂ ಮಾರ್ಪೊಳೆಗುಂ ೬೭

ವ॥ ಅಂತದಂ ನೋಡಿ ಕಾಂತಾಜನಂ ಸಂತಸಂ ಮಿಗೆ ಪುಗಲೆಳಸಿ ಮೆಲ್ಲನಿಳಿತರುತ್ತಮಿರ್ಪಲ್ಲಿ

ಕಂ॥ ಎಳೆವಳುಕಿನ ಸೋಪಾನದೊ
ಳಿಳಿವಳ ಪದಯಾವಕದ್ರವಂ ಪತ್ತಿರೆ ಕಂ
ಡೆಳೆಯಳದೊರ್ವಳ್ ತಳಿರೆಂ
ದೆಳಸಿ ಕರಂ ತುಡುಕಿ ನಗಿಸಿದಳ್ ಕೆಳದಿಯರಂ ೬೮

ಗುರುಕುಚಭರದಿಂ ಬಳ್ಕುವ
ಧರಾಧಿಪತಿಪತ್ನಿಗೀವವೊಲ್ಕೈಲಾಗಂ
ಸರಸಿ ತೆರೆದೋಳ ತುದಿಯೊಳ್
ಕರವೊಗೆವರವಿಂದದಿಂದದೇಂ ರಂಜಿಸಿತೋ ೬೯

ತ್ತಿತ್ತು. ೬೬. ಆ ಸರೋವರವು ದಂಡೆಯಲ್ಲಿ ನಿಂತ ಮಿಂಚಿನಂತ ಕಟಾಕ್ಷವುಳ್ಳ ಸರ್ವಮಂಗಳೆಯ ಕಟಾಕ್ಷದ ಬೆಳದಿಂಗಳಿನಿಂದ ತುಂಬಿ ಕ್ಷೀರಸಮುದ್ರವನ್ನು ಹೋಲುತ್ತಿತ್ತು. ನೊರೆಗಳ ಸಾಲು ಆದಿಶೇಷನನ್ನು ಹೋಲುತ್ತಿತ್ತು. ಮೇಲ್ಭಾಗದಲ್ಲಿ ವ್ಯಾಪ್ತಗೊಂಡು ಒಪ್ಪುವ ನೀಲಕಮಲಗಳ ವನವು ಮಲಗಿದ ವಿಷ್ಣುವಿನ ಹಾಗೆಯೂ, ಸುವರ್ಣಕಮಲಗಳ ಧೂಳಿಯು ಉಟ್ಟ ಪೀತಾಂಬರದ ಕಾಂತಿಯನ್ನುಂಟುಮಾಡುತ್ತಿರುವುದಾಗಿಯೂ ಒಪ್ಪುತ್ತಿತ್ತು. ವ॥ ಮತ್ತು ಅಲ್ಲಿ ೬೭. ವಿರಹಿಗಳನ್ನು ಬಾಣದಿಂದ ಹೊಡೆದು ರಕ್ತವು ಹತ್ತಿದ ಪುಷ್ಪಬಾಣವನ್ನು ಸರೋವರದ ನೀರಿನಲ್ಲಿ ತೊಳೆಯಲಿಕ್ಕೆಂದು ಮನ್ಮಥನು ಇಳಿಸಿದ ಹಾಗೆ ಕೆಂಪು ಛಾಯೆಯಿಂದ ಕೂಡಿದ ಆ ಸ್ತ್ರೀಯರ ಕಟಾಕ್ಷಗಳು ಪ್ರತಿಫಲಿಸಿ ಕಾಣುತ್ತಿದ್ದವು. ವ॥ ಹಾಗೆ ಆ ಕೊಳವನ್ನು ನೋಡಿ ಸ್ತ್ರೀಸಮೂಹವು ಸಂತೋಷದಿಂದ ಅದರಲ್ಲಿ ಇಳಿಯಲಿಚ್ಛಿಸಿ, ಮೆಲ್ಲನೆ ಇಳಿಯುತ್ತ ಇರುವಲ್ಲಿ ೬೮. ಎಳೆಯ ಸ್ಫಟಿಕಶಿಲಾ ಸೋಪಾನದಲ್ಲಿ ಇಳಿಯುತ್ತಿರುವ ಆ ಸರ್ವಮಂಗಳೆಯ ಪಾದದಲ್ಲಿದ್ದ ಅರಗಿನ ರಸವು ಮೂಡಿರಲು, ಅದನ್ನು ಕಂಡು ಓರ್ವ ಎಳೆಯ ಹೆಂಗಸು 'ಚಿಗುರು!' ಎಂದು ಹಿಡಿಯಲು ಹೋಗಿ ಎಲ್ಲ ಸಖಿಯರನ್ನು ನಗಿಸಿದಳು. ೬೯. ದಪ್ಪನೆಯ ಮೊಲೆಗಳ ಭಾರದಿಂದ ಬಳುಕುತ್ತಿರುವ ರಾಜಶೇಖರಪತ್ನಿಯಾದ ಸರ್ವಮಂಗಳೆಗೆ ಕೈಯಾಸರೆ

ಮ॥ಸ್ರ॥ ಕರದೊಳ್ಪೊನ್ನುಂಡೆಯುಂ ಜೀರ್ಕೊಳವಿಯೆಸೆಯೆ ಕಾಂಚೀರವಂ ಚಾರುಮಂ
ಜೀರರವಂ ಕೈಗಣ್ಮೆ ಕಾಸಾರದ ಪರಿಸರದೊಳ್ ನಿಂದು ನಿಂದೀಕ್ಷಿಸುತ್ತಾ
ದರಿಸುತ್ತುಂದಂ ಮಿಗಲ್ ಮೆಲ್ಲನೆ ಮಿಸುಗೆ ನಗಂ ನೋಡಿ ನೀರಾಟಕೆಂದೊ
ರ್ವರನೊರ್ವರ್ ಚಲ್ಲದಿಂದಂ ಕರೆದು ನೆರೆದು ಕಾಂತಾಳಿ ನೀರ್ವೊಕ್ಕುದಾಗಳ್ ೭೦

ಕಂ॥ ತರುಣೀನಿತಂಬ ಕುಚಗಿರಿ
ವರಂಗಳಿಟ್ಟಣಿಸೆ ತತ್ಸರಶ್ಮರಧಿ ಕರಂ
ಪರಿವರ್ಧಿಸಿದಂತುರ್ವಿದು
ದರರೆ ತದಾನನಸುಧಾಂಶುಬಿಂಬದ್ಯುತಿಯಿಂ ೭೧

ಮ॥ ಕರದಿಂ ನೂಂಕಿ ತುಳುಂಕಿ ಕೂಂಕಿ ಜಳಮಂ ತೇಂಕಾಡಿ ಮೇಲೋರ್ವರೋ
ರ್ವರೊಳಿಟ್ಟಾಡಿ ಮುಳುಂಗಿ ಮೂಡಿ ಪೊಳೆದಾ ಪೊನ್ನುಂಡೆಯಿಂ ಪೊಯ್ದು ಪಾ
ಯ್ದರದೀಸಾಡಿ ಕಡಂಗಿ ಜೀರ್ಕೊಳವಿಯುಂ ಮೇಲೊತ್ತಿ ಬೆಂಬತ್ತಿ ಮುಂ
ಬರಿದಬ್ಜಾಕರದಂಬುಕೇಳಿವಡೆದರ್ ಪಂಕೇಜಪತ್ರಾಕ್ಷಿಯರ್ ೭೨

ಯನ್ನು ಸರೋವರವು ತನ್ನ ತೆರೆಗಳೆಂಬ ತೋಳುತುದಿಗಳಲ್ಲಿ ಶೋಭಿಸುವ ಕಮಲದಿಂದ ಕೊಡುತ್ತಿಡೆಯೋ ಎಂಬಂತೆ ಶೋಭಿಸುತ್ತಿತ್ತು. ೭೦. ಕೈಯಲ್ಲಿ ಚಿನ್ನದ ಬಿಂದಿಗೆಯೂ[1] ಜೀರ್ಕೊಳವಿಯೂ ಶೋಭಿಸುತ್ತಿರಲು, ನಡುಪಟ್ಟಿಯ ಗೆಜ್ಜೆಗಳ ಧ್ವನಿಯೂ ಕಾಲಂದಿಗೆ ಗಳ ಧ್ವನಿಯೂ ಉಂಟಾಗುತ್ತಿರಲು, ಆ ಸರೋವರದ ಸಮೀಪದಲ್ಲಿ ನಿಂತು ನಿಂತು ನೋಡುತ್ತ, ಆದರ ವ್ಯಕ್ತಪಡಿಸುತ್ತ, ಹೆಚ್ಚಾಗಿ ಮಂದಹಾಸವನ್ನು ಮಿನುಗಿಸುತ್ತ, ಒಬ್ಬರಮುಖನನ್ನೊಬ್ಬರು ನೋಡುತ್ತ, ಒಬ್ಬರನ್ನೊಬ್ಬರು ವಿಲಾಸದಿಂದ ಕರೆದು ಕೂಡಿ ಕೊಂಡು ಆ ಸ್ತ್ರೀ ಸಮೂಹವು ಆಗ ನೀರನ್ನು ಹೊಕ್ಕಿತು. ೭೧. ಆ ಸ್ತ್ರೀಯರುಗಳ ನಿತಂಬ ಮತ್ತು ಮೊಲೆಗಳು ಆ ಸರೋವರದಲ್ಲಿ ಒಟ್ಟುಗೂಡಿದುದರ ಫಲವಾಗಿ ಅದು ವಿಸ್ತಾರವಾಯಿತು. ಆ ಸರೋವರವೆಂಬ ಸಮುದ್ರವು ಅವರ ಮುಖವೆಂಬ ಚಂದ್ರ ಬಿಂಬದ ಪ್ರಕಾಶದಿಂದ ಅಬ್ಬಬ್ಬಾ ! ಉಬ್ಬಿದ ಹಾಗೆ ಇತ್ತು. ೭೨. ಆ ಕಮಲನೇತ್ರೆಯ ರಾದ. ಸ್ತ್ರೀಯರು ಒಬ್ಬರನ್ನೊಬ್ಬರು ಕೈಯಿಂದ ನೂಕುತ್ತ, ನೀರನ್ನು ತುಳುಕಿಸುತ್ತ, ಎರಚುತ್ತ, ಚೆಲ್ಲಾಡುತ್ತ, ಮುಳುಗಿ ಮೇಲೇಳುತ್ತ, ಹೊಳೆಯುತ್ತ, ಚಿನ್ನದ ಜೀರ್ಕೊಳವೆ ಯಿಂದ ಹೊಡೆಯುತ್ತ, ಮೇಲೆ ಬಿದ್ದು ಈಸಾಡುತ್ತ, ಸಂಭ್ರಮಗೊಂಡು ಜೀರ್ಕೊಳವೆ ಯಿಂದ ನೀರೆರಚಿ ಮೇಲೆಹಾಯ್ದು ಬೆನ್ನುಹತ್ತಿ ಮುಂದೆ ಸಾಗುತ್ತ ಸರೋವರದಲ್ಲಿ ಜಲ

1. ಚಿನ್ನದಿಂದ ಮಾಡಿದ ಒಂದು ಜಲಕ್ರೀಡೆಯ ಪಾತ್ರೆ.

ಕಂ॥ ಅರಸನೆಸಪನಿತಱಿಕೊಳೆ ಕ
ರ್ಪೂರದಂಬುವನೊತ್ತಲೆಂದು ಕಮಳಾಕ್ಷಿ ಕಟಾ
ಕ್ಷರುಚಿ ಹಿಮವಿಮಳಜಳಮಂ
ಪರಪಿದಳೊರ್ಮೊದಲೊಳಾಸ್ಯಶಶಿರುಚಿಸಹಿತಂ ೭೩

ವ॥ ಮತ್ತಮಲ್ಲದೆಯುಂ

ಕಂ॥ ಚಂದನಚಂದ್ರಿಕೆಯಂ ರಮ
ಣೇಂದು ಕರಂ ಸೂಸೆ ಮುಗಿದುದದು ಕಾಂತೆಯನೇ
ತ್ರೇಂದೀವರಮಾಸ್ಯಾಂಬುಜ
ಮಂದಲರ್ದುದು ಕೊಳದೊಳಿಳೆಗಿದೇನಚ್ಚರಿಯೋ ೭೪

ವ॥ ಮತ್ತಮೊರ್ವಳ್

ಚಂ॥ ನೃಪಕರವಾರಿಯಂತ್ರಮುಖಮುಕ್ತಮೃಗೋದ್ಭವ ಮಿಶ್ರಧಾರೆಗಳ್
ದ್ವಿಪಪತಿಕುಂಭಸನ್ನಿಭಕುಚಾಚಲಮಂ ಮುಗಿಲಂತೆ ಮುತ್ತೆ ತ
ಚ್ಚಪಲಕಟಾಕ್ಷಮಲ್ಲಿ ಸೆಳೆಮಿಂಚಿನೆ ಮಿಂಚಿರೆ ಚಂದನೋದಕ
ಸ್ನಪಿತೆ ತದೀಯ ಬಿಂದು ಮಳೆಯಂತಿರೆ ಕಾರ್ಸಿರಿಯಂತಿರೊಪ್ಪಿದಳ್ ೭೫

ಕ್ರೀಡೆಯನ್ನು ಮಾಡಿದರು. ೭೩. ಕಮಲದಂತೆ ಕಣ್ಣುಳ್ಳ ಸರ್ವಮಂಗಳೆಯು, ರಾಜಶೇಖರನು ನೀರನ್ನು ಎರಚುವಷ್ಟರಲ್ಲಿಯೆ ಕರ್ಪೂರಮಿಶ್ರವಾದ ನೀರನ್ನು (ಅಥವಾ ನಿರ್ಮಲವಾದ ಜಲವನ್ನು) ಎರಚಬೇಕೆಂದು ಭಾವಿಸಿ ತನ್ನ ಕಡೆಗಣ್ಣ ಕಾಂತಿಯೆಂಬ ಕರ್ಪೂರಮಿಶ್ರಜಲ (ಅಥವಾ ತಂಪಾದ ಜಲ)ವನ್ನು ಮುಂಚಿತವಾಗಿಯೇ ತನ್ನ ಮುಖಚಂದ್ರನಕಾಂತಿ ಸಮೇತವಾಗಿ ಎರಚಿದಳು. ವ|| ಮತ್ತು ಅದಲ್ಲದೆ, ೭೪. ರಮಣನೆಂಬ ಚಂದ್ರನ ಕಿರಣಗಳು ಸುಗಂಧೋದಕವೆಂಬ ಬೆಳುದಿಂಗಳನ್ನು ಪ್ರಸಾರಗೊಳಿಸಲು ಆ ಸರ್ವಮಂಗಳೆಯೆಂಬ ಕಾಂತೆಯ ನೇತ್ರಗಳೆಂಬ ಕನ್ನೈದಿಲೆಗಳು ಮುಚ್ಚಿದುವು. ಅವಳ ಮುಖವೆಂಬ ಕಮಲವು (ಆ ಕಿರಣಗಳಿಂದ) ಆ ಸರೋವರದಲ್ಲಿ ಅರಳಿತು. ಭೂಮಿಯಲ್ಲಿ ಇದು ಆಶ್ಚರ್ಯ. (ಏಕೆಂದರೆ ಚಂದ್ರಕಿರಣಗಳಿಂದ ಕನ್ನೈದಿಲೆಯು ಅರಳಿ, ಕಮಲವು ಮುಕುಳಿತವಾಗಬೇಕು. ಇಲ್ಲಿ ತದ್ವಿರುದ್ಧವಾದುದು ಆಶ್ಚರ್ಯ.) ವ|| ಮತ್ತೊಬ್ಬಳು ೭೫. ಆ ರಾಜಶೇಖರ ಮಹಾರಾಜನ ಕೈಯಲ್ಲಿರುವ ವಾರಿಯಂತ್ರ (ಜೀರ್ಕೊಳವಿ)ದ ತೂತಿನಿಂದ (ಬಾಯಿಯ ರಂಧ್ರದಿಂದ) ಹೊರಹೊರಟ ಕಸ್ತೂರಿ ಮಿಶ್ರವಾದ ನೀರಿನ ಧಾರೆಗಳು ಆನೆಯ ಕುಂಭಸ್ಥಳಕ್ಕೆ ಸಮಾನವಾದ ಮೊಲೆಗಳೆಂಬ ಪರ್ವತಗಳಿಗೆ ಮೋಡಗಳ ಹಾಗೆ ಮುತ್ತಿದವು. ಆಗ ಅವಳ ಚಂಚಲವಾದ ಕಡೆಗಣ್ಣಿನ ಕಾಂತಿಯು ಕೋಲುಮಿಂಚಿನಂತೆ ಮಿಂಚಿತು. ಗಂಧೋದಕದಿಂದ ಸ್ನಾನಮಾಡಿದವಳ ಹಾಗೆ ಆ ಸರ್ವಮಂಗಳಾದೇವಿಯು ಆದಳು. ಆ ಚಂದನೋದಕ ಬಿಂದುಗಳೇ ಮಳೆಯ ಹಾಗೆ ಆಯಿತು. (ಇದರಿಂದ ಆ ಸರ್ವಮಂಗಳೆಯು) ಕಾರುಗಾಲದ

ಚಂ॥ ಮುಡಿ ಮುಗಿಲಲ್ಲಿ ಬಲ್ಮಳೆ ಮುಖೇಂದುಗೆ ಚಂದ್ರಿಕೆ ತೋರ್ಕಿವೆತ್ತ ಪೊಂ
ಗೊಡವೊಲೆವೆಟ್ಟುಗಳ್ಗೆ ನವನಿರ್ಝರಮೊಪ್ಪುವ ಬಾಹುವಲ್ಲಿಗಿಂ
ಪಿಡಿದಡರ್ದಚ್ಚಗುಚ್ಚಮೆನಿಸಿತ್ತು ನರೇಶ್ವರನಾತ್ಮಹಸ್ತದಿಂ
ಪಿಡಿದಲರ್ದೊಟ್ಟಿಯಿಂ ಸುರಿಯೆ ಸೂಸುವ ಚಂದನವಾರಿ ನಾರಿಯಂ ೭೬

ಕಂ॥ ವರನೊತ್ತೆ ಕುಂಕುಮಾಂಬುವ
ನರವಿಂದಾನನೆಯ ಮೊಗದೊಳಿಳಿವುತ್ತೆಸೆದ
ತ್ತರವಿಂದದರಲ ಮಕರಂ
ದರಸಂ ಸುರಿವಂತೆ ಕಣ್ಗೆ ಕಮಳಾಕರದೊಳ್ ೭೭

ಲೋಲಾಕ್ಷಿಯ ನಗೆಮೊಗದೊಳ್
ಲೀಲೆಯಿನಿನನೊತ್ತೆ ಕತ್ತುರಿಯ ಧಾರೆ ಕರಂ
ಕಾಲಾಹಿ ಚಂದ್ರಬಿಂಬವು
ನಾಲಂಬಿಸಿ ತುಡುಕಿದಂತದೇನೊಪ್ಪಿದುದೋ ೭೮

ಮೊಗಸಸಿಯ ಹಸನಚಂದ್ರಿಕೆ
ಗಗಿವವೊಲದಿರ್ವಿನೆಯಳುರುತರಸ್ತನಚಕ್ರ
ಕ್ಕೊಗುಮಿಗೆಯಿಂದೆಳೆವಿಸಿಲಂ
ನೆಗಳ್ವಂತಿನನೊತ್ತಿದಂ ಸಕುಂಕುಮಜಳಮಂ ೭೯

(ಮಳೆಗಾಲದ) ಲಕ್ಷ್ಮಿಯಂತೆ ಕಾಣುತ್ತ ಶೋಭಿಸುತ್ತಿದ್ದಳು. ೭೬. ಆ ರಾಜಶೇಖರ ಮಹಾರಾಜನು ತನ್ನ ಹಸ್ತದಲ್ಲಿ ಹಿಡಿದಿದ್ದ ಅಲರ್ದೊಟ್ಟಿ (ರಂಧ್ರವಿರುವ ಜಾಳಿಗೆ ಯಂತಹ ಪಾತ್ರೆ)ಯಿಂದ ಹೊರಸೂಸಿ ಸುಗಂಧೋದಕವು ಸುರಿಯುತ್ತಿರಲು (ಅದು) ಆ ನಾರಿಯಾದ ಸರ್ವಮಂಗಳೆಯ ಮುಡಿ (ತುರುಬು)ಯೆಂಬ ಮೇಘದಲ್ಲಿ ವಿಶೇಷವಾದ ಮಳೆಯೂ, ಮುಖಚಂದ್ರನಲ್ಲಿ ಬೆಳದಿಂಗಳೂ, ಬಂಗಾರದ ಕೊಡಗಳಂತಿರುವ ಮೊಲೆ ಯೆಂಬ ಬೆಟ್ಟಗಳಿಗೆ ಹೊಸದಾದ ಗಿರಿಪ್ರವಾಹವೂ, ಶೋಭಿಸುವ ಬಾಹುಗಳೆಂಬ ಬಳ್ಳಿ ಗಳಿಗೆ ಇಂಪಿನಿಂದ ಕೂಡಿದ ಹೂವಿನಗೊಂಚಲೂ ಆಗಿ ಕಾಣುತ್ತಿತ್ತು. ೭೭. ರಾಜ ಶೇಖರನು ಕುಂಕುಮಕೇಸರಿ ಮಿಶ್ರವಾದ ನೀರನ್ನು ಜೀರ್ಕೊಳವಿಯಿಂದ ಹೊಡೆಯಲು, ಅದು ಆ ಕಮಲಮುಖಿಯಾದ ಸರ್ವಮಂಗಳೆಯ ಮುಖದಲ್ಲಿ ಇಳಿಯುತ್ತಿರಲು, ಕಮಲದ ಮಕರಂದರಸವು ಆ ಸರೋವರದಲ್ಲಿ ಇಳಿಯುತ್ತಿದೆಯೋ ಎಂಬ ಹಾಗೆ ನೋಡು ವವರ ಕಣ್ಣಿಗೆ ಕಾಣುತ್ತಿತ್ತು. ೭೮. ರಾಜಶೇಖರನು ವಿಲಾಸದಿಂದ ಆ ಚಂಚಲ ನೇತ್ರೆಯ ನಗುಮುಖದಲ್ಲಿ ಕಸ್ತೂರಿಮಿಶ್ರವಾದ ಜಲಧಾರೆಯನ್ನು ಪಿಚಕಾರಿಯಿಂದ ಒತ್ತಲಾಗಿ, ಅದು ಕೃಷ್ಣವರ್ಣದ ಸರ್ಪವಾದ ರಾಹುವು ತುಡುಕಿರುವುದೋ ಎನ್ನುವ ಹಾಗೆ ಏನು ಶೋಭಿಸುತ್ತಿತ್ತೋ ! ೭೯. ಇನಿಯಳಾದ ಸರ್ವಮಂಗಳೆಯ ಮುಖ ವೆಂಬ ಚಂದ್ರನು ನಗೆಯೆಂಬ ಬೆಳದಿಂಗಳಿಗೆ ಹೆದರುತ್ತಿದೆಯೋ ಎನ್ನುವ ಹಾಗೆ ಅದುರು ತ್ತಿರುವ ಶ್ರೇಷ್ಠವಾದ ಅವಳ ಮೊಲೆಗಳೆಂಬ ಚಕ್ರವಾಕ ಪಕ್ಷಿಗಳಿಗೆ, ವಾತ್ಸಲ್ಯದಿಂದ ಎಳೆಯ

ರಮಣಿಯ ಕಬರಿಯೊಳರಸಂ
ಹಿಮಜಳಮಂ ಸುರಿಯೆ ಮುಗುಳ್ಗಳೊಡವೆರೆದಿಳಿದ
ತ್ತ್ರಮದರ್ಪಾಲಿವರಲೊಡನೆ ಕಾ
ರಮುಗಿಲೊಳಿಳಿತರ್ಪ ವಿಮಳಜಳವೃಷ್ಟಿಯವೊಲ್ ೮೦

ಮ॥ ಹಿಮಮಿಶ್ರಾಂಬುವನೊಯ್ಯನೋಪನಿದಿರೊಳ್ನಿಂದಂಗನಾಚಂದನಾಂ
ಕಮನೋಜ್ಞಾಂಗದೊಳೊತ್ತೆ ನಾಂದು ಪನಿಯಂ ಸೂಸುತ್ತದಿಂಬಾದುದಾ
ಹಿಮರೋಚಿಷ್ಕರಪಾತದಿಂ ಹಿಮರುಚಿಗ್ರಾವಸ್ಫುರತ್ಪುತ್ರಿಕಾಂ
ಗಮೆ. ತಾನೊಲ್ದೊಸರ್ದಿಕ್ಕುವಂತೆ ವಿಳಸನ್ಮುಕ್ತಾಚ್ಛವಾರ್ಬಿಂದುವಂ ೮೧

ಕಂ॥ ಒಡಬಾಸೆಯೆಂಬ ಜಗುನೆಯೊ
ಳೊಡವೆರೆಯಲ್ಕುಚಹಿಮಾದ್ರಿಯಿಂದೈದುವ ಬಾಂ
ಗಡಲೆನೆ ಹಿಮಾಂಬು ಪೊಸಪೊಂ
ಗೊಡದಿಂ ವಧು ಸೂಸೆ ಸುರಿವುತಂ ಸೊಗಯಿಸುಗುಂ ೮೨

ಕೆಳದಿಯ ಮೇಲೆ ಹಿಮಾಂಬುವ
ತುಳುಂಕಲೆಂದೊರ್ವಳಟ್ಟಿ ಮುಳುಗಿರೆ ಕೊಳದೊಳ್
ಜಳರುಹಮನವಳ ಮೊಗಮೆಂ
ದೆಳಸಿ ಕರಂ ಪೊಯಿದಳಂಬುವಂ ಸಂಭ್ರಮದಿಂ ೮೩

ಬಿಸಿಲನ್ನು ಇನಿಯನಾದ ರಾಜಶೇಖರನು ಉಂಟುಮಾಡುವನೋ ಎನ್ನುವ ಹಾಗೆ ಕುಂಕುಮಕೇಸರಿಯ ನೀರನ್ನು ಪಿಚಕಾರಿಯನ್ನೊತ್ತಿ ಸಿಡಿಸಿದನು. ೮೦. ಆ ದೊರೆಯು ಆ ರಮಣಿಯ ಕೂದಲುಗಳಲ್ಲಿ ಕರ್ಪೂರಮಿಶ್ರವಾದ ನೀರನ್ನು ಸುರಿಯಲು, ಅದು ಮಳೆಗಾಲದ ಕಪ್ಪಾದ ಮೋಡಗಳಿಂದ ಆಣೆಕಲ್ಲುಮಿಶ್ರವಾದ ಪರಿಶುದ್ಧ ನೀರಿನ ಮಳೆಯ ಹನಿಗಳ ಹಾಗೆ ಮುಡಿಯಲ್ಲಿ ಮುಡಿದ ಹೂವೊಗ್ಗುಗಳೊಡನೆ ಸುರಿಯುತ್ತಿತ್ತು. ೮೧. ಪ್ರಿಯನು ಎದುರಿನಲ್ಲಿ ನಿಂತು ಕರ್ಪೂರಮಿಶ್ರಜಲವನ್ನು ಮೆಲ್ಲಗೆ ತನ್ನ ಅಂಗನೆಯಾದ ಸರ್ವಮಂಗಳೆಯ ಚಂದನದಿಂದ ಬಳಿಯಲ್ಪಟ್ಟ ಮನೋಹರ ದೇಹದಲ್ಲಿ ಜೀರ್ಕೊಳವಿಯನ್ನೊತ್ತಿ ಎರಚಿದನು. ಆ ಶ್ರೀಗಂಧವು ನೆನೆದು ಹನಿಹನಿಯಾಗಿ ಇಳಿಯುತ್ತಿತ್ತು. (ಅದು) ಚಂದ್ರಕಾಂತಶಿಲೆಯಿಂದ ಮಾಡಿದ ಪುತ್ಥಳಿಯ ದೇಹದಿಂದ ಚಂದ್ರಕಿರಣಗಳಿಂದ ಜಿನುಗುವ ಪರಿಶುದ್ಧವಾದ ಅಚ್ಚಮುತ್ತುಗಳಂತೆ ಇರುವ ನೀರಿನ ಹನಿಗಳಂತೆ ಇತ್ತು. ೮೨. ಒಬ್ಬ ವಧು ಸರ್ವಮಂಗಳೆಯ ಮೇಲೆ ಚಿನ್ನದ ಕಲಶದಿಂದ ತಣ್ಣೀರನ್ನು ಸುರಿದಳು. ಅದು ಅವಳ ಸ್ತನಗಳ ಮೇಲೆ ಬಿದ್ದು ನಾಭಿಸ್ಥಳದ ರೋಮರಾಜಿಯ ಮೇಲೆ ಹರಿಯಿತು. ಆಗ ಹಿಮಾದ್ರಿಯಿಂದ ಆಕಾಶಗಂಗೆಯು ಯಮುನೆಯೊಡನೆ ಸೇರಿಕೊಳ್ಳಲು ಇಳಿಯುತ್ತಿರುವುದೋ ಎಂಬಂತೆ ಕಾಣಿಸಿತು. ೮೩. ಗೆಳತಿಯೊರ್ವಳ ಮೇಲೆ ಕರ್ಪೂರಜಲವನ್ನು ಚೆಲ್ಲುವುದಕ್ಕೆಂದು ಒಬ್ಬಳು ಅಟ್ಟಿಸಿಕೊಂಡು ಹೋದಳು. ಅವಳು ಮುಳುಗಿದಳು. ಆ ಕೊಳದಲ್ಲಿರುವ ಕಮಲವನ್ನೇ ಅವಳ ಮುಖವೆಂದು ಭಾವಿಸಿ ಸಂಭ್ರಮದಿಂದ ಆ

ನಳಿನಿಯನಾಲಿಂಗಿಸಿ ಪೂ
ಗೊಳಲೆಂದುಱೆ ಬಾಗಿ ನಿಂದಳಂಗದೊಳೊರ್ವಳ್
ತಳಿಯೆ ಘುಸೃಣಾಂಬುವಂ ತಂ
ಗೊಳ ಮುಗಿಲಮರೇಂದ್ರಚಾಪಲತೆಯೆನೆ ಮೆಱೆದಳ್ ೮೪

ಅರಸನಿರದೊತ್ತೆ ಕತ್ತುರಿ
ಯರಸಂ ಕಿಱುಬಾಸೆವಿಡಿದು ಮೇಲಿಳಿದಿಳಿಪ
ತ್ತುರರೆ ಕರಿವಾವು ಕರ್ಪಿಡಿ
ದುರಗನನುಱೆ ನುಂಗುವಂದಮಂ ತಿಳಿಗೊಳದೊಳ್ ೮೫

ವರನೊತ್ತಿದ ಘುಸೃಣರಸಂ
ಗುರುಕುಚನಗಧಾತು ನಿರ್ಝರಪ್ಲವವಿಳಿವಂ
ತಿರೆ ನುಸುಳ್ದ್ಯುತರೆ ತಳ್ತೀಂ
ಕರಮೆಸೆದುದೊ ಬಾಸೆವಳ್ಳಿ ತಳಿರೇಱಿದವೊಲ್ ೮೬

ಯಾಮಿನಿಯಂಗದೊಳುದಯಿಪ
ಸೋಮಂ ಕೆಂಗದಿರನಿದಿರೊಳುಱೆ ಕಱೆವವೊಲಾ
ಶ್ಯಾಮಾಂಗಿಯಂಗಲತೆಯೊಳ್
ಭೂಮೀಶ್ವರಚಂದ್ರನೊತ್ತಿದಂ ಕುಂಕುಮಮಂ ೮೭

ನೀರನ್ನು ಅದರ ಮೇಲೆ ಸುರಿದಳು. ೮೪. ಒಬ್ಬಳು ತಾವರೆಗಿಡವನ್ನು ಆಲಿಂಗಿಸಿ ಹೂವನ್ನು ಕೀಳಬೇಕೆಂದು ಅತಿಯಾಗಿ ಬಗ್ಗಿ ನಿಂತಿದ್ದಳು. ಅವಳ ದೇಹದ ಮೇಲೆ ಮತ್ತೊಬ್ಬಳು ಕುಂಕುಮಕೇಸರಿಮಿಶ್ರ ನೀರನ್ನು ಚೆಲ್ಲಲು ಆ ತಂಗೊಳವೆಂಬ (ತಣ್ಣೀರಿನ ಕೊಳವೆಂಬ) ಆಕಾಶದ ಇಂದ್ರಧನುಸ್ಸಿನಹಾಗೆ ಅವಳು ಶೋಭಿಸುತ್ತಿದ್ದಳು. ೮೫. ಆ ರಾಜಶೇಖರಮಹಾರಾಜನು ಕಸ್ತೂರಿಯ ರಸವನ್ನು ಪಿಚಕಾರಿಯಿಂದ ಒಬ್ಬಳ ಮೇಲೆ ಹೊಡೆಯಲು, ಅದು ಅವಳ ಸಣ್ಣದಾದ ಹೊಟ್ಟೆಯ ಮೇಲಿನ ರೋಮರಾಜಿಯನ್ನು ಅನುಸರಿಸಿ ಮೇಲಿನಿಂದ ಇಳಿಯುತ್ತಿರುವ ರೀತಿಯು, ಅಹರೇ ! ಕರಿಯಹಾವು ಕಾಳಿಂಗ ಸರ್ಪವನ್ನು ನುಂಗುವ ಹಾಗೆ ಆ ತಿಳಿಗೊಳದಲ್ಲಿ ಕಾಣಿಸಿತು. ೮೬. ವರನಾದ ರಾಜಶೇಖರನು ಸುರಿಸಿದ ಕುಂಕುಮಕೇಸರಿಯ ಜಲವು ದಪ್ಪವಾದ ಕುಚಗಳೆಂಬ ಬೆಟ್ಟದಲ್ಲಿನ ಧಾತುಗಳಾದ ಗೈರಿಕಾದಿಗಳಿಂದ ಕೂಡಿದ ಬೆಟ್ಟದ ಪ್ರವಾಹವು ಧುಮುಕುವ ಹಾಗೆ ಮೊಲೆಗಳ ಸಂದಿಸಿಂದ ಇಳಿದುಬರುತ್ತಿರಲು ರೋಮರಾಜಿಯೆಂಬ ಬಳ್ಳಿಯು ಚಿಗುರೊಡೆದ ಹಾಗೆ ಏನು ಶೋಭಿಸುತ್ತಿತ್ತೋ ! ೮೭. ಉದಯಿಸುತ್ತಿರುವ ಚಂದ್ರನು ರಾತ್ರಿಯೆಂಬ ಹೆಂಗಸಿನ ಶರೀರದಲ್ಲಿ ಕೆಂಪಾದ ಕಿರಣವನ್ನು ಇದಿರಾಗಿ ಸುರಿಸುತ್ತಾನೆಯೋ ಎಂಬ ಹಾಗೆ, ಆ ರಾಜಶೇಖರನೆಂಬ ಚಂದ್ರಮನು ಕುಂಕುಮಜಲವನ್ನು ಕಪ್ಪುಬಣ್ಣದ ಒಬ್ಬ

ಹೃದಯಸ್ಥಿತಮದನಂ ಸಂ
ಮದದಿಂ ಜಳಕೇಳಿಗೆಳಸಿ ತಾನುಂ ಪಿಡಿದೆ
ತ್ತಿದ ಪೊನ್ನ ಕಳಶವೆನಿಸಿದು
ದದಟಿಸೊಳಿದಿರ್ಚಿದ ವಧೂಜನದ ಕಳಶಕುಚಂ ೮೮

ಓಪಳ ಕುಚದೊಳ್ಕುಂಕುಮ
ಲೇಪಂ ಜಳದಿಂದೆ ತೊಲಗೆ ನಖಪದಮಪರಾ
ಶಾಪರ್ವತದಗ್ರದೊಳೆ ಕ
ಲಾಪತಿ ಕಲೆ ಸಂಜೆ ಸರಿಯೆ ತೋರ್ಪವೊಲೆಸೆಗುಂ ೮೯

ವ॥ ಆಗಳರಸಿ ಸರಸಿಯೊಳ್ನಿಂದು ಸಿರಸದೊಳರಸನಂ ಸರಸದಿಂ ನಿರೀಕ್ಷಿಸಿ

ಉ॥ ಸೂಸಿದುದೊಂದು ಚಂದನಮೆ ಕಾಮಿನಿ ತನ್ನ ಮುಖಪ್ರಕಾಶಮಂ
ಸೂಸದೆ ನೀಳ್ದ ಕಣ್ಮರಲಕೋರೆಯ ನುಣ್ಗದಿರೆಂಬ ಜೊನ್ನಮಂ
ಸೂಸದೆ ಕೂಡೆ ಕುಂದಣದ ಕುಂಭಮನೇಳಿಪುರೋಜದಂಶುಮಂ
ಸೂಸದೆ ಮಂದಹಾಸರಸಮಂ ಸಲೆ ಸೂಸದೆ ನಲ್ಲಸಂಗದೊಳ್ ೯೦

ವ॥ ಮತ್ತಂ

ಸ್ತ್ರೀಯ ಮೇಲೆ ಜೀರ್ಕೊಳವಿಯನ್ನೊತ್ತಿ ಸುರಿಸಿದನು. ೮೮. ಆ ಸರೋವರದಲ್ಲಿ ಎದುರಿಸಿ ನಿಂತಿರುವ ಸ್ತ್ರೀಯರುಗಳ ಕುಂಭಸದೃಶ ಕುಚಗಳು ಹೃದಯದಲ್ಲಿರುವ (ಮನಸ್ಸಿನಲ್ಲಿರುವ) ಮನ್ಮಥನು ಸಂತೋಷದಿಂದ ಜಲಕ್ರೀಡೆಗೆ ಅಪೇಕ್ಷಿಸಿ, ತಾನೂ ಕೂಡ ಹಿಡಿದು ಎತ್ತಿದ ಬಂಗಾರದ ಕುಂಭಗಳೋ ಎನ್ನಿಸಿದ್ದುವು. ೮೯. ಹೆಂಡತಿಯಾದ ಸರ್ವಮಂಗಳೆಯ ಮೊಲೆಗಳ ಮೇಲಿರುವ ಕುಂಕುಮಕೇಸರಿಯ ಲೇಪವು ಜಲದಿಂದ ತೊಳೆದುಹೋಗಲು ಅಲ್ಲಿರುವ ನಖಕ್ಷತವು ಪಶ್ಚಿಮಪರ್ವತದಲ್ಲಿ ಸಂಧ್ಯಾಕಾಲವು ಸರಿದುಹೋಗಲು ಕಾಣುವ ಚಂದ್ರನ ಕಳೆಯಂತೆ ಶೋಭಿಸುತ್ತಿತ್ತು. ವ|| ಆಗ ಸರ್ವಮಂಗಳೆಯು ಸರೋವರದಲ್ಲಿ ನಿಂತು, ನೇರ ಎದುರಿನಲ್ಲಿ ಅರಸನನ್ನು ರಸಭರಿತ ದೃಷ್ಟಿಯಿಂದ ನಿರೀಕ್ಷಿಸಿ, ೯೦. ಆ ಕಾಮನಿಯು ಪ್ರಿಯನಾದ ರಾಜಶೇಖರನ ಶರೀರದ ಮೇಲೆ ಸುರಿದಂಥ ಒಂದು ಚಂದನವೇ (ಅಷ್ಟೇ ಅಲ್ಲ), ತನ್ನ ಮುಖಪ್ರಕಾಶವನ್ನೂ ಸುರಿಸಲಿಲ್ಲವೇ ! ಅಗಲವಾದ ಪುಷ್ಪಸದೃಸ ಕಣ್ಣುಗಳ ಕೊನೆಯ ನುಣ್ಣನೆಯ ಕಿರಣಗಳೆಂಬ ಬೆಳದಿಂಗಳನ್ನು ಸೂಸಲಿಲ್ಲವೇ ! ಜೊತೆಗೆ ಅಪರಂಜಿಚಿನ್ನದ ಕುಂಭಗಳಂತಿರುವ ಮೊಲೆಗಳ ಕಿರಣಗಳನ್ನು ಸೂಸಲಿಲ್ಲವೇ ! ಕಿರುನಗೆಯ ರಸವನ್ನು ಸೂಸಲಿಲ್ಲವೆ ! (ಕೇವಲ ಗಂಧೋದಕವಷ್ಟೇ ಅಲ್ಲ, ಮುಖ, ಕಣ್ಣು, ಮೊಲೆ, ನಗೆಯ ಶೃಂಗಾರರಸವೂ ರಾಜನ ಮುಖವನ್ನಾವರಿಸಿತ್ತು ಎಂದು ಭಾವ) ವ|| ಮತ್ತು

ಚಂ॥ ತಳಿಯೆ ವಧೂಜನಂ ಮೃಗಮದೋದಕಮಂ ನೃಪನಲ್ಲಿ ನಾಂದು ಕಂ
ಗೊಳಿಸಿದನರ್ಕಜಾಂಬು ಮುಸುಕಿರ್ದಮರೇಂದ್ರಗಜೇಂದ್ರದಂತೆ ಮೇ
ಣ್ಣುಳುಕೆ ಹಿಮಾಂಬುವಂ ನೆನೆದು ಚಂದ್ರಿಕೆದೀವಿದ ಚಂದ್ರನಂತೆ ಮಂ
ಜುಳಘುಸೃಣೋದಮಂ ಸುರಿಯೆ ತಳ್ತು ತಳಿರ್ತ ನವಾಮ್ರದಂತೆವೋಲ್ ೯೧

ಕಂ॥ ಲಲನಾಕುಚದೊಳ್ ಮೃಗಮದ
ಜಳಬಿಂದುಗಳೆಸೆದುವರಸನೊತ್ತಲೊಡಂ ತ
ಳ್ತಲರ್ವುದನೆ ಪಾರ್ದು ಸಾರ್ದ
ಬ್ಜಲಸತ್ಕೋಶವನೆ ಮುತ್ತಿದೆಳೆಯಳಿಗಳವೊಲ್ ೯೨

ವ॥ ಆಗಳ್

ಕಂ॥ ವನಜಿನಿ ಕರದಿಂ ಮೃಗಮದ
ವನಧಾರೆಯನೆತ್ತಿ ಸೂಸಿದಳ್ ತಾನುವೊಜಿ
ಲ್ದಿನೆ ವನಜದಿಂದೆ ರಮಣೀ
ಜನಾಸ್ಯಕಂಜಕ್ಕೆ ಕವಿದುವಳಿಗಳ್ ಕೊಳದೊಳ್ ೯೩

ಎಳೆಯಳ್ನಳಿನೋಜ್ವಳಕು
ಟ್ಮಳಮಂ ಕೊಯ್ಯಲ್ಕೆ ಸಾರ್ದು ನಳಿನಾಕರದೊ
ಳ್ಮುಳುಗುವಳ ಮೊಲೆಯನಬ್ಜದ
ಕಳಿಕೆಯದೆಂದೆಳಸಿ ಪಾಯ್ದು ನಗಿಸಿದಳೊರ್ವಳ್ ೯೪

೯೧. ಆ ಜಲಕ್ರೀಡಾಸಮಯದಲ್ಲಿ ಸ್ತ್ರೀಯರುಗಳು ಕಸ್ತೂರಿಮಿಶ್ರಿತ ಜಲವನ್ನು ರಾಜಶೇಖರನ ಮೇಲೆ ಸುರಿದರು. ಅವನು (ಆ ನೀರಿನಿಂದ) ತೊಯ್ದು, ಯಮುನಾನದಿಯ ನೀರು ತುಂಬಿದ್ದ ಐರಾವತದ ಹಾಗೆ ಆದನು. ಪಚ್ಚಕರ್ಪೂರಮಿಶ್ರಿತವಾದ ನೀರನ್ನು ಸುರಿಯಲು, ನೆನೆದು ಬೆಳದಿಂಗಳಿಂದ ವ್ಯಾಪಿಸಿರುವ ಚಂದ್ರನ ಹಾಗೆ ಆದನು. ಮನೋಹರವಾದ ಕುಂಕುಮಕೇಸರಿಯ ಜಲವನ್ನು ಸುರಿಯಲು, ಚಿಗುರಿದ ನೂತನ ಮಾವಮರದಂತೆ ಆಗಿ ಕಂಗೊಳಿಸಿದನು. ೯೨. ಅರಸನು ಸ್ತ್ರೀಯರ ಕುಚದಲ್ಲಿ ಕಸ್ತೂರಿಮಿಶ್ರಿತ ಜಲವನ್ನು ಸುರಿಯಲು, ಆ ನೀರುಹನಿ ಅವರ ಮೊಲೆಗಳ ಮೇಲೆ ನಿಂತಿತ್ತು. ಅದು ಕಮಲದ ಹೂವು ಅರಳುವುದನ್ನೇ ಕಾಯ್ದುಕೊಂಡಿದ್ದು ಮೊಗ್ಗಿನ ಮೇಲೆಯೇ ಒಟ್ಟುಗೂಡಿ ಮುತ್ತಿದ ದುಂಬಿಗಳ ಹಾಗೆ ಶೋಭಿಸುತ್ತಿತ್ತು. ವ॥ ಆಗ ೯೩. ಕಮಲಿನಿಯು ಕೈಯಿಂದ ಕಸ್ತೂರಿಯುಕ್ತವಾದ ನೀರಿನ ಧಾರೆಯನ್ನು ಎತ್ತಿ ಕೂಗಿ ಸುರಿದಳೋ ಎನ್ನುವ ಹಾಗೆ ಕಮಲದಿಂದ ಹೆಂಗಸಿನ ಮುಖಕಮಲಕ್ಕೆ ದುಂಬಿಗಳು ಆ ಸರೋವರದಲ್ಲಿ ಹಾರಿಹೋಗಿ ಮುತ್ತುತ್ತಿದ್ದವು. ೯೪. ಎಳೆಯಳಾದ ಸ್ತ್ರೀಯೊಬ್ಬಳು ಪ್ರಕಾಶಮಾನವಾದ ಕಮಲದ ಮೊಗ್ಗೊಂದನ್ನು ಆ ಸರೋವರದಲ್ಲಿ ಕೊಯ್ಯಲು ಹೋಗಿ ಮುಳುಗುವಳು. ಆಗ ಮತ್ತೊಬ್ಬಳು ಅವಳ ಮೊಲೆಗಳನ್ನು ಕಮಲದ ಮೊಗ್ಗು ಎಂದು ಭಾವಿಸಿ

ಹೃದಯಸ್ಥಿತಮದನಂ ಸಂ
ಮದದಿಂ ಜಳಕೇಳಿಗೆಳಸಿ ತಾನುಂ ಪಿಡಿದೆ
ತ್ತಿದ ಪೊನ್ನ ಕಳಶಮೆನಿಸಿದು
ದದಟಿಸಿೋಳಿದಿರ್ಚಿದ ವಧೂಜನದ ಕಳಶಕುಚಂ ೮೮

ಓಪಳ ಕುಚದೊಳ್ಕುಂಕುಮ
ಲೇಪಂ ಜಳದಿಂದೆ ತೊಲಗೆ ನಖಪದಮಪರಾ
ಶಾಪರ್ವತದಗ್ರದೊಳೆ ಕ
ಲಾಪತಿ ಕಲೆ ಸಂಜೆ ಸರಿಯೆ ತೋರ್ಪವೊಲೆಸೆಗುಂ ೮೯

ವ॥ ಆಗಳರಸಿ ಸರಸಿಯೊಳ್ನಿಂದು ಸರಸದೊಳರಸನಂ ಸರಸದಿಂ ನಿರೀಕ್ಷಿಸಿ

ಉ॥ ಸೂಸಿದುದೊಂದು ಚಂದನಮೆ ಕಾಮಿನಿ ತನ್ನ ಮುಖಪ್ರಕಾಶಮಂ
ಸೂಸದೆ ನೀಳ್ದ ಕಣ್ಮಲರಲಕೋರೆಯ ನುಣ್ಗದಿರೆಂಬ ಜೊನ್ನಮಂ
ಸೂಸದೆ ಕೂಡೆ ಕುಂದಣದ ಕುಂಭಮನೇಳಿಪುರೋಜದಂಶುವಂ
ಸೂಸದೆ ಮಂದಹಾಸರಸಮಂ ಸಲೆ ಸೂಸದೆ ನಲ್ಲನಂಗದೊಳ್ ೯೦

ವ॥ ಮತ್ತಂ

ಸ್ತ್ರೀಯ ಮೇಲೆ ಜೀರ್ಕೊಳವಿಯನ್ನೊತ್ತಿ ಸುರಿಸಿದನು. ೮೮. ಆ ಸರೋವರದಲ್ಲಿ ಎದುರಿಸಿ ನಿಂತಿರುವ ಸ್ತ್ರೀಯರುಗಳ ಕುಂಭಸದೃಶ ಕುಚಗಳು ಹೃದಯದಲ್ಲಿರುವ (ಮನಸ್ಸಿನಲ್ಲಿರುವ) ಮನ್ಮಥನು ಸಂತೋಷದಿಂದ ಜಲಕ್ರೀಡೆಗೆ ಅಪೇಕ್ಷಿಸಿ, ತಾನೂ ಕೂಡ ಹಿಡಿದು ಎತ್ತಿದ ಬಂಗಾರದ ಕುಂಭಗಳೋ ಎನ್ನಿಸಿದ್ದುವು. ೮೯. ಹೆಂಡತಿಯಾದ ಸರ್ವಮಂಗಳೆಯ ಮೊಲೆಗಳ ಮೇಲಿರುವ ಕುಂಕುಮಕೇಸರಿಯ ಲೇಪವು ಜಲದಿಂದ ತೊಳೆದುಹೋಗಲು ಅಲ್ಲಿರುವ ನಖಕ್ಷತವು ಪಶ್ಚಿಮಪರ್ವತದಲ್ಲಿ ಸಂಧ್ಯಾಕಾಲವು ಸರಿದುಹೋಗಲು ಕಾಣುವ ಚಂದ್ರನ ಕಳೆಯಂತೆ ಶೋಭಿಸುತ್ತಿತ್ತು. ವ|| ಆಗ ಸರ್ವಮಂಗಳೆಯು ಸರೋವರದಲ್ಲಿ ನಿಂತು, ನೇರ ಎದುರಿನಲ್ಲಿ ಅರಸನನ್ನು ರಸಭರಿತ ದೃಷ್ಟಿಯಿಂದ ನಿರೀಕ್ಷಿಸಿ, ೯೦. ಆ ಕಾಮನಿಯು ಪ್ರಿಯನಾದ ರಾಜಶೇಖರನ ಶರೀರದ ಮೇಲೆ ಸುರಿದಂಥ ಒಂದು ಚಂದನವೇ (ಅಷ್ಟೇಅಲ್ಲ), ತನ್ನ ಮುಖಪ್ರಕಾಶವನ್ನೂ ಸುರಿಸಲಿಲ್ಲವೇ ! ಅಗಲವಾದ ಪುಷ್ಪಸದೃಸ ಕಣ್ಣುಗಳ ಕೊನೆಯ ನುಣ್ಣನೆಯ ಕಿರಣಗಳೆಂಬ ಬೆಳದಿಂಗಳನ್ನು ಸೂಸಲಿಲ್ಲವೇ ! ಜೊತೆಗೆ ಅಪರಂಜಿಚಿನ್ನದ ಕುಂಭಗಳಂತಿರುವ ಮೊಲೆಗಳ ಕಿರಣಗಳನ್ನು ಸೂಸಲಿಲ್ಲವೇ ! ಕಿರುನಗೆಯ ರಸವನ್ನು ಸೂಸಲಿಲ್ಲವೆ ! (ಕೇವಲ ಗಂಧೋದಕವಷ್ಟೇ ಅಲ್ಲ, ಮುಖ, ಕಣ್ಣು, ಮೊಲೆ, ನಗೆಯ ಶೃಂಗಾರರಸವೂ ರಾಜನ ಮುಖವನ್ನಾವರಿಸಿತ್ತು ಎಂದು ಭಾವ) ವ|| ಮತ್ತು

ಚಂ॥ ತಳಿಯೆ ವಧೂಜನಂ ಮೃಗಮದೋದಕಮಂ ನೃಪನಲ್ಲಿ ನಾಂದು ಕಂ
ಗೊಳಿಸಿದನರ್ಕಜಾಂಬು ಮುಸುಕಿರ್ದಮರೇಂದ್ರಗಜೇಂದ್ರದಂತೆ ಮೇ
ಣ್ತುಳುಕಿ ಹಿಮಾಂಬುವಂ ನೆನೆದು ಚಂದ್ರಿಕೆದೀವಿದ ಚಂದ್ರನಂತೆ ಮಂ
ಜುಳಘುಸೃಣೋದಮಂ ಸುರಿಯೆ ತಳ್ತು ತಳಿರ್ತ ನವಾಮ್ರದಂತೆವೋಲ್ ೯೧

ಕಂ॥ ಲಲನಾಕುಚದೊಳ್ ಮೃಗಮದ
ಜಳಬಿಂದುಗಳೆಸೆದುವರಸನೊತ್ತಲೊಡಂ ತ
ಳ್ತಲರ್ವುದನೆ ಪಾರ್ದು ಸಾರ್ದ
ಬ್ಜಲಸತ್ಕೋಶವನೆ ಮುತ್ತಿದೆಳೆಯಳಿಗಳವೋಲ್ ೯೨

ವ॥ ಆಗಳ್

ಕಂ॥ ವನಜಿನಿ ಕರದಿಂ ಮೃಗಮದ
ವನಧಾರೆಯನೆತ್ತಿ ಸೂಸಿದಳ್ ತಾನುಮೊಱ
ಲ್ದನೆ ವನಜದಿಂದೆ ರಮಣೀ
ಜನಾಸ್ಯಕಂಜಕ್ಕೆ ಕವಿದುವಳಿಗಳ್ ಕೊಳದೊಳ್ ೯೩

ಎಳೆಯಳ್ನಳಿನೋಜ್ವಳಕು
ಟ್ಮಳಮಂ ಕೊಯ್ಯಲ್ಕೆ ಸಾರ್ದು ನಳಿನಾಕರದೊ
ಳ್ಮುಳುಗುವಳ ಮೊಲೆಯನಬ್ಜದ
ಕಳಿಕೆಯದೆಂದೆಳಸಿ ಪಾಯ್ದು ನಗಿಸಿದಳೊರ್ವಳ್ ೯೪

೯೧. ಆ ಜಲಕ್ರೀಡಾಸಮಯದಲ್ಲಿ ಸ್ತ್ರೀಯರುಗಳು ಕಸ್ತೂರಿಮಿಶ್ರಿತ ಜಲವನ್ನು ರಾಜಶೇಖರನ ಮೇಲೆ ಸುರಿದರು. ಅವನು (ಆ ನೀರಿನಿಂದ) ತೊಯ್ದು, ಯಮುನಾನದಿಯ ನೀರು ತುಂಬಿದ್ದ ಐರಾವತದ ಹಾಗೆ ಆದನು. ಪಚ್ಚಕರ್ಪೂರಮಿಶ್ರಿತವಾದ ನೀರನ್ನು ಸುರಿಯಲು, ನೆನೆದು ಬೆಳದಿಂಗಳಿಂದ ವ್ಯಾಪಿಸಿರುವ ಚಂದ್ರನ ಹಾಗೆ ಆದನು. ಮನೋಹರವಾದ ಕುಂಕುಮಕೇಸರಿಯ ಜಲವನ್ನು ಸುರಿಯಲು, ಚಿಗುರಿದ ನೂತನ ಮಾಮರದಂತೆ ಆಗಿ ಕಂಗೊಳಿಸಿದನು. ೯೨. ಅರಸನು ಸ್ತ್ರೀಯರ ಕುಚದಲ್ಲಿ ಕಸ್ತೂರಿಮಿಶ್ರಿತ ಜಲವನ್ನು ಸುರಿಯಲು, ಆ ನೀರುಹನಿ ಅವರ ಮೊಲೆಗಳ ಮೇಲೆ ನಿಂತಿತ್ತು. ಅದು ಕಮಲದ ಹೂವು ಅರಳುವುದನ್ನೇ ಕಾಯ್ದುಕೊಂಡಿದ್ದು ಮೊಗ್ಗಿನ ಮೇಲೆಯೇ ಒಟ್ಟುಗೂಡಿ ಮುತ್ತಿದ ದುಂಬಿಗಳ ಹಾಗೆ ಶೋಭಿಸುತ್ತಿತ್ತು. ವ॥ ಆಗ ೯೩. ಕಮಲಿನಿಯು ಕೈಯಿಂದ ಕಸ್ತೂರಿಯುಕ್ತವಾದ ನೀರಿನ ಧಾರೆಯನ್ನು ಎತ್ತಿ ಕೂಗಿ ಸುರಿದಳೋ ಎನ್ನುವ ಹಾಗೆ ಕಮಲದಿಂದ ಹೆಂಗಸಿನ ಮುಖಕಮಲಕ್ಕೆ ದುಂಬಿಗಳು ಆ ಸರೋವರದಲ್ಲಿ ಹಾರಿಹೋಗಿ ಮುತ್ತುತ್ತಿದ್ದವು. ೯೪. ಎಳೆಯಳಾದ ಸ್ತ್ರೀಯೊಬ್ಬಳು ಪ್ರಕಾಶಮಾನವಾದ ಕಮಲದ ಮೊಗ್ಗೊಂದನ್ನು ಆ ಸರೋವರದಲ್ಲಿ ಕೊಯ್ಯಲು ಹೋಗಿ ಮುಳುಗುವಳು. ಆಗ ಮತ್ತೊಬ್ಬಳು ಅವಳ ಮೊಲೆಗಳನ್ನು ಕಮಲದ ಮೊಗ್ಗು ಎಂದು ಭಾವಿಸಿ

ಮೊಲೆಯುಲರ್ದಬ್ಬದೊಳಿರೆ ತನು
ವೆಲೆವರೆಯೊಳಡಂಗಿ ಬಾಗಿ ಪೂಗೊಯ್ವಳ ತೋ
ರ್ಪಲಘುತರ ಜಘನಭರಮೇಂ
ಗೆಲೆವಂದುದೊ ಕೊಳದೊಳೇಳ್ವ ಕರಿಸರದಿರವಂ ೯೫

ದ್ರುತವಿಲಂಬಿತ॥ ಸ್ಮರನಬಾಣಸರೋಜಕೆ ಕೂರ್ಪನಾ
ತರುಣಿ ಕಣ್ಗಡೆಯಿಂದುಪದೇಶಿಪಂ
ತರರೆ ಪೂಗೊಳದೊಳ್ಕಿಱಿದಾಂತು ಪಂ
ಕರುಹಮಂ ನಡೆನೋಳ್ಪವಳೊಪ್ಪಿದಳ್ ೯೬

ವ॥ ಇಂತನಂತಸಂಭ್ರಮಂ ಮಿಗೆ ಸಳಿಳಕೇಳಿಯಂ ತಳೆದನಂತರಂ
ಕಂ॥ ಅರೆವಿಱಿದಂಬುಜದಲರಂ
ಕರತಳದೊಳ್ತಳೆದು ಕನಕವನಜರಜಂಗ
ಳ್ಪೊರೆದಿರೆ ನಿಜತನುಲತೆಯೊ
ಳ್ಸಿರಿಯೆನೆ ನಿಂದರಸಿ ಸರಸಿಯಂ ಪೊಱಮಟ್ಟಳ್ ೯೭

ವ॥ ಮತ್ತಮಾಗಳ್
ಕಂ॥ ಎಳೆವಾಸೆ ತೊಡರ್ದುದೆನೆ ಮಿಸು
ಪೆಳೆವಾಸೆಯುದೆಸೆಯು ನೀದಳಂ ಕೈವಿಡಿದೊ
ಳ್ದಳೆವಾಸೆಯಾಂತನಂಬುಜ
ದೆಳೆವಾಸೆಡೆಗೊಂಡ ಪುಳಿನದೆಡೆಗವನೀಶಂ ೯೮

ಅದನ್ನು ಹಿಡಿಯಲು ಹೋಗಿ (ಎಲ್ಲರನ್ನೂ) ನಗಿಸಿದಳು. ೯೫. ಹೂವನ್ನು ಕೊಯ್ಯಲು ಬಗ್ಗಿರುವ ಒಬ್ಬಳ ಮೊಲೆಯು ಅರಳಿದ ಕಮಲದಲ್ಲಿ ಸೇರಿತ್ತು. ದೇಹವು ಕಮಲಪತ್ರದ ಮರೆಯಲ್ಲಿ ಅಡಗಿತ್ತು. ಅವಳ ದೊಡ್ಡದಾಗಿ ಕಾಣುತ್ತಿರುವ ಜಘನವು ಆ ಸರೋವರ ದಿಂದ ಏಳುವ ಆನೆಯ ಕುಂಭಸ್ಥಳವನ್ನು ಏನು ಗೆದ್ದಿತೊ ! ೯೬. ಮನ್ಮಥನ ಬಾಣ ರೂಪವಾದ ಕಮಲಕ್ಕೆ ಯುವತಿಯು ಕಡೆಗಣ್ಣನೋಟದಿಂದ ಪ್ರೀತಿಯನ್ನು ಉಪದೇಶಿಸು ವಳೋ ಎಂಬಂತೆ, ಅರರೇ ! ಆ ಕೊಳದಲ್ಲಿ ಕಮಲವನ್ನು ಕಿತ್ತುತಂದು ಕೈಯಲ್ಲಿ ಹಿಡಿದು ನೋಡುತ್ತಿರುವ ಒಬ್ಬಳು ಶೋಭಿಸುತ್ತಿದ್ದಳು. ವ॥ ಹೀಗೆ ಅನಂತಸಂಭ್ರಮದಿಂದ ಕೂಡಿ ಜಲಕ್ರೀಡೆಯನ್ನು ಮಾಡಿ ಮುಗಿಸಿದ ಮೇಲೆ ೯೭. ಅರ್ಧ ಅರಳಿರುವ ಕಮಲಗಳ ಹೂವನ್ನು ಕೈಗಳಲ್ಲಿ ಹಿಡಿದುಕೊಂಡು ಮಹಾರಾಣಿಯಾದ ಸರ್ವಮಂಗಳಾದೇವಿಯು ಬಂಗಾರವರ್ಣದ ಕಮಲಗಳ ಧೂಳು ತನ್ನ ಬಳ್ಳಿಯಂತಿರುವ ಮೈಗೆ ಮೆತ್ತಿದುದರ ಫಲವಾಗಿ ಲಕ್ಷ್ಮಿಯೋ ಎಂಬಂತೆ (ಪ್ರಕಾಶಿಸುತ್ತ) ಆ ಸರೋವರದಿಂದ ಹೊರಹೊರಟಳು. ವ॥ ಮತ್ತು ಆಗ ೯೮. (ಆ ಸರೋವರದಲ್ಲಿದ್ದ) ಎಳೆಯದಾದ ಹಾವಸೆಯು (ಶೈವಲ) ಹತ್ತಿರುವುದೋ ಎನ್ನುವಂತೆ ಶೋಭಿಸುವ ಕೋಮಲವಾದ (ಹೊಟ್ಟೆಯ ಮೇಲಿರುವ) ರೋಮರಾಜಿಗಳು ಪ್ರಕಾಶಿಸುತ್ತಿದ್ದವು. (ಹಾಗೆ) ನಿಂತುಕೊಂಡಿದ್ದ ಮಹಾರಾಣಿಯಾದ ಸರ್ವಮಂಗಳೆಯನ್ನು ರಾಜಶೇಖರ ಮಹಾರಾಜನು ಕೈಹಿಡಿದು ಕಮಲದಿಂದ ಮಾಡಿದ

ಮ॥ ನನೆಗಳ್ ಸೋರ್ವವೊಲಾರ್ವಿ ಸೂಸೆ ಮುಡಿಯಿಂ ವಾರ್ಬಿಂದುಗಳ್ಗಂಡದೊ
ಳ್ವನದ ಶ್ಯಾಮಳಕುಂತಳಂ ಶಶಿಯೊಳಂಕಂ ತೋರ್ಪವೋಲ್ತೋಱೆ ಕ
ಣ್ಗೊನೆ ಜಿಗೋಡಾಡೆ ವಿಲೋಹಿತಂ ವಿರಹಿರಕ್ತಾಕ್ತಾಂಗಜಾಸ್ತ್ರಂಗಳಂ
ವನಿತಾನೀಕಮದಿಂಬುವೆತ್ತು ಪೊಱಮಟ್ಟೆಯ್ದಿತ್ತು ಕಾಸಾರಮಂ ೯೯

ಕಂ॥ ಅಂಗನೆಯರಂಗಕಾಂತಿಯ
ಪಾಂಗದ್ಯುತಿ ಮುಸುಕಿದಂತಿರೆಸೆದುದು ಕೊಳದೊಳ್
ಪಿಂಗದವರೆತ್ತಿ ಸೂಸೆ ತ
ರಂಗಿಪ ಕುಂಕುಮಮುಮಮಳ ಚಂದನರಸಮುಂ ೧೦೦

ತಳಿರ್ವಣ್ಣವಾಂತ ಕಡೆಗ
ಣ್ಬೆಳರ್ವಣ್ಣಂಬಡೆದ ತುಟಿದಳಿರ್ಪರೆದಳಕಂ
ಮಿಳಿರ್ವ ನಿಱಿವಿಣಲುಮೆಸೆದುದು
ತಳಿರ್ವೆಳೆವೆಣ್ಗಳ್ಗೆ ಕುಳಿರ್ವ ಕೊಳದಿಂದಾಗಳ್ ೧೦೧

ಸ್ವಾಗತ॥ ಪೋಗಲೆಂದು ತಡಿಯೊಳ್ ಧರಣೀಶ
ಸ್ತ್ರೀಗಣಂ ನೆಲಸಿ ನೋಳ್ಪುದುಮಾಗಳ್
ರಾಗದಿಂ ಸರಸಿಗೊಳ್ಪಡಿಯಿಾವಂ
ತಾಗಿ ಪರ್ಬಿತಲರ್ಗಣ್ಬೆಳಗೆತ್ತುಂ ೧೦೨

ಕೋಮಲವಾದ ಹಾಸಿಗೆಯು ಸಜ್ಜಾದ ಮಳಲಿನ ಪ್ರದೇಶಕ್ಕೆ ಪ್ರೀತಿಯಿಂದ ಕರೆದೊಯ್ಯಲು ಮನಸ್ಸು ಮಾಡಿದನು. ೯೯. ಮುಡಿಯಲ್ಲಿ ಧರಿಸಿದ್ದ (ಮಲ್ಲಿಗೆ) ಹೂವುಗಳು ಸುರಿಯುತ್ತಿವೆಯೋ ಎನ್ನುವ ಹಾಗೆ ನೀರಿನ ಹನಿಗಳು ಮುಡಿಯಿಂದ ಸೋರುತ್ತಿದ್ದವು. ಕೆನ್ನೆಯ ಪ್ರದೇಶದಲ್ಲಿ (ವರ್ಷಾಕಾಲದ) ಮೋಡಗಳ ಹಾಗೆ ಇರುವ ಶ್ಯಾಮಲ ವರ್ಣದ ಮುಂಗುರುಳು ಚಂದ್ರನಲ್ಲಿರುವ ಕರಿಯ ಗುರುತು ಕಾಣುವ ಹಾಗೆ ಕಾಣುತ್ತಿತ್ತು. ಕಡೆಗಣ್ಣುಗಳು ಕೆಂಪಾಗಿ ವಿರಹಿಗಳ ರಕ್ತದಿಂದ ನೆನೆದ ಮನ್ಮಥನ ಬಾಣಗಳನ್ನು ಹಿಯಾಳಿಸುವಂತೆ ಶೋಭೆಗೊಂಡ ಆ ಸ್ತ್ರೀಸಮೂಹವು ಸರೋವರದಿಂದ ಹೊರಹೊರಟಿತು. ೧೦೦. ಆ ಕೊಳದಲ್ಲಿ ಆ ಹೆಂಗಸರು ಎತ್ತಿ ಸುರಿದ ತರಂಗಮಯವಾದ ಕುಂಕುಮವೂ, ಶ್ರೇಷ್ಠವಾದ ಚಂದನರಸವೂ ಕ್ರಮವಾಗಿ ಅವರ ಅಂಗಕಾಂತಿಯಂತೆಯೂ ಅಪಾಂಗಕಾಂತಿಯಂತೆಯೂ ಇದ್ದಿತು. ೧೦೧. ತಂಪಾದ ಸರೋವರದಿಂದ ಹೊರಹೊರ ಹೊರಡುತ್ತಿರುವ ಆ ಹೆಣ್ಣು ಹುಡುಗಿಯರಿಗೆ ತಳಿರಿನ ಬಣ್ಣ ಧರಿಸಿದ ಕಡೆಗಣ್ಣು, ಬಿಳಿಯ ಬಣ್ಣವನ್ನು ಹೊಂದಿರುವ ತಳಿರಿನಂತಹ ತುಟಿ, ಚದುರಿದ ಮುಂಗುರುಳು, ಹೊಯ್ದಾಡುತ್ತಿರುವ ನಿರಿಗೆಗಳ ಸಾಲು ಶೋಭಿಸುತ್ತಿತ್ತು. ೧೦೨. ಧರಣೀಶನಾದ ಆ ರಾಜಶೇಖರನ ಸ್ತ್ರೀಯರು ಹೋಗುವುದಕ್ಕೆಂದು ಎದ್ದುಹೊರಟು ದಂಡೆಯಲ್ಲಿ ನಿಂತು ಸರೋವರವನ್ನು ನೋಡಿದರು, ಆ ನೋಟವು ಅವರ ಕಣ್ಣಿನ ಬೆಳಕೆಂಬ ಉಡುಗೊರೆಯನ್ನು ಸರೋವರಕ್ಕೆ

ಕಂ॥ ಅಂಬರಮುದಮರೆ ನಾಂದು ನಿ
ರಂಬರೆಯಂತಿರ್ದ ಯುವತಿಗಿತ್ತಪಳೆನೆ ಪೀ
ತಾಂಬರಮಂ ಸರಸಿ ಸುವ
ರ್ಣಾಂಬುಜರಜಮೆಲರ ಪೊಯ್ಲಿಗಿಂ ನೆಗೆದೆಸೆಗುಂ ೧೦೩

ತರಳೆಯರರೆಮುಗುಳ್ದಂಬುಜ
ದರಲಂ ಕೊಯ್ದೊಯ್ದರೆಂದು ಮಱಿದುಂಬಿಗಳಾ
ಸರಸಿಯೊಡನಳ್ತು ದೂಱುವ
ಸರಮೆನೆ ಕರಮೆಸೆದುದವಱ ಗಾರವಮದಱೊಳ್ ೧೦೪

ತೆರೆ ಮುಸಗೆ ನೆಗೆದು ನಿಂದಂ
ಬುರುಹದೊಳೆಳೆಮೀಂಗಳಿರೆ ವಿರಾಜಿಸಿದುದು ತ
ತ್ಸರಸಿ ಪೊಱಮಟ್ಟು ಪೋಪಾ
ತರುಣಿಯರಂ ನೀಳ್ಕೆ ನೀಕ್ಷಿಪಂತಿರೆ ಕೊಳದೊಳ್ ೧೦೫

ಮ॥ಸ್ರ॥ ಕರದಿಂದಂ ಪಿಕ್ಕಿ ಬಲ್ಪಿಂದಲರ್ದ ಕುಮುದಮಂ ಸೂಡೆ ಕಂಜಾಕ್ಷಿ ಕಾಶ್ಮೀ
ರರಸಂ ಕಸ್ತೂರಿಯುಂ ಕೂಡಿರೆ ಬಿಡದದಱೊಳ್ಕೇಲಿಯಿಂ ಪೀಲಿಗಣ್ಣಂ
ತಿರೆ ತಾಂ ತತ್ಕೇಶಬಂಧಂ ನವಿಲೆನೆ ಕರಮೊಪ್ಪಿತ್ತು ಕಟ್ಟಿರ್ದ ಕಾಕೋ
ದರನೆಂಬಂತಾಗೆ ನೇಲುತ್ತೆಸೆವ ನವಸರಃಪ್ರಾಪ್ತಶೈವಾಲಪಾಶಂ ೧೦೬

ಕೊಡುತ್ತಿರುವಂತೆ ಎಲ್ಲ ಕಡೆಗೂ ಹಬ್ಬಿತ್ತು. ೧೦೩. ಆ ಸ್ತ್ರೀಯರು ಉಟ್ಟು ಕೊಂಡಿದ್ದ ಸೀರೆಗಳು ತೊಯ್ದು ದೇಹಕ್ಕೆ ಅಂಟಿಕೊಂಡಿರಲು, ವಸ್ತ್ರರಹಿತೆಯರ ಹಾಗೆ ಕಾಣುವ ಅವರಿಗೆ ಸರೋವರವು ಪೀತಾಂಬರವನ್ನು ಕೊಡುತ್ತಿದೆಯೋ ಎಂಬಂತೆ ಸುವರ್ಣಕಮಲಜನ್ಯವಾದ ಕಮಲದ ಧೂಳು ಗಾಳಿಯ ಹೊಡೆತದಿಂದ ಹಾರಿ ಶೋಭಿಸುತ್ತಿತ್ತು. ೧೦೪. ಈ ಹುಡುಗಿಯರು ಅರ್ಧ ಅರಳಿದ ಕಮಲದ ಹೂವುಗಳನ್ನು ಕೊಯ್ದುಕೊಂಡು ಹೋದರೆಂದು ಮರಿದುಂಬಿಗಳು ಅಳುತ್ತ ಆ ಸರೋವರಕ್ಕೆ ದೂರನ್ನು ಕೊಡುವ ಧ್ವನಿಯೋ ಎನ್ನುವ ಹಾಗೆ ಅವುಗಳ ಝೇಂಕಾರಧ್ವನಿಯು ಶೋಭಿಸುತ್ತಿತ್ತು. ೧೦೫. ಆ ಸರೋವರದಲ್ಲಿ ತರಂಗಗಳುಂಟಾಗುತ್ತಿರಲು, ಆ ಕಾರಣವಾಗಿ ಹಾರಿ ಕಮಲಗಳಲ್ಲಿ ಸೇರಿಕೊಂಡ ಮೀನುಗಳು, ಸರೋವರದಿಂದ ಹೊರಟು ಹೋಗುವ ಸ್ತ್ರೀಯರನ್ನು ಸರೋವರವು ನಿಮಿರಿ ನೋಡುತ್ತಿರುವುದೋ ಎನ್ನುವ ಹಾಗೆ ಶೋಭಿಸಿದವು. ೧೦೬. ಕಮಲನೇತ್ರೆಯಾದ ಓರ್ವ ಸ್ತ್ರೀಯು ಅರಳಿದ ನೈದಿಲೆಯೊಂದನ್ನು ಕೈಯಿಂದ ಬಲವಂತವಾಗಿ ವಿರಳಗೊಳಿಸಿ, ಅದರಲ್ಲಿ ಕುಂಕುಮಕೇಸರಿ ಮತ್ತು ಕಸ್ತೂರಿಯನ್ನು ಸೇರಿಸಿ ವಿಲಾಸದಿಂದ ಧರಿಸಿಕೊಂಡಳು. ಅದು ನವಿಲಿನ ಗರಿಗಳ ಸಮೂಹದಂತೆ ಆಯಿತು. ಅವಳ ತುರುಬು ನವಿಲಿನಂತೆ ಚೆನ್ನಾಗಿ ಶೋಭೆಗೊಂಡಿತು. ಆ ನವಿಲು ಕಚ್ಚಿಕೊಂಡಿದ್ದ ಸರ್ಪವೋ ಎಂಬ ಹಾಗೆ (ತುರುಬಿನಲ್ಲಿ) ನೇತಾಡುತ್ತ ಶೋಭಿಸುತ್ತಿದ್ದ

ಕಂ॥ ಕುರುಳೆಂಬ ಮಾಲೆದುಂಬಿಗ
ಳರವಿಂದಾಕರಸರೋಜದೊಳ್ ಮಧುಕಣಮಂ
ಬರೆ ಪೀರ್ದಳ್ಕಿಸಲಾಱದೆ
ಭರದಿಂ ಕಾರುವವೊಲಿಳಿವ ಜಲಕಣಮೆಸೆಗುಂ ೧೦೭

ವ॥ ಇಂತುಮಾ ಸಾರ್ವಭೌಮಲಲಾಮಂ ನಿರ್ವರ್ತಿತ ಜಲವಿಹಾರನಾಗಿ ಕಾಸಾರ ತಟದೊಳ್ ಕಾಸಾರ ಘನಕಚಭರೆಯರೊಡಗೂಡಿ ನಿಂದಿರ್ಪಾಗಳ್ಕೋಶರಕ್ಷಕರ್ನೀಡಿದ ವಿಮಳ ವಸನ ಸುಗಂಧಮಾಲ್ಯ ಮಣಿಭೂಷಣಂಗಳಂ ತಾನುಮರಸಿಯುಮಾ ಪೃಥುನಿತಂಬೆಯರುಂ ಪರಿಗ್ರಹಿಸಿ ಬೇಱೆ ಬೇಱೆ ಪಸದನಂಗೊಂಡು ಪರಮ ಹರುಷದಿಂದಿನಿಸಾನುಂ ಬೇಗಮಿರ್ದು ವನಮಹತ್ತರನಂ ಕರೆದು

ಕಂ॥ ಇದು ಮಾಮರಕಿದು ಮಲ್ಲಿಗೆ
ಗಿದು ಸಂಪಗೆಗಿದು ಸರೋವರಕ್ಕಿದಶೋಕ
ಕ್ಕಿದು ಲತೆವನೆಗೆಂದಿತ್ತಂ
ಪದಪಿಂ ಬಹು ಭೂಷಣಾಂಬರಂಗಳನರಸಂ ೧೦೮

ಹಾವಸೆಯ ಬಳ್ಳಿಯು ಕಾಣುತ್ತಿತ್ತು. ೧೦೭. ಕುರುಳುಗಳೆಂಬ ದುಂಬಿಗಳ ಮಾಲೆಯು ಸರೋವರದ ಕಮಲದಲ್ಲಿದ್ದ ಮಕರಂದವನ್ನು ತುಂಬಾ ಕುಡಿದು ದಕ್ಕಿಸಿಕೊಳ್ಳಲಾರದೆ ತೀವ್ರವಾಗಿ ಕಾರಿಕೊಳ್ಳುತ್ತಿವೆಯೋ ಎಂಬಂತೆ ಆ ಕೂದಲಿನಿಂದ ಇಳಿಯುವ ನೀರಿನ ಹನಿಗಳು ಶೋಭಿಸುತ್ತಿದ್ದವು. ವ॥ ಈ ರೀತಿ ಆ ಸಾರ್ವಭೌಮರಿಗೆಲ್ಲ ತಿಲಕಪ್ರಾಯ ನಾದ ರಾಜಶೇಖರನು ಜಲವಿಹಾರವನ್ನು ಮುಗಿಸಿದವನಾಗಿ, ಸರೋವರದ ದಂಡೆಯಲ್ಲಿ ನೀರನ್ನು ಸುರಿಸುವ ಮೇಘ (ಕ+ಆಸಾರ+ಘನ) ಸಮಾನವಾದ ಮುಡಿಯುವರಾದ ಸ್ತ್ರೀಯರಿಂದ ಕೂಡಿಕೊಂಡು ನಿಂತಿರುವಾಗ, ಬೊಕ್ಕಸದ ರಕ್ಷಕರಾದ ಅಧಿಕಾರಿಗಳು ಕೊಟ್ಟ ಶುಭ್ರ ವಸ್ತ್ರಗಳು, ಸುಗಂಧ, ಹೂವು, ರತ್ನಾಭರಣಗಳನ್ನು ತಾನೂ, ಅರಸಿಯಾದ ಸರ್ವಮಂಗಳೆಯೂ, ಆ ದಪ್ಪನೆಯ ನಿತಂಬಿನಿಯರೂ ತೆಗೆದುಕೊಂಡು ಬೇರೆ ಬೇರೆಯಾಗಿ ಅಲಂಕಾರಗೊಳಿಸಿಕೊಂಡು, ಪರಮಸಂತೋಷದಿಂದ ಸ್ವಲ್ಪ ಕಾಲಕಳೆದರು. ಅನಂತರ ಆ ವನದ ರಕ್ಷಕನನ್ನು ಕರೆದು ೧೦೮. ಆ ರಾಜಶೇಖರಮಹಾರಾಜನು ಇದು ಮಾವಿನ ಮರಕ್ಕೆ, ಇದು ಮಲ್ಲಿಗೆಯ ಬಳ್ಳಿಗೆ, ಇದು ಸಂಪಿಗೆಯ ಮರಕ್ಕೆ, ಇದು ಸರೋವರಕ್ಕೆ, ಇದು ಅಶೋಕವೃಕ್ಷಕ್ಕೆ, ಇದು ಲತಾಗೃಹಕ್ಕೆ ಎಂದು ಸಂತೋಷದಿಂದ ಆಭರಣಗಳನ್ನೂ, ಬಟ್ಟೆಬರೆಗಳನ್ನೂ ಬಹುಮಾನವಾಗಿ ಕೊಟ್ಟನು. (ಆ ವನಪಾಲಕನು ಮಾಮರ, ಮಲ್ಲಿಗೆ, ಸಂಪಿಗೆ, ಅಶೋಕವೃಕ್ಷ, ಲತಾಗೃಹಗಳನ್ನು ಚೆನ್ನಾಗಿ ನೋಡಿಕೊಂಡು ಸರೋವರ ವ್ಯವಸ್ಥೆಯನ್ನು ಅಚ್ಚುಕಟ್ಟು ಮಾಡಿಕೊಂಡು ಇದ್ದುದರ ಫಲವಾಗಿ ಅವನಿಗೆ ಬಹು

ವ॥ ಅಂತಿತ್ತು ಮತ್ತಮಿರದೆ

ಕಂ॥ ಆ ವನಮಧ್ಯದ ನಂದನ
ದೇವಾವನಿಜಾತಮಿಾತನೆಂಬವೊಲಿತ್ತಂ
ಶ್ರೀ ವಿಬುಧತತಿಗೆ ವಸುರ
ತ್ನಾವಳಿಯಂ ರಾಜಶೇಖರಕ್ಷಿತಿಪಾಲಂ ೧೯

ವ॥ ಅಂತು ವಿತರಣ ವಿಳಾಸಮಂ ನಿರ್ವರ್ತಿಸಿ ಕೆಳದಿಯರಂ ಕರಿಣಿಗಳನೇಱಲ್ ನಿಯಾ ಮಿಸಿ ನಿರತಿಶಯವಿಭವಂ ಮಿಗೆ ನಿಜನಿತಂಬಿನಿವೆರಸು ವನಮಂ ಪೊಱಮಟ್ಟು ಕರೀಂದ್ರಕಂಧರಾ ರೂಢನಾಗಿ ಪಟುಭಟಪಟಲ ಪರಿವೃತ ಜಯರವಮುಖರಮುಖವಂದಿಸಂದೋಹವಂದ್ಯಮಾನನ ಮಂದದುಂದುಭಿ ಮೃದಂಗ ಡಕ್ಕೆ ಕಹಳಾದಿ ವಾದ್ಯಾನವದ್ಯರವಪೂರಿತ ದಶದಿಶಾವಳಯನಾ ನರೇಂದ್ರವೃಂದಾರಕಂ ನಡೆತಂದು ನಿಜರಾಜಧಾನಿಯಂ ಪುಗುವಾಗಳ್

ಮ॥ಸ್ರ॥ ವಿಳಸತ್ಪ್ರಾಸಾದಂಗಳೊಳ್ ಸೆಜ್ಜೆಗಳ ನೆಲೆಗಳೊಳ್ದೇವಕೂಟಂಗಳೊಳ್ ನಿಂ
ದೆಳೆವೆಣ್ಗಳ್ಕಂತುವಿಂತೊಪ್ಪುಗುಮೆ ಹರಿಗಮಿಾ ಚೆಲ್ವು ಕೈಸಾರ್ಗುಮೇ ಕೇ
ಳ್ಕೆಳದೀ ನೋಡೆಂದು ನೋಡುತ್ತಿಸೆಯೆ ಬಿಡದೆ ತನ್ನಂದಮಂ ಬಂದು ಪೊಕ್ಕಂ
ಲಳನಾಯುಕ್ತಂ ನಿಜಾಂತಃಪುರಮನುರುಶಿವಾದ್ವೈತವಿದ್ಯಾಸಮುದ್ರಂ ೧೧೦

ಮಾನವೆಂದು ಭಾವ.) ವ॥ ಹಾಗೆ ಕೊಟ್ಟು ಪುನಃ ತಪ್ಪದೆ ೧೯. ಆ ರಾಜಶೇಖರ ಭೂಮಿಾಶ್ವರನು ಆ ನಂದನವನದ ಮಧ್ಯದಲ್ಲಿರುವ ಕಲ್ಪವೃಕ್ಷವು ಇವನೇ ಎಂಬ ಹಾಗೆ ವಿದ್ಯಾಶ್ರೀ ಸಮನ್ವಿತರಾದ ವಿದ್ವಾಂಸರ ಸಮೂಹಕ್ಕೆ ದ್ರವ್ಯ ಮತ್ತು ರತ್ನ ಸಮೂಹಾದಿ ಗಳನ್ನು ಕೊಟ್ಟನು. ವ॥ ಆ ರೀತಿ ಔದಾರ್ಯದ ಕೊಡುಗೆಯ ವಿಲಾಸವನ್ನು ಮುಗಿಸಿ ಗೆಳತಿಯರನ್ನು ಹೆಣ್ಣಾನೆಗಳನ್ನೇರಲು ನಿಯಮಗೊಳಿಸಿ, ಅತ್ಯಧಿಕವಾದ ವೈಭವದಿಂದ ಕೂಡಿ, ತನ್ನ ಧರ್ಮಪತ್ನೀ ಸಮೇತವಾಗಿ ಆ ವನದಿಂದ ಹೊರಕೊರಟು ಗಜಶ್ರೇಷ್ಠದ ಹೆಗಲನ್ನೇರಿ, ಶೂರರಾದ ಭಟರುಗಳಿಂದ ಸುತ್ತುವರಿಯಲ್ಪಟ್ಟವನಾದನು. ಸ್ತುತಿಪಾಠ ಕರು ಬಾಯಿಂದ ಜಯಜಯ ಎಂಬ ಧ್ವನಿಯನ್ನು ಮೊರೆಸುತ್ತ ನಮಸ್ಕರಿಸುತ್ತಿದ್ದರು. ಅಧಿಕವಾಗಿ ದುಂದುಭಿ, ಮೃದಂಗ, ಡಕ್ಕೆ, ಕಹಳೆಯೇ ಮೊದಲಾದ ಉತ್ತಮ ವಾದ್ಯಗಳ ಧ್ವನಿಯು ದಶದಿಕ್ಕುಗಳನ್ನು ತುಂಬಿತ್ತು. ಹೀಗೆ ಆ ರಾಜರಿಗೆಲ್ಲ ದೇವತಾಸ್ವರೂಪನಾದ ರಾಜಶೇಖರಮಹಾರಾಜನು ಹೊರಟುಬಂದು ತನ್ನ ರಾಜಧಾನಿಯಾದ ಧರ್ಮವತಿ ಯನ್ನು ಹೊಗುತ್ತಿರುವಾಗ ೧೧೦. ಪ್ರಕಾಶಮಾನವಾದ ರಾಜಗೃಹಗಳ ಮೇಲೆ, ಉಪ್ಪ ರಿಗೆಗಳ ಅಂತಸ್ತುಗಳಲ್ಲಿ, ದೇವಾಲಯಗಳ ಗೋಪುರಗಳ ಮೇಲೆ ನಿಂತಂಥ ಎಳೆಯ ವಯ ಸ್ಸಿನ ಸ್ತ್ರೀಯರುಗಳು, 'ಮನ್ಮಥನು ಈ ರೀತಿ ಒಪ್ಪುತ್ತಿರುವನೇ ? ವಿಷ್ಣುವಿಗೂ ಈ ರೀತಿಯ ಚೆಲುವಿಕೆ ಕೈಗೂಡಿರುವುದೇ ? ಎಲೈ ಗೆಳತಿಯೇ ನೋಡು' ಎಂದು ಹೇಳಿ ನೋಡುತ್ತ ಶೋಭಿಸುತ್ತಿರಲು, ಆ ಶಿವಾದ್ವೈತ ವಿದ್ಯಾವಿಶಾರದನೂ, ವಿದ್ಯಾ ಸಮುದ್ರನೂ ಆದ ರಾಜಶೇಖರನು ತನ್ನ ಆ ಚೆಲುವಿಕೆಯೊಡನೆ, ಧರ್ಮಪತ್ನಿಯಾದ

ಉತ್ಪಲಮಾಲಿ॥ ಅಳಿಪ್ರಭಲಲಾಟಗಚಲಾಳಕೆ ಖಳಾಪಹೆ ಬಳಾನ್ವಿತೆ ಮಿಳದ್ಘನಗುಣೇ
ಬಳಾನುಜಬಲಿಪ್ರಿಯೆ ಕಳಾಂಚತಜಳೋದ್ಭವೆ ಬಳಾಹಿತಮುಖಾಮರನತೇ
ಗಳಾನ್ವಿತ ಹಲಾಹಲಬಿಲೇಶಯು ಕಳೇವರವಿಳಾಸದೆ ಕಳಂಕರಹಿತೇ
ಕಳಾಧರ ಕಳಾಧರೆ ಸುಲೋಚನೆ ಕಳೋಜ್ವಳೆ ಶಿಲೋಚ್ಚಯಸುತೇ ಜಯ ಜಯಾ

೧೧೧

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣ ಮಹಾಪ್ರಭಾಪಟಲ ಪರಿವೃತ ಪರಶಿವಶ್ರೀಪಾದನಖಚಂದ್ರಸಾಂದ್ರ ರುಚಿರಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯಕವಿತಾವಿಶಾರದ ಶ್ರೀ ಷಡಕ್ಷರಿದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳ ಪ್ರಬಂಧದೊಳ್ ರಾಜಶೇಖರ ವನವಿಹಾರಾದಿ ವರ್ಣನಂ

ಅಂತು ಆಶ್ವಾಸ ೧೦ಕ್ಕಂ ಪದ ೧೨೧೪ಕ್ಕಂ ಮಂಗಳ ಮಹಾಶ್ರೀ

## ದಶಮಾಶ್ವಾಸಂ
### ಸಂಪೂರ್ಣಂ

ಸರ್ವಮಂಗಳಾದೇವಿಯೊಡನೆ ತನ್ನ ಅಂತಃಪುರವನ್ನು ಬಂದು ಹೊಕ್ಕನು. ೧೧೧. ದುಂಬಿಗಳ ಪ್ರಭೆಯಂತೆ ಹಣೆಯ ಮೇಲೆ ಅಲ್ಲಾಡುತ್ತಿರುವ ಮುಂಗುರುಳಿನವಳೇ, ದುಷ್ಟನಾಶಕಳೇ, ಸಾಮರ್ಥ್ಯದಿಂದ ಕೂಡಿದವಳೇ, ಘನತರವಾದ ಗುಣಗಳಿಂದ ಮಿಳಿತಳಾದವಳೇ, ಬಲರಾಮನ ಅನುಜನಾದ ಕೃಷ್ಣನು ಮಾಡುವ ಪೂಜೆಯಲ್ಲಿ ಪ್ರೀತಿಯುಳ್ಳವಳೇ, ಕಳೆಯಿಂದ ಹೊಳೆಯುವ ಕಮಲಹಸ್ತವುಳ್ಳವಳೇ, ದೇವೇಂದ್ರನೇ ಮೊದಲಾದ ದೇವತೆಗಳಿಂದ ನಮಸ್ಕರಿಸಲ್ಪಡುವವಳೇ, ಕಂಠದಲ್ಲಿ ಹಾಲಾಹಲವೆಂಬ ವಿಷ ಧರಿಸಿರುವ ಹಾವುಗಳೇ ದೇಹಾಲಂಕಾರವಾಗಿರುವ ಶಿವನಿಗೆ ವಿಲಾಸವನ್ನೀಯುವವಳೇ, ದೋಷರಹಿತಳೇ, ಚಂದ್ರಕಳೆಯನ್ನು ಧರಿಸಿದವಳೇ, ಸುಂದರ ನೇತ್ರಗಳುಳ್ಳವಳೇ, ಕಾಂತಿಯಿಂದ ಉಜ್ವಲಳಾಗಿರುವವಳೇ, ಹಿಮಾಲಯಸುತೆಯಾದ ಪಾರ್ವತಿಯೇ ಜಯಜಯ. ಗದ್ಯ॥ ಈ ಗದ್ಯ ಪದ್ಯ ರೂಪ ಪ್ರಬಂಧವು ವಂದಿಸುತ್ತಿರುವ ದೇವತಾಶ್ರೇಷ್ಠರಾದವರುಗಳ ಕಿರೀಟತಟದಲ್ಲಿ ಕೆತ್ತಲ್ಪಟ್ಟ ರತ್ನಸಮೂಹದ ಅಧಿಕವಾದ ಪ್ರಭೆಯ ಸಮೂಹದಿಂದ ಬಳಸಿರುವ ಪರಮೇಶ್ವರನ ಶೋಭಾಯುಕ್ತವಾದ ಪಾದಗಳ ಉಗುರುಗಳೆಂಬ ಚಂದ್ರನ ದಟ್ಟವಾದ ಕಾಂತಿಯೆಂಬ ಬೆಳದಿಂಗಳಿಗೆ ಒಪ್ಪುವ ಚಕೋರಪಕ್ಷಿಯಂತಿರುವವನೂ ಶೃಂಗಾರಾದಿ ನವರಸಜ್ಞರಾದ ಜನರಿಂದ ಮನ್ನಣೆ ಹೊಂದಿದವನೂ ಆದ ಉಭಯ ಭಾಷಾ ಕವಿತಾವಿಶಾರದನಾದ ಶ್ರೀ ಷಡಕ್ಷರಿದೇವನಿಂದ ರಚಿಸಲ್ಪಟ್ಟದ್ದಾದ ರಾಜಶೇಖರವಿಳಾಸವೆಂಬ ವಿಸ್ತಾರವಾದ ಗ್ರಂಥದಲ್ಲಿ ರಾಜಶೇಖರ ವನವಿಹಾರವೇ ಮೊದಲಾದ ವರ್ಣನೆ.

### ದಶಮಾಶ್ವಾಸ
### ಮುಗಿದುದು

# ಏಕಾದಶಾಶ್ವಾಸಂ

ಕಂ॥ ಶ್ರೀ ಚಂಡಿಕಾಮುಖೇಂದುವಿ
ಲೋಚನರುಚಿ ಚಂದ್ರಿಕಾಚಕೋರಂ ನತರ
ಕ್ಷಾಚತುರಂ ಭವಪಾಶವಿ
ಮೋಚಕನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ವ॥ ಅನಂತರಮರಸನಮಾತ್ಯಸುತಂಬೆರಸು ರಾಜಗೃಹದ್ವಾರದ ಪಜ್ವಳಿಪ ಬಜ್ಜರದ ಸೆಜ್ಜೆಯೊಳೊಡ್ಡೋಲಗಂಗೊಟ್ಟಿರುತ್ತುಮಿರೆಯಿರೆ

ಕಂ॥ ಗಗನಗಜ ನಿಟಲತಟದಿಂ
ಜಗುಳ್ದಂತೆ ಪುರಾಣರಶ್ಮಿ ಮಣಿಮಯ ಮುಕುರಂ
ಮಿಗೆ ಮೆಱೆದುದರರೆ ಪಶ್ಚಿಮ
ನಗದಗ್ರದೊಳಿಳಿದು ತೋರ್ಪ ದಿನಕರಬಿಂಬಂ ೨

ವ॥ ಅಂತುಮಲ್ಲದೆಯುಂ

ಕಂ॥ ಪಡುವೆಟ್ಟನೆಡೆಯೊಳೊಪ್ಪುವ
ಕಡಲೊಡೆಯನ ಮಡದಿ ತೇದ ಸಿಂಧೂರದ ಕೆಂ
ಪಿಡಿದೆಸೆವ ಸಾಣೆಗೆಯಿದೆನೆ
ಬೆಡಂಗುವಡೆದಿರ್ದುದಸ್ತಭಾಸ್ಕರಬಿಂಬಂ ೩

೧. ಶೋಭಾಮಯಳಾದ ಪಾರ್ವತಿಯ ಮುಖವೆಂಬ ಚಂದ್ರನ ಕಣ್ಣುಗಳ ಕಾಂತಿಯೆಂಬ ಬೆಳುದಿಂಗಳಿಗೆ ಚಕೋರಪಕ್ಷಿಯಂತಿರುವವನೂ, ನಮಸ್ಕಾರಶೀಲರಾದ ಭಕ್ತರ ಜನನ ಮರಣರೂಪವಾದ ಪಾಶವನ್ನು ಕತ್ತರಿಸುವವನೂ ಆದ ಶಿವಲಿಂಗನು ನಮಗೆ ಸೌಖ್ಯವನ್ನುಂಟುಮಾಡಲಿ. ವ॥ ಅನಂತರ ಅರಸನು ಅಮಾತ್ಯಪುತ್ರನೊಡನೆ ರಾಜಗೃಹದ ಬಾಗಿಲಿನ ಪ್ರಜ್ವಲಿಸುವ ವಜ್ರಮಯ ಸಭಾಸ್ಥಾನದಲ್ಲಿ ರಾಜಸಭೆಯನ್ನು ನೇರವೇರಿಸಿರಲಾಗಿ, ೨. ಆಕಾಶವೆಂಬ ಆನೆಯ ಕುಂಭಸ್ಥಳಪ್ರದೇಶದಿಂದ ರತ್ನನಿರ್ಮಿತ ಕನ್ನಡಿಯು ಜಾರಿದೆಯೋ ಎಂಬ ಹಾಗೆ ಪಶ್ಚಿಮಾಚಳದ ಗಿರಿಯಲ್ಲಿ ಇಳಿದು ತೋರುವ ದೀರ್ಘಕಿರಣಗಳ ಸೂರ್ಯಬಿಂಬವು, ಅರರೇ ! ಮನೋಹರವಾಗಿ ಶೋಭಿಸುತ್ತಿತ್ತು. ವ॥ ಅದೂ ಅಲ್ಲದೆ ೩. ಅಸ್ತಮಯ ಸಮಯದ ಆ ಸೂರ್ಯಬಿಂಬವು, ಪಶ್ಚಿಮದಿಕ್ಕಿನ ಪರ್ವತದ ಹತ್ತಿರದಲ್ಲಿರುವ ಸಮುದ್ರರಾಜನ ಹೆಂಡತಿಯು ತೇದ ಸಿಂಧೂರದ ಸಾಣೆಯ ಕಲ್ಲಿನ ಹಾಗೆ

ವ|| ಮತ್ತಂ

ಕಂ|| ಇದು ಸಂಧ್ಯಾನಟರುದ್ರನ
ವಿದಿತ ಜಟಾಕ್ಷುಬ್ಧ ಫಣಿ ಮಹಾಬಿಲಮಂ ತ
ಳ್ಪದೆ ಪುಗಲೊಗೆದಿರೆ ಪೊಳೆವ
ಗ್ಗದ ಫಣಿಮಣಿಯೆನಿಸಿತರುಣರುಚಿ ರವಿಬಿಂಬಂ ೪

ಶರಧಿಗತಪ್ರತಿಬಿಂಬಂ
ಸರಸದೊಳಿರೆ ಬದ್ಧರಶ್ಮಿಯುತ ರವಿಬಿಂಬಂ
ಹರನಾಟ್ಯಕೆ ಕಾಲನಟಂ
ಕರಮೆತ್ತಿದ ಪೊನ್ನತಾಳಮೆನೆ ಕಣ್ಗೊಳಿಕುಂ ೫

ಒದೆಯೆ ನಭೋಲಕ್ಷ್ಮೀವಧು
ಪದಪಿಂ ವರುಣಾಶೆಯೆಂಬಶೋಕೆಯ ಲತೆ ಕೆಂ
ಪೊದವಿದ ತಳಿರಂ ತಳೆದಂ
ದದೆ ತಳ್ತೆಸೆದಿರ್ದುದರರೆ ಸಂಧ್ಯಾರಾಗಂ ೬

ಅರುಣಂ ಬಳಲ್ದ ತುರಗೋ
ತ್ಕರಮಂ ಮೈದೊಳೆಯಲಬ್ಧಿಯೊಳ್ತೆಗೆದು ಕಿಲ
ಕ್ಕಿರಿಸಿದ ರನ್ನದ ಪಲ್ಲಣ
ದಿರವೆನೆ ನೆಱೆ ನೆಗೆದ ಸಂಜೆಗೆಂಪೆಸೆದಿರ್ಕುಂ ೭

ಸೌಂದರ್ಯಯುಕ್ತವಾಗಿತ್ತು. ವ|| ಮತ್ತು ೪. ಸಂಧ್ಯಾಕಾಲದ ಅರುಣವರ್ಣದ ಸೂರ್ಯ ಬಿಂಬವು ಸಾಯಂಕಾಲದ ತಾಂಡವ ನಾಟ್ಯಮೂರ್ತಿಯಾದ ರುದ್ರನ ಪ್ರಸಿದ್ಧ ಜಟಾ ಜೂಟದಲ್ಲಿ ಕ್ಷುಭಿತನಾದ ಆದಿಶೇಷನು ತನ್ನ ಮಹಾಬಿಲವನ್ನು ಶೀಘ್ರವಾಗಿ ಹೊಗುತ್ತಿ ರಲು ಅವನ ಹೆಡೆಯಲ್ಲಿ ಒಪ್ಪುವ ಶ್ರೇಷ್ಠರತ್ನವೆನಿಸಿ ಶೋಭಿಸುತ್ತಿತ್ತು. ೫. ಅಸ್ತ ಮಯನಾಗುತ್ತಿರುವ ಸೂರ್ಯನ ಸಮುದ್ರದಲ್ಲಿನ ಪ್ರತಿಬಿಂಬವು ಹತ್ತಿರದಲ್ಲಿಯೇ ಇರುತ್ತಿ ರಲು, ಶಿವನ ಸಂಧ್ಯಾಕಾಲದ ನಾಟ್ಯಕ್ಕೆ ಪ್ರಳಯಕಾಲನೆಂಬ ನಟನು ಹಾಕುತ್ತಿರುವ ಬಂಗಾರದ ತಾಳವೋ ಎಂಬಂತೆ ಶೋಭಿಸುತ್ತಿತ್ತು. ೬. ಸಂಧ್ಯಾಕಾಲದ ರಕ್ತವರ್ಣವು ಆಕಾಶಲಕ್ಷ್ಮಿಯೆಂಬ ವಧುವು ಪ್ರೀತಿಯಿಂದ ಪಶ್ಚಿಮದಿಕ್ಕೆಂಬ ಅಶೋಕವೃಕ್ಷವನ್ನು ಒದೆಯಲು, ಆ ಲತೆಯು ಕೆಂಪಿನಿಂದ ಕೂಡಿದ ಚಿಗುರನ್ನು ಹೊಂದಿತೋ ಎಂಬಂತೆ ಅರರೇ ! ಶೋಭಿಸುತ್ತಿದೆಯಲ್ಲವೇ ? ೭. ಅರುಣನು ಬಳಲಿದ ತನ್ನ ಶ್ರೇಷ್ಠವಾದ ಕುದುರೆಗಳನ್ನು ಮೈದೊಳೆಯಲು ಅವುಗಳ ಮೈಮೇಲಿರುವ ರತ್ನಮಯವಾದ ಜೀನು ಗಳನ್ನು ತೆಗೆದು ಪಕ್ಕಕ್ಕೆ ಇರಿಸಿದ ರೀತಿಯೊ ಎನ್ನುವಂತೆ ಚೆನ್ನಾಗಿ ಏರಿದ ಸಂಧ್ಯಾ

ವ॥ ಅಂತುಮಲ್ಲದೆಯುಂ

ಮ॥ಸ್ರ॥ ಗಗನಾಂಭೋರಾಶಿಯೊಳ್ತಳ್ತಿಸೆವ ಪವಳಮೋ ಪಶ್ಚಿಮಾಶಾಂಗನಾಂಗ
ಪ್ರಗತೋದ್ಯತ್ಕುಂಕುಮಕ್ಷೋದಮೊ ವರುಣಗೃಹದ್ವಾರ ಸೌವರ್ಣಹರ್ಮ್ಯ
ಸ್ಥಗಿತ ಶ್ರೀಪದ್ಮರಾಗಪ್ರಭೆಯೊ ಮದನಯಾತ್ರಾದಿಯೊಳ್ಪೊಯ್ದ ಕೆಂಬ
ಟ್ಟೆಗಳೊಳ್ಗೂಡಾರಮೋ ಪೇಳೆನೆ ಪಸರಿಸಿ ಸಂಧ್ಯಾರುಣದ್ಯೋತಿ ತೋರ್ಕುಂ ೮

ಉ॥ ಎನ್ನ ತನೂಜೆ ನಿನ್ನರಸಿಯೊಳ್ಕೆಳೆಗೊಂಡೊಡನಿರ್ಪಳಾಗಳುಂ
ನಿನ್ನ ತನೂಜೆಯೆನ್ನರಸಿ ಕೇಳದಱಿಂದೆಮಗಿಲ್ಲ ಭೇದಮಿ
ನ್ನೆನ್ನ ಮಗಂಗೆ ಕಾಯದಿರೆನುತ್ತೆ ಸರೋನಿಧಿ ಬಂದ ಭಾನುವಂ
ಮನ್ನಿಸುತಿತ್ತ ಪೀತವಸನಂ ನಿಜಮೆಂದೆನೆ ಸಂಜೆ ರಂಜಿಕುಂ ೯

ವ॥ ಮತ್ತಮಾಗಳ್

ಕಂ॥ ಇನವಿರಹಿಣಿ ಪದ್ಮಿನಿ ಕಾಂ
ತನಗಲ್ಕೆಯನಾಂತರಸುಗೆ ಮುಳಿವ ನಿಶಾಕಾಂ
ತನ ಕರಕೆ ಬೆರ್ಚಿ ಮುಚ್ಚಿದ
ಳೆನೆ ಮೊಗಮಂ ಮುಗಿವ ಪಂಕಜಂ ಕರಮೆಸೆಗುಂ ೧೦

ಕಾಲದ ಕೆಂಪು ಶೋಭಿಸುತ್ತಿತ್ತು. ವ॥ ಅದೂ ಅಲ್ಲದೆ ೮. ಗಗನವೆಂಬ ಸಮುದ್ರವನ್ನು ಹೊಂದಿ ಶೋಭಿಸುವ ಹವಳದ ಕುಡಿಗಳೋ, ಪಶ್ಚಿಮದಿಕ್ಕೆಂಬ ಸ್ತ್ರೀಯಳ ದೇಹಕ್ಕೆ ತೊಡೆದ ಕುಂಕುಮಕೇಸರಿಯ ಧೂಳಿನ ಕಣಗಳೋ, ಪಶ್ಚಿಮದಿಕ್ಕಿನ ಅಧಿಪತಿಯಾದ ವರುಣನ ವಾಸಗೃಹದ ಬಂಗಾರಮಯವಾದ ಉಪ್ಪರಿಗೆಯ ಮನೆಯಲ್ಲಿ ಕೆತ್ತಿರುವಂಥ ಪದ್ಮರಾಗಮಣಿಯ ಕೆಂಪುಪ್ರಕಾಶವೋ, ಮನ್ಮಥನ ವಿಜಯಯಾತ್ರಾ ಸಮಯದಲ್ಲಿ ಹೊಡೆದ ಕೆಂಪಾದ ಬಟ್ಟೆಗಳ ಗೂಡಾರಗಳೋ ಹೇಳು—ಎನ್ನುವ ಹಾಗೆ ವಿಸ್ತಾರವಾಗಿ ಹರಡಿರುವ ಸಂಧ್ಯಾಕಾಲದ ಕೆಂಪುಕಾಂತಿ ಕಾಣುತ್ತಿತ್ತು. ೯. ಸಮುದ್ರವು ತನ್ನಲ್ಲಿಗೆ ಬಂದ ಸೂರ್ಯನನ್ನು ಮನ್ನಣೆಗೊಳಿಸುತ್ತ, "ನನ್ನ ಮಗಳಾದ ಲಕ್ಷ್ಮಿಯು ನಿನ್ನ ಹೆಂಡತಿ ಯಾದ ಕಮಲಿನಿಯೊಡನೆ ಸ್ನೇಹ ಬೆಳೆಸಿ ಸದಾ ಅಗಲದಂತೆ ಇರುತ್ತಾಳೆ ಕೇಳು, ನಿನ್ನ ಮಗಳಾದ ಯಮುನೆಯೇ ನನ್ನ ಹೆಂಡತಿ. ಆದುದರಿಂದ ನಮ್ಮಲ್ಲಿ ಭೇದವೆಂಬುದೇ ಇಲ್ಲ. ನನ್ನ ಮಗನಾದ ಚಂದ್ರನ ಮೇಲೆ ಕೋಪಗೊಳ್ಳಬೇಡ" ಎನ್ನುತ್ತ ಸೂರ್ಯನಿಗೆ ನಿಜವಾಗಿ ಪೀತವರ್ಣದ ವಸ್ತ್ರವನ್ನು ಉಡುಗೊರೆಯಾಗಿ ಕೊಟ್ಟಿತೋ ಎನ್ನುವ ಹಾಗೆ ಸಂಜೆಗೆಂಪು ಶೋಭಿಸಿತು. ವ॥ ಮತ್ತು ಆಗ ೧೦. ಸೂರ್ಯನೆಂಬ ಗಂಡನಿಂದ ಅಗಲಿಕೆ ಗೊಂಡ ಕಮಲಿನಿಯು ಪ್ರಿಯರಾದವರ (ಅಗಲಿಕೆಗೊಂಡವರ) ಪ್ರಾಣಗಳ ಮೇಲೆ ಕೋಪಗೊಳ್ಳುವ ರಜನೀಕಾಂತನಾದ ಚಂದ್ರನ ಕಿರಣಗಳಿಗೆ ಹೆದರಿ ಮುಖವನ್ನು ಮುಚ್ಚಿ ಕೊಳ್ಳುವಳೋ ಎನ್ನುವ ಹಾಗೆ ಮುಕುಳಿತಗೊಳ್ಳುವ ಕಮಲಗಳು ಶೋಭಿಸುತ್ತಿದ್ದವು.

ಅಲರಂಬಂಗಂ ಬಾಗದಿ
ದಲರ್ದಂಬುಜಮೆಂದು ಬಂದು ತಜ್ಜಯಯಾತ್ರಾ
ವಿಲಸತ್ಸಮಯದೆ ಮುಗಿಯಿಪ್ಪ
ದೆಲರೆನೆ ಮುಗಿವಂಬುಜೋತ್ಕರಂ ಕರಮೆಸೆಗುಂ ೧೧

ಹರನೇತ್ರಸಖಂ ಗಡ ಮುರ
ಹರನೇತ್ರಂ ಗಡ ವಿಧಾತೃಜನಕಂ ಗಡ ತಾ
ವರೆಯದಕರೆಯಾದುದು ಗಡ
ಸಿರಿಯೆನೆ ತಿಳಿ ಕಾಲವಶಮನಾರ್ಕಳಿದಪರೋ ೧೨

ಎಲೆ ನೈದಿಲೆ ಸಿರಿಯಿದಱೊ
ಳ್ನೆಲಸಿದೆಯೆನೆ ಮೊರೆವ ನೆವದಿನಳಿಯದು ನೋಳ್ಪಂ
ತಲರ್ದುದದನಱಿದು ಭಯದಿಂ
ಜಲಜಿನಿ ಮುಚ್ಚುವವೊಲಲ್ಲಿ ಮುಗಿದುದು ಕಮಳಂ ೧೩

ಎಳಲುತ್ತಿರೆ ಪಕ್ಷಂ ತನು
ಬಳಲುತ್ತಿರೆ ಚಿತ್ತಮಿನೆಯಳಂ ನೆನೆನೆನೆವು
ತ್ತಳಲುತ್ತಿರೆ ಜೀವನಮುದು
ತೊಳಲುತ್ತಿರೆ ಸುಳಿದು ಸುಯಿದುದೊಂದು ರಥಾಂಗಂ ೧೪

೧೧. ಈ ಅರಳಿದ ಕಮಲವು ಪುಷ್ಪಬಾಣನಾದ ಮನ್ಮಥನಿಗೂ ಬಾಗುವುದಿಲ್ಲ ಎಂದು ಆ ಮನ್ಮಥನ ಜಯಯಾತ್ರೆಯ ಶೋಭಿಸುವ ಸಮಯವಾದ ರಾತ್ರಿಯ ಕಾಲದಲ್ಲಿ ಅವನ ಸ್ನೇಹಿತನಾದ ಮಂದಮಾರುತನು ಮುಕುಳಿತಗೊಳಿಸುವನೋ ಎಂಬಂತೆ ಮುಚ್ಚಿದ ಕಮಲಗಳು ಶೋಭಿಸುತ್ತಿದ್ದವು. ೧೨. ಪರಮೇಶ್ವರನ ಬಲಗಡೆಯ ಕಣ್ಣಾದ ಸೂರ್ಯ ನೇತ್ರದ ಸಖನಾಗಿಯೂ, ವಿಷ್ಣುವಿನ ನೇತ್ರವೇ ಆಗಿಯೂ, ಬ್ರಹ್ಮನ ಜನನಸ್ಥಾನ ವಾಗಿಯೂ ಕೂಡ ಆ ಕಮಲದ ಸಿರಿಗೆ ಕೊರತೆಯುಂಟಾಯಿತು. ಕಾಲಕ್ಕೆ ವಶವಾಗಿ (ಜೀವಿಸುವುದನ್ನು) ಯಾರು ತಾನೆ ಕಳೆಯಲಾದೀತು ! ೧೩. ಎಲೈ ಕನ್ನೈದಿಲೆಯೇ, ಲಕ್ಷ್ಮಿಯು ಇದರಲ್ಲಿ (ಕಮಲದಲ್ಲಿ) ನೆಲಸಿದೆ ಎನ್ನುವ ಹಾಗೆ ಝೇಂಕರಿಸುವ ನೆವದಿಂದ ಆ ದುಂಬಿಯು ಹೇಳಲು, ಕನ್ನೈದಿಲೆಯು ನೋಡಲು ಕಣ್ಣುತೆರೆಯಿತೋ ಎಂಬಂತೆ ಅರಳು ತ್ತಿರಲು, ಅದನ್ನು ತಿಳಿದು ಕಮಲಿನಿಯು ಮುಖ ಮುಚ್ಚುವ ಹಾಗೆ ಕಮಲಪುಷ್ಪವು ಮುಕುಳಿತವಾಯಿತು. ೧೪. ಒಂದು ಗಂಡು ಚಕ್ರವಾಕಪಕ್ಷಿಯು ತನ್ನ ರೆಕ್ಕೆಗಳು ಜೋಲಾಡುತ್ತಿರಲು, ಶರೀರವು ಬಳಲುತ್ತಿರಲು, ಚಿತ್ತವು ಇನಿಯಳನ್ನು ನೆನೆನೆನೆದು ಸಂಕಟಪಡುತ್ತಿರಲು, ಜೀವನ ವ್ಯಥೆಗೊಂಡಿರಲು ಸುತ್ತಾಡುತ್ತ ನಿಟ್ಟುಸಿರನ್ನು ಬಿಡುತ್ತಿತ್ತು.

ನಲ್ಲಳಗಲ್ದಳಲುರ್ವಿರೆ
ಮೆಲ್ಲದೆ ಬಾಯಲ್ಲಿ ಪಾಸೆದಳೆದು ರಥಾಂಗಂ
ಫುಲ್ಲಶರನೆಸುಗೆಗಾಱದೆ
ಪುಲ್ಲಂ ಕರ್ಚಿದವೊಲಾಗಳೇನೊಪ್ಪಿದುದೋ ೧೫

ಚಂ|| ನಳಿನದಳಂಗಳಲ್ಲಿ ಪುಳಿನಸ್ಥಳದಲ್ಲಿ ಲತಾವಿತಾನದೊ
ಳ್ತಿಳಿಗೊಳದಲ್ಲಿ ತನ್ನ ಮನದನ್ನಳನೊಲ್ದಱಸುತ್ತೆ ಸುತ್ತಿ ಕ
ಣ್ದೊಳಲಿ ಕರಂಗಿ ಕಂಪಿಸಿ ಪಲುಂಬಿ ಬಳಲ್ದು ತೊಳಲ್ದಳಲ್ದು ಮೇ
ಣ್ಕಳವಳಿಸಿತ್ತು ಕಾಂತೆಯನಗಲ್ದೆಣೆವಕ್ಕಿ ನಿಶಾಪ್ರವೇಶದೊಳ್ ೧೬

ಕಂ|| ಇಲ್ಲಿ ನಡೆತಂದೆವಪ್ಪಿದೆ
ವಿಲ್ಲಿ ಬಿಸಂಗೊಂಡೆವಿಲ್ಲಿ ಬಾಯೂಡಿದೆವಿ
ಲ್ಲಿಲ್ಲಿ ನೆರೆದಿರ್ದೆವೆಂದ
ಲ್ಲಲ್ಲಿ ಕರಂ ನಿಂದು ನೆನೆದು ಸುಯ್ವುದು ಕೋಕಂ ೧೭

ಪೊಸಕಳ್ತಲೆಯುದು ತನುವಂ
ಮುಸುಂಕೆ ಕರ್ಬಕ್ಕಿಗೆತ್ತಗಲ್ವುದು ಚಕ್ರ
ಪ್ರಸರಮಗಲ್ದುದದಲ್ಲದೊ
ಡೆಸೆವಿರುಳೊಳಗಲ್ಕೆಯುದಕದೇಂ ಸಮನಿಸುಮೇ ೧೮

೧೫. ಒಂದು ಗಂಡು ಚಕ್ರವಾಕಪಕ್ಷಿಗೆ ತನ್ನ ಪ್ರಿಯೆ ಅಗಲಿದ ಸಂಕಟವು ವಿಶೇಷವಾಗಿ ರಲು, ಏನನ್ನೂ ತಿನ್ನದೆ ಬಾಯಲ್ಲಿ ಹಾವಸೆಯನ್ನು ಕಚ್ಚಿ, ಮನ್ಮಥನ ಬಾಣಗಳ ಪೆಟ್ಟಿಗೆ ತಡೆಯಲಾರದೆ ಹುಲ್ಲು ಕಚ್ಚಿದ ಹಾಗೆ ಅದೇನು ಶೋಭಿಸುತ್ತಿತ್ತೋ. (ಯುದ್ಧದಲ್ಲಿ ಹುಲ್ಲು ಕಚ್ಚಿದವನ ಮೇಲೆ ವೈರಿಗಳು ಬಾಣ ಪ್ರಯೋಗಿಸುವುದಿಲ್ಲ) ೧೬. ಕಾಂತೆಯನ್ನು ಅಗಲದ ಚಕ್ರವಾಕಪಕ್ಷಿಯು ಆ ರಾತ್ರಿಯ ಆರಂಭಕಾಲದಲ್ಲಿ ಕಮಲದಳಗಳಲ್ಲಿ, ಮಳಲು ಪ್ರದೇಶದಲ್ಲಿ, ಬಳ್ಳಿಗಳ ಸಮೂಹಗಳಲ್ಲಿ, ತಿಳಿನೀರಿನ ಸರೋವರಗಳಲ್ಲಿ, ತನ್ನ ಆ ಮನೋಹರೆಯನ್ನು ಪ್ರೀತಿಸಿ ಹುಡುಕುತ್ತ, ಸುತ್ತಿ, ಕಂಗೆಟ್ಟು, ಸೊರಗಿ, ನಡುಗುತ್ತ, ಹಲುಬುತ್ತ, ಬಳಲಿ, ತೊಳಲಿ, ದುಃಖಗೊಂಡು ಕಳವಳಗೊಂಡಿತ್ತು. ೧೭. (ಹಿಂದೆ) ಇಲ್ಲಿಗೆ ಬಂದೆವು ; ಇಲ್ಲಿ ಆಲಿಂಗಿಸಿದೆವು ; ಇಲ್ಲಿ ಕಮಲನಾಳಗಳನ್ನು ತಿಂದೆವು ; ಇಲ್ಲಿ ಮುದ್ದಾಡಿದೆವು ; ಈ ಈ ಸ್ಥಳಗಳಲ್ಲಿ ಸಂಭೋಗಿಸಿದೆವು-ಎಂದು ಆಯಾಯ ಸ್ಥಳಗಳಲ್ಲಿ ನಿಂತು ನೆನೆದುಕೊಳ್ಳುತ್ತ ಚಕ್ರವಾಕವು ನಿಟ್ಟುಸಿರು ಬಿಡುತ್ತಿತ್ತು. ೧೮. ಆ ಹೊಸದಾದ ಕತ್ತಲೆಯು (ತನ್ನ ಇನಿಯಳ) ದೇಹವನ್ನು ಮುಸುಕಲಾಗಿ ಅದು ಕರಿಯ ಹಕ್ಕಿಯೆಂದು ತಿಳಿದು ಆ ಚಕ್ರವಾಕಕ್ಕೆ ಅಗಲಿಕೆಯಾಗುವುದು. ಹೀಗೆ ರಾತ್ರಿ ಚಕ್ರವಾಕಗಳಿಗೆ ಅಗಲಿಕೆ ಯುಂಟಾಗುವುದಲ್ಲದೆ ಶೋಭಿಸುವ ರಾತ್ರಿಯಲ್ಲಿ ಅಗಲಿಕೆಯೆಂಬುದು ಅವುಗಳಿಗೆ

ಮ॥ಸ್ರ॥ ಘನಸಂಧ್ಯಾರಾಗ ತೀವ್ರಾನಲನೊಳೊಲವಿನಿಂ ಕಾಸಿ ತಿಗ್ಮಾಂಶುವೆಂದೀ
ಬ ನವೀನ ಸ್ವರ್ಣಸತ್ಪಿಂಡಮನಮಳ ನಭಶ್ರೀಗಲಂಕಾರಮಂ ಮಾ
ಳ್ಪೆನೆನುತ್ತಿಚ್ಛೈಸಿ ಪೂರ್ವೇತರ ಶರನಿಧಿಯೊಳ್ಕಾಲನೆಂಬೋಜನಳ್ದ
ಲ್ವನಿಸುರ್ಬೇಳ್ವುದೋ ಕಾರ್ಬೊಗೆಯೆನೆ ದೆಸೆದೀವಿತ್ತು ಘೋರಾಂಧಕಾರಂ ೧೯

ಚಂ॥ ನಿಜಕರದಿಂದೆ ರಾಜವಸುವೆಲ್ಲಮನೊಯ್ಯನೆ ಕಳ್ದು ನೀಲನೀ
ರಜನಿಯ ಬಾಯ ಮುದ್ರಿಸಿ ಪಿಸುಣ್ಗೆಡೆದಪ್ಪಳೆನುತ್ತೆ ಮತ್ತೆ ನೀ-
ರಜನಿಯೊಳೊಲ್ದು ಪುಷ್ಪವತಿಯೊಳ್ಪಿವದೊಳ್ಪರೆದಿಂತು ಸತ್ಪಥ
ತ್ಯಜನಮನಾಳ್ದು ಬಿಳ್ದಳಿದ ಸೂರ್ಯನ ದುರ್ಯಶಮಪ್ಪುದೀ ತಮಂ ೨೦

ವ॥ ಮತ್ತಂ

ಚಂ॥ ಪುರಹರನರ್ತನೋತ್ಸವದೊಳೋಸರಿಸಿರ್ದ ಕರೀಂದ್ರಚರ್ಮಮೋ
ನರನಯನಾಳಿ ಮತ್ಸ್ಯತತಿಯಾಳಿಪ ಕಮ್ಮಡುವೋ ನಭಸ್ತಮಾ
ಲರುಚಿಪಲ್ಲವಾವಲಿಯೋ ತೀವಿದ ತಾರಗೆದುತ್ತುಗಳ್ಗೆ ಮೇ
ಲುರವಣಿಸುತ್ತೆ ಬರ್ಪ ಬಲಿಭೋಜನಜಾಲಮೋ ಮರ್ಬಿನೇಳ್ಗೆಯೋ ೨೧

ಉಂಟಾಗುತ್ತಿತ್ತೇ ? ೧೯. ಕಾಲನೆಂಬ ಕಮ್ಮಾರನು (ಸಂಧ್ಯಾಕಾಲದ) ಸೂರ್ಯನೆಂಬ ನೂತನವಾದ ಬಂಗಾರದ ಗಟ್ಟಿಯನ್ನು ಕಾಸಿ, ಶ್ರೇಷ್ಠಳಾದ ಆಕಾಶನೆಂಬ ಸ್ತ್ರೀಯಳಿಗೆ ಅಲಂಕಾರಗಳನ್ನು ಮಾಡಬೇಕೆಂದು ಬಯಸಿದನು. (ಆದ್ದರಿಂದ ಅವನು) ಸಂಧ್ಯಾಕಾಲದ ಅರುಣವರ್ಣದ ಪ್ರಕಾಶವೆಂಬ ಬೆಂಕಿಯಲ್ಲಿ ಅದನ್ನು ಕಾಸಿ ಪಶ್ಚಿಮದಿಗ್ಭಾಗದಲ್ಲಿರುವ ಸಮುದ್ರದಲ್ಲಿ ಅದ್ದಲು, ಆಗ ಕಪ್ಪಾದ ಹೊಗೆ ಉಬ್ಬಿ ಎದ್ದಿತೋ ಎಂಬ ಹಾಗೆ ದಿಕ್ಕುಗಳನ್ನೆಲ್ಲ ಘೋರವಾದ ಅಂಧಕಾರವು ತುಂಬಿತು. ೨೦. ತನ್ನ ಕಿರಣಗಳಿಂದ (ಕೈಯಿಂದ) ಚಂದ್ರನ ಐಶ್ವರ್ಯವನ್ನೆಲ್ಲ (ರಾಜಧನವನ್ನೆಲ್ಲ) ಕದ್ದು, ಚಾಡಿ ಹೇಳುವಳೆಂದು ಕನ್ನೈದಿಲೆಯ ಬಾಯನ್ನು ಮುಚ್ಚಿಸಿ, ಹಗಲಿನ ಸಮಯದಲ್ಲಿಯೇ ಪುಷ್ಪವತಿ (ಅರಳಿದ) ಯಾದ ಕಮಲಿನಿ ಎಂಬುವಳೊಡನೆ ಭೋಗಿಸಿ, ಸನ್ಮಾರ್ಗವೆಂಬುದೇನುಂಟೋ ಅದನ್ನು (ಒಳ್ಳೆಯನಡತೆಯನ್ನು. ಆಕಾಶಮಾರ್ಗವನ್ನು) ತ್ಯಜಿಸಿ ಕೆಳಕ್ಕೆ ಬಿದ್ದ ಸೂರ್ಯನ ದುರ್ಯಶವೇ ಈ ಕತ್ತಲೆಯಾಗಿದೆ. (ಅಲ್ಲದೆ ಇದು ಬೇರೆ ಕತ್ತಲೆಯಲ್ಲ). ವ॥ ಮತ್ತು ೨೧. ಈ ಕತ್ತಲೆಯು (ಸಂಧ್ಯಾಸಮಯದ) ಪರಮೇಶ್ವರನ ತಾಂಡವನೃತ್ಯೋತ್ಸವದಲ್ಲಿ ಉಟ್ಟ ಗಜಾಸುರನ ಚರ್ಮವು ಜಾರಿರುವುದೋ; ನರನಯನ ಸಮೂಹವೆಂಬ ಮೀನುಗಳನ್ನು ಮುಳುಗಿಸಿರುವ ಕರಿಯದಾದ ಮಡುವೋ; ಆಕಾಶವೆಂಬ ಹೊಂಗೆಯ ಮರಗಳ ಚಿಗುರಿನ ಸಮೂಹವೋ; ನಕ್ಷತ್ರಗಳೆಂಬ (ಅನ್ನದ) ತುತ್ತುಗಳಿಗಾಗಿ ರಭಸದಿಂದ ಮೇಲೆಬಿದ್ದು ಬರುವ ಕಾಗೆಗಳ ಸಮೂಹವೋ; ಅಥವಾ ಕತ್ತಲೆಯು

ಉಡುವೊಡೆ ನೀಲಚೇಲಮಲರ್ಗಣ್ಗೆರದೆಚ್ಚುವೊಷಂಜನಂ ಬಳ
ಲ್ಮುಡಿಯೊಳೆ ತಾಳ್ವೊಡುತ್ಪಳದಳಸ್ರಜಮಂಗದೊಳಣ್ಪುಗೆಯ್ದು ಬೊ
ಟ್ಟಿಡುವೊಡೆ ಭಾಳದಲ್ಲಿ ಮೃಗನಾಭಿಜಮಿಂದ್ರಮಣೀ ವಿಭೂಷಣಂ
ತೊಡುವೊಡೆ ಜೋಡೆಯರ್ಗೆ ಪಿರಿದಾದುದು ಪರ್ಬಿದ ಮರ್ಬು ಲೋಕದೊಳ್
೨೨

ದ್ರುತವಿಳಂಬಿತ॥ ಬಿಗಿದ ಬೆಳ್ಳಿಯ ನುಣ್ಮಣಿಯಂತೆವೊ
ಳ್ಭಗಣವೊಪ್ಪಿರೆ ಕಾಲವನೇಚರಂ
ಜಗದ ಲೋಚನಮೀನಕೆ ಬೀಸಿದ
ನೆಗಳ್ದ ಕರ್ಬಲೆವೊಲ್ತಮವೊಪ್ಪುಗುಂ ೨೩

ವ॥ ಅಂತಿಟ್ಟಣಿಸಿ ಪರ್ಬಿದಂಧಕಾರದಲ್ಲಿ

ಮ॥ ಬಳೆಗಳ್ಗಲ್ಕೆನದಂತೆ ಕಣ್ಬೆಳಗದೆತ್ತಂ ಸೂಸದಂತಿಟ್ಟ ಮಂ
ಜುಳಭೂಷಾಳಿಯ ಸಿಂಜಿತಂ ನೆಗಳದಂತಾಸ್ಯಾಬ್ಜಗಂಧಕ್ಕೆ ಮಂ
ಡಳಿಗೊಂಡಾಱಡಿವಿಂಡು ಗಾವರಿಸದಂತೋರಂತೆ ಜಾಣ್ಮೆಕ್ಕು ಪುಂ
ಶ್ಚಳಿಯರ್ ಬಂದುಪಕಾಂತಸೂಚಿತ ನಿಶಾಂತಾಂತಂಗಳಂ ಪೊರ್ದಿದರ್ ೨೪

ಆಧಿಕ್ಯವೋ. ೨೨. ಹೀಗೆ ಲೋಕದಲ್ಲೆಲ್ಲ ಹಬ್ಬಿದ ಮಬ್ಬು ಜಾತಿಯರಿಗಾದರೋ ಬಹಳ ಅನುಕೂಲವೇ ಆಯಿತು. ಇದು ಅವರಿಗೆ ಉಡಲು ಕರಿಯಬಣ್ಣದ ಸೀರೆಯಾಯಿತು. ಹೂವಿನಂತಹ ಕಣ್ಣುಗಳಿಗೆ ಹಚ್ಚಲು ಕಾಡಿಗೆಯಾಯಿತು. ಉದ್ದವಾದ ಮುಡಿಯಲ್ಲಿ ಧರಿಸಲು ಕನ್ನೈದಿಲೆಯದಳಗಳ ಹಾರವಾಯಿತು. ಮೈಗೆಲ್ಲ ತೊಡೆದುಕೊಂಡು ಹಣೆಯಲ್ಲಿ ತಿಲಕವನ್ನಿಟ್ಟುಕೊಳ್ಳಲು ಕಸ್ತೂರಿಯಾಯಿತು. ಇಂದ್ರನೀಲಮಣಿಯ ಆಭರಣವಾಯಿತು. ೨೩. ಕತ್ತಲೆಯು ಕಾಲನೆಂಬ ಹೆಸರಿನ ಬೇಡನು ಜಗತ್ತಿನ ಜನರ ಕಣ್ಣುಗಳೆಂಬ ಮೀನುಗಳನ್ನು ಹಿಡಿಯಲು ನಕ್ಷತ್ರಗಳೆಂಬ ಬೆಳ್ಳಿಯ ನುಣ್ಣನೆಯ ಗುಂಡುಗಳನ್ನು ಬಿಗಿದು ಮಾಡಿದ ಕರಿಯ ಬಲೆಯನ್ನು ಬೀಸಿದ ಹಾಗೆ ಶೋಭಿಸುತ್ತಿತ್ತು. ವ॥ ಈ ರೀತಿ ದಟ್ಟವಾಗಿ ಹಬ್ಬಿದ ಕತ್ತಲೆಯಲ್ಲಿ ೨೪. (ಕೈಯ) ಬಳೆಗಳು ಗಲ್ ಗಲ್ ಎಂದು ಧ್ವನಿಮಾಡದಹಾಗೆ, ಕಣ್ಣಿನ ಕಾಂತಿಯು ಯಾವಕಡೆಗೂ ಹೊರಸೂಸದಹಾಗೆ, ಮನೋಹರವಾದ ಆಭರಣಗಳು ಮಂಜುಳಧ್ವನಿ ಮಾಡದಹಾಗೆ, ಮುಖವೆಂಬ ಕಮಲಕ್ಕೆ ಗುಂಪಾಗಿ ಬಂದು ದುಂಬಿಗಳ ಹಿಂಡು ಮುತ್ತದಹಾಗೆ, ಸಾವಕಾಶವಾಗಿ ಬಹುಜಾಣತನದಿಂದ ಜಾರಸ್ತ್ರೀಯರು ತಮ್ಮ ಉಪಪತಿಗಳು ಸೂಚಿಸಿದ ಸಂಕೇತಸ್ಥಳಕ್ಕೆ

ವ॥ ಅವರೊಳೊರ್ವಳ್

ಕಂ॥ ಕ್ಷಣರುಚಿರುಚಿರೇಕ್ಷಣೆ ಪಾ
ರ್ವಣವಿಧುಮುಖಿ ಪಾಣ್ಬೆ ಪೋಗಲಳವಲ್ಲದೆ ತ
ಲ್ಲಣಿಸಿ ಪೆಡಂಮೆಟ್ಟಿತ್ತಂ
ಗಣಕ್ಕೆದುತೆ ಸುಯ್ದು ಬೈದಳಾ ಕಮಳಜನಂ ೨೫

ಮಾರನೃಪಂ ಕಾರೊಱೆಯಿಂ
ಳ್ಕೂರಸಿಯಂ ಪುಗಿಸುವಂತೆ ವೀಥಿಯತಮದೊ
ಳ್ವಾರೆ ಘನಧೀರೆ ತನುರುಚಿ
ಸಾರಾಂಗೆ ಪೊದಳ್ದು ಪೊಕ್ಕು ಬರ್ಪವಳೆಸೆದಳ್ ೨೬

ರಸೆಯಂ ಪರ್ಬಿದ ಮರ್ಬಿನೊ
ಳಸಮಶರಂ ನಿಜಶರಂಗಳಿಂ ಗುಱಿನೋಡು
ತ್ತೆ ಸತಿಯರನಿಸುವನವರ್ಗಳ
ಬಿಸರುಹದಳ ಧವಳ ವಿಪುಳ ಕೇಕರರುಚಿಯಿಂ ೨೭

ಉ॥ ಉಟ್ಟು ತಮಾಲಪಟ್ಟೆಯನೆ ಕಸ್ತುರಿಯಂ ನಿಜದೇಹದಲ್ಲಿಗ
ಣ್ಪಿಟ್ಟು ಸುರೇಂದ್ರನೀಲಮಣಿಭೂಷಣಮಂ ತಳೆದುತ್ಪಲಸ್ರಜಂ
ಬಟ್ಟದುಱುಂಬಿನೊಳ್ಮೆಱೆಯೆ ನೀಲದ ಚೇಲದ ಮೇಲುದಾಂತು ಕ
ಣ್ಗಟ್ಟಳವಾದಳೊರ್ವಳೆಳೆಯಳ್ತಮಮಂ ಪದೆದಪ್ಪಿದಂತೆವೋಲ್ ೨೮

ಬಂದು ತಲುಪಿದರು. ವ॥ ಅವರಲ್ಲಿ ಒಬ್ಬಳು ೨೫. ಮಿಂಚಿನಂತಹ ಕಡೆಗಣ್ಣುಗಳ ಕಾಂತಿಯುಳ್ಳವಳೂ, ಪೌರ್ಣಿಮೆಯ ಚಂದ್ರನೋಪಾದಿಯಲ್ಲಿ ಮುಖವುಳ್ಳವಳೂ ಆದ ಜಾರೆಯು ಕತ್ತಲೆಯಲ್ಲಿ ಹೋಗಲು ಶಕ್ಯವಿಲ್ಲದೆ ಸಂಕಟಗೊಂಡು ಅಂಗಳಕ್ಕೆ ಬಂದು ಹಿಂದಕ್ಕೆ ಸರಿದು, (ಈ ರೀತಿ ಸೌಂದರ್ಯಯುತೆಯನ್ನಾಗಿ ತನ್ನನ್ನು ಸೃಷ್ಟಿಸಿದ) ಬ್ರಹ್ಮನನ್ನು ನಿಂದಿಸಿದಳು. (ಹೊರಗೆ ಬಂದರೆ ಅವಳ ಕಣ್ಣುಗಳ ಕಾಂತಿಯೇ ಮಿಂಚಾಗಿ ಬೆಳಕಾಗುತ್ತಿತ್ತು; ಮುಖವೇ ಚಂದ್ರನಾಗಿ ಹೊಳೆಯುತ್ತ ಪ್ರಕಾಶ ಬೀರುತ್ತಿತ್ತೆಂದು ಭಾವ). ೨೬. ಮನ್ಮಥನೆಂಬ ಅರಸನು ಕರಿಯಬಣ್ಣದ ಒರೆಯಲ್ಲಿ ಮಿಂಚುವ ಖಡ್ಗವನ್ನು ಇಟ್ಟಿರುವಹಾಗೆ, ಬೀದಿಯ ಕತ್ತಲೆಯಲ್ಲಿ ಹೊಕ್ಕು ಮಿಂಚುವ ಅಂಗಕಾಂತಿಯ ಸಾರವನ್ನುಳ್ಳ ಒಬ್ಬ ಧೀರಳಾದ ಜಾರೆಯು ಪ್ರಕಾಶಿಸುತ್ತ ಬರುವಂಥವಳಾಗಿ ಶೋಭಿಸುತ್ತಿದ್ದಳು. ೨೭. ಭೂಮಿಯನ್ನು ವ್ಯಾಪಿಸಿರುವ ಕಗ್ಗತ್ತಲೆಯಲ್ಲಿ ಮನ್ಮಥನು ತನ್ನ ಪಂಚಬಾಣಗಳಿಂದ ಗುರಿ ನೋಡುತ್ತ, ಆ ಸ್ತ್ರೀಯರ ಕಮಲದಳದಂತೆ ವಿಶೇಷ ಧವಳವರ್ಣದಿಂದ ಕೂಡಿದ ದೃಷ್ಟಿಯ ಬೆಳಕಿನಿಂದ ಅವರ ಮೇಲೆ ಬಾಣ ಪ್ರಯೋಗಿಸುತ್ತಿದ್ದನು. ೨೮. ಮತ್ತೊಬ್ಬ ಚಿಕ್ಕ ವಯಸ್ಸಿನ ಜಾರೆಯು ಕತ್ತಲೆಯನ್ನು ಪ್ರಿತಿಯಿಂದ ಅಪ್ಪಿಕೊಂಡ ಹಾಗೆ ತಮಾಲನೀಲವರ್ಣದ ಪಟ್ಟೆಯ ಸೀರೆಯನ್ನುಟ್ಟು, ಕಸ್ತೂರಿಯನ್ನು ಮೈಗೆಲ್ಲ ಲೇಪಿಸಿಕೊಂಡು, ಇಂದ್ರನೀಲಮಣಿಯ ಆಭರಣಗಳನ್ನು ತೊಟ್ಟು, ಕನ್ನೈದಿಲೆಯ

ವ॥ ಆಗಳೊರ್ವಳ್ ದೂತಿ ಧೂರ್ತನಿರ್ಪ ಸಂಕೇತಸದನಕ್ಕೆ ನಿಜಸಖಿಯನೊಡಗೊಂಡೈತಂದು ಕಳುಪುವಲ್ಲಿ

ಚಂ॥ ಮುಳಿಯದಿರಾಳಿ ನಿನ್ನ ಮನದಾಸರವಾತುಮನಾಡಿ ಪೊಳ್ತು ನೀಂ
ಕಳೆಯದಿರಾತನೊಳ್ನಖರದಕ್ಷತ ಸಂತತಿಯಂ ರತಾಂತದೊಳ್
ತಳೆಯದಿರುಟ್ಟುದಂ ಕಳೆಯದಿರ್ನೆಱೆದೀಗಳೆ ಬೇಗ ಬರ್ಪುದು
ತ್ಪಳಸಖಮಂಡಳೋದಯಕೆ ಮುನ್ನಮೆನುತ್ತುಱೆ ಬುದ್ಧಿವೇಳಿದಳ್ ೨೯

ವ॥ ಅವಳೆಂದುದನಪ್ಪುಕೆಯ್ದುಪಕಾಂತನೆಡೆಗೆ ಬಂದು

ಚಂ॥ ಉಡುಗಣದಂತೆ ಮೈಯೊಳಿಡಿದೊಪ್ಪೆ ಬೆಮರ್ನಿಜನೇತ್ರಕೈರವಂ
ಬಿಡದನುರಾಗಮಂ ತಳೆಯೆ ಪೆರ್ಮೊಲೆಯೆಂಬೆಣೆವಕ್ಕಿ ಗಾಸಿಯಂ
ಪಡೆದಿರೆ ತತ್ಕರಾಹತಿಯಿನಂದಿನನಿಲ್ಲದ ವೇಳೆಯಲ್ಲಿರು
ಳ್ಮಡದಿವೊಲಂಬರಂಬೆರಸು ಪಾಣ್ಬೆ ಕಳಾನಿಧಿಯೊಂದುಗೂಡಿದಳ್ ೩೦

ವ॥ ಮತ್ತಮೊಂದೆಡೆಯೊಳೊರ್ವಳ್ ಪಾಣ್ಬೆ

ಹೂಮಾಲೆಗಳನ್ನು ವೃತ್ತಾಕಾರವಾದ ತುರುಬಿನಲ್ಲಿ ಧರಿಸಿ ಮೆರೆಯುತ್ತಿರಲು, ನೀಲವರ್ಣದ ಬಟ್ಟೆಯ ಮೇಲುಮುಸುಕು ಹಾಕಿಕೊಂಡು ಕಣ್ಣಿಗೆ ಮನೋಹರವಾಗಿ ಕಾಣುತ್ತಿದ್ದಳು. ವ॥ ಆಗ ಒಬ್ಬ ದೂತಿಯು ಧೂರ್ತ ಜಾರನಿರುವ, ಮೊದಲೇ ಗೊತ್ತಾದ ಸ್ಥಳಕ್ಕೆ ತನ್ನ ಸಖಿಯನ್ನು ಕೂಡಿಕೊಂಡು ಬಂದು, ಅವಳನ್ನು ಕಳುಹಿಸುವಾಗ ೨೯. "ಎಲೈ ಸಖಿ, ಕೋಪಗೊಳ್ಳಬೇಡ. ನಿನ್ನ ಮನಸ್ಸಿಗೆ ಬಂದ ಹಾಗೆ ಮಾತನಾಡಿ ಆತನಲ್ಲಿ ಕಾಲವನ್ನು ಕಳೆಯಬೇಡ. ಉಗುರು ಮತ್ತು ಹಲ್ಲುಗಳಿಂದ ಗಾಯಗಳಾಗದಹಾಗೆ ನೋಡಿಕೋ. ರತಿಸಮಯದಲ್ಲಿ ಉಟ್ಟುದನ್ನು ಕಳೆಯಬೇಡ. ಬೇಗನೆ ಕೂಡಿ ಈಗಲೇ ಬೇಗ ಚಂದ್ರೋದಯಕ್ಕೆ ಮೊದಲು ಬರಬೇಕು" ಎಂದು ಬುದ್ಧಿಯನ್ನು ಹೇಳಿದಳು. ವ॥ ಅವಳು ಹೇಳಿದುದನ್ನು (ಆ ದೂತಿಯು) ಒಪ್ಪಿಕೊಂಡು, ಉಪಪತಿಯಿರುವ ಸ್ಥಳಕ್ಕೆ ಬಂದು ೩೦. ನಕ್ಷತ್ರಗಳ ಸಮೂಹದಂತೆ ಮೈಯಲ್ಲಿ ಒಟ್ಟವಾಗಿ ಬೆವರುಹನಿಗಳು ಕಾಣುತ್ತಿರಲು, ಕಣ್ಣುಗಳೆಂಬ ಕನ್ನೈದಿಲೆಗಳು ಅನುರಾಗಗೊಂಡಿರಲು, ಮೊಲೆಗಳೆಂಬ ಚಕ್ರವಾಕಪಕ್ಷಿಗಳು ನಲ್ಲನ ಕೈಯ ಅಮುಕುವಿಕೆಯಿಂದ ಗಾಸಿಗೊಂಡಿರಲು, ಗಂಡನಿಲ್ಲದ (ಸೂರ್ಯನಿಲ್ಲದ) ಸಮಯದಲ್ಲಿ, ರಾತ್ರಿಯೆಂಬ ಸ್ತ್ರೀ ಆಕಾಶವನ್ನಪ್ಪಿದಹಾಗೆ ಕಲಾನಿಧಿಯಾದ ಆ ಪಾದರಿಯು ತನ್ನ ನಲ್ಲನೊಡನೆ ಒಂದುಗೂಡಿದ್ದಳು. ವ॥ ಮತ್ತೊಂದು ಸ್ಥಳದಲ್ಲಿ ಒಬ್ಬ ಜಾರೆಯು

ಚಂ॥ ಉಗುರ್ಗೊನೆ ನಾಂಟದಂತೆ ಪಿಡಿ ಬಲ್ಮೊಲೆಯಂ ನಿಱಿಯಂ ಸಡಿಲ್ಚಿ ನೀ
ನುಗಿಯದಿರುಟ್ಟುದಂ ಜಡಿದು ಪೊಯ್ಯದಿರೊಯ್ಯನೆ ಮೆಯ್ಯ ಬಾಸುಳಂ
ನೆಗಪದಿರೆನ್ನ ಚೆಂದುಟಿಗೆ ಪಲ್ಮೊನೆ ನಾಂಟದ ಮಾಳ್ಕೆಯಿಂದೆ ಮೆ
ಲ್ಲಗೆ ಮಿಗೆ ಚುಂಬಿಸೆಂದು ಸತಿ ಶಿಕ್ಷಿಸಿದಳ್ ಪೊಸಪಾಣ್ಬನೊರ್ವನಂ ೩೧

ವ॥ ಅದಲ್ಲದೆ ಪೆಱತೊಂದು ತಾಣದೊಳೊರ್ವ ಜಾತಿ ಜಾರೆ ಜವ್ವನದ ಜಾರನಂ ಕಂಡು

ಕಂ॥ ಇನನಿಲ್ಲವಿಂದು ಬಾರಂ
ಘನತಿಮಿರಮಿದಪ್ಪುದಕಟ ನೇಹಮದಿಲ್ಲಂ
ಮನೆಯೊಳ್ಸೊಡರಿದೆ ಪೋದುದು
ಜನರಹಿತಂ ನೆರೆಯಿದೆಂದು ಪದಿರಿಂ ನುಡಿದಳ್ ೩೨.

ವ॥ ಅದಂ ಕೇಳ್ದದಿರದೈತಂದವಂ ಮದನಕೇಳಿವಡೆದೆಸೆದಿರ್ದನಲ್ಲಿ ಮತ್ತ
ಮೊಂದೆಡೆಯೊಳ್

೩೧. ಹೊಸ ಪಾದರಿಗನೊಬ್ಬನನ್ನು ಕುರಿತು "ದಪ್ಪನೆಯ ಮೊಲೆಗಳನ್ನು ಉಗುರುಗಳ ತುದಿಗಳು ನಾಟದಹಾಗೆ ಹಿಡಿ. ನಿರಿಗೆಗಳನ್ನು ಸಡಿಲಿಸಿ ಉಟ್ಟ ಸೀರೆಯನ್ನು ನೀನು ಬಿಚ್ಚ ಬೇಡ. ಜಡಿದು ಹೊಡೆಯಬೇಡ. ಒಯ್ಯನೆ ಮಯ್ಯಲ್ಲಿ ಬಾಸುಂಡೆಗಳೇಳದ ಹಾಗೆ ನೋಡಿಕೋ. ಹಲ್ಲ ಮೊನೆಗಳು ನಾಟದರೀತಿಯಲ್ಲಿ ಮೆಲ್ಲಗೆ ಚೆನ್ನಾಗಿ ಚುಂಬಿಸು" ಎಂದು ಒಬ್ಬ ಸ್ತ್ರೀಯಳು ಶಿಕ್ಷಣಕೊಡುತ್ತಿದ್ದಳು. ವ॥ ಅದೂ ಅಲ್ಲದೆ ಬೇರೊಂದು ಸ್ಥಳದಲ್ಲಿ ಒಬ್ಬ (ಪ್ರೌಢಳಾದ) ಜಾರೆಯು, ಯೌವನವಂತನಾದ ಜಾರನನ್ನು ಕಂಡು, ೩೨. "ಸೂರ್ಯನಿಲ್ಲ; ಚಂದ್ರ ಬರುವುದಿಲ್ಲ; ವಿಶೇಷ ಕತ್ತಲೆಯಿದೆ; ಅಯ್ಯೋ ಎಣ್ಣೆಯಿಲ್ಲ; ಮನೆಯಲ್ಲಿ ದೀಪವಿದೆ ; ನಂದಿ ಹೋಯಿತು[1] ; ಜನರಹಿತವಾದ ಅಕ್ಕಪಕ್ಕವುಳ್ಳ ಸ್ಥಳ ವಿದು ; ಗಂಡನಿಲ್ಲ ; ಈ ದಿವಸ ಬರುವುದಿಲ್ಲ ; ಕತ್ತಲೆ ವಿಶೇಷವಾಗಿದೆ ; (ನನ್ನಲ್ಲಿ) ಸ್ನೇಹವಿಲ್ಲವೆ? ಮನೆಯಲ್ಲಿ ದೀಪ, ಇದೋ, ಆರಿಹೋಯಿತು ; ಜನರಾರೂ ಇಲ್ಲ[2] ; ನನ್ನೊಡನೆ ಕೂಡು. ಹೀಗೆಂದು ಎರಡರ್ಥ ಬರುವಹಾಗೆ ಹೇಳಿದಳು. ವ॥ ಅದನ್ನು ಕೇಳಿ (ಎರಡನೆಯ ಅರ್ಥವನ್ನರಿತು) ಹೆದರದೆ ಬಂದು ಆವನು ಮದನಕೇಳಿಯನ್ನು

1. ಜನರಿಗೆ ಉಪಕಾರ ಬುದ್ಧಿ ಹೋಗಿ ಬಿಟ್ಟಿತು (ರ೧).
2. ಇದು ಏಕಾಂತ ಸ್ಥಳ (ರ೦).

ಚಂ॥ ತೊಡೆ ಕಡುಕಂಪಿಸುತ್ತಮಿದೆ ಮೈ ಬೆಮರುತ್ತಿದೆ ಕಿತ್ತುಗುಂದದಿ
ಟ್ಟೆಡೆ ಮೊಲೆ ಮೋಹಿಸುತ್ತಿದೆ ವಿಲೋಚನಮಂಚಿತ ಚಂಚಲತ್ವಮಂ
ಬಿಡದಿದೆ ಗದ್ಗದಂಬಡೆದ ಮಾತಿಗೆ ಭೀತಿಯೊ ಕೂರ್ತ ರೀತಿಯೋ
ಮಡದಿಗೆನುತ್ತೆ ಸಂಕಿಪನ ಸಂದೆಗಮಂ ಬಿಡಿಸಿತ್ತು ಮುಂಬದಂ ೩೩

ವ॥ ಮತ್ತಂ

ಮ॥ಸ್ರ॥ ವದನೇಂದುಜ್ಯೋತ್ಸ್ನೆಯೆತ್ತಂ ಕವಿದಪುದೆನುತಂ ಪಾಣ್ಬನಾಸ್ಯಾಬ್ಜದೊಳ್ಮು
ಚ್ಚಿದಳಕ್ಕುಂ ಕಣ್ಗದಿರ್ಮಿಂಚುಗುಮೆನುತದನಾಮಿಾಲನಂಗೈದಳಕ್ಕುಂ
ಮದಭೃಂಗಂ ಬರ್ಕುಮೆಂದಳ್ಕುತೆ ಪಿರಿದು ನಿಜಶ್ವಾಸಮಂ ಸೂಸಳಕ್ಕುಂ
ವಿದಿತಂ ತಾನೆಂಬಿನಂ ಜಾಣ್ಮೆಗುತುಪರತಿಯೊಳ್ಕೂಡಿದಳ್ ಜೋಡೆಯೊರ್ವಳ್ ೩೪

ವ॥ ಮತ್ತಮೊಂದು ಪಾಳ್ದೇಗುಲದಲ್ಲಿ

ಚಂ॥ ಗಳನಿನದಕ್ಕೆ ಕಾತರಿಪ ಕಂಠಮನೊಯ್ಯನೆ ಸಂತಮಿಟ್ಟು ಮೈ
ಗಳ ಮಸುಪಿಂಗೆ ಮೈಮರೆವ ಚಿತ್ತಮನೆಳ್ಚರಿಸುತ್ತೆ ದೈನ್ಯಮಂ
ಗಳಪಲೊಡರ್ಚೆ ಗದ್ಗದಿಪ ಮಾತುಗಳಂ ಮರೆಪಿಕ್ಕಿ ಪೊಯ್ಯಲೆಂ
ದೆಳಸುವ ಕೈಯನೋಸರಿಸಿ ಕೂಡುವ ಪಾಣ್ಬೆಯ ಜಾಣ್ಮೆ ಸಾಲದೇ ೩೫

ಹೊಂದಿ ಶೋಭಿಸುತ್ತಿದ್ದನು. ಅಲ್ಲಿ ಮತ್ತೊಂದು ಸ್ಥಾನದಲ್ಲಿ ೩೩. "ಇವಳ ತೊಡೆಗಳು ನಡುಗುತ್ತಿವೆ ; ಮೈ ಬೆವರುತ್ತಿದೆ ; ನಡುಕವೇ ಇಲ್ಲದಂತಾಗಿ ಕರ್ಕಶವಾದ ಮೊಲೆಗಳು ಮರುಳುಗೊಂಡಂತಿವೆ ; ಕಡೆಗಣ್ಣುಗಳ ಕಾಂತಿಯು ಚಂಚಲತ್ವವನ್ನು ಹೊಂದಿವೆ ; ಅಳುಕುಗೊಂಡು ನಡುಗುವ ಮಾತುಗಳು ಇವೆ ; ಈ ಪ್ರಿಯಳಿಗೆ ಇದೇನು ಹೆದರಿಕೆಯೋ, ಪ್ರೀತಿಯನ್ನು ತೋರಿಸುವ ರೀತಿಯೋ" ಎಂದು ಸಂಶಯಗೊಂಡ ಓರ್ವ ವಿಟನ ಸಂಶಯವನ್ನು ಅವಳ ಮುಂದಕ್ಕೆ ಬರುವಿಕೆಯೇ ದೂರಮಾಡಿತು. ವ॥ ಮತ್ತು ೩೪. ಒಬ್ಬ ಜಾರೆಯು "ಮುಖಚಂದ್ರನ ಜ್ಯೋತಿಯು ಎಲ್ಲ ಕಡೆಗೂ ಹರಡಿತೆಂದು ಜಾರನ ಮುಖಕಮಲದಲ್ಲಿ ತನ್ನ ಮುಖವನ್ನು ಮುಚ್ಚಿದವಳಾಗಿರಬೇಕು ; ಕಣ್ಣ ಕಾಂತಿ ಹೊಳೆದೀತೆಂದು ಕಣ್ಣನ್ನು ಮುಚ್ಚಿದವಳಾಗಿರಬೇಕು ; ಮದಿಸಿದ ದುಂಬಿಯು ಬಂದೀತೆಂದು ಬಹಳ ಹೆದರಿ ತನ್ನ ಶ್ವಾಸವನ್ನೇ ಬಿಗಿಹಿಡಿದಿರಬೇಕು ; ಇದು ಸ್ಪಷ್ಟ" ಎಂಬಹಾಗೆ ಅತ್ಯಂತ ಜಾಣ್ಮೆಯಿಂದ ಆಸೆದೊರೆದು ರತಿಸುಖದಲ್ಲಿ ಮಗ್ನಳಾಗಿದ್ದಳು. ವ॥ ಮತ್ತೊಂದು ಹಾಳು ದೇಗುಲದಲ್ಲಿ ೩೫. ರತಿಕೂಜಿತವನ್ನು ಮಾಡಲೆಳಸುವ ಕಂಠವನ್ನು ಬಲಾತ್ಕಾರದಿಂದ ಹತೋಟಿಯಲ್ಲಿಟ್ಟುಕೊಂಡು, ಮೈಮೈಗಳ ಸ್ಪರ್ಶಕಾರಣ ವಾಗಿ ಮೈಮರೆಯುತ್ತಿದ್ದ ತನ್ನ ಚಿತ್ತವನ್ನು ಎಚ್ಚರಗೊಳಿಸುತ್ತ, ದೈನ್ಯದ ನುಡಿಗಳನ್ನು ಹೇಳುವ ಗದ್ಗದದಿಂದ ಕೂಡಿರುವ ಮಾತುಗಳನ್ನು ಮರೆಮಾಚಿ, ತಾಡನಮಾಡಲು ಇಚ್ಛಿಸುವ ಕೈಗಳನ್ನು ಹಿಂದೆಗೆದುಕೊಳ್ಳುತ್ತ ರತಿಸುಖಬಡುವ ಆ ಜಾರೆಯ ಜಾಣ್ಮೆ

ಕಂ॥ ಆಗಳೆ ಮುಳಿಸಾಗಳೆ ತಿಳಿ
ವಾಗಳೆ ಪೊಸಬೈಗುಳಾಗಳೇ ಪೊಯ್ಗಳ್ ಮ
ತ್ತಾಗಳೆ ಸವಿಸುಸಿಲೆಸಗುವ
ಳಾಗಳೆ ಪಾಣ್ಬಂಗೆ ಸುರತ ಸುರಲತೆ ನಿಜದಿಂ ೩೬

ಉ॥ ಮೆಲ್ಲನೆ ಬರ್ಪ ಮೆಲ್ಲನಮರ್ದಪ್ಪುವ ಮೆಲ್ಲನೆ ಚುಂಬಿಪಳ್ಕಱಿಂ
ಮೆಲ್ಲನೆ ನೋಳ್ಪ ಮೆಲ್ಲನುಸಿರಿಕ್ಕುವ ಮೆಲ್ಲನೆ ಲಲ್ಲೆಗೆಯ್ವ ಮೇ
ಣ್ಮೆಲ್ಲನೆ ಪಾಯ್ವ ಮೆಲ್ಲನೊಡಗೂಡುವ ಮೆಲ್ಲನೆ ಸೌಖ್ಯವಾಂಪ ತ
ಮ್ಮೆಲ್ಲ ನೆಗಳ್ತೆದೋಱಿ ಪೊಸಜಾಣ್ಮೆಯ ಪಾಣ್ಬೆಯರಿರ್ದರೋಪರೊಳ್ ೩೭

ಕಂ॥ ಇಡಿದ ತಮವೆಂಬ ಜಗುನೆಯ
ಮಡುವಿನ ಮಧ್ಯದೊಳೆ ಸುಳಿವ ಮೀಂಗಳಿವೆಂಬಂ
ತಿಡಿಕಿಱಿದು ತುಱುಗಿ ಮಿಱುಗುತೆ
ಕಡುಸೊಗಸಂ ಪಡೆದುವರರೆ ತಾರೆಗಳಾಗಳ್ ೩೮

ವ॥ ಮತ್ತಂ

ಕಂ॥ ದಿನಮಣಿಯೆನ್ನೊಳಗಿರೆ ಮ
ತ್ತಿನ ಮಣಿಯೇವಾಳ್ತೆಯೆಂದು ವನನಿಧಿ ಪೊಸಮು
ತ್ತಿನ ಮಣಿಗಳನಿದೆ ಚಲ್ಲಿದ
ನೆನೆ ಮಣಿನಿಭ ತಾರೆಗಳ್ಮನಂಗೊಳಿಸಿರ್ಕುಂ ೩೯

ಅತಿಶಯವಾದುದಾಗಿತ್ತು. ೩೬. ಆ ಕೂಡಲೆ ಮುಳಿಸು; ಆಗಲೆ ಪುನಃ ತಿಳುವಳಿಕೆಗೊಳ್ಳುವ ಮನಸ್ಸು ; ಆ ಕೂಡಲೆ ಬೈಗಳು ; ಮರುಕ್ಷಣದಲ್ಲೇ (ಹುಸಿಕೋಪದ) ಹೊಡೆಯುವಿಕೆ; ಪುನಃ ಆ ಕೂಡಲೆ ಮನೋಹರವಾದ ಸಂಭೋಗಕ್ರಿಯೆಯನ್ನು ಒಬ್ಬಳು ಮಾಡುತ್ತಿದ್ದಳು. ಅವಳು ಜಾರನಾದ ಆ ಪುರುಷನಿಗೆ ನಿಜವಾಗಿ ರತಿಕ್ರೀಡೆಯೆಂಬ ಕಲ್ಪವೃಕ್ಷದ ಸಮಾನಳಾಗಿ ವರ್ತಿಸಿದಳು. ೩೭. ನಿದಾನವಾಗಿ ಮುಂದಕ್ಕೆ ಬರುವ, ಮೆಲ್ಲನೆ ಪ್ರೀತಿಯಿಂದ ಬಿಗಿದಪ್ಪಿಕೊಳ್ಳುವ, ಮೆಲ್ಲನೆ ಚುಂಬಿಸುವ, ಮೆಲ್ಲನೆ ಪ್ರೀತಿಯಿಂದ ನೋಡುವ, ಮೆಲ್ಲಗೆ ಉಸಿರುಬಿಡುವ, ಮೆಲ್ಲನೆಯು ಧ್ವನಿಯಿಂದ ಲಲ್ಲೆಯನ್ನು ಮಾಡುವ, ಮೆಲ್ಲನೆ ಮೇಲೆ ಬೀಳುವ, ಮೆಲ್ಲನೆ ಬಂದು ಕೂಡುವ, ಮೆಲ್ಲನೆ ಸೌಖ್ಯವನ್ನು ಹೊಂದುವ ತಮ್ಮ ಎಲ್ಲ ಬಗೆಯ ಪ್ರೌಢಿಮೆಯನ್ನೂ ತೋರಿಸಿ, ನೂತನ ಜಾಣ್ಮೆಯಿಂದ ಕೂಡಿದ ಜಾರೆಯರು ತಮ್ಮ ಪ್ರಿಯರಾದವರಲ್ಲಿ ಕೂಡುತ್ತಿದ್ದರು. ೩೮. ಅರರೇ! ಆ ಸಮಯದಲ್ಲಿ ಅಂಧಕಾರವೆಂಬ ಯಮುನೆಯ ಮಡುವಿನ ಮಧ್ಯದಲ್ಲಿ ಸುಳಿದಾಡುವ ಮೀನುಗಳು ಇವು, ಎಂಬ ರೀತಿಯಲ್ಲಿ ದಟ್ಟವಾಗಿ ತುಂಬಿ ಹೊಳೆಯುವ ನಕ್ಷತ್ರಗಳು ಆಕಾಶದಲ್ಲಿ ಶೋಭಿಸುತ್ತಿದ್ದವು. ವ॥ ಮತ್ತು ೩೯. ದಿನಮಣಿ (ಸೂರ್ಯ) ಯೇ ನನ್ನಲ್ಲಿರುವಾಗ, ಇನ್ನಿತರ ಮಣಿಗಳ ಪ್ರಯೋಜನವೇನೆಂದು ಸಮುದ್ರವು ತನ್ನಲ್ಲಿರುವ ಮುತ್ತಿನ ಮಣಿಗಳನ್ನು

ಬಿಸಜಾಪ್ತನ ಬಿಸುವಿಸಿಲಿಂ
ಬಸವಳಿದಾಕಾಶ ಕೇಶವಾಂಗದೆ ನಿಶೆ ಸಿಂ
ಪಿಸಿದ ಮಲಯರುಹ ರಸಕಣ
ವಿಸರಂ ತಳ್ತಂತೆ ತಾರೆಗಳ್ಸೊಗಯಿಸುಗುಂ ೪೦

ಚಂ॥ ಇನನಪರಾಂಬುರಾಶಿಯೊಳೆ ಬೀಳ್ದಳಿವುತ್ತಿರೆ ಕಂಡಗಲ್ಕೆಗಿ
ರ್ಚಿನ ಸೆಕೆ ಪತ್ತೆ ತಾಳಲಳವಲ್ಲದೆ ವಾಸರಲಕ್ಷ್ಮಿ ಕಣ್ಣನೀ
ರ್ವನಿಗಳನೆಯ್ದೆ ಸೆಳ್ಳುಗುರ್ಗಳಿಂ ಮಿಡಿಯಲ್ಕಿಡಿದಲ್ಲಿ ತಳ್ತುವೆಂ
ದೆನೆ ರಮಣೀಯವಾದುವಮರಾಧ್ವದೊಳೆಲ್ಲೆಡೆಯಲ್ಲಿ ತಾರೆಗಳ್ ೪೧

ಕಂ॥ ಸುರಪಶಿಖಿ ಶಮನ ನೈಋತಿ
ವರುಣಾನಿಲ ಧನಪತೀಶರೊಲವಿಂ ಕೆದರ್ದಂ
ತಿರೆ ಪುಷ್ಪಾಂಜಲಿಯಂ ಶಂ
ಕರಂಗೆ ಸಂಧ್ಯಾನಟಂಗೆ ನೆಗೆದುದು ಭಗಣಂ ೪೨

ವ॥ ಅನಂತರಂ

ಮ॥ ನಳಿನಂ ಕುಂದೆ ವಿಕಾಸವೊಂದೆ ಕುಮುದಂ ಸೊಂಪಿಂದೆ ಚಂದ್ರೋಪಳಂ
ಜಳಮಂ ಬೀರೆ ಪಯೋಧಿ ಮಾಱೆ ವಿರಹಿವ್ರಾತಕ್ಕೆ ಕಾಯ್ಪೇಱೆ ಕೋ
ಮಳೆಯರ್ಪಾಡೆ ಚಕೋರಿ ನೋಡೆ ಮದನಂ ಪಂಚಾಸ್ತ್ರಮಂ ಪೂಡೆ ಚಾ
ಪಳೆಯರ್ಜೋಡೆಯರೋಡೆ ಮೂಡಿದುದು ತೇಜೋಮಂದಿರಂ ಚಂದಿರಂ ೪೩

ಮೇಲಕ್ಕೆ ಎರಚಿದನೋ ಎನ್ನುವ ಹಾಗೆ ನಕ್ಷತ್ರಗಳು ಕಂಗೊಳಿಸುತ್ತಿದ್ದವು. ೪೦. ಕಮಲ ಸಖನಾದ ಸೂರ್ಯನ ಬಿಸಿಯಾದ ಬಿಸಿಲಿನಿಂದ ಸಂಕಟಪಟ್ಟು, ಆಕಾಶಕೇಶವನ ದೇಹದಲ್ಲಿ ರಾತ್ರಿಯೆಂಬ ಸ್ತ್ರೀಯು ಸಿಂಪಡಿಸಿದ ಚಂದನರಸದ ಹನಿಗಳ ಹಾಗೆ ನಕ್ಷತ್ರಗಳು ಶೋಭಿಸುತ್ತಿದ್ದವು. ೪೧. ಸೂರ್ಯನು ಪಶ್ಚಿಮದಿಗ್ಭಾಗದ ಸಮುದ್ರದಲ್ಲಿ ಬಿದ್ದು ನಾಶವಾಗುತ್ತಿರಲು, ಅದನ್ನು ಕಂಡು ವಿರಹವೆಂಬ ಕಿಚ್ಚಿನ ಸೆಕೆಯು ಹೆಚ್ಚಿ, ದಿವಸವೆಂಬ ಲಕ್ಷ್ಮಿಯು (ಆ ಸೆಕೆಯನ್ನು) ತಡೆಯಲು ಶಕ್ತಿಯಿಲ್ಲದೆ, ತನ್ನ ಕಣ್ಣಿನಿಂದ ಹರಿಯುತ್ತಿರುವ ಕಣ್ಣೀರ ಹನಿಗಳನ್ನು ತನ್ನ ಹೊಳೆಯುತ್ತಿರುವ ಉಗುರುಗಳಿಂದ ಮಿಡಿಯಲಾಗಿ ಅವು ಸಿಡಿದು ಆಕಾಶದಲ್ಲಿ ತುಂಬಿದುವು-ಎನ್ನುವ ಹಾಗೆ ಆಕಾಶದ ಎಲ್ಲ ಭಾಗದಲ್ಲೂ ನಕ್ಷತ್ರಗಳು ರಮಣೀಯವಾಗಿ ಕಾಣುತ್ತಿದ್ದವು. ೪೨. ಇಂದ್ರ, ಅಗ್ನಿ, ಯಮ, ನೈಋತಿ, ವರುಣ, ವಾಯು, ಕುಬೇರ, ಈಶಾನರೆಂಬ ಅಷ್ಟದಿಕ್ಪಾಲಕರು ಪುಷ್ಪಾಂಜಲಿಯನ್ನು ಸಂಧ್ಯಾಕಾಲದ ನಾಟ್ಯಮೂರ್ತಿಯಾದ ಶಂಕರನಿಗೆ ಅರ್ಪಿಸಿದರೋ ಎನ್ನುವ ಹಾಗೆ ಆಕಾಶದಲ್ಲಿ ನಕ್ಷತ್ರಗಳ ಸಮೂಹವು ಕಾಣಿಸಿತು. ವ॥ ಅನಂತರ ೪೩. ಕಮಲವು ಕುಂದುವಂತೆ, ಕುಮುದವು ಅರಳುವಂತೆ, ಚಂದ್ರಕಾಂತಶಿಲೆಯು ಸೊಂಪಾಗಿ ನೀರನ್ನು ಒಸರುವಂತೆ, ಸಮುದ್ರವು ಉಕ್ಕೇರುವಂತೆ, ವಿರಹಿಗಳಿಗೆ ವಿರಹದ ಬೇಗೆ ಹೆಚ್ಚಾಗುವಂತೆ, ಸ್ತ್ರೀಯರು ಹಾಡುವಂತೆ, ಚಕೋರಪಕ್ಷಿಯು ನೋಡುವಂತೆ, ಮನ್ಮಥನು ಬಿಲ್ಲಿಗೆ ತನ್ನ

ಉ॥ ಅಂಬರಪುಷ್ಪವಾಟಿಯೊಳರಲ್ದುಡುಪುಷ್ಪಕದಂಬಮಂ ಚಕೋ
ರಾಂಬಕಿ ಪೂರ್ವದಿಗ್ವಧು ಕರಂ ತಿಱಿಯಲ್ ಕರಮೆತ್ತಿ ನಿಲ್ಕೆ ರಾ
ಗಾಂಬರದಂತೆ ಸಂಜೆ ನಸುಜಾಱೆ ಜಲಕ್ಕನೆ ಪೊಣ್ಮಿದೊಂದುರೋ
ಜಂ ಬಗೆವಂದು ರಂಜಿಸಿವೊಲುಜ್ವಳಮಾದುದು ಚಂದ್ರಮಂಡಳಂ ೪೪

ವ॥ ಅಂತುಮಲ್ಲದೆಯುಂ

ಚಂ॥ ಇದು ತಮಮೆಂಬ ಶಂಬರಧಿಯಂ ಸಲೆಪೀರ್ವ ಮಹೌರ್ವವಹ್ನಿಯೋ
ಇದು ತಮಮೆಂಬ ಕರ್ಪಿಡಿದ ಕಾನನಮಂ ಸುಡುವಗ್ನಿಪಿಂಡವೋ
ಇದು ತಮಮೆಂಬ ಕೃಷ್ಣಭುಜಗವ್ರಜಮಂ ತವೆಕೊಲ್ವ ತಾರ್ಕ್ಷ್ಯವೋ
ಇದು ತಮಮೆಂಬ ರಕ್ಕಸನನಿಕ್ಕುವ ಚಕ್ರಮೊ ಚಂದ್ರಬಿಂಬವೋ ೪೫

ವ॥ ಮತ್ತಂ

ಕಂ॥ ತಿಮಿರಭ್ರಮರವ್ರಜಮಾ
ಕ್ರಮಿಸಿರೆ ಭಗಣಪ್ರಸೂನಕುಲಕಿಂದ್ರದಿಶಾ
ರಮಣಿ ತೆಮುಱಿಲ್ಕೆ ಚಂಪಕ
ಸುಮ ಕಂತುಕಮಿಟ್ಟಳೆನಿಕುಮಾ ವಿಧುಬಿಂಬಂ ೪೬

ಪುಷ್ಪಬಾಣಗಳನ್ನು ಹೂಡುವಂತೆ, ಚಪಲರಾದ ಜಾರೆಯರು ಓಡಿಹೋಗುವಂತೆ ಆಗಿರಲು ತೇಜೋರಾಶಿಯಿಂದ ಕೂಡಿದ ಚಂದ್ರನು ಮೂಡಿದನು. ೪೪. ಆಕಾಶವೆಂಬ ಪುಷ್ಪವಾಟಿಕೆಯಲ್ಲಿ ಚಕೋರಾಂಬಕಿಯಾದ ಪೂರ್ವದಿಕ್ಕೆಂಬ ಸ್ತ್ರೀಯು ಹೂವುಗಳ ಸಮೂಹವನ್ನು ಕೊಯ್ಯಲು ಕೈಗಳನ್ನು ಮೇಲೆತ್ತಿ ನಿಗುರಿ ನಿಲ್ಲಲು, ಅವಳ ಎದೆಯ ಮೇಲಿನ ಕೆಂಪುವರ್ಣದ ಸೀರೆಯ ಸೆರಗು ಜಾರಿದ ಹಾಗೆ, ಒಮ್ಮೆಲೆ ಸಂಜೆಯ ಕೆಂಪು ಮಾಯವಾಗಲು, ಒಂದು ಮೊಲೆಯು ಹೊರಬಂದು ಕಣ್ಣಿಗೆ ರಂಜಿಸುವ ಹಾಗೆ ಚಂದ್ರಮಂಡಲ ಪ್ರಕಾಶಮಾನವಾಗಿ ಕಂಡಿತು. ವ॥ ಅದೂ ಅಲ್ಲದೆ, ೪೫. ಇದು ಕತ್ತಲೆಯೆಂಬ ಸಮುದ್ರವನ್ನು ಚೆನ್ನಾಗಿ ಹೀರುವ ಬಡಬಾಗ್ನಿಯೋ, ಇದು ತಮವೆಂಬ ಕಪ್ಪಿನಿಂದ ಕೂಡಿದ ಅರಣ್ಯವನ್ನು ಸುಡುವ ಕಾಡುಗಿಚ್ಚೋ, ಇದು ಕತ್ತಲೆಯೆಂಬ ಕೃಷ್ಣಸರ್ಪ ಸಮೂಹವನ್ನು ಕೊಂದುಹಾಕುವ ಗರುಡನೋ, ಇದು ಕತ್ತಲೆಯೆಂಬ ರಾಕ್ಷಸನನ್ನು ಕೊಲ್ಲುವ ಸುದರ್ಶನಚಕ್ರವೋ ಅಥವಾ ಚಂದ್ರಬಿಂಬವೋ (ಎಂಬ ಭ್ರಾಂತಿಯನ್ನು ಚಂದ್ರಮಂಡಲವು ಮಾಡಿತು.) ವ॥ ಮತ್ತು ೪೬. ಕತ್ತಲೆಯೆಂಬ ಭ್ರಮರ ಸಮೂಹವು ನಕ್ಷತ್ರಗಳೆಂಬ ಹೂವುಗಳಿಗೆ ಮುತ್ತಿರಲಾಗಿ, ಪೂರ್ವದಿಕ್ಕೆಂಬ ಸ್ತ್ರೀಯು ಅವುಗಳನ್ನೋಡಿಸಲು ಸಂಪಿಗೆಹೂವುಗಳ ಚೆಂಡನ್ನು ಮಾಡಿ ಹೊಡೆದಳೋ ಎಂಬಂತೆ ಆ ಚಂದ್ರಮಂಡಲವಿತ್ತು. (ದುಂಬಿಗಳು ಸಂಪಿಗೆಹೂವಿನ ವಾಸನೆಗೆ ಸಾಯುತ್ತವೆಂದು

ಸಿಡಿದ ಕಿಡಿ ಬಳಸಿದುಡುಗಣ
ಮಡರ್ದುರಿ ಸಂಧ್ಯಾಂಶುವೆನೆ ತಮೋಯಮನೊಡಲಂ
ಸುಡಲೆಸಪ ಕಾಲಶೂಲಿಯ
ಕಿಡಿಗಣ್ಗೆಣೆವಂದುದರುಣರುಚಿ ವಿಧುಬಿಂಬಂ ೪೭

ಬಳಸಿದ ಕೆಂಬೆಳಗಿನಿಸಿನಿ
ಸಳಿದುದು ಬೆಳ್ವೆಳಗು ಬೆಳೆದುದೀಕ್ಷಿಸುವೆಳೆವೆ
ಣ್ಗಳ ಕಣ್ಗಳ ನುಣ್ಪೆಳಗುಗ
ಳಳುರ್ದಂತಿರೆ ಮೂಡಿ ಮೋಹಿಸುವ ಮೃಗಧರನಾ ೪೮

ಒರಸೆ ಮದಮಯ್ದ್ದೆ ಪೊರೆದಂ
ತಿರೆ ಕಟಿಯುಡುರಾಜಿ ಪೂತ್ಕರಿಸಿದಂಬುಕಣೋ
ತ್ಕರದಂತಿರೆ ಚಂದಿರನಿಂ
ದಿರನಾನೆಯ ಪುಷ್ಕರಂಬೊಲೇನೊಪ್ಪಿದನೋ ೪೯

ಉ॥ ನೀಲನಭಸ್ಥಳಾಚ್ಯುತ ಲಲಾಟತಟಚ್ಯುತ ರಕ್ತಧಾರೆಗಳ್
ಸಾಲಿಡುತೊಕ್ಕು ಮಿಕ್ಕು ಪರೆದಂತಿರೆ ಪರ್ಬಿದ ಸಂಜೆಗೆಂಪು ತ
ತ್ಕಾಲಕಪಾಲಪಾಣಿ ಧೃತಚಂದ್ರಕಪಾಲಮೆ ಪೀರ್ದುದೆಂಬಿನಂ
ಬಾಲರಸಾಲಪಲ್ಲವ ಸಮದ್ಯುತಿ ತದ್ಯುತಿ ಪಿಂಗಿತಾಕ್ಷಣಂ ೫೦

ಕವಿಸಮಯ). ೪೭. ಆ ಅರುಣವರ್ಣದ ಚಂದ್ರಬಿಂಬವು, ಸುತ್ತ ಬಳಸಿದ ನಕ್ಷತ್ರ ಸಮೂಹವೇ ಸಿಡಿದ ಕಿಡಿಗಳಾಗಿ, ಸಂಧ್ಯಾಕಾಲದ ಅರುಣವರ್ಣವೇ ಉರಿಯಾಗಿರಲು, ತಮೋಮಯನಾದ ಯಮನೆಂಬುವನ ದೇಹವನ್ನು ಸುಡುವುದಕ್ಕೋಸುಗ ಮಹೇಶ್ವರನು ತೆರೆದ ಅಗ್ನಿನೇತ್ರಕ್ಕೆ ಸಮಾನವಾಗಿತ್ತು. ೪೮. ತನ್ನನ್ನು ನೋಡುತ್ತಿರುವ ನೂತನ ವಧೂಜನರುಗಳ ಕಣ್ಣುಗಳ ನುಣ್ಣನೆಯ ಕಾಂತಿಯು ವ್ಯಾಪಿಸಿತೋ ಎಂಬಂತೆ ಮೂಡಿ ಮನೋಹರವಾಗಿ ಕಾಣುವ ಚಂದ್ರನನ್ನು ಸುತ್ತುವರಿದಿದ್ದ ಆ ಕೆಂಪಾದ ಬೆಳಗು ಸ್ವಲ್ಪ ಸ್ವಲ್ಪವಾಗಿ ಮಾಯವಾಗಿ ಬಿಳಿಯ ಪ್ರಕಾಶವು ಅಧಿಕವಾಯಿತು. ೪೯. ಕುಂಭಸ್ಥಳದ ಮದೋದಕವನ್ನು ಒರೆಸಲು ಕಪ್ಪು ಹತ್ತಿರಲಾಗಿ, ಫೂತ್ಕಾರ ಮಾಡಿದಾಗ ಸಿಡಿದ ನೀರಿನ ಹನಿಗಳಂತೆ ನಕ್ಷತ್ರಗಳು ಕಾಣುತ್ತಿರಲು, ಆ ಚಂದ್ರನು ಇಂದ್ರನ ಐರಾವತದ ಸೊಂಡಿಲಿನ ಹಾಗೆ ಏನು ಮನೋಹರವಾಗಿ ಕಂಡನೋ! ೫೦. ನೀಲಾಕಾಶವೆಂಬ ಅಚ್ಯುತನ ಹಣೆಯ ಪ್ರದೇಶದಿಂದ ಸಾಲಿಟ್ಟು ಒಂದೇ ಸಮನೆ ತೊಟ್ಟಿಕ್ಕುವ ರಕ್ತಧಾರೆಗಳ ಹಾಗೆ ಹಬ್ಬಿದ ಸಂಧ್ಯಾಕಾಲದ ಕೆಂಪು ತೋರುತ್ತಿರಲು, ಅವುಗಳನ್ನೆಲ್ಲ ಕಾಲನೆಂಬ ರುದ್ರನು ಚಂದ್ರ ಮಂಡಲವೆಂಬ ಕಪಾಲವನ್ನು ಕೈಯಲ್ಲಿ ಹಿಡಿಯಲಾಗಿ, ಆ ಕಪಾಲವೇ ಅದನ್ನೆಲ್ಲ ಕುಡಿಯಿತೋ ಎನ್ನುವಂತೆ, ಎಳೆಯ ಮಾವಿನ ಚಿಗುರಿನ ದ್ಯುತಿಗೆ ಸಮಾನವಾದ ಆ

ಮ॥ಸ್ರ॥ ಅಮಿತಾಖಿಂಡಾಂತರಿಕ್ಷೋನ್ನತನುತ ಶಿವಲಿಂಗಾಂಘ್ರಿಯಂ ನೋಡಲುದ್ಯ
ತ್ತಮವೆಂಬಾ ಸೂಕರಾಕಾರದ ಹರಿಧರೆಯೊಳ್ಪೊಕ್ಕುಪೊಲ್ ಪೋಗೆ ತಲ್ಲಿಂ
ಗಮಹಾಶೀರ್ಷಾಗ್ರಮಂ ನೋಡುವ ಜವದೆ ಮರಾಳಾಂಗಮಂ ತಾಳ್ದಜಂ ಸಂ
ಭ್ರಮದಿಂ ಪಾರ್ವಂತೆ ಕಣ್ಗೊಪ್ಪಿದುದಮೃತಕಳಾಪೂರಿತಾಂಗಂ ಸುಧಾಂಗಂ ೫೧

ವ॥ ಮತ್ತಂ

ಕಂ॥ ಚೆನ್ನಾದುದಮೃತಕರಬಿಂ
ಬಂ ನೋಳ್ಪರ ಕಣ್ಗೆ ಜೊನ್ನವೆಂಬ ಮಹೇಶಂ
ತನ್ನವಿಯಚ್ಚಿಕುರದೊಳಿ ಸ
ಮುನ್ನತ ಸಿತ ನೀರಜಾತಮಂ ಸೂಡಿದವೋಲ್ ೫೨

ಮತ್ತಕೋಕಿಲ॥ ಭಗಣ ಮೌಕ್ತಿಕಧರಾಭ್ರ ಕೃಷ್ಣನಂ
ದಗಿಯಲಿಂದ್ರ ಹರಿದದ್ರಿಭಾಂಡದಿಂ
ತೆಗೆದು ತಾಳ್ದ ನವನೀತ ಪಿಂಡಮಂ
ಬಗೆಯೆ ಪೋಲ್ತುದಮೃತಾಂಶುಮಂಡಲಂ ೫೩

ಉ॥ ವ್ಯೋಮಶ್ರೀಪತಿ ಪಾಂಚಜನ್ಯಮುಡುಮಾರ್ಗಾಗಾರ ಮುಕ್ತಾಮಯೋ
ದ್ದಾಮ ಶ್ರೀಕಳಶಂ ನಭೋಂಬುಧಿ ಸಿತಾಂಭೋಜಂ ವಿಯದ್ದಂತಿ ವ
ಕ್ತ್ರಾಮೋದಾವಹ ಚಂದ್ರಕಾಂತಮುಕುರಂ ಚೆಲ್ವಾದುದಾಕಾಶಮಾ
ರಾಮಾಜಾತ ಸಿತಾತಪತ್ರಮುವದಾತಂ ಬಿಂಬಮುಬ್ಜಾರಿಯಾ ೫೪

ಕೆಂಪು ಆ ಕ್ಷಣವೇ ಇಲ್ಲದಂತಾಯಿತು. ೫೧. ಅಮಿತವಾಗಿ ಅಖಂಡವಾಗಿಯೂ ಭ್ಯೂಮ್ಯಾಕಾಶಗಳನ್ನೆಲ್ಲ ವ್ಯಾಪಿಸಿನಿಂತ ಉನ್ನತವಾದ ಶಿವಲಿಂಗದ ಅಡಿಯನ್ನು ನೋಡುತ್ತೇನೆಂದು ವಿಶೇಷವಾದ ತನುವೆಂಬ ಹಂದಿಯ ಆಕಾರವನ್ನು ಹೊಂದಿದ ವಿಷ್ಣುವು ಭೂಮಿಯನ್ನು ಹೊಕ್ಕಹಾಗೆ ಆ ತನುವು ಹರಿಯಿತು. ಆ ಮಹಾಶಿವಲಿಂಗದ ತಲೆಯನ್ನು ನೋಡುತ್ತೇನೆಂದು ಬ್ರಹ್ಮನು ತೀವ್ರವಾಗಿ ಹಂಸಪಕ್ಷಿಯನ್ನೇರಿ ಸಂಭ್ರಮದಿಂದ ಹಾರಿಹೋಗುವ ಹಾಗೆ ಅಮೃತಕಳೆಯಿಂದ ತುಂಬಿದ ಅಂಗವುಳ್ಳ ಚಂದ್ರಮಂಡಲವು ಕಣ್ಣಿಗೆ ಮನೋಹರವಾಗಿ ಕಂಡಿತು. ವ॥ ಮತ್ತು ೫೨. ಬೆಳದಿಂಗಳೆಂಬ ಮಹೇಶ್ವರನು ತನ್ನ ಆಕಾಶವೆಂಬ ಕೂದಲಿನಲ್ಲಿ ಬಹುಶ್ರೇಷ್ಠವಾದ ಒಂದು ಬಿಳಿಯ ಕಮಲವನ್ನು ಮುಡಿದುಕೊಂಡ ಹಾಗೆ, ಆ ಚಂದ್ರಮಂಡಲವು ನೋಡುವವರ ಕಣ್ಣಿಗೆ ಮನೋಹರವಾಗಿ ಶೋಭಿಸುತ್ತಿತ್ತು. (ಆಕಾಶವೇ ಶಿವನ ಜಡೆ ಎಂದು ಪ್ರಸಿದ್ಧವಿರುವುದು) ೫೩. ನಕ್ಷತ್ರವೆಂಬ ಮುತ್ತುಗಳನ್ನು ಧರಿಸಿರುವಂತಹ ಆಕಾಶವೆಂಬ ಶ್ರೀ ಕೃಷ್ಣನು ತಿನ್ನುವುದಕ್ಕೋಸ್ಕರವಾಗಿ ಇಂದ್ರದಿಕ್ಕಿನಲ್ಲಿರುವ ಪರ್ವತವೆಂಬ ಭಾಂಡದಿಂದ ತೆಗೆದ ಬೆಣ್ಣೆಯ ಮುದ್ದೆಯನ್ನು ಆ ಅಮೃತಕಿರಣನಾದ ಚಂದ್ರಮಂಡಲವು ಹೋಲುತ್ತಿತ್ತು. ೫೪. ಶುಭ್ರವಾದ ಆ ಚಂದ್ರಬಿಂಬವು ಆಕಾಶವೆಂಬ ಲಕ್ಷ್ಮೀಪತಿಯಾದ ಶ್ರೀ ಕೃಷ್ಣನ ಪಾಂಚಜನ್ಯದಂತೆಯೂ, ಆಕಾಶವೆಂಬ ಗೃಹಕ್ಕೆ ಮುತ್ತಿನಿಂದ ಮಾಡಿದ ಶ್ರೇಷ್ಠವಾದ ಕಳಶದ ಹಾಗೆಯೂ, ಆಕಾಶವೆಂಬ ಸಮುದ್ರದ ಬಿಳಿಯಕಮಲದ ಹಾಗೆಯೂ, ಆಕಾಶವೆಂಬ

ಕಂ॥ ಚಂಚಚ್ಚಕೋರಪಾಂಥರ್
ಮುಂಚುವ ಸಂಭ್ರಮದಿನೀಂಟಿ ರಜನೀಪತಿ ಶೋ
ಭಾಂಚಿತ ಹಿಮಕರಕಲಶದಿ
ನೇಂ ಚಂದ್ರಿಕೆಯೆಂಬ ಜಲಮನೆಱೆದಳೊ ನಭದೊಳ್ ೫೫

ತಮಮೆಂದು ವಿಧುಂತುದನಾ
ಮಮನಿಟ್ಟದಱಿಂಗರುಚಿಯನಾಂತುದಿದೆಂದಾ
ಹಿಮರುಚಿಕರದಿಂ ಸದೆದಂ
ತಿಮಿರಮನಿನಿಸುಳಿಯದಂತೆ ಬಿಡದೆಲ್ಲೆಡೆಯೊಳ್ ೫೬

ಎಳೆವಳುಕಿನ ಕರಗದೊಳು
ಜ್ವಳಜಳಮಂ ತೀವಿ ರಜನಿ ಪರಿಮಳಕೆಂದು
ತ್ಪಳಮಿಳಿಪಿದೊಡದು ತೋರ್ಪವೊ
ಲಳಿಮಳಿನಂ ಶಶಿಕಳಂಕಮೇಂ ರಂಜಿಸಿತೋ ೫೭

ಚಂ॥ ಭುವನಮನೆಲ್ಲಮಂ ಪುದಿದು ತೀವಿದ ಚಂದ್ರಿಕೆಯೆಂಬ ಪಾಲ್ಗಡ
ಲ್ತವಕದಿನೆನ್ನ ಪುತ್ರನಿನಿಳಾಜನವೀಕ್ಷಿಸೆ ದೃಷ್ಟಿಪಾತದಿಂ
ನವೆದಪನೆಂದು ತೂಪಿಱಿದ ಸೀಕರದಂತಿರೆ ತಾರಕಾಳಿಯೊ
ಪ್ಪುವ ಪಣೆಗಿಟ್ಟ ಕಜ್ಜಳದ ಬೊಟ್ಟಿನವೊಲೊಪ್ಪಿದುದಿಂದುಲಾಂಛನಂ ೫೮

ಆನೆಯ ಹಣೆಯಲ್ಲಿ ಕಟ್ಟಿರುವ ಮೋದವನ್ನುಂಟುಮಾಡುವಂಥ ಚಂದ್ರಕಾಂತಶಿಲೆಯಿಂದ ಮಾಡಿದ ಕನ್ನಡಿಯ ಹಾಗೆಯೂ, ಆಕಾಶಲಕ್ಷ್ಮಿಯೆಂಬ ವನಿತೆಯ ಬಿಳಿಯ ಕೊಡೆಯಂತೆಯೂ ಚೆಲುವಾಗಿತ್ತು. ೫೫. ಶೋಭಿಸುವ ಚಕೋರಪಕ್ಷಿಗಳೆಂಬ ದಾರಿಹೋಕರಿಗೆ ಸಂಭ್ರಮದಿಂದ ಕುಡಿಯುವುದಕ್ಕೆ ರಾತ್ರಿಯೆಂಬ ಸ್ತ್ರೀಯು ಶೋಭಾಮಯವಾದ ಚಂದ್ರನೆಂಬ ಕೊಡದಿಂದ ಬೆಳದಿಂಗಳೆಂಬ ನೀರನ್ನು ಆಕಾಶದಲ್ಲಿ ಎರೆಯುತ್ತಿರುವಳೋ ಎಂಬಂತೆ ಬೆಳದಿಂಗಳು ಇತ್ತು. ೫೬. ರಾಹುವಿನ 'ತಮ' ಎಂಬ ಹೆಸರನ್ನು ಪಡೆದುದಲ್ಲದೆ ಆತನ ಬಣ್ಣವನ್ನೂ ಧರಿಸಿದೆಯೆಂದು (ಕೋಪದಿಂದ) ಆ ಕತ್ತಲೆಯನ್ನು ಸ್ವಲ್ಪವೂ ಉಳಿಸದಂತೆ ತನ್ನ ಬೆಳದಿಂಗಳೆಂಬ ಕೈಗಳಿಂದ ಚಂದ್ರನು ಹೊಡೆದೋಡಿಸಿದನು. ೫೭. ರಾತ್ರಿಯೆಂಬ ಸ್ತ್ರೀಯು ಎಳೆಯ ಸ್ಫಟಿಕಶಿಲೆಯ ಕಲಶದಲ್ಲಿ ನೀರನ್ನು ತುಂಬಿ, ಆ ನೀರು ಪರಿಮಳಗೊಳ್ಳಬೇಕೆಂದು ಕನ್ನೈದಿಲೆಯನ್ನು ಅದರಲ್ಲಿ ಇಡಲು, ಅದರಲ್ಲಿನ ದುಂಬಿಯಂತೆ ಚಂದ್ರನಲ್ಲಿನ ಕಪ್ಪಾದ ಕಳಂಕವು ಅದೇನು ಶೋಭಿಸಿತೋ! ೫೮. ಜಗತ್ತನ್ನೆಲ್ಲ ದಟ್ಟವಾಗಿ ವ್ಯಾಪಿಸಿರುವ ಬೆಳದಿಂಗಳೆಂಬ ಕ್ಷೀರಸಮುದ್ರವು, ನನ್ನ ಮಗನ ಸೌಂದರ್ಯವನ್ನು ಜಗತ್ತಿನ ಜನರೆಲ್ಲ ನೋಡುವುದರಿಂದ ದೃಷ್ಟಿಪಾತದೋಷವುಂಟಾಗಿ ನವೆದು ಹೋಗುತ್ತಾನೆಂದು ಭಾವಿಸಿ, ಭಯದಿಂದ ಉಃಪೆಂದು ಊದಿದ ಹನಿಗಳಂತೆ ನಕ್ಷತ್ರಸಮೂಹವೂ, ಕಾಡಿಗೆಯ ಬೊಟ್ಟನ್ನು (ಹಣೆಗೆ) ಇಟ್ಟಹಾಗೆ ಚಂದ್ರ

ಮ॥ಸ್ರ॥ ತಿಮಿರೋದ್ಯದ್ಯಮುನಾತರಂಗಿಣಿಪಿತಂ ತಾನೆತ್ತ ಪೋದಂ ಗಡಂ
ದು ಮಹಾದುಃಖದಿನೇಟು ದಿಕ್ಕಿನೊಳೆ ನೋಡುತ್ತಿಪ್ಪುದುಂ ಕೊಡೆ ಚಂ
ದ್ರಮಃಸಾರಕ್ತೆವೆತ್ತು ಮತ್ತುದಿಸೆ ತಾತ ಭ್ರಾಂತಿಯಿಂದಪ್ಪಿದ
ಳ್ಕ್ರಮದಿಂದೇಬವೊಲಿಂಬುವೆತ್ತುದು ಕಳಂಕಂ ತತ್ಸುಧಾಧಾಮನಾ ೫೯

ಚಂ॥ ಗಿರಿಶಲಲಾಟಲೋಚನ ಧನಂಜಯನಿಂ ಪರಿದಗ್ಧನಾದ ಭಾ
ಸುರಕುಸುಮೇಷು ಪಂಕರುಹನಾಭನನಾಭಿಸಿತಾಂಬುಜಾತದೊಳ್
ಮರಳಿ ಜಲಕ್ಕನುದ್ಭವಿಪನೆಂಬವೊಲೊಪ್ಪಿದುದಭ್ರಮಧ್ಯದೊಳ್
ಕರಮೆಸೆದಿರ್ಪ ಚಂದ್ರಮನ ನುಣ್ಗರೆ ನೋಳ್ಪೊಡದೊಂದು ಚೆಲ್ವಿನಿಂ ೬೦

ಕಂ॥ ಇದು ಪೂರ್ವದಿಶಾವಧುವೆ
ತ್ತಿದ ಶಶಿಮಣಿಮುಕುರಮಮೃತಕರಮಂಡಳಮ
ಲ್ತಿದು ಚಿಹ್ನಮಲ್ತು ಮಧ್ಯದೊ
ಳೊದವಿದ ಮಾರ್ಪೊಳಪು ವಿಷ್ಣುಪದವಿಷ್ಣು ವಿನಾ ೬೧

ರಥೋದ್ಧತ॥ ಚಂದ್ರಿಕಾಜಳಧಿ ತೀವಿ ಲೋಕಮಂ
ಸಾಂದ್ರಮಾಗಿ ನೆಗೆದುರ್ಪ ಭೀತಿಯಿಂ
ಚಂದ್ರಮಧ್ಯವಟಪತ್ರದಲ್ಲಿ ಲ
ಕ್ಷ್ಮೀಂದ್ರನಿರ್ಪನೆನೆ ಲಕ್ಷ್ಮವೊಪ್ಪುಗುಂ ೬೨

ಮಧ್ಯದ ಕಪ್ಪು ಶೋಭಿಸುತ್ತಿತ್ತು. ೫೯. ಶ್ರೇಷ್ಠಳಾದ ಕತ್ತಲೆಯೆಂಬ ಯಮುನಾ ನದಿಯು ತನ್ನ ತಂದೆಯಾದ ಸೂರ್ಯನು ಎಲ್ಲಿ ಹೋದನೋ ಎಂದು ಅತಿಶಯವಾದ ದುಃಖದಿಂದ ಕೂಡಿದವಳಾಗಿ, ಅವನನ್ನು ಅಷ್ಟದಿಕ್ಕುಗಳಲ್ಲಿ ನೋಡುತ್ತಿರಲಾಗಿ ಕೆಂಪಾದ ಬಣ್ಣದಿಂದ ತುಂಬಿ ಚಂದ್ರನು ಉದಯಗೊಂಡು ಎದುರಿಗೆ ಸಿಗಲಾಗಿ, ಅವನನ್ನೇ ತನ್ನ ತಂದೆಯೆಂದು ಭ್ರಾಂತಿಯಿಂದ ತಿಳಿದು ಅಪ್ಪಿಕೊಂಡ ಕ್ರಮದಿಂದಲೋ ಎಂಬಂತೆ, ಆ ಚಂದ್ರನ ಮಧ್ಯದಲ್ಲಿ ಕಪ್ಪುಬಣ್ಣದ ಕಲಂಕವು ಶೋಭಿಸುವುದಾಗಿತ್ತು. ೬೦. ಚಂದ್ರಮಂಡಲದ ನುಣ್ಣನೆಯ ಕಪ್ಪುಲಾಂಛನವು, ಪರಮೇಶ್ವರನ ಹಣೆಗಣ್ಣಿನ ಬೆಂಕಿಯಿಂದ ಸುಟ್ಟುಹೋದ ಪುಷ್ಪಬಾಣನಾದ ಮನ್ಮಥನು ವಿಷ್ಣುವಿನ ನಾಭಿಯ ಬಿಳಿಯ ಕಮಲದಲ್ಲಿ ಪುನಃ ತಟ್ಟನೆ ಹುಟ್ಟುತ್ತಿರುವನೆಂಬ ಹಾಗೆ ಆಕಾಶಮಧ್ಯದಲ್ಲಿ ನೋಡುವುದಕ್ಕೆ ಅದೊಂದು ಅಪೂರ್ವ ಚೆಲುವಿನಿಂದ ಕಾಣುತ್ತಿತ್ತು. ೬೧. ಇದು ಚಂದ್ರಮಂಡಲವಲ್ಲ; ಪೂರ್ವದಿಕ್ಕೆಂಬ ಸ್ತ್ರೀಯಳು ಎತ್ತಿಹಿಡಿದ ಚಂದ್ರಕಾಂತ ಶಿಲೆಯ ಕನ್ನಡಿ. ಚಂದ್ರಮಂಡಲ ಮಧ್ಯದಲ್ಲಿರುವುದು ಕಪ್ಪು ಚಿಹ್ನೆಯಲ್ಲ; ಅದು ವಿಷ್ಣುವಿನ ಪಾದವೆನಿಸಿದ ಆಕಾಶದಲ್ಲಿರುವ, ಆ ವಿಷ್ಣು ಪಾದದ ಪ್ರತಿಬಿಂಬ. ೬೨. ಬೆಳದಿಂಗಳೆಂಬ ಸಮುದ್ರವು ಲೋಕವನ್ನೆಲ್ಲ ದಟ್ಟವಾಗಿ ತುಂಬಲು, ಪ್ರಳಯಕಾಲವುಂಟಾಯಿತೆಂಬ ಭೀತಿಯಿಂದ ಚಂದ್ರನ ಮಧ್ಯದ ಆಲದ ಎಲೆಯಲ್ಲಿ ಶ್ರೀವಿಷ್ಣುವು ಮಲಗಿದನೆನ್ನುವಹಾಗೆ ಚಂದ್ರಮಧ್ಯದ ಕಪ್ಪು ಶೋಭಿಸುತ್ತಿತ್ತು.

ಕಂ॥ ದೆಸೆವೆಣ್ಗಳಂಗಮಂ ಮಿಗೆ
ಮುಸುಕಿದ ತಿಮಿರಗ್ರಹಂಗಳಂ ಕೂರ್ಪಿಂದೋ
ಡಿಸಿದಂ ಮೃಗಾಂಕಮಾಂತ್ರಿಕ
ನಸಮಜ್ಯೋತ್ಸ್ನಾವಿಭೂತಿಯಂ ತಳಿದಾಗಳ್ ೬೩

ಎರಳೆವಱಿ ತನ್ನ ಕೋಡಿ
ಟ್ಟೊರಸಿದೊಡೆ ಸುಧಾಂಗನಂಗಮಂ ಸೀಳ್ದೆಡೆಯಿಂ
ಸುರಿದು ಪಸರಿಸಿತೊ ಪೊಸ ಪಾ
ಲ್ಸರಿಯೆನೆ ಬೆಳ್ದೊನ್ನಮಿಳಿದದೇಂ ಮುಸುಕಿದುದೋ ೬೪

ಚಂ॥ ಮಿಸುಪ ನಿಶಾನಿತಂಬಿನಿಗೆ ಬೆಳ್ಪುಡೆಯಾದುದು ಭಾನುರೋಚಿಯಿಂ
ಬಸವಳಿದೀ ಧರಾಂಗನೆಗೆ ಚಂದನಲೇಪನಮಾದುದಂಬುಜ
ಪ್ರಸರದಗಲ್ಕೆಯಿಂ ನೆಗೆದ ತುಂಬಿಗೆ ಮಲ್ಲಿಗೆಮಾಲೆಯಾದುದಾ
ಪಸಿದ ಚಕೋರಿಗಳ್ಗೆ ಸುಧೆಯಾದುದು ಕಾಂತಿ ಸುಧಾಮಯೂಖನಾ ೬೫

ವೊಗೆವೊಗೆದೀಂಟಿಯಾಂಟ ತನುಮಧ್ಯಕೆ ತಳ್ವದೆ ಸುತ್ತಿ ಸುತ್ತಿ ವೇ
ಣಿಗೆ ಮಿಗೆ ಸೂಡಿ ಸೂಡಿ ಲಲಿತಾಂಗದೊಳೊಯ್ಯನೆ ಪೂಸಿ ಪೂಸಿ ಮೆ
ಲ್ಲಗೆ ಬಿಡದೆರ್ಬಿಯೆರ್ಬಿ ಬಗೆದಂದು ಮುಳುಂಗಿ ಮುಳುಂಗಿ ಕೌತುಕಂ
ಬಗೆಗೊಳೆ ನೋಡಿ ನೋಡಿ ನಲಿದತ್ತಬಲಾಜನಮಚ್ಚಜೊನ್ನಮಂ ೬೬

೬೩. ದಿಕ್ಕುಗಳೆಂಬ ಸ್ತ್ರೀಯರ ಅಂಗಕ್ಕೆ ಮುಸುಕಿದ ಕತ್ತಲೆಯೆಂಬ ಗ್ರಹಗಳನ್ನು (ಗ್ರಹ ಸಂಬಂಧವಾದ ಪೀಡೆಯನ್ನು) ಮೃಗಾಂಕಧರನಾದ ಚಂದ್ರನೆಂಬ ಮಾಂತ್ರಿಕನು ನೂತನ ಬೆಳದಿಂಗಳೆಂಬ ಭಸ್ಮವನ್ನು ಅವರ ಮೇಲಿನ ಪ್ರೀತಿಯಿಂದ ಚಲ್ಲಿ ಓಡಿಸಿದನು. ೬೪. ಜಿಂಕೆಯ ಮರಿಯು ತನ್ನ ಕೋಡುಗಳಿಂದ ಅಮೃತಾಂಗನಾದ ಚಂದ್ರನ ದೇಹವನ್ನು ಉಜ್ಜಲಾಗಿ, ಆ ಚಂದ್ರನ ದೇಹದ ಸೀಳಿದ ಭಾಗದಿಂದ ಹೊರಬಂದ ಹೊಸ ಹಾಲಿನ ಪ್ರವಾಹವೋ ಎನ್ನುವ ಹಾಗೆ ಬಿಳಿಯ ಬಣ್ಣದ ಬೆಳದಿಂಗಳು ಇಳಿದು ಅದೇನು (ಲೋಕ ವನ್ನು) ಮುಸುಕಿತೋ ! ೬೫. ಶೋಭಿಸುವ ರಾತ್ರಿಯೆಂಬ ಸ್ತ್ರೀಗೆ ಅಮೃತಕಿರಣನಾದ ಚಂದ್ರನ ಆ ಬೆಳದಿಂಗಳು ಬಿಳಿ ಬಣ್ಣದ ಸೀರೆಯ ಉಡುಗೆಯಾಯಿತು. ಸೂರ್ಯನಕಿರಣಗಳ ಬಿಸಿಲಿನಿಂದ ಬಳಲಿದ ಭೂದೇವಿಗೆ ಚಂದನರಸದ ಲೇಪನವಾಯಿತು. ಕಮಲಗಳನ್ನು ಅಗಲಿ ಹಾರಿದ ದುಂಬಿಗಳಿಗೆ ಮಲ್ಲಿಗೆಯ ಮಾಲೆಯಾಯಿತು. ಹಸಿದ ಚಕೋರಪಕ್ಷಿಗಳಿಗೆ ಅಮೃತರಸವಾಯಿತು. ೬೬. ಅಬಲೆಯರಾದ ಸ್ತ್ರೀಯರು ಹೊಚ್ಚಹೊಸ ಬೆಳದಿಂ ಗಳನ್ನು ತುಂಬಿ ತುಂಬಿ ಕುಡಿದು, ತಮ್ಮ ತಮ್ಮ ದೇಹಮಧ್ಯಕ್ಕೆ ಸುತ್ತಿ ಸುತ್ತಿ, ಮುಡಿಗೆ ಧರಿಸಿಕೊಂಡು, ಬಳ್ಳಿಯಂತಹ ತಮ್ಮ ದೇಹಕ್ಕೆ ಮೆಲ್ಲಮೆಲ್ಲನೆ ಪೂಸಿ ಪೂಸಿಕೊಂಡು, ಮೆಲ್ಲಗೆ ಬಿಡದೆ ಅದನ್ನು ಎಬ್ಬಿ ಎಬ್ಬಿ, ಬಗೆ ಬಗೆದು ಅದರಲ್ಲಿ ಮುಳು ಮುಳುಗಿ, ಕುತೂ

ಮ॥ಸ್ರ॥ ಧರೆಯೆಲ್ಲಂ ಚಾರುಚಂದ್ರೋಪಳವಿರಚಿತಮಾದಂತೆ ತೋರ್ದತ್ತು ಮೇಲಂ
ಬರಮೆಲ್ಲಂ ಕೂಡೆ ಧೌತಾಂಬರದ ನವವಿತಾನಂಬೊಲಿಂಬಾದುದಾಶೋ
ತ್ಕರಮೆಲ್ಲಂ ಚಂದನಾಲೇಪನದೆ ಬಳೆದವೊಲೊಪ್ಪುತಿರ್ದತ್ತು ಧಾತ್ರೀ
ನರರೆಲ್ಲಂ ಚಂದ್ರಸಾರೂಪ್ಯಮನೆ ಪಡೆದರೆಂಬಂತೆ ಕಣ್ಗೊಪ್ಪುತಿರ್ದರ್ ೬೭

ಚಂ॥ ಗಗನಮೆನಿಪ್ಪ ಪಾಳ್ವೊಲದೊಳರ್ಕಸಮುದ್ಭೃತಿಗೆಯ್ದು ಸಂಜೆಯಿಂ
ಬಗಿನಿಯನಿಟ್ಟು ಮರ್ಬೆನಿಪ ಗೊಬ್ಬರಮಂ ತಳದಲ್ಲಿ ಚೆಲ್ಲಿ ತಾ
ರಗೆಗಳೆನಿಪ್ಪ ಬಿಳ್ತುಗಳನಂತವಕ್ಕೆಂದವಬಿಂಬರೌಪ್ಯ ಕುಂ
ಭಗತ ಸುಧಾಮರೀಚಿಜಳಮಂ ಸುರಿದಂ ಸಲೆ ಕಾಲಪಾಮರಂ ೬೮

ಮ॥ ಇದು ಚಂದ್ರಾತಪಮಲ್ತು ತೀವಿದ ಸುಧಾವಾರಾಕರಂ ಮೇಲೆ ತೋ
ರ್ಪುದಿದಂಭೋಜವಿರೋಧಿಮಂಡಳಮುಮಲ್ಲಲ್ಲೀಸುತಿರ್ಪಂಚೆ ಮ
ತ್ತಿದು ತಾಂ ಲಾಂಛನಮಲ್ತು ತದ್ವನದೊಳ್ಕರ್ಚಿರ್ದ ನೀಲಾಬ್ಜಮಿಂ
ತಿದು ತಾರಾತತಿಯಲ್ತು ಪಕ್ಷಯುಗಳವ್ಯಾಕೀರ್ಣಬಿಂದುವ್ರಜಂ ೬೯

ವ॥ ಎಂಬ ಸಂಭ್ರಮಮನಪ್ಪುಕೈದೊಪ್ಪುವ ಸಾಂದ್ರಚಂದ್ರಿಕಾಸಂಪದಮನಭೀಕ್ಷಿಸಿ

ಹಲವು ಅಧಿಕವಾಗುತ್ತಿರಲು ನೋಡುತ್ತ ನೋಡುತ್ತ ಸಂತೋಷಪಡುತ್ತಿದ್ದರು. ೬೭. ಆ ಚಂದ್ರನ ಬೆಳದಿಂಗಳಿನಿಂದ ಭೂಭಾಗವೆಲ್ಲ ಚಂದ್ರಕಾಂತಶಿಲೆಯಿಂದ ರಚನೆಗೊಂಡ ಹಾಗೆ ಕಾಣುತ್ತಿತ್ತು. ಮೇಲ್ಭಾಗದಲ್ಲಿ ಆಕಾಶಮಂಡಲವೆಲ್ಲ ಬಿಳಿಯ ವಸ್ತ್ರದ ನೂತನ ಸಮೂಹ ವನ್ನು ಬಿಗಿದ ಹಾಗೆ ಕಾಣುತ್ತಿತ್ತು. ದಿಕ್ಕುಗಳ ಸಮೂಹವೆಲ್ಲವು ಚಂದನರಸದ ಅನುಲೇಪನ ಮಾಡಿದಹಾಗೆ ಶೋಭಿಸುತ್ತಿತ್ತು. ಭೂಮಿಯಲ್ಲಿನ ಜನರೆಲ್ಲ ಚಂದ್ರನ ಸಾರೂಪ್ಯವನ್ನೇ, ಅಂದರೆ ಚಂದ್ರನ ಸ್ವರೂಪವನ್ನೇ ಪಡೆದಿರುವರೋ ಎಂಬ ಹಾಗೆ ನೋಡುವ ಕಣ್ಣುಗಳಿಗೆ ಕಾಣುತ್ತಿದ್ದರು. ೬೮. ಆಕಾಶವೆಂಬ ಬೀಳುಬಿದ್ದ ಹೊಲ ದಲ್ಲಿದ್ದ ಎಕ್ಕದ ಗಿಡಗಳನ್ನು ಕಿತ್ತು ಹಾಕಿ (ಸೂರ್ಯನ ಸಂಬಂಧ ತಾಪವನ್ನು ಕಿತ್ತು ಹಾಕಿ), ಸಂಧ್ಯಾಕಾಲವೆಂಬ ಅಗ್ನಿಯನ್ನು ಅದಕ್ಕೆ ಹಚ್ಚಿ ಸುಟ್ಟುಹಾಕಿ, ಕತ್ತಲೆಯೆಂಬ ಗೊಬ್ಬರ ವನ್ನು (ಆ ಭೂಮಿಗೆ) ಸೂಸಿ ಚೆಲ್ಲಿ, ನಕ್ಷತ್ರಗಳೆಂಬ ಬೀಜಗಳನ್ನು ನಾಟಿ, ಅವಕ್ಕೆ ಚಂದ್ರಮಂಡಲವೆಂಬ ಬೆಳ್ಳಿಯ ಬಿಂದಿಗೆಯಿಂದ ಬೆಳದಿಂಗಳೆಂಬ ಜಲವನ್ನು ಕಾಲನೆಂಬ ಕೃಷೀವಲನು (ವ್ಯವಸಾಯಗಾರನು) ಚೆನ್ನಾಗಿ ಸುರಿದನು. ೬೯. ಇದು ಬೆಳದಿಂಗಳಲ್ಲ; (ಜಗತ್ತನ್ನೆಲ್ಲ) ತುಂಬಿದ ಹಾಲಿನ ಸಮುದ್ರ. ಮೇಲ್ಭಾಗದಲ್ಲಿ ತೋರುತ್ತಿರುವ ಇದು ಚಂದ್ರ ಮಂಡಲವಲ್ಲ; (ಆ ಹಾಲಿನ ಸಮುದ್ರದಲ್ಲಿ) ಈಸುತ್ತಿರುವ ಹಂಸಪಕ್ಷಿ. ಮತ್ತೆ ಕಾಣುವ ಕಪ್ಪು ಚಂದ್ರನ ಲಾಂಛನವಲ್ಲ; ಆ ಹಂಸದ ಬಾಯಲ್ಲಿ ಕಚ್ಚಿದ ನೀಲಕಮಲ. ಸುತ್ತಲೂ ಕಾಣುತ್ತಿರುವುದು ನಕ್ಷತ್ರ ಸಮೂಹವಲ್ಲ; ಈಸುವ ಹಂಸಪಕ್ಷಿಯ ರೆಕ್ಕೆಗಳಿಂದ ಸಿಡಿದು ವಿಸ್ತಾರಗೊಂಡ ಹನಿಗಳ ಸಮೂಹ. ವ॥ ಹೀಗಿರುವ ಸಂಭ್ರಮವನ್ನೊಳಕೊಂಡು

ಚಂ॥ ಅವಧರಿಸೆನ್ನ ಬಿನ್ನಪಮನುರ್ವಿಪ ಪರ್ವಿದ ಪಾರ್ವಣೇಂದುಸಂ
ಭವನವರುಂದ್ರಚಂದ್ರಿಕೆಯೊಳಾಂಪ್ಪುದು ರಾತ್ರಿವಿಹಾರಕೇಳಿಯು
ತ್ಸವಮನೆನುತ್ತೆ ಕೈಮುಗಿದ ನಾಗರಿಕಂಗುಡಲಿತ್ತು ತಳ್ವದೇ
ಳ್ದವನಿಪರೂಪ ಪಂಚಶರನೋಲಗದಿಂ ನಡೆತಂದನಲ್ಲಿಯಿಂ ೭೦

ವ॥ ಅಂತೈತಂದಂತಃಪುರಮಂ ಪೊಕ್ಕು ಸುಗಂಧೋದಕಕೃತಸ್ನಾನನುಂ ವಿಭೂತಿ ರುದ್ರಾಕ್ಷವಿಳಸಿತ ಕಳೇವರನುಂ ಪರಿರಚಿತ ಶಿವಲಿಂಗಸಮರ್ಚನ ತತ್ಪ್ರಸಾದ ಪಾದೋದಕಾಸ್ವಾದನ ಸಂತುಷ್ಟಹೃದಯನುಂ ಸಾರಕರ್ಪೂರ ಸುರಭಿಪರಿಮಿಳಿತ ತಾಂಬೂಲ ನಿಜಮುಖಾಂತರ್ವಳಯನುಂ ಸರಸಪರಿಮಳಮಧುರಮಾಲತೀ ಮಾಲಿಕಾಲಂಕೃತ ಮನೋಜ್ಞ ಕಬರೀಭರನುಂ ಮೃಗಮದ ಲಲಾಮಸಿತಲಲಾಟತಟನುಂ ಅಮಳ ಮೌಕ್ತಿಕ ಕರ್ಣಾಭರಣ ಕಮನೀಯ ಮುಖಮಂಡಳನುಂ ಭಗಣಭಾಸುರರುಚಿನಿಚಯ ನಿಚಿತರುಚಿರತರ ತಾರಾಹಾರ ರಮಣೀಯ ವಿತತೋರಸ್ಥಳನುಂ ಅತಿ ವಿಶದವಜ್ರಮಣಿಖಚಿತ ಕಂಕಣಾಭಿರಾಮ ಕರಾಗ್ರನುಂ ಅನೇಕ ಮಣಿಗಣಾಗಣಿತ ಭೂಷಣಭೂಷಿತಾ

ಶೋಭಿಸುವ ದಟ್ಟವಾದ ಚಂದ್ರನ ಬೆಳಕಿನ ಸಂಪತ್ತನ್ನು ನೋಡಿ ೭೦. "ಮಹಾ ರಾಜನೇ, ನನ್ನ ವಿಜ್ಞಾಪನೆಯನ್ನು ಚಿತ್ತೈಸಿರಿ. ಈ ಪೌರ್ಣಿಮೆಯ ಚಂದ್ರನಿಂದ ಹೊರಹೊಮ್ಮಿದ ನೂತನವೂ ಮನೋಹರವೂ ಆದ ಬೆಳದಿಂಗಳಲ್ಲಿ ರಾತ್ರಿವಿಹಾರಕೇಳಿ ಯನ್ನು ಆಚರಿಸಬೇಕು." ಹೀಗೆಂದು ಕೈಮುಗಿದು ಹೇಳಿದ ನಾಗರಿಕನಿಗೆ ಉಡುಗೊರೆ ಯನ್ನಿತ್ತು, ತಡಮಾಡದೆ ಆ ರಾಜರೂಪದ ಮನ್ಮಥನು ಓಲಗದಿಂದ ಸಂತೋಷವಾಗಿ ಹೊರಹೊರಟನು. ವ॥ ಹಾಗೆ ಬಂದು ಅಂತಃಪುರವನ್ನು ಪ್ರವೇಶಿಸಿ, ಸುಗಂಧೋದಕ ದಲ್ಲಿ ಸ್ನಾನಮಾಡಿ, ದೇಹದಲ್ಲಿ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಶೋಭೆಗೊಂಡು, ಶಿವಲಿಂಗಪೂಜೆಯನ್ನು ಮಾಡಿ, ಆ ಶಿವಲಿಂಗದ ಪ್ರಸಾದ ಪಾದೋದಕಾದಿಗಳನ್ನು ಸ್ವೀಕರಿಸಿ ಸಂತುಷ್ಟಿಗೊಂಡ ಹೃದಯವುಳ್ಳವನಾಗಿ, ಸಾರವತ್ತಾದ ಪಚ್ಚಕರ್ಪೂರದ ಸುಗಂಧದಿಂದ ಕೂಡಿದ ತಾಂಬೂಲವನ್ನು ಹಾಕಿಕೊಂಡು ಸುವಾಸನೆಯಿಂದ ಕೂಡಿದ ಮುಖವುಳ್ಳವನಾಗಿ, ಮಕರಂದಭರಿತವೂ ಪರಿಮಳಪೂರ್ಣವೂ ಮೃದು ಮಧುರವೂ ಆದ ಮಾಲತೀಪುಷ್ಪಮಾಲೆಗಳಿಂದ ಅಲಂಕಾರಗೊಂಡ ಮನೋಹರ ಮುಡಿ ಯುಳ್ಳವನಾಗಿ, ಕಸ್ತೂರಿಯ ತಿಲಕದಿಂದ ಕೂಡಿದ ಬಿಳಿಯಹಣೆಯುಳ್ಳವನಾಗಿ, ಶ್ರೇಷ್ಠವಾದ ಮುತ್ತುಗಳಿಂದ ಮಾಡಿದ ಕರ್ಣಕುಂಡಲಗಳಿಂದ ಮನೋಹರಗೊಂಡ ಮುಖಮಂಡಲವುಳ್ಳವನಾಗಿ, ನಕ್ಷತ್ರಗಳಂತೆ ಹೊಳೆಯುವ ಕಿರಣಸಮೂಹದಿಂದ ಕೂಡಿದ ಮನೋಹರವಾದ ಇಪ್ಪತ್ತೇಳುಮುತ್ತುಗಳ ಹಾರದಿಂದ ರಮಣೀಯವಾದ ವಿಸ್ತಾರ ಎದೆಯುಳ್ಳವನಾಗಿ, ದೊಡ್ಡ ದೊಡ್ಡ ವಜ್ರದ ಮಣಿಗಳನ್ನು ಕೆತ್ತಿದ ಕಂಕಣ ಗಳನ್ನು ಕೈಯಲ್ಲಿ ಧರಿಸಿದವನಾಗಿ, ಅನೇಕ ಬಗೆಯ ಅಸಂಖ್ಯರತ್ನಗಳ ಆಭರಣಗಳಿಂದ

ವಯುವನುಂ ಅಭಿನವಕಸ್ತೂರಿಕಾ ಕಾಶ್ಮೀರಕದಂಬ ಕರ್ದಮಾನುಲಿಪ್ತ ವಕ್ಷಸ್ಥಳನುಂ ಅತಿನವೀನ ದಿವ್ಯಾಂಬರಾವೃತ ಸೌಂದರ್ಯವಿಗ್ರಹನುಂ ಆಗಿ ನಾಗರಿಕಾದಿ ಭೋಗಸಖರಿಂದನುಕೂಲ ದಕ್ಷಿಣ ಧೃಷ್ಟ ಶಠರೆಂಬ ಶೃಂಗಾರರಸಪ್ರಧಾನನಾಯಕರಿಂ ಧೀರೋದಾತ್ತಮುಖ ಸರ್ವರಸಪ್ರಧಾನ ನಾಯಕರಿಂದಾವೃತನಾಗಿ ರಾಗದಿಂ ಸಚಿವಸುತಸಮೇತಂ ಚಂದ್ರಿಕಾವಿಹರಣಂಗೆಯ್ಯಲ್ಕ ನಂದಂದು ನೃಪೇಂದ್ರಚಂದ್ರಂ ನಿಜಕಟಾಕ್ಷವೀಕ್ಷಣ ಸಾಂದ್ರಚಂದ್ರಿಕಾದ್ವಿಗುಣಿತ ಚಂದ್ರಿಕಾವಿಳಸಿತನುಮಾಗಿ ಮದನಮದಮಧುಕರ ಮಧುರಮಾಲತೀಮಾಲಾನುಕಾರಿಯಂ ಸೂಳೆಗೇರಿಯಂ ಪುಗುತಂದಿಂದ್ರ ದಿಗ್ಭಾಗದೊಳಂದಂಬಡೆದೀದುಬಿಂಬಮನವಲೋಕಿಪಾಗಳ್ ನಾಗರಿಕಂ ಕೈಮುಗಿದು

ಕಂ॥ ಜೊನ್ನಂ ಪಾಲ್ಗಡಲಂತಿದೆ
ಜೊನ್ನೊಡಲಂ ನಳಿನನಾವೆಯಂತಿದೆ ಚಿಹ್ನಂ
ತನ್ನಂ ಪೆತ್ತಳ ತವರೆನು
ತುಂ ನೋಡಲ್ಪೋಳರ್ವ ಮದನನಂತಿದೆ ನೃಪತೀ ೭೧

ವ॥ ಮತ್ತಂತುಮಲ್ಲದೆ

ಉ॥ ಸಂಜೆಗೆ ರಾಗಮಾಗೆ ನಗೆ ನೆಯ್ದಿಲಮಂದತಮೋಸಿತಾಂಬರಂ
ತಾಂ ಜರಿದೊಪ್ಪೆ ರಾತ್ರಿಗುಡುಘರ್ಮಪಯಃಕಣಮೇಳೆ ಮೈಯೊಳಿ
ತ್ತಂ ಜವದಿಂ ನಭಸ್ಥಳಿಗೆ ಸೋಂಕಿ ಕರಾಗ್ರದೆ ಕಣ್ಗೆ ರಂಜಿಪಾ
ಮಂಜುಳಚಂದ್ರಮಂಗೆ ಮಹಿಯಲ್ಲಿ ಕಳಾನಿಧಿನಾಮಮೊಪ್ಪದೇ ೭೨

ಅಲಂಕಾರಗೊಂಡ ದೇಹವುಳ್ಳವನಾಗಿ, ನೂತನ ಕಸ್ತೂರಿ ಕುಂಕುಮಕೇಸರಿಗಳ ಸಮೂಹದ ಕೆಸರನ್ನು ಎದೆಗೆ ತೊಡೆದುಕೊಂಡವನಾಗಿ, ಹೊಸಹೊಸ ದಿವ್ಯವಸ್ತ್ರಗಳಿಂದ ಆವರಿಸಲ್ಪಟ್ಟ ಸುಂದರ ವಿಗ್ರಹನಾಗಿ, ನಾಗರಿಕನೇ ಮೊದಲಾದ ಭೋಗಸಖದಿಂದಲೂ, ಅನುಕೂಲ, ದಕ್ಷಿಣ, ಧೃಷ್ಟ, ಶಠರೆಂಬ ಶೃಂಗಾರರಸಪ್ರಧಾನರಾದ ನಾಯಕರಿಂದಲೂ ಒಡಗೂಡಿ, ಸಂತೋಷದಿಂದ ಮಿತವಚನ ಸಮೇತನಾಗಿ ಚಂದ್ರಿಕಾವಿಹಾರಮಾಡಲು ಮನಸ್ಸುಮಾಡಿ, ನೃಪೇಂದ್ರಚಂದ್ರಮನಾದ ರಾಜಶೇಖರನು, ತನ್ನ ಕಡೆಗಣ್ಣ ಕಾಂತಿ ಯೆಂಬ ದಟ್ಟವಾದ ಬೆಳದಿಂಗಳನ್ನು ಸೂಸಿ, ಚಂದ್ರನ ಬೆಳದಿಂಗಳನ್ನು ದ್ವಿಗುಣಗೊಳಿಸಿದ ಮನ್ಮಥಮದವೆಂಬ ಭೃಂಗಕ್ಕೆ ಮಧುರವಾದ ಮಾಲತೀಮಾಲೆಯಂತಿರುವ ಸೂಳೆಯ ಕೇರಿಯನ್ನು ಹೊಕ್ಕು, ಪೂರ್ವದಿಕ್ಕಿನಲ್ಲಿ ಮನೋಹರಗೊಂಡು ಕಾಣುವ ಚಂದ್ರಮಂಡಲ ವನ್ನು ನೋಡುತ್ತಿದ್ದನು. ಆಗ ನಾಗರಿಕನು ಕೈಮುಗಿದು ಹೀಗೆಂದನು : ೭೧. "ಮಹಾ ರಾಜ, ಬೆಳದಿಂಗಳು ಕ್ಷೀರಸಮುದ್ರದಂತಿದೆ, ಚಂದ್ರನು ನಳಿನದ ದೋಣಿಯಂತಿರುವನು, ತನ್ನನ್ನು ಹೆತ್ತ ಲಕ್ಷ್ಮಿಯ ತವರುಮನೆಯೆಂದು ಕ್ಷೀರಸಮುದ್ರವನ್ನು ನೋಡಲು (ದೋಣಿಯಲ್ಲಿ) ಸಾಗುತ್ತಿರುವ ಮನ್ಮಥನಂತೆ ಕಳಂಕವಿದೆ. ವ॥ ಮತ್ತು, ೭೨. ಸಂಧ್ಯೆ ಯೆಂಬ ಸ್ತ್ರೀಗೆ ಮನೋನುರಾಗವುಂಟಾಗಲು, ನಗೆಯಿಂದ ಕೂಡಿದ ನೈದಿಲೆ ಯೆಂಬ ಕಾಂತೆಯು ಕತ್ತಲೆಯೆಂಬ ನೀಲಾಂಬರವು ಜಾರಲು, ರಾತ್ರಿಗೆ ಮೈಯಲ್ಲಿ ನಕ್ಷತ್ರ ಗಳೆಂಬ ಬೆವರಿನಹನಿಗಳು ಏಳಲು, ತನ್ನ ಕಿರಣಗಳೆಂಬ ಕೈಗಳಿಂದ ನಭಃಸ್ಥಳಿಯನ್ನು

ವ॥ ಎನೆ ಮಗುಳ್ದು ಮತ್ತಮೊರ್ವನಿಂತೆಂದಂ

ಮ॥ ದ್ವಿಜಚಕ್ರಕ್ಕನಿಮಿತ್ತಮಾತ್ಮಕರದಿಂ ಸಂತಾಪಮಂ ಮಾಡಿಯುಂ
ದ್ವಿಜರಾಜಂ ಕಮಲಾರಿಯಾಗಿ ವಿಧು ಹಂಸದ್ವೇಷಿ ಮೇಣಾಗಿಯುಂ
ನಿಜದಿಂದಬ್ಜನಭಂಗಲಕ್ಷಣಯುತಂ ತಾನಾಗಿ ದೋಷಾಕರಂ
ರಜನೀಸಂಚರನಾಗಿಯುಂ ಕುವಲಯಾಪ್ತಂ ನೋಡಿದೇಂ ಚಿತ್ರಮೋ ೭೩

ವ॥ ಎನೆ ಕೇಳ್ದು ಮಿತವಚನನಿಂತೆಂದಂ

ಮ॥ ದ್ವಿಜರಾಜಾಭಿಧೆಯೊಪ್ಪದೇ ಸಸಿತಪಕ್ಷಂಗೇನನಂತಾಶ್ರಯಂ
ಗೆ ಜಗದ್ವಿಶ್ರುತಮಾಗದೇ ವಿಧುಸಮಾಖ್ಯಾನಂ ಘನಶ್ರೀಯುತಂ
ಗೆ ಜನಂ ಮೆಚ್ಚದೆಯಬ್ಜನಾಮಮನೆ ದಲ್ ದೋಷಾಕರಾಹ್ವಾನಮಾ
ರಜನೀಚಾರಿಗೆ ಸಲ್ಲದೇ ಕುವಲಯಾಪ್ತಂ ರಾಜನೇನಲ್ಲವೇ ೭೪

ಸೋಂಕುತ್ತ, ಕಣ್ಣುಗಳಿಗೆ ರಂಜನೆಯನ್ನುಂಟುಮಾಡುತ್ತ ವಿಹರಿಸುವ ಈ ಚಂದ್ರನಿಗೆ ಭೂಮಿಯಲ್ಲಿ ಕಳಾನಿಧಿ ಎಂಬ ಹೆಸರು ಒಪ್ಪದೆ ಇರುವುದೇ?" ವ॥ ಎನ್ನಲು, ಮತ್ತೊಬ್ಬನು ಹೀಗೆಂದನು : ೭೩. "ಈ ಚಂದ್ರನು ದ್ವಿಜಸಮೂಹಕ್ಕೆ ನಿಷ್ಕಾರಣವಾಗಿ ತನ್ನ ಕರಗಳಿಂದ ಸಂತಾಪವನ್ನುಂಟುಮಾಡಿದರೂ ದ್ವಿಜರಾಜನಾಗಿದ್ದಾನೆ! ಲಕ್ಷ್ಮಿಗೆ ಅರಿಯಾಗಿದ್ದರೂ ವಿಧುಬ್ರಹ್ಮ ಅಥವಾ ವಿಷ್ಣುವೆನಿಸಿದ್ದಾನೆ ! ಹಂಸಗಳಿಗೆ ದ್ವೇಷಿಯಾಗಿದ್ದರೂ ಅಬ್ಜ ಕಮಲವೆನಿಸಿದ್ದಾನೆ ! ಉತ್ತಮಲಕ್ಷಣಯುಕ್ತನಾದರೂ ದೋಷಾಕರನೆನಿಸಿದ್ದಾನೆ ! ರಾತ್ರಿಂಚರ (ಕಳ್ಳ) ನಾದರೂ ಕುವಲಯ = ಭೂಮಂಡಲಕ್ಕೆ ಆಪ್ತನೆನಿಸಿದ್ದಾನೆ! (ಇದು ವಿರೋಧಾಭಾಸ. ಮುಂದಿನ ಅರ್ಥಾಂತರವನ್ನಿಟ್ಟುಕೊಂಡಾಗ ವಿರೋಧ ಪರಿಹಾರ. ದ್ವಿಜಚಕ್ರ = ಚಕ್ರವಾಕಪಕ್ಷಿ, ದ್ವಿಜರಾಜ = ಚಂದ್ರ, ಕಮಲಾರಿ = ಕಮಲಗಳಿಗೆ ವೈರಿ, ವಿಧು = ಚಂದ್ರ, ಹಂಸದ್ವೇಷಿ = ಸೂರ್ಯದ್ವೇಷಿ, ದೋಷಾಕರ = ನಿಶಾಕರನಾದ ಚಂದ್ರ, ರಜನೀಸಂಚರ = ರಾತ್ರಿಯಲ್ಲಿ ಸಂಚರಿಸತಕ್ಕವನು, ಕುವಲಯಾಪ್ತ = ನೈದಿಲೆಗೆ ಪ್ರಿಯ. ೭೦) ವ॥ ಹೀಗೆನ್ನಲು ಕೇಳಿದ ಮಿತವಚನನು ಉತ್ತರವಾಗಿ ಹೀಗೆ ಹೇಳಿದನು. ೭೪. "'ದ್ವಿಜರಾಜ' ಎಂಬ ಅಭಿಧಾನವು ಬಿಳಿಯ ಪಕ್ಷಿಗಳಿಂದ ಕೂಡಿದ (ಸಸಿತ) ಹಂಸಗಳಿಗೆ ಒಪ್ಪುವುದಿಲ್ಲವೇನು ? [ದ್ವಿಜರಾಜ ಎಂಬ ಅಭಿಧಾನವು ಶುಕ್ಲಪಕ್ಷದಿಂದ ಕೂಡಿದ ಚಂದ್ರನಿಗೇನು ಒಪ್ಪುವುದಿಲ್ಲವೇ] ಅನಂತಾಶ್ರಯ ಎಂದರೆ ಅನಂತವೆಂಬ ಸರ್ಪವನ್ನು ಹಾಸಿಗೆಯನ್ನಾಗಿ ಮಾಡಿಕೊಂಡು ಆಶ್ರಯಪಡೆದಿರುವ ವಿಷ್ಣುವಿಗೆ 'ವಿಧು' ಎಂಬ ನಾಮಾಭಿಧಾನವು ಜಗತ್ಪ್ರಸಿದ್ಧವಾಗಿ ಆಗಿರಲಾರದೇ ? (ಅನಂತವೆಂದರೆ ಆಕಾಶವನ್ನು ಆಶ್ರಯಿಸಿರುವ ಚಂದ್ರನಿಗೆ ವಿಧು ಎಂಬ ಹೆಸರು ಲೋಕಪ್ರಸಿದ್ಧವಾಗಲಾರದೇನು?) ಜಲಸಂಪದ್ಭರಿತವಾದ ಮೇಘಕ್ಕೆ (ಘನಶ್ರೀಯುತಂಗೆ) 'ಅಬ್ಜ' ಎಂದರೆ ಸಮುದ್ರದ ನೀರಿನಿಂದ ಹುಟ್ಟಿದುದು ಎಂಬ ಹೆಸರನ್ನು ಜನರು ಒಪ್ಪುವುದಿಲ್ಲವೇ ? (ಘನವಾದ ಶೋಭೆಯನ್ನು ಹೊಂದಿದ ಚಂದ್ರನಿಗೆ 'ಅಬ್ಜ' ಎಂದರೆ ಸಮುದ್ರದ ಮಗನೆಂಬ ಹೆಸರನ್ನು ಜನರು ಮೆಚ್ಚುವುದಿಲ್ಲ

ವ॥ ಎಂದು ಮತ್ತಮಿಂತೆಂದಂ

ಕಂ॥ ಕುವಲಯಕಧಿಪತಿಯಪ್ಪನೆ
ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ
ಕುವಲಯಕಧಿಪತಿಯಪ್ಪನೆ
ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ ೭೫

ಸುರಪ ವರಚಕ್ರರುಚಿ ವಿ
ಸ್ಫುರಿತ ಸಿತದ್ಯುತಿ ಮಹೋತ್ಪಳಪ್ರಿಯಮಿತ್ರಂ
ವರ ಮಂಡಳಾಂಕನೀ ಹಿಮ
ಕರನೆಸೆದಪನಾ ದಿನೇಶನೆನೆ ನೋಡರಸಾ ೭೬

ವ॥ ಎಂಬ ಚತುರವಚನನಿಚಯಮಂ ಕೇಳ್ದು ಮಚ್ಚುತ್ತುಂ ಮನುಜಮನೋಜನಲ್ಲಿಂ ಮುಂದಣ್ಗೆ ನಡೆತರುತ್ತುಮಿರೆ ತೊಟ್ಟನೆ ಕಟ್ಟಿದಿರೊಳ್

ವೇನು ?) ರಾತ್ರಿಯಲ್ಲಿ ಕಿರಣಗಳುಳ್ಳವನು ಎಂಬ ಹೆಸರು ಈ ರಾತ್ರಿಯಲ್ಲಿ ಸಂಚರಿಸುವವನಿಗೆ ಸಲ್ಲುವುದಿಲ್ಲವೇ ? 'ಕು' 'ವಲಯ' ಎಂದರೆ ಭೂಮಂಡಲಕ್ಕೆ ಆಪ್ತನಾದವನು ರಾಜನೇನಲ್ಲವೆ ? ('ಕುವಲಯ' ಎಂದರೆ ಕನ್ನೈದಿಲೆಗಳಿಗೆ ಆಪ್ತನು 'ರಾಜ' ಅಂದರೆ ಚಂದ್ರನೇನಲ್ಲವೆ ?)" (ಹೀಗೆಂದು ಮಿತವಚನನು ದ್ವಂದ್ವಾರ್ಥದಲ್ಲಿ ರಾಜಶೇಖರನಿಗೆ ಹೇಳಿದನು). ವ॥ ಪುನಃ ಹೀಗೆ ಹೇಳಿದನು. ೭೫. "ಚೆನ್ನಾದ ಲಕ್ಷಣದಿಂದ ಕೂಡದೆ ಇರುವ ರಾಜನು ಭೂಮಂಡಲಕ್ಕೆ ಅಧಿಪತಿಯಾಗುತ್ತಾನೆಯೆ ? ಉತ್ತಮ ಲಕ್ಷಣದಿಂದ ಚಂದ್ರನು ಕೂಡಿರದಿದ್ದರೆ ಕನ್ನೈದಿಲೆಗಳಿಗೆ ಅಧಿಪತಿಯೆನಿಸುತ್ತಿದ್ದನೆ ? ೭೬. (ಈ ಪದ್ಯ ಸೂರ್ಯ ಚಂದ್ರರ ಪರವಾದುದು) ಚಂದ್ರನು ದಿನೇಶ (ಸೂರ್ಯ) ನಂತೆ ಶೋಭಿಸುತ್ತಿದ್ದಾನೆ. ಹೇಗೆಂದರೆ—(ಚಂದ್ರನಪರ) ವಿಷ್ಣುಚಕ್ರದಂತೆ ಗುಂಡಾಗಿಯೂ, ಶುಕ್ರನಂತೆ ಸಿತ (ಬಿಳುಪು) ಕಾಂತಿಯಿಂದಲೂ ಕೂಡಿ, ಶ್ರೇಷ್ಠವಾದ ಕನ್ನೈದಿಲೆ (ಮಹಾ + ಉತ್ಪಲ) ಗೆ ಪ್ರಿಯಮಿತ್ರನಾಗಿ, ತನ್ನ ಶ್ರೇಷ್ಠಮಂಡಲದಲ್ಲಿ ಕಪ್ಪುಕಲೆಯುಳ್ಳವನಾಗಿಯೂ ಚಂದ್ರನು (ಹಿಮಕರನು) ಶೋಭಿಸುತ್ತಿದ್ದನು. (ಸೂರ್ಯನಂತೆ ಎಂಬುದಕ್ಕೆ ಅರ್ಥ)–ದೇವತಾಶ್ರೇಷ್ಠ (ಸುರಪವರ)ನೂ, ಚಕ್ರವಾಕಪಕ್ಷಿಗಳಿಗೆ ಪ್ರಿಯನೂ, ಪ್ರಕಾಶಮಾನವಾದ ಬಿಳಿಯ ಹೊಳೆಯುವ ಕಿರಣಗಳ ಕಾಂತಿಯುಳ್ಳವನೂ, ಮಹೋತ್ಪಳ ಎಂದರೆ ಕಮಲಗಳಿಗೆ ಪ್ರಿಯಮಿತ್ರನೂ, ಶ್ರೇಷ್ಠವಾದ ಮಂಡಲ = ಉಪಸೂರ್ಯಕಗಳಿಂದ ಯುಕ್ತನೂ, ಹಿಮಕರ[1] = ಹಿಮಗಳನ್ನು ನಾಶಪಡಿಸತಕ್ಕವನೂ ಆಗಿದ್ದಾನೆ. ವ॥ ಹೀಗೆನ್ನುವ ಮಿತವಚನನ ಅನೇಕ ಚತುರೋಕ್ತಿಗಳನ್ನು ಕೇಳಿ ಮೆಚ್ಚುತ್ತ ಮನುಷ್ಯರಲ್ಲಿ ಮನ್ಮಥಸದೃಶನಾದ ರಾಜಶೇಖರನು ಅಲ್ಲಿಂದ ಮುಂದಕ್ಕೆ ನಡೆಯುತ್ತಿರಲು, ನೇರ ಎದುರಿನಲ್ಲಿ

---

1. ಕ್ಷ್ಣು = ಹಿಂಸಾಯಾಂ.

ಮ॥ಸ್ರ॥ ನುತವಾರಸ್ತ್ರೀಕುಚಾಗ್ರಚ್ಯುತ ಮೃಗಮದ ಕಾಶ್ಮೀರ ಕರ್ಪೂರಧೂಳೀ
ಕೃತಧೂಳೀಕೇಳಿಚಂಚದ್ಭ್ರಮರಚಲಶಿಖಂಡಂ ತದೀಯಾಲಯಾಲಂ
ಬಿತ ಘಂಟಾನಾದಕೋಲಾಹಲರುತಿವಿದಳತ್ಕೈರವಾನೀತಮಧ್ವಂ
ಚಿತಲಾಲಂ ಲೀಲೆಯಿಂ ಬಾಲಕನೆನೆ ಸುಳಿದಂ ಸ್ವೈರಚಾರಂ ಸಮೀರಂ ೭೭

ವ॥ ಅಂತು ಸುಳಿವ ಮಂದಾನಿಲನಂ ಮನದಳ್ಕರಿಂದಾಲಿಂಗಿಸುತ್ತುಂ ಬರೆವರೆ ಮದನ
ಮಹಾರಾಜನ ಮನ್ನಣೆಯ ವಿಳಾಸಿನಿಯರೊಂದುಗೂಡಿ

ಮ॥ಸ್ರ॥ ತರಳಾಪಾಂಗಪ್ರಕಾಶಂ ಕಿದಱಿ ಮದನಬಾಣಂಗಳಂ ಮಂಜುಮಂಜೀ
ರರವಂ ಕಂದರ್ಪಬಾಣಾಸನಗುಣರುಚಿಯಂ ಸೂಸೆ ಮಂದಸ್ಮಿತಂ ಶಂ
ಬರಸಂಹೃತ್ಕೀರ್ತಿಯಂ ಮುಂದಿಡೆ ರತಿಪಲಸತ್ತೇಜಮಂ ಬೀಱಿ ಬಿಂಬಾ
ಧರರಾಗಂ ರಾಗಮಂ ನೋಳ್ಪರೊಳೆ ಪಡೆವುತುಂ ಪೋಯ್ತು ಪಣ್ಯಪ್ರತಾನಂ ೭೮

ವ॥ ಅದನಾ ನಾಗರಿಕನರಸಂಗೆ ತೋಱುತ್ತೈತರುತ್ತಿರೆಯಿರೆ

ಚಂ॥ ಮನೆಮನೆದಪ್ಪದೊಪ್ಪಿದುದು ಮಾರನ ಪೆಂಪು ಮಹೋತ್ಪಲಾಸ್ತ್ರಕೀ
ರ್ತನೆ ಮಕರಾಂಕಸಂಭ್ರಮಮನಂಗನ ಕೂರ್ಪು ಮನೋಜ್ಞಪುಷ್ಪಧ
ನ್ವನ ಬಿಱುದಾಂಕಮಾಲೆ ಮಧುಮಿತ್ರನ ಪೂಜೆ ಮನೋನಿವಾಸನಿಂ
ಪಿನ ಕಥೆ ಮನ್ಮಥಕ್ಷಿತಿಪನಾರ್ಪು ಮನೋಜನ ಮಂಗಳೋತ್ಸವಂ ೭೯

೭೭. ಶ್ಲಾಘ್ಯರಾದ ವೇಶ್ಯಾಸ್ತ್ರೀಯರ ಕುಚಪ್ರದೇಶದಿಂದ ಹಾರಿದ ಕಸ್ತೂರಿ, ಕುಂಕುಮ ಕೇಸರಿ, ಪಚ್ಚಕರ್ಪೂರದ ಧೂಳಿಯಲ್ಲಿ ಆಟವಾಡುವವನೂ, ಹಾರಾಡುತ್ತಿರುವ ಭ್ರಮರಗಳೆಂಬ ಜುಲುಪೆಗಳುಳ್ಳವನೂ, ಆ ಸ್ತ್ರೀಯರುಗಳ ಮನೆಗಳಲ್ಲಿ ತೂಗಾಡುತ್ತಿರುವ ಘಂಟಾನಾದದ ಕೋಲಾಹಲಗೊಳಿಸುವವನೆಂಬಂತಿರುವ ಕಿರುಗೆಜ್ಜೆಗಳ ಧ್ವನಿಯುಳ್ಳವನೂ, ಸುರಿಸುತ್ತಿರುವ ನೈದಿಲೆಗಳ ಮಧುವೆಂಬ ಜೊಲ್ಲುಳ್ಳವನೂ ಎನಿಸಿ ಬಾಲಕನ ಹಾಗೆ ಸ್ವೇಚ್ಛಾಚಾರಿಯಾದ ಮಂದಮಾರುತನು ಸುಳಿದನು. ವ॥ ಹಾಗೆ ಸುಳಿಯುವ ಮಂದಮಾರುತವನ್ನು ಮನೋನುರಾಗದಿಂದ ಆಲಿಂಗನಮಾಡಿಕೊಳ್ಳುತ್ತ ಮುಂದಕ್ಕೆ ಬರಲು, ಮನ್ಮಥ ಮಹಾರಾಜನ ಮನ್ನಣೆಗೊಳಗಾದ ವಿಲಾಸಿನಿಯರು ಗುಂಪಾಗಿ ಸೇರಿ, ೭೮. ಚಂಚಲವಾದ ಕಡೆಗಣ್ಣಿನ ನೋಟವು ಸುತ್ತಲೂ ಮನ್ಮಥನ ಪಂಚಬಾಣಗಳನ್ನು ಹರಡುತ್ತಿರಲು, ಕಾಲಂದಿಗೆಗಳ ಅವ್ಯಕ್ತ ಮಧುರರವವು ಮನ್ಮಥನ ಹೆದೆಯ ಝೇಂಕಾರಧ್ವನಿಯನ್ನು ಸುತ್ತಲೂ ಹರಡುತ್ತಿರಲು, ಮುಗುಳುನಗೆಯು ಮನ್ಮಥನ ಕೀರ್ತಿಯನ್ನು ಮುಂದುಮಾಡುತ್ತಿರಲು, ತೊಂಡೆವಣ್ದುಟಿಗಳು ನೋಡುವವರಲ್ಲಿ ಅನುರಾಗವನ್ನು ಬೀರುತ್ತಿರಲು ಸೂಳೆಯರ ಸಮೂಹವು ಹೋಯಿತು. ವ॥ ಅದನ್ನು ನಾಗರಿಕನು ಅರಸನಿಗೆ ತೋರಿಸುತ್ತ ಬರುತ್ತಿರಲು, ೭೯. ಆ ಸೂಳೆಯರ ಮನೆಮನೆಗಳಲ್ಲೂ ತಪ್ಪದೆ ಮಾರನ ಮಹಿಮೆ, ಶ್ರೇಷ್ಠವಾದ ಉತ್ಪಲವನ್ನು ಅಸ್ತ್ರವನ್ನಾಗಿ ಮಾಡಿಕೊಂಡವನ ಸಂಕೀರ್ತನೆ, ಮಕರಧ್ವಜನ ಸಂಭ್ರಮ, ಅನಂಗನ ಪ್ರೀತಿ, ಮನೋಜ್ಞನಾದ ಪುಷ್ಪಧನ್ವನ ಬಿರುದಾವಳಿಗಳು, ಮಧುಮಿತ್ರನಾದ ಕಾಮನಪೂಜೆ, ಮನೋ

ವ॥ ಮತ್ತಮಲ್ಲಿ

ಮ॥ ನಗೆವೆಳ್ದಿಂಬೆಳೆಜೊನ್ನಮಂ ಪರಪಿ ಕಾಂತಾಸ್ಯಾಂಬುಜಾತಂಗಳಂ
ನಗಿಪಭರ್ಣಪಣರೋಚಿರಾತಪಮನಾಗಳ್ಬೀಱ ಕೂರ್ತೋಪರ
ಕ್ಷಿಗಳೆಂಬುತ್ಪಳಮಂ ಮರಲ್ಚುವರಜಸ್ರಂ ತಮ್ಮ ಮೂಗೆಂಬ ಸಂ
ಪಗೆಯಿಂ ಮೆಚ್ಚಿಪರಾಣ್ಮದುಂಬಿಗಳನೇನಂ ಮಾಡರಬ್ಜಾಕ್ಷಿಯರ್ ೮೦

ನಗೆಗಣ್ಣೋ ನವನೀಲನೀರರುಹವೋ ರಾಕಾನಿಶಾಕಾಂತನೋ
ಮೊಗವೋ ಚೆಂದುಟಿಯೋ ರಸಾಲದಳವೋ ಧಮ್ಮಿಲ್ಲವೋ ಕಾರಕಾ
ರ್ಮುಗಿಲೋ ಪೊಂಗಳಸಂಗಳೋ ಮೊಲೆಗಳೊ ಕುಂಭೀಂದ್ರ ಕುಂಭಂಗಳೋ
ಬಗೆಗೊಳ್ವೀ ಜಘನಂಗಳೋಯೆನೆ ವಿಟರ್ ವಿಭ್ರಾಜಿಕುಂ ವೇಶ್ಯೆಯರ್ ೮೧

ಕೊರಲೊಳ್ ಕೊಂಕಿನಮಾತು ಮುದ್ದುಮೊಗದೊಳ್ ಮಂದಸ್ಮಿತಂ ನೋಡದಂ
ತಿರೆ ನೋಳ್ಪೊಂದು ವಿಡಾಯಮಕ್ಷಿಯೊಳೆ ಪುರ್ಬೊಳ್ ಜರ್ಬು ಸೌಗಂಧಬಂ
ಧುರಮಂದಶ್ವಸಿತಂ ಸುನಾಸಿಕೆಯೊಳೆಂದುಂ ಯೌವನಶ್ರೀವಿಳಾ
ಸರುಚಿ ಸ್ಫೂರ್ತಿ ನಿಜಾಂಗದೊಳ್ ಮೆಱೆಯೆ ಕಣ್ಗಂಬಾದರಬ್ಜಾಸ್ಯೆಯರ್ ೮೨

ನಿವಾಸನಾದ ಮನಸಿಜನ ಇಂಪಾದ ಕಥೆಗಳು, ಮನ್ಮಥಪ್ರಭುವಿನ ಸಾಮರ್ಥ್ಯ, ಮನೋಜನ ಮಂಗಳೋತ್ಸವಗಳೇ ಜರಗುತ್ತಿದ್ದವು. ವ॥ ಮತ್ತು ಲ್ಲಿ ೮೦. ಗಣಿಕೆಯರು ನಗೆಯ ಬಿಳುಪೆಂಬ ಎಳೆಬೆಳದಿಂಗಳನ್ನು ಹರಡಿ ವಿಟರಾದವರ ಮುಖಕಮಲಗಳನ್ನು ಅರಳಿಸುತ್ತಿದ್ದರು. ಆಭರಣಗಳ ಕಾಂತಿಯೆಂಬ ಸೂರ್ಯಕಿರಣಗಳನ್ನು ಹೊರಸೂಸಿ ಪ್ರೀತಿಸುವ ವಿಟರ ಕಣ್ಣುಗಳೆಂಬ ಕನ್ನೈದಿಲೆಗಳನ್ನು ಅರಳಿಸುತ್ತಿದ್ದರು. ತಮ್ಮ ಮೂಗೆಂಬ ಸಂಪಿಗೆಯ ಹೂವುಗಳಿಂದ ತಮ್ಮ ಪ್ರಿಯರೆಂಬ ದುಂಬಿಗಳನ್ನು ಮೆಚ್ಚಿಸುತ್ತಿದ್ದರೆನ್ನುವಾಗ ಆ ಕಮಲನೇತ್ರೆಯರು ಏನನ್ನು ತಾನೆ ಮಾಡಲಾರರು! (ಇಲ್ಲಿ ಬೆಳದಿಂಗಳಿಂದ ಕಮಲವರಳುವುದೂ, ಬಿಸಿಲಿನಿಂದ ಕನ್ನೈದಿಲೆಗಳರಳುವುದೂ, ಸಂಪಿಗೆ ಹೂಗಳಿಗೆ ದುಂಬಿಗಳು ಮೆಚ್ಚುವುದೂ ಅಸಂಭವ. ಇಂಥ ಅಸಂಭವವೂ ಸೂಳೆಯರಿಂದ ಸಂಭವವೆನಿಸುತ್ತಿತ್ತೆಂದು ಭಾವ) ೮೧. ವಿಟರು (ಆ ಸೂಳೆಯರ ಕಣ್ಣುಗಳನ್ನು ನೋಡಿ) ಇವೇನು ನಗೆಗಣ್ಣುಗಳೋ ನೂತನವಾಗಿ ಅರಳಿದ ಕನ್ನೈದಿಲೆಗಳೊ, (ಮುಖವನ್ನು ನೋಡಿ) ಇದೇನು ಮುಖವೋ ಅಥವಾ ಪೌರ್ಣಿಮೆಯ ಪೂರ್ಣಚಂದ್ರನೋ, (ತುಟಿಗಳನ್ನು ನೋಡಿ) ಇವೇನು ಕೆಂಪಾದ ತುಟಿಗಳೋ ಅಥವಾ ಚಿಗುರುಗಳೋ, (ಮುಡಿಯನ್ನು ಕಂಡು) ಇದೇನು ಮುಡಿಯೋ ಅಥವಾ ಮುಂಗಾರಿನ ಕಪ್ಪಾದ ಮೋಡಗಳೋ, (ಮೊಲೆಗಳನ್ನು ಕಂಡು) ಇವೇನು ಮೊಲೆಗಳೋ ಅಥವಾ ಬಂಗಾರದ ಕಳಶಗಳೋ, (ಕಟಿಪುರೋಭಾಗಗಳನ್ನು ನೋಡಿ) ಇವೇನು ಮನಂಬುಗುವ ಜಘನಗಳೋ ಅಥವಾ ಐರಾವತದ ಕುಂಭಸ್ಥಳವೋ (ಎಂದು ಭ್ರಮೆಗೊಳ್ಳುವ ಹಾಗೆ) ಆ ವೇಶ್ಯಾಸ್ತ್ರೀಯರು ಪ್ರಕಾಶಿಸುತ್ತಿದ್ದರು. ೮೨. ಕಂಠದಲ್ಲಿ ವಕ್ರೋಕ್ತಿ; ಮುದ್ದಾದ ಮುಖದಲ್ಲಿ ಮುಗುಳುನಗೆ; ನೋಡಿಯೂ ನೋಡದಂತೆ ತೋರುವ ಬೆಡಗು ಕಣ್ಣುಗಳಲ್ಲಿ; ಹುಬ್ಬಿನಲ್ಲಿ ಜರ್ಬು; ಸುಗಂಧದಿಂದ ಕೂಡಿದ ಶ್ವಾಸಬಿಡುವಿಕೆ ಮೂಗಿನಲ್ಲಿ; ಸದಾ ಯೌವನ

ನಗೆ ನೋಟಂ ಪೊಸಮಾತು ರೀತಿ ಗಮಕಂ ಗಾಂಭೀರ್ಯಮೌದಾರ್ಯ ಮ
ಚ್ಚಿಗಮುತ್ಸಾಹಮಲಂಪು ಸೊಂಪು ಸೊಗಸೊಯ್ಯಾರಂ ಬೆಡಂಗಳ್ಕಱಿ
ಪ್ಪುಗೆ ಚಲ್ಲಂ ಚದುರೋಜೆ ಚಾಟುತನಮಂದಂ ಬಂಧವೊಳ್ಪೇಟಮಿ
ಚ್ಚೆಗೆ ಸಂದೊಂದುವ ಕೂಟಮೆಲ್ಲಮವರ್ಗೆಂ ಮೈಸಂದು ಮಚ್ಚಿರ್ದುದೋ ೮೩

ವ॥ ಮತ್ತಮಿಂತೊಪ್ಪುವ ಸಿಂಗರದ ಸೀಮೆಯೆನಿಪ ಭಾಮಿನಿಯರೊಳೊರ್ವ ಕಾಮಿನಿ ಪೊತ್ತಗೊಳಲೆಂದು ನಿಜಗೃಹದ್ವಾರದ ಮಣಿಯಸ್ತಂಭಮಂ ನೆಮ್ಮಿ

ಚಂ॥ ನಗೆಮೊಗಮಿಟ್ಟ ಕುಂಕುಮದ ಬೊಟ್ಟು ತುಱುಂಬಿದ ಜಾದಿ ದೋರೆವ
ಲ್ಮೃಗಮದದಣ್ಪು ತೊಟ್ಟ ನವಕಂಚುಕಮುಟ್ಟ ಸಿತಾಂಬರಂ ಕರಂ
ಝುಗಝುಗಿಪಚ್ಚರನ್ನದೊಡವೊಪ್ಪುವ ಮಾಣಿಕಗೊಪ್ಪು ಚೊಲ್ಲೆಯಂ
ಬಗೆಗೊಳಿಸಿರ್ಪ ಸೋರ್ಮುಡಿ ಘನಸ್ತನಮೊಪ್ಪಿರೆ ನೀಱಿ ತೋಱಿದಳ್ ೮೪

ವ॥ ಮತ್ತಮೊರ್ವಳಗಣ್ಯಲಾವಣ್ಯತಾರುಣ್ಯವತಿ

ಸಂಪತ್ತಿನ ವಿಲಾಸದಿಂದ ಪ್ರಕಾಶಿಸುವ ಸ್ಫೂರ್ತಿಯು ತಮ್ಮ ದೇಹದಲ್ಲಿ ಮೆರೆಯುತ್ತಿರಲು ಆ ಕಮಲಮುಖಿಯರು ನೋಡುವವರ ಕಣ್ಣುಗಳಿಗೆ ಮನೋಹರವಾಗಿ ಕಾಣುತ್ತಿದ್ದರು. ೮೩. ನಗೆಗಣ್ಣಿನಿಂದ ಕೂಡಿದ ನೋಟ, ಬೆಡಗಿನ ಮಾತು, ರೀತಿ, ಗಂಭೀರತೆ, ಔದಾರ್ಯ, ಸಂಭ್ರಮ (ಅಚ್ಚಿಗಂ), ಉತ್ಸಾಹ, ಮೋಹಕತೆ, ಸೊಂಪು, ಸೊಗಸು, ಒಯ್ಯಾರ, ಬೆಡಗು, ಪ್ರೀತಿಯ ಅಪ್ಪುಗೆ, ನಗೆ (ಚಲ್ಲ), ಚಾತುರ್ಯ, ಕ್ರಮ, ಚಾಟುತನ, ಸೌಂದರ್ಯ, ಬಂಧುರತೆ, ಒಳ್ಳೆಯ ಬೇಟ, ಇಚ್ಛೆಯಂತೆ ಬೆರೆಯುವಿಕೆ ಈ ಎಲ್ಲವೂ ಅವರ ಮೈಗೆ ಒಗ್ಗಿ ಅದೇನು ಮೆಚ್ಚುಗೆಯಾಗಿತ್ತೋ! ವ॥ ಮತ್ತು ಈ ರೀತಿ ಒಪ್ಪುವ ಶೃಂಗಾರದ ಸೀಮೆಯೆನಿಸುವ ಭಾಮಿನಿಯರಲ್ಲಿ ಒಬ್ಬ ಸುಂದರಿಯು ವಿಟಪುರುಷನಿಂದ ಹಣವನ್ನು ಮುಂಗಡ ಪಡೆಯಲೆಂದು ತನ್ನ ಮನೆಬಾಗಿಲ ರತ್ನಖಚಿತ ಕಂಬಕ್ಕೆ ಒರಗಿ ನಿಂತ, ೮೪. ರಮಣಿಯು ನಗೆಮುಖ, ಹಣೆಗಿಟ್ಟ ಕುಂಕುಮದ ಬೊಟ್ಟು, ತುರುಬಿನಲ್ಲಿ ಮುಡಿದಿರುವ ಜಾಜಿಯ ಹೂವು, ದಾಡಿಮಬೀಜದಂತಿರುವ ಹಲ್ಲುಗಳು, ಕಸ್ತೂರಿಯ ಲೇಪನ, ತೊಟ್ಟುಕೊಂಡ ನೂತನ ಕುಪ್ಪಸ, ಉಟ್ಟುಕೊಂಡಿರುವ ಬಿಳಿಯಸೀರೆ, ಅತಿಯಾಗಿ ಝುಗಝುಗಿಸುತ್ತಿರುವ ಹೊಸರತ್ನದ ಆಭರಣಗಳು, ಮಾಣಿಕ್ಯದ ಜಡೆಬಿಲ್ಲೆ, ಹೆಳಲಿನ ತುದಿಗೊಂಡೆಯಿಂದ ಕೂಡಿ ಒಪ್ಪುವ ಉದ್ದವಾದ ಜಡೆ, ದಪ್ಪನೆಯ ಮೊಲೆಗಳು ಇವುಗಳಿಂದ ಕಂಗೊಳಿಸಿದಳು. ವ॥ ಮತ್ತೊಬ್ಬ ಅನಂತ ಲಾವಣ್ಯ ತಾರುಣ್ಯವತಿಯು

ಚಂ॥ ಬಡನಡು ಬಟ್ಟಬಲ್ಮೊಲೆ ಬಳಲ್ಮುಡಿ ನಲ್ನುಡಿ ನೀಳ್ದ ಕಣ್ಮಲ
ಲ್ನಿಡುವೆರಲಿಂಪು ಸೊಂಪಿಡಿದ ಚೆಂದುಟ ನುಣ್ದೊಡೆ ಚೆಲ್ವಿದಾಳ್ದ ಮೆ
ಲ್ಲಡಿ ಕಡುಬಿಣ್ಪುವೆತ್ತ ಪೊಱವಾರ್ತುಱುಗಿರ್ದವೆ ಸಣ್ಣಪುರ್ವು ತೆ
ಳ್ವೊಡೆ ಸುಲಿಪಲ್ಗಳಂದದ ಕದುಂಪಿರದೊಪ್ಪಿರೆ ಕಣ್ಗೆ ತೋಱಿದಳ್ ೮೫

ವ॥ ಮತ್ತಮೊರ್ವಳಪೂರ್ವಸೌಂದರ್ಯಸೌಭಾಗ್ಯವತಿ

ಚಂ॥ ತೊಡೆದ ಜವಾದಿಯಿಂ ಮುಡಿದ ಕಮ್ಮಲರಿಂ ಪಿಡಿದಂಬುಜಾತದಿಂ
ಜಡಿವ ನಿತಂಬದಿಂ ನುಡಿವ ಕೈಗಿಳಿಯಿಂ ಕೊಡದಂದಮಾಗಿ ಪೆಂ
ಪಡರ್ದ ಕುಚಂಗಳಿಂ ಕುಡಿತೆಗಂಗಳಿನಿಂಪಿಡಿದಾಸ್ಯಬಿಂಬದಿಂ
ಬಡನಡುವಿಂದೆ ಚೆಲ್ವಿಡಿದ ಪೆಣ್ಮಣಿಯಂ ನಡೆನೋಡಿದಂ ನೃಪಂ ೮೬

ವ॥ ಮತ್ತಮೊರ್ವಳ್ ವೃತ್ತಸ್ತನೆ ಚಿತ್ತಜನ ಮತ್ತಕಾಶಿನಿಯೆಂತೆ ಮುತ್ತಿನ ಮತ್ತ ವಾರಣಮಂ ತ್ರಿಭಂಗಿಯಿಂ ನೆಮ್ಮಿ ನಿಂದು

೮೫. ಸಣ್ಣನಡು, ವೃತ್ತಾಕಾರವಾದ ದೊಡ್ಡ ಮೊಲೆಗಳು, ಉದ್ದನೆಯ ಜೋತಾಡುವ ಮುಡಿ, ಮೃದುವಾದ ಮಾತು, ವಿಶಾಲವಾದ ಹೂವಿನಂತಹ ಕಣ್ಣುಗಳು, ಉದ್ದನೆಯ ಬೆರಳುಗಳು, ಸೊಂಪಿನಿಂದ ಕೂಡಿದ ಕೆಂಪಾದ ತುಟಿಗಳು, ನುಣ್ಣನೆಯ ತೊಡೆಗಳು, ಚೆಲುವುಗೊಂಡ ಮೃದುವಾದ ಪಾದಗಳು, ವಿಶೇಷವಾಗಿ ಕರ್ಕಶವಾಗಿರುವ ಜಘನ, ದಟ್ಟವಾದ ಕೂದಲುಳ್ಳ ಕಣ್ಣೆವೆಗಳು, ಸಣ್ಣ ಹುಬ್ಬುಗಳು, ತೆಳ್ಳನೆಯ ಹೊಟ್ಟೆ, ಬಿಳಿಯ ಹಲ್ಲು, ಅಂದವಾದ ಕೆನ್ನೆಗಳು ಇವುಗಳಿಂದ ಶೋಭಿಸುತ್ತ ಕಾಣುತ್ತಿದ್ದಳು.
ವ॥ ಮತ್ತೊಬ್ಬ ಅಪೂರ್ವ ಸೌಂದರ್ಯದಿಂದ ಕೂಡಿದ ಸೌಭಾಗ್ಯವತಿಯಾದ ಸ್ತ್ರೀಯು
೮೬. ಮೈಗೆ ಪೂಸಿದ ಪುನುಗು ಸುಗಂಧದಿಂದ, ಮುಡಿದ ಸುಗಂಧಪುಷ್ಪಗಳಿಂದ, ಕೈಯಲ್ಲಿ ಹಿಡಿದ ಲೀಲಾಕಮಲದಿಂದ, ಅಲ್ಲಾಡುವ ನಿತಂಬಗಳಿಂದ, ಕೈಯಲ್ಲಿ ಹಿಡಿದ ಮಾತನಾಡುವ ಗಿಳಿಯಿಂದ, ಕೊಡದಂತೆ ಹಿರಿಮೆಗೊಂಡು ಶೋಭಿಸುವ ಮೊಲೆಗಳಿಂದ, ಬೊಗಸೆಗಣ್ಣುಗಳಿಂದ ಕೂಡಿದ ಮುಖಮಂಡಲದಿಂದ, ತೆಳ್ಳನೆಯ ನಡುವಿನಿಂದ ಚೆಲುವುಗೊಂಡಿರಲು ಆ ಸ್ತ್ರೀರತ್ನವನ್ನು ಅರಸನು ದೃಷ್ಟಿಸಿ ನೋಡಿದನು.
ವ॥ ಮತ್ತೊಬ್ಬ ದುಂಡುಮೊಲೆಗಳುಳ್ಳ ಚೆಲುವೆಯು ಮನ್ಮಥನ ಚೆಲುವಾದ ಸ್ತ್ರೀಯೋ ಎಂಬಂತೆ ಮುತ್ತಿನ ಮದಿಸಿದಾನೆಯನ್ನು ನೆಮ್ಮಿ ಮೂರು ಡೊಂಕುಗಳಿಂದ (ಅಂದರೆ ಕಾಲು, ಉದರ, ಶಿರಸ್ಸುಗಳನ್ನು ಪರಸ್ಪರ ವಿರುದ್ಧವಾಗಿ ಕೊಂಕಿಸಿ) ನಿಂತುಕೊಂಡು,

ಮಂದಾಕ್ರಾಂತ॥ ಮೇಳಂಗೈದುರ್ವಿಸುತೆ ಶ್ರುತಿಯಂ ವೀಣೆಯಂ ವಕ್ಷದೊಳ್ ಮೇಣ್
ತಾಳುತ್ತಂ ಪೆರ್ವೊಲೆಗೆ ಮೊಲೆ ತಾಂ ಪುಟ್ಟಿತೆಂಬಂತೆ ತೋಱಲ್
ಕೇಳಲ್ಕೆಂದೈತರೆ ವಿಟಮೃಗಂ ಬಾಜಿಸುತ್ತಿರ್ದಳೊರ್ವಳ್
ವೇಳಾವಳ್ಯಾದ್ಯಖಿಳ ವಿಳಸದ್ರಾಗಮಂ ರಕ್ತಿಯಿಂದಂ ೮೭

ವ॥ ಅಲ್ಲಿ ಪೆಱಳೊರ್ವಳ್ ಜಾಣೆ ವೀಣೆಯಂ ಶ್ರುತಿಗೈದು ಸೋರೆಯಂ ಸ್ತನಾಗ್ರದೊಳೊಂಕಿ ಸರಳತರ ಕರಾಂಗುಲಿಯನಿಟ್ಟು

ಕಂ॥ ಸುಲಲಿತೆ ವರಾಳಿ ಕುಂತಳೆ
ವಿಲಸತ್ಕಲ್ಯಾಣಿ ಶಂಕರಾಭರಣ ಸಮು
ಜ್ವಲವೇಣಿ ರಾಗರಂಜಿತೆ
ಚಲಿಸದೆ ಪೊಸದೇಸಿ ಸೋಮಮುಖಿ ಬಾಜಿಸಿದಳ್ ೮೮

ವ॥ ಅದಂ ಕೇಳ್ದು ಮೆಚ್ಚುತಂ ಸಂಗೀತಸರ್ವಜ್ಞಂ ಮುಂದಣ್ಗೆ ನಡೆತರುತ್ತುಮಿರೆಯಿರೆ ನಿಜಗೃಹದ ಮುಂದಣ ಮಣಿಯಾಂಗಣದೊಳ್ ವಿದಗ್ಧೆಯರ್ನೆಱೆದೆಳವೆಣ್ಗಳೊಡಗೂಡಿ ಗಾಡಿಯಿಂ ನಿಂದು ಶಶಿಕಾಂತದೊರಲೊಳ್ಕೆಂಬರಲ್ಕೆಸಕ್ಕಿಯಂ ಪೊಯ್ದಿಂದ್ರನೀಲದೊನಕೆಯಂ ನಿಡುದೋಳ್ಗಳಿಂ ನೆಗಪಿ

೮೭. ವೀಣೆಯ ಶ್ರುತಿಯನ್ನು ಮೇಳಗೊಳಿಸಿ ಎದೆಯಲ್ಲಿಟ್ಟುಕೊಂಡು ಮೀಟುತ್ತ ಇರಲು, ದೊಡ್ಡ ದೊಡ್ಡ ಮೊಲೆಗಳಿಗೆ ಬೇರೊಂದು ಮೊಲೆ ಮೂಡಿರುವುದೋ ಎನ್ನುವಂತೆ ಕಾಣುತ್ತಿದ್ದಳು. ಮೃಗಪ್ರಾಯರಾದ ವಿಟರುಗಳು (ಅವಳ ಬಾರಿಸುವಿಕೆಯನ್ನು) ಕೇಳುವುದಕ್ಕೋಸುಗ ಬಂದಿದ್ದರು. (ಆಗ) ವೇಳಾವಳಿಯೇ ಮೊದಲಾದ ಸಮಸ್ತ ರಾಗಗಳನ್ನು ಪ್ರೀತಿಯಿಂದ ಓರ್ವಳು ನುಡಿಸುತ್ತ ಇದ್ದಳು. ವ|| ಅಲ್ಲಿ ಮತ್ತೊಬ್ಬ ಜಾಣೆಯು ವೀಣೆಯನ್ನು ಶ್ರುತಿಮಾಡಿಕೊಂಡು, ಸೋರೆಯ ಬುರುಡೆಯನ್ನು ಮೊಲೆಗಳ ಮೇಲೆ ಅವುಕಿ ಹಿಡಿದುಕೊಂಡು, ಅದರ ಮೇಲೆ ತನ್ನ ಸರಳತರವಾದ ಕೈ ಬೆರಳುಗಳನ್ನು ಇಟ್ಟು
೮೮. ಸುಲಲಿತೆಯೂ, ಶ್ರೇಷ್ಠವಾದ ದುಂಬಿಗಳಂತೆ ಮುಂಗುರುಳುಗಳುಳ್ಳವಳೂ, ಮನೋಹರವಾದ ಕಲ್ಯಾಣಸ್ವರೂಪಶೋಭಿತೆಯೂ, ಶಂಕರನ ಆಭರಣವಾದ ಹಾವಿನಂತಹ ಪ್ರಕಾಶಮಾನವಾದ ಜಡೆಯ ಶೋಭೆಯಿಂದ ಕೂಡಿ ರಂಜಿಸುವವಳೂ ಆದ ಚಂದ್ರಮುಖಿಯು ಸ್ವಲ್ಪವೂ ಅಲ್ಲಾಡದೆ ನೂತನ ದೇಸಿಯಿಂದ ಕೂಡಿ ಬಾರಿಸಿದಳು. (ಲಲಿತ, ವರಾಳಿ, ಕುಂತಳ, ಕಲ್ಯಾಣಿ, ಶಂಕರಾಭರಣ, ನಾಗಸ್ವರ–ಮೊದಲಾದ ರಾಗಗಳನ್ನು ದೇಶೀಯ ಕ್ರಮದಲ್ಲಿ ಬಾರಿಸಿದಳೆಂದು ಮತ್ತೊಂದು ಅರ್ಥ.) ವ|| ಹೀಗೆ ಹಾಡುತ್ತಿರುವುದನ್ನು ಕೇಳಿ ಮೆಚ್ಚುತ್ತ, ಸಂಗೀತದಲ್ಲಿ ಸರ್ವಜ್ಞನಾದ ರಾಜಶೇಖರನು ಮುಂದಕ್ಕೆ ನಡೆದುಬರುತ್ತಿರಲು, ತನ್ನ ಮನೆಯ ಮುಂದಿನ ರತ್ನವಿಕಾರವಾದ ಅಂಗಳದಲ್ಲಿ ಪ್ರೌಢೆಯರು ಕಿರಿಯ ಹರೆಯದ ಬಾಲಿಕೆಯರಿಂದ ಕೂಡಿಕೊಂಡು, ಸಂಭ್ರಮದಿಂದ ನಿಂತುಕೊಂಡು, ಚಂದ್ರಕಾಂತಶಿಲೆಯಿಂದ ಮಾಡಿದ ಒರಳಲ್ಲಿ ಕೆಂಬರಲೆಂಬ (ಮಾಣಿಕ್ಯವೆಂಬ)

ತ್ರಿಪದಿ॥ ಮದನಂಗೆ ಜಯಮಕ್ಕೆ ಮಧುಗೆ ಸಂಪದಮಕ್ಕೆ
ಬಿದುಗದಿರಿಂತು ನೆಲಸಿರ್ಕೆ ರತಿಗೆ ಸಂ
ಮದಮೊಂದು ತೊಲಗದಿರುತಿರ್ಕೆ ೮೯

ಮನದಿಚ್ಛೆಯಂ ಮುಂಚಿ ತನುವಿತ್ತು ನಲ್ಲರೊಂ
ದನುವಱಿದೊಂದಿ ಸವಿದೋರ್ವ ಸೂಳೆಯರಾ
ಮನೆಯ ಮುಂದಿರದೆ ಸುರಧೇನು ೯೦

ಸುರತಕಿಚ್ಛೈಸಿ ಮೇಲ್ವರಿವ ಕಾಂತನ ಕಂಡು
ಕರಗಿ ಕಾತರಿಸಿ ನೆಱೆವ ನೀಱೆಯ ಮನೆ
ಸಿರಿಗಂಬುಜಾತಮೆನಿಸದೆ ೯೧

ಪೊಱಮಿಂಚುಗ್ಗೈವನಂ ಬಱಿಮಾತುಗಾಱನಂ
ಕಱುಬನಂ ಕಪಟಹೃದಯನಂ ಧೂರ್ತನಂ
ತೊಱೆಯದುದೆಗ್ಗತನವಲ್ತೆ ೯೨

ಒರ್ವನೊಳ್ವಂಚಿಸಿ ಕೊರ್ವಿದ ಬೇಟಮ
ನೊರ್ವನೊಳಿಲ್ಲದಿರ್ದೊಡಂ ತನಿವೇಟ
ಮುರ್ವಿಸಿ ಪಣವಂ ಪಡೆವುದು ೯೩

ಕೇಸಕ್ಕಿ (ಕೆಂಪುಅಕ್ಕಿ) ಯನ್ನು ಹಾಕಿ, ಇಂದ್ರನೀಲದ ಒನಕೆಯನ್ನು ಹಿಡಿದು ನೀಳವಾದ ತಮ್ಮ ತೋಳುಗಳನ್ನು ಮೇಲಕ್ಕೆತ್ತಿ-(ಈ ಕೆಳಗಿನಂತೆ ಸುವ್ವಿಹಾಡನ್ನು ಹಾಡುತ್ತಿದ್ದರು.) ೮೯. ಮದನನಿಗೆ ಜಯವಾಗಲಿ, ವಸಂತಋತುವಿಗೆ ಸಂಪತ್ತುಂಟಾಗಲಿ, ಬೆಳದಿಂಗಳು ಹೀಗೆಯೇ ನೆಲಸಿರಲಿ, ರತಿಕ್ರೀಡೆಗೆ ಮನಸ್ಸು ಮದಗೊಂಡು ಸತತ ಅಗಲದಂತಿರಲಿ. ೯೦. ಮನದ ಇಚ್ಛೆಯನ್ನು ಮುಂದುಗೊಂಡು ದೇಹವನ್ನು ಕೊಟ್ಟು, ನಲ್ಲನಾದವನ ಮನದ ಬಯಕೆಯನ್ನರಿತು ರತಿಕ್ರೀಡೆಯಲ್ಲಿ ಕೂಡಿ, ಅವನಿಗೆ ಸವಿಹುಟ್ಟಿಸುವ ಸೂಳೆಯರ ಮನೆಯ ಮುಂದೆ ಸುರಧೇನುವೇ ಇರಲಿಕ್ಕಿಲ್ಲವೇ ? ೯೧. ರತಿಕ್ರೀಡೆಗೆ ಇಚ್ಛಿಸಿ ಉತ್ಸಾಹಗೊಳ್ಳುವ ಕಾಂತನನ್ನು ಕಂಡು, ಕರಗಿ ಹೋಗಿ, ಕಾತರವನ್ನು ತೋರಿಸಿ, ಅವನೊಡನೆ ನೆರೆಯುವ ಸುಂದರಿಯ ಮನೆಯು ಲಕ್ಷ್ಮಿಗೆ ಕಮಲವು ಹೇಗೋ ಹಾಗೆ ಆಗದೇ ? (ಅಂದರೆ ಅಂಥವಳ ಮನೆಯು ಲಕ್ಷ್ಮೀನಿವಾಸಸ್ಥಾನವಾಗದೇ ? ಎಂದು ಭಾವ). ೯೨. ಕೇವಲ ಹೊರಗೆ ಮಾತ್ರ ಬಣ್ಣವನ್ನು ತೋರುವ, ಬರಿಮಾತುಗಳನ್ನು ಮಾತ್ರ ಆಡುವ, ಹೊಟ್ಟೆಕಿಚ್ಚು ಪಡುವ, ಕಪಟ ಹೃದಯವುಳ್ಳ, ಕಾರ್ಯಸಾಧನೆಗಾಗಿ ವಿನಯವನ್ನು ನಟಿಸುವಂಥವನನ್ನು ತೊರೆಯದಿರುವುದು ಮೂರ್ಖತನವಲ್ಲವೆ ? ೯೩. ಒಬ್ಬ ವಿಟನಲ್ಲಿ ಪ್ರೀತಿಯನ್ನು ತೋರ್ಪಡಿಸಿ ವಂಚನೆಮಾಡಿ, ಒಬ್ಬನಲ್ಲಿ ಅನುರಾಗವು ಇಲ್ಲದಿದ್ದರೂ ಅನುರಾಗವುಂಟಾಗುವಂತಹ ನಡೆನುಡಿಗಳಿಂದ ಪಕ್ವವಾದ ಸ್ನೇಹವನ್ನು

ತಾನೆ ಮೇಲಿಕ್ಕದೆ ಮಾನವಂ ಬಲಿದು ಕಾ
ಮಾನುರಾಗತೆಯುಂ ಮನಕಿತ್ತು ಮೇಲಿಕ್ಕ
ಲಾ ನೇಮವಱಿದು ನೆಱೆವುದು ೯೪

ನಗೆ ನೋಟ ನುಡಿಗಳಿಂ ತೆಗೆದು ಭುಜಂಗರ
ಬಗೆಯು ಬಂದದಱೊಳೊಡಗೂಡಿ ಮೋಹಿಪ
ಳ್ಮಗುಳಂಬನರಸಿಗೆಣೆಯಲ್ತೆ ೯೫

ಸ್ತನದ ಬಿಣ್ಪನೆ ನೋಡಿ ಮನವಿಕ್ಕುವರ್ವಿಟ
ರ್ಕನಕಪಂಕಜದ ಬಿಱಿಮುಗುಳನೆ ನೋಡಿ
ಮನವಿಕ್ಕುವಂತೆ ಮಱಿದುಂಬಿ ೯೬

ಚದುರಂಗ ನೆತ್ತಮಿಂಪೊದವಿದ ಪಾಡು ಸ
ಕ್ಕದದೋದು ಹಾಸ್ಯಮಿನಿಗಬ್ಬವೊಳ್ಪದಿ
ಲ್ಲದ ಸೂಳೆವನೆಯೆ ಬಱುವನೆ ೯೭

ವ॥ ಎಂದು ಸುವ್ವಿವಾಡ ನೆವದಿಂ ವೇಶ್ಯಾನೀತಿಯನೆಳೆವೆಣ್ಗಳ್ಗುಪದೇಶಿಪ ವಿದಗ್ಧೆಯರ ವಿಳಾಸಮನಿಳಾಪತಿತಿಳಕಂ ನಿರೀಕ್ಷಿಸುತಂ ಬರುತ್ತಿರೆ ಮುಂದೊಂದೆಡೆಯಲ್ಲಿ

ತೋರ್ಪಡಿಸಿಕೊಂಡು ಅವನನ್ನು ಉಬ್ಬಿಸಿ ಹಣವನ್ನು ಸೆಳೆಯಬೇಕು. ೯೪. ತಾನೇ ಹೋಗಿ ಮೇಲೆ ಬೀಳದೆ ಬಿಗುಮಾನವನ್ನು ತೋರ್ಪಡಿಸಿಕೊಂಡು, ವಿಟನಾದವನ ಕಾಮಾನುರಾಗವೇನೆಂಬುದನ್ನು ಮನಸ್ಸಿಗೆ ತಂದುಕೊಂಡು, ಅವನು ಮೊದಲು ಮೇಲೆ ಬಿದ್ದ ಕ್ರಮವನ್ನು ಅರ್ಥಮಾಡಿಕೊಂಡು, ಅವನೊಡನೆ ಅವನ ಮನೋಭಿಲಾಷೆಯ ಕ್ರಮಕ್ಕನುಗುಣವಾಗಿ ರತಿಕ್ರೀಡೆಗೆ ತೊಡಗಬೇಕು. ೯೫. ನಗೆಯಿಂದ ಕೂಡಿದ ಮುಖದ ನೋಟ ಮತ್ತು ನುಡಿಗಳಿಂದ ಪ್ರಸಂಗವನ್ನು ಮೊದಲುಮಾಡಿ, ವಿಟಪುರುಷನ ಮನಸ್ಸಿನ ಕ್ರಮವರಿತು, ಅದಕ್ಕನುಗುಣವಾಗಿ ಮೋಹವನ್ನು ವ್ಯಕ್ತಪಡಿಸುವ ಸ್ತ್ರೀಯು ರತಿದೇವಿಗೆ ಸಮಾನಳು ಎನ್ನಿಸುವುದಿಲ್ಲವೇ ? ೯೬. ಕನಕಕಮಳದ ಮೊಗ್ಗನ್ನು ಕಂಡು ದುಂಬಿಗಳು ಮನಸ್ಸನ್ನು ಇಕ್ಕಿ ಬಂದು ಮೇಲೆ ಬೀಳುವ ಹಾಗೆ, ಮೊಲೆಗಳ ಕರ್ಕಶತ್ವವನ್ನು ಕಂಡು ವಿಟಪುರುಷರು ಮುತ್ತಲು ಮನಸ್ಸನ್ನು ಮಾಡುವರು. ೯೭. ಚದುರಂಗದಾಟ, ಪಗಡೆಯಾಟ, ಇಂಪಾದ ಸಂಗೀತ, ಸಂಸ್ಕೃತ ಕಾವ್ಯಗಳ ಓದುವಿಕೆ, ಹಾಸ್ಯ, ಉತ್ತಮ ರಸಭರಿತ ಕಾವ್ಯಗಳು, ಇಂತಹ ಒಳಿತಾದ ಪ್ರಸಂಗಗಳಿಲ್ಲದ ಸೂಳೆಯರ ಮನೆಗಳು ಶೂನ್ಯಾಗಾರಗಳೆನಿಸುತ್ತವೆ. ವ|| ಹೀಗೆಂದು ಸುವ್ವಿ ಹಾಡುವ ನೆಪದಿಂದ ವೇಶ್ಯೆಯರ ರೀತಿನೀತಿಗಳೇನೆಂಬುದನ್ನು ಹುಡುಗಿಯರಿಗೆ ಉಪದೇಶಮಾಡುವ ಪ್ರೌಢವೇಶ್ಯೆಯರ ವಿಲಾಸಪ್ರಸಂಗವನ್ನು ಭೂಪಾಲಶ್ರೇಷ್ಠನಾದ ರಾಜಶೇಖರನು ನೋಡುತ್ತಾ ಬರುತ್ತಿರಲು

ಚಂ॥ ಮೊಳೆವೆಳಲಜ್ಜೆ ಮೋಹಿಪ ಮುಗುಳ್ಮೊಲೆ ಮುದ್ದಿನಿವಾತು ಮಿಂಚನು
ಚ್ಚಳಿಸುವ ಚೆಲ್ವಿನೋಟಮಳಿಕುಂತಳಮುಜ್ವಳ ಕಾಯಕಾಂತಿ ಮಂ
ಜುಳಮಧುರಾಧರಂ ಮಿಸುಪ ಸುಣ್ಗದಪುಣ್ಮುವ ಬಾಸೆ ಬೇಟಮಂ
ಬಳಯಿಸಿ ನೋಳ್ಪರೊಳ್ಮಿಱಿವ ಮುಗ್ಧೆಯನೀಕ್ಷಿಸಿದಂ ನರೇಶ್ವರಂ ೯೮

ವ॥ ಆಗಳ್ವಿಟನಿಂತೆಂದಂ

ಉ॥ ನೋಡಿದೊಡಾಗಳಂತೆ ತಲೆವಾಗುವ ನೋಡದೊಡೊಲ್ದುನೋಳ್ಪ ಮಾ
ತಾಡಿಸೆ ಸುಮ್ಮನಿರ್ಪ ನುಡಿಗುಂದಿರೆ ಮೆಲ್ಲನೆ ಸೊಲ್ಲಿಪಿಚ್ಛೆಯಿಂ
ಕೂಡಲೊಡರ್ಚೆ ಮೆಯ್ದೆಗೆವಗಲ್ದಿರಲೊಯ್ಯನೆ ಸಾರ್ವ ಮುಗ್ಧೆಯೇಂ
ಮಾಡಳೆ ಮಚ್ಚಿದೋವನ ಮನಕ್ಕೆ ಮನೋಜಮಹೋತ್ಸವಂಗಳಂ ೯೯

ವ॥ ಎಂಬ ನುಡಿಗೇಳ್ದಿವಂ ತನ್ನನುಭವಮಂ ಪ್ರಕಟಿಸಿದಪನೆಂದು ನಸುನಗುತ್ತಲ್ಲಿಂ ತಳರುತ್ತಿರೆ ಮತ್ತೊಂದೆಡೆಯೊಳೊರ್ವ ಮುಗ್ಧೆ ಒಳಗೊಳಗೆ ಬಳೆದಳವಿಗಳಿದ ವಿರಹಾನಲನಿಂ ದಳವಳಿದು ಕಳವಳಿಸಿ ಕಳೆಗುಂದಿದಂದಮಂ ನೆವಮಿಟ್ಟು ಮಱಸಿ ಧೈರ್ಯಗುಂದದಿರೆ ಕೆಳದಿ ತಿಳಿದಿಂತೆಂದಳ್

ಮುಂದೆ ಮತ್ತೊಂದು ಸ್ಥಳದಲ್ಲಿ, ೯೮. ನರೇಶ್ವರನಾದ ರಾಜಶೇಖರನು ಮೊಳೆಯುತ್ತಿರುವ ನಸುನಾಚಿಕೆ, ಮೋಹಗೊಳಿಸುವಂತಹ ಮೊಗ್ಗಿನಾಕಾರದ ಮೊಲೆಗಳು, ಮುದ್ದಾಗಿಯೂ ಸವಿಯಾಗಿಯೂ ಇರುವ ಮಾತುಗಳು, ಮಿಂಚನ್ನು ಹೊರಸೂಸುವ ಸೊಬಗಿನ ನೋಟ, ದುಂಬಿಗಳಂತಹ ಮುಂಗುರುಳು, ಪ್ರಕಾಶಮಾನವಾದ ದೇಹಕಾಂತಿ, ಮಂಜುಳವೂ ಮಧುರವೂ ಆದ ತುಟಿಗಳು, ನುಣ್ಣನೆಯ ಕೆನ್ನೆಗಳು, ರೆಗೆರೆಯಾಗಿ ಕಾಣುವ ಬಾಸೆಗಳು, ಈ ಎಲ್ಲ ಬಗೆಯ ಅಂಗಸೌಂದರ್ಯವನ್ನು ನೋಡುವವರಿಗೆ ಮುಂದೆಮಾಡಿ ತೋರಿಸುವ ಸುಂದರಸ್ತ್ರೀಯರನ್ನು ನೋಡಿದನು. ವ|| ಆಗ ಒಬ್ಬ ವಿಟನು ಹೀಗೆ ಹೇಳಿದನು. ೯೯. "ನೋಡಿದೊಡನೆಯೆ ಅಂತೆಯೇ ತಲೆಯನ್ನು ಬಾಗಿಸುವ, ನೋಡದಿದ್ದರೆ ಒಲವಿನಿಂದ ನೋಡುವ, ಮಾತನಾಡಿಸಿದರೆ ಸುಮ್ಮನಿರುವ, ಮಾತನಾಡಿಸದಿದ್ದರೆ ಮೆಲ್ಲನೆ ಮಾತನಾಡುವ ಇಚ್ಛೆಯಿಂದ ಕೂಡಿ, ಕೂಡ ಬಯಸಲು ದೂರಸರಿಯುವ, ಅಗಲಿದ್ದರೆ ತಟ್ಟನೆ ಹತ್ತಿರಕ್ಕೆ ಬರುವ ಮುಗ್ಧೆಯು ತನ್ನನ್ನು ಮೆಚ್ಚಿದಂಥ ವಿಟಪುರುಷನ ಮನಸ್ಸಿಗೆ ಮನ್ಮಥಸಂಬಂಧವಾದ ಮಹೋತ್ಸವಗಳನ್ನು ಮಾಡದೆ ಇರುವಳೇನು?" ವ|| ಹೀಗೆನ್ನುವ ನುಡಿ ಕೇಳಿ ರಾಜನು, ಇವನು ತನ್ನ ಅನುಭವವನ್ನು ಪ್ರಕಟಗೊಳಿಸುತ್ತಿರುವನೆಂದು ನಸುನಗುತ್ತ ಅಲ್ಲಿಂದ ಹೊರಟು ನಡೆಯುತ್ತಿರಲು, ಮತ್ತೊಂದುಕಡೆಯಲ್ಲಿ ಒಬ್ಬ ಸುಂದರಿಯು ತನ್ನ ಮನಸ್ಸಿನಲ್ಲಿಯೇ ಬೆಳೆದ ಮೇರೆಮೀರಿದ ವಿರಹವೆಂಬ ಬೆಂಕಿಯಿಂದ ಸಾಮರ್ಥ್ಯಗುಂದಿ, ಕಳವಳಗೊಂಡು, ಕಳೆಗೆಟ್ಟ ರೀತಿಯನ್ನು ಬೇರೊಂದು ನೆಪಮಾಡಿ ಮರೆಮಾಚಿ, ಧೈರ್ಯಗುಂದದ ರೀತಿಯನ್ನು ತೋರ್ಪಡಿಸಿಕೊಳ್ಳು

ಮ॥ ಬೆಳರ್ಗೆಂಪಂ ತಳೆದಿರ್ದ ಚೆಂದುಟಿದಳಿರ್ವಿಸ್ತಾರಮಾದತ್ತು ಮೈ
ಗಳಿಗಂಪಂ ಪಡೆಯಲ್ಕೆ ಬಂದು ಪೆಱಪಿಂಗುತ್ತಿರ್ಪುದೀ ನಿನ್ನ ಸು
ಯ್ಗಳೆ ತಾಗುತ್ತಿರೆ ಕೈಯೊಳಾಂತ ಕಮಳಂ ಕಂದಿತ್ತಿದೇಂ ಕಾಂತೆ ನಿ
ನ್ನಳವಂ ಪೇಳೆನೆ ನೀಳ್ದ ಕಣ್ಮಲರ್ಗಳಿಂ ಬಾಷ್ಪಾಂಬುವಂ ತುಂಬಿದಳ್ ೧೦೦

ವ॥ ಅಂತು ಕಣ್ಣೀರ್ಗಳಂ ತುಂಬಿ ತನ್ನೊಳಗನಱಿದಾ ಪ್ರಿಯವಯಸ್ಯೆಯೊಳ್ ಮಱಸ
ಲಾಗದೆಂದಿಂತೆಂದಳ್

ಮ॥ ಎನಗಿನ್ನಾರ್ಹಿತೆಯಿರ್ಸರೋಜಮುಖಿ ಕೇಳ್ನಿನ್ನಿಂದೆ ನೀಂ ಪೋಗಿ ಕಾಂ
ತನೊಳೋರಂತಿನಿವಾತನಾಡಿ ಮುನಿಸಂ ಬೇರ್ಕೈದು ನೇಹಂ ಮನ
ಕ್ಕನುವಪ್ಪಂತಿರೆ ಮಾಡಿ ತಳ್ವದೊಡಗೊಂಡೈತರ್ಪುದೆಂದಂದು ಕಾ
ಮಿನಿ ಚೆನ್ನೈದಿಲಮಾಲೆಗೂಡಿ ಮಣಿಹಾರಂಗೊಟ್ಟು ತಳ್ತಪ್ಪಿದಳ್ ೧೦೧

ವ॥ ಅಲ್ಲಿಂ ಬಳಿಯಿನವಳ್ನಿಜಸಖೀಸಖನಿರ್ದೆಡೆಗೆ ಬಂದು

ಕಂ॥ ಮುಗ್ಧೆ ಭವದ್ವಿರಹದೊಳೆ ವಿ
ದಗ್ಧೆಯೆ ತಾನಾದಳಿಂದು ನೀಂ ನೆಱೆದೊಡೆ ಕೇಳ್
ಸ್ನಿಗ್ಧತೆಯಿಂದೆ ವಿಧಗ್ಧೆಯೆ
ಮುಗ್ಧೆಯೆನಿಪ್ಪಳ್ ಬಳಿಕ್ಕಿದೇನಚ್ಚರಿಯೋ ೧೦೨

ತ್ತಿರುವುದನ್ನು ಗೆಳತಿಯು ತಿಳಿದು ಹೀಗೆ ಹೇಳಿದಳು : ೧೦೦. "ಗೆಳತಿಯೇ, ನಿನ್ನ ಪ್ರಕಾಶಮಾನವಾದ ಕೆಂಪು ತುಟಿಗಳೆಂಬ ಚಿಗುರುಗಳು ಬೆಳ್ಳಗಾಗಿವೆ (ವಿಸ್ತಾರಗೊಂಡಿವೆ). ಮೆಯ್ಯ ಸುಗಂಧಕ್ಕೆ ಬಂದ ದುಂಬಿಗಳ ಹಿಂಡು ಹಿಂದಕ್ಕೆ ಹೋಗುತ್ತಿವೆ. ಈ ನಿನ್ನ ನಿಟ್ಟುಸಿರು ತಾಕಿ ಕೈಯಲ್ಲಿ ಹಿಡಿದ ಲೀಲಾಕಮಲವು ಕಂದಿಹೋಗುತ್ತಿದೆ. ಕಾಂತೆಯೇ ಇದೇನು ? ನಿನ್ನ ಮನಸ್ಸಿನ ರೀತಿಯನ್ನು ಹೇಳು !" ಎನ್ನಲು, ಅವಳು ತನ್ನ ಹೂವಿನಂತಹ ಕಣ್ಣುಗಳಲ್ಲಿ ಕಣ್ಣೀರು ತುಂಬಿದಳು. ವ॥ ಹಾಗೆ ಕಣ್ಣೀರು ತುಂಬಿ ತನ್ನಲ್ಲಿಯೇ ತಾನು ತಿಳಿದು ತನ್ನ ಪ್ರಿಯಸ್ನೇಹಿತೆಯೊಡನೆ ಮರೆಮಾಚಲಾರದೆ ಹೀಗೆ ಹೇಳಿದಳು : ೧೦೧. "ಎಲೈ ಕಮಲಮುಖಿಯೇ, ನನಗೆ ನಿನಗಿಂತ ಪ್ರಿಯಸ್ನೇಹಿತೆಯಿನ್ನಾರು ? ಕೇಳು. ನೀನು ಹೋಗಿ ನನ್ನ ಕಾಂತನಲ್ಲಿ ಕ್ರಮವರಿತು ಸವಿಮಾತನ್ನಾಡಿ, ಅವನಿಗುಂಟಾದ ಸಿಟ್ಟನ್ನು ದೂರಮಾಡಿ, ನನ್ನ ವಿಷಯಕವಾದ ಸ್ನೇಹವು ಮನಸ್ಸಿನಲ್ಲಿ ಅನುವುಗೊಳ್ಳುವಂತೆ ಮಾಡು. ತಡಮಾಡದೆಯೇ ನಿನ್ನೊಡನೆ ಕರೆದುಕೊಂಡು ಬರಬೇಕು" ಎನ್ನುತ್ತ ಆ ಕಾಮಿನಿಯು ಕೆಂಪುಕಮಲಗಳ ಹೂಮಾಲೆಯನ್ನು ಅವಳ ಕೊರಳಿಗೆ ಹಾಕಿ, ರತ್ನಹಾರವನ್ನು ಕೊಟ್ಟು ಪ್ರೀತಿಯಿಂದ ಗಟ್ಟಿಯಾಗಿ ಅಪ್ಪಿಕೊಂಡಳು. ವ॥ ಆಗ ಆ ಸಖಿಯು ಅಲ್ಲಿಂದ ತನ್ನ ಸಖಿಯ ಸಖನು ಇದ್ದ ಸ್ಥಳಕ್ಕೆ ಬಂದು ೧೦೨. "(ಅಯ್ಯಾ) ಕೇಳು, ಇಂದು ನಿನ್ನ ಸುಂದರಿಯು ನಿನ್ನ ವಿರಹದಿಂದ ವಿದಗ್ಧೆಯೇ (ವಿಶೇಷವಾಗಿ ದಹಿಸಿದವಳೇ) ಆಗಿದ್ದಾಳೆ. ನೀನು ಬಂದು ಅವಳಲ್ಲಿ ನೆರೆದರೆ ನಿನ್ನ ಸ್ನೇಹಾಧಿಕ್ಯದಿಂದ

ಮ॥ಸ್ರ॥ ಇದು ಚಿತ್ರಂ ನಿನ್ನ ಶೈತ್ಯಾಸ್ಪದ ಹೃದಯದೊಳೊರ್ಮೊರ್ಮೆ ತಾನಿರ್ದು ಬೆಂದಂ
ದದೆ ಕಂದಿರ್ದಳ್ಪವದ್ವಲ್ಲಭೆಯವಳ ವಿಯೋಗಾಗ್ನಿಸಂತಪ್ತ ಚಿತ್ತಾ
ಗ್ರದೊಳಿರ್ದುಂ ನೀನಜಸ್ರಂ ಕೊಱಗಿದುದಿನಿತಿಲ್ಲಂಗಜಂ ಪಕ್ಷಪಾತಾ
ಭ್ಯುದಯಕ್ಕಿಂಬಾದನೆಂದೇಬಳ ಪೊಸನುಡಿಗೇಳ್ದಿದ್ದಿದಿಂ ಕಾಂತನಾಗಳ್ ೧೧೩

ವ॥ ಅನಂತರಂ

ಚಂ॥ ಬರೆ ತೆಗೆದಪ್ಪಿ ಬಾಯ್ದೆಱೆಯನೊಯ್ಯನೆ ಚುಂಬಿಸಿ ಮುದ್ದುಗೈದು ಮೋ
ಹರಸಮನಂತರಂಗದೊಳಮರ್ಚಿ ನಿಮಿರ್ಚಿ ನಖಕ್ಷತಂಗಳಂ
ಗುರುಕುಚದಲ್ಲಿ ಸತ್ಕಳೆಗಳುಣ್ಮುವ ತಾಣಮನಂಟಿ ಸಾರ್ದು ಸಾ
ದರಮುಚಿತೋಕ್ತಿಯಿಂ ನುಡಿದು ಪೊಂಪುಳಿಯಿಂ ಪೊದಿಸುತ್ತೆ ನಲ್ಲಳಾ ೧೧೪

ನುಡಿನುಡಿಗೊರ್ಮೆ ಮುದ್ದಿಸಿ ಮುಖಾಂಬುಜಮಂ ನಡೆನೋಡಿ ಚುಂಬಿಸು
ತ್ತೊಡನೊಡನಪ್ಪಿ ನುಣ್ಗುರುಳನೊಯ್ಯನೆ ತಿರ್ದಿ ಪೊದಳ್ದಲಜ್ಜೆ ಬೇ
ರ್ಪಡೆ ಪಡೆದಲ್ಲಿ ಕಾತರಮನಂದವಳೊಳ್ಕಳಿವೆತ್ತ ಕಾಣ್ಕೆಯಿಂ
ದಡಿಗಡಿಗುರ್ವೆ ಮನ್ಮಥರಸಂ ನೆರೆದಂ ಮನದನ್ನನೊಲ್ಮೆಯಿಂ ೧೧೫

ಅಂಥ ವಿದಗ್ಧೆಯೇ ಮುಗ್ಧೆಯಾಗುತ್ತಾಳೆ. ಒಳಿಕ ಇದೇನು ಆಶ್ಚರ್ಯವೋ ! (ವಿರಹವೆಂಬ ಬೆಂಕಿಯಿಂದ ಸುಟ್ಟುಹೋದವಳನ್ನು ಸ್ನೇಹವೆಂಬ ತೈಲದಿಂದ ಪುನಃ ಸುಂದರಿಯನ್ನಾಗಿ ಮಾಡಿಕೊಳ್ಳುವುದು ನಿನ್ನ ಕೈಯಲ್ಲಿದೆ. ಆದ್ದರಿಂದ ಮುನಿಸುಬಿಟ್ಟು ಹೋಡು ಎಂದು ಭಾವ). ೧೧೩. ಇದೊಂದು ವಿಚಿತ್ರವೇ ಸರಿ ! ನಿನ್ನ ಆ ವಲ್ಲಭೆಯೆನಿಸಿದವಳು ನಿನ್ನ ಶೀತಯುತವಾದ ಹೃದಯದಲ್ಲಿ ಒಮ್ಮೊಮ್ಮೆ ಇದ್ದೂ ಕೂಡ ಬೆಂದುಹೋದ ರೀತಿಯಲ್ಲಿ ಕಂದಿಹೋಗಿದ್ದಾಳೆ. (ಆದರೆ ಅವಳ) ವಿಯೋಗವೆಂಬ ಅಗ್ನಿಯ ಕಾಯ್ದುಹೋದ ಚಿತ್ತದ ಅಗ್ರದಲ್ಲಿ ಸತತ ನೀನಿದ್ದೂ ಕೂಡ ಸ್ವಲ್ಪವೂ ಕೊರಗಿಹೋದ ಹಾಗೆ ಕಾಣುವುದಿಲ್ಲ ; (ಈ ವಿಷಯದಲ್ಲಿ) ಮನ್ಮಥನು ಪಕ್ಷಪಾತವನ್ನುಂಟುಮಾಡಿದವನಾದನು." ಹೀಗೆನ್ನುವ ಅವಳ ಹೊಸ ರೀತಿಯ ಮಾತನ್ನು ಕೇಳಿ, ಆ ಕಾಂತನು ಆಗಲೇ ಕಾಂತೆಯಲ್ಲಿಗೆ ಬಂದನು. ವ|| ಅನಂತರ ೧೧೪. ನಲ್ಲಳಲ್ಲಿಗೆ ಬಂದು ಅವಳನ್ನು ಬಾಚಿತಬ್ಬಿ, ತುಟಿಗಳನ್ನು ಮೆಲ್ಲನೆ ಚುಂಬಿಸುತ್ತ, ಮುದ್ದು ಮಾಡುತ್ತ, ತನ್ನ ಮೋಹವೆಂಬ ರಸವನ್ನು ಅವಳಂತರಂಗದಲ್ಲಿ ಹರಿಯಿಸಿ, ದಪ್ಪನೆಯ ಕುಚಗಳಲ್ಲಿ ಉಗುರಿನ ಗುರುತುಮಾಡಿ, ಮದನಕಲೆಗಳು ಅಧಿಕಗೊಳ್ಳುವ ಮರ್ಮಸ್ಥಳಗಳನ್ನು ಹಿಚುಕುತ್ತ, ಅವಳೊಡನೆ ನೆರೆದು ಆದರಪೂರ್ಣವಾದ ಉಚಿತ ಮಾತುಗಳನ್ನಾಡಿ, ರೋಮಾಂಚನಗಳಿಂದ ಅವಳಿಗೆ ಹೊದಿಕೆ ಹೊದಿಸುತ್ತಿದ್ದನು. ೧೧೫. ಮಾತುಮಾತಿಗೆ ಒಮ್ಮೊಮ್ಮೆ ಮುದ್ದುಕೊಡುತ್ತ, (ಅವಳ) ಮುಖಕಮಲವನ್ನು ದಿಟ್ಟಿಸಿನೋಡಿ ಚುಂಬನ ಮಾಡುತ್ತ, ಆ ಕೂಡಲೇ ಪುನಃ ಪುನಃ ಅಪ್ಪಿಕೊಳ್ಳುತ್ತ, ನುಣ್ಣನೆಯ ಮುಂಗುರುಳುಗಳನ್ನು (ತನ್ನ ಕೈಯಿಂದ) ತಿದ್ದುತ್ತ, ಅವಳಿಗೆ ಉಂಟಾಗುತ್ತಿದ್ದ ನಾಚಿಕೆಯನ್ನು ದೂರಮಾಡುತ್ತ, ಕಾತರತೆಯನ್ನುಂಟುಮಾಡುತ್ತ, ಅವಳಿಗೆ

ವ॥ ಇಂತು ನೆರೆದನಂತರ ರತಾಂತಕ್ರಾಂತಿಯಂ ತೀರ್ಚಲೆಂದು ನೆಲೆವಾಡದೊಳ್ ನಿಂದೆಳೆಗಾಳಿಗೆರ್ದೆಗೊಟ್ಟು ನಿಂದ ಮುಗ್ಧೆಯರಂ ನಾಗರಿಕನರಸಂಗೆ ತೋಱುತ್ತುಮಿರೆ ಮುಂದೊಂದೆಡೆಯೊಳೊರ್ವಳೆಳೆವರೆಯದ ನಳಿನಾಕ್ಷಿ

ಚಂ॥ ಕನಕಸರೋಜ ಕೋರಕಸಮಸ್ತನಮಂಡಳಮಧ್ಯದಲ್ಲಿ ಮಾ
ನಿನಿ ಮನದನ್ನನಿತ್ತ ನಖರೇಖೆಯನೊಯ್ಯನೆ ನೋಡುವಾಗಳಾ
ತನೆ ಬರುತಲ್ಲಿ ಬಿಂಬಿಸೆ ನಿರೀಕ್ಷಿಸಿ ಬಿಂಬಮನಪ್ಪಿಕೊಂಡು ರಾಗ
ಮ್ಮನೆ ಪುಳಕಂಗಳೇಳೆ ರತಿಗೆಯ್ಯಲೊಡರ್ಚುವಳೇಂ ಪ್ರಮುಗ್ಧೆಯೋ ೧೦೬

ವ॥ ಅವಳನರಸಂಗೆ ಕರಸಂಜ್ಞೆಯಿಂ ನಾಗರಿಕಂ ತೋಱುತ್ತುಮಿರೆಯಿರೆ ಪೆಱತೊಂದೆಡೆ ಯೊಳೊರ್ವಿಟ್ಟೆಗಾರ್ತಿ ಮಗಳ ಮೊಗಮಂ ಕಿಸುಗಣ್ಣೆ ನೋಡಿ ದಾಕ್ಷಿಣ್ಯಮನುಳಿದಿಂತೆಂದಳ್

ಮ॥ ಮೊಗಮಂ ನೋಳ್ಪುದುಮಾಗಳಂತೆ ತಲೆವಾಗುತ್ತಿರ್ಪೆ ಸಂಪ್ರೀತಿಯಿಂ
ಬಿಗೆ ಮಾತಾಡಿಸೆ ಸುಮ್ಮನಿರ್ಪೆ ನಗಿಸಲ್ಕೆಂದಲ್ಲಿ ಸಾರ್ತಂದು ಮೆ
ಲ್ಲಗೆವಾತಂ ಬಿಡದಾಡೆ ನೋಡೆ ಕುಚಭಾರಸ್ರಸ್ತ ಚೇಲಾಂಚಲಂ
ದೆಗೆಯಲ್ಕೋಪಿಪೆ ಕೂರ್ಪರೇ ವರವಿಟರ್ನಿನ್ನಾಟಮಂ ಕಂಡವರ್ ೧೦೭

ಕಲಾತ್ಮಕವಾದ ರತಿಕ್ರೀಡೆಯೆಂಬ ಕಾಣಿಕೆಯನ್ನು ಸಲ್ಲಿಸುತ್ತ, ಹೆಜ್ಜೆ ಹೆಜ್ಜೆಗೂ ಅವಳಲ್ಲಿ ಕಾಮಕೇಳಿಯರಸವು ಅಧಿಕಗೊಳ್ಳುವಂತೆ (ಆಚರಿಸಿ) ಆ ಮನದನ್ನನು ಪ್ರೀತಿಯಿಂದ ಸುರತವೆಸಗಿದನು. ವ॥ ಈ ರೀತಿ ರತಿಕ್ರೀಡೆಯನ್ನು ಮಾಡಿ ಮುಗಿಸಿದ ನಂತರ ಆ ಸುರತಸಂಬಂಧದ ದಣಿವನ್ನು ಆರಿಸಿಕೊಳ್ಳಲೆಂದು ಮೇಲುಪ್ಪರಿಗೆಯಲ್ಲಿ ಮಂದ ಮಾರುತಕ್ಕೆ ಎದೆಯನೊಡ್ಡಿ ನಿಂತುಕೊಂಡಂತಹ ಮುಗ್ಧಸ್ತ್ರೀಯರುಗಳನ್ನು ಅರಸನಿಗೆ ನಾಗರಿಕನು ತೋರಿಸುತ್ತಿರಲು, ಮುಂದೆ ಒಂದು ಸ್ಥಳದಲ್ಲಿ ಒಬ್ಬ ಚಿಕ್ಕಹರೆಯದ ಕಮಲಾಕ್ಷಿಯು ೧೦೬. ಸುವರ್ಣಕಮಲದ ಮೊಗ್ಗುಗಳಿಗೆ ಸಮಾನವಾದ ಕುಚಮಂಡಳಗಳ ಮಧ್ಯದಲ್ಲಿ ತನ್ನ ಪ್ರಿಯನು ಮಾಡಿದ ಉಗುರಿನ ಗಾಯದ ಗೆರೆಯನ್ನು ಕನ್ನಡಿಯ ಮುಂದೆ ನಿಂತು ನೋಡಿಕೊಳ್ಳುತ್ತಿರುವಾಗ, ಆತನು ಹಿಂದಿನಿಂದ ಬರುತ್ತಿರುವುದು ಕನ್ನಡಿಯಲ್ಲಿ ಪ್ರತಿಬಿಂಬಿತವಾಗಿರುವುದನ್ನು ಕಂಡು, ಪುಳಕಗೊಂಡ ಶರೀರವುಳ್ಳವಳಾಗಿ; (ಆ ಪ್ರತಿಬಿಂಬವನ್ನೇ) ಅಪ್ಪಿಕೊಂಡು ಸುರತಸುಖಕ್ಕೆ ಬಯಸುವ ಅವಳು ಅದೆಂಥ ಮಹಾಮುಗ್ಧೆಯೋ! ವ॥ ಅಂಥವಳನ್ನು ರಾಜನಿಗೆ ನಾಗರಿಕನು ತನ್ನ ಕೈಸಂಜ್ಞೆಯಿಂದ ತೋರಿಸುತ್ತ (ಮುಂದೆ ನಡೆದು), ಮತ್ತೊಂದು ಕಡೆಯಲ್ಲಿ ಒಬ್ಬ ಸ್ವೈರಿಣಿಯು ತನ್ನ ಮಗಳ ಮುಖವನ್ನು ಕೆಂಪಾದ ಕಣ್ಣುಗಳಿಂದ ನೋಡಿ, ಸ್ವಲ್ಪವೂ ದಾಕ್ಷಿಣ್ಯವಿಲ್ಲದಂತೆ ಹೀಗೆ ಹೇಳಿದಳು. ೧೦೭. "ಶ್ರೇಷ್ಠರಾದ ವಿಟಪುರುಷರು ನಿನ್ನ ಮುಖವನ್ನು ನೋಡುತ್ತಿದ್ದ ಹಾಗೆಯೇ ತಲೆ ತಗ್ಗಿಸುತ್ತೀಯೆ ; ಒಳ್ಳೆಯ ಪ್ರೀತಿ ಯಿಂದ ಮಾತನಾಡಿಸಲು ಸುಮ್ಮನಾಗಿಬಿಡುತ್ತೀಯೆ; ನಗಿಸಲಿಕ್ಕೆಂದು ಹತ್ತಿರಕ್ಕೆ ಬಂದು ಮೃದುವಾದ ನಗಸಾಟಿಕೆಯ ಮಾತನಾಡಿದರೆ ಅವರನ್ನು ನೋಡುವುದು ಕೂಡ ಇಲ್ಲ;

ವ॥ ಮತ್ತಮದಲ್ಲದಿತ್ತೊಂದು ಮಣಿಮಂದಿರದೊಳ್ ನಾಣಿಲಿಯದೆ ನಲ್ಲನೊಳ್ಕೆರದು ಮಾಗಳ್ಪೊಱಮಟ್ಟು ಬರ್ಪುದುಮಱಿದಿರ್ದು ಬರ್ದೆ ಬಳಿಕಿಂತೆಂದಳ್

ಉ॥ ಸೂಳೆತನಕ್ಕಿದೇಂ ಸೊಗಸೆ ಲಜ್ಜೆ ನಿಜಾಲಯಕ್ಕೈದಿದೋಪರೊ
ಳ್ಮೇಳಕೆ ಮೆಯ್ಯನೀಯದೆ ಕರಾಗ್ರದೆ ಪೊಯ್ಯದೆ ತಳ್ಕೆಗೆಯ್ಯದು
ರ್ಬೇಳದೆ ತಳ್ತು ಸೀಳದೆ ನಖಾಗ್ರದೆ ತಾಳದೆ ಚುಂಬನಂಗಳಂ
ಪೇಳದೆ ಮಾರಮಂತ್ರಮನಿದೇಂ ರತಿವಿದ್ಯೆಗೆ ಮುಯ್ಯನಾಂಪುದೇ ೧೦೮

ವ॥ ಮತ್ತಮೊರ್ವಳ್ಪಿದಗ್ಧೆ ಮಗಳ್ಗೆ ಬುದ್ಧಿವೇಳ್ದಳದೆಂತೆಂದೊಡೆ

ಶಾ॥ ಗರ್ವಂಗುಂದದಿರಿಂದುವಕ್ತ್ರೆ ಘನಗರ್ವಂದಾಳದಿಪ್ರೀತಿವ
ಟ್ಟೊರ್ವಂಗಂ ಮನಮಿಕ್ಕದಿರ್ಸೊವಡನೆಂದುಂ ಮಾಡದಿರ್ಕೂಟದೊಳ್
ಪರ್ವಿರ್ದಗ್ಗಳದಾಸೆಯಂ ಬಳಸದಿರ್ಕೊಟ್ಟಲ್ಲದೊಲ್ದಪ್ಪದಿರ್
ಸರ್ವತ್ರಾತಿಶಯಂ ತ್ಯಜೇದೆನಿಪುದಂ ನೀಂ ಮಾಱದಿರ್ಮಾನಿನೀ ೧೦೯

ಭಾರವಾದ ಕುಚಗಳಿಂದ ಜಾರಿದ ಸೆರಗನ್ನು ತೆಗೆಯಲು ಕೋಪಿಸಿಕೊಳ್ಳುತ್ತೀಯೆ. ಹೀಗಿದ್ದರೆ ನಿನ್ನ ಆಟವನ್ನು ಕಂಡು ಯಾವ ವಿಟನು ನಿನ್ನ ಹತ್ತಿರಕ್ಕೆ ಪ್ರೀತಿಯಿಂದ ಬಂದಾನು!" ವ॥ ಅದೂ ಅಲ್ಲದೆ ಇತ್ತ ಕಡೆಯು ಇನ್ನೊಂದು ರತ್ನಗೃಹದಲ್ಲಿ ಒಬ್ಬಳು ನಾಚಿಕೆಯಿಲ್ಲದೆ ತನ್ನ ನಲ್ಲನೊಡನೆ ಸಂಭೋಗಿಸಿ, ಆಗಲೇ ಹೊರಹೊರಟು ಬರಲು, ಅದನ್ನು ತಿಳಿದು ಕುಂಟಣಿಯೊರ್ವಳು ಅವಳನ್ನು ಕಂಡು ಹೀಗೆ ಹೇಳಿದಳು. ೧೦೮. "ಸೂಳೆತನಕ್ಕೆ ಈ ಲಜ್ಜೆಯೇನು ಸೊಗಸೇ ! ಮನೆಗೆ ಬಂದ ಪ್ರಿಯನಾದವನ ಮನದಿಚ್ಛೆಗೆ ತಕ್ಕಂತೆ ಮೈಯನ್ನು ಕೊಡದೆ, ಕೈಬೆರಳುಗಳಿಂದ ತಾಡನಾದಿಗಳನ್ನು ಮಾಡದೆ, ತೋಳತೆಕ್ಕೆಯಲ್ಲಿ ಬಿಗಿಯಾಗಿ ಅಪ್ಪಿಕೊಳ್ಳದೆ, ಮನದ ಪ್ರೀತಿಯನ್ನು ತೋರ್ಪಡಿಸಿ ಕೊಳ್ಳದೆ, ಉಗುರುಗಳ ತುದಿಯಿಂದ ಸೀಳದೆ, ಚುಂಬನಾದಿಗಳನ್ನು ತಡೆದುಕೊಳ್ಳದೆ, ಮದನಕ್ರೀಡಾಸಮಯದಲ್ಲಿನ ರತಿಪ್ರಚೋದಕ ನುಡಿಗಳನ್ನಾಡದೆ, (ರತಿಸುಖವನ್ನು ಅನುಭವಿಸಿದರೆ) ರತಿವಿದ್ಯೆಗೆ ಮುಯ್ಯನ್ನು ಕೊಟ್ಟಹಾಗಾದೀತೇ?" ವ॥ ಮತ್ತೊಬ್ಬ ಪ್ರೌಢೆಯಾದ ಜಾರಿಣಿಯು ತನ್ನ ಮಗಳಿಗೆ ಬುದ್ಧಿ ಹೇಳುತ್ತಿದ್ದಳು. ಅದು ಹೇಗೆಂದರೆ, ೧೦೯. "ಚಂದ್ರಮುಖಿಯಾದ ಮಗಳೇ, ನೀನು ಗರ್ವವನ್ನು ಕಳೆದು ಕೊಳ್ಳಬೇಡ; ವಿಶೇಷವಾದ ಬಿಗುಮಾನವನ್ನು ತಾಳದಂತೆ ಇರು ; ಪ್ರೀತಿದೋರುವ ಒಬ್ಬನ ವಿಷಯದಲ್ಲೇ ಮನಸ್ಸನ್ನು ಇಡಬೇಡ; ಸಂಭೋಗ ಸಮಯದಲ್ಲಿ ಎಂದೂ ವಿರಸ ವನ್ನು ಮಾಡಬೇಡ; ಆದರೆ ವಿಶೇಷವಾದ ಆಸೆಯನ್ನು ಆ ಕೂಟದಲ್ಲಿ ತೋರ್ಪಡಿಸಿ ಕೊಳ್ಳಬೇಡ ; ಹಣವನ್ನು ವಿಟನು ಮೊದಲು ಕೊಟ್ಟಲ್ಲದೆ ಪ್ರೀತಿಯಿಂದ ಅಪ್ಪಿಕೊಳ್ಳ ಬೇಡ ; ಸರ್ವತ್ರ ಅತಿ ಎಂಬುದನ್ನು ವರ್ಜನೆ ಮಾಡಬೇಕು ಎಂದಿರುವ (ಸುಭಾಷಿತದ) ಮಾತನ್ನು (ಅಂದರೆ 'ಅತಿಸರ್ವತ್ರ ವರ್ಜಯೇತ್' ಎಂಬ ಮಾತನ್ನು) ಮಾನಿನಿಯೇ

ಉ॥ ನೋಡಿದೊಡಿನ್ನುಮೊರ್ಮೆ ನಡೆನೋಡಳೆಯೆಂದೆನೆ ನೋಡು ಸಾರ್ದು ಮಾ
ತಾಡಿದೊಡಿನ್ನುಮೊರ್ಮೆ ನುಡಿಯಳ್ಗಡಯೆಂದೆನೆ ಮಾತನಾಡು ಜಾ
ಣ್ನೂಡಿ ವಿಳಾಸದಿಂ ಸುಳಿದೊಡಿನ್ನುಮಿವಳ್ಸುಳಿದೈದಳೇಯೆನು
ತ್ತಾಡೆ ಭುಜಂಗರಲ್ಲಿ ಸುಳಿದಗ್ಗಳಬೇಟಮನುಂಟುಮಾಡು ನೀಂ ೧೧೦

ವ॥ ಮತ್ತಮೊರ್ವಳ್ ತನ್ನ ತನೂಭವೆಯ ಸೌಕುಮಾರ್ಯಮಾಧುರ್ಯಂಗಳಂ ಪೊಗಳ್ದು ತನ್ನ ಕೆಳದಿಗಿಂತೆಂದಳ್

ಚಂ॥ ಮುಡಿ ಕಡುಬಿಣ್ಪದೆಂದು ಸೆಡೆವಳ್ಮುಡಿದಪ್ಪಳೆ ಪುಷ್ಪಮಾಲೆಯಂ
ಜಡಿವ ಘನಸ್ತನಕ್ಕೆ ಮಣಿವಳ್ಮಣಿಹಾರಮನಾಂಪಳೇ ಕರಂ
ಪೊಡರ್ವ ನಿತಂಬಭಾರಕಲಸುತ್ತಡಿಯಿಕ್ಕುವ ಕಾಂತೆ ಕಾಂಚಿಯಂ
ತುಡುವಳೆ ಸಿಂಗರಂಬಡೆಯದೆನ್ನ ಮಗಳ್ವಿಟರಂ ಮರುಳ್ಚುವಳ್ ೧೧೧

ಕಂ॥ ಕೂರದ ಕಡೆಗಣ್ನೋಟದೆ
ಕೂರದನಂ ಕೂರಿಸುವಳುರೋಜಂಗಳ ಬ
ಲ್ಭಾರದ ಬಗೆಯಂ ಕಾಣಿಸಿ
ಬಾರದನಂ ಬರಿಪಳೆನ್ನ ಸುತೆ ಮನೆಗಾಗಳ್ ೧೧೨

ನೀನು ಎಂದೂ ಮೀರಬೇಡ. ೧೧೦. ನಿನ್ನ ನೋಟದಲ್ಲಿ ಇನ್ನೊಂದುಸಲ (ಇವಳು ನನ್ನನ್ನು) ನೋಡಬಾರದೇ! ಎಂಬ ಆಸೆಯನ್ನುಂಟುಮಾಡುವಂತೆ ನೋಡು; ಬಳಿಗೆ ಬಂದು ನಿಂತು ಮಾತನಾಡಿಸಿದರೆ ಇನ್ನೊಮ್ಮೆ ಮಾತಾಡಬಾರದೇ! ಎನ್ನುವಹಾಗೆ ಮಾತಾಡು; ಜಾಣ್ಮೆಯುಂದಲೂ, ವಿಲಾಸಯುಕ್ತವಾಗಿಯೂ, ಸುಳಿದಾಡುವಾಗ ಇನ್ನೊಮ್ಮೆ ಸುಳಿದಾಡಿ ಬರಬಾರದೇ! ಎನ್ನುವಂತೆ ಆ ವಿಟರಲ್ಲಿ ಸುಳಿದಾಡಿ ವಿಹರಿಸಿ, ಅವರಿಗೆ ನಿನ್ನಲ್ಲಿ ಅತ್ಯಂತ ಆಸೆಯುಂಟಾಗುವಹಾಗೆ ವರ್ತಿಸು." ವ॥ ಮತ್ತೊಬ್ಬಳು ತನ್ನ ಮಗಳ ಸುಕುಮಾರವೂ ಮಧುರವೂ ಆದ ಚೆಲುವನ್ನು ಹೊಗಳುತ್ತ ತನ್ನ ಗೆಳತಿಗೆ ಹೀಗೆ ಹೇಳಿದಳು: ೧೧೧. "ತುರುಬೇ ಬಹಳ ಭಾರವೆನ್ನುವವಳು ಹೂವಿನ ಮಾಲೆಯನ್ನು ಮುಡಿಯುತ್ತಾಳೆಯೇ! ಮೊಲೆಗಳ ಭಾರಕ್ಕೆ ಬಾಗುವವಳು ರತ್ನಹಾರಗಳನ್ನು ಹಾಕುತ್ತಾಳೆಯೇ! ಅಲ್ಲಾಡುವ ನಿತಂಬಗಳ ಭಾರಕ್ಕೆ ಆಲಸ್ಯಪಡುತ್ತ ಹೆಜ್ಜೆಹಾಕುವ ಈ ಚೆಲುವೆ ನಡುವಿಗೆ ಡಾಬನ್ನು ಹಾಕಿಕೊಳ್ಳುತ್ತಾಳೆಯೆ! ಹೀಗೆ ಶೃಂಗಾರವನ್ನು ಮಾಡಿಕೊಳ್ಳದೆಯೇ ನನ್ನ ಮಗಳು ವಿಟರುಗಳನ್ನು ಮರಳಿ ಬರುವಂತೆ ಮಾಡುತ್ತಾಳೆ. ೧೧೨. ತೀಕ್ಷ್ಣವಾದ ಕಡೆಗಣ್ಣುಗಳ ನೋಟದಿಂದ ಪ್ರೀತಿಯಿಲ್ಲದವನಲ್ಲಿಯೂ ಪ್ರೀತಿಯುಂಟಾಗುವ ಹಾಗೆ ಮಾಡುವಳು. ಬಲುಭಾರವಾದ ಮೊಲೆಗಳ ಅಂದವು ಕಾಣುವಂತೆ ಮಾಡಿ, ಬಾರದವನನ್ನು ಮನೆಗೆ ಬರುವಹಾಗೆ ನನ್ನ ಮಗಳು ಮಾಡುತ್ತಾಳೆ."

ವ॥ ಅದಲ್ಲದೆ ಪೆಱತೊಂದೆಡೆಯೊಳೊರ್ವಳ್

ಕಂ॥ ಎಳೆಯುಳೆ ಕಟಾಕ್ಷಪಾಶದಿ
ನೆಳೆಯೆಳೆಯುವ ಮೃಗಮನಂದದೊಳ್ ಶಶಿಕಳೆವೋಲ್
ಪೊಳೆಯುಳೆ ಶೃಂಗಾರರಸದ
ಪೊಳೆಯೆಳೆಯದರಾರೊ ಪೊನ್ನನಿವಳ್ಗತಿಧನಿಕರ್ ೧೧೩

ಪಿಡಿನಡೆ ಪಿಡಿನಡು ಪೊಸಕೈ
ಪಿಡಿ ವೊಗಮುಡುಪತಿಯ ಕದಿರನಾಳ್ದಲರ್ಗಣ್ಕೆಂ
ಪಿಡಿದಧರದಳಂ ಕಡುವಿ
ಣ್ಪಡಿಕಿಱಿದ ನಿತಂಬಮೆನ್ನ ತನುಭವೆಗೆಸೆಗುಂ ೧೧೪

ಉ॥ ನೋಡದೆ ಪೋದೊಡೊಂದಱಿಯೆನೆನ್ನ ತನೂಜೆಯನೊರ್ಮೆ ಕೂರ್ಮೆಯಿಂ
ನೋಡಿದೊಡಾಗಳಂಗಜಮಹಾಶಿಖಿ ಮೂಡದೆ ಬಲ್ಪು ಬಾಡದ
ಳ್ಕಾಡದೆ ಚಿತ್ತಮೋಡದೆ ಮದಂ ಪಿಕಿಕೋಡದೆ ಕೂಗಿ ಮೂರ್ಛೆಯುಂ
ಮಾಡದೆ ಕಾಯ್ಪುಗೂಡದೆ ಸುಧಾರುಚಿ ಕಾಡದೆ ಕಂತು ಮಾಣ್ಗುಮೇ ೧೧೫

ವ॥ ಅದೂ ಅಲ್ಲದೆ ಬೇರೊಂದು ಸ್ಥಳದಲ್ಲಿ ಒಬ್ಬಳು ೧೧೩. "ತನ್ನ ಕಡೆಗಣ್ಣುಗಳ ಕಾಂತಿಯೆಂಬ ಹಗ್ಗದಿಂದ ವಿಟರುಗಳೆಂಬ ಮೃಗಗಳನ್ನು ಕಟ್ಟಿ ಒಬ್ಬ ಬಾಲಕಿಯು ಎಳೆಯುತ್ತಿದ್ದಳು. ಚಂದ್ರಕಳೆಯ ಹಾಗೆ ಶೃಂಗಾರರಸದ ಹೊಳೆಯನ್ನೇ ಹರಿಸುತ್ತಿರುವ ಇವಳಿಗೆ ಅತಿ ಶ್ರೀಮಂತರಾದವರು ಯಾರು ತಾನೆ ಬಂಗಾರದ ಹೊಳೆಯನ್ನು ಹರಿಸದೆ ಇದ್ದಾರು ! ೧೧೪. ಆನೆಯ ಹಾಗೆ ಇರುವ ಮಂದವಾದ ನಡಿಗೆ, ಮುಷ್ಟಿಯಲ್ಲಿ ಅಡಕಗೊಳ್ಳುವಂತಹ ಚಿಕ್ಕದಾದ ನಡು, ನೂತನವಾದ ಕನ್ನಡಿಯಂತಹ ಮುಖ, ಚಂದ್ರ ಕಿರಣಗಳಂತಹ ತಂಪಾದ ಕಿರಣಗಳುಳ್ಳ ಕಮಲನೇತ್ರ, ಕೆಂಪಾದ ತುಟಿಗಳು, ವಿಶೇಷವಾಗಿ ಕರ್ಕಶಗೊಂಡು ಒತ್ತಾದ ನಿತಂಬಗಳು ನನ್ನ ಮಗಳಿಗೆ ಶೋಭೆಗೊಂಡಿವೆ. ೧೧೫. (ಈ ರೀತಿಯಿಂದಿರುವ) ನನ್ನ ಮಗಳನ್ನು (ಯುವಕ ವಿಟರುಗಳು) ನೋಡದೆ ಹೋದರೇನೋ ತಿಳಿಯೆನು ; ಒಮ್ಮೆ ಪ್ರೀತಿಯಿಂದ ನೋಡಿದ್ದೇ ಆದರೆ ಆ ಕೂಡಲೇ ಅವರಲ್ಲಿ ಮದನಸಂಬಂಧವಾದ ಬೆಂಕಿಯು ಹೊತ್ತಿಕೊಳ್ಳದೆ ಇರುವುದೇ ! ಶಕ್ತಿಯು ಕುಂದದಿರುವುದೇ ! ಚಿತ್ತವು ಅಲ್ಲಾಡದಿರುವುದೇ ! (ಅವರಲ್ಲಿರುವ) ಮದವು ಓಡದೆ ಇರುವುದೇ ! ಹೆಣ್ಣುಕೋಗಿಲೆಯು ಹೆದರದೆ ಕೂಗಿ ಮೂರ್ಛೆ ಬರುವಂತೆ ಮಾಡದೆ ! ಬಿಸಿಯು ದೇಹದಲ್ಲಿ ಉಂಟಾಗದೆ ! (ಬೆಳದಿಂಗಳ ಕಾಂತಿ ಕಾಡದೆ ! ಅಥವಾ) ಅಧರದಲ್ಲಿರುವ ಅಮೃತರುಚಿಯು ಪಾನಮಾಡಬೇಕೆಂಬ ಬಯಕೆ ಕಾಡದೆ ! ಮನ್ಮಥ

ವ॥ ಎಂಬನೇಕವಿಧ ವಿದಗ್ಧಾಲಾಪಂಗಳಂ ಕೇಳುತ್ತುಂ ಬರುತ್ತಿರೆ ಮುಂದೊಂದು ಮಣಿಮಯದ್ವಾರದೊಳಂದಂಬಡೆದು ನಿಂದ ಸುಂದರಿಯ ಮುಂಗೈಯೊಳ್ ಸಿಂಗರಮೆನೆ ಕುಳ್ಳಿರ್ದು

ಚಂ॥ ಜಡೆಯ ಬೆಡಂಗಿ ನುಣ್ಣೊಸಲ ನಾಯಕಿ ಚೆಂದುಟಿಯಂದಗಾರ್ತಿ ಮೆ
ಲ್ನುಡಿಯ ಮೃಗಾಕ್ಷಿ ತೆಳ್ಗದಪಿನಂಗನೆ ಬಲ್ಮೊಲೆಯಬ್ಜಗಂಧಿ ಸು
ಣ್ದೊಡೆಯ ಲತಾಂಗಿ ಮೆಲ್ಲಡಿಯ ಮುಗ್ಧೆ ನಿತಂಬದ ನೀಳ್ ನಿನ್ನೊಳೋ
ತೊಡೆವೆರೆದಿರ್ಪನಾವನವನಂಗಜಪಟ್ಟಮನಾಳ್ದನಾಗನೇ ೧೧೬

ವ॥ ಎಂದು ಸರಸವಚನದಿಂ ಬಣ್ಣಿಪರಗಿಳಿಗೆ ನಱುದಂಬುಲ ಗುಟುಂಕುಗೊಡುವವಳ ಬಾಯ್ದೆಱೆಗಂಡೆನಗಂ ಬಾಯೊರೆತಪ್ಪುದೆಂಬ ವಿದೂಷಕನ ನುಡಿಗೆ ಮುಗುಳ್ನಗೆ ನಗುತ್ತಿರಸನಿರ್ಪ ನಿತಱೊಳೊರ್ವ ತುಂಬುಜವ್ವನದ ಬಿಂಬಾಧರೆ ನಿಜವಿರಹ ವೀತಿಹೋತ್ರವಿಧುರಿತೆ ವೀಥಿಯೊಳ್ ಬರ್ಪುದಂ ಕಂಡನ್ಯಭಂಗಿಯಂ ತಳೆದವಳ ಮನದನ್ನಂ ದನಿಪಳೆದಪ್ಪಿ ನುಡಿಯಿಸುವಲ್ಲಿ

ಸಂಬಂಧವಾದ ಅಭಿಲಾಷೆಯು ಸುಮ್ಮನೆ ಬಿಡುವುದೇ!" ವ|| ಹೀಗೆ ಮಾತಾಡುತ್ತಿರುವ ಅನೇಕ ವಿಧವಾದ ಪ್ರೌಢೆಯರಾದ ವೇಶ್ಯಾಸ್ತ್ರೀಯರ ಮಾತುಗಳನ್ನು ಕೇಳುತ್ತ ಬರುತ್ತಿರಲು, ಮುಂಭಾಗದಲ್ಲಿ ಒಂದು ರತ್ನಮಯವಾದ ಬಾಗಿಲಿನಲ್ಲಿ ಶೃಂಗಾರಗೊಂಡು ನಿಂತ ಸುಂದರಿಯೊಬ್ಬಳ ಮುಂಗೈಯಲ್ಲಿ ಸುಂದರವಾಗಿ (ಅರಗಿಳಿಯೊಂದು) ಕುಳಿತುಕೊಂಡು ೧೧೬. "ಬೆಡಗಿನಿಂದ ಕಟ್ಟಿರುವ ಜಡೆಯುಳ್ಳವಳೂ, ನುಣ್ಣನೆಯ ಹಣೆಯುಳ್ಳವರ ನಾಯಿಕೆಯೂ, ಕೆಂಪಾದ ತುಟಿಗಳ ಅಂದವುಳ್ಳವಳೂ, ಮೃದು ಮಾತಿನ ಮೃಗಾಕ್ಷಿಯೂ, ನುಣ್ಣನೆಯ ಕೆನ್ನೆಗಳ ಅಂಗನೆಯೂ, ಭಾರವಾದ ಮೊಲೆಗಳಿಂದ ಕೂಡಿ ಕಮಲದ ಸುವಾಸನೆಯಂತೆ ದೇಹಗಂಧವುಳ್ಳವಳೂ, ನುಣ್ಣನೆಯ ತೊಡೆಗಳಿಂದ ಕೂಡಿ ಲತೆಯಂತಹ ದೇಹವುಳ್ಳವಳೂ, ಮೃದುವಾದ ಪಾದಗಳಿಂದ ಕೂಡಿ ಸುಂದರಿಯಾಗಿರುವವಳೂ, ದೊಡ್ಡ ದೊಡ್ಡ ಪೊರವಾರಗಳಿಂದ ಕೂಡಿ ಲಾವಣ್ಯವತಿಯಾಗಿಯೂ ಇರುವ ನಿನ್ನಲ್ಲಿ ಪ್ರೀತಿಯಿಂದ ಬೆರೆಯುವವನನು ಯಾರೋ ಅವನು ಮನ್ಮಥ ಪಟ್ಟವನ್ನು ಪಡೆಯುವವನಾಗುವುದಿಲ್ಲವೇ!" ವ|| ಹೀಗೆಂದು ಸರಸವಾದ ಮಾತುಗಳಿಂದ ವರ್ಣಿಸುತ್ತಿರುವ ಅರಗಿಳಿಗೆ ಸುವಾಸನಾಯುಕ್ತ ತಾಂಬೂಲದ ಗುಟುಕನ್ನು ಕೊಡುತ್ತಿರುವವಳ ತುಟಿಗಳನ್ನು ಕಂಡು ನನಗೂ ಬಾಯಲ್ಲಿ ನೀರೂರುವುದೆಂಬ ವಿದೂಷಕನ ನುಡಿಗಳಿಗೆ ಅರಸನು ಮುಗುಳ್ನಗೆ ನಗುತ್ತ ಇರುವಷ್ಟರಲ್ಲಿ, ಓರ್ವ ಪೂರ್ಣ ಯೌವನದ ಬಿಂಬಾಧರಗಳನ್ನುಳ್ಳವಳು ವಿರಹಾಗ್ನಿಯಿಂದ ಬೆಂದುಹೋಗಿ ಉದ್ಯಾನವನಕ್ಕೆ ಹೊರಟು, ಬೀದಿಯಲ್ಲಿ ಬರುವುದನ್ನು ನೋಡಿ ಒಬ್ಬ ಪ್ರಿಯನು ಬೇರೆ ರೀತಿಯ ಭಂಗಿಯನ್ನು ಹೊಂದಿ, ದನಿಯನ್ನು ಬದಲಿಸಿ ಅವಳ ಪ್ರಿಯನೇ ಅಪ್ಪುವಂತೆ ಅಪ್ಪಿ ನುಡಿ

ಉ॥ ಏನೆಲೆ ಬಾಲೆಯೇಕೆಲೆ ಭುಜಂಗಯಿದೆಲ್ಲಿಗೆ ಪೋಪೆ ಪರ್ಬಿದು
ದ್ಯಾನಕದೇಕೆ ನೀರ್ಮುಳುಗಲೀ ಪೊಸಜೊನ್ನದೊಳುಂಟೆವುಂಟು ಕಾ
ಮಾನಲದಗ್ಧೆಯೋ ನುಡಿಯಲೇನೊಡವರ್ಪೆನೆ ಬೇಡವೊರ್ವಳೇ
ನೀನೆಲೆಯಾದೊಡೇನಗಿವೆಯಿಲ್ಲೆನೆ ಕೈಪಿಡಿದಪ್ಪಿದಂ ವಿಟಂ ೧೧೭

ಕಂ॥ ಕಂಡಿನಿಯನೆಂದು ತಿಳಿದಾ
ಖಂಡಲ ಸಂಪದಮೆ ಸಾರ್ದಪೊಲ್ಸಂಭ್ರಮದಿಂ
ಪಿಂಡೇಳ್ವ ಪುಳಕದೊಡನೊಡ
ಗೊಂಡೊಯ್ವುತ್ತಾತ್ಮಗೃಹದೊಳವನೊಡವೆರೆದಳ್ ೧೧೮

ವ॥ ಮತ್ತೊಂದು ಚಂದನರಸಧವಳಿತಕೇಳೀನಿಳಯ ಮಧ್ಯಮಂಡಿತ ಮಣಿಮಯಮಂಚಾಗ್ರದ ಮಱಿಯಂಚೆದುಪ್ಪುಳಮೆಲ್ಪೊಂದಿದ ತಲ್ಪದೊಳೊರ್ವ ಬೇಟಗಾರ್ತಿ ತೋಟಗಾರ್ತಿಯಂತೆ

ಮ॥ ಮುಗುಳಂಬಂಗೆಣೆಯಾದನಂ ಬರಿಸಿ ತದ್ಬಾಹಾಲಸತ್ಕಲ್ಪವ
ಲ್ಲಿಗಡರ್ಪಂ ಕುಡುವಂತೆ ಕೊಟ್ಟು ತನುವಂ ನೀರ್ವೊಯ್ವವೋಲ್ ಘರ್ಮವಾ
ರಿಗಳಿಂ ತೊಯ್ದುದಱಲ್ಲಿ ಚೆಂದಳಿರ್ಗಳಂ ತಾನಾಗಿಪಂತೊತ್ತಿ ಕೂ
ರುಗುರಿಂ ಪೂಗುಡಿ ಮೂಡಿಪಂತೆ ಮೊಲೆಯಿಂ ಕೈದೀವಿ ಕಣ್ಗೊಪ್ಪಿದಳ್ ೧೧೯

ಸುತ್ತ ೧೧೭. (ಈ ಪದ್ಯ ಸಂಭಾಷಣಾರೂಪವಾಗಿದೆ.) ವಿದೂಷಕ–ಏನೆಲೆ ಬಾಲೆ! ಜಾರೆ–ಏಕೆಲೆ ವಿಟನೇ! ವಿದೂ–ಎಲ್ಲಿಗೆ ಹೋಗುತ್ತಿರುವೆ? ಜಾರೆ–ಬೆಳೆದ ಉದ್ಯಾನವನಕ್ಕೆ. ವಿದೂ–ಅದೇತಕ್ಕೆ ? ಜಾರೆ–ನೀರಿನಲ್ಲಿ ಮುಳುಗಲು, ವಿದೂ–ಈ ಹೊಸ ಬೆಳದಿಂಗಳ ಸಮಯದಲ್ಲಿ ನೀರಲ್ಲಿ ಮುಳುಗುವುದು ಎಲ್ಲಿಯಾದರೂ ಉಂಟೆ ? ಜಾರೆ–ಉಂಟು. ವಿದೂ–ಮನ್ಮಥಸಂಬಂಧವಾದ ಬೆಂಕಿಯಲ್ಲಿ ಬೆಂದಿರುವವಳೇನು ? ಜಾರೆ–ಅದನ್ನು ಮಾತನಾಡಿ ಏನು ಪ್ರಯೋಜನ ? ವಿದೂ–ನಾನೂ ಸಂಗಡ ಬರಲೇ ! ಜಾರೆ–ಬೇಡ. ವಿದೂ–ಎಲೆಗೆ ! ನೀನೊಬ್ಬಳೇ ! ಜಾರೆ–ಆದರೇನು ? ಹೆದರಿಕೆ ಇಲ್ಲ." ಹೀಗೆನ್ನುತ್ತಿದ್ದಂತೆಯೋ ವಿಟನು ಕೈಹಿಡಿದು ಅಪ್ಪಿಕೊಂಡನು. ೧೧೮. ಜಾರೆಯು ಅವನನ್ನು ತನ್ನ ನಲ್ಲನೆಂದೇ ತಿಳಿದು, ಇಂದ್ರಭೋಗವೇ (ತನಗೆ) ಕೈಸಾರಿದಹಾಗೆ ಸಂಭ್ರಮಗೊಂಡು, ಗುಂಪುಗೂಡಿ ಏಳುತ್ತಿರುವ ರೋಮಾಂಚನದಿಂದ ಕೂಡಿದವಳಾಗಿ, ಅವನನ್ನು ಕೂಡಿಕೊಂಡು ತನ್ನ ಮನೆಗೆಬಂದು ಅವನಲ್ಲಿ ರತಿಕ್ರೀಡೆಯನ್ನು ಆಚರಿಸಿದಳು ವ॥ ಮತ್ತೊಂದು ಚಂದನರಸದಿಂದ ಬೆಳ್ಳಗಾದ ಕೇಳೀಗೃಹದ ಮಧ್ಯದಲ್ಲಿ ಅಲಂಕರಿಸಲ್ಪಟ್ಟ ರತ್ನಖಚಿತವಾದ ಮಂಚದ ಮೇಲಿರುವ ಹಂಸತೂಲಿಕಾತಲ್ಪದಲ್ಲಿ ಒಬ್ಬ ಚೆಲುವೆಯು ಉದ್ಯಾನವನ ಪಾಲಿಕೆಯಂತೆ ೧೧೯. ಪುಷ್ಪಬಾಣನಾದ ಮನ್ಮಥನಿಗೆ ಸಮಾನನಾದ ವಿಟನನ್ನು (ಮನೆಗೆ) ಬರಮಾಡಿಕೊಂಡು, ಆತನ ಬಾಹುಗಳೆಂಬ ಕಲ್ಪಲತೆಗೆ ಒತ್ತುಗೋಲನ್ನು ಕೊಡುವಂತೆ ತನ್ನ ದೇಹವನ್ನರ್ಪಿಸಿ, (ಅದರ ಬುಡಕ್ಕೆ) ನೀರನ್ನು ಎರೆಯುತ್ತಿರುವಳೋ ಎಂಬಂತೆ ಬೆವರಿನ ನೀರುಹನಿಗಳನ್ನು ಸುರಿಸಿ ತೋಯಿಸಿ, ಅದರಲ್ಲಿ (ಆ ಕಲ್ಪಲತೆಯಲ್ಲಿ)

ಕಂ॥ ತನುರುಹಮುಗೆವೊಯ್ದುವೊಲಿರೆ
ತನು ತಳ್ತಿರೆ ಲಜ್ಜೆಯೊಂದೆ ತನುತೆಯನೊಲ್ದಾಂ
ತನುನಯಮನತನು ಸುಖದ ಸು
ತನುವಿಂತನುಭವಿಸುತಿರ್ದಳಿನಿಯನೊಳೊರ್ವಳ್ ೧೨೦

ಚಂ॥ ನೊಸಲ ಲಲಾಮಮುಂ ಸ್ತನದ ಚಂದನಮುಂ ತೊಡೆದಂತೆ ಪೋಗೆ ರಂ
ಜಿಸುವ ಲತಾಂಗಮುಂ ಜಘನಮುಂ ಪದವೆತ್ತಿರೆ ಕರ್ಣಪೂರಮುಂ
ಪೊಸಮುಡಿವೂಗಳುಂ ಜಗುಳೆ ನುಣ್ದೊಡೆಯುಂ ನಡುವುಂ ಕಡಂಗಿ ಕಂ
ಪಿಸೆ ಗಳನಾದಮುಂ ಶ್ವಸಿತಮುಂ ನೆಗಳುತ್ತಿರೆ ತಳ್ತು ಕೂಡಿದಳ್ ೧೨೧

ವ॥ ಅದಲ್ಲದೆ ಬೇಱೊಂದೆಡೆಯೊಳೊರ್ವಳ್ನೆರೆದು ಸೇದೆವಟ್ಟು ಬೆಮರಾರಿಸಲ್ಕೆಂದು ಮಂದಿರದ ಮುಂದಣ ಮತ್ತವಾರಣಮಂ ನೆರ್ಱಿ ನಿಂದಿರ್ಪುದುಮವಳ ಮೊಗದ ಕಳೆಯಂ ಕಂಡೊರ್ವ ಸೊಬಗಬೊಜಗನೊತ್ತೆಗುಡಲೊಡನೆ ಪಿಡಿದುದಂ ಕಂಡು ಪೊರ್ದಿ ತಿಳಿದಿಂತೆಂದಂ

ಕೆಂಪಾದ ಚಿಗುರುಗಳು ಉಂಟಾಗುವ ಹಾಗೆ ಒತ್ತಿ (ಅನುರಾಗಾಂಕುರವೇಳುವ ಹಾಗೆ ಒತ್ತಿ), ಚೂಪಾದ ಉಗುರುಗಳಿಂದ ಹೂಗೊಂಚಲು ಮೂಡುವ ಹಾಗೆ ಮೊಲೆಗಳನ್ನು ಚಾಚಿ ಕೈಗೆ ತುಂಬುವ ಹಾಗೆ ಕೊಡುತ್ತ ಶೋಭಿಸುತ್ತಿದ್ದಳು. ೧೨೦. (ಅವಳ) ದೇಹದಲ್ಲಿ ಎದ್ದು ನಿಂತ ಪುಳಕಗಳೇ ಆಗೆಗಳನ್ನು (ಸಸಿಗಳನ್ನು) ಹೊಯ್ದಿರುವಳೋ ಎಂಬ ಹಾಗೆ ಇತ್ತು. ಲಜ್ಜೆಯಿಂದ ಕೂಡಿದ ಅವಳು ಬಡವಾದವಳ ಹಾಗೆ ಕಾಣುತ್ತ, ಈ ರೀತಿಯ ತನ್ನ ಮನೋಹರವಾದ ದೇಹದಿಂದ ಕೂಡಿದವಳಾಗಿ ರತಿಸುಖವನ್ನು ತನ್ನ ಇನಿಯನೊಡನೆ ಕೂಡಿ ಅನುಭವಿಸುತ್ತಿದ್ದಳು. ೧೨೧. ಹಣೆಯಲ್ಲಿಟ್ಟುಕೊಂಡಿದ್ದ (ಕುಂಕುಮ) ತಿಲಕವೂ, ಮೊಲೆಗಳಿಗೆ ಹಚ್ಚಿಕೊಂಡಿದ್ದ ಶ್ರೀಗಂಧರಸವೂ ಒರೆಸಿ ತೆಗೆದ ಹಾಗೆ ಹೊರಟುಹೋಗಿರಲು, ಶೋಭಿಸುವ ಬಳ್ಳಿಯಂತಹ ದೇಹವೂ, ಜಘನವೂ ತಮ್ಮ ಸ್ಥಾನಗಳನ್ನು ಅಕ್ರಮಿಸಿಕೊಂಡಿರಲು, ಕಿವಿಯಲ್ಲಿಟ್ಟುಕೊಂಡಿದ್ದ ಆಭರಣಗಳೂ, ಹೊಸ ದಾಗಿ ಮುಡಿದ ಹೂವುಗಳೂ ಜಾರಿಕೊಂಡಿರಲು, ನುಣ್ಣನೆಯ ತೊಡೆಗಳೂ, ನಡುವೂ ಉತ್ಸಾಹಾಧಿಕ್ಯದಿಂದ ಕಂಪನಗೊಳ್ಳುತ್ತಿರಲು, ಕಂಠಧ್ವನಿಯೂ ದೀರ್ಘಶ್ವಾಸವೂ ಹೊರ ಹೊಮ್ಮುತ್ತಿರಲು ಒಬ್ಬಳು ವಿಟನೊಡನೆ ಚೆನ್ನಾಗಿ ರತಿಕ್ರೀಡೆಯಲ್ಲಿ ಮಗ್ನಳಾಗಿದ್ದಳು. ವ॥ ಅದೂ ಅಲ್ಲದೆ ಬೇರೊಂದು ಕಡೆಯಲ್ಲಿ ಒಬ್ಬಳು ರತಿಕ್ರೀಡೆಯನ್ನು ಮುಗಿಸಿ, ಆಯಾಸಗೊಂಡು ಬೆವರನ್ನು ಆರಿಸಿಕೊಳ್ಳಲಿಕ್ಕೆಂದು ಮನೆಯ ಮುಂದಿರುವ ಆಧಾರ ಕಂಬಕ್ಕೆ (ಉಪ್ಪರಿಗೆಗೆ ಆಧಾರವಾದ ಮರದ ಕಂಬಕ್ಕೆ) ಒರಗಿ ನಿಂತುಕೊಂಡಿರ ಲಾಗಿ, ಅವಳ ಮುಖದ ಕಳೆಯನ್ನು ಕಂಡು ಓರ್ವ ಸೊಬಗಿನಿಂದ ಕೂಡಿದ ವಿಟನು ಮುಂಗಡಹಣವನ್ನು ಕೊಡಲಾಗಿ, ಆ ಕೂಡಲೆ ಅವಳು ಆ ಹಣವನ್ನು ಹಿಡಿದುದನ್ನು ಕಂಡು, ಅವಳನ್ನು ಸೇರಿ (ಆಮೇಲೆ ಇವಳು ಈಗ ತಾನೆ ಇನ್ನೊಬ್ಬನೊಡನೆ

ಚಂ॥ ಎಲೆ ಕಿಱುಸೂಳೆ ನೀ ನೆರೆದ ಸೇದೆಯನಾಱಿಸದೊತ್ತೆಯಾಂತೆ ಯಾ
ಕಳೆಗಳೆ ಸೂಚಿಕುಂ ಸುಖಿಮುದೇಂ ದೊರೆಕೊಳ್ವುದೆ ನಿನ್ನೊಳೀಗಳೆಂ
ದುಲಿವ ವಿಟಂಗೆ ಮಾರ್ನುಡಿದಳೊಂದಳಿ ಪೀರ್ದೊಡೆ ಪೋಪುದೇ ನವಾ
ಬ್ಜಲಲಿತಸೌರಭಂ ಬಳಿಕಮೊಂದಳಿ ಸಾರ್ದೊಡೆ ಸೌಖ್ಯಮಾಯದೇ ೧೨

ವ॥ ಎಂಬ ಗಣಿಕೆಯ ಚಾಟುಭಣಿತೆಯಂ ಕೇಳ್ದರಸನೊಳ್ ಪೀಠಮರ್ದಕನಿಂತೆಂದಂ

ಕಂ॥ ಸ್ಮರನೆರವಿಲ್ಲದೆ ತೋಳ
ಲ್ಲಿರುತಿರ್ದೊಡಮಧಿಕವಿತ್ತಮಿತ್ತಪೆನೆಂದಂ
ಬರೊಳೊಡವೆರೆವುದು ವೇಶ್ಯಾ
ಚರಿತಮದಿಲ್ಲದೊಡದೆಂತು ಸಿರಿವಡೆದಪರೋ ೧೩

ವ॥ ಎಂಬ ಮಾತಂ ಕೇಳ್ದು ನಿಜಮೆಂದಲ್ಲಿಂ ಮುಂದಣ್ಗೆ ಬರ್ಪಾಗಳೊರ್ವಳ್ಕುಸುಮ ಕೋಮಳೆ ತನ್ನ ಕೆಳದಿಗಿಂತೆಂದಳ್

ಕಂ॥ ಕೊಡುವೊಡವೆಗಾಗಿ ಪೋಗೆಂ
ದೊಡನೊಡನೆಮ್ಮಬ್ಬೆ ನೂಂಕುವಳ್ತನ್ನವೊಲೆಂ
ದಡದರ್ದುರ್ಬಿ ಬಳೆದ ಪೊಡೆ ಪೇ
ರೊಡಲೀ ಜಟ್ಟಿಗನೊಳೆಂತು ನೆರೆವೆಂ ಕೆಳದೀ ೧೪

ಕೂಡಿದವಳೆಂಬುದನ್ನು) ತಿಳಿದು ಹೀಗೆ ಹೇಳಿದನು : ೧೨. "ಎಲೈ ಚಿಕ್ಕ ವಯಸ್ಸಿನ ಸೂಳೆಯೇ, ನೀನು (ಈಗ ತಾನೆ) ಬೇರೊಬ್ಬನಲ್ಲಿ ರತಿಕ್ರೀಡೆಯನ್ನು ಮಾಡಿ, ಅದ್ನರಿಂದುಂಟಾದ ಆಯಾಸವನ್ನು ಪರಿಹರಿಸಿಕೊಳ್ಳಲಾರದೆ, ನನ್ನಿಂದ ಮುಂಗಡ ಹಣವನು ಪಡೆದೆ. ಈ ನಿನ್ನ ದೇಹದಲ್ಲಿನ (ಚಿಹ್ನೆಗಳೇ) ನೀನು ರತಿಕ್ರೀಡೆ ಮಾಡಿದ ಶ್ರಮದ ಗುರುತುಗಳಾಗಿವೆ. ನಿನ್ನಿಂದ ಈಗ ನನಗೆ ಏನು ಸುಖವುಂಟಾದೀತು ?" ಎಂದು ಮಾತನಾಡುವ ವಿಟನಿಗೆ ಹೀಗೆ ಪ್ರತ್ಯುತ್ತರ ಕೊಟ್ಟಳು : "ನೂತನವಾಗಿ ಅರಳಿದ ಕಮಲದಲ್ಲಿನ ಲಲಿತವಾದ ಮಕರಂದವು ಒಂದು ದುಂಬಿಯ ಹೀರುವಿಕೆಯಿಂದ ಇಲ್ಲದಂತಾದೀತೇ ? ಆಮೇಲೆ ಒಂದು ದುಂಬಿ ಬಂದರೆ, ಅದಕ್ಕೆ ಸೌಖ್ಯವನ್ನು ಕೊಡಲು ಅಸಮರ್ಥವಾದೀತೇ ?" ವ॥ ಹೀಗೆನ್ನುವ ಆ ವೇಶ್ಯೆಯ ಚಾಟುನುಡಿಯನ್ನು ಕೇಳಿ, ಅರಸನಿಗೆ ಪೀಠಮರ್ದಕನೆಂಬ ಶೃಂಗಾರಸಾಧಕ ಸಹಚರನು ಹೀಗೆ ಹೇಳಿದನು : ೧೩. "(ಸಾಕ್ಷಾತ್) ಮನ್ಮಥನೇ ಮುಂಗಡ ಹಣವನ್ನೀಯದೆ ತೋಳಿನಲ್ಲಿರುತ್ತಿದ್ದರೂ ಕೂಡ ಹೆಚ್ಚಾಗಿ ಹಣವನ್ನು ಕೊಡುತ್ತೇನೆನ್ನುವವನಲ್ಲಿ ಕೂಡುವುದು ವೇಶ್ಯೆಯರ ನಡವಳಿಕೆ. ಹಾಗಲ್ಲದಿದ್ದರೆ, ಅವರು ಅದು ಹೇಗೆ ಧನವಂತರಾದಾರು ?" ವ॥ ಎಂಬ ಮಾತನ್ನು ಕೇಳಿ, (ರಾಜನು) ಇದು ಸತ್ಯವೆನ್ನುತ್ತ, ಅಲ್ಲಿಂದ ಮುಂದಕ್ಕೆ ಬರುವಾಗ ಒಬ್ಬ ಕುಸುಮದಂತೆ ಕೋಮಲವಾದ ಶರೀರವುಳ್ಳ ವೇಶ್ಯೆಯು ತನ್ನ ಗೆಳತಿಗೆ ಹೀಗೆ ಹೇಳಿದಳು : ೧೪. "ಗೆಳತಿ, ಕೊಡುವ ವಸ್ತು ಒಡವೆಗಳಿಗಾಗಿ ನನ್ನ ತಾಯಿ ತನ್ನ ಹಾಗೆಯೇ ನನ್ನನ್ನೂ ಅಡರಿ ಉಬ್ಬಿಕೊಂಡು ಬೆಳೆದ ಹೊಟ್ಟೆಯುಳ್ಳವನೂ, ದೊಡ್ಡ ದೇಹವುಳ್ಳವನೂ ಆದ ಈ ಜಟ್ಟಿಗನಲ್ಲಿ ಕೂಡೆಂದು

ವ॥ ಅದಂ ಕೇಳ್ದು ವಿದೂಷಕಂ ಪರಿದುಪೋಗಿ ನಿಂದು ನಿರೀಕ್ಷಿಸಿ ಕೈಯಂ ನೀಡಿ ನಿಮ್ಮಬ್ಬೆ ಯನೆ ನೆವಮಿಟ್ಟು ಕಳುಪಲ್ವೇಳ್ಕುಮೆಂದು ನರೇಂದ್ರನ ಮೊಗಕ್ಕೆ ಮುಗುಳ್ನಗೆಯು ಸೂಸುತ್ತಿರೆ ಮತ್ತೊಂದು ನೆಲೆವಾಡದೊಳ್ಮನದನ್ನನಗಲೆ ಮಱುಗುವ ಚಪಲಚಿತ್ತೆಗೆ ಸಖಿಯಿಂತೆಂದಳ್

ಉ॥ ಬಂದೊಡೆ ನೋಡೆ ಬಾರದೊಡೆ ದೂದವಿಯಟ್ಟುವೆ ಜೇಡ ಕೋಪಮಿ
ನ್ನೆಂದಡಿಗಾತನೊಲ್ದೆಱಗೆ ಗರ್ವಿಪೆ ಸೈತಿರೆ ಸುರ್ಕಿಸುಯ್ವೆ ಮೈ
ಸಂದಮರ್ದಪ್ಪಲಾತುರಿಸೆ ಮೈಗುಡೆ ಮಾಣ್ದೊಡೆ ಕಾಮವಹ್ನಿಯಿಂ
ಬೆಂದಪೆ ಪೋಪವೊಲ್ ಜಡಿವೆ ಪೋದೊಡೆ ಸೈರಿಸೆ ನೀನಿದೇಂ ಸಖೀ ೧೨೫

ವ॥ ಇವಳ್ ಕಲಹಾಂತರಿತೆಯಪ್ಪಳೆಂದು ನಾಗರಿಕಂ ನುಡಿವುತ್ತಮಿರೆ ಮತ್ತೊಂದು ಪಜ್ಜಳಿಪ ಬಜ್ಜರದ ಸೆಜ್ಜೆವನೆಯ ಸಿರಿಮಂಚದ ಸಿರಿಸ ಮೃದುಳತಳ್ಪಸ್ಥಳದಲ್ಲಿ

ಮೇಲಿಂದ ಮೇಲೆ ನೂಕುತ್ತಿದ್ದಾಳೆ. ಈತನೊಡನೆ ಹೇಗೆ ನಾನು ಕೂಡಲೇ !" ವ|| ಈ ಮಾತನ್ನು ಕೇಳಿ ವಿದೂಷಕನು ಆ ಹುಡುಗಿಯ ಬಳಿಗೆ ಹೋಗಿ ಎದುರಿಗೆ ನಿಂತು ಅವಳನ್ನು ದೃಷ್ಟಿಸಿ ನೋಡಿ, ಕೈಚಾಚಿ 'ನಿಮ್ಮ ತಾಯಿಯನ್ನೇ ನೆಪವೊಡ್ಡಿ ಅವನಲ್ಲಿಗೆ ಕಳುಹಿಸಿಕೊಡಬೇಕು' ಎನ್ನುತ್ತಿರಲು, ನೃಪಶ್ರೇಷ್ಠನು ಮುಗುಳುನಗೆ ನಕ್ಕನು. ಮತ್ತೊಂದು ಕಡೆ ಮೇಲುಪ್ಪರಿಗೆಯಲ್ಲಿ ತನ್ನ ಮನದನ್ನನು ಅಗಲಲು ಮರುಗುತ್ತಿರುವ ಚಪಲಚಿತ್ತದ ಹೆಂಗಸೊಬ್ಬಳಿಗೆ ಸಖಿಯು ಹೀಗೆ ಹೇಳುತ್ತಿದ್ದಳು. ೧೨೫. "ಎಲೈ ಸಖಿ, ನೀನು ನಿನ್ನ ಮನದನ್ನನು ಬಂದರೆ ಅವನನ್ನು ಕಣ್ಣೆತ್ತಿ ನೋಡುವುದಿಲ್ಲ. ಬರದೆ ಇದ್ದರೆ ದೂತಿಕೆಯನ್ನು (ಕರೆದುಕೊಂಡು ಬರಲು) ಅಟ್ಟುತ್ತೀಯೆ. ಕೋಪವನ್ನು ಮಾಡಿಕೊಳ್ಳಬೇಡವೆಂದು ಆತನು ಪ್ರೀತಿಯಿಂದ ಕಾಲಿಗೆ ಬಿದ್ದು ಬೇಡಿಕೊಂಡರೂ ಗರ್ವಿಸುತ್ತೀಯೆ. ಅವನು ದೂರಕ್ಕೆ ಹೋಗಿಟು ಸುಮ್ಮನಿದ್ದರೆ ಕೃಶಗೊಂಡು ನಿಟ್ಟುಸಿರು ಬಿಡುತ್ತೀಯೆ. ನಿನ್ನ ಸಮೀಪಕ್ಕೆ ಬಂದು ಗಾಢವಾಗಿ ತಬ್ಬಿಕೊಳ್ಳಲು ಆತುರಪಡು ತ್ತಿದ್ದರೆ ಅವನಿಗೆ ಮೈಯನ್ನೇ ಕೊಡುವುದಿಲ್ಲ. ನಿನ್ನನ್ನು ಕೈಬಿಟ್ಟು ದೂರವಿದ್ದರೆ ಕಾಮಾಗ್ನಿಯಿಂದ ಬೇಯುತ್ತಿದ್ದೀಯೆ. ಅವನು ಬಂದಾಗ ಮನೆಬಿಟ್ಟು ಹೋಗುವಂತೆ ಹೊಡೆಯುತ್ತೀಯೆ. ಹೋದರೆ ತಡೆದುಕೊಳ್ಳಲಾರೆ. ಇದೇನೇ ಸಖೀ." ವ|| ಇವಳು ಮೃದುಮಾತಾಡುವ ಗಂಡನನ್ನು ಬೈದು ಅನಂತರ ಸಂತಾಪಗೊಳ್ಳುವ ಕಲಹಾಂತರಿತೆ ಯೆನಿಸಿದ್ದಾಳೆಂದು ನಾಗರಿಕನು ನುಡಿದನು. ಮತ್ತೊಂದು ಪ್ರಜ್ವಲಿಸುವ ವಜ್ರವಿಕಾರ ವಾದ ಮಲಗುವ ಮನೆಯ ಶ್ರೇಷ್ಠಮಂಚದ ಶಿರೀಷಪುಷ್ಪದಂತೆ ಮೃದುವಾದ ಹಾಸಿಗೆಯ

ಚಂ॥ ಬಿರಿಮುಗುಳಾದ ಜಾದಿಯರಲಂ ಮುಡಿಯೊಳ್ಮುಡಿದಿಟ್ಟು ಮುತ್ತಿನಾ
ಭರಣಮನುಟ್ಟು ಚೀನಲಲಿತಾಂಬರಮಂ ತೊಡೆದಂಗದಲ್ಲಿ ಕ
ಸ್ತುರಿಯನುಲೇಪಮಂ ಗೃಹಮನಾ ಮಣಿಮಂಚಮನೊಯ್ಯನೊಲ್ದು ಸಿಂ
ಗರಿಸಿ ನಿಜೇಶನಾಗಮನಮಂ ಮನದ್ಕೊಳ್ ಬಯಸುತ್ತೆ ಬಾಡಿದಳ್ ೧೨೬

ವ॥ ಅವಳಂ ನಿರೀಕ್ಷಿಸುತ್ತೆ ಇವಳ್ವಾಸಕಸಜ್ಜಿಕೆಯೆಂದು ನುಡಿವ ಮಾತನಾಕರ್ಣಿಸುತ್ತಂ ನರೇಶ್ವರನಿರ್ಪವಸರದೊಳೊರ್ವ ಭುಜಂಗಂ ನಿಜಸಖಿಂಗಿಂತೆಂದಂ

ಉ॥ ಮೌನಮಿದೇಕೆ ಮಾನಿನಿ ಮನೋಭವನಾಣೆ ಬಿಡೆಂದೊಡಾಂ ಕರಂ
ಜಾನಿಸಿ ಬಾಷ್ಪವಾರಿಗಳ್‌ವಳ್ಮೊಗನೋಡಿದೊಡಂತೆ ನಾಣ್ಚುವಳ್
ಪೀನಕುಚಾಂಚಲಂದೆಗೆಯೆ ಕೋಪಿಪಳಪ್ಪಿದೊಡೊಲ್ದು ನಕ್ಕಪಳಾ
ತಾನದಱಿಂದೆ ಸಂದ ಕಿಲಕಿಂಚಿತಮಂಚಿತಮೆನ್ನ ನಲ್ಲಳಾ ೧೨೭

ವ॥ ಎನೆ ಕೇಳ್ದವಂ ಮುಂ ಪೇಳ್ದನೊಡನೆ ತನ್ನಿನೆಯಳ ವೃತ್ತಾಂತಮಂ ಮುಗುಳ್ನಗೆ ಪೇಳ್ದನದೆಂತೆಂದೊಡೆ

ಮೇಲೆ ಕುಳಿತು, ೧೨೬. ಅರೆಬಿರಿದ ಜಾಜಿಯ ಪುಷ್ಪಗಳನ್ನು ಮುಡಿಯಲ್ಲಿ ಮುಡಿದು ಕೊಂಡು, ಮುತ್ತಿನಹಾರಗಳನ್ನು ಹಾಕಿಕೊಂಡು, ಲಲಿತವಾದ ಚೀನಾಂಬರವನ್ನು ಉಟ್ಟು ಕೊಂಡು, ದೇಹಕ್ಕೆ ಕಸ್ತೂರಿಯ ಸುಗಂಧವನ್ನು ಅನುಲೇಪನ ಮಾಡಿಕೊಂಡು, ಮನೆ ಯನ್ನೂ ಮತ್ತು ಆ ರತ್ನಮಂಚವನ್ನೂ ಶೃಂಗಾರಗೊಳಿಸಿಕೊಂಡು, ಪ್ರೀತಿಯಿಂದ ತನ್ನ ಪ್ರಿಯನಾದವನ ಬರುವಿಕೆಯನ್ನೇ ಮನಸ್ಸಿನಲ್ಲಿ ಎದುರುನೋಡುತ್ತ ಓರ್ವ ಜಾರೆಯು ಬಾಡುತ್ತಿದ್ದಳು. ವ॥ ಹೀಗೆ ಬಾಡುತ್ತಿರುವವಳಾದ ಸ್ತ್ರೀಯನ್ನು ನೋಡುತ್ತ ಇವಳು 'ವಾಸಕ ಸಜ್ಜಿಕೆ' ಎಂಬ ಪ್ರಭೇದದ ಸ್ತ್ರೀಯಾಗಿದ್ದಾಳೆ. ಎಂದು ಹೇಳುತ್ತಿರುವ ಮಾತು ಗಳನ್ನು ನರೇಶ್ವರನಾದ ರಾಜಶೇಖರನು ಕೇಳುತ್ತಿರುವ ಸಮಯದಲ್ಲಿ ಒಬ್ಬ ವಿಟನು ತನ್ನ ಸಖನಿಗೆ ಹೀಗೆ ಹೇಳಿದನು: ೧೨೭. "ಎಲೈ ಮಾನಿನಿ, ಸುಮ್ಮನೇಕಿರುವೆ? ಮನ್ಮಥನಾಣೆ ಮೌನವನ್ನು ಬಿಡು' ಎಂದು ನಾನೆನ್ನಲು, ಚೆನ್ನಾಗಿ ಏನನ್ನೋ ಧ್ಯಾನಿಸು ವಂತೆ ಮಾಡಿ ಕಣ್ಣೀರನ್ನು ಸುರಿಸುವಳು. ಮೊಗವನ್ನು ನೋಡಿದರೆ, ಹಾಗೆಯೇ ನಾಚಿಕೆ ಪಟ್ಟುಕೊಳ್ಳುವಳು. ದಪ್ಪನಾದ ಕುಚಗಳ ಮೇಲುದನ್ನು ತೆಗೆದಾಗ ಕೋಪಿಸಿಕೊಳ್ಳು ವಳು. ಅಪ್ಪಿಕೊಂಡಕೂಡಲೆ ಪ್ರೀತಿಯಿಂದ ತಾನೂ ನಕ್ಕುಬಿಡುವಳು. ಅದರಿಂದ ಆ ನನ್ನ ನಲ್ಲಳ ಪ್ರಣಯಚೇಷ್ಟೆ ಉತ್ತಮವಾದದ್ದೆಂದು ನಾನು ತಿಳಿಯುತ್ತೇನೆ" ಎಂದನು. ವ॥ ಹೀಗೆ ಹೇಳಿದುದನ್ನು ಕೇಳಿದ ಆ ಸಖನು ಕೂಡಲೆ ತನ್ನ ಇನಿಯಳಾದವಳ ವೃತ್ತಾಂತ

ಮ॥ ಮುಳಿದೆನ್ನೊಳ್ಮನದನ್ನಳೊಯ್ಯನೊಱಗಿರ್ದಳ್ನಿದ್ರೆಗೆಯ್ದಂದದಿಂ
ತಿಳಿದಾನೆರ್ಬಿಸಲಳ್ಕಿ ತೋರಮುಡಿಯೊಳ್ಪೂಮಾಲೆಯಂ ಸೂಡಿ ಮಂ
ಜುಳಕಾಶ್ಮೀರವಿಲೇಪಮಂ ಮೊಲೆಗೆ ಲೇಪಂಗೆಯ್ವುದುಂ ಪೊರ್ದಿ ಪೊಂ
ಪುಳಿವೋದಳ್ ಪುಟಮೆಳ್ದು ಪೊಯ್ದಳೊದೆದಳ್ಪಾಯ್ದಪ್ಪಿದಳ್ ನಕ್ಕಪಳ್ ೧೨೮

ವ॥ ಎಂಬ ಮಾತುಗೇಳ್ದು ಇವಳುಂ ಕಿಲಕಿಂಚಿತೆಯಕ್ಕುಮೆಂದು ವಿಟಂ ನುಡಿವುತ್ತಿರೆ ಕೇಳ್ದಲ್ಲಿಂ ಮೆಲ್ಲನಿಳಾಧಿಪನಡಿಯಿಡುತ್ತಿರೆ ಮುಂದೊಂದು ಮಂದಿರದಲ್ಲಿ ಸಾಪರಾಧನಾಯಕಂ ತಿಳುಪುತ್ತಿರೆ ಖಂಡಿತೆಯಖಂಡಿತೇರ್ಷೆಯಿಂ ನೋಡಿ

ಉ॥ ಬೇಡವಿದೇಕೆ ನಿರ್ನೆರನೆ ನಾಡೆ ನಯೋಕ್ತಿಯನಾಡುತಿಪ್ಪೆ ನೀಂ
ನೋಡಿದೊಡಿಂತುಟಪ್ಪರೊಳರೇಯೆನಿಪಂತಿರೆ ನಿನ್ನ ಮೈಯೊಳೀ
ಬಾಡದ ಬಾಸುಳೀಯಧರದೊಳ್ಗಲೆಯಾ ಕಠಜಕ್ಷತಂಗಳೀ
ಪಾಡಳಿದಂಗವೀಯಿರವಿವೆಲ್ಲವನೀಕ್ಷಿಸಿ ನಂಬಲಕ್ಕುಮೇ ೧೨೯

ವನ್ನು ಮೊದಲು ಹೇಳಿದ ಸಖನಿಗೆ ಹೇಳುತ್ತಿದ್ದನೇನೆಂದರೆ, ೧೨೮. "ಎನ್ನ ಪ್ರಾಣ ಸಖಿಯು ನನ್ನೊಡನೆ ಸಿಟ್ಟುಮಾಡಿಕೊಂಡು ಒಯ್ಯನೆ ನಿದ್ರೆಮಾಡುವವಳ ಹಾಗೆ ಮಲಗುವಳು. ಅದನ್ನು ತಿಳಿದು ನಾನು ಅಂಜಿ ಎಬ್ಬಿಸಿ, ದಪ್ಪನೆಯ ಮುಡಿಯಲ್ಲಿ ಹೂ ಮಾಲೆಯನ್ನು ಧರಿಸಿ, ಮಂಜುಳವಾದ ಕುಂಕುಮಕೇಸರಿಯನ್ನು ಮೊಲೆಗಳ ಮೇಲೆ ಲೇಪನ ಮಾಡಲು, ಸಂತೋಷಗೊಂಡು ಪುಳಕಗೊಂಡ ಮೈಯವಳಾಗಿ ದಿಗ್ಗನೆ ಎದ್ದು ಹೊಡೆದು, ಒದೆದು, ಮೇಲೆ ಬಿದ್ದು ಅಪ್ಪಿಕೊಂಡು ನಕ್ಕುಬಿಡುವಳು." ವ|| ಹೀಗೆನ್ನು ತ್ತಿದ್ದ ಮಾತನ್ನು ಕೇಳಿ ಇವಳೂ ಕೂಡ 'ಕಿಲಕಿಂಚಿತೆ' (ಪ್ರಣಯ ಚೇಷ್ಟೆಯವಳು) ಯೆನ್ನುವ ಸ್ತ್ರೀಜಾತಿಗೆ ಸೇರಿದವಳೇ ಆಗಿದ್ದಾಳೆ ಎಂದು ವಿಟನು ನುಡಿಯುತ್ತಿರಲು, ಆ ಮಾತನ್ನು ಕೇಳಿ ಮೆಲ್ಲನೆ ಭೂಮೀಶ್ವರನಾದ ರಾಜಶೇಖರನು ಮುಂದೆ ನಡೆಯುತ್ತಿರಲು, ಮುಂದೊಂದು ಮನೆಯಲ್ಲಿ ಅಪರಾಧಿಯಾದ ನಾಯಕನು 'ಖಂಡಿತೆ' ಎಂಬ ಸ್ತ್ರೀಜಾತಿಗೆ ಸೇರಿದ ಪ್ರಿಯೆಯಲ್ಲಿ ತಾನು ಅಪರಾಧಿಯಲ್ಲವೆಂದು ಹೇಳಿ, ಅವಳ ಮನಸ್ಸನ್ನು ತಿಳಿ ಗೊಳಿಸಲು ಪ್ರಯತ್ನಿಸುತ್ತಿರಲು, ಅವಳು ಅಖಂಡವಾದ ಮಾತ್ಸರ್ಯದಿಂದ (ಅಪರಾಧಿ ಯಾದ ಪತಿಯನ್ನು) ನೋಡುತ್ತ, ೧೨೯. "ಬೇಡ ಬೇಡ! ಇದೇತಕ್ಕೆ ನೀನು ಸುಮ್ಮ ಸುಮ್ಮನೆ ಚೆನ್ನಾಗಿ ನಯೋಕ್ತಿಗಳನ್ನು ಆಡುತ್ತಿದ್ದೀಯೆ. ನಿನ್ನನ್ನು ನೋಡಿದರೆ ಇಂಥ ವರೂ (ಭೂಮಿಯಲ್ಲಿ) ಇರುವರೇ ಎನ್ನುವ ಹಾಗೆ ತೋರುತ್ತಿದೆ. ನಿನ್ನ ಮಯ್ಯಲ್ಲಿ ಇನ್ನೂ ಬಾಡದೆ ಇರುವ ಈ ಬಾಸುಂಡೆಗಳು, ಈ ತುಟಿಯಲ್ಲಿ ಸ್ಪಷ್ಟವಾಗಿ ಕಾಣುತ್ತಿರುವ ಕಲೆಗಳು, ಈ ಉಗುರುಗಳ ಗಾಯಗಳು, ಈ ಅಂಡಗೆಟ್ಟ ದೇಹದ ಸ್ವರೂಪ, ಈ ಎಲ್ಲ ರೀತಿ ನೀತಿಗಳನ್ನು ನೋಡಿಯೂ ನಿನ್ನನ್ನು ನಂಬುವುದಕ್ಕಾಗುತ್ತದೆಯೇ ?"

ವ॥ ಎಂಬಳ ನುಡಿಗೇಳುತ್ತಿರ್ಪಿನಂ ಪೆಱತೊಂದು ಮಣಿಮಯನಿಳಯಾಂತರಾಳದಲ್ಲಿ

ಉ॥ ಚುಂಬಿಸುತಿತ್ತ ತಂಬುಲವನಲ್ಲದೆ ಮೆಲ್ಲದ ನಲ್ಲಳಂಗಗಂ
ಧಂ ಬಗೆಗೊಂಡ ದೂವಟಮನಲ್ಲದೆ ತಾಳದ ತತ್ಕಚವ್ರಜಾ
ಲಂಬಿತ ಪುಷ್ಪಮಾಲೆಗಳನಲ್ಲದೆ ಸೂಡದ ತತ್ಕುಚಂಗಳೊ
ಳ್ತುಂಬಿದ ಯಕ್ಷಕರ್ದಮಮನಲ್ಲದೆ ಪೂಸದ ಕಾಂತನೊಪ್ಪಿದಂ ೧೩೦

ವ॥ ಮತ್ತಮವನ ಮನದನ್ನಳ್ಮನೆಗೆ ಬಂದ ನಿಜಸಖಿಗಾತನಂ ತೋಱಿ

ಚಂ॥ ನುಡಿಯೆಮಗೊಂದೆ ನೋಟಮೆಮಗೊಂದೆ ವಿಳಾಸಮದೊಂದೆ ಚೆಲ್ವನಿ
ರ್ಮಡಿಸುವ ಸಾರಯೌವನಮುಮೊಂದೆ ಗುಣೋನ್ನತಿಯೊಂದೆ ಕೂರ್ಪು ಬೇ
ರ್ಪಡಿಸದ ಬೇಟಮೊಂದೆ ರತಿಯೊಂದೆ ಮನಸ್ಥಿತಿಯೊಂದೆ ಸೌಖ್ಯಮಂ
ಪಡೆದಪೆವಾವಗಂ ಕೆಳದಿ ಕೇಳದಱಿಂದೆಮಗಾರ್ಸಮಾನರೇ ೧೩೧

ವ॥ ಎಂದು ತಮ್ಮಿರ್ವರ ಸಮಾನುರಾಗ ಸೌಭಾಗ್ಯವಿಭ್ರಮಮಂ ಸಂಭ್ರಮಂ ಮಿಗೆ ಸಮದ ಸರಸೋಕ್ತಿಗಳಿಂ ಬಣ್ಣಿಸುತ್ತಿರ್ಪಿನಮಿವಳ್ 'ಸ್ವಾಧೀನಪತಿಕೆ'ಯಕ್ಕುಮೆಂದು ನುಡಿವ ನಾಗರಿಕನ ನುಡಿಯುಂ ಬಗೆಗೊಂಡರಸನಲ್ಲಿಂ ಬರುತ್ತಿರ್ಪಲ್ಲಿ ಮುಂದೊಂದು ಮಣಿವಾಗಿಲೊಳೊರ್ವಂ ಸರಸಹೃದಯಂ ತರುಣಿಯಃನಗಲ್ದು ಮುಂದುಗೆಟ್ಟವಳಿರವಂ ನೆನೆನೆನೆದು ಸುಯ್ದು ಕೆಳೆಯ ನೊಡನಿಂತೆಂದಂ

ವ॥ ಹೀಗೆನ್ನುವವಳ ನುಡಿಯುನ್ನು ಕೇಳುತ್ತಿರುವಷ್ಟರಲ್ಲಿ ಬೇರೊಂದು ಮಣಿಮಯ ಗೃಹದ ಒಳಭಾಗದಲ್ಲಿ, ೧೩೦. ಚುಂಬಿಸುತ್ತ ಬಾಯಿಗಿತ್ತ ತಂಬುಲವನ್ನಲ್ಲದೆ ಇನ್ನೊಂದನ್ನು ಮೆಲ್ಲದಿರುವ, ಪ್ರಿಯೆಯಾದವಳ ದೇಹಕ್ಕೆ ಲೇಪಿಸಿದ ಸುಗಂಧವನ್ನು ಹೊಂದಿದ ದೂಪಟ (ದುಪ್ಪಟ್ಟಿ?) ವನ್ನಲ್ಲದೆ ಬೇರೆಯದನ್ನುಹೊದ್ದು ಕೊಳ್ಳದ, ಅವಳ ಕೂದಲುಗಳಲ್ಲಿ ಲೇಪಿಸಿದ ಕರ್ಪೂರ, ಕಸ್ತೂರಿ, ಕೃಷ್ಣಾಗರು, ಚಂದನ, ಕೇಸರಗಳನ್ನು ಹಾಕಿ ಮಾಡಿದ ಗಂಧದ ಕೆಸರನ್ನಲ್ಲದೆ ಬೇರೆಯದನ್ನು ಪೂಸಿಕೊಳ್ಳದ ಕಾಂತನೊಬ್ಬನು ಶೋಭಿಸುತ್ತಿದ್ದನು. ವ॥ ಮತ್ತು ಅವನ ಮನದನ್ನಳು ಮನೆಗೆ ಬಂದ ತನ್ನ ಸಖಿಗೆ ಆತನನ್ನು ತೋರಿಸುತ್ತ (ಹೀಗೆನ್ನುತ್ತಿದ್ದಳು:). ೧೩೧. "ನಮ್ಮಿಬ್ಬರಿಗೂ ಮಾತು ಒಂದೇ; ನೋಟವೂ ಒಂದೇ; ಕ್ರೀಡೆಯೂ ಒಂದೇ; ಚೆಲುವನ್ನು ಇಮ್ಮಡಿಗೊಳಿಸುವ ಸಾರವತ್ತಾದ ಯೌವನವೂ ಒಂದೇ; ಉನ್ನತವಾದ ಗುಣವೂ ಒಂದೇ; ಬಿಚ್ಚಿ ಬೇರೆಮಾಡಲು ಶಕ್ಯವಿಲ್ಲದ ಪ್ರೀತಿಯ ಸೊಗಸೂ ಒಂದೇ; ರತಿಸುಖವೂ ಒಂದೇ; ಮನಸ್ಸಿನ ಸ್ಥಿತಿಯೂ ಒಂದೇ. ಈ ರೀತಿಯಿದ್ದು ಸದಾ ಸೌಖ್ಯವನ್ನು ಪಡೆಯುತ್ತೇವೆ. ಕೆಳದೀ, ಕೇಳು, ನಮಗೆ ಸಮಾನವಾದ ಸೌಖ್ಯವುಳ್ಳವರು ಯಾರು?" ವ॥ ಹೀಗೆಂದು ತಮ್ಮಿಬ್ಬರ ಸಮಾನವಾದ ಅನುರಾಗದ ಸೌಭಾಗ್ಯದ ಶೋಭೆಯನ್ನು ವಿಶೇಷ ಸಂಭ್ರಮದಿಂದಲೂ, ಮದದಿಂದಲೂ, ಸರಸವಾದ ಮಾತುಗಳಿಂದಲೂ ವರ್ಣಿಸುತ್ತಿರಲು, ನಾಗರಿಕನು ಸ್ವಾಧೀನಪತಿಕೆಯಾಗಿದ್ದಾಳೆ, ಎಂದು ಹೇಳುವ ಮಾತನ್ನು ಅರಸನು ಮನಸ್ಸಿಗೆ ತಂದುಕೊಂಡು ಬರುತ್ತಿದ್ದನು. ಆಗ ಮುಂದೆ ಬಂದು ರತ್ನಮಯ ಬಾಗಿಲಲ್ಲಿ ಒಬ್ಬ ಸರಸಹೃದಯದ ವಿಟನು ತನ್ನ ಪ್ರಿಯೆ

ಮ॥ ಪರಕಾಂತಾಕರಜಾತದಂತಹತಿಯಂ ತಾಳ್ದ್ವಿದಲಾನೆನ್ನ ಸೌಂ
ದರಿಯಾ ನೋಡುವ ನೋಟವಾ ಭ್ರುಕುಟಿಯಾ ನಿಂದಂದವಾ ಕಂಪಿಪೊಂ
ದಿರವಾ ಬೆಚ್ಚನೆ ಪಾಯ್ವ ಸುಯ್ಗಳೊದವಾ ಕಣ್ಣೀರ್ಗಳಾ ಕೋಪನಿ
ರ್ಭರವಾ ಕಿತ್ತುವ ಪಲ್ಲವಾಧರವಮದೇಂ ಮಚ್ಚಿತ್ತದೊಳ್ನಿಂದುದೋ ೧೩೨

ವ॥ ಅದಲ್ಲದೆಯುಂ

ಕಂ॥ ಪಳಿವುದು ಕೆಂದಾವರೆಯಂ
ಮುಳಿದೊಡೆ ತಿಳಿದೊಡೆ ಪೊದಳ್ದ ಪೊಂದಾವರೆಯಂ
ಕಳೆವೆತ್ತು ನಕ್ಕೊಡೆನ್ನಿನಿ
ಯಳ ತೊಳಗುವ ವದನಮಲರ್ದ ಬೆಳ್ದಾವರೆಯಂ ೧೩೩

ವ॥ ಎಂದು ಪಳಯಿಸುತ್ತಿರ್ದನಿತ್ತಲ್ಮತ್ತೊಂದು ಮಣಿಭವನದಲ್ಲಿ

ಮ॥ ಮನದನ್ನಳ್ಮನದನ್ನನಂದಗಲೆ ಚಿಂತಾಕ್ರಾಂತೆಯಾಗಿರ್ದು ಕಾಂ
ಚನಮಂಚಾಗ್ರದೆ ಮಗ್ಗುಲಿಕ್ಕಿ ಮಗುಳ್ದಾತಂ ಬಂದು ಕೂಡಿರ್ದ ನ
ಲ್ಗನಸಂ ಕಂಡಖಿಳಾಂಗಮುಂ ಪುಳಕಮಂ ತಾಳ್ದೊಪ್ಪಲೆಳ್ಚತ್ತು ಕಾಂ
ತನರೂಪಂ ಬರೆದಿರ್ದ ಚಿತ್ರಪಟಮಂ ತಳ್ಕೈಪಳೇಂ ಮೋಹಮೋ ೧೩೪

ಯನ್ನು ಅಗಲಿ, ದಿಕ್ಕುಗೆಟ್ಟು ಅವಳ ಇರುವಿಕೆಯನ್ನು ನೆನೆನೆನೆದು ನಿಟ್ಟುಸಿರುಬಿಟ್ಟು ತನ್ನ ಗೆಳೆಯನೊಡನೆ ಹೀಗೆ ಹೇಳಿದನು: ೧೩೨. "ನಾನು ಬೇರೆ ಸ್ತ್ರೀಯ ಉಗುರುಗಳ ಗಾಯ, ಹಲ್ಲಿನಿಂದಾದ ಗಾಯಗಳನ್ನು ಹೊಂದಿ ಹೋಗಲಾಗಿ, ನನ್ನ ಸುಂದರಿಯ ಆ ನೋಡುವ ನೋಟ, ಆ ಗಂಟಿಕ್ಕಿದ ಹುಬ್ಬು, ಆ ನಿಂತ ರೀತಿ, ಆ ನಡುಗುತ್ತಿರುವಿಕೆಯ ವಿಧ, ಆ ಬೆಚ್ಚಗೆ ಹೊರಬರುವ ನಿಟ್ಟುಸಿರಿನ ಒತ್ತಡ, ಆ ಕಣ್ಣೀರುಗಳು, ಆ ಕೋಪದ ಆಧಿಕ್ಯ, ಆ ಹಲ್ಲಿನಿಂದ ಕಡಿಯುತ್ತಿರುವ ಚಿಗುರಿನಂತಹ ತುಟಿಗಳೇ ಮೊದಲಾದುವುಗಳು ನನ್ನ ಮನಸ್ಸಿನಲ್ಲಿ ಅದೇನು ನಿಂತಿರುವುದೋ. ವ॥ ಅದೂ ಅಲ್ಲದೇ ೧೩೩. ನನ್ನ ಮನದನ್ನೆಯ ಪ್ರಕಾಶಿಸುವ ಮುಖವು ಕೋಪಗೊಂಡಾಗ ಕೆಂದಾವರೆಯನ್ನು ನಿಂದಿಸುವಂತಿರುವುದು; ತಿಳಿಗೊಂಡಾಗ ಶೋಭಿಸುವ ಬಂಗಾರವರ್ಣದ ಕಮಲದಂತೆ ಕಾಣುವುದು; ಕಲಾತ್ಮಕವಾಗಿ ನಕ್ಕಾಗ ಅರಳಿದ ಬಿಳಿಯ ಕಮಲದಂತೆ ಕಾಣುವುದು." ವ॥ ಹೀಗೆಂದು ಪ್ರಲಾಪಿಸುತ್ತ ಇದ್ದನು. ಇತ್ತಕಡೆ ಮತ್ತೊಂದು ರತ್ನಹರ್ಮ್ಯದಲ್ಲಿ, ೧೩೪. ಓರ್ವ ಜಾರೆಯು ತನ್ನ ಪ್ರಾಣಕಾಂತನನ್ನು ಅಗಲಿ, ಚಿಂತಾಕ್ರಾಂತೆಯಾಗಿದ್ದು, ಬಂಗಾರದ ಮಂಚದ ತುದಿಯಲ್ಲಿ ಮಗ್ಗುಲಿಕ್ಕಿ ಮಲಗಿ, ಆತನು ಬಂದು ರತಿಕ್ರೀಡೆಯನ್ನು ಮಾಡಿದಂತೆ ಒಳ್ಳೆಯ ಕನಸನ್ನು ಕಂಡಾಗ ಸಮಸ್ತ ದೇಹವೂ ರೋಮಾಂಚನಗೊಂಡು ಶೋಭಿಸುತ್ತಿರಲು, ಎಚ್ಚರಗೊಂಡವಳಾಗಿ ತನ್ನ ಆ ಕಾಂತನ ರೂಪನ್ನು ಬರೆದಿದ್ದ

ವ॥ ಮತ್ತವೊರ್ವಳ್ ಮಚ್ಚುಗಾರ್ತಿ ಕಡುಕೊರ್ತುದಂ ಕಂಡು ಕಾಡುವ ಕಪಟವಿಟ ನಿರ್ದೆಡೆಗೆ ತಾನೆ ಬಂದು

ಮ॥ ನಿನಗಾಂ ಕೊರ್ತುದೆ ಕುಂದೆ ನೋಡದೆ ಕರಂ ಮಾತಾಡದಾಳೀಜನಂ
ಮನೆಗೇಳ್ತಂದೊಡೆ ಮಾತುಗೇಳದವರೊಳ್ ನೀಂ ಪೇಳದೇನೋದನಿಂ
ದನಿಮಿತ್ತಂ ಮುನಿದಿರ್ಪುದೇನುಚಿತಮೋ ಪೇಳೆಂದು ಕಣ್ಣೀರ ಪೆ
ರ್ಪೊನಲಿಂ ಸಂದಿಸಿದಳ್ ಪ್ರಕೋಪಶಿಖಿಯಂ ಪಾಯ್ದಪ್ಪಿದಳ್ ನಲ್ಲನಂ ೧೩೫

ವ॥ ಅಂತಪ್ಪಿ ನಿಜನಿಕೇತನಕ್ಕೊಡಗೊಂಡುಪೋಗಿ ಪೊಸಸುಸಿಲ್ಗೆ ಮನಮಿತ್ತು ಮಣಿ ಮಂಚದೊಳಿರ್ವರುಂ ಕುಳ್ಳಿರ್ದು ಬಳ್ಳಿವಱಿವ ನಿಡುನೇಹದಿಂದಡರಿ ನೋಡಿ

ಉ॥ ತೋಳ್ತೊಡೆ ವಕ್ಷಮುಂ ಜಘನಮುಂ ಸ್ತನಮುಂ ಮೊಗಮುಂ ಪರಸ್ಪರಂ
ತಳ್ತಿರೆ ಕಂಪನಂಬಡೆದ ಕೈದಳದಿಂ ಪೊಡೆದಿಳ್ದು ಸೀಳ್ದು ಮೇ
ಲೇಳ್ತರೆ ನುಣ್ಗೊರಲ್ದನಿ ಸುಧಾಧರಮಂ ಸವಿದುರ್ಕಿ ಸೊರ್ಕಿ ಸೂ
ಳ್ಗೆಳ್ತಡವಾಗದಂತೆ ನೆರೆದರ್ ಸುರತಾಬ್ಧಿಯೊಳಾಳುತೇಳ್ವವೋಲ್ ೧೩೬

ಚಿತ್ರಪಟವನ್ನು ತೋಳತೆಕ್ಕೆಯಲ್ಲಿ ಅನಚಿಕೊಳ್ಳುತ್ತಿದ್ದಳು. (ಇದೇನು) ಮೋಹವೋ ! ವ॥ ಮತ್ತೊಬ್ಬ ಮೋಹಗೊಂಡ ಹೆಂಗಸು, ತನ್ನನ್ನು ಕಂಡು ವಿಶೇಷ ಪ್ರೀತಿಸುತ್ತಿರುವಂತೆ ತೋರುವ ಕಾಟದ ಕಪಟ ವಿಟನಿರುವಲ್ಲಿಗೆ ತಾನೇ ಬಂದು ೧೩೫. "ನಿನ್ನಲ್ಲಿ ನಾನು ಪ್ರೀತಿ ಯನ್ನಿಟ್ಟುದೇ ಒಂದು ದೋಷವೇ ! ನನ್ನನ್ನು ನೋಡದೆ, ಚೆನ್ನಾಗಿ ಮಾತನಾಡಿಸದೆ, ದಾಸಿಯರು ಮನೆಗೆ ಬಂದರೆ ಅವರ ಮಾತನ್ನು ಕೇಳದೆ, ಅವರೆದುರಿಗೆ ನೀನು ಏನೊಂದನ್ನೂ ಹೇಳದೆ, ಇಂದು ನೀನು ಕಾರಣವಿಲ್ಲದೆ ಕೋಪಗೊಂಡಿರುವುದೇನು ಯೋಗ್ಯವೇ, ಹೇಳು?" ಎಂದು ಕಣ್ಣೀರಿನ ದೊಡ್ಡ ಹೊನಲನ್ನೇ ಹರಿಸುವುದರ ಮೂಲಕ ಅವನ ವಿಶೇಷವಾದ ಕೋಪದ ಬೆಂಕಿಯನ್ನು ನಂದಿಸಿದವಳಾಗಿ, ತಾನೇ ಮೇಲೆ ಬಿದ್ದು ಅವನನ್ನು ಅಪ್ಪಿಕೊಂಡಳು. ವ॥ ಹಾಗೆ ಅಪ್ಪಿಕೊಂಡು ತನ್ನ ಮನೆಗೆ ಒಡಗೊಂಡು ಕರೆದುಕೊಂಡು ಹೋಗಿ, ಸಂಭೋಗಕ್ರಿಯೆಗೆ ಮನಸ್ಸುಮಾಡಿ, ರತ್ನಮಂಚದ ಮೇಲೆ ಇಬ್ಬರೂ ಕುಳಿತುಕೊಂಡು, ಕುಡಿಚಾಚಿ ಹಬ್ಬುವ ಬಳ್ಳಿಯಂತೆ ದೀರ್ಘವಾದ ಸ್ನೇಹ ದಿಂದ ಒಬ್ಬರನ್ನೊಬ್ಬರು ದಿಟ್ಟಿಸಿನೋಡಿ, ೧೩೬. ಎರಡು ತೋಳುಗಳು, ಎರಡು ತೊಡೆ ಗಳು, ಎದೆ, ಜಘನ, ಮೊಲೆಗಳು, ಮುಖಗಳು ಪರಸ್ಪರವಾಗಿ ಹೊಂದಿಕೊಂಡಿದ್ದುವು. ನಡುಗುತ್ತಿರುವ ಕೈಬೆರಳುಗಳಿಂದ ಒಬ್ಬರನ್ನೊಬರು ಹೊಡೆದಾಡುತ್ತಿದ್ದರು. ಸೆಳೆದು ತಬ್ಬಿಕೊಳ್ಳುತ್ತಿದ್ದರು. ನಖಕ್ಷತಗಳನ್ನುಂಟುಮಾಡುತ್ತಿದ್ದರು. ನುಣ್ಣನೆಯ ಗಳ ಧ್ವನಿಯು ಕಂಠದಿಂದ ಹೊರಹೊರಡುತ್ತಿತ್ತು. ಪರಸ್ಪರ ಅಧರಸುಧೆಯನ್ನು ಹೀರು ತ್ತಿದ್ದರು. (ಅವರು) ಉತ್ಸಾಹಗೊಂಡು ಸೊಕ್ಕೇರಿದವರಂತಾಗಿ, ಸರದಿಗಳು ತಡವಾಗದ ಹಾಗೆ ರತಿಕ್ರೀಡೆಯೆಂಬ ಸಮುದ್ರದಲ್ಲಿ ಮುಳುಗಿ ಮೇಲೇಳುತ್ತಿರುವರೋ ಎಂಬಂತೆ

ವ॥ ಇಂತಪ್ಪ ಮಧ್ಯಮನಾಯಕಿಯರ ವಿವಿಧವಿಳಾಸಮುಂ ನಾಗರಿಕನಱಿಪುತ್ತಂ ಬರೆ ವರೆ ಭೂಲೋಕಮಕರಪತಾಕಂ ಮುಂದಣ್ಗೆ ನಡೆನಡೆಯೆ ಮತ್ತೊಂದೆಡೆಯೊಳೊರ್ವ ವಿದಗ್ಧೆ ವಿರಹತಾಪಮಂ ಸೈರಿಸಲಾಱದಾಳಿಯ ಮೊಗಮುಂ ನೋಡಿ

ಮ॥ ಮದನಂ ತಾಂ ಮಧುಮತ್ತನೀ ಶಶಿಕರಂ ದೋಷಾಕರಂ ಚಂದನಂ
ಮದಸರ್ಪಪ್ರಕರೋಪಸೇವಿ ಶಿಖಿಮಿತ್ರಂ ಮಾರುತಂ ತಾಪಮಿ
ವ್ವುದು ಯುಕ್ತಂ ಸುಧೆಗೊಂಬ ಹಂಸೆಗುಣಿ ಪದ್ಮಂ ಕ್ಷೀರಪೂರ್ಣಂ ಸರಂ
ಸುದತೀ ಕೇಳ್ ಸುಮನಃಪ್ರಿಯಂ ಮಧುಕರಂ ಪೇಳ್ವಾಯ್ತುದೇಂ ತಕ್ಕುದೇ ೧೩೭

ವ॥ ಅದಲ್ಲದೆಯುಂ

ಚಂ॥ ಕಳೆವೆನದೆಂತೊ ಕಾಮಿನಿ ದಿನಂಗಳ ತಿಂಗಳ ಪೆಂಗಳಂಗಮುಂ
ತಿಳಿಯದೆ ನಲ್ಲನೆಯ್ದೆ ಬಗೆ ನಿಲ್ಲದು ಸಲ್ಲದಿದೊಲ್ಲದೇನುಮಂ
ಮುಳಿದೆಸುವಂಗಜಾತನ ವಿಘಾತನ ಶಾತನವಾಸ್ತ್ರಪಾತದಿಂ
ದಳಿದಪೆನಾತನಂ ಕರೆಯಲಾಗದೆ ಬೇಗದೆ ರಾಗದಿಂ ಸಖೀ ೧೩೮

ವ॥ ಎಂದು ನುಡಿದ ನಿಜಸಖಿಯ ನಿರ್ವೇದೋಕ್ತಿಯುಂ ಕೇಳಲಾಱದವಳಿನೆಯನಿರ್ದೆಡೆಗೆ ಪರಿತಂದು ವಿನಯದಿಂದಿಂತೆಂದಳ್

ಸಂಭೋಗಕ್ರಿಯೆಯಲ್ಲಿ ಮಗ್ನರಾಗಿದ್ದರು. ವ॥ ಹೀಗಿರುವ ಮಧ್ಯಮ ನಾಯಕಿಯರುಗಳ ವಿವಿಧವಾದ ವಿಲಾಸವನ್ನು ನಾಗರಿಕನು (ಮಹಾರಾಜನಿಗೆ) ತಿಳಿಸುತ್ತ ಬರುತ್ತಿರಲು, ಭೂಲೋಕದ ಮನ್ಮಥನಂತಿರುವ ಆ ರಾಜಶೇಖರಮಹಾರಾಜನು ಮುಂದುಮುಂದಕ್ಕೆ ನಡೆದುಬರುತ್ತಿದ್ದನು. ಮತ್ತೊಂದು ಕಡೆಯಲ್ಲಿ ಓರ್ವ ಪ್ರೌಢಜಾರಿಣಿಯು ವಿರಹತಾಪವನ್ನು ಸೈರಿಸಲಾರದೆ ತನ್ನ ಸೇವಕಿಯ ಮುಖವನ್ನು ನೋಡಿ ೧೩೭. "ಮನ್ಮಥನು ಮಧುವಿನಿಂದ (ಮಧುಮಾಸದಿಂದ) ಮತ್ತನಾದವನು ; ಚಂದ್ರನಾದರೋ ದೋಷಾಕರನು ; ಚಂದನವು ಮದದಿಂದ ಕೂಡಿದ ಸರ್ಪಸಮೂಹಗಳಿಂದ ಸೇವಿಸಲ್ಪಟ್ಟು ಉಳಿದುದು ; ವಾಯುವು ಅಗ್ನಿಮಿತ್ರನು. ಆದ್ದರಿಂದ ಇವರು ತಾಪವನ್ನುಂಟುಮಾಡುವುದು ಯುಕ್ತವೇ ಆಗಿದೆ. ಆದರೆ ಈ ಪದ್ಮವು ಸುಧೆಗೊಂಬ ಹಂಸಕ್ಕೆ ಉಣಿಸು. ಸರೋವರವಾದರೋ ಕ್ಷೀರದಿಂದ (ನೀರಿನಿಂದ) ತುಂಬಿರುವಂತಹುದು. ಎಲೈ ಸುಂದರಿಯೇ ಕೇಳು, ದುಂಬಿ ಪುಷ್ಪಪ್ರಿಯ. ಇವೂ ಕೂಡ ತಾಪಕಾರಕವಾಗಬಹುದೇ ? ವ॥ ಅದೂ ಅಲ್ಲದೆ ೧೩೮. ಕಾಮಿನಿಯೇ ನಾನು ದಿನಗಳನ್ನು, ತಿಂಗಳುಗಳನ್ನು ಅದು ಹೇಗೆ ಕಳೆಯಲಿ ! ಸ್ತ್ರೀಯರುಗಳ ಹೃದಯವೇನೆಂಬುದನ್ನರಿಯದೆ ನಲ್ಲನಾದವನು ಹೋಗಲಾಗಿ ಮನಸ್ಸು ತಡೆಯುತ್ತಿಲ್ಲ. ಈ ರೀತಿಯು ಯೋಗ್ಯವಾದುದಲ್ಲ. ಏನನ್ನೂ ನೋಡದೆ ವಿಘಾತಕನಾದ ಮನ್ಮಥನು ಕೋಪಗೊಂಡು ಬಿಡುವ ಚೂಪಾದ ಹೊಸ ಬಾಣಗಳ ಹೊಡೆತದಿಂದ ಸಾಯುತ್ತಿದ್ದೇನೆ. ಬೇಗನೆ ಪ್ರೀತಿಯಿಂದ (ನನ್ನ ಪ್ರಿಯನನ್ನು) ಕರೆದುಕೊಂಡು ಬರಬಾರದೇ, ಸಖೀ !" ವ॥ ಹೀಗೆಂದು ನುಡಿದ ತನ್ನ ಸಖಿಯು ತಾಪದಿಂದ ಕೂಡಿದ ಮಾತುಗಳನ್ನು ಕೇಳಲಾರದೆ ಆ ಸಖಿಯು ಅವಳ ಇನಿಯನಿದ್ದಲ್ಲಿಗೆ ಓಡಿಬಂದು ವಿನಯ

ಚಂ॥ ಸಸಿಗೆ ಸಮಾನಮಾದುದವಳಾಸ್ಯಮದುಂ ಕಡುವೆಳ್ಪು ತಳ್ತು ರಂ
ಜಿಸೆ ಬಿಸಕಾಂಡಕಂಗಲತೆ ತಾಂ ಸಮದಾಕೃತಿವೆತ್ತುದಂತದುಂ
ಲಸದರುಣಾಬ್ಜಪತ್ರದೆ ತದಕ್ಷಿಸುಹೃತ್ತ್ವಮನಾಂತುದಂತದುಂ
ಕುಸುಮಕಳಂಬನಂಬು ಬಗೆಗುಂದಿಸಿದತ್ತದುಮಬ್ಜಗಂಧಿಯಾ ೧೩೯

ಅಸುಗೊಳಲೆಂದು ತಾಂ ಬೆಸಸಿಯುಂ ಸಸಿಯಂ ಸಸಿಯಂ ಸಮಂತು ರಂ
ಜಿಸುವ ವಸಂತನಂ ಸಮದನಂ ಮದನಂ ಮದನಂತಶೌರ್ಯಮಂ
ಪಸರಿಪೆನೆಂದು ಗರ್ಜಿಸರಲಂ ಸರಲಂ ಸರಲಾಂಗುಲಿದ್ವಯಂ
ಮಿಸುಗಿರಲೆಚ್ಚು ಕೂಡೆ ತವಿಪಂ ತವೆಪಂತವೆ ಪಂಕಜಾಕ್ಷಿಯೊಳ್ ೧೪೦

ವ॥ ಎಂದು ಚತುರೋಕ್ತಿಜಳಮನೆಱೆದು ಮುಳಿಸಂ ಕಳೆದೆಗೆವಂತೆ ತೆಗೆದು ಬಗನೆಲದೊಳ್ ಬೇಟವೆಂಬ ಸಸಿಯಂ ಬೇರ್ವರಿಯಿಸಿ ವಿನಯದಿಂದೊಡಗೊಂಡು ಬಂದು ನಿಧುವನನಿಕೇತನಮಂ ಪುಗಿಸಲೊಡನೆ ವಸಂತರಾಜನಂ ಕಂಡ ವನಲಕ್ಷ್ಮಿಯಂತೆ ಸೊಂಪೇಱಿ ಕಮಳಕಾಮುಕನಂ ಕಂಡ ಕಮಳಿನಿಯಂತೆ ಮೊಗಮಲರ್ದಲರಂ ಕಂಡಳಿಯಂತೆ ಬಳಿಸಾರ್ದು ಮುಗಿಲಂ ಕಂಡ ಮಯೂರಿಯಂತೆ ಮೈಯುರ್ಬಿ ಮಾವಂ ಸಾರ್ದ ಮಲ್ಲಿಗೆಯಂತಮರ್ದಪ್ಪಿ ಸಸಿಗಳರಸನ

ದಿಂದ ಹೀಗೆ ಹೇಳಿದಳು : ೧೩೯. "ಚಂದ್ರಕಾಂತಿಗೆ ಸಮಾನವಾಗಿದ್ದ ಅಬ್ಜಗಂಧಿಯಾದ ನಿನ್ನವಳ ಆ ಮುಖವು ಬಿಳಿಚಿಕೊಂಡು ರಂಜಿಸುತ್ತಿದೆ. ಬಳ್ಳಿಯಂತಹ ದೇಹವು ಕಮಲದ ದೇಟಿಗೆ ಸಮಾನವಾದ ಆಕೃತಿಯನ್ನು ಹೊಂದಿ ಕೃಶಗೊಂಡಿದೆ. ಪ್ರಕಾಶಿಸುವ ಕೆಂಪುಕಮಲಗಳೊಡನೆ ಅವಳ ಕಣ್ಣುಗಳು ಗೆಳೆತನವನ್ನು ಬೆಳೆಸಿವೆ. ಅವಳ ಆ ಮನಸ್ಸನ್ನು ಮನ್ಮಥನ ಬಾಣಗಳು ಚಿಂತಾಕ್ರಾಂತವಾದುದನ್ನಾಗಿ ಮಾಡಿರುವುವು. ೧೪೦. ಅವಳ ಪ್ರಾಣವನ್ನೇ ಹರಣಮಾಡಬೇಕೆಂದು ಮದವಿಶಿಷ್ಟನಾದ ಮನ್ಮಥನು ಚಂದ್ರನಿಗೂ ತುಂಬಿಬಂದ ಗಿಡ ವೃಕ್ಷಗಳಿಂದೊಡಗೂಡಿದ ವಸಂತನಿಗೂ ಅಪ್ಪಣೆಮಾಡಿದನು. ಆ ವಸಂತನು ತನ್ನ ಸಂಬಂಧವಾದ ಅನಂತಶೌರ್ಯವನ್ನು ಪ್ರಸಾರಗೊಳಿಸುತ್ತೇನೆಂದು ಗರ್ಜಿಸುತ್ತ, ಪುಷ್ಪಗಳನ್ನೂ, ಬಾಣಗಳನ್ನೂ ತನ್ನ ಸರಳವಾದ ಅಂಗುಲಿದ್ವಯಗಳನ್ನು ಮಿಸುಗಿ ಪ್ರಯೋಗಿಸಿ ನಾಶಗೊಳಿಸತೊಡಗಿದ್ದಾನೆ. ಆ ಪಂಕಜಾಕ್ಷಿಯಲ್ಲಿ ನಿನಗೆ ಇರುವ ಪಂಥವಾದರೂ ಏನು ?" (ಎಂದು ಆ ಸಖಿಯು ಹೇಳಿದಳು) ವ॥ ಹೀಗೆನ್ನುವ ಚತುರವಾದ ಮಾತುಗಳ ಜಲವನ್ನು ಸುರಿದು, ಅವನ ಸಿಟ್ಟನ್ನು ಕಳೆ ತೆಗೆಯುವ ಹಾಗೆ ತೆಗೆದು, ಮನಸ್ಸೆಂಬ ನೆಲದಲ್ಲಿ ಪ್ರೇಮವೆಂಬ ಸಸಿಯನ್ನು ನೆಟ್ಟು ಬೇರುಬಿಡಿಸಿ, ವಿನಯದಿಂದ ಕೂಡಿಕೊಂಡು ಬಂದು, ಸುರತಗೃಹವನ್ನು ಹೊಗಿಸಿದ ಕೂಡಲೆ ಆ ಜಾರೆಯು ವಸಂತರಾಜನನ್ನು ಕಂಡ ವನಲಕ್ಷ್ಮಿಯಂತೆ ಕಳೆಗೊಂಡವಳಾದಳು. ಸೂರ್ಯನನ್ನು ಕಂಡ ಕಮಲದ ಹಾಗೆ ಮುಖವರಳಿತು. ಹೂವನ್ನು ಕಂಡ ದುಂಬಿಯಂತೆ ಸಮೀಪಕ್ಕೆ ಬಂದಳು. ಮೇಘವನ್ನು ಕಂಡ ನವಿಲಿನಂತೆ ಮೈಯುಬ್ಬಿತು. ಸೀಮಾವಿನ ಮರವನ್ನು ಮಲ್ಲಿಗೆಯ

ಸರಸಕರಂ ಸೋಂಕಿದ ಸಸಿಗಲ್ಲಪುತ್ತಳಿಯಂತೆ ಕರಗಿ ಬಿಂಬಫಳಮಂ ಕಂಡ ರಾಜಶುಕಿಯಂತೆ ಬಿಂಬಾಧರವಂ ಕರ್ದುಂಕಿ ಕಾತರಂ ಕೈಮಿಗೆ ಕಡುಸೊಬಗಿಂ ಕಾಂತನೊಡನೆ ಕಾಂಚನಮಂಚದ ಕಮಳದಳ ಧವಳಮೃದುತರ ವಿಪುಳಮರಾಳತೂಳ ಕಲ್ಪಿತಾಸಲ್ಪದೊಳ್ಮೆಲ್ಪಿಂ ಕುಳ್ಳಿರ್ದು ಕಳಾ ವಿಳಾಸಂಬಡೆದು ಕಾಮಕೇಳಿಗುಜ್ಜುಗಿಸಿ ಸಜ್ಜುಗೆಯ್ವಾಗಳ್

ಮ॥ಸ್ರ॥ ಬೆಮರ್ದಂಗಂ ಪತ್ತಿದತ್ತೀ ಜವಕೆಯಸುಗಿ ನೀನೆಂದು ಪದ್ಮಾಸ್ಯೆ ತಾಂ ಪೇ
ಳೆ ಮಹೋತ್ಸಾಹಾನ್ವಿತಂ ವಲ್ಲಭನಿಡೆ ಕುಚಮಧ್ಯಕ್ಕೆ ಹಸ್ತಾಬ್ಜಮಂ ಮ
ತ್ತೆ ಮನೋಜ್ಞಾಂಗಂ ಪೊದಳ್ದುರ್ಬಿದೊಡದು ಜಾಱಿತ್ತು ಬಾಹಾಹಿತದ್ದೇ
ಹ ಮಹಾಶ್ರೀಖಂಡಶಾಖಾಗ್ರದೆ ಪೆರೆಗಳೆವುತ್ತಿರ್ಪುದೆಂಬಂದದಿಂದಂ ೧೪೧

ಮ॥ ಕೊರಳೊಳ್ತಳ್ತಿರೆ ಬಾಹುವಲ್ಲರಿಯುರೋಜದ್ವಂದ್ವದಿಂದೊತ್ತಿ ಪೇ
ರುರಮಂ ಸಾರ್ದಮರ್ದಪ್ಪಿ ನೋಡಿ ಕಡೆಗಣ್ಣಿಂದಳ್ಕಱಿಂ ಪಲ್ಲವಾ
ಧರಮಂ ಚುಂಬಿಸಿ ನೀವಿ ಜಾಱೆ ಜಘನಾಭೋಗಂ ಪೊದಳ್ದುರ್ವೆ ಸೌಂ
ದರಿ ನಾನಾಕಳೆವೆತ್ತು ಸೋಂಕಿ ನೆರೆದಳ್ಕಾದಲ್ಮೆಯಿಂ ಕಾಂತನೊಳ್ ೧೪೨

ಬಳ್ಳಿಯು ಬಿಗಿದಪ್ಪುವಂತೆ ಬಿಗಿದಪ್ಪಿದಳು. ಸಸ್ಯಗಳ ಅರಸನಾದ ಚಂದ್ರನ ಅಮೃತ ಮಯಕಿರಣಗಳನ್ನು ಸೋಂಕಿದ ಚಂದ್ರಕಾಂತಶಿಲೆಯ ಗೊಂಬೆಯಂತೆ ಕರಗಿಹೋದಳು. ತೊಂಡೆಹಣ್ಣನ್ನು ಕಂಡ ಅರಗಿಳಿಯಂತೆ ತೊಂಡೆವಣ್ಣಿನಂತೆ ಕೆಂಪಾದ ತುಟಿಗಳನ್ನು ಕಚ್ಚಿದಳು. ವಿಶೇಷಾತುರವು ಮೇರೆಮೀರಿ ಕಡುಸೊಬಗಿನಿಂದ ಪ್ರಿಯಕರನೊಡನೆ ಬಂಗಾರದ ಮಂಚದ ಮೇಲಿರುವ ಕಮಲದಳದಂತೆ ಧವಳವರ್ಣದಿಂದ ಕೂಡಿದ ಮೃದು ವಾದುದೂ, ವಿಪುಲವಾದುದೂ, ಆದ ಹಂಸತೂಲಿಕೆಗಳಿಂದ ಮಾಡಿದ ಅಗಲ ವಾದ ಹಾಸಿಗೆಯ ಮೇಲೆ ಮೆಲ್ಲನೆ ಕುಳಿತು, ಕಾಮಕಲಾ ವಿಲಾಸ ಮನಸ್ಸುಳ್ಳವ ಳಾಗಿ ಆ ಕಾಮಕೇಳಿಯ ಕಾರ್ಯಕ್ಕೆ ಸಜ್ಜುಗೊಳಿಸುವಾಗ, ೧೪೧. 'ಬೆವರಿಂದ ಶರೀರವು ಈ ಕುಪ್ಪಸಕ್ಕೆ ಅಂಟಿಕೊಂಡೀತು ! ಆದ್ದರಿಂದ ಇದನ್ನು ತೆಗೆ', ಎಂದು ಕಮಲ ಮುಖನಾದ ಆ ವಿಟನು ಹೇಳಿ, ಆ ಕಂಚುಕನನ್ನು ತಾನೇ ಕಳಚಲು ಮಹೋತ್ಸಾಹ ದಿಂದ ಕೂಡಿದ ಅವನು ಆ ಪ್ರಿಯೆಯ ಕುಚಗಳ ಮಧ್ಯಕ್ಕೆ ತನ್ನ ಕೈಗಳೆಂಬ ಕಮಲ ಗಳನ್ನಿಟ್ಟನು. ಮನೋಜ್ಞವಾದ ಅವಳ ಅಂಗವು ಸಂತೋಷಗೊಂಡು ಉಬ್ಬಿ ಹೋಯಿತು. ಅವಳ ಬಾಹುಗಳೆಂಬ ಹಾವುಗಳು ಅವಳ ದೇಹವೆಂಬ ಮಹಾಶ್ರೀಖಂಡವೃಕ್ಷದ ಕೊಂಬೆ ಗಳ ತುದಿಯಿಂದ ತಮ್ಮ ಪೊರೆಗಳನ್ನು ಬಿಡುತ್ತಿರುವುವೋ ಎಂಬ ರೀತಿಯಲ್ಲಿ ಕುಪ್ಪಸವು ಜಾರಿತು. ೧೪೨. (ಪ್ರಿಯನ) ಕೊರಳಿಗೆ ಜಾರೆಯ ಬಾಹುಗಳೆಂಬ ಬಳ್ಳಿಗಳು ಸುತ್ತಿ ಕೊಂಡಿರಲು, ಸ್ತನಯುಗಗಳಿಂದ ಕಾಂತನನ್ನು ಒತ್ತಿ, ಅಗಲವಾದ ಎದೆಗೆ ಅಂಟಿಕೊಂಡು ಅಪ್ಪಿದಳು. ಅತಿಪ್ರೀತಿಯಿಂದ ಕಡೆಗಣ್ಣಿನಿಂದ ದೃಷ್ಟಿಸಿ, ಪಲ್ಲವದಂತಿರುವ ತುಟಿಗಳನ್ನು ಚುಂಬಿಸಿದಳು, ಉಟ್ಟ ನಿರಿಗೆ ಗಂಟು ಬಿಚ್ಚಿಹೋಗಲು, ಜಘನಸ್ಥಳಗಳು ಉತ್ಸಾಹ

ಕಂ॥ ನೆಱೆವೆಱೆಯನುಳಿದು ಚೆಂದುಟಿ
ವೆಱೆವಿಡಿದಮರ್ದಿಂಟಿ ಪಟುಭುಜಂಗಂ ಶಂಖಂ
ಮೊಱೆಯಿಟ್ಟಪುದೆನೆ ಮದನಂ
ಗುಱೆ ಮೆಱೆದುದು ಗಳನಿನಾದಮದು ಕಳರವೆಯಾ ೧೪೩

ವ॥ ಇಂತು ಕಂತುಕೇಳೀಸುಖಾಸ್ವಾದನೋನ್ಮತ್ತಚಿತ್ತರೊಪ್ಪುತ್ತಿರೆ ಮತ್ತೊಂದು ಮುತ್ತಿನ ನೆಲೆವಾಡದೊಳವೊಳಗಣ ಥಳಥಳಿಪ ಮನೋಜ್ಞ ಮಣಿಮಯ ಮಂಚಾಗ್ರದಲ್ಲಿ.

ಉ॥ ಇಂದೆನಗೆನ್ನ ನಲ್ಲನೊಡಗೂಟಮದಪ್ಪುದೆಯೆಂದಗಲ್ದ ಪೂ
ರ್ಣೇಂದುನಿಭಾಸ್ಯೆ ಚಿಂತಿಸುವ ವೇಳೆಯೊಳೊಪ್ಪುವ ವಾಮಬಾಹು ವಿ
ಸ್ಪಂದಮನಾನೆ ಬಂದೊಡವನಾಗಳೆ ಭಾಪೆಸುತೇಳ್ದು ರೋಮಹ
ರ್ಷಂದಳೆದಪ್ಪಿದಳ್ ಪತಿಯನಾ ಭುಜದಿಂದಮೆ ಪೂರ್ಣರಾಗದಿಂ ೧೪೪

ಚಂ॥ ಪುಳಕದ ಮೈಯೊಳೊಪ್ಪುತೆ ಬೆಮರ್ತ ಘನಸ್ತನಮಂಡಳಂಗಳಂ
ಕಳೆಗೊಳಿಸುತ್ತೆ ವಕ್ಷದೊಳೆ ಕಂಪಿಪ ಕೈದಳದಿಂದೆ ಪೊಯ್ದು ಪಾ
ಯ್ದಿಳಿವ ಸುಖಾಶ್ರುವಿಂ ನೆನೆದ ಕಣ್ಮಲರಿಂ ನಡೆನೋಡಿ ಮುಂಬದಂ
ಗಳಿಯಿಸೆ ಕೂಡಿ ಗದ್ಗದದ ಕಂಠದಿ ಕೂಜಿತಮಂ ಸೆಗಳ್ಚಿದಳ್ ೧೪೫

ಗೊಂಡು ಉಬ್ಬುತ್ತಿರಲು, ಆ ಸುಂದರಿಯು ಅನೇಕ ಕಲಾವಿಲಾಸಗಳಿಂದ ಕೂಡಿ, ಕಾಂತನಲ್ಲಿ ಪ್ರೀತಿಯಿಂದ ರತಿಕ್ರೀಡೆ ಮಾಡಿದಳು. ೧೪೩. ಪೂರ್ಣಚಂದ್ರನಿಭ ಮುಖವನ್ನು ಬಿಟ್ಟು ಕೆಂಪಾದ ತುಟಿಗಳೆಂಬ ಚಂದ್ರನನ್ನು ಹಿಡಿದು, ಅಲ್ಲಿನ ಅಮೃತವನ್ನು ಪಟುವಾದ ವಿಟನು ಕುಡಿಯುತ್ತಿರಲಾಗಿ (ಕುತ್ತಿಗೆಯೆಂಬ) ಶಂಖವು ಮನ್ಮಥನಿಗೆ ಮೊರೆಯಿಟ್ಟಿದೋ ಎಂಬಂತೆ ಅವ್ಯಕ್ತಮಧುರ ಧ್ವನಿಯುಳ್ಳವಳಾದ ಅವಳ ಗಳಧ್ವನಿಯು ಶೋಭಿಸುತ್ತಿತ್ತು. ವ|| ಈ ರೀತಿ ಮನ್ಮಥಕೇಳಿಯ ಸುಖವನ್ನು ಆಸ್ವಾದಿಸುತ್ತ ಉನ್ಮತ್ತಗೊಂಡ ಚಿತ್ತವುಳ್ಳವರಾಗಿ ಆ ವಿಟನೂ ಜಾರೆಯೂ ಒಪ್ಪುತ್ತಿರಲು, ಮತ್ತೊಂದು ಮುತ್ತಿನ ಮೇಲುಪ್ಪರಿಗೆಯೊಳಗಿನ ಥಳಥಳಿಸುವ ಮನೋಹರ ರತ್ನಮಯ ಮಂಚದ ತುದಿಯಲ್ಲಿ, ೧೪೪. ಈ ದಿನ ನನಗೆ ನನ್ನ ಪ್ರಿಯನೊಡನೆ ಕೂಟವಾದೀತೇ, ಎಂದು ಪ್ರಿಯನನ್ನಗಲಿದ ಪೌರ್ಣಿಮೆಯ ಚಂದ್ರನಿಭಮುಖದ ಓರ್ವ ಜಾರೆಯು ಚಿಂತಿಸುತ್ತಿರುವ ವೇಳೆಯಲ್ಲಿ ತನ್ನ ಶೋಭಿಸುವ ಎಡಭುಜವು ಹಾರಲಾಗಿ, (ಆ ಪ್ರಿಯನು) ಆ ಕೂಡಲೇ ಬಂದನು. ಭಾಪುರೇ! ಎನ್ನುತ್ತ ಎದ್ದು ಹರ್ಷದಿಂದ ಪುಳುಕಿತಗೊಂಡಳು. ಸ್ಪಂದನ (ಹಾರು) ದ ಮೂಲಕ ಶುಭನಿಮಿತ್ತ ಸೂಚಿಸಿದ ಆ ಭುಜದಿಂದಲೇ ಪತಿಯನ್ನು ಪೂರ್ಣಪ್ರೀತಿಯನ್ನು ತೋರಿಸಿ ಅಪ್ಪಿಕೊಂಡಳು. ೧೪೫. ರೋಮಾಂಚನಗೊಂಡ ಮೈಯಿಂದ ಶೋಭಿಸುವವಳಾಗಿ, ಬೆವರಿದ ದಪ್ಪನೆಯ ಸ್ತನಮಂಡಲಗಳನ್ನು ಪ್ರಿಯನ ವಕ್ಷಸ್ಥಳಕ್ಕೆ ಹೊಂದಿಸಿ, ನಡುಗುತ್ತಿರುವ ಕೈಗಳಿಂದ ಹೊಡೆಯುತ್ತ, ಹೊರಹೊಮ್ಮುತ್ತಿರುವ ಆನಂದಬಾಷ್ಪ

ವ॥ ಇಂತು ಸಮಾನುರಾಗದಿಂ ನೆರೆದಗಲದಿರ್ದಾತನಂ ನೋಡಿ ನಾಗರಿಕನಿಂತೆಂದಂ ,

ಕಂ॥ ಅಸಿಯುಳುಸಿರೆಲರನಾಸ್ವಾ
ದಿಸುತಧರಾಮೃತಮನೀಂಟಿ ಭೋಗಿತ್ವಮನಾಂ
ತಸಮಕುಚಕಳಶನಿಧಿಗಾ
ದೆಸೆವಂಗೆ ಭುಜಂಗನಾಮಮೇಂ ಬಗೆವುಗದೇ ೧೪೬

ವ॥ ಎಂಬ ಮಾತಂ ಮನವೊಸೆದಾಕರ್ಣಿಸುತ್ತಿರೆ ಮತ್ತಮೊರ್ವಳ್ ಮಚ್ಚುಗಾರ್ತಿ ಮನದನ್ನನ ಮಾತಾಗಿ ಕೆಳದಿಗಿಂತೆಂದಳ್

ಮ॥ ಮೊಗದೊಳ್ನೋಳ್ಪನೆ ಮುಗ್ಧಭಾವಮವನೈತರ್ಪಂದದೊಳ್ನೋಳ್ಪನೇ
ಮಿಗೆ ಸೌಜನ್ಯಕಳಾಪ್ರಕಾಶತೆಯಿವಂ ನೋಳ್ಪಂದದೊಳ್ ನೋಳ್ಪನೇ
ನೆಗಳ್ದುಳ್ಕರ್ಷವಿಮಾತನಾಡಿ ನೆರೆವಾಗಳ್ನೋಳ್ಪನೇ ಕಾಂತೆ ಕೇಳ್
ಮುಗುಳಂಬಂಗೆಣೆಯಾತನಿರ್ಕೆನಗೆ ತೋಳ್ತೋಳ್ಪನ್ಮಜನ್ಮಂಗಳೊಳ್ ೧೪೭

ಗಳುಳ್ಳ ನೇತ್ರಕಮಲಗಳಿಂದ ಒಂದೇಸಮನೆ ನೋಡುತ್ತ, ರತಿಕಾಲದ ದ್ರವವು ಸುರಿಯುತ್ತಿರಲು (ಮುಂಬದಂ?) ಗದ್ಗದಕಂಠದಿಂದ ರತಿಕೂಜಿತಧ್ವನಿಯು ಹೊರಬರುತ್ತಿರಲು, ರತಿಸುಖವನ್ನನುಭವಿಸಿದಳು. ವ|| ಈ ರೀತಿ ಸಮಾನವಾದ ಅನುರಾಗದಿಂದ ಕೂಡಿ, ಅಗಲದೆ ಇದ್ದ ಆತನನ್ನು ನೋಡಿ ನಾಗರಿಕನು ಹೀಗೆ ಹೇಳಿದನು: ೧೪೬. "ಆ ತೆಳ್ಳಗಿರುವ ಪ್ರಿಯೆಯ ಉಸುರೆಂಬ ಗಾಳಿಯನ್ನು ಆಸ್ವಾದಿಸುತ್ತ, ತುಟಿಯಲ್ಲಿರುವ ಅಮೃತವನ್ನು ಕುಡಿದು ಭೋಗಿಯೆನಿಸಿ, (ಸರ್ಪಗುಣವನ್ನು ಹೊಂದಿ) ಅವಳ ಅಸಮಾನವಾದ ಕಲಶದಂತಿರುವ ಮೊಲೆಗಳೆಂಬ ನಿಧಿಯನ್ನು ಕಾಯ್ದುಕೊಂಡು ಶೋಭಿಸುವ ಇವನಿಗೆ ಭುಜಂಗ (ವಿಟ-ಹಾವು) ಎಂಬ ಹೆಸರು ಒಪ್ಪಿಗೆಯಾಗುವುದಿಲ್ಲವೇ?" ವ॥ ಹೀಗೆಂದು ಹೇಳುವ ನಾಗರಿಕನ ಮಾತನ್ನು ಪ್ರೀತಿಯಿಂದ ಆ ರಾಜಶೇಖರಮಹಾರಾಜನು ಕೇಳುತ್ತ ಇರಲು, ಮತ್ತೊಬ್ಬಳು ಮಚ್ಚುಗಾರ್ತಿಯು ತನ್ನ ಪ್ರಿಯನ ವಿಷಯಕವಾದ ಪ್ರಸಂಗದ ಮಾತನ್ನು ಗೆಳತಿಗೆ ಹೀಗೆ ಹೇಳುತ್ತಿದ್ದಳು: ೧೪೭. "ಮುಖದಲ್ಲಿ ನೋಡುವೆನೇ ಮುಗ್ಧಭಾವವುಳ್ಳವನು ; ಬರುತ್ತಿರುವ ರೀತಿಯನ್ನು ನೋಡುವೆನೇ ಅತ್ಯಂತ ಸೌಜನ್ಯದಿಂದ ಕೂಡಿದವನು. ಇವನು ನೋಡುವ ನೋಟದ ರೀತಿಯನ್ನು ನೋಡುವೆನೇ ಅತಿಶ್ರೇಷ್ಠವಾದ ಪ್ರೀತಿಯು (ಹೊರಸೂಸುವುದು). ಸವಿಮಾತುಗಳನ್ನಾಡಿ ಸಂಭೋಗಕ್ರಿಯೆಗೆ ತೊಡಗುವಾಗ ನೋಡುವೆನೆ ಮನ್ಮಥನಿಗೆ ಸಮಾನನಾದವನು. ಎಲೈ ಗೆಳತಿಯೇ, ಕೇಳು, ಈತನೇ ನನ್ನ ತೋಳುಗಳಲ್ಲಿ ನನಗೆ ಜನ್ಮಜನ್ಮಾಂತರ

ವ॥ ಅಲ್ಲಿ ಮತ್ತಮೊರ್ವಳ್

ಮ॥ ಕಡೆಗಣ್ಬಿಲ್ಲಮನಿತ್ತೊಡಲ್ಲದೆಳಸಂ ಮೈಸಾರ್ದು ನಿಂದಲ್ಲದೊ
ಳ್ನುಡಿಯಾಡಂ ನಿಜವಕ್ಷದೊಳ್ಕುರುಕುಚಂ ತಳ್ತಲ್ಲದಾಲಿಂಗಿಸಂ
ತೊಡೆ ಕಂಪಂಬಡೆದಲ್ಲದೊಂದಿ ಬೆರಸಂ ಕಾಮಾಂಬು ಕೈವಿಾಱೆ ಮು
ಲ್ಲುಡೆ ತಾನೇ ಸರಿದಲ್ಲದೊಲ್ಲು ನೆರೆಯಂ ಮತ್ಪ್ರಾಣಕಾಂತಂ ಸಖೀ ೧೪೮

ವ॥ ಮತ್ತಮೊರ್ವಳ್ ಲಲ್ಲಿಗಾರ್ತಿ ದೂದವಿಯೊಡನೆ ನಗೆ ಮಿಸುಗೆ ಮೊಗಮಂ ನೋಡಿ

ಚಂ॥ ಸುರಿಯೆ ಸುಖಾಶ್ರುವಳ್ಳಳಿವಳೆಂದತಿ ದೈನ್ಯಮನಾಡಿ ಕಂಪನಂ
ನೆರೆಯೆ ಭಯಾರ್ತೆಗೆತ್ತಗಿದು ನೋಡಿ ಕರಾಗ್ರದೆ ಪೊಯ್ಯೆ ಕೋಪನಿ
ರ್ಭರಯುತೆಯೆಂದು ಬಾಡಿ ಸುರತಾಂತದೊಳಕ್ಷಿಗಳಂ ಮುಗುಳ್ಚಿ ಪ
ಟ್ಟಿರೆ ಪರವಾಯು ತೀವಿತಿವಳೆಂದಿರದೋಡಿದನೋರ್ವನೂರಿಚಂ ೧೪೯

ವ॥ ಎಂದುಸುರ್ದು ನಿಜಸಖಿಯ ಬಗೆಗೆ ನಗೆಯುಂ ಪಡೆದಿರ್ದಳಿತ್ತಲ್ಮತ್ತೊರ್ವಳ್ ವಿದಗ್ಧಾಂಗನೆ ಪರ್ಬಿದ ಬೆಳ್ದಿಂಗಳೊಳ್ನಿಜಗೃಹದ್ವಾರದ ಪೊಱವಳಯದ ಪೊಂಜಗಲಿಯೊಳ್ ಬಳಸಿದ ಚೆಲಿವೆಣ್ಗಳ ನಡುವೆ ಗಾಡಿಯಿಂ ಕುಳ್ಳಿರ್ದಿಂತೆಂದಳ್

ಗಳಲ್ಲಿಯೂ ಇರಲಿ." ವ|| ಅಲ್ಲಿ ಮತ್ತೊಬ್ಬಳು ೧೪೮. "ಸಖಿಯೇ, ನನ್ನ ಪ್ರಾಣಕಾಂತನು ನಗೆಗೂಡಿದ ಕಡೆಗಣ್ಣಿನ ಕಾಂತಿಯನ್ನು ನಾನು ಬೀರಿದಲ್ಲದೆ ಮನಸ್ಸು ಮಾಡನು ; ಮೈಗೊಟ್ಟು ನಿಂತಲ್ಲದೆ ಒಳ್ಳೆಯ ಮಾತನ್ನು ಆಡನು ; ಅವನ ವಕ್ಷದಲ್ಲಿ ನನ್ನ ದಪ್ಪನೆಯ ಮೊಲೆಗಳನ್ನು ಒತ್ತಿದಲ್ಲದೆ ಆಲಿಂಗಿಸುವುದಿಲ್ಲ ; ತೊಡೆಗಳು ನಡುಕಗೊಂಡಲ್ಲದೆ ಸೇರಿ ಬೆರೆಯನು ; ಮನ್ಮಥಜಲವು (ದ್ರವಿಸುವಿಕೆ) ಉಂಟಾಗಿ, ಉಟ್ಟ ಉಡಿಗೆ ತಾನೇ ಜಾರಿದಲ್ಲದೆ ಸಂಭೋಗಿಸನು." ವ|| ಮತ್ತೊಬ್ಬ ಬಹುಮಾತಿನ ಜಾರೆಯು ತನ್ನ ದೂತಿಕೆಯೊಡನೆ ನಗೆಗೂಡಿದ ಮುಖನವಳಾಗಿ ಅವಳ ಮುಖವನ್ನು ನೋಡಿ, ೧೪೯. "ಒಬ್ಬ ಗಾಂಪನು (ಎಗ್ಗನು) ನನ್ನ ಕಣ್ಣಿನಿಂದ ಆನಂದಬಾಷ್ಪಗಳು ದುರಲು, ಇವಳು ಅಳುತ್ತಿರುವಳೆಂದು ಭಾವಿಸಿ, ಅತಿದೈನ್ಯವನ್ನು ತೋರಿಸಿದನು. ನಡುಕವುಂಟಾಗಲು ಭಯಗೊಂಡಿರುವಳೆಂದು (ತಾನೂ) ಹೆದರಿ ನೋಡಿದನು. ಕೈಗಳಿಂದ ಹೊಡೆಯಲು ಅತಿ ಕೋಪಗೊಂಡಿರುವಳೆಂದು ಬಾಡಿದನು. ಸಂಭೋಗಾನಂತರ ಕಣ್ಣುಮುಚ್ಚಿ ಮಲಗಿರಲು ಇವಳು ಸತ್ತಳೆಂದೇ ಭಾವಿಸಿ ಓಡಿಹೋದನು !" ವ|| ಹೀಗೆಂದು ಗಾಂಪನೊಬ್ಬನ ವಿಷಯವನ್ನು ತನ್ನ ಸಖಿಗೆ ಹೇಳಿ ಅವಳಿಗೆ ನಗೆಯನ್ನುಂಟುಮಾಡುತ್ತಿದ್ದಳು. ಇತ್ತಕಡೆ ಮತ್ತೊಬ್ಬ ಪ್ರೌಢೆಯಾದ ಜಾರೆಯು ಹರಡಿದ ಬೆಳದಿಂಗಳಲ್ಲಿ ತನ್ನ ಮನೆಯ ಬಾಗಿಲಿನ ಹೊರಭಾಗದಲ್ಲಿರುವ ಬಂಗಾರದ ಜಗುಲಿಯ ಮೇಲೆ ಕುಳಿತುಕೊಂಡು ತನ್ನ ಸುತ್ತಲೂ ನೆರೆದಿದ್ದ ಸೂಳೆಯರುಗಳಿಗೆ. ಸಂಭ್ರಮದಿಂದ ಹೀಗೆಂದು ಹೇಳುತ್ತಿದ್ದಳು.

ಮ॥ ನಯಸಂಪನ್ನನತೀವಯವ್ವನಯುತಂ ರೂಪಾನ್ವಿತಂ ನರ್ಮಗೋ
ಷ್ಠಿಯನಾಳ್ವಂ ಕಡುನೀಱನೂರ್ಜಿತಯಶಂ ಪಂಚಾಸ್ತ್ರಶಾಸ್ತ್ರಾರ್ಥ ನಿ
ಶ್ಚಯಚಿತ್ತಂ ಸುಭಗಂ ಪ್ರಸನ್ನನುಚಿತಜ್ಞಂ ಚಾಗಿ ಸಂಭೋಗಸಂ
ಪ್ರಿಯನುತ್ಸಾಹಿಯೆನಿಪ್ಪನೊಳ್ನೆರೆವ ಪೆಣ್ಗಾ ರಂಭೆಯೇಂ ಸಾಟಿಯೋ ೧೫೦

ಖಲನೊಳ್ಕಾತರನೊಳ್ಕಳಾರಹಿತನೊಳ್ಕಾಪಟ್ಯಮಂ ಪಾಳ್ದ ದು
ರ್ಬಲನೊಳ್ ದುರ್ಮುಖನೊಳ್ ದುರುಕ್ತಿಪರನೊಳ್ ದುರ್ಮಾರ್ಗ
ದೊಳ್ಪೊರ್ಪ ನಾ
ಣಲಿಯೊಳ್ ನಿಷ್ಠುರನೊಳ್ ನಿತಾಂತ ಶಠನೊಳ್ ನಿಸ್ನೇಹಮಂ ತೋರ್ಪ ಸಂ
ಚಳನೊಳ್ ಸದ್ಗುಣಹೀನನೊಳ್ ನೆರೆವ ಕೂಟಂ ನಂಜನೂಟಂ ಸಖೀ ೧೫೧

ವ॥ ಆದಂ ಕೇಳುತ್ತಿರ್ಪನಿತಱೊಳಲ್ಲಿ ಪೆಱತೊಂದು ತಾಣದೊಳ್ಕುಳ್ಳಿರ್ದೂರಿಚನಿರವಂ ನೋಡಿ ನೀನೀತನೊಳ್ ಕೂರ್ಪುದುಂಟೇ ಸಖಿಯೆಂದು ಬೆಸಗೊಂಡಾಳಿಯೊಡನೊರ್ವಳ್ ಸುಭಗೆ

೧೫೦. "ನೀತಿಸಂಪನ್ನನೂ, ಅತ್ಯಂತ ಯೌವನವಂತನೂ, ರೂಪದಿಂದ ತುಂಬಿದವನೂ, ನರ್ಮಗೋಷ್ಠಿಗೆ ತಕ್ಕವನೂ, ವಿಶೇಷವಾದ ಲಾವಣ್ಯಯುತನೂ, ಅತಿಯಾದ ಯಶಸ್ಸಿನಿಂಥ ಕೂಡಿದವನೂ, ಕಾಮಶಾಸ್ತ್ರಾರ್ಥದಲ್ಲಿ ನಿಶ್ಚಯಜ್ಞಾನವುಳ್ಳವನೂ, ಮನೋಹರನೂ, ನಗೆಮುಖದಿಂದ ಕೂಡಿದವನೂ, ಔಚಿತ್ಯಜ್ಞಾನವುಳ್ಳವನೂ, ತ್ಯಾಗಿಯೂ, ಸಂಭೋಗಕ್ರಿಯೆಯಲ್ಲಿ ಪ್ರೀತಿಯುಳ್ಳವನೂ, ಉತ್ಸಾಹಶಾಲಿಯೂ ಎನಿಸಿರುವಂಥವನೊಡನೆ ಭೋಗಿಸುವ ಹೆಣ್ಣುಗಳಿಗೆ ಆ (ದೇವಲೋಕದ) ರಂಭೆಯೇನು ಸಮಾನಳಾದಾಳೇ? ೧೫೧. "ಸಖಿಯೇ, ದುಷ್ಟನಾದವನೂ, ವಿಶೇಷವಾಗಿ ಆತುರವನ್ನು ಪ್ರಕಟಿಸುವವನೂ, ಕಳೆಗೆಟ್ಟವನೂ (ರೂಪಗೆಟ್ಟವನೂ), ಕಾಪಟ್ಯವನ್ನು ಆಚರಿಸುವವನೂ, ಶಕ್ತಿಗುಂದಿದವನೂ, ಕೆಟ್ಟಮುಖದಿಂದ ಕೂಡಿದವನೂ, ಕೆಟ್ಟ ಕೆಟ್ಟ ಮಾತುಗಳನ್ನು ಆಡುವಂಥವನೂ, ದುರ್ಮಾರ್ಗದ ಪ್ರೀತಿಯುಳ್ಳವನೂ, ನಾಚಿಕೆಯೇ ಇಲ್ಲದವನೂ, ಕಠಿಣವಾದ ಮಾತುಗಳನ್ನಾಡುವವನೂ, ತನ್ನ ಗೃಹದಲ್ಲಿ ದುಷ್ಟನೆನಿಸಿಕೊಂಡಿರುವವನೂ, ಸ್ನೇಹವೆಂದರೇನೆಂಬುದನ್ನರಿಯದವನೂ, ಚಪಲಸ್ವಭಾವವುಳ್ಳವನೂ, ಸದ್ಗುಣರಹಿತನೂ, ಆದಂಥವನೊಡನೆ ನೆರೆಯುವ ಕೂಟವು ವಿಷದ ಊಟವೇ ಸರಿ." ವ॥ ಆ ಮಾತನ್ನು ಕೇಳುತ್ತಿರುವಷ್ಟರೊಳಗೆ ಅಲ್ಲಿ ಬೇರೊಂದು ಸ್ಥಳದಲ್ಲಿ ಕುಳಿತುಕೊಂಡಿದ್ದ ಗ್ರಾಮೀಣನಾದವನೊಬ್ಬನ ಇರುವಿಕೆಯನ್ನು ನೋಡಿ, "ನೀನು ಈತನೊಡನೆ ಪ್ರೀತಿಯನ್ನು ತೋರಿಸುವೆಯಾ, ಸಖಿಯೇ ?" ಎಂದು ಕೇಳಿದ ಆಳಿಯೊಡನೆ ಓರ್ವ ಸುಂದರಿಯು (ಹೀಗೆ

ಉ॥ ಬರ್ಪುದುಮಾಗಳೇಳ್ದು ಪಿಡಿದುಟ್ಟುದನುರ್ಚುವನೊತ್ತಿ ಪಾಯ್ವನು
ಳ್ಳಾರ್ಪು ಮಿಗಲ್ ಕಡಂಗಿ ಕಡುಕಾತರಮುಣ್ಮಿರೆ ಕಾಯಜೀವಮಂ
ಬೇರ್ಪಡಿಪಂತೆ ಕೂಡುವನಿದೇಂ ಸಖಿ ಕೂಟವೋ ಬೇಟದಾಟವೋ
ಕೂರ್ಪುದನೀತನಂ ಕೊಡುವ ಪೊಂಗಳನಾನಿರದೊಟ್ಟಿ ಸುಟ್ಟಪೆಂ ೧೫೨

ವ॥ ಎಂಬ ನುಡಿಗೇಳ್ದವನಿಪಂಗೆ ವಿಟನಿಂತೆಂದಂ

ಚಂ॥ ನಗೆಯಱಿದ್ಯದಿ ನಾಣಱಿದು ಮುದ್ದಿಸಿ ಪೊಂಪುಳಿವೆತ್ತ ಮೈಯ ಪೊ
ರ್ದುಗೆಯಱಿದಂಟಿ ಸೋಲವಱಿದೀಕ್ಷಿಸಿ ಕಾತರಮುಣ್ಮಿ ಮುಂಚುವಾ
ಬಗೆಯಱಿದಪ್ಪಿ ಭಾವವಱಿದೋತೊಡಗೂಡಿ ರತಾಂತ ಸೌಖ್ಯಮಂ
ನೆಗಳದ ಗಾಂಪನೇನೊಲಿಸಲಾರ್ಪನೆ ಸೂಳೆಯರಂ ಧರಿತ್ರಿಯೊಳ್ ೧೫೩

ವ॥ ಎಂದರಸನ ಚಿತ್ತಕ್ಕೆ ಸರಿವೋದನದಲ್ಲದೆ ಮತ್ತೊಂದು ಮರಕತರತ್ನದ ಮೊಗಸಾಲೆ
ಯೊಳ್ಕುಳ್ಳಿರ್ದು ಸೂಳೆವಾತಾಗಿ ವಿಟಂ ವಿಟನೊಡನೆ ನುಡಿದನದೆಂತೆನೆ

ಹೇಳುತ್ತಿದ್ದಳು). ೧೫೨. "ಇನ್ನೂ ಬರಬರುತ್ತಲೇ ಆಗಲೇ ಎದ್ದು ಹಿಡಿದುಕೊಂಡು ಉಟ್ಟುದನ್ನೆಲ್ಲ ಕಳಚುವನು. ಗಟ್ಟಿಯಾಗಿ ಹಿಚುಕಿ ಮೇಲೆ ಬೀಳುವನು. ತನಗಿರುವ ಕಸುವೆಲ್ಲವನ್ನೂ ಪ್ರಯೋಗಿಸಿ, ಉತ್ಸಾಹಗೊಂಡು ವಿಶೇಷವಾದ ಆತುರದಿಂದ ಅವನು ದೇಹ ಮತ್ತು ಜೀವಗಳು ಬೇರೆಬೇರೆಯಾಗಿ ಹೋಗುವುವೋ ಎನ್ನುವ ಹಾಗೆ ಬೆರೆಯುತ್ತಾನೆ. ಸಖಿಯೇ, ಇದೇನು ರತಿಕೂಟವೋ, ಮೃಗಬೇಟೆಯೋ! ಈತನ ಪ್ರೀತಿಯನ್ನೂ, ಈತನು ಕೊಡುವ ಬಂಗಾರವನ್ನೂ ಒಟ್ಟಿ ಸುಟ್ಟುಹಾಕುತ್ತೇನೆ!" ವ॥ ಹೀಗೆಂದು ಮಾತನಾಡುತ್ತಿದ್ದ ಮಾತನ್ನು ಕೇಳುವ ರಾಜನಿಗೆ ವಿಟನಾಯಕನು ಹೀಗೆ ಹೇಳಿದನು. ೧೫೩. "(ಜಾರೆಯು) ನಗೆಯನ್ನರಿತು ಹೋಗಿ, ನಾಚಿಕೆಯನ್ನರಿತು ಮುದ್ದುಮಾಡಿ, ರೋಮಾಂಚನಗೊಂಡ ಮೈಯ ರೀತಿಯನ್ನು ಅರಿತು ಅಂಟಿಕೊಂಡು, ಮನಸೋತ ರೀತಿಯನ್ನು ತಿಳಿದುನೋಡಿ, ವಿಶೇಷಾತುರ ಹೊರಹೊಮ್ಮಿ ಮುಂದುವರಿದು ಬರುವುದನ್ನು ಅರಿತು ಅಪ್ಪಿಕೊಂಡು, ಅವಳ ಭಾವವನ್ನರಿತು ಪ್ರೀತಿಸಿ, ಒಡಗೂಡಿ ರತಿಕ್ರೀಡೆಯನ್ನು ಮಾಡದ ಮೂಢನು ಭೂಮಿಯಲ್ಲಿ ಸೂಳೆಯರನ್ನು ಒಲಿಸಿಕೊಳ್ಳಲು ಶಕ್ತನಾದಾನೇ!" ವ॥ ಹೀಗೆಂದು ಅರಸನ ಯೋಚನೆಗೆ ಸರಿಹೊಂದುವ ಅಭಿಪ್ರಾಯವನ್ನೇ ನುಡಿದನು. ಅಲ್ಲದೆ ಮತ್ತೊಂದು ಮರಕತರತ್ನಮಯವಾದ ಛಾವಣಿಯಲ್ಲಿ ಕುಳಿತುಕೊಂಡಿದ್ದು, ಸೂಳೆಯರ ವಿಷಯದ ಸಲ್ಲಾಪವನ್ನು ಎತ್ತಿ ಒಬ್ಬ ವಿಟನು ಮತ್ತೊಬ್ಬ ವಿಟನೊಡನೆ

ಮ॥ ಎಳಸುತ್ತಪ್ಪಿದೊಡಕ್ಷಿಯೊಳ್ಸುಖಜಳಂ ಪ್ಯೆದೋಱದಾಸ್ಯಾಬ್ಜದೊಳ್
ಕಳೆ ಕೈವಿಱದೆ ನೀವಿ ಜಾಱದೆ ಸುಸಿಲ್ಗೈವಲ್ಲಿ ನಾಣ್ಗೋಡದು
ತ್ಪುಳಕಂ ಮೂಡದೆ ದೈನ್ಯ ಮಾಡದೆ ನಿತಂಬಂ ಮುಂಬದಂಗೂಡದಿ
ರ್ಪಳ ಕೂಟಂ ಬಿಡದೇಳಱಾಟವದನಾವಂ ನಚ್ಚುವಂ ಮೆಚ್ಚುವಂ ೧೫೪

ವ॥ ಮತ್ತಮೊರ್ವನಿದಿರೊಳ್ಳೆತರ್ಪ ತಕ್ಕುಗಾರ್ತಿಯಂ ಕರಸಂಜ್ಞೆಯಿಂ ಕೆಳೆಯಂಗೆ
ತೋಱ ಮೆಲ್ಲನಿಂತೆಂದಂ

ಚಂ॥ ಮಿಸುಗುವ ಬಟ್ಟಬಲ್ಮೊಲೆಯನೀ ವಧು ಮೇಲುದನಿಕ್ಕುವಂತೆ ಕಾ
ಣಿಸಿ ಕಚಗಂಧಕಾರ್ದೆಱಗುವಾಱಡಿಯಂ ನಡೆನೋಡುವಂತೆ ಕಾ
ಣಿಸಿ ಸವಿನೋಟವಂ ಜಗುಳ್ವ ಕಾಂಚಿಯನೊತ್ತುವ ಪಾಂಗಿನಿಂದೆ ಕಾ
ಣಿಸಿ ಸುಳಿನಾಭಿಯಂ ಬೊಜಗರಂಗದೆ ಕಾಣಪಳಂಗಜಾಗ್ನಿಯಂ ೧೫೫

ವ॥ ಅಂತುಮಲ್ಲದೆಯುಂ

ಮ॥ ಮೊದಲೊಳ್ನೋಟದೆ ಬೇಟಮಂ ಪಡೆದು ಕೂರ್ತೈತಂದ ಕಾಂತರ್ಗೆ ಸಂ
ಪದವಂ ಕಾಣಿಸಿ ಕೊಟ್ಟೊಡೊಲ್ಲದೆ ಕುಲಸ್ತ್ರೀಯಂತೆ ಕೂರ್ತಪ್ಪಿ ಸಂ
ಮದಮಂ ಪುಟ್ಟಿಸಿ ಮತ್ತೆ ಮತ್ತೆ ಬಗೆಯೆಂತಿರ್ದಂತೆ ಕೂಡುತ್ತೆ ಸೋ
ಲ್ಪುದನೊಲ್ಪೀಕ್ಷಿಸಿ ಚಿತ್ತದೊಂದು ಮುಳಿಸಿಂ ಸರ್ವಸ್ವಮಂ ಕೊಂಡಪಳ್ ೧೫೬

ಹೀಗೆ ಹೇಳುತ್ತಿದ್ದನು. ಅದೇನೆಂದರೆ : ೧೫೪. "ಪ್ರೀತಿಯಿಂದ ಅಪ್ಪಿಕೊಂಡಾಗ ಕಣ್ಣುಗಳಲ್ಲಿ ಸಂತೋಷಬಾಷ್ಪಗಳನ್ನು ತಂದು ತೋರಿಸದೆ, ಮುಖಕಮಲದಲ್ಲಿ ಕಳೆಯು ಹೊರಹೊಮ್ಮದೆ, ಉಟ್ಟ ಸೀರೆಯು ಗಂಟು ಬಿಚ್ಚದೆ, ಸಂಭೋಗ ಸಮಯದಲ್ಲಿ ನಾಚಿಕೆಯನ್ನು ಕಳೆಯದೆ, ರೋಮಾಂಚನಗೊಳ್ಳದೆ, ದೈನ್ಯವನ್ನು ತೋರಿಸದೆ, ನಿತಂಬಗಳಲ್ಲಿ ಮದನದ್ರವವು ಹರಿಯದೆ ಇರುವವಳ ಕೂಟವು ಶನಿಕಾಟ (ಏಳರಾಟ)ವೇ ಸರಿ! ಅದನ್ನಾವನು ಪ್ರೀತಿಯಿಂದ ಮೆಚ್ಚುತ್ತಾನೆ!" ವ॥ ಮತ್ತೊಬ್ಬನು ಎದುರಿನಲ್ಲಿಯೇ ಬರುತ್ತಿರುವ ಠಕ್ಕುಸ್ವಭಾವದ ಜಾರೆಯೊಬ್ಬಳನ್ನು ಕೈಯ ಸಂಜ್ಞೆಯಿಂದ ತನ್ನ ಗೆಳೆಯನಿಗೆ ತೋರಿಸಿ, ಮೆಲ್ಲನೆ ಹೀಗೆಂದು ಹೇಳಿದನು : ೧೫೫. "ಈ ಹೆಂಗಸು ಮೇಲುದನ್ನು ಹಾಕಿಕೊಳ್ಳುವ ನೆಪದಲ್ಲಿ ಶೋಭಿಸುವ ವೃತ್ತಾಕಾರದ ಮೊಲೆಗಳನ್ನು ಕಾಣಿಸಿ, ಕೂದಲಿಗೆ ಹಚ್ಚಿದ ಸುಗಂಧಕ್ಕೆ ಮುತ್ತಿದ ದುಂಬಿಗಳನ್ನು ನೋಡುವ ನೆಪದಲ್ಲಿ ತನ್ನ ಸವಿನೋಟವನ್ನು ತೋರಿಸಿ, ಜಾರಿರುವ ಡಾಬನ್ನು ಸರಿಮಾಡಿಕೊಳ್ಳುವ ನೆಪದಲ್ಲಿ ಸುಳಿಯಾಗಿರುವ ಹೊಕ್ಕುಳ (ಹೊಕ್ಕಳ)ನ್ನು ತೋರಿಸಿ ವಿಟರುಗಳ ದೇಹದಲ್ಲಿ ಮದನಾಗ್ನಿಯನ್ನು ಉಂಟುಮಾಡುತ್ತಿದ್ದಾಳೆ. ವ॥ ಅದೂ ಅಲ್ಲದೆ ೧೫೬. ಮೊದಲು ನೋಟದ ಇವಳ ಪ್ರೀತಿಯನ್ನು ಪಡೆದು ಆಸೆಪಟ್ಟು ಬಂದ ವಿಟರುಗಳಿಗೆ ತನ್ನ ಸಂಪತ್ತನ್ನು ತೋರಿಸಿ, ಹಣವನ್ನು ಕೊಟ್ಟರೂ ಅದನ್ನು ಮುಟ್ಟದೆ, ಕುಲೀನಸ್ತ್ರೀಯಂತೆ ಪ್ರೀತಿದೋರಿ ಅಪ್ಪಿಕೊಂಡು, ಅವರಿಗೆ ತನ್ನಲ್ಲಿ ವಿಶೇಷವಾದ ರತ್ಯಾಸಕ್ತಿಯುಂಟಾಗುವ ಹಾಗೆ ಮಾಡಿ, ಪುನಃ ಪುನಃ ಅವನ ಮನಸ್ಸು ಹೇಗೋ ಹಾಗೆ ಕೂಡಿ ಸಂಭೋಗಸುಖವನ್ನುಂಟುಮಾಡಿ,

ವ|| ಎನೆ ನಾನುಮಿವಳ ಬಗೆಯಂ ಮುಂ ಬಲ್ಲೆನೆಂದು ಕೇಳ್ದವಂ ಮಗುಳ್ದುತ್ತರಂಗುಡು ತ್ತಿರ್ದನಲ್ಲಿ ಮತ್ತೊಂದು ತಾಣದೊಳೊರ್ವನೊರ್ವಳೊಳ್ ಸರ್ವವಲ್ಲಭೆಯಾದ ನಿನ್ನೊಲ್ಮೆಯ ನೆಂತು ನಂಬಲಕ್ಕುಮೆಂದು ನುಡಿಯಲೊಡನವಳಿಂತೆಂದಳ್

ಉ|| ಸೂಳೆಯರ್ಗಾವನಾದೊಡೊಸೆದೊತ್ತೆಯನಿತ್ತನ ತೋಳೊಳಿರ್ದು ಮೈ
ಮೇಳಕೆ ಮೈಯನೀವುದುಚಿತಂ ಮನಮಿತ್ತೊಡೆ ಸಾಲದೇ ಮನಂ
ಮೇಳಿಸಿ ನಿಂದುದಕ್ಕೆ ಕುಱುಪಲ್ತೆ ಸುಧಾಧರಮುಂ ನಿರಾಶೆಯುಂ
ಕೇಳಿಗೆ ಮುಂಚುವಿಂದ್ರಿಯಮುಮಂಗದೊಳುರ್ಬುವ ಸಾತ್ವಿಕಂಗಳುಂ ೧೫೧

ವ|| ಇದು ಮನಂ ಬಂದೊಡೆ ಕುರುಳಂ ಬೆರಲಂ ಬೇಡಿತ್ತಪೆಂ ತೊದಳಿಲ್ಲೆಂದು ನುಡಿದ ನಲ್ಮೆಗಾರ್ತಿಯ ನುಣ್ಮಾತಂ ಕೇಳ್ದು ಹರ್ಷಂದಾಳ್ದು

ಮ|| ಬೆರಲಂ ಕೊಟ್ಟೊಡೆ ಬೇಟಮೇಂ ಕುರುಳ್ಗಳುಮಂ ಕೊಯ್ದಿತ್ತೊಡೇಂ ಕೂರ್ಮೆ ಕೇ
ಳರವಿಂದಾನನೆ ಮನ್ಮನಃಪ್ರಿಯಮಿದಲ್ತೀ ದೇಹಮಂ ನಲ್ಮೆ ಮುಂ
ಬರಿವುತ್ತಿತ್ತೊಡಿವೆಲ್ಲಮೇಂ ಪೊಱತೆ ಪೇರಂ ತೆತ್ತವರ್ ಸುಂಕಮಾ
ವರೆ ಶೀರ್ಷಂಗುಡೆ ಕಣ್ಗಳೇಂ ಪೊಱಗೆ ಕೂರ್ಪೊಂದಿರ್ದೊಡೊಂದಕ್ಷಯಂ ೧೫೮

ಅವನು ಪೂರ್ಣ ಮನಸೋತನೆಂಬುದನ್ನು ಕಂಡು, ಮನದ ಒಂದು ಕೋಪದಿಂದ ಅವನ ಸರ್ವಸ್ವವನ್ನೂ ಸೂರೆಗೊಳ್ಳುವಳು." ವ|| ಹೀಗೆಂದು ಹೇಳಲು, "ನಾನು ಇವಳ ಸ್ವಭಾವ ವನ್ನು ಮೊದಲೇ ಬಲ್ಲೆನು" ಎಂದು ಅವನು ಪ್ರತ್ಯುತ್ತರ ಕೊಡುತ್ತಿದ್ದನು. ಅಲ್ಲಿ ಮತ್ತೊಂದು ಸ್ಥಾನದಲ್ಲಿ ಒಬ್ಬ ವಿಟನು ಒಬ್ಬ ಜಾರೆಯೊಡನೆ 'ಸರ್ವಜನರ ಪ್ರಿಯೆಯಾದ ನಿನ್ನ ಪ್ರೀತಿಯನ್ನು ನಂಬುವುದಕ್ಕಾಗುತ್ತದೆಯೇ?' ಎಂದು ಮಾತನಾಡಲು ಕೂಡಲೆ ಅವಳು ಹೀಗೆಂದಳು: ೧೫೭. "ಸೂಳೆಯರು ಪ್ರೀತಿಯಿಂದ ಮೊದಲು ಹಣವನ್ನು ಕೊಡುವವನ ತೋಳತೆಕ್ಕೆಯಲ್ಲಿದ್ದು, ಅವನ ಮೈಯ ಮೇಳಕ್ಕೆ ಮೈಯನ್ನು ಕೊಡು ವುದು ಉಚಿತವಾದದ್ದು. (ನಾನೀಗ ನಿನಗೆ) ಮನಸ್ಸನ್ನೇ ಕೊಟ್ಟರೆ ಸಾಲದೇ? ಅಧರ ಸುಧೆ, ನಿರಾಸೆ, ರತಿಸುಖಕ್ಕೆ ಮುಂದುವರಿಯುತ್ತಿರುವ ಇಂದ್ರಿಯಗಳು, ದೇಹದಲ್ಲಿ ಹೊರಹೊಮ್ಮುವ ಪುಳಕಾದಿ ಸಾತ್ವಿಕಭಾವಗಳು ಮನಸ್ಸು ಮೇಳೈಸಿರುವುದಕ್ಕೆ ಗುರು ತಲ್ಲವೇ. ವ|| ಇದು ನಿನ್ನ ಮನಸ್ಸಿಗೆ ಬಂದರೆ ಕುರುಳನ್ನು ಬೆರಳನ್ನು ಬೇಡು, ಕೊಡುತ್ತೇನೆ. ಸುಳ್ಳಾಡುವವಳೆಂದು ಭಾವಿಸಬೇಡ." ಎಂದು ನುಡಿದು ನಲ್ಮೆಯನ್ನು ತೋರಿಸುತ್ತಿರುವ ಆ ಜಾರೆಯ ಸವಿಯಾದ ಮಾತನ್ನು ಕೇಳಿ (ವಿಟನು) ಹರ್ಷಗೊಂಡು, ೧೫೮. "ಬೆರಳನ್ನು ಕೊಟ್ಟರೆ ಪ್ರೇಮದೋರಿದಂತೆಯೇ ! ಕುರುಳನ್ನು ಕೊಯ್ದು ! ಕೊಟ್ಟರೇನು ಪ್ರೀತಿಯೇ ! ಕಮಲಮುಖಿಯೇ, ಕೇಳು : ನನ್ನ ಹೃದಯಕ್ಕೆ ಇದು ಪ್ರಿಯವಲ್ಲ. ಈ ನಿನ್ನ ಮುಂದುವರಿದು ಬರುವ ಪ್ರೀತಿಯಿಂದ ಕೂಡಿದ ದೇಹವನ್ನು ಕೊಟ್ಟರೆ ಸಾಕು. ಇವೆಲ್ಲ (ಬೆರಳು ಕುರುಳು ಮೊದಲಾದುವು) ಹೊರಗಿನವುಗಳೇ. ಹೇರನ್ನು ಒಪ್ಪಿಸಿದವನು (ಪುನಃ) ಸುಂಕವನ್ನು ಕೊಡುವುದುಂಟೆ ? ತಲೆಯನ್ನೇ ಕೊಡುವವರ ಕಣ್ಣುಗಳೇನು ಆ ತಲೆಯಿಂದ ಹೊರಗಿರುತ್ತವೆಯೇ, (ತಲೆಯನ್ನೇ ಕೊಡುತ್ತೇನೆನ್ನುವವನು ಕಣ್ಣನು

ವ॥ ಎಂದವರ್ ಸಪ್ರೇಮದಿಂ ನೆರೆದಿರ್ದರಿತ್ತಲೊರ್ವ ಬರ್ದೆ ಬಹುಧನಸಂಪನ್ನರಾದ ಚೆಲ್ವ ಬೊಜಂಗರೆಳೆವೆಣ್ಗಳಾಲಯಕ್ಕೆ ಪೋಪುದಂ ಕಂಡು ಸೈರಿಸಲಾಱದಸೂಯೆಯಿಂದವರ್ ಕೇಳ್ವಂತೆ

ಚಂ॥ ಹರೆಯಮದಿರ್ದೊಡೇನೊ ನೆರೆವುಜ್ಜುಗವುಂಟೆ ವಿಲಾಸಮುಂಟೆ ಕಂ
ಠರವಮದುಂಟೆ ಸತ್ಕರಣಮುಂಟೆ ಕಳಾಜ್ಞತೆಯುಂಟೆ ಕಾಲಮಂ
ಪರಿಕಿಪುದುಂಟೆ ನಲ್ನುಡಿಗಳುಂಟೆ ರತೇಚ್ಛೆಯಸಂತೆ ಪೆರ್ಚಿಪಾ
ಪರಿಕರಮುಂಟೆ ಲಜ್ಜೆವೆರೆದೀಕೆಯರೊಳ್ ರತಿ ಲಜ್ಜೆಯಲ್ಲವೇ ೧೫೯

ವ॥ ಎಂಬನಿತಱೊಳ್ವಿಟಂ ಕೇಳ್ದವಳಿದಿರ್ಗೆವಂದು

ಚಂ॥ ಎವೆ ಮಱೆಯಾದೊಡೊಂದಿನಿತು ಸೈರಿಸಲಾಱದ ಕೂರ್ಮೆ ಪೆರ್ಮೆವೆ
ತ್ತ ವಿಭವಮುಂ ವಿಚಾರಿಸದ ಪೊರ್ದುಗೆ ವಂಚನೆಗೆಯ್ಯದಂದವೊ
ಪ್ಪುವ ವಿವಿಧೋಪಚಾರವಚನಕ್ಕೆರ್ದೆಯಿಕ್ಕದ ಮೆಚ್ಚುವಿತ್ತವಿಾ
ವವನಿವನಲ್ಲವೆಂಬ ಬಗೆ ಪೊರ್ದದ ನಲ್ಮೆ ವಿದಗ್ಧೆಗುಂಟೆ ಪೇಳ್ ೧೬೦

ಕೊಡುತ್ತೇನೆನ್ನುವುದರಲ್ಲಿ ಅರ್ಥವಿಲ್ಲವೆಂಬ ಭಾವ). ನಿನ್ನ ಪ್ರೇಮವೊಂದಿದ್ದರೆ ಸಾಕು, (ನನಗೆ) ಅದೇ ಒಂದು ಅಕ್ಷಯ." ವ|| ಎಂದು ಅವರು ಪರಸ್ಪರ ಪ್ರೀತಿಯಿಂದ ನೆರೆದಿರ್ದರು. ಇತ್ತ ಕಡೆಯಲ್ಲಿ ಒಬ್ಬ ಕುಂಟಣಿಗಿತ್ತಿಯು, ಬಹು ಧನವಂತರಾದ ಚೆಲುವಿನ ವಿಟರುಗಳು, ಎಳೆಯ ವಯಸ್ಸಿನ ಹೆಣ್ಣುಗಳ ಮನೆಗೆ ಹೋಗುತ್ತಿರುವುದನ್ನು ಕಂಡು ಸೈರಿಸಲಾರದೆ ಅಸೂಯೆಯಿಂದ ಅವರು ಕೇಳುವ ಹಾಗೆಯೇ (ಹೀಗೆನ್ನುತ್ತಿದ್ದಳು :) ೧೫೯. "ತಾರುಣ್ಯವೊಂದಿದ್ದರೇನು ? ಸಂಭೋಗಕ್ರಿಯೆಯಲ್ಲಿ ಜಾಣ್ಮೆಯುಂಟೆ? ಸ್ತ್ರೀಪುರುಷರ ಪರಿಹಾಸದ ರೀತಿ ಗೊತ್ತುಂಟೆ ? (ಸಂಭೋಗ ಸಮಯದಲ್ಲಿ) ಕಂಠಧ್ವನಿಯ ರೀತಿನೀತಿ ಗೊತ್ತುಂಟೇ ? ವಿಟಪುರುಷನನ್ನು ಹೇಗೆ ಸತ್ಕರಿಸಬೇಕೆಂಬುದು ಗೊತ್ತುಂಟೆ ? ಕಾಮಕಲಾಪರಿಣತೆಯು ಗೊತ್ತುಂಟೆ ? ರತಿಸಮಯದ ಪರಿಜ್ಞಾನವು ಗೊತ್ತುಂಟೆ ? ಒಳ್ಳೆಯ ಮಾತುಗಳನ್ನಾಡಲು ಬರುತ್ತದೆಯೆ ? ರತಿಗೆ ಸಂಬಂಧಿಸಿದ ಬಯಕೆಯನ್ನು ಹೆಚ್ಚುಗೊಳಿಸುವ ಚೇಷ್ಟಾದಿ ಪರಿಕರಗಳುಂಟೆ ? ಲಜ್ಜೆಯಿಂದ ಕೂಡಿದ ಇಂಥ ಎಳೆಯ ಸ್ತ್ರೀಯರೊಡನೆ ಬಳಸುವ ರತಿಯ ಇಚ್ಛೆಯೇ ನಾಚಿಕೆಗೇಡಿನದಲ್ಲವೇ ?" ವ|| ಎನ್ನುವಷ್ಟರಲ್ಲಿಯೇ ವಿಟನು ಅವಳು ಆಡಿದ ಮಾತನ್ನು ಕೇಳಿ, ಅವಳೆದುರಿಗೆ ಬಂದು ೧೬೦. "ಕಣ್ಮರೆಯಾದರೆ ಸ್ವಲ್ಪವೂ ಸೈರಿಸಲಾರದ ಪ್ರೀತಿ, ತಮ್ಮ ಹಿರಿಮೆಯ ವೈಭವವನ್ನು ವಿಚಾರಿಸದೆ ಹೊಂದಿಕೊಳ್ಳುವ ಸ್ವಭಾವ, ವಂಚನೆಮಾಡದೆ ಅಂಗಕ್ಕೊಪ್ಪುವ, ವಿವಿಧವಾದ (ಕೇವಲ) ಉಪಚಾರದ ಮಾತುಗಳಿಗೆ ಮನಸ್ಸು ಮಾಡದ ಮೆಚ್ಚುಗೆ, ಹಣವನ್ನು ಕೊಡುವವನು ಕೊಡದಿರುವವನು ಎಂಬುದನ್ನು ಮನಸ್ಸಿಗೆ ತಾರದ ನಲುಮೆ, ಇವೆಲ್ಲ ಪ್ರೌಢರಾದ ಜಾರೆಯರಿಗೆ ಉಂಟೆ ? ಹೇಳು."

ವ॥ ಎಂದವಳಂ ನಾಣ್ಚಿಸಿದನಲ್ಲದೆ ಮತ್ತಮೊಂದೆಡೆಯೊಳೊರ್ವಳ್ ಮೂದಲೆವಾತಾಗಿ ನುಡಿಯೆ ಮುಳಿದ ಮಗಳ ಮೊಗಮಂ ನೋಡಿ

ಉ॥ ಪೋದೊಡೆ ಬಾರದೀ ಸೊಗಸು ಜವ್ವನಮಾಗಳೆ ವಿತ್ತಮುಳ್ಳರಾ
ರಾದೊಡಮೇನೊ ಮೆಣ್ಬರಿಸಿ ಮೆಲ್ಲೆರ್ದೆಯಂ ಮೊದಲೊತ್ತೆಗೊಂಡು ಮ
ತ್ತಾದರಿಸುತ್ತೆ ಮನ್ಮಥಸುಖಾಬ್ಧಿಯೊಳಾಳಿಸಿ ತಂಗಿ ದೇಹಮಂ
ತೇದು ರತಂಗಳೊಳ್ ಪಣಮನಾಂ ಪಡೆಯೆಂದೊಡಿದೊಂದು ದೋಷಮೇ ೧೬೧

ವ॥ ಎಂದು ನಿಜಾಭಿಪ್ರಾಯಮಂ ಮಱಸಿ ನುಡಿಯೆ ಕೇಳ್ದ ಮಗಳ್ ಮಗುಳ್ದಿಂತೆಂದಳ್

ಚಂ॥ ಮೊಲೆ ಮುಗುಳೊತ್ತುವಂದು ಮೊದಲಿಂದುವರಂ ಬಗೆದಂತಿರಿಚ್ಛೆಯಂ
ಸಲಿಸಿ ಸಮೀಪದೊಳ್ನೆಲಸಿ ಮಗ್ಗುಲೊಳೊಗ್ಗಿಸಿ ಬೇಟಕೂಟಮಂ
ಕಲಿಸಿ ಕಲಾಳಿಯಿಂದೊಲಿಸಿ ಕೂರ್ತ ಮನಃಪ್ರಿಯನಂ ಬಿಡೆಂದು ನೀ
ನೆಲೆ ಮುದುಪಾಱದೊಳ್ಪೆ ನುಡಿಯಲ್ಬಗೆದಂದುದನೆಂತು ಸೈರಿಪೆಂ ೧೬೨

ವ॥ ಪೆಱತೊರ್ವಳ್ಪೆಱತೊಂದೆಡೆಯೊಳ್ ಕುಂಟಣಿವಾತಾಗಿ ಕನಲ್ದು ತನ್ನ ಕೆಳದಿಗಿಂತೆಂದಳ್

ವ|| ಹೀಗೆಂದು ಮಾತನಾಡಿ ಆ ಪ್ರೌಢಜಾರೆಯನ್ನು ನಾಚಿಗೆಗೊಳ್ಳುವಂತೆ ಮಾಡಿದನು. ಮತ್ತೊಂದು ಸ್ಥಳದಲ್ಲಿ ಒಬ್ಬಳು ತನ್ನ ಮಗಳನ್ನು ಕುರಿತು ಮೂದಲಿಕೆಯಿಂದ ಕೂಡಿದ ಮಾತನ್ನು ಆಡಲು, ಅದರಿಂದ ಕೋಪಗೊಂಡ ಮಗಳ ಮುಖವನ್ನು ನೋಡಿ (ಆ ತಾಯಿಯು ಹೀಗೆ ಮಗಳಿಗೆ ಹೇಳಿದಳು). ೧೬೧. "ತಂಗೀ ಈಗಿರುವ ಜವ್ವನದ ಈ ಸೊಗಸು ಹೋದಮೇಲೆ ಪುನಃ ಬರುವುದಿಲ್ಲ ; ಈಗಲೆ ಹಣವುಳ್ಳವರು ಯಾರಾದರೇನು? ಮೃದುಹೃದಯದ ಅವರನ್ನು ಮನೆಗೆ ಬರಮಾಡಿಕೊಂಡು, ಮೊದಲೇ ಅವರಿಂದ ದುಡ್ಡನ್ನು ಪಡೆದುಕೊಂಡು, ಆಮೇಲೆ ಆದರೋಪಚಾರಮಾಡುತ್ತ ಸಂಭೋಗಕ್ರೀಡೆಯೆಂಬ ಸಮುದ್ರದಲ್ಲಿ ಮುಳುಗಿಸಿ, ದೇಹವನ್ನು ರತಿಕ್ರೀಡೆಯಲ್ಲಿ ಸವೆಸಿ ಹಣವನ್ನು ಪಡೆಯೆಂದು ನಾನು ಹೇಳಿದರೆ ಇದೊಂದು ದೋಷವೇ?" ವ|| ಹೀಗೆಂದು ತನ್ನ ನಿಜಾಭಿಪ್ರಾಯವನ್ನು ಮರೆಮಾಚಿ ನುಡಿಯುತ್ತಿರಲು, ಆ ಮಾತನ್ನು ಕೇಳಿದ ಮಗಳು ಪುನಃ ಹೀಗೆ ಹೇಳಿದಳು. ೧೬೨. "ಸ್ತನಗಳು ಮುಗುಳುಗೊಂಡು ಮೂಡುವ ದಿನದಿಂದ ಮೊದಲುಗೊಂಡು ಇಂದಿನವರೆಗೆ ನಾನು ಇಚ್ಛಿಸಿದ ಬಯಕೆಗಳನ್ನೆಲ್ಲ ಸಲ್ಲಿಸಿ, ಪಕ್ಕದಲ್ಲಿಯೇ ಸದಾ ಇದ್ದುಕೊಂಡು, ಮಗ್ಗುಲಲ್ಲಿ ಮಲಗಿಸಿಕೊಂಡು ರತಿಸಂಬಂಧವಾದ ಕೂಟಗಳನ್ನೆಲ್ಲ ಕಲಿಸಿ, ಪ್ರೀತಿಗೊಂಡ ಮನಃಪ್ರಿಯನನ್ನು 'ಬಿಡು' ಎಂದು ಎಲೈ ಮುದಿದೊತ್ತೇ, ಹೇಳಲು ಬಯಸುವುದನ್ನು ನಾನು ಹೇಗೆ ಸೈರಿಸಲಿ!" ವ|| ಮತ್ತೊಬ್ಬಳು ಬೇರೊಂಡೆಡೆಯಲ್ಲಿ (ತನ್ನಲ್ಲಿ ಅಸೂಯೆಗೊಳ್ಳುವ) ಮುಗ್ಧಿಸ್ತ್ರೀಯ ವಿಷಯವಾಗಿ

ಚಂ॥ ಮಸಗಿದ ಮಾರಿಯಂತೆ ಮುಳಿವಳ್ ಪುಲಿಯಂತಿರೆ ಪೂಣ್ದು ಗರ್ಜಿಪಳ್
ಪಸಿದಹಿಯಂತೆ ಪಲ್ಮೊರಟಿವಳಗ್ಗದ ರಕ್ಕಸಿಯಂತೆ ರಂಜಿಪಳ್
ಮುಸುವೆನೆ ತನ್ನ ಮುತ್ತುಮುಸುಡಿಂದಿರದೇಡಿಪಳೆನ್ನ ನಲ್ಲನೊಳ್
ಬೆಸುಗೆಯು ಬಿಚ್ಚಲಾಟಿಪಳಿವಳ್ ಮುದಿಕುಂಟಣಿ ಸಾಯಳೇವೆನಾಂ ೧೬೩

ವ॥ ಮತ್ತಮೊರ್ವಳ್ತನ್ನ ಕೆಳದಿ ವಿಟರೊಳ್ಮಾಳ್ಪ ಕೇಣಮಂ ಕಂಡಿಂತೆಂದಳ್

ಚಂ॥ ವಿವಿಧ ವಿಳಾಸಮಂ ಮೆಱೆದು ವಕ್ತ್ರಸುಧಾರುಚಿಯಿಂದೆ ಪೊಣ್ಮುವೀ
ಸವಿನಗೆಯೆಂಬ ಸಾರಸುಧೆಯಂ ಸತೆ ತೋಱಿ ಭುಜಂಗವರ್ಗಮಂ
ಸವಿನಯಮೊಲ್ದು ಮಚ್ಚಿಪುದಿದಲ್ಲದೆ ಸೋರ್ಮುಡಿಯೆಂಬ ಕೇಕಿಯಂ
ತವೆ ಮುಳಿದಾಳಿ ಪಿಂದಿರುಗಿ ಕಾಣಿಸಿ ಪೋಗಿಪುದೇಂ ಸುಬುದ್ಧಿಯೋ ೧೬೪

ವ॥ ಮತ್ತಮೊರ್ವಳ್ ಕೈತವಂ ಕೈಮಿಕ್ಕ ಕಾಳ್ಪೊಜಂಗನ ಮಾತಾಗಿ ಕಡು ಕನಲ್ದು ಕೆಳದಿಯೊಡನಿಂತೆಂದಳ್

ಸಿಟ್ಟುಗೊಂಡು ತನ್ನ ಗೆಳತಿಗೆ ಹೀಗೆ ಹೇಳಿದಳು. ೧೬೩. "ಅವಳು ಕೋಪಗೊಂಡ ಮಾರಿಯಂತೆ ಇದ್ದಾಳೆ. ಹುಲಿಯು ಹಾಗೆ ಸಿಟ್ಟುಮಾಡುತ್ತಾಳೆ. ಹಸಿದ ಹಾವಿನಂತೆ ಗದರಿಸಿ, ಬುಸುಗುಟ್ಟುವಳು. ಮಹಾರಕ್ಕಸಿಯಂತೆ ಹಲ್ಲು ಕಡಿಯುವಳು. ಕರಿಯ ಮುಖದ ಕೋತಿಯಂತೆ ರಂಜಿಸುತ್ತಿದ್ದಾಳೆ. ತನ್ನ ಮುದಿಮುಸುಡಿನಿಂದ ಅಣಕಿಸುತ್ತಾಳೆ. ನನ್ನ ನಲ್ಲನಲ್ಲಿ ನನಗಿರುವ ಬೆಸುಗೆಯನ್ನು ಬಿಚ್ಚಲು ಪ್ರಯತ್ನಿಸುವಳು. ಇಂಥ ಈ ಮುದಿಕುಂಟಣಿಯು ಸಾಯಬಾರದೇ ? ನಾನು ಏನುಮಾಡಲಿ !" ವ॥ ತನ್ನ ಗೆಳತಿಯು ವಿಟರುಗಳೊಡನೆ ಮಾಡುವ ಕೋಪವನ್ನು ಕಂಡು ಮತ್ತೊಬ್ಬಳು ಈ ರೀತಿ ಹೇಳಿದಳು. ೧೬೪. "ವೈವಿಧ್ಯಮಯವಾದ ಹಾವಭಾವ ವಿಭ್ರಮಾದಿ ಕಲಾವಿಲಾಸಗಳನ್ನು ಮೆರೆಯಿಸುತ್ತ, ಮುಖಮಂಡಲವೆಂಬ ಚಂದ್ರಮನಿಂದ ಹೊರಹೊಮ್ಮುವ ಅಮೃತಕಿರಣಗಳೆಂಬ ಸವಿನಗೆಯನ್ನು ಚೆನ್ನಾಗಿ ಅವರುಗಳಿಗೆ ತೋರಿಸಿ, ಆ ವಿಟರುಗಳ ಸಮೂಹವನ್ನು ವಿನಯ ಸಮೇತವಾದ ನಡೆವಳಿಕೆಯಿಂದ ಪ್ರೀತಿಯನ್ನು ತೋರಿಸಿ, ಮೆಚ್ಚಿಸಬೇಕು. ಅದು ಬಿಟ್ಟು (ಅವರಿಗೆ) ಹಿಂದುಮುಂದಾಗಿ ನಿಂತು, ಈ ನಿನ್ನ ಉದ್ದವಾದ ಮುಡಿಯೆಂಬ ನವಿಲನ್ನು ಕೋಪದಿಂದ ತೋರಿಸಿ, (ಅವರು) ಹಿಂದಿರುಗಿ ಹೋಗುವ ಹಾಗೆ ಮಾಡುವುದು ಇದೇನು ಸದ್ಬುದ್ಧಿಯೇ !" ವ॥ ಮತ್ತು ಒಬ್ಬಳು ಕಪಟತನವನ್ನು ತೋರಿಸಿದ ದುಷ್ಟನಾದ ವಿಟನ ಬಗೆಗೆ ವಿಶೇಷವಾಗಿ ಕೋಪಗೊಂಡವಳಾಗಿ, ತನ್ನ

ಚಂ॥ ದಿನದಿನದಲ್ಲಿ ತಾಳ್ದಿಱವಿನೊಳ್ತೊಡವಂ ಪೊಱಮಿಂಚುಗೆಯ್ದು ಬಂ
ದೆನಗಿನಿವಾತನಾಡಿ ಧನಮಂ ಪಿರಿದಿತ್ತಪೆನೆಂಬ ಮಾಳ್ಕೆಯಿಂ
ಮನದೊಳಮರ್ಚಿ ಮಚ್ಚು ನೆರೆದಿರ್ದಿನಿತುಂ ದಿನಮೇಳ್ದು ಪೋದನಾ
ತನ ಬಲಿಗಟ್ಟಿ ಮನ್ಮಥಬಳಾರಿಗೆ ಪೆರ್ಗುಱಿಮಾಡಿ ಪೊಯ್ದಪೆಂ ೧೬೫

ವ॥ ಮತ್ತಮೊರ್ವಳ್

ಚಂ॥ ಬಳಿವಳಿಯಲ್ಲಿ ಬರ್ಪನುಪಚಾರಮನಾಡುವನೊಯ್ಯನಿರ್ದೊಡಾ
ಗಳೆ ಬಳಿಕೇಳ್ದು ಕಾಲ್ವಿಡಿದು ನಂಬಿಪನಿತ್ತಪೆನೀಗಳೆಂದು ತ
ನ್ನೊಳಿ ಸಲೆ ತಾನೆ ಸೂರುಳಿಸಿ ತಪ್ಪುವನೇಕೆನೆ ಬಾಯ್ಗೆ ಬಂದವೋಲ್
ಗಳಪುವನಾವಗಂ ಧನಮನೀಯದೆ ಚಾಳಿಪನೆಂತು ಮಾಳ್ಪೆನಾಂ ೧೬೬

ವ॥ ಮತ್ತಮೊಂದೆಡೆಯೊಳ್

ಉ॥ ಇಲ್ಲದ ದೋಷಮಂ ಬಱಿದೆ ಕಲ್ಪಿಪನಲ್ಪಮೆನಿಪ್ಪ ತಪ್ಪನೊ
ಳ್ದಿಲ್ಲರೊಳಾಡುವಂ ಪುರುಡಿಪಂ ಪುರುಳುಳ್ಳೊಡೆ ಮಚ್ಚನಿತ್ತುದಂ
ಸೊಲ್ಲಿಪನುಬ್ಬಸಂಬಡಿಪನೇಕೆನೆ ಲೆಕ್ಕಿಸನೆಯ್ದೆ ಸೂರುಳಿ
ಟ್ಟಲ್ಲದೆ ನಂಬದೀ ದುರುಳನಂ ನೆಱೆ ನೀಗುವೆನೆಂತು ಪೇಳ್ ಸಖೀ ೧೬೭

ಗೆಳತಿಯೊಡನೆ ಈ ರೀತಿ ಹೇಳಿದಳು : ೧೬೫. "ದಿನದಿನವೂ ಒತ್ತೆಗೆ ಶಂದ ಒಳ್ಳೆಯ ತೊಡವುಗಳನ್ನು ಧರಿಸಿಕೊಂಡು, ಮೇಲುನೋಟದ ಸೌಂದರ್ಯವನ್ನು ತೋರಿಸುತ್ತ ಬಂದು, ನನ್ನಲ್ಲಿ ಸವಿಯಾದ ಮಾತುಗಳನ್ನಾಡಿ ವಿಶೇಷವಾಗಿ ಹಣವನ್ನು ಕೊಡುವವನ ಹಾಗೆ ನಟಿಸಿ ನಂಬಿಕೆಯನ್ನುಂಟುಮಾಡಿ, ರತಿಸುಖವನ್ನನುಭವಿಸುತ್ತ, ಇಷ್ಟು ದಿನವೂ ಇದ್ದು, (ಒಬ್ಬ ವಿಟನು) ಓಡಿಹೋಗಿದ್ದಾನೆ. ಆತನನ್ನು ಮದನನೆಂಬ ಮಹಾಕಾಳಿಗೆ ದೊಡ್ಡ ಕುರಿಯನ್ನಾಗಿ ಮಾಡಿ ಬಲಿಕಟ್ಟಿ ಹೊಡೆಯುತ್ತೇನೆ." ವ॥ ಮತ್ತೊಬ್ಬಳು ೧೬೬. "(ಒಬ್ಬ ವಿಟನು) ಹತ್ತಿರಕ್ಕೆ ಬರುತ್ತಾನೆ. ಉಪಚಾರದ ಮಾತನ್ನಾಡುತ್ತಾನೆ. ಸುಮ್ಮನಿದ್ದರೆ ಆ ಕೂಡಲೇ ಎದ್ದು ಕಾಲುಹಿಡಿದು ಈಗಲೇ (ಹಣವನ್ನು) ಕೊಡುತ್ತೇನೆ ಎಂದು ನಂಬಿಕೆ ಹುಟ್ಟಿಸಿ, ರತಿಸುಖವನ್ನನುಭವಿಸಿ, ತಾನಿಟ್ಟ ಆಣೆಗೆ ತಾನೇ ತಪ್ಪುವನು, ಹೀಗೇಕೆ ಎಂದರೆ ಬಾಯಿಗೆ ಬಂದ ಹಾಗೆ ವ್ಯರ್ಥವಾದ ಮಾತನ್ನಾಡುವನು. ಹೇಗೆ ಮಾಡಲಿ !" (ಎಂದು ತನ್ನ ಸಖಿಗೆ ಹೇಳುತ್ತಿದ್ದಳು). ವ॥ ಮತ್ತು ಒಂದು ಕಡೆಯಲ್ಲಿ ೧೬೭. "ಸಖಿ, ನನ್ನಲ್ಲಿಗೆ ಬರುವ ಓರ್ವ ಮರುಳ ವಿಟನು (ನನ್ನಲ್ಲಿ) ಇಲ್ಲದೆ ಇರುವ ದೋಷವನ್ನು ವೃಥಾ ಕಲ್ಪಿಸುವನು. ಚಿಕ್ಕದಾದ ತಪ್ಪನ್ನು ಎಲ್ಲರಲ್ಲೂ ಸಂತೋಷವಾಗಿ ಹೇಳಿಕೊಳ್ಳುತ್ತಾನೆ. ಮಾತ್ಸರ್ಯವನ್ನು ತೋರಿಸುತ್ತಾನೆ. ಯೋಗ್ಯತೆಯನ್ನು ಮೆಚ್ಚುವುದಿಲ್ಲ. ತಾನು ಕೊಟ್ಟುದನ್ನು ಎತ್ತಿ ಆಡಿ ಹಂಗಿಸಿ ಸಂಕಟಗೊಳಿಸುತ್ತಾನೆ. 'ಹೀಗೇಕೆ' ಎಂದರೆ ನನ್ನ ಮಾತನ್ನೇ ಲೆಕ್ಕಿಸುವುದಿಲ್ಲ. ಆಣೆಯಿಟ್ಟಲ್ಲದೆ ಏನನ್ನೂ ನಂಬುವುದೇ ಇಲ್ಲ. ಈ

ವ॥ ಇಂತನೇಕ ರಸಭರಿತಮಾದ ಚತುರೋಕ್ತಿಗಳನಾಕರ್ಣಿಸುತ್ತಂ ರಸಿಕಸಖನಿಕರವನ ವಸಂತಂ ಸಂತಸಂ ಮಿಗೆ ಮುಂದಣ್ಗೆ ಪೋಗೆವೋಗೆ ಮತ್ತವೊರ್ವಳ್ ತನ್ನ ಮಗಳ್ ದರಿದ್ರ ವಿಟನಂ ಮಚ್ಚಿರ್ಪುದಂ ಕಂಡು

ಕಂ॥ ನಾಣಲಿವೊಲೀ ಭುಜಂಗನ
ಭೋಗಕೆ ತನುವಿತ್ತೆ ಸಂಪದಂಬಡೆದಪೆಯೆಂ
ತಾಗಳ್ ತನಗಿಲ್ಲದುದೀ
ವಾಗಮೆರಿಯದೆಂತೊ ವಕ್ರಗತಿ ನಿನಗಕ್ಕುಂ ೧೬೮

ವ॥ ಎನುತ್ತಿರೆ ಮತ್ತೊಂದು ಕೇಳೀನಿಳಯದೊಳ್ ಮುಳಿದಿರ್ದ ನಲ್ಲಳಂ ತಿಳುಪಲೆಂದು ವಿಟಂ ನುಡಿಯಿಸುವಲ್ಲಿ

ಮ॥ ಎಲೆ ಕಾಯ್ಪೇಱಿದೆ ಚೈತ್ರವಲ್ಲರಿಯೆ ಗಂಧಂಗುಂದದಿರ್ದಪ್ಪೆ ಕ
ಮ್ಮಲರೇ ಮೇರೆಯನೊತ್ತಿ ವರ್ತಿಸುವೆ ಸಂವರ್ತಾಬ್ಧಿಯೋ ಬಂದುದೇ
ಕಲಿ ಮತ್ತೇಂ ಕೃತಮೋ ಕೃಪಾನ್ವಿತಮೆ ಚಿತ್ತಂ ಕೌರವಕ್ಷೋಣಿಭೃದ್
ಬಲಮೋ ಕರ್ಣಕಠೋರಮೀ ನುಡಿಯಿದೇಂ ಪಾರ್ಥಾಸ್ತ್ರಮೋ ಮುಟ್ಟಮಿರ್ ೧೬೯

ಧುರುಳನನ್ನು ಹೇಗೆ ದೂರಮಾಡಲಿ ಹೇಳೇ ಸಖೀ !" ವ|| ಈ ರೀತಿಯಿಂದಿರುವ ಅನೇಕ ರಸಭರಿತವಾದ (ವೇಶ್ಯೆಯರ ಜೀವನದ) ಚತುರ ನುಡಿಗಳನ್ನು ಕೇಳುತ್ತ, ರಸಿಕರಾದ ಸಖರೆಂಬ ಸಮೂಹವೆಂಬ ವನಕ್ಕೆ ವಸಂತಪ್ರಾಯನಾದ ರಾಜಶೇಖರನು ಅತಿ ಸಂತೋಷದಿಂದ ಮುಂದು ಮುಂದಕ್ಕೆ ಹೋಗುತ್ತಿರಲು, ಮತ್ತೊಬ್ಬ (ವೇಶ್ಯೆಯು) ತನ್ನ ಮಗಳು ದರಿದ್ರನಾದ ವಿಟನನ್ನು ಮೆಚ್ಚಿರುವುದನ್ನು ಕಂಡು ೧೬೮. "ನಾಚಿಕೆಗೆಟ್ಟವಳ ಹಾಗೆ ಈ (ದಟ್ಟ ದರಿದ್ರನಾದ) ವಿಟನ ಭೋಗಕ್ಕೆ ದೇಹವನ್ನು ಅರ್ಪಿಸಿದೆ. ಹೀಗಿರುವಾಗ (ಇಂಥವನಿಂದ) ಹೇಗೆ ನೀನು ಸಂಪತ್ತನ್ನು ಪಡೆಯುತ್ತೀಯೆ ! ತನಗೇ ಇಲ್ಲದ ಐಶ್ವರ್ಯವನ್ನು ನಿನಗೆ ಕೊಡುವ ಆ ಹಿರಿಮೆ ಇವನಿಗೆ ಇನ್ನೆಲ್ಲಿಯೋ ! ನಿನಗೆ (ಮುಂದೆ) ವಕ್ರಗತಿಯೇ ಗತಿ." ವ|| ಹೀಗೆನ್ನುತ್ತಿರಲು ಮತ್ತೊಂದು ವಿಲಾಸಗೃಹದಲ್ಲಿ ಕೋಪಗೊಂಡ ನಲ್ಲೆಯನ್ನು ಸಮಾಧಾನಗೊಳಿಸಲೆಂದು ವಿಟನೊಬ್ಬನು ಮಾತನಾಡಿಸುತ್ತಿರುವಲ್ಲಿ (ಹೀಗೆ ಸಂಭಾಷಣೆ ನಡೆಯಿತು). ೧೬೯. ವಿಟ–ಎಲೆ ಕಾಯ್ಪು ಏರಿದೆ=ಕೋಪಗೊಂಡಿರುವೆ. ವೇಶ್ಯೆ–(ಕಾಯ್‌ಪೇರಿದೆ ಎಂದು ಅರ್ಥಮಾಡಿಕೊಂಡು) ಚೈತ್ರಮಾಸದ ಬಳ್ಳಿಯೇ ?=ಮಾವಿನ ಗಿಡವೆ ? ವಿಟ–ಗಂಧಂಗುಂದದೆ ಇರ್ದಪ್ಪೆ=ಗರ್ವವನ್ನು ಬಿಡದೆಯೇ ಇದ್ದು ಅಪ್ಪಿಕೊಳ್ಳದಿರುವೆ. ವೇಶ್ಯೆ–(ಗಂಧಂಗುಂದದೆ=ಸುವಾಸನೆಯನ್ನು ತ್ಯಜಿಸಿದೆ, ಇರ್ದಪ್ಪೆ=ಇದ್ದೀಯೆ ಎಂದು ಅರ್ಥಮಾಡಿಕೊಂಡು) (ನಾನೇನು) ಸುಗಂಧ ಪುಷ್ಪವೆ ? ವಿಟ–ಮೇರೆಮೀರಿ ನಡೆಯುತ್ತಿದ್ದೀಯೆ. ವೇಶ್ಯೆ–(ಮೇರೆ=ಸಮುದ್ರದ ಎಲ್ಲೆ ಎಂದು ಅರ್ಥಮಾಡಿಕೊಂಡು) ಪ್ರಳಯಕಾಲದ ಸಮುದ್ರವೆ ? ವಿಟ–ಜಗಳ ಆರಂಭಿಸಿತೆ ? ವೇಶ್ಯೆ–(ಕಲಿ=ಕಲಿಯುಗ ಎಂದು ಅರ್ಥಮಾಡಿಕೊಂಡು) ಮತ್ತೇನು

ವ॥ ಎಂಟ ಮಹಾಪ್ರೌಢೆಯ ಜಾಣ್ಮಾತಂ ಕೇಳ್ದು ಮೆಚ್ಚುತ್ತಿರ್ಪನ್ನೆಗಮೊಂದು ಮುತ್ತಿನ ಮೊಗಸಾಲೆಯ ಮುಂದಣ ಕನಕಮಯ ಕಮನೀಯ ವೇದಿಕಾಗ್ರದ ಕುಸುಮತಳ್ಪದೊಳ್ಕುಳ್ಳಿರ್ದು ವಲ್ಲಭೆ ನಲ್ಲನಂ ನೆವ್ಮ್ರ ಚೆಲ್ಲದಿಂ ಮೆಲ್ಲನಿಂತೆಂದಳ್

ಕಂ॥ ವಾದಿ ಸಮನಾಂತ ನಾಮಮ
ನಾದಂ ತಳೆದಾತನಳೆದುದೇಂ ಭೋಗಿಜನಾ
ಹ್ಲಾದಕನಾವಂ ತಾರಕ
ಭೇದಕನಾವಂ ಕುಮಾರನಲ್ತೆ ಮೃಗಾಕ್ಷೀ ೧೭೦

ವ॥ ಎನೆ ಮುಗುಳ್ದವಳೊಡನವನಿಂತೆಂದಂ

ಕೃತಯುಗವೇ ? ವಿಟ—ಮನಸ್ಸು ಕೃಪಾಯುಕ್ತವಾಗಿದೆಯೆ ? ವೇಶ್ಯೆ-(ಕೃಪಾನ್ವಿತ= ಕೃಪಾಚಾರ್ಯನಿಂದ ಯುಕ್ತ ಎಂದು ಅರ್ಥಮಾಡಿಕೊಂಡು) ಕೌರವರಾಜನ ಸೇನೆಯೆ ? ವಿಟ—ಈ ಮಾತು ಕರ್ಣಕಠೋರವಾಗಿದೆ. ವೇಶ್ಯೆ-(ಕರ್ಣ=ಕರ್ಣನಿಗೆ ಕಠೋರ ಎಂದು ಅರ್ಥಮಾಡಿಕೊಂಡು) ಅರ್ಜುನನ ಬಾಣವೆ ? ಸುಮ್ಮನಿರು![1] ವ॥ ಹೀಗೆನ್ನುವ ಮಹಾ ಪ್ರೌಢೆಯ ಜಾಣತನದ ಮಾತನ್ನು ಕೇಳಿ ಮೆಚ್ಚುತ್ತಿರುವಷ್ಟರಲ್ಲಿ ಒಂದು ಮುತ್ತಿನ ಹಜಾರದ ಮುಂದಿನ ಬಂಗಾರದ ಮನೋಹರ ಜಗುಲಿಯ ಮೇಲೆ ಹೂವುಗಳ ಹಾಸಿಗೆ ಯಲ್ಲಿ ಜಾರೆಯೊಬ್ಬಳು ತನ್ನ ಪ್ರಿಯನನ್ನು ಆತುಕೊಂಡು ಕುಳಿತು ಮೆಲ್ಲನೆ ಹೀಗೆ ಹೇಳಿ ದಳು : ೧೭೦. (ಈ ಪದ್ಯದಲ್ಲಿ ಮೂರು ಪ್ರಶ್ನೆಗಳನ್ನು ವೇಶ್ಯೆಯು ವಿಟನಿಗೆ ಹಾಕು ವಳು.) (೧) ವಾದಿಸಮನಾಂತ ನಾಮಮನಾದಂ ತಳೆದಾತನಳೆದುದೇಂ ? (೨) ಭೋಗಿ ಜನಾಹ್ಲಾದಕನಾವಂ ? (೩) ತಾರಕಭೇದಕನಾವಂ ? (ಮೊದಲಿನೆರಡು ಪ್ರಶ್ನೆಗಳಿಂದ ಬರುವ ಉತ್ತರವೇ ಕೊನೆಯ ಒಂದು ಪ್ರಶ್ನೆಯ ಉತ್ತರವಾಗಿ ಬರಬೇಕು, ಎಂಬುದು ಕೇಳಿದ ವೇಶ್ಯೆಯ ಆಶಯ.) ವಕಾರಾದಿಯಾಗಿಯೂ, ಮುಂದೆ 'ಮ' ಮತ್ತು 'ನ'ಗಳು ಇರುವವಾಗಿಯೂ ಉಳ್ಳ ಹೆಸರುಳ್ಳವನೆಂದರೆ-'ವಾಮನ' ಎಂದಾಗು ವುದು. ಅವನು ಅಳೆದುದೇಂ ? ಎಂದರೆ ಭೂಮಿ. ಭೂಮಿಗೆ 'ಕು' ಎಂಬ ಹೆಸರುಂಟು. ಭೋಗಿಜನಾಹ್ಲಾದಕನಾವನು ? ಎಂಬ ಪ್ರಶ್ನೆಗೆ 'ಮನ್ಮಥ' ಎಂಬ ಉತ್ತರ. ಮನ್ಮಥ ನಿಗೆ 'ಮಾರ'ನೆಂದು ಹೆಸರು. ಇಲ್ಲಿ 'ಕು' ಎಂಬ ಮೊದಲನೆಯ ಪ್ರಶ್ನೆಯ ಉತ್ತರವೂ 'ಮಾರ' ಎಂಬ ಎರಡನೆಯ ಪ್ರಶ್ನೆಯ ಉತ್ತರವೂ ಸೇರಿ 'ಕುಮಾರ' ಎಂದಾಯಿತು. ಇದು ತಾರಕಭೇದಕನಾವಂ ? ಎಂಬ ಒಂದೇ ಪ್ರಶ್ನೆಯ ಉತ್ತರವಾಗಬೇಕು. ತಾರಕಭೇದಕನು ಕುಮಾರಸ್ವಾಮಿ. ಆದ್ದರಿಂದ ವಿಟನು 'ಕುಮಾರ'ನಲ್ತೆ ಮೃಗಾಕ್ಷಿ !' ಎಂದು ಉತ್ತರ ಹೇಳಿಬಿಡುವನು. ವ॥ ಹೀಗೆನ್ನಲು ಆ ವಿಟನು, ಆ ವೇಶ್ಯೆಯೊಡನೆ

1 ಟಿಪ್ಪಣ :—ಇದು ವಕ್ರೋಕ್ತಿಯೆಂಬ ಅಲಂಕಾರ (ರಂ)

ಕಂ॥ ವನದ ಸಮಧ್ಯದ ಪದ್ಯಾ
ಯನಾಮದೊಳ್ಗಮಿಪುದೇಂ ತದಾಶ್ರಯಮೇಂ ಜೀ
ವನಕೆ ಮುನಿವವನದಾವಂ
ವನನಿಧಿಯೆಂತಪ್ಪುದೆನಗೆ ಪೇಳ್ ಕಮಲಾಕ್ಷೀ ೧೭೧

ವ॥ ಮತ್ತಮೊಂದು ಸೆಜ್ಜೆವನೆಯೊಳ್ ಒರ್ವಕ್ಕಱಿಗ ಬೊಜಂಗಂ ಸೊರ್ಕುಜವ್ವನೆಗೆ ಸಕ್ಕದದ ಬಹಿರ್ಲಾಪಿಯಂ ಪೇಳ್ದನದೆಂತೆನೆ

ಸ್ರ॥ ಬ್ರಹ್ಮಾಣೀ ಕಾ ಜನೇಷ್ಟಂ ದಧತಿ ಝಡಿತಿ ಕೇ ತಾಪಸಾಂಗಂಚ ಕೀದೃಕ್
ಪ್ರೀತಾ ಕಾ ಕುತ್ರ ವಿಶ್ವಂ ನಿವಸತಿ ವಿಬುಧಾಬೋಧನಂ ಕಿಂ ನೃಪಾಲಃ
ಕಸ್ಯೈ ಸನ್ನದ್ಧ ಈಶಃ ಪತಿರಿತಿವಿದಿತಃ ಕಸ್ಯ ವಂದ್ಯೌಚ ಕೌ ಕಿಂ
ವಕ್ರೀಶಃ ಕೌ ಜಗತ್ಸಂಹರಣಭರಣ ಕೌ ಮಂಗಳೋಕ್ತಿಃ ಕವೇಃ ಕಾ ೧೭೨

ಹೀಗೆಂದನು : ೧೭೧. 'ವನ' ಎಂಬ ಶಬ್ದದ ಮಧ್ಯದಲ್ಲಿ 'ಸ' ಎಂಬ ಅಕ್ಷರ ಬಂದಾಗ ಆಗುವ ಶಬ್ದವೆಂದರೆ 'ವಸನ' ಎಂದು. 'ವಸನ' ಎಂದರೆ ಬಟ್ಟೆ ಎಂದು ಅರ್ಥ. ಪ್ರಕೃತ ಇಲ್ಲಿ 'ಅಂಬರ' ಎಂಬ ಶಬ್ದವನ್ನು ಸ್ವೀಕರಿಸಬೇಕು. ಅಂಬರ ಎಂದರೆ 'ಆಕಾಶ'ವೆಂದೂ ಅರ್ಥ. ಈ ಆಕಾಶವೆಂಬ ಅರ್ಥವನ್ನೇ ಪ್ರಧಾನವಾಗಿಟ್ಟುಕೊಂಡು, ಆ ಆಕಾಶದಲ್ಲಿ 'ಗಮಿಪುದು ಏಂ ?' ಎಂದು ಪ್ರಶ್ನೆ. ಅದಕ್ಕೆ ಉತ್ತರ 'ವನನಿಧಿ' ಎಂದರೆ ಮೋಡ. ಮೋಡಕ್ಕೆ ಆಶ್ರಯವಾದುದು ಯಾವುದು ? ಎಂದರೆ 'ವನನಿಧಿ' ಸಮುದ್ರ. ಜೀವನಕ್ಕೆ ಮುನಿಯುವವನು ಯಾವನು ? ಎಂದು ಇನ್ನೊಂದು ಪ್ರಶ್ನೆ. ಜೀವನ ಎಂದರೆ ಇಲ್ಲಿ 'ಬಾಳು' ಅಥವಾ 'ಬದುಕು' ಎಂದು ಅರ್ಥ. ಮುನಿಯು ಬದುಕನ್ನು ತೊರೆದು ವನದಲ್ಲಿ ನೆಲಸುತ್ತಾನೆ. ಅಥವಾ ಜೀವನವೆಂದರೆ ನೀರು. ಅದಕ್ಕೆ ಮುನಿಯುವವನು–ವನ ಎಂದರೆ ನೀರಿಗೆ 'ನಿಧಿ' ಎಂದರೆ ಆಶ್ರಯಭೂತನಾದ ಅಗ್ನಿ ಎಂದು ಅರ್ಥೈಸಲೂ ಬಹುದು. (ಅಗ್ನೇರಾಪ : ಎಂಬ ಶ್ರುತ್ಯಾಧಾರವೇ ಸಾಕ್ಷಿ). ಆದುದರಿಂದ 'ವನನಿಧಿ' ಎಂತಪ್ಪುದು ? ಎಂಬ ಪ್ರಶ್ನೆಗೆ ಮೂರುಕಡೆಯಲ್ಲೂ ಅದೇ ಉತ್ತರವಾಗಿ ಪರಿಣಮಿಸುತ್ತದೆ ಎಂಬುದೇ ಅರ್ಥಚಮತ್ಕಾರ. ವ॥ ಮತ್ತೊಂದು ಶಯ್ಯಾ ಗೃಹದಲ್ಲಿ ಒಬ್ಬ ವಿದ್ಯಾವಂತನಾದ ವಿಟನು, ಸೊಕ್ಕಿನ ಯೌವನವತಿಯಾದ ವೇಶ್ಯೆಗೆ ಸಂಸ್ಕೃತದ 'ಬಹಿರ್ಲಾಪಿ' ಅಂದರೆ ಬೇರೆ ಗ್ರಂಥಗಳಿಂದ ಉತ್ತರ ಹುಡುಕಿ ಹೇಳುವಂತಹ ಪ್ರಶ್ನೆಯನ್ನು ಈ ಕೆಳಗಿನಂತೆ ಕೇಳುವನು. ೧೭೨. (ಇದರಲ್ಲಿ ೧೨ ಪ್ರಶ್ನೆಗಳಿವೆ. ಆ ಹನ್ನೆರಡೂ ಪ್ರಶ್ನೆಗಳಿಗೆ ಆ ಪದ್ಯಭಾಗದಿಂದಲೇ ಉತ್ತರ ಬರುವಂತಿರಬೇಕು. ಕಾಳಿದಾಸನ ರಘುವಂಶಕಾವ್ಯದ–"ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ" ಎಂಬ ಪದ್ಯಭಾಗವೇ ಆ ಎಲ್ಲ ಪ್ರಶ್ನೆಗಳಿಗೂ ಉತ್ತರವಾಗಬೇಕು. ಅದು ಈ ಕೆಳಗಿನಂತೆ ಇದೆ.) (೧) ಬ್ರಹ್ಮಾಣೀ ಕಾ ? =ಬ್ರಹ್ಮಾಣಿಯು ಯಾರು ?. ಉತ್ತರ : 'ವಾಕ್' ಎಂಬುದು. ಅಂದರೆ ವಾಗ್ರೂಪಳಾದ ಸರಸ್ವತಿಯೆಂದು ಅದರ ಅರ್ಥ. (೨) ಜನೇಷ್ಟಂ

ವ॥ ಎನೆ ಕೇಳ್ದವಳ್ಕಾಳಿದಾಸಕವಿ ರಚಿತ ಕಾವ್ಯಾದಿಮಂತರ್ಲಾಪಿಯಿನುತ್ತರಂ ಪೇಳ್ದವನ ಚಿತ್ತಂಬಡೆದಿರ್ದಳಿತ್ತ ಮತ್ತೊಂದೆಡೆಯೊಳೊರ್ವ ಮತ್ತಕಾಶಿನಿ ಕಾಂತನೊಳ್ಪ್ರಹೇಳಿಕೆಯುಂ ಸೊಲ್ಲಿಸಿದಳದೆಂತೆನೆ

ದಧತಿ ಝಡಿತಿ ಕೇ ? =ಜನರ ಇಷ್ಟವನ್ನು ಆ ಕೂಡಲೆ ಉಂಟುಮಾಡುವುದು ಯಾವುದು ? 'ಅರ್ಥಾ :' ಎಂದು ಉತ್ತರ. (೩) ತಾಪಸಾಂಗಂಚ ಕೀದೃಕ್ ? ತಪಸ್ವಿಗಳ ಅಂಗವು ಯಾವ ರೀತಿ ಇರುತ್ತದೆ ? 'ವಿಸಸಂ' ವಸಾರಹಿತವಾಗಿರುವುದು, ಅಥವಾ ಕೃಶವಾದುದು ಎಂದು ಅರ್ಥ. (೪) ಪ್ರೀತಾ ಕಾ ? ಪ್ರೀತಿಯುಳ್ಳವಳಾವಳು ? ಇದಕ್ಕೆ ಉತ್ತರ :–'ಸಂಪೃಕ್ತೌ' ಅಂದರೆ ಚೆನ್ನಾಗಿ ಸ್ಪರ್ಶಿಸುವವಳು, ಜೊತೆಯಲ್ಲಿರುವವಳು. (೫) ವಿಶ್ವಂ ಕುತ್ರ ನಿವಸತಿ ? ವಿಶ್ವವು ಎಲ್ಲಿ ನಿವಸತಿ ? 'ಜಾ' ಎಂದು ಉತ್ತರ. ಉ=ಪರಮೇಶ್ವರ. ಜ ಎಂಬುದರ ಸಪ್ತಮ್ಯಂತ ಜಾ. (೬) ವಿಬುಧಾಬೋಧನಂ ಕಿಂ ? ವಿದ್ವಾಂಸರ ಬೋಧಜನಕವಾವುದು ? ಉತ್ತರ :– ವಾಕ್ (ಮಾತು). (೭) ನೃಪಾಲಃ ಕಿ ಕಸ್ಮೈ ಸನ್ನದ್ಧ : ? ಅರಸನು ಯಾವ ಕಾರ್ಯದಲ್ಲಿ ಉದ್ಯುಕ್ತನಾಗಿದ್ದಾನೆ ? ಉತ್ತರ :–'ಅರ್ಥ ಪ್ರತಿಪತ್ತಯೇ'. ಅಂದರೆ ಹಣ ಸಂಪಾದನೆಯಲ್ಲಿ ಉದ್ಯುಕ್ತನಾಗಿದ್ದಾನೆ, ಎಂದು. (೮) ಈಶಃ ಪತಿರಿತಿ ವಿದಿತಃ ಕಸ್ಯ ? ಯಾವುದಕ್ಕೆ ಈಶ್ವರನು ಪತಿಯೆಂದು ವಿದಿತನಾಗಿದ್ದಾನೆ ? ಉತ್ತರ :– 'ಜಗತ :' ಅಂದರೆ –ಜಗತ್ತಿಗೆ ಈಶ್ವರನು ಪತಿ ಎಂದು ವಿದಿತನಾಗಿದ್ದಾನೆ. (೯) ವಂದ್ಯಾಚ ಕೌ ? ವಂದ್ಯರಾದವರಾರು ? ಉತ್ತರ–ಪಿತರೌ' ಎಂದರೆ ಮಾತಾಪಿತೃಗಳು ವಂದ್ಯರು. (೧೦) ಕಿಂ ವಕ್ತೀಶಂ ? ಈಶ್ವರನಿಗೆ ಹೇಳುವುದೇನನ್ನು ? ಉತ್ತರ :– 'ವಂದೇ', ಎಂದರೆ ನಮಸ್ಕರಿಸುತ್ತೇನೆ. (೧೧) ಕೌ ಜಗತ್ಸಂಹರಣ ಭರಣ ಕೌ ? ಜಗತ್ತಿನ ಸಂಹರಣ ಭರಣ ಕರ್ತೃಗಳು ಯಾರು ? 'ಪಾರ್ವತೀಪ' ಅಂದರೆ ಈಶ್ವರನು ಸಂಹರಣಕರ್ತೃ, ರಮೇಶ್ವರ (ರಮಾ + ಈಶ್ವರ)ನು ಅಂದರೆ ವಿಷ್ಣುವು ಪಾಲನಕರ್ತೃ. (೧೨) ಕವೇಃ ಮಂಗಳೋಕ್ತಿಃ ಕಾ ? (ಈ ಅರ್ಥ ಬರುವ) ಕವಿಯ ಮಂಗಳೋಕ್ತಿ ಯಾವುದು ? ಉತ್ತರ :– ಮೇಲೆ ಹೇಳಿದ "ವಾಗರ್ಥಾವಿವ ಸಂಪೃಕ್ತೌ........" ಎಂಬ ಪೂರ್ಣ ಪದ್ಯ.

ವ॥ ಎನ್ನಲು ಅವಳು ಕಾಳಿದಾಸ ಕವಿ ರಚಿತವಾದ ಕಾವ್ಯದ (ರಘುವಂಶಕಾವ್ಯದ) ಅಂತರ್ಲಾಪಿಯಿಂದ ಉತ್ತರವನ್ನು ಹೇಳಿ ಅವನ ಮನಃಪ್ರೀತಿಯನ್ನು ಪಡೆದಳು. ಇತ್ತ ಮತ್ತೊಂದು ಕಡೆಯಲ್ಲಿ ಓರ್ವ ಪ್ರಾಯದ ಸ್ತ್ರೀಯು ತನ್ನ ಪ್ರಿಯನಲ್ಲಿ 'ಪ್ರಹೇಳಿಕೆ' ಎಂಬ

ಶ್ಲೋಕ॥ ರಣೇನ ಸಾಧ್ಯತೇ ಸರ್ವಂ
ಮತೇನ ಧ್ರಿಯತೇ ಮಹೀ
ಅಸಾರೇ ಕ್ರೀಡತೇ ಹಂಸಃ
ಕವಿಶ್ಲೇಷೇ ಕಿಮದ್ಭುತಂ ೧೭೩

ವ॥ ಇಂತಪ್ಪನೇಕವಿಧ ಚತುರಗ್ರಂಥಂಗಳಂ ಕೇಳ್ದು ಮಚ್ಚುತ್ತಂ ಚತುರಜನಮನಶ್ಚಕೋರಚಂದ್ರಂ ನಾಗರಿಕನೊಳ್ಪೊಗಳುತ್ತಿರೆ ಮತ್ತೊಂದು ಮಣಿಭವನದಂಗಣದೊಳ್ ಮಾತೆಯೊಡನೆ ಮುಳಿದು ಮಗಳ್ನಿಂದಿರ್ಪುದುಮವಳ್ಪಿಡಿದಿಂತೆಂದಳ್

ಚಂ॥ ಮಗಳೆ ಮನೋಜ್ಞಮಾತೆ[1] ಮಿಗಿಲಿತ್ತೊಡೆ ವಿಟಜದಿರಾತಸಾಜ್ಞೆಯಂ
ಮುಗುದೆ ಕಳಲ್ಚು ಮೂಢತೆಯ ಮೇಣದ ಪುತ್ತಳಿಯಂತೆ ಪ್ಯೆಯನಿ
ತ್ತಗಲದೆ ಕೂಡಿ ಮೋಹಿಸಿ ಧನಂಬಡೆ ಮೌನಮಿದೇಕೆ ಮಂದಿರಂ
ಬುಗು ನಡೆ ಮಸ್ತಕಂದೊನೆಯದಿರ್ ಕಡುಮೂರ್ಖತೆ ಬೇಡ ಕಾಮಿನೀ ೧೭೪

ಕಾವ್ಯಪ್ರಕಾರವನ್ನು ಹೇಳಿದಳು. ಅದು ಹೇಗೆಂದರೆ, ೧೭೩. (ಪ್ರಹೇಳಿಕೆ ಎಂದರೆ ಗೂಡಾರ್ಥವನ್ನಿಟ್ಟು, ಪದ್ಯದಲ್ಲಿಯ ಯಾವುದೋ ಒಂದು ಶಬ್ದವನ್ನೋ ಅಕ್ಷರವನ್ನೋ ಜೋಡಿಸಿ, ಗೂಡಾರ್ಥದ ಸಮಸ್ಯೆಗಳಿಗೆ ಉತ್ತರ ಹೇಳುವ ಪದ್ಯ. ಇದರಲ್ಲಿ ಮೂರು ಪ್ರಶ್ನೆಗಳಿವೆ. ಆ ಪ್ರಶ್ನೆಗಳು ಜೋಡಿಸಲ್ಪಟ್ಟ ಅಕ್ಷರದಿಂದಾಗಿ ಅವೇ ಉತ್ತರಗಳೂ ಆಗುತ್ತವೆ.) (೧) ರಣೇನ ಸಾಧ್ಯತೇ ಸರ್ವಂ (೨) ಮತೇನ ಧ್ರಿಯತೇ ಮಹೀ (೩) ಆಸಾರೇ ಕ್ರೀಡತೇ ಹಂಸಃ. ಈ ರೀತಿ ಆ ವೇಶ್ಯೆಯು ಕೇಳಿದ ಪ್ರಶ್ನೆಗಳಿಗೆ ವಿಟನು, 'ಕವಿಶ್ಲೇಷೇ ಕಿಮದ್ಭುತಂ'– ಇದರಲ್ಲಿ ಅದ್ಭುತವೇನಿದೆ? ಕಕಾರವನ್ನು ವಿಶ್ಲೇಷಿಸಿ ಹೇಳಿದ್ದೀಯಷ್ಟೆ! ಅಂದರೆ ಕಕಾರವನ್ನು ಆ ಮಾತುಗಳ ಮೊದಲಲ್ಲಿ ಬಿಟ್ಟು ಹೇಳಿರುವುದರಿಂದ ಅವು ಬಿಡಿಸಲಾರದ ಸಮಸ್ಯೆಗಳಾಗಿವೆ. ಕೂಡಿಸಿದಾಗ (೧) ಕರಣೇನ ಸಾಧ್ಯತೇ ಸರ್ವಂ–ಕ್ರಿಯಾಶಕ್ತಿಯಿಂದ (ಅಥವಾ ಸಾಧನ ಸಲಕರಣಗಳಿಂದ) ಎಲ್ಲವೂ ಸಾಧಿಸಲ್ಪಡುವುದು. (೨) ಕಮತೇನ ಧ್ರಿಯತೇ ಮಹೀ–ಆದಿಕೂರ್ಮನಿಂದ ಭೂಮಿಯು ಧರಿಸಲ್ಪಡುತ್ತದೆ. (೩) ಕಾಸಾರೇ ಕ್ರೀಡತೇ ಹಂಸಃ–ಸರೋವರದಲ್ಲಿ ಹಂಸವು ಕ್ರೀಡಿಸುತ್ತದೆ. (ಹೀಗೆ ವಿಚಾರ ಮಾಡಿ ಚಾತುರ್ಯದಿಂದ ಉತ್ತರ ಹೇಳುವನು) ವ॥ ಈ ರೀತಿಯ ಅನೇಕ ವಿಧವಾದ ಚಾತುರ್ಯದಿಂದ ಕೂಡಿದ ಗ್ರಂಥದ ನುಡಿಗಳನ್ನು ಕೇಳಿ ಮೆಚ್ಚುತ್ತ, ಚತುರರಾದ ಜನಗಳ ಮನಸ್ಸೆಂಬ ಚಕೋರಪಕ್ಷಿಗಳಿಗೆ ಚಂದ್ರನೋಪಾದಿಯಲ್ಲಿರುವ ರಾಜಶೇಖರನು ನಾಗರಿಕನೊಡನೆ ಹೊಗಳುತ್ತಿರಲು, ಮತ್ತೊಂದು ರತ್ನನಿರ್ಮಿತ ಮನೆಯ ಅಂಗಳದಲ್ಲಿ ತಾಯಿಯೊರ್ವಳೊಡನೆ ಕೋಪಗೊಂಡು ನಿಂತ ಮಗಳನ್ನು ಆ ತಾಯಿಯು ಹಿಡಿದು ಹೀಗೆ ಹೇಳುತ್ತಿದ್ದಳು. ೧೭೪. "ಮನೋಹರಳಾದ[1] ಅಮ್ಮಾ, ಮಗಳೇ, ಹೆಚ್ಚಾಗಿ ಹಣ ಕೊಟ್ಟ ವಿಟನ ಆಜ್ಞೆಯನ್ನು ಮೀರದಂತೆ ಇರು; ಸುಂದರಿಯೇ, ಮೌಢ್ಯವನ್ನು ಬಿಡು; ಮೇಣದ ಗೊಂಬೆಯ ಹಾಗೆ

1. ಮನೋಜಮಾತೆ ಎಂದು ಮೂಲ ಪಾಠವಿರಬಹುದು (ರಂ.)

ವ॥ ಮತ್ತೊಂದು ಗೃಹಾಂತರಾಳದೊಳ್ಕುಳ್ಳಿರ್ದ ಜಘನ್ಯಭುಜಂಗನಂ ತೋಱಿ ಕೆಳದಿ ಯೊಡನೆ ಪದಿರಿಂದಿಂತೆಂದಳ್

ಮ॥ ಪರಮಶ್ಲಾಘ್ಯಗುಣಂ ಸದಾಮದಹಿತಂ ಶೌರ್ಯೋತ್ತರಂ ಗಂಧಬಂ
ಧುರನೆಂದುಂ ನರಸಾರಮೇಯನಬಲಾಪ್ರೇಮಾಸ್ಪದೋದ್ಯದ್ವನೇ
ಚರನೇತ್ರಾಸ್ಯನನಂಗರೂಪನತನುಕ್ರೀಡಾವಿನೋದಂ ಮನೋ
ಹರನೀತಂ ನಸು ಪಿಂಗೆ ಬರ್ಕುಮೆನಗೀಗಳ್ ಪಾರವಶ್ಯಂ ಸಖೀ ೧೭೫

ಅವನಿಗೆ ಮೈಕೊಟ್ಟು, ಅಗಲದಂತೆ ಕೂಡಿ ಮೋಹವನ್ನುಂಟುಮಾಡಿ ಹಣವನ್ನು ಪಡೆ. ಏಕೆ ಮೌನವನ್ನು ಧರಿಸಿರುವೆ ? ಮನೆಯನ್ನು ಹೊಗು ನಡೆ. ತಲೆಯಲ್ಲಾಡಿಸಬೇಡ. (ತಲೆಯನ್ನಲ್ಲಾಡಿಸಿ ಒಲ್ಲೆನೆಂಬ ಬಯಕೆಯನ್ನು ಸೂಚಿಸಬೇಡ). ವಿಶೇಷವಾದ ಈ ಮೂರ್ಖತನ ಬೇಡ, ನಡೆ ಕಾಮಿನೀ" ವ॥ ಮತ್ತೊಂದು ಮನೆಯ ಒಳಭಾಗದಲ್ಲಿ ಕುಳಿತುಕೊಂಡಿದ್ದಂತಹ ನೀಚನಾದ ವಿಟನನ್ನು ತನ್ನ ಗೆಳತಿಗೆ ತೋರಿಸುತ್ತ (ಒಬ್ಬ ಜಾರೆಯು) ಅವಳೆದುರಿಗೆ ಎರಡರ್ಥ ಬರುವ ರೀತಿಯಲ್ಲಿ ಹೀಗೆ ಹೇಳುತ್ತಿದ್ದಳು. ೧೭೫. (ಈ ಪದ್ಯ ಎರಡು ವಿಧವಾದ ಅರ್ಥದಿಂದ ಕೂಡಿದುದು) (ನಿಂದಾಸ್ತುತಿ) ಶ್ರೇಷ್ಠವಾದ ಶ್ಲಾಘನೀಯವಾದ ಗುಣಗಳಿಂದ ಕೂಡಿದವನು. (ಪರಂ + ಅಶ್ಲಾಘ್ಯಗುಣಯುತನು. ಅಂದರೆ ಅತಿಯಾಗಿ ನಿಂದ್ಯವಾದ ಗುಣಗಳಿಂದ ಕೂಡಿದವನು). ಸದಾ ಹರ್ಷ (ಮದ) ದಿಂದ ಕೂಡಿ ಹಿತನಾದವನು. (ಸದಾ ಮತ್ + ಅಹಿತಂ. ಅಂದರೆ ಯಾವಾಗಲೂ ನನಗೆ ಅಹಿತಕಾರಿಯೇ ಆಗಿದ್ದಾನೆ) ಶೌರ್ಯದಲ್ಲಿ ಅತಿ ಶ್ರೇಷ್ಠನೆನಿಸಿದ್ದಾನೆ. (ಶೌರ್ಯದಲ್ಲಿ ಉತ್ತರ ಕುಮಾರನಂತಿದ್ದಾನೆ.) ಸದಾ ಸುಗಂಧಾನುಲೇಪನದಿಂದ ಕೂಡಿದವನಾಗಿದ್ದಾನೆ. [ಸದಾ (ಗಂಧದಿಂದ) ಸೊಕ್ಕಿನಿಂದ ತುಂಬಿದವನಾಗಿರುತ್ತಾನೆ.] ಅರ್ಜುನನ ಪರಾಕ್ರಮಕ್ಕೆ ಸಮಾನನಾಗಿದ್ದಾನೆ. (ಮನುಷ್ಯರೂಪದ ನಾಯಿಯ ಹಾಗೆ ಇದ್ದಾನೆ.) ಸ್ತ್ರೀಜನರ ಪ್ರೇಮಕ್ಕೆ ಆಸ್ಪದನಾಗಿದ್ದಾನೆ. (ಸ್ತ್ರೀಜನರುಗಳ ಅಪ್ರೇಮಕ್ಕೆ ಅಂದರೆ ತಿರಸ್ಕಾರಕ್ಕೆ ಪಾತ್ರನಾದವನಾಗಿದ್ದಾನೆ) ಶ್ರೇಷ್ಠವಾದ ನೀರಿನಲ್ಲಿ ತೆರೆಗಳ ಅಪ್ಪಳಿಸುವಿಕೆಯಿಂದ ಚರಿಸುವ ಕಮಲದಂತಹ ಮುಖ ಮತ್ತು ಅದರ ದಳಗಳಂತಹ ಕಣ್ಣುಳ್ಳವನಾಗಿದ್ದಾನೆ. (ಘೋರವಾದ ಅರಣ್ಯದಲ್ಲಿ ಸಂಚರಿಸುವ ಬೇಡನಂತಹ ಮುಖ ಮತ್ತು ಕಣ್ಣುಗಳುಳ್ಳವನಾಗಿದ್ದಾನೆ). ಮನ್ಮಥಾಕಾರನಾಗಿದ್ದಾನೆ. (ಅಂಗಕ್ಕೆ ಇರಬೇಕಾದ ಉತ್ತಮ ರೂಪವೇ ಇಲ್ಲದವನು). ವಿಶೇಷವಾಗಿ ಮನ್ಮಥಕ್ರೀಡೆಯುಳ್ಳವನು. (ಅಧಿಕ ಕಾಮಾಸಕ್ತನಾಗಿ, ಕ್ರೀಡಾವಿನೋದವೇ ಗೊತ್ತಿಲ್ಲದವನು). ಮನೋಹರನು (ಮನಸ್ಸನ್ನೇ ಹಾಳುಮಾಡುವವನು). ಸಖಿಯೇ, ಇವನು ಸ್ವಲ್ಪ ಅಗಲಿದರೆ ಸಾಕು, ನನಗೆ ಮೂರ್ಛೆಯು ಆ ಕೂಡಲೇ ಉಂಟಾಗುತ್ತದೆ. (ಈತನು ಸ್ವಲ್ಪ ತೊಲಗಿದರೆ ಸಾಕು, ಆಗಲೇ ನನಗೆ ಸುಖವುಂಟಾಗು

ವ॥ ಎನೆ ತನ್ನಂ ಪೊಗಳ್ದಪ್ಪಳೆಂದು ಮುದಂಬಡೆದಿರ್ದನಲ್ಲಿ ಮತ್ತೊಂದೆಡೆಯೊಳ್ ಶಶಿಕಾಂತಕೇಳೀನಿಕೇತನದೊಳ್ ಚಂಚತ್ಕಾಂಚನಮಂಚದ ಮೃದುಳಧವಳಶಯ್ಯಾತಳದೊಳೊಯ್ಯನೆ ರಯ್ಯಮೆನೆ ಕೈಯಂ ಪಿಡಿದು ಮೆಯ್ಯಂ ಸೋಂಕಿ ಮನದನ್ನಳೊಡನೆ ಮದನಕೇಳಿಗೆಳಸಿ ಮಹೋತ್ಸವದಿಂ ಮನೋರಮಣಂ ಕುಳ್ಳಿರ್ದು ನೇಹಂ ಮಿಗೆ ನಿರೀಕ್ಷಿಸಿ

ಉ॥ ಅಂದುಗೆಯಂ ಕಳಲ್ಚಿ ಪೊಸಮೂಕುತಿಯಂ ಬಿಡದೇಱಸೂಂಕಿ ತ
ಳ್ತಂದದ ಹಾರಮಂ ಕೊರಲ ಹತ್ತಸರಕ್ಕೆ ತೊಡರ್ಚಿ ಸಾರ್ಚಿ ಚೆ
ಲ್ವೊಂದಿದ ಕೇಶಮಂ ಬಿಗಿದುಬಂಧಿಸಿ ನೋಳ್ಪ ನಿಜೇಶನಿಚ್ಛೆಯಂ
ಸುಂದರಿ ನೋಡಿ ಕೈಗಡಗಮಂ ತೆಗೆದಾತನ ಕೈಗಮರ್ಚಿದಳ್ ೧೭೬

ಚಂ॥ ಹಸನರಸಂ ಮುಖಾಂಬುಜರಸಂ ಬೆರಸುತ್ತಿರೆ ಕುಂಡಲಂಗಳುಂ
ಮಿಸುಪ ಕುಚಂಗಳುಂ ಕುಣಿಯೆ ನುಣ್ದೊಡೆಯುಂ ನಡುವುಂ ಕಡಂಗಿ ಕಂ
ಪಿಸೆ ನರುಸುಯ್ಗಳುಂ ಭ್ರಮರಕಂ ಪರೆದೊಪ್ಪಿರೆ ಘರ್ಮವಾರಿಗ
ಳ್ಪಿಸಿಲರಸಂಗಳುಂ ಸುರಿಯೆ ಜಾಣೆ ಜವಂಗೆಡದೊತ್ತಿಕೂಡಿದಳ್ ೧೭೭

ತ್ತದೆ. ವ|| ಹೀಗೆನ್ನುತ್ತಿರಲು ತನ್ನನ್ನೇ ಹೊಗಳುತ್ತಿರುವಳೆಂದು ಆ ವಿಟನು ಸಂತೋಷಪಡುತ್ತಿದ್ದನು. ಮತ್ತೊಂದು ಕಡೆಯಲ್ಲಿ ಶಶಿಕಾಂತಶಿಲೆಯಿಂದ ನಿರ್ಮಿಸಲ್ಪಟ್ಟ ಕೇಳೀಗೃಹದಲ್ಲಿ, ಹೊಳೆಯುತ್ತಿರುವ ಬಂಗಾರದ ಮಂಚದ ಮೇಲೆ ಹಾಸಿರುವ ಬಿಳಿಯ ಬಣ್ಣದ ಹಾಸಿಗೆಯಲ್ಲಿ, ರಮ್ಯವಾಗಿ ಕೈಯನ್ನು ಹಿಡಿದು, ಮೈಗೆ ಮೈ ಸೋಂಕಿ ತನ್ನ ಮನಃಪ್ರಿಯೆಯೊಂದಿಗೆ ರತಿಕೇಳಿಗೆ ಮನಸ್ಸುಮಾಡಿ, ಮನೋರಮಣನು ಅತ್ಯುತ್ಸಾಹದಿಂದ ಕುಳಿತುಕೊಂಡು, ವಿಶೇಷವಾದ ಸ್ನೇಹದಿಂದ ನೋಡುತ್ತ, ೧೭೬. ಕಾಲಂದಿಗೆಯನ್ನು ಕಳಚಿ ಹೊಸದಾದ ಮೂಗುಬೊಟ್ಟನ್ನು ಮೇಲಕ್ಕೆತ್ತಿ ಅಂದಗೊಳ್ಳುವಂತೆ ಮಾಡಿದನು. ಹಾಕಿಕೊಂಡಿದ್ದ ಕೊರಳ ಹಾರವನ್ನು ಕೊರಳಿಗೆ ಹತ್ತಿಯಾಗುವಂತೆ ಎಳೆದು ಬಿಗಿದು, ಚೆಲುವಾದ ಕೂದಲುಗಳನ್ನು ಬಿಗಿಯಾಗಿ ಕಟ್ಟಿ, ನೋಡುವ ತನ್ನ ಪ್ರಿಯನಾದವನ ಇಚ್ಛೆಯನ್ನು, ಆ ಸುಂದರಿಯು ನೋಡಿ ತನ್ನ ಕೈಯ ಕಡಗವನ್ನು ತೆಗೆದು ಅವನ ಕೈಗೆ ತೊಡಿಸಿದಳು. (ಹಾಗೆ ತೊಡಿಸಿ ತಾನೂ ವಿನೋದಗೊಂಡಳೆಂದು ಭಾವ. ಇಷ್ಟೇ ಅಲ್ಲ. ಕಾಲಂದಿಗೆಗಳೂ, ಜೋತಾಡುತ್ತಿರುವ ಹಾರವೂ, ಜೋಲು ಬಿದ್ದ ಮೂಗುತಿಯೂ ತನ್ನ ಸಂಭೋಗಕ್ರಿಯೆಗೆ ಅಡ್ಡಿಗೊಳಿಸುತ್ತವೆಂದು ಭಾವ. ತಾಡನ ಸಮಯದಲ್ಲಿ ತನ್ನ ಕೈಯ ಕಡಗ ಪ್ರಿಯನಿಗೆ ಬಾಧೆಯೆಂದು ಅವನ್ನು ತೆಗೆದು ಪ್ರಿಯನ ಕೈಗೆ ಹಾಕಿದಳೆಂದೂ ತಿಳಿಯಬೇಕು). ೧೭೭. ಪತಿಯ ನಗೆಯ ರಸವೂ, ಸತಿಯ ಮುಖಕಮಲದ ರಸವೂ ಒಂದುಗೂಡಿದ್ದವು. ಪತಿಯ ಕಿವಿಯ ಆಭರಣಗಳೂ, ಸತಿಯ ಶೋಭಿಸುವ ಕುಚಗಳೂ ಕುಣಿಯುತ್ತಿದ್ದವು. ಗತಿಯ ನುಣ್ಣನೆಯ ತೊಡೆಗಳೂ, ಸತಿಯ ನಡುವೂ ಉತ್ಸಾಹಾಧಿಕ್ಯದಿಂದ ಕಂಪಿಸುತ್ತಿದ್ದವು. ಪತಿಯ ನರುಗಂಪಿನಿಂದ ಕೂಡಿದ ದೀರ್ಘಶ್ವಾಸವೂ ಸತಿಯ ಭ್ರಮರಗಳಂತಿರುವ ಮುಂಗುರುಳುಗಳೂ ಹರಿದಾಡುತ್ತಿದ್ದವು. ಪತಿಯ ಬೆವರಿನ

ಪ್ರಿಯಕರಜಕ್ಷತೇಂದು ಕಳೆಯೊಂದೆ ಭಯಂಬಡೆದಂತುರೋಜ ಚ
ಕ್ರಯುಗಳಮುಂ ಕದಕ್ಕದಿಸೆ ಸಂಪಗೆಗಂಪನಮರ್ಚುತೇಳ್ವ ಸುಯ್
ರಯದೊಳೆ ತಾಗೆ ತಲ್ಲಣಿಪವೋಲ್ ಚಲಿಸುತ್ತಿರೆ ಕುಂತಳಾಳಿ ಕಾಂ
ತೆಯ ಜಡೆವಾವು ಪಾಯ್ದೊಡಗಿದಂತೆ ಬೆಮರ್ತುದು ವಕ್ತ್ರಚಂದ್ರಮಂ ೧೭೮

ವ॥ ಇಂತು ಸವಿಸುಸಿಲ ಸೊಗಮನನುಭವಿಸಿದನಂತರಂ

ಚಂ॥ ಮುಗಿದಲರ್ಗಣ್ಗಳಿಂ ಪರೆದ ಕುಂತಳದಿಂ ಬಿಡದೇಳ್ವ ಸುಯ್ಗಳಿಂ
ತೆಗೆಬಗೆಗೊಂಡು ಮೈಮಱೆವ ಚಿತ್ತದಿನುಣ್ಮುವ ಘರ್ಮವಾರಿಯಿಂ
ಮಿಗೆ ರಸವಾಱಿದಿಂದುಟಿಯಿನಾ ರತಿಮೂರ್ಛಿತೆ ಜೋಲ್ವ ದೇಹದಿಂ
ಸೊಗಯಿಸಿದಳ್ ಭುಜಂಗಪರಿದಷ್ಟತೆಯಿಂ ತವೆ ಸೂಚಿಪಂದದಿಂ ೧೭೯

ವ॥ ಅವಳಂ ನಾಗರಿಕಂ ನೋಡಿ ಪೊಗಳ್ವನಿತಱೊಳೊರ್ವ ವೃದ್ಧನೊತ್ತೆಗುಡಲೆಂದು ಬಂದಿರೆ ಮತ್ತೊರ್ವಳ್ಚಪಲೆ ಮೆಲ್ಲನೆ ಪೊರ್ದಿ ನಗುತಿಂತೆಂದಳ್

ಹನಿಗಳೂ, ಸತಿಯ ಸಂಭೋಗಕಾಲದಲ್ಲಿನ ದ್ರವಿಸುವಿಕೆಯೂ ಸುರಿಯುತ್ತಿದ್ದವು, ಹೀಗೆ ಆ ಜಾಣೆಯಾದ ಸ್ತ್ರೀಯು ಗಾಢವಾಗಿ ಒತ್ತಿ ರತಿಕ್ರೀಡಾಸಕ್ತಳಾಗಿದ್ದಳು. ೧೭೮. ಪ್ರಿಯಕರನಾದವನ ಉಗುರುಗಳ ಗಾಯಗಳು ಚಂದ್ರನಂತೆ ಕಳೆಗೊಳ್ಳಲು ಭಯಗೊಂಡವೋ ಎಂಬಂತೆ ಮೊಲೆಗಳೆಂಬ ಚಕ್ರವಾಕಪಕ್ಷಿಗಳು ನಡುಗುತ್ತಿರಲು, ಸಂಪಿಗೆ ಹೂವಿನ ಕಂಪನ್ನುಂಟುಮಾಡುವಂತೆ ಹೊರಸೂಸುವ ನಿಡಿದಾದ ಉಸಿರು ಮೆಲ್ಲನೆ ತಾಗಲು, ದುಂಬಿಗಳು ತಲ್ಲಣಗೊಳ್ಳುವುವೊ ಎಂಬಂತೆ ಮುಂಗುರುಳುಗಳು ಚಲಿಸಾಡುತ್ತಿರಲು, ಆ ಸ್ತ್ರೀಯ ಜಡೆಯೆಂಬ ಹಾವು ಮೇಲೆ ಬೀಳಲು ಹೆದರಿದ ಹಾಗೆ ಅವಳ ಚಂದ್ರನಂತಿರುವ ಮುಖವು ಬೆವರಿತು. ವ|| ಈ ರೀತಿ ಸವಿಯಾದ ರತಿಸುಖದ ಸೊಗಸನ್ನು ಅನುಭವಿಸಿದ ಮೇಲೆ, ೧೭೯. ಮುಚ್ಚಿದ ಕಮಲದಂತಹ ಕಣ್ಣುಗಳಿಂದಲೂ, ಹರಡಿದ ಕೂದಲುಗಳಿಂದಲೂ ಹೊರಸೂಸುವ ದೀರ್ಘಶ್ವಾಸೋಚ್ಛ್ವಾಸದಿಂದಲೂ, ಆಯಾಸಗೊಂಡು ಮೈಮರೆತ ಚಿತ್ತದಿಂದಲೂ, ಹೊರಹೊಮ್ಮುತ್ತಿದ್ದ ಬೆವರಿನಿಂದಲೂ, ಒಣಗಿಹೋದ ಮೃದುವಾದ ತುಟಿಗಳಿಂದಲೂ, ರತಿಕ್ರೀಡಾಮೂರ್ಛಿತೆಯಾದ ಅವಳು ಜೋತಾಡುವ ದೇಹವುಳ್ಳವಳಾಗಿ, ಹಾವು ಕಡಿದವಳಂತೆ (ವಿಟನೆಂಬ ಭುಜಂಗ ಅಂದರೆ ಹಾವಿನಿಂದ ಕಚ್ಚಲ್ಪಟ್ಟವಳ ಹಾಗೆ) ಶೋಭಿಸಿದಳು. (ಇಲ್ಲಿ ಹಾವು ಕಡಿದಾಗಲೂ ಮನುಷ್ಯನು ಮೇಲೆಕಂಡ ಕಣ್ಣು ಮುಚ್ಚುವಿಕೆ, ಮೈಮರೆಯುವಿಕೆಯೇ ಮೊದಲಾದ ದೇಹಲಕ್ಷಣಗಳಿಂದ ಕೂಡಿರುತ್ತಾನೆಂಬ ಭಾವ.) ವ|| ಅವಳನ್ನು ನಾಗರಿಕನು ನೋಡಿ ಹೊಗಳುವಷ್ಟರಲ್ಲಿ ಒಬ್ಬ ವೃದ್ಧನು ಮುಂಗಡಹಣವನ್ನು ಒತ್ತೆಗುಡಲೆಂದು ಬಂದಿರಲಾಗಿ, ಮತ್ತೊಂದು ಕಡೆಯಲ್ಲಿ ಒಬ್ಬ ಚಪಲೆಯಾದ ಸ್ತ್ರೀಯು ಮೆಲ್ಲನೆ ಆತನನ್ನು

ಚಂ॥ ತರಳನಿದಾವನೊತ್ತೆಗುಡಬಂದಪನಕ್ಕಟ ಕಾಣ್ಣನೇಕೆ ಕ
ಣ್ಗುರುಡನೊ ದಂಡಮಂ ಪಿಡಿದನಲ್ಲಮೆನುತ್ತಿರೆ ಶೀರ್ಷಕಂಪನಂ
ತೆರೆಯಿದು ನೋಳ್ಪೊಡಾಸ್ಯರಸದಿಂ ನೆಗೆದಿರ್ದುದೊ ಗಡ್ಡಮೀಸೆಯೊಳ್
ಪರೆದಿದೆ ಬೆಳ್ಪು ನಿರ್ಗತ ರದದ್ಯುತಿಗೊಂಡುದೊ ತಾನಿದದ್ಭುತಂ ೧೮೦

ವ॥ ಮತ್ತಮದಲ್ಲದೊರ್ವ ವೃದ್ಧಾಂಗನೆ ತಲೆವಾಗಿಲೊಳ್ನಿಂದು ಬೆಲೆವೆಣ್ಗಳಂಗಸಂಗ ದಿಂಗಿತಮಂ ಬಲ್ಲ ಬರ್ದಿನ ಬೋಜಗರಂ ಮರುಳ್ಮಾಳ್ಪ ಬಲ್ಮೆಗೊಲ್ಮೆಗಾನೆ ನೋಂತೆನೆಂದುಸಿರ್ವನಿ ತಜ಼ೊಳಾಕರ್ಣಿಸಿ ವಿದೂಷಕನವಳಿರ್ದೆಡೆಗೆ ಸರಸರನೆ ಪೋಗಿ

ಕಂ॥ ಉದರದ ವಳಿಗಳ್ನಿನ್ನಯ
ವದನಮನೆಯ್ದಿದವು ಕುಚದ ಬಿಣ್ಪುದರಮನೈ
ದಿದುದಳಕಮೈದಿದುದು ಕ
ಣ್ಣದಿರಿದು ಮುದಿಪಾಱ್ಪೇಳದೇನಚ್ಚರಿಯೋ ೧೮೧

ಸಮೀಪಿಸಿ ನಗುತ್ತ ಇಂತೆಂದಳು; ೧೮೦. "ಅಯ್ಯೋ! ಯಾವನೋ ಒಬ್ಬ ತರುಣನು ಮುಂಗಡ ಹಣವನ್ನು ಕೊಡುವುದಕ್ಕೆಂದು ಬಂದಿದ್ದಾನಲ್ಲ ! (ನಮ್ಮನ್ನು) ಇವನು ಕಾಣನೇ, ಕುರುಡುಗಣ್ಣನೇನೋ ! ಆದ್ದರಿಂದಲೇ ಕೈಯಲ್ಲಿ ಕೋಲು ಹಿಡಿದಿದ್ದಾನೆ. ಆದರೆ ತಲೆಯೋ 'ಅಲ್ಲ ಅಲ್ಲ !' ಎಂದು ಹೇಳುತ್ತಿರುವುದೋ ಎನ್ನುವಂತೆ ಅಲ್ಲಾಡುತ್ತಿದೆ. (ಮುಖದ ಮೇಲೆ) ಮಡಿಕೆಗಳು ಬಿದ್ದಿರುವುದನ್ನು ನೋಡಿದರೆ ಮುಖದ ತೇಜಸ್ಸೆಂಬ ರಸದಿಂದ ಎದ್ದ ತೆರೆಗಳೋ ಎಂಬಂತೆ ಕಾಣುತ್ತಿದೆ. ಗಡ್ಡಮೀಸೆಗಳಲ್ಲಿ ಬಿಳುಪು ಹರಿದಾಡುವುದನ್ನು ನೋಡಿದರೆ ಅದು ಹೊರಸೂಸಿದ ಹಲ್ಲುಗಳ ಕಾಂತಿಯೇ ಎಂಬಂತೆ ಇದೆ. ಇದು ಅದ್ಭುತ!" ವ|| ಮತ್ತು ಇದೂ ಅಲ್ಲದೆ ಓರ್ವ ವೃದ್ಧಸ್ತ್ರೀಯು ತನ್ನ ಮನೆಯ ತಲೆಬಾಗಿಲಲ್ಲಿ ನಿಂತು ಸೂಳೆಯರ ಅಂಗಸಂಗದ ಗುಟ್ಟನ್ನು ಬಲ್ಲ ಸಾಮರ್ಥ್ಯದ ವಿಟರುಗಳನ್ನು ಮರುಳುಗೊಳಿಸುವ ದೊಡ್ಡಸ್ತಿಕೆಗೂ, ಒಲುಮೆಗೂ ನಾನು ಸಮರ್ಥಳೆಂದು ಮಾತನಾಡುವಷ್ಟರಲ್ಲಿ ಅವಳ ಮಾತನ್ನು ಕೇಳಿ ವಿದೂಷಕನು ಅವಳಿದ್ದಲ್ಲಿಗೆ ಸರಸರನೆ ಹೋಗಿ ೧೮೧. "ನಿನ್ನ ಹೊಟ್ಟೆಯ ಮೇಲಿನ ತ್ರಿವಳಿಗಳು ಮುಖವನ್ನು ಸೇರಿವೆ. (ಅಂದರೆ ಮುಖವು ನಿರಿಗೆಗಟ್ಟಿದೆ ;) ಮೊಲೆಗಳ ಕಾಠಿಣ್ಯವು ಅಡಗಿ ಹೊಟ್ಟೆಯನ್ನು ಸೇರಿತು. (ಅಂದರೆ ಮೊಲೆಗಳು ಜೋತುಬಿದ್ದು ಹೊಟ್ಟೆ ದಪ್ಪವಾಯಿತೆಂದು ಭಾವ). ಕಣ್ಣಿನ ಕಾಂತಿಯು ಮುಂಗುರುಳನ್ನು ಸೇರಿತು. (ಕಣ್ಣುಗಳ ಬಿಳುಪು ಕೂದಲನ್ನು ಸೇರಿ ಅವನ್ನು ಬಿಳುಪು ಮಾಡಿತು ಎಂದು ಭಾವ). ಮುದಿಸೂಳೆಯೆ! ಇದೇನಾಶ್ಚರ್ಯ !"

ವ॥ ಪೆಱತೊಂದೆಡೆಯೊಳೊರ್ವಂ ಪರಿಹಾಸರಸಪ್ರಕಾಶಕಂ

ಚಂ॥ ನೆಗೆದ ಪಯೋಧರದ್ವಯಮಿದೇಕೆಳೆಬಿಳ್ದುದು ಬರ್ದೆ ಪೇಳ್ವುದೆಂ
ದಗಿಯದೆ ಕೇಳೆ ಪೇಳ್ದಳವನೊಳ್ವಿಟ ನೀಂ ರತಿಕಾಲದಲ್ಲಿ ಕೆಂ
ಮಗೆ ಕರಮಿಟ್ಟು ಮರ್ದಿಸುತೆ ಹೂಂಕೃತಿಗೆಯ್ದೊಡನರ್ಧಚಂದ್ರನಂ
ಮಿಗೆ ಕುಡೆ ಕಾಮಗೇಹಕದನಾ ಮದನಂಗಿದು ಪೇಳಲೈದುಗುಂ ೧೮೨

ವ॥ ಮತ್ತಂ

ಕಂ॥ ಎಳೆಯಳೆ ನೀನಲ್ಲಳೆ ಪೇ
ಳೆಳೆಯಳೆ ನಿನ್ನಳಕಕಾಂತಿಯೆಲ್ಲಿದೆ ಪೇಳೆ
ನ್ನೊಳೆ ನೀನಬಳೆಯೆ ಪೆಱತೇಂ
ತಿಳಿವೊಡೆ ನೀನಬಳೆಯೆಂಬುದಱಿಯದೆ ಲೋಕಂ ೧೮೩

ವ॥ ಎಂಬ ಮಾತಂ ಕೇಳ್ದು ವಿನೋದಮಕರಂದ ಮಧುವ್ರತಂ ನಸುನಗುತ್ತುಂ ಬರೆವರೆ ಮುಂದೊಂದು ಚಂದ್ರಮಣಿ ರಮಣೀಯ ಕುಟ್ಟಿಮಸ್ಥಳದೊಳುನ್ಮತ್ತ ಯೌವನಾಂಗಿಯೊರ್ವಳ್ ಸರ್ವವಲ್ಲಭಾಜನಮಧ್ಯದಲ್ಲಿ

ವ|| ಮತ್ತೊಂದು ಕಡೆಯಲ್ಲಿ ಒಬ್ಬ ವಿನೋದರಸಪ್ರಸಾರಕನಾದ ವಿಟನು ೧೮೨. "ಎಲ್ಲೆ ವೇಶ್ಯೆಯೇ, ನಿನ್ನ ನೆಟ್ಟಗೆ ನಿಂತಿದ್ದ ಮೊಲೆಗಳೇಕೆ ಜೋಲುಬಿದ್ದಿವೆ ಹೇಳು ?" ಎಂದು ಅಂಜದೆ ಕೇಳಲು, ಅವಳು "ಎಲೈ ವಿಟನೇ, ನೀನು ರತಿಕಾಲದಲ್ಲಿ ಗಟ್ಟಿಯಾಗಿ ಕೈಯಿಟ್ಟು ಹಿಚುಕಿ ಹೂಂಕಾರಮಾಡಿ ಅರ್ಧಚಂದ್ರನ ಆಕಾರವನ್ನು ಅವಕ್ಕೆ ಮಾಡಲಾಗಿ, ಅವು ಮನ್ಮಥನ ಮನೆಗೆ ಹೋಗಿ ಆ ಮನ್ಮಥನಿಗೆ ಈ ಸುದ್ದಿಯನ್ನು ಹೇಳಲಿಕ್ಕೆ ಹೊರಟು ಹೋದವು !" (ಎಂದು ಚಾತುರ್ಯದಿಂದ ಉತ್ತರಿಸಿದಳು. ಪೂರ್ಣಚಂದ್ರನು ಮನ್ಮಥನ ಸ್ನೇಹಿತನು. ಆದರೆ ಇಲ್ಲಿ ಆಗಿರುವುದು ಅರ್ಧಚಂದ್ರನ ರೂಪು ; ಆದ್ದರಿಂದ ಮನ್ಮಥನಿಗೆ ಹೇಳಿ ನಿನಗೆ ತಕ್ಕ ಶಿಕ್ಷೆ ವಿಧಿಸುವಂತೆ ತಿಳಿಸಲು ಹೋಗಿವೆ ಎಂಬುದು ಧ್ವನಿತವಾಗುವ ಅರ್ಥ). ವ|| ಮತ್ತು ೧೮೩. "ಎಲೈ ಎಳೆಯ ಪ್ರಾಯದವಳೇ, ನೀನು ನಲ್ಲಳೇನು ? ಹೇಳು. ಎಳೆ ಎಳೆಯಾದ ನಿನ್ನ ಮುಂಗುರುಳ ಕಾಂತಿ ಎಲ್ಲಿದೆ ಹೇಳು ? ನೀನು ಅಬಳೆಯೇ ಆಗಿದ್ದೀಯೆ (ಅಂದರೆ ಸ್ತ್ರೀಯಳೇ ಆಗಿದ್ದೀಯೆ ; ಇದು ನಿಜ, ಆದರೆ) ಬೇರೆ ಮಾತೇನು ? ತಿಳಿದು ನೋಡಿದರೆ ನೀನು ಅಬಲೆಯೇನು ? ಅಲ್ಲ ವೃದ್ಧೆಯೇ ಆಗಿದ್ದೀಯೆ." (ತರುಣಜನ ಭೋಗಯೋಗ್ಯವಾದ ವಯಸ್ಸು ನಿನಗೆ ಇದೆಯೇ ? ಎಂದು ಪರಿಹಾಸೋಕ್ತಿಯನ್ನಾಡುವನು). ವ|| ಹೀಗೆನ್ನುತ್ತಿರುವ ಮಾತುಗಳನ್ನು ಕೇಳಿ, ವಿನೋದವೆಂಬ ಮಕರಂದಕ್ಕೆ ದುಂಬಿಯೋಪಾದಿಯಲ್ಲಿರುವ ರಾಜಶೇಖರಮಹಾರಾಜನು ನಸುನಗುತ್ತ ಬರುತ್ತಿರಲು, ಮುಂದೆ ಒಂದು ಚಂದ್ರಕಾಂತಶಿಲೆಯ ರಮಣೀಯವಾದ ಜಗುಲಿಯ ಮೇಲೆ, ಯೌವನಮದದಿಂದ ಉನ್ಮತ್ತಳಾದ ವೇಶ್ಯೆಯೊರ್ವಳು (ಸುತ್ತು

ಚಂ॥ ಬಿಡುಮುಡಿ ಬೆನ್ನೊಳಾಡೆ ಕುರುಳುಂ ಫಣೆಯೊಳ್ಕುಣಿದಾಡೆ ಪೊಣ್ಮ ಪೊಂ
ಗೊಡವೊಲೆಯಲ್ಲಿ ಹಾರವೊಲೆದಾಡೆ ನಿಜಶ್ವಸಿತೋರುಸೌರಭ
ಕ್ಕೊಡನೆಡೆಯಾಡೆ ತುಂಬಿ ಮಿಳಿರ್ದಾಡೆ ಕಟಾಕ್ಷಮರೀಚಿಕುಂಡಲಂ
ಬಿಡದಮರ್ದಾಡೆ ಗಂಡನೊಡನಾಡಿದಳಂಗನೆ ಚಂಡನಳ್ತಿಯಿಂ ೧೮೪

ತೋಟಕ॥ ಜಡಿವುತ್ತಿರೆ ನುಣ್ಮೊಲೆಯುಂ ಮುಡಿಯುಂ
ಪೊಡರುತ್ತಿರೆ ಪೂರ್ಣಘನಂ ಜಘನಂ
ಸೆಡೆವುತ್ತಿರೆ ತೆಳ್ನಡುವುಂ ತೊಡೆಯುಂ
ಪೊಡೆದಳ್ ಪಿಡಿದಳ್ ಪುಟಚೆಂಡನವಳ್ ೧೮೫

ಮ॥ಸ್ರ॥ ಸಿರಿಗಾನಾವಾಸಮಾದೆಂ ಹರಿಗೆ ನಯನಮಾ ಬೊಮ್ಮನೆನ್ನಾತ್ಮಜಂ ಭಾ
ಸ್ಕರನೆನ್ನಾಪ್ತಂ ನೋಡದೆನ್ನೊಂದಳವನತಿ ಕಳಂಕಾಶ್ರಯಂ ರಾಹುದಷ್ಟಂ
ಚಿರದೋಷಾವಿಷ್ಟನಾದಂ ಕ್ಷಯಿ ಪಗೆತನಗೋಡಂ ಗಡಾ ಎನ್ನೊಳೀ ಚಂ
ದಿರನೆಂದಂಭೋರುಹಂ ಪೊಯಿದಪುದಿದನೆನೆ ತತ್ಪಾಣಿ ಪೊಯ್ದತ್ತು ಚಂಡಂ ೧೮೬

ವರಿದ) ಅನೇಕ ಜನ ವೇಶ್ಯಾಜನಮಧ್ಯದಲ್ಲಿ ೧೮೪. "ಬಿಚ್ಚಿದ ಮುಡಿಯು ಬೆನ್ನ ಮೇಲೆ ಹಾರಾಡುತ್ತಿರಲು, ಮುಂಗುರುಳು ಹಣೆಯ ಮೇಲೆ ಕುಣಿದಾಡುತ್ತಿರಲು, ಹೊರ ಹೊಮ್ಮಿ ನಿಂತ ಬಂಗಾರದ ಕಲಶಗಳಂತಿರುವ ಮೊಲೆಗಳ ಮೇಲೆ ಕೊರಳಲ್ಲಿ ಧರಿಸಿದ್ದ ಹಾರವು ತೂಗಾಡುತ್ತಿರಲು, ದುಂಬಿಗಳು ಅವಳು ಬಿಡುತ್ತಿರುವ ಉಸುರಿನ ಸುಗಂಧಕ್ಕೆ ಎಳಸಿ ಮುತ್ತುತ್ತಿರಲು, ಕಡೆಗಣ್ಣುಗಳ ಕಾಂತಿಯು ತುಳುಕಾಡುತ್ತಿರಲು, ಕಿವಿಯಲ್ಲಿ ಧರಿಸಿದ್ದ ಆಭರಣಗಳು ತಪ್ಪದೆ ತೂಗುತ್ತಿರಲು ತನ್ನ ನಲ್ಲನೊಡನೆ ಪ್ರೀತಿಯಿಂದ ಆ ಅಂಗನೆಯು ಚೆಂಡನ್ನು ಆಡುತ್ತಿದ್ದಳು. ೧೮೫. ನುಣ್ಣನೆಯ ಮೊಲೆಗಳೂ ಮತ್ತು ಮುಡಿಯೂ ಜಡಿಯುತ್ತಿದ್ದವು ; ವೃತ್ತಾಕಾರವಾದ ಕರ್ಕಶವಾದ ಮೊಲೆಗಳೂ ಜಘನವೂ ಕಂಪಿಸುತ್ತಿದ್ದವು; ತೆಳ್ಳಗಿರುವ ನಡುವೂ ತೊಡೆಗಳೂ ಬಳುಕಾಡುತ್ತಿದ್ದವು ; (ಹೀಗಿರುವ ಆ ಜಾರೆಯೂ ತನ್ನ ಪ್ರಿಯಕರನೊಡನೆ ಆಡುತ್ತ) ಪುಟಚೆಂಡನ್ನು ಹೊಡೆಯುತ್ತಿದ್ದಳು ಮತ್ತು ಹಿಡಿಯುತ್ತಿದ್ದಳು. ೧೮೬. ಲಕ್ಷ್ಮಿಗೆ ನೆಲೆಮನೆಯಾದೆನು ; ವಿಷ್ಣುವಿಗೆ ನೇತ್ರವಾದೆನು ; ಬ್ರಹ್ಮನು ನನ್ನ ಮಗನು ; ಸೂರ್ಯನು ನನ್ನ ಬಂಧುವು ; ಇಂಥ ನನ್ನ ಈ ರೀತಿಯ ಸಾಮರ್ಥ್ಯವನ್ನು ನೋಡದೆ ನನ್ನಲ್ಲಿ ಹಗೆತನವನ್ನು ಹೊಂದಿದ್ದರಿಂದ ಚಂದ್ರನು ಕಲಂಕಕ್ಕೆ ಆಶ್ರಯನಾದನು ; ರಾಹುವಿನಿಂದ ಕಚ್ಚಿಸಿಕೊಳ್ಳಲ್ಪಟ್ಟನು ; ಚಿರಕಾಲ ಕತ್ತಲೆಯಿಂದ ಆವರಿಸಲ್ಪಟ್ಟನು ; ಕ್ಷಯಗೊಂಡನು. ಹೀಗೆಂದು ಕಮಲವು ಆ ಚಂದ್ರನನ್ನು ಹೊಡೆಯುತ್ತಿರುವುದೋ ಎಂಬ ಹಾಗೆ ಆ ಸ್ತ್ರೀಯು ತನ್ನ ಕೈಗಳೆಂಬ ಕಮಲ

ವ॥ ಅಂತವಳಂದವಂ ಕಂಡು ಇದು ನೋಟಕಜೊಜಗರ್ತೆರ್ದೆಯೊಳ್ ಕಂತುಕಾಲಾಗ್ನಿಯಂ ಪೊಯ್ವಂದಮಲ್ಲದೆ ಕಂತುಕಮಂ ಪೊಯ್ವಂದಮಲ್ತೆಂದು ನಾಗರಿಕಂ ಸೊಲ್ಲಿಸುತ್ತುಂ ಬರೆವರೆ ಮತ್ತಮೊಂದು ಬಿತ್ತರಂಬೆತ್ತ ಬಿಜ್ಜರದ ಸೌಧಾಂಗಣದೊಳ್ ಕೈಗೈದ ಪದ್ಮರಾಗ ರುಚಿನಿಚಯ ಕವಚಿತ ಸಮುತ್ತುಂಗ ಶಾತಕುಂಭಸ್ತಂಭಂಗಳಿಂ ಸಮುಚಿತಸ್ಥಾನದೊಳಿರಿಸಿ ನಿರ್ಮಿಸಿದ ಮರಕತಾದಿ ಮಣಿಮಯ ಮಯೂರಮಂಡಿತ ಮಧ್ಯಸ್ಥಳತುಳಾದಂಡದಿನೆಡೆಯೊಳ್ ತೊಡರ್ಚಿದಮಳ ರಮಣೀಯ ಮಣಿಮುಕುರ ಘನಕಲಶಘಂಟಿಕಾಝಣಝಣಿತ ಕಿಂಕಿಣೀಜಾಲ ಮಾಲಿಕಾಪಙ್ತಿಯಿಂ ತುದಿವಳಸಿನೊಳೆಳಲೆವಿಟ್ಟಳವಡಿಸಿದ ರುಚಿರಚಾಮರ ಹೇಮಚಂಪ ಕೋದ್ದಾಮದಾಮ ವಿಚಿತ್ರ ಚಿತ್ರಾಂಬರವಿತಾನದಿನಮರ್ಚಿ ರಚಿಸಿದ ಕಮನೀಯ ತಪನೀಯ ಶೃಂಖಲಾಚತುಷ್ಕ ಸಂಘಟಿತ ಸಮುಜ್ಜ್ವಳ ವಜ್ರಮಣಿಪರ್ಯಂಕಿತ ಪಟ್ಟದಿನಳಂಕೃತಿವೆತ್ತೆಸೆವ ನವಿಲುಯ್ಯಲೆಡೆಗನಂಗಲಕ್ಷ್ಮಿಯಂತೆ ಸಖೀಜನಂ ಬೆರಸು ಬಂದಾಂದೋಳ ಕೇಳೀಸಮಯ ಸಮುಚಿತೋಪಚಾರಮಂ ಮೆಱೆದು

ಗಳಿಂದ ಚೆಂಡೆಂಬ ಚಂದ್ರನನ್ನು ಹೊಡೆಯುತ್ತಿದ್ದಳು. ವ|| ಈ ರೀತಿಯ ಅವಳ ಚೆಂಡಿನಾಟದ ರೀತಿಯನ್ನು ಕಂಡು ನಾಗರಿಕನು, ಇದು ನೋಡುವ ವಿಟರ ಹೃದಯದಲ್ಲಿ ಮನ್ಮಥಸಂಬಂಧದ ಕಾಲಾಗ್ನಿಯನ್ನೇ ಹೊಯ್ಯುವ ರೀತಿಯಲ್ಲದೆ ಚೆಂಡನ್ನು ಹೊಡೆದಾಡುವ ರೀತಿಯಲ್ಲವೆಂದು ಮಾತನಾಡುತ್ತ ಮುಂದಕ್ಕೆ ಬರುತ್ತಿರಲು, ಮತ್ತೊಂದು ವಿಸ್ತಾರವಾದ ವಜ್ರಮಯವಾದ ಮೇಲುಪ್ಪರಿಗೆಯ ಮನೆಯ ಮುಂದಿನ ಅಂಗಣದಲ್ಲಿ, ಪದ್ಮರಾಗಮಣಿಯ ಕಾಂತಿಯ ಸಮೂಹಗಳ ಕವಚದಿಂದ ಮುಚ್ಚಿದ ಬಂಗಾರದ ಕಂಬಗಳು ನೆಡಲ್ಪಟ್ಟಿದ್ದವು. ಆಯಾಯ ಸ್ಥಾನಗಳಲ್ಲಿ ಮರಕತವೇ ಮೊದಲಾದ ಮಣಿಮಯವಾದ ಮಯೂರಪಕ್ಷಿಗಳನ್ನು ಕೆತ್ತಿ, ಮಧ್ಯದಲ್ಲಿ ತುಲಾದಂಡಗಳು ಸೇರಿಸಲ್ಪಟ್ಟಿದ್ದವು. ಅವುಗಳ ಪಕ್ಕದಲ್ಲಿ ರಮಣೀಯವಾದ ರತ್ನದ ಕನ್ನಡಿಗಳು ಅಳವಡಿಸಲ್ಪಟ್ಟದ್ದು, ಶ್ರೇಷ್ಠವಾದ ಕಲಶಗಳು, ಗಂಟೆಗಳು, ಝಣಝಣತ್ಕಾರ ಮಾಡುವ ಗೆಜ್ಜೆಗಳ ಸಮೂಹದ ಸರಗಳ ಸಾಲುಗಳಿಂದ ಕಂಗೊಳಿಸುತ್ತಿದ್ದವು. ತುದಿಯಲ್ಲಿ ಸುತ್ತಲೂ ಜೋತಾಡುವ ಹಾಗೆ ಇಳಿಬಿಟ್ಟ ಬಂಗಾರ ಹಿಡಿಕೈಗಳುಳ್ಳ ಚಾಮರಗಳಿಂದಲೂ, ಸಂಪಿಗೆಹೂವುಗಳ ಸಾಲು ಸರಗಳಿಂದಲೂ, ಚಿತ್ರವಿಚಿತ್ರವಾದ ಬಟ್ಟೆಗಳ ಸಮೂಹದಿಂದ ಆಚ್ಛಾದಿಸಿ ಅಲಂಕರಿಸಲ್ಪಟ್ಟು, ಮನೋಹರವಾಗಿರುವುದಾಗಿಯೂ, ಬಂಗಾರದ ಸರಪಳಿಗಳನ್ನು ನಾಲ್ಕು ದಿಕ್ಕಿನಲ್ಲಿ ಇಳಿಬಿಡಲ್ಪಟ್ಟದಾಗಿಯೂ ಆದ ವಜ್ರಮಣಿಯಿಂದ ಮಾಡಿದ ತೂಗುಮಂಚದುಯ್ಯಾಲೆಯ ಮಣೆಯ ಮೇಲೆ ಅಲಂಕಾರಗೊಂಡು ಶೋಭಿಸುವ ನವಿಲುಯ್ಯಲೆಡೆಗೆ ಮನ್ಮಥ ಲಕ್ಷ್ಮಿಯ ಹಾಗೆ ಸಖೀಜನರಿಂದ ಕೂಡಿ ಬಂದು, ಉಯ್ಯಾಲೆಯಾಟದ ಸಮಯದ ಸಮುಚಿತವಾದ ವಿಲಾಸವನ್ನು ಮೆರೆಯುವವಳಾಗಿ (ಓರ್ವ

ಉ॥ ಏಱಿ ಮದಂ ಮನೋಜಜಯಲಕ್ಷ್ಮಿಗೆ ಪೂರ್ಣವಿಳಾಸವಾರ್ಧಿ ನೀ
ರೇಱಿ ಸಖೀಜನಕ್ಕೆ ಪದೆದೀಕ್ಷಪರಂಗದೊಳಂಗಜಾಗ್ನಿ ಕಾ
ಯ್ಪೇಱಿ ನಿಜಾಂಘ್ರಿಪಂಕಜ ನಿಪಾತಭಯಂ ಶಶಿಗೇಱಿ ನೀಱಿ ತಾ
ನೇಱಿದಳುಯ್ಯಲಂ ಬಗೆಗೆ ಸಂತಸವೇಱಿ ವಸಂತರಾಜನಾ ೧೮೭

ವ॥ ಅಂತೇಱಿ ಮಣೆಯುಂ ಮೆಟ್ಟಿ ಮಣಿದುನಿಂದು

ಛಂದೋವೃತ್ತ॥ ಮೆಯ್ಯ ಕುಂಕುಮಮಿನದ್ಯುತಿಯೆತ್ತಂ ಪರ್ಬಿರೆ ಬಿರ್ಚದ ಚಕ್ರಮುಂ
ರಯ್ಯಮಾಗುತಲರ್ದಬ್ಜಮುಮಾ ಸಿತಾಂಶುಗೆ ದಾಳಿಯ ಪೋಪವೋಲ್
ಸುಯ್ಯಗಾಳಿಗಲೆವಂಚಲದಿಂದಂ ತೋರ್ಪ ಕುಚಂ ಮೊಗವೊಪ್ಪಲಂ
ದುಯ್ಯಲಾಡಿಸುತೆ ನೋಳ್ಪರ ಕಣ್ಣಂ ಕಾಮಿನಿಯಾಡಿದಳುಯ್ಯಲಂ ೧೮೮

ವ॥ ಮತ್ತಮೊರ್ವಳಪೂರ್ವ ಸೌಂದರ್ಯವತಿ ತನ್ನ ಪೊನ್ನ ಕನ್ನೆಲವಾಡದ ಕೆಲದ ರಾಜಾಂಗಣದ ಪಚ್ಚೆಯ ಕುಟ್ಟಿಮಸ್ಥಳದೊಳಳವಟ್ಟ ರನ್ನದುಯ್ಯಲನೇಱಿ ಚಂದ್ರಿಕಾಸಾಂದ್ರ ಪೀಯೂಷವಾರ್ಧಿಯೊಳೋಲಾಡುತ್ತೊಗೆತರ್ಪ ಕಮಳೆಯಂತೆ ಕಮನೀಯತೆಯನಪ್ಪುಕೆಯ್ದು

ವಿಲಾಸಿನಿಯು) ೧೮೭. (ತೂಗುಮಂಚವನ್ನೇರಲು) ಮನ್ಮಥಜಯಲಕ್ಷ್ಮಿಗೆ ಮದ ವೇರಿತು ; ಸಖೀಜನರುಗಳಿಗೆ ಪೂರ್ಣವಾಗಿ ವಿಲಾಸವೆಂಬ ಸಮುದ್ರವು ನೀರೇರಿದಂತಾಯಿತು; ಸಂತೋಷಗೊಂಡು ನೋಡುವವರಲ್ಲಿ ಮನ್ಮಥಾಗ್ನಿಯು ಕಾವೇರಿತು ; ಪಾದ ಕಮಲಗಳ ಆಘಾತದ ಭಯವು ಚಂದ್ರಕಾಂತಶಿಲೆಗಾಯಿತು. (ಹೀಗೆ ಆಗಲು) ವಸಂತ ರಾಜನ ನೀರೆಯಂತಿರುವ ಆ ವೇಶ್ಯೆಯು ಸಂತೋಷಗೊಂಡ ಮನದಿಂದ ಕೂಡಿದವಳಾಗಿ ತೂಗುಯ್ಯಾಲೆಯನ್ನೇರಿದಳು. ವ॥ ಹಾಗೆ ಆ ಉಯ್ಯಾಲೆಯನ್ನೇರಿ, ಆ ತೂಗು ಯ್ಯಾಲೆಯ ಮಣೆಯನ್ನು ಮೆಟ್ಟಿ ಮಣಿದು ನಿಂತು ೧೮೮. ಮೈಗೆ ತೊಡೆದ ಕಸ್ತೂರಿ ಕುಂಕುಮವೆಂಬ ಸೂರ್ಯಪ್ರಕಾಶವು ಎಲ್ಲ ಕಡೆಗೂ ಹಬ್ಬಲಾಗಿ, ಜೊತೆಗೂಡಿದ್ದ ಮೊಲೆ ಗಳೆಂಬ ಚಕ್ರವಾಕಪಕ್ಷಿಗಳೂ, ರಮ್ಯವಾಗಿ ಅರಳಿದ್ದ ಮುಖವೆಂಬ ಕಮಲವೂ ಚಂದ್ರನ ಮೇಲೆ ದಾಳಿಯನ್ನಿಡಲು ಹೊರಟಿವೆಯೋ ಎಂಬಂತೆ ಇತ್ತು. ಉಸುರಿನ ಗಾಳಿಗೆ ಅಲ್ಲಾಡುವ ಸೀರೆಯ ಸೆರಗಿನಿಂದಲೂ, ಎದ್ದು ಕಾಣುವ ಮೊಲೆ ಮತ್ತು ಮುಖದಿಂದಲೂ, ಒಪ್ಪುತ್ತಿರುವ ಅವಳು ನೋಡುವವರ ಕಣ್ಣುಗಳನ್ನು ಜೋಕಾಲಿಯಾಡಿಸುತ್ತ, ಜೋಕಾಲಿ ಯನ್ನು ಜೀಕಿದಳು. ವ॥ ಮತ್ತೊಬ್ಬ ಅಪೂರ್ವಸೌಂದರ್ಯಾವತಿಯು ತನ್ನ ಬಂಗಾರದ ಮೇಲುಪ್ಪರಿಗೆಯ ಪಕ್ಕದ ಸಭಾಂಗಣದ ಪಚ್ಚೆಗಲ್ಲಿನಿಂದ ಮಾಡಿದ ಜಗುಲಿಯ ಮೇಲೆ ಕಟ್ಟಲ್ಪಟ್ಟ ರತ್ನಮಯವಾದ ಜೋಕಾಲಿಯನ್ನೇರಿ, ದಟ್ಟವಾದ ಬೆಳದಿಂಗಳೆಂಬ ಅಮೃತದ ಮಡುವಿನಲ್ಲಿ ಓಲಾಡುತ್ತ ಬರುತ್ತಿರುವ ಲಕ್ಷ್ಮಿಯಂತೆ ಮನೋಹರತೆಯನ್ನು ಹೊಂದಿ

ಚಂ॥ ಗಗನಸರೋಜವಿಲ್ಲೆನಿಪ ವಾಕ್ಯಮನಿಲ್ಲೆನಿಪಂತೆ ನುಣ್ಮೊಗಂ
ಬಗೆಗೊಳೆ ಬಾನೊಳಾಗಳದಱೊಳ್ ಮಱಿದುಂಬಿಗಳಾಡುವಂತೆ ಮೆ
ಲ್ಲಗೆ ನೆಗೆದಾಡೆ ಮುಂಗುರುಳ ಸಾಲ್ಗಿರಿಗಳ್ ಹರಿಯೊಳ್ ಪಳಂಚಲಿಂ
ದಗಿಯದೆ ಪಾಱುವಂತೆಸೆಯೆ ಪೆರ್ಮೊಲೆಗಳ್ ಪದೆದುಯ್ಯಲಾಡಿದಳ್ ೧೮೯

ವ॥ ಮತ್ತಮೊರ್ವಳಲಘುತರ ನಿತಂಬಬಿಂಬ ಸಂಭ್ರಮಂ ಬೆರಸು ಸಖೀಜನ ಮಧ್ಯ ದೊಳಂದಂಬಡೆದಾಂದೋಳಮನಾಡುವಾಗಳ್

ಕಂ॥ ಅಳಿಪಿಂ ನೋಳ್ಪರ ದೃಷ್ಟಿಗ
ಳಳಂಕೆಯಿಂ ನೂಂಕೆ ಭೋಂಕನೊಗೆವವೊಲೆ ನಭ
ಸ್ಥಳಕಮರ್ದು ತನ್ಮನಂ ಬರ
ಸೆಳೆಯೆ ಮಗುಳ್ದಿಳಿವ ಭಾವಮಂ ಬಗೆಗಿತ್ತಳ್ ೧೯೦

ವ॥ ಇಂತೊಪ್ಪುವನಂತ ಕಾಂತ ಕಾಂತಾಸಂತಾನ ಕಂತುಪ್ರಧಾನ ನಾನಾ ವಿಳಸಿತ ವಿಳಾಸಮನಿಳಾಪತಿಸುತನಲ್ಲಿಗಲ್ಲಿಗೆ ನಿಂದು ನಿಂದೀಕ್ಷಿಸುತ್ತುಂ ಮಿತವಚನಮುಖಸಖನಿಕರದೊಳ್ ನುಡಿವುತ್ತುಂ ನಡೆತರುತ್ತುಮಿರ್ಪಾಗಳ್

ದವಳಾಗಿ ೧೮೯. ಗಗನದಲ್ಲಿ ಕಮಲವೇ ಇಲ್ಲ ಎನ್ನುವ ಮಾತನ್ನು ಸುಳ್ಳೆಂದು ಹೇಳುವ ಹಾಗೆ, ಆಕಾಶದಲ್ಲಿ ನುಣ್ಣನೆಯ ಮುಖವು ಕಮಲದಂತೆ ಮನೋಹರವಾಗಿತ್ತು ; ಆ ಕಮಲದಲ್ಲಿ ಮರಿದುಂಬಿಗಳು ಹಾರಾಡುವಂತೆ ಮುಂಗುರುಳುಗಳ ಸಾಲು ಮೆಲ್ಲನೆ ನೆಗೆದಾಡುತ್ತಿತ್ತು ; ಪರ್ವತಗಳು ಇಂದ್ರನೊಡನೆ ಪ್ರತಿಭಟಿಸಲು ಅಂಜದೆ ಹಾರುತ್ತಿ ವೆಯೋ ಎಂಬಂತೆ ದೊಡ್ಡ ದೊಡ್ಡ ಮೊಲೆಗಳು ಶೋಭಿಸುತ್ತಿದ್ದವು. (ಹೀಗಿರಲು) ಸಂತೋಷದಿಂದ ಮತ್ತೊಬ್ಬಳು ಜೋಕಾಲಿಯನ್ನಾಡಿದಳು. ವ॥ ಮತ್ತೊಬ್ಬ ದೊಡ್ಡ ದೊಡ್ಡ ನಿತಂಬಗಳನ್ನುಳ್ಳ ಸುಂದರಿಯು ಸಂಭ್ರಮದಿಂದ ಕೂಡಿದವಳಾಗಿ, ತನ್ನ ಸಖೀಜನರ ಮಧ್ಯದಲ್ಲಿ ಅಂದವಾಗಿ ಜೋಕಾಲಿಯನ್ನಾಡುವ ಸಮಯದಲ್ಲಿ ೧೯೦. ಪ್ರೀತಿಯಿಂದ ನೋಡುವವರ ದೃಷ್ಟಿಗಳೇ ಸೇರಿಕೊಂಡು ನೂಕಲಾಗಿ, ಒಮ್ಮೆಲೇ ನೆಗೆದು ಆಕಾಶಕ್ಕೇರಿ ಪುನಃ ಅವರ ಮನಸ್ಸುಗಳು ಅವಳನ್ನು ಎಳೆಯಲಾಗಿ ತಿರುಗಿ ಇಳಿದು ಬರುತ್ತಿರುವಳೋ ಎಂಬ ಭಾವನನ್ನು ಮನಸ್ಸಿಗುಂಟುಮಾಡುತ್ತ ಜೋಕಾಲಿಯನ್ನಾಡು ತ್ತಿದ್ದಳು. ವ॥ ಈ ರೀತಿಯಲ್ಲಿ ಶೋಭಿಸುವ ಅನೇಕ ಮನ್ಮಥವಿಲಾಸ ಪ್ರಧಾನರಾದ ಕಾಂತಾಜನ ಸಮೂಹದಿಂದ ಪ್ರಕಾಶಿಸುವ ಶೋಭೆಯನ್ನು ರಾಜಶೇಖರನು ಅಲ್ಲಲ್ಲಿ ನಿಂತು ನೋಡುತ್ತ, ಮಿತವಚನನೇ ಮೊದಲಾದ ಮಿತ್ರಸಮೂಹದಿಂದ ಕೂಡಿ, ಮಾತ

ಸ್ರ॥ ಕೂಜತ್ಕಾರಂಡ ಕಾದಂಬಕಮುಖ ವಿಕಿರತ್ಪಕ್ಷತಿಕ್ಷುಬ್ಧ ಬದ್ಧಾಂ
ಭೋಜಭ್ರಾಜಿಷ್ಣು ಬದ್ಧಾಧರಸರದಳಿ ಸುಸ್ನಿಗ್ಧ ಗಂಧಾನುಬಂಧಂ
ರಾಜಾಸ್ಯಾವೇಕ್ಷಣೋನ್ನಿದ್ರ ಕುಮುದಮುಕುಲಾರಂಭಿ ರಂಭೋರು ಕುಂಭೋ
ರೋಜ ಶ್ರೀಖಂಡಮಿಶ್ರ ಶ್ರಮಜಳ ಕಣಿಕಾಹಾರಚೋರಂ ಸಮೀರಂ ೯೯೧

ಕಂ॥ ಸುಳಿದುದು ಬೆಳಗಪ್ಪುದನೊ
ಲ್ದಿಳೆಯರಸಂಗೈದಿ ಪೇಳ್ವ ವೇಳಾಚರನಂ
ತಳಿಕುಳ ಮರಾಳಕಳ ಮಂ
ಜುಳರವ ವಿಜ್ಞಾಪನೈಕರವನಾ ಪವನಂ ೯೯೨

ವ॥ ಅನಂತರಂ

ಮ॥ಸ್ರ॥ ಪದಪಿಂದಿಂತಪ್ಪ ನಾನಾವಿಧ ರತಿರಸಸಂಮಿಶ್ರ ವೇಶ್ಯಾವಿಳಾಸಾ
ಸ್ಪದ ಚಂಚಚ್ಚಂದ್ರಿಕಾಸಂಪದಮೆ ಸಫಳಮಪ್ಪಂತೆವೋಲ್ಮಾಡಿ ಬಂದ
ಗ್ಗದ ಮಿತ್ರಶ್ರೇಣಿಯಂ ಮನ್ನಿಸಿ ಕಳುಪಿ ನಿಜಾಂತಃಪುರಕ್ಕೈದಿದಂ ಸಂ
ಮದಕೃದ್ಗೌರೀಶಪೂಜಾಹಿತಮತಿ ಶಿವಸಿದ್ಧಾಂತದುಗ್ಧಾಬ್ಧಿಚಂದ್ರಂ ೯೯೩

ನಾಡುತ್ತ ಬರುವ ಸಮಯದಲ್ಲಿ ೯೯೧. ಕೂಗುತ್ತಿರುವ ಕಾರಂಡಕಪಕ್ಷಿ, (ಕಮಲದ ಧೂಳಿನಿಂದ) ಬೂದುಬಣ್ಣದ ಗರಿಗಳನ್ನು ಹೊಂದಿದ ಹಂಸಪಕ್ಷಿಗಳೇ ಮೊದಲಾದುವುಗಳ ರೆಕ್ಕೆಗಳ ಬುಡದಲ್ಲಿ ಅಂಟಿ ಶೋಭಿಸುವ ಮಕರಂದದ ಸುವಾಸನೆಯನ್ನು ಅಪಹರಿಸಿದುದಾಗಿಯೂ, ಚಂದ್ರನ ಮುಖವನ್ನು ನೋಡುವುದರಲ್ಲಿ ಆಸಕ್ತವಾಗಿ ನಿದ್ರೆಗೆಟ್ಟ ಕನ್ನೈದಿಲೆಗಳ ಕಣ್ಣನ್ನು ಮುಚ್ಚಿಸಿದುದಾಗಿಯೂ, ಬಾಳೆಯ ಕಂಬಗಳಂತೆ ತೊಡೆಗಳನ್ನುಳ್ಳ, ದಪ್ಪನೆಯ ಮೊಲೆಗಳ ಪ್ರದೇಶದಲ್ಲಿ ಹಚ್ಚಿದ ಮಲಯಜಗಂಧಮಿಶ್ರವಾದ ಶ್ರಮಜಲದ ಸೂಕ್ಷ್ಮ ಕಣಗಳ ಹಾರವನ್ನು ಅಪಹರಿಸಿದುದಾಗಿಯೂ ಇರುವ ಮಂದಮಾರುತವು ಬೀಸಿತು. ೯೯೨. ಬೆಳಗಾಯಿತೆಂಬುದನ್ನು ಭೂಮಿಶ್ವರನಾದ ರಾಜಶೇಖರನಿಗೆ ವಿಜ್ಞಾಪಿಸಿಕೊಳ್ಳುವ ಹಾಗೆ ದುಂಬಿಗಳ ಸಮೂಹದ ಝೇಂಕಾರರವದಿಂದಲೂ, ಹಂಸಗಳ ಅವ್ಯಕ್ತ ಮಧುರವಾದ ಮಂಜುಳಧ್ವನಿಯಿಂದಲೂ, ಕೂಡಿದ ಆ ಮಂದಮಾರುತವು ಸುಳಿಯಿತು. ವ॥ ಅನಂತರ ೯೯೩. ಪ್ರೀತಿಯಿಂದ ಈ ರೀತಿಯ ನಾನಾ ವಿಧವಾದ ರತಿರಸದಿಂದ ಮಿಶ್ರವಾದ ವೇಶ್ಯಾಸ್ತ್ರೀಯರುಗಳ ವಿಲಾಸದಿಂದ ಕೂಡಿದ ಜೀವನದ ಪ್ರಕಾಶಮಾನವಾದ ಬೆಳದಿಂಗಳ ಸಂಪತ್ತು ಸಫಲಗೊಳ್ಳುವ ಹಾಗೆ ರಾತ್ರಿಯ ವಿಹಾರವನ್ನು ಮಾಡಿಸಿ, ಬಂದ ಮಿತ್ರರುಗಳ ಸಮೂಹವನ್ನು ಮನ್ನಣೆಯಿಂದ ಬೀಳ್ಕೊಟ್ಟು ಅವರವರ ಮನೆಗೆ ಕಳುಹಿಸಿ, ಶಿವಪೂಜಾದುರಂಧರನೂ, ಶಿವಸಿದ್ಧಾಂತವೆಂಬ ಕ್ಷೀರ ಸಾಗರಕ್ಕೆ ಚಂದ್ರಸ್ವರೂಪನೂ ಆದ ರಾಜಶೇಖರಮಹಾರಾಜನು ಅಂತಃಪುರವನ್ನು

ರಥೋದ್ಧತ॥ ಭೃಂಗವೇಣಿ ಶುಕವಾಣಿ ನಿರ್ಮಿತಾ
ನಂಗನೇತ್ರೆ ಸುಚರಿತ್ರೆ ನಿರ್ಜರೋ
ತ್ತುಂಗಸೇವ್ಯೆ ಮುನಿಭಾವ್ಯೆ ಶಂಕರಾ
ರ್ಧಾಂಗಸಂಗೆ ಜಯ ಸರ್ವಮಂಗಳೇ ೧೯೪

ಗದ್ಯ ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣಮಹಾಪ್ರಭಾಪಟಲ ಪರಿವೃತ ಪರಶಿವಶ್ರೀಪಾದನಖಚಂದ್ರಸಾಂದ್ರ ರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯಕವಿತಾವಿಶಾರದ ಶ್ರೀ ಷಡಕ್ಷರದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳಪ್ರಬಂಧದೊಳ್ ರಾಜಶೇಖರನರೇಂದ್ರ ಚಂದ್ರಿಕಾ ವಿಹರಣ ವರ್ಣನಂ

ಅಂತು ಆಶ್ವಾಸ ೧೧ಕ್ಕಂ ಪದ ೧೪೦೮ಕ್ಕಂ ಮಂಗಳಮಹಾ ಶ್ರೀ

## ಏಕಾದಶಾಶ್ವಾಸಂ
### ಸಂಪೂರ್ಣಂ

ಪ್ರವೇಶಿಸಿದನು. ೧೯೪. ದುಂಬಿಗಳಂತೆ ವೇಣಿಯುಳ್ಳವಳೂ, ಶುಕವಾಣಿಯೂ, ನಿರ್ಮಿಸಲ್ಪಟ್ಟ ಅನಂಗನೇತ್ರೆಯೂ, ಸಚ್ಚರಿತ್ರೆಯೂ, ದೇವಾನುದೇವತೆಗಳ ಶ್ರೇಷ್ಠ ಸೇವೆಯನ್ನು ಸ್ವೀಕರಿಸುವವಳೂ, ಮುನೀಶ್ವರರುಗಳಿಂದ ಸ್ತೋತ್ರಮಾಡಿಸಿಕೊಳ್ಳುವವಳೂ, ಶಂಕರನ ಅರ್ಧಾಂಗದಲ್ಲಿ ಕೂಡಿಕೊಂಡಿರುವವಳೂ ಆದ ಸರ್ವಮಂಗಳೆಗೆ ಜಯ ಜಯು. ಗದ್ಯ॥ ಈ ಗದ್ಯ ಪದ್ಯ ರೂಪವಾದ ಕಾವ್ಯವು ವಿಶೇಷವಾಗಿ ನಮಸ್ಕಾರವನ್ನು ಮಾಡುತ್ತಿರುವ ದೇವತಾಶ್ರೇಷ್ಠರಾದವರುಗಳ ಕಿರೀಟಗಳ ಕೊನೆಯಲ್ಲಿ ಕೆತ್ತಲ್ಪಟ್ಟ ನವರತ್ನಗಳ ಸಮೂಹದ ಅಧಿಕವಾದ ಕಾಂತಿಗಳಿಂದ ವ್ಯಾಪಿಸಿರುವ ಪರಶಿವನ ಶೋಭಾಯಮಾನವಾದ ಪಾದಗಳ ಉಗುರುಗಳೆಂಬ ಚಂದ್ರನ ದಟ್ಟವಾದ ಕಾಂತಿಯಿಂದ ನಿಬಿಡಗೊಂಡ ಬೆಳದಿಂಗಳಿಗೆ ರಮಣೀಯವಾದ ಚಕೋರಪಕ್ಷಿಯಂತಿರುವವನೂ, ಶೃಂಗಾರಾದಿ ರಸಜ್ಞರಾದವರುಗಳಿಂದ ಮನ್ನಣೆಗೊಳ್ಳಲ್ಪಟ್ಟವನೂ, ಉಭಯಭಾಷಾಕವಿತ್ವದಲ್ಲಿ ವಿಶಾರದನೂ ಎನಿಸಿದ ಷಡಕ್ಷರದೇವ ಕವಿಯಿಂದ ರಚಿಸಲ್ಪಟ್ಟ ರಾಜಶೇಖರವಿಳಾಸವೆಂಬ ವಿಸ್ತಾರವಾದ ಪ್ರಬಂಧದಲ್ಲಿ ರಾಜಶೇಖರನರೇಂದ್ರನ ಚಂದ್ರಿಕಾ ವಿಹಾರ ವರ್ಣನೆ

## ಏಕಾದಶಾಶ್ವಾಸ
### ಮುಗಿದುದು

# ದ್ವಾದಶಾಶ್ವಾಸಂ

ಕಂ॥ ಶ್ರೀಕಾಳೀನವಯೌವನ
ಮಾಕಂದ ಶುಕಂ ಶುಕಾದಿ ಮುನಿಜನಹೃದಯಾ
ಬ್ಜಾಕರಮರಾಳನಮಳಗು
ಣಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ವ॥ ಮತ್ತಮಾಗಳ್ ಬ್ರಾಹ್ಮೀಮುಹೂರ್ತಮೆಂಬ ಪೂಜಾಮುಹೂರ್ತದಲ್ಲಿ

ಮ॥ಸ್ರ॥ ಹಿಮಸಂಮಿಶ್ರಾಂಬುವಿಂ ಮಜ್ಜನಮನೊಲವಿನಿಂ ಮಾಡಿ ದೇವಾಂಗಮಂ ತಾ
ಳ್ದಮಳಾಂಗಂ ಭೂತಿ ರುದ್ರಾಕ್ಷಮನಮರೆ ನಿಜಾಂಗಂಗಳೊಳ್ಧಾರಣಂಗೈ
ದು ಮಹಾಮಂತ್ರಾಂತರಂಗಂ ಸಮುಚಿತವಿಧಿಯಿಂ ಪೂಜಿಸುತ್ತಿರ್ದನಾನಂ
ದಮನಾದಂ ಪೊರ್ದಿ ಗೌರೀರಮಣನಡಿಗಳಂ ಶೈವವಿದ್ಯಾಸಮುದ್ರಂ ೨

ವ॥ ಅಂತುಮಾ ಮಹೀಕಾಂತನೇಕಾಂತದೊಳುಮಾಕಾಂತನನರ್ಚಿಸುತ್ತುಮಿರೆಯಿರೆ

ಮ॥ಸ್ರ॥ ಒದೆದುದ್ಯದ್ಗೇಹಪಾರಾವತದ ನಿನದಮಂ ತಾಮ್ರಚೂಡವ್ರಜೋನ್ನಾ
ದದ ಪೆರ್ಚಂ ಪೊಯ್ದಲಿಧ್ವಾನಮನೆ ತುಳಿದು ಗಾಣಿಕ್ಯಹಮ್ರ್ಯಾಗ್ರಗಾಯ
ತ್ಸುದತೀ ಸಂಗೀತತಾರಸ್ವರಮನಲೆದು ದಿಕ್ಪೂರಮಂ ಪರ್ಬಿ ರೋದೋಂ
ತರದೊಳೆತ್ತಂ ಸುತ್ತುತಿರ್ದತ್ತಭವಭವನ ಸಂಪೂರಿತಂ ಶಂಖನಾದಂ ೩

೧. ಶ್ರೀ ಕಾಳಿಕಾದೇವಿಯ ನವಯೌವನವೆಂಬ ಸೀಮಾವಿನ ಮರಕ್ಕೆ ಗಿಳಿಯೋ ಪಾದಿಯಲ್ಲಿರುವವನೂ, ಶುಕಮಹರ್ಷಿಯೇ ಮೊದಲಾದ ಮುನಿಜನರುಗಳ ಹೃದಯವೆಂಬ ಕಮಲದಲ್ಲಿ ಹಂಸಪಕ್ಷಿಯಂತಿರುವವನೂ, ಶ್ರೇಷ್ಠವಾದ ಗುಣಗಳಿಗೆ ಆಕರನಾಗಿರುವವನೂ ಆದ ಶಿವಲಿಂಗನು ನಮಗೆ ಸೌಖ್ಯವನ್ನು ಕೊಡಲಿ. ವ|| ಅನಂತರ ಬ್ರಾಹ್ಮೀ ಮುಹೂರ್ತವೆಂಬ (ನಸುಕಿನ) ಪೂಜಾಮುಹೂರ್ತದಲ್ಲಿ ೨. ರಾಜಶೇಖರನು ಶ್ರೀಗಂಧ ಪಚ್ಚಕರ್ಪೂರಮಿಶ್ರವಾದ ನೀರಿನಿಂದ ಸ್ನಾನವನ್ನು ಪ್ರೀತಿಯಿಂದ ಮಾಡಿದವನಾಗಿ, ಶುಭ್ರವಾದ ಮಡಿಯನ್ನುಟ್ಟು, ಪವಿತ್ರಾಂಗದಲ್ಲಿ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿದವನಾಗಿ, ಮಹಾಮಂತ್ರವಾದ (ಪಂಚಾಕ್ಷರಿಯಿಂದ ಕೂಡಿದ) ಅಂತರಂಗವುಳ್ಳವನಾದನು. (ಹೀಗೆ) ಯಥಾಯೋಗ್ಯವಾದ ವಿಧಿಯನ್ನನುಸರಿಸಿ, ಶೈವವಿದ್ಯಾಸಮುದ್ರನೆನಿಸಿದ ರಾಜಶೇಖರಮಹಾರಾಜನು ವಿಶೇಷಾನಂದಭರಿತನಾಗಿ ಗೌರೀರಮಣನಾದ ಪರಮೇಶ್ವರನ ಪಾದಗಳನ್ನು ಪೂಜಿಸುತ್ತಿದ್ದನು. ವ|| ಆ ರೀತಿಯಲ್ಲಿ ರಾಜಶೇಖರಮಹಾರಾಜನು ಏಕಾಂತಸ್ಥಳವಾದ ಶಿವಪೂಜಾಗೃಹದಲ್ಲಿ ಉಮಾಕಾಂತನಾದ ಪರಮೇಶ್ವರನನ್ನು ಪೂಜಿಸುತ್ತ ಇರುತ್ತಿರಲಾಗಿ ೩. ಪರಮೇಶ್ವರನ ದೇವಾಲಯದಿಂದ ಊದಿದ ಶಂಖಧ್ವನಿಯು ಉನ್ನತವಾದ ಗೃಹಗಳಲ್ಲಿ ಸಾಕಿದ ಪಾರಿವಾಳಗಳ ಧ್ವನಿಯನ್ನು ಕೊಡೆದು, ಕೋಳಿಗಳ ಏರಿದ ಸ್ವರದ ಕೂಗನ್ನು ಹೊಯ್ದು, ಭೃಂಗಗಳ ಝೇಂಕಾರವನ್ನು ತುಳಿದು, ಗಣಿಕಾಸ್ತ್ರೀಯರ ಉಪ್ಪರಿಗೆಗಳಲ್ಲಿ ತಾರಸ್ವರದಲ್ಲಿ

ಕಂ॥ ನೆರೆದಿರುಳಿರುಳಿಜಿೞಿಯನೊಳುಜಿೞಿ
ಸುರತಾಂತ್ಯದ ಮೂರ್ಛೆದಳೆಯೆ ಕೆದರ್ದವಳಳಕೋ
ತ್ಕರಮೆನೆ ಮುಗುಳ್ದುಂ ಮುಬ್ಬಾ
ವರಿಸಿದುದೆಲ್ಲೆಡೆಯೊಳಸತಿಯರ್ ನಲಿಯಲೊಡಂ ೪

ಮ॥ಸ್ರ॥ ಪೊದೆವುತ್ತಂ ಮೇಲುದಂ ಮೆಲ್ಲಡಿಯಿಡುತಿಳೆಯೊಳ್ಮೆಲ್ಲನಲ್ಲಲ್ಲಿ ನಿಂದಿ
ರ್ದಿದಿರಂ ಕಣ್ಮಿಂಚದಂತೀಕ್ಷಿಸುತೆಡಬಲದೊಳ್ ಸೊಪ್ಪುಳಾರ್ಕೈವುತಂ ಬಿ
ರ್ಚಿದ ನೀವೀಬಂಧಮಂ ಬಂಧಿಸುತಳಿದಳಕಶ್ರೇಣಿಯುಂ ತಿರ್ದುತಂ ನು
ಣ್ಗದಪಂ ಪತ್ತಿರ್ದ ತಾಂಬೂಲರಸಮನೊರಸುತ್ತೈದಿದಳ್ ಪಾಂಸುಯೊರ್ವಳ್ ೫

ವ॥ ಪೆಱತೊಂದು ತಾಣದಲ್ಲಿ

ಕಂ॥ ಅಸವಸದಿಂ ಸುಸಿಲೆಸಗು
ತ್ತಸತಿ ಪೊದಲ್ವಾಱಿದಸಿತ ವಸನಮಿದೆಂದಾ
ಪೊಸಮುಬ್ಬನುಡಲ್ ತೆಗೆದತಿ
ಹಸನರಸಂಬಡೆದೊಸೆದ ಪಾಂಸುನ ಮೊಗಮಂ ೬

ಹಾಡುತ್ತಿರುವ ಸಂಗೀತಧ್ವನಿಯನ್ನು ಮುಚ್ಚಿ, ದಿಕ್ಪಾಲರುಗಳಿರುವ ಸ್ಥಳಗಳವರೆಗೂ ಹಬ್ಬಿ, ಆಕಾಶಮಂಡಲವನ್ನೆಲ್ಲ ವ್ಯಾಪಿಸಿತು. ೪. ರಾತ್ರಿಯೆಂಬ ಸ್ತ್ರೀಯು ತನ್ನ ಪ್ರಿಯನಾದ ಚಂದ್ರನೊಡನೆ ಕೂಡಿ ಸುರತಾನಂದ ಕಾರಣವಾಗಿ ಮೂರ್ಛೆಯನ್ನು ಹೊಂದಿದವಳಾಗಿರಲು, ಅವಳ ಕೆದರಿದ ಕೂದಲುಗಳ ಸಮೂಹವೋ ಎನ್ನುವಂತೆ (ಮತ್ತು) ಜಾರೆಯರು ನಲಿದಾಡುವಂತೆ ಎಲ್ಲೆಡೆಯಲ್ಲೂ ಮಬ್ಬು ಆವರಿಸಿತು. ೫. ಆ ಕತ್ತಲೆಯಲ್ಲಿ ಓರ್ವ ಜಾರಿಣಿಯು ಮೇಲುದನ್ನು ಹೊದ್ದುಕೊಳ್ಳುತ್ತ, ಭೂಮಿಯ ಮೇಲೆ ಮೆಲ್ಲ ಮೆಲ್ಲನೆ ಹೆಜ್ಜೆಯನ್ನು ಹಾಕುತ್ತ, ಅಲ್ಲಲ್ಲಿ ನಿಂತುಕೊಳ್ಳುತ್ತ, ಎದುರಿಗೆ ತನ್ನ ಕಣ್ಣಿನ ಹೊಳಪು ಹೊಳೆಯದಂತೆ (ಎಚ್ಚರಿಕೆ ವಹಿಸಿ) ನೋಡುತ್ತ, ಎಡ ಬಲಗಳಲ್ಲುಂಟಾಗುವ ಸಪ್ಪಳವನ್ನು ಕೇಳುತ್ತ, ಬಿಚ್ಚಿಹೋದ ಸೀರೆಯ ನಿರಿಗೆಗಳ ಗಂಟನ್ನು ಪುನಃ ಕಟ್ಟಿಕೊಳ್ಳುತ್ತ, ಚೆಲ್ಲಾಪಿಲ್ಲಿಯಾಗಿದ್ದ ಕೂದಲುಗಳ ಸಮೂಹವನ್ನು ತಿದ್ದಿಕೊಳ್ಳುತ್ತ, ನುಣ್ಣನೆಯ ಕೆನ್ನೆಗಳಿಗೆ ಹತ್ತಿದ್ದ ತಾಂಬೂಲರಸವನ್ನು ಒರೆಸಿಕೊಳ್ಳುತ್ತ (ಮನೆಯಿಂದ) ಹೊರಹೊರಟಳು. ವ॥ ಬೇರೊಂದು ಸ್ಥಳದಲ್ಲಿ ೬. ಸ್ತ್ರೀಯೊಬ್ಬಳು ಅವಸರವಸರವಾಗಿ ರತಿಕ್ರೀಡೆಯಾಡುತ್ತ 'ಮೊದಲು ಜಾರಿದ ತನ್ನ ಕರಿಯ ಸೀರೆಯೇ ಇದು !' ಎಂದು ಆಗ ಹರಡಿದ ಮಬ್ಬನ್ನೇ ಉಡಲು ತೆಗೆದುಕೊಳ್ಳಲು ಪ್ರಯತ್ನಿಸುತ್ತ ತನ್ನ ಪ್ರಿಯನಾದವನ ಮುಖದಲ್ಲಿ ನಗೆಯರಸವು ಉಕ್ಕುವಂತೆ

ವ॥ ಮತ್ತವೊರ್ವಳ್

ಚಂ॥ ವಿಲುಲಿತ ಘರ್ಮವಾರಿಕಣದಿಂ ಕಿಸರೇಳ್ದಿಳಿತರ್ಪ ಗಂಡಮಂ
ಡಲಕೃತ ಪತ್ರಭಂಗಮೃಗನಾಭಿಜಮಂ ಬಳಿದಿಟ್ಟುರೋಜಮಂ
ಡಲದ ನಖಕ್ಷತಕ್ಕಧರದೊಳ್ತಲೆದೋರ್ಪ ರದಕ್ಷತಕ್ಕುರ
ಸ್ಥಲದ ರಸಾರ್ದ್ರಕುಂಕುಮಮನಂಕಿಸಿ ಜಾಣ್ಮೆಗೆ ಪಾಣ್ಬೆಯೆಯ್ದಿದಳ್ ೭

ವ॥ ಆ ಸಿತಗೆಯಲ್ಲದೆಯುಮನ್ಯಪ್ರದೇಶದಲ್ಲಿ

ಉ॥ ನೋಡಿದನಿಂತು ನೋಡಿ ರಸದಂಬುಲಮಂ ಸವಿದಿತ್ತು ಚುಂಬನಂ
ಮಾಡಿದನಿಂತುರೋಜಯುಗಳಂ ನಿಜವಕ್ಷದೊಳೊಪ್ಪಲಪ್ಪಿ ಮುಂ
ಡಾಡಿದನಿಂತು ತಳ್ತು ತನು ಜೊಂಪಿಸಿ ಜುಮ್ಮೆಡೆ ಸೋಂಕಿ ಸೊರ್ಕಿ ಮೈ
ಗೂಡಿದನಿಂತುಟೆಂದಸತಿ ತನ್ನವನಂ ನೆನೆವುತ್ತಮೈದಿದಳ್ ೮

ಕಂ॥ ಜಾ‍ಱೆ ನಿಱೆ ಜಾ‍ಱೆ ಸೋರ್ಮುಡಿ
ಜಾ‍ಱೆ ಬೆಮರ್ಜಾ‍ಱೆ ಮೇಲುದಂ ಮುಡಿದಲರ್ಗಳ್
ಜಾ‍ಱೆ ಮುದಂ ಜಾ‍ಱೆ ಮದಂ
ಜಾ‍ಱೆ ಪದಂ ಜಾ‍ಱೆ ಜಾರೆ ಜಾ‍ಱೆದಳೊರ್ವಳ್ ೯

ಮಾಡಿದಳು. ವ॥ ಮತ್ತೊಬ್ಬಳು ೭. ಜಾರಿಬೀಳುತ್ತಿರುವ ಬೆವರಿನ ಹನಿಗಳಿಂದ ಕೆನ್ನೆಯ ಮೇಲೆ ಬರೆದುಕೊಂಡಿದ್ದ ಮಕರಪತ್ರವೂ ಮತ್ತು ಹಚ್ಚಿಕೊಂಡಿದ್ದ ಕಸ್ತೂರಿಯೂ ನೆನೆದು ಅವುಗಳ ಆ ಕೆಸರು ಇಳಿಯುತ್ತಿತ್ತು. (ಅದನ್ನು) ಬಳಿದು ಕೊಂಡು (ತನ್ನ) ವೃತ್ತಾಕಾರವಾದ ಮೊಲೆಗಳ ಮೇಲೆ ಉಂಟಾದ ಪತಿಯ ಉಗುರಿನ ಗಾಯಕ್ಕೆ ಲೇಪಿಸಿಕೊಂಡಳು. ಅಧರದಲ್ಲಿ ಉಂಟಾಗಿದ್ದ ದಂತಕ್ಷತಗಳಿಗೆ ಎದೆಯ ಮೇಲಿನ ಕುಂಕುಮಕೇಸರಿಯನ್ನು ಬಳಿದುಕೊಂಡು ಬಹುಜಾಣ್ಮೆಯಿಂದ ಜಾರೆಯೊಬ್ಬಳು ಹೊರಟುಹೋದಳು. ವ॥ ಆ ಜಾರೆಯಲ್ಲದೆ .ಬೇರೆ ಪ್ರದೇಶದಲ್ಲಿ ೮. "ಈ ರೀತಿ ನೋಡಿದನು ; ನೋಡಿ ತಾಂಬೂಲವನ್ನು ಸವಿದು ನನಗೆ ಕೊಟ್ಟ, ಈ ರೀತಿ ಚುಂಬಿಸಿದನು ; ಹೀಗೆ ಎರಡೂ ಮೊಲೆಗಳನ್ನು ತನ್ನ ಎದೆಯಲ್ಲಿ ಸಂತೋಷದಿಂದ ಅಪ್ಪಿದನು ; ಈ ರೀತಿ ಮುಂಡಾಡಿದನು ; ಉತ್ಸಾಹಗೊಂಡ ಶರೀರವು ಜೊಂಪುಗೊಂಡು ಜುಮ್ಮೆನ್ನುತ್ತಿರಲು, ಸ್ಪರ್ಶಿಸಿ, ಸೊಕ್ಕೇರಿದವನಾಗಿ ಈ ರೀತಿ ಮೈಗೂಡಿದನು" ಎನ್ನುತ್ತ ಆ ಜಾರೆಯು ತನ್ನಲ್ಲಿ ತಾನು ರತಿಸುಖಾಪೇಕ್ಷೆಯ ಸೊಕ್ಕೂಕೂಡ (ಮನಸ್ಸಿನಿಂದ) ಜಾರುತ್ತಿರಲು (ಸವಿನೆನಪುಗಳನ್ನು) ನೆನೆಯುತ್ತ ಹೊರಟಳು. ೯. ಉಟ್ಟ ನಿರಿಗೆಯ ಗಂಟೂ, ಉದ್ದವಾದ ಮುಡಿಯೂ ಜಾರುತ್ತಿರಲು, ಬೆವರು ಮೈಮೇಲೆ ಹರಿಯುತ್ತಿರಲು, ಸೀರೆಯ ಸೆರಗೂ ಮುಡಿದ ಹೂವುಗಳೂ ಜಾರುತ್ತಿರಲು, ಸಂತೋಷವು ಕೈಮಿಕ್ಕುತ್ತಿರಲು (ಮಾಯವಾಗುತ್ತಿರಲು), ಇದ್ದ ಮದ ಅಳಿಯುತ್ತಿರಲು, ಹೆಜ್ಜೆಗಳೂ ಕೂಡ ಜಾರುತ್ತಿರಲು ಒಬ್ಬ ಜಾರೆಯು ಮನೆಯಿಂದ ಜಾರಿ

ವ॥ ಪೆಱತೊಂದು ತಾಣದೊಳ್

ಮ॥ಸ್ರ॥ ಮನೆಯಾಣ್ಮಂಗೊಡಿ ಮಂಚಾಗ್ರದೊಳೊಱಗಿರೆನುತ್ತಾಳಿಯಂ ಸಂತವಿಟ್ಟಾ
ಮನದಾಣ್ಮಂಗೂಡಿ ರತ್ಯಂತದ ಸೊಕವಡೆದೈತರ್ಪುದುಂ ಪಾಣ್ಬೆ ತತ್ಕಾಂ
ತನೊಳತ್ತಲ್ಕೂಡಿ ಸೌಖ್ಯಂಬಡೆದಿದಿರ್ವರೆ ತದ್ದೂತಿಯೋರೋರ್ವರೊಳ್ತ
ಮ್ಮನಿತುಂ ವೃತ್ತಾಂತಮಂ ಕೇಳ್ದಹಹಯೆನುತೆ ಕೈವೊಯ್ದು ನಕ್ಕಾಡುತಿರ್ದರ್ ೧೦

ವ॥ ಮತ್ತೊಂದು ಸಂಕೇತನಿಲಯದಲ್ಲಿ

ಚಂ॥ ಬಿಡು ಬಿಡು ಕೋಳಿ ಕೂಗಿದಪುದೆಮ್ಮವರೇಳ್ವರೆನುತ್ತೆ ಬಲ್ಪಿನಿಂ
ಬಿಡಿಸಿಕೊಳುತ್ತೆ ಸಂವರಿಸಿ ನೀವಿಯನುಳ್ಳುಡೆಯುಟ್ಟು ಬೀದಿಯೊಳ್
ನಡೆವೆಳಜೋಡೆ ಮೂಡಗಡೆ ಕೆಂಪನಭೀಕ್ಷಿಸಿ ಭೀತಿವಟ್ಟು ಕ
ಣ್ಗೆಡುತೆ ದವಾಗ್ನಿಗಂಡೆರಳೆಯಂತಿರ್ದೆ ಪೌವನೆಪಾಱೆ ಪಾಱೆದಳ್ ೧೧

ಕಂ॥ ಜವದಿನುಷಃಕಾಲವೃಷಂ
ತವೆ ಕದಡಿದುದೆನಿಸಿ ಮುರ್ಬುವೆಳಗಂ ತಳೆದೊ
ಪ್ಪುವ ಬಾಂಗೆಱೆಯೊಳ್ ಮೀಂಗಳ್
ತವಕದೊಳೆ ಮುಳುಂಗುವಂತಡಂಗಿದವಾಗಳ್ ೧೨

(ಅಗಲಿ) ಹೊರಟಳು ! ವ|| ಬೇರೊಂದು ಸ್ಥಳದಲ್ಲಿ ೧೦. ತನ್ನ ಮನೆಯ ಯಜಮಾನ ನೊಡನೆ ಮಂಚದ ಮೇಲೆ ಮಲಗಿರು ಎಂದು ತನ್ನ ದಾಸಿಗೆ ಸಮಾಧಾನಹೇಳಿ ಮಲಗಿಸಿ, (ತಾನು) ತನ್ನ ಮನಕ್ಕೊಪ್ಪಿದ ಕಾಂತನಲ್ಲಿ ಕೂಡಿ ಜಾರೆಯೊಬ್ಬಳು ರತಿಸುಖವನ್ನನು ಭವಿಸಿ ಬರುತ್ತಿದ್ದಳು. ಇತ್ತ ದಾಸಿಯೂ ಆ ಕಾಂತನಲ್ಲಿ ಕೂಡಿ ಸೌಖ್ಯವನ್ನು ಹೊಂದಿ ಎದ್ದು ಎದುರಿಗೆ ಬಂದಳು. ಒಬ್ಬೊಬ್ಬರೂ ತಾವು ತಾವು ಪಡೆದ ರತಿಸುಖದ ವೃತ್ತಾಂತ ವನ್ನು ಹೇಳಿಕೊಂಡು, ಅಹಹ ! ಎನ್ನುತ್ತ ಕೈ ಕೈ ಹೊಯ್ದು ನಗುತ್ತಿದ್ದರು. ವ|| ಮತ್ತೊಂದು ಸಂಕೇತಸ್ಥಳದಲ್ಲಿ ೧೧. ಓರ್ವ ಚಿಕ್ಕವಯಸ್ಸಿನ ಜಾರಿಣಿಯು ವಿಟ ನನ್ನು ಕುರಿತು, "ಬಿಡು, ಬಿಡು, ಕೋಳಿಕೂಗಿತು, ನಮ್ಮವರು ಏಳುವರು" ಎನ್ನುತ್ತ ಬಲವಂತವಾಗಿ ಅವನ ತೋಳ ತೆಕ್ಕೆಯನ್ನು ಬಿಡಿಸಿಕೊಳ್ಳುತ್ತ, ಸೀರೆಯ ನಿರಿಗೆ ಗಂಟನ್ನು ಸರಿಪಡಿಸಿಕೊಂಡು ಒಳ ಬಟ್ಟೆಯನ್ನುಟ್ಟುಕೊಂಡು, ಪೂರ್ವದಿಕ್ಕಿನಲ್ಲಿ ಕಾಣುವ ಕೆಂಪನ್ನು ನೋಡಿ, ಭಯಗೊಂಡು ಕಂಗೆಟ್ಟು, ಕಾಡುಗಿಚ್ಚನ್ನು ಕಂಡ ಜಿಂಕೆಯಂತೆ ಹೌಹಾರಿ ದವಳಾಗಿ ಓಡಿದಳು. ೧೨. ಅತಿವೇಗದಿಂದ ಉಷಃಕಾಲವೆಂಬ ಗೂಳಿಯು ಮಬ್ಬು ಬೆಳಕನ್ನು ಹೊಂದಿ ಶೋಭಿಸುವ ಆಕಾಶವೆಂಬ ಸರೋವರವನ್ನು ಹೊಕ್ಕು ಕದಡಿತು. (ಆಗ) ಆ ಸರೋವರದಲ್ಲಿದ್ದ ಮೀನುಗಳು, ಆತುರಗೊಂಡು ಆ ನೀರಿನಲ್ಲಿ ಅಡಗಿಕೊಂಡವೋ

ಬೆಳ್ವೆಳಗಿನ ಬಾಳ್ವೆಳೆಯಂ
ತಳ್ವದೆ ಬಾಂಬೊಲದೊಳರುಣಕರಶಿಖಿಶಿಖೆ ಪಾ
ಳೀಳ್ವಿನಮಳುರ್ದುರೆ ಚಿಂತೆಯ
ನಾಳ್ವಂತೆವೊಲೋಷಧೀಶ್ವರಂ ಕಳೆಗೆಟ್ಟಂ ೧೩

ರಾಜಬಲಂ ಕುಂದಿದುದೆನ
ಗೀ ಜಲಜಿನಿ ರಾಜಹಂಸಯುತೆ ಮಧುಪರವ
ವ್ಯಾಜದೆ ನಕ್ಕಪಳೆಂದಾ
ರಾಜಿತ ಕುಮುದಿನಿ ವಿಷಾದದಿಂ ಕೊರಗಿರ್ದಳ್ ೧೪

ವ॥ ಅಂತುಮಲ್ಲದೆಯುಂ

ಕಂ॥ ಮೊದಲೆನ್ನ ಸಿರಿಯನಿದು ನೋ
ಡದೆ ಕಣ್ಮುಚ್ಚಿದುದು ಗಡ ಸರೋಜಿನಿ ಸಿರಿವೆ
ತ್ತಿದನಿಂದು ನೋಡೆ ನಾನೆನು
ತದು ಕಣ್ಮುಚ್ಚಿದವೊಲಲ್ಲಿ ಮುಗಿದುದು ಕುಮುದಂ ೧೫

ವಿಧುವಿರಹಿಣ ನವಕುಮುದಿನಿ
ಮಧುಮಿತ್ರ ನಿರೂಪಣಾತಿಭೀಕರ ವಿಚರ
ನ್ಮಧುಕರಮರಾಳದರ್ಶನ
ವಿಧುರಿತೆ ಸುಗಿದಂತೆ ಮುಗಿದುದಸಿತಾಂಭೋಜಂ ೧೬

ಎಂಬ ಹಾಗೆ (ಆಕಾಶದಲ್ಲಿನ) ನಕ್ಷತ್ರಗಳು ಅಡಗಿಹೋದವು. ೧೩. ಆಕಾಶವೆಂಬ ಹೊಲದೊಳಗಿನ ಬಿಳಿಯ ಬೆಳಕೆಂಬ ಬಾಳ್ವೆಯ ಬೆಳೆಯನ್ನು (ಲಾವಂಚ ?) ಸೂರ್ಯನ ಕಿರಣವೆಂಬ ಬೆಂಕಿಯ ನಾಲಿಗೆಯು ಸುಟ್ಟು ಹಾಳುಮಾಡುವುದೆಂಬ ವಿಶೇಷವಾದ ಚಿಂತೆಯನ್ನು ಹೊಂದಿದವನ ಹಾಗೆ ಓಷಧೀಶನಾದ ಚಂದ್ರನು ಕಳೆಗೆಟ್ಟನು. ೧೪. ರಾಜನ (ಚಂದ್ರನ) ಬಲವು ಕುಂದಿತು. ಈ ರಾಜಹಂಸ ಪಕ್ಷಿಗಳಿಂದ ಕೂಡಿದ (ಸೂರ್ಯನಿಂದ ಕೂಡಿದ) ಕಮಲಿನಿಯು ದುಂಬಿಗಳ ಝೇಂಕಾರರವವೆಂಬ ನೆಪದಿಂದ ಅಪಹಾಸ್ಯ ಮಾಡುತ್ತಿದ್ದಾಳೆ ಎಂದು, (ಚಂದ್ರನಿದ್ದಾಗ) ವಿರಾಜಿಸುತ್ತಿದ್ದ ಕನ್ನೈದಿಲೆಯೆಂಬ ಸ್ತ್ರೀಯು ಕೊರಗಿದಳು. ವ|| ಹಾಗೂ ಅಲ್ಲದೆ ೧೫. "ಈ ಮೊದಲು ನನ್ನ ಐಶ್ವರ್ಯವನ್ನು (ನನ್ನ ಚೆಂದವನ್ನು) ಈ ಕಮಲವು ನೋಡದೆ ಕಣ್ಣು ಮುಚ್ಚಿಕೊಂಡಿತ್ತಲ್ಲವೆ ? ಈಗ ಇವಳ ಐಶ್ವರ್ಯವನ್ನು (ಚೆಲುವನ್ನು) ನಾನು ನೋಡುವುದಿಲ್ಲ" ಎಂದು ಕಣ್ಣು ಮುಚ್ಚಿಕೊಂಡ ಹಾಗೆ ಕನ್ನೈದಿಲೆಯು ಮುಚ್ಚಿಕೊಂಡಿತು. ೧೬. ಚಂದ್ರವಿರಹದಿಂದ ಕೂಡಿದ ನೂತನಳಾದ ಕುಮುದಿನಿಯು ಮಧುಮಿತ್ರನಾದ ಮನ್ಮಥನ ಆಜ್ಞೆಯಿಂದ ಭಯಂಕರವಾಗಿ ಸಂಚರಿಸತೊಡಗಿರುವ ಭೃಂಗಗಳ ಮತ್ತು ಹಂಸಪಕ್ಷಿಗಳ ದರ್ಶನ (ನೋಟ)ದಿಂದ

ಚಂ॥ ಪರಿಪರಿದೊಂದನೊಂದಱಿಸಿ ಕಂಡತಿಕಾತರಮುಣ್ಮಿ ಪೊಣ್ಮಿ ಬಂ
ದೆರವಿನಿತಿಲ್ಲದಪ್ಪಿ ಗಱಿ ನೆಟ್ಟನೆ ತಳ್ತಿರೆ ಕಣ್ ಸುಖಾಶ್ರುವಂ
ಸುರಿಯೆ ಕಡಂಗಿ ಕಂಜದಳತಳ್ಪಳೊಂದುವ ಚಕ್ರಚಕ್ರದು
ಬ್ಬರದ ರತಕ್ಕೆ ನಾಣ್ಚುತಲರ್ಗಣ್ಮುಗಿದಂದದೆ ನೈದಿಲೊಪ್ಪುಗುಂ ೧೭

ಕಂ॥ ಇರುಳತನುಧನುರ್ಲತೆಗೊ
ಳ್ದಿರುವಾಗಿ ಬಳಲ್ದು ಪಸಿದಳಿವ್ರಜಕನಿಲಂ
ಪರಿಮಳದುಣಿಸಾಗಿಸಲಾ
ದರಿಸಿ ಕರಂ ಬಿರ್ಚಿದಂತಿರಲರ್ದುದು ನಳಿನಂ ೧೮

ವ॥ ಅಂತುಮಲ್ಲದೆಯುಂ
ಕಂ॥ ಎನಗಾಗದ ವನರುಹಮಂ
ಮನೆಮಾಡಿದಳೆಂದು ಕಂಡು ಮುಳಿವಂ ಶಶಿಯೆಂ
ದೆನುತಿರುಳೆ ಮುಚ್ಚಿ ಸಿರಿಯಾ
ತನ ಭಾವದೆ ಬಿಚ್ಚಿದಂತಿರಲರ್ದುದು ಕಮಳಂ ೧೯

ಇರುಳಹಿತೇಂದೀವರದ
ಲ್ಲಿರುತದು ಮುಗಿದೊಡೆ ಮಧುವ್ರತಂ ಬರೆ ಮೊದಲಂ
ತಿರೆ ಕಂಡುದು ಗಡ ಕಮಳಂ
ಪರೀಕ್ಷಿಸಗುರ್ಣಗಳಾಶ್ರಿತರೊಳವಗುಣಮಂ ೨೦

ಹೆದರಿ ನಡುಗುತ್ತ (ಕಣ್ಣನ್ನು ಮುಚ್ಚಿಕೊಂಡ ಹಾಗೆ) ಮುಕುಳಿತವಾಯಿತು. ೧೭. ಹರಿ ಹರಿದಾಡಿ ಒಂದನ್ನೊಂದು ಹುಡುಕಿ ಕಂಡು, ಹೊರಹೊಮ್ಮುವ ಅತ್ಯಂತ ಕಾತರದಿಂದ ಗಾಢವಾಗಿ ಆಲಿಂಗನ ಮಾಡಿಕೊಂಡು, ಗರಿಗಳನ್ನು ನಿಗುರಿಸಿ, ಕಣ್ಣುಗಳು ಆನಂದ ಬಾಷ್ಪಗಳನ್ನು ಸುರಿಸುತ್ತಿರಲು, ಉತ್ಸಾಹಗೊಂಡು ಕಮಲದ ದಳಗಳ ಹಾಸಿಗೆಯಲ್ಲಿ ಒಂದುಗೂಡುವ ಚಕ್ರವಾಕಪಕ್ಷಿಗಳ ಸಂತೋಷದ ರತಿಕ್ರೀಡೆಗೆ ನಾಚಿಕೆಗೊಂಡು ತನ್ನ ಹೂವಿನಂತಹ ಕಣ್ಣುಗಳನ್ನು ಕನ್ನೈದಿಲೆಯೆಂಬ ಹೆಂಗಸು ಮುಚ್ಚಿಕೊಂಡಳೋ ಎಂಬಂತೆ ಕಾಣಿಸಿತು. ೧೮. ರಾತ್ರಿಯಕಾಲದಲ್ಲಿ ಮನ್ಮಥನ ಇಕ್ಷುಕೋದಂಡಕ್ಕೆ ಒಳ್ಳೆಯ ಹೆದೆಯಾಗಿ ಬಳಲಿ ಹಸಿದುಹೋದ ದುಂಬಿಗಳ ಸಮೂಹಕ್ಕೆ ತಂಗಾಳಿಯು ಸುಗಂಧದ (ಮಕರಂದದ) ಊಟವನ್ನು ಮಾಡಿಸುವುದಕ್ಕಾಗಿ ಆದರದಿಂದ ಕೈಯನ್ನು ಬಿಚ್ಚಿದಂತೆ ಕಮಲವು ಅರಳಿತು. ವ॥ ಅದೂ ಅಲ್ಲದೆ ೧೯. "ನನ್ನೊಡನೆ ಹಿತವಿಲ್ಲದ ಈ ಕಮಲವನ್ನು ಲಕ್ಷ್ಮಿಯು ಹೋಗಿ ಆಶ್ರಯಿಸಿದಳು ಎಂದು ಅವಳನ್ನು ಕಂಡರೆ ಚಂದ್ರನು ಕೋಪಗೊಳ್ಳುವನು" ಎಂದುಕೊಂಡು ರಾತ್ರಿಯಕಾಲದಲ್ಲಿ ಲಕ್ಷ್ಮಿಯನ್ನಡಗಿಸಿ ಮುಚ್ಚಿದ ಕಮಲವು ಆತನು ಇಲ್ಲದಾಗ ಬಿಚ್ಚಿಕೊಂಡಿತೋ ಎನ್ನುವ ಹಾಗೆ ಅರಳಿತು. ೨೦. ದುಂಬಿಯು ರಾತ್ರಿಯಕಾಲದಲ್ಲಿ ತನ್ನ ವೈರಿಯಾದ ಕನ್ನೈದಿಲೆಯಲ್ಲಿರುತ್ತ, ಅದು ಮುಕುಳಿತಗೊಂಡ ಮೇಲೆ ತನ್ನ ಹತ್ತಿರಕ್ಕೆ ಬಂದ ಅವುಗಳನ್ನು ಕಮಲವು ಮೊದಲಿನ ಹಾಗೆಯೇ ಕಂಡಿತು. (ಅಂದರೆ ಮಕರಂದಪಾನಕ್ಕೆ

ಕನಕಕರಂಡಕದಿಂದಂ
ದಿನಲಕ್ಷ್ಮಿ ಸರಾಗಮಿಂದ್ರನೀಲದ ಸರಮಂ
ದಿನಪಂಗೀಯಲ್ಕೆಗೆದಪ
ಳೆನೆ ಮಧುಕರಮಾಲೆ ನಳಿನದಿಂ ನೆಗೆದೆಸೆಗುಂ ೨೧

ಜಳಕಣಕಲಿತದಳಂ ನೀ
ರ್ದಳಿದಿಟ್ಟೆಲೆಯಾಗೆ ನಳಿನಿ ಕಿಲದಟ್ಟಗಳಿ
ಟ್ಟಳೆನಿಸೆ ವಿಕಚಾಬ್ಜಂಗ
ಳೊಕ್ಕಳನೆಸೆದುದು ರಾಜಹಂಸನೌತಣದೆಡೆವೋಲ್ ೨೨

ಪಾಡುವ ಷಟ್ಪದಂಗಳಿಂದೊ
ಲ್ದಾಡುವ ಮುದ್ದಂಚೆವಱಿಗಳಿಂ ನಱುಗಂಪಿಂ
ತೀಡುವೆಲರಿಂದಮ ಸಿರಿ
ಗೂಡಿದ ಗೃಹದಂತಿರಿರ್ದುದಲರ್ದಂಭೋಜಂ ೨೩

ತೀರದೊಳಿರೆ ವಿದ್ರುಮತತಿ
ವಾರಿಯೊಳಿರೆ ಪದ್ಮರಾಗಮಬ್ಜಾಕರಮಾ
ನೀರಾಕರಮೆನೆ ಕಣ್ಗೆಂ
ರಾರಾಜಿಸಿದುದೊ ಸಿತಾಬ್ಜಮುಕ್ತಾಳಿಗಳಿಂ ೨೪

ಅವಕಾಶಕೊಟ್ಟಿತು) ಸದ್ಗುಣಿಗಳು ಆಶ್ರಿತರ ಅವಗುಣಗಳನ್ನು ಪರೀಕ್ಷಿಸುವುದಿಲ್ಲವಷ್ಟೆ! ೨೧. ದಿವಸವೆಂಬ ಲಕ್ಷ್ಮಿಯು ಬಂಗಾರದ ಭರಣಿಯಿಂದ ಇಂದ್ರನೀಲಮಣಿಯ ಸರವನ್ನು ದಿನೇಶ್ವರನಾದ ಸೂರ್ಯನಿಗೆ ಕೊಡುವುದಕ್ಕೆಂದು ಪ್ರೀತಿಯಿಂದ ತೆಗೆದಳೋ ಎಂಬಂತೆ ದುಂಬಿಗಳ ಸಾಲು ಕಮಲದಿಂದ ಮೇಲಕ್ಕೆ ನೆಗೆದು ಶೋಭಿಸಿತು. ೨೨. ಜಲಕಣಗಳಿಂದ ಕೂಡಿದ ಕಮಲದ ಎಲೆಗಳು ನೀರನ್ನು ಚಿಮುಕಿಸಿ ಊಟಕ್ಕೆ ಹಾಕಿದ ಎಲೆಗಳಂತಿರಲು, ಪಕ್ಕದ ಅರಳಿದ ಕಮಲಗಳು ಅಡಿಗೆ ಮಾಡಿಟ್ಟ ಆಹಾರಭಾಂಡಗಳ ಸಮೂಹಗಳೆಂಬಂತಿರಲು, ನಳಿನಿಯು ರಾಜಹಂಸಗಳಿಗೆ ಔತಣಕೂಟವನ್ನೇರ್ಪಡಿಸಿದಂತೆ ಸರೋವರವು ಶೋಭಿಸುತ್ತಿತ್ತು. ೨೩. ಅರಳಿದ ಕಮಲವು ಝೇಂಕಾರ ಮಾಡಿ ಹಾರಾಡುವ ದುಂಬಿಗಳಿಂದಲೂ, ಪ್ರೀತಿಯಿಂದ ಆಟವಾಡುವ ಮುದ್ದಾದ ಹಂಸಶಿಶುಗಳಿಂದಲೂ, ಸೌರಭ್ಯದಿಂದ ತೀಡುವ ಮಂದಮಾರುತದಿಂದಲೂ, ಲಕ್ಷ್ಮಿಯಿಂದೊಡಗೂಡಿದ ಮನೆಯಂತಿತ್ತು. ೨೪. ದಂಡೆಯಲ್ಲಿ ಹವಳದ ಬಳ್ಳಿ[1]ಗಳಿರಲು, ನೀರಿನಲ್ಲಿ ಪದ್ಮರಾಗವಿರಲು (ಪದ್ಮರಾಗದಂತಿರುವ ಕಮಲಗಳಿರಲು) ಮತ್ತು ಬಿಳಿಯ ಕಮಲಗಳೆಂಬ ಮುತ್ತುಗಳಿಂದ ಕೂಡಿರಲು, ಆ ಸರೋವರವು ಸಮುದ್ರದಹಾಗೆ ಅದೇನು ಶೋಭಿಸಿತೋ!

---

1. ಮೂಲದಲ್ಲಿ 'ವಿದ್ರುಮ' ಎಂದಿದೆ. ವಿ = ಪಕ್ಕಿಗಳಿಂದ ಕೂಡಿದ, ದ್ರುಮ = ಮರ ಅಥವಾ ವಿದ್ರುಮ = ಎಳೆಯ ಬಳ್ಳಿ (ರಂ)

ಸುರವರಕರಿ ಮುಱಿದೊಟ್ಟಿದ
ಸುರುಚಿರ ನಂದನತರುಸಾಲಪಲ್ಲವತತಿಯಂ
ತಿರೆ ಕರಮೆಸೆದುದು ಮೂಡಣ
ಗಿರಿಯೆಡೆಯೊಳ್ಮೂಡಿ ತೋರ್ಪ ಸಂಧ್ಯಾರಾಗಂ ೨೫

ವ॥ ಮತ್ತಂ

ಕಂ॥ ಸುರವರನಂದನವನಮಂ
ಸುರವರನಂದನನ ಬಾಣದುರಿ ಪರ್ವಿದುದೀ
ಪರಿಯೆಂದಱಿಪುವ ತೆಱದಿಂ
ಪರಿರಂಜಿಸುತಿರ್ದುದುದಯಸಂಧ್ಯಾರಾಗಂ ೨೬

ಹರಿದಿಕ್ಪಣವಧು ಬರೆ ಹಿಮ
ಕರಖರಕರರೊಂದೆ ತೆಱದೊಳನುರಕ್ತತೆಯಿಂ
ನೆರೆವಳ್ಗಡ ವಸುವಿತ್ತೊಡೆ
ಸರಿಮೃದುಕಠಿಣರ್ಕಳಿರ್ವರುಂ ಗಣಿಕೆಯರೊಳ್ ೨೭

ಹರಿಗೆ ಮಣಿವಮರನಿಕರದ
ಕಿರೀಟವೊಱಸಿದೊಡೆ ಸುರಿವ ಕನಕದ ರಜಮಂ
ಸುರಕರಿ ಕರದಿಂ ಕೆದರ್ದಂ
ತಿರೆ ಪಸರಿಸುತಿರ್ದುದುದಿತ ಖರಕರಕಿರಣಂ ೨೮

೨೫. ದೇವೇಂದ್ರನ ಐರಾವತವು ಮುರಿದುತಂದು ಒಟ್ಟಿದ ಮನೋಹರವಾದ ಸೀಮಾ ಮರದ ಚಿಗುರುಗಳ ಸಮೂಹವೋ ಎನ್ನುವಂತೆ ಪೂರ್ವದಿಕ್ಕಿನಲ್ಲಿರುವ ಪರ್ವತ (ಉದಯಾದ್ರಿ) ದಲ್ಲಿ ಮೂಡಿತೋರುವ ಪ್ರಾತಃಕಾಲದ ಸಂಧ್ಯಾರಾಗವು ಶೋಭಿಸುತ್ತಿತ್ತು. ವ॥ ಮತ್ತು ೨೬. ದೇವೇಂದ್ರನ ವನವನ್ನು (ಖಾಂಡವವನವನ್ನು) ಅರ್ಜುನನ ಬಾಣದ ಉರಿಯು ಹಬ್ಬಿ ಉರಿದದ್ದು ಇದೇ ರೀತಿಯಿಂದ, ಎಂದು ತೋರಿಸಿಕೊಡುವ ರೀತಿಯಲ್ಲಿ ಉದಯಕಾಲದ ಸಂಧ್ಯಾರಾಗವು ವಿಶೇಷವಾಗಿ ರಂಜಿಸುತ್ತಿತ್ತು. ೨೭ ಶೀತ ಕಿರಣನಾದ ಚಂದ್ರನೂ, ಉಷ್ಣಕಿರಣನಾದ ಸೂರ್ಯನೂ ಬರಲು, ಪೂರ್ವದಿಕ್ಕೆಂಬ ವಾರಾಂಗನೆ ಒಂದೇ ರೀತಿಯ ಅನುರಾಗದಿಂದ ನೆರೆಯುತ್ತಾಳೆ. ಹಣ ಕೊಟ್ಟರೆ ಮೃದುವಾದವರೂ, ಕಠಿಣರಾದವರೂ ಗಣಿಕೆಯರಿಗೆ ಸಮಾನರೇ ಅಲ್ಲವೆ! ೨೮. ದೇವೇಂದ್ರನಿಗೆ ನಮಸ್ಕಾರಮಾಡುವ ದೇವತೆಗಳ ಸಮೂಹದ ಕಿರೀಟಗಳು ಪರಸ್ಪರ ತಿಕ್ಕಾಡಿದಾಗ ಸುರಿದ ಬಂಗಾರದ ಹುಡಿಯನ್ನು ಐರಾವತವು ತನ್ನ ಸೊಂಡಿಲಿನಿಂದ ತೂರುತ್ತಿರುವುದೋ ಎನ್ನುವ ಹಾಗೆ ಸೂರ್ಯಕಿರಣಗಳ ಸಮೂಹವು ಪ್ರಸಾರಗೊಳ್ಳುತ್ತಿತ್ತು.

ಮಾಲಿನಿ॥ ಬಿಱಿಯೆ ಮೃದುಸರೋಜಂ ಬಿಂಕಮಂ ಬಿಟ್ಟು ರಾಜಂ
ಜಱಿಯೆ ತಿಮಿರಪೂಗಂ ಜಾಱೆ ಜಾಱಾನುರಾಗಂ
ಸಱಿಯೆ ಕುಮುದಬೃಂದಂ ಸಂಮುದಂಗುಂದೆ ಬಂದಂ
ನೆಱಿಯೆ ಪಟುರತಾಂಗಂ ನಿರ್ಮಳಾಂಗಂ ಪತಂಗಂ ೨೯

ವ॥ ಮತ್ತಮಾಗಳ್

ಕಂ॥ ಪರಿಕಲಿತಾರುಣಕರಭಾ
ಸ್ಕರಬಿಂಬಂ ಕಣ್ಗೆವಂದುದೈಂದ್ರೀವಧು ನು
ಣ್ಗೊರಲೊಳ್ಕಟ್ಟಿದ ಮಾಣಿಕ
ವರಲೋದಿರ್ದ್ಯೆರೆದಾಳಿಯೆನೆ ರಶ್ಮಿಯುತಂ ೩೦

ವ॥ ಮತ್ತಂ

ಕಂ॥ ಪರಿರಕ್ತ ದಿವಾಕರಭಾ
ಸುರಬಿಂಬಮುದಿಂಬುವಡೆದುದಖಿಳ ದಿಶಾವಿ
ಸ್ಫುರಿತ ಸುಧಾಕರಕರ ಸಾ
ಗರಮಂ ಕುಡಿದಡರ್ವ ಬಡಬಶಿಖಿಪೀಡದವೊಲ್ ೩೧

ಕೆಂಬೆಳಗೆಸೆದುದು ಕೌಸುಂ
ಭಾಂಬರಕೃತತಳ್ಪದಂತೆ ಖರರುಚಿಬಿಂಬಂ
ಪೊಂಬಟ್ಟೆಯ ಪೊಸ ಕೌಳುಡೆ
ಯೆಂಬಂತಿರೆ ತಳ್ತು ಮೆಱೆದುದೈಂದ್ರೀವಧುವಾ ೩೨

೨೯. ಮೃದುವಾದ ಕಮಲವು ಅರಳುತ್ತಿರಲು, ಗರ್ವವನ್ನು ತೊಲಗಿಸಿಕೊಂಡು ಚಂದ್ರನು ಜರಿದುಹೋಗಲು, ಕತ್ತಲೆಯ ಸಮೂಹವು ಸರಿದುಹೋಗಲು, ಜಾರೆಯರ ಅನುರಾಗವು ಹಿಂದಕ್ಕೆ ಸರಿಯುತ್ತಿರಲು, ಕನ್ನೈದಿಲೆಗಳ ಸಮೂಹವು ತನ್ನ ವಿಶೇಷವಾದ ಮುದದಿಂದ ಕುಂದಿಹೋಗುತ್ತಿರಲು, ಪಟುತರವೂ ನಿರ್ಮಲವೂ ಆದ ದೇಹದಿಂದ ಕೂಡಿದ ಸೂರ್ಯನು ಉದಯಗೊಂಡನು. ವ|| ಮತ್ತು ಆ ಸಮಯದಲ್ಲಿ ೩೦. ಅರುಣಕಿರಣಗಳಿಂದ ಕೂಡಿದ ಸೂರ್ಯಬಿಂಬವು ಪೂರ್ವದಿಕ್ಕೆಂಬ ಸ್ತ್ರೀಯು ತನ್ನ ನುಣ್ಣನೆಯ ಕೊರಳಲ್ಲಿ ಕಟ್ಟಿದ ಪ್ರಕಾಶಮಯವಾದ ಮಾಣಿಕ್ಯದಹರಳಿನಿಂದ ಕೂಡಿದ ಐದೆದಾಳಿಯಂತೆ ಕಣ್ಣಿಗೆ ಕಾಣುತ್ತಿತ್ತು. ವ|| ಮತ್ತು ೩೧. ಸಮಸ್ತದಿಕ್ಕುಗಳಲ್ಲೂ ಪ್ರಕಾಶಗೊಂಡ ಚಂದ್ರಕಿರಣಗಳೆಂಬ ಸಾಗರವನ್ನು ಕುಡಿದು ಅಡರುವ ಬಡಬಾನಲದ ಹಾಗೆ ವಿಶೇಷ ರಕ್ತವರ್ಣದ ಸೂರ್ಯಬಿಂಬವು ಅದೇನು ಶೋಭಿಸಿತೊ! ೩೨. ಸೂರ್ಯನ ಕೆಂಪಾದ ಆ ಬೆಳಕು ಪೂರ್ವದಿಕ್ಕೆಂಬ ಸ್ತ್ರೀಯ ಕುಸುಬೆಹೂವಿನ ಬಣ್ಣದ ಬಟ್ಟೆಯಿಂದ ಮಾಡಿದ ಹಾಸಿಗೆಯ ಹಾಗೆಯೂ, ಸೂರ್ಯಮಂಡಲವು ಬಂಗಾರದ ಜರಿಯ

ವ॥ ಅನಂತರಂ

ಕಂ॥ ಕೆಂಬಟ್ಟೆಯ ಗವಸಣಿಗೆಯ
ನಂಬರರಮೆ ನೋಡಲುಗಿದ ಮಣಿಗನ್ನಡಿಯೆಂ
ದೆಂಬಂತೆ ಸಂಜೆ ತೊಲಗಿ
ರ್ದಂಬರಮಣಿಬಿಂಬಮೇಂ ಮನಂಗೊಳಿಸಿದುದೋ ೩೩

ಮ॥ಸ್ರ॥ ಇದು ಚಂಚದ್ವ್ಯೋಮಲಕ್ಷ್ಮೀಕರಕಲಿತ ಸುವರ್ಣಾಬ್ಜಮೋ ನೋಡು ನೋಡಿಂ
ತಿದು ಪೂರ್ವಾಶಾಂಗನಾ ಮಂಗಳ ಮಧುರಿಮ ಸೀಮಂತಮಾಣಿಕ್ಯಮೋ ಪೇ
ಳಿದು ಶಕ್ರಾಶಾದ್ರಿಹರ್ಮ್ಯೋಜ್ವಳ ಕಳಶಮೋ ತಾನೆಂಬಿನಂ ಕಣ್ಗೆ ಚೆಲ್ವಾ
ದುದು ಚಂಚದ್ದೃಕ್ಕದಂಬಂ ತಿಮಿರಕುಧರಶಂಬಂ ದಿನಾಧೀಶಬಿಂಬಂ ೩೪

ವ॥ ಆಗಳ್

ಚಂ॥ ವನನಿಧಿ ವಾರಿಯೊಳ್ಬೆರಸಿ ತೀವಿದ ಚಂದ್ರಿಕೆಯೆಂಬ ಪಾಲನೀ
ಕನಕಸರೋಜರಾಜಿತರಜಃಪರಿಪಿಂಜರವರ್ಣಹಂಸನೊ
ಯ್ಯನೆ ಬರೆ ಪೀರ್ದುದಾ ಜಲಮನೊಲ್ಲದೆ ಬೇರ್ಪಡಿಸಿತ್ತು ನೋಡಿಮೆಂ
ಬಿನಮಿಳೆ* ಮುನ್ನ ಜೊನ್ನಮದು ಪಿಂಗಿರೆ ತರ್ಗಿತು ವಾರಿವಾರ್ಧಿಯಾ ೩೫

ಬಟ್ಟೆಯಿಂದ ಮಾಡಿದ ತಲೆದಿಂಬಿನ ಹಾಗೆಯೂ ಶೋಭಿಸುತ್ತಿದ್ದವು. ವ॥ ಆಮೇಲೆ ೩೩. ತಾನುಟ್ಟ ಕೆಂಪಾದ ಬಟ್ಟೆಗಳ ಸೌಂದರ್ಯವನ್ನು ಗಗನಲಕ್ಷ್ಮಿಯು ನೋಡುವುದಕ್ಕಪೇಕ್ಷಿಸಿ, ಹಿಡಿದ ರತ್ನಮಯವಾದ ಕನ್ನಡಿಯೋ ಎಂಬಂತೆ ಸಂಜೆ ತೊಲಗಿದ ಸೂರ್ಯಬಿಂಬವು ಅದೇನು ಮನಸ್ಸಿಗೆ ಆಹ್ಲಾದಕರವಾಗಿತ್ತೋ! ೩೪. ಈ ಸೂರ್ಯಬಿಂಬವು–'ಮಿಂಚುತ್ತಿರುವ ಆಕಾಶಲಕ್ಷ್ಮಿಯು ಲೀಲಾರ್ಥವಾಗಿ ಕೈಯಲ್ಲಿ ಹಿಡಿದ ಬಂಗಾರದ ಕಮಲವೋ ನೋಡು ನೋಡು! ಇದು ಪೂರ್ವದಿಕ್ಕೆಂಬ ಅಂಗನೆಯ ಮಂಗಳಕಾರಕವಾದ ಬೈತಲೆಯಲ್ಲಿ ಧರಿಸಿರುವ ಮನೋಹರವಾದ ಮಾಣಿಕ್ಯರತ್ನವೋ ಹೇಳು! ಇದು ಪೂರ್ವದಿಕ್ಕಿನ ಉದಯಪರ್ವತವೆಂಬ ಉಪ್ಪರಿಗೆಯ ಮನೆಯ ಮೇಲಿರುವ ದೇದೀಪ್ಯಮಾನವಾದ ಕಲಶವೋ!' ಎಂದೆನ್ನುವ ಹಾಗೆ, ಜನರ ದೃಷ್ಟಿ ಸಮೂಹದಿಂದ ಕೂಡಿದ್ದಾಗಿ, ಕತ್ತಲೆಯೆಂಬ ಪರ್ವತಕ್ಕೆ ವಜ್ರಾಯುಧ ಸ್ವರೂಪವಾಗಿ ಕಣ್ಣಿಗೆ ಚೆಲುವಾಗಿ ಕಾಣುತ್ತಿತ್ತು. ವ॥ ಆಗ ೩೫. ಸಮುದ್ರದ ನೀರಿನಲ್ಲಿ ಬೆರೆತು ತುಂಬಿದ್ದ ಬೆಳದಿಂಗಳೆಂಬ ಹಾಲನ್ನು ಬಂಗಾರವರ್ಣದ ಕಮಲದಲ್ಲಿದ್ದು, ಆ ಕಮಲದ ಧೂಳು ಮೆತ್ತಿ ಕೆಂಪಾದ ಈ ಹಂಸವು (ಸೂರ್ಯನು) ಒಂದೇ ಸಮನೆ ಕುಡಿದುಹಾಕಿ ಬೇಡವಾದ ನೀರನ್ನು ಬೇರ್ಪಡಿಸಿ ಬಿಟ್ಟಿತು, ನೋಡಿರಿ! – ಎನ್ನುವ ಹಾಗೆ ಆ ಬೆಳದಿಂಗಳಿಂದ ಇಳೆಯು*

---

* ಮೂಲದಲ್ಲಿ 'ಇರೆ' ಎಂಬ ಪಾಠವಿರಬಹುದು. ಇಳೆ ಎಂಬುದು ಅನನ್ವಿತ. (ರಂ)

ಮನದನುರಾಗದಿಂ ನೆರೆದ ನಲ್ಲನೊಳುಣ್ಮುವ ಘರ್ಮವಾರಿಯೆಂ
ದೆನೆ ಪನಿ ತೋಱೆ ತೊಟ್ಟನಲರ್ದಂಬುಜದೊಳ್ನೆಲೆಗೊಂಡು ಮೂಡಿಬ
ರ್ಪಿನನ ಕರಂಗಳಂಗದೊಳೆ ಕುಂಕುಮದಂತಿರೆ ತೋರ್ಪ ಚಕ್ರಮೇಂ
ನೆನೆಯಿಸಿದತ್ತೊ ಕಾಮಿನಿಯ ಬಲ್ಮೊಲೆ ಕಾಂತನ ಕೈಯೊಳಿರ್ಪುದಂ ೩೬

ಎರಲಿರದೆತ್ತಿ ಸೂಸೆ ಕನಕಾಬ್ಜರಜಂ ನಯದಿಂದೆ ಬರ್ಪ ನೀ
ಳ್ದಿರೆಗೆರೆಗೊಂಡು ನಿಂದು ಸರಮೆಂಬ ಕಷೋಪಲದಲ್ಲಿ ವಾಸರೇ
ಶ್ವರಕರಮೆಂಬ ಪೊನ್ನೊಱೆವೊಲೊಪ್ಪಿರೆ ತನ್ನವಗಂಧಕಲ್ಲಿ ಸಾ
ರ್ದಿರದಳಿ ಕಾಲಕಾರುಕನಮರ್ಚಿದ ಮೇಣದವೋಲ್ ವಿರಾಜಿಕುಂ[1] ೩೭

ಮೃಗಧರಬಿಂಬಮೆಂಬ ಪೊಸಪೆಳ್ಮುಗಿಲುರ್ವರೆಯಲ್ಲಿ ಸೂಸೆ ಸೋ
ಜಿಗಮೆನೆ ಚಂದ್ರಿಕಾಮೃತದ ಬಲ್ಸರಿಯಂ ಕಮಳಾಕರಾಬ್ಜರು
ಕ್ತಿಗಳದರಚ್ಛಬಿಂದುಗಳನಾಂತೊಳಗಾಗಳೆ ಮುಚ್ಚಿಕೊಂಡೊಡ
ಲ್ಲೊಗೆದುದು ಮೌಕ್ತಿಕಂಗಳೆನೆ ಕಂಗೊಳಿಸಿರ್ದಪುವಂಚೆದತ್ತಿಗಳ್ ೩೮

ದೂರವಾಗಿ ಸಮುದ್ರದ ನೀರೂ ತಗ್ಗಿ ಹೋಯಿತು. ೩೬. ಕೂಡಲೆ ಅರಳಿದ ಕಮಲದಲ್ಲಿ ಒಂದು ಚಕ್ರವಾಕಪಕ್ಷಿಯು ಬಂದು ಕುಳಿತಿತು. ಆಗ ಸಿಡಿದ ನೀರು ಮನೋನುರಾಗದಿಂದ ನೆರೆದ ನಲ್ಲನಾದ ಆ ಚಕ್ರವಾಕದ ಬೆವರಿನ ಹನಿಯಂತೆ ಕಾಣಿಸಿತು. ಆ ಪಕ್ಷಿಯ ಮೇಲೆ ಸೂರ್ಯನ ಕೆಂಪುಕಿರಣಗಳು ಕುಂಕುಮಲೇಪದಂತಾದವು. ಆಗ ಕಮಲದಲ್ಲಿದ್ದ ಚಕ್ರವಾಕವು, ಕಾಂತನ ಕೈಯಲ್ಲಿದ್ದ ಕಾಮಿನಿಯ ಮೊಲೆಯನ್ನು ನೆನಪಿಗೆ ತಂದುಕೊಟ್ಟಿತು. (ರಂ) ೩೭. ಮಂದಮಾರುತವು ಸುವರ್ಣಕಮಲಗಳ ಪರಾಗವನ್ನು ಮೆಲ್ಲಗೆ ತಳ್ಳಲಾಗಿ, ಅದು ಸರಸ್ಸಿನ ತೆರೆಯಲ್ಲಿ ಸೇರಿ ಹೊಂದಿಕೊಂಡು ನಿಂತಿತು. ಸರಸ್ಸೇ ಒರೆಗಲ್ಲು. ಸೂರ್ಯನ ಕಿರಣವೆಂಬ ಚಿನ್ನವನ್ನು ಅದರಲ್ಲಿ ಕಾಲವೆಂಬ ಅಕ್ಕಸಾಲಿಗನು ಉಜ್ಜಿದನು. ಕಮಲಪರಾಗದ ಸುಗಂಧಕ್ಕೆ ದುಂಬಿಗಳು ಮುತ್ತಿರಲಾಗಿ ಅಂಟಿಸಿದ ಮೇಣದಂತೆ ಕಂಡವು. ೩೮. ರಾತ್ರಿಯಕಾಲದಲ್ಲಿ ಚಂದ್ರಬಿಂಬವೆಂಬ ಬಿಳಿಮುಗಿಲು (ಬೆಳ್ಮೋಡ) ಭೂಮಿಯ ಮೇಲೆ ಆಶ್ಚರ್ಯವೆನ್ನುವ ಹಾಗೆ ಬೆಳದಿಂಗಳೆಂಬ ಅಮೃತದ ಜಡಿ ಮಳೆಯನ್ನು ಸುರಿಸುತ್ತಿತ್ತು. (ಆಗ) ಸರೋವರದಲ್ಲಿರುವ ಕಮಲಗಳೆಂಬ ಮುತ್ತಿನ ಚಿಪ್ಪುಗಳು, ಆ ಮಳೆಯ ಅಚ್ಚಹನಿಗಳನ್ನು ತನ್ನೊಳಗೆ ಧರಿಸಿ, ಆ ಕೂಡಲೆ ಮುಚ್ಚಿಕೊಳ್ಳಲಾಗಿ ಆಗ (ಅಂಥ ಕಮಲಗಳೆಂಬ ಮುತ್ತಿನ ಚಿಪ್ಪುಗಳಲ್ಲಿ) ಉದ್ಭವಿಸಿದ ಅಚ್ಚ-

1 ಟಿಪ್ಪಣಿ: ಸರಸ್ಸು ಒರೆಗಲ್ಲು. ಸೂರ್ಯಕಿರಣವೇ ಚಿನ್ನ. ಚಿನ್ನವನ್ನು ಉಜ್ಜಿದಾಗ ಒರೆಗಲ್ಲಿನಲ್ಲಿ ಕಾಣಿಸುವ ಸುವರ್ಣರೇಖೆಗೆ ಪರಾಗದಿಂದ ಕೂಡಿದ ತೆರೆ ಸಮಾನ. ಚಿನ್ನದ ಪುಡಿ ಉದುರಿ ಹಾಳಾಗುವುದೆಂದು ಸುತ್ತಲೂ ಅಕ್ಕಸಾಲಿಗನು ಮೇಣವನ್ನು ಮೆತ್ತುತ್ತಾನೆ. ದುಂಬಿ ಮೇಣಕ್ಕೆ ಸಮಾನ (ರಂ).

ಖರಕರಸಿದ್ಧನೇಳ್ದು ದಿವಿಜೇಂದ್ರದಿಶಾದ್ರಿ ಗುಹಾನಿವಾಸದಿಂ
ದುರುತಿಮಿರಾಭಿಭೂತ ಭುವನೋನ್ನತಲೋಹಕೆ ತನ್ನ ವಿದ್ಯೆಯಂ
ಧರೆಗಱಿಪಲ್ಕೆ ಮುಟ್ಟಿಸೆ ಕರೋತ್ಕರ ಸಿದ್ಧರಸಪ್ರವಾಹಮಂ
ಪಿರಿದದು ಚಿನ್ನಮಾದುದೆನೆ ಪೊಂಬಿಸಿಲೊಂದಿರೆ ಕಣ್ಗೆ ರಂಜಿಕುಂ ೩೯

ವ॥ ಮತ್ತಮದಲ್ಲದೆಯುಮತಿವಿಶದ ಶಶಿಮಣಿಮಯ ಶಿವಗೃಹೋಪರಿಮಶಿಖಾಗ್ರದೊಳ್ ತೆತ್ತಿಸಿದ ಮುತ್ತುಗಳೆಂಬಂತೆ ನಿಲುಂಬಿನಿಂದ ಹಿಮಕರಕರಪಾತಜನಿತ ಹಿಮಕಣೋತ್ಕರಮಂ ಪೊಸಬೆಸನದಿಂ ನಸೆಮಸಗೆ ಸುಸಿಲೆಸಗಿ ಬಳಲ್ದು ಬಾಯಾಱಿ ಬಳಸಿ ನಿಂದು ಕದುಂಕುವ ತರುಣ ಪಾರಾವತಂಗಳಱತೆಯಂ ಬಱಿಕ್ಕೈವಂತೆ ತೊಡೆದು ಕಳೆದು ಗವಾಕ್ಷವಿವರದೊಳೊಳಪೊಕ್ಕು ಪೊಚ್ಚಪೊಸ ಪೊಂದಗಡನಮರ್ಚಿದಂತೊಳವಳಯದ ಭಿತ್ತಿಯಂ ನೆಮ್ಮಿ ಬೆಳಗಿಯುಂ ಕಳೆಗುಂದಿದ ಕಳಾಧರನಂ ಕಂಡು ನಸುನಗುವಂತಲರ್ದ ಕೆಸರ್ಮಲ್ಲಿಗೆಯ ಕಿತ್ತಿಸಳ ಕೇಸರದ ಕುಸುಂಕರೊಳ್ ಮುಸುಂಕಿ ಮುಸುಂಬನಿಟ್ಟು ಪಸಿವಡಂಗೆ ಪೊಸಬಂಡನುಂಡು ಪಿಂಡುಗೊಂಡು ಮಂಡಳಿಸಿನಿಂದ ಪೆಣ್ದುಂಬಿಗಳಂ ಪೊಂದುಂಬಿಗಳೆಂಬಂದಮನೊಂದಿ ನಿಮಿರ್ಚಿಯುಂ ಕಂದರ್ಪ

ಮುತ್ತುಗಳೋ ಎಂಬಂತೆ ಹಂಸಪಕ್ಷಿಗಳ ಮೊಟ್ಟೆ(ತತ್ತಿ)ಗಳು ಮನೋಹರವಾಗಿ ಕಾಣುತ್ತಿದ್ದವು. ೩೯. ಸೂರ್ಯನೆಂಬ ಸಿದ್ಧಪುರುಷನು ಎದ್ದು ಪೂರ್ವದಿಕ್ಕಿನಲ್ಲಿರುವ ಗವಿಗಳ ನಿವಾಸದಲ್ಲಿದ್ದು, ವಿಶೇಷವಾದ ಕತ್ತಲೆಯಿಂದ ತುಂಬಿದ ಉನ್ನತ ಭೂಭಾಗವೆಂಬ ಕಬ್ಬಿಣದ ಲೋಹಕ್ಕೆ ಸಿದ್ಧವಿದ್ಯೆಯನ್ನು ಧರೆಯ ಜನರಿಗೆಲ್ಲ ತಿಳಿಸುವುದಕ್ಕೋಸ್ಕರವಾಗಿ, ತನ್ನ ಕಿರಣಗಳೆಂಬ ಕೈಗಳಿಂದ ಸಿದ್ಧರಸಪ್ರವಾಹವನ್ನು ಮುಟ್ಟಿಸಲಾಗಿ, ಭೂಮಿಯೆಲ್ಲಾ ಶ್ರೇಷ್ಠವಾದ ಚಿನ್ನವೇ ಆಯಿತೆನ್ನುವ ಹಾಗೆ ಬಂಗಾರವರ್ಣದ ಬಿಸಿಲು ಕಣ್ಣಿಗೆ ಮನೋಹರವಾಗಿ ಕಾಣುತ್ತಿತ್ತು. ವ|| ಮತ್ತು ಅತಿವಿಶದವಾದ ಚಂದ್ರಕಾಂತಶಿಲೆಯಿಂದ ನಿರ್ಮಿಸಲ್ಪಟ್ಟ ಶಿವಾಲಯಗಳ ಶಿಖರಾಗ್ರದಲ್ಲಿ ಕೂಡಿಸಿದ ಮುತ್ತುಗಳೋ ಎಂಬ ಹಾಗೆ ಹನಿಹನಿಯಾಗಿ ಚಂದ್ರಕಿರಣಗಳಿಂದ ಹಿಮಕಣಗಳುಂಟಾಗಿದ್ದವು. ನೂತನವಾಗಿ ಉಂಟಾದ ರತ್ಯಾಸಕ್ತಿಯ ಫಲವಾಗಿ ಪಾರಿವಾಳಗಳು ತಮ್ಮ ಪ್ರಿಯೆಯರೊಡನೆ ನೆರೆದು ಬಳಲಿ ಬಾಯಾರಿ ಸುತ್ತಲೂ ನೆರೆದು (ಆ ಹನಿಗಳನ್ನು) ಕುಕ್ಕಿ ತಮಗಾದ ಬಾಯಾರಿಕೆಯನ್ನು ಕಳೆದುಕೊಳ್ಳುತ್ತಿದ್ದವು. ಅದನ್ನು ಅಪಹರಿಸುವಂತೆ, ಸೂರ್ಯನು ತನ್ನ ಕಿರಣಗಳೆಂಬ ಕೈಗಳಿಂದ ಆ ನೀರಿನ ಹನಿಗಳನ್ನು ಒರೆಸಿ ಕಳೆದು, ಕಿಡಿಕಿಗಳ ಸಂದಿಯಿಂದ ಒಳಹೊಕ್ಕು ಹೊಚ್ಚ ಹೊಸದಾದ ಬಂಗಾರದ ತಗಡನ್ನು ಹೊಂದಿಸಿರುವರೋ ಎಂಬ ಹಾಗೆ ಒಳಭಾಗದ ಗೋಡೆಗಳ ಮೇಲೆ ತನ್ನ ಬಂಗಾರವರ್ಣದ ಕಿರಣಗಳನ್ನು ಚೆಲ್ಲಿ ಅವನ್ನು ಬೆಳಗಿಸಿದನು. ಕಳೆಗೆಟ್ಟ ಚಂದ್ರನನ್ನು ಕಂಡು ನಗುವಂತೆ ಕಾಣುವ ಅರಳಿದ ಕೆಸರುಮಲ್ಲಿಗೆಯ ಕಿರಿದಾದ ಎಸಳುಗಳ ಕೇಸರಗಳ ಸಂದಿಯಲ್ಲಿ ಮುಸುಕಿ, ಮುಸುಡನ್ನು ಚಾಚಿ ಇಟ್ಟು, ಹಸಿವು ಹಿಂಗುವ ಹಾಗೆ ನೂತನ ಮಕರಂದವನ್ನು ಕುಡಿದು ಹಿಂಡುಹಿಂಡಾಗಿ ಮಂಡಲಾಕಾರದಲ್ಲಿ ಕುಳಿತ ಹೆಣ್ಣುದುಂಬಿಗಳನ್ನು ಬಂಗಾರದ ದುಂಬಿಗಳೋ ಎಂಬ ಚೆಲುವುಂಟಾಗುವ ಹಾಗೆ (ಆ ಸೂರ್ಯ

ಕಲಹಕ್ಕೆ ಕಟ್ಟಾಳ್ತನಂಬೆತ್ತು ಘಳಿಲನಿದಿರ್ಚಿನಿಂದು ನಳಿನದಳಮೆಂಬ ಕಳದೊಳ್ ರತಿಕಲಹಕ್ಕೆಳಸಿ ಕೈಮಿಗಿಚಿ ಪಳಂಚಿ ಕಡಂಗಿಕಾದಿ ಕಡುಗಲಿತನಂ ಮಿಕ್ಕ ಜಕ್ಕವಕ್ಕಿಗಳ್ಗೆ ಮೆಚ್ಚಿ ಪಚ್ಚೆವಿಲ್ಲಂ ಪೊದಿಸಿದ ಪೊಂಬಟ್ಟೆಯೆಂಬ ಪಾಂಗನೊಡನಳುರ್ಕೆಗೋಡೊಡರ್ಚಿಯುಂ ಕಡುಬೆಳೆದು ತಳಿರ್ತ ತರುಣ ತಮಾಲದೆಳೆದಳಿರನಳುರ್ದು ಪಿಕನಿಕರಕ್ಕೆ ಮಾಂದಳಿರೆಂಬ ಸಂದೆಗಮಂ ಮಾಡಿ ಕರ್ದುಂಕಿಸಿಯುಂ ತೋಡಿಲ್ಲದ ಫಲಿತ ರಸಾಲಮೂಲದಾಲವಾಲದೊಳ್ ಲೀಲೆಯಿಂ ರತಿ ಯುವತಿ ಸುರಿದ ಕುಂದಣದ ಕುಂಭದ ಕುಂಕುಮಾಂಬುವೆಂಬ ಶಂಕೆಯುಂ ಭೋಂಕನೊಡರ್ಚೆ ತೆಲೆದುಱುಗಲ ಪೊದಱ ಪೊರೆಯೊಳ್ ಮೈಗರೆದ ಕಡುಗಳ್ತಲೆಯನೆಡೆನುಸುಳ್ದು ಪಿಡಿದೊರಸು ತಲ್ಲಿ ಪರಿದು ಪಸರಿಸೆಯುಂ ಮಿಸುಪ ಕರವೀರದ ಕಡುಗೊರ್ಬಿದ ಬಿಱಿಮುಗುಳ್ಗಳಂ ಮುಸುಂಕಿ ಮುತ್ತಿ ಮುಸುರಲೆಂದು ಮುಂಕೋಡು ಝೇಂಕರಿಸುತ್ತ ದುಱುದುಂಬಿತನದಿಂ ಬಂದ ಮಱಿ ದುಂಬಿಗೆ ಚಂಪಕಕೋರಕ ಭ್ರಾಂತಿಗೊಟ್ಟು ತೊಟ್ಟನೆ ಮುಗುಳ್ಚಿಯುಂ ನಿಧುವನ ನಿಕೇತನದ ವಾತಾಯನಂಗಳೊಳ್ನುಸುಳ್ದು ಸುಸಿಲ್ಗಡೆಯೊಳೊರಗಿರ್ದ ಸೊರ್ಕುಂಜವ್ವನೆಯರ ಕರ್ಕಶಸ್ತನ

ಕಿರಣಗಳು) ಮಾಡಿದವು. ಮನ್ಮಥಕಲಹಕ್ಕೆ ಹುರಿಗೊಂಡು ಒಮ್ಮೆಲೆ ಎದುರಿಸಿನಿಂತು, ಕಮಲದಳಗಳೆನ್ನುವ ರಣರಂಗದಲ್ಲಿ ರತಿಕ್ರೀಡೆಯೆಂಬ ಕಲಹಕ್ಕೆ ಮನಸ್ಸು ಮಾಡಿ, ಶಕ್ತಿ ಮೀರಿ ಸಂಘಟ್ಟಿಸಿ ಕೋಪಗೊಂಡು ಕಾದಾಡಿ, ಹೆಚ್ಚಾಗಿ ಕಡುಗಲಿತನವನ್ನು ತೋರಿಸಿದ ಚಕ್ರವಾಕಪಕ್ಷಿಗಳಿಗೆ ಮೆಚ್ಚಿದ ಇಕ್ಷುಕೋದಂಡನಾದ ಮನ್ಮಥನು ಅತಿಶಯವಾಗಿ ಅವು ಗಳಿಗೆ ಬಂಗಾರದ ಜರಿಯ ಬಟ್ಟೆಯನ್ನು ಹೊದಿಸಿದನೊ ಎಂಬಂತೆ (ಆ ಚಕ್ರವಾಕಗಳ ಮೇಲೆ ಬೆಳಕನ್ನು) ಮಾಡಿದನು. ವಿಶೇಷವಾಗಿ ಬೆಳೆದು ಚಿಗುರಿದ ತರುಣತಮಾಲ (ಹೊಂಗೆ)ದ ಎಳೆಯ ತಳಿರಿನ ಮೇಲೆ ಸೂರ್ಯನು ತನ್ನ ಕಿರಣಗಳನ್ನು ಹರಡಿ, ಕೋಗಿಲೆ ಗಳಿಗೆ ಮಾವಿನಚಿಗುರೆಂಬ ಸಂದೇಹವನ್ನುಂಟುಮಾಡಿ ಕರ್ದುಂಕು (ಕುಕ್ಕು)ವಂತೆ ಮಾಡಿ ದನು. ಅಸಮಾನವಾದ ಫಲಬಿಟ್ಟ ಮಾವಿನಮರದ ಬುಡದಲ್ಲಿರುವ ಪಾತಿಗೆ ಒಯ್ಯಾರ ದಿಂದ ರತಿದೇವಿಯು ಚಿನ್ನದ ಕೊಡದಿಂದ ಸುರಿದ ಕುಂಕುಮಕೇಸರಿಯ ನೀರೋ ಎನ್ನುವ ಭ್ರಾಂತಿಯನ್ನು ಒಮ್ಮೆಲೆ ನೋಡುವವರಿಗೆ ಕಾಣುವಂತೆ (ಸೂರ್ಯನು ತನ್ನ ಎಳೆಯ ಕಿರಣಗಳನ್ನು ಚೆಲ್ಲಿ) ಉಂಟುಮಾಡಿದನು. ನೆಲದ ಮೇಲೆ ಉದುರಿ ರಾಶಿ ರಾಶಿಯಾಗಿದ್ದ ತರಗೆಲೆಗಳ ತೊಡರುಗಳ ಸಂದಿಸಂದಿಯಲ್ಲಿ ಮೈಮುಚ್ಚಿಕೊಂಡಿದ್ದ ಕತ್ತಲೆ ಯನ್ನು ಒಳಹೊಕ್ಕು ಹಿಡಿದು ಒರಸಿಹಾಕಿ ಅಲ್ಲೆಲ್ಲಾ ಹರಿದು (ತನ್ನ ಎಳೆಬಿಸಿಲನ್ನು) ಪ್ರಸಾರಗೊಳಿಸಿದನು. ಹೆಚ್ಚಾಗಿ ಶೋಭಿಸುವ ಕರವೀರಪುಷ್ಪದ ಅರೆಬಿರಿದ ಮೊಗ್ಗುಗಳಲ್ಲಿ ಮುಸುಕಿ, ತಮ್ಮ ಮುಖವನ್ನಿಕ್ಕಿ ಮಧುಪಾನ ಮಾಡಬೇಕೆಂದು ಕಿಡಿಗೇಡಿತನದಿಂದ ಬಂದ ಮರಿದುಂಬಿಗಳಿಗೆ ಸಂಪಿಗೆ ಹೂವಿನ ಭ್ರಾಂತಿಗೊಳಿಸಿ ತಟ್ಟನೆ ಹಿಂದಿರುಗಿ ಹೋಗು ವಂತೆ ಮಾಡಿದನು. (ಹೊಂಬಿಸಿಲು ಆ ಕರವೀರಪುಷ್ಪಗಳ ಮೇಲೆ ಬಿದ್ದುದರಿಂದ ಆ ಹೂವು ಗಳು ಸಂಪಿಗೆಯಂತೆ ಕಾಣುತ್ತಿದ್ದುವೆಂದು ಭಾವ). ಸುರತಗೃಹಗಳ ಕಿಟಕಿಗಳ ಸಂಧಿ

ಮೆಂಬ ಮದನಮದಗಜ ಕುಂಭಯುಗಳದ ಪಾರ್ಶ್ವದ್ವಯದೆ ತಳ್ತಿಳಿವ ಮದಕರ್ದಮದಂತೆ ಕಣ್ಗೆವಂದ ಕಕ್ಷಭವಘರ್ಮಜಲಲವಲುಲಿತ ಮೃಗಮದಕರ್ದಮಮನಾವರಿಸಿ ಕಾಶ್ಮೀರಕರ್ದಮ ಮೆನಿಸಿ ರಂಜಿಸಿಯುಂ ರಾಜಮಂದಿರದ ಮುಂದೆ ನಿಂದ ಗಂಧಸಿಂಧುರಂಗಳಂಗಕ್ಕೆ ಸಂದ ಸಿಂಧೂರಶ್ರೀಯನೋಲಗಿಸಿಯುಂ ಬಚ್ಚಬಱಿಯ ಬಯಲೊಳ್ಮೊಕ್ಕಳವೆಃನೆ ತೆಕ್ಕನೆ ತೀವಿ ಕಡಲುಡಿಗೆಗೊಂಡ ಪೊಡವಿವೆಣ್ಗಂಬರಾಂಬುಜನೇತ್ರನಿತ್ತ ಪೀತಾಂಬರದ ಝಳಂಬಮೆಂಬ ಬೆಡಗನಮರ್ಚಿಯುಂ ಪರಿವ ಪೆರ್ದೊಱೆಗಳೊಳ್ ಪರೆದು ಪಸರಿಸಿಬಿ ನಿಲುಂಬಿ ನೀರಾಟಮನಾಡಿ ಪೋದ ವಾರನಾರಿಯರ ಪೊಂಜೆಳೆಮೆಯ್ಯೊಳ್ ರಂಜಿಸಿರ್ದ ರಜನೀರಜಂಗಳಿಂ ಕದಡೇಳ್ದು ಪರಿದಪುದೆಂಬ ಪಿರಿಯ ಸಿರಿಯನೊಳಗುಗೊಳಿಸಿ ಜಂಬೂನದೀಭ್ರಾಂತಿಯಂ ರತ್ನಾಕರಂಗೊದ ವಿಸಿಯುಂ ನಿದ್ರೆ ನೆಲೆಗೆಟ್ಟು ತೊಲಗೆ ನಿಜಾಲಯದಿಂ ಪೊಱಮಟ್ಟು ಮತ್ತವಾರಣದೊಳ್ನಿಂದು ನಿರೀಕ್ಷಿಪ ಕಮಲದಳ ಧವಳಲೋಚನೆಯರ ಕಟಾಕ್ಷಚ್ಛವಿಗಳೊಳ್ತೊಡರ್ದು ತದ್ವದನ ವಿಧು

ಯಲ್ಲಿ ನುಸುಳಿ ಹೋಗಿ, ಸಂಭೋಗಕ್ರಿಯಾನಂತರ ಮಲಗಿಕೊಂಡಿದ್ದ ಸೊಕ್ಕಿದ ಯೌವನವತಿಯರಾದ ಸ್ತ್ರೀಯರ ಬಿರುಸಾದ ಮೊಲೆಗಳೆಂಬ ಮನ್ಮಥನ ಮತ್ತಗಜದ ಕುಂಭಸ್ಥಳಯುಗ್ಮದಲ್ಲಿ ಎರಡೂ ಕಡೆಗೆ ಅಂಟಿಕೊಂಡು ಇಳಿಯುತ್ತಿರುವ ಮದೋದಕದ ಕೆಸರಿನಂತೆ ಕಾಣುತ್ತಿರುವ ಆ ಸ್ತ್ರೀಯರ ಬಗಲಿನಲ್ಲಿ ಹುಟ್ಟಿದ ಬೆವರಿನ ಹನಿಗಳಿಂದ ನೆನೆದು ಜಾರುತ್ತಿರುವ ಕಸ್ತೂರಿಯ (ಕಪ್ಪು ಬಣ್ಣದ) ಕೆಸರಿನ ಮೇಲೆ (ಸೂರ್ಯನು ತನ್ನ ಕಿರಣಗಳನ್ನು) ಹರಡಿ ಅದನ್ನು ಕುಂಕುಮಕೇಸರಿಯ ಬಣ್ಣದಂತೆ ರಂಜನೆಗೊಳಿಸಿದನು. ರಾಜಗೃಹದ ಮುಂದೆ ನಿಂತ ಮದಧಾರೆಯಿಂದ ಕೂಡಿದ ಆನೆಗಳ ದೇಹಕ್ಕೆ ಯೋಗ್ಯವಾದ ಕುಂಕುಮದ ಬಣ್ಣವನ್ನುಂಟುಮಾಡಿದನು. ವಸ್ತ್ರವಿಹೀನ ಭೂಮಿಯ ಮೇಲೆ ವಿಸ್ತಾರ ವಾಗಿ ಒಮ್ಮೆಲೆ ತುಂಬಿ ಕಡಲನ್ನು ಉಡಿಗೆಯಾಗಿ ಉಟ್ಟುಕೊಂಡಿರುವ ಭೂಮಿಯೆಂಬ ಹೆಣ್ಣಿಗೆ ವಿಷ್ಣುವು ಕೊಟ್ಟ ಪೀತಾಂಬರದ ಮೇಲುಮುಸುಕೋ ಎಂಬ ಸೌಂದರ್ಯ ವನ್ನುಂಟುಮಾಡಿದನು. ಹರಿಯುವ ದೊಡ್ಡದೊಡ್ಡ ತೊರೆಗಳ ಮೇಲೆ ವಿಸ್ತಾರವಾಗಿ ಹರಿದು, ಆ ಹೊಳೆಗಳ ಸಮೀಪಕ್ಕೆ ಬಂದು ನೀರಾಟವನ್ನು ಆಡಿಹೋದ ವಾರಾಂಗನೆಯರ ಬಂಗಾರವರ್ಣದಂತೆ ಪ್ರಕಾಶಿಸುವ ಮೈಯಲ್ಲಿ ರಂಜಸಿರ್ದ ರಾತ್ರಿಕಾಲದ ಅಂಗರಾಗವು ಕರಗಿ ಕದಡಿದ ನೀರು ಹರಿಯುತ್ತಿದೆಯೋ ಎಂಬ ವಿಶೇಷವಾದ ಸೌಂದರ್ಯವನ್ನು ತೋರಿಸಿ, (ಈ ಪ್ರವಾಹವು) ಜಂಬೂನದಿಯ (ಸುವರ್ಣನದಿಯ) ಪ್ರವಾಹವೇ ಆಗಿರಬೇಕೆಂಬ ಭ್ರಾಂತಿಯನ್ನು ಸಮುದ್ರರಾಜನಿಗೆ ಉಂಟಾಗುವಂತೆ ಮಾಡಿದನು. (ರಾತ್ರಿಯ ಕಾಲವಲ್ಲಿ) ನಿದ್ದೆಗೆಟ್ಟು ತಮ್ಮ ತಮ್ಮ ಮನೆಗಳಿಂದ ಹೊರಹೊರಟು ಉಪ್ಪರಿಗೆಗೆ ಆಧಾರ ವಾದ ದೊಣೆಕಂಬಕ್ಕೆ ಒರಗಿನಿಂತುಕೊಂಡು ಕಮಲದಳದಂತೆ ಧವಳವರ್ಣದ ಕಣ್ಣು ಗಳಿಂದ ನಿರೀಕ್ಷಿಸುವ ಸ್ತ್ರೀಯರ ಕಡೆಗಣ್ಣುಗಳ ಪ್ರಕಾಶಗಳಲ್ಲಿ ತೊಡರಿಕೊಂಡು, ಅವರ ಚಂದ್ರನಂತಿರುವ ಮುಖಗಳಿಂದ ಹೊರಹೊರಡುತ್ತಿರುವ ಕಾಂತಿಯೆಂಬ ಬೆಳದಿಂಗಳೊಡನೆ

ಮಂಡಳಪ್ರಸಾದಿತ ಚಂದ್ರಿಕೆಯೊಳ್ ಮಲ್ಲಗಾಳಗಮನೊಡರ್ಚುವಂತೆ ಕಮನೀಯತೆಯನಾ ಲಿಂಗಿಸಿಯುಂ ಅತಿಸಾಂದ್ರತೆಯನಪ್ಪುಗೈದೆಳೆನೇಸರಳವಿಗಳಿದ ಕನಕರುಚಿ ರುಚಿರತರಕರನಿಕರಂ ಪರಿರಂಜಿಸಿ ಪರ್ಬಿ ಕಣ್ಗೊಪ್ಪುತ್ತುಮಿರ್ದುದಾ ಪ್ರಸ್ತಾವದೊಳ್

ಚಂ॥ ವಿಮಳಿನ ಚಂದ್ರಕಾಂತಿ ತನುತಂತುಗಳಂ ಮಿಗೆ ನುಂಗಿ ಪಿಂಗದಾ
ಕ್ರಮಿಪ ಪತಂಗದಿಂದಗಿದು ಪೊಕ್ಕ ಸೆಲಂದಿ[1]ಪೊಲೊಪ್ಪೆ ಲಾಂಛನಂ
ಕಮಳಜ ಶಿಲ್ಪಿಕಲ್ಪಿತ ಜಗದ್ಗೃಹದಗ್ರದೊಳೊಪ್ಪಿದತ್ತು ಚಂ
ದ್ರಮನದಟಿಗೊಂದುಗೂಡೆನೆ ನಿರೀಕ್ಷಣೆಗೀಕ್ಷಿಪ ಭೂಜನೌಘದಾ ೪೦

ವ॥ ಆಗಳ್

ಚಂ॥ ನವವಿಧನವ್ಯಭಕ್ತಿ ಮಿಗೆ ಶಂಭು ಸಮರ್ಚನೆಗೆಯ್ದು ದಿವ್ಯ ಶಾಂ
ಭವಪರಮಂತ್ರಮಂ ಜಪಿಸಿ ತಾಳ್ದು ತದಂಘ್ರಿಪಯಃಪ್ರಸಾದಮಂ
ಸವಿನಯಮಾಂತಳಂ ಕರಣಸಂಕುಳಮಂ ವರವಂದಿಮಾಗಧ
ಸ್ತವರವಮುಣ್ಮೆ ಬಂದನೆನೆವೋಲಗಶಾಲೆಗಿಳಾಧಿನಾಯಕಂ ೪೧

ವ॥ ಅಂತೇಳ್ತಂದು ಮಣಿಗಣಾಗಣಿತರುಚಿನಿಚಯನಿಚಿತ ಸಮುತ್ತುಂಗಮಂಗಳ ಮೃಗೇಂದ್ರ ವಿಷ್ಟರೋಪವಿಷ್ಟನಾಗಿ ಸಲ್ಲೀಲೆಯಿಂ ಮೆಲ್ಲನೆ ಕುಳ್ಳಿರ್ದು

ಮಲ್ಲಗಾಳಗವನ್ನು ಮಾಡುತ್ತಿರುವಂತೆ ಮನೋಹರತ್ವವನ್ನು ಉಂಟುಮಾಡಿದನು. (ಈ ರೀತಿ) ಅತಿ ದಟ್ಟವಾದ ಬೆಳಕನ್ನು ಹೊಂದಿದ ಬಾಲಸೂರ್ಯನ ಎಣೆಯಿಲ್ಲದ ಬಂಗಾರ ವರ್ಣದ ಮನೋಹರವಾದ ಕಿರಣಗಳ ಸಮೂಹವು ವಿಶೇಷವಾಗಿ ರಂಜಿಸುತ್ತ, ಭೂಮಿಯ ಮೇಲೆ ಹರಡಿ ಕಂಗೊಳಿಸುವಂತೆ (ಬಾಲಸೂರ್ಯನು) ಮಾಡಿದನು. ಆ ಸಮಯದಲ್ಲಿ ೪೦. ಬ್ರಹ್ಮನೆಂಬ ಶಿಲ್ಪಿಯು ಕಟ್ಟಿದ ಜಗತ್ತೆಂಬ ಗೃಹದ ಮೇಲ್ಗಡೆ ಚಂದ್ರ ಮಂಡಲವು ಜೇಡನ ಗೂಡಿನಂತೆ ನೋಡುವ ಜನರಿಗೆ ಕಾಣಿಸಿತು. ಪರಿಶುದ್ಧವಾದ ಚಂದ್ರನ ಕಿರಣಗಳೆಂಬ ಸೂಕ್ಷ್ಮವಾದ ಎಳೆಗಳನ್ನು ನುಂಗುತ್ತ ನುಗ್ಗಿ ಬರುವ ಪಕ್ಷಿಯಂತೆ ಸೂರ್ಯನು ಗೋಚರಿಸಿದನು. ಚಂದ್ರಮಂಡಲದಲ್ಲಿದ್ದ ಕಳಂಕವು ಆ ಪತಂಗಕ್ಕೆ ಹೆದರಿ ಗೂಡಿನ ನಡುವೆ ಅಡಗಿದ ಜೇಡರ ಹುಳುವಿನಂತೆ ಕಾಣಿಸಿತು. ವ|| ಆ ಸಮಯದಲ್ಲಿ ೪೧. ರಾಜಶೇಖರಮಹಾರಾಜನು ನವವಿಧವಾದ ನೂತನ ಭಕ್ತಿಯಿಂದ ಕೂಡಿ ಪರ ಮೇಶ್ವರನ ಪೂಜೆಮಾಡಿ, ಶಂಭುಪರವಾದ ದಿವ್ಯಮಂತ್ರಗಳನ್ನು ಜಪಿಸಿ, ಅವನ ಪಾದೋದಕ ಪ್ರಸಾದಗಳನ್ನು ವಿನಯದಿಂದ ಸೇವಿಸಿ, ಅಲಂಕಾರಗಳನ್ನು ಧರಿಸಿಕೊಂಡು, ವಂದಿಮಾಗ ಧರ ಸ್ತುತಿಪಾಠಗಳೊಡನೆ ಕೂಡಿ ಓಲಗಶಾಲೆಗೆ ಬಂದನು. ವ|| ಹಾಗೆ ಆ ರಾಜಶೇಖರ ಮಹಾರಾಜನು ಬಂದು ಅಗಣಿತ ರತ್ನಸಮೂಹಗಳ ಕಾಂತಿಯ ಪುಂಜದಿಂದ ವ್ಯಾಪ್ತ ಗೊಂಡು ಶೋಭಿಸುವ ಎತ್ತರವೂ ಮಂಗಳಮಯವೂ ಆದ ಸಿಂಹಾಸನದ ಮೇಲೆ ಲೀಲೆ

1 ಟಿಪ್ಪಣಿ : ಪತಂಗ = ಪಕ್ಷಿ; ಸೂರ್ಯ. ಸೆಲಂದಿ = ಜೇಡರ ಹುಳು.

ಕಂ॥ ಉದಯಾಚಲಾಗ್ರದೊಳ್ಮೂ
ಡಿದ ಪೂರ್ಣಸುಧಾಕರಂಗೆ ದೊರೆಯಾದಂ ತಾ
ಳ್ದಿದ ಮಣಿದೊಡವಿನ ಕೆಂಬೆಳ
ಗೊದವಿರೆ ರಾಜಂ ಸಭಾನಭಸ್ಥಳದೆಡೆಯೊಳ್ ೪೨

ಮ॥ಸ್ರ॥ ನೆರೆದೇಳ್ತಂದಿರ್ದುದಾಸ್ಥಾನದೊಳಮಮ ಮಹಾಮಾತ್ಯ ಸಂದೋಹಮುರ್ವೀ
ಶ್ವರವೃಂದಂ ಸತ್ಕವೀಂದ್ರಪ್ರತತಿ ವಿಬುಧಸಂತಾನಮುದ್ಗಾಯಕಪ್ರೋ
ತ್ಕರಮುದ್ಯದ್ವಾವದೂಕಾವಳಿ ಭರತಕಳಾವಿತ್ಕುಳಂ ವೇದವಿದ್ರಾ
ಜಿ ರಸಜ್ಞಶ್ರೇಣಿ ವಂದಿವ್ರಜಮತನು ಕಳಾಕಾಂತಕಾಂತಾಕದಂಬಂ ೪೩

ಚಂ॥ ಸುಲಲಿತ ದೋರ್ಲತಾ ಕುಸುಮಮಂಜರಿಯಂತಿರೆ ಚಾಮರಂ ಸಮು
ಜ್ವಲಮುಖಚಂದ್ರ ಚಂದ್ರಿಕೆಯಿದೆಂಬಿನಮುಣ್ಮಿರೆ ಲೋಚನಾಂಶು ಮಂ
ಜುಲತರ ಮಂದಗಂಧವಹನಂತಿರೆ ಸುಯ್ಯೆಲರುರ್ವೆ ನಿಂದು ಕೋ
ಮಲೆಯರೊಡರ್ಚಿದರ್ಸಿರಿಯ ಮೈಸಿರಿಯಂ ನವಚೈತ್ರರಾಜನಾ ೪೪

ಯಿಂದ ಮೆಲ್ಲನೆ ಕುಳಿತನು. ೪೨. ಆ ಸಭೆಯೆಂಬ ಆಕಾಶಸ್ಥಾನದಲ್ಲಿ, ತಾನು ಧರಿಸಿದ್ದ ಮಣಿಖಚಿತ ಭೂಷಣಗಳ ಕೆಂಪಾದ ಬೆಳಕಿನಿಂದ ಮಹಾರಾಜನಾದ ಆ ರಾಜಶೇಖರನು ಉದಯಾಚಲದ ಮೇಲೆ ಆಗ ತಾನೇ ಉದಯಗೊಂಡು ಕಾಣುವ ಹುಣ್ಣಿಮೆಯ ಚಂದ್ರನಿಗೆ (ರಾಜನಿಗೆ) ಸಮಾನವಾಗಿ ಕಂಡನು. ೪೩. ಅವನ ಆ ಆಸ್ಥಾನದಲ್ಲಿ ಮಹಾಮಾತ್ಯರುಗಳ ಸಂದೋಹವೂ, ಭೂಮೀಶ್ವರರುಗಳಾದ ಸಾಮಂತರುಗಳ ಸಮೂಹವೂ, ಸತ್ಕವಿಶ್ರೇಷ್ಠರ ತತಿಯೂ, ಪಂಡಿತರುಗಳ ಗುಂಪೂ, ಶ್ರೇಷ್ಠ ಸಂಗೀತಗಾರರುಗಳ ಜಂಗುಳಿಯೂ, ವಾದಿಗಳ ಸಮೂಹವೂ, ಭರತನಾಟ್ಯಶಾಸ್ತ್ರನಿಪುಣರ ಗುಂಪೂ, ವೇದಜ್ಞಾನವುಳ್ಳವರ ಸಾಲೂ, ರಸಾಸ್ವಾದನಪರಿಣತಮತಿಗಳ ಸಂಕುಲವೂ, ಸ್ತುತಿಪಾಠಕರ ಸಮೂಹವೂ, ಮನ್ಮಥಕಲಾಶೋಭೆಯಿಂದ ಕೂಡಿದ ಕಾಂತಾಜನದ ಸಮೂಹವೂ, ಅಬ್ಬಾ! ಕಿಕ್ಕಿರಿದು ನೆರೆದಿತ್ತು. ೪೪. ಸುಲಲಿತವಾದ ಬಾಹುಗಳೆಂಬ ಬಳ್ಳಿಗಳ ಹೂಗೊಂಚಲುಗಳ ಹಾಗೆ ಕೋಮಲೆಯರ ಕೈಗಳಲ್ಲಿ ಚಾಮರಗಳು ಇದ್ದವು. ಅವರ ಕಣ್ಣುಗಳ ಕಾಂತಿಯು ವಿಶೇಷವಾಗಿ ಉಜ್ವಲಗೊಂಡ ಮುಖನೆಂಬ ಚಂದ್ರನ ಬೆಳದಿಂಗಳಂತೆ ಹರಡುತ್ತಿತ್ತು. ಹೊರಸೂಸುವ ಉಸಿರು ಮನೋಹರವಾದ ಮಂದಮಾರುತನಹಾಗೆ ಹಬ್ಬುತ್ತಿತ್ತು. ಈ ರೀತಿ ಆ ಕೋಮಲೆಯರು ನೂತನವಾಗಿ ಬಂದ ಚೈತ್ರರಾಜನ ಮೈಸಿರಿಯ ಸಂಪತ್ತನ್ನುಂಟುಮಾಡುವಂಥವರಾಗಿದ್ದರು.

ಮುರಿದೆಳವಿಾಸೆ ನೀಳ್ದ ನಗೆಗಣ್ಬೊಗರಾಂತ ಮೊಗಂ ಪೊದಳ್ದ ಪೇ
ರುರಮುರುಬಾಹು ಭಾಸುರಕಿರೀಟಮುದಗ್ರ ಸುವರ್ಣಭೂಷಣಂ
ಕರದ ಸಿತಾಸಿ ಕತ್ತುರಿಯ ಬೊಟ್ಟೆಡಗಾಲ ತೊಡರ್ವಿ ರಾಜಿಸು
ತ್ತಿರೆ ಪೊಸದೇಸಿವೆತ್ತೆಸೆದುದಲ್ಲಿ ನರೇಂದ್ರಕುಮಾರಸಂಕುಳಂ ೪೫

ಕಂ॥ ಅಹಮಹಮಿಕಾಭಿನತನುತ
ಮಹೀಶ್ವರಸ್ವರ್ಣಮಕುಟಘರ್ಷಣ ನಿಪತ
ದ್ಬಹುಕನಕರಜೋಗುಣಮು
ದ್ವಹಿಸಿದುದು ತದಂಘ್ರಿಪದ್ಮರೇಣುಸ್ಥಿತಿಯಂ ೪೬

ಮ॥ ನಸುನೋಟಂ ಪೊಸಬೇಟಮಂ ಯುವನೃಪಾಲಸ್ವಾಂತದೊಳ್ ಪೊಕ್ಕು ಪು
ಟ್ಟಿಸೆ ಮಂದಸ್ಮಿತ ಚಂದ್ರಸಾಂದ್ರರುಚಿ ತನ್ನೇತ್ರೋತ್ಪಳಕ್ಕಾಂಪನು
ರ್ವಿಸೆ ಚಾಟ್ವಾತು ಧನುರ್ಗುಣಕ್ವಣಿತಮಂ ಪುಷ್ಪಾಸ್ತ್ರನೀಂದಾಗಳಾ
ಗಿಸೆ ಪಣ್ಯಾಜನಮಿರ್ದುದೋಲಗದೊಳುರ್ವೀಕಾಮಿನೀಕಾಂತನಾ ೪೭

೪೫. ಆ ಸಭಾಸ್ಥಾನದಲ್ಲಿದ್ದ ನರೇಂದ್ರಕುಮಾರರುಗಳ ಸಮೂಹವು ಮುರಿದ ಭಂಗಿಯಿಂದ (ಡೊಂಕುಗೊಂಡ) ಕೂಡಿದ ಎಳೆಯ ಮಿಾಸೆಗಳಿಂದಲೂ, ಉದ್ದವಾಗಿ ಹರಡಿದ ನಗೆಗಣ್ಣಿನ ಕಾಂತಿಯನ್ನು ಹೊಂದಿದ ಮುಖದಿಂದಲೂ, ಉಬ್ಬಿದ ಎದೆಯಿಂದಲೂ, ಶ್ರೇಷ್ಠ ಬಾಹುಗಳಿಂದಲೂ, ಪ್ರಕಾಶಮಾನವಾದ ಕಿರೀಟಗಳಿಂದಲೂ, ಶ್ರೇಷ್ಠವಾದ ಸುವರ್ಣಭೂಷಣಗಳಿಂದಲೂ, ಕೈಯಲ್ಲಿ ಹಿಡಿದ ಕಠಾರಿ, ಕಸ್ತೂರಿಯ ತಿಲಕ, ಎಡಗಾಲಿನಲ್ಲಿ ಹಾಕಿದ ಬಿರುದಿನ ಬಳೆ_ಇವುಗಳಿಂದಲೂ ನೂತನ ಸೌಂದರ್ಯವನ್ನು ಹೊಂದಿ ಶೋಭಿಸುತ್ತಿತ್ತು. ೪೬. ಆ ರಾಜಕುಮಾರರು ರಾಜಶೇಖರಮಹಾರಾಜನಿಗೆ ನಾನು ಮೊದಲು, ತಾನು ಮೊದಲು ಎಂದು ಮುಂದೆ ಬಂದು ನಮಸ್ಕರಿಸುತ್ತಿರುವ ಸಮಯದಲ್ಲಿ, ಅವರ ಕಿರೀಟಗಳ ಪರಸ್ಪರ ಬಡಿದಾಡಿದ ಫಲವಾಗಿ, ಆ ಬಂಗಾರದ ಕಿರೀಟಗಳಿಂದ ಉದುರಿದ ವಿಶೇಷವಾದ ಬಂಗಾರದ ಕಣಗಳು (ಧೂಳು) (ಆ ರಾಜಶೇಖರಮಹಾರಾಜನ) ಪಾದಗಳಿಗೆ ಮೆತ್ತಿಕೊಂಡುದರಿಂದ ಅದು ಅವನ ಕಾಲುಗಳೆಂಬ ಕಮಲದ ಧೂಳಿನ ರೀತಿಯಲ್ಲಿ ಕಾಣುತ್ತಿತ್ತು. ೪೭. ಭೂಮಿಕಾಂತೆಯ ಕಾಂತನಾದ ಆ ರಾಜಶೇಖರಮಹಾರಾಜನ ಆಸ್ಥಾನದಲ್ಲಿ, ನೆರೆದಿದ್ದ ವೇಶ್ಯಾಸ್ತ್ರೀಯರುಗಳ ಕಡೆಗಣ್ಣುಗಳ ನಸುನೋಟವು ಯುವಕರಾದ ರಾಜರ ಹೃದಯದಲ್ಲಿ ಹೊಕ್ಕು ಅವರಲ್ಲಿ ನೂತನವಾದ ಪ್ರೀತಿಯನ್ನುಂಟುಮಾಡುತ್ತಿತ್ತು. ಮಂದಹಾಸವೆಂಬ ದಟ್ಟವಾದ ಬೆಳದಿಂಗಳು, ಆ ತರುಣರಾಜರ ನೇತ್ರಗಳೆಂಬ ಕನ್ನೈದಿಲೆಗಳಿಗೆ ಇಂಪುಂಟಾಗುವಂತೆ ಮಾಡುತ್ತಿತ್ತು. ಅವರ ಚತುರೋಕ್ತಿಗಳು, ಮನ್ಮಥನು ತನ್ನ ಬಿಲ್ಲಿನ ಹೆದೆಯನ್ನೇರಿಸಿ ಝೇಂಕಾರಮಾಡುವಂತೆ ಝೇಂಕರಿಸು

ಉ॥ ತೋಳ ಪೊಗರ್ ಮನೋಭವನ ಬಾಳ ಪೊಗರ್ನಯನಾಂಚಳಪ್ರಭಾ
ಜಾಳಮನಂಗಜಾಳಮಮಳಸ್ಮಿತಸಾರಮರೀಚಿಮಾರರು
ಜ್ಜೌಳಿಮರೀಚಿಮಂಜುಮಣಿಭೂಷಣತೇಜಮೆ ದರ್ಪಕಕ್ಷಿತೀ
ಪಾಳಕತೇಜಮೆಂಬಿನಮದೇನೆಸೆದಿರ್ದುದೊ ತದ್ವಧೂಜನಂ ೪೮

ವ॥ ಮತ್ತಂ

ಚಂ॥ ತೊಳಗುವ ತೊಂಡೆವಾಯ್ದೆರೆಯ ನೀಳ್ದಲರ್ಗಂಗಳ ತೆಳ್ಗದಂಪಿನಿ
ಟ್ಟಳಮೆಡೆಗೊಂಡ ಪೆರ್ಮೊಲೆಯ ಪೊಂಜೆಳೆಮೆಯ್ಯಯ ಪೊಗರ್ಪೊದಳ್ದ ತೋ
ಳ್ಗಳ ಕಡುಬಿಣ್ಪನಾಳ್ದ ಪೊಜವಾರ್ಗಳ ತೆಳ್ವಸುರಳ್ಪ ಜವ್ವನಂ
ದಳೆದ ಬೆಡಂಗುವೆಣ್ಗಳೊಸೆದೊಪ್ಪಿದರೋಲಗದೊಳ್ ನರೇಂದ್ರನಾ ೪೯

ಉ॥ ಓರೆದುಱುಂಬು ತುಂಬುವೆಱೆಯಂದದ ಮುದ್ದುಮೊಗಂ ಪೊದಳ್ದ ಕ
ಲ್ಹಾರದ ಚೊಲ್ಲೆಯುಂ ತೊಳಪ ಮೂಕುತಿ ಕತ್ತುರಿಬೊಟ್ಟು ಮುತ್ತಿನೊ
ಳ್ಳಾರಮುರೋಜಮಂಡಳದ ಮಾಣಿಕದೈಸರಮಣ್ಪುಗೆಯ್ದು ಕಾ
ಶ್ಮೀರವಲಂಪನೀಯೆ ಮೆಱೆದಿರ್ದುದು ಮುಗ್ಧವಧೂಕದಂಬಕಂ ೫೦

ತ್ತಿದ್ದವು. ೪೮. ತೋಳುಗಳ ಪ್ರಕಾಶವು ಮನ್ಮಥನ ಖಡ್ಗದ ಪ್ರಕಾಶದಂತೆಯೂ, ಕಡೆಗಣ್ಣುಗಳ ಕಾಂತಿಯ ಸಮೂಹವು ಮನ್ಮಥರುಗಳ ಸಮೂಹದಂತೆಯೂ, ಶ್ರೇಷ್ಠವಾದ ಮುಗುಳ್ನಗೆಯ ಸಾರಭೂತವಾದ ಕಿರಣಗಳು ಅನೇಕ ಮನ್ಮಥರುಗಳ ತಲೆಯ ಕಿರೀಟದ ಕಾಂತಿಯಂತೆಯೂ, ಮಂಜುಳವಾದ ತೊಟ್ಟ ರತ್ನಾಭರಣಗಳ ತೇಜಸ್ಸು ಮನ್ಮಥನೆಂಬ ಭೂಮೀಶ್ವರನ ತೇಜಸ್ಸಿನಂತೆಯೂ ಇರಲು, ಆ ಸ್ತ್ರೀಜನಸಮೂಹವು ಅದೇನು ಪ್ರಕಾಶಿಸುತ್ತಿತ್ತೋ! ವ॥ ಮತ್ತ ೪೯. ಹೊಳೆಯುವ ತೊಂಡೆಯಹಣ್ಣಿನಂತಹ ತುಟಿಗಳ, ವಿಶಾಲವಾದ ಪುಷ್ಪಸದೃಶ ನೇತ್ರಗಳ, ನುಣ್ಣನೆಯ ಕೆನ್ನೆಗಳ, ಕರ್ಕಶತ್ವದಿಂದಿರುವ ದಪ್ಪನೆಯ ಮೊಲೆಗಳ, ಬಂಗಾರದ ಜಲದಂತೆ ಕಾಣುವ ಮೈಯ, ಪ್ರಕಾಶಮಾನವಾದ ತೋಳುಗಳ, ವಿಶೇಷವಾಗಿ ಗಟ್ಟಿಯಾಗಿರುವ ನಿತಂಬಗಳ, ತೆಳ್ಳನೆಯ ಹೊಟ್ಟೆಯ, ನೂತನ ಪ್ರಾಯದ ಬೆಡಗಿನಿಂದ ಕೂಡಿದ ಸ್ತ್ರೀಯರುಗಳು ಆ ನರೇಂದ್ರನ ಸಭೆಯಲ್ಲಿ ಪ್ರಕಾಶಗೊಂಡಿದ್ದರು. ೫೦. ಓರೆಯಾಗಿ ಕಟ್ಟಿಕೊಂಡಿರುವ ತುರುಬು, ಪೂರ್ಣಚಂದ್ರನಂತಿರುವ ಮುಖಮಂಡಲ, ಪ್ರಕಾಶಮಾನವಾದ ಕಲ್ಹಾರ, ಪುಷ್ಪದಂತಿರುವ ಜಡೆಬಿಲ್ಲೆ, ಹೊಳೆಯುತ್ತಿರುವ ಮೂಗುಬೊಟ್ಟು, ಹಣೆಯ ಕಸ್ತೂರಿಯ ತಿಲಕ, ಕೊರಳ (ಇಪ್ಪತ್ತೇಳು) ಮುತ್ತುಗಳ (ನಕ್ಷತ್ರ) ಹಾರ, ಸ್ತನಮಂಡಲದಲ್ಲಿ ಶೋಭಿಸುವ ಮಾಣಿಕ್ಯಮಣಿಯುಳ್ಳ ಐಸೆಳೆಯ ಸರ, ಲೇಪಿಸಿಕೊಂಡಿದ್ದ ಕುಂಕುಮ ಕೇಸರಿ–ಇವುಗಳಿಂದ ಮನೋಹರತ್ವವನ್ನು ಉಂಟುಮಾಡುತ್ತ ಶೋಭಿಸುವ ಸುಂದರಿಯ

ಮಲ್ಲಿಗೆ ಮಾಮರಂ ಮಧು ಮಧುವ್ರತಮೌರ್ವಿ ಮನೋಜ್ಞಮಾದರಲ್
ವಿಲ್ಲಲರಂಬು ತೆಂಬೆಲರಲರ್ದ ನವಾಂಬುಜಮಂಚೆ ಕೊಂಚೆ ಕಂ
ಕೆಲ್ಲಿ ಶುಕಂ ಪಿಕಂ ಶಶಿಯೆನಿಪ್ಪವರಂಗದ ಪಂಗದೇಕೆನು
ತ್ತಲ್ಲಿ ಜಗಜ್ಜಯಾರ್ಥಮವರಂಗಮನಂಗಜನೊಲ್ದು ಸೇವಿಪಂ ೫೧

ಹಾರಮಯೂಖ ನಿರ್ಜರಪಯೋಧರಕೇಳಿ ನಗೇಂದ್ರಯೌವನೋ
ದಾರವನಸ್ಥನಾಭಿಸರದೊಳ್ ರತಿಗಂಗಜನೊತ್ತಲೆಂದು ಕೆ
ಯ್ಯಾರೆ ಕಡಂಗಿ ಸಾರ್ಚಿದುರು ನೀಲಮಯೋದಕ ಯಂತ್ರದಂಡದಂ
ತಾ ರಮಣೀಜನವ್ರಜದ ಬಾಸೆಯದೇಂ ಕಡುಚೆಲ್ವನಾಳ್ದುದೋ ೫೨

ಪಾಡದ ರಾಗಮೋದದಿನಿಗಬ್ಬಮೊಡರ್ಚದ ಸಿಂಗರಂ ಬೆಳ
ರ್ಮಾಡದಗಲ್ದರಾನನಮಳುಂಬಮನಾನದ ನಲ್ಮೆ ಜಾಣ್ಮೆಯಿಂ
ದಾಡದ ಮಾತು ಮಚ್ಚದ ಲಸತ್ಕಳೆ ಮನ್ನಿಸದೊಳ್ಪು ನೋಳ್ಪರೊಳ್
ಕೂಡದ ಬೇಟಮಾಕೆಯರಿಗಿಲ್ಲೆನೆ ಕೂರ್ಪರದೇಂ ಕೃತಾರ್ಥರೋ ೫೩

ರಾದ ಸ್ತ್ರೀಸಮೂಹವು (ಆ ಆಸ್ಥಾನದಲ್ಲಿ) ಮೆರೆಯುತ್ತಿತ್ತು. ೫೧. ಮಲ್ಲಿಗೆ ಹೂವು, (ಚಿಗಿತ) ಮಾವಿನಮರ, ವಸಂತ, ದುಂಬಿಗಳ ಮೌರ್ವಿ, ಮನೋಜ್ಞವಾದ ಪುಷ್ಪಚಾಪ, ಪುಷ್ಪಗಳ ಬಾಣ, ತಂಗಾಳಿ, ಅರಳಿದ ನೂತನ ಕಮಲಗಳು, ಹಂಸಪಕ್ಷಿ, ಕ್ರೌಂಚಪಕ್ಷಿ, ಅಶೋಕವೃಕ್ಷ, ಗಿಳಿ, ಕೋಗಿಲೆ, ಚಂದ್ರ—ಮುಂತಾದುವುಗಳ ಸೌಂದರ್ಯದ ಹಂಗಾದರೂ ಜಗತ್ತನ್ನು ಜಯಿಸುವುದಕ್ಕೆ ಏತಕ್ಕೆಬೇಕು—ಎನ್ನುತ್ತ ಅವರ ದೇಹಗಳನ್ನೇ ಮನ್ಮಥನು ಪ್ರೀತಿಯಿಂದ ಸೇವಿಸುತ್ತಿದ್ದನು. ೫೨. ಹಾರಮಯೂಖಗಳೆಂಬ ಝರಿಗಳಿಂದ ಕೂಡಿ, ಸ್ತನಗಳೆಂಬ ಕ್ರೀಡಾಪರ್ವತಗಳಿಂದ ತುಂಬಿದ ಯೌವನವೆಂಬ ವನದಲ್ಲಿರುವ (ಜಲಕ್ರೀಡೆ ಯಾಡುವ) ಮನ್ಮಥನು ನಾಭಿಯೆಂಬ ಸರೋವರದಲ್ಲಿ ನೀರನ್ನು ಕೈಯಾರ ತಳ್ಳಲಿಕ್ಕೆಂದು, ಉತ್ಸಾಹದಿಂದ ಕೊಟ್ಟ ನೀಲಮಯವಾದ ಉದಕಯಂತ್ರದಂಡದ ಹಾಗೆ ಆ ಸ್ತ್ರೀಯರುಗಳ ಸಮೂಹದ ಬಾಸೆಯು ಅದೇನು ಚೆಲುವಿಕೆಯನ್ನು ಹೊಂದಿತ್ತೋ! (ನಾಭಿಯೆಂಬ ಸರೋವರದಲ್ಲಿ ರತಿಮನ್ಮಥರು ದೋಣಿಯಲ್ಲಿ ಜಲಕ್ರೀಡೆಯಾಡುತ್ತಿದ್ದಾರೆ. ಆಗ ರತಿಯ ಕೈಗೆ ಮನ್ಮಥನು ನೀರನ್ನು ಹಿಂದಕ್ಕೆ ತಳ್ಳುವ ಹುಟ್ಟು ಎಂಬ ಒಂದು ಸಾಧನ ವನ್ನು ಕೊಟ್ಟಿರುವನೋ ಎಂಬಂತೆ ಹೊಕ್ಕಳ ಮೇಲಿನ ಕೂದಲಿನ ಗೆರೆ ಕಾಣುತ್ತಿತ್ತೆಂದು ಭಾವ. 'ನಿರ್ಜರ' ಎಂಬ ಶಬ್ದ 'ನಿರ್ಝರ' ಎಂದಿರಬೇಕಾಗಿತ್ತು.) ೫೩. ಹಾಡದ ರಾಗವೂ, ಓದದ ರಸಭರಿತ ಕಾವ್ಯವೂ, ಧರಿಸದ ಶೃಂಗಾರವೂ, ಭ್ರಾಂತಿಗೊಳಿಸದ ವಿರಹಿಜನಗಳ ಮುಖವೂ, ಆಧಿಕ್ಯವಿಲ್ಲದ ಪ್ರೀತಿಯೂ, ಜಾಣ್ಮೆಯಿಲ್ಲದ ಮಾತೂ, ಮೆಚ್ಚುಗೆಗೆ ಬರದಿರುವ ಕಲಾನೈಪುಣ್ಯತೆಯೂ, ಮನ್ನಣೆ ಮಾಡದಿರುವ ಒಳ್ಳೆಯ ತನವೂ, ನೋಡುವವರಲ್ಲಿ ಕೂಡದೆ ಇರುವ ಪ್ರೀತಿಯೂ ಆ ಸ್ತ್ರೀಯರಲ್ಲಿ ಇರಲಿಲ್ಲ

ಕಂ॥ ಅತನುತ್ವಂ ಜಘನದೊಳು
ನ್ನತ ಕುಚದೊಳನಲ್ಪ ದರ್ಪಕತ್ವಂ ಮಧುಮಿ
ತ್ರತೆ ವಚನದೊಳಿರೆ ಕಾಂತಾ
ತತಿ ಪಡೆಯದೆ ಕಾಮಿನೀಸಮಾಖ್ಯೆಯನಿಳೆಯೊಳ್ ೫೪

ವ॥ ಎನಿಸಿ ರಂಜಿಸಿ

ಚಂ॥ ಎಮೆದುಱುಗಲ್ಕವಲ್ತು ಕುಡಿಗೊಂಡವೊಲಾಗಿರೆ ಸೋಗೆ ಸೋಗೆಯುಂ
ತೆಮುರ್ವವೊಲೊಪ್ಪೆ ಸೋರ್ಮುಡಿ ಸಮಸ್ತನಮಸ್ತ ನಗೇಂದ್ರದಂತೆ ಚೆ
ಲ್ವಮರೆ ನಖಾಂಕಚಂದ್ರಕಳೆಯಿಂ ಕಳೆಯಂ ತಳೆದಾನನಾಬ್ಜಮ
ಬ್ಜಮನಿಳಿಕೆಯ್ಯೆ ಕಂಗೆಸೆದುದಗ್ಗದ ಪೂರ್ವವಿಳಾಸಿನೀಜನಂ ೫೫

ಅಳಿಕುಳಮಂ ಪ್ರಸೂನ ವಿಳಸತ್ಕಬರೀಭರಮುನ್ಮರಾಳಮಂ
ದಳಿಯನುದಾತ್ತಮಂದಗತಿ ಗಂಧಸಮೀರಣನಂ ಸಗಂಧಮಂ
ದಿಳಿವೆಳೆಸುಯ್ಲುಮೆಂತು ಸೆಱೆಗೆಯ್ಯದೆ ತಾಂ ಸೆಱೆಗೈದುದೇ ನಿಜೋ
ಜ್ವಳರುಚಿರೂಪವೊಂದೆ ಯುವನೇತ್ರಮನಾ ಯುವತೀಪ್ರತಾನದಾ ೫೬

ವೆನ್ನುವಾಗ ಅಂಥವರಲ್ಲಿ ಪ್ರೀತಿಗೊಳ್ಳುವವರು ಅದೇನು ಕೃತಾರ್ಥರೋ! ೫೪. ಆ ಸ್ತ್ರೀಯರುಗಳ ಜಘನದಲ್ಲಿ ಅತನುತ್ವವೂ (ದಪ್ಪವಾಗಿರುವಿಕೆ), ಉನ್ನತ ಕುಚಗಳಲ್ಲಿ ಅಲ್ಪವಲ್ಲದ ದರ್ಪಕತ್ವ, ವಚನಗಳಲ್ಲಿ ಮಧುಮಿತ್ರತೆ—ಇವುಗಳಿರಲು ಇಂಥ ಸ್ತ್ರೀಯರುಗಳು 'ಕಾಮಿನಿಯರು' ಎಂಬ ಹೆಸರನ್ನು ಈ ಭೂಮಿಯಲ್ಲಿ ಪಡೆಯುವುದಿಲ್ಲವೇ? (ಅತನು, ದರ್ಪಕ, ಮಧುಮಿತ್ರ—ಇವು ಮೂರೂ ಮನ್ಮಥನ ಹೆಸರು. ಕಾಮಿನಿ= ಕಾಮನನ್ನು ಉಳ್ಳವಳು ಎಂಬ ಅರ್ಥದಿಂದ ಚಮತ್ಕಾರ) ವ॥ ಹೀಗೆ ಎನಿಸಿ ಶೋಭಿಸುತ್ತ ೫೫. ಕಣ್ಣಿವೆಗಳ ದಟ್ಟವಾದ ಕೂದಲುಗಳೇ ಕವಲೊಡೆದು ಕುಡಿಗೊಂಡ ಹಾಗೆ ಕಡೆಗಣ್ಣಿನ ಗೆರೆಯು ಮುಂದುವರಿದಿತ್ತು. ನವಿಲನ್ನು ತಿರಸ್ಕಾರ ಮಾಡುವಂತೆ ಒಪ್ಪುವ ಉದ್ದವಾದ ಮುಡಿ ಇತ್ತು. ಸಮಾನವಾದ ಮೊಲೆಗಳು ಪಶ್ಚಿಮ ದಿಕ್ಕಿನಲ್ಲಿರುವ ಪರ್ವತದ್ವಯಗಳಂತೆ ಚೆಲುವುಗೊಂಡಿದ್ದುವು. ಉಗುರುಗಳು ಚಂದ್ರನ ಕಳೆಯಿಂದ ಒಳಗೊಂಡಿದ್ದುವು. ಕಳಾಪೂರ್ಣವಾದ ಮುಖಕಮಲವು ಕಮಲವನ್ನು (ಚಂದ್ರನನ್ನು ಅಪ್ + ಜ—ನೀರಿನಲ್ಲಿ ಹುಟ್ಟಿದವನು—ಚಂದ್ರ) ತಿರಸ್ಕರಿಸುವಂತೆ ಇತ್ತು. ಹೀಗೆ ಶ್ರೇಷ್ಠರಾದ ಆ ವಿಲಾಸಿನಿಯರು ಕಣ್ಣಿಗೆ ಮನೋಹರವಾಗಿ ಕಂಡರು. ೫೬. ಆ ಯುವತಿಯರ ಆ ಶರೀರಗಳ ಉಜ್ವಲಪ್ರಕಾಶವೊಂದೇ ಯುವಜನರ ನೇತ್ರಗಳನ್ನು ಸೆರೆಹಿಡಿಯುವಾಗ, ಪ್ರಕಾಶಮಾನವಾದ ಕೇಶದಲ್ಲಿ (ಮುಡಿಯಲ್ಲಿ) ಮುಡಿದ ಹೂವುಗಳು ಅಳಿಗಳ ಸಮೂಹವನ್ನೂ, ಮಂದಗಮನವು ಶ್ರೇಷ್ಠ ಹಂಸಪಕ್ಷಿಗಳನ್ನೂ, ಗಂಧಪೂರ್ಣವಾದ ಇಳಿವ ಎಳೆಯುಸಿರು ಸೌರಭ್ಯಯುಕ್ತವಾದ ಮಂದಮಾರುತವನ್ನೂ ಸೆರೆಗೆಯ್ಯದೆ

ವ॥ ಮತ್ತಮಿಂತು ನಿರತಿಶಯ ಸೌಂದರ್ಯ ಮಾಧುರ್ಯ ಲಾವಣ್ಯ ನೈಪುಣ್ಯ ಸಾರ ಸರ್ವಸ್ವಮಂಗಂಬಡೆದೇಳ್ತಂದಂತಿರ್ದ್ದೈತಂದು ನಿಂದ ನಿತಂಬಿನೀಜನದ ಮಿಱುಪ ಪೆಱನೊಸಲೊಳ್ ಸುಸಿಲ್ಗಡೆಯೊಳ್ ಪಸರಿಸಿ ಪರೆದ ಸುಳಿಗುರುಳ್ಗಳಂ ತಳೆದಿನಿಯನನುಗೊಳಿಸಿ ನೇರ್ಪಡಿಸಿ ಕೂರುಗುರಿಂ ತಿರ್ದಿ ಕೂರ್ಮೆಯಿಂದಿಟ್ಟ ಕತ್ತುರಿಯ ಬಟ್ಟಬೊಟ್ಟು ರಮಣಕರಗ್ರಹಣ ಪೀಡನದಿಂ ಜಡೆವಾವುಗುಳ್ದ ಗರಳರಸಕಳಿಕೆಯೆನೆ ಕಂಗೊಳಿಸಿಯುಂ ಸರಸತರ ಸುರತಸಮಯದೊಳಮರ್ದಪ್ಪಿ ಮನೋರಮಣಂ ಮೊನೆವಲ್ಲ ಕೊನೆಯಿಂ ಕರ್ದುಂಕಲೊಡನೊಸರ್ದಧರದಳದಮೃತರಸಂ ಪಸರಿಸಿರ್ದುದೆನಿಸಿ ದಶನವಸನಕಿಸಲಯದೊಳ್ ಹಸನರಸಂ ಮಿಸುಗೆಯುಂ ಸಮದ ಮದನವಿಜಯಾಸ್ಪದಮಾದ ವದನಕಮಲದೊಳ್ ಸಿರಿ ನೆಲೆಗೊಂಡಳೆಂಬ ನಣ್ಪಿಂ ಬಂದು ಕೇಳಿಯಿಂ ಕೆಳೆಗೊಳಲೆಳಸಿ ಕೆಲಂಬಿಡಿದು ನಿಂದ ಚಂದ್ರಬಿಂಬಮೆಂಬ ಬಗೆಗಡರ್ಪಾಗಿ ಥಳಥಳಿಸಿ ಪೊಳೆವ ಮೌಕ್ತಿಕಮಣಿಖಚಿತ ಕರ್ಣಪತ್ರಂ ನೇತ್ರಶೋಭಾವಹಮಾಗಿಯುಂ ದರ್ಪಣದೊಳಾಗಸದ ನೆಳಲ್ ಪೊಳೆವಂತೆ ಕಪೋಲದರ್ಪಣದೊಳ್ ನೋಳ್ಪ ಮೈಯಿಲ್ಲದ ಮದನನ ಪಡಿನೆಳಲ್ ತೋರ್ಪುದೆನೆ ಮೃಗಮದ ರಸರಚಿತ ಮಕರಿಕಾಪತ್ರಮತಿವಿಚಿತ್ರಮಿದ್ದೀತೇ ?

ವ|| ಈ ರೀತಿ ಅತ್ಯಂತ ಸೌಂದರ್ಯ, ಮಾಧುರ್ಯ, ಲಾವಣ್ಯ, ನೈಪುಣ್ಯಗಳ ಸಾರಸರ್ವಸ್ವವೇ ಶರೀರ ಧರಿಸಿ ನಡೆದು ಬಂದ ಹಾಗೆ ಬಂದು ನಿಂತುಕೊಂಡ ಸುಂದರ ಸ್ತ್ರೀಯರ ಮಿರುಗುವ ಅರ್ಧಚಂದ್ರಾಕೃತಿಯ ಹಣೆಯಲ್ಲಿ ರತಿಕ್ರೀಡಾನಂತರ ಚೆಲ್ಲಾಪಿಲ್ಲಿಯಾಗಿ ಹರಡಿದ ಗುಂಗುರುಗೂದಲುಗಳನ್ನು ಪ್ರಿಯನಾದವನು ಅಂದವಾಗಿ ನೇರ್ಪಡಿಸಿ, ತೀಕ್ಷ್ಣವಾದ ಉಗುರುಗಳಿಂದ ತಿದ್ದಿ, ಪ್ರೀತಿಯಿಂದ ಹಣೆಯ ಮೇಲಿಟ್ಟ ಕಸ್ತೂರಿಯ ಬೊಟ್ಟು, ಪ್ರಿಯನಾದವನು ಕೈಹಿಡಿದು ಹಿಸುಕಲಾಗಿ, ಜಡೆಯೆಂಬ ಹಾವು ಉಗುಳಿದ ವಿಷರಸದ ಕಪ್ಪೆಂಬ ಹಾಗೆ ಮನೋಹರವಾಗಿತ್ತು. ಅತಿ ಸರಸದಿಂದ ಕೂಡಿದ ರತಿಕ್ರೀಡಾಸಮಯದಲ್ಲಿ ಗಾಢವಾಗಿ ಆಲಿಂಗನ ಮಾಡಿದ ಮನೋರಮಣನು ತನ್ನ ಚೂಪಾದ ಹಲ್ಲಿನ ತುದಿಯಿಂದ ಕಚ್ಚಲಾಗಿ, ಆ ಕೂಡಲೇ ಕಮಲದಳದಂತಿರುವ ತುಟಿಗಳಿಂದ ಅಮೃತರಸವು (ಅಧರಾಮೃತ ರಸವು) ಒಸರಿ ಪಸರಿಸಿತೋ ಎನ್ನುವ ಹಾಗೆ ಆ ತುಟಿಗಳೆಂಬ ಚಿಗುರುಗಳಿಂದ ಮುಗುಳುನಗೆ ಹೊರಹೊಮ್ಮುತ್ತಿತ್ತು. ಮದಿಸಿದ ಮನ್ಮಥನ ವಿಜಯಕ್ಕೆ ಕಾರಣವಾದ ಮುಖಕಮಲದಲ್ಲಿ ಲಕ್ಷ್ಮೀದೇವಿಯು ನೆಲೆಗೊಂಡಳೆಂಬ ನಂಟನಿಂದ ಬಂದು, ಕೇಳಿಯಿಂದ ಸ್ನೇಹ ಮಾಡಿಕೊಳ್ಳಲು ಬಯಸಿ ಪಕ್ಕದಲ್ಲಿಯೇ ನಿಂತುಕೊಂಡ ಚಂದ್ರಬಿಂಬಗಳೋ ಎಂಬ ಭ್ರಾಂತಿಯನ್ನುಂಟುಮಾಡುತ್ತಿರುವ ಥಳಥಳಿಸಿ ಹೊಳೆಯುವ ಮುತ್ತುರತ್ನಖಚಿತವಾದ ಕರ್ಣಪತ್ರಗಳು ಶೋಭಿಸುತ್ತಿದ್ದವು. ಕನ್ನಡಿಯಲ್ಲಿ ಆಕಾಶದ ಪ್ರತಿಬಿಂಬವು ಹೊಳೆಯುವಂತೆಯೂ ಕಪೋಲವೆಂಬ ಕನ್ನಡಿಯಲ್ಲಿ ಮೈಯೇ ಇಲ್ಲದ ಮನ್ಮಥನ ಪ್ರತಿಬಿಂಬವು ತೋರುತ್ತಿರುವುದೋ ಎನ್ನುವಂತೆಯೂ ಕಸ್ತೂರಿಯ ರಸದಿಂದ ಬರೆಯಲ್ಪಟ್ಟ ಮಕರಿಕಾಪತ್ರವು

ನೊದವಿಸೆಯುಂ ದಾಂಗುಡಿವಿಡುವಪಾಂಗರುಚಿಲತೆ ಮುಗುಳಂ ಪಡೆದಂತೆ ಕೊನೆಗೊಡಂ ಕೆಯೊಳ್ಪೊಳೆವ ಬಾವುಲಿಯ ಬಟ್ಟಮುತ್ತು ಬಗೆಗೊಳಿಸೆಯುಂ ನಿಡುಜೆಡೆಯೆಂಬ ಕಾಳಾಹಿಗಳ್ಕಿ ನೆಲೆವೊಲೆವೆಟ್ಟನೆಡೆವೊಕ್ಕಡಂಗಿದ ನಖಕ್ಷತೇಂದುಕಳೆಯಂನಾರೈಯಲ್ಬಂದು ಪೆಳರ್ದು ತಳರದೆ ಕಾದು ಬಳಸಿ ನಿಂದ ನಕ್ಷತ್ರಮಾಲೆಯೆಂಬಂತೆ ನಕ್ಷತ್ರಮಾಲೆ ಮನೋಜ್ಞತೆಯನಾಲಿಂಗಿಸೆಯುಂ ಮದನ ಮದಗಜದ ಮದರಸಂ ಪತ್ತಿದ ಶುಂಡದಂಡಾಗ್ರಮನದಟಿ ಕಂಪಿಂಗೆಳಸಿ ಬಳಸಿದಳಿಮಾಲೆಯ ಲೀಲೆಯಂ ತಳೆದು ನಳಿತೋಳ ತುದಿಗೊಂಡಮರ್ದುನಿಂದ ಹರಿನೀಲಮಣಿವಲಯಂ ತೊಳ ತೊಳಗೆಯುಂ ವೃತ್ತಂಬೆತ್ತು ಕೊರ್ವಿ ಬಳೆದ ನಿತಂಬಬಿಂಬಮೆಂಬ ಶಂಖರಾರಿಕುಂಭಿ ಕುಂಭಕ್ಕೆ ಬಸಂತನೊಸಗೆ ಮಿಗೆ ಸುತ್ತಿದ ಕನಕಚಂಪಕದಾಮದಂತೆ ಕನಕಕಾಂಚೀದಾಮಮಭಿ ರಾಮತೆಯನೊಳಕೈದು ತೆಜಿಂಬೊಳೆಯೆಯುಂ ಮಿಸುಪ ಮಿಸುನಿವೆಸದ ಪೊಸತೊಡವುಗಳ ಪೊಂಬೆಳಗೆಂಬ ಬಿಸಿವಿಸಿಲ್ಮುಸುಂಕೆ ನುಣ್ದೊಡೆಗಳೆಂಬ ಪೊಂಬಾಳೆಗಂಬಗಳ್ ಕಂದಿದಪುವೆಂದು ಕಂದರ್ಪಂ ಬೆಳ್ದಿಂಗಳಿಂ ಬಾಸಣಿಸಿದಂತೆ ನಿಱಿವಿಡಿದುಟ್ಟ ಧವಳಾಂಬರಮಿಂಬುವಡೆಯೆಯುಂ ತರುಣ ರವಿಕಿರಣದಿಂ ಪೊಂಬಣ್ಣಮೇಱಿ ಸುಸಿಲ ಬಿಸಗುಹದ ನಾಳಮಂ ಬಳಸಿನಿಂದು ಜಿನುಂಗು

ಅತಿ ವೈಚಿತ್ರ್ಯವನ್ನು ನೋಡುವವರಿಗೆ ಉಂಟುಮಾಡುತ್ತಿತ್ತು. ಕುಡಿಚಾಚಿ ಮುಂದು ವರಿಯುವ ಕಡೆಗಣ್ಣಿನ ಕಾಂತಿಯ ಬಳ್ಳಿಯು (ಲತೆಯು) ಮೊಗ್ಗನ್ನೊಡೆದಿದೆಯೋ ಎಂಬ ಹಾಗೆ ಕೊನೆಗಿವಿಯಲ್ಲಿ ಹೊಳೆಯುವ ಬಾವುಲಿಯ ದುಂಡನೆಯ ಮುತ್ತು ಮನೋಹರ ವಾಗಿತ್ತು. ನೀಳವಾದ ಕರಿಯ ಸರ್ಪಕ್ಕೆ ಹೆದರಿ, ದಪ್ಪನೆಯ ಮೊಲೆಗಳೆಂಬ ಬೆಟ್ಟಗಳ ಸಂದಿಯಲ್ಲಿ ಹೊಕ್ಕು ಅಡಗಿದ ನಖಕ್ಷತಗಳೆಂಬ ಚಂದ್ರಕಳೆಯನ್ನು ಹುಡುಕುತ್ತ ಬಂದು, ಹಿಂಜರಿದು ಓಡದೆ ನಿಂತ ನಕ್ಷತ್ರಗಳ ಸಮೂಹವೋ ಎಂಬಂತೆ ಇಪ್ಪತ್ತೇಳು ಮುತ್ತು ಗಳುಳ್ಳ ನಕ್ಷತ್ರಮಾಲಿಕೆಯ ಸರವು ಮನೋಹರವಾಗಿತ್ತು. ಮನ್ಮಥನ ಮದೋನ್ಮತ್ತ ವಾದ ಆನೆಯ ಮದರಸವು ಹತ್ತಿದ ದಂಡಾಕಾರವಾದ ಸುಂಡಿಲ ತುದಿಯ ಸುಗಂಧಕ್ಕೆ ಇಚ್ಛೈಸಿ, ಸುತ್ತುವರಿದ ದುಂಬಿಗಳ ಲೀಲೆಯನ್ನು ಧರಿಸಿ, ನಳಿದೋಳುಗಳ ತುದಿಯಲ್ಲಿ ಮನೋಹರವಾಗಿರುವ ಹರಿನೀಲಮಣಿಯ ಬಳೆಗಳು ಹೊಳೆಹೊಳೆಯುತ್ತಿದ್ದವು. ವೃತ್ತಾಕಾರವಾಗಿ ಕೊಬ್ಬಿ ಬೆಳೆದುನಿಂತ ನಿತಂಬಗಳೆಂಬ ಮನ್ಮಥನ ಆನೆಯ ಕುಂಭ ಸ್ಥಳಕ್ಕೆ ವಸಂತನೆಂಬ ಸಖನು ಸಂತೋಷಗೊಂಡು (ಉತ್ಸಾಹಗೊಂಡು) ಸಂಪಿಗೆ ಹೂವು ಗಳ ಸರವನ್ನು ಸುತ್ತಿರುವನೋ ಎಂಬಂತೆ ಬಂಗಾರದ ಗೆಜ್ಜೆಯ ಪಟ್ಟೆಯು ಮನೋಹರ ವಾಗಿ ಹೊಳೆಯುತ್ತಿತ್ತು ಶೋಭಿಸುವ ಸುವರ್ಣನಿರ್ಮಿತಗಳಾದ ಹೊಸ ಆಭರಣ ಗಳ ಹೊಂಬೆಳಕೆಂಬ ಬಿಸಿಲು ಮುಸುಕಲಾಗಿ, ನುಣ್ಣನೆಯ ತೊಡೆಗಳೆಂಬ ಬಾಳೆಯ ಕಂಬಗಳು ಕಂದಿಹೋಗುತ್ತವೆಂದು ಭಾವಿಸಿ ಮನ್ಮಥನು ಬೆಳದಿಂಗಳಿಂದ ಅವನ್ನು ಮುಚ್ಚಿದ ಹಾಗೆ ನಿರಿಗೆಹಿಡಿದುಟ್ಟ ಧವಳವರ್ಣದ ಸೀರೆಯು ಮನೋಹರವಾಗಿತ್ತು ಬಾಲಸೂರ್ಯನ ಕಿರಣಗಳಿಂದ ಪ್ರಾತಃಕಾಲದಲ್ಲಿ ಬಂಗಾರವರ್ಣವೇರಿದ ಕಮಲದ

ವೆಳೆದುಂಬಿಗಳ ಮಾಲೆಯಂ ಪೋಲ್ತು ಪದಾಗ್ರದೊಳಂದಂಬಡೆದು ಸಲ್ಲೀಲೆಯಿಂ ಮೆಲ್ಲುಲಿಗೊಡುವ ಮಿಸುನಿಯಂದುಗೆ ರಂಜಿಸೆಯುಂ ಇಂತತಿಶಯ ತದೀಯ ಕಮನೀಯ ಶೃಂಗಾರ ಸಾರ ಸಹಜಸೌಂದರ್ಯ ಸೌಕುಮಾರ್ಯ ಮಾಧುರ್ಯನಿಧಿವಿದಿತ ಕೋಶಾಗಾರದಂತೆ ರಾಜೇಂದ್ರ ನೊಡ್ಡೋಲಗಮಾಲೋಕನಕ್ಕೆ ಕೌತುಕಾವಹಮೆನಿಸಿ ಪರಿರಂಜಿಸಿರ್ದುದಂತುಮಲ್ಲದೆಯುಂ

ಚಂ॥ ಮಣಿಗಣದಂತೆ ಮೌಳಿಮಣಿಸಂಕುಳಮೊಪ್ಪಿರೆ ಪೊಕ್ಕಗವ್ರಜ
ಕ್ಕೆಣೆವರೆ ಭೂಭುಜವ್ರಜಮ ನೀರಮದಾಗಿರೆ ಹಾರರೋಚಿ ಸಂ
ದಣಿಸಿರೆ ಚಾರುಚಾಮರ ಮರಾಳಕುಳಂ ಘನವಾದ್ಯಮಬ್ಧಿಘೋ
ಷಣಮೆನೆ ರಾಜರಾಜ ಪರಿವರ್ಧಿತಮಾ ಸಭೆ ವಾರ್ಧಿಯಂತೆವೋಲ್ ೫೭

ವಿತತ ಸದಾನವಾರಿವಿಭವಂ ಪ್ರಮದಾಳಿ ಮನೋಜ್ಞವರ್ಣಸಂ
ಗತ ಹರಿಧಾಮಮುಜ್ವಳ ಕರಾಂಚಿತ ಪುಷ್ಕರಕಾಂತಮುದ್ರ ಸಾ
ಶ್ರಿತ ಘನವಿಗ್ರಹಾಂಚಿತಮುದಾತ್ತ ಬಲಸ್ಥಿತಿ ಪೋಲ್ತುದಿಂದಿರಾ
ಪತಿಪುರಮಂ ಮಹೇಂದ್ರಪುರಮಂ ಗಜಮಂ ಸಭೆ ತನ್ಮಹೀಶನಾ ೫೮

ದಂಟನ್ನು ಸುತ್ತುವರಿದು ನಿಂತು ಮೆಲ್ಲಗೆ ಧ್ವನಿಮಾಡುವ ಅಳಿಗಳ ಮಾಲಿಕೆಯ ಹೋಲಿಕೆಗೊಂಡು, ಕಾಲಿನ ಕೊನೆಯಲ್ಲಿ ಅಂದಗೊಂಡು ಒಳ್ಳೆಯ ಲೀಲೆಯಿಂದ ಮೆಲ್ಲನೆ ಝಣತ್ಕಾರಮಾಡುವ ಬಂಗಾರದ ಕಾಲಂದಿಗೆಗಳು ಮನೋಹರವಾಗಿದ್ದವು. ಹೀಗೆ ಅತಿಶಯವಾಗಿ (ಸಭೆಯಲ್ಲಿದ್ದ) ಆ ಸ್ತ್ರೀಯರ ಮನೋಹರ ಶೃಂಗಾರಸಾರದಿಂದ ಕೂಡಿದುದಾಗಿ, ಸಹಜವಾದ ಸೌಂದರ್ಯ, ಸುಕುಮಾರತೆ, ಮಧುರತೆಗಳ ನಿಧಿಯಿಂದ ಕೂಡಿದ ಪ್ರಸಿದ್ಧ ಕೋಶಾಗಾರದಂತೆ (ಬೊಕ್ಕಸದ ಹಾಗೆ) ಆ ರಾಜಶೇಖರಮಹಾರಾಜನ ಒಡ್ಡೋಲಗವು ಜಗತ್ತಿನ ಜನರ ನೋಟಕ್ಕೆ ಆಶ್ಚರ್ಯಕರವೆನಿಸಿ ವಿಶೇಷವಾಗಿ ರಂಜನೆಗೊಂಡಿತ್ತು. ಅದೂ ಅಲ್ಲದೆ ೫೭. ರಾಜರುಗಳು ತಲೆಯಲ್ಲಿ ಧರಿಸಿರುವ ಕಿರೀಟರತ್ನಗಳೇ ರತ್ನಸಮೂಹದ ಹಾಗೆಯೂ, ರಾಜರ ಸಮೂಹವೇ ಮರೆಹೊಕ್ಕ ಪರ್ವತಗಳ ಹಾಗೆಯೂ ಕಾಣುತ್ತಿರಲು, ಕೊರಳಲ್ಲಿ ಧರಿಸಿದ್ದ ಹಾರಗಳ ಕಾಂತಿಯೇ ನೀರಿನಂತೆ ಇರುತ್ತಿರಲು, ಬೀಸುವ ಚಾಮರಗಳೇ ಮನೋಹರ ಹಂಸಪಕ್ಷಿಗಳಂತೆ ಇರಲು, ವಾದ್ಯಧ್ವನಿಗಳೇ ಸಮುದ್ರಘೋಷವೋ ಎನ್ನುವಂತೆ ತೋರುತ್ತಿರಲು, ರಾಜರುಗಳೆಂಬ ಚಂದ್ರನಿಂದ ಆ ಸಭೆಯು ಸಮುದ್ರದ ಹಾಗೆ ವೃದ್ಧಿಗೊಂಡು ಶೋಭಿಸುತ್ತಿತ್ತು. ೫೮. ಆ ಮಹೀಶ್ವರನ ಸಭೆಯು ಇಂದಿರಾಪತಿಪುರ (ವೈಕುಂಠ)ವನ್ನೂ, ಮಹೇಂದ್ರಪುರ (ಅಮರಾವತಿ) ವನ್ನೂ, ಆನೆಯನ್ನೂ ಹೋಲುತ್ತಿತ್ತು. ಹೇಗೆಂದರೆ, ವಿಶೇಷವಾದ ದಾನೋದಕಗಳಿಂದ ಕೂಡಿತ್ತು (ಸಭೆ) ; ರಾಕ್ಷಸರ ವೈರಿಯಾದ ವಿಷ್ಣು ಸಂಪತ್ತಿನಿಂದ ಕೂಡಿತ್ತು (ವೈಕುಂಠ); ಸದಾ ರಾಕ್ಷಸವೈರಿಗಳಾದ ದೇವತೆಗಳಿಂದ ಕೂಡಿದುದಾಗಿತ್ತು (ಅಮರಾವತಿ) ; ವಿಶೇಷವಾದ ಮದೋದಕಧಾರೆ (ದಾನ + ವಾರಿ)ಯಿಂದ ಕೂಡಿದುದಾಗಿತ್ತು (ಆನೆ) ; ಸುಂದರ ಸ್ತ್ರೀಯರ ಮನೋಹರವಾದ ಮೈಬಣ್ಣದಿಂದ ಕೂಡಿ ಚಂದ್ರಮಂಡಲ (ಹರಿಧಾಮ)ದಂತೆ

ವ॥ ಅಂತೊಪ್ಪುವ ವಿತತ ಮಹಾಸ್ಥಾನದಲ್ಲಿ

ಕಂ॥ ಮದನಧರಾಧೀಶನ ಪ
ಕ್ಕದೊಳೊಪ್ಪುವ ಚೈತ್ರನಂತೆ ಶೃಂಗಾರರಸಾ
ಸ್ಪದ ಯುವರಾಜನ ಕೆಲದೊಳ್
ಪದೆದೊಪ್ಪಿದನತುಳಗುಣಯುತಂ ಮಿತವಚನಂ ೫೯

ಶೋಭಿಸುತ್ತಿತ್ತು (ಸಭೆ); ಮದಿಸಿದ ದುಂಬಿಗಳ ಮನೋಜ್ಞವಾದ ಬಣ್ಣವುಳ್ಳ ವಿಷ್ಣುವಿನ ವಾಸಸ್ಥಾನವಾಗಿತ್ತು (ವೈಕುಂಠ); ಪ್ರಮದೆಯರಾದ ರಂಭಾ, ಊರ್ವಸೀತ್ಯಾದಿ ಮನೋಜ್ಞರಾದ ಸ್ತ್ರೀಯರುಗಳ ಅಂಗವರ್ಣದಿಂದ ಕೂಡಿ ದೇವೇಂದ್ರನ ವಾಸದಿಂದ ಮನೋಹರವಾಗಿತ್ತು (ವೈಕುಂಠ); ಪ್ರಮತ್ತವಾದ ದುಂಬಿಗಳಿಂದ ಮನೋಜ್ಞವಾದ ನೀಲವರ್ಣದಿಂದ ಕೂಡಿದುದಾಗಿತ್ತು (ಆನೆ); ಉಜ್ವಲವಾದ ಕೈಗಳಿಂದ ಬಾರಿಸುತ್ತಿರುವ ಮೃದಂಗಧ್ವನಿಯ ಕಾಂತಿಯಿಂದ ಕೂಡಿತ್ತು (ಸಭೆ); (ಲಕ್ಷ್ಮೀಯ) ಪ್ರಕಾಶಮಾನವಾದ ಕೈಯಲ್ಲಿ ಹಿಡಿದ ಕಮಲದಿಂದ ಕಾಂತವಾಗಿತ್ತು[1] (ವೈಕುಂಠ); ಶೋಭೆಗೊಂಡ ಸೊಂಡಿಲಿನ ತುದಿಯಿಂದ ಕೂಡಿದ ಐರಾವತದಿಂದ ಕೂಡಿತ್ತು (ಅಮರಾವತಿ); ಉಜ್ವಲವಾದ ಸೊಂಡಿಲಿನಿಂದ ಕಮಲದಗಡ್ಡೆ (ಪುಷ್ಕರ)ಗಳನ್ನು ಎಬ್ಬುವ ಶೋಭೆಯಿಂದ ಕೂಡಿದುದು (ಆನೆ); ಶೃಂಗಾರಾದಿ ನವರಸಗಳಿಗೆ ಆಶ್ರಿತರಾದ ಘನವಿದ್ವಾಂಸರಿಂದ ಕೂಡಿದುದು (ಸಭೆ); ಶ್ರೇಷ್ಠವಾದ ನೀರಿಗೆ ಆಶ್ರಯಭೂತವಾದ ಮೇಘಗಳ ವರ್ಣದಿಂದ ಕೂಡಿದ ದೇಹದವನಿಂದ ಕೂಡಿದುದು (ವೈಕುಂಠ); ಶ್ರೇಷ್ಠರಸವಾದ ಅಮೃತವನ್ನು ಆಶ್ರಯಿಸಲು ಘನವಾದ ಯುದ್ಧಮಾಡಿದವನಿಂದ ಕೂಡಿದುದು (ಅಮರಾವತಿ); ವಿಶೇಷವಾಗಿ ನೀರನ್ನು ಆಶ್ರಯಿಸಿ ದೊಡ್ಡದೇಹದಿಂದ ಕೂಡಿದುದು (ಆನೆ); ಉದಾತ್ತವಾದ ಶಕ್ತಿಯಿಂದ ಕೂಡಿದ ಸೈನ್ಯದ ಇರುವಿಕೆಯಿಂದ ಕೂಡಿದುದು (ಸಭೆ); ಉದಾತ್ತಸ್ವಭಾವದವನಾದ ಬಲರಾಮನ ಇರುವಿಕೆಯಿಂದ ಕೂಡಿದುದು (ವೈಕುಂಠ); ಶ್ರೇಷ್ಠ ಬಲಶಾಲಿಯೆನಿಸಿದ ಇಂದ್ರನ ಇರುವಿಕೆಯಿಂದ ಕೂಡಿದುದು (ಅಮರಾವತಿ); ಮಹಾಸಾಮರ್ಥ್ಯದಿಂದ ಕೂಡಿದುದು (ಆನೆ). ಈ ರೀತಿ ಆ ಸಭೆಯು ಇವೆಲ್ಲವನ್ನೂ ಹೋಲುತ್ತಿತ್ತು. ವ॥ ಹೀಗೆ ಒಪ್ಪುತ್ತಿರುವ ವಿಸ್ತಾರವಾದ ಮಹಾಸಭಾಸ್ಥಾನದಲ್ಲಿ ೫೯. ಮನ್ಮಥ ಮಹಾರಾಜನ ಪಕ್ಕದಲ್ಲಿ ಶೋಭಿಸುವ ಚೈತ್ರನ ಹಾಗೆ, ಶೃಂಗಾರಾದಿ ರಸಗಳಿಗೆ ಆಸ್ಪದನಾದ ರಾಜಶೇಖರಮಹಾರಾಜನ ಪಕ್ಕದಲ್ಲಿ ಅಸಮಾನಗುಣವಂತ ಮಿತವಚನನು

---

1 ಉಜ್ವಲ ಹಸ್ತಗಳಿಂದ ಕೂಡಿದ ಪುಷ್ಕರ = ವಿಷ್ಣುವಿನಿಂದ ಶೋಭಿತವಾದದ್ದು ವೈಕುಂಠ (ರಂ)

ವ॥ ಆ ಪ್ರಸ್ತಾವದೊಳ್

ಕಂ॥ ತುಂಗಮೃದಂಗದುಪಾಂಗದ
ಚಂಗಿನ ದಂಡಿಗೆಯ ತಾಳದಾವುಜದ ಲಸತ್
ಸಂಗೀತದ ವಾಸದ ನಿನ
ದಂಗಳ್ಪರೆದಳರ್ದು ಸವಿಯಂನೇಂ ಸೂಸಿದುವೋ ೬೦

ಅಲರ್ವಕ್ಕಿಗಳುಲಿಯಂ ರತಿ
ಕಲಹದ ಕಾದಲೆಯ ದೈನ್ಯರಸರವಮಂ ಮಂ
ಜುಳಕಳಮರಾಳರಾವಮ
ನಲೆದುದು ಸಂಗೀತನಿನದಮುದು ಮಧುರತೆಯಿಂ ೬೧

ವ॥ ಆಗಳೊರ್ವಳ್ ಅಭಿನವರಂಭೆಯೆಂಬ ಚತುರನರ್ತಕಿ

ಚಂ॥ ತೊಳಪೆಳಮುತ್ತು ತೆತ್ತಿಸಿದ ಬಲ್ಮೊಲೆಗಟ್ಟು ನಿತಂಬಬಿಂಬಮಂ
– ಜುಳಮಣಿಕಾಂಚಿ ಪೊನ್ನ ಪೊಸಕಾಸೆ ಸುವರ್ಣದ ಗುಜ್ಜುಗೆಜ್ಜೆ ಪ
ಜ್ಜಳಿಸುವ ರನ್ನವಚ್ಚವಳಿಕಾಗ್ರದ ಕಸ್ತುರಿಬೊಟ್ಟು ಕಾಂತಿ ಮಂ
ಡಳಿಸುವ ವಜ್ರದೋಲೆ ತನಗೊಪ್ಪಿರೆ ಬಂದಳದೊಂದು ಲೀಲೆಯಿಂ ೬೨

ಪ್ರೀತಿಯಿಂದ ಕುಳಿತು ಶೋಭಾಮಾನನಾಗಿದ್ದನು. ವ॥ ಆ ಸಮಯದಲ್ಲಿ ೬೦. ಶ್ರೇಷ್ಠವಾದ ಮೃದಂಗದ ಧ್ವನಿ, ಅದಕ್ಕೆ ಮೇಳಗೊಳ್ಳುವಂತಿರುವ ಶ್ರುತಿಯಧ್ವನಿ, ಚಂಗಿನ ಧ್ವನಿ, ವೀಣೆ ತಾಳ ಆವುಜಗಳ ಧ್ವನಿ, ಕೋಲಿನ ಧ್ವನಿ, (ಇವೆಲ್ಲವುಗಳಿಗೆ) ಹೊಂದಿಕೆಯಾದ ಸಂಗೀತದ ಧ್ವನಿಯು ಹರಿದು ಹಬ್ಬಿ, ಏನು ಸವಿಯನ್ನು (ಆ ಸಭೆಯಲ್ಲಿ) ಹೊರಸೂಸುತ್ತಿದ್ದವೋ! ೬೧. ಕೋಗಿಲೆಯ ಧ್ವನಿಯನ್ನೂ, ರತಿಸಮಯದಲ್ಲಿ ಹುಸಿಮುನಿಸಿನಿಂದ ಕೂಡಿದ ಕಲಹದ ಪ್ರಿಯೆಯ ದೈನ್ಯರಸದ ಧ್ವನಿಯನ್ನೂ, ಮಂಜುಳವಾದ ಕಳಕಂಠದ ಹಂಸಧ್ವನಿಯನ್ನೂ ಮಾಧುರ್ಯದ ದೃಷ್ಟಿಯಿಂದ ಆ ಸಂಗೀತದ ಧ್ವನಿಯು ಕೀಳುಮಾಡಿತು. ವ॥ ಆ ಸಮಯದಲ್ಲಿ ಅಭಿನವರಂಭೆಯೆಂಬ ಹೆಸರಿನವಳಾದ ಒಬ್ಬ ಚತುರ ನರ್ತಕಿಯು ೬೨. ಪ್ರಕಾಶಿಸುವ ಎಳೆಯ ಮುತ್ತುಗಳನ್ನು ಬಿಗಿದು ಮಾಡಿದ ದೊಡ್ಡ ಮೊಲೆಗಳ ಮೇಲೆ ಕಟ್ಟಿದ ಮೊಲೆಗಟ್ಟು, ಕಾಂತಿಯುತ ನಿತಂಬಪ್ರದೇಶದ ಮೇಲೆ ಹಾಕಿಕೊಂಡ ಮನೋಹರವಾದ ಡಾಬು, ಬಂಗಾರದ ಜರಿಯಿಂದ ಮಾಡಿದ ನೂತನವಾದ ಚಲ್ಲಣ, ಬಂಗಾರದ ಗೊಂಚಲುಗೆಜ್ಜೆಗಳು, ಪ್ರಜ್ವಲಿಸುವ ಅಚ್ಚ ರನ್ನಗಳನ್ನು ಬಿಗಿದುಮಾಡಿದ ಒಡವೆ, ಹಣೆಯಮೇಲಿಟ್ಟ ಕಸ್ತೂರಿಯ ಬೊಟ್ಟು, ಮಂಡಲಾಕಾರವಾಗಿ ಕಾಂತಿಯನ್ನು ಬೀರುವ ವಜ್ರದ ಓಲೆಗಳು—ತನಗೆ ಒಪ್ಪಿರಲಾಗಿ ತನ್ನದೇ

ವ॥ ಅಂತೃತಂದು ತತ್ಸಭಾಜಳನಿಧಿಮಧ್ಯದೊಳೊಗೆದ ಕನಕಪಂಕಜಪರಾಗ ಪರಿಮಳಿತಮಾದ ನುಣ್ಬೊಱೆಯೆನೆ ಮಿಸುಪ ಪೊಂದೆರೆಯ ಮಱೆಯೊಳ್ ಸಿರಿಯು ಸಿರಿಯನೊಳಕೈದಂದಂಬಡೆದು ನಿಂದಿರ್ಪುದುಮನಂತರಮರಸನಿದಿರ್ಗೆವಂದು ಸೂತ್ರಧಾರಕಂ ಮೈಯಿಕ್ಕಿ ಕೈಯುಂ ಮುಗಿದು

ಕಂ॥ ಭರತಾದಿ ವಿವಿಧ ವಿದ್ಯಾ
ಪರಿಣತಜನವನವಸಂತ ವಿತರಣಜಿತ ನಿ
ರ್ಜರಭೂಜ ರಾಜಶೇಖರ
ಧರಣೀಶ ನಿರೀಕ್ಷಿಸೆಂಬ ಸಮನಂತರದೊಳ್ ೬೩

ತೆರೆ ತೊಲಗೆ ಮೈವೆಳಗುಮಾ
ರ್ದೆರೆಯಂ ಸರಿದಂತೆ ಪೊಳೆಯೆ ಕೆದರ್ದಳ್ಬೊಳೆದೊ
ಪ್ಪಿರೆ ಮಿಂಚಿ ಮಿಂಚು ಕರಕೋ
ತ್ಕರಮಂ ಕೆದರ್ವಂತೆ ಕಾಂತೆ ಕುಸುಮಾಂಜಲಿಯಂ ೬೪

ಚಂ॥ ತೊಳಗುವ ತೋಳಥಾಳಮಿರೆ ಮೈಸಿರಿಗೈಸಿರಿಯಾಗಿ ಸೊಂಪು ನು
ಣ್ಪಳವಡೆ ದೇಸಿ ವಾಸಿಯಿಂಗೆ ಕೊಂಕದ ಬಿಂಕದ ಜಾಣ್ಮೆ ಪೊಣ್ಮೆ ಸಂ
ಗಳಿಸಿರೆ ತಾಳಮೇಳದ ರವಂ ಜವದಿಂ ಜತಿದಪ್ಪದೊಪ್ಪಮಂ
ಘಳಿಲನೆ ತೋಱಿ ಮಾಱಿ ಮೆಱೆದಳ್ ನವನರ್ತಕಿ ನೃತ್ಯಲೀಲೆಯಂ ೬೫

ಆದ ಒಂದು ಲೀಲೆಯಿಂದ (ಸಭೆಗೆ) ಬಂದಳು. ವ॥ ಹಾಗೆ ಬಂದು ಆ ಸಭೆಯೆಂಬ ಸಮುದ್ರಮಧ್ಯದಲ್ಲಿ ಪ್ರಕಾಶಿಸುವ ಸುವರ್ಣಕಮಲದ ಪರಿಮಳದಿಂದ ಕೂಡಿದ ನುಣ್ಣನೆಯ ತೆರೆಯೋ ಎಂಬಂತೆ ಶೋಭಿಸುವ ಬಂಗಾರವರ್ಣದ ತೆರೆಯ ಮಧ್ಯದಲ್ಲಿ ಲಕ್ಷ್ಮೀದೇವಿಯ ಸೌಂದರ್ಯವನ್ನು ಒಳಗುಮಾಡಿಕೊಂಡವಳೋ ಎಂಬಂತೆ, ಚೆಂದವನ್ನು ಹೊಂದಿ ನಿಂತಿದ್ದಳು. ಅನಂತರ ಸೂತ್ರಧಾರನು ಅರಸನ ಎದುರಿಗೆ ಬಂದು, ಅಡ್ಡಬಿದ್ದು ಕೈಮುಗಿದು ೬೩. "ಭರತನಾಟ್ಯವೇ ಮೊದಲಾದ ವಿವಿಧ ವಿದ್ಯಾಪರಿಣತರಾದ ಜನರೆಂಬ ವನಕ್ಕೆ ವಸಂತಪ್ರಾಯನಾದವನೂ, ವಿತರಣಗುಣದಲ್ಲಿ ಕಲ್ಪವೃಕ್ಷವನ್ನು ಗೆದ್ದವನೂ ಆದ ರಾಜಶೇಖರಮಹಾರಾಜನೇ, ನೋಡಬೇಕು" ಎಂದನು. ಅಮೇಲೆ ೬೪. ಹಿಡಿದ ತೆರೆ ಸರಿಯಲಾಗಿ, (ಆ ನರ್ತಕಿಯ) ಮೈಕಾಂತಿಯು ಪಡಿತೆರೆಯನ್ನು ಹಿಡಿದ ಹಾಗೆ ಹೊಳೆಯುತ್ತಿರಲು, ಮಿಂಚು ಮಿಂಚಿ ಆಣೆಕಲ್ಲುಗಳನ್ನು ಸುರಿಸಿದ ಹಾಗೆ, ಕುಸುಮಾಂಜಲಿಯನ್ನು ಅವಳು ಚೆಲ್ಲಿದಳು. ೬೫. ಮೈಯ ಚೆಲುವಿಗೆ ಇನ್ನೊಂದು ಚೆಲುವಾಗಿ ಹೊಳೆಯುವ ತೋಳಿನ ಪ್ರಕಾಶವಿತ್ತು. ನುಣುಪಾದ ಚೆಲ್ವಿಕೆ ದೇಶಿಗೆ ಅನುಗುಣವಾಗಿತ್ತು. ಕೊಂಕು ಇಲ್ಲದ ಬಿಂಕದಿಂದ ಕೂಡಿದ ಜಾಣತನವು ಹೊರಹೊಮ್ಮುತ್ತಿತ್ತು. ತಾಳಮೇಳಗಳ ಧ್ವನಿಯು ಹೊಂದಿಕೆಯಾಗಿತ್ತು. ವೇಗದಿಂದ ಯತಿ ತಪ್ಪದ ರೀತಿಯಲ್ಲಿ (ಸರ್ವರಿಗೂ) ಒಪ್ಪಿಗೆಯಾಗುವಂತೆ ಕಾಣುತ್ತ ನೃತ್ಯ

ಕಂ॥ ನೊಸಲೆಂಬ ಪೆಱೆಯನಾಲಿಂ
ಗಿಸಿ ರಂಜಿಪ ತಾರೆ ಪುರ್ಬುವಳ್ಳಿಯ ಮುಗುಳಿಂ
ಬೆಸಕಮನಮರ್ಚೆ ಮೆಱೆದುದು
ಪೊಸಮುತ್ತಿನ ಬೊಟ್ಟು ನಾಟ್ಯವಿದ್ಯಾಧರಿಯಾ ೬೬

ಜಳಕಣಮಳುರ್ದಂಬುಜಕು
ಟ್ಮಳಮಂಡುತತಿ ಬಳಸಿದಮರಗಿರಿಯೆಂಬಿರವಂ
ತಳೆದೆಳಮುತ್ತಿನ ಮೊಲೆಕ
ಟ್ಟಳವಟ್ಟರೆ ಬಟ್ಟಮೊಲೆಯದೆಸೆದುದು ನಟಿಯಾ ೬೭

ಅವಳ ಜಘನಾದ್ರಿತಟದೊಳ್
ಯುವದೃಷ್ಟಿಗಜಾಲಕತನುಜಾಲಕನೊಸೆದೊ
ಡ್ಡುವ ಘಂಟಾಜಾಲಮಾನಿ
ಟ್ಟವೊಲೆಸೆದುದು ಕಾಂಚಿ ಘಂಟಿಕಾರವವಿಳಿತಂ ೬೮

ತಳಿರ್ವಟ್ಟೆಯ ಪೊಸಚಲ್ಲಣ
ಮಳವಟ್ಟ ನಿತಂಬಬಿಂಬಮರುಣೋಪಳಮಂ
ಜುಳಗಿರಿಗೆ ಸರಿಗೆವರುತುಂ
ತಳೆದುದು ಸಿಂಧೂರಲಿಪ್ತ ಕರಿಶಿರದಿರವಂ ೬೯

ಲೀಲೆಯನ್ನು ಆ ನೂತನ ನರ್ತಕಿಯು ವಿಶೇಷವಾಗಿ ಆಡಿ ತೋರಿಸಿದಳು. ೬೬. ಆ ನಾಟ್ಯವಿದ್ಯಾಧರಿಯು ಚಂದ್ರನಂತಿರುವ ಹಣೆಯಲ್ಲಿ ಅಲೆದಾಡುತ್ತಿರುವ ಹೊಸ ಮುತ್ತಿನ ಬೊಟ್ಟು ಹಣೆಯೆಂಬ ಚಂದ್ರನನ್ನು ಆಲಿಂಗಿಸಿ ರಂಜಿಸುವ ನಕ್ಷತ್ರವೋ ಎಂಬಂತೆ ಇತ್ತು ಮತ್ತು ಹುಬ್ಬೆಂಬ ಬಳ್ಳಿಯಲ್ಲಿ ಬಿಟ್ಟ ಮೊಗ್ಗಿನಂತೆ ಶೋಭೆಯಿಂದ ಮೆರೆಯುತ್ತಿತ್ತು. ೬೭. ಆ ನರ್ತಕಿಯ ಮುತ್ತಿನ ಮೊಲೆಕಟ್ಟಿನಿಂದ ಕೂಡಿದ ವೃತ್ತಾಕಾರವಾದ ಸ್ತನಗಳು, ಸುತ್ತಲೂ ನೀರಿನ ಕಣಗಳಿಂದ ತುಂಬಿದ ಕಮಲದ ಮೊಗ್ಗುಗಳೋ, ನಕ್ಷತ್ರಸಮೂಹಗಳಿಂದ ಬಳಸಲ್ಪಟ್ಟ ಶೋಭಿಸುವ ಮೇರುಗಿರಿಯೋ ಎಂಬ ರೀತಿಯನ್ನು ಹೊಂದಿ ಶೋಭಿಸುತ್ತಿದ್ದವು. ೬೮. ಅವಳ ನಡುವಿನಲ್ಲುಟ್ಟ ಚಿಕ್ಕ ಚಿಕ್ಕ ಗೆಜ್ಜೆಗಳಿಂದ ಕೂಡಿದ ಡಾಬು, ನಿತಂಬಗಳೆಂಬ ಪರ್ವತದ ತಪ್ಪಲುಪ್ರದೇಶದಲ್ಲಿರುವ ಯುವಕರ ದೃಷ್ಟಿಗಳೆಂಬ ಮೃಗಗಳ ಸಮೂಹಕ್ಕೆ ಮನ್ಮಥನೆಂಬ ಬಲೆಗಾರನು ಪ್ರೀತಿಯಿಂದ ಚಿಕ್ಕ ಚಿಕ್ಕ ಕಿರುಗೆಜ್ಜೆಗಳನ್ನು ಅಳವಡಿಸಿದ ಬಲೆಯನ್ನು ಬೀಸಿದ ಹಾಗೆ ಇತ್ತು. ೬೯. ತಳಿರುಬಣ್ಣದ ಬಟ್ಟೆಯ ಹೊಸ ಚಲ್ಲಣದಿಂದ ಅಳವಟ್ಟ ಅವಳ ನಿತಂಬ ಪ್ರದೇಶವು ಅರುಣವರ್ಣದ ಕಲ್ಲುಗಳಿಂದ ಕೂಡಿದ ಮನೋಹರ ಪರ್ವತಗಳ ಹಾಗೆ ಇತ್ತು ; (ಮತ್ತು) ಸಿಂಧೂರವನ್ನು ಬಳಿದ ಆನೆಯ ಕುಂಭಸ್ಥಳಕ್ಕೆ ಸರಿದೊರೆಯಾಗಿ

ಪೊಸಮಿಸುನಿವೆಸದ ತೊಡೆಗು
ಪ್ಪುಸಮೆಸೆದುದು ಪೊಣರಲೆಂದು ಪೊಂಬಾಳೆಯೊಳಂ
ದಸಿಯಳ ನುಣ್ದೊಡೆ ತಾಳ್ದವೊ
ಲಸದೃಶರುಚಿ ಕನಕಕವಚಮಂ ಕಡುಪಿಂದಂ ೭೦

ಮ॥ ರತಿದೇವೀಕುಚಕುಂಭ ಕುಂಕುಮಕರಂ ಕಾಮಂ ಕರಂ ನೀವೆ ತ
ದ್ಗತ ರಾಗಂಬೊರೆದಲ್ಲಿ ತುಂಬಿವೆದೆ ಪೊಂಬಣ್ಣಕ್ಕೆ ಪಕ್ಕಾಗುತ್ತೈ
ದಿ ತದೀಯಾಂಘ್ರಿಸರೋಜಮಂ ಬಳಸಿ ನಿಂದತ್ತೆಂಬವೋಲ್ಕಣ್ಗೆ ರಂ
ಜಿತಮಾಗಿರ್ದುದು ಕಾನಕಂ ಕಳನಿನಾದಂ ಕಿಂಕಿಣೀಸಂಕುಳಂ ೭೧

ಕ್ಷಣರುಕ್ಕಾಂಚಿರವಂ ಝಣತ್ ಝಣಝಣರ್ ಸ್ವರ್ಣಸ್ಫುರತ್ಕಿಂಕಿಣೀ
ರಣಿತಂಗೂಡಿ ಬೆಡಂಗುವೀಱೆ ಮೃದುಪಾದನ್ಯಾಸಮಿಂಬಾಗೆ ಕಂ
ಕಣರಾವಂ ಸೊಗಸಾಗೆ ಪಾಣಿಚಳನಂ ಚೆಲ್ವಾಗೆ ನೇತ್ರಾಂತವೀ
ಕ್ಷಣದಂದಂ ಪೊಸತಾಗೆ ನೀಱೆ ಮೆರೆದಳ್ ಲೀಲಾಲಸಲ್ಲಾಸ್ಯಮಂ ೭೨

ಕಾಣುತ್ತಿತ್ತು. ೭೦. ಹೊಚ್ಚಹೊಸ ಬಂಗಾರದ ಜರಿಯ ಕುಸುರಿಯ ಕೆಲಸದಿಂದ ಮಾಡಿದ್ದ, ತೊಡೆಗಳಿಗೆ ಧರಿಸಿದ್ದ ಚಲ್ಲಣವು ಬಾಳೆಯ ಕಂಬಗಳೊಡನೆ ಹೋರಾಡುವುದಕ್ಕಾಗಿ, ಆ ಸುಂದರಿಯ ಅಸದೃಶ ಕಾಂತಿಯ ತೊಡೆಗಳು ಬಂಗಾರದ ಕವಚವನ್ನು ತೊಟ್ಟ ಹಾಗೆ ಕಾಣುತ್ತಿದ್ದವು. ೭೧. ರತಿದೇವಿಯ ಕುಂಭಸದೃಶವಾದ ಮೊಲೆಗಳಿಗೆ ಕುಂಕುಮಕೇಸರಿಯನ್ನು ಹಚ್ಚಿತ್ತು. ಕಾಮನು ತನ್ನ ಕೈಗಳಿಂದ ಆ (ರತಿದೇವಿಯ) ಸ್ತನಗಳನ್ನು ಮರ್ದಿಸಿದಾಗ ಅವನ ಕೈಗಳಿಗೆ ಕುಂಕುಮ ಹತ್ತಿತ್ತು. ಅಂಥ ಕೈಗಳಿಂದ ಅವನು ತನ್ನ ದುಂಬಿಗಳ ಹೆದೆಯನ್ನು ನೀವುತ್ತಿರಲಾಗಿ, ಆ ಕುಂಕುಮವು ದುಂಬಿಗಳಿಗೆ ಮೆತ್ತಿದ ಫಲವಾಗಿ ಅವು ಕೆಂಪುಬಣ್ಣದಿಂದ ಕೂಡಿದುವು. ಅಂಥ ಕೆಂಪುಬಣ್ಣದ ದುಂಬಿಗಳು ಆ ನರ್ತಕಿಯ ಪಾದಗಳೆಂಬ ಕಮಲಗಳನ್ನು ಸುತ್ತುವರಿದು ನಿಂತಿರುವುವೋ ಎಂಬ ಹಾಗೆ ಬಂಗಾರದಿಂದ ಮಾಡಿದುವೂ, ಅವ್ಯಕ್ತ ಮಧುರವಾದ ಧ್ವನಿಯನ್ನುಂಟು ಮಾಡುವಂಥವುಗಳೂ ಆದ ಗೆಜ್ಜೆಯ ಸರಗಳ ಸಮೂಹವು ಕಣ್ಣಿಗೆ ಶೋಭಿಸುತ್ತಿತ್ತು. ೭೨. ಮಿಂಚಿನ ಕಾಂತಿಯಿಂದ ಹೊಳೆಯುವ ಡಾಬಿನಲ್ಲಿ ಬಿಗಿದ ಗೆಜ್ಜೆಗಳ ಧ್ವನಿಯು ಕಾಲಿನಲ್ಲಿ ಕಟ್ಟಿರುವ ಝಣ ಝಣವೆಂದು ಝಣಗುಟ್ಟುತ್ತಿರುವ ಬಂಗಾರದ ಕಿರುಗೆಜ್ಜೆ ಸರಗಳ ಧ್ವನಿಯೊಡನೆ ಕೂಡಿ, (ಅವಳ) ಮೃದುಪಾದಗಳ ಕುಣಿತವು ಅತಿಶಯ ಬೆಡಗನ್ನುಂಟುಮಾಡುತ್ತಿತ್ತು ; ಕೈಯಲ್ಲಿರುವ ಬಳೆಗಳ ಧ್ವನಿಯು ಸೊಗಸಾಗಿ ಧ್ವನಿ ಮಾಡುತ್ತಿತ್ತು ; ಹಸ್ತವಿನ್ಯಾಸವು ಚೆಲುವಿನಿಂದ ಕೂಡಿತ್ತು ; ಕಡೆಗಣ್ಣುಗಳ ನೋಟದ ಅಂದವು ಹೊಸರೀತಿಯಿಂದ ಕೂಡಿತ್ತು. ಹೀಗೆ ಮನೋಹರವಾದ ಲೀಲೆಯಿಂದ ಆ

ಕಂ॥ ವಿತತಾಂಗಿಕಮಾಹಾರ್ಯಕ
ಮತಿಶಯ ಸಾತ್ವಿಕಮುಮಮರ್ದ ವಾಚಿಕಮೆನಿಪೀ
ಚತುರಭಿನಯಮುಮಂ ಚತುರ
ಸ್ಥಿತಿಯಿಂ ನೆಱತೋಱಿ ಬೀಱಿದಳ್ ನರ್ತನಮಂ ೭೩

ದಳಿತ ತರುಣಾಂಬುರುಹಮು
ಚ್ಚಳಿತತರಂಗಪ್ರಪಾತದಿಂ ಚಲಿಯಿಪ ಪಾಂ
ಗಳವಡೆ ಲಾವಣ್ಯರಸಾ
ವಿಳಮಾಂದೋಳಿತದಿನೆಸೆದುದಾಸ್ಯಂ ನಟಿಯಾ ೭೪

ಮುಗುಳ್ವಲರ್ವ ನಗುವ ಚಲ್ಲಮು
ನುಗುವ ಮರಲ್ದೊಗೆವ ಬಳಸುವಲಸುವಲಂಪಂ
ತೆಗೆವ ಪೊಳೆವಗಿವ ಮಿಗಿಲೆಂ
ದೊಗೆವ ಲಸದ್ದೃಷ್ಟಿ ಮೆಱೆದುದಾ ನರ್ತಕಿಯಾ ೭೫

ತಿಳಿವೆಳ್ದಿಂಗಳ ಬೆಳಗಂ
ತಳೆದೆಳೆಮಿಂಚೆಳಸಿ ನಳಿನದಳದೊಳ್ಪೊಳೆದು
ಚ್ಚಳಿಸಿದಪುದೆಂಬ ಬಿಂಕಮ
ನೊಳಕೊಂಡಲರ್ಗಣ್ಣ ಬೆಳಗದೇಂ ಪಸರಿಸಿತೋ ೭೬

ನಟಿಯು ಲಾಸ್ಯನೃತ್ಯವನ್ನು ಮೆರೆದಳು. ೭೩. ಆಂಗಿಕ, ಆಹಾರ್ಯ, ಸಾತ್ವಿಕ, ವಾಚಿಕವೆನಿಸುವ ನಾಲ್ಕು ಪ್ರಕಾರದ ಅಭಿನಯವನ್ನೂ ಚಾತುರ್ಯದಿಂದ ಚೆನ್ನಾಗಿ ತೋರಿಸುತ್ತ ನರ್ತನವನ್ನು ಮಾಡಿದಳು. (ಅಭಿನಯ ನಾಲ್ಕು ವಿಧ : ಆಂಗಿಕ, ವಾಚಿಕ, ಆಹಾರ್ಯ, ಮತ್ತು ಸಾತ್ವಿಕ. ಆಂಗಿಕಾಭಿನಯವೇ ತಲೆ, ಕತ್ತು, ಕೈ, ಕಂಕುಳು, ಪಕ್ಕೆ, ಸೊಂಟ, ಕಾಲು, ಭುಜ-ಇತ್ಯಾದಿಗಳಿಂದ ತೋರಿಸುವ ಅಭಿನಯ. ರಸಾಭಿವ್ಯಕ್ತಿಯಾಗುವಂತೆ ಶಬ್ದವನ್ನು ಉಚ್ಚರಿಸುವುದು ವಾಚಿಕಾಭಿನಯ. ಆಹಾರ್ಯವೆಂದರೆ ಯಥೋಚಿತವಾದ ವೇಷವನ್ನು ಧರಿಸುವುದು. ಸಾತ್ವಿಕವೆಂದರೆ ಮನೋವಿಕಾರಗಳಿಂದ ಬೆವರುವುದು, ರೋಮಾಂಚನಗೊಳ್ಳುವುದು, ಇತ್ಯಾದಿ) ೭೪. ಚೆನ್ನಾಗಿ ಅರಳಿದ ತರುಣ ಕಮಲವು (ತನ್ನ ಮೇಲೆ) ಅಪ್ಪಳಿಸುವ ತರಂಗಗಳ ಹೊಡೆತದಿಂದ ಚಲಿಸುವ ರೀತಿಯಲ್ಲಿ ಆ ನಟಿಯ ಮುಖವು ಲಾವಣ್ಯರಸದಿಂದ ಬೆರೆತು ಚಲಿಸುತ್ತ ಶೋಭಿಸುತ್ತಿತ್ತು. ೭೫. ಮುಗುಳಿನಂತೆ ಮುಚ್ಚುವ, ಅರಳಿಸುವ, ನಗುವ, ಚೆಲ್ಲಾಟವನ್ನು ಹೊರಸೂಸುವ, (ಗುಡ್ಡೆಗಳನ್ನು) ತಿರುಗಿಸುವ, ಸುತ್ತಿಸುವ, ಆಲಸ್ಯವನ್ನು ವ್ಯಕ್ತಪಡಿಸುವ, ಸೊಗಸುಂಟಾಗುವಂತೆ ತೆರೆಯುವ, ಹೊಳೆಯುವಂತೆ ಮಾಡುವ, ಹೆದರುವ, ಮಿಗಿಲಾಗಿ ತೆರೆಯುವ ಆ ನರ್ತಕಿಯ ಮನೋಹರದೃಷ್ಟಿಗಳು ಮೆರೆಯುತ್ತಿದ್ದವು. ೭೬. ತಿಳಿಯಾದ ಬೆಳದಿಂಗಳ ಬೆಳಕನ್ನು ಹೊಂದಿದ ಎಳೆಯಕೋಲುಮಿಂಚು, ಬಯಸಿ ಬಂದು ಕಮಲದ ದಳದಲ್ಲಿ ಹೊಳೆದು ಥೊರಟವೋ ಎನ್ನುವ ಬಿಂಕವನ್ನು ಹೊಂದಿ, ಕಮಲಸದೃಶವಾದ

ಸಮನೆನಿಸಿ ನಿಮಿರ್ವ ಕುಂಚಿತ
ಮಮರ್ವ ಪಳಂಚುವ ಸಮಂಚಿತಭ್ರೂಲತೆ ತ
ಳ್ತಿಮೆದುಱುಗಲ ನೆಳಲೊಳ್ಮುಖ
ಕಮಳಮಯೂಖಾಂಬುವೀಚಿ ಚಲಿಪವೊಲೆಸೆಗುಂ ೭೭

ಚಳದಮಳವಜ್ರಮಣಿಕುಂ
ಡಳಮಂಡಳಕಾಂತಿಕಾಂತ ಗಂಡಸ್ಥಳಮಂ
ಜುಳಮಣಿಮುಕುರದ್ಯುತಿಯೊಳ್
ಪಳಂಚಿ ಥಳಥಳಿಸಿ ಪೊಳೆದು ನರ್ತಿಸಿತಾಗಳ್ ೭೮

ಇದು ಚಿತ್ರಂ ಚಂಪಕಮುಕು
ಲದೊಳೊಗೆದೊಲೆದಪುದು ಕುಜಮಿದೆನೆ ತನ್ನಾಸಾ
ಗ್ರದ ಮುತ್ತಿನಮಣಿ ರದನ
ಚ್ಛದದೀಧಿತಿ ಪುದಿಯೆ ಕೆಂಪನಾಳ್ದವೊಲೆಸೆಗುಂ ೭೯

ಅಮರ್ದಿನೊಳಳ್ದಿದ ಬಿಂಬಮು
ನಮೃತಾಬ್ಧಿಯೊಳೊಗೆದ ಪವಳಮಂ ಪಳಿದೆಸೆದ
ತ್ತಮಳತರ ರದನರುಚಿಸಂ
ಕ್ರಮಧವಳಿಮಮಧರವಿದ್ರುಮಂ ನರ್ತಕಿಯಾ ೮೦

ಕಣ್ಣಿನ ಹೊಗರು ಅದೇನು ಪ್ರಕಾಶಿಸಿತೋ ! ೭೭. ಶಾಸ್ತ್ರಕ್ರಮಕ್ಕೆ ಅನುಗುಣವಾಗಿ ಸಮವಾಗಿ ನಿಮಿರಿ ನಿಲ್ಲುವ, 'ಕುಂಚಿತಾಖ್ಯ'ವೆಂಬ ಭಂಗಿಯನ್ನು ತೋರಿಸುವ, ಬಾಗಿ ನಿಲ್ಲುವ, ಭ್ರೂಲತೆಗಳು ಕೂಡುವಂತೆ ತೋರಿಸುವ, ದಟ್ಟವಾದ ಕಣ್ಣೆವೆಗಳ ಗೊಂಚಲಿನ ನೆಳಲೊಳಗೆ ಮುಖಕಮಲದ ಕಿರಣಗಳೆಂಬ ನೀರಿನ ತೆರೆಗಳು ಚಲಿಸುವಂತೆ ಶೋಭಿಸುತ್ತಿದ್ದವು. ೭೮. ಅಲ್ಲಾಡುತ್ತಿರುವ ವಜ್ರಮಯವಾದ ಕರ್ಣಕುಂಡಲಗಳ ಕಾಂತಿಯಿಂದ ಕೆನ್ನೆಗಳ ಕಾಂತಿಯು ಮನೋಹರವಾಗಿದ್ದು, ಅದರೊಡನೆ ರತ್ನಮಯವಾದ ಮೂಗುಬೊಟ್ಟಿನ ಕಾಂತಿಯೂ ಬೆರೆತು ಥಳಥಳಿಸಿ ಹೊಳೆಯುತ್ತ ನರ್ತನ ಮಾಡುವಂತೆ ಇತ್ತು. ೭೯. ಚಂಪಕದ ಮೊಗ್ಗಿನಲ್ಲಿ ಮಂಗಳಗ್ರಹವು ಒಲೆದಾಡುತ್ತದೆಂಬುದೊಂದು ಆಶ್ಚರ್ಯವಲ್ಲವೆ ! ಎನ್ನುವ ಹಾಗೆ, ಅವಳ ಚಂಪಕದ ಮೊಗ್ಗಿನಂತಿರುವ ಮೂಗಿನ ತುದಿಯ ಮುತ್ತಿನಮಣಿಯು ತುಟಿಗಳ ಕೆಂಪಾದ ಪ್ರಕಾಶದಿಂದ ತುಂಬಿ ಕೆಂಪುಗೊಂಡು ಒಲೆದಾಡುತ್ತ ಶೋಭಿಸುತ್ತಿತ್ತು. (ಮಂಗಳಗ್ರಹ ಕೆಂಪಾಗಿರುತ್ತದೆ) ೮೦. ಅಮೃತರಸದಲ್ಲಿ ಅದ್ದಿದ್ದ ತೊಂಡೆಯ ಹಣ್ಣನ್ನು, ಅಮೃತ ಸಮುದ್ರದಲ್ಲೇ ಹುಟ್ಟಿದ ಹವಳವನ್ನು ಕೀಳ್ಮಾಡಿ, ಶ್ರೇಷ್ಠದಂತಗಳ ಪ್ರಕಾಶದಿಂದ ಧವಳವರ್ಣಗೊಂಡ ಆ ನರ್ತಕಿಯು ತುಟಿಗಳೆಂಬ ಹವಳ

ಸ್ಮರನರುಣ ತರುಣಪಲ್ಲವ
ಶರಮನಸಂಖ್ಯಾತಮಕ್ಕೆನುತ್ತಿಸೆ ಪಾಯ್ದು
ಪ್ಪರಿಸಿ ಬಹುಮುಖದೆ ಪರಿದೊ
ತ್ತರಿಸುವ ಪರಿಯೆನಿಸಿತವಳ ಕರತಳಚಳನಂ ೮೧

ಎನಗೆ ಪಗೆಯಾದ ಚಂದ್ರನ
ನನಿಶಂ ಕೆಳೆಗೊಂಡುದೆಂದು ಕರ್ಣೋತ್ಪಲಮಂ
ಮುನಿದಲೆವ ವನರುಹಮುನಂ
ದನುಕರಿಸಿದುದರರೆ ಕರಿಕರಂ ನರ್ತಕಿಯಾ ೮೨

ತರುಣಾಸಿತಾಹಿ ಸಂಗೀ
ತರವಂಗೇಳ್ದೆಳಸಿ ನಾಭಿವಲ್ಮೀಕದಿನೆ
ಳ್ದಿರದೊಲೆದೊಲ್ದಾಡುವುದೆನೆ
ಕರಮೆಸೆದುದು ಬಾಸೆ ವಿಚಳಿತಂ ನಚ್ಚಣಿಯಾ ೮೩

ಅವಳವಯವ ನವಲಾವ
ಣ್ಯವನೇಜಾಕರದೊಳಾಳ್ದ ಮದನದ್ವಿಪದೊ
ಪ್ಪುವ ಚಳಕುಂಭಸ್ಥಳಮೆಂ
ಬವೊಲೆಸೆದುದು ಲಾಸ್ಯಕಂಪಿತಂ ಘನಜಘನಂ ೮೪

ಗಳು ಪ್ರಕಾಶಿಸುತ್ತಿದ್ದವು. ೮೧. ಮನ್ಮಥನು ಅರುಣವರ್ಣದ ನೂತನವಾದ ಮಾವಿನ ಚಿಗುರಿನ ಬಾಣವನ್ನು 'ಅಸಂಖ್ಯಾತಗೊಳ್ಳಲಿ' ಎಂದು ಹೇಳಿ ಪ್ರಯೋಗಿಸಲಾಗಿ, ಅದು ಹರಿದುಹೋಗಿ, ಮೇಲಕ್ಕೆ ಚಿಮ್ಮಿ, ಬಹುಮುಖವಾಗಿ ಹರಿದು ಒತ್ತರಿಸುವ ರೀತಿಯೋ ಎಂಬ ಹಾಗೆ ಅವಳ ಕರತಳದ ಚಲನವಲನವಿತ್ತು. ೮೨. ನನಗೆ ಹಗೆಯಾದ ಚಂದ್ರನನ್ನು ಸದಾ ಈ ಕನ್ನೈದಿಲೆಯು ಗೆಳೆತನ ಮಾಡಿರುವುದು, ಎಂದು ಕಿವಿಯಲ್ಲಿ ಧರಿಸಿದ್ದ ಕನ್ನೈದಿಲೆಯನ್ನು ಕೋಪದಿಂದ ಬಡಿಯುವ ಕಮಲದ ರೀತಿಯನ್ನು ಆ ನರ್ತಕಿಯ ಕರಿಕರವು (ಆನೆಯ ಸೊಂಡಿಲಿನ ತುದಿಯಂತೆ ಬಾಗಿದ ಕೈ) ಅನುಕರಣ ಮಾಡುವಂತಿತ್ತು. ೮೩. ತರುಣ ಕಾಳಸರ್ಪವು ಸಂಗೀತಧ್ವನಿಗೆ ಇಚ್ಛೈಸಿ, ಹೊಕ್ಕುಳೆಂಬ ಹುತ್ತದಿಂದ ಎದ್ದು ಹೆಡೆಯೆತ್ತಿ ತೊನೆದಾಡುವುದೋ ಎನ್ನುವ ಹಾಗೆ, ಆ ನರ್ತಕಿಯ ವಿಶೇಷವಾಗಿ ಚಲಿಸುತ್ತಿರುವ ಬಾಸೆಯು ಶೋಭಿಸುತ್ತಿತ್ತು. ೮೪. ಆ ನರ್ತಕಿಯ ಅವಯವಗಳ ಲಾವಣ್ಯವೆಂಬ ಸರೋವರದಲ್ಲಿ ಮುಳುಗಿದ ಮನ್ಮಥನ ಮದಿಸಿದ ಆನೆಯ ಚಲನೆಯಿಂದ ಶೋಭಿಸುವ ಕುಂಭಸ್ಥಳಗಳೋ ಎಂಬ ಹಾಗೆ ಲಾಸ್ಯನೃತ್ಯಸಮಯದಲ್ಲಿ ಕಂಪನ

ತೊಡೆ ರಂಭಾಮದಮಂ ಮಿಗೆ
ತೊಡೆದುದು ನುಣ್ಪಿಂದವೆಂಬ ಪುರುಡಿಂದಡಿ ತಾ
ನಡಿಮಾಡಿದುದುರು ರಂಭಾ
ವಿಡಂಬಮಂ ವಿತತನೃತ್ಯದೊಳ್ ನರ್ತಕಿಯಾ ೮೫

ಮಂದರಗಿರಿ ತಿರ್ರನೆ ತಿರು
ಪಂದೊಡನೊಗೆದಂಬುಧಿಯೊಳೆ ತಿರುಗುವ ಸಿರಿಯೊಂ
ದಂದವನಭಿನಯಿಸುವಳಿವ
ಳೆಂದೆನೆ ಕಾಣಿಸಿದಳದ್ಭುತಭ್ರಮರಿಗಳಂ ೮೬

ಒಸೆದಷ್ಟರಸಮನಿದು ನವ
ರಸಮೆನಿಸಿ[1] ಪೊದಳ್ದ ಪತ್ತುಮಂಡಳಮಂ ರಂ
ಜಿಸಿ ಪಂಚಮೆನಿಸಿ ಲಾಸ್ಯಮು
ನೆಸಗಿದಳಾ ನಟಿ ವಿಚಿತ್ರಮೆನೆ ತತ್ಸಭೆಯೊಳ್ ೮೭

ಗೊಳ್ಳುತ್ತಿರುವ ದಪ್ಪನೆಯ ಜಘನಗಳು ಶೋಭಿಸುತ್ತಿದ್ದವು. ೮೫. ಆ ನರ್ತಕಿಯ ತೊಡೆಗಳು ತಮ್ಮ ನುಣುಪಾದ ಸೌಂದರ್ಯದಿಂದ ಬಾಳೆಯ ಕಂಬಗಳ ಗರ್ವವನ್ನು ತೊಡೆದು ಹಾಕಿದವು ಎಂಬ ಹುರುಡಿನಿಂದ ಪಾದಗಳೂ ಕೂಡ ರಂಭೆಯೆಂಬ ದೇವ ಲೋಕದ ನರ್ತಕಿಯ ಡೌಲನ್ನು ಆ ನರ್ತಕಿಯ ನೃತ್ಯವು ಕೀಳುಗೊಳಿಸಿದವು. (ರಂಭಾ ನೃತ್ಯಕ್ಕೂ ಮಿಗಿಲಾದ ನೃತ್ಯಮಾಡಿದಳೆಂದು ಭಾವ). ೮೬. ಅದ್ಭುತವಾದ 'ಭ್ರಮರಿ' ನೃತ್ಯಭಂಗಿಯಲ್ಲಿ, ಮಂದರಪರ್ವತವು ಸಮುದ್ರಮಥನ ಕಾಲದಲ್ಲಿ ತಿರ್ರನೆ ತಿರುಗುತ್ತಿದ್ದಾಗ, ಒಡನೆಯೇ ಅಲ್ಲಿ ಹುಟ್ಟಿದ ಲಕ್ಷ್ಮಿಯೂ ಕೂಡ ಗಿರ್ರನೆ ತಿರುಗುತ್ತಿದ್ದ ಒಂದು ಚೆಂದವನ್ನು ಈ ನರ್ತಕಿಯೂ ಕೂಡ ಅಭಿನಯಿಸುವಳೋ ಎಂಬಂತೆ ಕಾಣಿಸಿದಳು. ೮೭. (ನಾಟ್ಯಶಾಸ್ತ್ರದಲ್ಲಿರುವ) ಎಂಟು ರಸಗಳನ್ನು ಈ ನೃತ್ಯವು ನವರಸವನ್ನಾಗಿ ಮಾಡಿತು. ಹತ್ತು ಮಂಡಲಭೇದಗಳನ್ನು ಇದು ಪಂಚವಾಗಿ ಮಾಡಿತು, ಇದು

---

1. ಟಿಪ್ಪಣಿ : ಭರತನ ನಾಟ್ಯಶಾಸ್ತ್ರದಲ್ಲಿ ಎಂಟು ರಸಗಳನ್ನು ಹೇಳಿದೆ. ಶಾಂತರಸವನ್ನು ವರ್ಣಿಸಿಲ್ಲ. ಎಂಟನ್ನು ಒಂಬತ್ತು ಮಾಡುವುದು ಮತ್ತು ಹತ್ತನ್ನು ಐದು ಮಾಡುವುದು ವಿಚಿತ್ರ. ಇದಕ್ಕೆ ಸಮಾಧಾನ ಹೀಗೆ : ನವ=ನೂತನವಾದ ರಸ=ಅಭಿರುಚಿ. ಪಂಚ=ವಿಸ್ತಾರ. ನೃತ್ಯದ ಹತ್ತು ಮಂಡಲಗಳನ್ನು ವಿಸ್ತರಿಸಿ ತೋರಿಸಿದಳೆಂದು ಅಭಿಪ್ರಾಯ (ರಂ)

ಮಂಡಳಮಂ ನೆರೆದಳ್ಮುಖ
ಮಂಡಳಮಮೃತಾಂಶುಮಂಡಳಕ್ಕೆಣೆವರೆ ಭೂ
ಮಂಡಳದಿಂ ನೆಗೆದು ನಭೋ
ಮಂಡಳದೊಳ್ನಿಂದು ನೀಱೆ ಮೆಱೆದ್ದಶವಿಧಮಂ ೮೮

ಚಾರಿಗಳಂ ಕೊಳುತಂ ಸಂ
ಚಾರಿಗಳಂ ತಳೆದು ರಸಿಕಜನದಕ್ಷಿಗಳಂ
ಚಾರಿವರಿದಾಡಿಸಿದಳೆ
ಚ್ಚಾರಿತದಂಗಮನನಂಗನಿರೆ ಪಿಂಗಡೆಯೊಳ್ ೮೯

ಕರತಳದೊಳಭಿನಯಮನಮ
ರ್ದಿರೆ ಚರಣದೊಳತುಳ ತಾಳಮಂ ನೇತ್ರದೆ ಭಾ
ಸುರರಸಮನಸಮಗಾನಮ
ನರರೆ ಶರೀರದೊಳೆ ಪಿಡಿದವಳ್ ನರ್ತಿಸಿದಳ್ ೯೦

ಚಂ॥ ಘನಜಘನಂಗಳುನ್ನತಿ ಕುಚಂಗಳ ತುಂಗತೆ ಚೆಲ್ವನಾಳ್ದ ಕ
ಣ್ಗೊನೆಯ ವಿಳಾಸಮಾಸ್ಯದ ವಿಕಾಸತೆ ಪಾದದ ಸಂಭ್ರಮಂ ಪಳ
ಚ್ಚನೆ ಪೊಳೆವಂಗದಂಗಮರುಣಾಧರದಿಂಪು ಕಪೋಲಕಾಂತಿಯೆಂ
ಬಿನಿತನಲರ್ಚಿ ಬಿಚ್ಚಳಿಸಿ ನಚ್ಚಣಿ ಪೆರ್ಚಿಸಿದಳ್ ಮನೋಜನಂ ೯೧

ವಿಚಿತ್ರ ! ಎಂಬಂತೆ ಆ ಸಭೆಯಲ್ಲಿ ನರ್ತಕಿಯು ನೃತ್ಯವಾಡಿದಳು. ೮೮. ಮುಖ ಮಂಡಲವನ್ನು ಚಂದ್ರಮಡಲಕ್ಕೆ ಎಣೆಯಾಗುವ ಹಾಗೆ ಭೂಮಿಯಿಂದ ಮೇಲಕ್ಕೆ ಹಾರಿ, ಆಕಾಶದಲ್ಲಿ ನಿಂತು, ಆ ಸುಂದರಿಯಾದ ನಟಿಯು ದಶವಿಧವಾದ ಮಂಡಲಗಳೆಂಬ ನಾಟ್ಯಭೇದಗಳನ್ನು ಕುಣಿದು ತೋರಿಸಿದಳು. ೮೯. 'ಚಾರಿ' ಎಂಬ ಹೆಸರಿನ ಭಂಗಿ ವಿಶೇಷವನ್ನು ಸ್ವೀಕರಿಸಿ, ಸಂಚಾರಿಭಾವಗಳನ್ನು ನೋಡುವವರಲ್ಲಿ ಉಂಟುಮಾಡುತ್ತ ಹಿಂಗಡೆಯಲ್ಲಿ ಮನ್ಮಥನಿರುತ್ತಿರಲು, ಸಿಡಿದು ಹಾರಿ ಹಾರಿ (ಎಚ್ಚಾರಿ ?) ತೋರಿಸಿ, ರಸಿಕರಾದವರ ನೇತ್ರಗಳೂ ತಿರುಗುವಂತೆ ಮಾಡಿದಳು. ೯೦. ಕರತಳಗಳಿಂದ ಅಭಿನಯವನ್ನೂ, ಕಾಲಿನಲ್ಲಿ ಅಸಮಾನವಾದ ತಾಳಗತಿಯನ್ನೂ ಹಿಡಿದು, ನೇತ್ರಗಳಿಂದ ಪ್ರಕಾಶಮಾನವಾದ ಶೃಂಗಾರಾದಿ ನವರಸಗಳ ಭಾವವನ್ನು ವ್ಯಕ್ತಪಡಿಸುವವಳಾಗಿ ಅನನ್ಯ ಸಾಧಾರಣವಾದ ಸಂಗೀತವನ್ನು ಬಾಯಿಂದ (ಶರೀರದಿಂದ) ಹಾಡುತ್ತ, ಅಬ್ಬಾ ! ಅವಳು ನರ್ತನವನ್ನು ಮಾಡಿದಳು. ೯೧. ದಪ್ಪವೂ ಉನ್ನತವೂ ಆದ ಜಘನಗಳು, ಪೀನಸ್ತನಗಳು, ಚೆಲುವಿನಿಂದ ಕೂಡಿದ ವಿಲಾಸಮಯ ಕಟಾಕ್ಷಕಾಂತಿಯ ವಿಕಾಸ, ಪಾದಗಳ ಸಂಭ್ರಮ, ಮಿಂಚಿನಂತೆ ಪಳಚ್ಚನೆ ಹೊಳೆಯುವ ದೇಹದ ಸೌಂದರ್ಯ, ಕೆಂಪಾದ ತುಟಿಗಳ ಇಂಪು, ಕಪೋಲಭಾಗಗಳ ಹೊಳಪು-ಎಂಬ ಇವೆಲ್ಲವುಗಳನ್ನೂ ಅರಳಿಸಿ ಬೀರುತ್ತ, ಆ ನರ್ತಕಿಯು ನೋಡುವವರಲ್ಲಿ ಕಾಮಬಾಧೆ

ಕಂ॥ ತೀವಿದ ಲಾವಣ್ಯಾಮೃತ
ಸೇವನೆಗೀವಂತೆ ಸಮಯಮಂ ಯುವಜನನೇ
ತ್ರಾವಳಿಗಮರ್ದಂಗದಿನಂ
ದಾ ವಧು ಸಮಪಾದಚಾರಿಯಂ ತಳೆದೆಸೆದಳ್ ೯೨

ಅರುಣಚರಣಾಂಶು ಬಂದುಗೆ
ಯರಲಂ ಬಲಿಗೆದಱೆ ಕಾಲ್ಗಳೊಳ್ ತೊಡರ್ದ ನರೇ
ಶ್ವರರ ಬಗೆವಲೆದೊಡಂಕಂ
ಪರಿಹರಿಪವೊಲಾಂತಳಬಲೆ ಹರಿಣಪ್ಲುತಮಂ ೯೩

ಶೃಂಗಾರಸಾರರಸಮನ
ಪಾಂಗದ್ಯುತಿ ಬೀಱೆ ಮಿಱೆ ಲಾವಣ್ಯರಸಂ
ತುಂಗಕುಚೆ ಚಾಪಗತಿಯಂ
ಸಂಗಳಿಸುತನಂಗಚಾಪಲತೆಯೆನೆ ಮೆಱೆದಳ್ ೯೪

ವ॥ ಮತ್ತಂ

ಉ॥ ಕಂತುಕರಾಗ್ರಕಂತುಕದವೋಲ್ನೆಗೆಯುತ್ತೆ ಮನೋಜಚಕ್ರಿ ಚ
ಕ್ರಂ ತಿರುಪಂತೆ ತಿರ್ಱನೆ ಕರಂ ತಿರುಗುತ್ತೆ ರತೀಶಶಸ್ತ್ರಿಶ
ಸ್ತ್ರಂ ತಳದಿಂ ಕುರುಳ್ಚಿ ಚಲಿಪಂತಲುಗುತ್ತೆ ಸುಮೇಷುಸೂತ್ರಧಾ
ರಂ ತಳೆದಾಡಿಪೊಂದು ಪೊಸಸೂತ್ರದ ಪುತ್ರಿಕೆಯಂತಿರಾಡಿದಳ್ ೯೫

ಯುಂಟಾಗುವ ಹಾಗೆ ಮಾಡಿದಳು. ೯೨. ತುಂಬಿದ ಲಾವಣ್ಯವೆಂಬ ಅಮೃತವನ್ನು ಸೇವಿಸುವುದಕ್ಕೆ ಸಮಯವನ್ನು ಯುವಜನರ ನೇತ್ರಸಮೂಹಗಳಿಗೆ ತನ್ನ ಅಂಗದಿಂದ ಒದಗಿಸಿಕೊಡುವ ಕಾರಣದಿಂದಲೋ ಎಂಬಂತೆ ಆ ನಾಟ್ಯವಧುವು ಆ ಸಮಯದಲ್ಲಿ ಒದಗಿಸಿಕೊಡುವುದಕ್ಕೋಸುಗ 'ಸಮಪಾದಚಾರಿ' ಎಂಬ ಭಂಗಿಯಿಂದ ನಿಂತುಕೊಂಡಳು. ೯೩. ಕೆಂಪುಬಣ್ಣದ ಅವಳ ಪಾದಕಾಂತಿಯು ಬಂದುಗೆಯ ಹೂವುಗಳ ಸೌಂದರ್ಯವನ್ನು ತಿರಸ್ಕರಿಸುವಂತಿರಲು, ಆ ಪಾದಗಳಲ್ಲಿ ತೊಡರಿಕೊಂಡಿದ್ದ ರಾಜರುಗಳ ಮನಸ್ಸೆಂಬ ಬಲೆಗಳ ತೊಡಕನ್ನು ಪರಿಹರಿಸಿಕೊಳ್ಳುವ ಹಾಗೆ 'ಹರಿಣಪ್ಲುತ'ವೆಂಬ ಹೆಸರಿನ ನೃತ್ಯವನ್ನು ಆ ನಟಿಯು ಪ್ರಾರಂಭಿಸಿದಳು. ೯೪. (ಆ ನೃತ್ಯದಲ್ಲಿ) ತುಂಗಕುಚಗಳುಳ್ಳ ಆ ನಟಿಯ ಕಡೆಗಣ್ಣುಗಳ ಕಾಂತಿಯು ಶೃಂಗಾರದಸಾರವನ್ನೇ ಹೊರಸೂಸುತ್ತಿದ್ದವು ; ಲಾವಣ್ಯರಸವು ಮಿಕ್ಕಿ ಹರಿಯುತ್ತಿತ್ತು ; ಬಿಲ್ಲಿನಂತೆ ಬಳುಕುತ್ತ ಮನ್ಮಥನ ಬಿಲ್ಲಿನ ಲತೆಯೋ ಎಂಬಂತೆ ನೃತ್ಯವನ್ನು ಆಡಿ ಮೆರೆಯುತ್ತಿದ್ದಳು. ವ|| ಮತ್ತು ೯೫. ಮನ್ಮಥನ ಕೈ ಚೆಂಡಿನಂತೆ ಪುಟಿಯುತ್ತ, ಮನ್ಮಥನೆಂಬ ಚಕ್ರಧಾರಿಯ ಚಕ್ರವು ತಿರುಗುವಂತೆ ತಿರ್ರನೆ ತಿರುಗುತ್ತ, ರತೀಶ್ವರನೆಂಬ ಶಸ್ತ್ರಧಾರಿಯು ಶಸ್ತ್ರವನ್ನು ಝಳಪಿಸಲಾಗಿ ಅದು ಅಲುಗುವಂತೆ ಅಲುಗಾಡುತ್ತ, ಪುಷ್ಪಾಸ್ತ್ರಸೂತ್ರಧಾರನು ಆಡಿಸುವ ಹೊಸ ಸೂತ್ರದ ಗೊಂಬೆಯಂತೆ

ಮಂಡಳಮಂ ನೆರೆದಳ್ಮುಖ
ಮಂಡಳಮಮೃತಾಂಶುಮಂಡಳಕ್ಕೆಣೆವರೆ ಭೂ
ಮಂಡಳದಿಂ ನೆಗೆದು ನಭೋ
ಮಂಡಳದೊಳ್ನಿಂದು ನೀೞ್ದೆ ಮೆಣ್ದಶವಿಧಮಂ ೮೮

ಚಾರಿಗಳಂ ಕೊಳುತಂ ಸಂ
ಚಾರಿಗಳಂ ತಳೆದು ರಸಿಕಜನದಕ್ಷಿಗಳಂ
ಚಾರಿವರಿದಾಡಿಸಿದಳೆ
ಚ್ಚಾರಿತದಂಗಮುನನಂಗನಿರೆ ಪಿಂಗಡೆಯೊಳ್ ೮೯

ಕರತಳದೊಳಭಿನಯಮನಮ
ರ್ದಿರೆ ಚರಣದೊಳತುಳ ತಾಳಮಂ ನೇತ್ರದೆ ಭಾ
ಸುರರಸಮನಸಮಗಾನಮ
ನರರೆ ಶರೀರದೊಳೆ ಪಿಡಿದವಳ್ ನರ್ತಿಸಿದಳ್ ೯೦

ಚಂ॥ ಘನಜಘನಂಗಳುನ್ನತಿ ಕುಚಂಗಳ ತುಂಗತೆ ಚೆಲ್ವನಾಳ್ದ ಕ
ಣ್ಗೊನೆಯ ವಿಳಾಸಮಾಸ್ಯದ ವಿಕಾಸತೆ ಪಾದದ ಸಂಭ್ರಮಂ ಪಳ
ಚ್ಚನೆ ಪೊಳೆವಂಗದಂಗಮರುಣಾಧರದಿಂಪು ಕಪೋಲಕಾಂತಿಯೆಂ
ಬನಿತನಲರ್ಚಿ ಬಿಚ್ಚಳಿಸಿ ನಚ್ಚಣಿ ಪೆರ್ಚಿಸಿದಳ್ ಮನೋಜನಂ ೯೧

ವಿಚಿತ್ರ ! ಎಂಬಂತೆ ಆ ಸಭೆಯಲ್ಲಿ ನರ್ತಕಿಯು ನೃತ್ಯವಾಡಿದಳು. ೮೮. ಮುಖ ಮಂಡಲವನ್ನು ಚಂದ್ರಮಡಲಕ್ಕೆ ಎಣೆಯಾಗುವ ಹಾಗೆ ಭೂಮಿಯಿಂದ ಮೇಲಕ್ಕೆ ಹಾರಿ, ಆಕಾಶದಲ್ಲಿ ನಿಂತು, ಆ ಸುಂದರಿಯಾದ ನಟಿಯು ದಶವಿಧವಾದ ಮಂಡಲಗಳೆಂಬ ನಾಟ್ಯಭೇದಗಳನ್ನು ಕುಣಿದು ತೋರಿಸಿದಳು. ೮೯. 'ಚಾರಿ' ಎಂಬ ಹೆಸರಿನ ಭಂಗಿ ವಿಶೇಷವನ್ನು ಸ್ವೀಕರಿಸಿ, ಸಂಚಾರಿಭಾವಗಳನ್ನು ನೋಡುವವರಲ್ಲಿ ಉಂಟುಮಾಡುತ್ತ ಹಿಂಗಡೆಯಲ್ಲಿ ಮನ್ಮಥನಿರುತ್ತಿರಲು, ಸಿಡಿದು ಹಾರಿ ಹಾರಿ (ಎಚ್ಚಾರಿ ?) ತೋರಿಸಿ, ರಸಿಕರಾದವರ ನೇತ್ರಗಳೂ ತಿರುಗುವಂತೆ ಮಾಡಿದಳು. ೯೦. ಕರತಳಗಳಿಂದ ಅಭಿನಯವನ್ನೂ, ಕಾಲಿನಲ್ಲಿ ಅಸಮಾನವಾದ ತಾಳಗತಿಯನ್ನೂ ಹಿಡಿದು, ನೇತ್ರಗಳಿಂದ ಪ್ರಕಾಶಮಾನವಾದ ಶೃಂಗಾರಾದಿ ನವರಸಗಳ ಭಾವವನ್ನು ವ್ಯಕ್ತಪಡಿಸುವವಳಾಗಿ ಅನನ್ಯ ಸಾಧಾರಣವಾದ ಸಂಗೀತವನ್ನು ಬಾಯಿಂದ (ಶರೀರದಿಂದ) ಹಾಡುತ್ತ, ಅಬ್ಬಾ ! ಅವಳು ನರ್ತನವನ್ನು ಮಾಡಿದಳು. ೯೧. ದಪ್ಪವೂ ಉನ್ನತವೂ ಆದ ಜಘನಗಳು, ಪೀನಸ್ತನಗಳು, ಚೆಲುವಿನಿಂದ ಕೂಡಿದ ವಿಲಾಸಮಯ ಕಟಾಕ್ಷಕಾಂತಿಯ ವಿಕಾಸ, ಪಾದಗಳ ಸಂಭ್ರಮ, ಮಿಂಚಿನಂತೆ ಪಳಚ್ಚನೆ ಹೊಳೆಯುವ ದೇಹದ ಸೌಂದರ್ಯ, ಕೆಂಪಾದ ತುಟಿಗಳ ಇಂಪು, ಕಪೋಲಭಾಗಗಳ ಹೊಳಪು-ಎಂಬ ಇವೆಲ್ಲವುಗಳನ್ನೂ ಅರಳಿಸಿ ಬೀರುತ್ತ, ಆ ನರ್ತಕಿಯು ನೋಡುವವರಲ್ಲಿ ಕಾಮಬಾಧೆ

ಕಂ॥ ತೀವಿದ ಲಾವಣ್ಯಾಮೃತ
ಸೇವನೆಗೀವಂತೆ ಸಮಯಮಂ ಯುವಜನನೇ
ತ್ರಾವಳಿಗಮರ್ದಂಗದಿನಂ
ದಾ ವಧು ಸಮಪಾದಚಾರಿಯಂ ತಳೆದೆಸೆದಳ್ ೯೨

ಅರುಣಚರಣಾಂಶು ಬಂದುಗೆ
ಯರಲಂ ಬಲಿಗೆದಱೆ ಕಾಲ್ಗಳೊಳ್ ತೊಡರ್ದ ನರೇ
ಶ್ವರರ ಬಗೆವಲೆದೊಡಂಕಂ
ಪರಿಪರಿಪವೊಲಾಂತಳಬಲೆ ಹರಿಣಪ್ಲುತಮಂ ೯೩

ಶೃಂಗಾರಸಾರರಸಮನ
ಪಾಂಗದ್ಯುತಿ ಬೀಱೆ ಮೀಱೆ ಲಾವಣ್ಯರಸಂ
ತುಂಗಕುಚೆ ಚಾಪಗತಿಯಂ
ಸಂಗಳಿಸುತನಂಗಚಾಪಲತೆಯೆನೆ ಮೆಱೆದಳ್ ೯೪

ವ॥ ಮತ್ತಂ

ಉ॥ ಕಂತುಕರಾಗ್ರಕಂತುಕದವೋಲ್ನೆಗೆಯುತ್ತೆ ಮನೋಜಚಕ್ರಿ ಚ
ಕ್ರಂ ತಿರುಪಂತೆ ತಿರ್ರನೆ ಕರಂ ತಿರುಗುತ್ತೆ ರತೀಶಶಸ್ತ್ರಿಶ
ಸ್ತ್ರಂ ತಳದಿಂ ಕುರುಳ್ಚಿ ಚಲಿಪಂತಲುಗುತ್ತೆ ಸುಮೇಷುಸೂತ್ರಧಾ
ರಂ ತಳೆದಾಡಿಪೊಂದು ಪೊಸಸೂತ್ರದ ಪುತ್ರಿಕೆಯಂತಿರಾಡಿದಳ್ ೯೫

ಯುಂಟಾಗುವ ಹಾಗೆ ಮಾಡಿದಳು. ೯೨. ತುಂಬಿದ ಲಾವಣ್ಯವೆಂಬ ಅಮೃತವನ್ನು ಸೇವಿಸುವುದಕ್ಕೆ ಸಮಯವನ್ನು ಯುವಜನರ ನೇತ್ರಸಮೂಹಗಳಿಗೆ ತನ್ನ ಅಂಗದಿಂದ ಒದಗಿಸಿಕೊಡುವ ಕಾರಣದಿಂದಲೋ ಎಂಬಂತೆ ಆ ನಾಟ್ಯವಧುವು ಆ ಸಮಯದಲ್ಲಿ ಒದಗಿಸಿಕೊಡುವುದಕ್ಕೋಸುಗ 'ಸಮಪಾದಚಾರಿ' ಎಂಬ ಭಂಗಿಯಿಂದ ನಿಂತುಕೊಂಡಳು. ೯೩. ಕೆಂಪುಬಣ್ಣದ ಅವಳ ಪಾದಕಾಂತಿಯು ಬಂದುಗೆಯ ಹೂವುಗಳ ಸೌಂದರ್ಯವನ್ನು ತಿರಸ್ಕರಿಸುವಂತಿರಲು, ಆ ಪಾದಗಳಲ್ಲಿ ತೊಡರಿಕೊಂಡಿದ್ದ ರಾಜರುಗಳ ಮನಸ್ಸೆಂಬ ಬಲೆಗಳ ತೊಡಕನ್ನು ಪರಿಹರಿಸಿಕೊಳ್ಳುವ ಹಾಗೆ 'ಹರಿಣಪ್ಲುತ'ವೆಂಬ ಹೆಸರಿನ ನೃತ್ಯವನ್ನು ಆ ನಟಿಯು ಪ್ರಾರಂಭಿಸಿದಳು. ೯೪. (ಆ ನೃತ್ಯದಲ್ಲಿ) ತುಂಗಕುಚಗಳುಳ್ಳ ಆ ನಟಿಯ ಕಡೆಗಣ್ಣುಗಳ ಕಾಂತಿಯು ಶೃಂಗಾರದಸಾರವನ್ನೇ ಹೊರಸೂಸುತ್ತಿದ್ದವು ; ಲಾವಣ್ಯರಸವು ಮಿಕ್ಕಿ ಹರಿಯುತ್ತಿತ್ತು ; ಬಿಲ್ಲಿನಂತೆ ಬಳುಕುತ್ತ ಮನ್ಮಥನ ಬಿಲ್ಲಿನ ಲತೆಯೋ ಎಂಬಂತೆ ನೃತ್ಯವನ್ನು ಆಡಿ ಮೆರೆಯುತ್ತಿದ್ದಳು. ವ॥ ಮತ್ತು ೯೫. ಮನ್ಮಥನ ಕೈಚೆಂಡಿನಂತೆ ಪುಟಿಯುತ್ತ, ಮನ್ಮಥನೆಂಬ ಚಕ್ರಧಾರಿಯ ಚಕ್ರವು ತಿರುಗುವಂತೆ ತಿರ್ರನೆ ತಿರುಗುತ್ತ, ರತೀಶ್ವರನೆಂಬ ಶಸ್ತ್ರಧಾರಿಯು ಶಸ್ತ್ರವನ್ನು ಝಳಪಿಸಲಾಗಿ ಅದು ಅಲುಗುವಂತೆ ಅಲುಗಾಡುತ್ತ, ಪುಷ್ಪಾಸ್ತ್ರಸೂತ್ರಧಾರನು ಆಡಿಸುವ ಹೊಸ ಸೂತ್ರದ ಗೊಂಬೆಯಂತೆ

ಕಂ॥ ಜತಿವೆತ್ತೊಪ್ಪುವ ಮೃದುಪದ
ಗತಿಯುಂ ರಸವೊಸರ್ವ ಭಾವಮುಂ ವೃತ್ತಿವಿಳಾ
ಸತೆಯುಂ ತಳ್ತಿರೆ ವಿಳಸ
ತ್ಕೃತಿಯಂ ಪೋಲ್ತಬಳೆ ರಸಿಕರಂ ಮೆಚ್ಚಿಸಿದಳ್ ೯೬

ಅಚ್ಚರಿಯರೊಳರಗಿಣಿಯರೊ
ಳಚ್ಚಿ ಮುಗುಳ್ಚುವ ವಿಳಾಸಮುಂ ವಿಭ್ರಮಮುಂ
ನಚ್ಚಿರದೆನೆ ನರನಾರಿಯ
ನಚ್ಚಣಕೆಣೆವರ್ಪ ನಚ್ಚಣಂ ಪೆಱತುಂಟೇ ೯೭

ಆ ರಮಣಿ ನೋಳ್ಪ ವಿಬುಧರ
ಸಾರತರಾಪಾಂಗಧವಳರುಚಿ ಕವಿಯೆ ಲಸ
ದ್ಭಾರತಿ ಲೀಲಾಲಾಸ್ಯಮ
ನೋರಂತಿರೆ ತಾನೆ ತೋರ್ಪಳೆನೆ ಕರಮೆಸೆದಳ್ ೯೮

ಅವಳ ನವನರ್ತನಮನಂ
ದವನೀಧವನೆಯ್ದೆ ಮೆಚ್ಚಿ ಪೊಗಳ್ದುತ್ಸವದಿಂ
ದಿವಿಜಕುಜದೇಳ್ಗೆ ಕೀಳ್ಪಡೆ
ಸುವಸ್ತ್ರಮಣಿಭೂಷಣಂಗಳಂ ಪದೆದಿತ್ತಂ ೯೯

ಇರುವ ಅವಳು (ಆ ಹರಿಣಪ್ಲುತ) ನೃತ್ಯವನ್ನು ಆಡಿದಳು. ೯೬. ಜತಿಯನ್ನನುಸರಿಸಿದ ಪಾದಗಳ ಗತಿಯೂ, ರಸವನ್ನು (ಶೃಂಗಾರಾದಿ ರಸವನ್ನು) ಹೊರಸೂಸುವ ಭಾವವೂ, ಕೈಶಿಕೀ ಮುಂತಾದ ವೃತ್ತಿಯ ವಿಲಾಸವೂ ಕೂಡಿಕೊಂಡಿರಲು, ಪ್ರಕಾಶಿಸುವ ಸತ್ಕಾವ್ಯದ ಹೋಲಿಕೆಗೊಂಡು ಆ ಸ್ತ್ರೀಯು ರಸಿಕರನ್ನು ಮೆಚ್ಚಿಸಿದಳು. (ಸತ್ಕಾವ್ಯದಲ್ಲಿ–ಉಸಿರ್ದಾಣವಾದ ಯತಿಯೂ, ಮೃದುವಾದ ಉಚಿತ ಪದಪ್ರಯೋಗದ ಸಾಲುಗಳೂ, ಶೃಂಗಾರಾದಿ ರಸಗಳೂ, ಹೊರಸೂಸುವ ಭಾವಗಳೂ, ಅನುಪ್ರಾಸಾದಿ ವೃತ್ತಿಗಳೂ ಕೂಡಿದ್ದರೆ ಅದು ರಸಾಸ್ವಾದನ ಪರಿಣತಮತಿಗಳಿಗೆ ರಂಜನೆಯಾಗುತ್ತದೆ). ೯೭. ಅಪ್ಸರಸ್ತ್ರೀಯರಲ್ಲಿಯೂ, ಅರಗಿಣಿಯಲ್ಲಿಯೂ ಕಣ್ಣುಮುಚ್ಚಿಸುವ ಈ ಬಗೆಯಾದ ವಿಲಾಸವೂ, ವಿಭ್ರಮವೂ ಕೂಡಿರದು–ಎನ್ನುವಂತಿರಲು ಮಾನವಸ್ತ್ರೀಯಾದ ಇವಳ ನರ್ತನಕ್ಕೆ ಸರಿದೂಗುವ ನರ್ತನವು ಬೇರುಂಟೆ ? ೯೮. ನೋಡುವ ವಿದ್ವಾಂಸರ ಸಾರತರವಾದ ಕಡೆಗಣ್ಣುಗಳ ಧವಳವರ್ಣದ ಕಾಂತಿಯು ಮುಸುಕಿರಲಾಗಿ ಶೋಭಿಸುವ ಸರಸ್ವತಿಯೇ ಲೀಲಾರ್ಥವಾಗಿ ನೃತ್ಯವನ್ನು ತಾನೇ ತೋರಿಸುತ್ತಿರುವಳೋ ಎನ್ನುವಂತೆ ಆ ಸುಂದರಿ ಅತಿಶಯವಾಗಿ ಶೋಭಿಸಿದಳು. ೯೯. ಆ ನರ್ತಕಿಯು ನೂತನವಾದ ಈ ನೃತ್ಯವನ್ನು ಭೂಪಾಲನಾದ ರಾಜಶೇಖರನು ನೋಡಿ, ಅತಿಯಾಗಿ ಮೆಚ್ಚಿ, ಹೊಗಳಿ, ಪ್ರೀತಿಯನ್ನು ಹೊಂದಿ, ಕಲ್ಪವೃಕ್ಷದ ಘನತೆಯನ್ನು ಕೀಳ್ಮಾಡುವ ರೀತಿಯಲ್ಲಿ ಉತ್ತಮವಸ್ತ್ರ, ರತ್ನಾಭರಣಗಳನ್ನು

ವ॥ ಆ ಪ್ರಸ್ತಾವದೊಳ್

ಮ॥ ನಿಡುದೋಳ್ನೀಳ್ದ ತರಂಗಮಾನನಮರಲ್ದಂಭೋರುಹಂ ತಳ್ತ ಚೆಂ
ಗುಡಿ ದೀರ್ಘಾರುಣಪಾಣಿಶಾಖೆ ದಶನಂ ನುಣ್ಮುತ್ತು ಮೀಂಗಳ್ಪಿಡಂ
ಗಿಡಿದೆತ್ತಂ ಪೊಳೆವಕ್ಷಿಗಳ್ ಸಲಿಲಮಂಗದ್ಯೋತಿ ತಾನಾಗೆ ಪಾ
ಲ್ಗಡಲೆಂಬಂತಿರೆ ಸಿಂಧುರಾಜನೊಸೆದೇಳ್ತಂದಂ ಗಭೀರಾನ್ವಿತಂ ೧೦೦

ವ॥ ಅಂತೇಳ್ತಂದಾ ರಾಜಶೇಖರಂಗೆ ನಖರುಚಿಕುಸುಮಂಬೆರಸು ರತ್ನಾಂಜಲಿಯುಂ ಕೆದರ್ದು ಪೊಡಮಟ್ಟು ಮದನಂಗೆ ಮಲ್ಲಿಗೆಮುಗುಳಮಾಲೆಯನೀವ ವಸಂತನಂತೆ ತಾಂ ತಂದಾಣಿಮುತ್ತಿನ ಕಂಠಮಾಲೆಯಂ ಕಾಣ್ಕೆಗೈದು ಮತ್ತಮೀರದೆ

ಮ॥ಸ್ರ॥ ಸಮದಂತಂ ಚಾರುವಕ್ತ್ರಂ ಕಿಱುಗಿವಿ ಘನಘಂಟಾಖುರಂ ನೀಲರತ್ನೋ
ಪಮನೇತ್ರಂ ಶ್ವೇತವರ್ಣಂ ವಿತತಲಸದುರಂ ದೀರ್ಘವಾಲಂ ಪೃಥುಸ್ಕಂ
ಧಮುದಗ್ರಗ್ರೀವಮುದ್ಯಜ್ಜಘನಮುರುಲಲಾಟಂ ವಿಮಾಂಸಾಂಘ್ರಿ ಗಂಭೀ
ರಮಹಾನಾದಂ ಸುನಾಸಾಪುಟಮಮರ್ದ ತುರಂಗಂಗಳಂ ಕಾಣ್ಕೆಗೈದಂ ೧೦೧

ಸಂತೋಷದಿಂದ ಕೊಟ್ಟನು. ವ|| ಆ ಸಮಯದಲ್ಲಿ ೧೦೦. ಉದ್ದವಾದ ತೋಳುಗಳೇ ದೀರ್ಘ ತರಂಗಗಳಾಗಿಯೂ, ಮುಖವೇ ಕಮಲವಾಗಿಯೂ, ಕೈಬೆರಳುಗಳೇ ಕೆಂಪಾಗಿಯೂ ಉದ್ದವಾಗಿಯೂ ಇರುವ ಅರುಣವರ್ಣದ (ಕೆಂಪುಬಣ್ಣದ) ಹವಳದ ಕುಡಿಗಳಾಗಿಯೂ, ಸೌಂದರ್ಯದಿಂದ ಕೂಡಿ ಹೊಳೆಯುವ ಕಣ್ಣುಗಳೇ ಮೀನುಗಳಾಗಿಯೂ, ದೇಹದ ಕಾಂತಿಯೇ ನೀರಾಗಿಯೂ ಇರಲು ಹಾಲುಗಡಲೋ ಎಂಬ ಹಾಗೆ ಗಂಭೀರಸ್ವಭಾವದ ಸಿಂಧುರಾಜನು ಪ್ರೀತಿಯಿಂದ ಸಭೆಯನ್ನು ಪ್ರವೇಶಿಸಿದನು. ವ|| ಹಾಗೆ ಬಂದು ಆ ರಾಜಶೇಖರಮಹಾರಾಜನಿಗೆ ಕೈಯ ಉಗುರುಗಳ ಕಾಂತಿಯೆಂಬ ಹೂವುಗಳಿಂದ ಕೂಡಿ, ರತ್ನಗಳ ಪಾದಗಾಣಿಕೆಯನ್ನು ಸುರಿದು ನಮಸ್ಕರಿಸಿ, ಮನ್ಮಥನಿಗೆ ಮಲ್ಲಿಗೆಹೂವುಗಳ ಮಾಲೆಯನ್ನು ಕೊಡುವ ವಸಂತರಾಜನಂತೆ ತಾನು ತಂದ ಆಣಿಮುತ್ತುಗಳ ಕಂಠ ಮಾಲೆಯನ್ನು ಕಾಣಿಕೆಯಾಗಿ ಅರ್ಪಿಸಿದನು. ಆಮೇಲೆ, ೧೦೧. ಸಮವಾದ ಹಲ್ಲು ಗಳುಳ್ಳ, ಮನೋಹರವಾದ ಮುಖವನ್ನುಳ್ಳ, ಚಿಕ್ಕ ಚಿಕ್ಕ ಕಿವಿಗಳನ್ನುಳ್ಳ, ಗಂಟೆಯಾ ಕಾರದಿಂದ ಕೂಡಿದ ಖುರಪುಟ (ಗೊರಸು)ಗಳನ್ನುಳ್ಳ, ನೀಲರತ್ನಕ್ಕೆ ಸಮಾನವಾದ ಕಣ್ಣು ಗಳನ್ನುಳ್ಳ, ಶ್ವೇತವರ್ಣದಿಂದ ಕೂಡಿದ ವಿಸ್ತಾರವಾದ ಮನೋಹರ ಎದೆಯಿಂದ ಕೂಡಿದ ದೀರ್ಘಬಲವನ್ನುಳ್ಳ, ದಪ್ಪನೆಯ ಹೆಗಲನ್ನು ಹೊಂದಿದ, ಶ್ರೇಷ್ಠವಾದ ಕುತ್ತಿಗೆ ಯನ್ನು ಹೊಂದಿದ, ಎತ್ತರವಾದ ಸೊಂಟವುಳ್ಳ, ಶ್ರೇಷ್ಠವಾದ ಹಣೆಯ, ಮಾಂಸರಹಿತ ವಾದ ಕಾಲಿನ, ಗಂಭೀರ ಹೇಷಾರವದ, ಅರಳಿದ ಮೂಗಿನ ಹೊರಳಿಯ ಕುದುರೆಗಳೆ

ಮ॥ ಅದು ಧಾರಾಧರಮಬ್ದದಂತೆ ಪೊಳೆಯಂತಾವರ್ತಯುಕ್ತಂ ಕುರಂ
ಗದವೋಲ್ ತೂರ್ಣಗತಿಪ್ರಯುಕ್ತಮಳಿಯಂತಾಮೋದಚಿತ್ತಂ ಕಳಂ
ಬದವೋಲ್ ಚಾಪಲ ಸದ್ಗುಣಾಂಚಿತಮುದಂಚಚ್ಚಂದ್ರಬಿಂಬಂಬೊಲ
ಭ್ಯುದಯಶ್ರೀಕರಲಕ್ಷಣಾಂಕಮೆನಿಸಿತ್ತಾ ರಾಜವಾಜಿದ್ವಯಂ ೧೧೨

ವ॥ ಅಂತುಮಲ್ಲದೆಯುಂ

ಮ॥ಸ್ರ॥ ಗತಿವೇಗಂ ಪುಲ್ಲೆಯಾ ಪುಲ್ಲೆಯಿನತಿಚಪಲಂ ಮಾರುತಂ ಪುಲ್ಲೆಯಿಂ ಮಾ
ರುತನಿಂದಂ ಬಾಣಮೆಂತುಂ ತ್ವರಿತಗಮನಸಂಯುಕ್ತಮಾ ಪುಲ್ಲೆಯಿಂ ಮಾ
ರುತನಿಂದಂ ಬಾಣದಿಂ ದೃಷ್ಟಿಯೆ ರಯುಗತಿ ನೋಳ್ಪಾಗಳಾ ಪುಲ್ಲೆಯಿಂ ಮಾ
ರುತನಿಂದಂ ಬಾಣದಿಂ ದೃಷ್ಟಿಯಿನತಿಜವಗಂ ರಾಜಿಪಾ ವಾಜಿಯುಗ್ಮಂ ೧೧೩

ವ॥ ಅಂತೆಸೆವಪೂರ್ವ ಗಂಧರ್ವಯುಗಮಂ ಕಾಣ್ಕೆನೀಡಿದನಂತರಮರಸನಪಾಂಗ ಪ್ರಸನ್ನತೆಯಂ ಪಡೆದು ಮೈಯುರ್ವಿ ಪೊಡಮಟ್ಟು ಸಿಂಧುರಾಜಂ ಸಿಂಧುರಾರೂಢನಾಗಿ

ರಡನ್ನು ಕಾಣಿಕೆಯಾಗಿ ಕೊಟ್ಟನು. ೧೧೨. ಆ ಎರಡೂ ಕುದುರೆಗಳು (ಆಸ್ಕಂದಿತ, ಧೌರಿತಕ, ರೇಚಿತ, ವಲ್ಗಿತ, ಪ್ಲುತ ಎಂಬ) ನಡಿಗೆಗಳನ್ನು ಪಡೆದಿದ್ದವು. (ಮೋಡವು ಧಾರಾಕಾರವಾಗಿ ಸುರಿಸುವ ಮಳೆ ನೀರಿನ ಹನಿಗಳಿಂದ ಕೂಡಿರುತ್ತದೆ). ಹೊಳೆಯ ಹಾಗೆ ಸಲ್ಲಕ್ಷಣವನ್ನು ಸೂಚಿಸುವ ಕೂದಲಿನ ಸುಳಿಗಳಿಂದ ಕೂಡಿದ್ದವು. (ಹೊಳೆಯು ನೀರಿನ ಸುಳಿಗಳಿಂದ ಕೂಡಿರುತ್ತದೆ). ಜಿಂಕೆಯ ಹಾಗೆ ತೀವ್ರವಾದ ಓಟದಿಂದ ಕೂಡಿದವುಗಳಾಗಿದ್ದವು. ದುಂಬಿಗಳ ಹಾಗೆ ಹರ್ಷಗೊಂಡ ಚಿತ್ತದಿಂದ ಕೂಡಿದ್ದವು. (ದುಂಬಿಗಳು ಸುಗಂಧಾಪೇಕ್ಷೆಯಿಂದ ಕೂಡಿದ ಮನಸ್ಸುಳ್ಳವುಗಳಾಗಿರುತ್ತವೆ. ಆಮೋದ–ಸಂತೋಷ, ಸುಗಂಧ) ಬಾಣದಂತೆ ಚಪಲವಾದುವಾಗಿಯೂ, ಉತ್ತಮ ಗುಣಗಳಿಂದ ಕೂಡಿದುವಾಗಿಯೂ ಇದ್ದವು. [ಬಾಣವು ಧನುಸ್ಸಿನ ನಾರಿಗೆ ಅಂದರೆ ಹೆದೆಗೆ (ಚಾಪ + ಲಸತ್ + ಗುಣ + ಅಂಚಿತ) ಸೇರಿಕೊಂಡು ಚಿಮ್ಮುವ ಸ್ವಭಾವದಿಂದ ಕೂಡಿರುತ್ತದೆ.] ಶ್ರೇಷ್ಠವಾದ ಚಂದ್ರಬಿಂಬದ ಹಾಗೆ ಅಭ್ಯುದಯ ಮತ್ತು ಐಶ್ವರ್ಯಪ್ರಾಪ್ತಿಯನ್ನುಂಟು ಮಾಡುವ ಲಕ್ಷಣದ ಗುರುತುಗಳಿಂದ ಕೂಡಿದ್ದುವು [ಚಂದ್ರಬಿಂಬವು ಅಭ್ಯುದಯಗೊಂಡ, ಸಂಪದ್ಯುಕ್ತವಾದ ಕಿರಣಗಳ ಲಕ್ಷಣಗಳಿಂದಲೂ (ಮಧ್ಯದಲ್ಲಿ) ಕಪ್ಪುಲಾಂಛನದಿಂದಲೂ ಕೂಡಿರುತ್ತದೆ.] ವ॥ ಅದೂ ಅಲ್ಲದೆ. ೧೧೩. ಜಿಂಕೆಯ ಗತಿಯು ವೇಗವುಳ್ಳದ್ದು ; ಜಿಂಕೆಗಿಂತ ವೇಗವುಳ್ಳದ್ದು ಗಾಳಿ ; ಜಿಂಕೆ, ಗಾಳಿಗಳಿಗಿಂತ ಬಾಣವು ತೀವ್ರಗತಿಯುಳ್ಳದ್ದು ; ಜಿಂಕೆ, ಗಾಳಿ, ಬಾಣಗಳಿಗಿಂತ ದೃಷ್ಟಿಯಗತಿ ತೀವ್ರವಾದದ್ದು ; ವಿಚಾರಿಸಿ ನೋಡಿದರೆ ಹುಲ್ಲೆ, ಗಾಳಿ, ಬಾಣ, ದೃಷ್ಟಿಗಳ ಗತಿಗಳಿಗಿಂತ ಶೋಭಿಸುವ ಆ ಕುದುರೆಗಳ ಓಟ ವೇಗವುಳ್ಳದ್ದು. ವ॥ ಹೀಗೆ ಶೋಭಿಸುವ ಅಪೂರ್ವ ಕುದುರೆಗಳೆರಡನ್ನು (ಆ ಸಿಂಧುರಾಜನು) ಕಾಣಿಕೆಯಾಗಿ ಕೊಟ್ಟ ಮೇಲೆ ಅರಸನಾದ ರಾಜಶೇಖರನ ಕಡೆಗಣ್ಣೋಟದ ಸಂತೋಷದ ಬೀಳ್ಕೊಡಿಗೆಯನ್ನು ಪಡೆದುಕೊಂಡು (ತನ್ನ) ಆನೆಯನ್ನೇರಿ

ಸಿಂಧುರಾಜ್ಯಕ್ಕೆ ತಳರ್ದನಾಗಳಾ ಜಾತ್ಯಶ್ವಂಗಳನಶ್ವಪರೀಕ್ಷಕರಿಂ ಪರೀಕ್ಷಿಸಿ ತದಕ್ಷೀಣಲಕ್ಷಣಾ ಕೃತಿಗಳಂ ಲಕ್ಷಿಸಿ ಮಂತ್ರಲಕ್ಷ್ಯನಭೀಕ್ಷಿಸಿ

ಕಂ॥ ಆ ವಾಜಿಗಳಂಗಾಕೃತಿ
ಭಾವಮನಸ್ಥಿತಿ ಸುಲಕ್ಷಣಸ್ವರಗತಿ ಜಾ
ತ್ಯಾವಳಿಯೆಂಬಿವನರಸಂ
ಭಾವಿಸಿ ಪೊಸತೆಂದು ಪೊಗಳ್ದು ಮಗುಳ್ದಿಂತೆಂದಂ ೧೧೪

ದೇವಮಣಿಗೂಡಿ ಜಳಧಿಯೊ
ಳಾ ವಿಬುಧವರಾಶ್ವಮೊಗೆದಗಲ್ದಿರ್ಪುದವಾ
ದೇವಮಣಿಗೂಡಿ ರಾಜಿಸು
ವೀ ವಿಪುಳತರಾಶ್ವಯುಗಕದೇಂ ಪಾಸಟಿಯೇ ೧೧೫

ವ॥ ಎಂದ ನರೇಂದ್ರನ ಜಾಣ್ಣಾತಿಂಗೆ ಪೊಗಳ್ದು ಮಿತವಚನನಿಂತೆಂದಂ

ಮ॥ಸ್ರ॥ ಹರಿಗಿಂತಪ್ಪಶ್ವಮುಂಟಾಗಿರೆ ಭರದಿನವಂ ಪರ್ದನೇಱರ್ಪನೇ ಶಂ
ಬರದರ್ಪಧ್ವಂಸಿ ತಾನುಂ ಗಿಳಿಯನಡರ್ವನೇ ಮೇಘಮಂ ಸಾರ್ವನೇ ಭೂ
ಧರಪಕ್ಷಚ್ಛೇದಿ ಬೆಳ್ಳಂಚೆಯೊಳೆ ತಳರ್ವನೇ ಬೊಮ್ಮನೀಶಾತ್ಮಜಂ ಕೇ
ಕಿರಥಂ ತಾನಪ್ಪನೇ ಕಾಳ್ಮಿಗದೆ ಗಮಿಪನೇ ಸಂತತಂ ಗಂಧವಾಹಂ ೧೧೬

ಸಿಂಧುದೇಶಕ್ಕೆ ತೆರಳಿದನು. ಆಗ ಆ ಒಳ್ಳೆಯ ಜಾತಿಯ ಕುದುರೆಗಳನ್ನು ಅಶ್ವಪರೀಕ್ಷಕ ರಿಂದ ಪರೀಕ್ಷೆಮಾಡಿಸಿ, ಅವುಗಳ ಶುಭಲಕ್ಷಣಗಳನ್ನೂ ಮತ್ತು ಆಕೃತಿಗಳನ್ನೂ ಲಕ್ಷ್ಯ ವಿಟ್ಟು ಮಂತ್ರಲಕ್ಷ್ಯನಾದ ರಾಜಶೇಖರನು ನೋಡಿ, ೧೧೪. ಆ ಕುದುರೆಗಳ ದೇಹಾ ಕೃತಿ, ಭಾವ, ಮನಸ್ಸಿನ ಸ್ಥಿತಿ, ಉತ್ತಮಲಕ್ಷಣ, ಸ್ವರ, ಓಟ, ಜಾತಿಗಳ ಸಮೂಹಗಳೇ ಮೊದಲಾದುವನ್ನು ಅರಸನು ಮನಸ್ಸಿನಲ್ಲಿ ಭಾವಿಸಿ, ಈ ಕುದುರೆಗಳು ಅಪೂರ್ವ ವಾದುವು ಎಂದು ಹೊಗಳಿ, ಪುನಃ ಹೀಗೆಂದನು : ೧೧೫. "ದೇವತೆಗಳ ಅಶ್ವವಾದ ಉಚ್ಚೈಃಶ್ರವಸ್ಸು ಸಮುದ್ರದಲ್ಲಿ ದೇವಮಣಿ (ಕೌಸ್ತುಭ) ಸಹಿತವಾಗಿ ಜನಿಸಿದರೂ ದೇವಮಣಿಯನ್ನು ಅಗಲಿದೆ. ಈ ಅಶ್ವಯುಗಳವಾದರೋ ದೇವಮಣಿ (ಕುದುರೆಯ ಕುತ್ತಿಗೆಯ ಮೇಲಿನ ಕೂದಲು--ಕೇಸರ) ಸಹಿತವಾಗಿದೆ. ಉಚ್ಚೈಃಶ್ರವಸ್ಸು ಇವುಗಳಿಗೆ ಸಾಟಿಯಾದೀತೆ ?" (೧೦) ವ॥ ಹೀಗೆಂದ ಆ ರಾಜನ ಜಾಣತನದ ಮಾತಿಗೆ ಹೊಗಳಿ ಮಿತವಚನನು ಹೀಗೆಂದು ಹೇಳಿದನು : ೧೧೬. "ವಿಷ್ಣುವಿಗೆ ಇಂಥ ಕುದುರೆಯು ದೊರಕಿದ್ದರೆ ಅವನು ಸಂಭ್ರಮದಿಂದ ಹದ್ದನ್ನು (ಗರುಡನನ್ನು) ಏರುತ್ತಿದ್ದನೇ ? ಮನ್ಮಥನಿಗೆ ಸಿಕ್ಕಿದ್ದರೆ ಅವನು ಗಿಳಿಯನ್ನು ಹತ್ತುತ್ತಿದ್ದನೇ ? ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದ ದೇವೇಂದ್ರನು ಮೋಡಗಳನ್ನು ವಾಹನಗಳನ್ನಾಗಿ ಮಾಡಿಕೊಳ್ಳುತ್ತಿದ್ದನೇ ? ಬ್ರಹ್ಮನು ಆ ಬಿಳಿಯ ಹಂಸಪಕ್ಷಿಯನ್ನೇರಿಕೊಂಡು ಹೋಗುತ್ತಿದ್ದನೇ ? ಷಣ್ಮುಖನು ನವಿಲನ್ನೇರುತ್ತಿದ್ದನೇ ? ಮಂದಮಾರುತನು ಸದಾ ಕಾಡಿನ ಜಿಂಕೆಯನ್ನು ಏರಿ ಗಮಿಸು

ವ॥ ಎಂದ ಮಾತಿಂಗೆ ಸೂಕ್ತಿಸುಧಾರಸರಾಜಹಂಸಂ ಮೆಚ್ಚುತ್ತಿರ್ಪನ್ನೆಗಂ ಯಾಮದ್ವಯಭೇರೀಪ್ರಣಾದಂ ನೆಗಳಲೊಡನರಸನಭವಪದಪೂಜೋತ್ಸುಕತೆಯಿಂ ಮನದೆಗೊಂಡೋಲಗಮಂ ಪರೆಯಲ್ವೇಳ್ಪುದುಮಾಗಳ್ ಘಳಿಲನೇಳ್ದು ತಲೆವಾಗಿ ತತ್ಕಟಾಕ್ಷರುಚಿ ಸುಧಾರಸಮಂ ಪಾರ್ದು ಸಾರ್ದು ನಿಂದ ರಾಜಹಂಸವೃಂದದಿಂ ,ಜಯರವಮುಖರಮುಖವಂದಿಸಂದೋಹದಳವಿಗಳಿದ ಕಳಕಳಮನೊಳಕೊಂಡು ಮೊಳಗುವ ಪಟುಪಟಹ ಶಂಖ ತಾಳ ಕಹಳಾ ಬಹಳ ನಾದದೇಳ್ಗಿಯಿಂ ಬಿರಿದನುಗ್ಘಡಿಸಿ ಕರವೆತ್ತಿ ಪೊಗಳ್ವ ಮಾಗಧಪ್ರತಾನದಿಂ ನಿಜರಾಜ ಸಮುಖಪ್ರೇಷಿತ ವಿಪುಳತರ ಕಾರ್ಯವಿಜ್ಞಾಪನಂಗೆಯ್ಯಲ್ ಸಮಯಂಬಡೆಯದೆ ಸಿಡಿಮಿಡಿಗೊಂಡೊಳಗೊಳಗೆ ಗುಜುಗುಜುಂಗೊಂಡು ನಿಲುಂಬಿನಿಂದ ನಿಯೋಗಿನಿವಹದಿಂ ನೆಗಪಿದ ಪೊನ್ನೊರೆಯ ಸುರಗಿವೆರಸು ಕರಾಬ್ಜಮಂ ಮುಗಿದು ಕರುಣಂಬಡೆದು ನಿಜದೇಶಕ್ಕೆ ಬೀಳ್ಕೊಳಲೆಳಸಿನಿಂದಂಗ ವಂಗ ಕಳಿಂಗ ತ್ರಿಲಿಂಗಾದಿ ದೇಶಾಧೀಶ್ವರರಿಂದೊಟ್ಟೋಜೆಯಿಂ ಮುಂಬಳಿದಿಟ್ಟಣಿಸಿ

ತ್ತಿದ್ದನೇ ?" ವ॥ ಹೀಗೆಂದ ಮಿತವಚನನ ಮಾತನ್ನು ಕೇಳಿ ಒಳ್ಳೆಯ ನುಡಿಗಳೆಂಬ ಹಾಲಿಗೆ ರಾಜಹಂಸಪಕ್ಷಿಯಂತಿರುವ ರಾಜಶೇಖರಮಹಾರಾಜನು ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿರುವಷ್ಟರಲ್ಲಿ ಎರಡನೆಯ ಜಾವದ ಭೇರಿಗಳ ಧ್ವನಿಯುಂಟಾಗಲಾಗಿ, ಅರಸನು ಪರಮೇಶ್ವರನ ಪಾದಪೂಜೆಯನ್ನು ಮಾಡುವ ಉತ್ಸುಕತೆಯನ್ನು ಮನಸ್ಸಿನಲ್ಲಿ ಹೊಂದಿ, ಓಲಗವನ್ನು ವಿಸರ್ಜಿಸುವಂತೆ ಅಪ್ಪಣೆಮಾಡಿದನು. ಆಗ ತಟ್ಟನೆ ಎದ್ದು, ತಲೆಯನ್ನು ಬಗ್ಗಿಸಿ, ರಾಜಶೇಖರಮಹಾರಾಜನ ಕಡೆಗಣ್ಣ ನೋಟವನ್ನು ಹಾರೈಸಿ ಹತ್ತಿರಕ್ಕೆ ಬಂದುನಿಂತ ರಾಜಶ್ರೇಷ್ಠರುಗಳ ಮತ್ತು ಜಯಧ್ವನಿಯನ್ನು ಉಗ್ಘಡಿಸುವ ಸ್ತುತಿಪಾಠಕರೇ ಮುಖ್ಯರಾದವರ ಮೇರೆಮೀರಿದ ಕಲಕಲಧ್ವನಿಯನ್ನು ಒಳಗೊಂಡು, ಮೊಳಗುತ್ತಿರುವ ಸಮರ್ಥವಾದ ನಗಾರಿ, ಶಂಖ, ತಾಳ, ಕಹಳೆಗಳ ವಿಶೇಷವಾದ ನಾದಸಮೂಹದಿಂದ ಸಭೆಯು ಕೂಡಿತು. (ಆ ರಾಜಶೇಖರ ಮಹಾರಾಜನ) ಬಿರುದುಗಳನ್ನು ಘೋಷಣೆಮಾಡಿ, ಕೈಗಳನ್ನು ಮೇಲಕ್ಕೆತ್ತಿ ಹೊಗಳುತ್ತಿರುವ ಮಾಗಧರುಗಳ ಗುಂಪಿನಿಂದ ಮತ್ತು ತಮ್ಮ ತಮ್ಮ ರಾಜರುಗಳು ಹೇಳಿಕಳುಹಿಸಿದ ಅನೇಕ ವಿಧವಾದ ರಾಜಕಾರ್ಯಗಳನ್ನು ವಿಜ್ಞಾಪನೆಮಾಡಿಕೊಳ್ಳಲು ಸಮಯ ಸಿಕ್ಕದೆ ತಲ್ಲಣಗೊಂಡು ತಮ್ಮ ತಮ್ಮಲ್ಲಿಯೇ ಗುಜುಗುಜು ಮಾತನಾಡಿಕೊಳ್ಳುತ್ತ ಸಮೀಪಕ್ಕೆ ಬಂದು ನಿಂತ ನಿಯೋಗಿಜನಗಳ ಸಮೂಹದಿಂದ (ಆ ವಿಸರ್ಜಿತ ಸಭೆ ಕೂಡಿತ್ತು.) ಬಂಗಾರದ ಒರೆಸಹಿತವಾದ ಕರಕಮಲಗಳನ್ನು ಮೇಲಕ್ಕೆತ್ತಿ ಮುಗಿದು, ಕಾರುಣ್ಯವನ್ನು ಪಡೆದುಕೊಂಡು ತಮ್ಮ ತಮ್ಮ ದೇಶಕ್ಕೆ ಹೋಗುವುದಕ್ಕೆ ಅಪ್ಪಣೆಪಡೆದುಕೊಳ್ಳಲಿಚ್ಛಿಸಿ ನಿಂತುಕೊಂಡಿದ್ದ ಅಂಗ, ವಂಗ, ಕಳಿಂಗ, ತ್ರಿಲಿಂಗಾದಿ ದೇಶದ ರಾಜರುಗಳು ಒಟ್ಟೊಟ್ಟಾಗಿ ಮುಂದಕ್ಕೆ ಬಂದು ಗುಂಪುಗೂಡಿ ಹೋಗುವಾಗ ಹೊಡೆಯುತ್ತಿರುವ ಪ್ರಚಂಡರಾದ

ಪೋಂಪಾಗಳೆಡೆಯೊಳ್ಪೊಡೆವ ಚಂಡ ದೌವಾರಿಕರ ದಂಡಪಾತದಿಂ ದಿಂಡುಗೆಡೆದೊಯ್ಯನೆ ತಳರ್ವ ಸಾಮಂತಭೂವಿಾಶ್ವರರಿಂದೊತ್ತರಿಸಿ ನಡೆವಾಗಳ್ ಭುಜಭುಜಂಗಲ್ ಪಳಂಚಿ ಕಿಸುಗಣ್ಣಿನೋಳ್ಪ ಮೂವುಸಕದ ವೀರಭಟವರ್ಗದಿಂದ ಅರಸನಿತ್ತ ಧನಕನಕ ವಸನ ಮಣಿಭೂಷಣಂಗಳ ಬಲ್ಪೊಱೆಯುಂ ಕೊರಳ್ಕುಸಿವಿನಂ ತಲೆಯೊಳ್ಪೊತ್ತು ಪೊರಲಾಱದೆ ದಡವಡಿಸುತ್ತಮೆಡವೆಗಲ್ಗಂ ಬಲವೆಗಲ್ಗಂ ಪಚ್ಚಿ ಪಲ್ಲಟಿಸಿ ತಳೆದು ಮೆಲ್ಲಮೆಲ್ಲನಡಿಯಿಡುವರ್ಥಿಜನದಿಂ ಅಭಿನವನರ್ತನ ರಸಾನುಭವ ಸಮಾಸ್ವಾದಸಂಜನಿತ ಸುಖಮಂ ನೆನೆನೆನೆದು ಹಾರೈಸಿ ಮಗುಳ್ದು ಮಗುಳ್ದು ಒರ್ವರೊರ್ವರೊಳ್ಪೊಗಳ್ದು ತಳರ್ವ ರಸಿಕಜನವಿಸರದಿಂ ಮತ್ತಂ ಪೆಱೆನೊಸಲೊಳಿಳಿತರ್ಪ ಬೆಮರಂ ಬೆರಲಿಂ ಬಳಿದೀಡಾಡಿ ಕೆದರ್ದಳಿಕದಳಕಮನುಗುರ್ಗೊನೆಯಿಂ ತಿರ್ದಿ ಸಡಿಲ್ದ ಕಾಂಚಿಯು ಸೈತುಮಾಡಿ ಕರ್ಣಪಾಲಿಕೆಯಿಂ ಕರಗಿ ಕೆನೆಗೊಂಡಿಳಿತರ್ಪ ಜವಾದಿಯ ಕೋಳ್ಗೆ ಸಱಂ ಮಿಸುನಿಗಾಸೆಯ ಮುಂಜೆರಗಿನೊಳೊರಸಿ ತೊಡೆದೆಡಗೈಯಂ ತನ್ನ ನಚ್ಚಿನ ಮದ್ದಳಿಗನ ಪೆಗಲೊಳಿಳಿಪಿ ಬಿನದಿಸುತಂ ಬಿಂಬಾಧರದ ಕೆಂಬೊಳಪು ಕೆಂಬಟ್ಟೆಯ ಪಸಾಯಮನೀಯೆ ತಾಳ

ಪ್ರತೀಹಾರಿಗಳ ಹೊಡೆತದಿಂದ ಉರುಳಿಬಿದ್ದು ಸಾವಕಾಶವಾಗಿ ನಡೆಯುತ್ತಿರುವ ಸಾಮಂತ ಭೂವಿಾಶ್ವರರಿಂದ (ಆ ವಿಸರ್ಜಿತ ಸಭೆಯು ಕೂಡಿತ್ತು). ಮತ್ತು ಮುನ್ನುಗ್ಗಿ ಒತ್ತೊತ್ತಾಗಿ ಒಬ್ಬರನ್ನೊಬ್ಬರು ತಳ್ಳುತ್ತ ಭುಜಕ್ಕೆಭುಜ ತಗುಲಿ (ಸಪ್ಪಳವಾಗುತ್ತಿರಲು) ಕೆಂಪಾದ ಕಣ್ಣಿನಿಂದ ನೋಡುವ ವೀರಭಟರುಗಳಿಂದ (ಆ ವಿಸರ್ಜಿತ ಸಭೆ ಕೂಡಿತ್ತು). ರಾಜನಾದ ರಾಜಶೇಖರನು ಕೊಟ್ಟ ಧನಕನಕವಸ್ತ್ರ ರತ್ನಾಭರಣಗಳ ಕೊರಳು ಕುಸಿಯುವಂತಿರುವ ದೊಡ್ಡದೊಡ್ಡ ಹೊರೆಗಳನ್ನು ತಲೆಯ ಮೇಲೆ ಹೊರಲಾರದೆ ತತ್ತರಿಸುತ್ತ ಎಡಹೆಗಲಿಗೂ ಬಲಹೆಗಲಿಗೂ ಹಂಚಿ, ಪಲ್ಲಟಗೊಳ್ಳುತ್ತಿರುವ ಹೆಜ್ಜೆಯನ್ನು ಹೊಂದಿ, ಮೆಲ್ಲಮೆಲ್ಲನೆ ಕಾಲನ್ನೆತ್ತಿ ಇಡುತ್ತಿರುವ ಅರ್ಥಿಗಳಾದ ಜನಸಮೂಹದಿಂದ (ಆ ವಿಸರ್ಜಿತ ಸಭೆ ಕೂಡಿತ್ತು). ನೂತನವಾದ ನರ್ತನರಸವನ್ನು ಆಸ್ವಾದಿಸಿ ಅದರಿಂದುಂಟಾದ ಸುಖವನ್ನು ನೆನೆನೆನೆದು, ಹಾರೈಸುತ್ತ ಪುನಃ ಪುನಃ ಒಬ್ಬರೊಡನೊಬ್ಬರು ಶ್ಲಾಘಿಸುತ್ತ, ನಡೆಯುತ್ತಿರುವ ರಸಾಸ್ವಾದನ ಪರಿಣತಮತಿಗಳಾದ ಜನಸಮೂಹದಿಂದ (ಆ ವಿಸರ್ಜಿತ ಸಭೆ ಕೂಡಿತ್ತು.) ಮತ್ತು ಚಂದ್ರನಿಗೆ ಸಮಾನವಾದ ಹಣೆಯಿಂದ ಇಳಿಯುತ್ತಿರುವ ಬೆವರನ್ನು ಬೆರಳಿನಿಂದ ಗೀರಿ ಚೆಲ್ಲುತ್ತ, ಕೆದರಿದ ಹಣೆಯ ಮೇಲಿನ ಮುಂಗುರುಳುಗಳನ್ನು ಉಗುರಿನ ಕೊನೆಗಳಿಂದ ತಿದ್ದಿ ಸಡಿಲಿದ ಡಾಬನ್ನು ಬಿಗಿಮಾಡಿ ಸಜ್ಜುಗೊಳಿಸಿಕೊಂಡು, ಕರ್ಣಗಳ ಕೆಳಭಾಗದಿಂದ ಕರಗಿ ಕೆನೆಗಟ್ಟಿ ಇಳಿದುಬರುತ್ತಿರುವ ಜವಾದಿಯೆಂಬ ಸುಗಂಧದ ಮುಂದವಾದ ಕೆಸರನ್ನು ಬಂಗಾರದ ಜರಿಯ (ಉಟ್ಟ) ಕಾಸಿಯ ಸೆರಗಿನಿಂದ ಒರೆಸಿ ಕಳೆದು, ಎಡಗೈಯನ್ನು ತನ್ನ ನಚ್ಚಿನ ಮಾರ್ದಂಗಿಕನ ಹೆಗಲ ಮೇಲಿಟ್ಟುಕೊಂಡು ವಿನೋದಗೊಳಿಸುತ್ತ, ತೊಂಡೆಹಣ್ಣಿನಂತಹ ತುಟಿಯ ಕೆಂಪಸನೆಯ ಹೊಳಪಿನಿಂದ ಮಾರ್ಗಕ್ಕೆ ಕೆಂಪು ಉಡುಗೊರೆಯನ್ನು ಕೊಟ್ಟ ಹಾಗೆ ಇರಲು, ತಾಳಮೇಳದ ಗೆಳೆಯರ

ಮೇಳದ ಕೆಳೆಯರ ಮೇಳಾಪದೊಳ್ ಸೂಳುತ್ತರಂಗುಡುತ್ತಂ ಪದಾಗ್ರದೊಳ್ ಪಜ್ಜಳಿಪ ಕಿಱುಗೆಜ್ಜೆಗಳ ಝಣಝಣತ್ಕಾರಂ ಯುವಜನದ ಕಿವಿಯಂ ಜಕ್ಕುಲಿಸಿ ಪಳಂಚಿ ಪಜ್ಜೆಯಿಡುವ ಬಿಜ್ಜೋದರಿಯರಂ ಪಳಿವಚ್ಚರಿಯ ನಚ್ಚಣಿಯರಿಂ ತುಱುಗಿನಡೆವಾಗಳ್ ಸೋರೆವಡೆದಪುದೆಂಬ ಭೀತಿಯಿಂ ಪೆಗಲಿಂ ತೆಗೆದು ಬೀಣೆಯಂ ದೃಢಮುಷ್ಟಿಯಿಂ ನೆಗಪಿ ಪಿಡಿದಡಿಗೊಳ್ವ ಬಯಕಾಱರ ತೆರಳ್ಕೆಯಿಂ ಹರಿಮಣಿಕುಟ್ಟಿಮಸ್ಥಳದ ತಿಳಿಗದಿರಂ ಜಳಂಗೆತ್ತು ವಾಮಕರದಿಂ ಚೀನಾಂಬರದ ನಿಱಿಯ ಮುಂಜೆಱಗಂ ನಸುನೆಗಪಿ ಕಣ್ದೊಳಲಿ ಕಾಲಿಕ್ಕುವ ಮುಗ್ಧೆಯರ ಮುಗ್ಧತೆಗೆ ನಸುನಗುತೆ ನಡೆವ ನಾಗರಿಕರೊತ್ತೊತ್ತೆಯಿಂ ಬಳಲ್ಮುಡಿಯೊಳ್ ತುಱುಂಬಿದರಲ ನಱುಗಂಪಿಂಗೆಱಗಿದೆಳೆ ದುಂಬಿಗಳ ಬಂಬಲಗಱಿಯ ಗಾಳಿಯ ಕೋಳಿಂದೇಳ್ದ ಧೂಳಿಮಸಗುವ ಪುಡಿಗತ್ತುರಿಯ ಬಿತ್ತರದ ರಜಮೆಂಬ ಮರ್ಬಿನೊಳುರ್ಬಿ ಕಾಳಗಂಗೆಯ್ಯಲೆಳಸಿ ನೆಗೆವ ತಂಗದಿರಂತೆ ತುಂಗತರ ನಿರಂಧ್ರ ಕುಚಯುಗಳಘರ್ಷಣ ಪರಿಪತತ್ ಪಟೀರ ಪರಾಗಪಟಲಂ ನೆಗೆತರೆಯುಂ ಕರಾರ ವಿಂದದೊಳ್ ತಿರುಂಪುವರವಿಂದದರಲ ಸರಸ ಪರಿಮಳಮನಿರ್ಮಡಿಪ ಸುಯ್ಯೆಲರ ಸುರಭಿಗೆಳಸಿ

ಗುಂಪಿನಲ್ಲಿ ಉತ್ತರ ಪ್ರತ್ಯುತ್ತರಗಳನ್ನು ಕೊಡುತ್ತ, ಕಾಲಿನಲ್ಲಿ ಕಟ್ಟಿದ್ದ ಪ್ರಕಾಶಮಾನ ವಾದ ಕಿರುಗೆಜ್ಜೆಗಳ ಝಣ ಝಣತ್ಕಾರವು ಯುವಕರಾದವರ ಕಿವಿಗಳಿಗೆ ಗಲಿಬಿಲಿಗೊಳಿಸು ವಂತೆ ತಾಕುತ್ತಿರಲು ಹೆಜ್ಜೆಗಳನ್ನಿಡುತ್ತಿರುವ ವಿದ್ಯಾಧರಿಯರನ್ನು ತಿರಸ್ಕರಿಸುವಂತಿರುವ ನರ್ತಕಿಯರುಗಳಿಂದ (ಆ ವಿಸರ್ಜಿತ ಸಭೆಯು ಕೂಡಿತ್ತು). (ಜನಸಮೂಹದಲ್ಲಿ) ಮುನ್ನುಗ್ಗಿ ನಡೆಯುವಾಗ ವೀಣೆಯ ಸೋರೆಬುರುಡೆಯು ಒಡೆದೀತೆಂಬ ಹೆದರಿಕೆ ಯಿಂದ ಹೆಗಲಮೇಲಿದ್ದ ವೀಣೆಯನ್ನು ಕೆಳಗಿಳಿಸಿ, ಮುಷ್ಟಿಯಿಂದ ಗಟ್ಟಿಯಾಗಿ ಹಿಡಿದು ಹೆಜ್ಜೆ ಹಾಕುತ್ತಿರುವ ವೀಣಾವಾದಕರುಗಳಿಂದ (ಆ ವಿಸರ್ಜಿತ ಸಭೆ ಕೂಡಿತ್ತು). ಇಂದ್ರ ನೀಲಮಣಿಯ ನೆಲಗಟ್ಟಿನ ಸ್ಥಳದ ತಿಳಿನೀಲಿಯ ಕಾಂತಿಯನ್ನು ನೀರೆಂದು ಭ್ರಮಿಸಿ, ಎಡಗೈಯಿಂದ ಉಟ್ಟ ಚೀನಾಂಬರದ ನಿರಿಗೆಗಳ ಮುಂದಿನ ಸೆರಗನ್ನು ಸ್ವಲ್ಪ ಮೇಲಕ್ಕೆತ್ತಿ ಕೊಂಡು ಕಣ್ಣಾಡಿಸಿ ಕಾಲಿಕ್ಕುವ ಸುಂದರಿಯರ ಮುಗ್ಧಭಾವಕ್ಕೆ ನಸುನಗುತ್ತ ಗುಂಪು ಗುಂಪಾಗಿ ಹೋಗುತ್ತಿರುವ ನಾಗರಿಕಜನರಿಂದ (ಆ ವಿಸರ್ಜಿತ ಸಭೆ ಕೂಡಿತ್ತು.) ದೊಡ್ಡ ದೊಡ್ಡ ಮುಡಿಗಳಲ್ಲಿ ಮುಡಿದುಕೊಂಡಿದ್ದ ಹೂವುಗಳ ಸುಗಂಧಕ್ಕೆ ಮುತ್ತಿದ ಮರಿದುಂಬಿಗಳ ಸಮೂಹದ ರೆಕ್ಕೆಗಳ ಗಾಳಿಯ ಶೈತ್ಯದಿಂದ ಮೇಲೆದ್ದು ತುಂಬುತ್ತಿದ್ದ ಕಸ್ತೂರಿಯ ಧೂಳಿಯ ವಿಶೇಷವಾದ ಕಪ್ಪುಧೂಳೆಂಬ ಮಬ್ಬಿನೊಡನೆ ಯುದ್ಧಮಾಡ ಲೆಂದು ಬಯಸಿ ನೆಗೆಯುವ ಚಂದ್ರಕಿರಣಗಳ ಹಾಗೆ, ಎತ್ತರವಾಗಿಯೂ, ಮಧ್ಯದಲ್ಲಿ ಸ್ಥಳವಿಲ್ಲದಂತೆಯೂ, ಒತ್ತೊತ್ತಾಗಿ ಹತ್ತಿಕೊಂಡವುಗಳೂ ಆದ ಎರಡೂ ಮೊಲೆಗಳ ತಿಕ್ಕಾಟದಿಂದ ಉದುರಿ ಹರಡುತ್ತಿರುವ ಶ್ರೀಗಂಧದ ಬಿಳಿಯ ಪರಾಗಸಮೂಹವು ಹಾರಿ ಬರುತ್ತಿತ್ತು. (ಆ ಸ್ತ್ರೀಯರು) ತಮ್ಮ ಕೈಯೆಂಬ ಕಮಲದಲ್ಲಿ ಹಿಡಿದು ತಿರುಗಿಸುತ್ತಿರುವ ಲೀಲಾಕಮಲದ ರಸಭರಿತವಾದ ಸುಗಂಧವನ್ನು ಇಮ್ಮಡಿಗೊಳಿಸುವ ಸುಯ್ಯನೆ ಬಿಡು

ಮೈಯುರ್ವಿ ನೆಗೆವಳಿಕುಳದಂತೆ ಚೂರ್ಣಾಳಕಂ ಕೆದಱಿಯುಂ ಜಡೆವಾವಿಂಗಗಿದು ಬೆಮರ್ತ ನೊಸಲ್ವೆಱೆಯಮೃತರಸಬಿಂದು ಜಗುಳ್ದಿಳಿದು ನೇಲ್ದಪುದೆಂಬತಿಂಬುವಡೆದಲುಗುವ ನಾಸಾಗ್ರ ಮೌಕ್ತಿಕದ ಪೊಳಪನೊಪ್ಪವಿಡುವ ಮಂದಸ್ಮಿತಕಾಂತಿಪೀಯೂಷರಸವಿಸರಂ ತೆರೆ ಮಸಗೆ ಸಿಡಿಲ್ದುನಿಂದ ತೋಱಪನಿಮಾಲೆಯೆನೆ ಮನಂಗೊಂಡೆ ಕಟ್ಟಿಸಕದೆ ಬಟ್ಟಮುತ್ತಿನ ಕಂಠಮಾಲೆ ಯಲೆಯೆ ನೆಲೆವೊಲೆಗಳ್ ಕದಕ್ಕದಿಸೆಯುಂ ದುಸ್ಪರ್ಶಮಪ್ಪ ಮಾತಂಗಕುಂಭಮಂ ಪಡಿಗೈವ ಕವಿಜನದ ದುರುಕ್ತಿಯಂ ಶುಕ್ತಿಜ ಜಘನ ಸೂತ್ರಿಕಾಕಲಿತ ಕಲಕಿಂಕಿಣೀರಣಿತವಿಃಪದಿಂ ನಗುವಂ ತೆಸೆವ ಘನತರ ನಿತಂಬಬಿಂಬಂ ನಿಜವಿಲೋಕನ ಕುತೂಹಲ ಯುವಜನಮನೋರಾಜ್ಯಕ್ಷೋಭಮಂ ಸೂಚಿಪ ಕುಲಶೈಲದಂತಡಿಗಡಿಗದಿರುತ್ತಿರೆಯುಂ ನಿಬಿಡ ಕುಚಮಂಡಳ ಮಂಡಳೇಶ್ವರರ ಪರಸ್ಪರ ಸ್ಪರ್ಧೆಯಿನಳರ್ದು ಮಧ್ಯದೇಶಂ ಕಂಪಿಪಂತೆ ಬಡನಡು ಬಳುಂಕೆಯುಂ ಮಿಡಿವರೆಗ ಮೆಳಲ್ವ ನಿಡುಜಡೆಯ ಸುಧೆಯಂ ಸೂಸುವ ಮುಗುಳ್ನಗೆಯ ಸವಿಯಂ ಸೈಗಱೆವ ಮೆಲ್ನುಡಿಯ ಮುಡುಗಟ್ಟಿದ ಮುಖರಸದ ಕಡೆಗೋಡಿವರಿವ ಕಟಾಕ್ಷರುಚಿಯ ಪೊಗರುಗುವ ನುಣ್ಗದಂಪಿನ

ತ್ತಿದ್ದ ಉಸುರಿನ ಸುಗಂಧಕ್ಕಪೇಕ್ಷಿಸಿ, ಮೈಯುಬ್ಬಿ ಹಾರುವ ದುಂಬಿಗಳ ಸಮೂಹದಂತೆ ಮುಂಗುರುಗಳು ಕೆದರಿದ್ದುವು. ಜಡೆಯೆಂಬ ಹಾವಿಗೆ ಹೆದರಿ ಬೆವರಿದ ಹಣೆಯೆಂಬ ಚಂದ್ರನ ಅಮೃತರಸದ ಹನಿಗಳು ಜಾರಿ ಇಳಿಯುತ್ತ ನೇತಾಡುತ್ತಿವೆಯೋ ಎಂಬ ಹಾಗೆ ಮನೋಹರವಾಗಿ ಅಲುಗಾಡುತ್ತಿರುವ ಮೂಗಿನ ಮೇಲಿನ ಮುತ್ತಿನಕಾಂತಿಗೆ ಒಪ್ಪವಿಡುವಂತಿರುವ ಮುಗುಳುನಗೆಯ ಕಾಂತಿಯೆಂಬ ಅಮೃತರಸವು ತೆರೆತೆರೆಯಾಗಿ ಹೊರಹೊಮ್ಮುತ್ತಿತ್ತು. ಆ ತೆರೆಗಳಿಂದ ಸಿಡಿದುನಿಂತ ದೊಡ್ಡ ದೊಡ್ಡ ಹನಿಗಳ ಮಾಲೆಯೋ ಎಂಬಂತೆ ಮನಸ್ಸನ್ನಾಕರ್ಷಿಸುವ ಮತ್ತು ಅತಿಶಯ ಸೊಬಗಿನ ದುಂಡು ಮುತ್ತಿನ ಕಂಠಮಾಲೆಯು ಅಲುಗಲು, ಪೀನಸ್ತನಗಳು ಅಲ್ಲಾಡುತ್ತಿದ್ದವು. ಒರಟಾದ ಆನೆಯ ಕುಂಭಸ್ಥಳಕ್ಕೆ ಕವಿಗಳು ನಿತಂಬವನ್ನು ಹೋಲಿಸುವರಷ್ಟೆ. (ಈ ಹೋಲಿಕೆಯನ್ನು ಸಹಿಸಲಾರದೆ) ಕವಿಗಳ ಈ ದುರುಕ್ತಿಯನ್ನು ಸೊಂಟಕ್ಕೆ ಹಾಕಿಕೊಂಡಿರುವ ಮುತ್ತಿನ ಸರದಲ್ಲಿ ಪೋಣಿಸಿದ ಚಿನ್ನದ ಕಿರುಗೆಜ್ಜೆಗಳ ಝಣತ್ಕಾರದ ನೆವದಿಂದ ಅಣಕಿಸುತ್ತದೆಯೋ ಎಂಬಂತೆ ಎಸೆಯುವ (ಸ್ತ್ರೀಯರ) ನಿತಂಬವು ತನ್ನನ್ನು ನೋಡುವ ಯುವಜನರ ಮನೋರಾಜ್ಯಕ್ಕೆ ಕ್ಷೋಭೆಯನ್ನು ಸೂಚಿಸುವ ಪರ್ವತದಂತೆ ಚಲಿಸುತ್ತಿತ್ತು. (೮೦). ನಿಬಿಡವಾಗಿರುವ ಕುಚಮಂಡಲಗಳು ಮಂಡಲೇಶ್ವರರ ಪರಸ್ಪರ ಸ್ಪರ್ಧೆಯ ಫಲವಾಗಿ (ಅವರಿಬ್ಬರ) ಮಧ್ಯದ ದೇಶವು ಸಂಕಟಗೊಂಡು ನಡುಗುವ ಹಾಗೆ ಬಡನಡುವು ಬಳುಕು ತ್ತಿತ್ತು. ಹಿಮ್ಮಡದವರೆಗೂ ನೇತಾಡುವ ಉದ್ದವಾದ ಜಡೆಯು, ಅಮೃತರಸವನ್ನೆ ಹೊರಸೂಸುವ ಕಿರುನಗೆಯು, ಸವಿಯನ್ನೆ ಸೆರೆಗೆಯ್ಯುವ ಮೃದುಮಾತಿನ, ಮುಡುವುಗಟ್ಟಿ ನಿಂತ ಮುಖಕಾಂತಿಯು, ಕಡೆಗೋಡಿ ಸೂಸಿ ಹೊರಸೂಸ್ಸುವ ಕಡೆಗಣ್ಣಕಾಂತಿಯು,

ಬಿಂಕಂಬೆತ್ತು ಕೊಂಕಿದ ಕುಡುವುರ್ವಿನ ತಳತಳಿಸಿ ಪೊಳೆವ ಸುಲಿಪಲ್ಗಳ ಕೆಂಬೆಳಗನುಗುಳ್ವ ಬಿಂಬಾಧರದ ಕಕ್ಷಪುಟವಮನೊತ್ತರಿಸಿ ಬಳೆದಿಟ್ಟೆಡೆಗೊಂಬ ಬಟ್ಟ ಬಲ್ಮೊಲೆಯ ಕಾವನ ಕೊರಲ ಕನಕಚಂಪಕಕುಸುಮದ ತೋಳ್ಮಾಲೆಯುಂ ಪಳಿವ ನಳಿದೋಳ್ಗಳ ತಳಿರನಿಳಿಕೈವ ಕೈದಳಿರ ಪರಿಮಧ್ಯಮಂ ಪಳಿವ ಸೆಳಿನಡುವಿನ ಮದನನ ಮಾಡುವೆಟ್ಟಮಂ ಮನ್ನಣೆಗೆಡಿಸಿ ಕೊರ್ವಿದ ವೃತ್ತೋತ್ತುಂಗ ಜಘನಸ್ಥಳದ ಪೊಂಬಾಳೆಗಂಬಮಂ ಜಿಃೋಡಾಡುವ ನ:ಣ್ದೊಡೆಯ ಪೂಗಣೆ ಯನ ಡೊಣೆಯನಣಕಿಪ ಕಣೆಕಾಲ್ಗಳ ಕೆಂದಾವರೆಯನಂದಂಗೆಡಿಪ ಪದತಳದ ಚೆಲ್ವು ನಡೆ ನೋಳ್ಪ ರಾಜಸುತರಂ ನಡೆಗೆಡಿಸಿಯುಂ ಸೊಕ್ಕುಜವ್ವನದ ಸೊಬಗಿನ ಸೌಂದರ್ಯ ಮಾಧುರ್ಯ ಸೌಕುಮಾರ್ಯಂಗಳೊಬ್ಬಳಿಸಿದಂತೆಸೆದೋರಣಂಬೆತ್ತು ಸಾಲ್ವಿಡಿದ ಪರಿಸರದೊಳ್ ಸರಿಸವಾಗಿ ನಡೆವಗಣ್ಯ ಪಣ್ಯಾಂಗನಾಪ್ರತಾನದಿಂ ರಾಜವೀಧಿ ರಂಜಿಸೆಯುಮಿಂತು ವಿಜೃಂಭಿಸಿ ತನ್ಮಹಾ ಸ್ಥಾನವಮಾಗಳ್ ಪರೆಯಲೊಡನೆ

ಮ॥ಸ್ರ॥ ಪದಪಿಂದೇಳ್ತಂದು ಶುದ್ಧಾಂತದೊಳೆ ನೆಲಸಿ ಶುದ್ಧಾಂತರಂಗಂ ವಿಳಾಸಾ
ಸ್ಪದ ಪೂಜಾಗಾರದೊಳ್ ಪೂಜಿಸಿದನಮಮ ಸದ್ಭಕ್ತಿಯಿಂ ಭರ್ಗನಂ ಭಾ
ವದೊಳೆತ್ತಂ ತೀವೆ ತನ್ಮೂರ್ತಿಯ ಕಳೆ ಕಳೆವೆತ್ತಾತ್ಮನೈವೇದ್ಯಮಂ ಮಾ
ಡಿದನಾ ಲಿಂಗಕ್ಕೆ ತಾನೇಂ ಸುಕೃತಿಯೊ ಶಿವಸಿದ್ಧಾಂತದುಗ್ಧಾಬ್ಧಿಚಂದ್ರಂ ೧೧೭

ನುಣ್ಣನೆಯ ಕೆನ್ನೆಯ, ಬಿಂಕದಿಂದ ಕೊಂಕಿದ ಹುಬ್ಬಿನ ಕುಡಿಯ, ಥಳಥಳನೆಂದು ಹೊಳೆಯುವ ಬಿಳಿಯ ಹಲ್ಲುಗಳ, ಕೆಂಪುಪ್ರಕಾಶವನ್ನು ಹೊರಹೊಮ್ಮಿಸುವ ತೊಂಡೆ ವಣ್ಣುಟಿಯ, ಬಗಲನ್ನು ಹಿಂದಕ್ಕೆ ಸರಿಸಿ ಬೆಳದು ಕಿಕ್ಕಿರಿದು ನಿಂತ ದುಂಡನೆಯ ದೊಡ್ಡ ಮೊಲೆಗಳ, ಮನ್ಮಥನ ಕೊರಳ ಬಂಗಾರದ ಸಂಪಿಗೆಹೂಗಳ ತೋಳುವಮಾಲೆ ಯನ್ನು ತಿರಸ್ಕರಿಸುವಂತಿರುವ ಉದ್ದವಾದ ತೋಳುಗಳ, ಚಿಗುರನ್ನು ಕೀಳುಗೊಳಿಸುವ ಕೈಯ ಬೆರಳುಗಳ, ಸಿಂಹದ ನಡುವನ್ನು ನಿಂದೆಮಾಡುವಂತಿರುವ ತೆಳ್ಳನೆಯ ನಡುವಿನ, ಮದನನ ಕೃತಕಪರ್ವತವನ್ನು ಮನ್ನಣೆಗೆಡಿಸಿ ಕೊಬ್ಬಿದ ವೃತ್ತಾಕಾರವಾದ ಮತ್ತು ಎತ್ತರವಾದ ಜಘನಗಳ, ಪೊಂಬಾಳೆಯ ಕಂಬಗಳನ್ನು ಹೀಯಾಳಿಸಿ ನಗುವಂತಿರುವ ನುಣ್ಣನೆಯ ತೊಡೆಗಳ, ಮನ್ಮಥನ ಬತ್ತಳಿಕೆಯನ್ನು ಅಣಕಿಸುವಂತಿರುವ ಮೊಳಕಾಲುಗಳ, ಕೆಂದಾವರೆಯನ್ನು ಅಂದಗೆಡಿಸುವಂತಿರುವ ಅಂಗಾಲುಗಳ ಚೆಲುವು ದಿಟ್ಟಿಸಿ ನೋಡುವ ರಾಜಕುಮಾರರನ್ನು ನಡೆಗೆಡಿಸಿದವು. ಸೊಕ್ಕಿದ ಯೌವನದ ಸೊಬಗಿನ ಸೌಂದರ್ಯ ಮಾಧುರ್ಯ ಸುಕುಮಾರತೆಗಳು ಒಟ್ಟುಗೂಡಿನಿಂತ ಹಾಗೆ ಓರಣಗೊಂಡು ರಾಜ ಕುಮಾರರು ಸಾಲು ಸಾಲಾಗಿ ಹೋಗುವಾಗ ಪರಿಸರದಲ್ಲಿಯೇ ಸರಿಸಮವಾಗಿ ನಡೆಯುತ್ತಿ ರುವ ಅನೇಕ ವೇಶ್ಯಾಸ್ತ್ರೀಯರುಗಳ ಸಮೂಹದಿಂದ ರಾಜಬೀದಿಯು ರಂಜನೆಗೊಂಡಿತ್ತು. ಈ ರೀತಿ ವಿಜೃಂಭಣೆಗೊಂಡು ರಾಜಶೇಖರಮಹಾರಾಜನ ಸಭಾಸ್ಥಾನವು ವಿಸರ್ಜನೆ ಗೊಳ್ಳಲಾಗಿ ೧೧೭. ಶಿವಸಿದ್ಧಾಂತವೆಂಬ ಕ್ಷೀರಸಾಗರಕ್ಕೆ ಚಂದ್ರನೋಪಾದಿಯಲ್ಲಿರುವ ರಾಜಶೇಖರನು ಪ್ರೀತಿಯಿಂದ ಬಂದು ಮನೆಯನ್ನು ಪ್ರವೇಶಿಸಿ, ಶುದ್ಧಾಂತರಂಗದ ವಿಲಾಸಕ್ಕೆ ಆಸ್ಪದವಾದ ಪೂಜಾಗೃಹದಲ್ಲಿ ಸದ್ಭಕ್ತಿಯಿಂದ ಪರಮೇಶ್ವರನನ್ನು ಭಾವದಲ್ಲಿ

ತೋಟಕ॥ ತರುಣಾರುಣ ಭಾಸುರಕಾಂತಿಯುತೇ
ಚರಣಾರುಣ ಪದ್ಮನತಾರ್ಯಶತೇ
ಶರಣಾವರಣಾನ್ವಿತೆ ದೇವನುತೇ
ಕರುಣಾಭರಣೇ ಜಯ ಶೈಲನುತೇ ೧೧೮

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣಮಹಾಪ್ರಭಾಪಟಲ ಪರಿವೃತ ಪರಶಿವಶ್ರೀಪಾದನಖಚಂದ್ರಸಾಂದ್ರರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯಕವಿತಾವಿಶಾರದ ಶ್ರೀ ಷಡಕ್ಷರದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳಪ್ರಬಂಧದೊಳ್ ರಾಜಶೇಖರ ಸಭಾವರ್ಣನಂ

ಅಂತು ಆಶ್ವಾಸ ೧೨ಕ್ಕಂ ಪದ ೧೫೧೬ಕ್ಕಂ ಮಂಗಳ ಮಹಾಶ್ರೀ

## ದ್ವಾದಶಾಶ್ವಾಸಂ
### ಸಂಪೂರ್ಣಂ

ಪೂರ್ಣ ತುಂಬಿಕೊಂಡು, ಆ ಮೂರ್ತಿಯ ಕಳೆಯನ್ನೇ ತಾನೂ ಹೊಂದಿ (ರುದ್ರೋ ಭೂತ್ವಾ ರುದ್ರಂ ಯಜೇತ್ ಎಂಬ ಹಾಗೆ ಆಗಿ) ಆ ಲಿಂಗಕ್ಕೆ ಆತ್ಮಾರ್ಪಣೆ ಮಾಡಿದವನಾಗಿ ಪೂಜೆ ಮಾಡಿದನು. ಅಹುದು ! ಅವನು ಅದೆಂಥ ಪುಣ್ಯಶಾಲಿಯೋ ! ೧೧೮. ನೂತನ ಅರುಣನಂತೆ ಪ್ರಕಾಶಮಾನವಾದ ಕಾಂತಿಯಿಂದ ಕೂಡಿದವಳೇ, ಅರುಣಪದ್ಮದಂತೆ ಇರುವ ಚರಣಗಳಿಗೆ ಅಸಂಖ್ಯಾತ ಆರ್ಯಜನರಿಂದ ನಮಸ್ಕರಿಸಿಕೊಳ್ಳಲ್ಪಡುವವಳೇ, ಶರಣಾಗತರಾದ ಜನರನ್ನು ರಕ್ಷಿಸುವವಳೇ, ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳುವವಳೇ, ಕರುಣವನ್ನೇ ಆಭರಣವಾಗಿ ಉಳ್ಳ ಶೈಲಸುತೆಯೇ, ಜಯ ಜಯ. ಗದ್ಯ॥ ಈ ಗದ್ಯ ಪದ್ಯ ರೂಪವಾದ ಕಾವ್ಯವು ವಿಶೇಷವಾಗಿ ನಮಸ್ಕಾರ ಮಾಡುತ್ತಿರುವ ದೇವತಾ ಶ್ರೇಷ್ಠರುಗಳ ಕಿರೀಟಗಳ ಕೊನೆಯಲ್ಲಿ ಕೆತ್ತಲ್ಪಟ್ಟ ನವರತ್ನಗಳ ಸಮೂಹದ ಅಧಿಕವಾದ ಕಾಂತಿಗಳಿಂದ ವ್ಯಾಪಿಸಿರುವ ಪರಶಿವನ ಶೋಭಾಯಮಾನವಾದ ಪಾದಗಳ ಉಗುರುಗಳೆಂಬ ಚಂದ್ರನ ದಟ್ಟವಾದ ಕಾಂತಿಯಿಂದ ನಿಬಿಡಗೊಂಡ ಬೆಳದಿಂಗಳಿಗೆ ರಮಣೀಯವಾದ ಚಕೋರಪಕ್ಷಿಯಂತಿರುವವನೂ, ಶೃಂಗಾರಾದಿ ರಸಜ್ಞರಾದವರುಗಳಿಂದ ಮನ್ನಣೆಗೊಳ್ಳಲ್ಪಟ್ಟವನೂ, ಉಭಯಭಾಷಾಕವಿತ್ವದಲ್ಲಿ ವಿಶಾರದನೂ ಎನಿಸಿದ ಷಡಕ್ಷರದೇವ ಕವಿಯಿಂದ ರಚಿಸಲ್ಪಟ್ಟ ರಾಜಶೇಖರ ವಿಳಾಸವೆಂಬ ವಿಸ್ತಾರವಾದ ಪ್ರಬಂಧದಲ್ಲಿ ರಾಜಶೇಖರ ಸಭಾವರ್ಣನೆ

## ದ್ವಾದಶಾಶ್ವಾಸ
### ಮುಗಿದುದು

# ತ್ರಯೋದಶಾಶ್ವಾಸಂ

ಕಂ॥ ಶ್ರೀ ಕಲ್ಯಾಣೀವದನಸು
ಧಾಕರವರ್ಧಿತಸುಖಾಮೃತಾಂಬುಧಿಯಭವಂ
ಲೋಕತ್ರಯಾಧಿಪತಿ ಕರು
ಣಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ವ॥ ಅನಂತರಮಾ ಮಹಾನುಭಾವಂ ಮಿತವಚನಸಮೇತಂ ಶಿವಪ್ರಸಾದಸುಧಾಸ್ವಾದನಂ ಗೆಯ್ದು ಸಕರ್ಪೂರಮುಖಾಂತರ್ವಳಯವಿಳಸಿತನಲ್ಲಿಂದೇಳ್ತಂದು ಮುತ್ತಿನ ಕರುಮಾಡದ ಮುಂದಣ ಮೊಗಸಾಲೆಯ ಪಜ್ಜಳಿಪ ಬಜ್ಜರದ ವೇದಿಕಾಗ್ರದ ಮಣಿಮಯಮೃಗೇಂದ್ರಪೀಠ ದೊಳ್ ಸಲ್ಲೀಲೆಯಿಂ ಕುಳ್ಳಿರ್ದು ಕಟ್ಟಿದಿರೊಳ್ ಕಟ್ಟಿರ್ದ ವಾಜಿಗಳಂ ನೋಡಿ

ಕಂ॥ ಈ ನವ್ಯವಾಜಿಗಳನಿಂ
ದಾನುಂ ನೀನುಂ ವಿಳಾಸದಿಂದೇಱಿ ಮಹಾ
ಸೇನೆಯೊಡಗೂಡಿ ವಿಹರಿಪ
ಮಿಾ ನಗರದ ರಾಜವೀಥಿಯೊಳ್ ಸಂಭ್ರಮದಿಂ ೨

ವ॥ ಎಂದತಿಪ್ರೀತಿಯಿಂ ನುಡಿಯೆ ಚತುರಮತಿ ಮಿತವಚನನುಚಿತವಚನಜ್ಞನನುಚಿತ ಮಿದೆಂದು ತನ್ನೊಳ್ಭಾವಿಸಿ ಕಾರ್ಯಮಂ ಬಗೆದಿಂತೆಂದಂ

೧. ಸಂಪದ್ಭರಿತಳಾದ ಸರ್ವಮಂಗಳೆಯ (ಪಾರ್ವತಿಯ) ಮುಖವೆಂಬ ಚಂದ್ರನಿಂದ ವೃದ್ಧಿಗೊಂಡ ಸುಖವೆಂಬ ಅಮೃತಸಮುದ್ರವುಳ್ಳವನೂ, ಜನನ ಮರಣರಹಿತನೂ, ಮೂರು ಲೋಕಗಳ ಒಡೆಯನೂ, ಕರುಣಾಕರನೂ ಆದ ಶಿವಲಿಂಗನು ನಮಗೆ ಸೌಖ್ಯ ವನ್ನುಂಟುಮಾಡಲಿ. ವ|| ಅನಂತರ ಆ ಮಹಾನುಭಾವನಾದ ರಾಜಶೇಖರನು ಮಿತವಚನನೊಡನೆ ಕೂಡಿ, ಶಿವಪ್ರಸಾದವೆಂಬ ಅಮೃತವನ್ನು ಸ್ವೀಕರಿಸಿ, ಕರ್ಪೂರ ಮಿಶ್ರ ತಾಂಬೂಲದಿಂದ ಕೂಡಿದ ಮುಖದಿಂದ ಒಪ್ಪುವಂಥವನಾಗಿ, ಅಲ್ಲಿಂದ ಎದ್ದು (ಭೋಜನಶಾಲೆಯಿಂದ ಎದ್ದು), ಮುತ್ತಿನ ಉಪ್ಪರಿಗೆಯ ಮುಂದಿರುವ ಹಜಾರದ (ಪಡಶಾಲೆಯ) ಪ್ರಕಾಶಿಸುವ ವಜ್ರಜಗುಲಿಯಲ್ಲಿ ಹಾಕಿರುವ ರತ್ನಖಚಿತ ಸಿಂಹಾಸನ ದಲ್ಲಿ ವಿನೋದದಿಂದ ಕುಳಿತು, ಎದುರಿನಲ್ಲಿ ಕಟ್ಟಿದ್ದ ಕುದುರೆಗಳನ್ನು ನೋಡಿ, ೨. "ಈಗ ನಾನೂ ನೀನೂ ವಿನೋದದಿಂದ ಈ ಹೊಸ ಕುದುರೆಗಳ ಮೇಲೆ ಹತ್ತಿ, (ನಮ್ಮ ದೊಡ್ಡ) ಚತುರಂಗಬಲದೊಡನೆ ಕೂಡಿ ಈ ಧರ್ಮವತೀನಗರದ ಬೀದಿಗಳಲ್ಲಿ ಸಡಗರದಿಂದ ಸಂಚರಿಸೋಣ." ವ|| ಹೀಗೆಂದು ಅತಿ ಪ್ರೀತಿಯಿಂದ ರಾಜಶೇಖರನು ನುಡಿಯಲು, ಚತುರಬುದ್ಧಿಯವನೂ ಉಚಿತಾನುಚಿತ ಜ್ಞಾನವುಳ್ಳವನೂ ಆದ ಮಿತವಚನನು ತನ್ನಲ್ಲಿಯೇ ಇದು ಅನುಚಿತವಾದುದೆಂದು ಭಾವಿಸಿ, ಕರ್ತವ್ಯಾಂಶವನ್ನು ಪರ್ಯಾಲೋಚಿಸಿ

ಕಂ॥ ಸರಸಗುಣಹಾರ ವಿನಯಾ
ಭರಣ ವಿವೇಕೈಕನಿಧಿ ಕಳಾನಿಳಯ ದಯಾ
ಕರ ಸತ್ಯಶಾಲಿ ಸುಯಶೋ
ಭರಿತಾಶಾವಳಯ ಶೈವಶರಧಿಶಶಾಂಕಾ ೩

ಚಂ॥ ಬೆಸಸಿದ ಕಜ್ಜಮಂ ನೆಗಳದುತ್ತರಮಿತ್ತಪನೆಂದು ನಿನ್ನ ಮಾ
ನಸದೊಳಧೀಶ ನೀಂ ಬಗೆಯದಿರ್ ಶಿವಭಕ್ತಜನವ್ರಜಂ ವಿಜೃಂ
ಭಿಸಿ ನೆಲಸಿರ್ದ ಪಟ್ಟಣಮಿದಿಂತಿದಱೊಳ್ ಬಲಗೂಡಿ ಗಾಡಿ ರಂ
ಜಿಸೆ ಪೊಸವಾಜಿಯೇಱಿ ವಿಹರಿಪ್ಪುದು ಬಲ್ಲತನಕ್ಕೆ ತಕ್ಕುದೇ ೪

ವ॥ ಅಂತುಮಲ್ಲದೆಯುಂ

ಕಂ॥ ಮೊದಲೊಳಭಿನವತುರಂಗಮ
ನೊದವಿದ ಸಹಣಿಗಳಿನ್ನೈದೆ ತಿರ್ದಿಸಿ ಬಸಮಾ
ದುದನಱಿದೇಱುವುದರಸ
ರ್ಗಿದು ವಿಹಿತಂ ವಿಶ್ವವಿಬುಧಜನಮಂದಾರಾ ೫

ವಿನಾನುಮೆಮ್ಮ ದೆಸೆಯಿಂ
ದೀ ನಗರದ ಭಕ್ತಜನಕಿಡರ್ಬಂದೊಡೆ ಮ
ದ್ಭೂನಾಥಂ ಚೋಳನೃಪಂ
ತಾನೇಂ ಸೈರಿಪನೆ ಶಾರದಾಮಣಿಮುಕುರಾ ೬

ಹೀಗೆ ಹೇಳಿದನು : ೩. "ಮನೋಹರವಾದ ಶೌರ್‍ಯೌದಾರ್‍ಯಾದಿ ಗುಣಗಳೇ ಹಾರವಾಗಿ ಉಳ್ಳವನೂ, ವಿನಯವೇ ಆಭರಣವಾಗಿ ಉಳ್ಳವನೂ, ಯುಕ್ತಾಯುಕ್ತ ವಿಚಾರಕ್ಕೆ ಮೂಲ ಆಶ್ರಯನೂ, ವಿದ್ಯಾದಿ ಕಲೆಗಳಿಗೆ ನಿಲಯಸ್ವರೂಪನೂ, ದಯಾಕರನೂ, ಸತ್ಯದಿಂದ ಕೂಡಿದವನೂ, ದಿಕ್ಕುಗಳಲ್ಲೆಲ್ಲ ಹರಡಿದ ಕೀರ್ತಿಯುಳ್ಳವನೂ, ಶೈವಧರ್ಮವೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವ ರಾಜಶೇಖರನೇ (ಕೇಳು). ೪. ಅಧೀಶನೇ, ಆಜ್ಞಾಪಿಸಿದ ಕಾರ್‍ಯವನ್ನು ಮಾಡದೆ ಪ್ರತ್ಯುತ್ತರವನ್ನು ಕೊಡುತ್ತಿರುವನೆಂದು ಮನಸ್ಸಿನಲ್ಲಿ ಭಾವಿಸಬೇಡ. ಈ ಧರ್ಮವತಿಯು ಶಿವಭಕ್ತಜನಸಮೂಹದಿಂದ ವ್ಯಾಪಿಸಿ ನೆಲಸಿರುವ ನಗರ. ಆದ್ದರಿಂದ ಈ ಪಟ್ಟಣದಲ್ಲಿ ಚತುರಂಗಬಲ ಸಮೇತವಾಗಿ, ಸೊಗಸು ರಂಜಿಸುವ ಹಾಗೆ ನೂತನ ಅಶ್ವಗಳನ್ನು ಹತ್ತಿಕೊಂಡು ವಿಹರಿಸುವುದು ಬುದ್ಧಿವಂತಿಕೆಗೆ ಯೋಗ್ಯವೇ ? ವ|| ಅದೂ ಅಲ್ಲದೆ, ೫. ವಿಶ್ವದ ಸಮಸ್ತ ವಿದ್ವಾಂಸರಿಗೆ ಕಲ್ಪವೃಕ್ಷ ಸಮಾನನಾದ ರಾಜಶೇಖರನೇ, ಮೊದಲು ಹೊಸ ಕುದುರೆಗಳಿಗೆ ಶಿಕ್ಷಣವನ್ನು ಒದಗಿಸಿ ತಿದ್ದಿ ಸಾಧುಗೊಳಿಸಿ ವಶವಾದುದನ್ನು ಅರಿತು ಏರಬೇಕು. ಅರಸರಾದವರಿಗೆ ಇದು ಯುಕ್ತವಾದ ಕಾರ್‍ಯವಾಗಿದೆ. ೬. ಸರಸ್ವತಿಗೆ ರನ್ನಗನ್ನಡಿಯಂತಿರುವ ರಾಜಶೇಖರನೇ, ನಮ್ಮ ನಿಮಿತ್ತದಿಂದ ಈ ಧರ್ಮವತೀನಗರದಲ್ಲಿರುವ (ಶಿವ) ಭಕ್ತರಾದ ಜನರುಗಳಿಗೆ ಕಷ್ಟವು ಬಂದುದೇ ಆದರೆ, ನಮ್ಮ ಭೂನಾಥನಾದ

ಉ॥ ಸಾಂದ್ರಬಳಾನ್ವಿತಂ ರಥಮನೇಱಿ ವಿಳಾಸದೆ ಬರ್ಪ ಪೊಳ್ತು ಧ
ರ್ಮೇಂದ್ರತನೂಭವಂ ಮಡಿಯೆ ತದ್ರಥಚಕ್ರಕೆ ಸಿಲ್ಕಿ ವತ್ಸಮೊಂ
ದಿಂದ್ರಸಮಾನನಾ ನೃಪತಿ ತತ್ಸುತನಂ ಪಿಡಿದಂತೆ ಕೊಂದನಾ
ಚಂದ್ರಧರಾರ್ಚಕರ್ ಸುತಸಹೋದರರೆಂಬರೆ ಸಾಪರಾಧರಂ ೭

ಮ॥ಸ್ರ॥ ಎನಗತ್ಯಂತ ಪ್ರತಾಪಂಗತುಳಗಜಹಯಾರೋಹಣಾರೂಢಸುಪ್ರೌ
ಢಿನಿಯುಕ್ತಂಗೀ ಹಯಾರೋಹಣದೊಳಿವನಿದೇಂ ಭೀತಿಯಂ ಪೇಳ್ವನೆಂಬೀ
ಮನಮಂ ನೀಂ ಮಾಡದಿರ್ವ್ಯಗ್ರತೆಯನುಳಿದು ಸಂಧಿಗ್ಧಕಾರ್ಯಂಗಳಂ ಮೆ
ಲ್ಲನೆ ಮಾಳ್ಪೊಂದಂಗಮೆನ್ನೀ ಬಗೆಗಭಿಮತಮಾಗಿರ್ಪುದೈ ರಾಜಪುತ್ರಾ ೮

ಕಂ॥ ಕೇಳದತಿಹಿತರ ವಚನಮ
ನಾಳೋಚಿಸದಗ್ರಕಾರ್ಯಮಂ ವ್ಯಗ್ರತೆಯಂ
ತಾಳಿ ಕಡುಗಜ್ಜಮೆಸಪುದ
ನೇಳಿಪುದುರ್ವೀಜನಂ ಜಗನ್ನುತಚರಿತಾ ೯

ಸಿರಿಯೊಳ್ ಪರಹಿತಮನಮ
ತ್ಸರಮತಿಯಂ ವಿದ್ಯೆಯೊಳ್ಪ್ರಭುತ್ವದೊಳೆ ನಯಾ
ಚರಣಮನತಿಶೌರ್ಯದೊಳೊ
ಪ್ಪಿರೆ ವಿನಯಮನಾಳ್ದು ಬಾಳ್ದವಂಗೆಣೆಯುಂಟೇ ೧೦

ಸತ್ಯೇಂದ್ರಚೋಳಮಹಾರಾಜನು ಸ್ಥಿರಿಸುವುದುಂಟೆ ? ೭. ಧರ್ಮೇಂದ್ರನೆಂಬ (ಚೋಳ ರಾಜನ) ಮಗನು ರಥವನ್ನು ಹತ್ತಿ ನಿಬಿಡವಾದ ಚತುರಂಗಬಲದಿಂದ ಕೂಡಿದವ ನಾಗಿ, ವಿನೋದದಿಂದ ಬರುವ ಕಾಲದಲ್ಲಿ ಒಂದು (ಹಸುವಿನ) ಕರು ಆ ರಾಜಪುತ್ರನ ರಥದ ಚಕ್ರಕ್ಕೆ ಸಿಕ್ಕು ಸತ್ತಿತು. ಆಗ ಇಂದ್ರಸಮಾನನಾದ ಧರ್ಮೇಂದ್ರಚೋಳ ಮಹಾರಾಜನು ಆ ಪುತ್ರನನ್ನು ಹಿಡಿಸಿತಂದು ಹಾಗೆಯೇ ಕೊಂದನು (ತಾನು ರಥದ ಮೇಲೆ ಕುಳಿತುಕೊಂಡು ಆ ತನ್ನ ಮಗನನ್ನು ರಥದ ಚಕ್ರದ ಕೆಳಭಾಗಕ್ಕೆ ಹಾಕಿಸಿ ಕೊಂದನು.) ಶಿವಾರ್ಚಕರು ತಪ್ಪುಮಾಡಿದವರನ್ನು ಮಕ್ಕಳು ಅಣ್ಣತಮ್ಮಂದಿರು ಎಂದು ಗಣಿಸುವುದಿಲ್ಲ. ೮. ರಾಜಪುತ್ರ, ನೀನು ಅತ್ಯಂತ ಪರಾಕ್ರಮಶಾಲಿಯೂ, ಅನುಪಮವಾದ ಆನೆ ಕುದುರೆಗಳ ಏರಾಟದಲ್ಲಿ ಬಹುಕುಶಲನಾದವನೂ ಆಗಿರುವೆ. ನಿನಗೆ ಈ ಕುದುರೆಗಳ ಏರುವಿಕೆಯಲ್ಲಿ (ಈ ಮಿತವಚನನು) ಇದೇನು ಭಯವನ್ನುಂಟು ಮಾಡುವನೆಂಬ ಯೋಚನೆಯನ್ನು ಮಾಡಬೇಡ. ದುಡುಕುವುದನ್ನು ಬಿಟ್ಟು ಸಂಶಯಾಸ್ಪದ ಕಾರ್ಯಗಳನ್ನು ನಿಧಾನವಾಗಿ ಮಾಡಬೇಕೆಂಬ ಒಂದು ರೀತಿಯು ನನ್ನ ಈ ಮನಸ್ಸಿಗೆ ಇಷ್ಟವಾದುದಾಗಿದೆ. ೯. ಜಗತ್ತಿನ ಜನರಿಂದ ನುತಿಸಲ್ಪಡುವ ಚರಿತ್ರೆಯುಳ್ಳ ರಾಜಶೇಖರನೇ, ಆಪ್ತರಾದವರ ಮಾತನ್ನು ಕೇಳದೆ, ಮುಂದೆ ಆಗತಕ್ಕ ಕಾರ್ಯವನ್ನು ಆಲೋಚನೆ ಮಾಡದೆ ತವಕಪಟ್ಟು ದೊಡ್ಡಕಾರ್ಯ ಮಾಡುವುದನ್ನು ಲೋಕದ ಜನ ತಿರಸ್ಕರಿಸುವುದು. ೧೦. ಸಂಪತ್ತು ಒದಗಿಬಂದ ಕಾಲದಲ್ಲಿ ಪರೋಪ ಕಾರವನ್ನೂ, ವಿದ್ಯೆಯಲ್ಲಿ ಮಾತ್ಸರ್ಯರಹಿತ ಬುದ್ಧಿಯನ್ನೂ, ರಾಜತ್ವ (ಪ್ರಭುತ್ವ) ದಲ್ಲಿ

ಭಾವಿಯೆನಿಸಿರ್ದುದದು ಪರಿ
ಭಾವಿಸೆ ಕಳೆಯಲ್ಕೆ ಸಾಧ್ಯಮಾಗದು ಜಗದೊಳ್
ದೇವಂಗಾದೊಡಮೆಂದೆಲೆ
ದೇವ ಬುಧಂ ನೆಗಳಲಕ್ಕುಮೇ ಪೊಲ್ಲದುದಂ ೧೧

ತುದಿಗೆಯ್ದದುದಂ ಫಲಮಿ
ಲ್ಲದುದಂ ಪಳಿಗೀಡುಮಾಳ್ಪದಂ ಪರಸಂತಾ
ಪದಮಂ ಪರಗತಿವಿಲಯಾ
ಸ್ಪದಮಂ ಕಾರ್ಯಮನುದಾರಮತಿ ನೆಗಳ್ದಪನೇ ೧೨

ಕರಣೀಯಮಿಷ್ಟಕರಣಮ
ಕರಣೀಯಮನಿಷ್ಟಕರಣಮೆಂಬೀ ನಯಮಾ
ದರಣೀಯಮಲ್ಲದುದು ಪರಿ
ಹರಣೀಯಂ ಭೂಮಿಪಂಗಿಳಾಧಿಪತಿಳಕಾ ೧೩

ಬಿಡದೆಸಪ ಕಜ್ಜಮಾವುದ
ನಡಿಗಡಿಗಾಪ್ತರ್ಕಳೊಳ್ವಿಚಾರಿಸಿ ಮಾಳ್ಪಂ
ಗೆಡರುಂಟೆ ಕಾರ್ಯಸಿದ್ಧಿಗೆ
ತೊಡಂಕು ತೋರ್ಪುದೆ ವಿದಗ್ಧಜನವನಚೈತ್ರಾ ೧೪

ನೀತಿಯನ್ನೂ ಪರಾಕ್ರಮದಲ್ಲಿ ವಿನಯವನ್ನೂ ಹೊಂದಿ ಬಾಳುವವನಿಗೆ ಸಮಾನರುಂಟೆ ? ೧೧. ಎಲೈ ಸ್ವಾಮಿಯೇ, ಲೋಕದಲ್ಲಿ ಮುಂದೆ ನಡೆಯುವುವಂತಹುದನ್ನು ನಿವಾರಿಸುವುದು ದೇವನಿಗೂ ಸಾಧ್ಯವಿಲ್ಲವಾಗಿರುವಾಗ, ಬುದ್ಧಿವಂತನಾದವನು ಯೋಗ್ಯವಲ್ಲದ ಕಾರ್ಯವನ್ನು ಮಾಡುವುದುಂಟೆ ? ೧೨. ಅಧಿಕ ಬುದ್ಧಿವಂತನಾದವನು ಕೊನೆಮುಟ್ಟದಿರುವಂತಹ, ಪ್ರಯೋಜನವಿಲ್ಲದಿರುವಂತಹ, ನಿಂದೆಗೆ ಈಡುಮಾಡು ವಂತಹ, ಪರರಿಗೆ ಸಂತಾಪವನ್ನು ಕೊಡುವಂತಹ, ಮೋಕ್ಷ ಸುಖದ ನಾಶಕ್ಕೆ ಆಶ್ರಯ ವಾದಂತಹ ಕಾರ್ಯವನ್ನು ಮಾಡುವುದಿಲ್ಲ. ೧೩. ಎಲೈ ಭೂಪಾಲತಿಲಕ, ಭೂಮೀಶ್ವರ ನಿಗೆ ಹಿತವಾದುದಾವುದೋ ಅದನ್ನು ಮಾಡಬೇಕು. ಅಹಿತವಾದುದಾವುದೋ ಅದನ್ನು ಬಿಡಬೇಕು. (ಹೀಗೆನ್ನುವ) ರಾಜನೀತಿಯು ಅಂಗೀಕಾರಯೋಗ್ಯವಾದುದು. ಹಾಗಲ್ಲ ದುದು ಬಿಡುವುದಕ್ಕೆ ಯೋಗ್ಯ. ೧೪. ವಿದ್ವಾಂಸರೆಂಬ ತೋಟಕ್ಕೆ ವಸಂತಪ್ರಾಯ ನಾದ ರಾಜಶೇಖರನೇ, ತಪ್ಪದೆ ಮಾಡಬೇಕಾದ ಕಾರ್ಯವು ಯಾವುದೇ ಆದರೂ, ಅದನ್ನು ಹೆಜ್ಜೆ ಹೆಜ್ಜೆಗೆ ಆಪ್ತರಾದವರಲ್ಲಿ ಆಲೋಚನೆಮಾಡಿ ಮಾಡುವವನಿಗೆ ಕಷ್ಟವುಂಟೆ ?

ನೆರಪಲ್ ಸಿರಿಯುಂ ದುರಿತಮು
ನುರುಪಲ್ ದಶದಿಶೆಯೊಳಿಂದುಕರರುಚಿಯುಶಮಂ
ಪರಪಲ್ ಪರನೃಪರುಮನೊ
ತ್ತರಿಪಲ್ ಸಾಲ್ವುದು ನಯಜ್ಞಹಿತಮಿತವಚನಂ ೧೫

ಭ್ರಮರಹಿತಾಮೋದಪ್ರದ
ಸುಮನೋಗಣ ಹೃದ್ಯಮವಿಕಲಸ್ವಸ್ಥಮುದ
ಗ್ರಮನೋಜ್ಞಫಲದಮಖಿಲಾ
ಗಮವಿನುತಂ ನೀತಿಸುರಮಹೀರುಹಮರಸಾ ೧೬

ತನುಭೃದ್ಗಣದೊಳ್ ತೋರ್ಪೀ
ತನುಧನಲೋಭಂಗಳೆಂತುಮೋಂ ತೋರ್ಕುಮೆ ಪೇ
ಳ್ನಿನಗೆ ಭುವನಾಕ್ಷಿಗಡಸುವ
ಘನತಿಮಿರಂ ಭುವನದಕ್ಷಿಯಂ ಮುಸುಕುಗುಮೇ ೧೭

ಅದುಕಾರಣದಿಂ ನಿಜಧೈ
ರ್ಯದೆ ಗಣಿಸದೆ ಮುಂದೆ ಬರ್ಪುದಂ ಬುಧರಲ್ತೆಂ
ಬುದನೆಸಗದೆ ಬೆಳ್ಜಸವಾ
ಳ್ವುದು ಕಜ್ಜಂ ಸಜ್ಜನಾಬ್ಜವನದಿನನಾಥಾ ೧೮

ಕೆಲಸ ಕೈಗೂಡಲು ತೊಂದರೆಯು ಬಂದೀತೆ ? ೧೫. ನೀತಿಶಾಸ್ತ್ರವನ್ನು ತಿಳಿದವರ ಹಿತಮಿತವಾದ ನುಡಿಗಳು ಐಶ್ವರ್ಯವೃದ್ಧಿಗೂ, ಪಾಪಗಳನ್ನು ಸುಟ್ಟು ನಾಶಮಾಡುವುದಕ್ಕೂ, ಚಂದ್ರಕಿರಣಸಮಾನವಾದ ಕೀರ್ತಿಯನ್ನು ಹತ್ತು ದಿಕ್ಕುಗಳಲ್ಲಿ ಹರಡುವುದಕ್ಕೂ, ವೈರಿರಾಜರನ್ನು ನಾಶಮಾಡುವುದಕ್ಕೂ ಸಮರ್ಥವಾದದು. ೧೬. ಅರಸ, ನೀತಿಯೆಂಬುದು ಒಂದು ಕಲ್ಪವೃಕ್ಷ. ಅದು ಭ್ರಮೆಯಿಂದ ರಹಿತವೂ ಸಂತೋಷಪ್ರದವೂ ವಿದ್ವಾಂಸರಿಗೆ ಹೃದ್ಯವೂ ಆಗಿರುತ್ತದೆ–ಭ್ರಮರಗಳಿಗೆ ಹಿತವಾದ ಪರಿಮಳವನ್ನು ಕೊಡುವ ಹೂಗಳಿಂದ ಮನೋಹರ. ನ್ಯೂನತೆಯಿಲ್ಲದೆ ವ್ಯವಸ್ಥಿಗೊಂಡದ್ದು–ನ್ಯೂನತೆಯಿಲ್ಲದ (ಸ್ವ+ಸ್ಥ) ಸ್ವರ್ಗದಲ್ಲಿ ಇರತಕ್ಕದ್ದು. ಉತ್ತಮವೂ ಮನೋಹರವೂ ಆದ ಫಲವನ್ನು ಕೊಡತಕ್ಕದ್ದು–ಉನ್ನತವಾಗಿದ್ದು ರುಚಿಕರವಾದ ಹಣ್ಣನ್ನು ಕೊಡತಕ್ಕದ್ದು. ಸಕಲಶಾಸ್ತ್ರ ವಿನುತವಾದದ್ದು–ಸಕಲ, ಆಗಮ=ಮರಗಳಲ್ಲಿ, ವಿಖ್ಯಾತವಾದದ್ದು. (ರು) ೧೭. ಜನತೆಯಲ್ಲಿ ಕಾಣಿಸುವ ಈ ದೇಹ ಮತ್ತು ಧನದ ಲೋಭಗಳು ಯಾವರೀತಿಯಿಂದಲೂ ನಿನಗೆ ಕಾಣುತ್ತವೆಯೇ ಹೇಳು ? ಸಮಸ್ತ ಜನರ ನೇತ್ರಗಳನ್ನು ಮುಸುಕುವ ಭಾರಿ ಕತ್ತಲೆಯು ಭುವನದ ಆಕ್ಷಿಯಾದ ಸೂರ್ಯನಿಗೆ ಮುಸುಕುವುದೇ ? ೧೮. ಸತ್ಪುರುಷರೆಂಬ ಕಮಲಗಳ ಸಮೂಹಕ್ಕೆ ಸೂರ್ಯಪ್ರಾಯನಾದ ರಾಜಶೇಖರನೇ, ಆದ ಕಾರಣ ತನಗಿರುವ ಧೈರ್ಯದಿಂದ ಮುಂದೆ ಬರುವುದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ, ವಿದ್ವಾಂಸರಿಗೆ ಸಮ್ಮತವಲ್ಲದುದನ್ನು ಮಾಡದೆ, ಶುಭ್ರಕೀರ್ತಿ ಪಡೆಯುವುದು ಮುಖ್ಯ

ವ॥ ಎಂದವಂ ನುಡಿಯೆ ಮೊಗದೊಳ್ ಮಂದಸ್ಮಿತಂ ಮೊಳೆಯೆ ನರೇಂದ್ರತನಯನಿಂತೆಂದಂ

ಉ॥ ತೀರದ ನೀರದಂ ನೆಗೆದು ಗರ್ಜಿಪುದೆಂದು ಪಯೋಧಿಕೇಳಿಯಂ
ಸಾರಮರಾಳನೇನುಳಿದುದೇ ನವ ಚಂಪಕಗಂಧಭೀತಿಯಿಂ
ಸಾರದೆ ಮಾಣ್ದುದೇ ವನವಿಹಾರಮನಾಱಡಿ ಮುಳ್ಗಳಂಘ್ರಿಯಂ
ಬಾರಿಪುದೆಂದು ಬಿಟ್ಟುದೆ ಮದದ್ವಿರದಂ ಗಹನಪ್ರಚಾರಮಂ ೧೯

ವ॥ ಆದುಕಾರಣದಿಂ

ಕಂ॥ ಮುಂದೇಂ ಬರ್ಪುದೊ ಹಾನಿಯು
ದೆಂದಳ್ಕಿ ವಿನೋದಕೇಳಿಯಂ ತೊಱೆವಾತಂ
ಪಂದೆಯುವನೆಂಬ ನಿಂದೆಯು
ನೊಂದುವನಿದು ರಾಜಧರ್ಮಮೇ ಬಗೆವಾಗಳ್ ೨೦

ವ॥ ಎಂದು ತಾನೆಂದುದನಪ್ಪುಗೆಯ್ಯದೆ ನುಡಿದ ನರೇಂದ್ರನಂದನಂಗೆ ಪತಿಮೋಹಿ
ನಂದನನಿಂತೆಂದಂ

ಉ॥ ಧರ್ಮಜನಂಬರಧ್ವನಿಯನಾಲಿಸಿ ತಾನುಳಿದಂಬುಪಾನಮಂ
ನಿರ್ಮಳಬುದ್ಧಿ ತನ್ನನುಜರಾಯುಮನಾಗಳೆ ಸತ್ಪ್ರಸಂಗದಿಂ
ಕೂರ್ಮೆಯೊಳಲ್ಲಿ ಮೇಣ್ಪಡೆದನಾಪ್ತನಯೋಕ್ತಿಯನೊರ್ಮೆ ಕೇಳ್ದೊಡೇಂ
ಪೆರ್ಮೆಗೆ ಹಾನಿಬರ್ಪುದೆ ವಿಚಾರಿಪುದಾತ್ಮಹಿತಾಹಿತಂಗಳಂ ೨೧

ಕೆಲಸ.” ವ|| ಎಂದು ಆ ಮಿತವಚನನು ನುಡಿಯಲು, ರಾಜಶೇಖರನ ಮನಸ್ಸಿನಲ್ಲಿ ಮಂದಹಾಸವು ಹುಟ್ಟಲಾಗಿ, ಅವನು ಹೀಗೆ ಹೇಳಿದನು : ೧೯. “ಶ್ರೇಷ್ಠವಾದ ಹಂಸ ಪಕ್ಷಿಯು, ದಡದಲ್ಲಿರುವ ಮೋಡವು ಮೇಲಕ್ಕೆ ಹಾರಿ ಗರ್ಜಿಸುವುದೆಂದು ಭಯಗೊಂಡು ಸಮುದ್ರಕ್ರೀಡೆಯನ್ನು ಬಿಡುವುದೆ ? ನೂತನವಾಗಿ ಅರಳಿದ ಸಂಪಿಗೆಯ ಹೂವಿನ ಸುಗಂಧದ ಹೆದರಿಕೆಯಿಂದ ಭ್ರಮರವು ವನದ ಹತ್ತಿರಕ್ಕೆ ಹೋಗದೆ ವನವಿಹಾರ ಮಾಡು ವುದನ್ನು ಬಿಡುವುದೆ ? ಆನೆಗಳು (ನೆಗ್ಗಲು) ಮುಳ್ಳುಗಳು ಕಾಲಿಗೆ ಬಾಧೆಕೊಡು ವುವೆಂದು ಅರಣ್ಯಸಂಚಾರ ಮಾಡುವುದನ್ನು ಬಿಡುವುವೇ ? ವ|| ಆದಕಾರಣ, ೨೦. ಮುಂದೆ ಏನು ಹಾನಿ ಬರುವುದೋ ಎಂದು ಹೆದರಿ ವಿನೋದಕೇಳಿಯನ್ನು ಬಿಡುವಂಥವನು ಹೇಡಿಯೆಂದೆಂಬ ನಿಂದೆಯನ್ನು ಪಡೆಯುವನು. ವಿಚಾರಮಾಡಿ ನೋಡಿ ದರೆ ಇದು ರಾಜಧರ್ಮವೆ ?” ವ|| ಹೀಗೆಂದು ತಾನು ಹೇಳಿದುದನ್ನು ಒಪ್ಪಿಕೊಳ್ಳದೆ ನುಡಿದ ಸತ್ಯೇಂದ್ರಭೂಪಾಲಕುಮಾರನಿಗೆ ಪತಿಮೋಹಿಕುಮಾರನು ಹೀಗೆ ಹೇಳಿದನು : ೨೧. “ನಿರ್ಮಲಬುದ್ಧಿಯುಳ್ಳ ಧರ್ಮರಾಯನು ಅಶರೀರವಾಣಿಯನ್ನು ಕೇಳಿ, ತಾನು ನೀರು ಕುಡಿಯುವುದನ್ನು ಬಿಟ್ಟು, ಪ್ರೀತಿಯಿಂದ ತನ್ನ ತಮ್ಮಂದಿರ ಪ್ರಾಣವನ್ನು ಆಕ್ಷಣ ದಲ್ಲಿಯೇ ಯೋಗ್ಯಪ್ರಸಂಗದಿಂದ ಅರಣ್ಯದಲ್ಲಿ ಪಡೆದನು. ಆಪ್ತರಾದವರು ಹೇಳಿದ ನೀತಿ ಯುಕ್ತವಾದ ಮಾತನ್ನು ಒಮ್ಮೆ ಕೇಳಿದರೆ ದೊಡ್ಡಸ್ತಿಕೆಗೆ ಹಾನಿಬರುವುದೇ? (ಆದ್ದರಿಂದ)

ಕಂ॥ ವಿತತಾಭಿಮಾನ ನೀತಿ
ಕ್ಷತಿಗಂ ಶಿವಭಕ್ತಿಧರ್ಮ ನಿರ್ಮಳಕೀರ್ತಿ
ಚ್ಯುತಿಗಧಟನಪ್ಪೊಡಂ ಭೂ
ಪತಿಯಳ್ಕಲೇಳ್ಕುಮಮಳಗುಣಗಣನಿಳಯಾ ೨೨

ವಿದಿತ ನಿಜರೂಪವಂ ಮುಕು
ರದೊಳೀಕ್ಷಿಪವೊಲ್ ತ್ವದೀಯ ನಯಕೌಶಲಸಂ
ಪದಮನಿದನೆನ್ನೊಳೀಕ್ಷಿಪು
ದಿದು ಯುಕ್ತಂ ನಿನಗೆ ನೀತಿವಿದ್ಯಾಭರಣಾ ೨೩

ವ॥ ಎಂದತಿಹಿತಕರ ಪ್ರಸನ್ನತರ ಸದರ್ಥಸಮರ್ಥನಪ್ರಸಂಗಮನವಂ ನುಡಿಯಲೊಡನೆ

ಚಂ॥ ಪುರಹರನಿಟ್ಟ ಪುಲ್ಲಮುಱಿಯಂ ಮುರವೈರಿ ವಿರಿಂಚಿಮುಖ್ಯನಿ
ರ್ಜರರದನೆತ್ತಲಾಱದೆ ವಲಂ ಧೃತಿಗುಂದಿದರೆಂದೊಡಾವನಾ
ಪರಮಮಹೇಶಶಾಸನಮನುರ್ವರೆಯೊಳ್ಮಿಗೆ ಮೀರ್ವನಣ್ಣ ಸೈ
ತಿರೆ ಪೆಱಪಿಂಗಿ ಪೋದಪುದೆ ಬರ್ಪ ಶುಭಾಶುಭಮಾರ್ಗಮಾದೊಡಂ ೨೪

ನನ್ನ ಹಿತಾಹಿತವಾದ ಆಪ್ತವಾಕ್ಯಗಳನ್ನು ವಿಚಾರಿಸಿ ನೋಡಬೇಕು ! ೨೨. ಸದ್ಗುಣ ಸಮೂಹಕ್ಕೆ ನಿಲಯನಾದ ರಾಜಶೇಖರನೇ, ಲೋಕದಲ್ಲಿ ರಾಜನು ಮಹಾಪರಾಕ್ರಮ ಶಾಲಿಯಾದರೂ ಕೂಡ ಅವನ ವಿಸ್ತಾರವಾದ ಗೌರವ, ನೀತಿಗಳಿಗೆ ಲೋಪಬರುವ ಸಂದರ್ಭದಲ್ಲಿಯೂ, ಶಿವಭಕ್ತಿ, ಧರ್ಮದ ಪರಿಶುದ್ಧ ಕೀರ್ತಿಗಳಿಗೆ ಚ್ಯುತಿಬರುವ ಸಂದರ್ಭದಲ್ಲಿಯೂ ಭಯಪಡಬೇಕು. ೨೩. ನೀತಿವಿದ್ಯೆಯೇ ಆಭರಣವಾಗುಳ್ಳ ರಾಜಶೇಖರನೇ, ಕನ್ನಡಿಯಲ್ಲಿ ಪ್ರಸಿದ್ಧವಾದ ತನ್ನ ನಿಜರೂಪವನ್ನು ನೋಡಿಕೊಳ್ಳುವ ಹಾಗೆ, ನಿನ್ನ ನೀತಿಶಾಸ್ತ್ರದ ಕುಶಲತೆಯ ಸಂಪತ್ತನ್ನು ನನ್ನಲ್ಲಿ ನೋಡುವುದು. ಇದು ನಿನಗೆ ಯುಕ್ತವಾದುದು." ವ॥ ಹೀಗೆಂದು ಆ ಮಿತವಚನನು ಅತಿ ಕ್ಷೇಮಕರವಾದ ಪ್ರಸನ್ನತರವಾದ, ಯೋಗ್ಯ ಅರ್ಥವನ್ನು ದೃಢೀಕರಿಸುವ ಪ್ರಸಂಗ (ದೃಷ್ಟಾಂತ)ಗಳೊಡನೆ ಹೇಳಿದಕೂಡಲೆ, ರಾಜಶೇಖರನು ೨೪. "ಪರಮೇಶ್ವರನು ಇಟ್ಟ ಹುಲ್ಲಿನ ಸಿಂಬೆಯನ್ನು ವಿಷ್ಣು, ಬ್ರಹ್ಮರೇ ಮುಖ್ಯರಾದ ದೇವತೆಗಳು ಎತ್ತಲಾರದೆ ಧೈರ್ಯಗೆಟ್ಟರೆನ್ನುವಾಗ ಭೂಮಿಯಲ್ಲಿ ಪರನುನಾದ ಆ ಪರಮೇಶ್ವರನ ಶಾಸನವನ್ನು ಮೀರುವವರು, ಅಣ್ಣ, ಯಾರಿದ್ದಾರೆ? ಸುಮ್ಮನಿದ್ದರೆ ಬರಬಹುದಾದ ಶುಭಾಶುಭಗಳು ಯಾರಿಗಾದರೂ, ಹಿಂದಕ್ಕೆ

ವ॥ ಅದಲ್ಲದೆಯುಂ

ಮ॥ಸ್ರ॥ ಪೊಸತುದ್ವೇಗಾಶ್ವಮೆಂದೇಱಿದೊಡೆ ಸಮನಿಕುಂ ವಾಹಕತ್ವಕ್ಕೆ ಭಂಗಂ
ನಿಸದಂ ವೈಹಾಳಿಯೊಳ್ಶಂಕರಶರಣಜನಂ ನೋಯೆ ಕಾಯ್ದಪ್ಪನೆಮ್ಮಾ
ವಸುಧೇಶಂ ಮಾಣದೆಂದಳ್ಕುವುದನುಚಿತಮೀಶಾಜ್ಞೆಯುಂ ಬಲ್ಲನಾರ್ಮುಂ
ದೆ ಸಮಂತಂತಾಗೆ ತೋರ್ಪೆಂ ವಿಪುಲಮಹಿಮೆಯುಂ ಮುಕ್ತಿಯುಂ ಸೂಱೆಗೊಂಬೆಂ ೨೫

ಚಂ॥ ಬಗೆಗೊಗೆದಲ್ತಿಯಂ ಸಲಿಸವೇಳ್ವುದು ಬೇಡೆನವೇಡ ತಂದೆ ನೆ
ಟ್ಟಗೆ ಮುಳಿದಪ್ಪನೆಂದೆಣಿಸದಿರ್ ನಿನಗಾದಪರಾಧಮೆನ್ನದಿಂ
ದಗಣಿತಸಂಭ್ರಮಂ ಮಿಗೆ ತುರಂಗಮಯುಗ್ಮಮನೇಱಿ ನೋಳ್ಪರೊ
ಳ್ಗಣ್ಗಳೆ ಮಹೋತ್ಸವಂ ವಿಹರಿಪಂ ಪುರದೊಳ್ ಪರಮಾನುರಾಗದಿಂ ೨೬

ವ॥ ಎಂದ ರಾಜೇಂದ್ರನುಕ್ತಿಯನೆಂತಾನುಂ ಮನದೆಗೊಂಡು ನಿಜಮಹತ್ವದರ್ಶನಾರ್ಥ
ಮಿದು ಶಿವಕೃತಮಕ್ಕುಮೆಂದು ನಿರ್ಧರಂಗೈದು

ಮ॥ ಇನಿತೊಂದಾಗ್ರಹಮಂ ಮದೀಯ ನಯವಾಕ್ಯೋಲ್ಲಂಘನಂಗೈದು ಮಾ
ಳ್ಪನಿವಂ ನೀತಿವಿದಂ ನವಾಶ್ವಗತಿಯಿಂದೇನಾನುಮೊಂದಕ್ಕುಮ
ಲ್ತೆ ನವೀನಂ ಕಡುಗಜ್ಜಮೆಂದೆಣಿಸಿಯುಂ ತಾನಪ್ಪುಕೈದಿರ್ದನಾ
ತನ ಮಾತಂ ಪುದುವಾಳ್ತನಂ ಗಡ ಸಖರ್ಗೆಂತಾದೊಡಂ ಮಿತ್ರರೊಳ್ ೨೭

ಹೋಗುತ್ತನೆಯೆ ? ವ|| ಅದೂ ಅಲ್ಲದೆ ೨೫. ನೂತನವಾದುವೂ, ವೇಗವಿಶಿಷ್ಟ ವಾದುವೂ ಎಂದು (ಹೆದರಿ) ಏರದೆ ಇದ್ದರೆ (ನಮ್ಮ) ಏರಾಟದ ಕೌಶಲ್ಯಕ್ಕೆ ಭಂಗಬರು ವುದು. ನಿಶ್ಚಯವಾಗಿ ಕುದುರೆಯ ಏರಾಟದಲ್ಲಿ ಶಂಕರನ ಶರಣರಿಗೆ ನೋವುಂಟಾದರೆ ನಮ್ಮ ವಸುಧೇಶನಾದ ಸತ್ಯೇಂದ್ರಚೋಳಮಹಾರಾಜನು ರಕ್ಷಿಸುವನು. ಇದು ಬೇಡ ವೆಂದು ಭಯಪಡುವುದು ಯುಕ್ತವಲ್ಲ. ಶಿವಾಜ್ಞೆಯನ್ನು ಬಲ್ಲವರಾರು ? ಮುಂದೆ ಹಾಗೇನಾದರೂ ಆದರೆ ಲೋಕವಿಖ್ಯಾತ ಮಹಿಮೆಯನ್ನು ತೋರಿಸಿ ಮೋಕ್ಷವನ್ನು ವಶಮಾಡಿಕೊಳ್ಳುತ್ತೇನೆ. ೨೬. ಮನಸ್ಸಿಗುಂಟಾದ ಪ್ರೀತಿಯನ್ನು ಪೂರೈಸಬೇಕೆಂದು ಹೇಳು. ಬೇಡವೆಂದು ಅನ್ನಬೇಡ. ನನ್ನ ತಂದೆಯಾದ ಸತ್ಯೇಂದ್ರಚೋಳನು ಕೋಪ ಗೊಳ್ಳುವನೆಂದು ಯೋಚಿಸಬೇಡ. ನಿನ್ನಿಂದೇನಾದರೂ ಅಪರಾಧವಾದರೆ ಅದು ನನ್ನ ಅಪರಾಧ. ಇಂದು ಎಣೆಯಿಲ್ಲದ ಸಂಭ್ರಮದಿಂದ ಮಿಕ್ಕು, ಎರಡೂ ಕುದುರೆಗಳನ್ನು ಹತ್ತಿಕೊಂಡು, ನೋಡುವವರ ಕಣ್ಣಿಗೆ ಮಹೋತ್ಸವವಾಗುವಂತೆ ಪಟ್ಟಣದಲ್ಲಿ ಪ್ರೀತಿ ಯಿಂದ ಸಂಚರಿಸೋಣ." ವ|| ಹೀಗೆಂದು ಹೇಳಿದ ಆ ರಾಜಶೇಖರನ ಮಾತನ್ನು ಅತಿಪ್ರಯಾಸದಿಂದ ಮನಸ್ಸಿಗೆ ತಂದುಕೊಂಡು, ತನ್ನ ಮಹಿಮೆಯನ್ನು ತೋರಿಸುವುದ ಕ್ಕೋಸುಗ ಇದು ಶಿವನಿಂದ ಪ್ರೇರೇಪಿಸಲ್ಪಟ್ಟದ್ದೆಂದು ನಿಶ್ಚಯಿಸಿಕೊಂಡು, ೨೭. 'ನೀತಿ ಶಾಸ್ತ್ರವನ್ನು ತಿಳಿದ ಈ ರಾಜಶೇಖರನು ನನ್ನ ನೀತಿವಚನವನ್ನು ಮಿಕ್ಕಿ ಇಷ್ಟೊಂದು ದುಡುಕಿನಿಂದ ಆಗ್ರಹಮಾಡುವನು. ಆದಕಾರಣ ಈ ನೂತನ ಕುದುರೆಗಳ ಆರೋಹಣ ದಿಂದ ಏನಾದರೂ ಒಂದು ಆಗೇತೀರುವುದಲ್ಲವೆ ? ಇದು ನೂತನ ಸಾಹಸಕಾರ್ಯ'

ವ॥ ಅಂತಿರ್ಪನ್ನೆಗಂ

ಚಂ॥ ತನುವೆರಡೊಂದುಗೂಡಿ ನಿಜಪಕ್ಷದೊಳಪ್ಪಿ ಮನೋನುರಾಗದಿಂ
ಮನಸಿಜಸೌಖ್ಯಮಂ ಸವಿದು ಸಾರಸತಳ್ಪದೊಳಿರ್ಪ ವೇಳೆಯೊಳ್
ವನರುಹಮಿತ್ರನಸ್ತಗಿರಿಮಸ್ತಕದಲ್ಲಿರೆ ನೋಡಿ ಬಾಡಿ ಬೆ
ಚ್ಚನೆ ಬಿಸುಸುಯ್ದು ಬೇವಸದೆ ಬಿರ್ಚಿದುವಕ್ಕಟ ಜಕ್ಕವಕ್ಕಿಗಳ್ ೨೮

ಕಂ॥ ಇಟ್ಟಣಿಸುತಲರ್ದ ನೆಯಿದಿಲ
ನಿಟ್ಟೆಸಳ್ಗಳ್ತಾಗೆ ತಾಳ್ದು ಸಂಕೋಚತೆಯಂ
ನೆಟ್ಟನೆ ನಿಂದವೊಲೆಸೆಗುಂ
ದಿಟ್ಟಿಗೆ ಕೊಳದೊಳಗೆ ಮುಗಿವ ಕಮಳಕದಂಬಂ ೨೯

ತಲೆವಾಗಿದ ಸರಸಿಜದಿಂ
ದಲರ್ವಂದೊಕ್ಕುದು ನಿಜೇಶನಗಲುತ್ತಿರೆ ತ
ನ್ನಳಿನಿ ಮನಸ್ತಾಪದೆ ತಂ
ಬುಲಮಂ ಕಿಲಕುಗುಳ್ವಳೆಂಬುದಂ ಪ್ರಕಟಿಪವೊಲ್ ೩೦

ಅಪರಗಿರಿಕರಿಯಕುಂಭದ
ಲಪನದ ಸಿಂಧುರದೊಳರುಣಮಣಿಮುಕುರದೊಳೀ
ನುಪಮೆಗೆ ಬಂದುದೊ ಸಂಧ್ಯಾ
ವಿಪುಳಾರುಣರುಚಿಯು ಮಹಿಮಕರಮಂಡಲಮುಂ ೩೧

ಎಂದು ಯೋಚಿಸಿದರೂ ಮಿತವಚನನು ರಾಜಶೇಖರನ ಮಾತನ್ನು ಅಂಗೀಕರಿಸಿದನು. ಸ್ನೇಹಿತರಿಗೆ ಸ್ನೇಹಿತರಲ್ಲಿ ಪರತಂತ್ರವೇ ಇರುವುದಲ್ಲದೆ ಸ್ವಾತಂತ್ರ್ಯವಿಲ್ಲವಲ್ಲವೆ ! ವ॥ ಈ ರೀತಿ ಇರುವಷ್ಟರಲ್ಲಿ ೨೮. ಚಕ್ರವಾಕಪಕ್ಷಿಗಳು ತಮ್ಮೆರಡು ದೇಹಗಳು ಒಂದಾಗುವಂತೆ ತಮ್ಮ ರೆಕ್ಕೆಗಳಿಂದ ತಬ್ಬಿಕೊಂಡು, ಮನೋನುರಾಗದಿಂದ ಮನ್ಮಥಸಂಬಂಧವಾದ ಸುಖವನ್ನನುಭವಿಸಿ ಕಮಲವೆಂಬ ಹಾಸಿಗೆಯಲ್ಲಿ ಇರುವಾಗ, ಸೂರ್ಯನು ಪಶ್ಚಿಮಾದ್ರಿಯ ನೆತ್ತಿಯ ಮೇಲಿರಲು ಅದನ್ನು ಕಂಡು ಅವು ಬಾಡಿ ಬಿಸಿಯುಸಿರು ಬಿಟ್ಟು, ಸಂತಾಪದಿಂದ, ಅಕ್ಕಟಾ ! ಅಗಲಿಕೆಗೊಂಡವು. ೨೯. ಸರೋವರದಲ್ಲಿ ಅರಳುತ್ತಿರುವ ನೈದಿಲೆಯ ನೆಟ್ಟನೆಯ ಎಸಳುಗಳು ತಗುಲಲು, ಸಂಕೋಚವನ್ನು (ನಾಚಿಕೆಯನ್ನು) ಹೊಂದಿ ನೆಟ್ಟನೆ ನಿಂತ ಹಾಗೆ ಕಮಲಗಳು ಕಣ್ಣಿಗೆ ಕಾಣುತ್ತಿದ್ದವು. ೩೦. ತನ್ನ ಗಂಡನು ತನ್ನಿಂದ ಅಗಲುತ್ತಿರಲು ಕಮಲಿನಿಯು ವಿಯೋಗದಿಂದುಂಟಾದ ಹೃದಯ ಸಂತಾಪದಿಂದ (ತಾನು ಹಾಕಿಕೊಂಡ) ತಾಂಬೂಲದ ರಸವನ್ನು ನೆಲಕ್ಕೆ ಉಗುಳಿದಳೆಂಬುದನ್ನು ಪ್ರಕಟಿಸುವ ಹಾಗೆ ಬಾಗಿದ ಕಮಲಗಳಿಂದ ಪುಷ್ಪರಸವು ಸುರಿಯಿತು. ೩೧. ಪಶ್ಚಿಮದಿಕ್ಕಿನಲ್ಲಿರುವ ಪರ್ವತವೆಂಬ ಆನೆಯ ಕುಂಭಸ್ಥಳದಲ್ಲಿ ಲೇಪಿಸಿರುವ ಚಂದ್ರದ ಪುಡಿಗೂ, ಕೆಂಪುಬಣ್ಣದ ಪದ್ಮರಾಗರತ್ನದಿಂದ ಮಾಡಿದ ಕನ್ನಡಿಗೂ ವಿಶಾಲವಾದ ಸಂಜೆಗೆಂಪಿನ ಕಾಂತಿಯುಳ್ಳ ಸೂರ್ಯಮಂಡಲವು ಸಮಾನವಾಗಿತ್ತು.

ಮ॥ ಕೊಳದೊಳ್ನಿಂದು ತರತ್ತರಂಗಜಲಮಂ ಮಿಂದಲ್ಲಿ ನಗ್ನಾಂಗಿ ಪೊ
ಕ್ಕಳಿನಾದಚ್ಛಲದಿಂ ಕುಮಂತ್ರಜಪಮಂ ತದ್ವೇಷದಿಂ ಮಾಡೆ ಕೋ
ಮಳೆ ಶೂನ್ಯಾಧ್ವಮನ್ಯೆದೆ ದಾಂಟ ನಿಜಪಾದಂ ಪೋಗೆ ಮೈಗಂದಿ ಬೀ
ಳ್ದಳಿದಂ ದ್ರಾವಿತ ಚಂದ್ರಸಾಂದ್ರತರರುಗ್ವ್ಯಾಪ್ತತ್ಕರಂ ಭಾಸ್ಕರಂ ೩೨

ಕಂ॥ ಮೃಡನ ಕಿಱುಜಡೆಯ ಕೆಂಗದಿ
ರಡರ್ದೆಳವೆಱೆ ಬೆಳೆದು ನಿಜಕಳಾವಿಭವಮನೀ
ಪೊಡವಿಗಱಿಪಲ್ಕೆ ಬಂದವೊ
ಲುಡುಪತಿಬಿಂಬಂ ಸರಾಗಮುದಯಿಸಿತಾಗಳ್ ೩೩

ಮ॥ ಎನಗಾತ್ಮೇಶ್ವರನೀ ದಿನೇಶ್ವರನಗಲ್ದೋವೋವೊ ತಾಂ ಪೋಗಿ ಕೆಂ
ಮನೆ ರಾಗಾನ್ವಿತನಪ್ಪಿದಂ ವರುಣದಿಗ್ಯೋಷಾಂಗಮಂ ನೋಡಲಾ
ಱೆನಿದಂ ಕಣ್ಗಳಿನೆಂದು ಪಿಂದಿರುಗಿ ನಿಂದಿಂದ್ರಾಶೆಯೆಂದೆಂಬ ಕಾ
ಮಿನಿಯುದ್ವೇಣಿಯ ಸೂರ್ಯಕಾಂತಿಯೆನಿಸಿತ್ತಿಂದ್ರಾದ್ರಿಯೊಳ್ ಚಂದ್ರಮಂ ೩೪

ಉ॥ ಅಂಬುಜಮುಂ ವಿಯೋಗಿವದನಾಂಬುಜಮುಂ ಕಳೆಗುಂದೆ ಕೂಡೆ ದು
ಗ್ಧಾಂಬುಧಿಯುಂ ಜನೋತ್ಸವಸುಧಾಂಬುಧಿಯುಂ ನಲವೇರ್ಚೆ ಕಾಂತ ಕಾಂ
ತಾಂಬಕಕೈರವಂ ಧವಳಕೈರವಮುಂ ನಗೆಯೋದೆ ಬಂದುದಾ
ಲಂಬಿತರಾತ್ರಿರಮ್ಯರಮಣೀಮಣಿ ಮಣಿಕುಂಡಳಮಿಂದುಮಂಡಳಂ ೩೫

೩೨. ಕೋಮಲೆಯಾದ ನೈದಿಲೆಯೆಂಬ ಸ್ತ್ರೀಯು ಸರೋವರದಲ್ಲಿ ಹೊಕ್ಕುನಿಂತು, ಆ ಸರೋವರದ ಚಂಚಲವಾದ ಅಲೆಯ ನೀರಿನಲ್ಲಿ ಸ್ನಾನಮಾಡಿ, ಬೆತ್ತಲೆಯಾಗಿ ಅಲ್ಲಿ ದುಂಬಿಗಳ ನಾದವೆಂಬ ವ್ಯಾಜದಿಂದ ಕುಮಾರ್ಗಜಪವನ್ನು ಆ ಸೂರ್ಯನ ಮೇಲಿನ ದ್ವೇಷದಿಂದ ಮಾಡಿದಳು. ಚಂದ್ರನ ದಟ್ಟವಾದ ಕಾಂತಿಯ ಕಿರಣಗಳನ್ನು ಓಡಿಸಿದ ಪ್ರಕಾಶಮಾನವಾದ ಕಿರಣಗಳುಳ್ಳ ಸೂರ್ಯನು ಆಕಾಶಮಾರ್ಗವನ್ನು ದಾಟಲು ತನ್ನ ಕಿರಣವು (ತನ್ನ ಕಾಲುಗಳು) ಹೋಗಲು ಕಾಂತಿಹೀನನಾಗಿ (ಶರೀರವು ಬಾಡಿ) ಬಿದ್ದು ಮುಳುಗಿದನು (ಸತ್ತನು). ೩೩. ಶಿವನ ಕಿರುಜಡೆಯ ಕೆಂಪುಕಾಂತಿಯನ್ನು ಹೊಂದಿದ ಬಾಲ ಚಂದ್ರನು ಬೆಳೆದು ವೃದ್ಧಿಗೊಂಡು ತನ್ನ ಕಲಾವೈಭವವನ್ನು (ಷೋಡಶ ಕಲಾವೈಭವವನ್ನು) ಈ ಭೂಮಿಯ ಜನರಿಗೆ ತಿಳಿಸುವುದಕ್ಕೆ ಬಂದ ಹಾಗೆ ಚಂದ್ರೋದಯವಾಯಿತು. ೩೪. ಪೂರ್ವದಿಕ್ಕಿನಲ್ಲಿ ತೋರುವ ಚಂದ್ರಮಂಡಲವು ಹೇಗಿತ್ತೆಂದರೆ, 'ಈ ಸೂರ್ಯನು ನನಗೆ ಗಂಡನು. ಇವನು, ಓವೋ!, ನನ್ನನ್ನು ಬಿಟ್ಟು ಪಶ್ಚಿಮದಿಕ್ಕೆಂಬ ಸ್ತ್ರೀಯಳ ಶರೀರವನ್ನು ಅನುರಾಗದಿಂದ ಕೂಡಿ ಆಲಿಂಗಿಸಿಕೊಂಡನು. (ನನ್ನ ಪತಿಯ) ಈ ಆಲಿಂಗನವನ್ನು ನಾನು ಕಣ್ಣುಗಳಿಂದ ನೋಡಲಾರೆನು' ಎಂದು ಹಿಂತಿರುಗಿ ನಿಂತುಕೊಂಡಿರುವ ಪೂರ್ವದಿಕ್ಕೆಂಬ ಸ್ತ್ರೀಯಳು ತನ್ನ ದೊಡ್ಡದಾದ ತುರುಬಿನಲ್ಲಿ ಮುಡಿದುಕೊಂಡಿರುವ ಸೂರ್ಯಕಾಂತಿಯ ಹೂವು ಎಂಬು ಹೇಳುವ ಹಾಗೆ ಇತ್ತು. ೩೫. ಸೂರ್ಯನು ಮುಳುಗಲಾಗಿ ಕಮಲವೂ ವಿರಹಿಗಳ ಮುಖವೆಂಬ ಕಮಲವೂ ಕಾಂತಿಹೀನವಾದುವು. ಇದರ ಸಂಗಡವೇ ಕ್ಷೀರಸಮುದ್ರವೂ ಜನರ ಉತ್ಸಾಹವೆಂಬ ಕ್ಷೀರಸಮುದ್ರವೂ ನಲವಿನಿಂದ

ಕಂ॥ ಸಕಳಂಕಕಳಂಕ ಲಸ
ನ್ಮಕರಾಂಕನನೊಳಗೆ ತಾಳ್ದನೆಂದಂಧಕಮ
ರ್ದಕನ ನೊಸಲಗ್ನಿ ಹಿಮಕರ
ನ ಕರಂ ಮುತ್ತಿದವೊಲೆಸೆದುದುದಯದ ರಾಗಂ ೩೬

ಮದನನ ಘನಪ್ರತಾಪಮ
ನುದಿತಯಶಃಶ್ರೀಯುನಱಿಪುವಂತೆಸೆದುದು ಮು
ನ್ನೊದವಿದ ಕೆಂಪುಂ ಕಡೆಯೊಳ್
ಪುದಿದೆಳೆವೆಳಗುಂ ವಿಳಾಸದಿಂ ಶಶಧರನಾ ೩೭

ನಿಜಪಾದದಿಂದೆ ತುಳಿದಂ
ತ್ರಿಜಗದ್ಬಾಧಕನನಂಧಕಾರಾಂಧಕನಂ
ರಜನೀಶರೇಶ್ವರಂ ಶು
ಕ್ರಿಜಗೌರಂ ಕುವಲಯಾಧಿಪಂ ಹರಿಣಧರಂ ೩೮

ಶಂಬರಹರನಂಬುಜರಿಪು
ಬಿಂಬಮೆನಿಪ್ಪೊಂದು ಶಾಣೆಯೊಳ್ ಮಸೆಯಲ್ ತ
ನ್ನಂಬಂ ಪತ್ತಿತ್ತದಱ ಕಿ
ಲುಂಬೆನೆ ತನ್ಮಧ್ಯದಂಕಮೇಂ ಸೊಗಯಿಸಿತೋ ೩೯

ಹೆಚ್ಚುಗೊಂಡವು. ಸ್ತ್ರೀಪುರುಷರ ನೇತ್ರವೆಂಬ ನೈದಿಲೆಯೂ, ಶುಭ್ರವಾದ ನೈದಿಲೆಯೂ ಅರಳಿದುವು. ರಾತ್ರಿಯೆಂಬ ಮನೋಹರಳಾದ ಸ್ತ್ರೀ ಧರಿಸಿದ ರತ್ನಮಯ ಕರ್ಣಾಭರಣಕ್ಕೆ ಸಮಾನವಾದ ಚಂದ್ರಮಂಡಲದ ಉದಯವಾಯಿತು. ೩೬. ಕಳಂಕಿತನಾದ ಮಕರಾಂಕನನ್ನು=ಮನ್ಮಥನನ್ನು, ಮಕರದಂತಹ ಚಿಹ್ನೆಯನ್ನು, ಕಳಂಕವೆಂಬ ನೆವದಿಂದ ಚಂದ್ರನು ಅಡಗಿಸಿಕೊಂಡಿದ್ದಾನೆಂದು ಕೋಪಗೊಂಡು, ಹರನ ನೇತ್ರಾಗ್ನಿಯು ಚಂದ್ರನನ್ನು ಆಕ್ರಮಿಸಿತೋ ಎಂಬಂತೆ ಸಂಜೆಗೆಂಪು ಕಾಣಿಸಿತು. (ರಂ). ೩೭. ಚಂದ್ರನ ಮೊದಲು ಉಂಟಾದ ಕೆಂಪೂ, ಕಡೆಯಲ್ಲಿ ತುಂಬಿದ ಶುಭ್ರವಾದ ಎಳೆಯ ಬೆಳಕಿನ ಕಾಂತಿಯೂ ಕ್ರಮವಾಗಿ ಮನ್ಮಥನ ಅಧಿಕವಾದ ಮೊದಲ ಪರಾಕ್ರಮದ ರಜೋಗುಣವನ್ನೂ, ಉದಿತವಾದ ಕೀರ್ತಿಯ (ಅನಂತರದ) ಸಂಪತ್ತನ್ನೂ (ಸತ್ವಗುಣದ ಸಂಪತ್ತನ್ನೂ) ತಿಳಿಸುವ ಸೊಗಸಿನಿಂದ ಶೋಭಿಸಿತು. ೩೮. ಮುತ್ತಿನ ಹಾಗೆ ಶುಭ್ರನೂ, ಕನ್ನೈದಿಲೆಯ ಅಧಿಪತಿಯೂ-ಜಗತ್ತಿಗೆ ಅಧಿಪತಿಯೂ ಜಿಂಕೆಯನ್ನು ಧರಿಸಿದವನೂ ಆದ ಚಂದ್ರನೆಂಬ ಈಶ್ವರನು ಸ್ವರ್ಗ, ಮರ್ತ್ಯ, ಪಾತಾಳಗಳನ್ನು ಬಾಧಿಸುವಂಥ ಕತ್ತಲೆಯೆಂಬ ಅಂಧಕಾಸುರನನ್ನು ತನ್ನ ಕಿರಣಗಳಿಂದ_ಪಾದಗಳಿಂದ ತುಳಿದನು. (ಶಿವನು ಅಂಧಕಾಸುರನನ್ನು ನೆಲಕ್ಕೆ ಮೆಟ್ಟಿ ತುಳಿದು ಕೊಂದುದು ಪ್ರಸಿದ್ಧ.) ೩೯. ಮನ್ಮಥನು ಚಂದ್ರಬಿಂಬವೆಂಬ ಒಂದು ಸಾಣೆಯಕಲ್ಲಿನಲ್ಲಿ ತನ್ನ ಬಾಣವನ್ನು ಮಸೆಯಲಾಗಿ ಆ ಬಾಣದ ಕಿಲುಬು ಹತ್ತಿಕೊಂಡಿರುವುದೋ ಎಂಬಂತೆ ಆ ಚಂದ್ರಮಧ್ಯದ ಕಳಂಕ ಏನು ರಮಣೀಯ

ದ್ವಿಜರಾಜಂ ನಿಜಕರದಿಂ
ರಜನಿಯ ತಲೆಯಲ್ಲಿ ತಳಿದ ತತದೀಧಿತಿ ಶು
ಕ್ತಿಜದಕ್ಷತೆಯೆನೆ ಚೆಲ್ವಂ
ಭಜಿಸಿದುದಾ ಸುಭಗಭಗಣಮಾ ನಭದೆಡೆಯೊಳ್ ೪೦

ಚಂ॥ ಪರವಧುವೆಂದು ನೋಡದಿನನಿಲ್ಲದಿರುಳ್ ಪರಿತಂದು ಪದ್ಮಿನೀ
ತರುಣಿಯ ಕೋರಕಸ್ತನಮನಂಟಿ ಕರಾಗ್ರದೊಳಿಂದುವಲ್ಲಿ ಕಂ
ಡರಜನಿಗಳ್ಕಿ ರಾಗಮಳಿದಾಸ್ಯಕಿ ಬೆಳ್ಪಿರದೇಱ ಲಂಚವಿ
ತ್ತುರುತರ ಮೌಕ್ತಿಕಂಗಳೆನೆ ಕಂಗೊಳಿಸಿರ್ದವುವಲ್ತೆ ತಾರೆಗಳ್ ೪೧

ವ॥ ಅನಂತರಂ

ಮ॥ಸ್ರ॥ ಅಮರೇಭೇಂದ್ರಪ್ರಕಾಶಂ ಶಿಖಿಪುರವರ ಸೌಧಾಗ್ರ ಮುಕ್ತೌಘತೇಜಂ
ಯಮಹಾಸದ್ಯೋತಿ ರಾತ್ರಿಂಚರಪತಿ ಸಿತದಂಷ್ಟ್ರಾಂಕುರಂ ಪಾಶಿಹಾರೋ
ರುಮಯೂಖಂ ವಾಯು ಸತ್ಕೇತು ರುಚಿಹರ ಸುಹೃನ್ಮೌಲಿ ಹೀರಾಂಶುವೀಶಾ
ನಮಹಾದೇಹದ್ಯುತಿಶ್ರೀ ಬಳೆದು ಬಳಸಿದಂತಾಯ್ತು ಬೆಳ್ದಿಂಗಳೆತ್ತಂ ೪೨

ವಾಗಿತ್ತೋ! ೪೦. ಆಕಾಶಪ್ರದೇಶದಲ್ಲಿ ಮನೋಹರವಾದ ನಕ್ಷತ್ರಗಳ ಸಮೂಹವು ಚಂದ್ರನೆಂಬ ಬ್ರಾಹ್ಮಣಶ್ರೇಷ್ಠನು ತನ್ನ ಕಿರಣಗಳೆಂಬ ಕೈಗಳಿಂದ ರಾತ್ರಿಯೆಂಬ ಸ್ತ್ರೀಯುಳ ತಲೆಯಲ್ಲಿ ಹಾಕಿದ ಮುತ್ತಿನ ಸೇಸೆ (ಅಕ್ಷತೆ)ಯ ಹಾಗೆ ಚೆಲುವನ್ನು ಹೊಂದಿತ್ತು. ೪೧. 'ಸೂರ್ಯನಿಲ್ಲದ ರಾತ್ರಿಯಲ್ಲಿ ಚಂದ್ರನು ಬಂದು ಪರಸ್ತ್ರೀಯೆಂದು ಲೆಕ್ಕಿಸದೆ ಕಮಲಿನಿಯ ಮೊಗ್ಗೆಂಬ ಸ್ತನವನ್ನು ಕರಾಗ್ರದಿಂದ ಮುಟ್ಟಿದನು. ಅದನ್ನು ಕಂಡ ರಜನಿಗೆ ಹೆದರಿ ಚಂದ್ರನು ತನ್ನ ರಾಗವನ್ನು, ಅನುರಾಗವನ್ನು, ಕೆಂಪುಬಣ್ಣವನ್ನು ತೊರೆದು ಬಿಳಚಿಕೊಂಡು ರಜನಿಯುನ್ನು ಸಂತೈಸುವುದಕ್ಕಾಗಿ ಮುತ್ತುಗಳನ್ನು ಲಂಚವಾಗಿ ಕೊಟ್ಟನೋ ಎಂಬಂತೆ ನಕ್ಷತ್ರಗಳು ಶೋಭಿಸಿದವು! (ರಂ). ವ॥ ಅನಂತರದಲ್ಲಿ, ೪೨. ಇಂದ್ರನ ಐರಾವತದ ಕಾಂತಿಯೂ, ಅಗ್ನಿಯ ಪಟ್ಟಣದಲ್ಲಿರುವ ಉಪ್ಪರಿಗೆಮನೆಗಳ ಮುಹಡಿಗಳ ತುದಿಯಲ್ಲಿರುವ ಮುತ್ತುಗಳ ಕಾಂತಿಯೂ, ಯಮಧರ್ಮರಾಜನ ನಗುವಿನ ಕಾಂತಿಯೂ, ರಾಕ್ಷಸರ ಒಡೆಯನಾದ ನೈರುತಿಯ ಶುಭ್ರವಾದ ಕೋರೆಹಲ್ಲಿನಿಂದ ಜನಿಸಿದ ಕಾಂತಿಯೂ, ವರುಣನ ಮುತ್ತಿನಹಾರದ ಕಾಂತಿಯೂ, ವಾಯುವಿನ ಧ್ವಜವಾದ ಅಗ್ನಿಯ ಕಾಂತಿಯೂ, ಕುಬೇರನ ಕಿರೀಟದಲ್ಲಿರುವ ವಜ್ರದ ಕಾಂತಿಯೂ, ರುದ್ರನ ದೇಹಕಾಂತಿಯೂ (ಸೇರಿದ) ಸಂಪತ್ತು ಬೆಳೆದು ಸುತ್ತಿರುವುದೋ ಎಂಬಂತೆ

ವ|| ಅಂತುಮಲ್ಲದೆಯುಂ

ಚಂ|| ಶರನಿಧಿಯಲ್ಲಿ ವೃಕ್ಷತತಿಯಲ್ಲಿ ಮರುತ್ಪಥದಲ್ಲಿ ಪಂಕಜಾ
ಕರದೆಡೆಯಲ್ಲಿ ಪಳ್ಳ ತಿಳಿಜೊನ್ನಮನಂಚೆಗಳುನ್ಮದಾಳಿಗಳ್
ಸುರಮುನಿಗಳ್ಗಜಂಗಳೊಸೆದೀಂಟಲುಮಾರ್ದರಗಲ್ಕುಳುಂಗಲಾ
ತುರಿಸಿ ಕರಾಗ್ರದಿಂದುಡಿಯಲಾಟಿಪುವೆಂದೊಡದೆಂತು ಬಣ್ಣಿಪೆಂ ೪೩

ಮ|| ಇದು ದಲ್ ಚಂದ್ರಮನಲ್ತು ನರ್ತಿಪ ಮುನೀಂದ್ರಂ ನಾರದಂ ನೋಳ್ಪೊಡಿಂ
ತಿದು ತಾಂ ಲಾಂಛನವಲ್ತು ತತ್ಕರವಿರಾಜದ್ವೀಣೆ ತಾರಾಳಿಯ
ಲ್ಲಿದು ತತ್ ಸುಸ್ಫಟಿಕಾಕ್ಷಮಾಲೆ ನಿಬಿಡೋದ್ಯಚ್ಚಂದ್ರಿಕಾಶೋಭೆಯ
ಲ್ಲಿದು ತತ್ಕಂಠವಿಲಂಬಿದೇವಕುಜ ಪುಷ್ಪಸ್ರಗ್ರಜೋವಿಭ್ರಮಂ ೪೪

ವ|| ಇಂತೊಗೆತಂದ ಚಂದ್ರಚಂದ್ರಿಕೆಯಿಂ ಸಮನ್ವಿತವಾದ ಯಾಮಿನೀಪ್ರಥಮ ಯಾಮದೊಳ್ಭೂಮಿಪಲಲಾಮಂ ಸೋಮಧರನಂ ಪ್ರೇಮದಿಂದರ್ಚಿಸಿ ತತ್ಪ್ರಸಾದ ಸುಧಾ ಸೇವನಾನಂತರಂ ಸಕರ್ಪೂರ ತಾಂಬೂಲಪ್ರದಾನಪುರಸ್ಸರಂ ಪ್ರಧಾನತನೂಜನಂ ತದ್ಗೃಹಕ್ಕೆ ಬೀಳ್ಕೊಟ್ಟು ಸರ್ವಮಂಗಳಾಸಮನ್ವಿತನಮಳ ಕನಕಪರ್ಯಂಕ ಮೃದುಳತಳ್ಪಸ್ಥಳದೊಳ್ ತದ್ರತಾಂತಸಂಜಾತ ಪರವಶಪ್ರಭೂತ ಪರಮಸುಖನಿದ್ರಾನುಭವದೊಳಿರ್ಪನ್ನೆಗಂ

ಬೆಳದಿಂಗಳು ಇತ್ತು. ವ|| ಅದೂ ಅಲ್ಲದೆ ೪೩. ಸಮುದ್ರದಲ್ಲಿ ಬಿದ್ದ ಚಂದ್ರಿಕೆಯನ್ನು ಹಂಸಪಕ್ಷಿಗಳು ಹಾಲೆಂದು ತಿಳಿದು ಆತುರದಿಂದ ಪಾನಮಾಡಲು ಉದ್ಯುಕ್ತವಾದುವು. ಮರಗಳ ಗುಂಪಿನಲ್ಲಿ ಬಿದ್ದ ಬೆಳುದಿಂಗಳನ್ನು ಭ್ರಮರಗಳು ಹೂಗೊಂಚಲೆಂದು ಆತುರದಿಂದ ಎರಗಲುದ್ಯುಕ್ತವಾದುವು. ಆಕಾಶದಲ್ಲಿ ಬಿದ್ದ ಬೆಳುದಿಂಗಳನ್ನು ಮುನಿಗಳು ದೇವಗಂಗಾನದಿಯೆಂದು ಆತುರದಿಂದ ಸ್ನಾನಮಾಡಲು ಪ್ರಯತ್ನಿಸಿದರು. ಸರೋವರದಲ್ಲಿ ಬಿದ್ದುದನ್ನ ಆನೆಗಳು ಶುಭ್ರಕಮಲಗಳೆಂದು ತಿಳಿದು ಆತುರದಿಂದ ಕೀಳಲು ಪ್ರಯತ್ನಿಸಿದುವು ಎನ್ನುವಾಗ ಅದನ್ನು ಬಣ್ಣಿಸುವುದು ಹೇಗೆ ? ೪೪. ಈ ಕಾಣುವ ಚಂದ್ರನು ನಿಶ್ಚಯವಾಗಿ ಚಂದ್ರನಲ್ಲ; ನರ್ತನಮಾಡುವ ಮುನಿಶ್ರೇಷ್ಠನಾದ ನಾರದನು (ಮಧ್ಯದಲ್ಲಿರುವ) ಇದು ಕಲಂಕವಲ್ಲ, ಆ ನಾರದನ ಹಸ್ತದಲ್ಲಿ ವಿರಾಜಿಸುವ ವೀಣೆ ; ಇದು ನಕ್ಷತ್ರಸಮೂಹವಲ್ಲ, ಆ ನಾರದನ ಕಯ್ಯಲ್ಲಿರುವ ಸ್ಫಟಿಕಮಣಿಯ ಜಪಸರ ; ಇದು ನಿಬಿಡವಾದ ಚಂದ್ರಿಕೆಯ ಕಾಂತಿಯಲ್ಲ, ಆ ನಾರದನ ಕೊರಳಿನಲ್ಲಿ ಜೋತಾಡುತ್ತಿರುವ ಕಲ್ಪವೃಕ್ಷದ ಹೂವಿನ ಮಾಲೆಯ ಧೂಳಿಯ ವಿಭ್ರಮ. ವ|| ಈ ಪ್ರಕಾರವಾಗಿ ಹುಟ್ಟಿಬಂದ ಬೆಳುದಿಂಗಳಿನಿಂದ ಕೂಡಿದ ರಾತ್ರಿಯ ಮೊದಲನೆಯ ಜಾವದಲ್ಲಿ ಭೂಮಿಶ್ವರಲಲಾಮನಾದ ರಾಜಶೇಖರನು ಶಿವನನ್ನು ಪ್ರೇಮದಿಂದ ಪೂಜೆ ಮಾಡಿ, ಆ ಶಿವಪ್ರಸಾದವೆಂಬ ಅಮೃತವನ್ನು ಸೇವಿಸಿದ ಮೇಲೆ ಕರ್ಪೂರಮಿಶ್ರವಾದ ತಾಂಬೂಲವನ್ನು ಮೊದಲು ಪ್ರಧಾನನ ಮಗನಾದ ಮಿತವಚನನಿಗೆ ಕೊಡುವುದರ ಮೂಲಕ ಅವನನ್ನು ಅವನ ಮನೆಗೆ ಕಳುಹಿಸಿಕೊಟ್ಟು ಸರ್ವಮಂಗಳಾದೇವಿಯಿಂದ ಕೂಡಿದವನಾಗಿ ಶ್ರೇಷ್ಠವಾದ ಬಂಗಾರದ ಮಂಚದ ಮೇಲೆ ಇರುವ ಮೃದುವಾದ

ಮ॥ಸ್ರ॥ ಇದೆ ಪದ್ಮಾಮೋದಮಂ ತಾಳ್ದೊಲೆದು ಸುಳಿವ ಮಂದಾನಿಲಂ ಕಾಂತಿಗುಂದು
ತ್ತಿದೆ ನಕ್ಷತ್ರಾಳಿ ಶಂಖಧ್ವನಿಯಿದೆ ಶಿವಗೇಹಂಗಳೊಳ್ಕೆಂಪು ಮೂಡು
ತ್ತಿದೆ ಪೂರ್ವಾದ್ರೀಂದ್ರದೊಳ್ಚಂದ್ರಿಕೆ ಕಳೆಗಳೆದೀಗಳ್ಪಿಡಂಮೆಟ್ಟ ಪೋಗು
ತ್ತಿದೆ ತಳ್ವೇಕೀಗಳೊಲ್ದುಪ್ಪವಡಿಸು ಜಗತೀಮಾನಿನೀಜೀವಿತೇಶಾ ೪೫

ವ॥ ಎಂದುಪ್ಪವಡಮಂ ಪಾಡುವ ರಾಗಾಧರೆಯರ ರಾಗರಸಪೂರಂ ಮೇಱದಪ್ಪಿ ಮೇಲ್ವರಿಯೆ ಮೆಲ್ಲನೇಳ್ವಂತೆ ಹರಸ್ಮರಣಪೂರ್ವಕಂ ಕನತ್ಕನಕಪರ್ಯಂಕ ಮೃದುಳಶಯ್ಯಾತಳದಿನರಸಿವೆರಸೇಳ್ದು ತತ್ಪ್ರದರ್ಶಿತಾದರ್ಶದೊಳ್ ನಿಜಮುಖಾವಲೋಕನಂಗೈದನಂತರಂ ಮರಂದದೊಳ್ ಮುಳುಂಗುವ ಮಧುಕರನಂತೆ ಪರಿಮಳೋದಕದಿಂ ಜಳಕಂಬೊಕ್ಕು ಶಾರದಾಭ್ರಾಂತಳ್ತ ಶಶಾಂಕನೆನಿಸಿ ಬೆಳ್ವಟ್ಟೆಯುಂ ಪದೆದುಟ್ಟು ಶಶಿಕಳೆಯುಂ ತುಳಿವ ಕೆಂದಾವರೆಯೆನಿಸಿ ಪದತಳದಿಂ ಪಳಿಕುವಾವುಗೆಗಳಂ ಮೆಟ್ಟಿ ಪಾಲ್ಗಡಲ ಪೆರ್ದೆಱೆಯೊಳ್ ಪುಗುವ ಮರಾಳನಂತೆ ಶಶಿಕಾಂತರಚಿತಮಾದ ಪೂಜಾಗಾರಮಂ ಪೊಕ್ಕು ನಿಂದು ನಿರೀಕ್ಷಿಪಾಗಳ್ಕಣ್ಗೆ ಕೌತುಕಮನಮರ್ಚಿ ಥಳಥಳಿಸಿ ಪೊಳೆದು ಬಳಸಿ ಬಳೆದು ಬಳ್ಳಿವೆಳಗಂ ಕಱೆವೆಳೆಮುತ್ತಿನ ಮೇಲ್ಕಟ್ಟಿನ ಕೆಳಗಳವಡಿ

ಹಾಸಿಗೆಯಮೇಲೆ ಅವಳ ಸುರತದಿಂದುಂಟಾದ ಪರವಶತೆಯ ಪರಮಸುಖನಿದ್ರೆಯ ಅನುಭವದೊಡನೆ ಇದ್ದನು. ಆಗ ೪೫. "ಭೂಮಿಯೆಂಬ ಸ್ತ್ರೀಗೆ ಪ್ರಾಣಕಾಂತನೆನಿಸಿದ ರಾಜಶೇಖರನೇ, ಇದೋ ಕಮಲಗಳ ಪರಿಮಳವನ್ನು ಧರಿಸಿ ತೂಗಾಡುತ್ತ ಸಂಚರಿಸುವ ಮಂದಮಾರುತವು ಬೀಸುತ್ತಿದೆ. ನಕ್ಷತ್ರಗಳು ಕಾಂತಿಹೀನವಾಗುತ್ತಿವೆ. ಶಿವಾಲಯಗಳಲ್ಲಿ ಶಂಖಧ್ವನಿಯು ಇದೋ (ಆಗುತ್ತಿದೆ). ಶ್ರೇಷ್ಠವಾದ ಉದಯಪರ್ವತದಲ್ಲಿ ಕೆಂಪು ಹುಟ್ಟುತ್ತಿದೆ. ಈಗ ಬೆಳುದಿಂಗಳು ಕಳೆಯನ್ನು ಕಳೆದುಕೊಂಡು ಹಿಂದಕ್ಕೆಹೋಗುತ್ತಿದೆ. ಈಗ ತಡವೇಕೆ, ಪ್ರೀತಿಯಿಂದ ಎಚ್ಚರವಾಗಿ ಏಳು." ವ॥ ಹೀಗೆಂದು ಉಪ್ಪವಡಗೀತೆಯನ್ನು ಹಾಡುವ ಕೆಂದುಟಿಯ ಸ್ತ್ರೀಯರ ರಾಗರಸದ ಪ್ರವಾಹವು ಮೇರೆದಪ್ಪಿ ಆ ರಾಜಶೇಖರನ ಮೇಲೆ ಮೆಲ್ಲನೆ ಏಳುವ ಹಾಗೆ ಹರಿಯಲು, ಶಿವಸ್ಮರಣಪೂರ್ವಕವಾಗಿ ಹೊಳೆಯುತ್ತಿರುವ ಬಂಗಾರದ ಮಂಚದಲ್ಲಿರುವ ಮೃದುವಾದ ಹಾಸಿಗೆಯಿಂದ ರಾಣಿಯಾದ ಸರ್ವಮಂಗಳೆ ಸಮೇತವಾಗಿ ಮೇಲೆದ್ದು, ಆ ಸರ್ವಮಂಗಳೆಯಿಂದ ತೋರಿಸಲ್ಪಟ್ಟ ಕನ್ನಡಿಯಲ್ಲಿ ತನ್ನ ಮುಖದರ್ಶನಮಾಡಿಕೊಂಡು, ಅನಂತರ ಮಕರಂದದಲ್ಲಿ ಮುಳುಗುವ ದುಂಬಿಯಂತೆ ಸುಗಂಧಮಿಶ್ರ ಜಲದಲ್ಲಿ ಸ್ನಾನಮಾಡಿ, ಶರತ್ಕಾಲ ಮೇಘದಿಂದ ಕೂಡಿದ ಚಂದ್ರನಂತೆ ಶುಭ್ರವಸ್ತ್ರವನ್ನು ಪ್ರೀತಿಯಿಂದುಟ್ಟುಕೊಂಡು, ಚಂದ್ರಕಳೆಯನ್ನು ತುಳಿಯುವ ಕೆಂಪುಕಮಲವೋ ಎಂಬಂತೆ ಸ್ಫಟಿಕದ ಆವುಗೆಗಳನ್ನು ಪಾದದಲ್ಲಿ ಮೆಟ್ಟಿ, ಕ್ಷೀರಸಮುದ್ರದ ದೊಡ್ಡ ದೊಡ್ಡ ತರಂಗಗಳಲ್ಲಿ ಹೋಗುವ ಹಂಸಪಕ್ಷಿಯ ಹಾಗೆ ಚಂದ್ರಕಾಂತಶಿಲೆಯಿಂದ ಮಾಡಿದ ಶಿವಪೂಜಾಗೃಹವನ್ನು ಪ್ರವೇಶಿಸಿದನು. ಅಲ್ಲಿ ನಿಂತುಕೊಂಡು ನೋಡುವ ಸಮಯದಲ್ಲಿ ಕಣ್ಣಿಗೆ ಕೌತುಕವನ್ನುಂಟುಮಾಡಿ ಥಳಥಳನೆ ಹೊಳೆದು, ಸುತ್ತಲೂ ವ್ಯಾಪಿಸಿ ಬಳ್ಳಿಯಾಕಾರವಾಗಿ ಹಬ್ಬಿರುವ ಬೆಳಕನ್ನು ಹೊರಸೂಸುವ ಮುತ್ತುಗಳ ಮೇಲ್ಕಟ್ಟಿನಿಂದಲೂ, ಕೆಳಭಾಗದಲ್ಲಿ ಬಂಗಾರದ ಬೆಸುಗೆಯಿಂದ

**ಸಿದ ಮಿಸುನಿವೆಸದೆಸಕದ ಪೊಂದಾವರೆಯ ಸಾಲ್ಗಳ ಪರಿಸರದೊಳೆಳಲೆವಿಟ್ಟ ಮಣಿಮಂಜರಿಯಚ್ಚ ಕುಚ್ಚುಗಳ ಬಳಸಿ ತೊಸೆವ ಪಸುರ್ವರಲ ಲಂಬಣಮಾಲೆಯ ಕೆಲಗೆಲದೊಳ್ ಕಟ್ಟಿಬಿಟ್ಟ ಕುಸುಮ ಮಾಲಿಕೆಯ ಪಜ್ಜಳಿಪ ಬಜ್ಜರದ ಕುಟ್ಟಿಮಸ್ಥಳದ ಕರ್ಪೂರರಜದ ವೇದಿಕೆಯರಲ ಪರಾಗದ ಚಳೆಯದ ಮೃಗಮದದ ಸಾರಣೆಯೊಳ್ಕೈಗೈದ ಮುತ್ತಿನ ರಂಗವಲ್ಲಿಯ ಚೌಕದೊಳ್ ಬಾಸಣಿಸಿ ಮಡಗಿದ ಸರಸ ಸುರಭಿಸಲಿಲಸಂಭೃತ ಸ್ವರ್ಣಕುಂಭಂಗಳ ಪೊಂಬಱಿಯಾಣದೊಳಿಳಿಪಿದ ಮಿಸುನಿ ವಟ್ಟಲ್ಗಳ ತರಂಬಿಡಿದೊಪ್ಪುವ ಪೊನ್ನಗಿಣ್ಣಲ್ಗಳ ಘುಸೃಣರಸಂ ಮಿಸುಪ ಶುಕ್ತಿಗಳ ಚಂದನ ರಸಂದೀವಿದ ಶಂಖಪಾತ್ರಂಗಳ ಥಳಥಳಿಪ ಮಣಿದೀಪಂಗಳ ಪೊಱಗೆ ಚೆಲ್ಲಿದ ಕಸ್ತೂರಿಯ ರಜಕ್ಕೆ ಪರಿಮರಿಗೊಂಬ ಮದಾಳಿಮಾಳಿಕೆ ಒಳಗೆ ಪುಗದಂತೆ ನೇಮಿಸಿದ ಚಂಪಕಮುಕುಳದಾಮದ ಬಾಗಿಲ್ವಾಡದ ಬಗೆಗೊಳಿಪ ಧೂಪಾಮೋದದೊಳ್ಪೊಱೆದ ದವನದ ಸೀಗುಱಿಯುಂ ಪೊಂಬಾಳೆಯ ಚಾಮರಮುಂ ಪುಂಡರೀಕಾಪತ್ರಮುಂ ತಳಿರ ತಾಲವೃಂತಮುಂ ಅರಲಕರಂಡಕಂಗಳಂ ಕೆಲಕೆಲದೊಳ್ಪಿಡಿದು ನಿಂದ ಯಂತ್ರಪುತ್ರಿಕೆಗಳ ಸಡಗರಿಪ ವಿನಿಯೋಗದ ಮಡದಿಯರ ಪಿರಿಯ ಸಿರಿ ಕಮನೀಯಮಾಗೆ ಮನದೊಳುತ್ಸವಿಸಿ ನಡೆತಂದರ್ಚನೋಚಿತಾಸನದೊಳುತ್ತರಾಭಿಮುಖಂ ಪ್ರಸನ್ನಮುಖಂ ಪದ್ಮಾಸನಮನವಷ್ಟಂಭಿಸಿ ಋಜುಭಾವದಿಂ ಕುಳ್ಳಿರ್ದು**

ಅಳವಡಿಸಿದ್ದ ಬಂಗಾರದ ಕಮಲಗಳ ಸಾಲುಗಳಿಂದಲೂ, ಸಮೀಪದಲ್ಲಿ ಜೋಲುಬಿಟ್ಟ ರತ್ನ ಸಮೂಹದ ಗೊಂಚಲುಗಳ ಹೊಸ ಕುಚ್ಚುಗಳಿಂದಲೂ, ಸುತ್ತಲೂ ತೂಗಾಡುವ ಪಚ್ಚೆ ಮಣಿಗಳ ಇಳಿಬಿಟ್ಟ ಮಾಲೆಗಳಿಂದಲೂ, ಪಕ್ಕಗಳಲ್ಲಿ ಕಟ್ಟಿ ಬಿಟ್ಟಿರುವ ಹೂಮಾಲೆಗಳಿಂದಲೂ, ಪ್ರಜ್ವಲಿಸುವ ವಜ್ರದ ಕಲ್ಲುಗಳನ್ನು ಹಾಸಿರುವ ನೆಲಗಟ್ಟಿನ ತಳಭಾಗದಿಂದಲೂ, ಕರ್ಪೂರಧೂಳಿಯ ಜಗುಲಿಯಿಂದಲೂ, ಹೂಗಳ ಧೂಳಿಯಿಂದ ಚಳೆಗೊಳಿಸಿದ ಕಸ್ತೂರಿಯ ಸಾರಣೆಯಿಂದಲೂ, ಮುತ್ತಿನಿಂದ ಬಿಟ್ಟಿರುವ ರಂಗವಲ್ಲಿಗಳಿಂದಲೂ ಪೂಜಾಗೃಹವು ಅಲಂಕೃತವಾಗಿತ್ತು. ಮಣೆಯ ಮೇಲೆ ಪರಿಮಳೋದಕವನ್ನು ಸಿದ್ಧಪಡಿಸಿ ಬಂಗಾರಕಲಶಗಳಲ್ಲಿ ತುಂಬಿಡಲಾಗಿತ್ತು. ಬಂಗಾರದ ಹರಿವಾಣದಲ್ಲಿ ಬಟ್ಟಲುಗಳನ್ನು ಇಡಲಾಗಿತ್ತು. ಹೊನ್ನಗಿಂಡಿಗಳು ಸಾಲುಸಾಲಾಗಿ ಪ್ರಕಾಶಿಸುತ್ತಿದ್ದವು. ಕುಂಕುಮ ಕೇಸರಿಯ ಗಂಧದಿಂದ ತುಂಬಿದ ಮುತ್ತಿನ ಚಿಪ್ಪುಗಳಿದ್ದವು. ಚಂದನದ ಗಂಧದಿಂದ ತುಂಬಿದ ಶಂಖಪಾತ್ರೆಗಳಿದ್ದುವು. ರತ್ನದೀಪಗಳು ಥಳಥಳಿಸುತ್ತಿದ್ದವು. ಹೊರಗೆ ಚೆಲ್ಲಿದ ಕಸ್ತೂರಿಯ ಹುಡಿಯ ಪರಿಮಳಕ್ಕೆ ಗುಂಪುಗೂಡಿ ಬಂದ ಸೊಕ್ಕಿದ ಭ್ರಮರಗಳು ಪೂಜಾಗೃಹದ ಒಳಗೆ ಹೋಗದ ಹಾಗೆ ಸಂಪಿಗೆಯ ಮೊಗ್ಗುಗಳ ಮಾಲಿಕೆಯು ಬಾಗಿಲ್ವಾಡದಲ್ಲಿತ್ತು. ಮನೋಹರವಾಗಿರುವ ಧೂಪ (ದಶಾಂಗ)ದ ಪರಿಮಳ ವ್ಯಾಪ್ತವಾಗಿರುವ ದವನದ ಸೀಗುರಿಯನ್ನೂ, ಹೊಂಬಾಳೆಯ ಚಾಮರವನ್ನೂ, ಬಿಳಿಯ ಕಮಲದ ಛತ್ರಿಯನ್ನೂ, ಚಿಗುರಿನ ಬೀಸಣಿಕೆಯನ್ನೂ, ಹೂವಿನ ಭರಣಿಗಳನ್ನೂ ಆಯಾಭಾಗದಲ್ಲಿ ಹಿಡಿದು ನಿಂತಿರುವ ಯಂತ್ರದ ಗೊಂಬೆಗಳು ಇದ್ದವು. ಸಂಭ್ರಮಗೊಂಡು ಸೇವಿಕೆಯರಾದ ಸ್ತ್ರೀಯರ ಅಧಿಕವಾದ ಸಿರಿಯು ಮನೋಹರವಾಗಿತ್ತು. (ಇಂಥ ಶಿವಪೂಜಾಗೃಹದಲ್ಲಿ) ಉತ್ಸಾಹಗೊಂಡು ಬಂದು ಉಚಿತ ಪೂಜಾವೇದಿಕೆಯ ಮೇಲೆ, ಉತ್ತರಮುಖನಾಗಿ,

ಮ॥ಸ್ರ॥ ಘನಸದ್ಯೋಜಾತ ಮುಖ್ಯಪ್ರಭವಮಹಿಮುಖೋತ್ಪನ್ನ ಸಂಪನ್ನಿವೃತ್ತ್ಯಾ
ದಿ ನಿಯುಕ್ತೋತ್ಪತ್ತಿ ಭಾಸ್ವದ್ಗುಣಯುತ ಕಪಿಲಾದ್ಯಪ್ರಭೂತಾವನೀಪಾ
ವನರೂಪ ಶ್ರೀವಿಭೂತಿಪ್ರಭೃತಿಯನುರೆ ಪತ್ಪೂರ್ವಕಂ ಲೇಪನಂಗೈ
ದು ನಿತಾಂತಂ ತತ್ರಿಪುಂಡ್ರಂ ತೊಳಗೆ ತಳೆದು ವಿಧ್ಯುಕ್ತಮಂತ್ರಂಗಳಿಂದಂ ೪೬

ಶಿವನೇತ್ರಾಂಭೋಜಮಂ ಪೂಜಿಸಿ ಸದಮಳರುದ್ರಾಕ್ಷಮಂ ಭಕ್ತಿಯಿಂದು
ಕ್ತವಿಧಾನಂದಪ್ಪದಾ ತಾಣದೊಳೆ ಗಣನೆಯಂ ಮೀಱದೋರಂತೆ ತಾಳ್ದೊ
ಪ್ಪುವ ಹೃತ್ಪಂಕೇಜದೊಳ್ಧ್ಯಾನಿಸಿದನಿನಘನದ್ಯೋತಿಯಂ ಸಾಂಬನಂ ತಂ
ಭುವನಿಂದ್ವರ್ಧಾಂಕಕೋಟೀರನನಘನಾನಂದದಿಂ ತನ್ನೃಪಾಲಂ ೪೭

ವ॥ ಅಂತು ಜಾನಿಸಿ ಜಲಕ್ಕನೆ ತೊಳಪ ಮೂರ್ತಿಯನೊಳಗೆ ಕಂಡು ಕರಣಂಗಳ್ ಕಳೆಯೇಱೆ ಮಾನವೇಶ್ವರಂ ಮಾನಸಪೂಜೆಯಂ ರಚಿಸಿ ಬಾಹ್ಯಪೂಜೆಗೆ ಮನಂದಂದು ನಿಜೇಷ್ಟಲಿಂಗಮಂ ಕರಾಬ್ಜಪೀಠದೊಳ್ ನೆಲೆಗೊಳಿಸಿ ನಿರ್ನಿಮೇಷಾಕ್ಷಿಯಿಂ ನಿರೀಕ್ಷಿಸಿ

ನಿರ್ಮಲಮುಖದಿಂದ ಪದ್ಮಾಸನವನ್ನು ಹಾಕಿ ಕುಳಿತುಕೊಂಡನು. ೪೬. ಶ್ರೇಷ್ಠವಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನಗಳೆಂಬ ಶಿವನ ಪಂಚ ಮುಖಗಳಿಂದ ಕ್ರಮವಾಗಿ ಪೃಥ್ವಿ, ಅಪ್, ತೇಜ, ವಾಯು, ಆಕಾಶಗಳೆಂಬ ಐದು ತತ್ತ್ವಗಳು ಹುಟ್ಟಿದವು. ಈ ಪಂಚಮಹಾಭೂತಗಳಿಂದ ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯತೀತ ಎಂಬ ಐದು ಕಳೆಗಳು ಹುಟ್ಟಿದವು. ಈ ಪಂಚಕಳೆಗಳಿಂದ ಕಪಿಲ, ಕೃಷ್ಣ, ರಕ್ತ, ಶ್ವೇತ, ಚಿತ್ರಗಳೆಂಬ ಐದು ವರ್ಣಗಳಿಂದ ಕೂಡಿದ ಕಪಿಲಾ, ಭದ್ರಾ, ಸುರಭಿ, ಸುಶೀಲಾ, ಸುಮನಾ ಎಂಬ ಐದು ಹಸುಗಳು (ಗೋವುಗಳು) ಹುಟ್ಟಿದವು. ಅವುಗಳಿಂದ ಕ್ರಮವಾಗಿ ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆ ಎಂಬ ಪಂಚವಿಧವಾದ ಭಸ್ಮಗಳಾದುವು. ಅಂಥ ವಿಭೂತಿಗಳನ್ನು ಆಪಾದಮಸ್ತಕ ಪರ್ಯಂತವಾಗಿ ಉದ್ಧೂಳನ ಮಾಡಿಕೊಂಡು, ವಿಧಿಯಲ್ಲಿ ಹೇಳಿದ ಮಂತ್ರಪೂರ್ವಕವಾಗಿ ಮೂರು ಬೆರಳಿನಿಂದ ತ್ರಿಪುಂಡ್ರವನ್ನು ಮೈಯಲ್ಲಿ (ಮೂವತ್ತೆರಡು ಸ್ಥಾನಗಳಲ್ಲಿ) ಪ್ರಕಾಶಿಸುವಂತೆ ಧರಿಸಿದನು. ೪೭. ಆ ರಾಜಶೇಖರನು ಪರಶಿವನ ತ್ರಿನೇತ್ರಕಮಲಗಳನ್ನು ಪೂಜಿಸಿ, ಪರಿಶುದ್ಧವಾದ ರುದ್ರಾಕ್ಷಿಗಳನ್ನು ಭಕ್ತಿಯಿಂದ ವಿಧಿವಿಧಾನಕ್ಕನುಸರಿಸಿ ಆಯಾಯ ಸ್ಥಾನಗಳಲ್ಲಿ ಲೆಕ್ಕಾಚಾರವಾಗಿ ಕ್ರಮವಾಗಿ ಧರಿಸಿ, ಶೋಭಿಸುವ ಹೃದಯಕಮಲದಲ್ಲಿ ಸೂರ್ಯನಿಗಿಂತ ಅಧಿಕ ಕಾಂತಿಯಿಂದ ಕೂಡಿದ ಸಾಂಬಶಿವನೂ ಚಂದ್ರಾರ್ಧದ ಗುರುತುಳ್ಳ ಜಟಾಮಕುಟನಾದವನೂ ಆದ ನಿರ್ದೋಷನಾದ ಶಂಭುವನ್ನು ಆನಂದದಿಂದ ಧ್ಯಾನಮಾಡಿದನು. ವ॥ ಹೀಗೆ ಧ್ಯಾನಿಸಿ ತಟ್ಟನೆ ಪ್ರಕಾಶಮಾನವಾದ ಮೂರ್ತಿಯನ್ನು ಒಳಗೆ ಹೃದಯದಲ್ಲಿ ಕಂಡನು. ಅಂತಃಕರಣಗಳು ಕಳೆಗೊಂಡವು. (ಹೀಗೆ) ಆ ಮಾನವೇಶ್ವರನು ಮಾನಸ ಪೂಜೆಯನ್ನು ಮಾಡಿ, ಬಾಹ್ಯಪೂಜೆಗೆ ಮನಸ್ಸನ್ನು ತಂದು, ತನ್ನ ಇಷ್ಟಲಿಂಗವನ್ನು ಹಸ್ತವೆಂಬ ಕಮಲಪೀಠದಲ್ಲಿ ನೆಲೆಗೊಳಿಸಿದವನಾಗಿ ಕಣ್ಣು ಮಿಟುಕಿಸದೆ ನಿರೀಕ್ಷಿ

ಕಂ॥ ಹೃದಯದೊಳೆ ಜಾನಿಸಿದ ಪರಿ
ಜದು ನಿಜಲಿಂಗದೊಳಭಿನ್ನಮೆನಿಸಿರೆ ಕಂಡೇಂ
ಮುದವಾಂತನೊ ನರಪತಿ ಬಗೆ
ಗೊದವಿದುದದು ತೋಱೆ ಪೊಱಗೆ ಸುಖಿಸದರೊಳರೇ ೪೮

ಇದು ಮುನಿಗಳ ಮನದೊಳಬೆಳ
ಗಿದು ವಿಧಿವಿಷ್ಣುಗಳ ವಾದಮಂ ಮಾಣಿಸಿದ
ಗ್ಗದ ಪರಬೊಮ್ಮಂ ತಾನಿಂ
ತಿದು ಮೋಕ್ಷಾಮಳಫಳಪ್ರದಂ ಸುರಭೂಜಂ ೪೯

ವ॥ ಎಂದು ಕಣ್ದೀವಿ ನೋಡಿ ಮನಂದೀವಿ ನೆನೆದು ಭಾವಂದೀವಿ ಭಾವಿಸಿ ಮತ್ತೆಮತ್ತೆ ಮಾಣದೆ

ಕಂ॥ ಸುರಿವ ಮುದಶ್ರುವೆ ಚಳೆಯಂ
ಶರೀರದೊಳ್ಮೊಳೆವ ಪುಳಕಮೇ ಗುಡಿ ಲಾಸ್ಯಂ
ಕರಕಂಪಂ ಗದ್ಗದರುತಿ
ವರವಾದ್ಯಮದಾಗೆ ಶಿವನನವನಿದಿರ್ಗೊಂಡಂ ೫೦

ವ॥ ಅಂತಿದಿರ್ಗೊಂಡು

ಕಂ॥ ಶ್ರುತಿಸತಿಯ ಶಿರೋಮಣಿ ಯತಿ
ಪತಿಗಳ ಹೃದಯಾಬ್ಜದಿವ್ಯದಿನಮಣಿ ನತಸಂ
ತತಿ ಚಿಂತಾಮಣಿ ಭುವನ
ಸ್ತುತಲಿಂಗಂ ತಾನಿದೆಂದು ಪೊಗಳ್ದಂ ಭೂಪಂ ೫೧

ಮಾಡುತ್ತಿದ್ದನು. ೪೮. ಹೃದಯದಲ್ಲಿ ಧ್ಯಾನಿಸಿದ ಆ ಆಕಾರವೇ ತನ್ನ ಕರದ ಇಷ್ಟ ಲಿಂಗದಲ್ಲಿ ಅಭಿನ್ನವಾಗಿ ಕಾಣಿಸಲಾಗಿ, ಅದನ್ನು ನೋಡಿ ಆ ರಾಜಶೇಖರರಾಜನು ಎಷ್ಟು ಸಂತೋಷವನ್ನು ಅನುಭವಿಸಿದನೋ ! ಮನಸ್ಸಿನಲ್ಲಿ ತೋರಿದುದು ಹೊರಗೆ ಕಂಡಾಗ ಸುಖಪಡದವರು ಉಂಟೆ ? ೪೯. 'ಈ ಶಿವಲಿಂಗವು ಮುನಿಗಳ ಹೃದಯ ದಲ್ಲಿರುವ ಬೆಳಕು. ಬ್ರಹ್ಮ ಮತ್ತು ವಿಷ್ಣುಗಳ ವಾದವನ್ನು (ನಾ ಹೆಚ್ಚು, ತಾ ಹೆಚ್ಚೆಂಬ ವಾದವನ್ನು) ಹೋಗಲಾಡಿಸಿದ ಶ್ರೇಷ್ಠ ಪರಬ್ರಹ್ಮ. ಈ ರೀತಿ ಇದು ಮೋಕ್ಷವೆಂಬ ಶ್ರೇಷ್ಠಫಲವನ್ನು ಕೊಡುವ ಕಲ್ಪವೃಕ್ಷ'. ವ॥ ಹೀಗೆಂದು ಕಣ್ತುಂಬ ನೋಡಿ, ಮನ ತುಂಬಿ ಧ್ಯಾನಿಸಿ, ಭಾವತುಂಬಿ ಭಾವಿಸಿದನು. ಪುನಃ ಪುನಃ ತಪ್ಪದೆ ೫೦. ಸಂತೋಷ ದಿಂದ ಸುರಿಯುವ ಬಾಷ್ಪಗಳೇ ನೀರಿನ ಸೇಚನೆಯಾಯಿತು. ದೇಹದಲ್ಲಿ ಮೊಳೆತ ರೋಮಾಂಚನವೇ ಧ್ವಜವಾಯಿತು. ಕಯ್ಯ ನಡುಕವೇ ನಾಟ್ಯವಾಯಿತು. ಗದ್ಗದ ಧ್ವನಿಯೇ ಶ್ರೇಷ್ಠ ವಾದ್ಯಧ್ವನಿಯಾಯಿತು. ಈ ರೀತಿ ಶಿವನನ್ನು ಅವನು ಎದುರು ಗೊಂಡನು. ವ॥ ಈ ರೀತಿ ಕರದ ಇಷ್ಟಲಿಂಗವನ್ನು ಎದುರುಗೊಂಡು, ೫೧. ಸಕಲ ಲೋಕ ಗಳಿಂದ ಸ್ತುತಿಸಲ್ಪಡುವ ಈ ಲಿಂಗವು–ವೇದಸಮೂಹಗಳೆಂಬ ಸ್ತ್ರೀಯಳ ಶಿರೋರತ್ನ. ಯತಿಶ್ರೇಷ್ಠರುಗಳ ಹೃದಯಕಮಲಗಳಿಗೆ ಪ್ರಕಾಶಮಾನನಾದ ಸೂರ್ಯ. ನಮಸ್ಕರಿಸ

ವ॥ ನಿರ್ವ್ಯಾಜಭಕ್ತಿಯಿನಂತು ಪೊಗಳ್ದನಂತರಂ

ಲಲಿತರಗಳೆ॥ ಸುಧೆ ದಧಿ ಘೃತಂ ಮಧುಸದ್ವೈಕ್ಷವರಸಂಗಳಿಂ
ಮಧುರತರ ಭಸಿತಮಿಶ್ರಿತ ಸಿತಜಳಂಗಳಿಂ
ಹಿಮವಿಮಳ ಮಳಯಜಸುಗಂಧಾನುಲೇಪದಿಂ
ಕಮಳರಿಪು ಧವಳಕಳಮಾಕ್ಷತ ಕಳಾಪದಿಂ
ಪರಿಮಳಮಿಳಿತ ದಳಿತ ನಳಿನ ಕುಮುದಂಗಳಿಂ
ಸರಸ ಚಂಪಕ ವಕುಳ ತಿಳಕಕುಸುಮಂಗಳಿಂ
ದಮನಮರುವಕ ಬಿಲ್ವಪಲ್ಲವಸ್ತೋಮದಿಂ
ಕಮನಘೃತಸಹಿತ ಗುಗ್ಗುಳಧೂಪಧೂಮದಿಂ
ಪ್ರಚುರಶುಚಿರುಚಿರರುಚಿ ಮಣಿದೀಪಮಾಲೆಯಿಂ
ರಚಿತರುಚಿ ನಿಚಿತಶುಚಿ ಸಾಜ್ಯ ಭೋಜ್ಯಾಳಿಯಿಂ
ನವನಾರಿಕೇಳ ಕದಳೀಫಳಪ್ರಸರದಿಂ
ವಿವಿಧತರ ಸುರಭಿರಸವೀಟಕಾವಿಸರದಿಂ
ಮದನಮದಮರ್ದಿಯಂ ಸದಮಳಕಪರ್ದಿಯಂ
ಕರಿದನುಜಭಂಗನಂ ಕರುಣಾಂತರಂಗನಂ
ಶ್ರುತಿನುತಚರಿತ್ರನಂ ವಿತತಶುಭಗಾತ್ರನಂ

ಲ್ಪಡುವ ಜನಸಮೂಹದ ಚಿಂತಾರತ್ನನಾಗಿದ್ದಾನೆಂದು ಭಾವಿಸಿ ಅರಸನು ಹೊಗಳಿದನು.
ವ॥ ಈ ಪ್ರಕಾರವಾಗಿ ನಿರ್ನಿಮಿತ್ತವಾದ ಭಕ್ತಿಯಿಂದ ಸ್ತುತಿಸಿದಬಳಿಕ, ಲಲಿತರಗಳೆ॥ ಶ್ರೇಷ್ಠವಾದ ಮಹಿಮೆಗಳಿಗೆ ಆಶ್ರಯನಾಗಿಯೂ, ವೈರಿಗಳಿಗೆ ಭಯಂಕರನಾಗಿಯೂ, ತನ್ನ ತೇಜಸ್ಸಿನಿಂದ ಸೂರ್ಯನನ್ನು ಗೆದ್ದವನಾಗಿಯೂ ಇರುವ ರಾಜಶೇಖರನು ಮಧುರತರವಾದ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಶ್ರೇಷ್ಠವಾದ ಕಬ್ಬಿನ ಹಾಲುಗಳಿಂದಲೂ, ಭಸ್ಮಮಿಶ್ರಿತ ಬಿಳಿಯ ಶ್ರೇಷ್ಠ ನೀರಿನಿಂದಲೂ, ಪಚ್ಚಕರ್ಪೂರ ಪರಿಶುದ್ಧವಾದ ಶ್ರೀಗಂಧದ ಸುಗಂಧದ ಅನುಲೇಪನದಿಂದಲೂ, ಚಂದ್ರನ ಕಾಂತಿಯಂತೆ ಬಿಳಿಯವಾದ ಭತ್ತದ ಅಕ್ಷತೆ ಗಳಿಂದಲೂ, ಅರಳಿದ ಮುತ್ತು ಪರಿಮಳಯುಕ್ತವಾದ ಕಮಲ ಕನ್ನೈದಿಲೆಗಳಿಂದಲೂ, ಮನೋಹರ ಸಂಪಿಗೆ, ಬಕುಳ, ತಿಳಕಪುಷ್ಪಗಳಿಂದಲೂ, ದವನ, ಮರುಗ, ಬಿಲ್ವಪತ್ರೆ ಇವುಗಳ ಸಮೂಹದಿಂದಲೂ, ಮನೋಹರವಾದ ತುಪ್ಪ ಸಹಿತವಾದ ಗುಗ್ಗುಳಧೂಪದ ಹೊಗೆಯಿಂದಲೂ, ಅಧಿಕವಾದ ನಿರ್ಮಲವೂ ಮನೋಹರವೂ ಆದ ಕಾಂತಿಯುಳ್ಳ ರತ್ನದೀಪಗಳ ಮಾಲೆಯಿಂದಲೂ, ಮಾಧುರ್ಯಯುಕ್ತವಾಗಿ ತುಪ್ಪದಲ್ಲಿ ಮಾಡಿದ ಶುದ್ಧ ವಾದ ಭೋಜ್ಯಗಳ ಸಾಲುಗಳಿಂದಲೂ, ಹೊಸ ತೆಂಗು ಬಾಳೆಯ ಹಣ್ಣುಗಳ ಸಮೂಹ ದಿಂದಲೂ, ವಿವಿಧವಾದ ಸೌರಭ್ಯರಸಯುಕ್ತವಾದ ತಾಂಬೂಲಗಳಿಂದಲೂ, ಮನ್ಮಥನ ಮದವನ್ನು ಮರ್ದಿಸಿದವನೂ ಪರಿಶುದ್ಧನೂ ಆದ ಜಟಾಜೂಟವನ್ನುಳ್ಳ ಪರಮೇಶ್ವರ ನನ್ನು ಗಜಾಸುರಸಂಹಾರಿಯೂ, ಕರುಣೆಯಿಂದ ಕೂಡಿದ ಅಂತರಂಗವುಳ್ಳವನೂ,

ಗಿರಿಸುತಾಕಾಂತನಂ ಪರಿಹೃತಕೃತಾಂತನಂ
ಸಾರಮಹಿಮಾಕರಂ ವೈರಿಜನಭೀಕರಂ
ಭಾಜಿತದಿನಾಧಿಪಂ ರಾಜಿತಜನಾಧಿಪಂ
ರಾಜಸುತೆ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ

ವ॥ ಅನಂತರಂ ನುತಿಸಲೆಂದು ಮನಂದಂದು

ಚಂ॥ ಜಯಜಯ ದೇವದೇವ ಪುರಶಾಸನ ಶಾಸನ ಶಾಸನೈಕಚಿ
ನ್ಮಯಮಯನುತ್ಯಸಂಪದ ಸಮಾನ ಸಮಾನ ಸಮಾನತಾಂಘ್ರಿ ಸ
ನ್ಮಯ ನಯನತ್ರಯಾಂಚಿತವಪುಷ್ಕರ ಪುಷ್ಕರ ಪುಷ್ಕರಾಂಕ ನಿ
ರ್ಲಯ ಲಯಕಾಲ ಸಾಯುಧಕರಾಲ ಕರಾಲ ಕರಾಲಸದ್ಭುಜಾ ೫೨

ಪುರಹರ ದಿವ್ಯಭವ್ಯಜನಪೂಜಿತರಾಜಿತಪಾದ ವೇದಭಾ
ಸುರತುರಗಾಂಗಸಂಗತ ವಿಚಿತ್ರಚರಿತ್ರ ಪವಿತ್ರಗಾತ್ರ ನಿ
ರ್ಜರಪರಭಂಗ ತುಂಗಮಹಿಮಾಕರಭೀಕರ ಮಿತ್ರಪುತ್ರಸಂ
ಹರ ಸುರನುತ್ಯ ನಿತ್ಯಜಯ ಕಿಂಕರಶಂಕರ ಚಂದ್ರಶೇಖರಾ ೫೩

ವೇದಗಳಿಂದ ಸ್ತುತಿಸಲ್ಪಡುವ ಚರಿತ್ರೆಯನ್ನುಳ್ಳವನೂ, ವಿಶಾಲವೂ ಮಂಗಳಕರವೂ ಆದ ಶರೀರವುಳ್ಳವನೂ, ಯಮನನ್ನು ಸಂಹರಿಸಿದವನೂ, ಪಾರ್ವತೀಪತಿಯೂ ಆದ ಶಿವನನ್ನು ಪ್ರೀತಿಪೂರ್ವಕವಾಗಿ ಪೂಜಿಸಿದನು. ವ॥ ಅನಂತರ ಸ್ತೋತ್ರ ಮಾಡಲೆಂದು ಮನಸ್ಸು ಮಾಡಿ, ೫೨ ದೇವ=ಸ್ವಾಮಿಯೆ, ಜಯ, ದೇವಪುರಶಾಸನ=ಅಮರಾವತಿಗೆ ರಾಜನಾದ ಇಂದ್ರನನ್ನು, ಶಾಸನ=ದಂಡಿಸಿದ ತಾರಕಾದಿ ದೈತ್ಯರನ್ನು, ಶಾಸನ=ದಂಡಿಸಿದವನೆ, ಏಕಚಿನ್ಮಯ=ಅದ್ವಿತೀಯ ಚಿತ್‌ಸ್ವರೂಪನೆ, ಮಯನುತ್ಯ=ಮಯನಿಂದ ಸ್ತುತನಾದವನೆ, ಸಂಪದಸಮಾನ=ಐಶ್ವರ್ಯದಿಂದ ಸದೃಶನಿಲ್ಲದವನೆ, ಸಮಾನ=ಅಭಿಮಾನಶಾಲಿಗಳಾದ ಬ್ರಹ್ಮಾದಿಗಳಿಂದ, ಸಮಾನತ=ವಂದಿತವಾದ, ಅಂಘ್ರಿ=ಪಾದವುಳ್ಳವನೆ, ಸನ್ಮಯ=ಸದ್ರೂಪನೆ, ನಯನತ್ರಯಾಂಚಿತ=ಮೂರುಕಣ್ಣುಗಳಿಂದ ಕೂಡಿದ, ವಪುಃ=ಶರೀರವುಳ್ಳವನೆ, ಕರಪುಷ್ಕರ=ಪಾಣಿಪದ್ಮದಲ್ಲಿ, ಪುಷ್ಕರಾಂಕ=ಹರಿಣ ಚಿಹ್ನೆಯುಳ್ಳವನೆ (ಹರಿಣಧಾರಿಯೆ), ನಿರ್ಲಯ=ನಾಶರಹಿತನೆ, ಲಯಕಾಲ=ಪ್ರಳಯ ಕಾಲದಲ್ಲಿ, ಸಾಯುಧ=ಆಯುಧಸಹಿತವಾಗಿ, ಕರಾಲ=ಭೀಕರನಾದವನೆ, ಮತ್ತು ಕರಾಲ=ಭಯಂಕರವಾದ, ಕರ=ತೇಜಸ್ಸಿನಿಂದ ಅಥವಾ ಹಸ್ತದಿಂದ, ಅಲಸತ್‌=ಬೆಳಗುವ, ಭುಜ=ಭುಜವುಳ್ಳವನೆ, ಜಯ (ರಂ). ೫೩. ತ್ರಿಪುರಸಂಹಾರಕನೂ, ಮನೋಹರರಾದ ಪೂಜ್ಯರಿಂದ ಪೂಜೆಗೊಳ್ಳುವಂಥ ರಾಜಿಸುವ ಪಾದಗಳುಳ್ಳವನೇ, ವೇದಗಳೆಂಬ ಪ್ರಕಾಶಮಾನವಾದ ಕುದುರೆಗಳ ಅಂಗಗಳುಳ್ಳವನೇ, ವಿಚಿತ್ರವಾದ ಚರಿತ್ರೆಯನ್ನುಳ್ಳವನೇ, ಪವಿತ್ರವಾದ ದೇಹವುಳ್ಳವನೇ, ವೈರಿಗಳಾದ ರಾಕ್ಷಸಭಂಜಕನೇ, ಉನ್ನತವಾದ ಮಹತ್ತುಗಳಿಗೆ ಆಶ್ರಯನೇ, ಭಯಂಕರನೂ, ಸೂರ್ಯಪುತ್ರನೂ ಆದ ಯಮನ ಸಂಹಾರಕನೇ, ದೇವತೆಗಳಿಂದ ನುತಿಸಲ್ಪಡುವವನೇ, ನಿತ್ಯನೇ (ಶಾಶ್ವತನೇ),

ಲಲಿತವೃತ್ತ॥ ಅಂಬರಶಿರೋರುಹ ದಿಗಂಬರರವಮಾವರ ಕಳಂಬರವಿಜಾತಹರತುಂಬುರಸುಗೀತಾ
ಡಂಬರಗಣವ್ರಜ ಕುಟುಂಬಜಳಜಾತಸಖಬಿಂಬಗ ಸುಧಾಮಯ ಕದಂಬಕರಜಾಲಾ
ಲಂಬನ ನಿಜಾಂಗಧೃತಕಂಬಲಧನಂಜಯ ಮದಂಬಕ ಮಹಾಘನನಿತಂಬಗಿರಿಜಾತಾ
ಚುಂಬನ ರಸಜ್ಞ ಜಯ ಶಂಬರಹರಾಹಿತಶತಾಂಬಕಸುತಸ್ತುತ ಚಿದಂಬರದಿನೇಶಾ
೫೪

ವ॥ ಸಕಳಗಣ ಸಂದೋಹನಂದಿತ ನಂದೀಶ್ವರ ಮುಕುಂದಹಸ್ತಾಹತ ವಿತತ ಮೃದು ಮೃದಂಗಮಂಗಳರವ ಶೃಂಗಾರರಸತರಂಗಿತ ಸುರಾಂಗನಾ ಸಂಗೀತಸಂಗತ ರಂಗಸ್ಥಳಕೃತ ವಿತತ ಪಟುನಟನವಿಘಟಿತ ಜಟಾಪಟಲಗಳಿತ ಗಂಗಾತರಂಗಸೀಕರನಿಕರ ಸಿಮಿಸಿಮಿತ ನಿಟಲತಟ ಪಟು ನಯನ ಶಿಖಿ ಶಿಖೋದ್ಧಾಮಧೂಮರೇಖಾರಚಿತ ವಿಧುಂತುದಭ್ರಾಂತಿಪರಿಸ್ವಿನ್ನ ಶಶಿಶಕಲಗಳ ದಮೃತರಸವಿಸರಕಣಗಣ ಭಗಣಭಾಸುರವದನ ವಿಧುಮಂಡಲಮಂಡಿತ ರದನರುಚಿನಿಚಯ ಸಾಂದ್ರ ಚಂದ್ರಿಕಾದರದಳಿತ ಕರ್ಣಪೂರ ಕಲ್ಹಾರ ಕುಸುಮಸಮುದಂಚಚ್ಚಂಚರೀಕಮೃದುಳರವ

ಕಿಂಕರರಾದವರಿಗೆ ಸುಖವನ್ನುಂಟುಮಾಡುವವನೇ, ಚಂದ್ರಶೇಖರನೇ (ಜಯುಜಯ) ೫೪. ಆಕಾಶವೇ ಕೂದಲುಗಳಾಗಿ, ದಿಕ್ಕುಗಳೇ ಬಟ್ಟೆಗಳಾಗಿ, ಲಕ್ಷ್ಮೀವರನಾದ ವಿಷ್ಣುವೇ ಬಾಣವಾಗಿ, ಸೂರ್ಯಪುತ್ರನಾದ ಯಮನನ್ನು ಸಂಹರಿಸಿದ, ತುಂಬುರರೆಂಬ ಸ್ವರ್ಗಲೋಕದ ಸಂಗೀತಗಾರರ ಸಂಗೀತದ ಆಡಂಬರವುಳ್ಳ, ಪ್ರಮಥರ ಗುಂಪೇ ಕುಟುಂಬ ವಾಗುಳ್ಳ, ಕಮಲಸಖನಾದ ಸೂರ್ಯಮಂಡಲದಲ್ಲಿರುವ, ಅಮೃತಮಯ ಸಮುದಾಯ ವೆನಿಸಿದ ಚಂದ್ರನ ಕಿರಣರಾಶಿಗೆ ಆಶ್ರಯನಾದ, ಕಂಬಲನೆಂಬ ಗಾಯಕನನ್ನು ಕಿವಿಯಲ್ಲಿ ಧರಿಸಿದ, ಅಗ್ನಿಸಹಿತವಾದ ಫಾಲನೇತ್ರವುಳ್ಳ ಶ್ರೇಷ್ಠವಾದ ನಿತಂಬವುಳ್ಳ ಪಾರ್ವತೀದೇವಿಯ ಅಧರಚುಂಬನದ ರಸಜ್ಞನೇ, ಮನ್ಮಥಹರನೇ, ದೇವೇಂದ್ರಪುತ್ರನಾದ ಅರ್ಜುನನಿಂದ ಸ್ತುತಿಸಲ್ಪಟ್ಟವನೇ, ಚಿದಂಬರನೇ, ಪರಶಿವನೇ ಜಯ ಜಯ. ವ॥ ಸಮಸ್ತ ಪ್ರಮಥರ ಸಮೂಹದಿಂದ ಸಂತೋಷಿಸುವವನೇ, ನಂದೀಶ್ವರ ವಿಷ್ಣು ಅವರುಗಳ ಕೈಯಿಂದ ಬಾರಿಸ ಲ್ಪಡುವ ಮೃದುವಾದ ಮೃದಂಗದ ಮಂಗಳಕರಧ್ವನಿಯುಳ್ಳವನೇ, ಶೃಂಗಾರರಸದಿಂದ ತುಂಬಿದ ದೇವತ್ತಾಸ್ತ್ರೀಯರ ಸಂಗೀತದಿಂದ ಕೂಡಿದ ನಾಟ್ಯರಂಗಸ್ಥಳ. ಅದರಲ್ಲಿ ವಿಸ್ತಾರವಾದ ಸಮರ್ಥವಾದ ತಾಂಡವನಾಟ್ಯಮಾಡುವ ಕಾರಣದಿಂದ ಬಿಚ್ಚಿದ ಜಟಾ ಜೂಟಗಳ ಗುಂಪಿನಿಂದ (ಜಡೆಯಲ್ಲಿರುವ) ಗಂಗೆಯ ಅಲೆಗಳ ತುಂತುರುಹನಿಗಳು ಉದುರುತ್ತಿವೆ. ಆ ಕಾರಣದಿಂದ ಆ ತುಂತುರಗಳು ಸಮರ್ಥವಾದ ಅಗ್ನಿನೇತ್ರದ ಅಗ್ನಿಯ ಮೇಲೆ ಬಿದ್ದು ಸಿಮಿ ಸಿಮಿಯೆಂಬ ಧ್ವನಿ ಹುಟ್ಟಿದೆ. (ಅದೇ ಕಾರಣದಿಂದ) ಅತ್ಯಧಿಕ ವಾದ ಹೊಗೆಸಾಲು ರಾಹುವಿನಂತೆ ಕಾಣುತ್ತಿದೆ. ಅದಕ್ಕೆ ಹೆದರಿದ ಜಡೆಯಲ್ಲಿರುವ ಚಂದ್ರ ಬೆವರಿಕೊಂಡ ಹಾಗೆ ಅದರಿಂದ ಅಮೃತರಸದ ಹನಿಗಳು ಜಾರುತ್ತ ಪ್ರಕಾಶ ಮಾನವಾದ ಶಿವನ ಮುಖವೆಂಬ ಚಂದ್ರಮಂಡಲವು ಅಲಂಕಾರಗೊಂಡಿದೆ. ಅವನ (ಶಿವನ) ಹಲ್ಲುಗಳ ಕಾಂತಿಯು ಸಮೂಹವೆಂಬ ದಟ್ಟವಾದ ಬೆಳದಿಂಗಳು ಹರಡಿದೆ. ಆ

ಮಿಳಿತ ಕರ್ಣಾಧೃತ ಕಂಬಳಾಶ್ವತರ ಸರಸಸಂಗೀತಾಕರ್ಣನ ಕೌತುಕಾಂತರಂಗ ಕರಕುರಂಗತುಂಗ ಶೃಂಗಾಗ್ರಘರ್ಷಣಚಕಿತ ನಿಜಕರ ಕಟಕೋತ್ಫಣಿತ ಫಣಿಫಣಾಮಣಿಘೃಣಿಗಣಾರುಚಿತ ನಿಜಭು ಜಾಲಂಬಿತಗಜದನು ಜಾಜಿನಾಂಬರವಿಕಟತಾಂಡವಾಡಂಬರದೇವ ಜಯಜಯಾ. ಇಂತು ಸಾಹಿತ್ಯ ಸರ್ವಜ್ಞಂ ಸರ್ವಜ್ಞನಂ ಯಂತ್ರವಾಹಕಂಗೆ ಮಂತ್ರಪುಷ್ಪವನಿತ್ತು ನಿರ್ವ್ಯಾಜಭಕ್ತಿಯಿಂ ಪ್ರದಕ್ಷಿಣಂಗೆಯ್ದು ಪೊಡಮಟ್ಟು ಸಂದಣಿಪ ಸಾತ್ವಿಕಂಗಳಿಂ ಕಂಗೊಳಿಸಿ ಪುರುಷಪುಂಗವಂ ಪುಂಗವಧ್ವಜಂಗಾತ್ಮಾರ್ಪಣಂಗೈದಿನಿಸಾನುಂ ಪೊಳ್ತನಿಮಿಷಾಕ್ಷಿಯಿಂ ನಿರೀಕ್ಷಿಸಿ

ಕಂ॥ ಪಳುಕುಗೊಡದೊಳಗೆ ಪೊಱಗು
ಜ್ವಳಿಪಂತಜ್ಯೋತಿಯಂತಿರೊಳಗಂ ಪೊಱಗಂ
ಬೆಳಪ ಮನೋಮಧ್ಯ ಸಮು
ಜ್ವಳಲಿಂಗಮನರಸನಳ್ಕಱಿಂ ಜಾನಿಸಿದಂ ॥೫೫

ಬೆಳದಿಂಗಳಿಂದ ಕಿವಿಯಲ್ಲಿ ಧರಿಸಿದ್ದ ನೈದಿಲೆಯ ಹೂವಿನಲ್ಲಿದ್ದ ಭ್ರಮರಗಳು ಮೇಲೆದ್ದು ಮನೋಹರವಾದ ಝೇಂಕಾರರವದಿಂದ ಕಿವಿ ತುಂಬಿದೆ. ಅಂಥ ಕಿವಿಗಳಲ್ಲಿ ಧರಿಸಲ್ಪಟ್ಟ ಕಂಬಳಾಶ್ವತರರೆಂಬ ಸಂಗೀತಗಾರ ರಸಭರಿತ ಸಂಗೀತ ಕೇಳುವುದರಲ್ಲಿ (ಶಿವನು) ಕುತೂ ಹಲಪಡುತ್ತಿರುವ . ಮನಸ್ಸಿನಿಂದ ಕೂಡಿದ್ದಾನೆ. ಹಸ್ತದಲ್ಲಿರುವ ಜಿಂಕೆಯ ಉದ್ದವಾದ ಕೋಡುಗಳು ಶಿವನು ಕಂಕಣರೂಪವಾಗಿ ಕೈಯಲ್ಲಿ ಧರಿಸಿರುವ ಹಾವುಗಳಿಗೆ ಘರ್ಷಣೆ ಗೊಂಡು ಭಯಪಟ್ಟು ಹೆಡೆಯೆತ್ತಿವೆ. ಆ ಹೆಡೆಯಲ್ಲಿರುವ ರತ್ನಗಳ ಕಾಂತಿಯ ಪರಂಪರೆ ಯಿಂದ ಅವನ ತೋಳುಗಳಲ್ಲಿ ಜೋತಾಡುತ್ತಿದ್ದ ಗಜಾಸುರನ ಚರ್ಮ ಕೆಂಪಾದ ವಸ್ತ್ರ ದಂತಾಗಿದೆ. ಇಂತಹ ತಾಂಡವಾಡಂಬರದಿಂದ ಕೂಡಿದ ಸ್ವಾಮಿಯೇ, ಜಯ ಜಯ. ಈ ಪ್ರಕಾರವಾಗಿ ಸಾಹಿತ್ಯಸರ್ವಜ್ಞನಾದ ಆ ರಾಜಶೇಖರನು ಸರ್ವಜ್ಞನಾದ ಪರ ಮಾತ್ಮನನ್ನು ಮರೆಸಿ, ಜಗತ್ತೆಂಬ ಯಂತ್ರದ ವಾಹಕನಾದ ಅವನಿಗೆ ಮಂತ್ರಪುಷ್ಪವನ್ನು ಸಮರ್ಪಿಸಿ, ನಿರ್ವ್ಯಾಜವಾದ ಭಕ್ತಿಯಿಂದ ಪ್ರದಕ್ಷಿಣೆಯನ್ನು ಹಾಕಿ ನಮಸ್ಕರಿಸಿ, ಸಾಂದ್ರ ವಾದ ಸಾತ್ವಿಕಭಾವದ ಚಿಹ್ನೆಗಳಾದ ಆನಂದಬಾಷ್ಪ, ಪುಳಕ ಗದ್ಗದಕಂಠಾದಿಗಳಿಂದ ಮನೋಹರನಾಗಿ, ಆ ಪುರುಷಶ್ರೇಷ್ಠನು ನಂದೀಶ್ವರಧ್ವಜಚಿಹ್ನಾಂಕಿತನಾದ ಪರಮೇಶ್ವರನಿಗೆ ಆತ್ಮಾರ್ಪಣೆ ಮಾಡಿ ಸ್ವಲ್ಪ ಹೊತ್ತು ನಟ್ಟದೃಷ್ಟಿಯಿಂದ ನೋಡಿದನು. ೫೫. ಆ ರಾಜಶೇಖರನು ಸ್ಫಟಿಕಮಯವಾದ ಘಟದೊಳಗೆ ಇರುವ ಜ್ಯೋತಿ (ಸ್ಫಟಿಕ ಘಟಜ್ಯೋತಿ)ಯ ಹಾಗೆ ಒಳಗೂ ಹೊರಗೂ ಬೆಳಗುತ್ತ ಮನೋಮಧ್ಯದಲ್ಲಿ ತೇಜೋ ಮಯನಾಗಿ ಪ್ರಕಾಶಿಸುವ ಪ್ರಾಣಲಿಂಗವನ್ನು ಪ್ರೀತಿಯಿಂದ ಧ್ಯಾನಿಸಿದನು. (ವೀರಶೈವ ಸಿದ್ಧಾಂತದ ರೀತಿಯಲ್ಲಿ ಬಹಿರಂಗದ ಲಿಂಗಪೂಜೆ ಇಷ್ಟಲಿಂಗಪೂಜೆ. ಒಳಗೆ ಪ್ರಾಣ- ಭಾವಲಿಂಗಗಳಲ್ಲಿ ಅದೇ ಲಿಂಗವನ್ನು ಪ್ರತಿಷ್ಠಾಪಿಸಿ ಧ್ಯಾನಾಭಿಮುಖದಲ್ಲಿ ಮಾಡುವ

ಅಣಿಯರವರ್ಮಭವನ ಸುಗಣಮು
ನೆಣೆಪಂತಿರೆ ನೆಚ್ಚಿ ಮಚ್ಚಿ ತನ್ಮಹಿಮೆಗಳಂ
ಗುಣಿಪಂತಿರೆ ಜನಪಾಲಾ
ಗ್ರಣಿ ಪಂಚಾಕ್ಷರಮನವಮು ಜಪಿಸಿದನಾಗಳ್ ೫೬

ವ॥ ಇಂತು ಪೂಜಾಜಪಾದಿಗಳಂ ಸಾಂಗಮೆನೆ ರಚಿಸಿ ಮತ್ತಮಿರದೆ

ಚಾಮರ॥ ಷಡಕ್ಷರಾತ್ಮಕಂ ಷಡೂರ್ಮಿವರ್ಜಿತಂ ಷಡಂಗಗಂ
ಷಡಕ್ಷರಪ್ರಭಾವ ಸದ್ಗುಣಂ ಷಡಧ್ವವಲ್ಲಭಂ
ಷಡಕ್ಷರಾಂಗಸಾಕ್ಷಿಣಂ ಷಡಬ್ಜಕರ್ಣಿಕಾಸನಂ
ಷಡಕ್ಷರಪ್ರಭುಂ ಶಿವಂ ಭವಂತಮನ್ವಹಂ ಭಜೇ ೫೭

ಮಂದಾಕ್ರಾಂತ॥ ನಿತ್ಯಾನಂದಂ ನಿಯತವರದಂ ನಿಷ್ಕಳಂ ನೀಲಕಂಠಂ
ಸತ್ಯಾರಾಮಂ ಸರಸಹೃದಯಂ ಸದ್ಘನಜ್ಯೋತಿರಂಗಂ
ಶ್ರುತ್ಯಾರೂಢಂ ಶುಭಗುಣಯುತಂ ಸಿದ್ಧಸಿದ್ಧಾಂತಸಾರಂ
ಭೃತ್ಯಾಧಾರಂ ಭುವನಶರಣಂ ತ್ವಾಂ ಶರಣ್ಯಂ ಪ್ರಪದ್ಯೇ ೫೮

ಪೂಜೆ ಪ್ರಾಣಲಿಂಗಪೂಜೆಯೆನಿಸಿದೆ.) ೫೬. ಆ ಸಮಯದಲ್ಲಿ ಜನಪಾಲಾಗ್ರಗಣ್ಯನಾದ ರಾಜಶೇಖರನು ಶಿವನ ಸದ್ಗುಣಗಳನ್ನು ಚೆನ್ನಾಗಿ ಗಣನೆ ಮಾಡುವ ಹಾಗೆಯೂ, ಅವನ ಮಹಿಮಾತಿಶಯವನ್ನು ನಂಬಿ, ಶ್ಲಾಘಿಸಿ, ಗುಣಾಕಾರ ಮಾಡುವ ಹಾಗೆಯೂ, ಪಂಚಾಕ್ಷರಿಯೆಂಬ (ನಮಃ ಶಿವಾಯ ಎಂಬ) ಮಂತ್ರವನ್ನು ಆಗ ಜಪಿಸಿದನು. ವ|| ಈ ರೀತಿ ಪೂಜೆ, ಜಪ ಮೊದಲಾದುವನ್ನು ಯಥಾಸಾಂಗವಾಗಿ ಮಾಡಿ ಪುನಃ, ೫೭. 'ಓಂ ನಮಃ ಶಿವಾಯ' ಎಂಬ ಷಡಕ್ಷರಮಂತ್ರ ಸ್ವರೂಪನೂ, ಕ್ಷುತ್ (ಹಸಿವು), ಪಿಪಾಸೆ (ನೀರಡಿಕೆ), ಶೋಕ, ಮೋಹ, ಜರಾ, ಮರಣಗಳೆಂಬ ಷಟ್‌ಊರ್ಮಿಗಳಿಂದ ದೂರನಾದವನೂ, ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧ, ಸ್ವತಂತ್ರತ್ವ, ಅನಂತತ್ವ, ಅಲುಪ್ತತ್ವ (ಅಥವಾ ಆತ್ಮಾಂಗ, ವ್ಯೋಮಾಂಗ, ಅನಿಲಾಂಗ, ಅನಲಾಂಗ ಜಲಾಂಗ, ಭೂಮ್ಯಂಗ)ಗಳೆಂಬ ಆರು ಅಂಗಗಳುಳ್ಳವನೂ, ಷಡಕ್ಷರಾತ್ಮಕವಾದ ಮಂತ್ರ ಪ್ರಭಾವದಿಂದ ಕೂಡಿದ ಸದ್ಗುಣವುಳ್ಳವನೂ, ಭುವನಾಧ್ವ, ಪದಾಧ್ವ, ಮಂತ್ರಾಧ್ವ, ತತ್ತ್ವಾಧ್ವ, ಕಲಾಧ್ವ, ವರ್ಣಾಧ್ವಗಳೆಂಬ ಆರು ಅಧ್ವಗಳಿಗೆ ಪತಿಯಾದವನೂ, ಷಡಕ್ಷರೀಮಂತ್ರದ ಋಷಿ, ಛಂದಸ್ಸು, ದೇವತೆ, ಬೀಜ, ಶಕ್ತಿ, ಕೀಲಕಗಳೆಂಬ ಅಂಗಗಳಿಗೆ ಸಾಕ್ಷಿಭೂತನಾಗಿರುವವನೂ, ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ-ಎಂಬ ಆರು ಚಕ್ರಸ್ಥಾನದಲ್ಲಿರುವ ಕಮಲದ ಮಧ್ಯದಲ್ಲಿರುವ ಕರ್ಣಿಕೆಯಲ್ಲಿ ವಾಸಿಸುವವನೂ, ಷಡಕ್ಷರಮಂತ್ರಕ್ಕೆ ಪ್ರಭುವಾಗಿರುವವನೂ ಆದ ಶಿವನೇ ನಿನ್ನನ್ನು ನಾನು ಭಜಿಸುತ್ತೇನೆ. ೫೮. ನಿತ್ಯವೂ ಆನಂದಸ್ವರೂಪವಾಗಿ, ನಿರತವೂ ವರಪ್ರದಾಯಕನಾಗಿ, ಕಳಂಕರಹಿತನಾಗಿ, ಕೊರಳಿನಲ್ಲಿ ಕಪ್ಪುಳ್ಳವನಾಗಿ, ಸತ್ಯಕ್ಕೆ ಆಶ್ರಯನಾಗಿಯೂ, ರಸಭರಿತವಾದ ಹೃದಯವುಳ್ಳವನಾಗಿಯೂ,

ಶ್ಲೋಕ॥ ಮನೋಜಯಮಹಾಯೋಗೋ
ರಾಜಾಂಕೋ ಮದಸುಪ್ರಿಯಃ ೫೯

ವ॥ ಎಂದು ಪೊಗಳ್ದು ಶರಣ್ಬೊಕ್ಕು ತತ್ಪಾದಾಂಬುಪ್ರಸಾದ ಸೇವನಂಗೈದು ಸಕಲ ಮಾಹೇಶ್ವರೆರಂ ಧನಕನಕ ಸುವಸನ ಮಣಿಭೂಷಣಾದಿಗಳಿಂ ತುಷ್ಟಿವಡಿಸಿ ಪೂಜಿಸಿ ತತ್ಪ್ರಸನ್ನತೆಯುಂ ಪಡೆದನಂತರಂ ನೈಪಥ್ಯನಿಕೇತನಕ್ಕೆ ನಡೆತಂದಿಕ್ಕಿದ ಕನಕಪರ್ಯಂಕ ಧವಳತಳ್ಪಮನಲಂಕರಿಸಿ ಸುಗುಣಾಲಂಕಾರನಲಂಕಾರಮಂ ತಳೆಯಲುಜ್ಜುಗಿಸಿರ್ಪಿನಮೊರ್ವನಲಂಕರಣದ ಚತುರಂ ಬಂದು ಮುಖಕಮಳಕ್ಕೆಳೆವೆಣ್ಗಳ ದಿಟ್ಟಿ ತಾಗದಂತೆ ರಕ್ಕೆಗಿಡುವವೊಲ್ ವಜ್ರಮಯ ಮಕುಟಮನ ಮರ್ಚಿಯುಂ ಮೊಗಸಿರಿಯನಾಲಿಂಗಿಸಿದೆಳವೆಱೆಯೆನಿಸಿ ಸಿತಭಸಿತತಿಳಕಮಂ ಪಣೆಯೊಳಳವಡಿಸಿಯುಂ ಕಟಾಕ್ಷರುಚಿಲತೆಗೆ ಮುಗುಳ ಮಂಜರಿಯಂ ಪಡೆವಂತೆ ಮೌಕ್ತಿಕಚತುಷ್ಕಮಂಡಿತ ಕರ್ಣಾಭರಣಮಂ ಧರಿಸಿಯುಂ ಹೃದಯಮಧ್ಯದೊಳಿರ್ಪ ಮದನಹರನಂ ಮಲ್ಲಿಗೆಯ ಮಾಲೆಯಿಂದರ್ಚಿಪಂತೆ ಪೇರುರದೊಳ್ ತೋರಹಾರಮಂ ಕೆಳೆಗೊಳಿಸಿಯುಂ ಮಂದಾಕಿನಿಯ ಡಿಂಡೀರ

ಶ್ರೇಷ್ಠವಾದ ಜ್ಯೋತಿಸ್ವರೂಪನಾಗಿಯೂ, ವೇದಾದಿಗಳಿಂದ ಪ್ರತಿಪಾದಿಸಲ್ಪಡುವವನಾಗಿಯೂ, ಮಂಗಳಕರವಾದ ನಿತ್ಯತ್ವ ನಿತ್ಯತೃಪ್ತಿತ್ವಾದಿ ಗುಣವಿಶಿಷ್ಟನಾಗಿಯೂ, ಶುದ್ಧವಾದ (ಶಕ್ತಿವಿಶಿಷ್ಟಾದ್ವೈತ) ಸಿದ್ಧಾಂತ ಸಾರಭೂತನಾಗಿ, ಭೃತ್ಯರಾದವರುಗಳಿಗೆ ಆಧಾರಭೂತನಾಗಿ ಇರುವ ನಿನ್ನನ್ನು ಶರಣುಹೊಂದುತ್ತೇನೆ.
೫೯. ಮನ್ಮಥ ಮತ್ತು ಯಮ ಇವರನ್ನು ನಾಶಮಾಡಿದಂಥವನೂ, (ಮನೋಜ + ಯಮ + ಹಾ) ವೃಷಭನನ್ನು ಧ್ವಜದಲ್ಲಿ ಚಿಹ್ನೆಯಾಗುಳ್ಳವನೂ, ನಿರಹಂಕಾರಿಗಳಲ್ಲಿ (ಅಮದ) ಒಳ್ಳೆಯ ಪ್ರೀತಿಯುಳ್ಳವನೂ (ಆದ ನಿನ್ನನ್ನು ಶರಣುಹೋಗುತ್ತೇನೆ). [ಮನಸ್ಸನ್ನು ಗೆದ್ದವರಲ್ಲಿ ಮಹತ್ತರವಾದ ಯೋಗ ಅಂದರೆ ಸಂಬಂಧವುಳ್ಳವನಾಗಿ, ಚಂದ್ರನನ್ನು ಜಟಾಜೂಟದಲ್ಲಿ ಧರಿಸಿದ ಚಿಹ್ನೆಯುಳ್ಳವನಾಗಿ, ನನ್ನ ಪ್ರಾಣಗಳಿಗೆ ಪ್ರಿಯನಾಗಿ ಇರುವ (ಮತ್+ಅಸು+ಪ್ರಿಯ) ಅಂಥವನನ್ನು ಶರಣು ಹೋಗುತ್ತೇನೆ.]
ವ॥ ಹೀಗೆಂದು ಹೊಗಳಿ ಶರಣುಹೊಕ್ಕು ಆ ಪರಶಿವನ ಪಾದೋದಕ ಪ್ರಸಾದಸೇವನೆ ಮಾಡಿ, ಸಮಸ್ತ ಮಾಹೇಶ್ವರರುಗಳನ್ನು ಸುವಸ್ತ್ರ, ಬಂಗಾರ, ರತ್ನಾಭರಣಾದಿಗಳಿಂದ ಸಂತುಷ್ಟರಾಗುವ ಹಾಗೆ ಪೂಜಿಸಿ ತುಷ್ಟಿಗೊಳಿಸಿ, ಅವರುಗಳ ಪ್ರಸಾದವನ್ನು ಹೊಂದಿದ ಬಳಿಕ ಅಲಂಕಾರದ ಮನೆಗೆ ಬಂದು, ಅಲ್ಲಿ ಹಾಕಿದ ಬಂಗಾರದ ಮಂಚದ ಮೇಲೆ ಹಾಕಿದ ಬಿಳಿಯ ಹಾಸಿಗೆಯ ಮೇಲೆ ಕುಳಿತು, ಸದ್ಗುಣಗಳಿಂದ ಅಲಂಕಾರಪ್ರಾಯನಾದ ಆ ರಾಜಶೇಖರನು ಅಲಂಕಾರವನ್ನು ಮಾಡಿಕೊಳ್ಳಲುದ್ಯುಕ್ತನಾದನು. ಅಷ್ಟರಲ್ಲಿ ಒಬ್ಬ ಅಲಂಕಾರಮಾಡುವುದರಲ್ಲಿ ಕುಶಲನಾದವನು ಬಂದು ಕಮಲಸದೃಶವಾದ ಮುಖಕ್ಕೆ ಯೌವನವತಿಯರಾದ ಸ್ತ್ರೀಯರ ದೃಷ್ಟಿಯು ತಗುಲದಂತೆ, ರಕ್ಷಣೆಗೆ ಇರುವ ಹಾಗೆ ವಜ್ರಮಯವಾದ ಕಿರೀಟವನ್ನು ತಲೆಯಲ್ಲಿ ಧರಿಸಿದನು. ಮುಖದ ಸಂಪತ್ತನ್ನು ಆಲಿಂಗನ ಮಾಡಿಕೊಂಡಂತಿರುವ ಬಾಲಚಂದ್ರನೋ ಎನ್ನುವಂತಿರುವ ಶುಭ್ರವಾದ ಭಸ್ಮದ ತಿಲಕ

ಪಿಂಡಂ ಬಳಸಿದೈರಾವತಕರಿಕರಾಗ್ರದ ಸಿರಿಯಂ ಕೈಗೊಳಿಸಿ ಮುಂಗೈಯೊಳ್ಮುತ್ತಿನ ಕಂಕಣ ಮನಿಕ್ಕಿಯುಂ ಫುಲ್ಲಶರನ ಪಲ್ಲವಶರಕ್ಕೆ ಕೆಂಗಱಿಗಟ್ಟಿದಂತೆ ಕೆಂಬೆಳಗಂ ಕಱಿವ ಕೆಂಬೆರಲುಂಗುರಮನಂಗುಲಿಯೊಳ್ತೊಡರ್ಚಿಯುಂ ತನುರುಚಿಯಂ ಪಡೆಯಲೆಳಸಿ ತರಣಿಕಿರಣಮಪ್ಪಿದಂದದವಂ ನಿರವಿಸಿ ಕನಕಕವಚಮಂ ತುಡಿಯಿಸಿಯುಂ ನಳಿನನಾಳಮಂ ಬಳಸಿ ತಳ್ತಳಿಮಾಲೆಯ ಲೀಲೆಯ ನೊಳಕೈಸಿ ನೀಲರತ್ನದ ಕಡೆಯುಮಂ ಪದಾಗ್ರದೊಳಂದಂಗೊಳಿಸಿಯುಮತಿಸಂತಸದಿ ನಿಂತು ಕಂತುವಂ ಪಸದನಂಗೊಳಿಪ ವಸಂತನಂತವಂ ಪಸದನಂಗೊಳಿಸಲೊಡನೆ

ಚಂ॥ ತೊಳಗಿದನಿಂದ್ರನಂದನನ ಮೈಸಿರಿಯಂ ಜಱಿದಾ ಮೃಗಾಂಕನು
ಜ್ವಳಮನಿಳಿಂಕೆಗೆಯ್ದು ನಳಕೂಬರನಗ್ಗದ ಗಂಡಗಾಡಿಯಂ
ಪಳಿದು ಮನೋಜನೋಜೆಯ ವಿಳಾಸಮನೇಳಿಸಿ ಕಾಯಕಾಂತಿ ಮಂ
ಜುಳವದನಾಂಶು ವಿಭ್ರಮವಿಳಾಸವಿರಾಜಿತ ರಾಜಶೇಖರಂ ೬೦

ವನ್ನು ಹಣೆಯಲ್ಲಿ ಇಟ್ಟನು. ಕಡೆಗಣ್ಣುಗಳ ಕಾಂತಿಯೆಂಬ ಬಳ್ಳಿಗೆ ಮೊಗ್ಗೆಗಳ ಗೊಂಚಲನ್ನುಂಟುಮಾಡಿದ ಹಾಗೆ ನಾಲ್ಕು ಮುತ್ತುಗಳಿಂದ ಅಲಂಕಾರವಾಗಿ ಮಾಡಲ್ಪಟ್ಟ ಕಡಕುಗಳನ್ನು ಕಿವಿಯಲ್ಲಿ ಇಟ್ಟನು. ಹೃದಯಕಮಲದಲ್ಲಿರುವ ಶಿವನನ್ನು ಮಲ್ಲಿಗೆ ಹೂಮಾಲೆಗಳಿಂದ ಅರ್ಚಿಸಿದ ಹಾಗೆ, ಅಗಲವಾದ ಅವನ ಎದೆಯಲ್ಲಿ ಇಪ್ಪತ್ತೇಳು ಮುತ್ತುಗಳುಳ್ಳ ಹಾರವನ್ನು ಸಂಬಂಧಗೊಳಿಸಿದನು (ಹಾಕಿದನು). ದೇವಗಂಗಾ ನದಿಯ ನೊರೆಯ ಉಂಡೆಗಳು ಸುತ್ತಿಕೊಂಡಿರುವ ಹಾಗೆ ಇರುವ ಐರಾವತವೆಂಬ ದೇವಗಜದ ಸೊಂಡಿಲಿನ ಸಿರಿಯನ್ನು ಉಂಟುಮಾಡಿರುವಂತಿರುವ ಕೈಗಳ ಮುಂಭಾಗದಲ್ಲಿ (ಮುಂಗೈಯಲ್ಲಿ) ಮುತ್ತುಗಳ ಕಡಗವನ್ನು ಧರಿಸಿದನು. ಮನ್ಮಥನ ಚಿಗುರಿನ ಬಾಣಕ್ಕೆ (ಚೂತಾಂಕುರಕ್ಕೆ) ಕೆಂಪುಗರಿಗಳನ್ನು ಕಟ್ಟಿದ ಹಾಗೆ ಕೆಂಪಾದ ಕಾಂತಿಯನ್ನು ಪ್ರಸಾರಗೊಳಿಸುವ ಕೆಂಪಿನ ಹರಳ ಉಂಗುರವನ್ನು ಬೆರಳಿನಲ್ಲಿ ತೊಡರಿಸಿದನು. (ಆ ರಾಜಶೇಖರನ) ದೇಹಕಾಂತಿಯನ್ನು ಸೂರ್ಯಕಿರಣಗಳು ಹೊಂದಬೇಕೆಂದು ಬಯಸಿ, ಸೂರ್ಯಕಿರಣಗಳು ಅಪ್ಪಿಕೊಂಡ ರೀತಿಯನ್ನುಂಟುಮಾಡಿ, ಬಂಗಾರದ ಅಂಗಿಯನ್ನು ತೊಡಿಸಿದನು. ಕಮಲದ ದಂಟನ್ನು ಬಳಸಿಕೊಂಡಿರುವ ಭ್ರಮರಗಳ ಸಾಲುಗಳ ರೀತಿಯನ್ನೊಳಗುಮಾಡಿಕೊಂಡ ಹಾಗೆ ನೀಲಮಣಿಗಳ ಕಡಗವನ್ನು ಕಾಲಿನಲ್ಲಿಟ್ಟು ಅಂದ ಕಾಣುವ ಹಾಗೆ ಮಾಡಿದನು. ಅತಿ ಸಂತೋಷದಿಂದ ಈ ರೀತಿ ಆ ರಾಜಶೇಖರನನ್ನು ವಸಂತನು ಮನ್ಮಥನನ್ನು ಅಲಂಕಾರಗೊಳಿಸಿದ ಕೂಡಲೆ

೬೦. ಆ ರಾಜಶೇಖರನು ತನ್ನ ಲಾವಣ್ಯದಿಂದ ಇಂದ್ರಕುಮಾರನಾದ ಜಯಂತನ ದೇಹಕಾಂತಿಯನ್ನು ತಿರಸ್ಕರಿಸಿ, ತನ್ನ ಮುಖದ ಕಾಂತಿಯಿಂದ ಚಂದ್ರನ ಪ್ರಕಾಶವನ್ನು ಹಿಯ್ಯಾಳಿಸಿ, ತನ್ನ ವಿಭ್ರಮದಿಂದ ನಳಕೂಬರನ ಅತಿಶಯವಾದ ಸೊಗಸನ್ನು ಜರೆದು, ತನ್ನ ವಿಲಾಸದಿಂದ ಮನ್ಮಥನ ವಿಲಾಸವನ್ನು ಕೂಡ ಅಣಕಿಸಿ ಶೋಭಿಸಿದನು.

ವ॥ ಆಗಳ್ಮಿತವಚನಕುಮಾರನಂತೆ ತಾನುಮನೂನಾಳಂಕಾರಾಲಂಕೃತನಾಗಿ

ಉ॥ ನುಣ್ಣಿದಪಂ ಪಳಂಚಲೆಯೆ ಕುಂಡಳಮಂಡಳಮಾನನಾಂಬುಜಂ
ತಣ್ಣಿದಿರಂಗೆ ಸೋಲಮನೊಡರ್ಚೆ ವಿಭೂಷಣಕಾಂತಿ ಭಾನುವಂ
ಸಾಣ್ಗೆಡಿಪಂತೆ ಪರ್ಬಿರೆ ಕನತ್ಕವಚಾಂಶುಸಮೇತಮೊಪ್ಪಮಂ
ಕಣ್ಗೆರದೀಯೆ ರತ್ನಮಕುಟದ್ಯುತಿ ಬಂದನಮಾತ್ಯನಂದನಂ ೬೧

ವ॥ ಅನಂತರಮವಂ ಬೆರಸಲ್ಲಿಂ ಸಲ್ಲೀಲೆಯಿಂದೇಳ್ತಂದು ಭದ್ರಮಂಟಪದ ಮುಂದಣ ಮುತ್ತಿನ ಮೊಗಸಾಲೆಯೊಳ್ ಕತಿಪಯ ಭಟ ಪಟಲಪರಿವೃತನೋಲಗಂಗೊಟ್ಟು ಮಿತವಚನ ವದನಮಂ ನಿರೀಕ್ಷಿಸಿ ರಾಜಾಲಯದೊಳೋಜೆಪಿಗೆ ರಾಜಿಪ ರಾಜವಾಜಿಗಳಂ ಬರಿಸೆಂಬುದು ಮವಂ ಬೆಸಸಲೊಡನೆ ಕಡುವೇಗದಿಂ ಕೈಗೆಯ್ದು ಪಲ್ಲಣಿಸಿ ಪಟ್ಟಸಪಣಿಗಳಿರ್ಕೆಲದೊಳ್ಪಿಡಿದು ತಡೆಯದೆ ತರ್ಪಾಗಳ್

ಚಂ॥ ಮಿಸುಪಿಯ ಪಕ್ಕರಕ್ಕೆ ಪೊಸಮಾಣಿಕವಲ್ಲಣಮಚ್ಚಮುತ್ತು ತ
ಳ್ತಿಸೆವ ಮುಖಪ್ರಸಾಧನಮುರಸ್ಥಿತ ಕಿಂಕಿಣಿಕಾಳಿ ಪಕ್ಕದೊಳ್
ಮಿಸುಗುವ ಜಲ್ಲಿ ಬೆಳ್ಗಜಿ ಕೊಡಂಕೆಯ ಚಾಮರಮೊಪ್ಪೆ ಬಂದುವಂ
ದಸದೃಶವಾಜಿಗಳ್ಸುಗುಣರಾಜಿಗಳುತ್ತಮ ಸತ್ವಭಾಜಿಗಳ್ ೬೨

ವ॥ ಆಗ ಮಿತವಚನಕುಮಾರನೂ ಕೂಡ ರಾಜಶೇಖರನ ಹಾಗೆ ಆಭರಣಾದಿಗಳಿಂದ ಅಲಂಕೃತನಾದನು. ೬೧. ಅಮಾತ್ಯನಂದನನಾದ ಮಿತವಚನನ ಕರ್ಣಕುಂಡಲಗಳು ಕೆನ್ನೆಯ ಮೇಲೆ ಅಲ್ಲಾಡುತ್ತಿದ್ದವು. ಕಮಲದಂತಿರುವ ಮುಖವು ಚಂದ್ರನನ್ನು ಸೋಲಿಸುವ ಕಾಂತಿಯಿಂದ ಕೂಡಿತ್ತು. ಆಭರಣಗಳ ಕಾಂತಿಯು ಸೂರ್ಯನ ಪ್ರಕಾಶಕ್ಕೆ ಮಾನಹಾನಿಯನ್ನುಂಟುಮಾಡುವಂತೆ ಇತ್ತು. ಕವಚದ ಕಾಂತಿಯಿಂದ ಮಿಶ್ರವಾದ ಕಿರೀಟದ ಕಾಂತಿಯು ನೇತ್ರಗಳಿಗೆ ಅಂದವನ್ನುಂಟುಮಾಡುವಂತಿರಲು ರಾಜಶೇಖರನಿರುವಲ್ಲಿಗೆ ಬಂದನು. ವ॥ ಆಮೇಲೆ ಆ ಸ್ಥಳದಿಂದ ರಾಜಶೇಖರನು ಮಿತವಚನನೊಡನೆ ಕೂಡಿಕೊಂಡು ವಿನೋದದಿಂದ ಬಂದು ಒಂದು ಮಂಗಳಕರವಾದ ಮಂಟಪದ ಮುಂದುಗಡೆಯಲ್ಲಿರುವ ಮುತ್ತುರತ್ನಮಯವಾದ ಹಜಾರದಲ್ಲಿ ಕೆಲವೇ ಜನ ಶೂರಭಟರುಗಳ ಸಮೂಹದಿಂದ ಕೂಡಿದವನಾಗಿ ಓಲಗಗೊಟ್ಟು, ಮಿತವಚನನ ಮುಖವನ್ನು ನೋಡಿ, ರಾಜಗೃಹದಲ್ಲಿ (ಕುದುರೆಯ ಲಾಯದಲ್ಲಿ) ಇರುವ ಪ್ರಕಾಶಮಾನಗಳಾದ ದಿವ್ಯಾಶ್ವಗಳನ್ನು ತರಿಸೆಂದು ಹೇಳಲು, ಆ ಮಿತವಚನನೂ ಕೂಡ ಆಜ್ಞಾಪಿಸಲು ಕೂಡಲೇ ಅಶ್ವಶಿಕ್ಷಕರು ಕುದುರೆಯಿರುವಲ್ಲಿಗೆ ವೇಗದಿಂದ ಬಂದು, ಅವುಗಳನ್ನು ಅಲಂಕರಿಸಿ ಜೀನು ಹಾಕಿ ಎರಡು ಕಡೆಯಲ್ಲಿಯೂ ಹಿಡಿದುಕೊಂಡು ತ್ವರೆಯಿಂದ ಹೊರಟುಬರುವ ಸಮಯದಲ್ಲಿ, ೬೨. ಬಂಗಾರದ ತಡಿ, ರತ್ನಖಚಿತ ಜೀನು, ಮುತ್ತುಗಳಿಂದ ಸಂಘಟಿತವಾದ ಮೊಗವಾಡ, ವಕ್ಷಸ್ಥಳದಲ್ಲಿರುವ ಸಣ್ಣ ಗೆಜ್ಜೆಗಳು, ಪಕ್ಕದಲ್ಲಿ ಶೋಭಿಸುವ ಜಾಲರಿ, ಕಿವಿಗಳ ಮಧ್ಯದಲ್ಲಿರುವ ಶುಭ್ರ ಗರಿಗಳುಳ್ಳ ಚಾಮರ, ಇವುಗಳಿಂದ ಶೋಭಿಸಲಾಗಿ ಅಸಮಾನವಾದ ಗುಣಸಮೂಹದಿಂದ ಕೂಡಿದವೂ, ಅಧಿಕ ಸಾಮರ್ಥ್ಯದಿಂದ ಸೇರಿದವೂ

ಕಂ॥ ನೊಸಲೊಳ್ಮಿಸುಗುವ ಮಿಸುನಿಯ
ಪೊಸಕನ್ನಡಿ ಕಣ್ಗೆವಂದುದಿನಬಿಂಬಂ ಬಂ
ದೆಸೆವಂತೆ ನಿಜಸಮನ್ವಯ
ವಸುಧೇಶ್ವರವಿಹರಣೇಕ್ಷಣಾಪೇಕ್ಷತೆಯಿಂ ೬೩

ವ॥ ಅಂತುಮಲ್ಲದೆಯುಂ

ಕಂ॥ ಜವದಿಂ ಗಮಿಪುದನೆನ್ನೊಳ್
ತವೆ ಕಲ್ತಂ ಪವನನವನನಹಿ ನುಂಗುಗುಮೆಂ
ದವಧರಿಸಿ ಕರ್ಚಿದಂತಿರೆ
ನವಾಶ್ವಮಾಸ್ಯದ ಖಲೀನದಿಂ ಕಣ್ಗೊಳಿಕುಂ ೬೪

ವ॥ ಅಂತೆಸೆದು ಬಂದಾ ಸಗರ್ವಗಂಧರ್ವಂಗಳಂ ಸಸಂಭ್ರಮಂ ನಿರೀಕ್ಷಿಸಿ ಸಂತಸಂ ಬಟ್ಟು ವಿಹರಣಪ್ರಸ್ಥಾನಭೇರಿಯಂ ಪೊಯ್ಕೆಂದು ದಂಡನಾಥಂಗೆ ಧರಾಧಿಪಂ ಬೆಸಸೆ ತನ್ನಿ ರೂಪದಿಂ ಮೇಘನಾದಂ ಬಂದಾ ಭೇರಿಯಂ ಭೂರಿಸ್ವನಂ ನೆಗಳೆ ಕನಕಕೋಣಮಂ ನಡಸಿ ಪಿಡಿದು ಪೊಡೆಯಲೊಡನೆ

ಮ॥ ಬಿಡುಗಣ್ಣರ್ ಕಡುಬೆರ್ಚೆ ಬಳ್ಕೆ ದಿಗಿಭಂಗಳ್ಪೋಗಿಪಂ ಬಾಗಿಕುಂ
ಬಿಡದೆ ಭಾಸ್ವದ್ರಥದಶ್ವಮಳ್ಕೆ ಕದಡೇಳ್ದಂಬೋಧಿಯುಂ ತುಳ್ಕೆ ಕ
ಣ್ಗೆಡೆ ವಿದ್ವಟ್ಟತಿಯುರ್ಬೆ ಪರ್ಬೆ ವಿಪುಳಬ್ರಹ್ಮಾಂಡಮಂ ತುಂಬಿ ತ
ಳ್ತಿಡೆಗೊಂಡತ್ತು ಧಳಂ ಧಳಂ ಧಳನದದ್ಗಂಭೀರಭೇರೀರವಂ ೬೫

ಆವ ಕುದುರೆಗಳು ಬಂದವು. ೬೩. ಕುದುರೆಗಳ ಹಣೆಯಲ್ಲಿ ಶೋಭಿಸುವ ಸುವರ್ಣದ ಕನ್ನಡಿಯು ತನ್ನ ವಂಶದ ರಾಜನ ವಿಹಾರವನ್ನು ನೋಡುವ ಆಪೇಕ್ಷೆಯಿಂದ ಸೂರ್ಯ ಮಂಡಲವು ಉದಯವಾಗಿ ಶೋಭಿಸುವ ಹಾಗೆ ನೇತ್ರಗಳಿಗೆ ರಮಣೀಯವಾಗಿತ್ತು. ವ॥ ಅದೂ ಅಲ್ಲದೆಯೂ ೬೪. ವಾಯುವು ವೇಗದಿಂದ ಸಂಚರಿಸುವುದನ್ನು ನನ್ನಲ್ಲಿ ಕಲಿತನು. ಆದ್ದರಿಂದ ಅವನು ನನ್ನ ಶಿಷ್ಯನು. ಅಂತಹ ವಾಯುವನ್ನು ಸರ್ಪವು ನುಂಗುವುದಲ್ಲಾ ! ಇದನ್ನು ನಾನು ಅಗಿದುಬಿಡಬೇಕು, ಎಂದು ಆಲೋಚಿಸಿ ಕೋಪದಿಂದ ಆ ಸರ್ಪವನ್ನೇ ಕಚ್ಚಿಕೊಂಡಿತೋ ಎಂಬಂತೆ ಆ ಕುದುರೆಯ ಬಾಯಲ್ಲಿರುವ ಕಡಿವಾಣವು ಮೆರೆಯುತ್ತಿತ್ತು. ವ॥ ಆ ಪ್ರಕಾರವಾಗಿ ಶೋಭಿಸುತ್ತ ಬಂದ ಸೊಕ್ಕಿದ ಕುದುರೆಗಳನ್ನು ಸಂಭ್ರಮಗೊಂಡು ನೋಡಿ, ಸಂತೋಷಪಟ್ಟ ರಾಜಶೇಖರನು ವಿಹಾರ ಸಮಯೋಚಿತ ನಗಾರಿಯನ್ನು ಬಾರಿಸಬೇಕೆಂದು ದಂಡನಾಥನಿಗೆ ಅಪ್ಪಣೆಮಾಡಲು, ಅವನ ಅಪ್ಪಣೆಯ ಮೇರೆಗೆ ಮೇಘನಾದನೆಂಬ ದಂಡಾಧಿಪನು ಬಂದು ಭೇರಿಯನ್ನು ಭಾರಿ ಧ್ವನಿಯಾಗುವ ಹಾಗೆ ಬಂಗಾರದ ಕೋಲನ್ನು ಹಿಡಿದು ಹೊಡೆದ ಕೂಡಲೆ ೬೫. ದೇವತೆಗಳು ಬಹುವಾಗಿ ಹೆದರಿದರು. ದಿಗ್ಗಜಗಳು ಬಳುಕಿದವು. ಆದಿಶೇಷನ ಹೆಡೆ ಬಗ್ಗಿ ನೆಲಕ್ಕೆ ತಲೆಹಾಕಿತು. ಸೂರ್ಯನ ರಥಕ್ಕೆ ಕಟ್ಟಿದ ಕುದುರೆಗಳು ಅಳುಕಾಡಿದವು. ಸಮುದ್ರವು ಕೆಸರುಗೊಂಡು ತುಳುಕಾಡಹತ್ತಿತು. ಶತ್ರುಗಳ

ವ॥ ಆಗಳಾ ವಿಹರಣ ವಿಳಾಸ ವಿಪುಳ ಭೇರೀರವಂಗೇಳ್ದು ಮೇಘನಾದಮಂ ಕೇಳ್ದ ಮಯೂರಂಗಳಂತೆ ಕಡುಸಡಗರಂ ಮಿಕ್ಕು ಪೊಸಗಂಧಸಿಂಧುರಂಗಳಂ ಬಂಧುರಮೆನೆ ಪಿಂಗದೆ ಸಿಂಗರಿಸಿ ಗಜಾರೋಹಕರ್ ಪಸದನಂಬಡೆದೇಱಿ ಮಿಾಱಿ ನೆರಪಿದಾಗಳ್

ಚಂ॥ ಇಳಿದಿಳೆಯಂ ಪದಂಗೊಳಿಸೆ ದಾನಜಳಂ ಜಳದಂಗದಂತೆ ಮಂ
ಜುಳ ಪೃಥುಕೂಟದಂತೆಸೆಯೆ ಕುಂಭತಟಂ ಕುಳಭೂಧರಂಗಳಂ
ತಳವಡೆ ದಂತಕಾಂತಿ ಸೊದೆಯಂತಿರೆ ಭದ್ರರಮಾಗೃಹಂಗಳಂ
ತಳರ್ದಖಿಳಾವನೀತಳಮನೇಂ ನೆರೆದಿರ್ದುವೊ ಮತ್ತಹಸ್ತಿಗಳ್ ೭೭

ಮ॥ಸ್ರ॥ ಪೃಥುಕುಂಭಂ ದೀರ್ಘಹಸ್ತಂ ವಿಪುಳತರರದಂ ಪೀನಬದ್ಧೋದರಂ ಸಂ
ಗ್ರಥಿತೋದ್ಯಚ್ಚಾಮರಪ್ರಸ್ಫುರಿತ ಚಳಿತಕರ್ಣಂ ಭ್ರಮದ್ಭೃಂಗಸಂಗ
ಪ್ರಥಿತಪ್ರೋದ್ದಾನಧಾರಾಘಟಿತ ಕಟತಟಂ ಮೇಚಕೋಚ್ಚಂಡ ಚಂಚತ್
ಪೃಥುವೀಭೃತ್ ಸಾಮ್ಯಕಾಯಂ ಘನನಿನದಮದೇಂ ಬಂದುದೋ ದಂತಿಜಾಳಂ ೭೭

ವ॥ ಅಂತು ನೆರೆದೇಳ್ತಂದು ನಿಂದ ದಂತಿಸಂತತಿಯಲ್ಲದೆಯುಂ

ಸಮೂಹವು ಭ್ರಾಂತಿಗೊಂಡಿತು. (ಹೀಗೆ) ಧಳಧಳ ಎಂದು ಧ್ವನಿಮಾಡುತ್ತಿರುವ ಅಗಾಧವಾದ ಭೇರಿಯ ಧ್ವನಿಯು ವಿಶಾಲ ಬ್ರಹ್ಮಾಂಡವನ್ನು ತುಂಬಿ ಸ್ಥಿರಗೊಂಡು ನಿಂತಿತು. ವ|| ಆ ಸಮಯದ ಆ ವಿಹಾರವಿನೋದವನ್ನು ಸೂಚಿಸುವ ಭೇರಿಯ ಧ್ವನಿಯನ್ನು ಕೇಳಿ, ಮುಂಗಾರಿನ ಮೇಘಧ್ವನಿಯನ್ನು ಕೇಳಿದ ನವಿಲುಗಳ ಹಾಗೆ ವಿಶೇಷ ಸಡಗರವುಂಟಾಗುತ್ತಿರಲು, ನೂತನವಾದ ಕೊಬ್ಬಿದ ಆನೆಗಳನ್ನು ರಮಣೀಯವಾಗಿ ಅಲಂಕರಿಸಿ, ಮಾವಟಿಗರು ಅಲಂಕಾರ ಮಾಡಿಕೊಂಡು, ಆ ಆನೆಗಳನ್ನು ಹತ್ತಿಕೊಂಡು ಅತಿಶಯವಾಗಿ ಗುಂಪುಗೂಡಿದ ಸಮಯದಲ್ಲಿ ೭೭. (ಮದಿಸಿದ ಆನೆಗಳ) ಮದೋದಕವು ಇಳಿದು ಭೂಮಿಯನ್ನು ಕೆಸರಾಗಿ ಮಾಡುತ್ತಿರಲು, ಮದಗಜಗಳು ಮೇಘಗಳೋ ಎಂಬಂತೆಯೂ, ಅವುಗಳ ದೊಡ್ಡ ದೊಡ್ಡ ಕುಂಭಸ್ಥಳ ಪ್ರದೇಶಗಳು ಮನೋಹರವಾದ ದೊಡ್ಡ ದೊಡ್ಡ ಶಿಖರಗಳ ಹಾಗೆಯೂ ಶೋಭಿಸುತ್ತಿರಲು, ಅವು ಕುಲಾಚಲಪರ್ವತಗಳೋ ಎಂಬಂತೆಯೂ, ದಂತಗಳ ಕಾಂತಿಯು ಅಮೃತದ ಹಾಗೆ ಇರಲು, ಮಂಗಳ ಲಕ್ಷ್ಮಿಯ ಮನೆಗಳೋ ಎಂಬ ಹಾಗಿರಲು ಆ ಮದಿಸಿದ ಆನೆಗಳು ಭೂತಳವನ್ನೆಲ್ಲ ಅದೇನು ವ್ಯಾಪಿಸಿದುವೋ ! ೭೭. ಸ್ಥೂಲವಾದ ಕುಂಭಸ್ಥಳ ಪ್ರದೇಶಗಳನ್ನುಳ್ಳ, ಉದ್ದನೆಯ ಸೊಂಡಿಲುಗಳಿಂದ ಕೂಡಿದ, ಉದ್ದವಾದ ದಪ್ಪನೆಯ ದಂತಗಳುಳ್ಳ, ದಪ್ಪನೆಯ ಹೊಟ್ಟೆಗಳನ್ನುಳ್ಳ, ಕಿವಿಯ ಹತ್ತಿರ ಕಟ್ಟಿದ ಚಾಮರಗಳನ್ನುಳ್ಳ, ಸುರಿಯುತ್ತಿರುವ ಮದೋದಕಕ್ಕೆ ಆಸೆಪಟ್ಟು ಝೇಂಕಾರ ಮಾಡುತ್ತ ಸಂಚರಿಸುವ ಭ್ರಮರಗಳ ಸಮೂಹದಿಂದ ಸುತ್ತುವರಿಯಲ್ಪಟ್ಟ ಕಪೋಲಪ್ರದೇಶಗಳನ್ನುಳ್ಳ, ಕಪ್ಪಾದ ದಪ್ಪನೆಯ ಮಿನುಗುತ್ತಿರುವ ದೇಹಗಳು ಪರ್ವತಗಳೊಡನೆ ಸಮಾನತೆಯನ್ನು ಹೊಂದಿದ, ಮೇಘಧ್ವನಿಯಂಥ ಘನವಾದ ಬೃಂಹಿತಗಳನ್ನುಳ್ಳ ಆನೆಗಳು ಬಂದವು. ವ|| ಹೀಗೆ ಗುಂಪಾಗಿ ಬಂದು ನಿಂತ

ಮ॥ ಘನಘಂಟಾಖುರಮುನ್ನತಂ ಪೃಥುತರಸ್ಕಂಧಂ ಬೃಹದ್ದೀರ್ಘದೇ
ಹನಿಯುಕ್ತಂ ಸಮದಂತಮುಜ್ವಳಮುಖಂ ವ್ಯಾಲಂಬಿವಾಲಂ ಲಸ
ಧ್ವನಿ ಚೇತೋಗತಿ ಸನ್ಮಣಿವ್ರಜ ಸಮಾಕೀರ್ಣಸ್ಫುರತ್ಸ್ವರ್ಣಮಂ
ಡನಮೇಳ್ತಂದುದಭಂಗಭಂಗವಿಳಸದ್ರಂಗತ್ತುರಂಗವ್ರಜಂ ೧೮

ವ॥ ಇಂತೇಳ್ತಂದ ಪಂಚಪಲ್ಲವದ ವಾಜಿಗಳ ರಾಜಿಗಳ ಪಿಂದೆ ಸಂದಣಿಗೊಂಡು

ಮ॥ಸ್ರ॥ ಮಿಳಿರ್ದೆತ್ತಂ ತೋಱಿ ಪೊಂಬಟ್ಟೆಯ ಪಳಯಿಗೆಗಳ್ಮೇಲೇಳೆ ಮುಕ್ತಾತಪತ್ರಾ
ವಳಿ ಚೆಲ್ವಂ ಬೀಱಿ ಚಕ್ರೋಚ್ಚಳಿತ ಚಟುಲಚೀತ್ಕಾರಮಾಶಾಪ್ರದೇಶಾ
ವಿಳಮಾಗಲ್ಪೀಱಿ ಸೂತವ್ರಜದ ಬಗೆ ತುರಂಗಂಗಳಾದಂತೆ ಮುಂದು
ಜ್ವಳಿಸುತ್ತುಂ ಪಾಱಿ ಕೂಡಿತ್ತಮಮ ಪೃಥುವರೂಥವ್ರಜಂ ಪೆರ್ಮೆಯಿಂದಂ ೧೯

ವ॥ ಅಂತು ನೆರೆದೇಳ್ತಂದು ನಿಂದ ವರೂಥವಾಜಿಗಳಲ್ಲದೆಯುಂ

ಮ॥ಸ್ರ॥ ಎಡಗಾಲೊಳ್ ಪೊಂದೊಡರ್ ತಳ್ತಿರೆ ಝುಣಝುಣ ನಿಕ್ವಾಣಮುದ್ಘೋರುಕಂ ನೇ
ರ್ಪಡೆ ಚೆಲ್ವಂ ಬೀಱಿ ಗೇಣಂ ತಳೆದು ಮಿಸುಗೆ ಕೆಂದಟ್ಟಿ ಪೊಂಗುಪ್ಪ ಸಂದೊ
ಟ್ಟೊಪ್ಪಡನಿಟ್ಟೋರಂತೆ ಮಾಣಿಕ್ಯದ ಕಿವಿದೊಡವಂ ಸೀಸಕಂದಾಳ್ದು ಕಾಲಾ
ಳ್ಗಡಣಂ ಕೈಕೊಂಡು ನಾನಾಯುಧಮನಮಮ ಬಂದತ್ತದಂ ಪೇಳ್ವೆನೇನಂ ೨೦

ಆನೆಗಳ ಸಮೂಹವಲ್ಲದೆಯೂ ಕೂಡ ೧೮. ಅಧಿಕತರವಾದ ಘಂಟೆಗಳಂತಿರುವ ಖುರಪುಟವುಳ್ಳವುಗಳಾಗಿ, ದಪ್ಪನೆಯ ಮತ್ತು ಎತ್ತರವಾದ ಕುತ್ತಿಗೆಗಳುಳ್ಳವಾಗಿ, ದೊಡ್ಡದೂ ಉದ್ದವೂ ಆದ ದೇಹದಿಂದ ಕೂಡಿದುವಾಗಿ, ಸಮಾನವಾದ ದಂತಗಳಿಂದ ಉಜ್ವಲವಾದ ಮುಖವುಳ್ಳವುಗಳಾಗಿ, ಜೋಲಾಡುತ್ತಿರುವ ಬಾಲಗಳುಳ್ಳವಾಗಿ, ಶೋಭಿಸುವ ಹೇಷಾರವಗಳುಳ್ಳವಾಗಿ, ಮನೋವೇಗವುಳ್ಳವುಗಳಾಗಿ, ಪ್ರಕಾಶಮಾನವಾದ ರತ್ನಸಮೂಹದಿಂದ ಕೆತ್ತಲ್ಪಟ್ಟ ಬಂಗಾರದ ಆಭರಣಗಳಿಂದ ಅಲಂಕಾರಗೊಂಡ ಭಂಗವಿಲ್ಲದ ಅಲೆಗಳಂತೆ ಪ್ರಕಾಶಿಸುವ ಕುಣಿತದ ಕುದುರೆಗಳ ಸಮೂಹವು ಬಂದಿತು. ವ॥ ಹೀಗೆ ಬಂದ ಐದು ಬಣ್ಣದ (ಪಂಚಕಲ್ಯಾಣಿ) ಕುದುರೆಗಳ ಸಮೂಹದ ಹಿಂದೆ ಗುಂಪಾಗಿ ಸೇರಿ, ೧೯. ಕಲಾಪತ್ತಿನ ಬಟ್ಟೆಯಲ್ಲಿ ಮಾಡಿದ ಧ್ವಜಗಳು ಚಲಿಸುತ್ತ ಎಲ್ಲ ಕಡೆಗೂ ಕಾಣುತ್ತಿರಲು, ಮುತ್ತುಗಳನ್ನು ಬಿಗಿದು ಮಾಡಿದ ಶ್ವೇತಚ್ಛತ್ರಗಳ ಸಮೂಹವು ಸೌಂದರ್ಯವನ್ನು ಬೀರುತ್ತಿರಲು, ಚಕ್ರಗಳಿಂದ ಹೊರಹೊರಡುತ್ತಿರುವ ಪಟುತರವಾದ ಚೀತ್ಕಾರಧ್ವನಿಯು ದಿಕ್ತಟಗಳನ್ನು ವ್ಯಾಪಿಸಿರಲು, ಸಾರಥಿಗಳ ಗುಂಪಿನ ಮನಸ್ಸೇ ಕುದುರೆಗಳಾದ ಹಾಗೆ ಮುಂಭಾಗದಲ್ಲಿ ಕುದುರೆಗಳು ಶೋಭಿಸುತ್ತಿರಲು, ಓಡುತ್ತ ಅಧಿಕವಾದ ರಥಗಳ ಗುಂಪು ಅಮಮ! ಅತಿಶಯವಾಗಿ ಕೂಡಿತ್ತು. ವ॥ ಆ ಪ್ರಕಾರ ಕೂಡಿಬಂದು ನಿಂತುಕೊಂಡಿರುವ ರಥದ ಕುದುರೆಗಳು ಅಲ್ಲದೆಯೂ, ೨೦. ಎಡಗಾಲಿನಲ್ಲಿ ಝುಣಝುಣತ್ಕಾರ ಧ್ವನಿ ಮಾಡುವ .ಚಿನ್ನದ ಬಿರುದುಗಳನ್ನು ಧರಿಸಿದವರಾಗಿ, ಉಟ್ಟ ಚಲ್ಲಣ ನೆಟ್ಟಗೆ ಸೊಗಸನ್ನು ಬೀರುತ್ತಿರಲು ಕಠಾರಿ

44

ವ॥ ಇಂತನಂತಸಂಭ್ರಮದಿಂ ನೆಲನೆಲ್ಲಮನಳುರ್ಕೆಗೊಂಡು ಘೌಳುಘೌಳಿಸಿ ನೆರೆದು ತೆಕ್ಕನೆ ತೀವಿದ ಚತುರಂಗಬಳಮಂ ಕಂಡು ಕಡುಸಂತಸಂ ಮಿಕ್ಕು

ಕಂ॥ ವಂದಿಗಳುಗ್ಘಡಿಸುತ್ತಿರೆ
ದುಂದುಭಿ ಮಿಗೆ ಮೊಳಗೆ ಬಹಳ ಕಹಳಾನಾದಂ
ಮುಂದೆಸೆಯೊಳೆಸೆಯೆ ನೃಪನೊಲ
ವಿಂದಡರ್ದಂ ಪವನಗಮನ ನಾಮದ ಹಯಮಂ ೭೧

ವ॥ ಅಂತೇಱಿದಾಗಳಾ ಮಿತವಚನಕುಮಾರಂ ಹರಿಣಗತಿಯೆಂಬೆರಡನೆಯ ತುರಂಗಮಂ ಸಾರೋಹಿಸಿ ತನ್ನೊಡನೆ ಸಡಗರಂ ಮಿಕ್ಕು ಸುರತುರಂಗಮುವನಡರ್ದ ಜಯಂತನೊಡನೆ ಧನದಾಶ್ವಮನಡರ್ದ ತಳರ್ದ ನಳಕೂಬರನಂತೆಸೆದು ಬರೆ ನಿಜಮಕುಟರುಚಿರರುಚಿ ರವಿಕಿರಣಮಂ ಪಳಂಚಲೆಯೆ ತೊಡೆದ ಮೃಗಮದಕರ್ದಮದ ಕಡುಗಂಪಿಂಗೆ ಪೀಗದೆ ಭೃಂಗಾಳಿ ಕವಿತರೆ ಪುಷ್ಕರ ಪುಂದರೀಕಮಿಲ್ಲೆಂಬ ಬಗೆಯನಿಲ್ಲೆನಿಪಂತೆ ಸಲ್ಲಲಿತ ಮುಕ್ತಾಮಯಾತಪತ್ರಂಗಳ್ಮೇಲೆ

ಯನ್ನು ಧರಿಸಿದವರಾಗಿ, ಕೆಂಪಾದ ನಡುಕಟ್ಟು ಶೋಭಿಸುತ್ತಿರಲು, ಸುವರ್ಣ ಕವಚವನ್ನು ತೊಟ್ಟುಕೊಂಡು, ಕ್ರಮವಾಗಿ ರತ್ನದ ಕರ್ಣಕುಂಡಲದ ತೊಡವನ್ನು ತೊಟ್ಟು, ಶಿರಸ್ತ್ರಾಣವನ್ನು ತಲೆಯಲ್ಲಿ ಹಾಕಿಕೊಂಡು, ನಾನಾವಿಧವಾದ ಆಯುಧಗಳನ್ನು ಕೈಯಲ್ಲಿ ಹಿಡಿದುಕೊಂಡವರಾಗಿ ಬರುತ್ತಿದ್ದರು. ಅಮಮ ! ಆ ಸಂಗತಿಯನ್ನು ಏನೆಂದು ಹೇಳಲಿ ? ವ|| ಈ ರೀತಿ ಅನಂತವಾದ ಸಂಭ್ರಮದಿಂದ ಭೂಮಿಯನ್ನೆಲ್ಲ ವ್ಯಾಪಿಸಿಕೊಂಡು ಘುಳು ಘುಳು ಧ್ವನಿಮಾಡುತ್ತ ಒಮ್ಮೆಲೆ ಸೇರುವೆಗೊಂಡ ಚತುರಂಗಬಲವನ್ನು ಕಂಡು ಅಧಿಕವಾದ ಸಂತೋಷದಿಂದ ರಾಜಶೇಖರನು ಕೂಡಿದವನಾದನು. ೭೧. ಮುಂಭಾಗದಲ್ಲಿ ಸ್ತುತಿಪಾಠಕರು ಬಿರುದಾವಳಿಗಳನ್ನು ಹೊಗಳುತ್ತಿರಲು, ದುಂದುಭಿಗಳು ಹೆಚ್ಚಾಗಿ ಧ್ವನಿ ಮಾಡುತ್ತಿರಲು, ಕಹಳೆಗಳ ಅತ್ಯಧಿಕವಾದ ಧ್ವನಿಯು ಮುಂಭಾಗದಲ್ಲಿ ಧ್ವನಿಮಾಡುತ್ತಿರಲು, ರಾಜಶೇಖರನೃಪನು 'ಪವನಗಮನ'ವೆಂಬ ಹೆಸರಿನ (ಆ ಹೊಸ) ಕುದುರೆಯನ್ನು ಹತ್ತಿದನು. ವ|| ಆ ಪ್ರಕಾರವಾಗಿ ರಾಜಶೇಖರನು ಕುದುರೆಯನ್ನೇರಿದಾಗ ಆ ಮಿತವಚನನೆಂಬ ಮಂತ್ರಿಕುಮಾರನೂ 'ಹರಿಣಗತಿ' ಎಂಬ ಹೆಸರಿನ ಎರಡನೆಯ ಕುದುರೆಯನ್ನು ಸಂಭ್ರಮದಿಂದ ಹತ್ತಿ, ತನ್ನ ಸಂಗಡವೇ ಸಡಗರದಿಂದ ದೇವತುರಂಗವಾದ ಉಚ್ಚೈಶ್ರವಸ್ಸನ್ನು ಹತ್ತಿದ ಜಯಂತನೊಡನೆ ಕುಬೇರನ ಕುದುರೆಯನ್ನು ಹತ್ತಿಕೊಂಡು ಬರುವ ನಳಕೂಬರನ ಹಾಗೆ ಮಿತವಚನನು ಶೋಭಿಸುತ್ತ, ತಮ್ಮ ಕಿರೀಟಗಳ ಮನೋಹರ ಕಾಂತಿಯು ಸೂರ್ಯಕಿರಣಗಳ ಕಾಂತಿಯನ್ನು ಮುಟ್ಟಿ ಅಲೆಯುತ್ತಿರಲು, ಮೈಗೆ ಪೂಸಿದ ಕಸ್ತೂರಿಯ ಕೆಸರಿನ ವಿಶೇಷವಾದ ಸುಗಂಧಕ್ಕೆ ತಪ್ಪದೆ ಭೃಂಗಸಮೂಹವು (ಬೆನ್ನಟ್ಟಿ) ಬಂದು ಕವಿಯುತ್ತಿರಲು, ಗಗನದಲ್ಲಿ ಕಮಲವಿಲ್ಲವೆಂಬ ಮಾತನ್ನು ಹುಸಿಮಾಡುವಂತೆ

ಲೀಲೆಯಿಂ ಬರೆ ಗಗನಲಕ್ಷ್ಮಿಯ ಪಯೋಧರಮಂ ಮುಸುಂಕಿದ ಚೀನಾಂಬರದ ಸೆಱಂಗಿನಂತೆ ತೊಳತೊಳಪ ಪಳಯಿಗೆಯ ಪಟಲಗಳ್ಮೆಱೆರುತ್ತಿರೆ ವಿಭವರಮೆಯ ಕಟಾಕ್ಷಮೆಂಬಂತೆ ಭಾಮಿನೀ ಚಾಲಿತ ಚಾರುಚಾಮರಂ ಮುಂಬಿನೊಳಿಂಬುವಡೆಯೆ ಬಳಜಳಧಿಯೊಳ್ಪೊಗೆದ ತರಂಗದಂತೆ ಸೂಸುವ ಸೀಗುರಿ ದೇಸಿವಡೆಯೆ ಪಿರಿದು ಸಂಭ್ರಮದಿಂ ಪುರವೀಥಿಯೊಳ್ ಬರ್ಪಾಗಳ್

ಚಂ॥ ಮಣಿಮಯಭೂಷಣಾಂಶು ಮಕುಟದ್ಯುತಿ ಹಾರಮರೀಚಿ ವಜ್ರಕಂ
ಕಣರುಚಿ ಮೆಯ್ಯ ನುಣ್ಪೆಳಗು ಕೆಯ್ಯ ಸಿತಾಸಿಯ ಕಾಂತಿ ಪೊನ್ನವೀ
ಕಣೆಯ ಪೊಗರ್ ಥಳತ್ಥಳಿಸೆ ದಿವ್ಯಹಯಂಗಳನೇಱಿ ಬಂದುದಂ
ದೆಣಿಕೆಗಳುಂಬಮಾಗಿ ವಿಭವಂ ಮಿಗೆ ರಾಜಕುಮಾರಸಂಕುಳಂ ೭೨

ಕಂ॥ ಆ ರಾಜಸುತರ ನಡುವೆ ಮ
ಹಾರಾಜಸುತಂ ಸಿತಾಶ್ವದಗ್ರದೊಳೆಸೆದಂ
ಶಾರದನೀರದದಗ್ರದೊ
ಳಾ ರಾಜಂ ಭಗಣಪರಿವೃತಂ ರಂಜಿಪವೋಲ್ ೭೩

ಮನೋಹರವಾದ ಮುತ್ತು ಬಿಗಿದಂಥ ಶ್ವೇತಚ್ಛತ್ರಿಗಳು ಮೇಲ್ಭಾಗದಲ್ಲಿ ಲೀಲೆಯಿಂದ ಬರುತ್ತಿರಲು, ಗಗನವೆಂಬ ಲಕ್ಷ್ಮಿಯ ಮೊಲೆಗಳನ್ನು ಮುಸುಕಿದ ಚೀನಾಂಬರದ ಸೆರಗಿನ ಹಾಗೆ ಪ್ರಕಾಶಿಸುತ್ತಿರುವ ಧ್ವಜಪಟಗಳು ಚಲಿಸುತ್ತಿರಲು, ಭಾಗ್ಯಲಕ್ಷ್ಮಿಯ ಕಡೆಗಣ್ಣಿನ ನೋಟವೋ ಎಂಬಂತೆ ಸ್ತ್ರೀಯರುಗಳಿಂದ ಬೀಸುತ್ತಿರುವ ಮನೋಹರವಾದ ಚಾಮರಗಳು ಮುಂಭಾಗದಲ್ಲಿ ಶೋಭಿಸುತ್ತಿರಲು, ಸೈನ್ಯವೆಂಬ ಸಾಗರದಲ್ಲಿ ಅಪ್ಪಳಿಸುವ ತರಂಗಗಳ ಹಾಗೆ ಉಡಾಸಸಾವುಡ (ಸೀಗುರಿ) ವು ಸೊಗಸನ್ನುಂಟುಮಾಡುತ್ತಿರಲು, ಸಡಗರದೊಡನೆ ಹೆಚ್ಚಾದ ಸಂಭ್ರಮದಿಂದ (ಚತುರಂಗಬಲವು) ಆ ಪಟ್ಟಣದ ಬೀದಿಯಲ್ಲಿ ಬಂದಿತು. ಆಗ ೭೨. ರತ್ನಮಯ ಆಭರಣಗಳ ಕಾಂತಿ, ಕಿರೀಟದ ಪ್ರಕಾಶ, ಧರಿಸಿದ ಹಾರಗಳ ಬೆಳಕು, ವಜ್ರದ ಬಳೆಗಳ ಕಾಂತಿ, ದೇಹದ ನುಣ್ಣನೆಯ ಕಾಂತಿ, ಕಯ್ಯಲ್ಲಿ ಧರಿಸಿದ ಖಡ್ಗದ ಪ್ರಕಾಶ, ಬಂಗಾರದ ಪೀತಾಂಬರದ ಹೊಗರು ಥಳಥಳ ಎಂದು ಹೊಳೆಯುತ್ತಿರಲು, ದಿವ್ಯವಾದ ಕುದುರೆಗಳನ್ನೇರಿ ವೈಭವಪೂರ್ಣವಾಗಿ ರಾಜಕುಮಾರರುಗಳ ಸಮೂಹವು ಗಣನೆಗೆ ಅಸಾಧ್ಯವೆನ್ನುವ ಅತಿಶಯದಿಂದ ಬರುತ್ತಿತ್ತು. ೭೩. ಆ ಸಮಸ್ತ ರಾಜಕುಮಾರರ ಮಧ್ಯದಲ್ಲಿ ಶರತ್ಕಾಲದ ಬಿಳಿಯ ಮೋಡಗಳ ಮೇಲ್ಭಾಗದಲ್ಲಿ ನಕ್ಷತ್ರಗಳಿಂದ ಕೂಡಿದ ಚಂದ್ರನು ಶೋಭಿಸುವ ಹಾಗೆ ರಾಜಶೇಖರಮಹಾರಾಜನು ತಾನು ಹತ್ತಿದ ಬಿಳಿಯ ಕುದುರೆಯ ಮೇಲೆ ಶೋಭಿಸುತ್ತಿದ್ದನು.

ಗಗನದೊಳೆ ನೋಡಲೆಂದು
ಪ್ಪುಗಿಸಿದ ಖಚರಿಯುತ ಕಣ್ಗೆ ಬಲಧೂಳಿ ಕರಂ
ಪೊಗದಂತೆ ಬೀಸಿದಪ್ಪುದೆನೆ
ಮಿಗೆ ಮಿಳಿರ್ವ ಪಟಂಗಳಿಂದೆ ಪಳಯಿಗೆ ಮೆಱೆಗುಂ ೭೪

ವ॥ ಅಂತುಮಲ್ಲದೆ

ಕಂ॥ ಕೆಂಬಳಯಿಗೆ ಲಂಬಿಸೆ ತ
ಳ್ತಂಬುಜಸಖಬಿಂಬಮುಕ್ಕಿಗಿಂಬಾದುದು ಕೆಂ
ಕಂಬಡೆದೆಸೆವಂಬುದದಿಂ
ಚುಂಬಿತಮಾಯ್ತೆಂಬ ತೆಱದೊಳಂಬರತಳದೊಳ್ ೭೫

ಮ॥ಸ್ರ॥ ವಿತತಾತೋದ್ಯಪ್ರಣಾದಂ ರಥನಿಕರಲಸಚ್ಚೀತ್ಕೃತಿಧ್ವಾನಮುಜ್ಜೃಂ
ಭಿತ ರಾಜದ್ವಾಜಿಹೇಷಾರಸಿತಮಿಭಘಟಾಬೃಂಹಿತೋದ್ಯದ್ರವಂ ವಿ
ಶ್ರುತವಂದಿವ್ರಾತಕೋಲಾಹಲರುತಿ ಸುಭಟಶ್ಫಾರ ಹೂಂಕಾರರಾವಂ
ಶ್ರಿತಚಂಚತ್ಕೇತುಘಂಟಾರಣಿತಮಖಿಳ ದಿಗ್ದೇಶಮಂ ತೀವಿತಾಗಳ್ ೭೬

ಮ॥ ಬಲಭಾರಕ್ಕೆ ಧರಾತಳಂ ಕುಸಿಯೆ ಸೇನಾಧೂಳಿಯಿಂ ಮಿಕ್ಕು ಬಾಂ
ಬೊಳೆ ಪಂಕಾವಿಳಮಾಗೆ ಭೇರಿಯ ಗಭೀರಧ್ವಾನದಿಂ ದಿಗ್ಗಜಾ
ವಳಿ ಕಂಪಂಗೊಳೆ ದೀರ್ಘಕೇತನಪಟಂ ಸಂದೋಹದಿಂದೊಂದಿ ಮಂ
ಜುಳಸೂರ್ಯಾತಪಮಿಲ್ಲಮಾಗೆ ಪದೆದೇಳ್ತಂದಂ ನರೇಂದ್ರಾತ್ಮಜಂ ೭೭

೭೪. ಅಂತರಿಕ್ಷದಲ್ಲಿ ರಾಜಶೇಖರನನ್ನು ನೋಡುವ ಅಪೇಕ್ಷೆಯಿಂದ ಬಂದು ನಿಂತ ದೇವತಾ ಸ್ತ್ರೀಯರ ಕಣ್ಣುಗಳಲ್ಲಿ ಸೈನ್ಯದ ಧೂಳಿಯು ಹೊಗದ ಹಾಗೆ ಬೀಸುತ್ತಿರುವುವೋ ಎಂಬ ಹಾಗೆ ಅಧಿಕವಾಗಿ ಚಲಿಸುತ್ತಿರುವ ಪಟಗಳಿಂದ ಕೂಡಿದ ಧ್ವಜಗಳು ಶೋಭಿಸುತ್ತಿದ್ದವು. ವ॥ ಅಂತುಮಲ್ಲದೆ ೭೫. ಆಕಾಶಭಾಗದಲ್ಲಿ ಕೆಂಪುಬಣ್ಣದ ಧ್ವಜಗಳು ಜೋಲಾಡುತ್ತಿರಲಾಗಿ ಅವು ಸೂರ್ಯಮಂಡಲವು ಕೆಂಪುಬಣ್ಣವನ್ನು ಹೊಂದಿದ ಮೋಡಗಳಿಂದ ಚುಂಬಿಸಲ್ಪಟ್ಟಿತು ಎಂಬ ರೀತಿಯಲ್ಲಿ ಕಣ್ಣಿಗೆ ಸೊಗಸಾಗಿ ಕಾಣುತ್ತಿದ್ದವು. ೭೬. ಆ ಸಮಯದಲ್ಲಿ ಪ್ರಸಿದ್ಧವಾದ ವಾದ್ಯಗಳ (ಆತೋದ್ಯ) ಧ್ವನಿಯೂ, ರಥಗಳ ಸಮೂಹದ ಒಪ್ಪುವ ಗಾಲಿಗಳ ಚೀತ್ಕಾರಧ್ವನಿಯೂ, ಪ್ರಕಾಶಿಸುವ ಕುದುರೆಗಳಿಂದ ಆವಿರ್ಭವಿಸಿದ ಹೇಷಾರವವೂ, ಆನೆಗಳ ಬೃಂಹಿತವೆಂಬ ಅಧಿಕತರವಾದ ಧ್ವನಿಯೂ, ಪ್ರಸಿದ್ಧರಾದ ಸ್ತುತಿ ಪಾಠಕರ ಕೋಲಾಹಲಧ್ವನಿಯೂ, ಭಟರುಗಳಿಂದ ಹೊರಹೊಮ್ಮಿದ ಹೂಂಕಾರ ಧ್ವನಿಯೂ, ಚಲಿಸುತ್ತಿರುವ ಧ್ವಜಗಳ ಘಂಟಾರವವೂ ಸಮಸ್ತವಾದ ದಿಗ್ಭಾಗಗಳನ್ನೂ ತುಂಬಿತು. ೭೭. ಸೈನ್ಯದ ಭಾರದಿಂದ ಭೂಮಿಯು ಕುಸಿಯಿತು. ಹೆಚ್ಚಾದ ಸೇನಾ ಧೂಳಿಯಿಂದ ಆಕಾಶಗಂಗೆಯು ಕೆಸರಿನಿಂದ ಕಲುಷಿತವಾಯಿತು. ನಗಾರಿಗಳ ಗಂಭೀರವಾದ ಧ್ವನಿಯಿಂದ ದಿಗ್ಗಜಗಳು ನಡುಗತೊಡಗಿದವು. ಎತ್ತರವಾದ ಧ್ವಜಪಟಗಳು ಗುಂಪಾಗಿ ಸೇರಿ ಮನೋಹರವಾದ ಸೂರ್ಯನ ಬಿಸಿಲು ನೆಲಕ್ಕೆ ಬೀಳದಂತಾಯಿತು. ಆ ರಾಜ

ವ॥ ಅಂತೆಳ್ತಪ್ಪಾರ್ಗಳ್ ಕಲಿಗಳ್ ಕರತಳದಿನೊರೆಗಳೆದು ಕುರುಳ್ಚುವ ಕೈದುಗಳ ಬಳ್ಳಿ ವೆಳಗಿಂ ಗೊಂಚಲ್ಮಿಂಚುಗಳ್ ಸಂಚಳಿಸಿದಂತೆಯುಂ ಪಡಿತಳಿಸಿ ನಡೆಗೊಳ್ಳ ಸಿಂಧುರಾರುಣಿತ ಗಂಧ ಸಿಂಧುರಸಂದೋಹದಿಂ ಸಂಧ್ಯಾರುಣಿತ ಪಶ್ಚಿಮಾಚಲಂ ಪಲವುರೂಪಾಂತು ನಡೆಗೊಳ್ವಂತೆಯುಂ ಪಕ್ಕರ್ಝಲ್ಲಿಗಳಿಂ ಪರಿಶೋಭೆವಡೆದು ಪರಿವ ತುರಂಗಸಂಘದಿಂ ನೊರೆವಾಲೆವೆರಸಿ ತರಂಗೋಡು ತರಂಗಸಂಘಾತಂ ಬಳಜಳಧಿಯೊಳ್ನೆಗೆದಂತೆಯುಂ ಮೇಲೆ ನೆಗೆದೊತ್ತರಿಸಿ ನಡೆವ ಮುತ್ತಿನ ಸತ್ತಿಗೆ ಗಳಿಂ ಚಂದ್ರಭುವನಮವತರಿಸಿದಂತೆಯುಂ ಸಾಲ್ವಿಡಿದು ಸೂಸುವ ಧವಳಚಾಮರಂಗಳಿಂದಂಚೆ ವಿಂಡನೆರ್ಬಿಸಿದುಂತೆಯುಂ ಭೋಂಕನೆ ನೂಂಕಿಬರ್ಪ ಮಣಿಮಯಮಾದ ತೇರ್ಗಳಿಂದಿಂದ್ರಚಾಪಂ ಬೆತ್ತ ನೀರತೇರ್ಗಳಿಳೆಗಿಳಿದು ತಳರ್ವಂತೆಯುಂ ಕವಿತರ್ಪ ಕಠಿಣಜೀಟಕಂಗಳಿಂ ಕಮಠಕೋಟ ಕಣ್ಗೆ ಗೋಚರಿಸಿದಂತೆಯುಂ ಮಕುಟವರ್ಧನರ ರಮಣೀಯಮಣಿಮಕುಟಂಗಳಿಂ ಮಾರ್ತಂಡಮಂಡಳಂ ಗಳಳುರ್ಕೆಗೊಂಡುದಿಸಿದಂತೆಯುಂ ನೆರನೆರೆದು ತರಂಬೆತ್ತು ಛರ್ಮ್ಯಹರ್ಮ್ಯಂಗಳೊಳ್ಕ್ಯೊರ್ಮೆಯಿಂ ನೋಳ್ಪ ಪೊಳಲ್ವೆಂಡಿರ ಕಣ್ಗೆ ಕೌತುಕಾವಹಮಾಗೆ ನರೇಂದ್ರಂ ತುರಂಗಮಂ ಕರತಳಾಸ್ಫಾಳನಂ ಗೈದು ಮಡಸನ್ನೆಯಂ ಮನದೊಳ್ ನೆನೆವಲ್ಲಿಂ ಮುನ್ನಮ

ಶೇಖರನು (ಇಂಥ ವೈಭವದೊಡನೆ ಕೂಡಿ) ಪ್ರೀತಿಯಿಂದ ಬಂದನು. ವ॥ ಆ ಪ್ರಕಾರ ಬರುವ ಕಾಲದಲ್ಲಿ ಪರಾಕ್ರಮಿಗಳು ಕೈಯಿಂದ ಒರೆಗಳೆದು ಝಳಪಿಸುತ್ತಿರುವ ಕತ್ತಿಗಳ ಕಾಂತಿಯು ಪರಂಪರೆಯು ಮಿಂಚಿನ ಗೊಂಚಲುಗಳು ಸಂಚಲಿಸಿದ ಹಾಗೆಯೂ, ದಟ್ಟ ವಾಗಿ ಬರುವ ಕುಂಕುಮದ ಹುಡಿಯಿಂದ ಕೆಂಪುಗೊಂಡ ಮದಗಜಗಳ ಸಮೂಹವು ಸಾಯಂಕಾಲದ ಪಶ್ಚಿಮದಿಕ್ಕು ನಾನಾ ಆಕಾರ ಧರಿಸಿ ಸಂಚರಿಸಿದಂತೆಯೂ, ಪಕ್ಕದಲ್ಲಿ ರುವ ಜಾಲರಿಗಳಿಂದ ಶೋಭಿಸುತ್ತ ಬರುವ ಕುದುರೆಗಳ ಸಮೂಹವು ಚತುರಂಗಸೈನ್ಯ ವೆಂಬ ಸಮುದ್ರದಿಂದ ಏಳುವ ನೊರೆಗಳಿಂದ ಕೂಡಿದ ಅಲೆಗಳಂತೆಯೂ, ಮೇಲಕ್ಕೆ ಹಾರಿ ದಟ್ಟವಾಗೊಂಡು ಬರುತ್ತಿರುವ ಮುತ್ತಿನ ಕೊಡೆಗಳು ಚಂದ್ರಲೋಕವೇ ಭೂಮಿಗೆ ಇಳಿದು ಬರುವಂತೆಯೂ, ಸಾಲುಸಾಲಾಗಿ ಬೀಸುತ್ತಿರುವ ಬಿಳಿಯ ಚಾಮರಗಳು ಹಂಸಪಕ್ಷಿ ಗಳನ್ನು ಎಬ್ಬಿಸಿದ ಹಾಗೆಯೂ, ಒಮ್ಮೆಲೆ ವೇಗವಾಗಿ ಹರಿದುಬರುತ್ತಿರುವ ರತ್ನಖಚಿತ ವಾದ ರಥಗಳು ಕಾಮನಬಿಲ್ಲಿನಿಂದ ಕೂಡಿದ ಮೇಘಗಳು ಭೂಮಿಗೆ ಇಳಿದುಬಂದು ಸಂಚರಿಸಿರುವ ಹಾಗೆಯೂ, ಆಚ್ಛಾದಿಸಿಕೊಂಡಿರುವ ಕಠಿಣವಾದ ಗುರಾಣಿಗಳು ಆನೆಗಳ ಸಮೂಹವು ನೇತ್ರಗಳಿಗೆ ಕಾಣುವಂತೆಯೂ, ಕ್ಷತ್ರಿಯರ ರತ್ನಕಿರೀಟಗಳು ಸೂರ್ಯಮಂಡಲ ಗಳು ವ್ಯಾಪಿಸಿಕೊಂಡು ಹುಟ್ಟಿದಹಾಗೆಯೂ ಕೂಡಿ ಕೂಡಿ ಸಾಲಾಗಿ (ಬಂದುವು). ಉಪ್ಪರಿಗೆಗಳನ್ನೇರಿ ಪ್ರೀತಿಯಿಂದ ನೋಡುವ ಪಟ್ಟಣದ ಸ್ತ್ರೀಯರ ನೇತ್ರಗಳಿಗೆ ಕೌತು ಕವನ್ನುಂಟುಮಾಡುವ ಹಾಗೆ ರಾಜಶೇಖರನು ಕುದುರೆಯನ್ನು ಕೈಯಿಂದ ತಟ್ಟಿ,

ಉ॥ ಕಂತುಕದಂತೆ ಪುಷ್ಕರತಳಕ್ಕೊಗೆದೂರ್ವಿಕೆಯಂತೆ ಪಾಯ್ದು ಮಿಾ
ನಂತಿರೆ ಮಾಱಿಲಂಘಿಸಿ ಲಸನ್ಮೃಗದಂತಿರೆ ದಾಂಟಿ ಮಿಂಚಿದೆಂ
ಬಂತೆ ನಭೋಂತದೊಳ್ಪೊಳೆದು ಸುಂಟುರೆಯಂತಿರೆ ಸುತ್ತಿ ಪತ್ತಿ ನಾ
ಗಾಂತಕನಂತೆ ಪಾರಿದುದು ತುಂಗತುರಂಗಮಿಳಾಧಿನಾಥನಾ ೭೮

ಕಂ॥ ಆ ವಾಜಿಯ ಹೇಷಾರವ
ಮಾ ವಾಸವನಶ್ವಕರ್ಣಮಂ ಪುಗೆ ಭಯಮು
ತ್ತೀವೇಳ್ವಿನಿನ್ನುಮದನೇ
ಭಾವಿಸುತುಚ್ಚೈಶ್ರವತ್ವಮಾಳ್ದುದು ತೋರ್ಕು೯ಂ ೭೯

ವ॥ ಅಂತುಮಲ್ಲದೆಯುಂ

ಕಂ॥ ತುರಂಗಖರಖುರ ಸಮುತ್ಥಿತ
ಧರಾರಜಂ ನೆಗೆದುತೀವೆ ನಿಜಲೋಕದೊಳಾ
ಸರಸಿಜಸಂಭವನದಱಿಂ
ಳ್ಪೊರೆದಂದಿಂದಲ್ತೆ ತಾಂ ರಜೋನ್ವಿತನಾದಂ ೮೦

ನಗರಿ ಪುಗೆ ಚಿಂತೆ ಸಂತಸ
ವೊಗೆದುದು ರವಿರಾಗವಳಿದನಸುರಾರಿಯ ನಿ
ದ್ರೆಗೆ ಮುಳಿದಳ್ ರಮೆ ಕವಿ ಮಿಗೆ
ನಗುತಿರ್ದಂ ಚಿಂತೆಗೆಯ್ದನಮರಾಚಾರ್ಯಂ ೮೧

ಹಿಮ್ಮಡಿಯ ಸಂಜ್ಞೆಯನ್ನು ಹೃದಯದಲ್ಲಿ ನೆನೆಯುವ ಮೊದಲೇ ೭೮. ಆ ರಾಜಶೇಖರ ನೇರಿದ ಕುದುರೆಯು ಚೆಂಡಿನ ಹಾಗೆ ಗಗನಕ್ಕೆ ನೆಗೆದು, ಚಂಗನೆ ಜಿಗಿದು, ತೆರೆಯಂತೆ ನುಗ್ಗಿ, ಮಿಾನಿನ ಹಾಗೆ ಸಾಗಿ, ಜಿಂಕೆಯ ಹಾಗೆ ಕುಪ್ಪಳಿಸಿ, ಮಿಂಚಿನ ಹಾಗೆ ಆಕಾಶತಳ ದಲ್ಲಿ ಹೊಳೆದು, ಸುಂಟರುಗಾಳಿಯಂತೆ ಸುತ್ತಿ ಗಗನಕ್ಕೆ ಅಡರಿ, ಗರುಡನ ಹಾಗೆ ಮೇಲಕ್ಕೆ ಹಾರಿತು. ೭೯. ಆ ರಾಜಶೇಖರನ ಕುದುರೆಯ ಹೇಷಾರವವು ಇಂದ್ರನ ಕುದುರೆಯಾದ ಉಚ್ಚೈಶ್ರವಸ್ಸಿನ ಕಿವಿಗೆ ಬೀಳಲು, (ಅದು) ಭಯಗ್ರಸ್ತವಾಗಿ ಅದನ್ನೇನು ಹೇಳಲಿ ! ಇದುವರೆಗೂ ಆ ಧ್ವನಿಯನ್ನೇ ಮನಸ್ಸಿನಲ್ಲಿ ಭಾವಿಸುತ್ತ ಕಿವಿಯನ್ನು ನಿಮಿರಿಸಿಕೊಂಡಿರು ವುದು ! ವ॥ ಅದೂ ಅಲ್ಲದೆಯೂ ೮೦. ಕುದುರೆಯ ಕಠಿಣವಾದ ಗೊರಸುಗಳಿಂದ ಮೇಲಕ್ಕೆದ್ದ ಭೂಮಿಯ ಧೂಳು ಮೇಲಕ್ಕೆ ಹಾರಿ ಬ್ರಹ್ಮನ ಸತ್ಯಲೋಕದಲ್ಲಿ ವ್ಯಾಪಿಸ ಲಾಗಿ, ಅವನು ಆ ದಿವಸ ಮೊದಲ್ಗೊಂಡು ಇದುವರೆಗೂ ರಜೋಗುಣ (ಧೂಳಿಯಿಂದ) ದಿಂದ ಕೂಡಿದವನಾದನಲ್ಲವೆ ? ೮೧. ಇಂದ್ರನಿಗೆ ಚಿಂತೆ ಸಂತೋಷವೆರಡೂ ಉಂಟಾಯಿತು. ಸೂರ್ಯನು ರಾಗವಳಿದನು (ರಕ್ತಿಮೆಯನ್ನು ಬಿಟ್ಟನು). ವಿಷ್ಣುವಿನ ನಿದ್ರೆಗೆ ಲಕ್ಷ್ಮಿಯು ಕೋಪಿಸಿಕೊಂಡಳು. ಶುಕ್ರಾಚಾರ್ಯನು ಅತಿಶಯವಾಗಿ ನಗುತ್ತಿದ್ದನು. ಬೃಹಸ್ಪತ್ಯಾಚಾರ್ಯನು ಚಿಂತೆಮಾಡತೊಡಗಿದನು. ಅದು ಹೇಗೆಂದರೆ : (ವಿಶೇಷ ವಿವರಣೆ) ಇಂದ್ರನಿಗೆ ಸಂತೋಷ ವ್ಯಸನಗಳೆರಡೂ ಉಂಟಾಗಲು ಕಾರಣವೇನೆಂದರೆ–ಧೂಳಿಯು

ವ॥ ಆಗಳ್

ಚಂ॥ ಪರಿಯಿಪ ನೆಟ್ಟನಟ್ಟುವಿದಿರೇಱಿಪ ಪಾಱಿಪ ಕೀಳ್ತು ದಾಂಟಿಪಿ
ರ್ಬರಿಯೊಳೆ ಸುತ್ತಿ ಪಾಯತಿಕೆಯಿಂ ಮಿಗೆ ನರ್ತಿಪ ದಿಂಡುವಾಯಲು
ಪ್ಪರಿಪ ಬೆಡಂಗಿನಿಂ ನಡೆಯಿಪಂಗಮಲುಂಗದೆ ಪಂಚಧಾರೆಯೊಳ್
ಪರಿಣತಿದೋರ್ಪ ವಾಹಳಿತನಂ ಬಗೆಗೊಂಡುದು ಮಂತ್ರಿಪುತ್ರನಾ ೮೨

ವ॥ ಇಂತತುಳ ವಿಳಾಸಂಬಡೆದಶ್ವಾರೋಹಣಪರಿಣತಿಯಿಂ ಪರಿಶೋಭೆವಡೆದಾ ಮಿತ

ಹೋಗಿ ಸ್ವರ್ಗಲೋಕವನ್ನು ವ್ಯಾಪಿಸಲು, ಅದನ್ನು ನೋಡಿ ಪುನಃ ಕಾಲಕೇಯು ಮತ್ತು ನಿವಾತಕವಚರು ನನ್ನ ಪಟ್ಟಣವನ್ನು ಮುತ್ತಿಕೊಂಡರೋ ಎಂಬ ಚಿಂತೆ ಯಾಯಿತು. ಆಮೇಲೆ ಆಲೋಚನೆ ಮಾಡಲಾಗಿ ಇದು ರಾಜಶೇಖರನ ವೈಹಾಳಿಯ ಕುದುರೆಯ ಗೊರಸಿನಿಂದ ಹುಟ್ಟಿದ ಧೂಳಿಯೆಂದು ತಿಳಿದು ಈ ಪರಾಗವು ಸಮುದ್ರದಲ್ಲಿ ಹೋಗಿ ತುಂಬಿಕೊಂಡು ಬಿಡುವ ಕಾರಣ ಪೂರ್ವದಲ್ಲಿ ನನ್ನ ಶಕ್ರಾಯುಧದ ಹೊಡೆತಕ್ಕೆ ಹೆದರಿ ಹೋಗಿ ಸಮುದ್ರದಲ್ಲಿ ಅಡಗಿದ ಮೈನಾಕಪರ್ವತವು ಪುನಃ ನನಗೆ ಸಿಗುತ್ತದೆ ಎಂದು ಸಂತೋಷವಾಯಿತು. ಸೂರ್ಯನು ಈ ಪರಾಗವನ್ನು ನೋಡಿ, ಇದು ರಾಹುವೆಂದು ಭಾವಿಸಿ ತನ್ನ ಸಂತೋಷವನ್ನುಳಿದು ಭಯದಿಂದ ಬೆಳ್ಳಗಾದನು. ಕ್ಷೀರಸಮುದ್ರದಲ್ಲಿ ವಟಪತ್ರಶಾಹಿಯಾಗಿ ವಿಷ್ಣುವು ಮಲಗಿಕೊಂಡ ಸಮಯದಲ್ಲಿ ಲಕ್ಷ್ಮಿಯು ಕೋಪಿಸಿಕೊಂಡಳು. ಏಕೆಂದರೆ, ಈ ಧೂಳನ್ನು ನೋಡಿ ಮಧುಕೈಟಭರೆಂಬ ರಾಕ್ಷಸರು ಪುನಃ ಜನ್ಮತಾಳಿ ಆವರಿಸಿಕೊಂಡು ಬಂದರು. ಇಂಥ ಸಮಯದಲ್ಲಿ ಗಾಢ ನಿದ್ರೆ ಮಾಡುತ್ತಿರುವುದು ಯುಕ್ತವಲ್ಲ. ಅಥವಾ ಈ ವಿಶೇಷವಾದ ಧೂಳು ಸಮುದ್ರದಲ್ಲಿ ಬಿದ್ದು ಸಮುದ್ರವು ಹೂತು ಹೋದರೆ ಗತಿಯೇನು ? ಇಂಥ ಸಮಯದಲ್ಲಿಯೂ ಗಾಢನಿದ್ರೆಯಲ್ಲಿರುವನಲ್ಲಾ ಎಂದು ಕೋಪಿಸಿಕೊಂಡಳು. ಶುಕ್ರಾಚಾರ್ಯನು ನಗಲು ಕಾರಣವೇನೆಂದರೆ ಈ ಧೂಳಿಯನ್ನು ನೋಡಿ ಪುನಃ ನನ್ನ ಶಿಷ್ಯನಾದ ಅಂಧಕಾಸುರನು ಬಂದನೆಂದು ಸಂತೋಷಗೊಂಡು ನಕ್ಕನು. ಬೃಹಸ್ಪತಿಯು ಏಕೆ ವ್ಯಸನಗೊಂಡ ನೆಂದರೆ ಈ ಧೂಳಿಯನ್ನು ಕಂಡು ಭ್ರಾಂತಿಯಿಂದ ಪುನಃ ಅಂಧಕಾಸುರನು ದೇವಲೋಕದ ಮೇಲೆ ದಂಡೆತ್ತಿ ಬಂದನು. ಇನ್ನು ಮೇಲೆ ನನ್ನ ಶಿಷ್ಯರಾದ ದೇವತೆಗಳನ್ನು ಮೊದಲಿ ನಂತೆ ಸೆರೆಯಲ್ಲಿಡುವನು ; ಮುಂದೇನು ಮಾಡಬೇಕು ? ಇತ್ಯಾದಿ. ವ॥ ಆಗ ೮೨. ಓಡಿಸುವ, ನೆಟ್ಟಗೆ ಅಟ್ಟುವ, ಎದುರಾಗಿ ಹತ್ತಿಸುವ, ಹಾರಿಸುವ, ಕಿತ್ತು ದಾಟಿಸುವ, ಎರಡೂ ಪಾರ್ಶ್ವಗಳಲ್ಲಿ ಸುತ್ತಿಸುವ, ಸನ್ನಾಹದಿಂದ ಕುಣಿಸುವ, ನುಗ್ಗಿಸುವುದಕ್ಕೆ ಎರಡೂ ಕಾಲುಗಳನ್ನು ಮೇಲಕ್ಕೆತ್ತಿಸುವ, ಬೆಡಗಿನಿಂದ ನಡೆಯಿಸುವ, ಶರೀರವು ಅಲುಗಾಡದ ಹಾಗೆ ಐದು ವಿಧವಾದ ಗಮನದಲ್ಲಿ ಪ್ರೌಢಿಮೆ ತೋರಿಸುವ ಮಿತವಚನನ ಅಶ್ವಾರೋಹಣಕೌಶಲ್ಯ ಮನೋಹರವಾಗಿತ್ತು. ವ॥ ಈ ರೀತಿ ಅಸಮಾನವಾದ ವಿನೋದವನ್ನು ಹೊಂದಿದ ಕುದುರೆಯ ಏರಾಟದ ಪ್ರೌಢಿಮೆಯಿಂದ ಪರಿಶೋಭೆಯನ್ನು

ವಚನಂಬೆರಸು ರಾಜಶೇಖರರಾಜೇಂದ್ರಂ ರಾಜವೀಥಿಯಂ ದಾಂಟ ಪುರಬಹಿರ್ದೇಶದ ವೈಹಾಳಿಯ ಬಯಲ್ಗೆ ಸಸಂಭ್ರಮಂ ಬರೆ ತದಾದೇಶವಮಂ ಪಡೆದು

ಚಂ॥ ಬಲಮೆರಡಾಗಿ ಪೆರ್ಮೆವಡೆದೊಡ್ಡಿ ವಿಳಾಸದೆ ನಿಂದು ಬೊಬ್ಬೆಗೊ
ಟ್ಟಲಿದು ವಿನೋದಯುದ್ಧಮನವುರ್ಚಲೊಡರ್ಚೆ ಹಯಂಗಳೊಳ್ ಹಯಾ
ವಳಿ ಪೊಸತೇರ್ಗಳೊಳ್ ಮಿಸುಪ ತೇರ್ಗಳಿಭಂಗಳೊಳೊಲ್ದಿಭಂಗಳು
ಜ್ವಲಭಟರಾಜಿಯೊಳ್ಸುಭಟರಾಜಿ ಪಳಂಚಿದುದೇನನೆಂದಪೆಂ ೮೩

ವ॥ ಅಂತುಭಯವಾರ್ಧಿಗಳಿದಿರ್ಚಿ ಪಳಂಚುವಂತೆ ಪಳಂಚಿ ಮಿಸುನಿವೆಸೆದ ಪುಟ್ಟಿ ಗೋಲ್ಗಳಂ ಪಿಡಿದು ಜಡಿದೊಟ್ಟಜೆಯಿಂದಿಟ್ಟಣಿಸಿ ನಿಂದು

ಚಂ॥ ತಿವಿವ ಮರುಳ್ಚುವಬ್ಬರಿಪ ಗರ್ವಿಪ ಬೊಬ್ಬಿರಿವಾರ್ವ ಸಾರ್ವ ಮೋ
ಣ್ಮವಿವ ಕಡಂಗುವಿಟ್ಟಣಿಪ ಸುತ್ತುವ ಪತ್ತುವ ನಿಲ್ವ ಗೆಲ್ವ ಪೊ
ಣ್ಮುವ ಪುಟವೇಳ್ವ ಪಾಯ್ವ ಮಿಗೆಪೊಯ್ವ ತೊಡಂಕುವ ತೋಟಿಗೈವ ಕೂಂ
ಕುವ ನೆಜಿನೂಂಕುವೇಳ್ಗೆಯ ಬಲಂ ಬಲಗೊಂಡುದು ತತ್ಕುಮಾರರಾ ೮೪

ವ॥ ಮತ್ತಮಾ ಸೇನಾಚಕ್ರದೊಳಳುರ್ಕೆವೆತ್ತು

ಹೊಂದಿದ ಆ ಮಿತವಚನಸಮೇತನಾದ ರಾಜಶೇಖರನು ರಾಜಬೀದಿಯನ್ನು ದಾಟಿ, ಪಟ್ಟಣದ ಹೊರಭಾಗದಲ್ಲಿರುವ ಕುದುರೆಸವಾರಿಯ ಬಯಲಿಗೆ ಸಂಭ್ರಮದಿಂದ ಬರಲಾಗಿ ಆತನ ಅಪ್ಪಣೆಯನ್ನು ಹೊಂದಿ, ೮೩. ಆ ರಾಜಶೇಖರನ ಚತುರಂಗದಿಂದ ಕೂಡಿದ ಬಲವೇ ಎರಡು ಭಾಗವಾಗಿ ಅತಿಶಯವನ್ನು ಪಡೆದು ವಿನೋದಗೊಂಡು ನಿಂತು, ಆರ್ಭಟಿಸಿ ಕೂಗಾಡಿ, ಹುಸಿಯುದ್ಧವನ್ನು ಮಾಡುವುದಕ್ಕೆ ಪ್ರಾರಂಭಗೊಂಡು, ಕುದುರೆಗಳೊಡನೆ ಕುದುರೆಗಳ ಸಮೂಹವೂ, ನೂತನ ತೇರುಗಳೊಡನೆ ಶೋಭಿಸುವ ತೇರುಗಳೂ, ಆನೆಗಳೊಡನೆ ಆನೆಗಳೂ, ಪ್ರಕಾಶಮಾನರಾದ ಶೂರರುಗಳೊಡನೆ ಒಳ್ಳೆಯ ಶೂರರಾದ ಭಟರುಗಳೂ ತಾಕಿದ ರೀತಿಯನ್ನು ಏನೆಂದು ಹೇಳಲಿ! ವ|| ಆ ರೀತಿ ಎರಡು ಭಾಗವಾಗಿ ಒಂದಕ್ಕೊಂದು ತಾಗಿದ ರಾಜಶೇಖರನುಹಾರಾಜನ ಬಲವು ಎರಡು ಸಮುದ್ರಗಳು ಎದುರಿಸಿ ತಾಗುವಂತೆ ಇರಲು, ಚಿನ್ನದಿಂದ ಮಾಡಿದ ಹುಟ್ಟಿಗೋಲುಗಳನ್ನು ಹಿಡಿದು ಜಳಪಿಸುತ್ತ ಒಟ್ಟುಗೂಡಿ ಸಾಂದ್ರವಾಗಿ ನಿಂತುಕೊಂಡರು. ೮೪. ಒಬ್ಬರನ್ನೊಬ್ಬರು ತಿವಿದಾಡುವ, ಹಿಂದಕ್ಕೆ ಓಡಿಸುವ, ಗರ್ವವನ್ನು ವ್ಯಕ್ತಪಡಿಸುವ, ಆರ್ಭಟಿಸುವ, ಎತ್ತರ ಧ್ವನಿಯಲ್ಲಿ ಕೂಗುವ, ಮುತ್ತುವ, ಔತ್ಸುಕ್ಯವನ್ನು ವ್ಯಕ್ತಪಡಿಸುವ, ಹೊಂದಾಣಿಕೆಯಿಂದ ಸೇರುವ, ಸುತ್ತುವರಿಯುವ, ಬೆನ್ನಟ್ಟುವ, ನಿಲ್ಲುವ, ಜಯವನ್ನು ಹೊಂದುವ, ಉಬ್ಬುವ, ಪುಟದುಹಾರುವ, ನುಗ್ಗುವ, ಅತಿಶಯವಾಗಿ ಹೊಡೆಯುವ, ತಗುಲುವ, ಜಗಳ ಮಾಡುವ, ಕೂಗಾಡುವ, ತಳ್ಳುವ, ಯುದ್ಧಕ್ರಿಯೆಗಳ ಏಳಿಗೆಯನ್ನು ವ್ಯಕ್ತಪಡಿಸುತ್ತಿರುವ ರಾಜಶೇಖರನ ಆ ಸೈನ್ಯವು ಬಲವಾಗಿ ವ್ಯವಹರಿಸುತ್ತಿತ್ತು. ವ|| ಮತ್ತು ಆ ಸೇನಾಮಂಡಳಿಯಲ್ಲಿ ವ್ಯಾಪಕವಾಗಿ ಕೂಡಿ,

ಕಂ॥ ಸುಳಿಸುಳಿದಶ್ವಮನೇಱುತೆ
ಪೊಳಯಿಸಿ ಮಿಗೆ ದಂಡೆಗುಡುತಿದಿರ್ಚುತೆ ಪೆಱಕಾ
ಲ್ಗೊಳಿಸಿ ಪೆಡಂಮೆಟ್ಟುತ್ತ
ವ್ವಳಿಸುತ್ತೆ ಪಳಂಚಿದರ್ತುರಂಗಿಗಳದಱೊಳ್ ೮೫

ವ॥ ಇಂತು ಪಳಂಚುವ ತುರಂಗಿಗಳಂ ಕಂಡು ಸಡಗರಂ ಮಿಕ್ಕು

ಕಂ॥ ಅಣೆದಲೆದು ನೂಂಕಿ ಗರ್ಜಿಸು
ತಣಿಯರಮಣೆಗೊಂಡಿಭಂಗಳಂ ಭರಿಕೈಗ
ಳ್ಪೆಣೆದಿರೆ ಕಾದಿಸಿ ತಾಮುಂ
ಪೊಣರ್ದದಿಭಾರೋಹಕರ್ವಿಳಾಸದಿನಾಗಳ್ ೮೬

ವ॥ ಇಂತು ಪೊಣರ್ದಿಭಾರೋಹಕರ ಕಡುಪಂ ನೋಡಿ ನೀಡುಂ ಕಡಂಗಿ

ಕಂ॥ ಇದಿರೊಳ್ಪರಿಯಿಸಿ ರಥಮಂ
ತುದಿಯೊಳ್ಕಳಿರ್ದಾಡೆ ಕೇತನಂ ಪೂಸರದಿಂ
ಪದೆದೆಚ್ಚಾಡಿದರರದಟಂ
ದದಟಿ ಪರಾಗಂ ನಿಜಾಂಗದೊಳ್ ಪೊರೆವಿನೆಗಂ ೮೭

ವ॥ ಆ ರಥಿಕರಾಟೋಪಮನುಭಯಪದಾತಿ ಕಂಡು ಕೈಗಣ್ಮಿನಿಂದು

೮೫. ಸುಳಿದಾಡಿ ಕುದುರೆಗಳನ್ನೇರುತ್ತ, ಹೊಳೆಹೊಳೆಯುವಂತೆ ಮಾಡುತ್ತ, ಅತಿಶಯವಾಗಿ ದಂಡೆಗೊಳ್ಳುತ್ತ, (ಎಡಗೈಗಳನ್ನು ಮುಂದಕ್ಕೆ ಚಾಚುತ್ತ ?) ಎದುರಾಗುತ್ತ, ಕಾಲುಗಳನ್ನು ಹಿಂದಕ್ಕೆ ಮಡಚಿ ಹಿಮ್ಮೆಟ್ಟುತ್ತ, ಅಪ್ಪಳಿಸುತ್ತ ಸೈನ್ಯದಲ್ಲಿ ಕುದುರೆಯ ಆರೋಹಕರು ಒಬ್ಬರನ್ನೊಬ್ಬರು ತಾಗಿದರು. ವ॥ ಆ ರೀತಿ ತಾಕಲಾಟ ಮಾಡುವ ಕುದುರೆಯ ಭಟರನ್ನು ಕಂಡು ಉತ್ಸಾಹ ಹೆಚ್ಚಿ ೮೬. ಆನೆಯನ್ನೇರಿದ ಮಾವಟಿಗರು ಒಬ್ಬರನ್ನೊಬ್ಬರು ತಿವಿದು, ಪೀಡಿಸಿ, ತಳ್ಳಿ, ಗರ್ಜನೆಮಾಡುತ್ತ, ಚೆನ್ನಾಗಿ ಜೋಡಿಗೊಂಡ ಆನೆಗಳ ಸೊಂಡಿಲುಗಳು ಹೆಣೆದುಕೊಂಡಿರುವ ಹಾಗೆ ಇರಲು, ಯುದ್ಧ ಮಾಡಿಸುವ ವಿನೋದದಿಂದ ಕೂಡಿ ಜಗಳಮಾಡಿದರು. ವ॥ ಈ ರೀತಿ ಹೋರಾಡಿದ ಆನೆಯನ್ನೇರಿದವರ ಸಾಮರ್ಥ್ಯವನ್ನು ನೋಡಿ ಹೆಚ್ಚಾಗಿ ಔತ್ಸುಕ್ಯವನ್ನು ಹೊಂದಿದವರಾಗಿ, ೮೭. ರಥಿಕರಾದ ಶೂರರುಗಳು ಮುಂಭಾಗಕ್ಕೆ ರಥಗಳನ್ನು ನಡೆಯಿಸಿ, ಆ ರಥಗಳ ಮೇಲ್ಭಾಗದಲ್ಲಿ ಕಟ್ಟಿದ್ದ ಧ್ವಜಗಳು ತೊನೆದಾಡುತ್ತಿರಲು, ಹೂಗಳ ಬಾಣಗಳಿಂದ ಅವುಗಳ ಪರಾಗಧೂಳಿಯು ತಮ್ಮ ಮೈಮೇಲೆ ವ್ಯಾಪಿಸಿಕೊಳ್ಳುತ್ತಿರಲಾಗಿ ಪ್ರೀತಿಗೊಂಡು ಒಬ್ಬರ ಮೇಲೊಬ್ಬರು ಪ್ರಯೋಗ ಮಾಡಿದರು. (ಹೂವಿನಿಂದ ಮಾಡಿದ ಬಾಣಗಳನ್ನು ಪ್ರಯೋಗಿಸಿದರು. ಅವುಗಳ ಪರಾಗ ಮೈಮೇಲೆ ಕವಿಯುತ್ತಿತ್ತೆಂದು ಭಾವ) ವ॥ ಆ ರಥಿಕರ ಶೌರ್ಯವನ್ನು ಉಭಯಭಾಗದಲ್ಲಿರುವ ಕಾಲ್ದಳದವರು ಕಂಡು,

ಚಂ॥ ಅಲರ್ಗಳ ಚೆಂಡು ಕುಂಕುಮದ ನೀರ್ಗಳ ಕುಪ್ಪಿಗೆ ಚಂದನಚ್ಛಟಾ
ಕಲಿತ ಸರೋಜಕೋರಕಮುದಾತ್ತ ಮೃಗೋದ್ಭವಚೂರ್ಣಪೂರ್ಣಮು
ಜ್ವಲಿತ ರಸಾಲಪಲ್ಲವದ ಪೊಟ್ಟಣಮೆಂಬಿವಜೀಂದಿದಿರ್ಚಿ ತ
ದ್ಬಲಮೆರಡಿಟ್ಟು ತಳ್ತಡಸಿ ಬೊಬ್ಬಿಱಿದಾಡಿದುದೇನನೆಂದಪೆಂ ೮೮

ವ॥ ಇಂತು ವಿನೋದಯುದ್ಧಮಂ ಚತುರತೆಯಿಂ ರಚಿಸಿ ಚಾತುರಂಗಂ ಪುರಾಭಿಮುಖ ಮಾಗಿ ತಿರಿಗಿ ಸರಭಸಂ ಬರೆವರೆ

ಮ॥ಸ್ರ॥ ಕರಿದಾನಾಸಾರದಿಂ ತಳ್ತಿಳೆ ಬಳಭರದಿಂ ತಾಂ ಬೆಮರ್ತಂತೆ ತೋಱು
ತ್ತಿರೆ ವಾಜಿವ್ರಾತವಕ್ತ್ರಚ್ಯುತಸಿತವಿಸರತ್ಫೇನಪಿಂಡೌಘಮೊಕ್ಕಂ
ತಿರೆ ಭೇರಿಧ್ವಾನದಿಂದಂ ಭಗಣಮಿನನಡಂಗಿರ್ದವೊಲ್ ತೋಱಿ ಕೇತೂ
ತ್ಕರಭೀತಂ ಧೂಳಿಜಾಳಂ ಕವಿಯೆ ಜವದಿನೈತಂದುದಾ ರಾಜಸೈನ್ಯಂ ೮೯

ಚಂ॥ ಖರಖುರಘಾತಜಾತ ಧರಣೀತಳರೇಣುವಜಾಂಡಪಂಕಜಾ
ತರಜಮಿದೆಂಬಿನಂ ನೆಗೆದು ತೀವಿರೆ ವೇಗಕೆ ಸೋಲ್ತು ಗೋಂಟನೊ
ಳ್ಮರುತನಡಂಗೆ ವೈಗಱಿಯೆ ಪುಲ್ಲೆ ವನಾಂತದೊಳಿಂದ್ರನಶ್ವಮು
ಳ್ಳಿರೆ ಸುರಲೋಕದೊಳ್ಕಿಳಿರ್ದದೇಂ ಪರಿದತ್ತೊ ತುರಂಗಮದ್ವಯಂ ೯೦

೮೮. ಆ ಕಾಲ್ದಳವು ಎರಡು ಪಂಗಡವಾಗಿ ಎದುರು ಬದುರಾಗಿ ನಿಂತು ಆರ್ಭಟ ಮಾಡಿ, ಹೂಗಳ ತೊಂಡೆಗಳು ಕುಂಕುಮಕೇಸರಿಯಿಂದ ಕೂಡಿದ ಜಲಪಾತ್ರೆ, ಚಂದನಗಂಧದಿಂದ ಪೂರ್ಣವಾದ ಕಮಲದ ಮೊಗ್ಗು, ಅಧಿಕವಾದ ಕಸ್ತೂರಿಯ ಹುಡಿ, ಉಜ್ವಲವಾದ ಮಾವಿನ ಚಿಗುರಿನ ಗೊಂಚಲು, ಇವೇ ಮೊದಲಾದವುಗಳನ್ನು ಒಬ್ಬರ ಮೇಲೊಬ್ಬರು ಚಲ್ಲಾಡಿ ಬೊಬ್ಬಿಟ್ಟು ಚೀರಾಡಿತು. ಅದನ್ನು ಏನೆಂದು ಹೇಳಲಿ! ವ॥ ಈ ರೀತಿ ವಿನೋದಯುದ್ಧವನ್ನು ಚಾತುರ್ಯದಿಂದ ಮಾಡಿ, ಚತುರಂಗಬಲವು ಪೂರ್ವಕ್ಕೆ ಮುಖಮಾಡಿ ತಿರುಗಿ, ರಭಸದಿಂದ ಕೂಡಿ ಪಟ್ಟಣದೊಳಕ್ಕೆ ಬರಲಾಗಿ, ೮೯. ಗಜಗಳ ಮದೋದಕಧಾರೆಯಿಂದ ವ್ಯಾಪಿಸಲ್ಪಟ್ಟ ಭೂಮಿಯೆಲ್ಲವೂ ಚತುರಂಗ ಸೈನ್ಯದ ಭಾರದಿಂದ ಬೆವರಿದ ಹಾಗೆ ಕಾಣಿಸುತ್ತಿರಲು, ಕುದುರೆಗಳ ಬಾಯಿಂದ ನೆಲದಲ್ಲಿ ಬಿದ್ದ ಬೆಳ್ಳನೆಯ ನೊರೆಯ ಉಂಡೆಗಳ ಗುಂಪು ಭೇರೀಧ್ವನಿಗಳಿಂದ ನಕ್ಷತ್ರಗಳ ಗುಂಪು ಅದುರಿ ನೆಲಕ್ಕೆ ಸುರಿದ ಹಾಗೆ ಕಾಣುತ್ತಿರಲು, ಧ್ವಜಗಳ ಗುಂಪಿನಿಂದ ಭಯಗ್ರಸ್ತನಾದ ಸೂರ್ಯನು ಅಡಗಿಕೊಂಡ ಹಾಗೆ ಧೂಳಿಪಟವು ವ್ಯಾಪಿಸಿರಲು ವೇಗದಿಂದ ಆ ರಾಜಶೇಖರನ ಚತುರಂಗಬಲವು ನಗರದೊಳಗೆ ಬಂದಿತು. ೯೦. ಆ ಕುದುರೆಗಳ ಕಠಿಣವಾದ ಗೊರಸುಗಳ ತುಳಿತದಿಂದ ಹುಟ್ಟಿದ ಭೂಮಿಯ ಧೂಳಿಯು ಈ ಬ್ರಹ್ಮಾಂಡವೆಂಬ ಕಮಲದ ಧೂಳಿಯೋ ಎನ್ನುವ ಹಾಗೆ ಹಾರಿ ಅಂತರಿಕ್ಷದಲ್ಲಿ ತುಂಬಿಕೊಳ್ಳಲು, ಗಾಳಿಯು ಕುದುರೆಗಳ ಆ ವೇಗಕ್ಕೆ ಸೋತು ಕಾಡಿನ ತುದಿಯಲ್ಲಿ ಅವಿತುಕೊಂಡಿತು. ದೇವಲೋಕದಲ್ಲಿ ದೇವೇಂದ್ರನ ಉಚ್ಚೈಶ್ರವಸ್ಸೆಂಬ ಕುದುರೆಯು ನನ್ನಿಂದಲೂ ಈ ರೀತಿ ಗಮಿಸುವುದಕ್ಕೆ ಆಗುವುದಿಲ್ಲವೆಂದು ಭಯಪಟ್ಟಿತು. ಈ ರೀತಿ ಆ ಎರಡೂ ಕುದುರೆಗಳು ಹೇಷಾರವ

ವ॥ ಮತ್ತಂ

ಚಂ॥ ಸುಳಿಸುಳಿದೊತ್ತಿ ಪತ್ತಿ ತವೆ ಸುತ್ತಿ ಕಡಂಗಿ ಬೆಡಂಗುವೆತ್ತು ಸಂ
ಚಳಿಸಿ ನಭಕ್ಕೆ ಮಾಱಿ ಮಿಗೆ ಪಾಱಿ ಚಮತ್ಕೃತಿವೀಱಿ ತೋಱಿ ತ
ನ್ನಳವನಿಳಾತಳಕ್ಕೆ ಕಿಳಿರ್ದುಪ್ಪರಿಸುತ್ತುಱಿ ಮಿಂಟಿ ದಾಂಟಿ ಕಂ
ಟಳಿಸಿ ಪೊದಳ್ದುಪಾಯ್ದು ಪರಿಯಿಟ್ಟುದು ವಾಯುರವಂ ಹಯದ್ವಯಂ ೯೧

ವ॥ ಇಂತನಂತಸಂಭ್ರಮಂ ಮಿಗೆ ಜವಗಜಮನತಿಕ್ರಮಿಸಿ ಪರಿವಾ ರಾಜವಾಜಿಗಳನೋಜೆ
ಮಿಗೆ ರಾಜವೀಥಿಯೊಳಾ ಕುಮಾರರಿರ್ವರ್ವಿವಿಧತರ ಗತಿಚತುರತೆಯಿನೇಱುತ್ತುಂ ಬರ್ಪಾಗಳ್

ಮ॥ ಕನಕಸ್ಫಾಟಿಕ ರತ್ನಹರ್ಮ್ಯಚಯಮಂ ಬಂದೇಱಿ ನಿಂದಲ್ಲಿ ಕಾ
ಮಿನಿಯರ್ಸಾಲ್ವಿಡಿದೀಕ್ಷಿಸುತ್ತಿರೆ ತದಾಸ್ಯಶ್ರೇಣಿಯುಂ ದೀರ್ಘಲೋ
ಚನದಿವ್ಯದ್ಯುತಿಯುಂ ಪಳಂಚಲೆದುದುದ್ಯತ್ದರ್ಪಣೇಂದ್ರೀವರಾ
ಳಿನಿಯುಕ್ತೋನ್ನತ ಚಾರುತೋರಣಮನಾ ವೀಥೀಪುರೋಭಾಗದೊಳ್ ೯೨

ವ॥ ಆ ವಿಳಾಸಿನಿಯರಲ್ಲದೆಯುಮಲ್ಲಿ ಕೆಲಂಬರಾ ನರೇಂದ್ರನನಭೀಕ್ಷಿಸಲೆಂದು

ಚಂ॥ ತೊಡವೆಳಗಿಂದ್ರಚಾಪಲತೆ ಸೋರ್ಮುಡಿ ಕಾರ್ಮುಗಿಲುರ್ವಿಪಾಯ್ವ ಕ
ಣ್ಗಡೆ ಕುಡಿಮಿಂಚು ಮಂಜು ಮಣಿನೂಪುರ ಸಿಂಜಿತಮಬ್ದರಾವಮೊ
ಗ್ಗೊಡೆಯದೆ ಮೇಲೆ ಸೂಸುವ ಸುಲಾಜೆಗಳೊಳ್ಸಱಿಯಾಗೆ ಬಂದು ಕಾ
ರೊಡತಿಯರಲ್ಲಿ ನಿಂದರೆನೆ ಸೌಧನಗಾಗ್ರದೆ ಪೆಣ್ಗಳೊಪ್ಪಿದರ್ ೯೩

ವನ್ನು ಮಾಡುತ್ತ ಓಡಿದುವು. ವ|| ಆ ಬಳಿಕ ೯೧. ಆ ಕುದುರೆಗಳು ಸುಳಿಸುಳಿದು ಒತ್ತೊತ್ತಾಗಿ ಸೇರಿಕೊಂಡು ಉತ್ಸಾಹದ ಬೆಡಗಿನಿಂದ ಕೂಡಿದವುಗಳಾಗಿ, ಸೊಗಸಾಗಿ ಅಲ್ಲಾಡುತ್ತ ಮಿತಿಮೀರಿ ಆಕಾಶಕ್ಕೆ ನೆಗೆದು ಚಮತ್ಕಾರಗಳನ್ನು ತೋರಿಸುತ್ತ, ಭೂಮಿಗೆ ತಮ್ಮ ಸಾಮರ್ಥ್ಯವನ್ನು ತೋರಿಸುತ್ತ, ಕೆನೆಯುತ್ತ, ಮೇಲಕ್ಕೆ ನೆಗೆನೆಗೆದು ಚೆನ್ನಾಗಿ ಮಿನುಗುತ್ತ ಹಾರಿ, ಕುಂಟಳಿಸಿಕೊಂಡು ಹೊಳೆಯುತ್ತ ವಾಯುವೇಗದಲ್ಲಿ ಓಡಿಬರುತ್ತಿದ್ದುವು. ವ|| ಈ ರೀತಿ ಅನಂತಸಂಭ್ರಮದಿಂದ ತುಂಬಿ ವಾಯುವೇಗವನ್ನು ಅತಿಕ್ರಮಿಸಿ ಓಡುತ್ತಿರುವ ಆ ದಿವ್ಯಾಶ್ವಗಳನ್ನು ಏರಿ ಅತಿಶಯ ಓರಣದಿಂದ ರಾಜವೀಥಿಯಲ್ಲಿ ಕುಮಾರರಿಬ್ಬರೂ ವಿವಿಧವಾದ ಗತಿಗಮನಗಳ ಚತುರತೆಯಿಂದ ಬರುತ್ತಿರುವ ಸಮಯದಲ್ಲಿ, ೯೨. ಸ್ತ್ರೀಯರುಗಳು ಬಂದು ಸುವರ್ಣಮಯವಾಗಿಯೂ, ಸ್ಫಟಿಕ ಶಿಲೆಗಳಿಂದ ಕಟ್ಟಲ್ಪಟ್ಟವುಗಳಾಗಿಯೂ ಇರುವ ಉಪ್ಪರಿಗೆಗಳನ್ನೇರಿ ಸಾಲಾಗಿ ನಿಂತುಕೊಂಡು ನೋಡುತ್ತಿದ್ದರು. ಆ ಸ್ತ್ರೀಯರ ಮುಖಗಳ ಸಾಲೂ ಮತ್ತು ಉದ್ದವಾದ ಕಣ್ಣುಗಳ ಕಾಂತಿಯೂ ಆ ರಾಜಮಾರ್ಗದ ಮುಂಭಾಗದಲ್ಲಿ ಕನ್ನಡಿ ಮತ್ತು ಕನ್ನೈದಿಲೆಗಳ ಸಮೂಹದಿಂದ ಕೂಡಿಸಿ ಕಟ್ಟಿರುವ ಉನ್ನತವೂ ಮನೋಹರವೂ ಆದ ತೋರಣವನ್ನು ತಾಗಿ ಅಲೆದು ಧಿಕ್ಕರಿಸಿದುವು. ವ|| ಆ ಪುರಂಧ್ರಿಯರಲ್ಲದೆಯೂ ಅಲ್ಲಿ ಕೆಲವರು ಆ ನರಶ್ರೇಷ್ಠನನ್ನು ನೋಡಲೆಂದು ೯೩. ಧರಿಸಿರುವ ಒಡವೆಗಳೇ ಇಂದ್ರಧನುಸ್ಸು, ತುರುಬುಗಳೇ ಮೇಘಗಳು, ಮುಂದುವರಿದ ಕಡೆಗಣ್ಣ ಕಾಂತಿಯೇ ಮಿಂಚು, ರತ್ನಖಚಿತ

ವ॥ ಅಂತುಮಲ್ಲದೆಯುಂ

ಚಂ॥ ಎಳಲತೆ ತೋಳ್ಗಳಿಂದುಟಿಯೆ ಚೆಂದಳಿರೊಳ್ತೊಡೆ ಬಾಳೆ ನಾಭಿ ತಂ
ಗೊಳವಮಲಘುಸ್ತನಂ ಕೃತಕಶೈಲಮಪಾಂಗಮರೀಚಿಪುಷ್ಪಸಂ
ಕುಳಮಳಕಂ ಮದಾಳಿಕಳಭಂ ಮೊಗಮಂಬುಜಮಾಗೆ ಬಂದ ಕೋ
ಮಳೆಯರಿಳೇಶಚಂದ್ರಮನನಾ ವನಲಕ್ಷ್ಮಿಯರಂತೆ ನೋಡಿದರ್ ೯೪

ಕ್ಷಿತಿಪತಿ ರಾಜಶೇಖರನಿವಂ ನವಮೌಕ್ತಿಕಭೂಷಣಾಂಶು ಭೂ
ಷಿತತನು ಮುಂದೆ ಮುಂಬಱಿವ ತುಂಗ ತುರಂಗಮನೇಱಿಬರ್ಪವಂ
ಮಿತವಚನಂ ಮೃಗಾಕ್ಷಿ ನಡೆನೋಡಿವನಲ್ತೆ ನವೀನ ಭೂಷಣ
ಪ್ರತತಿಯನಾಂತು ನರ್ತಿಪ ಸಿತಾಶ್ವಮನೇಱಿತೆ ಪಿಂದೆ ಬರ್ಪವಂ ೯೫

ವ॥ ಎಂದಲ್ಲಿ ವಿದಗ್ಧೆಯರ್ ಮುಗ್ಧೆಯರ್ಗೆ ತೋಱಿ ನುಡಿವುತ್ತಿರೆ ಮಂತ್ರಲಕ್ಷಂ ಮಿತ ವಚನಸಮೇತಂ ವಿವಿಧವಿಳಾಸಮಮಂ ತಳೆದು ಮುಂತಣ್ಗೆ ಬರೆವರೆ ಹರಪ್ರೇರಣೆಯಿಂ ತಿರುಕೊಳವಿ

ಕಾಲ್ಕಡಗಗಳ ಸಪ್ಪಳವೇ ಗುಡುಗು. ದಟ್ಟವಾಗಿ ಚೆಲ್ಲುವ ಭತ್ತದ ಅರಳುಗಳೇ ಮಳೆ ಯಂತಾಗಲು, ವರ್ಷಾಕಾಲದ ಅಧಿದೇವತೆಯರು ಬಂದು ನಿಂತುಕೊಂಡಿರುವರೋ ಎನ್ನುವಂತೆ ಸ್ತ್ರೀಯರು ಉಪ್ಪರಿಗೆಗಳೆಂಬ ಪರ್ವತಾಗ್ರದಲ್ಲಿ ನಿಂತು ಶೋಭಿಸುತ್ತಿದ್ದರು. ವ|| ಹಾಗೂ ಅಲ್ಲದೆ ೯೪. ಬಳ್ಳಿಗಳೇ ತೋಳುಗಳು ; ತುಟಿಯೇ ಕೆಂಪು ಚಿಗುರು ಗಳು ; ಒಳ್ಳೆಯ ತೊಡೆಗಳೇ ಬಾಳೆಯ ಕಂಬಗಳು ; ಹೊಕ್ಕುಳವೇ ತಣ್ಣೀರಿನ ಸರೋವರಗಳು ; ಮೊಲೆಗಳೇ ಕೃತಕವಾಗಿ ನಿರ್ಮಿಸಿದ ಕ್ರೀಡಾಶೈಲಗಳು ; ಕಡೆಗಣ್ಣಿಗಳ ನೋಟದ ಕಾಂತಿಯೇ ಹೂವುಗಳ ಸಮೂಹ ; ಮುಂಗುರುಳುಗಳೇ ಮದಿಸಿದ ದುಂಬಿಯ ಮರಿಗಳು ; ಮುಖವೇ ಕಮಲಗಳು ಎನ್ನುವಂತೆ ಇರಲು ಆ ಕೋಮಲೆಯರು ವನದೇವತೆ ಯರ ಹಾಗೆ ಬಂದು ರಾಜಶೇಖರನೆಂಬ ಚಂದ್ರನನ್ನು ನೋಡಿದರು. ೯೫. "ನೂತನ ವಾದ ಮುತ್ತುಗಳ ಆಭರಣಗಳ ಕಾಂತಿಯಿಂದ ವ್ಯಾಪ್ತಗೊಂಡ ದೇಹವುಳ್ಳವನಾಗಿ, ಮುಂಭಾಗದಲ್ಲಿ ಹರಿದುಬರುವ ಎತ್ತರವಾದ ಕುದುರೆಯನ್ನು ಹತ್ತಿಕೊಂಡು ಬರುವಂಥ ಇವನೇ ಭೂಪತಿಯಾದ ರಾಜಶೇಖರಮಹಾರಾಜನು. ನೂತನವಾದ ಆಭರಣಗಳ ಸಮೂಹವನ್ನು ಧರಿಸಿಕೊಂಡು ಕುಣಿಯುತ್ತ ಬರುತ್ತಿರುವ ಬಿಳಿಕುದುರೆಯನ್ನೇರಿ ಹಿಂಭಾಗದಲ್ಲಿ ಬರುತ್ತಿರುವ ಇವನೇ ಮಿತವಚನನು ! ಅಲ್ಲವೇ ಮೃಗಾಕ್ಷೀ ! ನಡೆ ಚೆನ್ನಾಗಿ ನೋಡು." ವ|| ಹೀಗೆಂದು ಅಲ್ಲಿ ಪ್ರೌಢೆಯರು ಮುಗ್ಧೆಯರಿಗೆ ತೋರಿಸುತ್ತ ಮಾತನಾಡಿಕೊಳ್ಳುತ್ತಿದ್ದಾಗ, ಮಂತ್ರಲಕ್ಷನಾದ ರಾಜಶೇಖರನು ಮಿತವಚನ ಸಮೇತ ನಾಗಿ ಅನೇಕ ಬಗೆಯ ಸೌಂದರ್ಯವನ್ನು ಒಳಗುಮಾಡಿಕೊಂಡು ಮುಂಭಾಗದಲ್ಲಿ ಬರುತ್ತಿದ್ದನು. ಅಷ್ಟರಲ್ಲಿ ಹರನ ಪ್ರೇರಣೆಯಿಂದ ತಿರುಕೊಳವಿನಾಚಿಯೆಂಬ ಶಿವಭಕ್ತೆಯ

ನಾಚಿಯೆಂಬ ಶಿವಭಕ್ತೆಯಣುಗಂ ಶಂಕರನೆಂಬ ಪೆಸರ ಪಂಚವರ್ಷದ ಕುಮಾರಂ ನಿಜಜನನಿ ನೀರ್ಗೆ ಪೋದ ಪೊಳ್ತಿನೊಳಾ ಕಳಕಳಮಂ ಕೇಳ್ದು ನೋಡಲೆಳಸಿ ಸಡಗರಂ ಮಿಗೆ ನಡುವೀದಿಗೆ ತಡೆಯದೆ ಬಂದು ಸಂದಣಿಪ ಮಂದಿಯೊಳಪೊಕ್ಕು ನಿಂದು ನಿರೀಕ್ಷಿಪಾಗಳ್ ಕವಿವ ಪಡೆಯ ತಡೆಗಾಲೊಳ್ ಪೊಡೆಯೆ ಪೊಡವಿಯೊಳ್ ಕೆಡೆದು ಕಣ್ಗೆಟ್ಟಳಲ್ದು ತಾಯಂ ಕರೆಕರೆದು ಬಾಯಂಬಿಟ್ಟಳಲ್ದು ಕೈಯೂಱಿ ಮೆಲ್ಲನೇಳ್ವನಿತಱಲ್ಲಿ

ಚಂ॥ ಶಿವಶಿವ ಪೇಳ್ವೆನೇನನವನೀಪತಿ ತನ್ನ ತುರಂಗಮಂ ಮಹಾ
ಜವದೊಳೆ ಕಂಡು ದಾಂಟಿಸಿ ಕೆಲಂದೆಗೆಯೆಂಬನಿತಕ್ಕೆ ಮುಂಚಿ ಮು
ನ್ನವೆ ಸಚಿವಾಶ್ವಮೈದೆ ಕೊಳಗಿಂ ತಲೆ ಖಂಡಿಸಿ ಪಾಱಿ ಮೆಟ್ಟಿತಂ
ದವಿರಳರಕ್ತಧಾರೆ ಪೊಱಸೂಸಿರೆ ಬಾಲನ ಕಂಠನಾಳಮಂ ೯೬

ವ॥ ಅಂತು ಪರಿದಾ ರಕ್ತರಸದೊಳಳ್ದುಬಿಳ್ದ ಶಿರಃಪುಂಡರೀಕಮಂ ಕಂಡು ಸಚಿವಸುತನುಂ ತಾನುಂ ಮನಂ ನೊಂದು ಮತಿಯುಡುಗಿ ಮಱುಗಿ ಶಿವಶಿವಾ ಶಿವಭಕ್ತಶಿಶುವಧವಾದುದಿದಂ ಶಿವಂ ಬಲ್ಲನೆಂದುಮ್ಮಳಿಸುತ್ತಿನಿಸಾನುಂ ಬೇಗಮಿರ್ದು

ಶಂಕರನೆಂಬ ಹೆಸರಿನ ಐದು ವರ್ಷದ ಮಗನು, ತನ್ನ ತಾಯಿಯು ನೀರಿಗೆ ಹೋದ ಸಮಯದಲ್ಲಿ ಸೈನ್ಯದ ಕೋಲಾಹಲದ ಕಳಕಳ ಧ್ವನಿಯನ್ನು ಕೇಳಿ, ಅದನ್ನು ನೋಡಬೇಕೆಂದು ಬಯಸಿ ಹೆಚ್ಚಾದ ಸಡಗರದಿಂದ ನಡುಬೀದಿಗೆ ತಡೆಯದೆ ಬಂದನು. ಗುಂಪಾಗಿ ಸೇರಿದ್ದ ಜನರ ನಡುವೆ ಹೋಗಿ ನಿಂತು ನೋಡುತ್ತಿದ್ದನು. ಆಗ ಕವಿದುಕೊಂಡು ಬರುತ್ತಿರುವ ಸೈನ್ಯದ ಕಾಲು ತಗುಲಿ ತೊಡರಿ ಭೂಮಿಯಲ್ಲಿ ಬಿದ್ದನು. ದಿಕ್ಕುಗೆಟ್ಟು ಸಂಕಟಗೊಂಡು ತಾಯಿಯನ್ನು ಕರೆಕರೆದು ಬಾಯಿಬಿಟ್ಟು ಅತ್ತು ಕೈಯೂರಿ ಮೆಲ್ಲನೆ ಏಳುತ್ತಿರುವಷ್ಟರಲ್ಲಿ ೯೬. ಶಿವ ಶಿವ ! ಆಗ ನಡೆದ ಘಟನೆಯನ್ನು ಏನೆಂದು ಹೇಳಲಿ ! ಅವನೀಶ್ವರನಾದ ರಾಜಶೇಖರನು ಆ ಹುಡುಗನನ್ನು ನೋಡಿ ಅತಿವೇಗದಿಂದ ಬರುತ್ತಿದ್ದ ತನ್ನ ಕುದುರೆಯನ್ನು ಹಾರಿಸಿ, ಮಿತವಚನನಿಗೆ ಕುದುರೆಯನ್ನು ಓರೆಗೆ ಮಾಡಿಕೊಂಡು ಬಾ, ಎಂದು ಹೇಳುತ್ತಿರುವಷ್ಟರಲ್ಲಿಯೇ ಮಿತವಚನನ ಕುದುರೆಯು ಮಿತಿಮೀರಿ ಬಂದು ಆ ಹುಡುಗನ ಶಿರಸ್ಸಿನ ಮೇಲೆ ಕಾಲಿಟ್ಟು ಕೊಳಗಿನಿಂದ ಅವನ ಕಂಠನಾಳವನ್ನು ಕತ್ತರಿಸಿ ಹಾರಲು, ರಕ್ತಧಾರೆ ಒಂದೇ ಸಮನೆ ಹೊರಸೂಸಿತು. ವ॥ ಆ ರೀತಿ ಹರಿದ ರಕ್ತರಸದಲ್ಲಿ ಮುಳುಗಿ ಬಿದ್ದ ಕಮಲದಂತಹ ತಲೆಯನ್ನು ಕಂಡು ಮಿತವಚನನೂ ರಾಜಶೇಖರನೂ ಮನಸ್ಸಿನಲ್ಲಿ ನೊಂದುಕೊಂಡು, ಬುದ್ಧಿಶೂನ್ಯರಾಗಿ ಮರುಗಿ, ಶಿವಶಿವ ! ಶಿವಭಕ್ತರ ಶಿಶುವಿನ ವಧೆಯಾಯಿತು. ಇದನ್ನು ಶಿವನೇ ಬಲ್ಲನು ಎಂದು ತಳಮಳಗೊಂಡು ಸ್ವಲ್ಪ ಸಮಯ

ಕಂ॥ ಇನ್ನಿದಕೆ ಚಿಂತೆಗೆಯ್ದೊಡೆ
ಪನ್ನತಿಕೆಗೆ ಬನ್ನವಲ್ತೆ ಫಡಫಡ ಫಣಿಭೂ
ಷಂ ನೆಟ್ಟನೆ ಮೆಚ್ಚಿರೆ ತೋ
ರ್ಪೆಂ ನಿಜಸಾಹಸಮನಿದಕೆ ತಕ್ಕುಜ್ಜುಗಮಂ ೯೭

ವ॥ ಎಂದು ನಿಶ್ಚೈಸಿ ಮನಸ್ತಾಪಮಂ ಧೃತಿಸಾಂದ್ರಚಂದ್ರಿಕೆಯಿಂ ನಂದೆವೊಯ್ದು ನಡೆ ತಂದು ರಾಜಾಲಯದ್ವಾರೋಪಾಂತದೊಳ್ವಾಜಿಗಳನಿಳಿದು ದಂಡನಾಥಮಂಡಳಿಕಾದಿಯುಂ ಯಥಾ ಕ್ರಮಂ ಬೀಳ್ಕೊಟ್ಟು ನಿಜಗೃಹಂಗಳಂ ಪೊಕ್ಕಿರ್ದರನ್ನೆವರಮಿತ್ತಲ್ ನೆರೆದ ಪುರಜನಮಾ ರುಂಡಮಂ ಮುಂಡಮಂ ಕಂಡು

ಕಂ॥ ಅಕಟಕಟದಾರಣುಗನೀ
ಸುಕುಮಾರಂ ಮಡಿದನಶ್ವಖುರಹತಿಯಿಂ ಬಾ
ಲಕವಧಮಿದನಱಿದೊಡೆ ತಾ
ನಕುಟಿಲಮತಿ ಚೋಳನೃಪತಿಯೇಂ ಸೈರಿಪನೇ ೯೮

ಶರಣಜನವನಜವನದಿನ
ಕರನಾ ಸತ್ಯೇಂದ್ರಚೋಳಧರಣೀಶ್ವರನೀ
ಶ್ವರಭಕ್ತವಧವನಿದನಾ
ರ್ದೊರೆಕೊಳಿಸಿದರೆಂದು ಮುಳಿಯದಿರ್ಪನೆ ಬಳಿಯಿಂ ೯೯

ನಿಂತು ನೋಡುತ್ತಿದ್ದು ೯೭. 'ಇನ್ನು ಇದಕ್ಕೆ ಚಿಂತೆಪಟ್ಟರೆ ನಮ್ಮ ಸಾಹಸಕ್ಕೆ ಕೊರತೆ ಯಲ್ಲವೇ ? ಫಡ ! ಫಡ ! ಉರಗಭೂಷಣನು ನಿಜವಾಗಿ ಮೆಚ್ಚಿಕೊಳ್ಳುವ ಹಾಗೆ ನನ್ನ ನಿಜವಾದ ಸಾಹಸವನ್ನು ತೋರಿಸುವ ತಕ್ಕ ಉದ್ಯೋಗದ ಮೂಲಕ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತೇನೆ.' ವ॥ ಎಂದು ನಿಶ್ಚಯ ಮಾಡಿಕೊಂಡು ಮನಸ್ಸಿನಲ್ಲಾದ ತಾಪ ವನ್ನು ಧೈರ್ಯವೆಂಬ ದಟ್ಟವಾದ ಬೆಳುದಿಂಗಳಿನಿಂದ ನಂದುವಂತೆ ಮಾಡಿ, ಬಂದು ರಾಜ ಗೃಹದ ಬಾಗಿಲ ಮುಂಭಾಗದಲ್ಲಿ ಕುದುರೆಗಳಿಂದ ಇಳಿದು, ದಂಡಾಧಿನಾಥರೇ ಮೊದಲಾದ ಮಾಂಡಳಿಕರ ಸಮೂಹನನ್ನು ಯಥಾಕ್ರಮವಾಗಿ ಕಳಿಸಿಕೊಟ್ಟು, ತಮ್ಮ ತಮ್ಮ ಮನೆ ಗಳನ್ನು ಪ್ರವೇಶಿಸಿದರು. ಈ ಕಡೆಯಲ್ಲಿ ಪಟ್ಟಣದ ಜನರು ಆ ರುಂಡ ಮುಂಡಗಳನ್ನು ನೋಡಿ ೯೮. "ಈ ಬಾಲಕನು ಯಾರ ಮಗನೋ ! ಅಯ್ಯೋ ಕುದುರೆಯ ಗೊರಸಿನ ತುಳಿತದಿಂದ ಸತ್ತನು ! ಸತ್ಯೇಂದ್ರಚೋಳನು ಈ ಬಾಲಕನವಧೆಯನ್ನು ತಿಳಿದರೆ, ನಿರ್ಮಲ ಬುದ್ಧಿಯ ಅವನು ಸಹಿಸುವನೇ ? ೯೯ ಶರಣರೆಂಬ ಸರೋಜಕ್ಕೆ ಸೂರ್ಯಪ್ರಾಯ ನಾದ ಸತ್ಯೇಂದ್ರಚೋಳನು ಈ ಶಿವಭಕ್ತನ ವಧೆಯನ್ನು ಯಾರು ಉಂಟುಮಾಡಿದರೆಂದು

ಮನುಚೋಳಂ ಮನ್ನಿಸಿದನೆ
ತನಯನನಪರಾಧಯುಕ್ತನಂ ಪಿತನೆಂದೇಂ
ನೆನೆದನೆ ಚಂಡೇಶಂ ತ
ನ್ನನೆ ಬಗೆದನೆ ಬಗೆಯೊಳಾ ಪಗಲ್ಚೋಳನೃಪಂ ೧೮೦

ಅದಱಿಂದೇನಪ್ಪುದೊ ಬ
ರ್ಪುದನೀಶಂ ಬಲ್ಲನೆಂದು ಮಱುಗುತ್ತಿರೆ ತ
ಳ್ವದೆ ಘಟಮನಿಳಿಪಿ ಕಾಣದೆ
ಸುದತಿ ನಿಜಾತ್ಮಜನನಱಿಸಿ ತೊಳಲುತ್ತಿರ್ದಳ್ ೧೮೧

ಇನ್ನು ಮುಂದೆ ಕೋಪಗೊಳ್ಳದೆ ಇರುವನೇ. ೧೮೦. ಮನುಚೋಳನು ಅಪರಾಧಿಯಾದ ಮಗನನ್ನು ಮನ್ನಿಸಿದನೇ ? ಚಂಡೇಶನು ತಂದೆಯೆಂದು ಸ್ಮರಿಸಿಕೊಂಡನೇ ? ಪಗಲ್ಚೋಳನು ಹೃದಯದಲ್ಲಿ ತನ್ನನ್ನೇ ಬಗೆದನೇ ?" (ವಿಶೇಷ ವಿವರಣೆ : ಹಿಂದೆ ಮನು ಚೋಳನು ಅಪರಾಧಿಯಾದ ಮಗನ ಕೊಂದ ಕಥೆ : ಇದೇ ಅಧ್ಯಾಯದ ಪದ್ಯ ೭೮ ರ ಅರ್ಥದಲ್ಲಿ ಚಂಡೇಶನ ಕಥೆ : ಚಂಡೇಶನೆಂಬುವನು ಮಳಲಲಿಂಗವನ್ನು ಮಾಡಿ ಪತ್ರ ಪುಷ್ಪಾದಿಗಳಿಂದ ಪೂಜಿಸಿ ಗೋವುಗಳ ಹಾಲನ್ನು ಕರೆದು ಆ ಲಿಂಗದ ಮೇಲೆ ಕರೆಯುತ್ತಿರುವ ಪದ್ಧತಿಯಿಟ್ಟುಕೊಂಡಿದ್ದನು. ಗೋವುಗಳು ಮನೆಗೆ ಬಂದಮೇಲೆ ಅವುಗಳ ಮೊಲೆಯಲ್ಲಿ ಹಾಲೇ ಇರುತ್ತಿರಲಿಲ್ಲ. ಅವನ ತಂದೆಯು ಚಂಡೇಶನನ್ನು 'ಅದೇನುಕಾರಣ ಗೋವುಗಳು ಹಾಲನ್ನು ಕೊಡುತ್ತಿಲ್ಲ'ವೆಂದು ಕೇಳಲು ಚಂಡೇಶನು 'ನನಗೆ ತಿಳಿಯದು' ಎಂದು ಉತ್ತರಿಸಿದನು. ಅವನ ತಂದೆಯು ಇದನ್ನು ನಾಳೆ ಪರೀಕ್ಷಿಸಬೇಕೆಂದುಕೊಂಡನು. ಮರುದಿನ ಎಂದಿನಂತೆ ಚಂಡೇಶನು ಅರಣ್ಯಕ್ಕೆ ಗೋವುಗಳನ್ನು ಮೇಯಿಸಲು ಹೋದನು. ಚಂಡೇಶನ ತಂದೆಯು ಮೊದಲೇ ಹೋಗಿ ಅಲ್ಲಿ ಅಡಗಿ ಕುಳಿತಿದ್ದನು. ಯಥಾಪ್ರಕಾರ ಚಂಡೇಶನು ಮಳಲಲಿಂಗವನ್ನು ಪೂಜಿಸಿ ಗೋವುಗಳ ಹಾಲನ್ನು ಕರೆದು ಲಿಂಗದ ಮೇಲೆ ಎರೆಯುತ್ತಿದ್ದುದನ್ನು ತಂದೆಯು ನೋಡಿ ಕೋಪಗೊಂಡು ಮಳಲಲಿಂಗವನ್ನು ಕಾಲಿನಿಂದ ಒದ್ದು ಹಾಳುಮಾಡಿದನು. ಕೋಪಗೊಂಡ ಚಂಡೇಶನು ತಂದೆಯು ಶಿವದ್ರೋಹಿಯೆಂದು ಕೈಯಲ್ಲಿದ್ದ ಆಯುಧದಿಂದ ಅವನನ್ನು ಕತ್ತರಿಸಿ ಹಾಕಿದನು. ಆ ಕ್ಷಣದಲ್ಲಿಯೇ ಶಿವನು ಪ್ರತ್ಯಕ್ಷನಾಗಿ ಚಂಡೇಶನಿಗೆ ಗಣಪದವಿಯನ್ನಿತ್ತನು. ಪಗಲ್ಚೋಳನ ಕಥೆ : ಪಗಲ್ಚೋಳನೆಂಬ ರಾಜನು ಶತ್ರುಗಳೊಡನೆ ಯುದ್ಧಮಾಡುವ ಕಾಲದಲ್ಲಿ ಶಿವಲಾಂಛನಧಾರಿಯೊಬ್ಬನು ಮೃತನಾಗಲು, ಅವನನ್ನು ನೋಡಿ ರಾಜನು 'ಶಿವ ಶಿವ ! ಶಿವಶರಣನ ವಧೆಯಾಯಿತಲ್ಲ' ಎಂದು ಚಿಂತಿಸಿ ಅದಕ್ಕೆ ಪ್ರಾಯಶ್ಚಿತ್ತರೂಪವಾಗಿ ತನ್ನ ಪ್ರಾಣವನ್ನೇ ಕಳೆದುಕೊಂಡನು. ಆ ಕೂಡಲೇ ಶಿವನು ಪ್ರತ್ಯಕ್ಷನಾಗಿ ಗಣಪದವನ್ನು ಕೊಟ್ಟನು.) ೧೮೧. ಆದ್ದರಿಂದ ಏನಾಗುವುದೋ ಮುಂದೆ ಬರುವುದನ್ನು ಈಶ್ವರನೇ ಬಲ್ಲನೆಂದು ಪುರಜನರು ಮರುಗುತ್ತಿರಲು, (ನೀರಿಗೆ ಹೋದ ತಿರುಕೊಳನಾಚಿಯು) ತಡಮಾಡದೆ

ವ॥ ಅಂತು ತೊಳಲ್ದು ಕಾಣದೆ ತಲ್ಲಣಿಸಿ ತಳವೆಳಗಾಗಿ

ಚಂ॥ ಎಲೆ ಸುಕುಮಾರ ಶಂಕರಕುಮಾರಕ ಬಾರ ಮದೀಯಲೋಚನೋ
ತ್ಪಲರಜನೀಶ ನಿನ್ನ ಮೊಗದಾವರೆಯಂ ಮಿಗೆ ತೋಱದೆತ್ತಪೋ
ದೆ ಲಲಿತಮಂದಹಾಸ ಲಲಿತಸ್ಖಲದಕ್ಷರವಾಣಿ ಗೆಜ್ಜೆ ಮೆ
ಲ್ಲುಲಿಗುಡೆ ಬಂದು ಬಲ್ಸೆಱಿಯನಪ್ಪದೆ ತಳ್ವಿದೆಯ್ಯೆ ತನೂಭವಾ ೧೧೨

ವ॥ ಎಂದು ನಿಡುಸರದಿಂ ಕೂಗಿ ಕರೆಕರೆದು ಕಾಣದೆ ಕರಕರಿಸಿ ರಾಜಪುತ್ರನ ವಿಹರಣಮಂ ನೋಡಲೆಳಸಿ ರಾಜವೀಧಿಗೆ ಬಂದನೆಂದು ಬಗೆದು ಬಗೆಗೆಟ್ಟು ಬಾಯ್ವಿಟ್ಟು ಜನನಿ ಜಪದಿನೇಳ್ತಂದಲ್ಲಿಯುಮಱಸಿ ಕಾಣದೆ

ಕಂ॥ ಕರಿಗಳ ಕಾಲ್ಗೊಳಗಾದನೊ
ವರೂಥಚಕ್ರಕ್ಕೆ ಸಿಲ್ಕಿದನೊ ಹಯಚಂಚ
ತ್ಖುರಹತಿಯಿಂದಿಳಿದನೊ ಶಂ
ಕರನಕಟಕಟೆಂದು ಬಗೆದು ಬಾಯ್ವಿಡುತಿರ್ದಳ್ ೧೧೩

ತನುಭವನೆಲ್ಲಿದನೆಲ್ಲಿದ
ನಿನಿವಾತಿನ ಕೀರನೆಲ್ಲಿದಂ ಮೆಲ್ನಗೆಯಿಂ
ಪಿನ ಸೊಬಗನೆಲ್ಲಿದಂ ಚೆ
ಲ್ವಿನಕಣಿಯೆಲ್ಲಿದನೊ ಮನ್ಮನೋಂಬುಜಹಂಸಂ ೧೧೪

ಮನೆಗೆ ಬಂದು ಘಟವನ್ನು ಇಳಿಸಿ, ತನ್ನ ಮಗನನ್ನು ಕಾಣದೆ ಹುಡುಕುತ್ತ ತಿರುಗಾಡುತ್ತಿದ್ದಳು. ವ॥ ಆ ರೀತಿ ಅವಳು ತಿರುಗಾಡುತ್ತ ಮಗನನ್ನು ಕಾಣದೆ ತಲ್ಲಣಗೊಂಡು ಚಿಂತೆಗೊಳಗಾಗಿ ೧೧೨. "ಎಲೈ ಸುಕುಮಾರನೇ, ಶಂಕರಕುಮಾರನೇ, ಬಾರಯ್ಯ ! ನನ್ನ ಲೋಚನಗಳೆಂಬ ಕನ್ನೈದಿಲೆಗಳಿಗೆ ಚಂದ್ರನೋಪಾದಿಯಲ್ಲಿರುವ ನಿನ್ನ ಮೊಗವೆಂಬ ತಾವರೆಯನ್ನು ತೋರಿಸದೆ ಎತ್ತ ಹೋದೆಯೋ ಮಗನೇ ! ಮನೋಹರವಾದ ಮುಗುಳು ನಗೆಯಿಂದಲೂ, ಸುಂದರವಾದ ಅಸ್ಪಷ್ಟಾಕ್ಷರಗಳ ತೊದಲುಮಾತುಗಳಿಂದಲೂ ಕಾಲ ಗೆಜ್ಜೆಗಳು ಮೃದುಧ್ವನಿ ಮಾಡುತ್ತಿರಲು ಬಂದು ನನ್ನ ಸೀರೆಯ ನೆರಿಗೆಯನ್ನು ಹಿಡಿದು ಅಪ್ಪಿಕೊಳ್ಳದೆ ಏಕೆ ತಡಮಾಡಿದೆ ?" ವ॥ ಎಂದು ದೊಡ್ಡ ಸ್ವರದಿಂದ ಕೂಗಿ, ಕರೆದು ಕರೆದೂ ಕಾಣದೆ ಕಳವಳಗೊಂಡು ರಾಜಪುತ್ರನ ವಿಹಾರಸಂಭ್ರಮವನ್ನು ನೋಡಲು ಬಯಸಿ ರಾಜಬೀದಿಗೆ ಬಂದಿರಬಹುದೆಂದು ಶಂಕಿಸಿ ಬುದ್ಧಿಗೆಟ್ಟು, ಅತ್ತು, ಆ ತಾಯಿಯು ಹೊರಟುಬಂದು ಅಲ್ಲಿಯೂ ಕಾಣದೆ ೧೧೩. "ನನ್ನ ಶಂಕರನು ಆನೆಗಳ ಕಾಲಿಗೆ ಸಿಕ್ಕನೋ, ರಥಗಳ ಗಾಲಿಗೆ ಸಿಕ್ಕನೋ, ಕುದುರೆಗಳ ಚಪಲಗೊರಸುಗಳಿಗೆ ಸಿಕ್ಕು ಸತ್ತನೋ ಅಕಟಕಟ !" ಎಂದು ಯೋಚಿಸುತ್ತ ಅಳತೊಡಗಿದಳು. ೧೧೪. "ನನ್ನ ಮಗನೆಲ್ಲಿದ್ದಾನೆ ! ಎಲ್ಲಿದ್ದಾನೆ !! ನನ್ನ ಮುದ್ದುಮಾತಿನ ಗಿಳಿಯು ಎಲ್ಲಿದ್ದಾನೆ !! ಮೃದುವಾದ ಇಂಪಿನ ನಗೆಯ ಸುಕುಮಾರನು ಎಲ್ಲಿದ್ದಾನೆ ! ನನ್ನ ಚೆಲುವಿನ ಗಣಿ

ವ॥ ಎಂದು ಪಲುಂಬಿ ಪಲವಾಡಿ ಬರ್ಪಾಗಳಾ ಪುರಜನಂ ಕಂಡೀ ಮಡಿದ ಶಿಶುವಿವಳ ದೆಂದು ತಿಳಿದಳವಳಿದು ಪಳಯಿಸುವಳಂ ಕರೆದು ನೆರೆದ ಜನದೊಳಪುಗಿಸಿ ನರೇಂದ್ರತುರಗ ಖುರಹತಿಯಿಂ ಮಡಿದನೆಂದು ತೊಟ್ಟನೆ ತೋಱಲೊಡನಾ ರುಂಡಮಂ ಮುಂಡಮಂ ಕಂಡಡವಿಗಿ ರ್ಚುಗೊಂಡ ಪುಲ್ಲೆಯಂತೆ ಹರಣಂ ಹಮ್ಮೈಸಿ ಪರ್ದುಱಗಿದುರಗಿಯಂತೆ ಮಿಡುಮಿಡನೆ ಮಿಡುಕಿ ಕಡಿವಡೆದೆಳೆವಳ್ಳಿಯಂತೆ ಕಱಗಿ ಕೊಱಗಿ ಪೊಸೆದಿಟ್ಟ ಪೂವಮಾಲೆಯಂತೆ ಕಂದಿ ಕುಂದಿ ಮಂದೈಸಿ ದಳಲಿಂ ಮುಂದುಗೆಟ್ಟು ಕೆಟ್ಟೆಂ ಕೆಟ್ಟೆನೆಂದು ಬಸಿಱಂ ಪೊಸೆದು ದೆಸೆದೆಸೆಗೆ ಬಾಯಂ ಬಿಟ್ಟು ಮೊಱೆಯಿಟ್ಟು ಮಱುಗಿ

ಚಂ॥ ಎಳೆಗಿಳಿಯಂ ಕೊಱಲ್ಮುಱಿದು ಮೋದಿದರಾರ್ ಮಱಿಯಂಚೆಯಂ ಭಯಂ
ಗೊಳಿಸುತೆಱಂಕೆಯಂ ಪಱಿದುಪೊಯ್ದವರಾರ್ ಮೃಗಶಾಬಮಂ ಕರಂ
ಮುಳಿದು ಶಿರೋಧಿಯಂ ಕಡೆಯಲೆಚ್ಚವರಾರ್ ಬಿಸನಾಳಕಾಂಡ ಕೋ
ಮಳತರಕಂಠಮಂ ಕಡಿದುರುಳ್ಚಿದರಾರ್ ಸುಕುಮಾರಶೇಖರಾ ೧೦೫

ಎಲ್ಲಿದ್ದಾನೋ ! ನನ್ನ ಮನಸ್ಸೆಂಬ ಸರೋವರದ ಹಂಸನೆಲ್ಲಿ !" (ಇತ್ಯಾದಿಯಾಗಿ ಪ್ರಲಾಪಿಸಿ, ಹುಡುಕುತ್ತಿದ್ದಳು) ವ|| ಈ ರೀತಿ ಹಲುಬಿ, ಹಲವಾರು ಮಾತುಗಳ ನ್ನಾಡಿ, ಬರುತ್ತಿರುವಾಗ ಆ ಪಟ್ಟಣಿಗರು ಕಂಡು, ಈ ಸತ್ತ ಶಿಶುವು ಇವಳದೇ ಎಂದು ತಿಳಿದು, ಮೇರೆದಪ್ಪಿ ಪ್ರಲಾಪಿಸುವ ಇವಳನ್ನು ಕರೆದು ಗುಂಪು ಸೇರಿದ್ದ ಜನರಲ್ಲಿ ಹೊಗಿಸಿ, ನರೇಂದ್ರನಾದ ರಾಜಶೇಖರನ ಕುದುರೆಯ ತುಳಿತದಿಂದ ಸತ್ತನೆಂದು ತಟ್ಟನೆ ತೋರಿಸಿದ ಕೂಡಲೆ, ಆ ರುಂಡವನ್ನೂ ಮುಂಡವನ್ನೂ ನೋಡಿ ಅರಣ್ಯದ ಕಿಚ್ಚಿಗೆ ಸಿಕ್ಕ ಜಿಂಕೆಯ ಹಾಗೆ ಮೂರ್ಛೆಗೊಂಡು, (ಜೀವದ ಮೇಲೆ ಎಚ್ಚರವಿಲ್ಲದಂತೆ) ಎರಗಿದ ಹದ್ದಿನ ಕೈಗೆ ಸಿಕ್ಕ ಹೆಣ್ಣು ಹಾವಿನಂತೆ ಮಿಡುಮಿಡನೆ ಮಿಡುಕಿ, ಕತ್ತರಿಸಿ ಹಾಕಿದ ಎಳೆಯ ಬಳ್ಳಿ ಯಂತೆ ಬತ್ತಿ ಬಾಡಿ, ಹೊಸೆದು ಬಿಸಾಡಿದ ಹೂವಿನ ಮಾಲೆಯ ಹಾಗೆ ಕಂದಿ, ಕುಂದಿ, ಹೆಚ್ಚಾದ ದುಃಖದಿಂದ ದಿಕ್ಕುಗೆಟ್ಟು, ಕೆಟ್ಟೆನು, ಕೆಟ್ಟೆನೆಂದು ಹೊಟ್ಟೆಯನ್ನು ಹೊಸೆದು ಕೊಳ್ಳುತ್ತ, ದಿಕ್ಕು ದಿಕ್ಕುಗಳಿಗೆಲ್ಲ ಬಾಯಬಿಟ್ಟು ಮೊರೆಯಿಟ್ಟು ಸಂಕಟಗೊಂಡವಳಾಗಿ ೧೦೫. "ಎಲೈ ಸುಕುಮಾರರುಗಳಿಗೆ ಶಿರೋಭೂಷಣನಂತಿದ್ದ ಶಂಕರನೇ, ಎಳೆಯ ಗಿಳಿಯ ಕೊರಳು ಮುರಿಯುವಂತೆ ನಿನ್ನನ್ನು ಹೊಡೆದವರಾರು ? (ಕತ್ತರಿಸಿ ಹಾಕಿ ದವರಾರು ?) ; ಮರಿಹಂಸಪಕ್ಷಿಯನ್ನು ಭಯಗೊಳಿಸಿ ಅದರ ರೆಕ್ಕೆಯನ್ನು ಹರಿದು ಹೊಡೆದುಹಾಕಿದವರಾರು ? ಜಿಂಕೆಯ ಮರಿಯನ್ನು ಕೋಪಗೊಂಡು ಹೊಡೆದು ತಲೆ ಕತ್ತರಿಸಿದವರಾರು ? ತಾವರೆದಂಟಿನ ಹಾಗೆ ಕೋಮಲಕರವಾದ (ನನ್ನ ಮಗನ) ಕುತ್ತಿಗೆ ಯನ್ನು ಕತ್ತರಿಸಿ ಉರುಳಿಸಿದವರಾರು ?" (ಇತ್ಯಾದಿಯಾಗಿ ಮಗನನ್ನೇ ಕೇಳುವ ಹಾಗೆ

ವ॥ ಎಂದಾ ಕಬಂಧಮನೆತ್ತಿ ತೊಡೆಯೊಳಿಟ್ಟಾ ರುಂಡಮಂ ಕದಯುಗದೊಳ್ಪಿಡಿದಶ್ರು ಮಿಶ್ರ ಕಟಾಕ್ಷದಿನೀಕ್ಷಿಸಿ ಮೊಗದೊಳ್ಮುಸುಂಕಿದ ಧೂಳಿಯಂ ಮೇಲುದಿನೊಳೊಯ್ಯನೊಱಸಿ ಕಿಲಸರಿದ ಮಾಂಗಾಯ್ಗಳನೋಸರಿಸಿದರಳೆಲೆಯುಂ ಸೈತುಮಾಡಿ ಗಲ್ಲಮಂ ಪಿಡಿದು ಮೆಲ್ಲನಲುಗಿ ಮುದ್ದಿಸಿ ಮುಂಡಾಡಿ ನೋಡಿ ಮೀಱಿದಪ್ಪಿದಳಲಂ ಸೈರಿಸಲಾಱದೆ

ಕಂ॥ ಹಾ ಮಗನೆ ಹಾ ಮನೋಜ್ಞನೆ
ಹಾ ಮುದ್ದುಗ ಹಾ ಮದೇಭಗತಿ ಮಂಜುಳ ಹಾ
ಹಾ ಮಧುರವಾಣಿ ಹಾ ಮ
ತ್ಪ್ರೇಮಾಸ್ಪದ ಹಾ ಮದೀಯವಂಶಲಲಾಮಾ ೧೧೬

ಎಲ್ಲಿಯ ಹಯಮೆಲ್ಲಿಯ ನೃಪ
ನೆಲ್ಲಿಯ ವೈಹಾಳಿಯೆಲ್ಲಿಯತಿಕಳಕಳಮಿಂ
ತೆಲ್ಲಿಯ ದರ್ಶನಗಮನಮಿ
ದೆಲ್ಲಿಯ ಮೃತಿ ನಿನಗೆ ಬಂದುದೆಲೆ ಸುಕುಮಾರಾ ೧೧೭

ಮುನ್ನಱುವರಳಿದಳಲನೆಲೆ
ನಿನ್ನಂ ನೆಱೆನೋಡಿ ಮಗನೆ ಮಱೆದಿರ್ದೆಂ ಪೇಳ್
ಇನ್ನಾರಿಂದಂ ಮಱೆದಪೆ
ನೆನ್ನೊಳುಸಿರ್ ಸುಮ್ಮನಿರದಿರೆಲೆ ತನುಜಾತಾ ೧೧೮

ಪ್ರಲಾಪಿಸುತ್ತಿದ್ದಳು) ವ॥ ಹೀಗೆಂದು ಹೇಳಿಕೊಂಡು ಅಳುತ್ತಾ, ಆ ಮುಂಡವನ್ನೆತ್ತಿ ತೊಡೆಯ ಮೇಲೆ ಇಟ್ಟುಕೊಂಡು, ಶಿರಸ್ಸನ್ನು ತನ್ನ ಎರಡೂ ಕೈಗಳಲ್ಲಿ ಹಿಡಿದು ದುಃಖ ಬಾಷ್ಪಗಳಿಂದ ತುಂಬಿದ ಕಣ್ಣುಗಳಿಂದ ನೋಡುತ್ತ, ಮುಖದಲ್ಲಿ ಮೆತ್ತಿದ್ದ ಧೂಳನ್ನು ತನ್ನ ಮೇಲುಸೆರಗಿನಿಂದ ಚೆನ್ನಾಗಿ ಒರೆಸಿ, ಪಕ್ಕಕ್ಕೆ ಜಾರಿದ ಮಾಂಗಾಯಿಗಳನ್ನೂ ಅಸ್ತವ್ಯಸ್ತವಾದ ಅರಳೆಲೆಯುಂತಹ ಆಭರಣವನ್ನೂ ನೆಟ್ಟಗೆ ಮಾಡಿ, ಗಲ್ಲವನ್ನು ಹಿಡಿದು ಮೆಲ್ಲನೆ ಅಲ್ಲಾಡಿಸಿ, ಮುದ್ದುಮಾಡಿ, ತಲೆಯ ಮೇಲೆಲ್ಲಾ ಕೈಯಾಡಿಸಿ, ನೋಡಿ ಮಿತಿಮೀರಿದ ದುಃಖವನ್ನು ಸೈರಿಸಲಾರದೆ ೧೧೬. "ಹಾ! ಮಗನೇ,! ಹಾ! ಮನೋಹರನೇ,! ಹಾ! ಸುಂದರನೇ! ಹಾ! ಮದದಿಂದ ಕೂಡಿದ ಆನೆಯ ನಡಿಗೆಯವನೇ! ಹಾ! ಮಂಜುಳನೇ; ಹಾ! ಮಧುರಮಾತಿನವನೇ! ಹಾ! ನನ್ನ ಪ್ರೇಮಕ್ಕೆ ಆಸ್ಪದನಾದವನೇ! ನನ್ನ ಕುಲತಿಲಕನೇ; ಅಯ್ಯೋ! ೧೧೭. ಎಲ್ಲಿಯ ಕುದುರೆ, ಎಲ್ಲಿಯ ನೃಪ, ಎಲ್ಲಿಯ ಆ ವೈಹಾಳಿ, ಎಲ್ಲಿಯ ಆ ಅತಿಯಾದ ಕಳಕಳ ಧ್ವನಿ, ಎಲ್ಲಿಯ ನಿನ್ನ ನೋಡಲು ಹೋಗುವಿಕೆ, ಇದೆಲ್ಲಿಯ ಮರಣ ನಿನಗೆ ಬಂದಿತು! ಸುಕುಮಾರನೇ. ೧೧೮. ಈ ಮೊದಲು ಸತ್ತ ಆರು ಜನ ಮಕ್ಕಳ ದುಃಖವನ್ನೂ ನಿನ್ನನ್ನು ನೋಡಿ ಮರೆತುಕೊಂಡಿದ್ದೆನು. ಹೇಳು! ಇನ್ನು ಯಾರನ್ನು ನೋಡಿ ನಿನ್ನ ಈ ಮರಣದ ದುಃಖವನ್ನು ಸೈರಿಸಲಿ! ಸುಮ್ಮನಿರಬೇಡ, ಮಗನೇ, ಹೇಳು?

ಗಳಗಳನೆ ಬಳೆದು ಧನಮಂ
ಗಳಿಸಿ ಚರಾರ್ಚನೆಯನೆಸಗಿ ಹರಕೃಪೆವಡೆದು
ಜ್ವಳಸುಖಮನೀವನೆಂದಿರೆ
ತಿಳಿವಿಲ್ಲದೆ ಮಗನೆ ತುರಗಹತಿಯಿಂ ಮಡಿದೈ ೧೦೯

ಕೊರಲಂ ಮೆಟ್ಟುವ ಪದದೊಳ್
ತುರಗಂ ಕಂಗೆಟ್ಟು ಜನನಿಯೆಂದೆನ್ನಂ ನೀಂ
ಕರೆದೆಯೊ ಮಱೆದೆಯೊ ದೋಷಾ
ಕರೆಯೆಂದೇಂ ತೊಱೆದೆಯೋ ತನೂಜನೆ ಪೇಳ್ಳ ೧೧೦

ವ॥ ಇಂತಳವಳಿದವಳ್ ಪಲವಾಡಿ ಪಳಯಿಸುತ್ತಿರ್ಪಾಗಳ್

ಕಂ॥ ಇವಳವನಿಪಂಗೆ ಮೊಱೆಯಿ
ಕ್ಕುವಳಾನಿರೆ ಕುವರರೆಸಗಿದಪರಾಧಮನೆಂ
ದವಧರಿಸಿ ಪೋದನೆಂದೆನೆ
ರವಿ ಪಶ್ಚಿಮಗಿರಿಯ ಶೃಂಗಮಂ ಮಱೆಗೊಂಡಂ ೧೧೧

ವ॥ ಆಗಳ್

ಮ॥ ವರುಣಾಶಾವನಚೂತವಲ್ಲಿ ಗಗನಾಲಂಬಕ್ಕೆ ಪರ್ಬಿರ್ದು ಭಾ
ಸ್ಕರಚೈತ್ರಂ ಬರೆ ಸಂಜೆಗೆಂಪೆನಿಪ ಭಾಸ್ವತ್ಪಲ್ಲವಂದಾಳ್ದು ಸೈ
ತಿರೆ ಪೂರ್ವಾಸೆಯಿನಲ್ಲಿಗೈದುವ ಪಿಕಾನೀಕಂಬೊಲಿಂಬಾಯ್ತು ನೋ
ಳ್ಪರ ಕಣ್ಗಂಧತಮಂ ತಮಾಲಕತಮಶ್ರೀಶಾಂಬುದಶ್ಯಾಮಳಂ ೧೧೨

೧೦೯. ಬೇಗ ಬೇಗ ಬೆಳೆದು ದೊಡ್ಡವನಾಗಿ, ದ್ರವ್ಯವನ್ನು ಗಳಿಸಿತಂದು ಮಾಹೇಶ್ವರರು ಗಳ ಪಾದಪೂಜೆಯನ್ನು ಮಾಡಿ, ಶಿವಕೃಪೆಪಡೆದು ಉಜ್ವಳವಾದ ಮೋಕ್ಷಸುಖವನ್ನು ಕೊಡುವನೆಂದು ಯೋಚಿಸಿಕೊಂಡಿದ್ದರೆ, ನನಗೆ ತಿಳಿಯದಂತೆಯೇ ಕುದುರೆಯ ಕಾಲಿಗೆ ಸಿಕ್ಕು ಮಡಿಯುವುದೇ! ಮಗನೇ, ೧೧೦. ಕುದುರೆಯು ನಿನ್ನ ಕೊರಳನ್ನು ತುಳಿಯುವ ಸಂದರ್ಭದಲ್ಲಿ ದಿಕ್ಕುಗೆಟ್ಟು 'ಅಮ್ಮಾ' ಎಂದು ನನ್ನನ್ನು ನೀನು ಕರೆದೆಯೋ? ಅಥವಾ ಮರೆತೆಯೋ? ಅಥವಾ ಪಾಪಿಷ್ಠಳೆಂದು ಉದಾಸೀನ ಮಾಡಿದೆಯೋ? ಹೇಳೈ ಮಗನೇ!!" ವ॥ ಹೀಗೆ ಆ ತಿರುಕೋಳವಿನಾಚಿಯು ತ್ರಾಣಗುಂದಿ, ಹಲವಾರು ವಿಧವಾಗಿ ಹಂಬಲಿಸುತ್ತ ಪ್ರಲಾಪಿಸುತ್ತಿರುವಾಗ, ೧೧೧. 'ನಾನಿದ್ದರೆ ಇವಳು ಮಿತವಚನ ರಾಜಶೇಖರರು ಮಾಡಿದ ಶಿಶುವಧೆಯ ಸುದ್ದಿಯನ್ನು ತೆಗೆದುಕೊಂಡು ಹೋಗಿ ಸತ್ಯೇಂದ್ರಚೋಳನಿಗೆ ದೂರು ಹೇಳುವಳು' ಎಂದು ನಿಶ್ಚೈಸಿಕೊಂಡು ಹೋದನೋ ಎನ್ನುವಂತೆ ಸೂರ್ಯನು ಪಶ್ಚಿಮದಿಗ್ಭಾಗದ ಪರ್ವತಶಿಖರವನ್ನು ಮರೆಮಾಡಿಕೊಂಡನು (ಸೂರ್ಯಾಸ್ತವಾಯಿತು). ವ॥ ಆಗ ೧೧೨. ಸೂರ್ಯನೆಂಬ ವಸಂತಋತುವು ಬರಲು ಪಶ್ಚಿಮದಿಕ್ಕೆಂಬ ತೋಟ ದಲ್ಲಿರುವ ಮಾವಿನಗಿಡವು ಆಕಾಶವೆಂಬ ಆಶ್ರಯದಲ್ಲಿ ಹಬ್ಬಿಕೊಂಡು, ಸಂಜೆಗೆಂಪೆಂಬ ಚಿಗುರನ್ನು ಧರಿಸಿಕೊಂಡು ರಮಣೀಯವಾಗಿರಲು, ಪೂರ್ವದಿಕ್ಕಿನಿಂದ ಪಶ್ಚಿಮದಿಕ್ಕಿಗೆ

ವ॥ ಅಂತು ತನ್ನಳಲುರಿಯ ಪೆರ್ಬೊಗೆ ಕವಿದಂತೆ ಕವಿದ ಕಡುಗಳ್ತಲೆಯೊಳಾ ತಿರುಕೊಳ ವಿನಾಚಿ ತನ್ನ ಮಗನ ಕಳೇವರಮನೆತ್ತಿ ತಳ್ಕೈಸಿಕೊಂಡೆಂತಾನುಮಲ್ಲಿಂದೇಳ್ದು ನಿಜಗೃಹಕ್ಕೆಳ್ತಂದು ಮುಂಡಮಂ ರುಂಡಮಂ ಪತ್ತಿಸಿನೋಡಿ ಮತ್ತಮಿರದೆ

ಕಂ॥ ಕಡವರಮುಡಂಗಿತೇ ಪೊಸ
ಕಡಾರಮಿಂದಕಟ ಮಾಯುಮಾದುದೆ ಪೊಱೆವಿಂ
ಗಡಲಿಂಗಿಪೋದುದೇ ಕಡಿ
ವಡಿದುದೆ ಕಲ್ಪಾವನೀಜಮಿದು ವಿಧಿವಶದಿಂ ೧೧೩

ಪಸಿದೆಯೆಲೆ ಕಂದ ಬತ್ತಿತು
ಬಸುಱಿದು ಕಳೆಗುಂದಿತಾನನಂ ಕಣ್ಬೊಣರ್ಗಳ್
ಮಸುಳ್ದುವುಣಲ್ಪಡೆಯುದೆ ಮಿಗೆ
ಬಸವೞಿದಿಂತಿರ್ಪುದುಚಿತವೇ ಸುಕುಮಾರಾ ೧೧೪

ಸರಿವರೆಯದ ಮಕ್ಕಳ್ ಶಂ
ಕರನೆಲ್ಲಿದನಾಡಲೆಂದು ಬೆಸಗೊಳಲೇನಂ
ದಿರದೆ. ಮಱುಮಾತುಗೊಟ್ಟಪೆ
ನರಸನ ಹಯದಿಂದ ಮಡಿದನೆಂಬೆನೆ ಮಗನೇ ೧೧೫

ಬರುವ ಕೋಗಿಲೆಗಳ ಹಿಂಡಿನ ಹಾಗೆಯೂ, ಹೊಂಗೆಮರ, ರಾಹು, ವಿಷ್ಣು, ಮೋಡ ಗಳಂತೆ ಕಪ್ಪಾದ ಗಾಡಾಂಧಕಾರವು ನೋಡುವವರ ಕಣ್ಣಿಗೆ ಸುಂದರವಾಗಿಯೂ ಕಾಣು ತ್ತಿತ್ತು. ವ|| ಆ ರೀತಿ ತನ್ನ ದುಃಖದ ಉರಿಯ ಹೆಚ್ಚಾದ ಹೊಗೆಯು ಕವಿದ ಹಾಗೆ ಕವಿದ ವಿಶೇಷ ಕತ್ತಲೆಯಲ್ಲಿ ಆ ತಿರುಕೊಳವಿನಾಚಿಯು ತನ್ನ ಮಗನ ದೇಹವನ್ನು ಎತ್ತಿ ಅಪ್ಪಿಕೊಂಡು, ಹೇಗೋ ಅಲ್ಲಿಂದ ಎದ್ದು ತನ್ನ ಮನೆಗೆ ನಡೆದುಬಂದು ರುಂಡಮುಂಡಗಳನ್ನು ಹತ್ತಿಸಿ ನೋಡಿ, ಮತ್ತೆ ತಡೆಯಲಾರದೆ, ೧೧೩. "ನನ್ನ ಸುವರ್ಣವು ಅಡಗಿಹೋಯಿತೇ! ನೂತನವಾದ ನಿಧಿಯು ಮಾಯವಾಗಿ ಹೋಯಿತೇ! ಶೋಭಿಸುವ ಕ್ಷೀರಸಮುದ್ರವು ಬತ್ತಿಹೋಯಿತೇ! ಕಲ್ಪವೃಕ್ಷವು ಮುರಿದುಹೋಯಿತೇ! ಇದೆಲ್ಲ ದೈವಾಧೀನ. ೧೧೪. ಎಲೈ ಸುಕುಮಾರಾ, ಹಸಿದುಕೊಂಡಿದ್ದೀಯೆ, ಈ ಹೊಟ್ಟೆ ಬತ್ತಿಹೋಗಿದೆ. ಮುಖವು ಕಳೆಗುಂದಿತು. ಕಣ್ಣುಗಳು ಕೆಟ್ಟುಹೋಗಿವೆ. ಊಟ ಮಾಡುವುದನ್ನು ಬಿಟ್ಟು ನೀನು ಹೀಗೆ ಸಂಕಟಪಡುತ್ತಿರುವುದು ಉಚಿತವೇ ಹೇಳು! ೧೧೫. ಮಗನೇ, ನಿನ್ನ ಓರಿಗೆಯ ಮಕ್ಕಳು ಬಂದು 'ಆಡಲು ಶಂಕರನೆಲ್ಲಿ?' ಎಂದು ಕೇಳಿದರೆ ಏನೆಂದು ಅವರಿಗೆ ಪ್ರತ್ಯುತ್ತರ ಕೊಡಲಿ? ಅರಸನ ಕುದುರೆಯು ತುಳಿತದಿಂದ ಸತ್ತನು ಎಂದು ಹೇಳಲೇ?

ನೀನಾಡಿದೆಡೆಗಳಂ ಸುತ
ನೀನೊಱಗಿದ ಪಾಸುವಂ ತನೂಭವ ಪದಪಿಂ
ನೀನುಂಡ ತಾಣಮುಮನಿ
ನ್ನಾನೆಂತೀಕ್ಷಿಸುವೆನೆಂತು ಸೈರಿಪೆನಕಟಾ ೧೧೬

ಉ॥ ಗಾಡಿಯೊಳಾಡಿ ಮಕ್ಕಳೊಡನಂಗಣಕೈದಿರೆ ತಳ್ತ ಧೂಳಿಯಂ
ನಾಡೆ ಸೆಱಂಗಿನಿಂದೊಱಸಿ ಮೈದೊಳೆದೊಳ್ಳುಣಸಿಕ್ಕಿ ಮುದ್ದುಗೈ
ದೂಡಿ ವಿಳಾಸಮಂ ಮೆಱೆದು ಸಿಂಗರಿಸುತ್ತಮದರ್ಪಿ ಬೇಡಿತಂ
ನೀಡಿ ನಿರೀಕ್ಷಿಪೆನ್ನನುಳಿದೊರ್ವನೆ ಪೋಪುದೆ ನೀಂ ತನೂಭವಾ ೧೧೭

ಕಂ॥ ಅಳಲದಿರು ತಾಯೆ ದುಃಖಂ
ಗೊಳದಿರ್ ನೀನೆಂದು ನೋಡಿ ಸಂತೈಸದೆ ಕ
ಣ್ಗಳ ಜಳಮಂ ತೊಡೆಯದೆ ಕಡು
ಮುಳಿದರವೊಲ್ ಸುಮ್ಮನಿರ್ಪುದೇ ಸುಕುಮಾರಾ ೧೧೮

ನೋಡುವ ಕಣ್ಣೊಡೆದುದು ಮಾ
ತಾಡುವ ನಾಲಗೆ ಮುರುಂಟಿದುದು ನಿನ್ನಂ ಮುಂ
ಡಾಡುವ ಕೈಯುಡಿದುದು ಸಲೆ
ಪಾಡುವ ಬಾಯ್ವೆಂದುದಣುಗ ನೀಂ ಮಡಿಯಲೊಡಂ ೧೧೯

೧೧೬. ನೀನು ಆಡಿದ ಸ್ಥಾನಗಳನ್ನು, ಮಗನೇ, ನೀನು ಮಲಗಿದ ಹಾಸಿಗೆಯನ್ನು, ಮಗನೇ, ಪ್ರೀತಿಯಿಂದ ನೀನು ಉಂಡ ಸ್ಥಾನವನ್ನು, ಇನ್ನು ನಾನು ಹೇಗೆ ನೋಡಲಿ ? ಅಕ್ಕಟ ! ಅವನ್ನು ನೋಡಿ ಹೇಗೆ ಸೈರಿಸಿಕೊಳ್ಳಲಿ ? ೧೧೭. ಓಣಿಯಲ್ಲಿ ಸಂಭ್ರಮದಿಂದ ಮಕ್ಕಳೊಡನೆ ಆಟವಾಡಿ ಮನೆಯ ಅಂಗಳಕ್ಕೆ ಬಂದರೆ ಮೈಗೆ ಹತ್ತಿದ ಧೂಳಿಯನ್ನು ಚೆನ್ನಾಗಿ ಸೆರಗಿನಿಂದ ಒರೆಸಿ, ಮೈದೊಳೆದು, ಒಳ್ಳೆಯ ಊಟವನ್ನು ಇಕ್ಕಿ ಮುದ್ದುಮಾಡಿ ಊಟಮಾಡಿಸಿ, ಸೊಗಸಾಗಿ ಶೃಂಗಾರಮಾಡಿ, ತಬ್ಬಿಕೊಂಡು ಕೇಳಿದುದನ್ನು ಕೊಟ್ಟು, ನೋಡುವ ನನ್ನನ್ನು ಬಿಟ್ಟು ನೀನು ಒಬ್ಬನೇ ಹೋಗುವುದು ಯೋಗ್ಯವೇ ಸುಕುಮಾರಾ! ೧೧೮. ಅಮ್ಮಾ, ನೀನು ಸಂಕಟಪಡಬೇಡ, ದುಃಖಮಾಡಬೇಡ ಎಂದು ನನ್ನನ್ನು ನೋಡಿ ಸಮಾಧಾನಮಾಡದೆ, ಕಣ್ಣಿನ ನೀರನ್ನು ಒರೆಸದೆ, ಹೆಚ್ಚಾಗಿ ಕೋಪಮಾಡಿ ಕೊಂಡವರ ಹಾಗೆ, ಸುಕುಮಾರನೇ ಸುಮ್ಮನೆ ಇರುವುದೇ ? ೧೧೯. ಮಗನೇ ನಿನ್ನನ್ನು ನೋಡುವ ಕಣ್ಣು ಒಡೆಯಿತು. ಮಾತಾಡುವ ನಾಲಗೆ ಮುರುಟಿತು. ನಿನ್ನನ್ನು ಮುದ್ದಾಡುವ ಕೈ ಮುರಿಯಿತು. ಚೆನ್ನಾಗಿ ಹಾಡುವ ಬಾಯಿ ಬೆಂದು

ಆರೊಡನುಸುರ್ವೆಂ ದುಃಖಮು
ನಾರುಂಟೆನಗಕಟ ಮಗನೆ ಮಗನೆ ಮನೋಜಾ
ತಾರಿಯ ಕೃಪೆ ತಪ್ಪಿದಬಳಿ
ಕಾರಾದೊಡಮೇನೊ ನಿನ್ನನೇಂ ಕಾಣಪರೇ ೧೨೦

ವ॥ ಎಂದಾಕ್ರಂದನಂಗೈದಳಲ್ದು ಬಳಲ್ದು ಬಸವಳಿದು ಬಲ್ಪುಗುಂದಿ ಬಿಸುಸುಯ್ದು ಬಸುಱಂ ಪೊಸೆದು ದೈನ್ಯಂಬಟ್ಟು ಬಾಯಂ ಬಿಟ್ಟು ಪೆಸರ್ಗೊಂಡು ಕರೆಕರೆದೊಳರ್ದು

ರಗಳೆ॥ ಮಗನೆ ನೀನಿಂತಳಿಯೆ ಸೈರಿಪೆನೆಂತೊ ಪೇಳ್ಳೈ ಶಂಕರಾ
ಸುಗುಣನಿಧಿ ನೀನೆನ್ನ ಮೊಱೆಗಳನೊರ್ಮೆ ಕೇಳ್ಳೈ ಶಂಕರಾ ೧೨೧

ಪರಸಿ ಪಾಡಿ ಮಹೇಶನಿಂದವೆ ಬೇಡಿ ಮುನ್ನಂ ಶಂಕರಾ
ತುರಗಖುರಕೆಂದಕಟ ಪೆತ್ತೆನೆ ಕುವರ ನಿನ್ನಂ ಶಂಕರಾ ೧೨೨

ಎಂತು ಮಱೆವೆನೊ ಸವಿಯ ಸಾಲಿಡುವಮರ್ದುನಗೆಯಂ ಶಂಕರಾ
ಕಾಂತಿ ಶೋಭಿಸೆ ಮುದ್ದುವೀಱುವ ಮೊಗದ ಬಗೆಯಂ ಶಂಕರಾ ೧೨೩

ಝುಣಝುಣಸೆ ಕಿಱುಗೆಜ್ಜೆ ಕರತಳತಾಳರವಕೇ ಶಂಕರಾ
ಕುಣಿವ ನಿನ್ನಯ ಬಿನದವೊಪ್ಪುಗುಮೆನ್ನ ಮನಕೇ ಶಂಕರಾ ೧೨೪

ಶರಣಪದಪಂಕಜರಜಂಗಳೊಳಾಳದಂತುಂ ಶಂಕರಾ
ತುರಗಖುರಹತಿಜನಿತ ಧೂಳಿಯೊಳಳಿದೆಯಿಂತುಂ ಶಂಕರಾ ೧೨೫

ಹೋಯಿತು. ನೀನು ಸಾಯಲಾಗಿ ಇದೆಲ್ಲ ಆಯಿತು. ೧೨೦. ಈ ನನ್ನ ದುಃಖವನ್ನು ಯಾರ ಮುಂದೆ ಹೇಳಿಕೊಳ್ಳಲಿ. ನನಗೆ ಯಾರುಂಟು? ಅಕ್ಕಟ! ಮಗನೇ ಮಗನೇ, ಮನೋಜಾತಾರಿಯಾದ ಪರಮೇಶ್ವರನ ಕೃಪೆ ತಪ್ಪಿದ ಬಳಿಕ ಯಾರಾದರೇನು ? ನಿನ್ನನ್ನೇನು ಪುನಃ ಕಾಣುವಂತೆ ಮಾಡುವರೇ ?" ವ॥ ಹೀಗೆಂದು ಚೀರಾಡಿ, ಅತ್ತು ಬಳಲಿ ಸಂಕಟಪಟ್ಟು ಶಕ್ತಿಗುಂದಿ, ನಿಟ್ಟುಸಿರುಬಿಟ್ಟು, ಹೊಟ್ಟೆಯನ್ನು ಹೊಸೆಹೊಸೆದು ದೈನ್ಯವನ್ನು ತೋರಿಸಿ, ಬಾಯನ್ನು ಬಿಟ್ಟು ಹೆಸರುಗೊಂಡು ಕರೆಕರೆದು ಅತ್ತು, ೧೨೧–೧೨೫. "ಮಗನೇ ಶಂಕರಾ, ನೀನು ಈ ರೀತಿ ಸತ್ತುಹೋದರೆ ಹೇಗೆ ಸೈರಿಸಲಿ, ಸುಗುಣಗಳ ಗಣಿಯೇ, ನೀನು ಒಮ್ಮೆಯಾದರೂ ನನ್ನ ಮೊರೆಗಳೇನೆಂಬುದನ್ನು ಕೇಳು ? ಪ್ರಾರ್ಥಿಸಿ, ಹಾಡಿ, ಮಹೇಶ್ವರನಿಂದ ಮೊದಲು ವರವನ್ನು ಪಡೆದು ಕುಮಾರಾ, ನಿನ್ನನ್ನು ಕುದುರೆಯ ಕಾಲಿನ ಗೊರಸಿಗೆ ಆಹುತಿಯಾಗಲೆಂದು ಹೆತ್ತೆನೇ ? ನಿನ್ನ ಸವಿಯ ಸಾಲನ್ನೇ ಸುರಿಸುತ್ತಿದ್ದ, ಅಮೃತರಸ ಸುರಿಸುತ್ತಿದ್ದ ನಗೆಯನ್ನು ಹೇಗೆ ಮರೆಯಲಿ ? ಕಾಂತಿಯಿಂದ ಶೋಭಿಸುವ ಹಾಗೆ ಸಂತೋಷವನ್ನು ಬೀರುತ್ತಿದ್ದ ನಿನ್ನ ಮುಖದ ರೀತಿಯನ್ನು ಹೇಗೆ ಮರೆಯಲಿ ? ಕಾಲಲ್ಲಿ ಕಿರುಗೆಜ್ಜೆಗಳು ಝುಣ ಝುಣ ಅನ್ನುತ್ತಿರಲು, ಕೈಯ ತಾಳಧ್ವನಿಗೆ ಕುಣಿಯುತ್ತಿದ್ದ ನಿನ್ನ ವಿನೋದವು ನನ್ನ ಮನಸ್ಸಿನಲ್ಲಿ ಒಪ್ಪಿಗೆಯಾಗಿ ಇದೆಯಲ್ಲಾ ! (ಹೇಗೆ ಮರೆಯಲಿ). ಶರಣಜನರ ಪಾದಕಮಲಗಳ ರಜದಲ್ಲಿ ಮುಳುಗದೆ ಈ ರೀತಿ

ಎನ್ನನೋವುವನೆಂದು ನಂಬಿರಲಿಂತು ಮಾಡಿದೈ ಶಂಕರಾ
ಮುನ್ನಮೆನ್ನಯ ಹರ್ಷವಲ್ಲಿಯ ಕುಡಿಯನುಡಿದೈ ಶಂಕರಾ ೧೨೬

ನಿನ್ನಳಿವನೀಕ್ಷಿಸಿಯುಮೆನ್ನಸು ಪೋಗದಂದುಂ ಶಂಕರಾ
ನಿನ್ನೊಳೆನ್ನಯ ಕೂರ್ಮೆ ನಿಜಮೆಂತೆನಿಪುದಿಂದುಂ ಶಂಕರಾ ೧೨೭

ಹರಣದಳಿವಿಂಗಂಜುವೆನೆ ನಿನ್ನಾಣೆ ಮಗನೇ ಶಂಕರಾ
ಶಿರವರಿದು ನಿನ್ನಂದವಾಗದೆ ಪಿಂಗಿದಪನೇ ಶಂಕರಾ ೧೨೮

ವ॥ ಎಂದು ನಂದನನ ಗುಣವೃಂದಮಂ ನೆನೆನೆನೆದಾಕ್ರಂದಿಸಿ ಮತ್ತಮಿರದೆ

ಕಂ॥ ಪರಮಕೃಪಾಕರನೆಂಬೀ
ಬಿರುದಂ ಬಿಸುಟಕಟ ಶಂಕರಾ ಶಂಕರನಂ
ಹರಸಿ ನಡುಗಾಡೊಳಂಧೆಯ
ಕರದಂಡಮನೆಳೆದುಕೊಂಡವೋಲ್ ಮಾಡಿದೆಯೈ ೧೨೯

ಚಂ॥ ಎಲೆ ಗಿರಿಜಾತೆ ಮಾತೆ ಕರುಣಾಕರೆ ಶಾಂಕರಿ ದಿವ್ಯರೂಪೆ ನಿ
ರ್ಮಲೆ ನಿಗಮಾಗಮಸ್ತುತೆ ಮಹೇಶ್ವರಿ ಮಂಗಳಮೂರ್ತಿ ಭಕ್ತವ
ತ್ಸಲೆ ರತಿಗಂದಳಲ್ಗಳೆದ ದೇವಿ ರಮಾನತೆ ನೊಂದೆನಿಂದು ನಿ
ನ್ನಲಘುಕೃಪಾಕಟಾಕ್ಷದಿನಭೀಕ್ಷಿಸಿ ರಕ್ಷಿಪುದೆನ್ನನಂಬಿಕೇ ೧೩೦

ಕುದುರೆಯ ಗೊರಸಿನ ತುಳಿತದಿಂದ ಉಂಟಾದ ಧೂಳಿಯಲ್ಲಿ ಈ ರೀತಿ ಅಳಿದೆಯಾ ಮಗನೇ ! ೧೨೬–೧೨೮. ಶಂಕರಾ ನನ್ನನ್ನು ರಕ್ಷಿಸುವವನು ನೀನೆಂದು ನಂಬಿದ್ದರೆ ನೀನು ಈ ರೀತಿ ಮಾಡಿದೆಯಾ ? ಮೊದಲೆ ನನ್ನ ಹರ್ಷವೆಂಬ ಬಳ್ಳಿಯ ಕುಡಿಯನ್ನು ಚಿವುಟಹಾಕಿದೆಯಾ ? ನಿನ್ನ ಸಾವನ್ನು ನೋಡಿಯೂ ನನ್ನ ಪ್ರಾಣವು ಹಾರಿಹೋಗದೆ ಇರುವಾಗ ನಿನ್ನಲ್ಲಿ ನನ್ನ ಪ್ರೀತಿಯು ನಿಜವಾಗಿ ಎಷ್ಟಿದೆಯೆಂಬುದು ಇಂದು ತಿಳಿಯದೇ ? ಮಗನೇ ನಿನ್ನ ಆಣೆ ! ನಾನು ಪ್ರಾಣದ ಅಳಿವಿಗೆ ಅಂಜುನವಳೇ ? ಅಲ್ಲ ! ಈ ಶಿರಸ್ಸನ್ನು ಕತ್ತರಿಸಿಕೊಂಡು ನಿನ್ನ ಹಾಗೆ ಆಗದೆ ತಪ್ಪುತ್ತೇನೆಯೇ?" ವ॥ ಹೀಗೆಂದು ಮಗನ ಗುಣಸಮೂಹವನ್ನು ನೆನೆನೆನೆದು ಚೀರಾಡಿ ಅತ್ತು, ಪುನಃ ಸುಮ್ಮನಾಗದೆ ೧೨೯. ಎಲೈ ಪರಮೇಶ್ವರನೇ, ನೀನು ಪರಮಕೃಪಾಕರನೆಂಬ ಬಿರುದನ್ನು ಬಿಟ್ಟು ನನ್ನ ಮಗನಾದ ಶಂಕರನನ್ನು ಸಂಹಾರಗೊಳಿಸಿದುದನ್ನು ನೋಡಿದರೆ, ಅರಣ್ಯದಲ್ಲಿ ಕುರುಡಿಯ ಕೈಯಲ್ಲಿನ ಕೋಲನ್ನು ಕಿತ್ತುಕೊಂಡ ಹಾಗೆ ಮಾಡಿದೆ. ೧೩೦. ಎಲೈ ತಾಯಿಯಾದ ಗಿರಿರಾಜ ತನೂಜೆಯೇ, ಭಕ್ತರಲ್ಲಿ ತಾರುಣ್ಯವನ್ನು ತೋರಿಸುವವಳೇ, ಸುಖಪ್ರದಳೇ, ಪವಿತ್ರರೂಪವುಳ್ಳವಳೇ, ಪರಿಶುದ್ಧಳೇ, ವೇದಾಗಮಗಳಿಂದ ಸ್ತೋತ್ರ ಮಾಡಿಸಿಕೊಳ್ಳುವವಳೇ, ಪರಮೇಶ್ವರಪತ್ನಿಯೇ, ಶುಭಾವಹವಾದ ಆಕೃತಿಯುಳ್ಳವಳೇ, ಭಕ್ತರುಗಳಲ್ಲಿ ವಾತ್ಸಲ್ಯವನ್ನು ತೋರಿಸುವವಳೇ, ಹಿಂದೆ ಮನ್ಮಥನು ಸತ್ತಾಗ ರತಿದೇವಿಗೆ ಅಭಯಪ್ರದಾನಮಾಡಿ, ಅವಳ ದುಃಖವನ್ನು ನಿವಾರಿಸಿದ ದೇವಿಯೇ, ಲಕ್ಷ್ಮಿಯಿಂದ ನಮಸ್ಕರಿಸಿಕೊಳ್ಳುವವಳೇ, ಇಂಥ

ವ॥ ಎಂದು ಪಂಬಲಿಸಿ ಪಳಯಿಸುತ್ತುಮಿರೆಯಿರೆ

ಕಂ॥ ಇಂದೆನ್ನ ವಂಶಭವರೊಲ
ವಿಂದಂ ಪನ್ನತಿಕೆದೋಱ ಬರಿಪರ್ಗಡ ಬಾ
ಲೇಂದುಶಿರೋಮಣಿಯಂ ನೋ
ಳ್ಪೆಂ ದಿಟವೆಂದೆಯ್ದಿದಂತೆ ಮೂಡಿದನರ್ಕಂ ೧೩೧

ಉ॥ ಮೂಡಣದಿಕ್ಕು ಕೆಂಪಡರೆ ಮೂಡಿದ ದಿವ್ಯದಿನೇಶಬಿಂಬಮಂ
ನೋಡಿ ಶಶಾಂಕ ಶಂಕೆದಳೆದಂತೆವೊಲುತ್ಪಳಮುಂ ಸರೋಜಮುಂ
ಕೂಡಿರೆ ಸಂಜೆ ನೀಳ್ದಿಸಳನೊಂದನಮುರ್ಚುವ ಬಿರ್ಚುವಾಟಮಂ
ಮಾಡಿದುವಂತೆ ಸಂದೆಗಮೆ ಸತ್ವರಕಾರ್ಯಕೆ ವಿಘ್ನಮಲ್ಲವೇ ೧೩೨

ಕಂ॥ ನೀಲಾಚಲನಿಚಯಂ ಸಲೆ
ಸಾಲಿಟ್ಟೈದಿದುದು ಕದನಕೆಂದಂಧತಮೋ
ಜಾಲಮನಾಲೋಕಿಪ ಸುರ
ಪಾಲನ ಮುಕುಟಂಬೊಲೆಸೆದುದಾ ರವಿಬಿಂಬಂ ೧೩೩

ವ॥ ಆಗಳವಳ್ನಿಜಾಲಯಮಂ ಪೊಱಮಟ್ಟು ರಾಜವೀಧಿಗೆಳ್ತಂದು

---

ನಾನು ನೊಂದಿದ್ದೇನೆ. ಅಂಬಿಕೆಯೇ, ನಿನ್ನ ಪೂರ್ಣ ಕೃಪಾಕಟಾಕ್ಷದಿಂದ ನೋಡಿ ನನ್ನನ್ನು ರಕ್ಷಿಸು." ವ॥ ಹೀಗೆಂದು ಹಂಬಲಿಸಿ, ಅಳುತ್ತ ಇರುತ್ತಿರಲಾಗಿ, ೧೩೧. "ಇಂದು ನನ್ನ ವಂಶದಲ್ಲಿ ಹುಟ್ಟಿದ ರಾಜರುಗಳು ಭಕ್ತಿಯಿಂದ ಸಾಹಸವನ್ನು ತೋರಿಸಿ ಶಿವನನ್ನೇ ಭೂಲೋಕಕ್ಕೆ ಬರಿಸುವರಲ್ಲವೇ ? ಆದುದರಿಂದ ಬಾಲಚಂದ್ರಧರನಾದ ಶಿವನನ್ನು ದಿಟವಾಗಿ ನಾನು ನೋಡುತ್ತೇನೆ" ಎಂದು ಬಂದನೋ ಎನ್ನುವ ಹಾಗೆ ಸೂರ್ಯನು ಉದಿಸಿದನು. ೧೩೨. ಬೆಳಗಿನ ಸಮಯದ ಪೂರ್ವದಿಕ್ಕು ಕೆಂಪಾಯಿತು. ಅಲ್ಲಿ ಮೂಡಿದ ದಿವ್ಯ ಸೂರ್ಯನ ಮಂಡಲವನ್ನು ನೋಡಿ ಚಂದ್ರನೆಂಬ ಸಂಶಯವನ್ನು ತಾಳಿದ ಹಾಗೆ ನೈದಿಲೆಯು ಒಂದೊಂದೇ ದಳವನ್ನು ಮುಚ್ಚುವ, ತಾವರೆಯು ಒಂದೊಂದೇ ದಳವನ್ನು ತೆರೆಯುವ ಆಟವನ್ನು ಆಡುತ್ತಿದ್ದವು. ಸಂದೇಹವು ಜಾಗ್ರತೆಯಾಗಿ ಮಾಡುವ ಕಾರ್ಯಕ್ಕೆ ವಿಘ್ನವಲ್ಲವೇ? ೧೩೩. ನೀಲಾಚಲಗಳ ಸಮೂಹವು ಯುದ್ಧಕ್ಕಾಗಿ ಸಾಲುಸಾಲಾಗಿ ಬಂದಿತೋ ಎಂಬ ಶಂಕೆಯಿಂದ ಕತ್ತಲೆಯ ರಾಶಿಯನ್ನು ನೋಡುವ ಇಂದ್ರನ ಕಿರೀಟವೋ ಎಂಬಂತೆ ಸೂರ್ಯಮಂಡಲವು ಶೋಭಿಸುತ್ತಿತ್ತು. ವ॥ ಆ ಸಮಯದಲ್ಲಿ ತನ್ನ ಮನೆಯಿಂದ ಹೊರಟು

ಉ॥ ನೊಂದು ಪಲುಂಬಿ ಪಂಬಲಿಸಿ ಪೇಣ್ಬಲವಾಡಿ ಬಳಲ್ದುಬಾಡಿ ಕ
ಣ್ಣಿಂದಿಳಿವಶ್ರು ಕಾಳ್ಪುರಮದಾಗಿರೆ ಬಾಯ್ದೆಱೆ ಬತ್ತೆ ಮತ್ತೆ ಶೋ
ಕಂ ದಳವೇಱೆ ಪೌರರಳಲುತ್ತಿರೆ ತಾನಳುತಲ್ಲಿ ತಾಳ್ದು ತ
ನ್ನಂದನನಂಗಮಂ ಮೊಱೆಯಿಡಲ್ನಡೆಗೊಂಡಳಿಳಾಧಿನಾಥನೊಳ್ ೧೩೪

ಕಂ॥ ದೆಸೆಗಳ್ಮಾರ್ದನಿಗುಡೆ ಬಿಡ
ದಸವಸದಿಂದೊಳರ್ವ ನಿನದದಿಂ ಕಣ್ಬನಿಯಿಂ
ರಸೆ ಕೆಸಱೇಳ್ದಿರೆ ಬಂದ
ಳ್ಪಸವಳಿಯುತ್ತಳಲುತರಸನರಮನೆಯುತ್ತಲ್ ೧೩೫

ವ॥ ಅಂತು ಬಂದು ಸತ್ಯೇಂದ್ರನಂತಃಪುರ ಬಹಿದ್ವಾರದೇಶದೊಳ್ ನಿಂದು ನಿಡುಸರಂ
ದೋಱೆ ಕೊರಲೆತ್ತಿ ಕರವಂ ನೆಗಪಿ

ಕಂ॥ ವಿಪುಳತರ ಧರ್ಮಸಾಮ್ರಾ
ಜ್ಯಪಾಳ ಸತ್ಯಾಬ್ಧಿ ಚಂದ್ರ ಸತ್ಯೇಂದ್ರಧರಾ
ಧಿಪ ಮೊಱೆಯೊ ಶಿವ ಸದಾಶಿವ
ಕೃಪಾರಸಾಮತ್ರ ಪುತ್ರನಳಿದಂ ಕಳಿದಂ ೧೩೬

ರಾಜಬೀದಿಗೆ ಬಂದ ೧೩೪. ಆ ತಿರುಕೊಳವಿನಾಚಿಯು ನೊಂದುಕೊಂಡು, ಹಲುಬಿ, ಹಲವಾರು ಮಾತುಗಳನ್ನು ಆಡಿಕೊಳ್ಳುತ್ತ ಬಳಲಿದವಳಾಗಿ ಕಾಂತಿಗುಂದಿ, ಅವಳ ಕಣ್ಣಿನಿಂದ ಸುರಿಯುವ ದುಃಖಬಿಂದುಗಳು ಪ್ರವಾಹರೂಪವಾಗಿ ಹರಿಯುತ್ತಿತ್ತು. ತುಟಿಯು ಒಣಗಿ ದುಃಖವು ಹೆಚ್ಚಾಗುತ್ತಿರಲು ತನ್ನನ್ನು ನೋಡುತ್ತಿರುವ ಪಟ್ಟಣದ ಜನಗಳಿಗೆ ಅಳಲುಂಟಾಗುವಂತೆ ಅಳುತ್ತ, ತನ್ನ ಮಗನ ಶರೀರವನ್ನು ಹೊತ್ತುಕೊಂಡು ಸತ್ಯೇಂದ್ರಚೋಳನಲ್ಲಿ ದೂರು ಹೇಳುವುದಕ್ಕೋಸುಗ ಬರುತ್ತಿದ್ದಳು. ೧೩೫. ಅವಳ ಅಳುವಿನ ಧ್ವನಿಯಿಂದ ದಿಕ್ಕುಗಳು ಎಡೆಬಿಡದೆ ಪ್ರತಿಧ್ವನಿಗುಡುತ್ತಿದ್ದವು. ಕಣ್ಣೀರಿನಿಂದ ಭೂಮಿಯು ಕೆಸರಾಗುತ್ತಿತ್ತು. ಸ್ವಾತಂತ್ರ್ಯವೇ ತಪ್ಪಿದವಳ ಹಾಗೆ (ಜೋಲಿಯನ್ನು ಹೊಡೆಯುತ್ತ ನಡೆಯುತ್ತ ಅರಸನ ಅರಮನೆಯ ಕಡೆಗೆ ಅವಸರದಿಂದ ಬರುತ್ತಿದ್ದಳು. ವ|| ಹಾಗೆ ಬಂದು ಸತ್ಯೇಂದ್ರಚೋಳನ ಅಂತಃಪುರದ ಹೊರಬಾಗಿಲಿನ ಮುಂಭಾಗದ ಪ್ರದೇಶದಲ್ಲಿ ನಿಂತು, ಗಟ್ಟಿಯಾಗಿ ಕೂಗಿಕೊಂಡು ಕುತ್ತಿಗೆಯನ್ನು ಮೇಲಕ್ಕೆತ್ತಿ, ಹಸ್ತವನ್ನು ಮೇಲೆಮಾಡಿ, ೧೩೬. "ವಿಶಾಲವಾದ ಧರ್ಮಸಾಮ್ರಾಜ್ಯದ ರಕ್ಷಕನೇ, ಸತ್ಯವೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವ ಸತ್ಯೇಂದ್ರಮಹಾರಾಜನೇ, ನಾನು ಮೊರೆಯಿಟ್ಟು ಹೇಳಿಕೊಳ್ಳುವ ವಿಷಯವಿದೆಯಯ್ಯಾ ! ಮಂಗಳಕರವಾದ ಸದಾಶಿವನ ಕೃಪೆಯೆಂಬ ರಸಕ್ಕೆ ಪಾತ್ರೆಯ ಸ್ವರೂಪನಾಗಿದ್ದ ಮಗನು ಕೈಮೀರಿದನು ; ಸತ್ತನು."

ವ॥ ಎಂದವಿದಿಡುವಾಕ್ರಂದನಸ್ವರಮಂ ಕೇಳ್ದಿದು ಶಿವಭಕ್ತರ್ಗಾದ ನೋವಪ್ಪುದೋ ಯೆಂದು ಘನನಿನಾದಮಂ ಕೇಳ್ದ ರಾಜಹಂಸನಂತೆ ರಾಜಹಂಸಂ ಸೆಡೆದು ಸಿಡಿಮಿಡಿಗೊಂಡಂತ ಪುರದಿಂ ಚಿಂತಾಭರದಿನೇಳ್ತಂದು ಸಿಂಹಾಸನಾರೂಢನಾಗಿ ರೋದನಾಲಾಪಮೆತ್ತಣದೆಂಬನಿತ ಱೊಳ್ಬಂದೊರ್ವ ವೃದ್ಧಕಂಚುಕಿ ಕೈಮುಗಿದಿಂತೆಂದಂ

ಕಂ॥ ಕಂದನ ಪಂದಲೆಯಂ ಪಿಡಿ
ದಿಂದೀವರನಯನೆಯೊರ್ವಳುಱೆ ಮೊಱೆಯಿಡುತುಂ
ಕಂದರ್ಪರಿಪುಗೆ ಬಾಗಿಲೊ
ಳಂದಂಗೆಟ್ಟಳುತುಮಿರ್ಪಳವನಿಪತಿಲಕಾ ೧೩೭

ವ॥ ಎನಲಾನೆ ವಿಚಾರಿಪೆಂ ತಳ್ವದೊಳಪುಗಿಸೆಂಬುದುಮವಂ ಮಹಾಪ್ರಸಾದಮೆಂದ ವಳನೊಳಪುಗಿಸಿ ಕರೆದುತರ್ಪಾಗಳ್

ಚಂ॥ ಕರತಳದಲ್ಲಿ ತಾಳ್ದ ತಲೆ ಸೋಗಿಲೊಳಿಟ್ಟ ಕಬಂಧಮೆತ್ತಲುಂ
ಪರೆದಳಕಾಳಿ ಧೂಳಿ ಪುದಿದಂಗಮುಡಂಗಿದ ಬಲ್ಪು ನೆತ್ತರೊಳ್
ಪೊರೆದ ಸೆಱಂಗು ಪಾಯ್ದುಗುವ ಕಣ್ಬನಿ ಬತ್ತುವ ಬಾಯ್ಪೊದಳ್ದ ಸು
ಯ್ಯೊರಗಿದ ವಕ್ತ್ರಮುಚ್ಚಳಿತ ಹಾರವಮೊಪ್ಪಿರೆ ಬಂದಳಾರ್ತದಿಂ ೧೩೮

ವ|| ಹೀಗೆಂದು ಮೊರೆಯಿಡುವ ರೋದನಧ್ವನಿಯನ್ನು ಕೇಳಿ, ಇದು ಶಿವಭಕ್ತರಿಗಾದ ನೋವೇ ಹೌದೋ ! ಎಂದು, ಮೋಡದ ಧ್ವನಿಯನ್ನು ಕೇಳಿದ ಹಂಸಪಕ್ಷಿಯ ಹಾಗೆ, ಆ ರಾಜಶ್ರೇಷ್ಠನಾದ ಸತ್ಯೇಂದ್ರಚೋಳನು ಭಯಪಟ್ಟು ಚಿತ್ತವಿಕಾರ ಹೊಂದಿದವನಾಗಿ ಅಂತಃಪುರದಿಂದ ಚಿಂತಾಭಾರದಿಂದ ಎದ್ದು ಸಿಂಹಾಸನಾರೂಢನಾದನು. ಈ ಅಳುವು ಎಲ್ಲಿಯದೆಂದು ಕೇಳುವಷ್ಟರಲ್ಲಿ ಒಬ್ಬ ಅಂತಃಪುರಚರನಾದ ವೃದ್ಧನು ಕೈಮುಗಿದು ಹೀಗೆ ಹೇಳಿದನು : ೧೩೭. "ಎಲೈ ಅವನಿಪತಿಗಳ ತಿಲಕಪ್ರಾಯನಾದ ಸತ್ಯೇಂದ್ರಚೋಳನೇ, ಕನ್ನೈದಿಲೆಯ ಹಾಗೆ ನೇತ್ರವುಳ್ಳ ಸ್ತ್ರೀಯೊಬ್ಬಳು ಹಸಿಯ ತಲೆಯನ್ನು ಹಿಡಿದುಕೊಂಡು ಅಧಿಕವಾಗಿ ಶಿವನಲ್ಲಿ ಮೊರೆಯಿಡುತ್ತ, ದುಃಖದ ದೂರನ್ನು ಹೇಳಿಕೊಳ್ಳುತ್ತ ಬಾಗಿಲಲ್ಲಿ ಸೊಗಸುಗುಂದಿ ಅಳುತ್ತಿದ್ದಾಳೆ." ವ|| ಹೀಗೆ ಕಂಚುಕಿಯು ಹೇಳಲು, "ನಾನೇ ವಿಚಾರಿಸು ತ್ತೇನೆ, ತಡಮಾಡದೆ ಒಳಗೆ ಹೊಗಿಸು" ಎನ್ನಲಾಗಿ, ಆ ಕಂಚುಕಿಯು ಮಹಾಪ್ರಸಾದ ವೆಂದು ಆ ತಿರುಕೊಳವಿನಾಚಿಯನ್ನು ಒಳಹೊಗಿಸಿ ಕರೆದುತರುತ್ತಿರುವಾಗ ೧೩೮. ಆ ತಿರುಕೊಳವಿನಾಚಿಯು ತಲೆಯನ್ನು ಕೈಯಲ್ಲಿ ಹಿಡಿದುಕೊಂಡು, ಮಡಿಲಿನಲ್ಲಿ ಮುಂಡ ವನ್ನು ಇಟ್ಟುಕೊಂಡು, ಕೆದರಿದ ಕೂದಲುಗಳಿಂದಲೂ, ಧೂಳಿಯಿಂದ ವ್ಯಾಪ್ತವಾದ ದೇಹದಿಂದಲೂ, ಉಡುಗಿಹೋದ ಶಕ್ತಿಯಿಂದಲೂ, ರಕ್ತದಲ್ಲಿ ನೆನೆದುಹೋದ ಮುಸುಗಿನ ಸೆರಗಿನಿಂದಲೂ, ನುಗ್ಗಿ ಸುರಿಯುವ ಕಣ್ಣೀರಿನ ಹನಿಗಳಿಂದಲೂ, ಒಣಗಿದ ಬಾಯಿ ಯಿಂದಲೂ, ಅತಿಶಯ ನಿಟ್ಟುಸಿರಿನಿಂದಲೂ, ಬಾಡಿದ ಮುಖದಿಂದಲೂ, ಗಟ್ಟಿಯಾಗಿ ಹೊರಹೊರಡುತ್ತಿರುವ ಥಾ ! ಎಂಬ ಧ್ವನಿಯಿಂದಲೂ ಕೂಡಿ ದುಃಖದಿಂದ ಬಂದಳು,

ವ॥ ಅಂತು ಬಂದಾ ನರೇಂದ್ರನಿದಿರೊಳಾ ರುಂಡಮಂ ಮುಂಡಮನಿಳಿಪುತಳ ಲಿರ್ಪಡಿಸೆ ಶೋಕೋದ್ರೇಕಗದ್ಗದಕಂಠೆಯಾಗಿ ಗಂಟಲೊಡೆವಿನಮೊಳರ್ದು ಮೊಱೆಯಿಟ್ಟು ಮಱುಗಿ ಮಗುಳ್ದು ಮಗುಳ್ವಳುತ್ತುಮಿರೆಯಿರೆ

ಕಂ॥ ಅಳಲದಿರೆಲೆ ತಾಯೆ ನೀನಾ
ರಳಿದಣುಗನಿದಾರವಂ ಕೊರಲ್ಗೊರೆದ ಮಹಾ
ಖಳನಾವನಾತನಂ ಪೇ
ಳ್ವಳಿಯೊಳ್ನೆಱೆ ಕಾಣ್ಬೆನಿದಕೆ ತಕ್ಕುಜ್ಜುಗಮಂ ೧೩೯

ವ॥ ಎನಲೆಂತಾನುಮಳಲಂ ಸಂತೈಸಿಕೊಂಡು ಕೈಮುಗಿದು ನಿಂದು ಕರುಣಾಂತರಂ ಗಂಗೆ ಸತ್ಯೇಂದ್ರನ್ಗೆ ಗದ್ಗದಾಂಕುರಿತ ಶಿಥಿಲಾಕ್ಷರಂಗಳ್ವೊಱಮಡೆ ಪೇಳಲ್ಮಗುಳ್ದಿಂತೆಂದಳ್

ಉ॥ ಕೇಳವನೀಶವರ್ಯ ಭವದೀಯ ಪುರಸ್ಥಿತನಾಗಿ ಸದ್ವಣಿ
ಗ್ಜಾಳದೊಳೇಳ್ಗೆವೆತ್ತು ಸಿರಿಯಿಂ ಗುಣದಿಂ ಶಿವಭಕ್ತಿಯಿಂ ಕರಂ
ಬಾಳುತುಮಿರ್ದನೊರ್ವ ರವಿನಾಮವಣಿಗ್ವರನೆನ್ನವಲ್ಲಭಂ
ಪಾಳಿಯೊಳೀಶಭಕ್ತಚರಣಾಬ್ಜಸಮರ್ಚನೆಗೆಯ್ವುತಳ್ಕಱಿಂ ೧೪೦

ವ|| ಆ ರೀತಿ ಬಂದು ಆ ರಾಜೇಂದ್ರನ ಎದುರಿನಲ್ಲಿ ಆ ರುಂಡವನ್ನೂ, ಮುಂಡವನ್ನೂ ಇಳಿಸುತ್ತ ದುಃಖವು ಇಮ್ಮಡಿಸುತ್ತಿರಲು, ಉದ್ರೇಕಗೊಂಡ ಶೋಕದಿಂದ ಗದ್ಗದಿತಕಂಠ ವುಳ್ಳವಳಾಗಿ, ಗಂಟಲು ಒಡೆಯುವಂತೆ ಅತ್ತು, ದೂರಿಕೊಳ್ಳುತ್ತ, ಸಂಕಟಪಟ್ಟು ಪುನಃ ಪುನಃ ಅಳುತ್ತ ಇರುತ್ತಿರಲು, ೧೩೯. "ಎಲೈ ತಾಯಿ, ದುಃಖಿಸಬೇಡ. ನೀನು ಯಾರು ? ಈ ಸತ್ತಮಗನು ಯಾರ ಮಗ ? ಈತನ ಕೊರಳನ್ನು ಕತ್ತರಿಸಿದ ಮಹಾ ದುಷ್ಟನು ಅವನಾವನು ? ಆತನ ಹೆಸರನ್ನು ಹೇಳು? ಆಮೇಲೆ ಇದಕ್ಕೆ ತಕ್ಕುದಾದ ಕಾರ್ಯವನ್ನು ಶೀಘ್ರದಲ್ಲಿಯೆ ನೆರವೇರಿಸುತ್ತೇನೆ." ವ|| ಹೀಗೆ ಸತ್ಯೇಂದ್ರಚೋಳನು ಕೇಳಲಾಗಿ ಹೇಗೋ ದುಃಖವನ್ನು ಸಂತೈಸಿಕೊಂಡು ಕೈಮುಗಿದು ನಿಂತು ಕರುಣಾ ಹೃದಯನಾದ ಸತ್ಯೇಂದ್ರಚೋಳನಿಗೆ ಗದ್ಗದಕಂಠದಿಂದ ಹೊರಬರುವ ಒಂದೊಂದೇ ಅಕ್ಷರದಿಂದ ಹೇಳುತ್ತ ಕೈಮುಗಿದು ಪುನಃ ಹೀಗೆ ಹೇಳಿದಳು. ೧೪೦. "ಅವನೀಶ ಶ್ರೇಷ್ಠನೇ ಕೇಳು, ನಿನ್ನ ಧರ್ಮವತಿಯೆಂಬ ಪಟ್ಟಣದಲ್ಲಿ ವಾಸಮಾಡಿಕೊಂಡು, ಒಳ್ಳೆಯ ವರ್ತಕರಲ್ಲಿ ಪ್ರಸಿದ್ಧಿಯನ್ನು ಪಡೆದು ಸಂಪತ್ತಿನಿಂದಲೂ, ಸದ್ಗುಣಗಳಿಂದಲೂ, ಶಿವಭಕ್ತಿ ಯಿಂದ ಬಾಳುವವನಾಗಿಯೂ, ಮಹೇಶ್ವರರ ಪಾದಪೂಜೆಯನ್ನು ಮಾಡುವವನಾಗಿಯೂ ಇದ್ದ ರವಿ(ಮಾರ್ತಾಂಡ)ಯೆಂಬ ಒಬ್ಬ ಶ್ರೇಷ್ಠನು ನನಗೆ ಗಂಡನಾಗಿದ್ದನು.

ಕಂ|| ಪಿರಿದು ಸಿರಿಯೆಸಕದಿಂದಾ
ನಿರುತವನೊಡಗೂಡಿ ಪಡೆದೆನಱುವರುಮಂ ಪು
ತ್ರರನಮಳಗಾತ್ರರಂ ಭೂ
ವರ ಕೇಳ್ಸುಖದಿಂದಮಿರ್ದೆನಿರ್ಪನ್ನೆವರಂ ೧೪೧

ಮ|| ತನಗುಳ್ಳರ್ಥಮನೆಲ್ಲಮಂ ಬಿಡದೆ ಕೊಂಡುತ್ಸಾಹದಿಂದಂ ವಣಿ
ಗ್ಜನಯುಕ್ತಂ ಕಡಲೊಳ್ಪಡಂಗಡದೃ್ಗ ಪೋಗುತ್ತಿರ್ದೊಡಾ ನಾವೆ ತ
ದ್ಘನವಾರಾಶಿಯೊಳಾಗಳಾಳೆ ಮಗುಳ್ದಿನ್ನಾಳ್ದಂ ಸಮಂತಾಳ್ದು ಜೀ
ವನದೊಳ್ಜೀವನಮಂ ವಿಸರ್ಜಿಸಿದನೇನೆಂಬೆಂ ಮಹೀಪಾಲಕಾ ೧೪೨

ವ|| ಅಂತುಮಾ ಮಾರ್ತಂಡನಸ್ತಮಯ ಮಾರ್ತಂಡನಂತೆ ನಿಜವಸುಸಮೇತಂ ವನಧಿ
ಮಧ್ಯದೊಳ್ ಮುಳುಂಗಿ ಪೋಗಲೊಡನೆ

ಕಂ|| ಸಮನಿಸಿದುದೆನಗೆ ಚಿಂತಾ
ತಿಮಿರಂ ಮತಿನೇತ್ರಮಳಿದುದಮಳಿನತರ ಹೃ
ತ್ಕಮಳಂ ಕೊರಗಿದುದಸುಚ
ಕ್ರಮಿದುಬ್ಬೆಗಮಾಂತುದಾರ್ತಜನವನಚೈತ್ರಾ ೧೪೩

೧೪೧. 'ಎಲೈ ಭೂಮೀಶನೇ ಕೇಳು : ನಾನು ಅಂಥ ಪತಿಯಾದ ಮಾರ್ತಾಂಡ (ರವಿ) ಎಂಬವನೊಡನೆ ಅಧಿಕವಾದ ಸಂಪತ್ತಿನಿಂದ ಕೂಡಿಕೊಂಡಿದ್ದು ಆರುಜನ ಮಕ್ಕಳನ್ನು ಪಡೆದು ಸುಖವಾಗಿ ಇದ್ದೆನು. ಹೀಗಿರುವಷ್ಟರಲ್ಲಿ : ೧೪೨. ನನ್ನ ಪತಿಯು ಏನನ್ನೂ ಬಿಡದೆ ತನಗಿರುವ ಎಲ್ಲ ದ್ರವ್ಯವನ್ನೂ ತೆಗೆದುಕೊಂಡು, ಉತ್ಸಾಹದಿಂದ ವರ್ತಕಜನ ರೊಡನೆ ಕೂಡಿಕೊಂಡವನಾಗಿ ಹಡಗನ್ನೇರಿ (ವ್ಯಾಪಾರ ಮಾಡಲಿಕ್ಕೆ ಎಂದು) ಹೋಗು ತ್ತಿದ್ದನು. ಆ ಹಡಗು ಭಯಂಕರ ಸಮುದ್ರದಲ್ಲಿ ಮುಳುಗಿತು. ನನ್ನ ಪತಿಯೂ ಕೂಡ ನೀರಿನಲ್ಲಿ ಮುಳುಗಿ ತನ್ನ ಜೀವನವನ್ನು ಕೊನೆಗೊಳಿಸಿದನು. ಅದನ್ನು ಏನೆಂದು ಹೇಳಲಿ! ವ|| ಆ ರೀತಿ ಆ ನನ್ನ ಪತಿಯಾದ ಮಾರ್ತಾಂಡನು ಅಸ್ತಕಾಲದ ಸೂರ್ಯನಂತೆ ತನ್ನ ದ್ರವ್ಯದೊಡನೆ (ತನ್ನ ಕಿರಣದೊಡನೆ) ಸಮುದ್ರಮಧ್ಯದಲ್ಲಿ ಮುಳುಗಿಹೋದಕೂಡಲೆ, ೧೪೩. ಎಲೈ ದುಃಖದಿಂದ ಪೀಡಿತರಾದ ಜನರೆಂಬ ವನಕ್ಕೆ ಚೈತ್ರಮಾಸದ ಹಾಗಿರುವ ಸತ್ಯೇಂದ್ರಚೋಳನೇ, ಈ ರೀತಿ ಸೂರ್ಯ ಮುಳುಗಿದಂತೆ ನನ್ನ ಗಂಡನು ಸಾಯಲು ನನಗೆ ಚಿಂತೆಯೆಂಬ ಕತ್ತಲೆ ಮುಸುಕಿತು. ಬುದ್ಧಿಯೆಂಬ ಕಣ್ಣು ಕೆಟ್ಟುಹೋಯಿತು. ಶ್ರೇಷ್ಠ ವಾದ ಹೃದಯಕಮಲವು ಕಂದಿತು, ಪ್ರಾಣವೆಂಬ ಚಕ್ರವಾಕಗಳು ಸಂಕಟಗೊಂಡವು.

ಎನಗಿನನಿಂತಳಿವಂ ದಿನ
ದಿನಕ್ಕೆ ಮೂದಿಂಗಳೆಸೆವ ಗರ್ಭಂ ನೆಲಸಿ
ತ್ತನುಗತಮಾದುದು ಕಡುಬಡ
ತನವೊಡನೆ ಶಿವೈಕ್ಯಸೂಕ್ತಿಕರ್ಣಾಭರಣಾ ೧೪೪

ಕಡುರುಜೆಯುಡಸಿದ ತನುವುಂ
ಬಡತನಮೆಡೆಗೊಂಡ ಬಾಳ್ಕೆಯುಂ ಖಲಜನರೊ
ದೊಡನಾಟಮುಮೆರ್ದೆಗಳಲಂ
ಪಡೆಯದೆ ಮಾಣ್ದಪುದೆ ಶೈವಹಿತಶುಭಚರಿತಾ ೧೪೫

ಪತಿಗತಿಯೆ ಸತಿಗೆ ಗತಿಯೆಂ
ಬತಿಶಯಮಂ ತಾಳ್ದು ತನುವಹಿತ್ರಸಮೇತಂ
ತತದುಃಖಾಂಬುಧಿಯೊಳ್ಮು
ಗತಿವಡೆದಾಳ್ದಂ ಶಿವಾಂಘ್ರಿನಖಮಣಿಮುಕುರಾ ೧೪೬

ಬಡಶಿಖಿಯಲ್ಲಿ ಪರ್ಬುವ
ಪೊಡರ್ಪನೊಳಕೊಂಡು ಮೇಲೆ ಮೇಲ್ಪೈತರ್ಪ
ನ್ನೊಡಲುರಿಯುನವಧರಿಸು ನಿ
ನ್ನಡಿಗೆಱಗಿದಪೆಂ ಪರೋಪಕೃತಿಗುಣಧಾಮಾ ೧೪೭

೧೪೪. ಎಲೈ ಶಿವೈಕ್ಯತ್ವಬೋಧಕವಾದ ಮಾತುಗಳನ್ನೇ ಕರ್ಣಾಭರಣಗಳನ್ನಾಗಿ ಉಳ್ಳ ಸತ್ಯೇಂದ್ರಚೋಳಮಹಾರಾಜಾ, ನನ್ನ ಪತಿಯು ಈ ರೀತಿ ಸಾಯುವ ಸಮಯ ದಲ್ಲಿ ನನಗೆ ಮೂರುತಿಂಗಳು ಗರ್ಭವು ನೆಲೆಗೊಂಡಿತ್ತು. ಕೂಡಲೆ ಕಡುಬಡತನವೂ ಪ್ರಾಪ್ತವಾಯಿತು. ೧೪೫. ಶಿವಮತಕ್ಕೆ ಇಷ್ಟವಾದ ಶುಭಕರಚರಿತ್ರೆಯುಳ್ಳ ಸತ್ಯೇಂದ್ರಚೋಳಮಹಾರಾಜನೇ, ಅಧಿಕವಾದ ರೋಗವು ಪ್ರಾಪ್ತವಾದಾತನು, ಬಡತನ ಕೂಡಿದ ಬಾಳುವೆ, ದುಷ್ಟರೊಡನಾಟ ಹೃದಯಕ್ಕೆ ಸಂತಾಪವನ್ನುಂಟುಮಾಡದೆ ಹೋಗುತ್ತವೆಯೆ ? ೧೪೬. ಶಿವನ ಚರಣಗಳಲ್ಲಿರುವ ನಖಗಳನ್ನೇ ರತ್ನಕನ್ನಡಿಗಳಾಗಿ ಉಳ್ಳ ಮಹಾರಾಜನೇ, ಗಂಡನ ಗತಿಯೇ ಹೆಂಡತಿಯ ಗತಿ ಎನ್ನುವ ಅತಿಶಯವನ್ನು ಹೊಂದಿ ಈ ದೇಹವೆಂಬ ಹಡಗಿನಲ್ಲಿಯೇ ಕುಳಿತು ನಾನು ದುಃಖವೆಂಬ ಸಮುದ್ರದಲ್ಲಿ ಮುಳುಗಿದೆನು. ೧೪೭. "ಪರೋಪಕಾರವೆಂಬ ಗುಣಕ್ಕೆ ಸ್ಥಾನಭೂತನಾದ ಚೋಳ ಮಹಾರಾಜನೇ, ಬಡಬಾಗ್ನಿಯಲ್ಲಿ ಹಬ್ಬುವ ಪ್ರತಾಪವನ್ನು ಒಳಗುಮಾಡಿಕೊಂಡು ಅವಿಚ್ಛಿನ್ನವಾಗಿ ಉಂಟಾಗುವ ನನ್ನ ದೇಹದ ಉರಿಯತಾಪವನ್ನು ಕೇಳು, ನಿನ್ನ

ಅಱುದಿಂಗಳೊಳಗೆ ತನುಭವ
ರಱುವರ್ಗಳಗಳನೆ ರುಜೆಯಿನಳಿದರ್ಪೇಳಲ್
ಪೆಱತೇನೊ ದುಃಖಮಿಂತೆಂ
ದೞುಪಲ್ಕೆರದಪೆನೆ ಕೀರ್ತಿಧವಳಿತಭುವನಾ ೧೪೮

ಉರಿದುದು ಬಗೆ ಮಿಗೆ ಬೆಂದುದು
ಹರಣಂ ತನು ಕಂದಿ ಕುಂದಿದುದು ಕಳವಳವೊ
ತ್ತರಿಸಿದುದು ಮೂರ್ಛೆ ಬಿಡದಾ
ವರಿಸಿದುದೆನಗಾಗಳತುಳ ಸತ್ಯನಿಧಾನಾ ೧೪೯

ವ॥ ಆ ಮೂರ್ಛೆಯೊಳಾನಿರ್ಪಾಗಳುಮಾ ರಮಣನಮಿತ ಕೃಪೆಯಿನೇಳ್ತಂದಂಜದಿ ರೆಂದಭಯಮಿತ್ತು

ಉ॥ ಕೆಯ್ದಳಿರಿಂದೆ ಮೈದಡವಿ ವಾಮವಿಲೋಚನದಿಂದೆ ನೋಡಿ ಸೈ
ಪೆಯ್ದೆ ಪದಾಬ್ಜಮಂ ಪಣೆಯೊಳಿಟ್ಟಳದಿರ್ನಿನಗೊರ್ವ ಸೂನು ತಾ
ನೆಯ್ದೆ ಗುಣಾಂಕನುದ್ಭವಿಪನೀಯಳಲಂ ಪಱಿದಿಕ್ಕಿ ಮುಕ್ತಿಗೊ
ಲ್ದೊಯ್ದಪನೆಂದು ಪೇಳ್ದು ತಳರ್ದಂ ತರುಣೇಂದುಧರಂ ಧರಾಧಿಪಾ ೧೫೦

ಪಾದಕ್ಕೆ ನಮಸ್ಕರಿಸುವೆನು. ೧೪೮. ಯಶಸ್ಸಿನಿಂದ ಲೋಕವನ್ನೇ ಶುಭ್ರಗೊಳಿಸಿದ ಸತ್ಯೇಂದ್ರಚೋಳನೇ, ಆರು ತಿಂಗಳಲ್ಲಿಯೇ ಆ ಆರುಜನ ಮಕ್ಕಳೂ ರೋಗದಿಂದ ಮೃತರಾದರು. ಇನ್ನು ಇದಕ್ಕಿಂತಲೂ ಹೇಳತಕ್ಕದ್ದೇನು ? ಇದಕ್ಕಿಂತ ಬೇರೆ ಸಂಕಟವಿನ್ನೇನಿದೆ ? ಅದನ್ನು ಹೀಗೆ ಎಂದು ಹೇಳಲು ನಾನು ಶಕ್ತಳೇ ಅಲ್ಲ. ೧೪೯. ಅತುಳವಾದ ಸತ್ಯಕ್ಕೆ ನಿಧಾನವಾದ ಸತ್ಯೇಂದ್ರಚೋಳಮಹಾರಾಜನೇ, ಆ ಸಮಯದಲ್ಲಿ ನನ್ನ ಮನಸ್ಸು ಉರಿಯಿತು. ಪ್ರಾಣವು ಬೆಂದುಹೋಯಿತು. ಶರೀರವು ಕಾಂತಿಗೆಟ್ಟು ಕುಗ್ಗಿಹೋಯಿತು. ಕಳವಳವು ತುಂಬಿಕೊಂಡಿತು. ತಪ್ಪದೆ ಮೂರ್ಛೆಯು ಆವರಿಸಿಕೊಂಡಿತು. ವ॥ ಆ ಮೂರ್ಛೆಯಲ್ಲಿ ನಾನಿರುವಾಗ ಪರಮೇಶ್ವರನು ಅಧಿಕವಾದ ಕೃಪೆಯಿಂದ ಬಂದು ಅಂಜಬೇಡವೆಂದು ಅಭಯಕೊಟ್ಟನು. ೧೫೦. ಭೂಮೀಶನೇ ನನ್ನ ಪುಣ್ಯದ ಫಲವಾಗಿ ಪರಮೇಶ್ವರನು ತನ್ನ ತಳಿರಿನಂತಹ ಕೈಗಳಿಂದ ಮೈಮೇಲೆ ಕೈಯಾಡಿಸಿ, ಎಡಗಡೆಯ ಚಂದ್ರನೇತ್ರದ ತಂಪಾದ ಕಿರಣಗಳಿಂದ ಈಕ್ಷಿಸಿ, ಪಾದಕಮಲವನ್ನು ನನ್ನ ಹಣೆಯ ಮೇಲಿಟ್ಟು, "ಅಳಬೇಡ ನಿನಗೊಬ್ಬ ಸುಪುತ್ರನು ಹುಟ್ಟಿ, ನಿನಗುಂಟಾದ ದುಃಖವನ್ನು ಹೋಗಲಾಡಿಸಿ, ಮುಕ್ತಿಗೆ ಪ್ರೀತಿಯಿಂದ ಒಯ್ಯುವನು" ಎಂದು ಹೇಳಿ ಹೊರಟುಹೋದನು.

ಕಂ॥ ತಿಳಿದುದನಿತಱೊಳೆ ಮೂರ್ಛಾ
ಕುಳತೆ ಮನಸ್ತಾಪಮಳಿದುವೊಳಸಾರ್ದುದು ವಿ
ಪ್ಪಳತೆ ಶಿವನೊಲವದೇನಂ
ಕಳೆಯದೊ ಮನದಳಲನವನಿಪಾಲಕತಿಳಕಾ ೧೫೧

ನಂಬದೆ ನಂಬಿಕೆಯರಸನೊ
ಡಂಬಡೆ ಪೇಳ್ದಮಳ ವಚನಮನಿತಱೊಳೊಗೆತಂ
ದಂ ಬಾಲಕನಿವನೆನ್ನಳ
ಲಂ ಬಱಿಕೆಯ್ದಂ ವಿಳಾಸದಿಂದಿಳೆಯರಸಾ ೧೫೨

ಪರನೊಱೆದ ತೆಱದೊಳುಱೆ ಶಂ
ಕರನೆಂದೊಳ್ಪೆಸರನಿಟ್ಟು ಗತಿಯುಂ ಮತಿಯುಂ
ಪರಸುಖದನೀತನೆಂದಾಂ
ಪೊರೆದೆಂ ಪೊರೆವಂತೆ ಕಲ್ಪಭೂಜದ ಸಸಿಯಂ ೧೫೩

ಇನನಸ್ತಮಿಸಿದೊಡೊದವಿದ
ಘನತಿಮಿರಮನಿಂದು ಕಳೆವವೊಲ್ನೆಱೆ ಕಳೆದಂ
ಇನನಸ್ತಮಿಸಿದೊಡೊದವಿದ
ಘನದುಃಖಮನಿಂದುನಿಭನಿವಂ ಮನುಜೇಂದ್ರಾ ೧೫೪

೧೫೧. ರಾಜಶ್ರೇಷ್ಠನಾದ ಎಲೈ ಸತ್ಯೇಂದ್ರಚೋಳನೇ, ಅಷ್ಟರಲ್ಲಿ ನನ್ನ ಮೂರ್ಛೆಯು ಕಳೆಯಿತು. ಮನಸ್ಸಿನ ವ್ಯಾಕುಲತೆಯು ಅಡಗಿಹೋಯಿತು. ವೈಕ್ಲವ್ಯವು ಮಾಯವಾಯಿತು. ಶಿವನ ಒಲವು ಅದೇನನ್ನು ತಾನೆ ಕಳೆಯಲಾರದು! ೧೫೨. ಎಲೈ ಅರಸೇ, ಶಿವನು ಒಡಂಬಟ್ಟು ಹೇಳಿದ ಶ್ರೇಷ್ಠವಾದ ಮಾತನ್ನು ನಾನು ನಂಬಿಕೊಂಡಿದ್ದೆನು. ಅಷ್ಟರಲ್ಲಿ ಈಗ ಮೃತಪಟ್ಟ ಹುಡುಗನು ಹುಟ್ಟಿ ತನ್ನ ವಿನೋದದಿಂದ ನನ್ನ ದುಃಖವನ್ನು ಹೋಗಲಾಡಿಸಿದನು. ೧೫೩. ಪರಮೇಶ್ವರನು ಹೇಳಿದ ರೀತಿಯಲ್ಲಿ ಈ ಹುಡುಗನಿಗೆ 'ಶಂಕರ' ಎಂದೇ ಒಳ್ಳೆಯ ಪವಿತ್ರ ಹೆಸರನ್ನಿಟ್ಟೆನು. ನನ್ನ ಗತಿಯೂ ಮತಿಯೂ ಮುಕ್ತಿಸುಖದಾತನೂ ಇವನೇ ಎಂದು ತಿಳಿದು ಕಲ್ಪವೃಕ್ಷದ ಸಸಿಯನ್ನು ಬೆಳೆಸಿದಂತೆ ಬೆಳೆಸಿದೆನು. ೧೫೪. ಮನುಜಶ್ರೇಷ್ಠನಾದ ಸತ್ಯೇಂದ್ರನೇ, ಸೂರ್ಯಾಸ್ತವಾದೊಡನೆ ಉಂಟಾದ ತಿಮಿರವನ್ನು ಚಂದ್ರನು ಕಳೆಯುವಂತೆ, ನನ್ನ ಗಂಡನು ಸತ್ತಮೇಲೆ ಉಂಟಾದ ಘನವಾದ ದುಃಖವನ್ನು ಚಂದ್ರನಿಗೆ ಸಮಾನನಾದ ಈ ನನ್ನ

ಹರೆಯಂ ಕಿಱಿದಾದೊಡಮೇಂ
ಪಿರಿದೊ ವಿವೇಕಂ ಶಿವಾಂಕಮಾಲೆಯನತ್ಯಾ
ದರದಿಂ ಪಾಡುವನಭವನ
ಶರಣರ್ಗೆಱಗುವನವಂದಿರೊಳ್ಪಿನದಿಸುವಂ ೧೫೫

ಶಿವಕೀರ್ತನಮಂ ಕೇಳ್ವಂ
ಶಿವಾಂಘ್ರಿಪೂಜೆಯನೊಲಿಲ್ದು ನೋಳ್ಪಂ ಮುದದಿಂ
ಶಿವನಾಮಮನುಚ್ಚರಿಪಂ
ಶಿವಂಗೆ ಕೊಟ್ಟಲ್ಲದೇನುಮಂ ಕೊಳಲೊಲ್ಲಂ ೧೫೬

ವ|| ಇಂತಭಿನವಾಶ್ಚರ್ಯಕರ ಪವಿತ್ರಚರಿತ್ರನೆನಿಸಿ ಪುತ್ರಂ ಪಂಚವರ್ಷಂಬರಂ ಸೆರೆದಿಸೆ ದಿರ್ದನಿರ್ಪನ್ನೆಗಂ

ಉ|| ನಿನ್ನಿನ ಮುಂಬಗಲ್ಪದೆದು ನಿನ್ನ ಕುಮಾರನಮಾತ್ಯಪುತ್ರನುಂ
ಚೆನ್ನೆಸೆದಿರ್ಪಿನಂ ವಿಹರಿಪಲ್ಲಿ ಪುರಾಂತದೊಳೈದಿಬರ್ಪ ಸೇ
ನೋನ್ನತಿಯುಂ ನಿರೀಕ್ಷಿಸಲಿವಂ ಪೊಱಮಟ್ಟರೆ ತತ್ತುರಂಗಮೋ
ತನ್ನಿಜಮಸ್ತಕಂ ಪಱಿಯೆ ಮೆಟ್ಟಿದುದುತ್ಸುರದಿಂ ಧರಾಧಿಪಾ ೧೫೭

ಕುಮಾರನು ಹೋಗಲಾಡಿಸಿದನು. ೧೫೫. ವಯಸ್ಸು ಚಿಕ್ಕದಾಗಿರಬಹುದು, ಹಿರಿದಾದ ವಿವೇಕವುಳ್ಳವನಾಗಿದ್ದನು. ಶಿವನಾಮಾವಳಿಯನ್ನು ಪ್ರೀತಿಯಿಂದ ಹಾಡುತ್ತಿದ್ದನು. ಪರಮೇಶ್ವರನ ಶರಣರಿಗೆ ನಮಸ್ಕರಿಸುತ್ತಿದ್ದನು. ಆ ಶರಣರೊಡನೆ ವಿನೋದದಿಂದ ಆಟವಾಡುತ್ತಿದ್ದನು. ೧೫೬. ಶಿವಸ್ತೋತ್ರವನ್ನು ಕೇಳುವನು. ಶಿವನ ಪಾದಪೂಜೆಯನ್ನು ಪ್ರೀತಿಯಿಂದ ನೋಡುತ್ತಿದ್ದನು. ಸಂತೋಷದಿಂದ 'ಶಿವ ಶಿವ' ಎಂದು ಶಿವನ ಹೆಸರನ್ನು ಉಚ್ಚರಿಸುತ್ತಿದ್ದನು. ಶಿವನಿಗೆ ಅರ್ಪಿಸಿದಲ್ಲದೆ ಏನನ್ನೂ ಸ್ವೀಕರಿಸುತ್ತಿದ್ದಿಲ್ಲ. ವ|| ಈ ರೀತಿ ನೂತನವಾದ ಆಶ್ಚರ್ಯವನ್ನುಂಟುಮಾಡುವ ಚರಿತ್ರೆಯಿಂದ ಕೂಡಿದವನೆನಿಸಿದ ಮಗನು ಐದು ವರ್ಷಗಳ ವಯಸ್ಸಿನವನೆನಿಸಿ ಶೋಭಿಸಿದ್ದನು. ಹೀಗೆ ಇರುವಷ್ಟರಲ್ಲಿ ೧೫೭. ನಿನ್ನೆಯ ದಿನದ ಪ್ರಾತಃಕಾಲದಲ್ಲಿ ನಿನ್ನ ಮಗನಾದ ರಾಜಶೇಖರನೂ, ಅಮಾತ್ಯಪುತ್ರನಾದ ಮಿತವಚನನೂ ಸೊಗಸಾಗಿ ಪಟ್ಟಣದ ಮಧ್ಯದಲ್ಲಿ ವಿಹರಿಸುವ ಕಾಲದಲ್ಲಿ ಆ ಚತುರಂಗಬಲದ ಉತ್ಕರ್ಷವನ್ನು ನೋಡಲು ಈ ನನ್ನ ಕುಮಾರನು ಮನೆಬಿಟ್ಟು ಹೊರಗೆ ಹೊರಟು ಬಂದಿರಲು, ಅವರ ಕುದುರೆಯು ನನ್ನ ಈ ಕುಮಾರನ ಶಿರಸ್ಸು ಹರಿಯುವಂತೆ ತನ್ನ ತೀಕ್ಷ್ಣವಾದ ಗೊರಸಿನಿಂದ

ಕಂ॥ ಇವನಿಂದೆ ಮುಂದೆ ಪಡೆದಪೆ
ನವಿಗಳತರ ಸುಖಮನೆಂದು ನಂಬಿರ್ದೆಂ ಕೇ
ಳ್ಯುವರಾಜನಶ್ವಖುರಕೀ
ಕುವರಂ ಬಲಿಯಪ್ಪನೆಂದು ಬಲ್ಲೆನೆ ನೃಪತೀ ೧೫೨

ಎಂದಿಂತೆಲ್ಲಮನವಳಳ
ಲಿಂದುಸುರೆ ನರೇಂದ್ರವರ್ಯನಾಲಿಸಿ ಮನದೊಳ್
ನೊಂದು ಶಿವ ಶಿವಂ ಬ
ಲ್ಲಂ ದಿಟಮಿದನೆಂದು ಮಗುಳ್ದು ತಲೆದೂಗುತ್ತುಂ ೧೫೯

ಬಡಬಾನಳಮುಂ ಜಲಮುಂ
ಕಡಲೊಡನಾಂತಂತೆ ಕಾಯ್ಪುಮುಂ ಕರುಣಮನಾಂ
ತೊಡನೊಪ್ಪಿದನಾತ್ಮಜನೊ
ಳ್ಕಡುಶೋಕಂಗೆಯ್ವ ಸುದತಿಯೊಳ್ ಸತ್ಯೇಂದ್ರಂ ೧೬೦

ವ॥ ಅಂತೊಪ್ಪುತ್ತಮಿರ್ದು ಪತಿಮೋಹಿಮಂತ್ರಿಪನಂ ಬರಿಸೆಂದು ವೃದ್ಧಕಂಚುಕಿಗೆ ಬೆಸಸುತ್ತುಮಿರೆಯಿರೆ

ತುಳಿಯಿತು, ಮಹಾರಾಜಾ. ೧೫೮. ಈ ಮಗನಿಂದಲೇ ಮುಂದೆ ವಿಶೇಷವಾದ ಸುಖವನ್ನು ಪಡೆಯುವೆನೆಂದು ನಂಬಿಕೊಂಡಿದ್ದೆನು. ಕೇಳು : ಯುವರಾಜನ ಕುದುರೆಯ ಕಾಲಿನ ಗೊರಸಿಗೆ ಇವನು ಆಹುತಿಯಾಗುತ್ತಾನೆಂದು ನಾನೇನು ಬಲ್ಲೆನು !" ೧೫೯. ಈ ಪ್ರಕಾರವಾಗಿ ನಡೆದ ಎಲ್ಲ ವಿಚಾರಗಳನ್ನೂ ಆ ತಿರುಕೊಳವಿನಾಚಿಯು ಅತಿ ಸಂಕಟದಿಂದ ಸತ್ಯೇಂದ್ರಚೋಳಮಹಾರಾಜನಿಗೆ ಹೇಳಲಾಗಿ, ಆ ನರಶ್ರೇಷ್ಠನು ಕೇಳಿ, ಮನಸ್ಸಿನಲ್ಲಿ ನೊಂದುಕೊಂಡವನಾಗಿ, "ಶಿವ ಶಿವ, (ಈ ವಿಚಾರವನ್ನು) ನಿಜವಾಗಿ ಶಿವನೇ ಬಲ್ಲನು" ಎಂದು ಪುನಃ ತಲೆಯನ್ನು ತೂಗುತ್ತ, ೧೬೦. ಸಮುದ್ರವು ಬಡಬಾಗ್ನಿಯನ್ನೂ ನೀರನ್ನೂ (ಏಕಕಾಲದಲ್ಲಿ) ಧರಿಸಿರುವಂತೆ ಸತ್ಯೇಂದ್ರಚೋಳನಿಗೆ ತನ್ನ ಮಗನ ವಿಷಯದಲ್ಲಿ ಕ್ರೋಧವೂ, ತಿರುಕೊಳವಿನಾಚಿಯಲ್ಲಿ ಕಾರುಣ್ಯವೂ ಹುಟ್ಟಲು, ಕ್ರೋಧ ಕಾರುಣ್ಯಗಳಿಂದ ಏಕಕಾಲದಲ್ಲಿ ಅವನು ಶೋಭಿಸಿದನು. ವ॥ ಈ ರೀತಿ ಒಪ್ಪಿದವನಾಗಿ ಸತ್ಯೇಂದ್ರಚೋಳಮಹಾರಾಜನು ಪತಿಮೋಹಿಮಂತ್ರೀಶ್ವರನನ್ನು

ಚಂ॥ ಜನನಿ ಜಗತ್ರಯಾಶ್ರಿತೆ ಜನಾರ್ದನವಂದ್ಯೆ ವದಾನ್ಯೆ ಮಾನ್ಯೆ ಮಾ
ನಿನಿ ಮಹನೀಯೆ ಮಂಗಳೆ ಮಹೇಶ್ವರಿ ಮಾನುತೆ ಮಂದಯಾನೆ ಸ
ಜ್ಜನಹಿತೆ ಸದ್ಗುಣಾನ್ವಿತೆ ಸದಂಚಿತೆ ಸತ್ಯನಿಧಾನೆ ಸೌಖ್ಯದಾ
ಯಿನಿ ಸವಿಳಾಸೆ ಲೇಸೆನೆ ಪರಾತ್ಪರೆ ಪಾಲಿಪುದೆನ್ನನಂಬಿಕೇ ೧೬೧

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣಮಹಾಪ್ರಭಾಪಟಲ ಪರಿವೃತ ಪರಶಿವಶ್ರೀಪಾದ ನಖಚಂದ್ರಸಾಂದ್ರರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯ ಕವಿತಾವಿಶಾರದ ಶ್ರೀ ಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳಪ್ರಬಂಧದೊಳ್ ತಿರುಕೊಳವಿನಾಚಿ ಪ್ರಳಾಪವರ್ಣನಂ

ಅಂತು ಆಶ್ವಾಸ ೧೩ಕ್ಕಂ ಪದ ೧೬೭೭ಕ್ಕಂ ಮಂಗಳ ಮಹಾಶ್ರೀ

## ತ್ರಯೋದಶಾಶ್ವಾಸಂ

### ಸಂಪೂರ್ಣಂ

ಬರುವಂತೆ ಮಾಡೆಂದು ವೃದ್ಧನಾದ ಕಂಚುಕಿಗೆ ಹೇಳುತ್ತಿರಲಾಗಿ ೧೬೧. ತಾಯೆ, ಮೂರುಲೋಕವನ್ನೂ ಕಾಪಾಡುವವಳೇ, ಬ್ರಹ್ಮಪೂಜಿತೆಯೇ, ಕೊಡುಗೈಯವಳೇ, ಮನ್ನಿತಳೇ, ಮಹಾತಾಯಿಯೇ, ಮಂಗಳಕರಳೇ, ಮಹೇಶ್ವರೀ, ಪೂಜ್ಯಳೇ, ನಿಧಾನ ನಡಿಗೆಯುವಳೇ, ಒಳ್ಳೆಯವರಿಗೆ ಶುಭವನ್ನುಂಟುಮಾಡುವವಳೇ, ಒಳ್ಳೆಯ ಗುಣಗಳಿಂದ ಕೂಡಿದವಳೇ, ಸುಂದರಳೇ, ಸತ್ಯಕ್ಕೆ ಆಶ್ರಯವಾಗಿರುವವಳೇ, ಸಕಲ ಸುಖಗಳನ್ನೂ ಕೊಡುವವಳೇ, ವಿಲಾಸದಿಂದ ಕೂಡಿದವಳೇ, ಶ್ರೇಷ್ಠವಾದವಳೇ, ಒಳ್ಳೆಯದು ಎಂದು ತಾಯೀ ನನ್ನನ್ನು ಕಾಪಾಡು. ಗದ್ಯ॥ ಈ ರಾಜಶೇಖರ ವಿಳಾಸವೆಂಬ ಕಾವ್ಯವು ನಮಸ್ಕರಿಸಲ್ಪಡುವ ದೇವೇಂದ್ರನ ಕಿರೀಟದ ದಂಡೆಯಲ್ಲಿ ಕೆತ್ತಿರುವ ರತ್ನಸಮೂಹಗಳ ಅತಿಶಯವಾದ ಪ್ರಭೆಯ ರಾಶಿಯಿಂದ ಸುತ್ತುವರಿದಿರುವ ಪರಮೇಶ್ವರನ ಶ್ರೀಪಾದಗಳ ಉಗುರುಗಳೆಂಬ ಚಂದ್ರನಿಂದ ಹೊರಹೊಮ್ಮುವ ದಟ್ಟವಾದ ಬೆಳದಿಂಗಳಲ್ಲಿ ಶೋಭಿಸುವ ಚಕೋರಪಕ್ಷಿಯಂತಿರುವ ರಸಜ್ಞರಾದ ಜನರಿಂದ ಮನ್ನಣೆಗೊಂಡ ಕನ್ನಡ ಸಂಸ್ಕೃತಭಾಷಾಕವಿತೆಯಲ್ಲಿ ವಿಶಾರದನೆನಿಸಿದ ಷಡಕ್ಷರದೇವನಿಂದ ರಚಿಸಲ್ಪಟ್ಟ ರಾಜಶೇಖರ ವಿಳಾಸವೆಂಬ ದೊಡ್ಡ ಪ್ರಬಂಧದಲ್ಲಿ ತಿರುಕೊಳವಿನಾಚಿಯ ರೋದನ ವರ್ಣನೆ

## ತ್ರಯೋದಶಾಶ್ವಾಸ

### ಮುಗಿದುದು

# ಚತುರ್ದಶಾಶ್ವಾಸಂ

ಕಂ॥ ಶ್ರೀ ಮದಗಜಾಭುಜಾಸುಮ
ನೋಮಂಜುಳಮಾಲಿಕಾವೃತ ಶ್ರೀಕಂಠಂ
ಸೋಮಕಳಾಧರನೆಮ್ಮಂ
ಪ್ರೇಮಂ ಮಿಗೆ ಪೊರೆಗೆ ಸಂತತಂ ಶಿವಲಿಂಗಂ ೧

ಮ॥ ವಿಳಸದ್ರತ್ನಕಿರೀಟಕಾಂತಿ ಬಿಸಿಲಂ ತಳ್ವೊಯ್ಯೆ ವಕ್ತ್ರೇಂದುಮಂ
ಡಳಮಂ ಚುಂಬಿಪ ತಾರೆ ತಾನೆನಿಸಿ ಮುಕ್ತಾಕುಂಡಲಂ ಗಂಡದೊಳ್
ಮಿಳಿರ್ದಾಡುತ್ತಿರೆ ತಾರಹಾರಕಿರಣಂ ಬೆಳ್ದಿಂಗಳಂ ಬೀಱೆ ಕ
ಣ್ಗೊಳಿಸುತ್ತಂ ನಡೆತಂದು ಮಂತ್ರಿತಿಳಕಂ ಪೊಕ್ಕಂ ತದಾಸ್ಥಾನಮಂ ೨

ವ॥ ಅಂತು ಪೊಕ್ಕು ನಿಜೇಶ್ವರಾಂಘ್ರಿಗೆಱಗಿ ಕೃತಾಂಜಲಿಪುಟನಾಗಿ ನಿಂದಿರ್ದನಿತಱೊ ಳಿದಿರೊಳಾ ಬಾಲಶಿರಮಂ ಪಿಡಿದಳಲ್ವ ಹರಭಕ್ತೆಯಪ್ಪ ಸುದತಿಯುಂ ಕಂಡಿದೇನೆಂದು ತನ್ನೊಳ ನುವಿಸಿ

ಕಂ॥ ಇದು ನಿನ್ನಿನಶ್ವದೇಱಾ
ಟದೊಳೆನ್ನ ತನೂಜನಿಂ ನೃಪಾತ್ಮಜನಿಂ ಬಂ
ದುದು ಗಡ ತಾನಲ್ಲದೊಡೇಂ
ಸುದತಿ ಸಭಾಸ್ಥಳಕೆ ಮೊರೆಯನಿಡಲೈದುವಳೇ ೩

೧. ಸಂಪದ್ಯುಕ್ತಳಾದ ಪಾರ್ವತೀದೇವಿಯ ತೋಳುಗಳೆಂಬ ಹೂವಿನ ಹಾರದಿಂದ ಕೂಡಿರುವವನೂ, ಕರಿಗೊರಳನೂ, ಚಂದ್ರಕಳೆಯನ್ನು (ಜಡೆಯಲ್ಲಿ) ಧರಿಸಿರುವವನೂ, ಆದ ಶಿವಲಿಂಗನು ನಮ್ಮನ್ನು ಅಧಿಕವಾದ ಪ್ರೀತಿಯಿಂದ ಸತತವೂ ಸಂರಕ್ಷಿಸಲಿ. ೨. ಅಮಾತ್ಯಶ್ರೇಷ್ಠನಾದ ಪತಿಮೋಹಿಯ ಪ್ರಕಾಶಮಾನವಾದ ರತ್ನಖಚಿತ ಕಿರೀಟವು ಸೂರ್ಯನ ಬಿಸಿಲನ್ನು ತಿರಸ್ಕರಿಸುತ್ತಿತ್ತು ; ಮುಖವೆಂಬ ಚಂದ್ರಮಂಡಲವನ್ನು ನಕ್ಷತ್ರಗಳು ಚುಂಬಿಸುತ್ತಿವೆಯೋ ಎಂಬ ಹಾಗೆ ಕಪೋಲಪ್ರದೇಶದಲ್ಲಿ ಮುತ್ತಿನ ಕರ್ಣಾಭರಣಗಳು ತೂಗಾಡುತ್ತಿದ್ದವು. ದೊಡ್ಡ ಮುತ್ತುಗಳ ಹಾರದ ಕಾಂತಿಯು ಬೆಳದಿಂಗಳನ್ನು ಬೀರುತ್ತಿತ್ತು. ಅವನು ಬಂದು ಸತ್ಯೇಂದ್ರಚೋಳನ ಸ್ಥಾನವನ್ನು ಹೊಕ್ಕನು. ವ॥ ಆ ರೀತಿ ಬಂದು ತನ್ನ ಪ್ರಭುವಾದ ಸತ್ಯೇಂದ್ರಚೋಳನಿಗೆರಗಿ ಕೈಮುಗಿದು ನಿಂತುಕೊಂಡಿರುವಷ್ಟರಲ್ಲಿ ಎದುರಿನಲ್ಲಿಯೇ ಆ ಬಾಲಕನ ಶಿರಸ್ಸನ್ನು ಹಿಡಿದು ಅಳುತ್ತಿರುವ ಹರಭಕ್ತೆಯಾದ ತಿರುಕೊಳವಿನಾಚಿಯನ್ನು ಕಂಡು ಇದೇನಾಗಿರಬಹುದೆಂದು ತನ್ನಲ್ಲಿಯೇ ತರ್ಕಿಸಿದನು. ೩. 'ಸನ್ನಿವೇಶವು ನಿನ್ನೆಯ ದಿನದ ಅಶ್ವದ ಏರಾಟದಲ್ಲಿ ನನ್ನ ಮಗ ಮತ್ತು ರಾಜಪುತ್ರರುಗಳಿಂದ ಬಂದುದಾಗಿರಬೇಕು, ಅಲ್ಲವೇ ! ಅದಲ್ಲದಿದ್ದರೆ ಈ ಸುದತಿಯು

ಇದಕೆ ಪರಿಹಾರಮಣಮಿ
ಲ್ಲಿದು ಶಿವಕೃತಮಕ್ಕುಮಭವನೊಲ್ಮೆಗೆ ನೃಪನ
ಗ್ಗದ ಮಹಿಮೆಗೆ ಕಾರಣಮಿಂ
ತಿದು ತಾನೆಂದಱಿದನವನದೇಂ ಸಿತಮತಿಯೋ ೪

ವ॥ ಇಂತಮಾತ್ಯವರೇಣ್ಯಂ ತಿಳಿದ ಬಗೆಯುಂ ಮೊಗಮುಂ ನೋಡಿದನಿತಱೊಳ್ ಪರೇಂಗಿತಪ್ರಜ್ಞನಾದ ನರೇಂದ್ರಂ ತಿಳಿದವನಭಿಜ್ಞತೆಗೆ ಮನದೊಳ್ಮೆಚ್ಚಿ ತಾನುಮುಸಿರದೆಯುಂ

ಕಂ॥ ಕರೆಕರೆ ಕೃತಾಪರಾಧಕ
ಧರಾತಿಭಾರಕ ಕುಮಾರಕರನೀಗಳೆನು
ತ್ತುರಸನುಸಿರ್ವನಿತಱೊಳ್ಪಂ
ದರಿಳಾಪತಿಸೂನು ಸಚಿವಸೂನುಗಳಿರ್ವರ್ ೫

ವ॥ ಅಂತೈತಂದು ಮಣಿಮಕುಟಕಿರೀಟಕಿರಣಮರುಣಕುಸುಮಮಂ ಪದಪೀಠದೊಳ್ ಬಲಿಗೆದರ್ದಂತಾಗೆ ಬಾಗಿ ಪೊಡಮಟ್ಟು ನಿಜಾಪರಾಧಮನರಸನಱಿದಪನೆಂದು ಶಂಕಿಸುತ್ತುಂತಂತೆ ಕಂಪಿಸುತ್ತುಂ ಕೆಲಸಾರ್ದು ನಿಂದಿರ್ದ ನಿಜಕುಮಾರನುಮಂ ಸಚಿವಸುತನುಮಂ ಕೆಂಪಡರ್ದ ಕಣ್ಗಳಿಂದಡಸಿ ನೋಡಿ

ಸಭಾಸ್ಥಾನಕ್ಕೆ ಮೊರೆಯಿಡಲು ಬರುತ್ತಿದ್ದಳೇ ! ೪. ಇದಕ್ಕೆ ಸ್ವಲ್ಪವೂ ಪರಿಹಾರವೇ ಇಲ್ಲ. ಇದು ಶಿವನಿಂದಲೇ ನಡೆದ ಘಟನೆ. ಶಿವನ ಒಲುಮೆಗೆ ಮತ್ತು ಮಹಾರಾಜನ ಶ್ರೇಷ್ಠಮಹಿಮೆಗೆ ಇದು ಕಾರಣಭೂತವಾದುದು' ಎಂಬುದಾಗಿ ಸೂಕ್ಷ್ಮಮತಿಯಾದ ಅವನು ತಿಳಿದನು. ವ|| ಈ ಪ್ರಕಾರ ಅಮಾತ್ಯಶ್ರೇಷ್ಠನು ತಿಳಿದ ರೀತಿಯನ್ನು ಮುಖ ನೋಡಿದೊಡನೇ ಪರರ ಇಂಗಿತವನ್ನು ತಿಳಿಯುವುದರಲ್ಲಿ ಕುಶಲನಾದ ಸತ್ಯೇಂದ್ರ ಚೋಳನು ಅರಿತು, ಆ ಮಂತ್ರಿಯ ಜಾಣತನಕ್ಕೆ ಮನಸ್ಸಿನಲ್ಲಿಯೇ ಮೆಚ್ಚಿ ಏನೂ ಹೇಳ ದಿದ್ದನು. ೫. ರಾಜನು "ಅಪರಾಧ ಮಾಡಿದವರೂ ಭೂಭಾರಕರೂ ಆದ ಪುತ್ರರು ಗಳನ್ನು ಈಗಲೆ ಕರೆ ಕರೆ." ಎಂದು ಹೇಳುತ್ತಿದ್ದಂತೆಯೇ ರಾಜಶೇಖರ ಮತ್ತು ಮಿತ ವಚನರುಗಳಿಬ್ಬರೂ ಆಸ್ಥಾನಕ್ಕೆ ಬಂದರು. ವ|| ಈ ರೀತಿಯಲ್ಲಿ ಇಬ್ಬರೂ ಬಂದು, ತಮ್ಮ ರತ್ನಮಯವಾದ ಕಿರೀಟದ ಕಾಂತಿಯು ಸತ್ಯೇಂದ್ರಚೋಳನ ಪಾದಪೀಠದಲ್ಲಿ ಪುಷ್ಪಾಂಜಲಿ ಯನ್ನು ಕೆದರಿದ ಹಾಗೆ ಬಗ್ಗಿ ನಮಸ್ಕಾರಮಾಡಿದರು. ತಾವು ಮಾಡಿದ ಅಪರಾಧ ವನ್ನು ಮಹಾರಾಜನು ತಿಳಿದುಕೊಂಡಿರುವನೆಂದು ಶಂಕೆಗೊಂಡವರಾಗಿ, ಭಯದಿಂದ ನಡುಗುತ್ತ ಪಕ್ಕಕ್ಕೆ ಸರಿದು ನಿಂತುಕೊಂಡರು. (ಹೀಗೆ ನಿಂತುಕೊಂಡ) ತನ್ನ ಕುಮಾರನಾದ ರಾಜಶೇಖರನನ್ನೂ, ಸಚಿವಪುತ್ರನಾದ ಮಿತವಚನನನ್ನೂ ಚೋಳ

ಕಂ॥ ಕುಡಿಮಿಾಸೆ ಕುಣಿಯೆ ಪಣೆಯೊ
ಳ್ಬಿಡದೊಗೆತರೆ ಘರ್ಮಜಳಕಣಂ ಭ್ರುಕುಟ ಪ್ರೊದ
ಳ್ದಿಡೆಗೊಂಡಿರೆ ಕೋಪಾಗ್ನಿಯು
ಪ್ಪೊಡರ್ಪ್ಪ ರೂಪಾಂತ ತೆಱದೆ ಘುಡುಘುಡಿಸುತ್ತುಂ ೬

ಮ॥ಸ್ರ॥ ಇನಿತೊಂದೌದ್ಧತ್ಯಮೇಂ ಸಲ್ವುದೆ ತನುಮದದಿಂ ಯೌವನೋದ್ರೇಕಲಕ್ಷ್ಮೀ
ಜನಿತೋದ್ಯದ್ದರ್ಪದಿಂ ಮುಂದಱಿಯದಪಯಶಕ್ಕಳ್ಕದತ್ಯಂತ ದೋಷ
ಕ್ಕೆ ನಿತಾಂತಂ ಬಳ್ಕದೆನ್ನತ್ತಣಿನಿನಿತು ಭಯಂದೋಱದೀ ಧಾತ್ರಿಯೊಳ್ಸ
ಜ್ಜನರಲ್ಲಲ್ತೆಂಬರೆಂದೆಂಬುದನೆ ಬಗೆಯದೀ ಬಾಲನಂ ಕೊಂದಿರಲ್ತೇ ೭

ವ॥ ಎಂದು ಮತ್ತಮಿರದೆ

ಚಂ॥ ಶರಣಪದಂಗಳಂ ಪದೆದು ಪೂಜಿಸಿ ಶಂಕರಪೂಜೆಗೆಯ್ದು ಸ
ಚ್ಚರಿತಮನಾಂತು ಶೈವಮತವರ್ತನೆಯಂ ಬಗೆಗೊಂಡು ತಾಳ್ದು ಭಾ
ಸುರಗುಣವೃಂದಮಂ ವಿಮಳಕೀರ್ತಿಯನಾರ್ಜಿಸಿ ಬಾಳ್ದುಮೆಮ್ಮನು
ದ್ಧರಿಸುವನೆಂದು ನಚ್ಚಿರೆ ಕುಮಾರಕ ಲೇಸನಿದಂ ನೆಗಳ್ಚಿದೈ ೮

ರಾಜನು ಕೆಂಪಾದ ನೇತ್ರಗಳಿಂದ ದುರುದುರನೆ ನೋಡಿದನು. ೬. ಆ ಸತ್ಯೇಂದ್ರ ಚೋಳನ ಕುಡಿಮಿಾಸೆ ಕುಣಿಯುತ್ತಿತ್ತು. ಹಣೆಯಲ್ಲಿ ಬೆವರಿನ ಹನಿಗಳು ಹುಟ್ಟಿಕೊಂಡವು. ಹುಬ್ಬುಗಳು ಗಂಟಿಕ್ಕಿದುವು. ಕೋಪವೆಂಬ ಬೆಂಕಿಯೇ ಅತಿಶಯ ರೂಪವನ್ನು ಪಡೆದಂತಾಗಿ ಗರ್ಜನೆಮಾಡುತ್ತ ೭. "ಇಷ್ಟೊಂದು ಗರ್ವವು ಯೋಗ್ಯವಾದುದೇ ? ದೇಹಮದ, ಯೌವನಮದ, ಧನಮದಗಳಿಂದುಂಟಾದ ಮಿತಿಮಿಾರಿದ ದರ್ಪದಿಂದ ಹಿಂದುಮುಂದು ವಿಚಾರಿಸದೆ, ಅಪಯಶಸ್ಸಿಗೆ ಹೆದರದೆ, ಪಾಪಗಳಿಗೆ ಸ್ವಲ್ಪವೂ ಹಿಂದೆಗೆಯದೆ, ನನ್ನ ದೆಸೆಯಿಂದಲಾದರೂ ಸ್ವಲ್ಪವೂ ಹೆದರದೆ, ಈ ಭೂಮಿಯಲ್ಲಿ ಸಜ್ಜನರಾದವರು ಅಲ್ಲದ ಕಾರ್ಯವನ್ನು ಮಾಡಿದರೆಂದು ಅಂದಾರೆಂಬುದನ್ನು ಯೋಚನೆಮಾಡದೆ ಈ ಬಾಲಕನನ್ನು ನೀವಿಬ್ಬರೂ ಕೊಂದಿರಲ್ಲವೆ ?" ವ॥ ಹೀಗೆ ಹೇಳಿ ಪುನಃ ಸುಮ್ಮನಿರದೆ ೮. "ಶಿವಶರಣರ ಪಾದಪೂಜೆಯನ್ನೂ ಶಿವಲಿಂಗದ ಪೂಜೆಯನ್ನೂ ಮಾಡಿ, ಯೋಗ್ಯ ನಡವಳಿಕೆಯನ್ನು ಹೊಂದಿ, ವೀರಶೈವಮತತತ್ತ್ವಗಳನ್ನನುಸರಿಸಿ, ಸದ್ಗುಣಸಮೂಹವನ್ನು ಹೊಂದಿ, ವಿಮಲಕೀರ್ತಿಯನ್ನು ಸಂಪಾದನೆಮಾಡಿ ಬದುಕಿ, ನನ್ನನ್ನು ಉದ್ಧಾರಮಾಡುವನೆಂದು ನಾನು ನಂಬಿಕೊಂಡಿದ್ದರೆ, ಎಲೈ ಮಗನೇ, ನೀನು ಈ ಶಿಶುವಧೆಯನ್ನು ಮಾಡುವಂಥ ಉತ್ತಮಕಾರ್ಯವನ್ನು ಮಾಡಿದೆಯಾ !

ಅರಿನೃಪರಂ ಪಡಲ್ವಡಿಪ ಕೇಳಿಯನೊಲ್ಲದೆ ಶಂಭುಪಾದಪಂ
ಕರುಹಮನೊಲ್ದು ಪೂಜಿಪ ವಿಳಾಸಕೆ ಸಲ್ಲದೆ ಶೈವಕಾವ್ಯಮಂ
ಸರಸತೆಯಿಂದೆ ಕೇಳ್ವ ಬಗೆಯೊಳ್ಮಿಗೆ ನಿಲ್ಲದೆ ಭರ್ಗಭಕ್ತಭಾ
ಸುರಶಿಶುವಂ ಕೊರಲ್ಗೊಱೆವ ಲೀಲೆಗೆ ಸಂದುದೆ ಚಿತ್ತಮಾತ್ಮಜಾ ೯

ಮ॥ಸ್ರ॥ ಶಿವಭಕ್ತಂಗೊರ್ಮೆ ಭಿಕ್ಷಾನ್ನಮನೆ ವಿನಯದಿಂದಿತ್ತವಂ ಕೋಟಿಯಜ್ಞೋ
ದ್ಭವ ಪುಣ್ಯಾವಾಪ್ತಿಯಂ ತಾಂ ಪಡೆವನೆನೆ ತದಾಗಸ್ಕರಂ ಕೋಟಿ ಪಾಪೌ
ಘವಿಶೇಷಾವಾಪ್ತಿಯಂ ಮೇಣ್ಪಡೆಯನೆ ಸುಕೃತಕ್ಕಾದ ಬಲ್ಪೇನಘಕ್ಕಿ
ಲ್ಲವೆ ಪೇಳೀ ದೋಷಕಿನ್ನಾವುದೊ ಪರಿಹರಣಂ ಧಾತ್ರಿಯೊಳ್ನೋಡೆ ನೀಡುಂ ೧೦

ಕಂ॥ ಶರಣರ ಮನಕ್ಕೆ ನೋವಂ
ದೊರೆಕೊಳಿಸಿದಘಕ್ಕೆ ದೊರೆಯದೆನೆ ಪರಿಹಾರಂ
ಶರಣಶಿಶುಶಿರಮನರಿದೀ
ದುರಿತಂ ನಿಜಶಿರಮನಿತ್ತೊಡಂ ಪೋದಪುದೇ ೧೧

ಹರಪೂಜೆಯಿಂದೆ ಮಿಗಿಲೀ
ಶ್ವರಭಕ್ತರ ಪೂಜೆಯೆಂಬುದಾಗಮಮುದಱಿಂ
ಹರಚರಣದ್ರೋಹದಿನೀ
ಶ್ವರಶರಣದ್ರೋಹಮಗ್ಗಳಂ ವಸುಮತಿಯೊಳ್ ೧೨

೯. ಶತ್ರುರಾಜರನ್ನು ಉರುಳಿಸುವ ಆಟವನ್ನು ಬಿಟ್ಟು, ಪರಮೇಶ್ವರನ ಪಾದಕಮಲ ಗಳನ್ನು ಪ್ರೀತಿಯಿಂದ ಪೂಜೆಮಾಡುವ ಕಾರ್ಯಕ್ಕೆ ಮನಸ್ಸುಮಾಡದೆ, ಶಿವಸಂಬಂಧವಾದ ಕಾವ್ಯಾದಿಗಳನ್ನು ಅನುರಾಗಗೊಂಡು ಕೇಳತಕ್ಕ ಬಯಕೆಯಲ್ಲಿ ಇಚ್ಛೆಯಿಲ್ಲದೆ, ಪರ ಮೇಶ್ವರನ ಭಕ್ತರಾದವರುಗಳ ಶ್ರೇಷ್ಠವಾದ ಶಿಶುವಿನ ಕುತ್ತಿಗೆಯನ್ನು ಕತ್ತರಿಸುವ ಕ್ರಿಯೆಯಲ್ಲಿ, ಎಲೈ ಮಗನೇ, ನಿನ್ನ ಮನಸ್ಸು ತೊಡಗಿತೇ ? ೧೦. 'ಶಿವಶರಣನಾದ ವನಿಗೆ ಒಂದುಸಲ ಭಿಕ್ಷಾನ್ನವನ್ನು ವಿಧೇಯತೆಯಿಂದ ಕೊಟ್ಟವನು ಕೋಟಿಸಂಖ್ಯೆಯ ಯಜ್ಞಗಳನ್ನು ಮಾಡಿದುದರಿಂದ ಉಂಟಾಗುವ ಪುಣ್ಯಫಲವನ್ನು ಪಡೆಯುತ್ತಾನೆ' ಎಂದು ಹೇಳಿರಲಾಗಿ, ಆ ಶಿವಶರಣರುಗಳ ವಿಷಯದಲ್ಲಿ ಅಪರಾಧ ಮಾಡಿದವನು ಕೋಟಿಸಂಖ್ಯೆಯ ಪಾಪವಿಶೇಷಗಳ ಫಲವನ್ನು ಆ ಕೂಡಲೆ ಹೊಂದುವುದಿಲ್ಲವೇ ? ಪುಣ್ಯಕ್ಕೆ ಉಂಟಾಗುವ ಸಾಮರ್ಥ್ಯವು ಪಾಪಕ್ಕೆ ಇಲ್ಲವೇ ಹೇಳು ? (ನೀನು ಈಗ ಮಾಡಿರುವ) ಈ ದೋಷಕ್ಕೆ ಪರಿಹಾರವೆಂಬುದು ಈ ಭೂಮಿಯಲ್ಲಿ ಯಾವುದಿರುವುದು? ೧೧. ಶರಣರ ಮನಸ್ಸಿಗೆ ನೋವನ್ನುಂಟುಮಾಡುವುದರಿಂದುಂಟಾದ ಪಾಪಕ್ಕೆ ಪರಿ ಹಾರವೆಂಬುದೇ ಇಲ್ಲ. ಹೀಗಿರಲಾಗಿ ಶಿವಭಕ್ತರ ಬಾಲಕನ ಶಿರಚ್ಛೇದನದಿಂದುಂಟಾದ ಈ ಪಾಪವು ತನ್ನ ತಲೆಯನ್ನು ಕತ್ತರಿಸಿಕೊಟ್ಟರೂ ತೀರುವುದಿಲ್ಲ ! ೧೨. ಈ ಭೂಮಿಯಲ್ಲಿ ಪರಮೇಶ್ವರನ ಪೂಜೆಗಿಂತಲೂ ಪರಮೇಶ್ವರನ ಭಕ್ತರಪೂಜೆ ಅಧಿಕತರ ದ್ದೆಂಬು ಆಗಮಗಳ ಅಭಿಪ್ರಾಯವು. ಅದ್ದರಿಂದ ಪರಮೇಶ್ವರನ ಪಾದಗಳ ವಿಷಯ

ವ॥ ಎಂದು ಸತ್ಯೇಂದ್ರಚೋಳಾಧಿಪಂ ಯುವರಾಜನುಮಂ ಮಿತವಚನನುಮನಂತೆ ಜಡಿದು ನುಡಿದುಮಿಾ ಶಿಶುವನಿರ್ವರೊಳಾವಾತಂ ಕೊಂದನೆಂಬುದಂ ಬೇಗಂ ಬೆಸಸಿಮೆನೆ ಮಿತ ವಚನಂ ಮುಂದಣ್ಗೆವಂದು ಕರಾರವಿಂದಮಂ ಮುಗಿದು ನಿಂದು

ಉ॥ ದೇವ ಮದೀಶ ಬಿನ್ನಪಮನೂನಹಯಂಗಳನೇಱಿ ಮಿಾಱಿ ಸೇ
ನಾವಳಿಗೂಡಿ ಗಾಡಿಮಿಗೆ ಬರ್ಪನಮಿಾ ಶಿಶು ನೋಳ್ಪೊಡೈದೆ ಕಂ
ಡೀ ವಿಭು ತನ್ನ ವಾಜಿಯನೆ ದಾಂಟಿಸಿದಂ ತಲೆ ಪಾಱೆ ರಕ್ತಧಾ
ರಾವಿಳಮಿಕ್ಕಿ ಮೆಟ್ಟಿದುದು ಮತ್ತುರಗಂ ಖುರದಿಂ ಶಿರೋಧಿಯಂ ೧೩

ಕಂ॥ ಅದಱಿಂದೆ ದೇವ ತಪ್ಪೆ
ನ್ನದು ಬಳಿಕೀ ಶಿರಕೆ ಪಳಿಯನೆನ್ನಯ ಶಿರಮಂ
ಪದೆದೀವುದುಚಿತಮೆಂದಾ
ಡಿದನಾ ಮಿತವಚನನಚಳ ಸೂನೃತವಚನಂ ೧೪

ವ॥ ಆಗಳಾ ಸತ್ಯೇಂದ್ರನಾ ಮಾತಂ ಬಗೆಗೊಂಡು ನಿಜಮಂತ್ರಿಯಂ ನಿರೀಕ್ಷಿಸುತ್ತ ಮಿಾತನ ಶಿರವನರಿದೀ ಶಿಶುಶಿರಕ್ಕೆ ಪಳಿಗೊಡುವುದೆನೆ ಘಳಿಲನೆ ಪಳಿಪೊರ್ದದಮಳಚರಿತನಿದಿರ್ಗೆ ವಂದೆನ್ನ ಶಿರಮಿದಕ್ಕೆ ಪಳಿಯೆಂದು ತೋರ್ಪಂತೆ ಪಣೆವೆಱೆಯೊಳ್ ಕರಾಂಜಲಿಯನಮರ್ಚಿನಿಂದು

ದಲ್ಲಿ ಮಾಡಿದ ದ್ರೋಹಕ್ಕಿಂತಲೂ ಶಿವಶರಣರಿಗೆ ಮಾಡಿದ ದ್ರೋಹವು ಹೆಚ್ಚಿನದು." ವ|| ಹೀಗೆಂದು ಆ ಸತ್ಯೇಂದ್ರಚೋಳಮಹಾರಾಜನು ಯುವರಾಜನಾದ ರಾಜ ಶೇಖರನನ್ನೂ ಮಿತವಚನನನ್ನೂ ಕುರಿತು ಗದರಿಸಿ ನುಡಿಯುತ್ತ, "ನಿಮ್ಮಿಬ್ಬರಲ್ಲಿ ಈ ಶಿಶುವಿನ ವಧೆಯನ್ನು ಮಾಡಿದವನು ಯಾವಾತನೆಂಬುದನ್ನು ಬೇಗ ಹೇಳಿರಿ" ಎನ್ನ ಲಾಗಿ, ಮಿತವಚನನು ಮುಂದಕ್ಕೆ ಬಂದು ತನ್ನ ಕರಕಮಲಗಳನ್ನು ಮುಗಿದು ನಿಂತು ಕೊಂಡು ೧೩. "ದೇವ, ನನ್ನೊಡೆಯನೇ, ನನ್ನ ಬಿನ್ನಹವೇನೆಂದರೆ, ನಾವೀ ರ್ವರೂ ಶ್ರೇಷ್ಠವಾದ ಕುದುರೆಗಳನ್ನೇರಿ, ದೊಡ್ಡದಾದ ಸೈನ್ಯಸಮೇತವಾಗಿ ಸಂಭ್ರಮ ದಿಂದ (ಈ ನಗರದ) ಬೀದಿಯಲ್ಲಿ ಬರುತ್ತಿದ್ದೆವು. ಈ ಶಿಶುವು ನೋಡುವುದಕ್ಕೆ ಜನಗಳ ಮಧ್ಯದಲ್ಲಿ ನುಗ್ಗಿಬಂದುದನ್ನು ಕಂಡು ರಾಜಶೇಖರನು ತನ್ನ ಕುದುರೆಯನ್ನು ಹಾರಿಸಿ ದಾಟಿದನು. ನನ್ನ ಕುದುರೆಯಾದರೋ ಈ ಮಗುವಿನ ತಲೆಯು ರಕ್ತಧಾರೆಯಿಂದ ವ್ಯಾಪ್ತಗೊಂಡು ಹಾರುವಹಾಗೆ ಗೊರಸಿನಿಂದ ಕೊರಳನ್ನು ಮೆಟ್ಟಿಬಿಟ್ಟಿತು. ೧೪. ಸ್ವಾಮಿಯೇ, ಆ ಕಾರಣದಿಂದ ತಪ್ಪು ನನ್ನದು. ಮತ್ತು ಈ ತಲೆಗೆ ನನ್ನ ತಲೆಯನ್ನೇ ಪ್ರತಿಯಾಗಿ ಕೊಡುವುದುಚಿತ" ಎಂದು ಯಥಾರ್ಥವಾದಿಯಾದ ಆ ಮಿತವಚನನು ಹೇಳಿದನು. ವ|| ಆಗ ಸತ್ಯೇಂದ್ರಚೋಳನು ಮಿತವಚನನು ಹೇಳಿದ ಆ ಮಾತನ್ನೊಪ್ಪಿ, ತನ್ನ ಮಂತ್ರಿಯ ಮುಖವನ್ನು ನೋಡಿ, ಮಿತವಚನನ ತಲೆಯನ್ನು ಈ ಬಾಲಕನ ತಲೆಗೆ ಪ್ರತಿಯಾಗಿ ಕತ್ತರಿಸಿ ಕೊಡುವುದೆಂದು ಹೇಳಲಾಗಿ, ತಟ್ಟನೆ ರಾಜಶೇಖರನು ಮುಂದಕ್ಕೆ ಬಂದು ನನ್ನ ತಲೆಯನ್ನು ಈ ಮಗುವಿನ ತಲೆಗೆ ಪ್ರತಿಯಾಗಿ ಕೊಡುವೆನೆಂದು

ಕಂ॥ ವರಸತ್ಯವಾಣಿ ಗಂಭೀ
ರರವಂ ಕೌತುಕವಮನಾಳೆ ಸಭೆ ನೃಪನ ಮನಂ
ಹರುಷಮನವರ್ಚೆ ಸಚಿವಂ
ಗಿರದಳಲಿರ್ಮಡಿಸೆ ಮತ್ರುಲಕ್ಷಂ ನುಡಿದಂ ೧೫

ಅವಧರಿಪುದು ಬಿನ್ನಪಮಂ
ಭುವನೇಶ್ವರ ತಪ್ಪಿದೆನ್ನದೆಂತೆನಲಾಂ ಸೈಂ
ಧವನಿತ್ತ ಸೈಂಧವಮನೇ
ಱುವ ಬಗೆವಿಡಿದಿರ್ದು ಕೇಳ್ದೊಡ್ಡೀ ಮಿತವಚನಂ ೧೬

ಮ॥ ಪೊಸತೀ ವಾಜಿಯುಗಂ ಪುರಂ ಪ್ರಬಳಶೈವವ್ರಾತದಿಂ ತೀವಿ ರಂ
ಜಿಸುಗುಂ ಸೈನ್ಯಮಗಣ್ಯಮುನ್ನತಮದಂ ಮದ್ಭೂಧವಂ ಭಕ್ತಮಾ
ನಸಸಂತಾಪಕರಾಸಹಿಷ್ಣುವದಱಿಂದೀ ಕಜ್ಜಮಂ ಕೊರ್ತು ಯೋ
ಚಿಸಲೇನಕ್ಕುಮೆ ಮಾಣ್ಬುದೆಂದನಿವನೆನ್ನಂ ಮುನ್ನಮುರ್ವೀಶ್ವರಾ ೧೭

ಕಂ॥ ಎನೆ ನಿನಗೆ ಬಂದ ತಪ್ಪಿಂ
ದೆನಗೆ ವಿನೋದಕ್ಕೆ ವಿಘ್ನಮಂ ಮಾಡದಿರೇ
ಳೆನುತಾಗ್ರಹಿಸುತೊಡಂಬಡ
ಲನುಗೈದೆಂ ದೇವ ವಿಹರಿಪೊಂದುಜ್ಜುಗವಂ ೧೮

ತೋರಿಸುವ ಹಾಗೆ, ಹಣೆಯಲ್ಲಿ ಕೈಗಳನ್ನು ಜೋಡಿಸಿ ನಿಂತುಕೊಂಡು, ೧೫. ಸಭಾಸ್ಥಾನದ ಜನರು ಆಶ್ಚರ್ಯವನ್ನು ಹೊಂದುತ್ತಿರುವಂತೆ, ರಾಜನ ಮನಸ್ಸು ಸಂತೋಷಗೊಳ್ಳುವಂತೆ, ಮಂತ್ರಿಗೆ ದುಃಖವು ದ್ವಿಗುಣವಾಗುತ್ತಿರುವಂತೆ ಯಥಾರ್ಥವಾದಿಯಾದ ರಾಜಶೇಖರನು ಹೀಗೆ ಹೇಳಿದನು. ೧೬. "ಭೂಮೀಶ್ವರನಾದ ತಂದೆಯೇ, ನನ್ನ ಬಿನ್ನಪವನ್ನು ಒಪ್ಪಿಕೊಳ್ಳಬೇಕು. ಈ ಶಿಶುಹತ್ಯೆಯ ಸಂಬಂಧವಾದ ಅಪರಾಧವು ನನ್ನದು. ಹೇಗೆಂದರೆ, ಸಿಂಧುದೇಶದ ರಾಜನಿತ್ತ ಕುದುರೆಗಳನ್ನು ಹತ್ತಿ ಸಂಚರಿಸಬೇಕೆಂಬ ಉತ್ಸಾಹವು ನನ್ನ ಮನಸ್ಸಿನಲ್ಲಿ ಹುಟ್ಟಲಾಗಿ, ಈ ಮಿತವಚನನನ್ನು ನಾನು ಕೇಳಿದೆನು. ೧೭. ಅವನು 'ಈ ಕುದುರೆಗಳು ಹೊಸವು. ಪಟ್ಟಣವು ಅತಿಶಯವಾಗಿ ಶಿವಭಕ್ತರ ಸಮೂಹದಿಂದ ತುಂಬಿ ಶೋಭಿಸುವುದು. ಚತುರಂಗಬಲವು ಮದವಿಶಿಷ್ಟವಾಗಿಯೂ, ಗಣನಾತೀತವಾಗಿಯೂ ಇರುವಂತಹುದು. ನಮ್ಮ ರಾಜನು ಶಿವಶರಣರ ಮನಸ್ಸಿಗೆ ದುಃಖವನ್ನುಂಟುಮಾಡಿದವರಿಗೆ ಸರಿಯಾದ ಶಿಕ್ಷೆ ಮಾಡುವನೇ ವಿನಾ ಸೈರಿಸುವುದಿಲ್ಲ. ಆದ್ದರಿಂದ ಈ ಕಾರ್ಯವನ್ನು ಪ್ರೀತಿಯಿಂದ ಯೋಚಿಸುವುದೂ ಸರಿಯಲ್ಲ, ಬೇಡ' ಎಂದು ಮೊದಲೇ ನನ್ನನ್ನು ಕುರಿತು ತಿಳಿಸಿದನು. ೧೮. ಹೀಗೆ ಹೇಳಲಾಗಿ ನಿನಗೆ ಬಂದ ತಪ್ಪು ನನಗಿರಲಿ. ನನ್ನ ವಿನೋದಕ್ಕೆ ವಿಘ್ನವನ್ನುಂಟುಮಾಡಬೇಡ ಎಂದು ಒತ್ತಾಯಪಡಿಸಿದೆನು. ಅವನು ಒಡಂಬಡಲು, ದೇವ, ವೈಹಾಳಿಯನ್ನು ಮಾಡುವ

ಅದಱಿಂದಪರಾಧಮಿದೆ
ನ್ನದು ಗಡ ನೀಮಱಿಯದುದೆ ಮಹೇಶ್ವರ ಸರ್ವ
ಜ್ಞದಯಾನಿಧಿ ಪಳಿಗೀವುದು
ಮದುತ್ತಮಾಂಗಮನು ಮಾಧವಂ ಮೆಚ್ಚುವಿನಂ ೧೯

ಅನಿಮಿತ್ತಮಿಾಶಭಕ್ತೆಯ
ತನುಭವನಿಂತಳಿದನೆಂದು ಮಱುಗಿದಪುದು ಮ
ನ್ಮನಮಿನಿತಲ್ಲದೆ ಮಜ್ಜೀ
ವನಮಂ ತೊಱೆವಲ್ಲಿ ಮಱುಕಮೇಂ ತೋಱುಗುಮೇ ೨೦

ವ॥ ಎಂದು ನುಡಿದಾ ರಾಜಶೇಖರಸುಕುಮಾರನ ಬಗೆಗೆ ಸಭಾಸದ ವೃದ್ಧ ಪ್ರಸಿದ್ಧ ರಾಜನ್ಯಕಂ ಬಗೆಮೆಚ್ಚಿ ಮಣಿಮಕುಟಮನೊಲೆದು ತೂಗಿ

ಕಂ॥ ಪುಸಿಪೊಂದದ ಪೊಸನುಡಿಯಂ
ವಸುಮತಿಯೊಳ್ ನುಡಿಯಲಕ್ಕುಮಿಾ ನೃಪಸುತನಂ
ತಸುವಳಿಗುಮೆಂಬ ಬಗೆಯೊಳ
ಮುಸುರುವ ನನ್ನಿಗಳ ನಾಯಕರ್ಪೆಱರೊಳರೇ ೨೧

ವ॥ ಎಂದು ನುತಿಸುತಿರ್ಪಿನಮಾ ಸತ್ಯೇಂದ್ರನಾ ಕುವರಂಗಾದ ತಪ್ಪನಱಿದವನೆಂದು ದನಪ್ಪುಕೈದು ಸಚಿವಾಸ್ಯಮಂ ನಿರೀಕ್ಷಿಸಿ

ಒಂದು ಉದ್ಯೋಗವನ್ನು ಕೈಕೊಂಡೆನು. ೧೯. ಆದುದರಿಂದ ಮಿತವಚನನಿಂದಾದ ಈ ತಪ್ಪು ನನ್ನದು. ಸಮಸ್ತವನ್ನೂ ಅರಿತ ದಯಾಶಾಲಿಯಾದ ರಾಜನೇ, ನೀನು ಪರಮೇಶ್ವರನಿಗೆ ಪ್ರೀತಿಯುಂಟಾಗುವ ಹಾಗೆ ನನ್ನ ತಲೆಯನ್ನೇ ಈ ಶಿಶುವಿನ ತಲೆಗೆ ಪ್ರತಿಯಾಗಿ ಕೊಡುವುದುಚಿತ. ೨೦. ಈಶ್ವರಭಕ್ತೆಯಾದ ಈ ತಿರುಕೊಳವಿನಾಚಿಯ ಮಗನು ಅನಿಮಿತ್ತವಾಗಿ ಈ ರೀತಿ ಸತ್ತನಲ್ಲಾ ! ಎಂದು ನನ್ನ ಮನಸ್ಸು ದುಃಖಪಡುವುದಲ್ಲದೆ ನನ್ನ ಪ್ರಾಣವನ್ನು ತೊರೆಯುವ ವಿಷಯದಲ್ಲಿ ನನಗೆ ಮರುಕವೇ ಇಲ್ಲ." ವ|| ಹೀಗೆಂದು ನುಡಿದ ಆ ರಾಜಶೇಖರ ಸುಕುಮಾರನ ರೀತಿಗೆ ಸಭೆಯಲ್ಲಿದ್ದ ವೃದ್ಧರೂ ಪ್ರಖ್ಯಾತರೂ ಆದ ರಾಜರುಗಳ ಸಮೂಹವು ಮನಸ್ಸಿನಲ್ಲಿ ಶ್ಲಾಘಿಸಿ, ತಮ್ಮ ರತ್ನಖಚಿತವಾದ ಕಿರೀಟದಿಂದ ಕೂಡಿದ ತಲೆಯನ್ನು ಅಲ್ಲಾಡಿಸಿ ೨೧. "ಸುಳ್ಳಿಲ್ಲದ ಹೊಸಮಾತನ್ನು ಭೂಮಿಯಲ್ಲಿ ಹೇಳಬಹುದು. ಈ ನೃಪಕುಮಾರನ ಹಾಗೆ ಪ್ರಾಣವು ನಾಶವಾಗುವುದು ಎಂದೆನ್ನುವ ಸಂದರ್ಭದಲ್ಲಿಯೂ ಸತ್ಯವಚನವನ್ನೇ ಹೇಳುವ ಸತ್ಯವಂತರಾದ ನಾಯಕರು ಬೇರೆ ಯಾರಾದರೂ ಉಂಟೆ ?" ವ|| ಹೀಗೆಂದು ಸ್ತೋತ್ರ ಮಾಡುತ್ತಿರಲು ಆ ಸತ್ಯೇಂದ್ರಚೋಳನು ಆ ಕುಮಾರನಿಗಾದ ಅಪರಾಧವನ್ನು ತಿಳಿದು, ಅವನು ಹೇಳಿದುದನ್ನು ಅಂಗೀಕರಿಸಿ, ಸಚಿವನಾದ ಪತಿವ್ರೋಹಿಯ ಮುಖವನ್ನು ನೋಡಿ

ಕಂ॥ ಸಂದೆಗವೇನಿನ್ನಿದಕಿಲೆ
ಕೊಂದವನಿವನಾದಮಾದನೀತನ ಶಿರಮುಂ
ತಂದೀವುದು ಪಳಿಗುಚಿತಮಿ
ದೆಂದಂ ಶಿವಶಿವ ಸಭಾಸದರ್ಮಱುಗುವಿನಂ ೨೨

ಎನೆ ಕಳೆಯೇಱಿದನುರ್ವಿದ
ನನುರಾಗಂದಾಳ್ದನಭವನಡಿದಾವರೆಯಂ
ನೆನೆದನಮರ್ಚಿದನಾ ನಿಜ
ಜನಕನ ಕನದಂಘ್ರಿಕಂಜದೊಳ್ ಪೆಱನೊಸಲಂ ೨೩

ವ॥ ಅಂತೆಱಗಿ ಬೆಸನಂ ಪಡೆದೇಳ್ದು ನಿಂದು

ಕಂ॥ ನಿಮ್ಮಯ ಮಣಕ್ಕೆ ಮಾಡಿದೆ
ನುಮ್ಮಳಮಂ ಜನಕ ಗಿರಿಶಭಕ್ತೆಯ ಶಿಶುವಂ
ದಿಮ್ಮಿದರಲ್ತೆನೆ ಕಡುಪಿಂ
ದಾಂ ಮಡಿಪಿದೆನೆನ್ನವೋಲ್ ಕೃತಘ್ನರುವೊಳರೇ ೨೪

ಮಱವುದಿದನೆಂತುಮೆನ್ನಂ
ಮಱಯಲ್ವಲಮಾಗದೆಂದು ಬೀಳ್ಕೊಂಡಲ್ಲಿಂ
ಪೊಱಮಟ್ಟನಮಮ ಪದಪಿಂ
ನೆಱಗಲಿಗಳ ದೇವನಾರ್ಪು ಮಿಗೆ ಯುವರಾಜಂ ೨೫

ಹೀಗೆಂದನು : ೨೨. "ಮಂತ್ರಿಯೇ, ಇನ್ನು ಈ ಕಾರಣಕ್ಕಾಗಿ ಸಂದೇಹಪಡತಕ್ಕದ್ದಿಲ್ಲ. ಈ ರಾಜಶೇಖರನೇ ಕೊಂದವನೆಂದು ಚೆನ್ನಾಗಿ ದೃಢಪಟ್ಟಿತು. ಆದ್ದರಿಂದ ಈತನ ತಲೆಯನ್ನು ಮಗುವಿನ ತಲೆಗೆ ಪ್ರತಿಯಾಗಿ ಕೊಡುವುದುಚಿತ" ಹೀಗೆಂದು ಸಭಾಸದರೆಲ್ಲ ಮರುಗುತ್ತಿರಲು, ಶಿವಶಿವ ! ಆ ರಾಜನು ಹೇಳಿದನು. ೨೩. ಹೀಗೆಂದು ರಾಜನು ಹೇಳಲಾಗಿ, ರಾಜಶೇಖರನು ಕಳೆಯೇರಿ ಉಬ್ಬಿದವನಾಗಿ, ಪ್ರೀತಿಯಿಂದ ಕೂಡಿ, ಸದಾಶಿವನ ಪಾದಕಮಲವನ್ನು ಧ್ಯಾನಿಸಿ, ತನ್ನ ತಂದೆಯ ಪಾದ ಕಮಲಗಳಲ್ಲಿ ತನ್ನ ಪೆರೆನೊಸಲನ್ನು ಚಾಚಿ ನಮಸ್ಕರಿಸಿದನು. ವ॥ ಆ ಪ್ರಕಾರವಾಗಿ ನಮಸ್ಕರಿಸಿ ಅಪ್ಪಣೆಯನ್ನು ಪಡೆದು ಎದ್ದು ನಿಂತು ೨೪. "ತಂದೆಯವರೇ, ನಿಮ್ಮ ಮನಸ್ಸಿಗೆ ಚಿಂತೆಯನ್ನುಂಟುಮಾಡಿದೆನು. ಶಿವಭಕ್ತೆಯಾದ ತಿರುಕೊಳವಿನಾಚಿಯ ಶಿಶುವನ್ನು ದೊಡ್ಡವರು ಇದು ಕ್ರಮವಲ್ಲ ಎನ್ನುವ ರೀತಿಯಲ್ಲಿ ಕ್ರೂರತನದಿಂದ ಸಂಹಾರ ಮಾಡಿದವನಾದೆನು. ಲೋಕದಲ್ಲಿ ನನ್ನ ಹಾಗೆ ಕೃತಘ್ನರಾದವರು ಯಾರಿದ್ದಾರೆ ? ೨೫. ಹೇಗಾದರೂ ಈ ದುಷ್ಟ ಕಾರ್ಯವನ್ನು ಮರೆಯುವುದು. ನನ್ನನ್ನು ಮರೆಯ ಲಾಗದು" ಎಂದು ಅಲ್ಲಿಂದ ತಂದೆಯ ಅಪ್ಪಣೆಯನ್ನು ಪಡೆದು, ಅಮಮ ! ಸಮರ್ಥರಲ್ಲಿ ಶ್ರೇಷ್ಠನಾದ ಆ ರಾಜಶೇಖರನು ಸಂತೋಷದಿಂದ ಅಲ್ಲಿಂದ (ತಂದೆಯ ಶಿರಚ್ಛೇದನರೂಪ

ಒಡನೇಳ್ದು ತನ್ನಿರೂಪಂ
ಬಡೆದಾ ಸಚಿವೇಂದ್ರನಾ ನರೇಂದ್ರಾತ್ಮಜನೊಳ್
ನಡೆತಂದಂ ಪೆಱತೊಂದಂ
ಕಡುಕಜ್ಜಮನಲ್ಲಿ ತನ್ನೊಳಾಳೋಚಿಸುತಂ ೨೬

ವ॥ ಅಂತು ನಡೆತಂದಾ ಕುಮಾರನ ಸತ್ಯವಚನಕ್ಕಮಾತನ ಧೈರ್ಯೋನ್ನತಿಗಮಾತನು ತ್ಕಟ ಶಿವಭಕ್ತಿಗಂ ಮನದೊಳ್ಮೆಚ್ಚಿ ಪೊಗಳ್ದು ದೇವಾ ನೀಮುಮೀಕ್ಷಣಂ ಮೃಡಪೂಜೆಗೆಯ್ದು ಬರ್ಪುದೆಂದಂತವುರದಂತಮನೆಯ್ದಿಸಿ ತಾನುಂ ನಿಜನಿಳಯಕೆಳ್ತಂದತೀವ ಭಕ್ತಿಯಿಂದೇಕಾಂತ ಭವನದೊಳುಮಾಕಾಂತನಂ ಪೂಜಿಸುತನಂತರಂ

ಕಂ॥ ನಿತ್ಯಂ ನಿಜೇಶ್ವರಪ್ರಿಯ
ಕೃತ್ಯಂ ಶಿವಭೃತ್ಯನಧಿಕಸತ್ಯಂ ಘನಸಾ
ಹಿತ್ಯಂ ಜನನುತ್ಯಂ ಸದ
ಮಾತ್ಯಂ ಕರತಳದೊಳಲಗನಳವಡಿಸುತ್ತಂ ೨೭

ದ್ರುತವಿಲಂಬಿತ॥ ಒಡೆಯನನಗ್ಗದ ಪುತ್ರನನೀಗಳಾಂ
ಮಡಿಪುತಕ್ಕಟ ಬೆಂದ ಶರೀರಮಂ
ಪಿಡಿದು ಬಾಳ್ವೆನೆ ಧಾತ್ರಿಯೊಳೆಂದು ತ
ನ್ನೊಡಲ ನೀಗಲೊಡರ್ಚಿದನಾಕ್ಷಣಂ ೨೮

ವ॥ ಅಂತೊಡರ್ಚೆ ಶಿವಾಂಘ್ರಿಯುಗಳಮನೆರ್ದೆಯೊಳನುಗೊಳಿಸಿ ನಮಿಸಿ

ವಾದ ಶಿಕ್ಷೆಯನ್ನು ಒಪ್ಪಿ) ಹೊರಟುಹೋದನು. ೨೬. ಸಚಿವಶ್ರೇಷ್ಠನಾದ ಪತಿ ಮೋಹಿಯು ರಾಜಾಜ್ಞೆಯನ್ನು ಪಡೆದು ರಾಜಶೇಖರನೊಡನೆ ಕೂಡಲೆ ಎದ್ದು, ಮನಸ್ಸಿನಲ್ಲಿ ಮತ್ತೊಂದು ಕಠಿಣವಾದ ಕಾರ್ಯವನ್ನು ಯೋಚನೆ ಮಾಡುತ್ತ ಬಂದನು. ವ॥ ಆ ಪ್ರಕಾರವಾಗಿ ಬಂದಂಥ ರಾಜಶೇಖರನ ಸತ್ಯದ ಮಾತಿಗೂ, ಆತನ ಧೈರ್ಯಕ್ಕೂ, ಶಿವ ಭಕ್ತಿಗೂ ಮನಸ್ಸಿನಲ್ಲಿಯೇ ಮೆಚ್ಚಿ ಹೊಗಳಿ, ಈ ಕ್ಷಣದಲ್ಲಿಯೇ ನೀವು ಶಿವಪೂಜೆಯನ್ನು ಮಾಡಿಕೊಂಡು ಬರಬೇಕೆಂದು ಅಂತಃಪುರವನ್ನು ಹೊಗಿಸಿ, ತಾನೂ ತನ್ನ ಮನೆಗೆ ಬಂದು ಏಕಾಂತಗೃಹದಲ್ಲಿ ಭಕ್ತಿಯಿಂದ ಪರಮೇಶ್ವರನನ್ನು ಪೂಜೆ ಮಾಡಿದನು. ೨೭. ಸತತವೂ ತನ್ನ ಪ್ರಭುವಾದ ಸತ್ಯೇಂದ್ರಚೋಳನಿಗೆ ಶ್ರೇಯಸ್ಸನ್ನೇ ಕೋರುವಂತಹ ಶಿವಭಕ್ತನೂ, ಸತ್ಯಶಾಲಿಯೂ, ಸಾಹಿತ್ಯಜ್ಞನೂ, ಸ್ತೋತ್ರಾರ್ಹನೂ ಆದ ಪತಿಮೋಹಿಯು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ೨೮. ಒಡೆಯನಾದ ಸತ್ಯೇಂದ್ರಚೋಳನ ಕುಮಾರನಾದ ರಾಜಶೇಖರನನ್ನು ಸಂಹರಿಸಿ, ಈ ಭೂಮಿಯಲ್ಲಿ ತುಚ್ಛವಾದ ಶರೀರವನ್ನು ಧರಿಸಿ ಎಷ್ಟು ಕಾಲ ಬದುಕುವೆನೆಂದು ಆಲೋಚಿಸಿ, ಆ ಕ್ಷಣದಲ್ಲಿ ತನ್ನ ಪ್ರಾಣಗಳನ್ನೇ ತೆಗೆದುಕೊಳ್ಳುವುದಕ್ಕುದ್ಯುಕ್ತನಾದನು. ವ॥ ಆ ಪ್ರಕಾರವಾಗಿ ಉದ್ಯುಕ್ತನಾಗಿ ಪರಮೇಶ್ವರ ಪಾದ

ಕಂ॥ ಕಡುಗಲಿ ಚಂಡಿಕೆಯುಂ ತ
ನ್ನೆಡಗೈಯಿಂದಡಸಿ ಪಿಡಿದು ಸಾರ್ಚಿ ಕೊರಲ್ಗಾ
ಕಡುಗಮನೆ ಘರಿಘರಿಲನೆಡೆ
ಯುಡುಗದೆ ಕೊಚಿದರರೆ ಮಡಗಿದಂ ನಿಜಶಿರಮಂ ೨೯

ಪತಿಯಾಣತಿಯಂ ಮಿಾಱದೆ
ಪತಿಯಣುಗನನೆಯ್ದೆ ಮಡಿಪಲಾಱದೆ ಮಡಿದಂ
ಪತಿವೋಹಿ ಸಚಿವಸಂಕುಳ
ಪತಿ ಪರಿಕಿಪೊಡೀತನೊರೆಗೆ ಬರ್ಪವರೊಳರೇ ೩೦

ವ॥ ಎಂದಱಿದಖಿಳಪುರಜನಂ ಕೀರ್ತಿಸುತ್ತುಮಿರ್ಪಿನಮಿತ್ತಲ್ ರಾಜಶೇಖರರಾಜಂ ರಾಜಶೇಖರಪೂಜಾಗೃಹಮನೋಜೆಯಿಂ ಪೊಕ್ಕು ಮಿಕ್ಕು ನಿರ್ಮಳೀಕೃತ ಕರಚರಣನುಮುಸಮ ಭಸಿತ ತ್ರಿಪುಂಡ್ರ ಲಸಿತ ಲಲಾಟತಟನುಮಭಿನವರುದ್ರಾಕ್ಷಮಾಲಾಕಲಿತಕಂಧರನುಮಾಗಿ

ಮ॥ ವರಪಂಚಾಮೃತ ಪಂಚಗವ್ಯ ಮೃಗಭೂಕಾಶ್ಮೀರಸಮ್ಮಿಶ್ರಭಾ
ಸುರವಾರಿಸ್ನಪನಂಗಳಂ ರಚಿಸಿ ಬಿಲ್ವೇಂದೀವರಾಬ್ಜಾದಿಯಂ
ಧರಿಸುತ್ತರ್ಪಿಸಿ ಧೂಪದೀಪವಿಳಸನ್ನೈವೇದ್ಯ ತಾಂಬೂಲಮಂ
ನರನಾಥಾಗ್ರಣಿ ಪೂಜೆಗೈದನೊಲವಿಂ ಶ್ರೀಶೈಲಜಾಕಾಂತನಂ ೩೧

ದ್ವಯವನ್ನು ಹೃದಯದಲ್ಲಿ ಸಂಬಂಧಗೊಳಿಸಿ ನಮಸ್ಕಾರ ಮಾಡಿದವನಾಗಿ ೨೯. ಆ ಪತಿವೋಹಿಯು ಎಡಗೈಯಿಂದ ತನ್ನ ಶಿಖೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಅಬ್ಬಾ ! ಕಂಠಕ್ಕೆ ಖಡ್ಗವನ್ನು ಸಂಬಂಧಿಸಿ ಘರಿಘರಿಲ್ ಎನ್ನುವಂತೆ ಸಾವಕಾಶಮಾಡದೆ ತನ್ನ ಶಿರಸ್ಸನ್ನು ಕತ್ತರಿಸಿ ತೆಗೆದಿಟ್ಟನು. ೩೦. ಮಂತ್ರಿಶ್ರೇಷ್ಠನಾದ ಆ ಪತಿವೋಹಿಯು ರಾಜಾಜ್ಞೆಯನ್ನು ಮಿಾರದೆಯೂ, ರಾಜಪುತ್ರನನ್ನು ಸಂಹರಿಸುವುದಕ್ಕಾಗದೆಯೂ ತನ್ನ ಪ್ರಾಣಗಳನ್ನೇ ಕಳೆದುಕೊಂಡನು. ವಿಚಾರಿಸಿನೋಡಿದರೆ, ಇಂಥ ಮಂತ್ರಿಯ ಉಪಮಾನಕ್ಕೆ ಬರತಕ್ಕವರು ಇನ್ನೊಬ್ಬರಾದರೂ ಉಂಟೆ ? ವ॥ ಇಂತೆಂದು ಸಮಸ್ತ ಪಟ್ಟಣದ ಜನರು ಕೊಂಡಾಡುತ್ತಿರುವಷ್ಟರಲ್ಲಿ ಇತ್ತಕಡೆ ರಾಜಶೇಖರಮಹಾರಾಜನು ಚಂದ್ರಧರನಾದ ಪರಮೇಶ್ವರನ ಪೂಜಾಗೃಹವನ್ನೂ ಹಸ್ತಪಾದಗಳನ್ನೂ ತೊಳೆದು ಕೊಂಡವನಾಗಿ ಪ್ರೀತಿಯಿಂದ ಪ್ರವೇಶಮಾಡಿ, ಹಣೆಯಲ್ಲಿ ಅನುಪಮವಾದ ಭಸ್ಮವನ್ನು ಧರಿಸಿಕೊಂಡು, ನೂತನವಾದ ರುದ್ರಾಕ್ಷಮಾಲೆಗಳನ್ನು ಕಂಠದಲ್ಲಿ ಧರಿಸಿಕೊಂಡವನಾಗಿ ೩೧. ಪಂಚಾಮೃತಗಳಿಂದಲೂ, ಪಂಚಗವ್ಯಗಳಿಂದಲೂ, ಕಸ್ತೂರಿ, ಕುಂಕುಮಕೇಸರಿ ಇವುಗಳಿಂದ ಕೂಡಿದ ಜಲದಿಂದಲೂ, ಶ್ರೀಶೈಲಜಾಕಾಂತನಿಗೆ ಅಭಿಷೇಕವನ್ನು ಮಾಡಿ, ಬಿಲ್ವ, ನೀಲೋತ್ಪಲ ಮತ್ತು ಕಮಲ ಮೊದಲಾದ ಪುಷ್ಪ ಪತ್ರೆಗಳನ್ನು ಧರಿಸಿ, ಧೂಪ ದೀಪ ನೈವೇದ್ಯ ತಾಂಬೂಲಾದಿಗಳನ್ನು ಸಮರ್ಪಿಸಿ ಪ್ರೀತಿಯಿಂದ ಪೂಜೆ ಮಾಡಿದನು.

ವ॥ ಅಂತು ನಿರತಿಶಯಭಕ್ತಿಯಿಂದರ್ಚಿಸಿ ಕಣ್ದೆವಿ ನೋಡಿ ಬಗೆಗೊಂಡು ಭಾವಿಸಿ

ಮಂದಾಕ್ರಾಂತ॥ ಕಾಮಾರಾತೇ ತ್ರಿಭುವನಪತೇ ಶರ್ವಭಕ್ತಾನುಕಂಪಿನ್
ಸೋಮಾರ್ಧಾಂಕ ತ್ರಿಪುರಹರ ಕಾಲಾಂತಕ ತ್ರ್ಯಕ್ಷಶೂಲಿನ್
ವ್ಯೋಮಾತೀತ ಪ್ರಣವಗಫಣಾಭೃದ್ಧರ ಸ್ವರ್ಗ ಮೋಕ್ಷ
ಸ್ವಾಮಿನ್ ದೇವಪ್ರಮಥ ಪರಿಷನ್ನಾಥ ತುಭ್ಯಂ ನಮೋಸ್ತು ೩೨

ವ॥ ಎಂದಮಂದಾನಂದದಿಂದಿಂದುಧರನಂ ನುತಿಸುತ್ತೆಱಗಿ ತತ್ಪ್ರಸಾದಂಬಡೆದನಂತರ ಮಖಿಳಮಾಹೇಶ್ವರರಂ ಬರಿಸಿ

ಚಂ॥ ಘನತರಭಕ್ತಿ ಕೈಮಿಗೆ ಪದಾಬ್ಜಮನರ್ಚಿಸಿ ಪೂರ್ಣರಾಗದಿಂ
ಧನಕನಕಾಂಬರಪ್ರಸರ ಸನ್ಮಣಿಭೂಷಣವೃಂದಮಂ ಮಹಾ
ವಿನಿಯದಿನಿತ್ತು ಕೈಮುಗಿದು ಕಿಂಕರಭಾವಮನಾಳ್ದು ಪೇಳ್ದು ಮು
ನ್ನಿನ ನಿಜವೃತ್ತಮಂ ಪಡೆದವಂದಿರ ಸತ್ಕೃಪೆಯಂ ಕುಮಾರಕಂ ೩೩

ಕಂ॥ ತೊಡವೆಳಗು ಪೊಳೆಯೆ ವದನಮು
ದುಡುಪತಿಯಂ ಪಳಿಯೆ ನೇತ್ರರುಚಿ ಚಂದ್ರಿಕೆಯಂ
ಜಡಿಯೆ ನಡೆತಂದನೊಲವಿಂ
ಮೃಡನಂ ಜಾನಿಸುತೆ ಜನನಿಯರೆಮನೆಗಾಗಳ್ ೩೪

ವ॥ ಈ ಪ್ರಕಾರವಾಗಿ ಅತ್ಯಧಿಕವಾದ ಭಕ್ತಿಯಿಂದ ಪೂಜಿಸಿ, ಕಣ್ತುಂಬಿ ನೋಡಿ, ಭಾವತುಂಬಿ ಧ್ಯಾನಿಸಿ ೩೨. "ಮನ್ಮಥವೈರಿಯೇ, ಮೂರು ಲೋಕಗಳಿಗೆ ಕರ್ತೃವಾಗಿರುವವನೇ, ಭಕ್ತಜನರಲ್ಲಿ ದಯೆಯುಳ್ಳವನೇ, ಚಂದ್ರಧರನೇ, ತ್ರಿಪುರಗಳನ್ನು ನಾಶಮಾಡಿದವನೇ, ಯಮಸಂಹಾರಕನೇ, ತ್ರಿನೇತ್ರನೇ, ತ್ರಿಶೂಲಧಾರಿಯೇ, ಆಕಾಶಕ್ಕೆ ಅತೀತನಾದವನೇ, ಓಂಕಾರವಾಚ್ಯನೇ, ಆದಿಶೇಷಧಾರಿಯೇ, ಸ್ವರ್ಗಮೋಕ್ಷಗಳಿಗೆ ಸ್ವಾಮಿಯಾದವನೇ, ಪ್ರಮಥಾದಿನಾಥನೇ, ದೇವನೇ ನಿನಗೆ ನಮಸ್ಕಾರಗಳು."
ವ॥ ಹೀಗೆಂದು ಅತ್ಯಧಿಕವಾದ ಆನಂದದಿಂದ ಚಂದ್ರಶೇಖರನನ್ನು ಸ್ತೋತ್ರಮಾಡಿ ನಮಸ್ಕರಿಸಿ, ಆತನ ಪ್ರಸಾದವನ್ನು ಪಡೆದನಂತರ ಅನೇಕ ಜನ ಮಹೇಶ್ವರರುಗಳನ್ನು ಬರಮಾಡಿಕೊಂಡನು. ೩೩. ಅತ್ಯಧಿಕವಾದ ಭಕ್ತಿಯನ್ನು ಹೊಂದಿ, ಆ ಮಹೇಶ್ವರರುಗಳ ಪಾದಕಮಲಗಳನ್ನು ಪೂಜೆಮಾಡಿ, ಧನಕನಕ ವಸ್ತ್ರ ರತ್ನಾಭರಣಾದಿಗಳನ್ನು ಅವರಿಗೆ ಕೊಟ್ಟು ನಮಸ್ಕಾರಮಾಡಿ, ಕೈಂಕರ್ಯದಿಂದ ಹಿಂದೆ ನಡೆದ ತನ್ನ ವೃತ್ತಾಂತವನ್ನು ಹೇಳಿ, ಬಂದಂಥ ಸಮಸ್ತ ಮಾಹೇಶ್ವರರುಗಳ ಕೃಪೆಯನ್ನು ಆ ರಾಜಶೇಖರನು ಪಡೆದನು. ೩೪. ಆಭರಣಗಳ ಕಾಂತಿಯು ಹೊಳೆಯುತ್ತಿರಲು, ಮುಖವು ಚಂದ್ರನನ್ನು ತಿರಸ್ಕರಿಸುತ್ತಿರಲು, ನೇತ್ರಪ್ರಕಾಶವು ಬೆಳದಿಂಗಳನ್ನು ಕೀಳ್ಮಾಡುತ್ತಿರಲು, ಹೃದಯದಲ್ಲಿ ಪರಮೇಶ್ವರನನ್ನು ಧ್ಯಾನಿಸುತ್ತ ಜನನಿಯಾದ ಅಮೃತಮತಿಮಹಾದೇವಿಯ

ವ॥ ಅಂತು ಬಂದು ಮಣಿಪೀಠಮನಳಂಕರಿಸಿ ವಿನಿಯೋಗದ ಮಡದಿಯರ ನಡುವೆ ಕುಳ್ಳಿರ್ದಮೃತಮತಿದೇವಿಯರಡಿದಾವರೆಗೆಱಗಲೊಡನೆ

ಮ॥ ಕಡಗಂ ಗಲ್ಕೆನೆ ತೋಳ್ಗಳಿಂ ನೆಗಪಿದಳ್ತಳ್ಕೈಸಿದಳ್ತನ್ನ ಕ
ಣ್ಗಡೆಯಿಂ ತುಳ್ಕೆ ಮುದಶ್ರು ನೋಡಿ ನಲಿದಳ್ಮುಂಡಾಡಿದಳ್ಮುದ್ದಿಸು
ತ್ತೊಡನರ್ಧಾಸನದಲ್ಲಿ ಕುಳ್ಳಿರಿಸಿದಳ್ಕೂರ್ತಪ್ಪಿದಳ್ಮತ್ತೆ ಮೆ
ಲ್ನುಡಿಗೊಟ್ಟಳ್ಮುದವಾಂತಳಾ ಜನನಿ ಪುತ್ರಸ್ನೇಹಮೆಂತಪ್ಪುದೋ ೩೫

ವ॥ ಅನಂತರಂ

ಕಂ॥ ಮಗನೆ ಪೊಸತೊಂದು ಕಜ್ಜಂ
ನೆಗಳ್ದಿದೆ ನಗೆಮೊಗದೊಳಱಿಪದೇನೆಂಬುದನೆಂ
ದೊಗುಮಿಗೆಯಿಂ ಮುದ್ದಿಸಿ ಮಿಗೆ
ಮೃಗಶಾಬೇಕ್ಷಣೆ ಕುಮಾರನಂ ಬೆಸಗೊಂಡಳ್ ೩೬

ಚಂ॥ ಜನನಿ ತುರಂಗಮೇಱಿ ಬಲಗೂಡಿ ಬರುತ್ತಿರೆ ಮೆಟ್ಟಿತೋರ್ವ ಭ
ಕ್ತನ ಶಿಶುವಂ ಕೊರಲ್ಪಱಿಯೆ ಮಂತ್ರಿಕುಮಾರಕನಶ್ವಮಾತನ
ಲ್ಲೆನೆ ನಿನಗಾದ ತಪ್ಪೆನಗೆನುತ್ತುಸುರ್ದಂ ಮೊದಲಂತದಕ್ಕೆ ಮ
ಜ್ಜನಕನರೇಂದ್ರನೆನ್ನ ಶಿರಮಂ ಪಳಿಗಿತ್ತಪನೆಂದು ನಿಶ್ಚಯಂ ೩೭

ಅರಮನೆಗೆ ಪ್ರೀತಿಯಿಂದ ಬಂದನು. ವ|| ಹಾಗೆ ಬಂದು ಅಲ್ಲಿ ರತ್ನಖಚಿತ ಪೀಠದಲ್ಲಿ ಸೇವಕಿಯರಾದ ಸ್ತ್ರೀಯರುಗಳ ಮಧ್ಯದಲ್ಲಿ ಕುಳಿತಿದ್ದ ತಾಯಿಯಾದ ಅಮೃತಮತಿ ದೇವಿಯ ಪಾದಕಮಲಗಳಿಗೆ ನಮಸ್ಕರಿಸಿದ ಕೂಡಲೆ ೩೫. ಜನನಿಯಾದ ಅಮೃತಮತಿ ದೇವಿಯು ಗಲ್ಕೆನ್ನುವ ಕೈಕಡಗಗಳ ಧ್ವನಿಯಿಂದ ಕೂಡಿದ ತೋಳುಗಳಿಂದ ಬಾಚಿ ತಬ್ಬಿಕೊಂಡು, ತನ್ನ ಕಡೆಗಣ್ಣುಗಳಿಂದ ಆನಂದಬಾಷ್ಪಗಳು ಉದುರುತ್ತಿರುವ ಹಾಗೆ ನೋಡಿ, ಸಂತೋಷಗೊಂಡು, ಮುದ್ದಾಡಿ ಮುತ್ತಿಟ್ಟು, ತಾನು ಕುಳಿತುಕೊಂಡ ಆಸನ ದಲ್ಲಿಯೇ ಕುಳ್ಳಿರಿಸಿಕೊಂಡು, ಪ್ರೀತಿಯಿಂದ ಅಪ್ಪಿಕೊಂಡು, ಇಂಪಾದ ಮಾತುಗಳನ್ನಾಡಿ ಸಂತೋಷಗೊಂಡಳು. ಲೋಕದಲ್ಲಿ ಪುತ್ರವಾತ್ಸಲ್ಯವೆಂಬುದನ್ನು ಇಷ್ಟೇ ಎಂದು ಹೇಳುವುದಕ್ಕಾಗುವುದಿಲ್ಲ. ವ|| ಆಮೇಲೆ ೩೬. "ಮಗನೆ, ನಿನ್ನ ನಗೆಮೊಗವನ್ನು ನೋಡಿದರೆ ಯಾವುದೋ ಒಂದು ಹೊಸಕಾರ್ಯವು ಸಂಭವಿಸಿದಂತೆ ತೋರುತ್ತದೆ. ಅದೇನು ಹೇಳು ?" ಎಂದು ಆ ಮೃಗಶಾಬೇಕ್ಷಣೆಯಾದ ಅಮೃತಮತಿದೇವಿಯು ಮಗ ನನ್ನು ಕೇಳಿದಳು. ೩೭. "ಅಮ್ಮಾ, ನಾನು ಚತುರಂಗಬಲ ಸಮೇತನಾಗಿ ಕುದುರೆ ಗಳನ್ನೇರಿಕೊಂಡು ಬರುವ ಕಾಲದಲ್ಲಿ, ಮಂತ್ರಿಕುಮಾರಕನಾದ ಮಿತವಚನನ ಕುದುರೆಯು ಒಬ್ಬ ಶಿವಭಕ್ತನ ಮಗನ ಕುತ್ತಿಗೆಯು ಕತ್ತರಿಸುವ ಹಾಗೆ ತುಳಿಯಿತು. ನಾನು ನಿನಗಾದ ತಪ್ಪು ನನ್ನದೆಂದು ಹೇಳಿ ಅವನನ್ನೊಪ್ಪಿಸಿದ್ದೆನು. ಅದಕ್ಕೆ ನನ್ನ ಜನಕ ನಾದ ರಾಜನು ನನ್ನ ಶಿರಸ್ಸನ್ನೇ ಆ ಮಗುವಿನ ಶಿರಸ್ಸಿಗೆ ಪ್ರತಿಯಾಗಿ ಕೊಡಬೇಕೆಂದು

ಕಂ॥ ಅಂಬಿಕೆ ನಿಮ್ಮಡಿಗೆಱಗುತೊ
ಡಂಬಡೆ ಬೀಳ್ಕೊಂಡು ಪೋಗಲೈದಿದೆನೆನ್ನಂ
ಪಂಬಲಿಸದೆ ಮಿತವಚನನ
ನಿಂಬಱಿದೆನ್ನಂತೆ ಕಾಣ್ಬುದಿಂತಿದೆ ಕಜ್ಜಂ ೩೮

ವ॥ ಎಂದು ಮಗುಳ್ದಿಂತೆಂದಂ

ಚಂ॥ ಮೊದಲೆಳೆಯರ್ಕಳಿಲ್ಲದುಱಿದೂಱಿಸಿ ಮದ್ಗುರುವಿತ್ತ ಮಂತ್ರದಿಂ
ಪದಪಿನೊಳೀತನಂ ಪಡೆದು ಬಾಲ್ಯದ ಲೀಲೆಯನೊಲ್ದು ನೋಡಿ ಪೆಂ
ಪೊದವಿದ ಯೌವನೋದಯ ವಿಳಾಸಮನೀಕ್ಷಿಪ ಕಾಲಕಿಂತು ಬಂ
ದುದೆ ಮೃತಿಯೆಂದು ಚಿಂತಿಸದಿರಿಂತಿದನಾಂ ಸೆಱಗೊಡ್ಡಿ ಬೇಡಿದೆಂ ೩೯

ವ॥ ಎಂದಾ ಯುವರಾಜಶೇಖರಂ ಬಿನ್ನವಿಸೆ ತಾನತ್ಯಂತ ಶಿವನಿಷ್ಠೆಯಪ್ಪುದಱಿಂ ತಲೆದೋರ್ಪ ಮನಃಕ್ಷತಾಂಕುರಮಂ ಧೃತಿನಖಾಗ್ರದಿಂ ಚಿವುಂಟಿ ಮಗುಳ್ದು ಬರಸೆಳೆದು ಮೊಲೆ ತೊರೆಯೆ ಬಿಗಿದಪ್ಪಿ ಮೊಗಮಂ ನೋಡಿ ಮುದ್ದುಗೆಯ್ದು

ಕಂ॥ ಎನ್ನಾಳ್ದನ ಸತ್ಯಂ ಗೆಲೆ
ನಿನ್ನಸುವಂ ಭಕ್ತಶಿಶುಗೆ ಕುಡು ಚಿಂತೆಯುದೇ
ಕೆನ್ನಸುವೆ ಪಾರ್ವತೀಪತಿ
ಪನ್ನಗಿನಭ್ರಮರಲೀಲಿದಳೆ ತಳರೆಂದಳ್ ೪೦

ಆಜ್ಞಾಪಿಸಿದ್ದಾನೆ ; ಇದು ಸತ್ಯ ಸಂಗತಿ. ೩೮. ಜನನಿಯೇ, ನಿಮ್ಮ ಪಾದಕ್ಕೆರಗಿ ಅಪ್ಪಣೆಯನ್ನು ಪಡೆದು ಹೋಗುವುದಕ್ಕೆ ಬಂದೆನು. ಇನ್ನು ನನ್ನನ್ನು ಕುರಿತು ಹಂಬಲಿಸ ಬೇಡಿರಿ. ನನ್ನ ಹಾಗೆಯೇ ಮಿತವಚನನೆಂದು ಅವನನ್ನು ಕಾಣಬೇಕು. ಇದೇ (ಈಗ ನಾನು ಬಂದ) ಕಾರ್ಯ ಗೌರವ.” ವ|| ಹೀಗೆ ಹೇಳಿ ಪುನಃ ನುಡಿದನು : ೩೯. “ಮೊದಲು ಮಕ್ಕಳಿಲ್ಲದೆ ವ್ಯಸನಪಡುತ್ತ, ನನ್ನ ಗುರುವಾದ ಚಿದ್ಘನಶಿವಾಚಾರ್ಯರು ಉಪದೇಶಿಸಿದ ಮಂತ್ರದ ಪ್ರಭಾವ ಫಲವಾಗಿ ಪ್ರೀತಿಯಿಂದ ನನ್ನನ್ನು ಪಡೆದು, ನನ್ನ ಬಾಲಲೀಲೆಗಳನ್ನು ಸಂತೋಷದಿಂದ ನೋಡಿ, ಈಗ ಪ್ರಾಯದ ವಿಲಾಸವನ್ನು ನೋಡುವ ಕಾಲಕ್ಕೆ ಈ ಪ್ರಕಾರವಾದ ಮರಣವು ಪ್ರಾಪ್ತವಾಯಿತೇ ? ಎಂದು ಚಿಂತೆಮಾಡಬೇಡ. ಈ ವಿಷಯ ವನ್ನು ತಮ್ಮಲ್ಲಿ ಸೆರಗೊಡ್ಡಿ ಬೇಡುತ್ತೇನೆ.” ವ|| ಈ ಪ್ರಕಾರವಾಗಿ ಯುವರಾಜನಾದ ರಾಜಶೇಖರನು ಬಿನ್ನವಿಸಿಕೊಳ್ಳಲು, ಆ ಅಮೃತಮತಿಯು ತಾನು ಅತ್ಯಂತ ಶಿವನಿಷ್ಠೆ ಯುಳ್ಳವಳಾದ್ದರಿಂದ ಅಂಕುರಿಸುತ್ತಿರುವ ದುಃಖದ ಮೊಳಕೆಯನ್ನು ಧೈರ್ಯವೆಂಬ ಉಗುರಿ ನಿಂದ ಚಿವುಟಿಹಾಕಿ, ವಾತ್ಸಲ್ಯದಿಂದ ಮೊಲೆಗಳಲ್ಲಿ ಹಾಲು ತೊರೆದುಕೊಳ್ಳಲು, ಆಲಿಂಗಿಸಿ ಮುಖವನ್ನು ನೋಡಿ ಮುದ್ದಿಸಿದಳು. ೪೦. “ನನ್ನ ಪತಿಯ ಸತ್ಯವು ಲೋಕದಲ್ಲಿ ಜಯವನ್ನು ಹೊಂದಲಿ. ನಿನ್ನ ಪ್ರಾಣವನ್ನು ಶಂಕರನೆಂಬ ಹುಡುಗನಿಗೆ ಪ್ರತಿಯಾಗಿ ಕೊಡು. ಚಿಂತೆ ಮಾಡಬೇಡ. ನನ್ನ ಪ್ರಾಣರೂಪನಾದ ಪುತ್ರನೇ ಸಾಂಬನ

ಈ ಸತ್ಯವಚನಮಿಾ ನಯು
ಮಿಾ ಸದ್ಗುಣಮಿಾ ವಿವೇಕಮಿಾ ಸಕಳಕಳೋ
ದ್ಭಾಸತೆಯಿಾ ಘನಧೃತಿವಿ
ನ್ಯಾಸಂ ಮತ್ಸೂನುಗಲ್ಲದನ್ಯರೊಳೊಳವೇ ೪೧

ವ॥ ಎಂದು ಕೆಲದೊಳಿರ್ದ ಕೆಳದಿಯರೊಳ್ನೊಗಳುತ್ತಮಿರ್ಪನಮಲ್ಲಿಂ ಬೀಳ್ಕೊಂಡು ಧೃತಿಧರಾಧರಂ ರಾಜವೀಥಿಗೇಳ್ತಂದು ಸಚಿವವೃತ್ತಮಂ ದೂತವಚನದಿನಱಿದು ಜನಕನಿರ್ಪೆಡೆಗೇಳ್ತಂದೀ ವೃತ್ತಾಂತಮೆಲ್ಲಮಂ ಪೇಳಲೊಡನೆ ಕೇಳ್ದು ಸಕೌತುಕಾಂತರಂಗಂ ಸಂದಾಯಿಯೆಂಬ ಹಡಪವಳನಾನನಮಂ ಪಿಂತಿರಿಗಿ ನಿರೀಕ್ಷಿಸಿ

ಕಂ॥ ಹರಚರಣಭಕ್ತಿರಸಭಾ
ಸುರಹೃದಯಾಂಬುರುಹನಾ ನರೇಶ್ವರನವನಂ
ಕರೆದೆಲವೊ ಪೋಗು ಕುವರನ
ಶಿರಮಂ ಮಿಗೆ ತರ್ಪುದೆಂದು ಬೆಸಸಿದನಾಗಳ್ ೪೨

ಉ॥ ಜೀಯ ಮಹಾಪ್ರಸಾದಮೆನುತಂದೊಡನೇಳ್ತರೆ ಖಡ್ಗಮಾಂತು ಸಂ
ದಾಯಿಯೆನಿಪ್ಪ ಭೃತ್ಯನವನೀಶಸಭಾಂತರದತ್ತಣಿಂ ಸರೋ
ಜಾಯತನೇತ್ರನೊಲ್ದು ಪೊಱಮಟ್ಟಧಟಂ ನಡೆಗೊಂಡನಲ್ಲಿ ಪು
ಷ್ಪಾಯುಧವೈರಿಯಂಘ್ರಿಗಳನಾಂತೆರ್ದೆಯೊಳ್ಮಿಗೆ ರಾಜಶೇಖರಂ ೪೩

ಪಾದಕಮಲದಲ್ಲಿ ಭ್ರಮರದ ಲೀಲೆಯನ್ನು ಧರಿಸುವವನಾಗು, ಹೊರಡು" ಎಂದು ಆಜ್ಞಾಪಿಸಿದಳು. ೪೧. "ಈ ಸತ್ಯವಚನ, ಈ ನೀತಿ, ಈ ಸದ್ಗುಣ, ಈ ವಿವೇಕ, ಈ ಸಕಲವಿದ್ಯಾಕೌಶಲ್ಯ, ಈ ಧೈರ್ಯಸ್ಥಿತಿ ನನ್ನ ಮಗನಿಗಿಲ್ಲದೆ ಅನ್ಯರಲ್ಲಿ ಇರಲು ಶಕ್ಯವೇ ?" ವ॥ ಹೀಗೆಂದು ಪಕ್ಕದಲ್ಲಿದ್ದ ಸಖಿಯರೊಡನೆ ಹೇಳುತ್ತಿರುವಷ್ಟರಲ್ಲಿ ಅಲ್ಲಿಂದ ಆ ಧೈರ್ಯಮೇರುವಾದ ರಾಜಶೇಖರನು ಬೀಳ್ಕೊಂಡು ರಾಜಬೀದಿಗೆ ಬಂದು ಪತಿ ಮೋಹಿಯು ಪ್ರಾಣತ್ಯಾಗ ಮಾಡಿದ ವೃತ್ತಾಂತವನ್ನು ದೂತನ ಮೂಲಕ ಅರಿತು, ತಂದೆಯ ಸಮೀಪಕ್ಕೆ ಬಂದು ಈ ವೃತ್ತಾಂತವೆಲ್ಲವನ್ನೂ ಹೇಳಿದ ಕೂಡಲೆ ರಾಜನು ಕೇಳಿ ಆಶ್ಚರ್ಯಚಿತ್ತನಾಗಿ, ಹಿಂಭಾಗದಲ್ಲಿದ್ದ ಸಂದಾಯಿಯೆಂಬ ಸೇವಕನ ಮುಖವನ್ನು ಹಿಂತಿರುಗಿ ನೋಡಿದನು. ೪೨. ಪರಮೇಶ್ವರನ ಪಾದಭಕ್ತಿರಸದಿಂದ ಪ್ರಕಾಶಮಾನವಾದ ಹೃದಯ ಕಮಲವುಳ್ಳಂಥ ಆ ರಾಜನು ಸಂದಾಯಿಯನ್ನು ಕರೆದು "ಎಲವೋ ಜಾಗ್ರತೆಯಾಗಿ ಹೋಗಿ ಈ ರಾಜಶೇಖರಕುಮಾರನ ಶಿರಸ್ಸನ್ನು ಛೇದಿಸಿ ತರಬೇಕು" ಎಂದು ಆಜ್ಞೆ ಮಾಡಿದನು. ೪೩. ಆ ಸಂದಾಯಿಯು "ಮಹಾಸ್ವಾಮಿಯೇ ಮಹಾಪ್ರಸಾದ" ವೆನ್ನುತ್ತ ಕೂಡಲೆ ಕತ್ತಿಯನ್ನು ಹಿಡಿದು ಬಂದು ರಾಜಸಭೆಯಿಂದ ಹೊರಟು ಬರುತ್ತಿರಲಾಗಿ, ಆ ಕಮಲಸದೃಶ ನೇತ್ರಗಳುಳ್ಳ ರಾಜಶೇಖರಮಹಾರಾಜನು ಪ್ರೀತಿಯಿಂದ ಹೃದಯಕಮಲದಲ್ಲಿ ಕಾಮವೈರಿಯಾದ ಪರಮೇಶ್ವರನ ಪಾದಗಳನ್ನು ಧ್ಯಾನ ಮಾಡು

ವ|| ಅಂತು ರಾಜವೀಥಿಯೊಳ್ಪೈತರ್ಪಿನಮಾ ಪೌರಜನಂ ನಿರೀಕ್ಷಿಸಿ

ಮ|| ಚತುರಂಭೋನಿಧಿ ಮುಟ್ಟಿದುರ್ವರೆಗಧೀಶತ್ವಂ ಗಡಾ ವಿಶ್ವವಿ
ಶ್ರುತ ಸಾಮಂತನರೇಂದ್ರಮೌಳಿಘಟಿತಾಂಘ್ರಿತ್ವಂ ಗಡಾ ಯೌವನಾ
ನ್ವಿತ ಸೌಂದರ್ಯತನುತ್ವಮುಂ ಗಡ ಬಳಿಕ್ಕಂತಂದೊಡಂ ತನ್ನ ಜೀ
ವಿತಮಾವಂ ಗಡ ನನ್ನಿಗೀ ಕುವರನಂ ಪೋಲ್ವನ್ನರಾರ್ಧಾತ್ರಿಯೊಳ್ ೪೪

ಕಂ|| ಅಕ್ಕಟ ಸತ್ಯೇಂದ್ರಂಗಿದು
ತಕ್ಕುದೆ ನುಡಿದಂಡವೊಳವೆ ಸಚಿವಸುತಾಶ್ವಂ
ಚಕ್ಕನೆ ಮಗುವಂ ಮಡಿಪಿದೊ
ಡಿಕ್ಕಿದಪಂ ಗಡ ಕುಮಾರಕುಸುಮಾಯುಧನಂ ೪೫

ವ|| ಎನುತ್ತಿರೆಯಿರೆ ಮತ್ತೆ ಕೆಲಂಬರಬಲೆಯರ್ನೆರೆದು

ಮ|| ಬಿಸುಸುಯ್ದಂಬಕದಂಬುವಂ ಮಿಡಿದು ಹಾಯೆಂದಳ್ತು ಕೈನೀಡಿ ತೆ
ಳ್ವಸಿಐಂ ಮೋಹ್ಪೊಸೆದೆಲ್ಲಿ ಬಂದುದೊ ತುರಂಗಂ ಕೇಳಿಯೇಕಾದುದೀ
ಶಿಶುವಿಂತೇಕಳಿದತ್ತೊ ದೂಱಿದಳದೇತಕ್ಕೇಕೆ ವೋವೋವೊ ಕೋ
ಪಿಸಿ ಚೋಳಾಧಿಪನೇಕೆ ಕೊಲ್ವನೊ ಧರಿತ್ರೀಮಿತ್ರನಂ ಪುತ್ರನಂ ೪೬

ವವನಾಗಿ ಧೈರ್ಯದಿಂದ ಹೊರಹೊರಟು ನಡೆದನು. ವ|| ಹೀಗೆ ರಾಜವೀಥಿಯಲ್ಲಿ ಆ ರಾಜಶೇಖರನುಹಾರಾಜನು ನಡೆದುಬರುತ್ತಿರುವಾಗ ಪಟ್ಟಣದ ಜನರು ನೀರಿಕ್ಷಿಸಿ ೪೪. "ಚತುಸ್ಸಮುದ್ರಪರ್ಯಂತವಾದ ಭೂಮಂಡಲಕ್ಕೆ ಅಧಿಪತಿಯಾದರೂ, ವಿಶ್ವ ವಿಖ್ಯಾತರಾದ ಸಾಮಂತರಾಜರುಗಳಿಂದ ನಮಸ್ಕಾರ ಮಾಡಿಸಿಕೊಳ್ಳುವವನಾಗಿದ್ದರೂ, ಯೌವನದಿಂದ ಸೌಂದರ್ಯಗೊಂಡ ದೇಹವನ್ನುಳ್ಳವನಾಗಿದ್ದರೂ ಮಿತವಚನನಿಗೆ ಕೊಟ್ಟ ಮಾತಿಗಾಗಿ ಶಿವಭಕ್ತನಾದ ಬಾಲಕನ ಪ್ರಾಣಗಳಿಗೆ ತನ್ನ ಪ್ರಾಣಗಳನ್ನು ಪ್ರತಿಯಾಗಿ ಕೊಡುತ್ತಿರುವನಲ್ಲಾ ! ಈ ಭೂಮಿಯಲ್ಲಿ ಸತ್ಯದ ವಿಷಯದಲ್ಲಿ ರಾಜಶೇಖರರಾಜ ಕುಮಾರನಿಗೆ ಸಮಾನರಾದವರು ಯಾರೂ ಇಲ್ಲ. ೪೫. ಅಯ್ಯೋ ! ಸತ್ಯೇಂದ್ರಚೋಳ ಮಹಾರಾಜನಿಗಾದರೂ ಇದು ಯೋಗ್ಯವೇ ? ಲೋಕದಲ್ಲಿ ಮಾತಾಡಿದ ಮಾತ್ರಕ್ಕೆ ಮರಣದಂಡನೆಯುಂಟೆ ? ಮಿತವಚನನ ಕುದುರೆಯು ಆ ಬಾಲಕನನ್ನು ತುಳಿದು ಪ್ರಾಣಗಳನ್ನು ತೆಗೆದರೆ ರಾಜನು ಮನ್ಮಥಸದೃಶನಾದ ಈ ರಾಜಶೇಖರನ್ನು ಸಂಹರಿಸುತ್ತಿರುವನಲ್ಲವೆ !" ವ|| ಹೀಗೆಂದು (ಆ ಪಟ್ಟಣದ ಜನಗಳು) ಅನ್ನುತ್ತಿರಲು, ಮತ್ತೆ ಕೆಲವರು ಸ್ತ್ರೀಯರು ಗುಂಪುಗೂಡಿ ೪೬. ನಿಟ್ಟುಸಿರನ್ನು ಬಿಟ್ಟು ಕಣ್ಣೀರನ್ನು ಉದುರಿಸುತ್ತ, ಹೊಟ್ಟೆಯನ್ನು ಹೊಸೆಹೊಸೆದುಕೊಂಡು ಹಾ ! ಎಂದು ದುಃಖಪಡುತ್ತ, "ಆ ಕುದುರೆಗಳಾದರೂ ಏಕೆ ಬಂದುವೋ, ಏಕಾದರೂ ವೈಹಾಳಿಯನ್ನು ಮಾಡಿದರೋ, ಆ ಮಗುವಾದರೂ (ಕುದುರೆಯ ಕಾಲಿಗೆ ಸಿಕ್ಕು) ಏಕೆ ಸತ್ತಿತೋ, ಈ ತಿರುಕ್ಕೊಳವಿನಾಚಿಯಾದರೂ (ಈ ವಿಷಯವನ್ನು ಪ್ರಭುವಿನ ಬಳಿಗೆ ಬಂದು) ಏಕೆ ದೂರಿಕೊಂಡಳೊ,

ವ॥ ಎಂದೆಂದಳಲ್ದು ಬಳಲ್ದು ಮಱುಗುತ್ತಿರ್ಪನ್ನೆಗಂ

ಮ॥ ನಡೆತಂದಂ ಧೃತಿಮೇರುಸತ್ಯನಿಧಿ ಸಾಹಿತ್ಯಾಬ್ಜಸೂರ್ಯಂ ಮಹಾ
ಮೃಡಭಕ್ತಿಪ್ರಮದಾ ಮನೋರಮಣನಾ ಶ್ರೀಮಂತ್ರಲಕ್ಷಾಂಕನೊ
ಳ್ಪಡರ್ದು ಧ್ಯಾನಧರಿತ್ರಿಯಲ್ಲಿಗದಟಿಂ ಪದ್ಮಾಸನಂಗೊಂಡು ನೇ
ರ್ಪಡೆ ಕುಳ್ಳಿರ್ದಗಜೇಶನಂ ನಿಜಮನಃಪಂಕೇಜದೊಳ್ಭಾಳ್ದಿದಂ ೪೭

ವ॥ ಅಂತು ತಾಳ್ದ ಖರ್ವಭಕ್ತಿಯಿಂದೆಱಗಿ

ಚಂ॥ ಪ್ರಮಥಗಣಾನ್ವಿತಂ ವಿಧಿವಿಧುಪ್ರಮುಖಾಮರಸಂಕುಳಾವೃತಂ
ಹಿಮಗಿರಿಕನ್ಯಕಾಸಹಿತನಂಗಜಮರ್ದನನಂಬರಪ್ರದೇ
ಶಮನಡರ್ದಲ್ಲಿ ನೋಡುತಿರೆ ರಾಜಕುಮಾರಕನೋಜೆಯಿಂದೆ ಖ
ಡ್ಗಮನಿರದೆತ್ತಿ ಪೇಣ್ಪಿಡಿದು ಕಂಠಕಮರ್ಚಲೊಡರ್ಚುತಿರ್ಪಿನಂ ೪೮

ಕಂ॥ ಕರ ಪೊಸತು ಜೀಯ ಪಂಚಾ
ಕ್ಷರಮಂ ನೀಂ ಮಱೆದು ಮಡಿಯಲುಜ್ಜುಗಿಪ್ಪದಿದೆಂ
ದಿರದನುಚರನೆನೆ ಮೊಗದೊ
ಳ್ದರಹಸನಂ ತೋಱೆಯೆ ಮಂತ್ರಲಕ್ಷಂ ನುಡಿದಂ ೪೯

ಅಯ್ಯೋ ಅಯ್ಯೋ !! ರಾಜನಾದರೂ ಏಕೆ ಕೋಪಿಸಿಕೊಂಡು ಸಮಸ್ತರಿಗೂ ಪ್ರಿಯ ನಾದ ರಾಜಶೇಖರನನ್ನೇತಕ್ಕೆ ಕೊಲ್ಲಿಸುವನೋ" (ಎಂದು ಅಳುತ್ತಿದ್ದರು). ವ॥ ಹೀಗೆ ಹೇಳಿ ಹೇಳಿ ಅಳುತ್ತ, ಶಕ್ತಿಗುಂದಿ ಸಂತಾಪಪಡುತ್ತಿರುವಷ್ಟರಲ್ಲಿ ೪೭. ಮೇರುಸದೃಶ ಧೈರ್ಯವುಳ್ಳವನೂ, ಸತ್ಯದ ನಿಕ್ಷೇಪನೂ, ಸಾಹಿತ್ಯವೆಂಬ ಕಮಲಗಳಿಗೆ ಸೂರ್ಯಪ್ರಾಯನೂ, ಶಿವಭಕ್ತಿಯೆಂಬ ಸ್ತ್ರೀಯ ರಮಣಸ್ವರೂಪನೂ, ಶ್ರೀ ಪಂಚಾಕ್ಷರೀಮಂತ್ರವೇ ಲಕ್ಷ್ಯ ವಾಗುಳ್ಳ ನಾಮಧೇಯನೂ ಆದ ರಾಜಶೇಖರನು ಸೊಗಸಾದ ಉದ್ಯಾನವನದ ಭೂಮಿಗೆ ಧೈರ್ಯದಿಂದ ಬಂದು ಪದ್ಮಾಸನ ಹಾಕಿ ಕುಳಿತು ಪಾರ್ವತೀಪತಿಯನ್ನು ಹೃದಯಕಮಲ ದಲ್ಲಿ ಧ್ಯಾನಿಸತೊಡಗಿದನು. ವ॥ ಆ ಪ್ರಕಾರವಾಗಿ (ತನ್ನ ಹೃದಯದಲ್ಲಿ ಪರಮೇಶ್ವರ ನನ್ನು) ಧರಿಸಿ, ಉನ್ನತವಾದ ಭಕ್ತಿಯಿಂದ ನಮಸ್ಕರಿಸಿ, ೪೮. ಪ್ರಮಥಸಮೂಹ ದಿಂದಲೂ, ಬ್ರಹ್ಮ ವಿಷ್ಣು ಮೊದಲಾದ ದೇವತೆಗಳ ಸಮೂಹದಿಂದಲೂ, ಪಾರ್ವತಿ ಯಿಂದಲೂ ಕೂಡಿರುವ ಪರಮೇಶ್ವರನು ಆಕಾಶಪ್ರದೇಶದಲ್ಲಿ ನೋಡುತ್ತಿರಲು, ರಾಜ ಕುಮಾರನು ಖಡ್ಗವನ್ನು ಎತ್ತಿ ಹಿಡಿದು ಝಳಪಿಸಿ ತನ್ನ ಕಂಠವನ್ನು ಕತ್ತರಿಸುವುದರಲ್ಲು ದ್ಯುಕ್ತನಾಗುವಷ್ಟರಲ್ಲಿ, ೪೯. ಸೇವಕನಾದ ಸಂಧಾಯಿಯು "ಸ್ವಾಮಿಯೇ, ನೀನು ಪಂಚಾಕ್ಷರೀಮಂತ್ರವನ್ನುಚ್ಚರಿಸುವುದನ್ನು ಬಿಟ್ಟು, ಪ್ರಾಣತ್ಯಾಗಕ್ಕೆ ಉದ್ಯುಕ್ತನಾಗಿ ರುವ ಈ ಕಾರ್ಯವು ಅತಿ ನವೀನವಾಗಿದೆ." ಎಂದು ಹೇಳಲಾಗಿ ರಾಜಶೇಖರನು ಮುಂದ

ಎನಗಾಪ್ತನಲ್ತೆ ಮಱೆದಿರೆ
ನೆನೆಯಿಸಿದೈ ಭಾಪು ನಿನಗದಾರ್ಸರಿ ಪೇಳೆಂ
ದೆನೆ ಕೌತುಕವೊಗೆತರೆ ನೃಪ
ತನಯನನಾ ಕಿಂಕರಂ ಕರಂ ಬೆಸಗೊಂಡಂ ೫೦

ಚಂ|| ಸರಸಮೆ ದೇವ ಕಿಂಕರನೊಳಿಂತಿದಱೊಂದಿರವಿಂತುಟೆಂದು ಬಿ
ತ್ತರಿಪುದು ಜೀವನಿಷ್ಕ್ರಮಣದೊಳ್ ಶಿವಮಂತ್ರಜಪಂ ಪ್ರಶಸ್ತಮೆಂ
ದೊರೆವ ಹಿತೋಕ್ತಿಯೇಂ ಪುಸಿಯೊ ಪೇಳೆನೆ ನಿನ್ನಯ ಭೃತ್ಯವೃತ್ತಿ ಭೂ
ವರನ ನಿಜಾಜ್ಞೆ ಕಿಟ್ಟಪುದೆನುತ್ತುಳಿದೆಂ ಗಡ ದಿವ್ಯಮಂತ್ರಮಂ ೫೧

ವ|| ಎಂದಾ ರಾಜಕುಮಾರನ ಗಂಭೀರೋಕ್ತಿಯನಾ ಕಿಂಕರನಾಕರ್ಣಿಸಿ

ಕಂ|| ಇದು ಚಿತ್ರಂ ನೀಂ ಜಪಿಸಿದೊ
ಡಿದಱಿಂದೆನ್ನಾಳ್ತನಂ ಜನಾಧಿಪನಾಜ್ಞಾ
ಪದಮಳಿಗುಮೆಂಬ ಬಗೆ ಬಗೆ
ಗೊದವಿದ ಸಂದೆಗಮನಿಳಿಪಿಳಾಧಿಪತಿಳಕಾ ೫೨

ಹಾಸದಿಂದ ಕೂಡಿದವನಾಗಿ, ಹೀಗೆ ಹೇಳಿದನು. ೫೦. "ನನಗೆ ನೀನು ಆಪ್ತನಾದೆ ಯಲ್ಲವೆ ! ಪ್ರಾಣೋತ್ಕ್ರಮಣಕಾಲದಲ್ಲಿ ಶಿವಮಂತ್ರೋಚ್ಚಾರವನ್ನು ಮರೆತಿರಲು ನೆನಪು ಮಾಡಿದೆ. ಭಾಪುರೇ ! ನಿನಗೆ ಸಮಾನರಾರು ?" ಕುತೂಹಲದಿಂದ ಕೂಡಿದ ಆ ರಾಜ ಶೇಖರನನ್ನು ಕುರಿತು ಹೀಗೆಂದು ಕಿಂಕರನು ಕೇಳಿದನು. ೫೧. "ಸ್ವಾಮಿಯೇ, ಕಿಂಕರ ನಲ್ಲಿ ಅಪಹಾಸ್ಯಮಾಡುವುದುಂಟೆ ! ಈ ಪಂಚಾಕ್ಷರೀಮಂತ್ರದ ಮಹಿಮೆಯು ಇಂಥ ದೆಂದು ನಿರೂಪಿಸಬೇಕು. ಪ್ರಾಣೋತ್ಕ್ರಮಣಕಾಲದಲ್ಲಿ ಶಿವಮಂತ್ರಜಪವು ಬಹಳ ಪ್ರಶಸ್ತವಾದುದೆಂದು ಹೇಳುವ ಶಿವಾಗಮಗಳ ನುಡಿಯು ಸುಳ್ಳೋ ಹೇಗೆ ?" ಎಂದು ಸೇವಕನಾದ ಆ ಸಂದಾಯಿಯು ಕೇಳಿದನು. ರಾಜಶೇಖರನು "ನಿನ್ನ ಸೇವಕವೃತ್ತಿಯೂ, ರಾಜಾಜ್ಞೆಯೂ ಕೆಡುವುದೆಂದು ಯೋಚನೆ ಮಾಡಿ ಆ ದಿವ್ಯಮಂತ್ರವಾದ ಪಂಚಾಕ್ಷರೀ ಮಂತ್ರೋಚ್ಚಾರ ಮಾಡುವುದನ್ನು ಬಿಟ್ಟೆನು" ಎಂದನು. ವ|| ರಾಜಕುಮಾರನಾದ ರಾಜಶೇಖರನ ಗಂಭೀರವಾದ ಮಾತನ್ನು ಕಿಂಕರನಾದ ಸಂದಾಯಿಯು ಕೇಳಿ, ೫೨. "ಈ ಮಾತು ನನಗೆ ಆಶ್ಚರ್ಯಗೊಳಿಸುವುದು. ರಾಜಶ್ರೇಷ್ಠನಾದ ನೀನು ಶಿವ ಮಂತ್ರವನ್ನು ಉಚ್ಚಾರ ಮಾಡಿದ್ದಾದರೆ ಅದರಿಂದ ನನ್ನ ಭೃತ್ಯತ್ವವೂ ರಾಜಾಜ್ಞೆಯೂ ಕೂಡ ನಾಶವಾಗುವುದೆಂಬ ಅಭಿಪ್ರಾಯವು ಆಶ್ಚರ್ಯವನ್ನುಂಟುಮಾಡುವಂತಹುದಾಗಿದೆ. ಈ ವಿಷಯದಲ್ಲಿ ನನ್ನ ಮನಸ್ಸಿಗುಂಟಾದ ಸಂದೇಹವನ್ನು ಪರಿಹಾರಮಾಡು" ಎಂದನು.

ಸ್ರ॥ ಇಂತೆಂದೋರಂತೆ ಲೆಂಕಂ ಬೆಸಗೊಳೆ ಕಮಳಾಕಾಂತನುಂ ಬೊಮ್ಮನುಂ ತಾ
ಮೆಂತುಂ ವೇದಂಗಳುಂ ಕಾಣದ ಪರಶಿವನಂ ತೋರ್ಪ ಸಾಮರ್ಥ್ಯಮಂ ತಾ
ಳ್ದಂ ಶಿಂತೆಂಬೂಹೆಯಂ ಮೀಱಿದ ನಿರುಪಮ ಸನ್ಮಂತ್ರಮಂ ಪೇಳಲಾಂ ಖ
ಡ್ಗಂ ತಾಂ ಪೂಮಾಲೆಯಾದಪ್ಪುದು ಪಱಿಯದೆ ಪೋದಪ್ಪುದೆಂದಂ ಕುಮಾರಂ ೫೩

ವ॥ ಅದಱಿಂ ನರಸನಾಜ್ಞೆಯುಂ ನಿನ್ನ ಭೃತ್ಯತ್ವತೆಯುಮೊಡನೆ ಕಿಡುಗುಮೆನಲೊಡಂ ಕೇಳ್ದು ಕೌತುಕಂದಾಳ್ದು

ಕಂ॥ ಆದೊಡಮೆನ್ನಯ ಭೃತ್ಯತೆ
ಪೋದೊಡಮೆನ್ನರಸನಾಜ್ಞೆಯುಳಿದೊಡಮೇಂ ನೀ
ನೋದದೆ ಮಂತ್ರಮನಳಿದೊಡೆ
ಮಾದೇವನೊಳೈಕ್ಯವೃತ್ತಿಯೇಂ ಸಮನಿಕುಮೇ ೫೪

ವ॥ ಎನೆ ಮುಗುಳ್ನಗೆ ನಕ್ಕು

ಕಂ॥ ಒಂದಿನಿತುಪೊಳ್ತು ಸೈರಿಸಿ
ಸುಂದಾಯಿ ನಿರೀಕ್ಷಿಸುತ್ತುಮಿರು ತೋರ್ದಪೆನೆ
ನ್ನಂದಮನೆನುತ್ತೆ ಪೂಣ್ದು ಸು
ರ್ದಂದರಸಂ ಖಡ್ಗಮಂ ಕೊರಲ್ಗೊಂದಿಸಿದಂ ೫೫

೫೩. ಈ ಪ್ರಕಾರವಾಗಿ ಸೇವಕನು ಒಂದೇಸಮನೆ ಕೇಳುತ್ತಿರಲಾಗಿ ರಾಜಶೇಖರನು ವಿಷ್ಣುಬ್ರಹ್ಮರೂ, ವೇದಗಳೂ, ವಿಷ್ಣು ಪ್ರಯತ್ನಪಟ್ಟರೂ ಕಾಣದಿರುವ ಪರಮೇಶ್ವರ ನನ್ನು ತೋರಿಸುವ ಸಾಮರ್ಥ್ಯದಿಂದ ಕೂಡಿರುವ, ವಾಙ್ಮನಸ್ಸುಗಳಿಗೆ ಅಗೋಚರವಾಗಿ ರುವ ಮಹಾಮಂತ್ರವನ್ನು ನಾನು ಉಚ್ಚರಿಸಿದರೆ ಖಡ್ಗವು ಪುಷ್ಪಮಾಲಿಕೆಗೆ ಸಮಾನ ವಾಗಿ ಶಿರಸ್ಸನ್ನು ಹರಿಯದೆ ಹೋಗುವುದೆಂದು ರಾಜಶೇಖರನು ಹೇಳಿದನು. ವ॥ ಆದ್ದರಿಂದಲೇ ರಾಜನ ಅಪ್ಪಣೆಯೂ, ನಿನ್ನ ಭೃತ್ಯತ್ವವೂ ಜೊತೆಯಲ್ಲಿಯೇ ನಾಶ ವಾಗುವುದೆಂದು ಹೇಳಲಾಗಿ, ಸುಂದಾಯಿಯು ಕೇಳಿ ಆಶ್ಚರ್ಯಪಟ್ಟು, ೫೪. "ಆದರೆ ನನ್ನ ಭೃತ್ಯತ್ವವು ಹೋದರೂ, ರಾಜಾಜ್ಞೆಯು ನಾಶವಾದರೂ ಕೂಡ ನೀನು ಮಂತ್ರ ವನ್ನುಚ್ಚರಿಸದ ಹಾಗೆ ಮೃತಪಟ್ಟರೆ, ಶಿವನಲ್ಲಿ ನಿನಗೆ ಐಕ್ಯವು ಲಭ್ಯವಾಗುವುದೇ ?" ವ॥ ಹೀಗೆಂದು ಸುಂದಾಯಿಯು ಹೇಳಲು ರಾಜಶೇಖರನು ಮುಗುಳುನಗೆ ನಕ್ಕು ೫೫. "ಎಲೈ ಸುಂದಾಯಿಯೇ, ಸ್ವಲ್ಪಹೊತ್ತು ಸೈರಿಸಿಕೊಂಡು ಹಾಗೆ ನೋಡುವವನಾಗು. ನನ್ನ ಲೀಲೆಯನ್ನು ತೋರಿಸುತ್ತೇನೆ" ಎಂದು ಪ್ರತಿಜ್ಞೆಮಾಡಿ ಹೇಳುತ್ತ ರಾಜಶೇಖರನು

ಚಂ॥ ಎಲೆ ಎಲೆ ದೇವ ದೇವ ಕುವರಂ ಕೊರಲಂ ಕೊಱಿದಪ್ಪನಯ್ಯೋ ನಿ
ಶ್ಚಲ ಕರುಣಾಸಮುದ್ರ ಶಶಿಶೇಖರ ಶಂಕರ ಕಾವುದೀವುದು
ಜ್ವಲಸುಖಮಂ ಸಮಂತೆನೆ ಕೃಪಾಕರೆ ಶಾಂಕರಿ ಮುಂದೆ ಕಜ್ಜಮುಂ
ಟೆಲೆ ಗಿರಿಜಾತೆ ಸೈರಿಪುದಭೀಕ್ಷಿಪುದದ್ಭುತಭಕ್ತಿಯುಕ್ತರಂ ೫೬

ವ॥ ಎಂದಂಬರದೊಳ್ ತ್ರ್ಯಂಬಕನಂಬಿಕೆಯನೊಡಂಬಡಿಸುತ್ತುಮಿರೆಯಿರೆ

ಮ॥ ನಡೆನೋಡುತ್ತಿರೆ ಕಿಂಕರಂ ಮುಗಿದ ಕಯ್ಯಂ ಪೊತ್ತು ಚಿತ್ತಾಂತದೊ
ಳ್ಮೃಡನಂ ಜಾನಿಸಿ ಖಡ್ಗಮಂ ಜಡಿದು ಸಾರ್ಚುತ್ತಾತ್ಮಕಂಠಕ್ಕೆ ಕೈ
ಗುಡೆ ಸಾಸಂ ಘರಿಲೆಂಬಿನಂ ಕೊಱಿದಿಳಾಧೀಶಂ ಮಹಾಮಂತ್ರಮಂ
ಬಿಡದೋರಂತೊದಱುತ್ತುಮಿರ್ಪ ಶಿರಮಂ ತಾಳ್ದಂ ಕರಾಂಭೋಜದಿಂ ೫೭

ಕಂ॥ ಪೊಸತೊಂದು ತೇಜಮದು ರಂ
ಜಿಸೆ ಥಳಥಳಿಸುತ್ತೆ ನೋಡಲಣ್ಮದೆ ಭೃತ್ಯಂ
ಕುಸಿದೆಱಗಿ ನಿಂದು ಮಿಗೆ ಕೀ
ರ್ತಿಸುತಿರೆ ತತ್ಕರಕೆ ನೀಡಿದಂ ನಿಜಶಿರಮಂ ೫೮

ಖಡ್ಗವನ್ನು ಕುತ್ತಿಗೆಗೆ ಹೊಂದಿಸಿಕೊಂಡನು. ೫೬. "ಹೇ ದೇವ ದೇವ, ರಾಜಪುತ್ರನು ತನ್ನ ಕಂಠವನ್ನು ಕತ್ತರಿಸಿಕೊಳ್ಳುತ್ತಿರುವನು. ಅಯ್ಯೋ! ಕರುಣಾಸಮುದ್ರನೂ ಶಶಿಶೇಖರನೂ ಆದ ಶಂಕರನೇ ರಕ್ಷಿಸು! ರಕ್ಷಿಸು! ಅಧಿಕತರವಾದ ನಿತ್ಯಸುಖವನ್ನು ಕೊಡು" ಎಂಬುದಾಗಿ ಪಾರ್ವತಿಯು ಪರಮೇಶ್ವರನಿಗೆ ಹೇಳಲಾಗಿ, ಪರಮೇಶ್ವರನು "ಪಾರ್ವತಿ, ಮುಂದೆ ಜರಗತಕ್ಕ ಕಾರ್ಯವುಂಟು. ಆದುದರಿಂದ ಸ್ವಲ್ಪಹೊತ್ತು ಸೈರಿಸಿಕೊಂಡು ಆಶ್ಚರ್ಯಕರವಾದ ಭಕ್ತಿಯ ಅತಿಶಯವನ್ನು ನೋಡುವವಳಾಗು. (ಎಂದು ಹೇಳಿದನು.) ವ॥ ಹೀಗೆಂದು ಆಕಾಶದಲ್ಲಿ ತ್ರಿನೇತ್ರದಿಂದ ಪರಮೇಶ್ವರನು ಪಾರ್ವತೀದೇವಿಯನ್ನು ಒಡಂಬಡಿಸುತ್ತ ಇರುತ್ತಿರಲಾಗಿ, ೫೭. ಕೈಮುಗಿದು ಕಿಂಕರನಾದ ಸಂದಾಯಿಯು ನೋಡುತ್ತಿದ್ದಂತೆಯೇ ರಾಜಶೇಖರನು ಹೃದಯದಲ್ಲಿ ಪರಮೇಶ್ವರನನ್ನು ಧ್ಯಾನಿಸುತ್ತ ಕತ್ತಿಯನ್ನು ಝಳಪಿಸಿ, ತನ್ನ ಕಂಠಕ್ಕೆ ಸೇರಿಸುತ್ತ ಸಾಹಸದಿಂದ ಘರಿಲ್ ಎನ್ನುವ ಹಾಗೆ ಕುತ್ತಿಗೆಯನ್ನು ಕತ್ತರಿಸಿ, ಎಡಬಿಡದೆ ಮಂತ್ರವನ್ನು ಕ್ರಮವಾಗಿ ಉಚ್ಚರಿಸುತ್ತಿರುವ ತಲೆಯನ್ನು ಹಸ್ತದಿಂದ ಹಿಡಿದುಕೊಂಡನು. ೫೮. (ಹಾಗೆ ಹಿಡಿದುಕೊಂಡಾಗ) ನೂತನವಾದ ಒಂದು ತೇಜಸ್ಸು ಥಳಥಳಿಸಿ ಹೊಳೆಯುತ್ತಿರಲು ಸಂದಾಯಿಯು ಅದನ್ನು ನೋಡುವುದಕ್ಕೆ ಶಕ್ತನಾಗದೆ ನಮಸ್ಕರಿಸಿ ನಿಂತು ಅತಿಶಯವಾಗಿ ಸ್ತುತಿಸುತ್ತಿರಲು, ತನ್ನ ಶಿರಸ್ಸನ್ನು ರಾಜಶೇಖರನು ಆ ಕಿಂಕರನ ಕೈಗೆ ಕೊಟ್ಟನು.

ಚಂ॥ ಅರಮುಗನೆಂದವೊಲ್ ನೆಗಳ್ದ ಕಜ್ಜಮನೀಕ್ಷಿಸಿ ಚೋದ್ಯವಟ್ಟು ಕಿಂ
ಕರನೆಱಗುತ್ತೆ ಮತ್ತವನ ನಲ್ನುಡಿ ತಾನುಪದೇಶಮಾಗೆ ತತ್
ಸುರುಚಿರಮೂರ್ತಿ ತನ್ನ ಬಗೆಯೊಳ್ನೆಲೆಗೊಂಡಿರೆ ಕೀಟಭೃಂಗದಂ
ತಿರೆ ಶಿವಮಂತ್ರಸಿದ್ಧನೆನಿಸಿರ್ದನದೆಂತೊ ಮಹಾತ್ಮಸಂಗಮಂ ೫೯

ಮ॥ಸ್ರ॥ ವಿಲಸತ್ಪಂಚಾಕ್ಷರೀ ಸಲ್ಲಲಿತ ತರುಲತಾಕಂದವೋ ಭಕ್ತವಲ್ಲೀ
ಫಲವೋ ನಿರ್ವಾಣಲಕ್ಷ್ಮೀಕಲಿತಕಮಲವೋ ಸತ್ಯದುಗ್ಧಾಬ್ಧಿ ಪೂರ್ಣಾ
ಮಲಿನಪ್ರಾಲೇಯ ರುಙ್ಮಂಡಳವೊ ಮಹಿತ ಚಿದ್ಯೋಷಿದಾದರ್ಶವೋ ಮಂ
ಜುಲತೇಜಃಪಿಂಡವೋ ಪೇಳೆನೆ ಮೆಱೆದುದು ತದ್ರಾಜಪುತ್ರೋತ್ತಮಾಂಗಂ ೬೦

ವ॥ ಅಂತುಮಲ್ಲದೆಯುಂ

ಚಂ॥ ಅದು ಗಗನಂಬೊಲಬ್ಜಮಧುರಂ ಮಧುರಂ ಜಿತನಂದನಂಬೊಲ
ಭ್ಯುದಿತರಸಾಲಸಸ್ಮಿತ ಸಮುದ್ಗಮಮುದ್ಗಮದಂತೆ ಸದ್ರವಾ
ಸ್ಪದಮಮೃತಾಬ್ಧಿಯಂತೆ ಸರದಚ್ಛವಿರಾಜಿ ವಿರಾಜಿವೋಲ್ಸಿದಾ
ಘದ ನವವಿದ್ರುಮಾಧರದಳಾಶ್ರಿತಮಾಶ್ರಿತದಂತೆ ಸಂಭೃತಂ ೬೧

೫೯. ರಾಜಶೇಖರನು ತಾನು ಹೇಳಿದ ಪ್ರಕಾರ ನಡೆಸಿದ ಕಾರ್ಯವನ್ನು ಸೇವಕನು ನೋಡಿ ಆಶ್ಚರ್ಯಪಟ್ಟು, ನಮಸ್ಕರಿಸುತ್ತ, ಆ ರಾಜಶೇಖರನ ಮೃದುವಾಕ್ಯವೇ ತನಗೆ ಉಪದೇಶವಾಗಲು, ಆ ರಾಜಶೇಖರನ ಮೂರ್ತಿಯೇ ತನ್ನ ಮನಸ್ಸಿನಲ್ಲಿ ಸ್ಥಿರವಾಗಿ ಭ್ರಮರಕೀಟ ನ್ಯಾಯದ ಹಾಗೆ ನಿಲ್ಲಲು ಶಿವಮಂತ್ರ ಸಿದ್ಧನೆನಿಸಿಕೊಂಡನು. ಲೋಕದಲ್ಲಿ ಮಹನೀಯರ ಸಹವಾಸವು ಆದೆಷ್ಟು ವಿಶೇಷವಾದದ್ದೋ. ೬೦. ಪ್ರಕಾಶಮಾನವಾದ ಪಂಚಾಕ್ಷರೀ ಮಹಾಮಂತ್ರವೆಂಬ ಮನೋಹರವಾದ ತರುಲತೆಯ ಗಡ್ಡೆಯೋ, ಶಿವಭಕ್ತಿಯೆಂಬ ಬಳ್ಳಿಯ ಫಲವೋ, ಮೋಕ್ಷವೆಂಬ ಲಕ್ಷ್ಮಿಯು ಧರಿಸಿದ ಕಮಲವೋ, ಸತ್ಯವೆಂಬ ಕ್ಷೀರ ಸಮುದ್ರದ ಷೋಡಶಕಲಾಪ್ರಪೂರ್ಣನಾದ ಚಂದ್ರಕಿರಣಗಳ ಮಂಡಲವೋ, ಜ್ಞಾನವೆಂಬ ಸ್ತ್ರೀಯು ನೋಡಿಕೊಳ್ಳುವ ಕನ್ನಡಿಯೋ, ಮನೋಹರ ತೇಜಸ್ಸುಗಳ ಸಾರಾಂಶವೋ ಎಂಬುವಂತೆ ಆ ರಾಜಶೇಖರಮಹಾರಾಜನ ಶಿರಸ್ಸು ಶೋಭಿಸುತ್ತಿತ್ತು. ವ॥ ಅದೂ ಅಲ್ಲದೆ, ೬೧. ಆ ಶಿರಸ್ಸು ಗಗನದ ಹಾಗೆ ಚಂದ್ರ (ಅಪ್+ಜ)ನಿಂದ ಮನೋಹರವಾಗಿತ್ತು (ಆಕಾಶ) ; ಕಮಲದೋಪಾದಿಯಲ್ಲಿ ರಮಣೀಯವಾಗಿತ್ತು (ಶಿರಸ್ಸು) ; ವಸಂತಋತುವಿನಿಂದ ಪ್ರಕಾಶಗೊಳಿಸಲ್ಪಟ್ಟ ಉದ್ಯಾನವನದ ಹಾಗೆ ಅಭ್ಯುದಯಗೊಂಡ (ವೃದ್ಧಿಗೊಂಡ) ಸೀಮಾವಿನ ಮರಗಳ ಅರಳಿದ ಪುಷ್ಪಗಳುಳ್ಳದ್ದಾಗಿತ್ತು (ತೋಟ) ; ಅನುರಾಗದ ಉದಯದಿಂದ ಕೂಡಿದ ಮಂದಹಾಸ (ಸನ್ಮಿತ)ದ ಉತ್ಪತ್ತಿಯುಳ್ಳದ್ದಾಗಿತ್ತು (ಶಿರಸ್ಸು) ; ಒಳ್ಳೆಯ ಮಕರಂದದಿಂದ ಕೂಡಿದ ಪುಷ್ಪಗಳ ಹಾಗೆ ಇತ್ತು (ಪುಷ್ಪ) ; ಯೋಗ್ಯವಾದ ಪಂಚಾಕ್ಷರಿಮಂತ್ರರೂಪವಾದ ಧ್ವನಿ (ಸತ್+ರವ)ಗೆ ಆಶ್ರಯವಾಗಿತ್ತು (ಶಿರಸ್ಸು) ; ಕ್ಷೀರಸಮುದ್ರದ ಹಾಗೆ ಸಂಚರಿಸುತ್ತಿರುವ ಹಂಸಪಕ್ಷಿ (ಸರತ್+ಅಚ್ಛವಿ)ಗಳ ಪಙ್ಕ್ತಿಯುಳ್ಳದ್ದಾಗಿತ್ತು (ಕ್ಷೀರಸಮುದ್ರ) ;

ವ॥ ಅಂತೆಸೆವ ಶಿರೋಬ್ಜಮಂ ಕರಾಬ್ಜದೊಳ್ ಬಿಜಯಂಗೆಯ್ಸಿಕೊಂಡು ಸೂರ್ಯವೀಥಿ ಯೊಳವಂ ತಳ್ವದೈತರುತ್ತಮಿರೆಯಿರೆ

ಕಂ॥ ಅಮರ್ದಿನೊಳಳ್ದಿದ ಕಮಳಮೊ
ವಿಮಳ ಸುಧಾಬ್ಧಿಯೊಳ್ ಪುಟ್ಟಿದಮೃತದ್ಯುತಿಬಿಂ
ಬಮೊ ಪೇಳೆನೆ ಮೆಱೆದುದು ಹಸ
ನಮಯೂಖಾವೃತ ಮುಖಂ ನರೇಂದ್ರಾತ್ಮಜನಾ ೬೨

ಮ॥ ಪುರನಾರೀಜನವೀಕ್ಷಿಸುತ್ತೆ ಮಱುಗುತ್ತಿರ್ಪನ್ನೆಗಂ ಕಾಣುತ
ಚ್ಚರಿಯೆಂದಲ್ಲಿ ಬುಧರ್ಕಳೊಲ್ದು ಪೊಗಳುತ್ತಿರ್ಪನ್ನೆಗಂ ಶೈವಭ
ಕ್ತರದೆತ್ತಂ ನೆರೆದಾರ್ದುಘೋ ಜಯಯೆನುತ್ತಿರ್ಪನ್ನೆಗಂ ತಂದು ಕಿಂ
ಕರನಾ ಮಸ್ತಕಮಂ ಕರಾಂಬುಜದೊಳಿತ್ತಂ ಚೋಳಭೂಪಾಲನಾ ೬೩

ವ॥ ಆವಾಗಳ್

ಚಂ॥ ಕಮಳದಳಾಯತೇಕ್ಷಣರುಚಿಪ್ರಸರಂ ಭಸಿತತ್ರಿಪುಂಡ್ರಮಂ
ಜಿಮಯುತಫಾಲಮಾ ಲಲಿತ ಕುಂಡಳಮಂಡಿತ ಗಂಡಮಂಡಳಂ
ವಿಮಳರದದ್ಯುತಿಸ್ಫುಟರದಚ್ಛದಮುದ್ಗತ ಮಂದಹಾಸವಿ
ಭ್ರಮಮುರುಮಂತ್ರನಾದಮಹಿತಂ ಶಿರವೊಪ್ಪಿದುದಾ ಕುಮಾರನಾ ೬೪

ಒಳ್ಳೆಯ ಹಲ್ಲುಗಳ ಕಾಂತಿ (ಸ+ರದ+ಛವಿ)ಗಳ ಸಾಲುಗಳಿಂದ ಕೂಡಿದುದು (ಶಿರಸ್ಸು); ಗ್ರೀಷ್ಮಋತುವಿನ ಪಕ್ಷಿಗಳ ಸಾಲು (ವಿ+ರಾಜಿ)ಗಳ ಹಾಗೆ ನೂತನವಾದ ಚಿಗುರು ಗಳಿಂದ ಕೂಡಿದ ಗಿಡಗಳ ಕೆಳಗಿನ ಎಲೆಗಳನ್ನು ಆಶ್ರಯಿಸಿದ್ದವು (ಪಕ್ಷಿಗಳು) ; ನೂತನ ವಾದ ಹವಳ (ನವವಿದ್ರುಮ) ದೋಪಾದಿಯಲ್ಲಿರುವ ತುಟಿಗಳ ಭಾಗ (ಅಧರ+ದಳ) ಗಳನ್ನು ಆಶ್ರಯಿಸಿಕೊಂಡಿರುವಂತಹುದು (ಶಿರಸ್ಸು) ; ಗೃಹದ ಹಾಗೆ ಪೋಷಿಸಲ್ಪಡು ವಂತಹುದು (ಗೃಹ) ; ಪಂಚಾಕ್ಷರೀಮಂತ್ರವನ್ನು ಧರಿಸಲ್ಪಟ್ಟಂತಹುದು (ಶಿರಸ್ಸು) ಆಗಿ ಶೋಭಿಸುತ್ತಿತ್ತು. ವ॥ ಹಾಗೆ ಶೋಭಿಸುತ್ತಿರುವ ಶಿರಸ್ಸೆಂಬ ಕಮಲವನ್ನು ಕರಕಮಲದಲ್ಲಿ ತೆಗೆದುಕೊಂಡು, ಆ ಸೇವಕನಾದ ಸಂದಾಯಿಯು ರಾಜಬೀದಿಯಲ್ಲಿ ತಡಮಾಡದೆ ಬಂದನು. ೬೨. ಆ ರಾಜಶೇಖರನ ಮಂದಹಾಸದ ಕಿರಣಗಳಿಂದ ಕೂಡಿದ ಮುಖವು ಅಮೃತದಲ್ಲಿ ಅದ್ದಿದಂಥ ಕಮಲವೋ, ಶ್ರೇಷ್ಠವಾದ ಕ್ಷೀರಸಮುದ್ರದಲ್ಲಿ ಹುಟ್ಟಿದ ಪ್ರಕಾಶ ಮಾನವಾದ ಚಂದ್ರಮಂಡಲವೋ ಹೇಳು ಎನ್ನುವ ಹಾಗೆ ಶೋಭಿಸುತ್ತಿತ್ತು. ೬೩. ಪಟ್ಟಣದ ಸ್ತ್ರೀ ಸಮೂಹವೆಲ್ಲ ನೋಡಿ ಸಂತಾಪಪಡುತ್ತಿರಲು, ವಿದ್ವಾಂಸರು ನೋಡುತ್ತ ಇದು ಆಶ್ಚರ್ಯವೆಂದು (ರಾಜನ ಧರ್ಮಬುದ್ಧಿಗೆ) ಸಂತೋಷಿಸಿ ಹೊಗಳುತ್ತಿರಲು, ಶರಣ ಜನರುಗಳು ಗುಂಪುಮಾಡಿ ಉಘೇ ! ಉಘೇ ! ಎಂದು ಮಂಗಳಘೋಷವನ್ನು ಮಾಡು ತ್ತಿರಲು, ಆ ಮಸ್ತಕವನ್ನು ಕಿಂಕರನಾದ ಸಂದಾಯಿಯು ತಂದು, ಚೋಳಭೂಪಾಲ ನಾದ ಸತ್ಯೇಂದ್ರಚೋಳನ ಕರಕಮಲಗಳಲ್ಲಿ ಇರಿಸಿದನು. ವ॥ ಆಗ ೬೪. ಕಮಲ ದಳಗಳೋಪಾದಿಯಲ್ಲಿ ವಿಶಾಲವಾದ ನೇತ್ರಗಳ ಕಾಂತಿಯುಳ್ಳದ್ದಾಗಿಯೂ,

ವ॥ ಅಂತೊಪ್ಪುತ್ತಮಿರ್ಪ ನಿಜತನಯನುತ್ತಮಾಂಗಮನುದಾತ್ತಚಿತ್ತಂ ನಿರೀಕ್ಷಿಸುತ್ತಂ

ಕಂ॥ ಮೃಡ ಪಂಚವರ್ಣಮಂತ್ರಮ
ನಡಿಗಡಿಗೆಡೆವಿಡದೆ ನುಡಿವ ಬಗೆಗಂಡರಸಂ
ಪಡೆದಚ್ಚರಿಯಿಂ ಶಿವ ಶಿವ
ಕಡುಪೊಸತಿಳೆಗಿಂತಿದೆಂದು ವಿಸ್ಮಿತನಾದಂ ೬೫

ನುತಸೌರಭಾಸ್ಪದ ಶ್ರೀ
ಯುತಮುದಿತ ಗುಣಾಂಕಮಖಿಳ ಸಾರಂ ಭುವನೋ
ನ್ನತಮೆನಿಪ ಸುತಶಿರೋಬ್ಜದೊ
ಳತಿರತಿವಡೆದತ್ತು ಪಂಚವರ್ಣಭ್ರಮರಂ ೬೬

ವ॥ ಎಂದು ಕೆಲದೊಳಿರ್ದ ವೃದ್ಧರಾಜನ್ಯಕದೊಳ್ಪೊಗಳ್ದು ಮಗುಳ್ದು ನಿಜಾನುಚರನ ವದನಾರವಿಂದಮಂ ನೀಡುಂ ನೋಡಿ

ಭಸ್ಮತ್ರಿಪುಂಡ್ರದಿಂದ ಮನೋಹರವಾದ ಹಣೆಯುಳ್ಳದ್ದಾಗಿಯೂ, ಕರ್ಣಕುಂಡಲ ಗಳಿಂದ ಅಲಂಕಾರಗೊಂಡ ಕೆನ್ನೆಗಳುಳ್ಳದ್ದಾಗಿಯೂ, ನಿರ್ಮಲವಾದ ಹಲ್ಲುಗಳ ಕಾಂತಿಯಿಂದ ಸ್ಫುಟವಾದ ತುಟಿಗಳುಳ್ಳದ್ದಾಗಿಯೂ, ವ್ಯಕ್ತವಾದ ಮುಗುಳು ನಗೆಯ ವಿಲಾಸವುಳ್ಳದ್ದಾಗಿಯೂ, ಶ್ರೇಷ್ಠವಾದ ಪಂಚಾಕ್ಷರೀಮಂತ್ರದ ಧ್ವನಿ ಯಿಂದ ಕೂಡಿದುದಾಗಿಯೂ ಆ ರಾಜಕುಮಾರನ ಶಿರಸ್ಸು ಶೋಭಿಸುತ್ತಿತ್ತು. ವ॥ ಹಾಗೆ ಒಪ್ಪುತ್ತಿದ್ದ ತನ್ನ ಕುಮಾರನ ಶಿರಸ್ಸನ್ನು ಉದಾತ್ತಚಿತ್ತನಾದ ಸತ್ಯೇಂದ್ರ ಚೋಳನು ನೋಡುತ್ತ, ೬೫. ಪರಮಾತ್ಮನ ಪಂಚವರ್ಣಾತ್ಮಕವಾದ ಪಂಚಾಕ್ಷರೀ ಮಂತ್ರವನ್ನು ಬಾರಿ ಬಾರಿಗೂ ತಡೆಯಿಲ್ಲದೆ ಉಚ್ಚರಿಸುತ್ತಿರುವ ರೀತಿಯನ್ನು ನೋಡಿ, ರಾಜನು ಲೋಕದಲ್ಲಿ ಈ ಸಂಗತಿಯು ಹೊಚ್ಚಹೊಸದು ಎಂದು ಆಶ್ಚರ್ಯದಿಂದ ಕೂಡಿದವ ನಾದನು. ೬೬. ಪಂಚಾಕ್ಷರೀಮಂತ್ರವೆಂಬುದು ಶ್ಲಾಘ್ಯವಾದುದಾಗಿಯೂ, ದಿವ್ಯ ವಾಗಿರುವ ಕಾಂತಿಗಳಿಗಾಶ್ರಯವಾದ ರಚನೆಯಿಂದ ಕೂಡಿದುದಾಗಿಯೂ, ದಯಾದಿ ಗುಣಗಳಿಂದ ಯುಕ್ತವಾದುದಾಗಿಯೂ, ಸಮಸ್ತರ ಮುಖಗಳಲ್ಲಿ ಶ್ರೇಷ್ಠವಾದುದಾಗಿಯೂ, ಲೋಕದ ಮಂತ್ರಗಳಲ್ಲೆಲ್ಲ ಉನ್ನತವಾದುದಾಗಿಯೂ ಇರುವ ಆ ರಾಜಶೇಖರನ ಮುಖ ಕಮಲದಲ್ಲಿ ಪಂಚಾಕ್ಷರಿಯೆಂಬ ದುಂಬಿಯು ಅತ್ಯಂತ ಆಸಕ್ತಿಯನ್ನು ಹೊಂದಿದು ದಾಗಿತ್ತು. (ಕಮಲದ ಪರವಾದ ಅರ್ಥ-) ಕಮಲವು ಶ್ಲಾಘ್ಯವಾದ ಪರಿಮಳಕ್ಕೆ ಸ್ಥಾನವಾದ ಸಂಪತ್ತಿನಿಂದ ಕೂಡಿದುದಾಗಿಯೂ, ದಂಟಿನಲ್ಲಿರುವ ದಾರದಿಂದ ಯುಕ್ತ ವಾದುದಾಗಿಯೂ, ಸಂಪೂರ್ಣವಾಗಿ ದಳಗಳಿಂದ ಸಹಿತವಾದುದಾಗಿಯೂ, ಜಲದಲ್ಲಿ ಎತ್ತರವಾಗಿ ಬೆಳೆದು ಮೇಲೆ ಕಾಣುವುದಾಗಿಯೂ ಇರುತ್ತದೆ. ವ॥ ಹೀಗೆಂದು ಪಕ್ಕದಲ್ಲಿದ್ದ ವೃದ್ಧರಾದ ಕ್ಷತ್ರಿಯರ ಸಮೂಹದಲ್ಲಿ ಹೊಗಳಿ, ಪುನಃ ತನ್ನ ಸೇವಕನಾದ ಸಂಧಾಯಿಯ ಮುಖಕಮಲವನ್ನು ಚೆನ್ನಾಗಿ ನೋಡಿ ಚೋಳರಾಜನು ಕೇಳಿದನು.

ಕಂ॥ ಎಂತು ಪಱಿದಿತ್ತನೀ ಕುವ
ರಂ ತಡೆಯದೆ ಮಂತ್ರಸಹಿತಮಿಾ ಶಿರಮನದೆಂ
ತೆಂತುಸಿರ್ದನೆಲವೊ ಮುಂ ಪೇ
ಳ್ನೀಂ ತಳ್ವದೆನುತ್ತೆ ಭೂವರಂ ಬೆಸಗೊಂಡಂ ೬೭

ವ॥ ಆಗಳಾತನಾ ಯುವರಾಜನೆಂದುದುಮಂ ತಾನೆಂದುದುಮನಿನಿಸುಳಿಯದೆಲ್ಲಮಂ ಪೇಳ್ದನಂತರಂ

ಮ॥ ಅದನೇವೇಳ್ವುದೊ ಭೃತ್ಯಮುಖ್ಯನಳವಂ ತನ್ಮೂರ್ತಿಯಂ ಜಾನಿಸು
ತ್ತದಱಿಂ ಯೋಗಿ ಮಹೇಶನಂ ನೆನೆದು ತಾನಾದಂತಿರಾವೇಶಮಂ
ಗದೊಳಿತ್ತಂ ಬಿಡೆ ತೀವೆ ನಿಷ್ಠೆ ಮಿಗೆ ನೋಡಿಂತೆಂದು ಖಡ್ಗಾಗ್ರದಿಂ
ದದಟಂ ಪೋಣ್ಕೊಯಿದಿತ್ತನಾತ್ಮಶಿರಮಂ ಸನ್ಮಂತ್ರಸಂಯುಕ್ತಮಂ ೬೮

ವ॥ ಅಂತಿತ್ತಾಗಳಾ ಶಿರಮನಾ ನರೇಂದ್ರಂ ನಡೆನೋಡಿ ವಾಮಕರದೊಳ್ ಪಿಡಿದು

ಕಂ॥ ಸುಲಿಪಲ್ಗಳೆಸೆ ಮಿಱುಗುತ್ತಿರೆ
ವಿಲಸನ್ಮಂತ್ರಮನೆ ಜಪಿಪ ತನ್ಮಸ್ತಕಮಂ
ನಲಿನಲಿದು ನೋಡಿ ನರಪತಿ
ತಿಲಕಂ ನಿಜಭೃತ್ಯಕೃತ್ಯಮಿದು ಪೊಸತೆಂದಂ ೬೯

೬೭. "ಈ ರಾಜಶೇಖರನು ಮಂತ್ರಸಹಿತವಾದ ಈ ಶಿರಸ್ಸನ್ನು ಹೇಗೆ ಸಾವಕಾಶಮಾಡದೆ ಕತ್ತರಿಸಿ ಕೊಟ್ಟನು ? ಅದೇನು ಹೇಳಿದನು ? ಎಲೈ ಭೃತ್ಯನೇ, (ಇದೆಲ್ಲವನ್ನೂ) ನೀನು ಮೊದಲು ಹೇಳು" ವ|| ಆ ಸಮಯದಲ್ಲಿ ಸಂದಾಯಿಯು ರಾಜಶೇಖರನು ಹೇಳಿದ ಮಾತನ್ನೂ ತಾನು ಹೇಳಿದ ಮಾತನ್ನೂ ಸ್ವಲ್ಪವೂ ಬಿಡದಂತೆ ಸಮಸ್ತವನ್ನೂ ಹೇಳಿದನು. ಅನಂತರ ೬೮. ಭೃತ್ಯಶ್ರೇಷ್ಠನಾದ ಸಂದಾಯಿಯ ಆ ಸಾಹಸವನ್ನು ಏನು ಹೇಳುವುದೋ ! ಆ ರಾಜಶೇಖರನ ಮೂರ್ತಿಯನ್ನು ಧ್ಯಾನಿಸುತ್ತ, ಆ ಧ್ಯಾನದಿಂದ ಶಿವಯೋಗಿಯು ಶಿವನನ್ನು ಧ್ಯಾನಿಸಿ ಶಿವನೇ ಆದ ಹಾಗೆ ಪ್ರಜ್ಞೆ ತಪ್ಪಿದವನಾಗಿ, ನಿಷ್ಠೆಯು ಅಧಿಕಗೊಂಡು "ಇಗೋ, ರಾಜಶೇಖರನು ಹೀಗೆ ತಲೆಯನ್ನು ಕತ್ತರಿಸಿಕೊಟ್ಟನು, ನೋಡು" ಎಂದು ಕತ್ತಿಯನ್ನೆತ್ತಿ ಹೊಡೆದುಕೊಂಡು ಶಿವಮಂತ್ರೋಚ್ಚಾರಣೆಯಿಂದ ಕೂಡಿದ ತನ್ನ ತಲೆಯನ್ನು ಕತ್ತರಿಸಿಕೊಟ್ಟನು ! ವ|| ಹಾಗೆ ಆ ಸಂದಾಯಿಯು ತನ್ನ ಶಿರಸ್ಸನ್ನು ಕತ್ತರಿಸಿಕೊಟ್ಟಾಗ ಆ ಶಿರಸ್ಸನ್ನು ಆ ಸತ್ಯೇಂದ್ರಚೋಳೇಂದ್ರನು ಚೆನ್ನಾಗಿ ನೋಡಿ, ತನ್ನ ಎಡಗೈಯಲ್ಲಿ ಹಿಡಿದುಕೊಂಡು, ೬೯. ಶುಭ್ರವಾದ ಹಲ್ಲುಗಳು ಶೋಭಿಸುತ್ತಿರಲಾಗಿ, ಪಂಚಾಕ್ಷರೀಮಂತ್ರೋಚ್ಚಾರವನ್ನು ಮಾಡುತ್ತಿದ್ದ ಸಂದಾಯಿಯ ತಲೆಯನ್ನು ಅತ್ಯಂತ ಹರ್ಷದಿಂದ ನೋಡಿ, ತನ್ನ ಭೃತ್ಯನಾದ ಈ ಸಂದಾಯಿಯು ತನ್ನ ತಲೆಯನ್ನು ಕತ್ತರಿಸಿಕೊಂಡ ಈ ಕಾರ್ಯವು ನೂತನವಾದುದೆಂದು

ವ॥ ಆಗಳ್

ಕ೦॥ ಹರಶರಣಸಂಗಮೇನಂ
ದೊರಕೊಳಿಸದೊ ವಿಪುಳ ಮಹಿಮೆಯಿಂ ಶಿವ ಶಿವ ಭೂ
ವರನಣುಗನ ಸಂಗತಿಯಿಂ
ದೊರೆದುದಿವಂಗವನಪೊಲ್ ಮಹಾಮಂತ್ರಜಪಂ ೭೦

ಮೊದಲಳಿದ ಮಂತ್ರಿಪಂಗೇ
ನಿದು ದೊರೆದುದೆ ಪರಮಮಂತ್ರಮಿಾ ಭೃತ್ಯಂಗಾ
ದುದು ಬಳಿಯಿನಳಿದವಂಗಂ
ತದಱಿಂ ಘನಮಂತ್ರಿ, ಬಗೆವೊಡೀ ಭಟನಲ್ತೇ ೭೧

ವ॥ ಎಂದನೇಕ ಸುಜನಜನಂ ನುತಿಸುತ್ತುಮಿರೆಯಿರೆ

ಕಂ॥ ತಿರುಕೊಳವಿನಾಚಿ ನಿನ್ನಯ
ವರಸುತ ಶಿರಮೊಂದಕೆರಡು ಶಿರಮಿದೆ ನೋಡೆಂ
ದಿರಿಸಿದನವನಿಪಕುಲಶೇ
ಖರನುಱೆ ಶಂಕರನ ಶಿರದ ಕೆಲದೊಳ್ ಬಲದೊಳ್ ೭೨

ತಳಿವ ಸುಧೆ ಪೊಳೆವ ಸುಳಿಪ
ಲ್ವೆಳಗದು ಸಂಜೀವನಾಖ್ಯಮಂತ್ರಂ ಜಪಿಪ
ಗ್ಗಳಮಂತ್ರಮಾಗೆ ಶಿಶುಶಿರ
ದೊಳೆ ಜೀವಂಬಡೆದುದಾ ಶಿರೋದ್ವಯಮಾಗಳ್ ೭೩

ಹೇಳಿದನು. ವ॥ ಆಗ, ೭೦. "ಶಿವಶರಣರ ಸಹವಾಸವು ಎಷ್ಟು ದೊಡ್ಡ ಮಹತ್ವವನ್ನಾದರೂ ಉಂಟುಮಾಡಿಕೊಡುವಂತಹುದಾಗಿರುವುದು. ಈ ವಿಷಯದಲ್ಲಿ ರಾಜಶೇಖರನಿಗೆ ಮಂತ್ರಜಪವು ದೊರೆಕೊಂಡಹಾಗೆ, ಆ ರಾಜಶೇಖರನ ಸಹವಾಸದಿಂದ ಈ ಭೃತ್ಯನಿಗೂ ಆ ಮಹಾಮಂತ್ರದ ಜಪವು ದೊರೆತದ್ದೇ ದೃಷ್ಟಾಂತವು. ೭೧. ಈ ಮೊದಲು ಸತ್ತ ಪತಿಮೋಹಿಗೆ ಈ ಮಂತ್ರವು ದೊರೆಯಲಿಲ್ಲ. ಅಂತ್ಯದಲ್ಲಿ ಮೃತನಾದ ಈ ದೂತನಿಗೆ ಮಂತ್ರವು ಸಂಘಟಿಸಿತು. ಆದುದರಿಂದ ಆಲೋಚಿಸಿ ನೋಡಿದರೆ, ಈ ಭಟನೇ ಶ್ರೇಷ್ಠವಾದ ಮಂತ್ರವುಳ್ಳವನಾಗಿರುವನು. (ಘನವಾದ ಮಂತ್ರಿಯಾಗಿರುವನು)" ವ॥ ಈ ಪ್ರಕಾರವಾಗಿ ಹೇಳಿ, ಅನೇಕ ಸತ್ಪುರುಷ ಸಮೂಹವು ಸ್ತೋತ್ರಮಾಡುತ್ತ ಇರುತ್ತಿರಲು, ೭೨. "ತಿರುಕೊಳವಿನಾಚಿಯೇ, ನಿನ್ನ ಮಗನ ಒಂದು ಶಿರಸ್ಸಿಗೆ ಎರಡು ಶಿರಸ್ಸುಗಳು ಇವೆ, ನೋಡು" ಎಂದು ರಾಜನು ಶಂಕರನ ತಲೆಯ ಉಭಯ ಪಾರ್ಶ್ವಗಳಲ್ಲಿ ಆ ಎರಡೂ ತಲೆಗಳನ್ನಿರಿಸಿದನು. ೭೩. ಹಲ್ಲುಗಳ ಕಾಂತಿಯೇ ಚಿಮುಕಿಸುತ್ತಿರುವ ಅಮೃತವಾಗಿಯೂ, ಉಚ್ಚರಿಸುತ್ತಿರುವ ಪಂಚಾಕ್ಷರೀ ಮಂತ್ರವೇ ಸಂಜೀವನಮಂತ್ರವಾಗಿಯೂ ಇರುತ್ತಿರಲು ಆ ಎರಡೂ ಶಿರಸ್ಸುಗಳು

ಎರಡುಂ ಕಿವಿಗಳೊಳಿರದು
ಚ್ಚರಿಪ ಮಹಾಮಂತ್ರಮಾಸ್ಯವಿವರದೆ ಪೊಱಪಾ
ಯ್ವರವನನುಕರಿಸಿ ತನ್ನಂ
ತ್ರರವಂಬಡೆದಿರ್ದುದಾ ಶಿರಂ ಶಂಕರನಾ ೭೪

ವ॥ ಆಗಳಾ ತತ್ಪ್ರಭಾವಮನಖಿಳರ್ಪೊಗಳುತ್ತಮಿರ್ಪಿನಂ ತಿರುಕೊಳವಿನಾಚಿ ಸಂದಾಯಿಯ ಕಬಂಧದ ಕರತಳದ ಖಡ್ಗಮಂ ಕಳೆದುಕೊಂಡು

ಉ॥ ಕೇಳೆಲೆ ಚೋಳಭೂಪತಿ ಮದೀಯ ತನೂಜನ ಮಸ್ತಕಕ್ಕೆ ಲೋ
ಕಾಳಿಯನೊಲ್ದು ಪಾಲಿಪ ಕುಮಾರನ ಮಸ್ತಕಮಿತ್ತೆಯಲ್ತೆ ನಿ
ನ್ನಾಳೆನಿಸಿರ್ದನೀ ಶಿರಕೆ ಮಚ್ಛಿರಮೋ ಪಳಿ ನೋಳ್ಪುದೆಂದವ
ಳ್ಬಾಳನವರ್ಚಿ ಗೋಣ್ಗೊಱೆದು ಸಾರ್ಚಿದಳಾತ್ಮಸಮಂತ್ರಶೀರ್ಷಮಂ ೭೫

ವ॥ ಆಗಳ್

ಕಂ॥ ತಿರುಕೊಳವಿನಾಚಿಯೆಸಗಿದ
ಪರಿಗಚ್ಚರಿವಟ್ಟು ನೃಪತಿ ಸಚಿವನ ಶಿರಮಂ
ತರಿಸಿ ಬಳಿಯಿರಿಸಿ ನೋಳ್ಪಿನ
ಮಿರದದುಮಭವಾಂಕಮಂತ್ರಮಾಂತುದು ಪದಪಿಂ ೭೬

ಶಂಕರನ ಶಿರಸ್ಸಿಗೆ ಪ್ರಾಣವನ್ನುಂಟುಮಾಡಿದುವು. ೭೪. ಎರಡೂ ಕಿವಿಗಳಲ್ಲಿ ಎಡಬಿಡದೆ ಉಚ್ಚರಿಸುತ್ತಿರುವ ಪಂಚಾಕ್ಷರಿಯು ಮುಖರಂಧ್ರದಿಂದ ಪ್ರವೇಶಿಸಿ ಹೊರಕ್ಕೆ ಬರುತ್ತದೆಯೋ ಎಂಬಂತೆ ಶಂಕರನ ಶಿರಸ್ಸು ಮಹಾಮಂತ್ರಧ್ವನಿಯಿಂದ ಕೂಡಿದುದಾಯಿತು. ವ॥ ಆಗ ಆ ಮಂತ್ರಪ್ರಭಾವವನ್ನು ನೆರೆದ ಸರ್ವರೂ ಹೊಗಳುತ್ತಲಿರಲು, ತಿರುಕೊಳವಿನಾಚಿಯು ಸಂದಾಯಿಯ ಮುಂಡದ ಕಯ್ಯಲ್ಲಿರುವ ಖಡ್ಗವನ್ನು ಕಿತ್ತುಕೊಂಡು, ೭೫. "ಎಲೈ ಮಹಾರಾಜನಾದ ಸತ್ಯೇಂದ್ರಚೋಳನೇ, ನಾನು ಹೇಳುವ ಮಾತನ್ನು ಕೇಳುವವನಾಗು. ನನ್ನ ಮಗನ ತಲೆಗೆ ಪ್ರತಿಯಾಗಿ, ಸಮಸ್ತ ದೇಶಗಳನ್ನು ಸಂರಕ್ಷಿಸುವ ರಾಜಶೇಖರಮಹಾರಾಜನ ತಲೆಯನ್ನು ಕೊಟ್ಟವನಾದೆ. ನಿನ್ನ ಭೃತ್ಯನಾದ ಈ ಸಂದಾಯಿಯ ಶಿರಸ್ಸಿಗೆ ಪ್ರತಿಯಾಗಿ ನನ್ನ ಶಿರಸ್ಸನ್ನು ಕೊಡುತ್ತೇನೆ, ನೋಡು" ಎಂದು ಆ ತಿರುಕೊಳವಿನಾಚಿಯು ಮಂತ್ರಸಹಿತವಾದ ತನ್ನ ತಲೆಯನ್ನು ಕತ್ತರಿಸಿ ಸಮೀಪದಲ್ಲಿ ಇಟ್ಟುಬಿಟ್ಟಳು. ವ॥ ಆಗ ೭೬. ರಾಜನು ತಿರುಕೊಳವಿನಾಚಿಯು ಮಾಡಿದ ರೀತಿಗಾಶ್ಚರ್ಯಪಟ್ಟು, ಮಂತ್ರಿಯ ತಲೆಯನ್ನು ತರಿಸಿ ಈ ಶಿರಸ್ಸುಗಳ ಸಮೀಪದಲ್ಲಿ ಇರಿಸಿ ನೋಡುತ್ತಿರಲು, ಆ ಮಂತ್ರಿಯ ಶಿರಸ್ಸೂ ಕೂಡ ಶಿವಮಂತ್ರವನ್ನುಚ್ಚರಿಸಲು ಆರಂಭಿಸಿತು.

ಪಂಚತ್ವಮನಾನದೆಯುಂ
ಪಂಚತ್ವಮನಾಂತು ಪರಮಪಂಚಾಕ್ಷರಮಂ
ಪಂಚಮೆನೆ ಜಪಿಪ ತಲೆಗಳ
ಪಂಚಮುಖಧ್ಯಾನಿ ಚೋಳನೃಪನೀಕ್ಷಿಸಿದಂ ೭೭

ವ॥ ಅಂತೀಕ್ಷಿಸುತ್ತುಮಿಾ ಪಂಚಶಿರಃಪಂಚವರ್ಣಂಗಳ್ಗೆನ್ನ ಶಿರಃಪ್ರಣವದಿನಳಂಕರಿಪೆನೆಂದುತ್ಸಾಹಿಸಿ ಸಿತಾಸಿಯಂ ಕೊರಲ್ಗಮರ್ಚಿ ಕೊಱೆದು

ಕಂ॥ ನರನಾಥಂ ಮಸ್ತಕಮಂ
ಶಿರೋಧಿಯಿಂದಿಳಿಪಿ ವಾಮಕರದೊಳ್ಯಮಸಂ
ಹರನ ಪೆಸರೆನಿಪ ಪಂಚಾ
ಕ್ಷರಮಂ ಜಪಿಪಂತೆ ಮಾಡಿ ಮಡಗಿದನಾಗಳ್ ೭೮

ಚಂ॥ ಮರಕತಕುಂಡಳದ್ಯುತಿ ಸುವರ್ಣಕಿರೀಟಮಯೂಖಮಕ್ಷಿ ಭಾ
ಸುರತರ ತಾರಕಾಂಶು ರದನಚ್ಛದದೀಧಿತಿ ಮಂದಹಾಸ ಬಂ
ಧುರರುಚಿ ತಳ್ತು ರಂಜಿಸೆ ತದೀಯಶಿರಂ ವರಪಂಚವರ್ಣಪಂ
ಜರಮೆನೆ ಪಂಚವರ್ಣಶುಕವೊಪ್ಪಿದುದಲ್ಲಿ ಚಿದಂಗನಾಪ್ರಿಯಂ ೭೯

೭೭. ಮರಣ ಹೊಂದದೆ ಐದು ಸಂಖ್ಯೆಯನ್ನು ಹೊಂದಿ, ಪರಮಪಂಚಾಕ್ಷರೀಮಂತ್ರವನ್ನು ಮನೋಹರವಾಗಿ ಜಪಿಸುತ್ತಿರುವ ಶಿರಸ್ಸುಗಳನ್ನು ಪಂಚಮುಖ ಪರಮೇಶ್ವರಧ್ಯಾನಿಯಾದ ಚೋಳರಾಜನು ನೋಡಿದನು. ವ|| ಹಾಗೆ ನೋಡುತ್ತ "ಈ ಐದು ತಲೆಗಳೆಂಬ ಐದಕ್ಷರಗಳಿಗೆ ನನ್ನ ಶಿರಸ್ಸನ್ನು ಓಂಕಾರಪ್ರಣವರೂಪವಾಗಿ ಮಾಡಿ ಅಲಂಕರಿಸುವೆನು" ಎಂದು ಉತ್ಸಾಹದಿಂದ ತೀಕ್ಷ್ಣಖಡ್ಗವನ್ನು ಕೊರಳಿಗೆ ಸಂಬಂಧಿಸಿ ಕತ್ತರಿಸಿ, ೭೮. ಆ ರಾಜನು ತನ್ನ ಮಸ್ತಕವನ್ನು ಕುತ್ತಿಗೆಯಿಂದ ಬೇರ್ಪಡಿಸಿ, ಎಡಗೈಯಲ್ಲಿ ತೆಗೆದುಕೊಂಡು ಯಮಸಂಹಾರಕನಾದ ಶಿವನ ಹೆಸರಾದ ಪಂಚಾಕ್ಷರಿಯನ್ನು ಜಪಿಸುವಂತೆ ಮಾಡಿ ಕೇಳಕ್ಕೆ ಇಟ್ಟನು. ೭೯. ಮರಕತಮಣಿಗಳಿಂದ ಮಾಡಿದ ಕುಂಡಲಗಳ ಹಸಿರುಬಣ್ಣದ ಕಾಂತಿಯಿಂದಲೂ, ಸುವರ್ಣಮಯವಾದ ಕಿರೀಟದ ಹೊಂಬಣ್ಣದ ಕಾಂತಿಯಿಂದಲೂ, ನೇತ್ರಗಳ ಪ್ರಕಾಶಮಾನವಾದ ಗುಡ್ಡೆಗಳ ಕಪ್ಪುಕಾಂತಿಯಿಂದಲೂ, ತುಟಿಗಳ ಕೆಂಪುಕಾಂತಿಯಿಂದಲೂ, ಮಂದಹಾಸದ ಮನೋಹರವಾದ ಧವಳವರ್ಣದ ಕಾಂತಿಯಿಂದಲೂ ಕೂಡಿದ ಸತ್ಯೇಂದ್ರಚೋಳನ ಶಿರಸ್ಸು ಐದುಬಣ್ಣಗಳಿಂದ ಕೂಡಿದ ಪಂಜರವೋ ಎಂಬಹಾಗೆ ಶೋಭಿಸುತ್ತಿರಲು, ಆ ಪಂಚವರ್ಣದ ಪಂಜರದಲ್ಲಿ ಜ್ಞಾನಾಂಗನೆಗೆ ಪ್ರೀತಿಕರವಾದ ಪಂಚಾಕ್ಷರೀಮಂತ್ರವೆಂಬ ಪಂಚವರ್ಣದ ಗಿಳಿಯು ಶೋಭಿಸುತ್ತಿತ್ತು.

ವ॥ ಅನಂತರಮಾ ಮಿತವಚನನಾ ತಾಣಕ್ಕೇಳ್ತಂದವಂದಿರ ಶಿರಂಗಳಿರವಂ ನೋಡಿ

ಉ॥ ಶಂಕರನಂ ಕರಂ ತುಳಿದುದೆನ್ನ ತುರಂಗಮಿಳೇಶಪುತ್ರನಂ
ಸೋಂಕಿದುವಲ್ತೆ ನೆರ್ನೆರನೆ ಮಾತಿನ ಮಾಲೆಯ ದೂಱಿದಕ್ಕಟಾ
ಶಂಕಿಸದೆಲ್ಲರಿಂತಳಿದರಾನಿವರಿಂ ಮೊದಲ್ಗೈದದಾದೆನೆ
ನ್ನಿಂ ಕಡುಗಾಂಪನಾವನೊ ಧರಿತ್ರಿಯೊಳೆಂದು ಕರಾಳಖಡ್ಗಮಂ ೮೦

ಕಂ॥ ಸೆಳೆದಭವನಂಘ್ರಿಗೆಱಗು
ತ್ತೊಳಗೆ ಕೊರಲ್ಗೈದೆ ಸಾರ್ಚಿ ಘರಿಲೆನೆ ಕೊಱೆದು
ಜ್ವಳ ಪಂಚಾಕ್ಷರಜಪಮಂ
ತಳೆವಂತಿರೆ ಮಾಡಿ ಮಡಗಿದಂ ನಿಜಶಿರಮಂ ೮೧

ಚಂ॥ ಅರಸಿ ನಿಜೇಶ್ವರಾತ್ಮಜಮುಖರ್ ತಲೆಗೊಟ್ಟರೆನಿಪ್ಪ ವಾರ್ತೆಯಂ
ತರುಣಿಯರಿಂದೆ ಕೇಳ್ದು ತರುಣೇಂದುಧರಾಂಘ್ರಿಪಯೋಜಪೂಜೆಯಂ
ವಿರಚಿಸಿ ರತ್ನಭೂಷಣರುಚಿಪ್ರಸರಂ ವದನೇಂದುಕಾಂತಿ ಸೈ
ವರಿಯೆ ಕುಮಾರಕಾಂತೆಯೊಡನೇಳ್ತರೆ ಬಂದಳುದಗ್ರವೃತ್ತಿಯಿಂ ೮೨

ವ॥ ಅನಂತರ .ಆ ಮಿತವಚನನು ಆಸ್ಥಾನಕ್ಕೆಬಂದು ಅವರೆಲ್ಲರುಗಳ ಶಿರಗಳನ್ನು ನೋಡಿ ೮೦-೮೧. "ನನ್ನ ಕುದುರೆಯು ಶಂಕರನೆಂಬ ಹುಡುಗನನ್ನು ಮೆಟ್ಟಿ ಕೊಂದಿತು. ರಾಜಶೇಖರನನ್ನು ನಿರ್ನಿಮಿತ್ತವಾದ ಮಾತಿನ ಅಪವಾದವು ಮುಟ್ಟಿತಲ್ಲವೆ? ಭಯಪಡದೆ ಸರ್ವರೂ ಈ ಪ್ರಕಾರವಾಗಿ ಪ್ರಾಣವನ್ನು ತೆಗೆದುಕೊಂಡರು. ಇವರಿಗಿಂತಲೂ ಮೊದಲೇ ನಾನು ನನ್ನ ಪ್ರಾಣವನ್ನು ತೆಗೆದುಕೊಳ್ಳದವನಾದೆನು. ನನಗಿಂತಲೂ ಕಡುಮೂರ್ಖನು ಭೂಮಿಯಲ್ಲಿ ಇನ್ನಾವನಿದ್ದಾನೆ ?" ಎಂದು ಭಯಂಕರವಾದ ಖಡ್ಗವನ್ನು ಸೆಳೆದು ಕೊಂಡು, ಹೃದಯದಲ್ಲಿ ಪರಮೇಶ್ವರನ ಪಾದಗಳಿಗೆ ನಮಸ್ಕಾರ ಮಾಡುತ್ತ, ಖಡ್ಗವನ್ನು ಕಂಠಕ್ಕೆ ಚೆನ್ನಾಗಿ ಸಂಘಟಿಸಿ, ಘರಿಘರಿಲೆನ್ನುವ ಹಾಗೆ ಕತ್ತರಿಸಿ, ಪ್ರಕಾಶಮಾನವಾದ ಪಂಚಾಕ್ಷರೀಮಂತ್ರವನ್ನು ಉಚ್ಚರಿಸುವ ಹಾಗೆ ಮಾಡಿ ತನ್ನ ಶಿರಸ್ಸನ್ನು ಕೆಳಗಿರಿಸಿದನು. ೮೨. ರಾಣಿಯಾದ ಅಮೃತಮತಿದೇವಿಯು ತನ್ನ ಪತಿ, ಮಗ ಇವರೇ ಮೊದಲಾದವರು ಗಳು ಶಿರಶ್ಛೇದನ ಮಾಡಿಕೊಂಡರೆಂಬ ವಾರ್ತೆಯನ್ನು ಸ್ತ್ರೀಜನರುಗಳ ಮುಖಾಂತರ ಕೇಳಿದ ಮೇಲೆ ಶಿವನ ಪಾದಕಮಲಗಳನ್ನು ಅರ್ಚನೆಮಾಡಿ, ರತ್ನಖಚಿತವಾದ ಆಭರಣಗಳ ಸಮೂಹವೂ, ಚಂದ್ರನೋಪಾದಿಯಲ್ಲಿರುವ !ಮುಖದ ಕಾಂತಿಯೂ ಮುಂಭಾಗದಲ್ಲಿ ಹರಡುತ್ತಿರಲು, ರಾಜಶೇಖರನ ಹೆಂಡತಿಯಾದ ಸರ್ವಮಂಗಳಾ

ವ|| ಆಗಳ್ಸಚಿವಸತಿಯುಂ ಮಿತವಚನಕಾಂತೆಯುಮೊಡನೇಳ್ತರೆ ಸಭಾಸ್ಥಳಕ್ಕೇಳ್ತಂದು ನಿಂದು ನೀಡುಂ ನೋಳ್ಪನ್ನೆಗಂ

ಮ|| ಹರಿನೀಲಸ್ಫುಟಕುಟ್ಟಿಮಸ್ಥಳಸರಸ್ಥಾನಸ್ಥಿತಂಗಳ್ಮಹೇ
ಶ್ವರನಿಷ್ಠಾಮಿಹಿರಪ್ರಭಾವಿಕಸಿತಂಗಳ್ ಶೈವಷಡ್ವರ್ಣ ಷ
ಟ್ಚರಣಧ್ಯಾನ ಮನೋಹರಂಗಳಮಳಶ್ರೀಮಂಜುಳಂಗಳ್ಮಹೇ
ಶ್ವರಮುಖ್ಯಸ್ಫುರದುತ್ತಮಾಂಗಕಮಳಂಗಳ್ಕಣ್ಗದೇಂ ತೋರ್ದುವೋ ೮೩

ವ|| ಅಂತೆಸೆವಾ ಶಿರಂಗಳಂ ನಿರೀಕ್ಷಿಸಿ

ಚಂ|| ಮೃದುರವವೊಂದೆ ಶಂಕರಶಿರಂ ಸಚಿವಾಸ್ಯಮಮಳ್ಸರೋಜಕಿಂ
ತಿದು ಸುತಮಸ್ತಕಂ ಗುಣಯುತಂ ಚತುರಂ ಚರಶೀರ್ಷಮಾನನಂ
ಸುದತಿಯ ಪಂಚಮುರ್ವಿಪ ಮುಖಂ ನಿಗಮಾಂಗ ವಿಭಾಸಿ ಮಾತೃಕಾ
ಕ್ಷದಮಿದು ಮಂತ್ರಿಪುತ್ರವದನಂ ಮೆಱೆದಪ್ಪುದುದಾತ್ತವೃತ್ತಿಯಿಂ ೮೪

ವ|| ಎಂದಮೃತಮತಿಮಹಾದೇವಿ ಕೆಲದೊಳಿರ್ದ ಲಲನೆಯರೊಳುಸುರ್ದು ವೀರಾ

ದೇವಿಯೊಡನೆ ಆ ಸ್ಥಳಕ್ಕೆ ಅವಸರವಾಗಿ ಬಂದಳು. ವ|| ಆಗ ಅವಳೊಡನೆ ಸತಿಮೋಹಿಯ ಹೆಂಡತಿಯೂ, ಮಿತವಚನನ ಹೆಂಡತಿಯೂ ಹಿಂಬಾಲಿಸಿರಲು ಸಭಾ ಸ್ಥಳಕ್ಕೆ ಬಂದು ನಿಂತುಕೊಂಡು (ಆ ಎಲ್ಲ ತಲೆಗಳನ್ನೂ) ದಿಟ್ಟಿಸಿ ನೋಡುತ್ತಿರುವಷ್ಟರಲ್ಲಿ ೮೩. ಇಂದ್ರನೀಲಮಣಿಯಿಂದ ಮಾಡಿದ ನೆಲಗಟ್ಟಿನ ಪ್ರದೇಶನೆಂಬ ಸರೋವರಸ್ಥಾನ ದಲ್ಲಿರುವಂಥ, ಶಿವನಿಷ್ಠೆಯೆಂಬ ಸೂರ್ಯನ ಕಿರಣಗಳಿಂದ ಅರಳಿರುವಂಥ, ಶಿವಸಂಬಂಧವಾದ ಷಡಕ್ಷರಮಂತ್ರವೆಂಬ ಭ್ರಮರಗಳ ಧ್ವನಿಯ ಧ್ಯಾನದಿಂದ ರಮಣೀಯಗಳಾದಂಥ, ನಿರ್ಮಲವಾದ ಕಾಂತಿಯಿಂದ ಮನೋಹರವಾದಂಥ, ಸತ್ಯೇಂದ್ರಚೋಳನೇ ಮೊದಲಾದ ವರ ಪ್ರಕಾಶಮಾನಗಳಾದ ಶಿರಸ್ಸುಗಳೆಂಬ ಕಮಲಗಳು ನೇತ್ರಕ್ಕೆ ಅತಿರಮ್ಯವಾಗಿ ಕಾಣು ತ್ತಿದ್ದವು. ವ|| ಹಾಗೆ ಶೋಭಿಸುವ ಶಿರಸ್ಸುಗಳನ್ನು ಅಮೃತಮತಿದೇವಿಯು ಕಂಡು ೮೪ "ಮೃದುಧ್ವನಿಯಿಂದ ಕೂಡಿದ ಶಂಕರನ ತಲೆಯೊಂದನೆಯದು ; ಸ್ವಚ್ಛವಾದ ಕಮಲದೋಪಾದಿಯಲ್ಲಿರುವ ಮಂತ್ರಿಯ ಮುಖವೆರಡನೆಯದು ; ಸದ್ಗುಣಗಳಿಂದ ಭರಿತನಾದ ರಾಜಶೇಖರನ ಶಿರಸ್ಸು ಮೂರನೆಯದು ; ಕುಶಲದೊಡನೆ ಕೂಡಿದ ಸಂದಾಯಿಯ ವದನ ನಾಲ್ಕನೆಯದು ; ವಿಶಾಲವಾದ ತಿರುಕೋಳವಿನಾಚಿಯದು ಐದನೆಯದು ; ವೇದಾಂಗಗಳಾದ ಶಿಕ್ಷಾದಿ ಷಡಂಗಗಳನ್ನು ತಿಳಿದಿರುವ ರಾಜನ ಮುಖವಾರನೆಯದು ; ಷಡಕ್ಷರೀಮಂತ್ರಕ್ಕಾಶ್ರಯವಾದ ಮಿತವಚನನ ಮುಖವೇ ಏಳನೆಯದು. ಹೀಗೆ ಒಪ್ಪುತ್ತಿರುವ ಏಳು ಮುಖಗಳು ಶ್ರೇಷ್ಠವಾದ ವರ್ತನೆಯಿಂದ ಶೋಭಿಸುತ್ತಿವೆ." ವ|| ಈ ಪ್ರಕಾರವಾಗಿ ಅಮೃತಮತಿದೇವಿಯು ತನ್ನ ಸಮೀಪ ದಲ್ಲಿರುವ ಸ್ತ್ರೀಯರಿಗೆ ಹೇಳಿದಳು. ಆವಳು ವೀರಾವೇಶವನ್ನು ಹೊಂದಿ, ತೀಕ್ಷ್ಣವಾದ

ವೇಶಮಂ ಕೈಕೊಂಡು ಕರಾಳ ಕರವಾಳಮಂ ಕರತಳದಿಂದಡಸಿ ಪಿಡಿದಾಗಳಾ ಸರ್ವಮಂಗಳಾ ದೇವಿಯುಂ ಸಚಿವಪತ್ನಿಯುಂ ಮಿತವಚನನಂಗನೆಯುಂ ಅರಸಿಯಡಿದಳಿರ್ಗೆಱಗಿ ತಾಮುಮತಿ ನಿಶಿತಮಾದ ಖಡ್ಗಂಗಳಂ ಕರಾಗ್ರದೊಳ್ಪಿಡಿದು ತಮ್ಮ ತಮ್ಮನಿಯರ ಶಿರಂಗಳಿದಿರೊಳ್ನಿಂದು ಕಳೆಯೇೞ್ ಮಿಾೞ್

ಚಂ॥ ಹರಹರ ಬಣ್ಣಿಪಂಗರಿದು ತತ್ಸತಿಯರ್ಕಳ ವೀರವೃತ್ತಿಯಂ
ಕರತಳಖಡ್ಗಮಂ ಜಡಿದು ಜಾನಿಸಿ ಶೈಲಜೆಯಾಣ್ಮನಂ ನಿಜೇ
ಶ್ವರಶಿರಮೆಂಬ ಲಿಂಗಕೆ ಮುಖಾಂಬುಜದರ್ಚನೆಗೆಯ್ವೆಲೆಂದು ಬ
ತ್ತರಿಪವೊಲಾತ್ಮಕಂಧರಕಮರ್ಚುತೆ ಖಂಡಿಪ ತತ್ಕ್ಷಣಾರ್ಧದೊಳ್ ೮೫

ಛಂದೋವೃತ್ತ॥ ಇಂದುಖಂಡಮಹಿಕುಂಡಳಮುದ್ಯತ್ಸ್ವರ್ಣದಿ ಭಾಳವಿಲೋಚನಂ
ದಂದಶೂಕ ಪತಿಹಾರಮುದಾರಸ್ಮೇರಮುಖಂ ದ್ವಿರದಾಜಿನಂ
ಸುಂದರಾಂಗಮಸಿತದ್ಯುತಿಕಂಠಂ ಕಣ್ಗಿರದೀಯೆ ಬೆಡಂಗನಾ
ನಂದಿವಾಹನನಘಂ ನಿಜರೂಪಂ ತೋಱಿದನದ್ರಿಸುತಾಧವಂ ೮೬

ವ॥ ಆಗಳ್

ಚಂ॥ ಮೊಳಗುವ ದೇವದುಂದುಭಿರವಂ ಮೊಳಗಲ್ಲಿಳಿತರ್ಪ ದೇವಸಂ
ಕುಳದ ಕಿರೀಟರತ್ನರುಚಿ ಶಕ್ರಶರಾಸನಮಪ್ಸರೋವಧೂ
ವಿಳಸಿತ ಲೋಚನಾಂಶು ಸೆಳೆಮಿಂಚು ನಭಃಸ್ಥಳಮಭ್ರಮಾಗೆ ಕಾ
ರ್ಮುಳೆ ಸುರಿವಂತೆ ಸೂಸಿದುದು ಪೆರ್ಮಳೆ ದಿವ್ಯತರುಪ್ರಸೂನದಾ ೮೭

ಖಡ್ಗವನ್ನು ಕೈಯಲ್ಲಿ ಹಿಡಿದುಕೊಂಡಳು. ಆ ಸಮಯದಲ್ಲಿ ರಾಜಶೇಖರನ ಹೆಂಡತಿಯಾದ ಸರ್ವಮಂಗಳಾದೇವಿಯೂ, ಮಂತ್ರಿಯ ಹೆಂಡತಿಯೂ, ಮಿತವಚನನ ಹೆಂಡತಿಯೂ ರಾಣಿಯ ಪಾದಕ್ಕೆ ನಮಸ್ಕರಿಸಿ, ಅವರೂ ಕೂಡ ತೀಕ್ಷ್ಣವಾದ ಕತ್ತಿಯನ್ನು ಹಿಡಿದುಕೊಂಡು ತಮ್ಮ ತಮ್ಮ ಪತಿಗಳ ಶಿರಸ್ಸುಗಳ ಮುಂಭಾಗದಲ್ಲಿ ನಿಂತು ಸಂತೋಷ ವಿಶಿಷ್ಟರಾಗಿ, ೮೫. ಹರಹರ, ಆ ಪತಿವ್ರತಾಸ್ತ್ರೀಯರ ವೀರವೃತ್ತಿಯನ್ನು ವರ್ಣಿಸು ವವನಿಗೂ ತಿಳಿಯದು. ಹೇಗೆಂದರೆ ಹಸ್ತದಲ್ಲಿ ಕತ್ತಿಯನ್ನು ಹಿಡಿದುಕೊಂಡು, ಹೃದಯ ದಲ್ಲಿ ಪರಶಿವನನ್ನು ಧ್ಯಾನಿಸುತ್ತ, ತಮ್ಮ ತಮ್ಮ ಪತಿಗಳ ತಲೆಗಳೆಂಬ ಶಿವಲಿಂಗಗಳಿಗೆ ತಮ್ಮ ತಮ್ಮ ಮುಖಗಳೆಂಬ ಕಮಲಗಳಿಂದ ಪೂಜೆಯನ್ನು ಮಾಡಬೇಕೆಂಬ ರೀತಿಯನ್ನು ವಿಸ್ತರಿಸುವಹಾಗೆ ತಮ್ಮ ತಮ್ಮ ಕಂಠಗಳಿಗೆ ಕತ್ತಿಗಳನ್ನು ಸಂಬಂಧಿಸಿ ಕತ್ತರಿಸಿಕೊಳ್ಳಲು ಅನುವಾದರು. ಆಗ, ೮೬. ಚಂದ್ರಕಳೆ, ಸರ್ಪಕುಂಡಲ, ದೇವಗಂಗಾನದಿ, ಅಗ್ನಿನೇತ್ರ, ಆದಿಶೇಷನೆಂಬ ಹಾರ, ಮಂದಹಾಸವಿಶಿಷ್ಟವಾದ ಮುಖ, ಗಜಚರ್ಮ, ಸುಂದರವಾದ ಶರೀರ, ಕಪ್ಪುಗೊರಳು, ಇವು ನೋಡುವವರ ಕಣ್ಣುಗಳಿಗೆ ಸೊಗಸನ್ನುಂಟುಮಾಡುತ್ತಿರಲು, ಆ ನಂದಿವಾಹನನೂ, ಪಾಪರಹಿತನೂ ಆದ ಸದಾಶಿವನು ಪ್ರತ್ಯಕ್ಷನಾದನು. ವ॥ ಆಗ ೮೭. ದೇವತೆಗಳ ಭೇರಿವಾದ್ಯದ ಧ್ವನಿಯು ಮೇಘಧ್ವನಿಯಾಗಲು, ಇಳಿದುಬರುವ ದೇವತೆಗಳ ಕಿರೀಟದಲ್ಲಿರುವ ರತ್ನಗಳ ಕಾಂತಿಯು ಇಂದ್ರಧನುಸ್ಸಿನಂತಾಗಲು, ಅಪ್ಸರ

ಲಲಿತವೃತ್ತ॥ ಮಾರಜನಕಂ ವಿಪುಳಸಾರಸಭವಂ ದಿವಿಜವಾರವರನುಂ ದಹನನಾರವಿತನೂಜ
ಧೀರದಿತಿಜಂ ವಿನುತನೀರನಿಲಯಂ ಪೃಥುಸಮೀರನನಘಂ ಘನಕುಬೇರನನಲಾಕ್ಷಂ
ವೀರಗಣಮುಂ ಪ್ರಮಥಸಾರನಿವಹಂ ಸಮುದವಾರಣಮುಖಂ ನವಮಯೂರ
ಪತಿವಾಹಂ
ಸೇರಿ ನೆರೆದೊಪ್ಪಿರೆ ಕೃಪಾರಸಸಮುದ್ರನಗಜಾರಮಣನುಜ್ವಳಪುರಾರಿ ಮೆಱೆ
ದಿರ್ದಂ ೮೮

ವ॥ ಅಂತು ಮೆಱೆದು ನಿಜಕರಾಗ್ರದಿಂ ತತ್ಕರತಳ ಕರಾಳಖಡ್ಗಮಂ ಬಿಸುಟು

ಕಂ॥ ದರಹಾಸಪ್ರಭೆ ಸೂಸು
ತ್ತಿರೆ ಕರುಣಾಮೃತದ ತೆರೆಯಿದೆನೆ ಮೊಗದೊಳ್ಕಂ
ಕರನೆಱಗಿ ನಿಂದ ತನ್ನೃಪ
ನರಸಿಗೆ ನಿನ್ನಿಷ್ಟಮಾವುದದನೆಱೆಯೆಂದಂ ೮೯

ಎನಲೊಡನೆ ದೇವ ಪಂಚಾ
ನನ ಮುನ್ನಳಿದಂಗೆ ಪರಣಮಂ ಕರುಣಿಪುದೆಂ
ದೆನೆ ಮುಗುಳ್ದು ಮೆಚ್ಚಿದೆಂ ಬೇ
ಡೆನುತಿರ್ದಂ ಭಕ್ತವತ್ಸಲಂ ಕೃಪೆಯಿಂದಂ ೯೦

ಸ್ತ್ರೀಯರ ನೇತ್ರಕಾಂತಿಯೇ ಮಿಂಚಿನಂತಾಗಲು, ಅಂತರಿಕ್ಷವೇ ವರ್ಷಾಕಾಲದ ಮೋಡ ವಾಗಲು, ಮುಂಗಾರುಮಳೆ ಸುರಿಯುವ ಹಾಗೆ ಕಲ್ಪವೃಕ್ಷದ ಹೂವಿನ ಮಳೆ ಸುರಿಯಿತು. ೮೮. ವಿಷ್ಣು, ಬ್ರಹ್ಮ, ಇಂದ್ರ, ಅಗ್ನಿ, ಯಮ, ನೈಋತಿ, ವರುಣ, ವಾಯು, ಕುಬೇರ, ಈಶಾನ್ಯ ವೀರಪ್ರಮಥರು, ಶ್ರೇಷ್ಠರಾದ ಶರಣಸಮೂಹ, ವಿಘ್ನೇಶ್ವರ, ಷಣ್ಮುಖ ಇವರುಗಳು ಶಿವನ ಸಮೀಪದಲ್ಲಿ ಕೂಡಿ ಶೋಭಿಸುತ್ತಿರಲಾಗಿ, ದಯಾ ಸಮುದ್ರನೂ ಪಾರ್ವತಿಪತಿಯೂ ಆದ ಸದಾಶಿವನು ಪ್ರಕಾಶಿಸಿದನು. ವ॥ ಹೀಗೆ ಪ್ರಕಾಶಿಸಿ ತನ್ನ ಕೈಯಿಂದ ಆ ಸ್ತ್ರೀಯರು ಕಯ್ಯಲ್ಲಿ ಹಿಡಿದಿದ್ದ ತೀಕ್ಷ್ಣ ಖಡ್ಗಗಳನ್ನು ಕಿತ್ತು ಬಿಸುಟು ೮೯. ಶಿವನ ಮುಖದಲ್ಲಿ ಮಂದಹಾಸದ ಕಾಂತಿಯು ಕರುಣಾರಸದ ತೆರೆಯೋ ಎಂಬಂತೆ ಪ್ರಸರಿಸುತ್ತಿರಲು ಆ ಶಂಕರನ ಪಾದಕ್ಕೆ ನಮಸ್ಕರಿಸಿ ನಿಂತುಕೊಂಡಿರುವ ಅಮೃತಮತಿದೇವಿಯನ್ನು ಕುರಿತು "ನಿನ್ನ ಮನೋರಥವೇನು ? ಹೇಳೆಂದನು" ೯೦. ಪರಮೇಶ್ವರನು ಹೀಗೆ ಕೇಳಿದ ಕೂಡಲೆ ರಾಣಿಯು "ಹೇ ಪರಮೇಶ್ವರ, ಮೊದಲು ಸತ್ತ ಶಂಕರನಿಗೆ ಪ್ರಾಣವನ್ನು ಕೊಡುವುದೆಂದು ಹೇಳಲಾಗಿ, ಭಕ್ತವತ್ಸಲನಾದ ಪರಮೇಶ್ವರನು ದಯೆಯಿಂದೊಪ್ಪಿದನು. ಶಿವನು ಮತ್ತೂ ಏನುಬೇಕೆಂದು ಕೇಳಿದನು.

ವ॥ ಎಂದಭವವನಮೋಘವಚನಮುಂ ಕೇಳ್ದು

ಕಂ॥ ತಿರುಕೊಳವಿನಾಚಿಗಂ ಶಂ
ಕರ ಕರುಣೆಪುದಸುವನಾದೊಡೆನೆ ಮಚ್ಚಿ ಮಹೇ
ಶ್ವರನಬಳೆ ನೀನೆಣಿಪುದೀ
ಶಿರಂಗಳಂ ಕ್ರಮದಿನೆಂದು ಬೆಸಸಿದನಾಗಳ್ ೯೧

ವ॥ ಎನೆ ಮಹಾಪ್ರಸಾದಮೆಂದದಂ ಮನದೆಗೊಂಡಾ ಶಿರಂಗಳಂ ಪದೆದುನೋಡಿ

ಕಂ॥ ಅರಸಿ ನಿಜಾಂಗುಲಿಯಿಂದೊಂ
ದೆರಡುಂ ಮೂಱುಂ ನಾಲ್ಕುಮೈದಾಱೇಳಿಂ
ದಿರದೆಣಪುದುಮಾಗಳೆ ನಿಜ
ಶಿರಂಗಳೇಳ್ದಂಗದೊಂದುಗೂಡಿದುವಾಗಳ್ ೯೨

ಜಯರವಮುಂ ಸುರವರಭೇ
ರಿಯ ರವಮುಂ ಶರಣಜನದುಘೋರವಮುಂ ವಿ
ಸ್ಮಯಕರ ಸುರಕುಜಸುಮವೃ
ಷ್ಟಿಯ ರವಮುಂ ದೆಸೆಯನಳುರ್ದದೇಂ ಮುಸುಕಿದುದೋ ೯೩

ಚಂ॥ ಬಲವರಲಾಟಿಸುತ್ತಿರೆ ಪದಂ ಪದಪಿಂ ನಡೆನೋಡಲೆಂದು ಕ
ಣ್ಮಲರೆಳಸುತ್ತೆ ಬಿರ್ಚಿರೆ ಕರಂ ಕರಮರ್ಚಿಸಲೇದು ನಾಟಕಂ
ನಲಿಯೆ ರಸಜ್ಞೆ ಕೀರ್ತಿಸಲೊಡರ್ಚಿರೆ ಚಚ್ಚರಮಚ್ಚಿಗಂ ಪೊದ
ಳ್ದಲರೆ ಸಮಾನ ಮಾನಸರದೇನೆಸೆದಿರ್ದರೊ ಭೂಭುಜಾದಿಗಳ್ ೯೪

ವ|| ಶಿವನ ಅಮೋಘವಾದ ಆ ಮಾತನ್ನು ಕೇಳಿ ೯೧. ಶಿವನೇ ತಿರುಕೊಳವಿನಾಚಿಗೂ ಕೂಡ ಪ್ರಾಣವನ್ನು ಕೊಡುವುದೆಂದು ರಾಣಿಯು ಕೇಳಲಾಗಿ, ಪರಮೇಶ್ವರನು ಚೆನ್ನಾಗಿ ಮೆಚ್ಚಿ, "ಅಮ್ಮಾ, ನೀನು ಈ ತಲೆಗಳನ್ನು ಕ್ರಮವಾಗಿ ಎಣಿಕೆಮಾಡೆಂದು" ಆ ಸಮಯದಲ್ಲಿ ನಿರೂಪಿಸಿದನು. ವ|| ಹೀಗೆಂದು ಶಿವನು ಹೇಳಲು ಮಹಾಪ್ರಸಾದವೆಂದು ಅದನ್ನು ಅಂಗೀಕರಿಸಿ ಆ ತಲೆಗಳನ್ನು ಪ್ರೀತಿಯಿಂದ ನೋಡಿ, ೯೨. ಅಮೃತಮತಿದೇವಿಯು ತನ್ನ ಬೆರಳಿನಿಂದ ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು ಎಂದು ಗಣನೆ ಮಾಡಿದೊಡನೆಯೇ ತಲೆಗಳು ಎದ್ದು ತಮ್ಮ ತಮ್ಮ ಶರೀರದಲ್ಲಿ ಕೂಡಿಕೊಂಡವು. ಆ ಸಮಯದಲ್ಲಿ ೯೩. ಜಯಜಯಧ್ವನಿಯೂ, ದೇವದುಂಭಿಯ ಘೋಷವೂ, ಪ್ರಮಥರುಗಳ ಉಘೇ ಎಂಬ ನಾದವೂ, ಕಲ್ಪವೃಕ್ಷದ ಪುಷ್ಪವೃಷ್ಟಿಯ ಶಬ್ದವೂ ದಿಕ್ಕುಗಳನ್ನು ಅಲೆದು ಸರ್ವತ್ರ ವ್ಯಾಪಿಸಿತು. ೯೪. ಕಾಲುಗಳು ಶಿವನನ್ನು ಪ್ರದಕ್ಷಿಣೆಮಾಡುವುದಕ್ಕೆ ತ್ವರೆಪಡುತ್ತಿದ್ದವು. ಈಶ್ವರನ ದರ್ಶನವನ್ನು ಮಾಡಿಕೊಳ್ಳಬೇಕೆಂಬ ಪ್ರೀತಿಯಿಂದ ನೇತ್ರಗಳು ತೆರೆಯುತ್ತಿದ್ದವು. ಸಾಂಬನನ್ನು ಪೂಜಿಸಬೇಕೆಂದು ಹಸ್ತಗಳು ಮುಂದುವರಿಯುತ್ತಿದ್ದವು. ನಾಲಿಗೆಯು ಶಂಕರನನ್ನು ಸ್ತೋತ್ರಮಾಡಲು ಉದ್ಯುಕ್ತವಾಗುತ್ತಿತ್ತು. ತೀವ್ರ

ವ॥ ಅಂತೆಸೆಯುತ್ತುಮಿರ್ದು ಕಟ್ಟಿದಿರೊಳೆಸೆವಿಷ್ಟಪ್ರದನೆನಿಪ್ಪಷ್ಟಮೂರ್ತಿಯ ವಿಮಳ ಮೂರ್ತಿಯನಾನಂದಬಾಷ್ಪಬಿಂದು ಮಂಜರೀಮಂಜುಳಾಕ್ಷಿಗಳಿನವರಭೀಕ್ಷಿಪಾಗಳ್

ಚಂ॥ ಜಡೆಮುಡಿ ತಾಳ್ದ ಗಂಗೆ ಪಣೆಗಣ್ಪಣಿಕುಂಡಳವಿಂದುಲೇಖೆ ಚೆ
ಲ್ವಿಡಿದೆಸೆವೈಮೊಗಂ ಕಜಿಗೊರಲ್ಕರಿಕೃತ್ತಿ ಮೃಗಾರಿಚರ್ಮದೊ
ಳ್ಪುಡೆ ತಿಸುಳಂ ಕರೋಟಿ ದಶಬಾಹು ಮುರಾಂತಕನಕ್ಷಿ ತಳ್ತ ಮೆ
ಲ್ಲಡಿಯೊಡಲರ್ಧದದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ ೯೫

ವ॥ ಅಂತಿದಿರೊಳೆಸೆವ ಮದನ ಮದದ್ವಿರದ ಬಿದುವಿದಳನ ವಿಳಾಸ ಪಂಚಾಸ್ಯನಂ ಪಂಚಾಸ್ಯನನವಂಚಿತ ಪಂಚಾಕ್ಷರೀಪ್ರಭಾವಪ್ರಭಾವಲ್ಲಭಪ್ರಭರ್ಭಾವಂಬೆರಸುಮಾ ಮಹಾನು ಭಾವರ್ಭಕ್ತಿರಸವಿಸರವಿಲುಳಿತ ಲಲಿತಹೃದಯಾರವಿಂದರಾಗಿ ದಂಡಪ್ರಣಾಮಂಗೈದು ನುತಿಸುತ್ತು ಮಿರ್ಪಾಗಳ್

ಮ॥ ಜನತಾಪಾಪಹಪಾದನೂರ್ಜಿತ ಕಳಾಪೂರ್ಣಂ ಮನೋಜಾತಿರಂ
ಜನದಿವ್ಯಾಂಗನನಂತಕಾಂತನಿದಿರೊಳ್ಕಾನೊಪ್ಪೆ ಸೋಮಂ ನರೇಂ
ದ್ರನ ಕಣ್ಣೈದಿಲರಲ್ವುದುಂ ಮುಗಿವುದುಂ ಹಸ್ತಾಬ್ಜಮೇಂ ಚಿತ್ರಮಾ
ತನ ಹೃದ್ವಕ್ತ್ರಸರೋಜಮೊಲ್ದಲರ್ದುದಾಶ್ಚರ್ಯಾವಹಂ ಭಾವಿಸಲ್ ೯೬

ವಾಗಿ ಆನಂದವು ವೃದ್ಧಿಗೊಳ್ಳುತ್ತಿತ್ತು. ಸಮಾನ ಮಾನಸವನ್ನು ಹೊಂದಿದ್ದ ಭೂಪತಿ ಯಾದ ಸತ್ಯೇಂದ್ರಚೋಳನೇ ಮೊದಲಾದವರು ಅದೇನು ಶೋಭಿಸಿದರೊ! ವ॥ ಆ ಪ್ರಕಾರ ವಾಗಿ ಶೋಭಿಸುತ್ತಿದ್ದು ಮುಂದುಗಡೆಯಲ್ಲಿ ಪ್ರಕಾಶಿಸುವ ಇಷ್ಟಾರ್ಥಪ್ರದನಾದ ಅಷ್ಟ ತನುಗಳ ಪರಮೇಶ್ವರನ ಪವಿತ್ರಮೂರ್ತಿಯನ್ನು ಸುರಿಯುವ ಆನಂದಬಾಷ್ಪಗಳ ಸಾಲುಗಳಿಂದ ಮನೋಹರವಾದ ಕಣ್ಣುಗಳಿಂದ ನೋಡುತ್ತಿದ್ದಾಗ, ೯೫. ಜಟಾಜೂಟ, ಅದರಲ್ಲಿ ಧರಿಸಿದ ಗಂಗೆ, ಹಣೆಯಲ್ಲಿ ಅಗ್ನಿನೇತ್ರ, ಕಿವಿಯಲ್ಲಿ ಸರ್ಪಕುಂಡಲ, ತಲೆಯಲ್ಲಿ ಚಂದ್ರಕಳೆ, ಪಂಚಮುಖಗಳು, ಕಪ್ಪುಗೊರಳು, ಗಜಚರ್ಮದ ಉತ್ತರೀಯ, ವ್ಯಾಘ್ರ ಚರ್ಮದ ಉಡಿಗೆ, ತ್ರಿಶೂಲ, ಬ್ರಹ್ಮಕಪಾಲ, ದಶಭುಜ, ನಾರಾಯಣನ ನೇತ್ರವನ್ನುಳ್ಳ ಪಾದ, ಅರ್ಧಾಂಗಿಯಾದ ಪಾರ್ವತಿ, ಇವರುಗಳಿಂದ ಸದಾಶಿವನು ಪ್ರಕಾಶಿಸುತ್ತಿದ್ದನು. ವ॥ ಆ ಪ್ರಕಾರವಾಗಿ ಮುಂಭಾಗದಲ್ಲಿ ಮನ್ಮಥನ ಗರ್ವವೆಂಬ ಮದ್ದಾನೆಯ ಕುಂಭ ಸ್ಥಳವನ್ನು ಸೀಳುವಿಕೆಯೆಂಬ ವಿಳಾಸಕ್ಕೆ ಸಿಂಹಪ್ರಾಯನಾದ ಪಂಚಮುಖದ ಪರಮೇಶ್ವರ ನನ್ನು ಜಪಿಸುವ ಪಂಚಾಕ್ಷರೀಮಂತ್ರದಿಂದ ಪ್ರಭಾವಶಾಲಿಗಳಾದ, ಸೂರ್ಯನ ತೇಜಸ್ಸಿ ನಂತೆ ತೇಜಸ್ಸುಳ್ಳವರಾದಂಥ ಆ ಮಹಾನುಭಾವರಾದ ಸತ್ಯೇಂದ್ರಚೋಳ ರಾಜಶೇಖರನೇ ಮೊದಲಾದವರುಗಳು ಸಾತ್ವಿಕಭಾವದಿಂದ ಕೂಡಿದವರಾಗಿ, ಭಕ್ತಿಯೆಂಬ ರಸದ ಸಮೂಹದಿಂದ ವ್ಯಾಪ್ತಿಗೊಂಡ ಮನೋಹರ ಹೃದಯಕಮಲವುಳ್ಳವರಾಗಿ, ದೀರ್ಘದಂಡ ಪ್ರಣಾಮವನ್ನು ಮಾಡಿ, ಸ್ತೋತ್ರ ಮಾಡುತ್ತಿದ್ದರು. ೯೬. ಸಮಸ್ತ ಜನಸಮೂಹದ ಪಾಪವನ್ನು ಹೋಗಲಾಡಿಸುವ ಚರಣಗಳನ್ನುಳ್ಳ, (ಜನರ ತಾಪವನ್ನು ಪರಿಹಾರ ಮಾಡುವ ಶೀತಕಿರಣಗಳನ್ನುಳ್ಳಂಥ), ಪೂರ್ಣವಾದ ಜ್ಞಾನದಿಂದ ತುಂಬಿರುವಂಥ

ವ॥, ಎಂದಲ್ಲಿ ನೆರೆದ ವಿಬುಧರ್ ನುತಿಸುತ್ತಿರ್ಪನ್ನೆಗಂ

ಮ॥ ಪಿರಿದುತ್ಸಾಹದೆ ನೋಡಿಯುಂ ಗಿರಿಶನಂ ಕೊಂಡಾಡಿಯುಂ ಪಾಡಿಯುಂ
ಚರಣಾಂಭೋಜಕೆ ಮತ್ತೆ ಮತ್ತೆಱಗಿಯುಂ ರಾಗಾಕುಳಂ ಚಿತ್ತಮೊಂ
ದಿರೆ ಪೂರ್ಣೋತ್ಸವಮೈದಿಯುಂ ತಡೆದುದಿಲ್ಲೇನೆಂಬೆನುದ್ಯತ್ಕಳೇ
ವರ ವಿಸ್ಫೂರ್ಜಿತ ಸಾತ್ವಿಕಂ ಗುಣನಿಧಿ ಶ್ರೀಚೋಳಭೂಪಾಲಕಂ ೯೭

ಕಂ॥ ಶ್ರೀ ರಾಜಶೇಖರಾಖ್ಯಕು
ಮಾರಂ ನಿಜಮೌಳಿಮಣಿರುಚಿಪ್ರಸವದಿನಂ
ದಾ ರಾಜಶೇಖರಾಂಘ್ರಿಸ
ರೋರುಹಮಂ ಪೂಜೆಗೆಯ್ದು ನುತಿಸಿದನೊಲವಿಂ ೯೮

(ಅಖಂಡವಾದ ಹದಿನಾರು ಕಲೆಗಳಿಂದ ತುಂಬಿರುವಂಥ), ಮನ್ಮಥನ ಹಾಗೆ ಮನೋಹರವಾದ ದಿವ್ಯ ಶರೀರವುಳ್ಳ (ಮನ್ಮಥನಿಗೆ ಸಂತೋಷಕರವಾದ ಪ್ರಕಾಶಮಾನ ದೇಹವನ್ನುಳ್ಳ), ಸರ್ಪಾಭರಣದಿಂದ ರಮಣೀಯನಾದಂಥ (ಅಂತರಿಕ್ಷದಲ್ಲಿ ರಮಣೀಯನಾಗಿರುವ) ಉಮಾಸಹಿತನಾದ ಶಿವನು (ಚಂದ್ರನು), ತಾನು ಮುಂದುಗಡೆಯಲ್ಲಿ ಶೋಭಿಸುತ್ತಿರಲಾಗಿ, ಸತ್ಯೇಂದ್ರಚೋಳಮಹಾರಾಜನ ನೇತ್ರವೆಂಬ ನೀಲೋತ್ಪಲವು ವಿಕಸಿತವಾಯಿತು, ಹಸ್ತಗಳೆಂಬ ಕಮಲವು ಮುಕುಳಿತವಾಯಿತು. ಇದೇನು ಆಶ್ಚರ್ಯವಲ್ಲ. ರಾಜನ ಹೃದಯ ಮುಖಗಳೆಂಬ ಕಮಲಗಳು ಪ್ರೀತಿಯಿಂದ ಅರಳಿದುವು. ಯೋಚಿಸಲಾಗಿ ಇದು ಆಶ್ಚರ್ಯವನ್ನುಂಟುಮಾಡುವಂತಹುದು. (ಏಕೆಂದರೆ ಚಂದ್ರನು ಉದಯವಾದಾಗ ಕಮಲವು ಮುಕುಳಿತವಾಗಬೇಕು. ಇಲ್ಲಿ ಅವನ ಮುಖ ಮತ್ತು ಹೃದಯಗಳೆಂಬ ಕಮಲಗಳು ಚಂದ್ರೋದಯವಾದಾಗಲೂ ಅರಳಿದುವು. ಇದೇ ಆಶ್ಚರ್ಯವನ್ನುಂಟುಮಾಡುವಂತಹುದು. ವ॥ ಹೀಗೆಂದು ಅಲ್ಲಿ ನೆರೆದ ವಿದ್ವಾಂಸರು ಸ್ತುತಿಮಾಡುತ್ತಿರಲಾಗಿ, ೯೭. ಶರೀರದಲ್ಲುತ್ಪನ್ನವಾದ ಆನಂದಬಾಷ್ಪ ಪುಳಕ, ಗದ್ಗದ ಧ್ವನಿಯೇ ಮೊದಲಾದ ಸಾತ್ವಿಕಭಾವಗಳಿಂದ ಕೂಡಿದ ಸದ್ಗುಣಗಳಿಗೆ ಆಶ್ರಯಭೂತನಾದ ಸತ್ಯೇಂದ್ರಚೋಳನು ಶಿವನನ್ನು ಅತಿ ಸಂತೋಷದಿಂದ ಎಷ್ಟು ನೋಡಿದರೂ, ಹೊಗಳಿದರೂ, ಕೀರ್ತಿಸಿದರೂ, ಪುನಃ ಪುನಃ ಪಾದಗಳಿಗೆ ನಮಸ್ಕಾರ ಮಾಡಿದರೂ, ಮನಸ್ಸು ಅನುರಾಗದಿಂದ ತುಂಬಿದ್ದರೂ, ಹೆಚ್ಚು ಸಂತೋಷ ಹೊಂದಿದರೂ ಮತ್ತೂ ದರ್ಶನಾದಿಗಳನ್ನು ಮಾಡಬೇಕೆಂಬ ಬಯಕೆಯುಂಟಾಗುತ್ತಿತ್ತೇ ವಿನಾ ಸಾಕೆಂಬ ಬುದ್ಧಿಯನ್ನು ಹೊಂದಲಿಲ್ಲ. ಏನೆಂಬುಹೇಳಲಿ ! ೯೮. ಆಗ ಆ ರಾಜಶೇಖರನು ತನ್ನ ಕಿರೀಟದಲ್ಲಿರುವ ರತ್ನಗಳ ಕಾಂತಿಯೆಂಬ ಪುಷ್ಪದಿಂದ ಶಿವನ ಪಾದವನ್ನು ಪೂಜಿಸಿ, ಅಂದರೆ ನಮಸ್ಕಾರ ಮಾಡಿ ಪ್ರೀತಿಯಿಂದ ಸ್ತೋತ್ರಮಾಡಿದನು.

ವ॥ ಅದೆಂತೆನೆ

ಚಂ॥ ಪುರಹರ ಪೂರ್ಣರೂಪ ಪುರುಪೋತ್ತಮವಂದ್ಯ ಪುರಂದರಾರ್ಚ್ಯ ಪು
ಷ್ಕರ ಸರಿದುತ್ತಮಾಂಗ ಪರಮೇಶ್ವರ ಪನ್ನಗಭೂಪ ಪಾರ್ವತೀ
ವರ ಶರಣಾಗತಪ್ರಕರರಕ್ಷಕ ಶಂಕರ ಶರ್ವರೀಶಶೇ
ಖರ ಜಯ ದೇವದೇವ ಜಗತೀಧರಮಂದಿರ ಮಂಗಳೋದಯಾ ೯೯

ವ॥ ಎಂದು ಪೊಗಳ್ದು ಮಗುಳ್ದೆಱಗಿ ನಿಂದು

ಕಂ॥ ಚರಣನಖ ಮಣಿಮುಕುರದೊ
ಳ್ನರಪತಿ ಮಾರ್ಪೊಳೆದು ತೋಱಿದಂ ಕೈಲಾಸ
ಸ್ಥಿರತೆಗಿದಗ್ಗಳಮೆನುತಂ
ತರಿಪಂ ಮಿಗೆ ನೆಲಸಿದಂತಿರಾ ಶಶಿಧರನಾ ೧೦೦

ವ॥ ಆಗಳ್

ಮ॥ಸ್ರ॥ ವಿಳಸನ್ನೇತ್ರಂಗಳಿಂದೀಕ್ಷಿಸಿದನಮಮ ಸತ್ಪ್ರೇಮಮಂ ಬೀಱಿದಂ ಮಂ
ಜುಳ ಬಾಹಾಮಂಡಳಂ ತಳ್ತಿರೆ ಮಿಗೆ ಬಿಗಿದೊಲ್ದಪ್ಪಿದಂ ಕಂದ ಬಾರೆಂ
ದೆಳಸುತ್ತಂ ಮತ್ತೆ ಮನ್ಮಂತ್ರದ ಮಹಿಮೆಯನೀತಾವನೈ ತೋರ್ದನುರ್ವೀ
ತಳದೊಳ್ಪೇಳೆಂದು ನಂದೀಶನೊಳೆ ಪೊಗಳ್ದಾನಂದದಿಂದದ್ರಿಜೇಶಂ ೧೦೧

ವ॥ ಅದು ಹೇಗೆಂದರೆ, ೯೯. "ತ್ರಿಪುರಹರನೇ, ಪರಿಪೂರ್ಣನೇ, ವಿಷ್ಣುವಿನಿಂದ ವಂದಿಸಿಕೊಂಡವನೇ, ದೇವೇಂದ್ರನಿಂದ ಅರ್ಚಿಸಿಕೊಂಡವನೇ, ದೇವಗಂಗಾನದಿಯನ್ನು ಶಿರಸ್ಸಿನಲ್ಲಿ ಧರಿಸಿದವನೇ, ಪರಮೇಶ್ವರನೇ, ಸರ್ಪಭೂಷಣನೇ, ಪಾರ್ವತೀಪತಿಯೇ, ಶರಣಾಗತರಾದ ಜನಸಮೂಹವನ್ನು ರಕ್ಷಿಸುವವನೇ, ಸುಖವನ್ನುಂಟುಮಾಡುವವನೇ, ಚಂದ್ರಧರನೇ, ದೇವದೇವೋತ್ತಮನೇ, ಕೈಲಾಸಗಿರಿಯೇ ಮಂದಿರವಾಗಿ ಉಳ್ಳವನೇ, ಹೇ ಮಂಗಳೋದಯ, ನಿನಗೆ ಜಯ ಜಯ" ವ॥ ಎಂದು ಹೊಗಳಿ ಹೊಗಳಿ ಪುನಃ ನಮಸ್ಕರಿಸಿ, ೧೦೦. ಆ ಪರಮೇಶ್ವರನ ಪಾದದ ನಖಗಳೆಂಬ ರತ್ನಖಚಿತವಾದ ಕನ್ನಡಿಯಲ್ಲಿ ರಾಜನು ಕೈಲಾಸದಲ್ಲಿ ನೆಲೆಸುವುದಕ್ಕಿಂತಲೂ ಶಿವನ ಪಾದಗಳಲ್ಲಿ ನೆಲೆಸುವುದು ಶ್ರೇಷ್ಠವೆಂದು ಗುರುತುಮಾಡಿದ ಹಾಗೆ ಪ್ರತಿಬಿಂಬಿಸಿ ಕಾಣಿಸಿದನು. ವ॥ ಆಗ ೧೦೧. ಪಾರ್ವತೀಪತಿಯಾದ ಪರಮೇಶ್ವರನು ತೆರೆದ ನೇತ್ರಗಳಿಂದ ನೋಡಿದನು. ಅಮಮ ! ಇದು ಆಶ್ಚರ್ಯವು ! ಸತ್ಪ್ರೇಮವನ್ನು ಆ ರಾಜಶೇಖರನಲ್ಲಿ ತೋರಿಸುತ್ತ, ತನ್ನ ಕೋಮಲವಾದ ಬಾಹುಗಳಿಂದ ಬಾಚಿ ತಬ್ಬಿ "ಎಲೈ ಪುತ್ರನೇ, ಬಾ"ರೆಂದು ಪ್ರೀತಿಯಿಂದ ತಬ್ಬಿಕೊಂಡನು. "ಭೂಮಿಯಲ್ಲಿ ನನ್ನ ಷಡಕ್ಷರಾತ್ಮಕವಾದ ಮಂತ್ರದ ಮಹಿಮೆಯನ್ನು ಈ ಪ್ರಕಾರ ಇವನ ಹಾಗೆ ತೋರಿದವನು ಯಾವನಿದ್ದಾನೆ?" ಹೀಗೆ ನಂದೀಶ್ವರನಲ್ಲಿ

ವ॥ ಎಂದು ಮತ್ತಮಿರದೆ

ಕಂ॥ ಷ್ಕಂದನುಪಮನ್ಯುಮುನಿ ಸಾ
ನಂದ ಶತಾನಂದ ಮುರುಘರೀ ಧರಣೀಭೃ
ನ್ನಂದನನಿವರರುವರ್ಸ್ಯೈ
ಪೊಂದಿದ ಪರತರ ಷಡಕ್ಷರಾತ್ಮಕರಲ್ತೇ ೧೦೨

ವ॥ ಅಂತುಮಲ್ಲದೆಯುಂ

ಮ॥ಸ್ರ॥ ಇವನೇ ಸತ್ಯೇಂದ್ರನಪ್ಪಂ ಬಗೆವೊಡಮುಮ ಸತ್ಯೇಂದ್ರಚೋಳೋರ್ವಿಪಂ ಮ
ತ್ತಿವನೇ ಸನ್ಮಂತ್ರಲಕ್ಷಂ ನಿಜದಿನರರೆ ಸನ್ಮಂತ್ರಲಕ್ಷಂ ಬಳಿಕ್ಕಿಂ
ತಿವನೇ ನೋಳ್ಪಾಗಳಾಹಾ ಮಿತವಚನನಿವಂ ತಪ್ಪದೇತಪ್ಪೊಡಂ ಕೇ
ಳಿವನೇ ಸನ್ಮಂತ್ರಿನಾಥಂಗತಿಹಿತನೆನುತಂ ಶಂಕರಂ ನಂದಿಗೆಂದಂ ೧೦೩

ಹೇಳುತ್ತ ಸಂತೋಷದಿಂದ ರಾಜಶೇಖರನನ್ನು ಶ್ಲಾಘಿಸಿದನು. ವ|| ಹೀಗೆಂದು ಶ್ಲಾಘಿಸಿ ಪುನಃ, ೧೦೨. ಷಣ್ಮುಖ, ಉಪಮನ್ಯುಮುನಿ, ಸಾನಂದ, ಶತಾನಂದ, ಮುರುಘ ಮತ್ತು ಈ ರಾಜಶೇಖರ, ಈ ಆರು ಜನರು ಪುಣ್ಯಪ್ರದವಾದಂಥ ಶ್ರೇಷ್ಠವಾದ ಷಡಕ್ಷರಾತ್ಮಕವಾದ ಮಂತ್ರಸ್ವರೂಪರಲ್ಲವೆ ! ವ|| ಹಾಗೂ ಅಲ್ಲದೆ, ೧೦೩. (ಮಗ ನೆಂಬ ದಾಕ್ಷಿಣ್ಯವನ್ನಿಡದೆ ಸತ್ಯದ ಮೇಲೆ ದೃಷ್ಟಿಯಿಟ್ಟು, ಅಪರಾಧಿಯಾದ ಮಗನ ತಲೆಯನ್ನೇ ತೆಗೆಸಿದುದರಿಂದ) ಸತ್ಯೇಂದ್ರಚೋಳನೆಂಬ ಹೆಸರು ಇವನಿಗೆ ಮಾತ್ರ ಸಲ್ಲು ವುದು. ಚಿದ್ಘನಶಿವಾಚಾರ್ಯರಿಂದ ಉಪದೇಶಿಸಲ್ಪಟ್ಟ ಪಂಚಾಕ್ಷರೀಮಂತ್ರದಲ್ಲಿಯೇ ಲಕ್ಷ್ಯವಿಟ್ಟು ಶಿರಶ್ಛೇದನವಾದರೂ, ಪಂಚಾಕ್ಷರೀಮಂತ್ರಜಪವನ್ನು ಬಿಡದವನಾದುದ ರಿಂದ ಈ ರಾಜಶೇಖರನಿಗೆ ಮಾತ್ರ ಮಂತ್ರಲಕ್ಷನೆಂಬ ಹೆಸರು ಯೋಗ್ಯವಾಗಿರುವುದು. ತಾನು ಮೊದಲು ಈ ರಾಜಶೇಖರನಿಗೆ ಈ ಹೊಸ ಕುದುರೆಯನ್ನು ಏರಿಹೋಗುವುದು ವಿಹಿತವಲ್ಲವೆಂದು ಎಷ್ಟೇ ಹೇಳಿದರೂ ಕೇಳದೆ ನಿನಗಾದ ತಪ್ಪು ನನ್ನದೆಂದು ರಾಜಶೇಖರನು ಹೇಳಿದನೆಂಬ ಮಾತುಗಳನ್ನಾಡದೆ, ನನ್ನ ಕುದುರೆಯು ಶಂಕರನನ್ನು ತುಳಿಯಿತೆಂದು ಫಲಿತಾಂಶದ ಮಾತುಗಳನ್ನಾಡಿದುದರಿಂದ ಇವನಿಗೆ ಮಾತ್ರ ಮಿತವಚನನೆಂಬ ನಾಮ ಧೇಯವು ಒಪ್ಪುತ್ತದೆ. ಸ್ವಕಾರ್ಯದ ಮೇಲೆ ದೃಷ್ಟಿಯಿಲ್ಲದೆ ಸ್ವಾಮಿಯಾದ ಸತ್ಯೇಂದ್ರ ಚೋಳನಿಗೆ ಹಿತವಾದ ಕಾರ್ಯವನ್ನೇ ಮಾಡುತ್ತ ಇದ್ದು ಕಡೆಗೆ ಸ್ವಾಮಿಪುತ್ರನನ್ನು ಕೊಲ್ಲಿಸಬೇಕಾಯಿತಲ್ಲಾ ! ಎಂದು ಚಿಂತೆಯಿಂದ ಮೊದಲೇ ತಾನು ಶಿರಶ್ಛೇದನವನ್ನು ಮಾಡಿಕೊಂಡ ಈ ಮಂತ್ರಿಗೆ ಪತಿಮೋಹಿಯೆಂಬ ಹೆಸರು ಸಾರ್ಥಕವಾಗಿದೆ ಎಂದು

ವ॥ ಮತ್ತಮಲ್ಲಿ

ಉ॥ ಅಂಬಿಕೆ ಸಂಭ್ರಮಂ ಮಿಗೆ ಪದಕ್ಕೆಱಗಿರ್ದ ನರೇಂದ್ರಕಾಂತೆಯಂ
ತಾಂ ಬಿಗಿದಪ್ಪಿ ತತ್ಸ್ನುತ ಸತೀಮುಖರಂ ಕೃಪೆಯಿಂದ ನೋಡಿ ಹ
ಸ್ತಾಂಬುಜದಿಂದೆ ಮೆಯ್ದಡವಿ ಪೇಣ್ದಪರಸುತ್ತಿವರಂತೆ ಶಂಭುವಂ
ನಂಬಿದರಾರೆನುತ್ತೆ ಪೊಗಳ್ದಳ್ಕಮಳಾಮುಖ ಶಕ್ತಿಬೃಂದದೊಳ್ ೧೦೪

ಕಂ॥ ಕರಿಮುಖನಿದು ಪೊಸತೆಂದಂ
ಶರಜನ್ಮಂ ಚಿತ್ರನೆಂದನಮರರ್ಷಿಗಿದ
ಚ್ಚರಿಯೆಂದರ್ಸುರರಮುನಿಗ
ಳ್ಕರಮರಿದರಿದೆಂದರವರ ಚರಿತಮನಾಗಳ್ ೧೦೫

ವ॥ ಅಂತು ಸಮಸ್ತ ಪ್ರಶಸ್ತ ಪ್ರಮಥ ರುದ್ರಭಕ್ತ ಮಹಾಗಣಮಗಣಿತೋತ್ಸವಂ ಮಿಗೆ ಪೊಗಳುತ್ತುಮಿರೆಯಿರೆ

ಮ॥ಸ್ರ॥ ಜವದಿಂದೇಳ್ತಂದುಮೀಶಂ ಬೆಸಸಲೊಡನೆ ಬಾನತ್ತಣಿಂ ಭಾನುಭಾನು
ಪ್ರವಿರಾಜದ್ಭರ್ಮ ಚಂಚತ್ಕಳಶ ವಿಳಸಿತಂಗಳ್ಮಣಿಶ್ರೇಣಿಮಾಲಾ
ನಿವಹಂಗಳ್ಮಂಗಳಾಲಂಕರಣ ಶತಯುತಂಗಳ್ಪತಾಕಾನ್ವಿತಂಗ
ಳ್ದಿವಿಜಕ್ಷ್ಮಾಜಪ್ರಸೂನಪ್ರಸರ ಸರಯುತಂಗಳ್ಮಹಾ ಪುಷ್ಪಕಂಗಳ್ ೧೦೬

ಪರಶಿವನು ನಂದೀಶ್ವರನನ್ನು ಕುರಿತು ಹೇಳಿದನು. ವ|| ಮತ್ತು ಅಲ್ಲಿ, ೧೦೪. ಪಾರ್ವತಿಯು ಚರಣಗಳಿಗೆ ನಮಸ್ಕರಿಸಿದ ರಾಣಿಯನ್ನು ತಬ್ಬಿಕೊಂಡು ಸರ್ವಮಂಗಳಾ ದೇವಿಯೇ ಮೊದಲಾದ ಸ್ತ್ರೀಯರನ್ನು ಕೃಪೆಯಿಂದ ನೋಡಿ, ಹಸ್ತಕಮಲಗಳಿಂದ ಮೈಯನ್ನು ಸವರಿ ಆಶೀರ್ವದಿಸುತ್ತ, ಇವರ ಹಾಗೆ ಶಿವನನ್ನು ನಂಬಿದವರು ಯಾರು ? ಎಂದು ಲಕ್ಷ್ಮಿಯೇ ಮೊದಲಾದ ಶಕ್ತಿಯರ ಸಮೂಹದಲ್ಲಿ ಶ್ಲಾಘಿಸಿದಳು. ೧೦೫. ಆ ಸಮಯದಲ್ಲಿ ಸತ್ಯೇಂದ್ರಚೋಳನೇ ಮೊದಲಾದವರ ಈ ಚರಿತ್ರೆಯನ್ನು ನೋಡಿ ಗಜ ವದನನು ಇದು ಹೊಸದೆಂದನು. ಷಣ್ಮುಖನು ಆಶ್ಚರ್ಯವೆಂದನು. ದೇವತೆಗಳು ಇದು ಅತ್ಯಾಶ್ಚರ್ಯವೆಂದರು. ದೇವರ್ಷಿಗಳು ಇದು ಅಸಾಧ್ಯಕಾರ್ಯವೆಂದರು. ವ|| ಈ ಪ್ರಕಾರವಾಗಿ ಸಮಸ್ತ ಶ್ರೇಷ್ಠರಾದ ಪ್ರಮಥರು, ರುದ್ರರು, ಭಕ್ತರುಗಳೇ ಮೊದಲಾದ ಮಹಾಗಣಂಗಳ ಸಮೂಹದವರು ಗಣನಾತೀತವಾದ ಸಂತೋಷದಿಂದ ಕೂಡಿ, ಅತಿ ಶಯವಾಗಿ ಹೊಗಳುತ್ತ ಇದ್ದರು. ೧೦೬. ಅಷ್ಟರಲ್ಲಿ ಪರಮೇಶ್ವರನ ಆಜ್ಞಾನುಸಾರ ವಾಗಿ ಸೂರ್ಯನ ಕಿರಣಗಳೋಪಾದಿಯಲ್ಲಿ ಪ್ರಕಾಶಮಾನಗಳಾಗಿಯೂ, ಬಂಗಾರದ ಕಲಶ ಗಳಿಂದ ಶೋಭಿಸುತ್ತಿರುವವುಗಳಾಗಿಯೂ, ರತ್ನಗಳ ಮಾಲಿಕೆಗಳಿಂದ ಒಡಗೂಡಿರುವವು ಗಳಾಗಿಯೂ, ಮಂಗಳಾರ್ಥವಾಗಿ ಮಾಡಲ್ಪಟ್ಟ ಅನೇಕಾಲಂಕಾರಗಳಿಂದಲೂ, ಧ್ವಜ ಗಳಿಂದಲೂ, ಕಲ್ಪವೃಕ್ಷದ ಪುಷ್ಪಸರಗಳಿಂದಲೂ ಕೂಡಿದವುಗಳಾದ ವಿಮಾನಗಳು

ವ॥ ಅಂತೇಳ್ತಂದ ಪುಷ್ಪಕಂಗಳೊಳವಂದಿರಂ ಕೂರ್ವೆಯಿಂ ಕುಳ್ಳಿರಿಸಿ ಪುಷ್ಪೇಷು ದರ್ಪಪ್ರಭಂಜನಂ ಪ್ರಭಂಜನಾಪ್ತೇಕ್ಷಣನಾಕ್ಷಣಂ ಸಕ್ಷಣಂ ಸಕಲಗಣಂಬೆರಸು ಶೈಲಜಾಸಹಿತಂ ಕೈಲಾಸಾಭಿಮುಖನಾಗಿ ಗಗನಮಂಡಳದೊಳಗಣಿತೋತ್ಸವಂ ಮಿಗೆ ಬರುತ್ತುಮಿರೆಯಿರೆ

ಮಂದಾನಿಲರಗಳೆ॥ ಆ ಸಮಯದೊಳಮರರ್ಜಯಜಯಮೆನೆ
ಭಾಸುರ ಸುರಕುಜದಲರ್ವಳೆ ಭೋರೆನೆ
ಸುರಿವುತ್ತಿರೆ ಸುತ್ತಿರೆ ಗಣನಿಚಯಂ
ಎಡವಕ್ಕದೆ ರಕ್ಕಸವಗೆಯುಂ ಬರೆ
ಜಡಜಭವಂ ಬಲವಕ್ಕದೊಳೈತರೆ
ಪಿಂದೆಸೆ ಸುಮನೋರಮಣಾದಿಗಳಿರೆ
ಮುಂದೆಸೆ ರಂಭಾವಧು ನರ್ತಿಸುತಿರೆ
ಮುತ್ತಿನ ಸತ್ತಿಗೆ ತೊಳತೊಳಗುತ್ತಿರೆ
ಸುತ್ತಿ ತನುದ್ಯುತಿ ಥಳಥಳಿಸುತ್ತಿರೆ
ಕರೆದುವು ಬಿರುದಿನ ಕಹಳೆಗಳಾಗಳ್
ಪರೆದುದು ದುಂದುಭಿರವವೆಣ್ದೆಸೆಯೊಳ್
ಪೊಸರನ್ನದ ಚಿನ್ನದ ನಡೆತೋರಣ
ಮೆಸೆದಿರ್ದುದು ಗಮನೋತ್ಸವ ಕಾರಣ

ಅಂತರಿಕ್ಷಮಾರ್ಗದಲ್ಲಿ ವೇಗವಾಗಿ ಇಳಿಯುತ್ತ ಬಂದವು. ವ|| ಈ ರೀತಿ ಬಂದ ಪುಷ್ಪಕವಿಮಾನದಲ್ಲಿ ಅವರೆಲ್ಲರನ್ನೂ ಪ್ರೀತಿಯಿಂದ ಕುಳ್ಳಿರಿಸಿಕೊಂಡು ಮನ್ಮಥದರ್ಪಕ್ಕೆ ಬಿರುಗಾಳಿಯೋಪಾದಿಯಲ್ಲಿರುವವನೂ, ವಾಯುಸಖನಾದ ಅಗ್ನಿನೇತ್ರನೂ ಆದ ಶಿವನು ಆ ಕ್ಷಣವೇ ಉತ್ಸವದಿಂದೊಡಗೂಡಿ, ಸಕಲ ಗಣಸಮೂಹದೊಡನೆ ಕೂಡಿಕೊಂಡು ಪಾರ್ವತೀ ಸಮೇತನಾಗಿ ಕೈಲಾಸವನ್ನು ಕುರಿತು ಆಕಾಶಮಾರ್ಗದಲ್ಲಿ ಗಣನಾತೀತವಾದ ಉತ್ಸಾಹದಿಂದ ಬರುತ್ತ ಇರುತ್ತಿರಲು, ಮಂದಾನಿಲ ರಗಳೆ|| ಆ ಸಮಯದಲ್ಲಿ ದೇವತೆಗಳು ಜಯ ಜಯ ಎನ್ನುತ್ತಿದ್ದರು. ಪ್ರಕಾಶಮಾನವಾದ ಕಲ್ಪವೃಕ್ಷವು ಭೋರೆಂದು ಹೂಮಳೆಯನ್ನು ಸುರಿಸುತ್ತಿತ್ತು. ಗಣಸಮೂಹವು ಸುತ್ತಲೂ ಮುತ್ತಿತ್ತು. ಎಡದ ಪಕ್ಕದಲ್ಲಿ ವಿಷ್ಣುವೂ ಬಲದ ಪಕ್ಕದಲ್ಲಿ ಬ್ರಹ್ಮನೂ ಬರುತ್ತಿದ್ದರು. ಹಿಂಭಾಗದಲ್ಲಿ ದೇವೇಂದ್ರನೇ ಮೊದಲಾದ ದೇವತೆಗಳು ಇದ್ದರು. ಮುಂಭಾಗದಲ್ಲಿ ರಂಭೆಯು ನರ್ತಿಸುತ್ತಿದ್ದಳು. ಮುತ್ತಿನ ಛತ್ರಿಗಳು ಮೇಲ್ಭಾಗದಲ್ಲಿ ಥಳಥಳಿಸುತ್ತಿದ್ದವು. ದೇಹಕಾಂತಿಯು ಸುತ್ತಲೂ ಹೊಳೆಯುತ್ತಿತ್ತು. ಆಗ ಶಿವನ ಬಿರುದಿನ ಕಹಳೆಗಳು ಧ್ವನಿಮಾಡುತ್ತಿದ್ದವು. ಭೇರಿಗಳ ಧ್ವನಿಯು ಎಂಟೂ ದಿಕ್ಕುಗಳಲ್ಲಿ ಹರಡುತ್ತಿತ್ತು. ಅಲಂಕಾರಾರ್ಥವಾಗಿ ಸುವರ್ಣ ಮತ್ತು ರತ್ನಮಯಗಳಾದ ನಡೆತೋರಣಗಳು ಮಾರ್ಗದಲ್ಲಿ ಶೋಭಿಸುತ್ತಿದ್ದವು. ಮುಂಭಾಗದಲ್ಲಿ ಲಕ್ಷ್ಮಿ ಮತ್ತು

ಮಿಂದಿರೆ ಶಾರದೆಯುರ್ಚಾಮರಮಂ
ಮುಂದೆಸೆ ಡಾಳಿಸುತಿರೆ ಸಾಮರವಂ
ಗುಡುತುಂ ನುತಿಸುತ್ತಿರೆ ಸುರಮುನಿಗಳ್
ಮೃಡ ಜಯ ಜಯಯೆಂದೆನೆ ಘನಮುನುಗಳ್
ಸುರನದಿ ತೆರೆಮುಸಗದ ತೆಱದಿಂದಂ
ಭರದಿಂ ನಂದಿಯನೇಱುತ್ತಂದಂ
ಮಿಗೆ ಬಂದಾಸ್ಥಾನದೊಳಗಜೇಶಂ
ಸೊಗಯಿಸಿದಂ ಕೈಲಾಸದೊಳೀಶಂ

ವ॥ ಮತ್ತಮದು ಸಂತತಸಮುಧಿಗತ ಭರ್ಮ ಕೂರ್ಮ ಸಶರ್ಮ ಪರಿಚಲತ್ ಪೃಥುಳ ತರ ಶಫರ ಸಲಿಲ ಕರಿನಿಕರ ಮಕರ ಸುಕರ ಹಿಮಕರ ಧವಳ ಮರಾಳ ಮಂಜುಳ ಮದಮಧುಕರ ಪ್ರಕರ ಮಧುರರವ ಪರಿಗತ ನಿಜರಜಃಪುಂಜ ಪಿಂಜರಿತಜಳ ಕನಕ ಕಮಳ ಕುಮುದ ಕಲ್ಹಾರ ವಿಸರ ಸರಳತರ ತರಂಗರಂಗದಭಂಗ ಶೈವಲಲತಾವಿತಾನ ವಿಳಸಿತ ವಿತತ ಸ್ವಕೀಯ ಮಹನೀಯ ಗಾಂಭೀರ್ಯ ಪರಿಹಸಿತ ಸುಧಾಶರಧಿಪುರಶ್ರೀ ಮೇಖಲಾಕಲಿತ ಪರಿಖಾವಲಯುವಲಿತ ಪುರೋಪ

ಸರಸ್ವತಿಯರು ಚಾಮರವನ್ನು ಬೀಸುತ್ತಿದ್ದರು. ದೇವರ್ಷಿಗಳು ಸಾಮಗಾನಧ್ವನಿಯಿಂದ ಸ್ತೋತ್ರಮಾಡುತ್ತಿದ್ದರು. ಘನರಾದ ಮುನೀಶ್ವರರುಗಳು ಮೃಡನೇ ಜಯ ಜಯ ಎಂದು ಜಯಕಾರ ಮಾಡುತ್ತಿದ್ದರು. ದೇವಗಂಗಾನದಿಯು ಅಲೆಗಳಿಂದ ಅಲ್ಲಾಡದ ರೀತಿಯಲ್ಲಿ ಇತ್ತು. ವೇಗವಾಗಿ ನಂದಿಯನ್ನೇರುತ್ತ, ಅಧಿಕವಾದ ಸೊಗಸಿನಿಂದ ಕೂಡಿ ಬಂದು ಕೈಲಾಸದ ಆ ಸಭಾಸ್ಥಾನದಲ್ಲಿ ಪರಮೇಶ್ವರನು ಶೋಭಿಸುತ್ತಿದ್ದನು. ವ॥ ಮತ್ತು ಆ ಕೈಲಾಸವು ಸತತವೂ ತನ್ನಲ್ಲಿರುವ ಸುವರ್ಣವರ್ಣದ ಆಮೆ, ಸಂಚರಿಸುವ ಹಾರುವ ಮೀನು, ನೀರಾನೆ, ಮೊಸಳೆ, ಚಂದ್ರನೋಪಾದಿಯಲ್ಲಿರುವ ಮನೋಹರ ಶುಭ್ರ ಹಂಸ ಪಕ್ಷಿ, ಮಂಜುಳವಾದ ಧ್ವನಿಯನ್ನುಂಟುಮಾಡುವ ಮದಿಸಿದ ಭೃಂಗಸಮೂಹ, ಸುತ್ತಲೂ ಅರಳಿರುವ ಹೊಂದಾವರೆ, ಬಿಳಿಯಕಮಲ, ಸೌಗಂಧಿಕಕಮಲಗಳ ಧೂಳಿಯಿಂದ ಹೊಂಬಣ್ಣಗೊಂಡಿರುವ ನೀರು, ಆ ನೀರಿನ ಸರಳವಾದ ತರಂಗಗಳ ನರ್ತನ, ಆ ನೀರಿನ ಮೇಲೆ ಉದ್ದವಾಗಿ ಹಬ್ಬಿರುವ ಪಾಚಿಯ ಬಳ್ಳಿ ಸಮೂಹ, ಇವುಗಳಿಂದ ಶೋಭಿಸುತ್ತಲಿತ್ತು. ತನ್ನ ವಿಸ್ತಾರ ಮತ್ತು ಗಾಂಭೀರ್ಯದಿಂದ ಕ್ಷೀರಸಮುದ್ರವನ್ನೂ ಹಾಸ್ಯ ಮಾಡುತ್ತದೆಯೋ ಎಂಬಂತಿರುವ ಒಡ್ಯಾಣದೋಪಾದಿಯ ಶೋಭಾವಹ ಅಗಳು ಕೈಲಾಸದ ಸುತ್ತಲೂ ಇತ್ತು. ಈ ಅಗಳು ಉದ್ಯಾನವನದಿಂದ ಸುತ್ತುವರಿಯಲ್ಪಟ್ಟಿತ್ತು. ಆ ಉದ್ಯಾ

ವನಕಂಪಿತ ಸರಸ ರಸಾಲತರು ಸಲ್ಲಲಿತ ಸಮುಲ್ಲಸಿತ ಪಲ್ಲವಪ್ರತಾನ ಪ್ರತಿಬಿಂಬ ಕದಂಬ ಪದ್ಮರಾಗಾಯಿತ ಸ್ಫಟಿಕಮಣಿಮಯ ವಿಶಾಲ ಸಾಲಾಟ್ಟಾಲಜಾಲ ಚಾರುತರ ಚತುರ್ದ್ವಾರಸಾರ ಸುಗಮ ನಿಗಮಮಯ ನಭಃಕಟಾಹಚುಂಬಿ ಜೃಂಭಿತ ಮಹಾಗೋಪುರಾಗ್ರ ಕಮನೀಯ ತಪನೀಯ ದಂಡಮಂಡಿತ ಸಮುತ್ತುಂಗ ಪುಂಗವಧ್ವಜ ರುಚಿರ ಮಣಿಮುಕುರಮುಖ ಮುಕುರಾವಲೋಕನ ಚಿರಸ್ತಿಮಿತ ಹಿಮಕರ ವಧೂನಿಕರ ಕೇಕರಪ್ರಸಾದ ಪರಿವಿಲೀನ ಪರಿಸರಸ್ಥಿತ ಲಸಿತ ವಿಶದ ಶಶಿಮಣಿಪ್ರಾಸಾದ ಪರಿಗಳಿತ ಸದಮಳ ಜಳಪ್ರವಾಹ ನಿಷ್ಪ್ರಯಾಸ ಪರಿವರ್ಧಿತಾನಲ್ಪ ಕಲ್ಪತರುಪಙ್ಕ್ತಿ ಸಂತತ ದರದಳಿತ ಪರಿಮಳಭರಿತ ಕುಸುಮವಿಸರ ವಿಸರದ ಮಂದಮರಂದ ರಸ ಕದಂಬ ಕರ್ದಮಿತ ವಿಧು ರವಿವೀಥಿ ಸನಾಥಮುಂ ಮಹೋಜ್ವಳ ಮಹೀಂದ್ರಮಣಿಖಚಿತ ರುಚಿನಿಚಿತ ಭರ್ಮನಿರ್ಮಿತ ನಿಶಾಂತ ಸಂತಾನ ಪುರೋಭಾಗಭಾಸುರ ವ್ಯಕ್ತಮುಕ್ತಾಫಳ ಪ್ರಕರ ಪರಿಖಚಿತ ವಿಳಾಸ ಸೌಧಾಗ್ರಪ್ರತ್ಯಗ್ರರತ್ನಪಂಜರ ಮಂಜುಳ ಶುಕಸಾರಿಕಾ

ನದ ಗಾಳಿಯಿಂದ ಅಲ್ಲಾಡುವ ಮನೋಹರವಾದ ಸೀಮಾವಿನ ಮರಗಳ ಕೋಮಲವಾದ ಚಿಗುರುಗಳ ಪ್ರತಿಬಿಂಬದ ಸಮೂಹವು ಸ್ಫಟಿಕಶಿಲೆಯಿಂದ ಕಟ್ಟಿದ ವಿಶಾಲ ಕೋಟೆಯ ಗೋಡೆಗಳನ್ನು ಪದ್ಮರಾಗಮಣಿಯ ಬಣ್ಣವನ್ನಾಗಿಸಿದ್ದವು. ಕೋಟೆಯು ವಿಶಾಲವಾದ ಬುರುಜುಗಳ ಸಾಲುಗಳಿಂದಲೂ, ಮನೋಹರವಾದ ನಾಲ್ಕು ಮಹಾದ್ವಾರಗಳಿಂದಲೂ ಕೂಡಿತ್ತು. ಆ ಮಹಾದ್ವಾರಗಳಲ್ಲಿ ಶ್ರೇಷ್ಠವಾದುವೂ, ಮೇಲೇರಲು ಸುಗಮವೂ ಆದ ವೇದಮಯವಾದ ನಾಲ್ಕು ಗೋಪುರಗಳು ಆಕಾಶವೆಂಬ ಕಡಾಯಿಯನ್ನು ಚುಂಬಿಸುವಹಾಗೆ ಇದ್ದವು. ಆ ಗೋಪುರಗಳ ಅಗ್ರದಲ್ಲಿ ಮನೋಹರವಾದ ಬಂಗಾರದ ದಂಡಗಳಿಗೆ ಅಲಂಕಾರಗೊಳಿಸಿದ ಎತ್ತರವಾದ ವೃಷಭಧ್ವಜಗಳು ಇದ್ದುವು. ಆ ಧ್ವಜಗಳಲ್ಲಿ ಮನೋಹರವಾದ ರತ್ನದರ್ಪಣಗಳನ್ನಳವಡಿಸಲಾಗಿತ್ತು. ಆ ರತ್ನದರ್ಪಣಗಳಲ್ಲಿ ತಮ್ಮ ಮುಖಗಳನ್ನು ನೋಡಿಕೊಳ್ಳುವುದಕ್ಕಾಗಿ ಅಲ್ಲಾಡದೆ ನಿಂತ ಚಂದ್ರಪತ್ನಿಯರಾದ ಅಶ್ವಿನಿಯೇ ಮೊದಲಾದ ನಕ್ಷತ್ರಾಂಗನೆಯರ ಕಡೆಗಣ್ಣುಗಳ ನೋಟದ ನೈರ್ಮಲ್ಯದಿಂದ ವ್ಯಾಪ್ತವಾದಂಥ ಪರಿಸರದಲ್ಲಿ ಶುಭ್ರಪ್ರಕಾಶದಿಂದ ಶೋಭಿಸುವ ಚಂದ್ರಕಾಂತಶಿಲೆಯ ಉಪ್ಪರಿಗೆಗಳಿದ್ದುವು. ಆ ಉಪ್ಪರಿಗೆಗಳ ಕಡೆಯಿಂದ ಒಸರಿಬರುತ್ತಿರುವ ಪರಿಶುದ್ಧವಾದ ನೀರಿನ ಪ್ರವಾಹದಿಂದ ಯಾವ ಅನಾನುಕೂಲವೂ ಇಲ್ಲದೆ ಬೆಳೆದು ನಿಂತ ಅನೇಕ ಕಲ್ಪತರುವೃಕ್ಷಗಳ ಸಾಲು ಇತ್ತು. ಆ ವೃಕ್ಷಗಳಲ್ಲಿ ಸದಾ ಸ್ವಲ್ಪ ಅರಳಿದ ಸುಗಂಧಭರಿತವಾದ ಹೂವುಗಳ ಅಧಿಕವಾದ ಮಕರಂದರಸಧಾರೆಯು ಸುರಿದು ಅಲ್ಲಿನ ಚಂದ್ರ ಸೂರ್ಯ ಬೀದಿಗಳು ಕೆಸರಿನಿಂದ ಕೂಡಿದುವಾಗಿದ್ದುವು. ಅತ್ಯಂತ ಉಜ್ವಲವಾದ ಇಂದ್ರನೀಲಮಣಿಗಳನ್ನು ಕೆತ್ತಿದ ಕಾಂತಿಯಿಂದ ವ್ಯಾಪ್ತಗೊಂಡ ಸುವರ್ಣನಿರ್ಮಿತಗಳಾದ ಮನೆಗಳ ಸಮೂಹ ಶೋಭಿಸುತ್ತಿತ್ತು. ಆ ಮನೆಗಳ ಮುಂಭಾಗದಲ್ಲಿ ಪ್ರಕಾಶಮಾನವಾಗಿರುವ

**ನಿಕುರುಂಬ ಪರಿಪಠಿತ ನಿಟಿಲನಯನಲೀಲಾಕಥಾ ಕಲಾಕರ್ಣನ ಕರ್ಣ ಕೌತುಕಾಂತರಂಗ ಸಂಗತ ಸತ್ಪ್ರಮದಪ್ರಮೋದಭರಭರಿತ ಸಸಾತ್ವಿಕಾಗಣ್ಯ ಗುಣಾಗ್ರಗಣ್ಯ ಸಮುದಯ ಸಮುಚಿತಮುಂ ಮತ್ತಂ ಕಾಂಚನೋಪರಚಿತ ಪಾಂಚಾಲಿಕಾ ಪುಂಜರಂಜಿತ ವಜ್ರಮಯ ಸ್ತಂಭಸಂಭೃತ ಪ್ರವಾಲಜಾಲದಂಡಮಂಡಿತ ಪರಿನ್ಮಣಿ ವಿತರ್ದಿವೇದಿಕಾ ಹರಿಮಣಿ ಪುತ್ತಳಿಕಾದ್ವಾರ ನವಮಣಿಗ್ರಥಿತ ಚಾರುತೋರಣಾಂಚಿತ ವೈಡೂರ್ಯಮಣಿಸೋಪಾನ ವಿಳಸಿತ ವಿಳಾಸಮಂಟಪ ಪರಂಪರಾ ಪರಿಶೋಭಿತ ಪದ್ಮರಾಗಮಣಿಮಯ ಕನತ್ಕಳಶ ಪ್ರಭಾಭಿಭಾಸುರ ತರುಣಭಾಸ್ಕರಕಿರಣ ಪಲ್ಲವಿತ ಘನಗಗನ ಗಹನಮುಂ ನಿರುಪಮಾನ ನಿತ್ಯೈಶ್ವರ್ಯಲಕ್ಷ್ಮೀಲಾಸ್ಯ ರಂಗಸ್ಥಳಮುಂ ಷಡ್ವರ್ಗ ದುರ್ಧಮಧ್ವಾಂತ ವಿಧ್ವಂಸನ ವಿಧಿ ಮಾರ್ತಾಂಡಮಂಡಳಮುಂ ನಿರತಿಶಯ ಸುಖಫಲೋದಯ ಕಲ್ಪಪಾದಪಮುಂ ಸಮಂಜಸ ಮುಕ್ತಿರಮಣೀ ರಮಣೀಯ ಮುಖಮುಕುರಮುಂ ನಿಜಸ್ಮರಣ ಪರಿಣತಜನ ವಿಪುಳ**

ತೂಗು ಬಿಟ್ಟಿರುವ ರತ್ನಪಂಜರಗಳಲ್ಲಿ ಗಿಳಿ ಗೊರವಂಕಗಳ ಗುಂಪು ಇತ್ತು. ಅವು ಪರಮೇಶ್ವರನ ಪಂಚವಿಂಶತಿಲೀಲೆಗಳನ್ನು ಓದುತ್ತಿದ್ದವು. ಆ ಕಲಾತ್ಮಕ ಲೀಲೆಗಳನ್ನು ಕಿವಿಗಳಿಂದ ಕೇಳುವುದರಲ್ಲಿ ಉತ್ಸುಕರಾದ ಶ್ರೇಷ್ಠ ಪ್ರಮಥಗಣಗಳಿಂದಲೂ, ಸಂತೋಷ ದಿಂದ ಕೂಡಿ ಆನಂದಬಾಷ್ಪಗಳೇ ಮೊದಲಾದ ಸಾತ್ವಿಕಭಾವಾವಿಷ್ಟರಾಗಿ ಗಣನಾತೀತ ರಾದ ಶ್ರೇಷ್ಠ ಪುರಾತನರುಗಳ ಸಮುದಾಯದಿಂದಲೂ (ಆ ಕೈಲಾಸವು) ಕೂಡಿತ್ತು. ಮತ್ತು ಬಂಗಾರದಿಂದ ನಿರ್ಮಿಸಲ್ಪಟ್ಟ ಗೊಂಬೆಗಳ ಗುಂಪಿನಿಂದ ಪ್ರಕಾಶಿಸಲ್ಪಡುವು ವಾಗಿಯೂ, ವಜ್ರಮಯವಾದ ಕಂಬಗಳಿಂದ ತುಂಬಲ್ಪಟ್ಟುವಾಗಿಯೂ, ಹವಳಗಳ ಸಮೂಹದ ಕೋಲುಗಳಿಂದ ಅಲಂಕರಿಸಲ್ಪಟ್ಟುವಾಗಿಯೂ, ಪಚ್ಚೆಯಮಣಿಗಳಿಂದ ವಿಸ್ತರಿಸಲ್ಪಟ್ಟ ಜಗುಲಿಗಳುಳ್ಳವಾಗಿಯೂ, ಇಂದ್ರನೀಲಮಣಿಗಳಿಂದ ಮಾಡಿದ ದೊಡ್ಡ ಬಾಗಿಲುಗಳುಳ್ಳವಾಗಿಯೂ, ನೂತನವಾದ ರತ್ನಗಳಿಂದ ಪೋಣಿಸಿ ಮಾಡಲ್ಪಟ್ಟ ಮನೋಹರ ತೋರಣಗಳಿಂದ ಕೂಡಿದವುಗಳಾಗಿಯೂ ವೈಡೂರ್ಯಮಣಿಗಳ ಮೆಟ್ಟಲುಳ್ಳ ವಾಗಿಯೂ ಇರುವ ವಿನೋದ ಮಂಟಪಸಾಲುಗಳು ಅಲ್ಲಿದ್ದುವು. (ಆ ಮಂಟಪಗಳು) ಪದ್ಮರಾಗಮಣಿಗಳಿಂದ ಮಾಡಲ್ಪಟ್ಟ ಹೊಳೆಯುವ ಕಳಶಗಳಿಂದ ಕೂಡಿದ್ದವು. ಆ ಕಳಶ ಗಳ ಕಾಂತಿಯೆಂಬ ಪ್ರಕಾಶಮಾನವಾಗಿರುವ ಬಾಲಸೂರ್ಯಕಿರಣಗಳಿಂದ ಚಿಗುರಿದ ಘನ ವಾದ ಆಕಾಶದ ಹಾಗೆ ಹೋಗಲಸಾಧ್ಯವಾದುವಾಗಿರುವಂಥ, ಉಪಮಾತೀತವೂ ಶಾಶ್ವ ತವೂ ಆದ ಅಣಿಮಾದ್ಯಷ್ಟೈಶ್ವರ್ಯಲಕ್ಷ್ಮಿಯ ನರ್ತನರಂಗಸ್ಥಳವಾದುದಾಗಿಯೂ, ಕಾಮಾದಿ ಅರಿಷಡ್ವರ್ಗ ದುರ್ಗಮವಾದ ಕತ್ತಲೆಯನ್ನು ನಾಶಮಾಡುವ ವ್ಯಾಪಾರದಲ್ಲಿ ಸೂರ್ಯಮಂಡಲಸ್ವರೂಪವಾಗಿಯೂ, ಅಧಿಕವಾದ ಸುಖದ ಫಲಪ್ರಾಪ್ತಿಗೆ ಕಲ್ಪವೃಕ್ಷ ವಾಗಿಯೂ, ಸಮಂಜಸವಾದ ಮುಕ್ತಿಯೆಂಬ ಸ್ತ್ರೀಯಳ ಮನೋಹರವಾದ ಮುಖಕ್ಕೆ ಕನ್ನಡಿಯಾಗಿಯೂ, ತನ್ನನ್ನು ಧ್ಯಾನಿಸುವುದರಲ್ಲಿ ಆಸಕ್ತರಾದ ಜನರ ವಿಪುಲವಾದ ವಿಷ

ವಿಪತ್ಕದಂಬ ಜಲದ ಪಟಲ ಜಂಝಾಪ್ರಭಂಜನಮುಂ ಶ್ರುತಿತತಿಕೃತ ಸ್ತುತಿತರಂಗಿಣೀ ಸಂಗತ ಪಾರಾವಾರಮುಂ ಶರಣಾಗತಜನವ್ರಜ ವಜ್ರಪಂಜರಮುಂ ಸಕಲಮಂಗಳಕಳಾ ಕೇಳೀನಿವಾಸಮುಮೆನಿಸಿ ಪೊಗಳ್ತೆವೆತ್ತು ಪೆಂಪುವಡೆದ ಕೈಲಾಸಾಖ್ಯಮಹಾಪುರ ದಂತರ್ವಳಯ ವಿಳಸಿತ ಶಶಧರಶತಕರ ಸಹಸ್ರ ರುಚಿನಿಚಯ ರುಚಿರತರ ಸದಲಂಕಾರ ಸಾರಸ್ವತ ಸದನ ಮಹಾಸಭಾಮಂಟಪಮಧ್ಯ ಮಂಜುಳ ದಿವ್ಯಸಿಂಹಾಸನ ಸವ್ಯ ಪಾರ್ಶ್ವಸಮುಪಸ್ಥಿತ ಸರ್ವಮಂಗಳಾ ಚರಣಾರವಿಂದಸೇವಾವಸರ ಸಾವಧಾನಮಾನಸ ಮಾನಸಂಯುತ ನಿರತಿಶಯ ಸೌಂದರ್ಯ ಮಾಧುರ್ಯಸಮಾರೂಢ ಪ್ರೌಢ ತಾರುಣ್ಯ ಲಾವಣ್ಯ ಪರಿಮಿಳಿತ ಘನಜಘನ ಕನಕ ಘಟಸಮ ಸಮಸ್ತನಯುಗಳ ಕೇಶಭರಭಾರಭಾಸುರ ಭಾರತೀ ಭಾರ್ಗವಿಪ್ರಮುಖ ಲೇಖ ನಾಯಕನಿಕಾಯ ಕಾಮಿನೀಪ್ರಬಲಬಲಕಲಿತ ಸುಲಲಿತ ಕಲೇವರ ಸಮುಜ್ಜ್ವಳವಿಳಾಸ ವಿಧಿತ ಕುಸುಮವಿಸರ ವಿಭೂಷಣ ಭೂಷಿತಾವಯವ ನವವಯಃಸಮುದಿತ ವಿಪುಳ ವಿಭವ ವಿಭ್ರಮ ವಿರಾಜಿತ ಸರತಿಸಾಂಜಲಿಪುಟನಿಟಿಲಕುಟಿಲ ಕೃಷ್ಣೇಕ್ಷುಕೋದಂಡಮಂಡಿತ ಬಂಧುರ ಕಂಧರ

ತ್ತಿನ ಪರಂಪರೆಗಳೆಂಬ ಮೋಡಗಳ ಸಮೂಹಕ್ಕೆ ಪ್ರಚಂಡವಾಯುಸ್ವರೂಪವಾಗಿಯೂ ವೇದಗಳ ಸಮೂಹದಿಂದ ಮಾಡಲ್ಪಟ್ಟ ಸ್ತೋತ್ರಗಳೆಂಬ ನದಿಗಳಿಗೆ ಸಮುದ್ರಪ್ರಾಯ ವಾಗಿಯೂ, ಶರಣಾಗತರಾದ ಜನರುಗಳ ಸಮೂಹದ ವಜ್ರಪಂಜರ ಸ್ವರೂಪವಾಗಿಯೂ, ಸಮಸ್ತ ಮಂಗಳಕರಗಳಾದ ವಿದ್ಯೆಗಳಿಗೆ ಕೇಳಿಸ್ಥಾನವಾದುದೆನಿಸಿ, ಹೊಗಳಿಕೆಗೆ ಪಾತ್ರ ವಾಗಿ, ಘನತೆಯನ್ನು ಪಡೆದ ಕೈಲಾಸವೆಂಬ ಹೆಸರಿನ ಮಹಾನಗರ ಶೋಭಿಸುತ್ತಿತ್ತು. (ಅದರ) ಒಳಭಾಗದಲ್ಲಿ ಪ್ರಕಾಶಿಸುತ್ತಿರುವ ಸಹಸ್ರ ಸಹಸ್ರ ಚಂದ್ರಸೂರ್ಯರ ಕಾಂತಿಗಳ ಸಮೂಹಗಳ ಹಾಗೆ ಅತ್ಯಂತ ಮನೋಹರವಾಗಿ ಯೋಗ್ಯ ಅಲಂಕಾರ ಸಾರಸ್ವತ ಗೃಹ ವಾದ ಶ್ರೇಷ್ಠ ಸಭಾಮಂಟಪದ ಮಧ್ಯಭಾಗದಲ್ಲಿ ಮಂಜುಳವೂ ಪ್ರಕಾಶಮಾನವೂ ಆದ ಸಿಂಹಾಸನದ ಎಡಭಾಗದಲ್ಲಿ ಪಾರ್ವತೀದೇವಿಯಿದ್ದಾಳೆ. ಆ ಪಾರ್ವತೀದೇವಿಯ ಪಾದ ಕಮಲಗಳ ಸೇವೆಯ ಅವಸರದಲ್ಲಿ ನಿಶ್ಚಲ ಮನಸ್ಸಿನಿಂದಲೂ, ಗೌರವದಿಂದಲೂ ಕೂಡಿ ರುವ, ಅತ್ಯಧಿಕ ಕಾಂತಿಯಿಂದ ಮನೋಹರತೆಯನ್ನು ಹೊಂದಿರುವಂಥ, ಪ್ರೌಢವಾದ ಯೌವನದ ಲಾವಣ್ಯದಿಂದ ಕೂಡಿ, ದೊಡ್ಡ ದೊಡ್ಡ ಕಟಿಪುರೋಭಾಗಗಳಿಂದಲೂ, ಬಂಗಾರದ ಘಟಗಳಿಗೆ ಸಮಸ್ಪರ್ಧಿಗಳಾದ ಮೊಲೆಗಳಿಂದಲೂ, ಸೊಂಪಾಗಿ ಬೆಳೆದ ಕೇಶಗಳ ಭಾರದಿಂದ ಕೂಡಿದ ಸರಸ್ವತಿ ಲಕ್ಷ್ಮಿಯೇ ಮೊದಲಾದ ಶ್ರೇಷ್ಠ ದೇವಾತಾ ಸಮೂಹದ ಸ್ತ್ರೀಯರುಗಳ ಸಮೂಹವುಂಟು. ಆ ಸ್ತ್ರೀಯರುಗಳ ಮನೋಹರ ವಾದ ದೇಹದಿಂದಲೂ, ಪ್ರಕಾಶಮಾನವಾದ ಹಾವ ಭಾವ ವಿಲಾಸಗಳಿಂದಲೂ ಪಾರ್ವತಿಯು ಶೋಭೆಗೊಂಡಿದ್ದಳು ; ಹೂವುಗಳಿಂದಲೂ, ಆಭರಣಗಳಿಂದಲೂ ಅಲಂಕೃತಳಾಗಿದ್ದಳು. ನೂತನ ಪ್ರಾಯದಿಂದುದಯವಾದ ವಿಪುಲವಾದ ವೈಭವ, ವಿಲಾಸಗಳಿಂದ ವಿರಾಜಮಾನಳಾದ ರತಿಯೊಡನೆ ಕೂಡಿಕೊಂಡು ಹಣೆಯಮೇಲೆ

ಕಂದರ್ಪನಿನುದಾರ ಶಾರಶೃಂಗಾರರಸಮುಮಂ ಮತ್ತಮತಿ ವಿಕೃತವೇಷಮುಮರ್ದಿರೆ ನೆತ್ತಿಯೊಳೆತ್ತಿಕಟ್ಟಿದ ಚಂಡಿಕೆಯೊಳ್ತೊಡರ್ಚಿದ ಬೆಳ್ಗವಡಿಕೆಯ ಮಾಲೆ ಚೊಳಿಕೆಪಿಡಿದು ಜತಿಜತಿಗೊಲೆಯೆ ಪುಲಿದೊವಲ ಬಲ್ಲಾಸೆಯ ಮೇಲಳವಡಿಸಿ ಕಟ್ಟಿಬಿಟ್ಟ ಕಿಱುಗಂಟೆಗಳ ತೋಂಗಲ್ತೊನೆದು ಝಣಝಣಧ್ವನಿಗುಡೆ ಮೊಗಮನುರುಗಿಸಿ ಮೂಗನಲರ್ಚಿಸಿ ಪುರ್ಬೇಱಿಸಿ ಕಣ್ಣಂ ಮೋಳಿಸಿ ನಾಲಗೆಯುಂ ನೀಡಿ ಪಲ್ಗಳಂ ತೆಱೆದು ಬಸಿರನುರ್ವಿಸಿ ಕೊರಲಂ ಕೊಂಕಿಸಿ ನಡುವಂ ಬಂಕಿಸಿ ನೆರೆದ ಗಣಂಗಳ್ನಗೆಗಡಲೊಳೋಲಾಡೆ ಪಾದತ್ರಯದೊಳ್ನಲಿದು ನರ್ತಿಸಿ ಮೃಡನ ಮೊಗದಾವರೆಗೆ ಮುಗುಳ್ನಗೆಯನೋಲಗಿಪ ಭೃಂಗಿರಿಟಿಯಿಂ ಹಾಸ್ಯರಸಮುಮಂ ಮತ್ತಂ ಚಿರಕಾಲಮುಗ್ರತಪಂಗೈದು ವನಜಭವನಿಂ ವರಂಬಡೆದು ಕಡುಕೊರ್ಬಿದ ದನುಜಜನದಿನಾದ ಬಾಧೆಗಳ್ಕಿ ಬಳ್ಕಿ ಕಂದಿ ನೊಂದೇಳ್ತಂದಿಂದುಧರನಂಘ್ರಿಗೆ ಬಿನ್ನವಿಸಲ್ಸಮಯಂಬಡೆಯದೆ ಕಡೆವಾಗಿಲೊಳ್ ಪಿರಿದು ಕಾಲಂ ಕಾದು ನಿಂದೊಳಗಣ್ಗೆ ಸಲ್ಗೆ ಮಿಗೆ ಪೋಪ ಗರುಡಧ್ವಜಾದಿ ದಿವಿಜವ್ರಜದ ಬೆಂಬಳಿಯೊಳೊಯ್ಯನಡಂಗಿ ಪೊಕ್ಕು ಪೋಪಾಗಳ್ ತಡೆದು ಪಿಡಿದು ನೂಂಕಿ ಝಂಕಿಸಿ ಜಡಿದು ಪೊಡೆವ

ಕೈಮುಗಿದು ನಿಂತುಕೊಂಡವನಾಗಿಯೂ, ವಕ್ರವಾದ ಕಪ್ಪುಕಬ್ಬಿನ ಧನುಸ್ಸಿನಿಂದ ಕೂಡಿದ ಮನೋಹರ ಕಂಧರಪ್ರದೇಶದ ಮನ್ಮಥನಿಂದ ಶ್ರೇಷ್ಠವಾದ ಶೃಂಗಾರರಸವನ್ನೂ (ಆ ಸಭೆ ಪಡೆದಿತ್ತು.) ಮತ್ತು ವಿಕಾರವಾದ ಆಕೃತಿಯನ್ನು ಹೊಂದಿ, ನೆತ್ತಿಯಲ್ಲಿ ಎತ್ತಿಕಟ್ಟಿದ್ದ ಶಿಖೆಯಲ್ಲಿ ಸಿಕ್ಕಿಸಿಕೊಂಡಿದ್ದ ಕವಡೆಗಳ ಮಾಲೆಯು ಕರ್ಣವಲಯವನ್ನನುಸರಿಸಿ ಬಾರಿಬಾರಿಗೂ ಅಲ್ಲಾಡುತ್ತಿರಲು, ಹುಲಿಯ ಚರ್ಮದ ಶ್ರೇಷ್ಠ ನಡುಕಟ್ಟಿನ ಮೇಲೆ ಕಟ್ಟಿದ್ದ ಸಣ್ಣ ಗಂಟೆಗಳ ಗೊಂಚಲು ಅಲ್ಲಾಡಿ ಝಣ ಝಣವೆಂದು ಧ್ವನಿಮಾಡುತ್ತಿರಲು, ಮುಖವನ್ನು ವಕ್ರವಾಗಿ ಮಾಡಿ, ಮೂಗನ್ನು ಅರಳಿಸಿ, ಹುಬ್ಬನ್ನೆತ್ತಿ, ಮೆಳ್ಳೆಗಣ್ಣುಮಾಡಿ, ನಾಲಿಗೆಯನ್ನು ಚಾಚಿ, ಹಲ್ಲುಗಳನ್ನು ತೆರೆದು, ಹೊಟ್ಟೆಯನ್ನು ಉಬ್ಬಿಸಿ, ಕುತ್ತಿಗೆಯನ್ನು ಡೊಂಕುಮಾಡಿ, ಸೊಂಟವನ್ನು ಬಗ್ಗಿಸಿ, ನೆರೆದಿರುವ ಸಮಸ್ತ ದೇವಗಣಗಳು ನಗೆಗಡಲೊಳಗೆ ಮುಳುಗುತ್ತಿರಲು, ಮೂರುಕಾಲುಗಳಿಂದ ನರ್ತನಮಾಡಿ ಪರಮೇಶ್ವರನ ಮುಖಕಮಲದಲ್ಲಿ ಮುಗುಳ್ನಗೆಯನ್ನುಂಟುಮಾಡುವ ಭೃಂಗೀಶ್ವರನಿಂದ ಹಾಸ್ಯರಸವುಂಟಾಗುತ್ತಿತ್ತು. ಮತ್ತು ಅನಂತಕಾಲಗಳವರೆಗೆ ಉಗ್ರತಪಸ್ಸನ್ನು ಮಾಡಿ ಬ್ರಹ್ಮನಿಂದ ವರವನ್ನು ಪಡೆದು ಹೆಚ್ಚಾಗಿ ಕೊಬ್ಬಿ ಹೋದ ರಾಕ್ಷಸಜನರಿಂದಾದ ಬಾಧೆಗೆ ಹೆದರಿ, ಬಳುಕಿ ಕಂದಿ ಕುಂದಿ ನೋವನ್ನನುಭವಿಸಿ ಪರಮೇಶ್ವರನ ಪಾದಗಳಲ್ಲಿ ಬಿನ್ನಹವನ್ನು ಮಾಡಿಕೊಳ್ಳಲು ಬಂದು, ಪರಮೇಶ್ವರನನ್ನು ಕಾಣಲು ಸಮಯವನ್ನು ಪಡೆಯದೆ, ಕೊನೆಯ ಬಾಗಿಲಲ್ಲಿ ಬಹಳ ಕಾಲದಿಂದಲೂ ಕಾದು ನಿಂತುಕೊಂಡು, ಒಳಗೆ ಸಲಿಗೆಯಿಂದ ಹೋಗುತ್ತಿರುವ ವಿಷ್ಣುವೇ ಮೊದಲಾದ ದೇವತೆಗಳ ಸ್ತೋಮದ ಹಿಂದುಗಡೆಯಲ್ಲಿ ಮೆಲ್ಲನೆ ಅಡಗಿಕೊಂಡು ನುಗ್ಗಿ ಪ್ರವೇಶಿಸುತ್ತಿರುವ ಸಮಯದಲ್ಲಿ, ತಡೆದು, ನೂಕಿ, ಗದರಿಸಿ, ಜಡಿದು ಹೊಡೆಯುತ್ತಿರುವ ಬಾಗಿಲುಕಾಯುತ್ತಿರುವ ಪ್ರಚಂಡ ಗಣಶ್ರೇಷ್ಠರ ದೊಣ್ಣೆಯ

ದೌವಾರಿಕ ಪ್ರಚಂಡಗಣೇಂದ್ರರ ದಂಡಪಾತದಿಂ ದಿಂಡುಗೆಡೆದಳಲ್ದು ಬಿಸುಸುಯ್ದು ಬಸವಳಿದು ಕಂಬನಿದುಂಬಿ ತಮ್ಮನಗಲ್ದು ಸೆಱೆಸಿಕ್ಕಿದ ನಿಜಾಂಗನೆಯರಂ ನೆನೆನೆನೆದು ಪಲುಂಬಿ ಪಳಯಿಸುವ ದಿವೌಕಸರಿಂ ಕರುಣಾರಸಮುಮಂ ಮತ್ತಮಾ ವಿಷಾದ ವಿಧುರಿತರ ಕಾರ್ಪಣ್ಯೋಕ್ತಿಗೇಳ್ದು ಕರುಣಂಗೈದು ಶಿವನಂಘ್ರಿಯುಂ ಕಾಣಿಸಿ ಬಿನ್ನಪಂಗೈಸಿ ತನ್ನಿರೂಪದಿಂ ನಂದೀಶ್ವರನಂ ಕಳುಪೆ ಕಡುಪಿಂ ಪರಿತಂದು ತದಾರಾತಿಖಿಲಧನುಜಬಲಮಂ ಬೆಂಬತ್ತಿ ಮುತ್ತಿ ಪೊಡೆದು ಬಡಿದು ಕಡಿಕಂಡಗೈದು ಸೀಳ್ದು ಪೋಳ್ದು ಸಂಹರಿಸಿ ಮಗುಳ್ದಭವನಲ್ಲಿಗೇಳ್ತಂದಾಗಳ್ ಕೆನ್ನೆತ್ತರಿಂ ನೆನೆದ ಕರುಳಮಾಲೆಯುಮಂತ್ರಪ್ರೋತ ಕಠಿಣಾಸ್ತಿವ್ರಾತಮುಂ ತೊಡರ್ದ ಕರಾಳತರ ಖರಖಡ್ಗಂ ಕರತಳದೊಳಿಂಬುವಡೆಯೆ ವಿಕಚಜಪಾಕುಸುಮ ರಕ್ತರಕ್ತಜಳಧಾರಾಸಕ್ತಶ್ರುಮಾಂಸ ಕಳಕಂಠಾಕುಂಠಿತ ಭ್ರುಕುಟಿಭಯಂಕರ ಮುಖ ತದೀಯ ವಿಕಟ ಶಿರೋಮಾಲೆ ಕಂಠೋಪಕಂಠದೊಳ್ ಮೆಱೆಯೆ ಪೊಡಮಟ್ಟುನಿಂದ ಭೀಕರಾಕಾರ ಭೈರವವ್ರಜದಿಂ ಭೀಭತ್ಸ ರಸಮುಮಂ ಮತ್ತಮನೇಕ ಮುಖಂಗಳನನಂತನೇತ್ರಂಗಳನಪರಿಮಿತ ಭುಜಂಗಳನಗಣಿತ ಪದಂಗಳನಸಂಖ್ಯಾತ ಕರಂಗಳಂ ತಳೆದು

ಹೊಡೆತದಿಂದ ಕೆಳಗೆ ಬಿದ್ದು ದುಃಖಗೊಂಡು, ಒಳಲಿ ನಿಟ್ಟುಸಿರು ಬಿಟ್ಟು, ಸ್ವಾಧೀನಗಟ್ಟು, ಕಣ್ಣೀರುದುಂಬಿ, ತಮ್ಮನ್ನು ಅಗಲಿ ರಾಕ್ಷಸರಲ್ಲಿ ಸೆರೆಸಿಕ್ಕ ತಮ್ಮ ಪತ್ನಿಯರನ್ನು ನೆನೆನೆನೆದು ಹಲುಬಿ ಅಳುತ್ತಿರುವ ದೇವತೆಗಳಿಂದ ಕರುಣಾರಸವನ್ನು ಹೊಂದಿದುದಾಗಿತ್ತು. ಮತ್ತು ವಿಷಾದದಿಂದ ಖಿನ್ನರಾದ ದೇವತೆಗಳ ದೀನವಾಣಿಯನ್ನು ಕೇಳಿ, ಕರುಣೆಯಿಂದ ಶಿವನಪಾದಗಳನ್ನು ತೋರಿಸಿ, ಅವರ ವಿಜ್ಞಾಪನೆಯನ್ನು ಮಾಡಿಸಿ, ಆ ಶಿವನ ಆಜ್ಞೆಯ ಪ್ರಕಾರ ನಂದೀಶ್ವರನು ಕಳುಹಿಸಿಕೊಟ್ಟಂಥ ಭೈರವರು ಪರಾಕ್ರಮದಿಂದ ನಡೆತಂದು, ಆ ದೇವತೆಗಳಿಗೆ ವೈರಿಗಳಾದ ದುಷ್ಟರಾದ ರಾಕ್ಷಸರುಗಳ ಸೈನ್ಯವನ್ನು ಬೆನ್ನಟ್ಟಿ ಮುತ್ತಿ ಹೊಡೆದು ಬಡಿದು ಚೂರುಚೂರು ಮಾಡಿ, ಸೀಳಿ, ಹೋಳು ಹೋಳು ಮಾಡಿ, ಸಂಹರಿಸಿ ಪುನಃ ಪರಮೇಶ್ವರನಲ್ಲಿಗೆ ಬಂದಂಥ ಸಮಯದಲ್ಲಿ, ರಕ್ತದಿಂದ ನೆನೆದ ಕರುಳ ಮಾಲೆಯೂ, ನರಗಳಿಂದ ಪೋಣಿಸಲ್ಪಟ್ಟ ಕಠಿಣವಾದ ಮೂಳೆಗಳ ಸಮೂಹವೂ, ಹಿಡಿದುಕೊಂಡಿರುವ ಭಯಂಕರವಾದ ತೀಕ್ಷ್ಣ ಖಡ್ಗವು ಕೈಯಲ್ಲಿ ಶೋಭಿಸುತ್ತಿರಲು, ಅರಳಿದ ಕೆಲವು ದಾಸವಾಳದ ಹೂವಿನೊಡನೆ ಸಮನಾದ ರಕ್ತೋದಕದ ಧಾರೆಯಿಂದ ತೋಯಿಸಲ್ಪಟ್ಟ ಮೀಸೆಗಳಿಂದಲೂ, ಮಾಂಸದೊಡನೆ ಕೂಡಿರುವ ಅವ್ಯಕ್ತ ಮಧುರವಾದ ಕೊರಳುಗಳಿಂದಲೂ, ವಕ್ರವಾದ ಹುಬ್ಬುಗಂಟಿಕ್ಕುವಿಕೆಯಿಂದಲೂ ಭಯಂಕರ ಮುಖಗಳನ್ನುಳ್ಳ ಆ ರಾಕ್ಷಸರ ಭಯಂಕರ ತಲೆಗಳ ಮಾಲೆಗಳು ಕಂಠೋಪಕಂಠಗಳಲ್ಲಿ ಮೆರೆಯುತ್ತಿರಲು, ನಮಸ್ಕರಿಸಿ ನಿಂತುಕೊಂಡ ಭಯಂಕರಾಕಾರದ ಭೈರವರುಗಳ ಸಮೂಹದಿಂದ ಭೀಭತ್ಸರಸವನ್ನು ಹೊಂದಿದುದಾಗಿತ್ತು. ಮತ್ತು ಅನೇಕ ಮುಖಗಳನ್ನೂ, ಅಗಣಿತ ನೇತ್ರಗಳನ್ನೂ, ಮಿತಿಯಿಲ್ಲದ ತೋಳುಗಳನ್ನೂ, ಗಣನಾತೀತವಾದ ಪಾದಗಳನ್ನೂ, ಲೆಕ್ಕವಿಲ್ಲದಷ್ಟು ಕೈಗಳನ್ನೂ ಧರಿಸಿ ಎಲ್ಲಾ ಕಾಲದಲ್ಲೂ ವಿಶ್ವರೂಪವನ್ನು

ಶಶ್ವದ್ವಿರೂಪಮಂ ತೋರ್ಪ ವಿಧಿಸೃಷ್ಟಿಯುಮನಳಿದು ಪೊಸತಂ ಮಾಳ್ಪ ನಿಜಾಭರಣ ಫಣಿಯಿಂ ಗರುಡನಂ ಬೆಂಕೊಳಿಪ ಮೌಳಿಚೂಳದೊಳ್ ತಳೆದ ವಿದುಶಕಲದಿಂ ವಿಧುಂತುದನ ದಿರ್ಚುವ ಪದನಖಮಯೂಖದಿಂ ಖದ್ಯೋತಮಂಡಳಮಂ ಖದ್ಯೋತಕೆಳೆಯೆನಿಪ ಲೀಲಾ ವೇಶವಶೇಷದುನ್ಮಿಷಿತ ನಿಟಿಲತಟನಯನಪುಟಸ್ಫುಟ ವಿಸರ್ಗತ ಶಿಖಿಶಿಖಾ ವಿಸ್ಫುರದ್ವಿಸ್ಫುಲಿಂಗದಿ ನಂಭೋಧಿಯೆಲ್ಲಮನಾಪೋಷಣಂಗೊಳಿಪ ಹೂಂಕೃತಧ್ವಾನದಿನಜಾಂಡಭಾಂಡಮಂ ಅಲ್ಲಾಡಿಪ ಭುಜಪರಿಘಭ್ರಾಂತಿಯಿಂ ಭಗಣಮನಿಳೆಗುದಿರ್ಚುವ ನಿಜಶ್ವಾಸ ಜಂಝಾಪ್ರಭಂಜನಪಾತದಿಂ ದಿವಿಜವಿಮಾನಕೋಟಿಯಂ ತರಗೆಲೆಯಂತೆ ಪಾರಿಪ ಮಹಾದ್ಭುತ ವಿಚಿತ್ರ ಚರಿತ್ರ ಸನಾಥ ಶರಣಾಗತರಕ್ಷಕ ಖಲಶಿಕ್ಷಕ ನಿರುಪಮಾನ ಮಹಾಮಾನೋನ್ನತಾನೂನ ಸಾಮರ್ಥ್ಯಸಮನ್ವಿತ ಸಮಂಚಿತ ನಿರರ್ಗಳ ನಿಸರ್ಗಪ್ರಭಾವ ಮಹಾನುಭಾವ ಪ್ರಸಿದ್ಧ ರುದ್ರಗಣೇಂದ್ರರಿಂದದ್ಭುತ ರಸಮುಮಂ ಮತ್ತಮಿದಿರ್ಚಿದೊಡೆ ಜವನ ಕೋಣನ ಕೋಡಂ ಕೀಳ್ವ ಮಿಳ್ತುವಿನ ದಾಡೆಯಂ ಮುಱಿವ ಮಾರಿಯ ನಾಲಗೆಯಂ ಪರಿವ ಭೈರವನ ಮುಂದಲೆಗೊಯ್ವ ಬಾಸುಗಿಯನುಗಿದುಂಗು

ಕಾಣಿಸುವವರೂ, ಬ್ರಹ್ಮಸೃಷ್ಟಿಯನ್ನೇ ಅಳಿಸಿಹಾಕಿ ಹೊಸ ಸೃಷ್ಟಿಯನ್ನು ನಿರ್ಮಾಣ ಗೊಳಿಸುವವರೂ, ತಮಗೆ ಆಭರಣವಾಗಿರುವ ಹಾವಿನಿಂದ ಗರುಡನನ್ನು ಹೆದರಿಸಿ ಓಡಿಸು ವವರೂ, ಮಸ್ತಕಾಗ್ರದಲ್ಲಿ ಧರಿಸಿರುವ ಚಂದ್ರನ ಕಳೆಯಿಂದ ರಾಹುವನ್ನು ಭಯಪಡಿಸು ವವರೂ, ಪಾದಗಳ ಉಗುರಿನ ಕಿರಣಗಳಿಂದ ಸೂರ್ಯಮಂಡಲವನ್ನು ಮಿಂಚುಹುಳುಗಳಿಗೆ ಸಮಾನವಾಗಿ ಮಾಡುವವರೂ, ವಿಲಾಸಾರ್ಥವಾದ ಆಕೃತಿಗೆ ಅಧೀನವಾದ, ಸ್ವಲ್ಪ ಮಾತ್ರ ತೆರೆದ ಹಣೆಯಲ್ಲಿರುವ ಅಗ್ನಿನೇತ್ರದಿಂದ ತೀಕ್ಷ್ಣವಾಗಿಯೂ ಸ್ಫುಟವಾಗಿಯೂ ಹೊರಬರುತ್ತಿರುವ ಅಗ್ನಿಜ್ವಾಲೆಯ ಪ್ರಕಾಶಮಾನವಾದ ಕಿಡಿಗಳಿಂದ ಸಮಸ್ತ ಸಮುದ್ರಗಳ ನೀರನ್ನೇ ಆಪೋಶನ ಮಾಡುವವರೂ, ಹೂಂಕಾರ ಧ್ವನಿಮಾತ್ರದಿಂದ ಬ್ರಹ್ಮಾಂಡವನ್ನೇ ಅಲ್ಲಾಡುವಂತೆ ಮಾಡುವವರೂ, ತೋಳುಗಳ ಸುತ್ತುವಿಕೆಯಿಂದ ನಕ್ಷತ್ರಗಳನ್ನೆಲ್ಲ ಭೂಮಿಗೆ ಉದುರಿಸುವವರೂ, ತಮ್ಮ ಶ್ವಾಸವಾಯುವೆಂಬ ಪ್ರಚಂಡಗಾಳಿಯ ಹೊಡೆತ ದಿಂದ ಕೋಟ್ಯಾನುಕೋಟಿ ದೇವತೆಗಳ ವಿಮಾನಗಳನ್ನು ತರಗೆಲೆಗಳಂತೆ ಹಾರಿಸುವವರೂ, ಅತ್ಯದ್ಭುತವಾದ ನಾನಾವಿಧ ಚರಿತ್ರೆಗಳಿಂದ ಕೂಡಿರುವವರೂ, ಶರಣಾಗತರಾದವರನ್ನು ಸಂರಕ್ಷಿಸುವವರೂ, ದುಷ್ಟರನ್ನು ಶಿಕ್ಷಿಸುವವರೂ, ಉಪಮಾತೀತವಾದ ಗೌರವದಿಂದ ಶ್ರೇಷ್ಠರೆನಿಸಿ ಅಧಿಕ ಸಾಮರ್ಥ್ಯದಿಂದ ಕೂಡಿರುವವರೂ, ಪೂಜ್ಯತೆಯನ್ನು ಹೊಂದಿದ ತಡೆಯೇ ಇಲ್ಲದ ಸ್ವಾಭಾವಿಕ ತೇಜಸ್ಸಿನಿಂದ ಮಹಾನುಭಾವರೆನಿಸಿ ಪ್ರಖ್ಯಾತರಾದ ರುದ್ರ ಗಣಾಧೀಶ್ವರರಿಂದ ಅದ್ಭುತರಸವನ್ನು ಆ ಸಭೆ ಹೊಂದಿದುದಾಗಿತ್ತು. ಮತ್ತು ಎದುರಿಸಿ ದರೆ ಯಮನ ಕೋಣನ ಕೊಡುಗಳನ್ನೇ ಕೀಳುವ, ಮೃತ್ಯುವಿನ ದಾಡೆಗಳನ್ನೇ ಮುರಿಯುವ, ಮಾರಿಯ ನಾಲಿಗೆಯನ್ನು ಹರಿಯುವ, ಭೈರವನ ಮುಂದಲೆಯನ್ನು ಕತ್ತರಿಸುವ, ವಾಸುಕಿಯನ್ನು ಸೀಳಿ ಉಂಗುರಗಳನ್ನಾಗಿ ಮಾಡಿ ಬೆರಳಿನಲ್ಲಿ ಹಾಕಿ

ರುಂಗೆಯ್ದಂಗುಲಿಯೊಳ್ತೊಡರ್ಚುವ ಕುಳಗಿರಿಯಂ ನೆಗಪಿ ತಿರಿಕಲ್ಲಾಡುವಾದಿಕಮಠನ ಕಠಿಣ ಖರ್ಪರಂ ತರ್ಗಿನುರ್ಗೆ ಮೆಟ್ಟಿ ನಾಟ್ಯಮನಾಡುವ ದಿಗ್ಗಜಂಗಳ ನಿಗ್ಗವಮಂ ಮುಱಿದು ಮುದ್ಗ ರಂಗೆಯ್ದು ಪಿಡಿವ ಮಹಿವಿಯತ್ತಳಮಂ ಕರತಳದಿಂ ತಳೆದು ತಾಳಂಗುಟ್ಟುವ ಸಿಡಿಲಂ ಪಿಡಿದು ಕಡೆಯಂಗೆಯ್ದೆಡಗಾಲೊಳಿಕ್ಕುವ ಕಾಲಾಗ್ನಿಯಂ ಪೊಸೆದು ಬೊಟ್ಟಿಟ್ಟುಕೊಳ್ವ ಪೊಡೆಯಲರನಂ ಜಡಿವ ಜಡಜಜನ ಫಣೆಯಕ್ಕರಮಂ ತೊಡೆವ ಕಡಲಂ ಕುಡಿವ ಬಡಬನಂ ಪಿಡಿವ ರವಿಶಶಿಗಳಂ ಮಿಡಿವ ಕುಳಿಕನಂ ತೊಡುವ ಭಗಣಮಂ ಮುಡಿವ ಮೃಡನ ಸಾಹಸಮೆ ಪಲವು ರೂಪಾಂತು ದೆನಿಸಿ ನಿಂದತಿಖಳಪ್ರಥಿತಪ್ರತಾಪ ಸಮುಗ್ರೋದಗ್ರ ವಿಗ್ರಹ ವಿಜಿತ ವಿಗ್ರಹ ವೀರ ವೀರ ಪ್ರಮಥವಾರದಿಂ ವಿಸ್ಫಾರ ವೀರರಸಮುಮಂ ಮತ್ತಂ ಜಡಿವ ಫಣಿಕುಂಡಲದ ಕೆಂಬೆಳಗು ಥಳ ಥಳಿಸಿ ತಳ್ತಿರೆ ಕುಡಿಗೆಂಪನಾಳ್ದು ಪೊಳೆದು ಬಿಂಕಂಬೆತ್ತು ಕೊಂಕಿನಿಂದ ಕೂರ್ದಾಡೆಗಳ ನಿಜ ನಿಟಿಲತಟದೊಳಳವಟ್ಟು ಬಿಸಿಯ ಬೆಳಗನೊಳಕೊಂಡೊಳಗೊಳಗೆ ಘುಳುಘುಳಿಪ ವಿಪುಳತರ ಸುರದ್ವಿಸ್ಫುಲಿಂಗಸಂಘಾತ ಸಂಗತ ಸಂವರ್ತ ಶಿಖಿವಿಲೋಚನದ ಚಟುಲತಟಿಲ್ಲತಾ ಕುಟಿಲ

ಕೊಳ್ಳುವ, ಕುಲಗಿರಿಗಳನ್ನು ಎತ್ತಿ ಆಣೆಕಲ್ಲನ್ನಾಗಿ ಮಾಡಿ ಆಡುವ, ಆದಿಕೂರ್ಮನ ಬಿರುಸಾದ ಬೆನ್ನಿನ ಚಿಪ್ಪು ತಗ್ಗಿ ನುಚ್ಚುನೂರಾಗುವಂತೆ ಮೆಟ್ಟಿ ಕುಣಿದಾಡುವ, ದಿಗ್ಗಜಗಳ ದಂತಗಳನ್ನು ಮುರಿದು ತುಂಡುಮಾಡಿ ಮುದ್ಗರವೆಂಬಾಯುಧವನ್ನಾಗಿ ಮಾಡಿ ಹಿಡಿಯುವ, ಭೂಮ್ಯಾಕಾಶಗಳನ್ನು ಕೈಯಲ್ಲಿ ಹಿಡಿದು ತಾಳಹಾಕುವ, ಸಿಡಿಲನ್ನು ಹಿಡಿದು ಕಡೆಯನ್ನಾಗಿ ಮಾಡಿ ತಮ್ಮ ಎಡಗಾಲಿನಲ್ಲಿ ಹಾಕಿಕೊಳ್ಳುವ, ಪ್ರಳಯಕಾಲದ ಅಗ್ನಿಯನ್ನು ತಿಕ್ಕಿ ತಿಲಕವನ್ನಾಗಿ ಮಾಡಿ ಹಣೆಯಲ್ಲಿಟ್ಟುಕೊಳ್ಳುವ, ವಿಷ್ಣುವನ್ನು ಜಡಿಯುವ, ಬ್ರಹ್ಮನ ಹಣೆಯಬರಹವನ್ನೇ ಅಳಿಸುವ, ಸಮುದ್ರಗಳನ್ನು ಕುಡಿಯುವ, ಬಡಬಾಗ್ನಿಯನ್ನು ಕೈಯಿಂದ ಹಿಡಿಯುವ, ಸೂರ್ಯಚಂದ್ರರನ್ನು ಬೆರಳಿನಿಂದ ಚಿಮ್ಮುವ, ಕುಳಿಕನೆಂಬ ಕ್ರೂರಸರ್ಪವನ್ನು ಮೈಮೇಲೆ ಧರಿಸುವ, ನಕ್ಷತ್ರಸಮೂಹವನ್ನು ಮುಡಿದು ಕೊಳ್ಳುವ, ಪರಮೇಶ್ವರನ ಸಾಹಸವೇ ವಿವಿಧ ವೇಷಗಳನ್ನು ಧರಿಸಿರುವುದೋ ಎಂದೆನಿಸಿ ನಿಂತಿದ್ದ, ಅತಿಬಲಶಾಲಿಗಳೆಂದು ಪ್ರಸಿದ್ಧರಾದ, ಸಮುಗ್ರ ಪರಾಕ್ರಮವೇ ದೇಹ ವಾಂತಂತಿರುವ ಯುದ್ಧವೀರರೆನಿಸಿದವರನ್ನೆಲ್ಲ ಗೆದ್ದಂತಹ ವೀರಪ್ರಮಥರುಗಳ ಸಮೂಹ ದಿಂದ ಅಧಿಕವಾದ ವೀರರಸವನ್ನು ಹೊಂದಿತ್ತು. ಮತ್ತು ಬಡಿದಾಡುತ್ತಿರುವ ಹಾವುಗಳ ಕರ್ಣಾಭರಣದ ಕೆಂಪಾದ ಪ್ರಕಾಶವು ಥಳಥಳಿಸುತ್ತಿರಲು ಅಗ್ರಭಾಗದಲ್ಲಿ ಕೆಂಪನ್ನು ಹೊಂದಿ, ಹೊಳೆಯುತ್ತ ಬಿಂಕದಿಂದ ಕೂಡಿ ವಕ್ರವಾದ ಕೋರೆಹಲ್ಲುಗಳಿಂದಲೂ, ಹಣೆಯ ಪ್ರದೇಶದಲ್ಲಿ ಸಂಬಂಧಿಸಿದ ಉಷ್ಣಪ್ರಕಾಶವನ್ನೊಳಗೊಂಡು, ಒಳಗೊಳಗೇ ಘುಳುಘುಳು ಧ್ವನಿಮಾಡುತ್ತಿರುವ ವಿಶೇಷವಾದ ಕಿಡಿಗಳ ಸಮೂಹದಿಂದ ಕೂಡಿರುವ ಪ್ರಳಯಕಾಲದ ಅಗ್ನಿನೇತ್ರಗಳಿಂದಲೂ, ತೀಕ್ಷ್ಣವಾದ ಬಳ್ಳಿಮಿಂಚಿನಂತೆ

ಜಟಾಪಟಲ ಮಕುಟತಟಘಟಿತ ಪಟುದನುಜ ಕಪಾಲಮಾಲಾವಲಯದ ಧಗಧಗಿತ ನಿಸ್ತ್ರಿಂಶ ತ್ರಿಶೂಲ ಖಡ್ಗ ಚಾಪಮಾರ್ಗಣ ಕಣಕಲಿತ ಕರಚತುಷ್ಟಯದ ಕಂಠೋಪಕಂಠಸಂಘಟಿತ ಘನ ಘೋಷ ವಿಷವಿಷಮಭೀಷಣೋತ್ಫಣಿತ ಫಣೀಂದ್ರ ಗ್ರೈವೇಯಕದ ನಿಜಭುಜಾಂತರಾಳದೊಳ್ ಬೊಬ್ಬೆಗೊಟ್ಟಬ್ಬರಿಸಿ ಕೊರ್ಬಿದ ಸುರರಿಪುಶಿರೋಮಾಲೆಯ ವಿಕಟಾಟ್ಟಹಾಸ ಭಾಸುರ ಭ್ರುಕುಟಿ ಭಯಂಕರಮುಖಾಂಬುಜದ ಬಿಗಿದುಟ್ಟ ಚಿತ್ರಕಾಯಚರ್ಮ ಚಿತ್ರವಸನದ ಪೊದೆದ ಮದೇಭಚರ್ಮದುತ್ತರೀಯಕದ ವಾಮಾಂಘ್ರಿಯೊಳೊಲೆದುದ್ಘೋಷಿಪ ಧನುಜ ಮದಭಂಜನ ನೆಂಬ ಬಿರಿದಿನ ತೊಡರ ಸಜಳ ಜಳಧರ ಮದಾಳಿಕುಳ ನೀಲರುಚಿ ಸಮಗ್ರೋದಗ್ರೋಗ್ರ ವಿಗ್ರಹದ ಪೊಡರ್ಪು ವಿಜೃಂಭಿಸೆ ಸಮಪರಾಕ್ರಮಸಮನ್ವಿತಾಪ್ರಮಿತ ಪ್ರಮಥ ರುದ್ರಗಣ ಸಮಾವೃತ ದಕ್ಷಮಖಸಮಾಗತ ಸಕಳ ದಿವಿಜವಿದ್ರಾವಣ ವೀರಭದ್ರನಿಂ ರೌದ್ರರಸಮುಮಂ ಮತ್ತಂ ಅತಿವಿತತ ವಿಶದರುಚಿ ಪರಿಹಸಿತ ಶಶಿರುಚಿಸ್ಫಟಿಕಮಣಿಕುಟ್ಟಿಮ ಪ್ರತಿಬಿಂಬಿತ ಮಹೇಂದ್ರಮಣಿನಿರ್ಮಿತ ತನ್ಮಂಟಪಾಗ್ರವಲಭಿಭಾಗಸಂಭೃತ ಪ್ರಚುರ ಮೇಚಕರುಚಿ

ವಕ್ರವಾದ ಜಡೆಗಳ ಸಮೂಹದಲ್ಲಿರುವ ಕಿರೀಟಗಳ ತುದಿಯಲ್ಲಿ ಕೆತ್ತಿದಂಥ ಶೂರ ರಾಕ್ಷಸರ ಕಪಾಲಗಳ ಸಮೂಹದಿಂದಲೂ, ಧಗಧಗಾಯಮಾನವಾಗಿ ಕ್ರೂರವಾದ ತ್ರಿಶೂಲದಿಂದಲೂ, ಕತ್ತಿಯಿಂದಲೂ, ಬಿಲ್ಲುಬಾಣಗಳಿಂದಲೂ ಕೂಡಿದ ನಾಲ್ಕು ಕೈಗಳ, ಕಂಠೋಪಕಂಠಗಳಲ್ಲಿ ಸಂಬಂಧಿಸಲ್ಪಟ್ಟ, ಘನವಾದ ಶಬ್ದಮಾಡುವ ವಿಷದಿಂದ ಅತಿ ಭಯಂಕರವಾದ ಹೆಡೆಯೆತ್ತಿದ ಆದಿಶೇಷನ ಕಂಠಾಭರಣದ, (ಮತ್ತು) ತನ್ನ ಭುಜಗಳ ಮಧ್ಯದಲ್ಲಿ ಬೊಬ್ಬೆಹಾಕಿ ಆರ್ಭಟಿ ಮಾಡಿ, ಕೊಬ್ಬಿದ ರಾಕ್ಷಸರುಗಳ ತಲೆಗಳ ಮಾಲಿಕೆಯ, ವಿಕಟವಾದ ಅಟ್ಟಹಾಸದಿಂದ ಪ್ರಕಾಶಮಾನವಾದ ಭಯಂಕರವಾಗುವ ಹಾಗೆ ಹುಬ್ಬು ಗಂಟಿಕ್ಕಿದ ಮುಖಕಮಲದ, ಗಟ್ಟಿಯಾಗಿ ಉಟ್ಟುಕೊಂಡಿರುವ ವ್ಯಾಘ್ರಾಸುರನ ಚರ್ಮ ವೆಂಬ ನಾನಾ ಬಣ್ಣದ ವಸ್ತ್ರದ, ಹೊದೆದ ಮದೋನ್ಮತ್ತನಾದ ಗಜಾಸುರನ ಚರ್ಮದ ಹೊದೆಯುವ ವಸ್ತ್ರದ, ಎಡಗಡೆಯ ಪಾದದಲ್ಲಿ ಅಲ್ಲಾಡುತ್ತ ಧ್ವನಿಮಾಡತಕ್ಕ ರಾಕ್ಷಸರ ಗರ್ವನಾಶಕನೆಂಬ ಬಿರುದಿನಬಳೆಯನ್ನುಳ್ಳ, ನೀರಿನಿಂದ ತುಂಬಿರುವ ಮೇಘಗಳ ಹಾಗೆಯೂ, ಮದಿಸಿದ ದುಂಬಿಗಳಂತೆಯೂ, ನೀಲವರ್ಣದಿಂದ ಕೂಡಿದ ಸಮಗ್ರ ದೇಹಕಾಂತಿಯು ಶ್ರೇಷ್ಠವಾಗಿ ಕಾಣುವ ದೇಹದ ಶೌರ್ಯಾವಷ್ಟಂಭವು ವ್ಯಾಪಿಸಿರಲು, ಸಮಾನ ಸಾಮರ್ಥ್ಯದಿಂದ ಕೂಡಿ ಅನುಪಮವಾದ ಪ್ರಮಥ ರುದ್ರಗಣ ದಿಂದ ಸುತ್ತುವರಿಯಲ್ಪಟ್ಟ ದಕ್ಷಬ್ರಹ್ಮನ ಯಾಗಕ್ಕೆ ಕೂಡಿದ ಸಮಸ್ತ ದೇವತೆ ಗಳನ್ನು ಓಡಿಸಿದ ವೀರಭದ್ರನಿಂದ ರೌದ್ರರಸವನ್ನು ಹೊಂದಿತ್ತು. ಮತ್ತು ಅತ್ಯಂತ ವಿಶಾಲವೂ, ನಿರ್ಮಲವೂ ಆದ ಕಾಂತಿಯಿಂದ ಚಂದ್ರಕಾಂತಿಯನ್ನೂ ತಿರಸ್ಕರಿಸುವ ಸ್ಫಟಿಕಮಣಿಯ ನೆಲಗಟ್ಟನಲ್ಲಿ ಪ್ರತಿಬಿಂಬಗೊಂಡ ಇಂದ್ರನೀಲಮಣಿ ಗಳಿಂದ ಮಾಡಿದ ಆ ಮಂಟಪಗಳ ಮುಂದುಗಡೆಯಲ್ಲಿರುವ ಸೂರುಗಳ ಬಹು ಕಪ್ಪಾದ

ಪ್ರಳಯಮಂ ಮುನ್ನೀರೊಳ್ ಮುನ್ನಮೊಗೆದು ಬೆನ್ನಟ್ಟಿ ಸುಟ್ಟುರುಪಿ ವಿಲಯಂಗೆಯ್ಯಲುಜ್ಜು
ಗಿಸಿವಂದ ಘೋರತರಗರಳಂಗೆತ್ತಗಿದು ಸುಗಿದು ಪೆಡಮೆಟ್ಟಿ ನಡನಡಂ ನಡುಂಗಿ ಸೆಡೆದಡಿಗಡಿಗೆ
ತಲ್ಲಣಿಸಿ ಮೃಡಂಗೆ ಮೊಱೆಯಿಡಲುಜ್ಜುಗಿಪ ಮುಗ್ಧಾಮರಪ್ರಕರದಿಂ ಭಯಾನಕರಸಮುಮಂ
ಮತ್ತಮೆಳಲ್ವ ಕೆಂಜೆಡೆಯ ಪೊಳೆವ ಸುಲಿಪಲ್ಗಳ ನೊಸಲೊಳ್ಮಸುಪ ಭಸಿತ ತ್ರಿಪುಂಡ್ರದ ಹಸನ
ರುಚಿಲಸಿತ ಸುಪ್ರಸನ್ನ ಮುಖಾಂಬುಜದ ಕೊರಲುರಂ ತೀವಿ ತಳೆದ ರುದ್ರಾಕ್ಷಮಾಲಿಕೆಗಳೆಡ
ವೆಗಲಿಂ ಬಲದ ಬರವರೆಗಮೆಳಲೆವಿಟ್ಟ ಜೋಗವಟ್ಟಿಗೆಯ ವಾಮಕಕ್ಷದೊಳಿಱುಂಕಿದ ಭಸ್ಮ
ಘುಟಿಕೆಯ ಬಲದ ಕರಾಗ್ರದೊಳಾಂತ ಪಳುಕುಗುಂಡಿಗೆಯ ಪೊದೆದುಟ್ಟ ಮೃದುವಲ್ಕಲದ
ಕಡುಬೆಡಂಗಡರೆ ಹೃದಯಕಮಲಮಧ್ಯಮಂಡಿತ ತ್ರಿಮಂಡಲತ್ರಯಾಗ್ರದೊಳ್ಬಿಡದೆ ಜಾನಿಪ ದಿವ್ಯ
ಮೂರ್ತಿ ಜಲಕ್ಕನೆ ಸುರಸಭಾಮಧ್ಯ ಭಾಸಮಾನ ಸಿಂಹಾಸನ ಸಮಾಸೀನಮಾಗಿ ತೊಳತೊಳಗಿ
ತೊಟ್ಟನೆ ದಿಟ್ಟಗಿನಿದುಗಱಿದು ಮೆಱೆಯೆ ಕೀಲಿಸಿದಂತೆ ತಳ್ತಮೆ ಮಿಡುಕದ ನೋಟಮುಮಾ
ನೋಟದೊಳ್ ಸಿಲ್ಕಿ ಕಟ್ಟುವಡೆದಂತೆ ನೆಲೆಗೊಂಡ ಮನಮುಮಾ ಮನದ ಬೆಂಬಳಿವಿಡಿದು

ಕಾಂತಿಯನ್ನು, ಮೊದಲು ಸಮುದ್ರದಲ್ಲಿ ಹುಟ್ಟಿ, ಬೆನ್ನಟ್ಟಿಕೊಂಡು ಬಂದು, ಸುಟ್ಟು
ಬೂದಿ ಮಾಡಿ, ಪ್ರಳಯವನ್ನು ಮಾಡಲು ಉದ್ಯುಕ್ತವಾಗಿರುವ ಘೋರತರವಾದ ಹಾಲಾ
ಹಲ ವಿಷವೆಂದು ತಿಳಿದು, ಭೀತಿಗೊಂಡು ಬೆಂಡಾಗಿ ಹಿಂದೆ ಸರಿದು ಗಡ ಗಡ ನಡುಗಿ,
ಸೆಡೆದು ಹೆಜ್ಜೆ ಹೆಜ್ಜೆಗೂ ತಳಮಳಗೊಂಡು ಈಶ್ವರನಿಗೆ ದೂರಿಕೊಳ್ಳುವುದಕ್ಕೆ ಉದ್ಯುಕ್ತ
ರಾಗಿರುವ ಮುಗ್ಧರಾದ ದೇವತೆಗಳ ಗುಂಪಿನಿಂದ ಭಯಾನಕರಸವನ್ನು ಹೊಂದಿತ್ತು.
ಮತ್ತು ಜೋಲುಬಿದ್ದ ಕೆಂಜೆಡೆಯ, ಹೊಳೆಯುವ ಬಿಳಿಯ ಹಲ್ಲುಗಳ, ಹಣೆಯಲ್ಲಿ
ಶೋಭಿಸುವ ಭಸ್ಮದ ಮೂರು ರೇಖೆಗಳ, ಮುಗುಳ್ನಗೆಯಿಂದ ಪ್ರಕಾಶಮಾನವಾದ
ಸುಪ್ರಸನ್ನತೆಗೊಂಡ ಮುಖಕಮಲದ, ಕೊರಳು ಎದೆಗಳ ತುಂಬ ತುಂಬಿದ ರುದ್ರಾಕ್ಷಿಯ
ಸರಗಳ, ಎಡಗಡೆಯ ಹೆಗಲಿನಿಂದ ಬಲಭಾಗದ ಪಕ್ಕೆಯವರೆಗೆ ಜೋಲುಬಿದ್ದ ಯೋಗ
ವಟ್ಟಿಗೆಯ, ಎಡಭಾಗದ ಕಂಕುಳಲ್ಲಿ ಇರುಕಿಸಿಕೊಂಡಿರುವ ಭಸ್ಮದ ಘುಟಿಕೆಯ,
ಬಲದಕಯ್ಯಲ್ಲಿ ಹಿಡಿದ ಸ್ಫಟಿಕಮಣಿಯ ಕಮಂಡಲುವಿನ, ಹೊದ್ದು ಉಟ್ಟುಕೊಂಡ
ಮೃದುವಾದ ನಾರುಮಡಿಯ, ಅಧಿಕ ಸೊಗಸುಗೂಡಿ ಹೃದಯಕಮಲಮಧ್ಯದಲ್ಲಿ
ಅಲಂಕರಿಸಲ್ಪಟ್ಟ ಸೂರ್ಯ ಚಂದ್ರಾಗ್ನಿಮಂಡಲತ್ರಯದ, ತುದಿಯಲ್ಲಿ ಎಡಬಿಡದೆ ಧ್ಯಾನಿಸು
ತ್ತಿರುವ ಸ್ವಯಂಪ್ರಕಾಶವುಳ್ಳ ಮೂರ್ತಿಯು ತಟ್ಟನೆ ದೇವಸಭಾ ಮಧ್ಯದಲ್ಲಿ ಪ್ರಕಾಶಿಸುವ
ಸಿಂಹಾಸನದಲ್ಲಿ ಕುಳಿತುಕೊಂಡಿರುವಂಥವನಾಗಿ, ತೊಳತೊಳಗಿ ಪ್ರಕಾಶಿಸಿ, ಜಾಗ್ರತೆ
ಯಾಗಿ ನೋಟಕ್ಕೆ ಮನೋಹರತ್ವವನ್ನುಂಟುಮಾಡಿ ಮೆರೆಯುತ್ತಿರಲು, ಬೆಸುಗೆಗೊಂಡ
ಹಾಗೆ ಸಂಬಂಧಗೊಂಡ ದೃಷ್ಟಿಯುಳ್ಳವರಾಗಿ ರೆಪ್ಪೆಗಳನ್ನು ಮಿಟುಕಿಸದಂತೆ ನೋಡುವ
ನೋಟವೂ, ಆ ನೋಟದಲ್ಲಿ ಸಿಕ್ಕು ಬಂಧಿಸಿಟ್ಟ ಹಾಗೆ ಸ್ಥಿರವಾದ ಮನಸ್ಸೂ, ಆ
ಮನಸ್ಸನ್ನು ಅನುಸರಿಸಿ ನಿಶ್ಚಲವಾದ ಸಮಸ್ತ ಇಂದ್ರಿಯಗಳೂ, ಆ ಇಂದ್ರಿಯಗಳ ಜೊತೆ

ಪಾಱಿಳಿದಶೇಷ ಕರಣಂಗಳುಮಾ ಕರಣಂಗಳೊಡನಡಂಗಿ ನಿಷ್ಪಂದತೆಗೆ ಪಕ್ಕಾದ ಹರಣಮುಮಾ ಹರಣಮುಂ ಬಳಿವಿಡಿದು ನಿಶ್ಚಲತ್ವಂಬಡೆದಹಂಕೃತಿಯುಳಿದು ಹರವಸಂ ಕೈಮಿಕ್ಕು ಜಲಧಿಯೊಳಾಳ್ದ ಜಳೋಪಲದಂತೆ ಕಟ್ಟನೆ ಕರಗಿ ತೊಟ್ಟನೆ ರಸಮಯಮಾದ ಪರಮಾನಂದಸುಧಾಸಮುದ್ರದೊಳವಗಾಹಮಿರ್ದ ಶಿವಯೋಗೀಂದ್ರ ಸಂತಾನದಿಂ ಶಾಂತರಸಮುಮಂ ಕೈಕೊಂಡು ತಳೆದತ್ಯಂತಮನೋಹರಮಾಗಿ ರವಿಶಶಿಶಿಖಿಗಳ ಶತಕೋಟಿ ದಿವ್ಯರುಚಿಯಂ ಪಳಿದು ಪಜ್ವಳಿಪ ನಿರುಪಮ ನಿರತಿಶಯ ನಿರವದ್ಯ ನಿರವಧಿ ವಿವಿಧ ವಿಭವ ಸಮಧಿಗತ ತನ್ಮಹಾ ಸಭಾಮಧ್ಯಮಂಡಿತ ಮಣಿಗಣಖಚಿತ ಮಹನೀಯ ತಪನೀಯಮಯ ಮಧುಮುದಿತ ಮಧುಕರರವ ಮಧುರ ಸರಸ ಪರಿಮಳ ಮಿಳಿತ ದರದಳಿತ ಸುರಕುಜ ಕುಸುಮ ವಿಸರಮಾಲಿಕಾಲಂಕೃತ ಮಹಾರಮಣರಮಣೀಯ ವಿತಾನದ ಕೆಳಗಳವಟ್ಟ ವಿತತಪ್ರಭಾವಳಯ ವಿಳಸಿತಮಾದ ಮೃಗೇಂದ್ರಾಸನ ಮಧ್ಯದಲ್ಲಿ

ಕಂ॥ ಫಣಿಪತಿನಾಳಂ ದಳಕುಳ
ಮಣಿಮಾದಿಗಳಮರ್ದ ಶಕ್ತಿಕರ್ಣಿಕೆ ಭಾಸ್ವ
ದ್ಗುಣ ವಿದ್ಯೇಶರ್ಕೇಸರ
ಗಣಮಾಗಿರೆ ಮಿಸುಪ ಪದ್ಮಪೀಠಸ್ಥಳದೊಳ್ ೧೧೭

ಯಲ್ಲಿಯೇ ಅಡಗಿ ನಿಶ್ಚಲತ್ವಕ್ಕೆ ಪಕ್ಕಾದ ಪ್ರಾಣವೂ, ಆ ಪ್ರಾಣವನ್ನು ಅನುಸರಿಸಿ ನಿಶ್ಚಲತ್ವವನ್ನು ಹೊಂದಿದ ಅಹಂಕಾರವು ಅಳಿದು ಪರವಶ್ಯವು ಅಧಿಕವಾಗಲು, ಸಮುದ್ರದಲ್ಲಿ ಮುಳುಗಿದ ಆಲಿಕಲ್ಲಿನಂತೆ ಪೂರ್ಣವಾಗಿ ಕರಗಿ, ಬೇಗನೆ ರಸಮಯವಾದ ಪರಮಾನಂದವೆಂಬ ಅಮೃತಸಮುದ್ರದಲ್ಲಿ ಮುಳುಗಿರುವ ಶಿವಯೋಗೀಶ್ವರರ ಸಮುದಾಯದಿಂದ ಶಾಂತರಸವನ್ನು ಅಂಗೀಕರಿಸಿ ಧರಿಸಿ, ಅತಿರಮಣೀಯವಾಗಿ ಸೂರ್ಯ ಚಂದ್ರಾಗ್ನಿಗಳ ನೂರುಕೋಟಿ ದಿವ್ಯಪ್ರಕಾಶವನ್ನು ತಿರಸ್ಕರಿಸಿ ಪ್ರಜ್ವಲಿಸುತ್ತಿರುವ ಉಪಮಾತೀತವಾದ, ಅತ್ಯಧಿಕವಾದ, ನಿರ್ದುಷ್ಟರಾದ, ನಿಲುಗಡೆಯೇ ಇಲ್ಲದ, ನಾನಾ ವಿಧವಾದ ವೈಭವಗಳನ್ನು ಹೊಂದಿರುವಂತಹ, ಆ ಕೈಲಾಸಸಭಾಮಧ್ಯದಲ್ಲಿ ಅಲಂಕರಿಸಲ್ಪಟ್ಟ ರತ್ನಸಮೂಹದಿಂದ ಕೆತ್ತಲ್ಪಟ್ಟ ಪೂಜನೀಯವಾದ, ಸುವರ್ಣವಿಕಾರವಾದ, ಮಕರಂದದಿಂದ ಸಂತೋಷಗೊಂಡ ದುಂಬಿಗಳ ಝೇಂಕಾರರವದಿಂದ ಕೂಡಿ, ಮಧುರವಾದ ರಸದಿಂದಲೂ ಪರಿಮಳದಿಂದಲೂ ಮಿಳಿತವಾದ ಸ್ವಲ್ಪ ಅರಳಿದ ಕಲ್ಪವೃಕ್ಷದ ಹೂವಿನ ಸಮೂಹದಿಂದ ಮಾಡಿದ ಮಾಲಿಕೆಗಳಿಂದ ಅಲಂಕಾರಗೊಳಿಸಲ್ಪಟ್ಟ ಅತ್ಯಂತ ರಮಣೀಯವಾದ ಮೇಲುಕಟ್ಟನಿಂದಲೂ, ವಿಸ್ತಾರವಾದ ಕಾಂತಿಗಳ ಮಂಡಲದಿಂದಲೂ ಶೋಭಿಸುತ್ತಿರುವುದಾಗಿರುವ ಮಹಾ ಸಿಂಹಾಸನ ಮಧ್ಯದಲ್ಲಿ, ೧೧೭. ಆದಿಶೇಷನೇ ದಂಟಾಗಿ, ಅಣಿಮಾದ್ಯಷ್ಟೈಶ್ವರ್ಯಗಳೇ ದಳಗಳಾಗಿ, ಆದಿಶಕ್ತಿಯೇ ಬೀಜಕೋಶವಾಗಿ, ವಿದ್ಯೇಶ್ವರರೇ

ಮ॥ ವಿತತಾನಂದರಸಾಕರಂ ಪ್ರಣತವೃಂದಶ್ರೀಕರಂ ವಿಶ್ವವಿ
ಶ್ರುತ ವಿದ್ಯಾಬ್ಜದಿವಾಕರಂ ಪ್ರಬಳ ಮಾಯಾಭೀಕರಂ ಭಕ್ತಸಂ
ತತಿ ದುಗ್ಧಾಬ್ಧಿಸುಧಾಕರಂ ಸುಕೃತ ಸದ್ರತ್ನಾಕರಂ ದೇವವಂ
ದಿತನಿರ್ದಂ ಮಹಿಮಾಕರಂ ಶಶಿಕಳಾಶ್ರೀಶೇಖರಂ ಶಂಕರಂ ೧೦೮

ಮ॥ಸ್ರ॥ ಗಿರಿಜಾತಾ ದೀರ್ಘನೇತ್ರದ್ಯುತಿ ಧವಳಿತ ಚರ್ಮಾಂಬರಂ ಕ್ಷೌಮದಿವ್ಯಾಂ
ಬರಮಂ ತನ್ಮಂಜುಮಂದಶ್ವಸಿತ ಸುರಭಿತಶ್ರೀಗಳ ಶ್ರೀರಸಂ ಕ
ಸ್ತೂರಿಯಂ ತತ್ಕಾಯಭಾಸ್ವದ್ರುಚಿನಿಚಯ ಪಿಶಂಗೀಕೃತಾಂಗಾಹಿಚಾಮಿ
ಕರಚಂಚನ್ಮಾಲೆಯಂ ಪೋಲ್ತಿರೆ ಕರಮೆಸೆದಂ ಬಾಲಚಂದ್ರಾವತಂಸಂ ೧೦೯

ವ॥ ಮತ್ತಂ

ಕಂ॥ ಕಱಿಮಱಿಯಿಲ್ಲದ ಬಲ್ಲವ
ರಱಿತಕ್ಕೊಳಗಾಗದಾಗಮದ ಬಗೆ ಪುಗದೆ
ಳ್ವಱ ಜತಿಗಳ ಜಾನಕ್ಕಿಡೆ
ದೆಱಪಾಗದ ಚಿನ್ಮಯಪ್ರಭಂ ಮೆಱೆದಿರ್ದಂ ೧೧೦

ಕಿಂಜಲ್ಕಗಳ ಗುಂಪಾಗಿ ಶೋಭಿಸುತ್ತಿರುವ ಕಮಲಪೀಠಸ್ಥಳದಲ್ಲಿ, ೧೦೮. ಅಧಿಕವಾದ ಆನಂದರಸಕ್ಕೆ ಆಶ್ರಯನಾಗಿಯೂ, ನಮಸ್ಕಾರಮಾಡುವ ಜನರಿಗೆ ಭೋಗ ಮೋಕ್ಷರೂಪವಾದ ಸಂಪತ್ತನ್ನು ಕೊಡುವವನಾಗಿಯೂ, ಪ್ರಸಿದ್ಧವಾದ ವೇದ ವೇದಾಂಗಾದಿ ವಿದ್ಯೆಗಳೆಂಬ ಕಮಲಗಳಿಗೆ ಸೂರ್ಯಪ್ರಾಯನಾಗಿಯೂ, ಮಾಯೆಗೆ ಭಯಂಕರ ಸ್ವರೂಪನಾಗಿಯೂ, ತನ್ನ ಭಕ್ತರಗುಂಪೆಂಬ ಕ್ಷೀರಸಮುದ್ರಕ್ಕೆ ಚಂದ್ರನಾಗಿಯೂ, ಪುಣ್ಯಗಳಿಗೆ ಸಮುದ್ರನಾಗಿಯೂ, ದೇವತೆಗಳಿಂದ ನಮಸ್ಕಾರ ಮಾಡಿಸಿಕೊಳ್ಳುವವನಾಗಿಯೂ, ಮಹಿಮಾಕರನಾಗಿಯೂ, ಚಂದ್ರಧರನಾಗಿಯೂ ಇರುವ ಸದಾಶಿವನು ಕುಳಿತುಕೊಂಡಿದ್ದನು. ೧೦೯. ಪಾರ್ವತಿಯ ವಿಶಾಲವಾದ ನೇತ್ರಗಳ ಕಾಂತಿಯಿಂದ ಶುಭ್ರವಾಗಿ ಮಾಡಲ್ಪಟ್ಟ ಗಜಚರ್ಮವೆಂಬ ವಸ್ತ್ರವು ದಿವ್ಯವಾದ ಪೀತಾಂಬರಕ್ಕೂ, ಆ ಪಾರ್ವತಿಯ ಮನೋಹರವಾದ ಉಸಿರಿನಿಂದ ಪರಿಮಳಿಸುತ್ತಿರುವ ಕಂಠದಲ್ಲಿನ ವಿಷವು ಕಸ್ತೂರಿಗೂ, ಆ ಪಾರ್ವತಿಯ ದೇಹದ ಕಾಂತಿಗಳ ಗುಂಪಿನಿಂದ ಹೊಂಬಣ್ಣವಾಗಿರುವ ಶರೀರದಲ್ಲಿ ಧರಿಸಿರುವ ಸರ್ಪವು ಬಂಗಾರದ ಹಾರಕ್ಕೂ ಸಮಾನವಾಗಿರುತ್ತಿರಲು ಸದಾಶಿವನು ಚೆನ್ನಾಗಿ ಶೋಭಿಸುತ್ತಿದ್ದನು. ವ॥ ಮತ್ತು ೧೧೦. ಕಲಂಕವಿಲ್ಲದ, ಮುಚ್ಚುಮರೆಯಿಲ್ಲದ, ಬಲ್ಲವರ ತಿಳುವಳಿಕೆಗೆ ಸಿಕ್ಕದವನಾದ, ಯತಿಗಳ ಧ್ಯಾನಕ್ಕೆ ಸಿಕ್ಕದವನಾದ,

ತತ್ತ್ವಾತೀತಂ ತತ್ತ್ವವಿ
ಭುತ್ತ್ವಯುತಂ ತತ್ತ್ವಕಾರಣಂ ತತ್ತ್ವನಿಯಂ
ತೃತ್ವ ಪರತಂತ್ರರಹಿತಂ
ತತ್ತ್ವಲಯಸ್ಥಾನನೆಸೆದನಾಸ್ಥಾಯಿಕೆಯೊಳ್ ೧೧೧

ಎಲ್ಲಂ ತಾನಲ್ಲದ ಬಳಿ
ಕೆಲ್ಲಂ ತಾನಾದ ಶೂನ್ಯನಲ್ಲದ ರೂಪೆಂ
ದಿಲ್ಲದೊಳಗಲ್ಲದುಱಿ ಪೊಱ
ಗಲ್ಲದ ಪವಣಕ್ಕೆ ನಿಲ್ಲದನುಪಮನೆಸೆದಂ ೧೧೨

ಪಳೆವಾತಿನ ಮಾತಿನ ಗಳ
ಬಳಮುಂ ಬಗೆಗೊಳದ ಬಚ್ಚಬೞಿಯಱಿವಿನ ತ
ಣ್ಬೆಳಗಿನ ಬಳಗಂ ಬಳೆದು
ಜ್ವಳಿಸಿದುದೆನಿಸಿದುದು ಮೃಡನ ಮೂರ್ತಿ ವಿಳಾಸಂ ೧೧೩

ಅಮಿತ ಮಹಿಮಾಬ್ಧಿ ಶತಕೋ
ಟಿ ಮನೋಭವರೂಪನೆನಿಪ ರುದ್ರನ ಸೌಂದ
ರ್ಯಮನಿಂತುಟೆಂದು ಬಣ್ಣಿಸ
ಲಮರಾಚಾರ್ಯಾಹಿರಾಜರೇಂ ನೆರೆದಪರೇ ೧೧೪

ಪ್ರಕಾಶಮಾನನಾದ ಜ್ಯೋತಿಸ್ವರೂಪನು ಶೋಭಿಸುತ್ತಿದ್ದನು. ೧೧೧. ಪೃಥ್ವಿಯೇ ಮೊದಲಾದ ಮೂವತ್ತಾರು ತತ್ತ್ವಗಳನ್ನು ಮೀರಿದವನೂ, ಆ ತತ್ತ್ವಗಳಲ್ಲೆಲ್ಲ ವ್ಯಾಪಿಸಿರುವವನೂ, ತತ್ತ್ವಗಳಿಗೆ ಉತ್ಪತ್ತಿಸ್ಥಾನನಾದವನೂ, ತತ್ತ್ವಗಳನ್ನು ನಡೆಯಿಸುವವನೂ, ಸ್ವತಂತ್ರಶೀಲನೂ, ಆ ತತ್ತ್ವಗಳಿಗೆ ಲಯಸ್ಥಾನನೂ ಆದ ಪರಶಿವನು ಸಭೆಯಲ್ಲಿ ಮೆರೆದನು. ೧೧೨. ಜಗತ್ತಿಗೆ ಭಿನ್ನನಾಗಿಯೂ, ಜಗತ್ತೆಲ್ಲ ತಾನೇ ಆಗಿಯೂ, ಶೂನ್ಯನಾಗಿಲ್ಲದವನೂ, ಯಾವ ಒಂದು ಆಕಾರವಿಲ್ಲದವನೂ, ಹೊರಗೂ ಒಳಗೂ ಇಲ್ಲದೆ ಇರುವವನೂ, ಪ್ರತ್ಯಕ್ಷ ಅನುಮಾನ ಶಬ್ದರೂಪವಾದ ಪ್ರಮಾಣಚತುಷ್ಟಯಕ್ಕೆ ನಿಲುಕದವನೂ, ಸ್ವಗತ ಸಜಾತೀಯ ಸ್ವಜಾತಿಯ ಭೇದಶೂನ್ಯನೂ ಆದ ಶಿವನು ಪ್ರಕಾಶಿಸುತ್ತಿದ್ದನು. ೧೧೩. ಪರಮಾತ್ಮನ ದೇಹದ ರೀತಿಯು ವೇದಗಳಿಗೂ ನಿಲುಕತಕ್ಕದ್ದಲ್ಲ. ಅದು ಕೇವಲಜ್ಞಾನದ ತಣ್ಣನೆಯ ಬೆಳಕಿನ ಬಳಗವೆಲ್ಲ ವೃದ್ಧಿಯಾಗಿ ಪ್ರಜ್ವಲಿಸಿತು ಎನಿಸಿಕೊಂಡಿತು. (ಕೇವಲಪ್ರಕಾಶರೂಪವೆನಿಸಿಕೊಂಡಿತು). ೧೧೪. ಎಣೆಯಿಲ್ಲದ ಮಹತ್ತುಗಳಿಗೆ ಸಮುದ್ರಪ್ರಾಯನಾಗಿಯೂ, ನೂರು ಕೋಟಿ ಮನ್ಮಥರ ರೂಪನೆನಿಸುವ ಶಿವನ ಸೌಂದರ್ಯವು ಹೀಗೆ ಇತ್ತೆಂದು ಬಣ್ಣಿಸುವುದಕ್ಕೆ ಬೃಹಸ್ಪತಿ, ಆದಿಶೇಷರಿಬ್ಬರೂ

ಅದಱಿಂ ಪೊಗಳಲ್ಕಾನ
ಳ್ಕಿದೆನೀ ವಾಣೀವಧೂಟ ಶಿವಭಕ್ತಿರಸೋ
ನ್ಮದೆ ಮುಗುಳ್ದು ಪೊಗಳಲಾಟಿಪ
ಳಿದಲಂಘ್ಯಂ ಪ್ರೇಮಕಾಮಿನೀಜನವೃತ್ತಂ ೧೧೫

ವ|| ಅದುಕಾರಣದಿಂ ಬಲ್ಲಂತೆ ಬಣ್ಣಿಪೆನದೆಂತೆನೆ

ಕಂ|| ಪರಿವೃತ ಫಣಿವರನಮರ್ದೊ
ಪ್ಪಿರೆ ಪರಿಗತ ಸಿಂಧುಬಂಧುರಂ ಮಂದರಭೂ
ಧರಮೆನಿಸಿ ಮೆಱೆದುದಾ ಪುರ
ಹರನುಜ್ವಳ ಮಕುಟಮತುಳಮಣಿಗಣಮಹಿತಂ ೧೧೬

ಜಡೆವಳ್ಳಿಯಾಂತ ಮುಗುಳ್ಗಳ
ಗಡಣಂ ತಾನೆನಿಸಿ ಗಾಂಗಜಳಕಣತತಿ ಸಂ
ಗಡಿಸಿರೆ ಶಶಿಕಳೆ ಬಳಸಿ
ರ್ದುಡುಗಣ ಮಧ್ಯದೊಳೆ ಮೆಱೆವುದೆನೆ ಕಣ್ಗೊಳಿಕುಂ ೧೧೭

ಜಿಡಿದುಱುಗಲೆಡೆಯ ಮಡದಿಯ
ಮುಡಿಯಗ್ರದೊಳೆಯ್ದೆ ತೊಳಪ ಮುತ್ತಿನ ಪೆಱೆಯೆಂ
ಬೆಡೆಗೆಡೆಯಾದುದು ಪದಪಂ
ಪಡೆದೆಳೆವೆಱೆ ಮಕುಟದಗ್ರದೊಳ್ ಪಶುಪತಿಯಾ ೧೧೮

ಸಮರ್ಥರಾದಾರೇ ? ೧೧೫. ಆದುದರಿಂದ ನಾನು ಹೊಗಳುವುದಕ್ಕೆ ಭಯಪಡುತ್ತೇನೆ. ಆದರೂ ಶಿವಭಕ್ತಿಯೆಂಬ ರಸವನ್ನು ಕುಡಿದುದರಿಂದ ಮತ್ತಳಾದ ನನ್ನ ಈ ವಾಣಿಯೆಂಬ ಸ್ತ್ರೀಯಳು ಹೊಗಳಲು ಯತ್ನಿಸುತ್ತಿದ್ದಾಳೆ. ಪ್ರೇಮಪಾತ್ರರಾದ ಕಾಮಿನೀಜನರ ವರ್ತನೆ ಅಲಂಘ್ಯವಾದದ್ದು. ವ|| ಆದಕಾರಣದಿಂದ ನನಗೆ ತಿಳಿದಂತೆ ವರ್ಣಿಸುತ್ತೇನೆ. ಅದು ಹೇಗೆಂದರೆ, ೧೧೬. ಅನೇಕ ರತ್ನಗಳಿಂದ ಕೆತ್ತಲ್ಪಟ್ಟುದಾಗಿಯೂ, ಗಂಗಾನದಿಯಿಂದ ಕೂಡಿದುದಾಗಿಯೂ ಇರುವ ಶಿವನ ಕಿರೀಟವು ಆದಿಶೇಷನಿಂದಲೂ ನದಿಯಿಂದಲೂ ಕೂಡಿರುವ ಮಂದರಪರ್ವತವೋ ಎನ್ನುವ ಹಾಗೆ ಶೋಭಿಸುತ್ತಿರುವುದು. ೧೧೭. ಗಂಗಾಜಲದ ಕಣಗಳು ಶಿವನ ಜಟೆಯೆಂಬ ಬಳ್ಳಿಯಲ್ಲಿ ಮೊಗ್ಗುಗಳಂತೆ ರಂಜಿಸುತ್ತಿದ್ದವು. ಅಲ್ಲಿದ್ದ ಚಂದ್ರಕಲೆಯು ನಕ್ಷತ್ರಗಳ ಮಧ್ಯದಲ್ಲಿರುವುದೋ ಎಂಬಂತೆ ಕಾಣಿಸುತ್ತಿತ್ತು. ೧೧೮. ಶಿವನ ಮಕುಟದ ತುದಿಯಲ್ಲಿ ಸೊಗಸಾಗಿ ಶೋಭಿಸುವ ಬಾಲಚಂದ್ರನು ಶಿವನ ಜಟಾಜೂಟದಲ್ಲಿರುವ ಗಂಗಾದೇವಿಯ ತುರುಬಿನಲ್ಲಿಟ್ಟ

ಗಿರಿಧನುಗೇಱಿಸುತಂ ಫಣಿ
ದಿರುವಂ ಜೀವಡೆಯೆ ಸಿಡಿದ ಫಣಿಮಣಿ ಫಣಿ ಪ
ತ್ರಿರದೆಸೆದವೊಲೆಸೆದುದು ಶಂ
ಕರನನುಪಮ ನಿಟಲತಟ ಧನಂಜಯನಯನಂ ೧೯೯

ಅಂಬಾನನ ಬಿಂಬಾಧರ
ಚುಂಬನ ಸಂಕ್ರಾಂತ ಘುಸೃಣರಸತಿಲಕಂ ತಾ
ನೆಂಬಿನಮಂಬಕಮೞಕದೊ
ಳಿಂಬಾದುದು ಶಂಬರಾರಿಮದಭಂಜನನಾ ೧೨೦

ವಿಳಸದ್ದ್ವಿಜರಾಜದ್ಯುತಿ
ಮಿಳಿತಾರುಣಬಿಂಬ ಸುಪ್ರಭಾಧರಮಧಿಕೋ
ಜ್ಜ್ವಲ ಘನರುಚಿವದನಂ ಕ
ಣ್ಗೊಲವಿತ್ತುದನಂತಸಂಪದಂ ಪರಶಿವನಾ ೧೨೧

ನಿಂದಿಸಿದುದಿಂದುಬಿಂಬಮ
ನಿಂದುಧರಾನನಮಮಂದರುಚಿಯುತಮನಿಶಂ
ಕಂದದ ಕುಂದದ ದೋಷಂ
ಪೊಂದದ ಚೆಲ್ವಿಂಗೆ ಸತ್ಕಳಾಪರಿಪೂರ್ಣಂ ೧೨೨

ರುವ ಮುಕ್ತಾಮಯವಾದ ಅರ್ಧಚಂದ್ರನೋ ಎಂಬಂತೆ ತೋರಿತು. ೧೧೯. ತ್ರಿಪುರ ಸಂಹಾರಕಾಲದಲ್ಲಿ ಮೇರುಪರ್ವತವೆಂಬ ಧನುಸ್ಸಿಗೆ ಆದಿಶೇಷನೆಂಬ ಹಗ್ಗವನ್ನು ಕಟ್ಟಿ ಮಾಟಲು ಹೆಡೆಯಲ್ಲಿರುವ ರತ್ನವು ಸಿಡಿದು ಹಣೆಗೆ ಹತ್ತಿಕೊಂಡಿರುವುದೋ ಎಂಬಂತೆ ಸದಾಶಿವನ ಅಗ್ನಿನೇತ್ರವು ಪ್ರಕಾಶಿಸುತ್ತಿರುವುದು. ೧೨೦. ಪಾರ್ವತಿಯ ತೊಂಡೆಹಣ್ಣಿನಂತಹ ತುಟಿಯನ್ನು ಚುಂಬಿಸುತ್ತಿರುವ ಸಮಯದಲ್ಲಿ ಅವಳ ಹಣೆಯಲ್ಲಿರುವ ಕುಂಕುಮ ಕೇಸರಿಯ ತಿಲಕವು ಹತ್ತಿಕೊಂಡಿರುವುದೋ ಎಂಬ ಹಾಗೆ ಅಗ್ನಿನೇತ್ರವು ಮನೋಹರ ವಾಗಿರುವುದು. ೧೨೧. ಮಿನುಗುತ್ತಿರುವ ಹಲ್ಲುಗಳ ಕಾಂತಿಯಿಂದ ಕೂಡಿಯೂ, ಕೆಂಪಾದ ತೊಂಡೆಯ ಹಣ್ಣಿನಂತಹ ತುಟಿಯಿಂದ ಕೂಡಿಯೂ, ಅಧಿಕ ಕಾಂತಿಯಿಂದ ಪ್ರಜ್ವಲಿಸುವುದಾಗಿಯೂ, ಅಪಾರ ಸೌಂದರ್ಯದಿಂದ ಕೂಡಿಯೂ, ಇರುವ ಶಿವನ ಮುಖವು ಅನಂತಕಾಂತಿಯಿಂದ ನೇತ್ರಗಳಿಗೆ ಸೊಗಸಾಗಿ ಕಾಣುತ್ತಿತ್ತು.[1] ೧೨೨. ಸತತವೂ ಅಧಿಕ ಕಾಂತಿಯಿಂದ ಕೂಡಿದುದಾಗಿಯೂ, ಕಾಂತಿಹೀನವಾಗದೆಯೂ, ಕಳಾಹೀನವಾಗದೆಯೂ, ದೋಷದಿಂದ ಕೂಡದೆಯೂ, ಸತ್ಕಳೆಯಿಂದ ತುಂಬಿಯೂ ಇರುವ ಈಶ್ವರನ ಮುಖವು

---

1ಟಿಪ್ಪಣಿ : ಈ ಪದ್ಯದಲ್ಲಿರುವ ದ್ವಿಜರಾಜ, ಅರುಣಬಿಂಬ, ಧರಾ, ಘನ–ಈ ಶಬ್ದಗಳು ಚಂದ್ರ, ಸೂರ್ಯ, ಭೂಮಿ, ಮೇಘ ಎಂಬ ಅರ್ಥಾಂತರಗಳನ್ನು ಬೋಧಿಸುತ್ತ ಶಿವನ ಅನಂತ ಸಂಪತ್ತನ್ನು ವ್ಯಂಜಿಸುತ್ತವೆ. (ರಂ)

ನಿಜಕೋಟಿ ಮಿಡುಕೆ ಮಿಡುಕಿಪು
ದು ಜಗತ್ಕೋಟಿಯನೆನಿಪ್ಪ ಶರ್ವನ ಪೂರ್ವಂ
ಗಜಧನುಗಸಾರಕೋಟಿಗೆ
ವಿಜಿತಕ್ಕೆಣೆಯೆಂಬನಾಗನೇ ಕಡುಗಾಂಪಂ ೧೨೩

ವಿದಿತ ಜಗತ್ಪ್ರಾಣಂ ಪು
ಟ್ಟಿದ ತಾಣಂ ಘ್ರಾಣಮತುಳ ಮಂಜುಳಮಧು ಗೆ
ಲ್ವುದು ಸಾರ್ದಳಿಶಿಶುವಸುವಂ
ಸದೆದಿಕ್ಕುವ ಕನಕಚಂಪಕಮನಘಹರನಾ ೧೨೪

ಶಿವಕರ್ಣಾಕಾರ ಶ್ರೀ
ಭವಮಾ ಶ್ರೀಕಾರಮಪ್ಪುದಲ್ಲದೊಡುರು ವ
ರ್ಣವಿಳಾಸತೆ ಶಾಸ್ತ್ರಾದಿ
ಶ್ರವಣತೆ ಶುಭಕರಣಭಾವಮೇಂ ಸಮನಿಪುದೇ ೧೨೫

ಹರಕರ್ಣಪೂರಕಮಳಂ
ಶಿರದಿಂದುವನೆಯ್ದೆ ಪಿಡಿದು ಸೊದೆಗೊಂಬುದೆನು
ತ್ತರರೆ ಪಿಸುಣಾಡುವಂತಿರೆ
ಕರಮೆಸೆದುದು ಕರ್ಣದಹಿಯೊಳಳಿರವಮಿಷದಿಂ ೧೨೬

ಕಾಂತಿಹೀನನಾಗಿ, ಕಳಾಹೀನನಾಗಿ, ಕಲಂಕದಿಂದ ಕೂಡಿ ಇರುವ ಚಂದ್ರನನ್ನು ತನ್ನ ಸೊಗಸಿನಿಂದ ತಿರಸ್ಕರಿಸಿತು. (ಅಂದರೆ ಷೋಡಶಕಳಾಪೂರ್ಣನಾದ ಚಂದ್ರನಿಗಿಂತಲೂ ಅತಿಶಯವಾಗಿತ್ತೆಂದು ಭಾವ) ೧೨೩. ಹುಬ್ಬಿನ ತುದಿ ಚಲಿಸಿದ ಮಾತ್ರದಿಂದ ಕೋಟಿ ಜಗತ್ತುಗಳೂ ನಡುಗಿಹೋದಾವು ಎಂಬ ರೀತಿಯಲ್ಲಿರುವ ಶಿವನ ಹುಬ್ಬನ್ನು ಶಿವನಿಂದ ವಿಜಿತವೂ ನಿಃಸಾರವೂ ಆದ ಮನ್ಮಥನ ಧನುಸ್ಸಿಗೆ ಹೋಲಿಸತಕ್ಕವನು ಮಹಾಮೂರ್ಖ ನಲ್ಲವೆ ? (ರಂ) ೧೨೪. ಶಿವನ ನಾಸಿಕವು ಜಗತ್ಪ್ರಾಣನೆಂದು ವಿದಿತನಾದ ವಾಯು ಹುಟ್ಟಿದ ಸ್ಥಳ. ಅದು ಬಳಿಗೆ ಬಂದ ದುಂಬಿಯ ಮರಿಯ ಪ್ರಾಣವನ್ನು ಸದೆಯತಕ್ಕ ಮಂಜುಳಮಧುವುಳ್ಳ ಕೆಂಡಸಂಪಗೆ (ರಂ) ೧೨೫. ಶಿವನ ಕಿವಿಯ ಆಕಾರವನ್ನು ಪಡೆದ ಲಕ್ಷ್ಮಿಯಿಂದಲೇ ಶ್ರೀಕಾರವು ಜನಿಸಿದೆ. ಅಲ್ಲದಿದ್ದರೆ, ಅಕ್ಷರಗಳಲ್ಲಿ ಶ್ರೇಷ್ಠತೆಯೂ ಶಾಸ್ತ್ರಾದಿ ಯಲ್ಲಿ ಅದನ್ನು ಕೇಳುವುದು ಶುಭಕರವೆಂಬುದೂ ಶ್ರೀಕಾರಕ್ಕೆ ದೊರಕುತ್ತಿತ್ತೆ ? (ರಂ) ೧೨೬. ಶಿವನ ಕರ್ಣಾಭರಣವಾದ ಕಮಲದಲ್ಲಿ ದುಂಬಿಗಳು ಧ್ವನಿಮಾಡುತ್ತಿದ್ದವು. "ಕರ್ಣದಲ್ಲಿ ಇರುವ ಸರ್ಪವು-ಶಿರಸ್ಸಿನಲ್ಲಿರುವ ಚಂದ್ರನ ಅಮೃತವನ್ನು ಹೀರಲು ಹವಣಿಸಿದೆ !" ಎಂದು ಆ ಕಮಲವು ದುಂಬಿಗಳ ಧ್ವನಿಯ ನೆವದಿಂದ ಶಿವನಿಗೆ ಸರ್ಪದ ವಿಷಯವಾಗಿ ಚಾಡಿಹೇಳುವಂತೆ ಕಾಣುತ್ತಿತ್ತು. (ಈ ಪದ್ಯದಲ್ಲಿ ದೂರಾನ್ವಯ ದೋಷ

ಗೌರೀವಿರೋಚನಾಸ್ಯಚ
ಕೋರಾಂಬುಜ ಸಮ್ಮದಪ್ರದಪ್ರಭಮತುಳಂ
ರಾರಾಜಿಸಿದುದು ಕುಮುದಸ
ರೋರುಹಸಖಲೋಚನದ್ವಯಂ ಶಶಿಧರನಾ ೧೨೭

ಫಣಿಫಣಮಣಿಕಿರಣಗಣಾ
ರುಣಿತಂ ಮಣಿದರ್ಪಣಪ್ರಭಂ ಕದಪದು ಪಾ
ರ್ವಣಸಮುದಿತೇಂದುಬಿಂಬಮ
ನಣಕಿಪುದಮಳಾಂಶು ಚಂದ್ರಚೂಡಾಮಣಿಯಾ ೧೨೮

ಹಾರೋರಗ ಫಣಮಣಿದೀ
ಪೋರುಶಿಖಾಕಜ್ಜಳಾಯಿತಂ ಗಳಗರಳಂ
ಗೌರೀನಯನಾಂಜನರೇ
ಖಾರಸಮಮರ್ದಂತೆ ಮೆಱೆದುದಹಿಭೂಷಣನಾ ೧೨೯

ಗಿರಿಜಾತಾ ಗುರುತರಕುಚ
ಭರ ಕಾಶ್ಮೀರಾಂಗರಾಗ ರಾಗಾಂಕಪರಿ
ಸ್ಫುರಿತ ಭುಜಮಜಿತಮಿಳಿಪುದು
ದರುಣಾಬ್ಜರಜಃಪಿಶಂಗಿತೋರ್ಮಿಯ ಚೆಲ್ವಂ ೧೩೦

ಉಂಟು) (ರಂ) ೧೨೭. ಪಾರ್ವತಿಯ ನೇತ್ರಗಳೆಂಬ ಚಕೋರಪಕ್ಷಿಗಳಿಗೂ, ಮುಖ ವೆಂಬ ಕಮಲಕ್ಕೂ ಕ್ರಮವಾಗಿ ಸಂತೋಷವನ್ನು ಕೊಡುವ ಕಾಂತಿಯುಳ್ಳ ಶಿವನ ಚಂದ್ರ ಸೂರ್ಯನೇತ್ರಗಳು ಪ್ರಕಾಶಮಾನವಾಗಿರುವುವು. ೧೨೮. ಭೂಷಣಾರ್ಥವಾದ ಆದಿಶೇಷನ ಹೆಡೆಯಲ್ಲಿರುವ ರತ್ನಗಳ ಕಿರಣಗಳಿಂದ ಕೆಂಪಾಗಿರುವುದರಿಂದಲೇ ರತ್ನಖಚಿತ ವಾದ ದರ್ಪಣದ ಹಾಗೆ ಕಾಂತಿಯುಳ್ಳ ಶಿವನ ಕೆನ್ನೆಯು ಹುಣ್ಣಿಮೆಯ ಚಂದ್ರನನ್ನೂ ಕೂಡ ತಿರಸ್ಕರಿಸುವಂತಿತ್ತು. ೧೨೯. ಶಿವನ ಹಾರವಾಗಿರುವ ಸರ್ಪದ ತಲೆಯಲ್ಲಿರುವ ರತ್ನವೆಂಬ ದೀವಿಗೆಯ ಜ್ವಾಲೆಯಿಂದ ಹುಟ್ಟಿದ ಕಾಡಿಗೆಯಂತಿರುವ ಶಿವನಕಂಠದ ಹಾಲಾಹಲವಿಷವು ಪಾರ್ವತಿಯ ನೇತ್ರದಲ್ಲಿರುವ ಕಾಡಿಗೆಯು ಹತ್ತಿರುವುದೋ ಎನ್ನುವ ಹಾಗೆ ಶೋಭಿಸುತ್ತಿರುವುದು. ೧೩೦. ಪಾರ್ವತಿಯು ದಪ್ಪನೆಯ ಸ್ತನಗಳಲ್ಲಿ ಲೇಪಿಸಿ ಕೊಂಡಿರುವ ಕುಂಕುಮಕೇಸರಿಯ ಗಂಧದ ರಕ್ತಿಮವರ್ಣದಿಂದ ಗುರುತಾದ ಶಿವನ ಭುಜವು, ಕೆಂಪು ಕಮಲಗಳ ಧೂಳಿಯಿಂದ ಸೊಂಬಣ್ಣವಾದ ನೀರಿನ ಅಲೆಯ ಸೊಗಸನ್ನು

ಹರಬಾಹುಕಲ್ಪತರುಭಾ
ಸುರಶಾಖೆಯ ಪಲ್ಲವಂ ಕರಂ ಕರಮೆಸೆವು
ತ್ತಿರೆ ತತ್ಪ್ರಸೂನನವಮಂ
ಜರಿಯೆನಿಸಿದುದಮಳ ನಖನಿಕಾಯಾಂಶುಚಯಂ ೧೩೧

ನಿಟಲಾಕ್ಷವಕ್ಷವಗಜಾ
ಘಟಕುಚಚಂದನರಸಾಂಕಮಮಳಿನಮತುಳ
ಸ್ಫಟಿಕ ಕವಾಟದ ಸಿರಿ ಸಂ
ಘಟಿಸಿರೆ ಮೆಱೆದುದು ಚಿದಂಗನಾಮಣಿಗೃಹದಾ ೧೩೨

ಕುಂಜರಭಂಜನ ಶೌರ್ಯಸ
ಮಂಜಸ ಕುಧರಾಗ್ರವಾಸಿ ಪಂಚಾಸ್ಯಂಗೇಂ
ಮಂಜುಳತರ ಕೃಶಮಧ್ಯಂ
ರಂಜಿಪುದಚ್ಚರಿಯೆ ನೋಳ್ಪೊಡೆಂಬವೊಲೆಸೆಗುಂ ೧೩೩

ಇಂಗಡಲೊಳೊಗೆದ ಸುಳಿಯಂ
ಭಂಗಾನ್ವಿತಮೆನಿಪ ಭವನ ನಾಭೀವಲಯಂ
ತಾಂ ಗೆಲೆವಂದುದರಲ್ದು ಟೆ
ಡಂಗಾಂತೆಸೆವಚ್ಚ ದುಂಡುಮಲ್ಲಿಗೆಯುರಲಂ ೧೩೪

ತಿರಸ್ಕರಿಸುವಂತಿತ್ತು. ೧೩೧. ಶಿವನ ಭುಜವೆಂಬ ಕಲ್ಪವೃಕ್ಷದ ಶಾಖೆಗೆ ಹಸ್ತವೇ ಚಿಗುರಾಗಿಯೂ, ನಿರ್ಮಲವಾದ ಉಗುರುಗಳ ಕಾಂತಿಯ ಸಮೂಹವೇ ಆ ಕಲ್ಪವೃಕ್ಷದ ಹೂವುಗಳ ಗೊಂಚಲುಗಳಾಗಿಯೂ ಮೆರೆಯುತ್ತಿರುವುದು. ೧೩೨. ಪಾರ್ವತಿಯ ಸ್ತನಗಳಲ್ಲಿ ಲೇಪಿಸಲ್ಪಟ್ಟಿರುವ ಶ್ರೀಗಂಧದ ರಸದಿಂದ ಗುರುತುಮಾಡಲ್ಪಟ್ಟ ನಿರ್ಮಲವಾದ ಶಿವನ ವಕ್ಷಸ್ಥಳವು ಜ್ಞಾನವೆಂಬ ಸ್ತ್ರೀಯ ರತ್ನಮಯವಾದ ಮನೆಯ ಸ್ಫಟಿಕದ ಕದದ ಸಂಪತ್ತನ್ನೊಳಗುಮಾಡಿಕೊಂಡು ಶೋಭಿಸುತ್ತಿರುವುದು. ೧೩೩. ಶಿವನು ಗಜ (ಗಜಾಸುರ) ಭಂಜನನೂ ಶೂರನೂ ಪರ್ವತಾಗ್ರವಾಸಿಯೂ ಆದ ಪಂಚಾಸ್ಯನು (ಸಿಂಹ–ಪಂಚಮುಖ). ಆತನ ನಡು ಸುಂದರವಾಗಿ ಕೃಶವಾಗಿತ್ತು. ಅದು ಅಚ್ಚರಿಯೇನಲ್ಲ (ಸಿಂಹದ ನಡು ಕೃಶವಾಗಿರುವುದು ಸಹಜ) (ರಂ). ೧೩೪. ಕ್ಷೀರಸಾಗರದಲ್ಲಿ ಮೂಡಿದ ಸುಳಿಯನ್ನು ಭಂಗಾನ್ವಿತವಾಗಿ ಮಾಡಿ (ಭಂಗ=ಅಲೆ–ಅಪಜಯ), ಶಿವನ ದುಂಡಾದ

ಅಭ್ರಮುವಲ್ಲಭ ಕುಂಭದ
ವಿಭ್ರಮುಮಂ ಸೆಳೆದು ತಳೆದು ಮೆಱೆದುದು ಪೊಱವಾರ್
ಶುಭ್ರರುಚಿ ಹೇಮಸೂತ್ರ ಪ
ರಿಭ್ರಾಜಿತಮಧಿಕಮಂಧಕಧ್ವಂಸಕನಾ ೧೩೫

ಮಾರಾರಿಯ ನುಣ್ದೊಡೆಯಾ
ಕಾರಮನಾನಲ್ಕೆ ಬಯಸಿ ಬಾಳೆಗಳನಿಶಂ
ನೀರುಂಡು ನಾರನುಡುತಂ
ಸಾರಿಸದಾತಪಮನಾಂತು ಮೆಱೆಗುಂ ಬನದೊಳ್ ೧೩೬

ಹರಚರಣದ ಸೌಂದರ್ಯಮ
ನರವಿಂದಜನಿಂದಮಾಗದುದನರ್ತಿಸಿ ಪಂ
ಕರುಹಮದು ಪಾದಪೀಠದ
ಪರಿಜಂ ತಳೆದದನೆ ಪೊತ್ತು ಸೇವಿಪ್ಪುದಿನ್ನುಂ ೧೩೭

ಮಣಿವ ಹರಿಮುಖ ಸುರರ್ಕಳ
ಮಣಿಮಕುಟದ ಮೌಕ್ತಿಕಂಗಳುಡುಗಣಮ್ಯೈತಂ
ದಣಿಯುರದಿಂ ಪದನಖ ಪಾ
ರ್ವಣಶಶಿಯುಂ ಸೇವಿಪಂತಿರೇನೊಪ್ಪಿದುದೋ ೧೩೮

ನಾಭಿಯು ಅರಳಿದ ದುಂಡುಮಲ್ಲಿಗೆಯ ಹೂವನ್ನು ಗೆಲ್ಲುತ್ತಿತ್ತು. (೮೦) ೧೩೫. ಶುಭ್ರವಾದ ಕಾಂತಿಯುಳ್ಳದ್ದಾಗಿ ಬಂಗಾರದ ಉಡುದಾರದಿಂದ ಪ್ರಕಾಶಿಸುವ ಅಂಧಕಾಸುರ ವಿಧ್ವಂಸಕನಾದ ಶಿವನ ಕಟಿಪ್ರದೇಶವು ಆನೆಯ ಕುಂಭಸ್ಥಲದ ವಿಲಾಸವನ್ನು ಸೆಳೆದು ಧರಿಸಿದ ಹಾಗೆ ಶೋಭಿಸುತ್ತಿತ್ತು. ೧೩೬. ಶಿವನ ನುಣುಪಾದ ತೊಡೆಗಳ ಆಕಾರವನ್ನು ಹೊಂದಬೇಕೆಂದು ಬಯಸಿ ಬಾಳೆಯ ಮರಗಳು ತೋಟದಲ್ಲಿ (ನೀರಲ್ಲಿ ನಿಂತು) ನೀರುಂಡು ನಾರನ್ನುಟ್ಟುಕೊಂಡು ಸದಾ ತಪಸ್ಸನ್ನು ಮಾಡುತ್ತಾ, ಈಗಲೂ ಅಲ್ಲಿಯೇ ಇರುತ್ತವೆ ! ೧೩೭. ಪ್ರಸಿದ್ಧವಾದ ಕಮಲವು ಬ್ರಹ್ಮನಿಂದಲೂ ನಿರ್ಮಾಣ ಮಾಡುವುದಕ್ಕಾಗದೆ ಇರುವ ಶಿವನ ಪಾದದ ಸೌಂದರ್ಯವನ್ನಪೇಕ್ಷಿಸಿ ಕಾಲನ್ನಿಡುವುದಕ್ಕಾಗಿ ಮಾಡಿದ ಮಣೆಯ ಆಕೃತಿಯನ್ನು ಧರಿಸಿ ಈಗಲೂ ಆ ಪಾದಗಳನ್ನೇ ಹೊತ್ತುಕೊಂಡು ಮೆರೆಯುತ್ತಿರುವುದು. ೧೩೮. ನಮಸ್ಕಾರಮಾಡುವ ವಿಷ್ಣುವೇ ಮೊದಲಾದ ದೇವತೆಗಳ ರತ್ನ ಖಚಿತವಾದ ಕಿರೀಟದ ಮುತ್ತುಗಳು ಶಿವನ ಪಾದದ ಉಗುರುಗಳ ಪ್ರಕಾಶವೆಂಬ ಹುಣ್ಣಿಮೆಯ ಚಂದ್ರನನ್ನು ನಕ್ಷತ್ರಗಳ ಸಮೂಹವು ಬಂದು ನಿಶ್ಚಯವಾಗಿ ಸೇವಿಸು

ಬಿಡುಗಣ್ಣರರ್ಚಿಸಿದ ಸೊಂ
ಪಡರ್ದ ಸರೋಜದ ಪರಾಗತಾತಿ ಕಂಗೊಳಿಕುಂ
ಕಡುಜತಿಗಳ ಮನಮೆಲ್ಲಂ
ಬಿಡದೋಲಗಿಪಂತೆ ಮೃಡನ ಮೆಲ್ಲಡಿದಳಿರೊಳ್ ೧೫೯

ಸೊದೆಗೆತ್ತು ನಖರುಚಿಗೆ ಬಳ
ಸಿದ ಫಣಿಪನ ಫಣೆಯ ಮಣಿಯ ಬೆಳಗೆಳೆವಿಸಿಲಿಂ
ದೊದವಿದ ಸೊಂಪಂ ತಳೆದಂ
ದದೆ ಮೆಱೆದುದು ಪಾದಪಂಕಜಂ ಪುರಹರನಾ ೧೬೦

ಜನನಕುಜಮೂಲವುಂ ನೆ
ಟ್ಟನೆ ಕಡಿಯಲ್ಪಿಡಿದನೆನಿಸಿದುದು ಪರಶು ಶಿವಾ
ನನ ಶಶಿಯಂ ತೆಗೆದಾಂತವೊ
ಲೆನಸುಂ ಮಿಗೆಮಿರ್ದುದಾ ಕಪರ್ದಿಯ ಕರದೊಳ್ ೧೬೧

ಮ॥ಸ್ರ॥ ಪಳಿದುದ್ಯದ್ದುಗ್ಧವಾರ್ಧಿದ್ಯುತಿಯನೊದೆದು ದೇವಾಂಗನಾಪಾಂಗದೊಳ್ ಬೆ
ಳ್ಪೆಳಗಂ ತಳ್ಪೊಯ್ದು ಚಂದ್ರಾತಪಮನಲೆದು ವಾಣೀತನುದ್ಯೋತಿಯಂ ಪೆಂ
ಪಳಿವನ್ನಂ ಪೊಯ್ದು ತಾರಾಚಳರುಚಿಚಯಮಂ ತೂಳ್ದು ಮಂದಾಕಿನೀಮಂ
ಜುಳಕಾಯಚ್ಛಾಯೆಯುಂ ಪರ್ಬಿದುದು ಪರಶಿವಾಂಗಾವದಾತ್ತಪ್ರಕಾಶಂ ೧೬೨

ತ್ತಿರುವುದೋ ಎಂಬ ಹಾಗೆ ಒಪ್ಪುತ್ತಿರುವುವು. ೧೫೯. ದೇವತೆಗಳು ಪೂಜೆಮಾಡಿದ ಸೊಗಸಾದ ಕಮಲದ ಹೂವುಗಳ ಧೂಳಿಯ ಕಣಗಳು, ಶಿವನ ಮೃದುವಾದ ಪಾದವೆಂಬ ಚಿಗುರುಗಳಲ್ಲಿ ಯತಿಗಳ ಮನಸ್ಸೆಲ್ಲವೂ ಯಾವಾಗಲೂ ಸೇವಿಸಿಕೊಂಡಿರುವ ಹಾಗೆ ಪ್ರಕಾಶಿಸುತ್ತಿರುವುವು. ೧೬೦. ಶಿವನ ಪಾದನಖಗಳ ಕಾಂತಿಯನ್ನು ಅಮೃತವೆಂದು ಭ್ರಮಿಸಿ, ಅದನ್ನು ಕುಡಿಯಲು ಸರ್ಪರಾಜನು ಬಂದಿರುವಂತೆ ಪಾದಾಭರಣವಾದ ಸರ್ಪವಿರುವುದು. ಆ ಸರ್ಪದ ಫಣಾಮಣಿಗಳ ಕಾಂತಿ ಹರಡಿದೆಯೋ ಎಂಬಂತೆ ಪುರಹರನ ಪಾದಪಂಕಜವು ರಂಜಿಸುತ್ತಿರುವುದು (ರಂ) ೧೬೧. ಶಿವನ ಒಂದು ಹಸ್ತದಲ್ಲಿ ಕೊಡಲಿಯು (ಪರಶುವು) ತನ್ನ ಭಕ್ತಜನರುಗಳ ಜನ್ಮವೆಂಬ ವೃಕ್ಷದ ಬುಡವನ್ನು ಕತ್ತರಿಸುವುದಕ್ಕೆ ಹಿಡಿದನೋ ಎನಿಸಿಕೊಂಡಿತ್ತು. ಮತ್ತೊಂದು ಹಸ್ತದಲ್ಲಿರುವ ಜಿಂಕೆಯು ಗೌರಿಯ ಮುಖವೆಂಬ ಚಂದ್ರನೊಳಗಿಂದ ಹೊರಕ್ಕೆ ತೆಗೆದು ಹಿಡಿದುಕೊಂಡ ಹಾಗೆ ಇತ್ತು. ೧೬೨. ಪರಶಿವನ ದೇಹದ ಶುಭ್ರವಾದ ಕಾಂತಿಯು ಶ್ರೇಷ್ಠವಾದ ಕ್ಷೀರಸಮುದ್ರದ ಕಾಂತಿಯನ್ನು ತಿರಸ್ಕರಿಸಿ, ದೇವತಾಸ್ತ್ರೀಯರುಗಳ ಕಡೆಗಣ್ಣುಗಳ ಶುಭ್ರವಾದ ಕಾಂತಿಯನ್ನು ಕಾಲಿನಿಂದ ಜಾಡಿಸಿ, ಬೆಳದಿಂಗಳನ್ನು ಹೊಡೆದು, ಸರಸ್ವತಿಯ ಶರೀರದ ಕಾಂತಿಯನ್ನು ಪೀಡಿಸಿ, ರಜತಾದ್ರಿಯ ಕಾಂತಿಗಳ ಸಮೂಹದ ಆಧಿಕ್ಯವು ನಾಶವಾಗುವ ಹಾಗೆ ಹೊಡೆದು, ದೇವಗಂಗಾನದಿಯ ಮನೋಹರವಾದ ದೇಹಕಾಂತಿ

ಮ॥ ಗಗನಂ ನಾಭಿ ನಭಂ ಶತಾಂಶು ನಿಜತೇಜೋಬಿಂದು ಬೀಜಂ ಮಹಾ
ಗ್ನಿಗಳತ್ಪಾದರಜಂ ಧರಿತ್ರಿ ಶಶಿ ನಿರ್ಮಾಲ್ಯೋದ್ಗಮಂ ಶ್ವಾಸಮಾ
ಶುಗಮಾದ್ಯಂ ಜಲಮಂಗಘರ್ಮಜಲಮಾತ್ಮಾಂಭೋಧಿನಿರ್ಯಾತ್ಕಣಾ
ಳಿಗಳಿಂದ್ರಾದಿಗಳೆಂದೊಡೇಂ ಪೊಗಳ್ವನೋ ಪೆಂಪಂ ಮಹಾದೇವನಾ ೧೪೩

ಚಂ॥ ಕನಕನಗೇಂದ್ರ ಧರ್ಮಕರನಾಗಿಯುಮುನ್ನತ ಧರ್ಮಹಂತೃಸಂ
ಜನಿತ ಪರಾರ್ಥನಾಗಿಯುಮುದಗ್ರ ಪರಾರ್ಥಹರಂ ಪ್ರದತ್ತಕಾ
ಮನುಮೆನಿಸಿರ್ದು ಕಾಮಮಥನಂ ಪರಮೋಕ್ಷದನಾಗಿಯುಂ ಸನಾ
ತನ ಪರಮೋಕ್ಷಲುಬ್ಧಮತಿಯೆಂದೆನಿಸಿರ್ದನಹೀಂದ್ರಭೂಷಣಂ ೧೪೪

ಯನ್ನೂ ತುಳಿದು ಸರ್ವತ್ರ ವ್ಯಾಪಿಸಿತ್ತು. ೧೪೩. ಆಕಾಶವೇ ನಾಭಿ, ಸೂರ್ಯನು ಆ ಶಿವನ ತೇಜಸ್ಸಿನ ಸಣ್ಣಬಿಂದು, ಪ್ರಳಯಾಗ್ನಿಯೇ ಆತನ ವೀರ್ಯ, ಭೂಮಿಯು ಆತನ ಪಾದದ ಧೂಳಿ, ಚಂದ್ರನು ನಿರ್ಮಾಲ್ಯಪುಷ್ಪ, ವಾಯುವು ಆತನ ಉಸಿರಿನ ಗಾಳಿ, ಸಮುದ್ರವು ಆತನ ಮೈಬೆವರು, ಇಂದ್ರಾದಿ ದೇವತೆಗಳು ಶಿವನೆಂಬ ಸಮುದ್ರದಿಂದ ಹೊರಟ ನೀರಹನಿಗಳು ಎಂದು ಹೇಳುವಲ್ಲಿ ಆ ಪರಶಿವನ ಅತಿಶಯವನ್ನು ಹೊಗಳು ವುದಕ್ಕೆ ಯಾರಿಂದ ಶಕ್ಯವಾಗುವುದು ? ೧೪೪. ಮೇರುಪರ್ವತದೋಪಾದಿಯಲ್ಲಿರುವ ಧರ್ಮವನ್ನು ಹಸ್ತದಲ್ಲಿ ಉಳ್ಳವನಾದರೂ, ಶ್ರೇಷ್ಠವಾದ ಪುಣ್ಯವನ್ನು ನಾಶಮಾಡು ವವನು (ವಿರೋಧಾರ್ಥ), ಮೇರುಪರ್ವತನೆಂಬ ಬಿಲ್ಲೇ ಹಸ್ತದಲ್ಲುಳ್ಳವನಾದರೂ ಶ್ರೇಷ್ಠನಾದ ಯಮಧರ್ಮನನ್ನು ನಾಶಮಾಡಿದವನು (ವಿರೋಧ ಪರಿಹಾರ) ; ಅನ್ಯರಿಗೆ ಪ್ರಯೋಜನಗಳನ್ನು ಕೊಡುವವನಾದರೂ ಅನ್ಯರ ಪ್ರಯೋಜನಗಳನ್ನು ನಾಶಮಾಡು ವವನು (ವಿರೋಧಾರ್ಥ), ಅನ್ಯರಿಗೆ ಮೋಕ್ಷರೂಪವಾದ ಪ್ರಯೋಜನಗಳನ್ನು ಉಂಟು ಮಾಡುವವನಾದರೂ, ಶತ್ರುಗಳ (ಪರ) ಧನವನ್ನು ಅಪಹರಿಸುವವನು (ವಿರೋಧ ಪರಿಹಾರ) ; ಮನ್ಮಥನನ್ನು ಕೊಡುವವನೆಂದು ಹೇಳಿಕೊಂಡು ಮನ್ಮಥನನ್ನೇ ನಾಶ ಮಾಡುವವನು (ವಿರೋಧಾರ್ಥ), ಭಕ್ತರ ಬಯಕೆಗಳನ್ನು ಕೊಡುವವನೆಂದು ಹೇಳಿಸಿ ಕೊಂಡು ಬಯಕೆಗಳೇ ಉಂಟಾಗದ ಹಾಗೆ ಮನಸ್ಸಿನ ಸ್ಥಿತಿಯನ್ನುಂಟುಮಾಡುವವನು (ವಿರೋಧ ಪರಿಹಾರ) ; ಶ್ರೇಷ್ಠವಾದ ಮೋಕ್ಷವನ್ನು ಕೊಡುವವನಾದರೂ, ಪುರಾತನ ವಾದ ಶ್ರೇಷ್ಠ ಮೋಕ್ಷದಲ್ಲಿ ಲೋಭವುಳ್ಳ ಮತಿಯುಳ್ಳವನು (ವಿರೋಧಾರ್ಥ), ಅನ್ಯರಿಗೆ ಮೋಕ್ಷವನ್ನು ಕೊಡುವವನಾದರೂ, ಪುರಾತನವಾದ ಶ್ರೇಷ್ಠ ವೃಷಭ (ಉಕ್ಷ)ನಲ್ಲಿ ಆಸಕ್ತವಾದ ಬುದ್ಧಿಯುಳ್ಳವನು (ವಿರೋಧ ಪರಿಹಾರ). ಹೀಗೆಂದು ಆ ಶಿವನು

ಚರಿತದೊಳುಂಟೆ ನೋಡೆ ಕಱಿಕಂಠದೊಳಲ್ಲದೆ ರಾಗಮಾ ಜಟೋ
ತ್ಕರದೊಳಮಲ್ಲದುಂಟೆ ಮನದೊಳ್ವಿಷಮಸ್ಥಿತಿ ನೈಜನೇತ್ರ ಭಾ
ಸುರತೆಯೊಳಲ್ಲದುಂಟೆ ಮತಿಯೊಳ್ಜಡಸಂಗತಿ ತನ್ನೊಳುಂಟೆ ಮೇ
ಣ್ಕರದೊಳಗಲ್ಲದೆಂಬ ನುಡಿಗೊಲ್ದೆಡೆಗೊಟ್ಟನವಂ ಸದಾಶಿವಂ ೧೪೫

ಸಿರಿಗಧಿದೇವಿ ಶಾರದೆಯ ಸತ್ಕಳೆ ಸೈಪಿನ ಜನ್ಮಭೂಮಿ ಸ
ಚ್ಚರಿತದ ಸೀಮೆ ಸತ್ಯದ ತವರ್ಮನೆ ಪೆರ್ಮೆಗಡರ್ಪು ಸಿದ್ಧಿಗಾ
ಗರಮತುಳೋತ್ಸವಕ್ಕೆ ನೆಲೆ ಚೆಲ್ವಿನ ಕೋಶಮನೂನ ಮಂಗಳೋ
ತ್ಕರನಿಧಿ ಗೌರಿ ರಂಜಿಸಿದಳಂಕದೊಳಿಂದುಕಳಾವತಂಸನಾ ೧೪೬

ಮ॥ ನಗೆಗಣ್ಣೈದಿಲನೈದೆ ನೀರ್ವುಗಿಸೆ ಚಂದ್ರಂಗೀಯೆ ಕುಂದಂ ಮೊಗಂ
ನಗಮಂ ಪತ್ತಿಸೆ ನಾಸಿಕಂ ಸುಲಲಿತಂ ಚಾಂಪೇಯಮಂ ಪೊನ್ನಬಿಂ
ದಿಗೆಯಂ ಮೈಗಱಿವಂತೆಗೈಯೆ ಕುಚಮಾ ವೇಣೀಭರಂ ಕಾಳಪ
ನ್ನಗನಂ ಪುತ್ತಡರ್ವಂತೆ ಮಾಡೆ ಮೆಱಿದಳ್ ಶರ್ವಾಣಿ ಸೌಂದರ್ಯದಿಂ ೧೪೭

ಎನಿಸಿದ್ದನು. ೧೪೫. ಶಿವನ ಕಂಠದಲ್ಲಿ ಕರೆ ಎಂದರೆ ಕಪ್ಪು ಎಂಬ ಮಾತುಂಟಲ್ಲದೆ ಚರಿತ್ರೆಯಲ್ಲಿ ಕರೆ ಎಂದರೆ ಕಳಂಕವೆಂಬ ಮಾತೇ ಇಲ್ಲ. ರಾಗ ಎಂದರೆ ಕೆಂಪು, ಆ ಜಟಾ ಜೂಟಗಳ ಸಮೂಹದಲ್ಲಿ ಉಂಟಲ್ಲದೆ ಮನಸ್ಸಿನಲ್ಲಿ ರಾಗ ಎಂದರೆ ವಿಷಯಾಭಿಲಾಷೆ ಯೆಂಬುದು ಇರುವುದಿಲ್ಲ. ವಿಷಮಸ್ಥಿತಿ ಎಂದರೆ ಬೆಸವಾಗಿರುವಿಕೆಯು ತನ್ನ ನೇತ್ರ ಗಳಲ್ಲಿ ಉಂಟಲ್ಲದೆ, ವಿಷಮಸ್ಥಿತಿಯೆಂದರೆ ಕ್ರೂರತ್ವವು ಅಥವಾ ಅಸಮತೆ ಯೆಂಬುದು ಬುದ್ಧಿಯಲ್ಲಿ ಇಲ್ಲ. ಜಡಸಂಗತಿ ಎಂದರೆ ಉದಕದ ಸಂಬಂಧವು ಶಿರಸ್ಸಿನಲ್ಲಿ ಇರುವುದಲ್ಲದೆ, ತನ್ನ ಹತ್ತಿರದಲ್ಲಿ ಜಡಸಂಗತಿ ಎಂದರೆ ಮೂರ್ಖರಾದವರ ಸಂಬಂಧವು ಇಲ್ಲ_ಎಂಬ ನುಡಿಗೆ ಆ ಶಿವನು ಆಶ್ರಯನಾಗಿರುವನು. ೧೪೬. ಲಕ್ಷ್ಮಿಗೆ ಅಧಿದೇವತಾ ಸ್ವರೂಪಳಾಗಿಯೂ, ಸರಸ್ವತಿಗೆ ಸದ್ವಿದ್ಯಾಸ್ವರೂಪಳಾಗಿಯೂ, ಪುಣ್ಯಕ್ಕೆ ಉತ್ಪತ್ತಿ ಸ್ಥಾನವಾದವಳಾಗಿಯೂ, ಯೋಗ್ಯ ನಡೆವಳಿಕೆಗಳಿಗೆ ಎಲ್ಲೆಕಟ್ಟಾದವಳಾಗಿಯೂ, ಸತ್ಯಕ್ಕೆ ಜನ್ಮಗೃಹವಾದವಳಾಗಿಯೂ, ಉತ್ಕೃಷ್ಟತೆಗೆ ಆಶ್ರಯಳಾಗಿಯೂ, ಅಣಿಮಾದ್ಯಷ್ಟ ಸಿದ್ಧಿಗಳಿಗೆ ಆಗರವಾದವಳಾಗಿಯೂ, ಸಂತೋಷಕ್ಕೆ ಸ್ಥಾನವಾದವಳಾಗಿಯೂ, ಸೊಗಸಿಗೆ ಭಾಂಡಾರದ ಮನೆಯಾದವಳಾಗಿಯೂ, ಅಧಿಕವಾದ ಮಂಗಳಗಳ ಸಮೂಹಕ್ಕೆ ನಿಕ್ಷೇಪ ಸ್ವರೂಪಳೂ ಆದ ಪಾರ್ವತಿಯು ಆ ಸದಾಶಿವನ ತೊಡೆಯ ಮೇಲೆ ಶೋಭಿಸಿದ್ದಳು. ೧೪೭. ಮಂದಹಾಸದಿಂದ ಕೂಡಿದ ಮುಖದ ನೇತ್ರವು ಕನ್ನೈದಿಲೆಯನ್ನು ಜಯಿಸಿ ನೀರಿನೊಳಗೆ ಪ್ರವೇಶಮಾಡಿಸಿತು. ಮುಖವು ಚಂದ್ರನಿಗೆ ಕಳಾಹೀನತ್ವಾದಿ ಕುಂದನ್ನುಂಟುಮಾಡಿತು. ನಾಸಿಕವು ಮನೋಹರವಾದ ಸಂಪಿಗೆಯ ಹೂವನ್ನು ಬೆಟ್ಟಕ್ಕೇರಿಸಿಬಿಟ್ಟಿತು. ಸ್ತನಗಳು ಬಂಗಾರದ ಕುಂಭಗಳನ್ನು ಯಾವಾಗಲೂ ಮರೆ ಯಲ್ಲಿರುವ ಹಾಗೆ (ಬಚ್ಚಿಡುವ ಹಾಗೆ) ಮಾಡಿಬಿಟ್ಟವು. ಜಡೆಯು ಕೃಷ್ಣಸರ್ಪವನ್ನು ಹುತ್ತವನ್ನು ಹೊಗುವ ಹಾಗೆ ಮಾಡಿತು. ಇಂಥ ಸೌಂದರ್ಯದಿಂದ ಕೂಡಿದ ಪಾರ್ವತಿಯು

ಅರುಣಂ ಪಾಣಿ ತಳಿರ್ ಕುಚಂ ಕಸುಮಗುಚ್ಛಂ ಕುಂದದಂತಾಂಶು ಭಾ
ಸುರಪುಷ್ಪಂ ಭ್ರಮರಾಳಿ ನೀಲಮಣಿ ಚಂಚನ್ಮಾಲೆ ಪಾದಾಬ್ಜ ಬಂ
ಧುರಪೀಠಂ ಕಲಿತಾಲವಾಲಮಮರೀನೇತ್ರಾಂಶು ಪೊಯ್ನೀರದಾ
ಗಿರೆ ಸಂಶ್ಲಿಷ್ಟ ಶಿವಾಮರಾಗೆ ಶಿವೆಯಾಂತಳ್ ಸ್ವರ್ಲತಾಶೋಭೆಯಂ ೧೪೮

ಮ॥ಸ್ರ॥ ಗಳದುದ್ಯದ್ದಾನ ಧಾರಾಸುರಭಿ ಮಿಳಿತ ಕರ್ಣಾನಿಳೋದ್ದಂಡಶುಂಡಾ
ಗ್ರಳ ಸತ್ಫೂತ್ಕಾರ ನಿರ್ಯಜ್ಜಲಲವನಿವಹಕ್ಕಾ ಸೆವಟ್ಟೈದಿ ನಿಂದಂ
ತಿಳೆಯಂ ಪೊತ್ತಿರ್ದಹೀಂದ್ರಂ ಮಿಸುಗೆ ಪೊಡೆಯಹೀಂದ್ರಂ ಕರಂ ಕಣ್ಗೆವಂದಂ
ಗಳಿತಾಶಂ ವಿಘ್ನನಾಶಂ ಪೃಥುಸಕಳಕಳಾಪೂರ್ಣಕೋಶಂ ಗಣೇಶಂ ೧೪೯

ಸ್ರ॥ ಬಾಲಾದಿತ್ಯಾಂಶು ಭಾಸ್ವತ್ತನು ಮಣಿಗಣಭೂಷಾವಹಂ ಪೀನಮುಕ್ತಾ
ಮಾಲಾಲಂಕಾರವಕ್ಷಃಸ್ಥಳನುರುತರಕೋಟೀರ ಧೌರೇಯ ಸಸ್ಮೇ
ರಾಲಾಪಾಳಿಸ್ವನಾಸ್ಯಾಂಬುಜನಹಿಭುಗಿನಾರೂಢನೊಪ್ಪಿರ್ದನುದ್ಯ
ಲ್ಲೀಲಾಯುಕ್ತಂ ಸಶಕ್ತಿಸ್ಫುರಿತಭುಜನುಮಾ ಸತ್ಕುಮಾರಂ ಕುಮಾರಂ ೧೫೦

ಶೋಭಿಸುತ್ತಿರುವಳು. ೧೪೮. ಕೆಂಪಾದ ಹಸ್ತವೇ ಚಿಗುರಾಗಿಯೂ, ಸ್ತನವೇ ಹೂವಿನ ಗೊಂಚಲಾಗಿಯೂ, ದಂತಕಾಂತಿಯೇ ಪುಷ್ಪವಾಗಿಯೂ, ಇಂದ್ರನೀಲಮಣಿಗಳ ಹಾರವೇ ಭ್ರಮರಗಳ ಗುಂಪಾಗಿಯೂ, ಕಮಲದ ಹಾಗಿರುವ ಪಾದಗಳಿಂದ ಮನೋಹರವಾದ ಪೀಠವೇ ಆಲವಾಲಯಾಗಿಯೂ ದೇವತಾಸ್ತ್ರೀಯರುಗಳ ನೇತ್ರಗಳ ಕಾಂತಿಯೇ ನೀರಾಗಿಯೂ, ಆಲಿಂಗಿಸಿಕೊಂಡಿರುವ ಶಿವನೇ ಕಲ್ಪವೃಕ್ಷವಾಗಿಯೂ ಇರುತ್ತಿರಲು ಆ ಪಾರ್ವತೀದೇವಿಯು ಕಲ್ಪಲತೆಯಂತೆ ಶೋಭಿಸುತ್ತಿದ್ದಳು. ೧೪೯. ಸುರಿಯುತ್ತಿರುವ ಅಧಿಕವಾದ ಮದೋದಕದ ಧಾರೆಯ ಪರಿಮಳದಿಂದ ಕೂಡಿಕೊಂಡಿರುವ ಕಿವಿಗಳ ಗಾಳಿ ಉದ್ದವಾದ ಸೊಂಡಿಲಿನ ತುದಿಯಲ್ಲಿ ಒಪ್ಪುತ್ತಿರುವ ಫೂತ್ಕಾರದಿಂದ ಹೊರಹೊರಟು ಬರುತ್ತಿರುವ ನೀರಿನ ಕಣಗಳ ಸಮೂಹಕ್ಕೂ ಭೂಮಿಯನ್ನು ಹೊತ್ತಿರುವ ಆದಿಶೇಷನು ಇಚ್ಛಿಸಿಬಂದು ನೆಲೆಗೊಂಡಿರುವನೋ ಎಂಬ ಹಾಗೆ ಹೊಟ್ಟೆಯ ಮೇಲೆ ಧರಿಸಿಕೊಂಡಿರುವ ಹಾವು ಶೋಭಿಸುತ್ತಿರಲು, ಯಾವ ಆಸೆಗಳು ಇಲ್ಲದವನೂ, ವಿಘ್ನಗಳನ್ನು ಪರಿಹರಿಸುವವನೂ, ಸಂಪೂರ್ಣವಾದ ವಿದ್ಯೆಗಳಿಗೆ ತುಂಬಿದ ಬೊಕ್ಕಸವೂ ಆದ ವಿಘ್ನೇಶ್ವರನು ಮನೋಹರವಾಗಿ ಕಾಣುತ್ತಿದ್ದನು. ೧೫೦. ಬಾಲಸೂರ್ಯನ ಕಿರಣಗಳ ಹಾಗೆ ಪ್ರಕಾಶಿಸುವ ಶರೀರವುಳ್ಳ, ರತ್ನಸಮೂಹದ ಆಭರಣಗಳನ್ನು ಧರಿಸಿಕೊಂಡಿರುವಂಥ, ದಪ್ಪವಾದ ಮುತ್ತಿನ ಹಾರಗಳಿಂದ ಅಲಂಕೃತವಾದ ಎದೆಯನ್ನುಳ್ಳ, ಅತ್ಯಧಿಕವಾದ ಜಡೆಗಳನ್ನು ಧರಿಸಿಕೊಂಡಿರುವ, ಮುಗುಳುನಗೆಯಿಂದ ಸಹಿತವಾದ ಮಾತೆಂಬ ದುಂಬಿಯ ಧ್ವನಿಯಿಂದ ಕೂಡಿದ ಮುಖಕಮಲವನ್ನುಳ್ಳ, ನವಿಲನ್ನು ವಾಹನವನ್ನಾಗುಳ್ಳ, ಶಕ್ತ್ಯಾಯುಧದಿಂದ ಕೂಡಿದ ಭುಜವುಳ್ಳ, ಪಾರ್ವತೀ

ಮ॥ಸ್ರ॥ ಪದಪಾದಂ ವೇದಪಾದಸ್ಫುಟಮಣಿಕಟಕಂ ಕಾಲವಾಲಂ ಕಳಾಕಾಂ
ತಿ ದಯಾಸ್ಯಂ ಚಿತ್ರಭಾಕ್ಷಂ ಪ್ರಣವರವಕಣತ್ಕಾರನಾನಂದ ಸಾಸ್ನಾ
ಸ್ಪದನಾಮ್ನಾಯಾಂತ ಘಂಟಾಗಳನಮೃತಕಕುದ್ಬಂಧುರಂ ಚಿತ್ಕ್ರಿಯಾಹ್ವಾ
ದದಶೃಂಗಂ ಧರ್ಮರೂಪಂ ತೊಳಗಿದನಭವಾಂಭೋಧಿಚಂದ್ರಂ ವೃಷೇಂದ್ರಂ
೧೫೧

ಸ್ಮಿತವಕ್ತ್ರಂ ರಕ್ತಕರ್ಣಾಭರಣ ಕಲಿತಮುದ್ದೀಪ್ತ ದೀರ್ಘಾಂಗನಾಲಂ
ಬಿತಹಾರಂ ಭಸ್ಮರೇಖಾತ್ರಯ ವಿಳಸಿತ ಭಾಳಸ್ಥಳಂ ಚೀನಚೇಲಾ
ವೃತಮಧ್ಯಂ ಮೌಕ್ತಿಕಪ್ರಸ್ಫುಟಮಕುಟನುದಂಚತ್ಸುವರ್ಣೋರುವೇತ್ರಾಂ
ಚಿತಹಸ್ತಂ ನಿಂದು ಕಣ್ಗೊಪ್ಪಿದನಭವಸಭಾವಾಸದೊಳ್ನಂದಿಕೇಶಂ ೧೫೨

ರುರು ಘಂಟಾಕರ್ಣನಂಡಾಭರಣನಹಿಧರಂ ಶಂಕುಕರ್ಣಂ ಪ್ರಕುಂಡೋ
ದರನಂಭೋದಸ್ವನಂ ಧೂರ್ಜಟಿ ಜಟಿಲಜಟಾಮಾಲಿ ಕಾಲಾಂತಕಂ ಶಂ
ಕರನೋಂಕಾರಂ ವೃಷೇಂದ್ರಧ್ವಜನಜಿನವಸಾನಂ ವಿಷಾದಂ ವಿಪದ್ಭೀ
ಕರನಂಗಾರಾಂಗನಂಗೋದ್ಭವಹರನಸುರಧ್ವಂಸಕಂ ವೀರಭದ್ರಂ ೧೫೩

ದೇವಿಗೆ ಮಗನಾದ ಷಣ್ಮುಖನು ಶೋಭಿಸುತ್ತಿದ್ದನು. ೧೫೧. ಸಾರೂಪ್ಯ, ಸಾಲೋಕ್ಯಾದಿ ನಾಲ್ಕು ಪದವಿಗಳೇ ನಾಲ್ಕು ಪಾದಗಳಾಗಿ, ನಾಲ್ಕು ವೇದಗಳೇ ನಾಲ್ಕು ಕಾಲುಗಳ ಸ್ಫುಟವಾದ ರತ್ನಕಂಕಣಗಳಾಗಿ, ಯಮನೇ ಬಾಲವಾಗಿ, ಕಳೆ (ವಿದ್ಯೆ)ಯೇ ಕಾಂತಿಯಾಗಿ, ಕೃಪೆಯೇ ಮುಖವಾಗಿ, ಚಿತ್ರಕಾರವೇ ನೇತ್ರಗಳಾಗಿ, ಪ್ರಣವ ಧ್ವನಿಯೇ ಗುಟುರೆಯಾಗಿ, ಆನಂದವೇ ಗಂಗೆದೊಗಲಾಗಿ, ಉಪನಿಷತ್ತುಗಳೇ ಕೊರಳ ಗಂಟೆಗಳಾಗಿ, ಮೋಕ್ಷವೇ ಹಿಣಿಲಾಗಿ, ಜ್ಞಾನ ಮತ್ತು ಕ್ರಿಯೆಗಳೇ ಎರಡು ಕೋಡುಗಳಾಗಿ, ಧರ್ಮವೇ ಸ್ವರೂಪವಾಗಿ, ಶಿವನೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವ ವೃಷಭೇಶ್ವರನು ಪ್ರಕಾಶಿಸಿದನು. ೧೫೨. ಮಂದಹಾಸದಿಂದ ಕೂಡಿದ ಮುಖವುಳ್ಳವನೂ, ಕರ್ಣಕುಂಡಲಗಳಿಂದ ಕೂಡಿರುವವನೂ, ಪ್ರಕಾಶಮಾನವೂ ಉದ್ದವೂ ಆದ ದೇಹವುಳ್ಳವನೂ, ಜೋಲುಬಿದ್ದ ಮುತ್ತಿನಹಾರವುಳ್ಳವನೂ, ವಿಭೂತಿಯ ತ್ರಿರೇಖೆಗಳಿಂದ ಪ್ರಕಾಶಿಸುವ ಹಣೆಯುಳ್ಳವನೂ, ಪೀತಾಂಬರವನ್ನು ಸುತ್ತಿಕೊಂಡಿರುವ ಕಟಿಭಾಗವುಳ್ಳ ಮುತ್ತುಗಳಿಂದ ಪ್ರಸ್ಫುಟಗೊಂಡ ಕಿರೀಟವುಳ್ಳವನೂ, ಬಂಗಾರದ ಶ್ರೇಷ್ಠ ಬೆತ್ತವನ್ನು ಕೈಯಲ್ಲಿ ಹಿಡಿದುಕೊಂಡವನೂ ಆದ ನಂದಿಕೇಶ್ವರನು ಶಿವನ ಆಸ್ಥಾನದಲ್ಲಿ ನಿಂತುಕೊಂಡು ಶೋಭಿಸುತ್ತಿದ್ದನು. ೧೫೩. ರುರುವೆಂಬ ಜಿಂಕೆ ಮತ್ತು ಘಂಟೆಗಳನ್ನು ಕರ್ಣಗಳಲ್ಲಿ ಧರಿಸಿದವನೂ, ಅಂಡಾಭರಣಗಳನ್ನುಳ್ಳವನೂ, ಹಾವುಗಳನ್ನು ಧರಿಸಿದವನೂ, ಶಂಕುಕರ್ಣನೂ, ಪ್ರಕುಂಡೋದರನೂ, ಮೇಘಧ್ವನಿಯುಳ್ಳವನೂ, ಧೂರ್ಜಟಿಯೂ, ಜಟಿಲವಾದ ಜಟಾಮಾಲೆಗಳುಳ್ಳವನೂ, ಪ್ರಳಯಕಾಲಯಮಸ್ವರೂಪನೂ, ಸುಖಕರನೂ, ಓಂಕಾರರೂಪನೂ, ವೃಷಭಧ್ವಜವನ್ನುಳ್ಳವನೂ, ಜಿಂಕೆಯ ಚರ್ಮವನ್ನುಟ್ಟವನೂ, ವಿಷವನ್ನು ಭಕ್ಷಿಸಿದವನೂ, ವಿಪತ್ತುಗಳಿಗೆ ಭೀಕರಸ್ವರೂಪನೂ, ಅಂಗಾರದಂತೆ ಅಂಗವುಳ್ಳ

ಮ॥ ಹರಿವಕ್ತ್ರಂ ಕರಿವಕ್ತ್ರನಶ್ವವರವಕ್ತ್ರಂ ಮೇಷವಕ್ತ್ರಂ ಫಣೀ
ಶ್ವರವಕ್ತ್ರಂ ನರವಕ್ತ್ರನುಷ್ಟ್ರಪತಿವಕ್ತ್ರಂ ಗೋಪವಕ್ತ್ರಂ ವನೇ
ಚರವಕ್ತ್ರಂ ಕಿರಿವಕ್ತ್ರನುಗ್ರಶಿಖಿ[1]ವಕ್ತ್ರಂ ವ್ಯಾಘ್ರವಕ್ತ್ರಂ ಪಯ
ಶ್ಚರವಕ್ತ್ರಂ ರುರುವಕ್ತ್ರನೆಂಬರೆಸೆದರ್ವಿಶ್ವೇಶ್ವರಾಸ್ಥಾನದೊಳ್ ೧೫೪

ಮ॥ಸ್ರ॥ ವಟರುದ್ರಂ ವಂದ್ಯರುದ್ರಂ ಕಲವಿಕರಣರುದ್ರಂ ಕಳಾಮೇಯರುದ್ರಂ
ವಿಟರುದ್ರಂ ವೀರರುದ್ರಂ ಬಲವಿಕರಣರುದ್ರಂ ಮಹಾಬಾಹುರುದ್ರಂ
ಪಟುರುದ್ರಂ ಪಾಶಿರುದ್ರಂ ಪರಮ ಮಹಿಮರುದ್ರಂ ಪರೇಶಾನರುದ್ರಂ
ನಟರುದ್ರಂ ನೀಲರುದ್ರಂ ಜಗದಧಿಪತಿರುದ್ರಂ ಜನಾಧಾರರುದ್ರಂ ೧೫೫

ತಿರುಮೂಲಂ ಚೇರಮಾಂಕಂ ಮುರುಘರಿರಿವದಾಂಡಾರಿ ವಾಗೀಶ್ವರಂ ಸೌಂ
ದರನಾ ನೈನಾರರೇಣಾಂಧಣರಣು ತನುವೇಳ್ನೂತರೇಣಾಧಿನಾಥಂ
ಸಿರಿಯಾಳ್ವಂ ಸೇದಿರಾಜಂ ಮೊನೆಯಿಡುವನುಮಪ್ಪೂತಿಯೇಕಾಳಿ ಚಂಡೇ
ಶ್ವರನಾ ಕಣ್ಣಪ್ಪದೇವರ್ಮೆಱೆದರಭವ ಸದ್ಭಕ್ತಿಸಂಪತ್ತಿಯುಕ್ತರ್ ೧೫೬

ಶುಕ ಕಣ್ವಾಗಸ್ತ್ಯ ಭೃಗ್ವಂಗಿರಸ ಸನಕ ಸಾನಂದ ಸೂತಾತ್ರಿಗಳ್ಕೌ
ಶಿಕ ಭಾರದ್ವಾಜ ಶಾತಾತಪ ಕಪಿಲ ಕಣಾದಾನಿಲಾದಾಕ್ಷಪಾದಾ
ಜಕ ಮಾರ್ಕಂಡೇಯ ಮಾಂಡವ್ಯ ರುರು ವಿಮದ ಜಾಬಾಲ ಬೋಧಾಯನರ್ನಿಂ
ದಕಳಂಕರ್ಕೀರ್ತಿಸುತ್ತೊಪ್ಪಿದರಭವಸಭಾವಾಸದೊಳ್ ಭಕ್ತಿಯಿಂದಂ ೧೫೭

ವನೂ, ಮನ್ಮಥಹರನೂ, ರಾಕ್ಷಸಧ್ವಂಸಕನೂ ಆದ ವೀರಭದ್ರನಿದ್ದನು. ೧೫೪. ಸಿಂಹ ಮುಖನು, ಗಜಮುಖನು, ಅಶ್ವಮುಖನು, ಕುರಿಯಮುಖನು, ಸರ್ಪಮುಖನು, ಮನುಷ್ಯಮುಖನು, ಒಂಟೆಯಮುಖನು, ವೃಷಭಮುಖನು, ಕಪಿಮುಖನು, ವರಾಹ ಮುಖನು, ಉಗ್ರವಾದ ನವಿಲಿನ[1]ಮುಖನು, ಹುಲಿಯಮುಖನು, ಮೀನಿನಮುಖನು, ಹರಿಣಮುಖನು–ಇವರೇ ಮೊದಲಾದವರು ಪರಮೇಶ್ವರನ ಸಭಾಸ್ಥಾನದಲ್ಲಿ ಶೋಭಿಸು ತ್ತಿದ್ದರು. ೧೫೫. ಪರಮೇಶ್ವರನ ಸದ್ಭಕ್ತಿಯ ಸಂಪತ್ತಿನಿಂದ ಕೂಡಿದ ವಟರುದ್ರ, ವಂದ್ಯರುದ್ರ, ಕಲವಿಕರಣರುದ್ರ, ಕಳಾಮೇರುರುದ್ರ, ವಿಟರುದ್ರ, ವೀರರುದ್ರ, ಬಲವಿಕರಣ ರುದ್ರ, ಮಹಾಬಾಹುರುದ್ರ, ಪಟುರುದ್ರ, ಪಾಶಿರುದ್ರ, ಪರಮ ಮಹಿಮರುದ್ರ, ಪರೇಶಾನ ರುದ್ರ, ನಟರುದ್ರ, ನೀಲರುದ್ರ, ಜಗದಧಿಪತಿರುದ್ರ, ಜನಾಧಾರುದ್ರ, ೧೫೬. ತಿರು ಮೂಲ, ಚೇರಮಾಂಕ, ಮುರುಘರ್, ಇರಿವಾಂಡಾರಿ, ವಾಗೀಶ್ವರ, ಸೌಂದರ, ನೈನಾರರು, ಏಣಾಂಧಣ, ಅಣುಮೂರ್ತಿ, ವೇಳ್ನೂತ, ಏಣಾಧಿನಾಥ, ಸಿರಿಯಾಳ್ವ, ಸೇದಿರಾಜ, ಮೊನೆಯಿಡುವ, ಅಪ್ಪೂತಿ, ಏಕಾಳಿ, ಚಂಡೇಶ್ವರ, ಕಣ್ಣಪ್ಪದೇವರೇ ಮೊದಲಾದವರು ಶೋಭಿಸುತ್ತಿದ್ದರು. ೧೫೭. ಶುಕ, ಕಣ್ವ, ಅಗಸ್ತ್ಯ, ಭೃಗು, ಆಂಗೀರಸ, ಸನಕ, ಸಾನಂದ, ಸೂತ, ಅತ್ರಿ, ಕೌಶಿಕ, ಭರದ್ವಾಜ, ಶತಾತಪ, ಕಪಿಲ, ಕಣಾದ, ಅನಿಲಾದ, ಅಕ್ಷಪಾದ, ಅಜಕ, ಮಾರ್ಕಂಡೇಯ, ಮಾಂಡವ್ಯ, ರುರು,

1. ಉಗ್ರಪದ ಸ್ವಾರಸ್ಯದಿಂದ ಶಿಖಿಪದಕ್ಕೆ ಅಗ್ನಿ ಎಂದು ಅರ್ಥಮಾಡಬಹುದು. (ರಂ)

ಮ॥ಸ್ರ॥ ವರುಣಂ ಪೊಂಗಿಂಡಿಯಂ ವಾಸವನೆ ಡವಕೆಯಂ ಪಾವಕಂ ದೀಪಮಂ ಭಾ
ಸ್ಕರಪುತ್ರಂ ಛತ್ರಮಂ ವೀಜನಮನನಿಲನಬ್ಜಾಪ್ತನಾದರ್ಶಮಂ ಚಾ
ಮರಮಂ ಶ್ರೀವಾಣಿಗಳ್ವಿತ್ತಪನಡಪವನೀಶಾನನಂಗಾಂಗರಾಗೋ
ತ್ಕರಮಂ ಖಡ್ಗಾದಿಯಂ ದಾನವಪತಿ ಪಿಡಿದೋಲೈಸಿ ನಿಂದಿರ್ದರಾಗಳ್ ೧೫೮

ವ॥ ಮತ್ತಮಾ ಮಹಾಸ್ಥಾನಂ ಸಾರಸ್ವತಸ್ಫುರಿತ ಮಾನಸಕಮಳವಿತತಾಮೋದವಾಹಕ ಸುಧಿರಾಜಸಮನ್ವಿತಮುಂ ಸಾರಸ್ವತಸ್ಫುರಿತ ಮಾನಸಕಮಳ ವಿತತಾಮೋದವಾಹಕ ಸುಧಿರಾಜಸಮನ್ವಿತಮುಂ ಸಾನಂದ ಸನಂದನ ಸಮಾಗತ ಶತಕ್ರತು ಸುಮನೋಮುನಿ ಸಮಂಚಿತಮುಂ ವಿತತ ಸಖಿರುಚಿರುಚಿರ ವನಮಾಲಾ ಸುಮನಃಸುಗಂಧದೇಹಾನುಕಂಪಿತ ಸುವರ್ಣಸಮುದ್ಧೃತ ಪರಾಗಸ್ತೋಮ ಮಧುಹರ ಪರಮಹಿಮಯುತ ಹರಿ ವಿರಾಜಿತಮುಂ ವಿತತ ಸಖಿರುಚಿರುಚಿರ ವನಮಾಲಾಸುಮನಃಸುಗಂಧ ದೇಹಾನು ಕಂಪಿತ ಸುವರ್ಣಸಮುದ್ಧೃತ ಪರಾಗಸ್ತೋಮ ಮಧುಹರ ಪರಮಹಿಮಯುತ ಹರಿ

ವಿಮದ, ಜಾಬಾಲಿ, ಬೋಧಾಯನ–ಇವರೇ ಮೊದಲಾದ ಕಳಂಕರಹಿತರು ಪರಮೇಶ್ವರನ ಸಭಾಭವನದಲ್ಲಿ ಅವನನ್ನು ಭಕ್ತಿಯಿಂದ ಕೀರ್ತಿಸುತ್ತ ನಿಂತಿದ್ದರು. ೧೫೮. ಪ್ರಮಥರು, ರುದ್ರರು, ಋಷಿಗಳು, ಇವರೇ ಮೊದಲಾದವರು ಸೇರಿರುವ ಕಾಲದಲ್ಲಿ, ವರುಣನು ಬಂಗಾರದ ಗಿಂಡಿಯನ್ನು, ಇಂದ್ರನು ಪೀಕದಾನಿಯನ್ನು, ಅಗ್ನಿಯು ದೀಪವನ್ನು, ಯಮನು ಛತ್ರಿಯನ್ನು, ವಾಯುವು ಬೀಸಣಿಗೆಯನ್ನು, ಸೂರ್ಯನು ದರ್ಪಣವನ್ನು, ಲಕ್ಷ್ಮೀಸರಸ್ವತಿಯರು ಚಾಮರಗಳನ್ನು, ಕುಬೇರನು ತಾಂಬೂಲಚೀಲವನ್ನು, ರುದ್ರನು ಸುಗಂಧದ್ರವ್ಯಗಳನ್ನು, ನೈಋತಿಯು ಖಡ್ಗವೇ ಮೊದಲಾದ ಆಯುಧಗಳನ್ನು ಹಿಡಿದು ಕೊಂಡು ಸೇವೆಮಾಡುತ್ತ ನಿಂತಿದ್ದರು. ವ|| ಮತ್ತು ಆ ಸಭಾಸ್ಥಾನವು ದಳವೇರಿ ಸ್ವಯಂವಿಕಸಿತಗಳಾದ (ಸಾರಸ್ವತಸ್ಫುರಿತ) ಮಾನಸಸರೋವರದಲ್ಲಿರುವ ಕಮಲಗಳ ವ್ಯಾಪಕವಾದ ಸುಗಂಧವನ್ನು ಧರಿಸಿರುವ ಧೀರಬ್ರಹ್ಮನಿಂದ ಸಮನ್ವಿತವಾಗಿತ್ತು. ವಿದ್ಯೆ ಗಳಿಂದ ಪ್ರಕಾಶಿಸುವ (ಸಾರಸ್ವತ + ಸ್ಫುರಿತ) ಹೃದಯಕಮಲವುಳ್ಳ (ಮಾನಸಕಮಲ), ವಿಶೇಷ ಸಂತೋಷ ಹೊಂದಿರುವ (ವಿತತ + ಆಮೋದ + ವಾಹ) ಶ್ರೇಷ್ಠರಾದ ವಿದ್ವಾಂಸ (ಸುಧೀರಾಜ) ರಿಂದ ಕೂಡಿತ್ತು. (ಮತ್ತು) ಸಾನಂದ, ಸನಂದನ, ದೇವೇಂದ್ರ, ದೇವರ್ಷಿಗಳೇ ಮೊದಲಾದವರಿಂದ ಕೂಡಿರುವಂತಹುದಾಗಿತ್ತು ; ಸಂತೋಷದಿಂದ (ಸಾನಂದ) ಕೂಡಿದ ಗಣಪತಿ, ಕುಮಾರಸ್ವಾಮಿಯೇ ಮೊದಲಾದ ಪುತ್ರರುಗಳಿಂದ (ಸನಂದನ) ಲೂ, ಬಂದಂಥ ಅನೇಕ (ಶತ) ಯಾಗಗಳನ್ನು ಮಾಡಿದ ಸಮೀಚೀನ (ಸುಮನ) ಮನಸ್ಸುಳ್ಳ ಋಷಿಗಳಿಂದ ಕೂಡಿರುವಂತಹುದಾಗಿತ್ತು. ವಿಸ್ತಾರವಾದ ಆಕಾಶದ ಕಾಂತಿಯಂತೆ ಕಾಂತಿಯುಳ್ಳವನೂ, ಮನೋಹರವಾದ ತುಳಸೀಮಾಲೆ ಯಲ್ಲಿರುವ ಪುಷ್ಪಗಳ ಸುಗಂಧದಿಂದ ಕೂಡಿದ ದೇಹವುಳ್ಳವನೂ, ವಾಹನವಾದ

ವಿರಾಜಿತಮುಂ ಹುತಾಶನ ಚಂಡದಂಡಧರ ಪಾಶಹಸ್ತ ನಿಧೀಶ ವೃಷಾಂಕ ಶೂಲಧರ ರುಂಡಾಭರಣ ಮಹಾಭೈರವಗಣ ಕಲಿತಮುಂ ಹುತಾಶನ ಚಂಡದಂಡಧರಪಾಶಹಸ್ತ ನಿಧೀಶವೃಷಾಂಕ ಶೂಲಧರ ರುಂಡಾಭರಣ ಮಹಾಭೈರವಗಣ ಕಲಿತಮುಂ ಸದಾಲೋಕಹಿತಕರಸ್ಫುರಿತ ಪುಷ್ಕರ ವಿಬುಧ ಚಕ್ರಸಮಾಹಿತೋದಯ ರುಚಿರಸಿತ ಭಾನುರಂಜಿತ ಮಹೋತ್ಪಳಮಿತ್ರ ವಿಳಸಿತಮುಂ ಸದಾಲೋಕಹಿತಕರಸ್ಫುರಿತಪುಷ್ಕರ ವಿಬುಧಚಕ್ರಸಮಾಹಿತೋದಯ ರುಚಿರಸಿತ ಭಾನುರಂಜಿತ ಮಹೋತ್ಪಳಮಿತ್ರವಿಳಸಿತಮುಮೆನಿಸಿರ್ದುದಂತುಮಲ್ಲದೆಯುಂ

ಗರುಡನಲ್ಲಿ ಅನುಕಂಪವುಳ್ಳವನೂ, ಇತರರ ಪಾಪಗಳನ್ನು ನಾಶಪಡಿಸುವವನೂ, (ಸಮುದ್ಧೃತ + ಪರ + ಆಗಃ), ಮಧುವೆಂಬ ರಾಕ್ಷಸನನ್ನು ನಾಶಮಾಡಿದವನೂ, ಶ್ರೇಷ್ಠವಾದ ಮಹತ್ತುಗಳಿಂದ ಕೂಡಿದವನೂ ಆದ ವಿಷ್ಣುವಿನಿಂದ (ಆ ಕೈಲಾಸದ ಶಿವನಸಭೆಯು) ಪ್ರಕಾಶಗೊಂಡಿತ್ತು. ಪ್ರಸಿದ್ಧವಾದ (ವಿತತ) ಸ್ನೇಹಿತನಾದ ಅಗ್ನಿಯಲ್ಲಿ ಪ್ರೀತಿಯುಳ್ಳವನೂ, ಮನೋಹರವಾದ (ರುಚಿತ) ಉದ್ಯಾನವನಗಳ ಪಙ್ಕ್ತಿಯಲ್ಲಿ (ವನಮಾಲಾ) ರುವ ಹೂಗಳ ಸುಗಂಧವನ್ನು (ಹೊತ್ತುತಂದು) ಕೊಡುವವನೂ, ಇಚ್ಛೆಯಿಂದ ಅಲುಗಾಡಿಸಲ್ಪಟ್ಟ ಎಲೆಗಳುಳ್ಳವನೂ (ಸುಗಂಧ + ದ + ಈಹಾ + ಅನುಕಂಪಿತ), ಮೇಲಕ್ಕೆತ್ತಲ್ಪಟ್ಟ ಧೂಳಿನ ಸಮೂಹವುಳ್ಳವನೂ, ಮಕರಂದ(ಮಧು)ವನ್ನು ತೆಗೆದುಕೊಂಡು ಬರುವವನೂ, ಉತ್ಕೃಷ್ಟವಾದ ಶೈತ್ಯದಿಂದ ಕೂಡಿರುವವನೂ, (ಪರಮ + ಹಿಮ + ಯುತ) ಆದ ವಾಯು (ಹರಿ) ದೇವನಿಂದ ಮನೋಹರವಾದುದಾಗಿತ್ತು. ಅಗ್ನಿಯು, ಕ್ರೂರನಾದ ಯಮನು, ನಿಧೀಶ, ವೃಷಾಂಕ, ಶೂಲಧರ (ರುಂಡಾಭರಣ) ಇವರೇ ಮೊದಲಾದ ಮಹಾಶ್ರೇಷ್ಠ ಭೈರವರ ಸಮೂಹದಿಂದ ಕೂಡಿದುದಾಗಿತ್ತು. ಅಗ್ನಿ, ಭಯಂಕರ ಯಮ, ವರುಣ (ಪಾಶಹಸ್ತ), ಕುಬೇರ, ಈಶಾನ ಇವರುಗಳಿಂದಲೂ, ತ್ರಿಶೂಲವನ್ನೂ ತಲೆಮಾಲೆಯನ್ನೂ ಧರಿಸಿರುವ ಭಯಂಕರರಾದ ಪ್ರಮಥರಿಂದಲೂ ಕೂಡಿದುದಾಗಿತ್ತು. (ಮತ್ತು) ಸದಾ ಲೋಕಗಳಿಗೆ ಹಿತವನ್ನು ಮಾಡುವವನೂ, ಅರಳಿಸಲ್ಪಟ್ಟ ಕಮಲಗಳನ್ನುಳ್ಳವನೂ, ವಿದ್ವಾಂಸರಿಂದಲೂ ಚಕ್ರವಾಕಪಕ್ಷಿಗಳಿಂದಲೂ ಅಪೇಕ್ಷಿಸಲ್ಪಟ್ಟ ಉದಯವುಳ್ಳವನೂ (ಆವಿರ್ಭಾವವುಳ್ಳವನೂ), ಮನೋಹರವೂ ಸಿತವೂ ಆದ ಕಿರಣ (ಭಾನು) ಗಳಿಂದ ಕಂಗೊಳಿಸುವವನೂ, ಕಮಲಗಳಿಗೆ ಮಿತ್ರನೂ ಆದ ಸೂರ್ಯನಿಂದ ಪ್ರಕಾಶಿಸಿಸುವಂತಹುದಾಗಿತ್ತು. ಸತ್ಪುರುಷರುಗಳ ದರ್ಶನಕ್ಕೆ (ಸತ್ + ಆಲೋಕ) ಪ್ರೀತಿಕರವಾದ ಕಿರಣಗಳಿಂದ ಪ್ರಕಾಶಗೊಂಡ ಆಕಾರ (ಪುಷ್ಕರ) ವುಳ್ಳವನೂ, ದೇವತೆಗಳ ಸಮೂಹ (ವಿಬುಧಚಕ್ರ) ದಿಂದ ಇಚ್ಛಿಸಲ್ಪಡುವ ಉದಯವುಳ್ಳವನೂ, ಮನೋಹರವೂ ಶುಭ್ರವೂ ಆದ ಕಿರಣಗಳಿಂದ ಶೋಭಿಸುವವನೂ, ನೈದಿಲೆಗೆ ಸ್ನೇಹಿತನಾದ ಚಂದ್ರನಿಂದ ಶೋಭಿಸುವಂತಹುದು ಎಂದೆನಿಸಿತ್ತು. ಹಾಗೂ ಅಲ್ಲದೆ, (ಈ ಗದ್ಯ ಭಾಗವೆಲ್ಲ ಶ್ಲೇಷಾಲಂಕಾರದಿಂದ ಕೈಲಾಸವನ್ನು ವರ್ಣಿಸಿರು

ಮ॥ಸ್ರ॥ ಮರುದಾಕೀರ್ಣಾಪ್ಸರಂ ಸತ್ತಿಲಕ ವಿಲಸಿತಂ ರಾಜಹಂಸಾನ್ವಿತಂ ಭಾ
ಸುರರಂಭಾಶೋಕಪೂಗಸ್ಥಿತಿ ಶಿಖಿಶುಕ ವಿಭ್ರಾಜಿತಂ ಗಂಧವಾಹಾ
ಗರುಗೋಜಸ್ಫಾರ ಪುನ್ನಾಗಕಮುರು ಸುಮನೋವೃಂದ ಪದ್ಮಾಭಿರಾಮ
ಸ್ವರಚಂಚದ್ಭೃಂಗ್ಯಲಂಕಾರಕಮಭವಸಭಾವಾಸಮುದ್ಯಾನಸಾಮ್ಯಂ ೧೪೯

ಚಂ॥ ಕರಮೆಸೆದಿರ್ದುದಪ್ರಚರದಿಂಚರದಿಂ ಚರದಿಂದಿರಾಮುಖಾ
ಮರತರುಣೀ ಸುಲಾಸ್ಯರಸದಿಂ ರಸದಿಂ ರಸದಿಂ ಪೊದಳ್ದ ಶಂ
ಕರ ಕವಿವರ್ಗದಿಂದೆ ಸುರಭಾಸುರ ಭಾಸುರ ಭಾವಭಂಗಮಾ
ವರನುತಿಯಿಂ ಸಭಾಸ್ಥಳಕಳಾಪ ಕಳಾಪ ಕಳಾಪವಪ್ಪೌಳಿಯಾ ೧೫೦

ವ॥ ಇಂತನಂತಸಂಭ್ರಮಮನಮಂದ ವಿಭ್ರಮಮನನೂನಾಶ್ಚರ್ಯಮನತೀವ ಸಂಪದ ಮನತರ್ಕ್ಯವಿಸ್ತಾರಮನಖಂಡ ಮಹಿಮೆಯನೊಳಕೊಂಡು ನುತಿಪೊಡಸದಳಮಾದ ನಿರುಪಮಾ ನೂನ ಘನ ಪರಮಮಂಗಳ ಮಹಿತ ಮಹಾಸ್ಥಾನದಲ್ಲಿ

ವುದಾಗಿದೆ.) ೧೪೯. ಶಿವನ ಸಭೆಯು ಉದ್ಯಾನಕ್ಕೆ ಸಮವಾಗಿತ್ತು: ೧. (ಸಭೆಯ ಪರವಾಗಿ) ದೇವತೆಗಳಿಂದ ಕೂಡಿದ ಅಪ್ಸರೆಯರಿದ್ದರು. ಸತ್ಪುರುಷರಿಂದ ವಿರಾಜಿತ ವಾಗಿತ್ತು. ಚಂದ್ರ ಸೂರ್ಯರಿದ್ದರು. ರಂಭೆಯೂ ಶೋಕರಹಿತರ ಸಮೂಹವೂ ಇದ್ದಿತು. ಅಗ್ನಿ ಮತ್ತು ಶುಕಮುನಿಗಳಿಂದ ವಿಭ್ರಾಜಿತ. ವಾಯುವಿನಿಂದಲೂ, ಅಗರು, ಗೋರೋಚನ ಗಳಿಂದ ಲಿಪ್ತರಾದ ಪುರುಷಶ್ರೇಷ್ಠರಿಂದಲೂ ಯುಕ್ತವಾದದ್ದು. ದೇವತೆಗಳಿಂದಲೂ ಲಕ್ಷ್ಮಿಯಿಂದಲೂ ಅಭಿರಾಮ. ಶಬ್ದಮಾಡುತ್ತ ಸುತ್ತಾಡುವ ಭೃಂಗಿಯಿಂದ ಅಲಂಕೃತ. ೨. (ಉದ್ಯಾನದ ಪರವಾಗಿ). ಗಾಳಿಯಿಂದ ಚಲಿಸುವ ನೀರುಳ್ಳ ಸರೋವರವುಳ್ಳದ್ದು. ಉತ್ತಮ ತಿಲಕವೃಕ್ಷಸಹಿತ. ರಾಜಹಂಸಗಳಿಂದ ಅನ್ವಿತ. ಬಾಳೆ, ಅಶೋಕ, ಅಡಿಕೆಮರ ಗಳುಳ್ಳದ್ದು. ನವಿಲು, ಗಿಳಿಗಳಿಂದ ಶೋಭಿತ. ಗಾಳಿ, ಅಗರು, ಗೋವು, ಅಜಗಳಿಂದ ಸಹಿತ. ಪುನ್ನಾಗವೃಕ್ಷವುಳ್ಳದ್ದು. ಉತ್ತಮ ಹೂಗಳಿಂದಲೂ ಕಮಲದಿಂದಲೂ ಅಭಿರಾಮ. ಶಬ್ದಮಾಡುತ್ತ ಸಂಚರಿಸುವ ಹೆಣ್ಣುದುಂಬಿಯ ಅಲಂಕಾರವುಳ್ಳದ್ದು. (ರಂ) ೧೫೦. ಆ ಶಿವನ ಸಭಾಸ್ಥಾನವು ದೇವತೆಗಳ ಮನೋಹರಸ್ವರದಿಂದಲೂ, ಸಂಚರಿಸ್ತುತ್ತಿರುವ ಲಕ್ಷ್ಮಿಯೇ ಮೊದಲಾದ ದೇವತಾಸ್ತ್ರೀಯರುಗಳ ಒಳ್ಳೆಯ ಲಾಸ್ಯರಸದಿಂದಲೂ, ನವರಸದಿಂದಲೂ, ಪ್ರೀತಿಯಿಂದಲೂ, ತುಂಬಿದ ಶಿವಕವಿಗಳ ಸಮೂಹದಿಂದಲೂ, ದೇವತೆ ಗಳಲ್ಲಿ ಪ್ರಕಾಶಮಾನವಾದ ಕಾಂತಿಯುಳ್ಳ ರಾಕ್ಷಸಧ್ವಂಸಕನಾಥ ವಿಷ್ಣುವಿನ ಸ್ತೋತ್ರ ದಿಂದಲೂ, (ಕಲಾಪ = ಕಲಾಯುಕ್ತ ಚಂದ್ರನೇ) ಕಲಾಪ = ಆಭರಣವಾಗಿ ಮಸ್ತಕದಲ್ಲಿ ಉಳ್ಳ ಶಿವನ ಸಭಾಸ್ಥಳ ಕಲಾಪವು ಚೆನ್ನಾಗಿ ಶೋಭಿಸುತ್ತಿತು. ವ॥ ಹೀಗೆ ಅಪರಿ ಮಿತ ಸಡಗರವನ್ನೂ, ಅಧಿಕವಾದ ವಿಲಾಸವನ್ನೂ, ಅತ್ಯಧಿಕವಾದ ಆಶ್ಚರ್ಯವನ್ನೂ, ಅಧಿಕ ಸಂಪತ್ತನ್ನೂ, ಊಹಿಸುವುದಕ್ಕಾಗದ ವಿಶಾಲತೆಯನ್ನೂ, ಪರಿಪೂರ್ಣ ಮಹಿಮೆಯನ್ನೂ ಕೂಡಿಕೊಂಡು ಹೊಗಳುವುದಕ್ಕೆ ಅಸಾಧ್ಯವೆನಿಸಿ, ಉಪಮಾರಹಿತವೂ, ಘನವಾದ ಶ್ರೇಷ್ಠ

ಕಂ॥ ನಮದಮರಕನಕಮೌಳಿಗ
ಳಮರ್ದೊರಸಿದೊಡುದಿರ್ದ ರೇಣು ಪುಗೆ ಬಾಯ್ಗಳೊಳಾ
ಗಮಮಂ ಪದೆದೋದುವ ವಾ
ಗ್ರಮಣಂ ತಳೆದಂ ಹಿರಣ್ಯಗರ್ಭಾಖ್ಯತೆಯಂ ೧೬೧

ಚಂ॥ ಗಳಪದಿರಿಂದ್ರ ನೂಂಕದಿರುಪೇಂದ್ರ ತೊಲಂಗೆಲೆ ಚಂದ್ರ ಮೆಲ್ಲನೊ
ಳ್ದೊಳಪುಗು ಮಿತ್ರ ಕಯ್ಮುಗಿ ವಿಧಾತ್ರ ಶರಣ್ಬುಗು ವೀತಿಹೋತ್ರ ಪಿಂ
ದುಳಿ ಧನಪಾಲ ಸಾರ್ಕಡೆಗೆ ಲೋಲಸಮೀರಣ ಕಾಲ ನಿಲ್ಲೆಂದೆಂ
ದಳಘುರವಂಗುಡುತ್ತೆ ಜಡಿದಂ ಜವದಿಂದಮೆ ನಂದಿಕೇಶ್ವರಂ ೧೬೨

ಮ॥ಸ್ರ॥ ಪೊಡೆಯುತ್ತುಂ ವೇತ್ರದಿಂದಿಟ್ಟಣಿಪ ದನುಜರಂ ಯಕ್ಷರಂ ನೂಂಕುತಂ ಕ
ಣ್ಗಡೆಯಿಂದಂ ಝಂಕಿಸುತ್ತಂ ಮುನಿನಿವಹವನಾದೊತ್ತುತುಂ ಸಿದ್ಧರಂ ಮೇ
ಣ್ಗಡಿಯುತ್ತುಂ ಸಾಧ್ಯರಂ ಹೊಯ್ಯೆನುತೆ ನಿಲಿಸುತಿಂದ್ರಾದ್ಯರಂ ಗೀತನೃತ್ಯ
ಕ್ಕೆಡೆಯಪ್ಪಂತಲ್ಲಿ ಕೋಲಾಹಲಮನುಡುಗಿಸುತ್ತುಂ ಮಹಾಕಾಳನಿರ್ದಂ ೧೬೩

ಶ್ರುತಿಕೋಟಿಸ್ತೋತ್ರನಾದಂ ಮುನಿಪ ಜಯಜಯಧ್ವಾನಮಂಭೋಜಗರ್ಭೋ
ನ್ನತ ವಕ್ತ್ರೋದ್ಭೂತ ಸಾಮಧ್ವನಿ ಸುರವನಿತಾಗೀತರಾವಂ ಪ್ರಮೋದಾಂ
ಚಿತಗಂಧರ್ವಾಂಗನಾನರ್ತನ ಘನನಿನದಂ ಭೃಂಗಿನಾಟ್ಯಸ್ವನಂ ಪ್ರ
ಸ್ತುತ ನಾನಾವಾದ್ಯಘೋಷಂ ಬೆರಸಿ ಬಳೆದುದೆತ್ತೆತ್ತಲುಂ ಪರ್ಬಿತಾಗಳ್ ೧೬೪

ಮಂಗಳಗಳಿಂದ ಪೂಜ್ಯವಾದ ಆ ಓಲಗಶಾಲೆಯಲ್ಲಿ, ೧೬೧. ಶಿವನ ಪಾದಕ್ಕೆ ನಮಸ್ಕರಿಸುವ ದೇವತೆಗಳ ಕಿರೀಟಗಳು ಒಂದಕ್ಕೊಂದು ತಗುಲಿ ಸುರಿದ ಧೂಳಿಯು ಸಮೀಪದಲ್ಲಿಯೇ ನಿಂತು ಆಗಮಗಳನ್ನೋದುವ ಬ್ರಹ್ಮನ ನಾಲ್ಕು ಮುಖಗಳಲ್ಲಿ ಹೊಗಲಾಗಿ, ಬ್ರಹ್ಮನು ಹಿರಣ್ಯಗರ್ಭನೆಂಬ ಹೆಸರನ್ನು ಧರಿಸಿದನು (ಇಲ್ಲವಾದರೆ ಅವನಿಗೆ ಆ ಹೆಸರು ಬರುತ್ತಿದ್ದಿಲ್ಲ.) ೧೬೨. ಅಲ್ಲಿ ನಂದೀಶ್ವರನು "ಇಂದ್ರನೇ ಮಾತಾಡಬೇಡ, ವಿಷ್ಣುವೇ ತಳ್ಳಬೇಡ, ಚಂದ್ರನೇ ಮೆಲ್ಲನೆ ತೊಲಗು, ಸೂರ್ಯನೇ ಸಂತೋಷದಿಂದ ಒಳಕ್ಕೆ ಪ್ರವೇಶಿಸು, ಬ್ರಹ್ಮನೇ ಕೈಮುಗಿ, ಅಗ್ನಿಯೇ ನಮಸ್ಕರಿಸು, ಕುಬೇರನೇ ಹಿಂದಕ್ಕೆ ನಿಲ್ಲು, ವಾಯುವೇ ಒಂದು ಪಕ್ಕಕ್ಕೆ ಹೋಗು, ಯಮನೇ ನಿಲ್ಲು" ಈ ಪ್ರಕಾರವಾಗಿ ಧ್ವನಿಮಾಡುತ್ತ ಗದರಿಸುತ್ತಿದ್ದನು. ೧೬೩. ಆ ಶಿವನ ಸಭಾಸ್ಥಾನದಲ್ಲಿ ಮಹಾಕಾಲನೆಂಬ ಪ್ರಮಥನು ಗುಂಪಾಗಿ ಸೇರಿಕೊಂಡಿರುವ ರಾಕ್ಷಸರನ್ನು ಬೆತ್ತದಿಂದ ಹೊಡೆಯುತ್ತ, ಯಕ್ಷರನ್ನು ತಳ್ಳುತ್ತ, ಕಡೆಗಣ್ಣಿನಿಂದ ಋಷಿಗಳ ಗುಂಪನ್ನು ಹಿಂದಕ್ಕೆ ಸರಿಯುವ ಹಾಗೆ ಮಾಡುತ್ತ, ಸಿದ್ಧರುಗಳನ್ನು ಹಿಂದಕ್ಕೆ ನೂಕಿ, ಸಾಧ್ಯರುಗಳನ್ನು ಬೆದರಿಸುತ್ತ, ಇಂದ್ರನೇ ಮೊದಲಾದ ದಿಕ್ಪಾಲಕರುಗಳನ್ನು ಹೋ ಹೋ ಎನ್ನುತ್ತ, ನಿಲ್ಲಿಸುತ್ತ, ಆ ಮಹಾಸ್ಥಾನದಲ್ಲಿ ಗಾನಮಾಡುವುದಕ್ಕೂ ನರ್ತನಮಾಡುವುದಕ್ಕೂ ಅವಕಾಶವಾಗಲು ಕಲಕಲಧ್ವನಿಯುಂಟಾಗದ ಹಾಗೆ ಮಾಡುತ್ತಿದ್ದನು. ೧೬೪. ಆ ಸಮಯದಲ್ಲಿ ವೇದಗಳ ಸ್ತೋತ್ರಧ್ವನಿಯೂ, ಋಷಿಗಳ ಜಯ ಜಯ ಎಂಬ ಜಯಕಾರಧ್ವನಿಯೂ, ವಿಷ್ಣುವಿನ ಮುಖದಿಂದುತ್ಪನ್ನವಾದ ಸಾಮವೇದಧ್ವನಿಯೂ, ದೇವತಾಸ್ತ್ರೀಯರುಗಳ ಗಾನವೂ, ಸಂತೋಷದಿಂದ ಕೂಡಿದ

ಮ॥ಸ್ರ॥ ಸುರಪಂ ಮಂದಾರದಿಂದಚ್ಯುತನರುಣಸರೋಜಾತದಿಂ ಚಂದ್ರನಿಂದೀ
ವರದಿಂ ಬಾಲಾಬ್ಜಮಿತ್ರಂ ಧವಳಕಮಳದಿಂ ಪದ್ಮಜಂ ಹೇಮಪದ್ಮೋ
ತ್ಕರದಿಂ ವಿತ್ತೇಶನುದ್ಯತ್ಕನಕಕುಸುಮದಿಂ ಮಾರುತಂ ದಿವ್ಯಸೌಗಂ
ಧಿರಜಃಸೌಗಂಧದಿಂದರ್ಚಿಸೆ ನಿಜಪದಮಂ ಭರ್ಗನೊಪ್ಪಿರ್ದನಾಗಳ್ ೧೬೫

ಚಂ॥ ಕರಮೆಸೆದಿರ್ದರೀಶ್ವರ ಸಮಕ್ಷದೊಳುದ್ಭಟ ಬಾಣಭಟ್ಟ ಭಾ
ಸ್ಕರ ವರ ಪುಷ್ಪದತ್ತರುಮುದಗ್ರ ಹರೀಶ್ವರ ರಾಘವಾಂಕ ಶಂ
ಕರವಿಭುಗಳ್ಸುಕೇಶಿ ಮಲಯಾಧಿಪ ಮಲ್ಹಣ ಭೀಮ ಬಲ್ಹಣ
ರ್ಸುರುಚಿರ ಕಾಳಿದಾಸಕವಿ ಭೋಜಮುಖರ್ನುತಿಸುತ್ತೆ ಭಕ್ತಿಯಿಂ ೧೬೬

ಮಣಿಮಣಿದೇಳ್ವ ನಿಲ್ವ ನಡೆನೋಡುವ ಪಾಡುವ ಜೋಲ್ವ ತೇಲ್ವ ಸಂ
ದಣಿಪ ಕುಕಿಲ್ವ ಕೂಗಿಡುವ ರಾಗಿಪ ರಂಜಿಪ ಸುತ್ತಿಬರ್ಪ ರಿಂ
ಗಣಗುಣಿವಾರ್ಪ ಸಾರ್ಪ ನಗುವಂಘ್ರಿಯನಪ್ಪುವ ಲಲ್ಲೆದೋರ್ಪ ಕ
ಣ್ಪೊಣರ ಸುಖಾಶ್ರುವಿಂ ನನೆವ ನಚ್ಚಿನ ಮಚ್ಚಿನ ಭಕ್ತರೊಪ್ಪಿದರ್ ೧೬೭

ಗಂಧರ್ವಸ್ತ್ರೀಯರ ನರ್ತನಧ್ವನಿಯೂ, ಭೃಂಗೀಶ್ವರನ ನಾಟ್ಯದ ಧ್ವನಿಯೂ, ಆ ಕಾಲಕ್ಕೆ ತಕ್ಕ ಮಂಗಳವಾದ್ಯಗಳ ಶಬ್ದವೂ ಕೂಡಿ ಅಧಿಕವಾಗಿ ಎಲ್ಲಾ ಕಡೆಗೂ ತುಂಬಿ ಕೊಂಡಿತು. ೧೬೫. ದೇವೇಂದ್ರನು ಕಲ್ಪವೃಕ್ಷದ ಹೂವುಗಳಿಂದಲೂ, ವಿಷ್ಣುವು ಕೆಂದಾವರೆ ಹೂವಿನಿಂದಲೂ, ಚಂದ್ರನು ಕನ್ನೈದಿಲೆಯ ಹೂವಿನಿಂದಲೂ, ಸೂರ್ಯನು ಬಿಳಿಯ ತಾವರೆಯ ಹೂವಿನಿಂದಲೂ, ಬ್ರಹ್ಮನು ಸುವರ್ಣವರ್ಣದ ಶ್ರೇಷ್ಠ ಕಮಲ ದಿಂದಲೂ, ಕುಬೇರನು ಅಧಿಕತರವಾದ ಸುವರ್ಣದ ಹೂವುಗಳಿಂದಲೂ, ವಾಯುವು ನೈದಿಲೆಯ ಪರಿಮಳ ವಿಶಿಷ್ಟವಾದ ಧೂಳಿನಿಂದಲೂ ಶಿವನ ಪಾದಗಳನ್ನು ಪೂಜಿಸುತ್ತಿರ ಲಾಗಿ, ಶಿವನು (ಆ ಕೈಲಾಸದ ಸಭಾಸ್ಥಾನದಲ್ಲಿ) ಶೋಭಿಸುತ್ತಿದ್ದನು. ೧೬೬. ಇಂಥ ಈಶ್ವರನ ಮುಂಭಾಗದಲ್ಲಿ ಉದ್ಭಟ, ಬಾಣಭಟ್ಟ, ಭಟ್ಟಭಾಸ್ಕರ, ಶ್ರೇಷ್ಠನಾದ ಪುಷ್ಪ ದತ್ತರುಗಳೂ, ಶ್ರೇಷ್ಠ ಕವೀಶ್ವರನಾದ ಹರೀಶ್ವರದೇವ, ರಾಘವಾಂಕ, ಶಂಕರಕವೀಶ್ವರ, ಸುಕೇಶಿ, ಮಲಯರಾಜ, ಮಲ್ಹಣಕವಿ, ಭೀಮಕವಿ, ಬಿಲ್ಹಣಕವಿ ಇವರುಗಳು ಮತ್ತು ಕಾಳಿದಾಸಕವಿ ಭೋಜಕವಿ ಇವರೇ ಮೊದಲಾದ ಶಿವಕವಿಗಳು ಭಕ್ತಿಯಿಂದ ಸ್ತೋತ್ರಮಾಡುತ್ತ ಚೆನ್ನಾಗಿ ಶೋಭಿಸುತ್ತಿದ್ದರು. ೧೬೭. ನಮಸ್ಕಾರಮಾಡಿ, ನಮಸ್ಕಾರಮಾಡಿ ಮೇಲಕ್ಕೇಳುವ, ನಿಂತುಕೊಳ್ಳುವ, ಚೆನ್ನಾಗಿ (ಶಿವನನ್ನು) ನಿರೀಕ್ಷಿ ಸುವ, ಗಾನಮಾಡುವ, ತೂಗಾಡುವ, ತೇಲಾಡುವ, ಗುಂಪುಸೇರುವ, ಕೋಗಿಲೆಯ ಧ್ವನಿಯಂತೆ ಮಂಜುಳಧ್ವನಿಮಾಡಿ ಹಾಡುವ, ಗಟ್ಟಿಯಾಗಿ ಉಗ್ಘಡಿಸುವ, ಪ್ರೀತಿಸುವ, ರಂಜನೆ ಮಾಡುವ, ಪ್ರದಕ್ಷಿಣೆ ಮಾಡುವ, ಕುಪ್ಪಳಿಸಿ ಕುಣಿದಾಡುವ, ಭಕ್ತಿಯ ಸಾಮರ್ಥ್ಯವನ್ನು ಪ್ರಕಟಿಸುವ, ಸಮೀಪಕ್ಕೆ ಬರುವ, ನಗುವ, ಪಾದವನ್ನು ತಬ್ಬಿ ಕೊಳ್ಳುವ, ವಿನೋದವನ್ನು ತೋರಿಸುವ, ಕಣ್ಣುಹಾರಿಸುವ, ಆನಂದಬಾಷ್ಪದಿಂದ ನೆನೆಯುವ (ಇವೇ ಮೊದಲಾದ ಭಕ್ತಿಯ ಸಾತ್ವಿಕಭಾವದ) ನಚ್ಚಿನ ಭಕ್ತರುಗಳು

ತವಕದೆ ನೋಡಿ ನೋಡಿ ತಣಿವೈದವು ಕಣ್ಗಳನೂನ ಮೂರ್ತಿಯಂ
ಸವಿಮಿಗೆ ಪಾಡಿ ಪಾಡಿ ತಣಿವೈದದು ಜಿಹ್ವೆ ತದೀಯ ಕೀರ್ತಿಯಂ
ಸವೆಯದೆ ಮಾಡಿ ಮಾಡಿ ತಣಿವೈದದು ಪಾಣಿ ತದಂಘ್ರಿಸೇವೆಯಂ
ನವವಿಧ ಭಕ್ತಿಯುಕ್ತ ಶರಣಾವಳಿಗೆಂದೆನೆ ಸೈಪದೆಂತುಟೋ ೧೬೮

ಸ್ರ॥ ಇಂತತ್ಯಂತ ಪ್ರಭಾವಂಬಡೆದು ಮಿಸುಗುವಾಸ್ಥಾನದೊಳ್ ಸತ್ಯಪಾದ್ರ್ಸ
ಸ್ವಾಂತಂ ಸತ್ಯೇಂದ್ರನಂ ತತ್ತನುಜ ಮುಖರನೊಲ್ದೀಕ್ಷಿಸುತ್ತಂ ಭವಾನೀ
ಕಾಂತಂ ಕೋಡಾಡಿ ಕೇಡಿಲ್ಲದ ಗಣಪದಸಾಮ್ರಾಜ್ಯಮಂ ಸಾರ್ಚಿ ತಾನ
ಶ್ರಾಂತಂ ಕಣ್ಗೊಪ್ಪಿದಂ ಮಂಜುಳಗುಣಗಣ ಮಾಣಿಕ್ಯಕೋಶಂ ಮಹೇಶಂ ೧೬೯

ವ॥ ಆಗಳ್ಕೆಯ್ಯಿಕ್ಕಿ ಕೆಯ್ಯೆತ್ತಿ ಸಮ್ಮುಖದೊಳ್ ಚಂಡಕೀರ್ತಿಗಳ್ಕಳಕಳಮಂ ನಿವಾರಿಸಿ ಸಂಭ್ರಮಿಸಿ ನಿಂದು

ಲಲಿತರಗಳೆ॥ ಜಯ ಜಯ ಸುಧಾಕರಕಲಾಕಲಿತ ಕೋಟೀರ
ಜಯ ಜಯ ಶಿವಾಂಗಸಂಗತ ಮಂಗಳಾಕಾರ
ಜಯ ಜಯ ವಿತಂದ್ರ ವೃಷಭೇಂದ್ರ ಚತುರತುರಂಗ
ಜಯ ಜಯ ಮಹಾನಟನಚಲ ಕುಲಾಚಲಶೃಂಗ

ಶೋಭಿಸುತ್ತಿದ್ದರು. ೧೬೮. ಅರ್ಚನೆಯೇ ಮೊದಲಾದ ನವವಿಧ ಭಕ್ತಿಯಿಂದ ಕೂಡಿದ ಶರಣರ ನೇತ್ರಗಳು ಶಿವನ ದಿವ್ಯಶರೀರವನ್ನು ಎಷ್ಟು ನೋಡಿದರೂ ಇನ್ನೂ ನೋಡ ಬೇಕೆಂಬ ಕುತೂಹಲವುಳ್ಳವಾಗಿದ್ದುವಲ್ಲದೆ ತೃಪ್ತಿ ಪಡೆಯಲಿಲ್ಲ. ಮತ್ತು ನಾಲಗೆಗಳು ಶಿವನ ಕೀರ್ತಿಯನ್ನು ರಮಣೀಯವಾಗಿ ಎಷ್ಟು ಸ್ತುತಿಸಿದರೂ ಇನ್ನೂ ಸ್ತೋತ್ರ ಮಾಡ ಬೇಕೆಂಬ ಬಯಕೆಯುಳ್ಳವಾಗಿದ್ದುವಲ್ಲದೆ ಸಾಕೆಂಬುದಾಗಿರಲಿಲ್ಲ. ಮತ್ತು ಹಸ್ತಗಳು ಪಾದಸೇವೆಯನ್ನು ನಿರಂತರದಲ್ಲಿ ಎಷ್ಟುಮಾಡಿದರೂ ಇನ್ನೂ ಮಾಡಬೇಕೆಂಬ ಪ್ರೀತಿ ಯುಳ್ಳವವಾಗಿದ್ದುವಲ್ಲದೆ ಸಾಕಾಗಲಿಲ್ಲ. ಅವರ ಪುಣ್ಯವೆಷ್ಟಿರಬಹುದೋ ! ೧೬೯. ಈ ಪ್ರಕಾರವಾಗಿ ಅತ್ಯಂತ ಪ್ರಭಾವವನ್ನು ಪಡೆದು ಶೋಭಿಸುವ ಆ ಕೈಲಾಸದ ಆಸ್ಥಾನ ದಲ್ಲಿ ದಯಾನ್ವಿತನೂ, ಪಾರ್ವತೀಪತಿಯೂ, ಸರ್ವಜ್ಞತ್ವ, ಸರ್ವಕರ್ತೃತ್ವಾದಿಗಳೆಂಬ ರತ್ನಗಳಿಗೆ ಕೋಶಪ್ರಾಯನೂ ಆದ ಸದಾಶಿವನು ಸತ್ಯೇಂದ್ರಚೋಳ ಮತ್ತು ಅವನ ಮಗ ರಾಜಶೇಖರನೇ ಮೊದಲಾದವರನ್ನು ಪ್ರೀತಿಯಿಂದ ನೋಡುತ್ತ, ಪ್ರಮಥರೊಡನೆ ಹೊಗಳಿ, ಎಂದೆಂದೂ ನಾಶವಿಲ್ಲದಂಥ ಗಣಪದವಿಯ ಆಧಿಪತ್ಯವನ್ನು ದಯಪಾಲಿಸಿ ಶೋಭಿಸುತ್ತಿದ್ದನು. ವ|| ಆ ಸಮಯದಲ್ಲಿ ನಮಸ್ಕರಿಸಿ ಕೈಗಳನ್ನು ಮೇಲಕ್ಕೆತ್ತಿ ಮುಂಭಾಗದಲ್ಲಿ ಚಂಡಕೀರ್ತಿಗಳೆಂಬ ಸ್ತುತಿಪಾಠಕರು(ಅಲ್ಲಿ ಆಗುತ್ತಿದ್ದ) ಕೋಲಾಹಲ ಧ್ವನಿಯನ್ನು ನಿಲ್ಲಿಸಿ, ಸಂಭ್ರಮದಿಂದ ನಿಂತುಕೊಂಡು, ಲಲಿತರಗಳೆ|| ಚಂದ್ರಕಳೆ ಯಿಂದ ಕೂಡಿರುವ ಕಿರೀಟವುಳ್ಳ, ಪಾರ್ವತಿಯ ಅರ್ಧಾಂಗದಿಂದ ಮಂಗಳಾಕಾರ ನಾದ ಶಿವನೇ ಜಯ ಜಯ ; ಜಾಗರೂಕ ವೃಷಭೇಶ್ವರನನ್ನೇ ಚತುರವಾದ ಕುದುರೆ ಯಾಗುಳ್ಳವನೇ, ಮಹತ್ತರವಾದ (ತಾಂಡವ) ನಾಟ್ಯದಿಂದ ಚಂಚಲಗೊಳ್ಳುವ ಕುಲಾ

ಜಯ ಜಯ ಮಹಾಮಹಿಮ ಹಿಮಗಿರಿಸುತಾಕಾಂತ
ಜಯ ಜಯ ಸುಭಿಕ್ಷಾಟನೇ ಕ್ಷಿತೇಂದ್ರನಿಶಾಂತ
ಜಯ ಜಯ ವಿಶೃಂಖಲ ಖಿಲಾಂಗಜಾಂಗವಿಭಂಗ
ಜಯ ಜಯ ಹೃತೋದ್ದಂಡ ದಂಡಧರ ಕುಧರಾಂಗ
ಜಯ ಜಯ ನಭೋನಗರ ಹರಣಪಟು ನಿಟಿಲಾಕ್ಷ
ಜಯ ಜಯ ಜಲಂಧರ ಮದಾಂಧಗಜ ಹರ್ಯಕ್ಷ
ಜಯ ಜಯ ಪಿತಾಮಹ ಮಹಾಕರೋಟಿಕರಾಗ್ರ
ಜಯ ಜಯ ನಿಕೃತ್ತ ಸುರಪಕ್ಷ ದಕ್ಷಮಹೋಗ್ರ
ಜಯ ಜಯ ನೃಸಿಂಹಸಂಹರಣಪಟು ಶರಭಾಂಗ
ಜಯ ಜಯ ನಿಜಾಂಗಾರ್ಧಸಂಗನಗಜಾರ್ಧಾಂಗ
ಜಯ ಜಯ ಸುತಾಕಾಮ ವಿಧಿಹರ ಕಿರಾತೇಶ
ಜಯ ಜಯ ಜಿತತ್ರಿವಿಕ್ರಮ ವಿಕ್ರಮನಿವೇಶ
ಜಯ ಜಯ ಸಮಾದತ್ತ ಚಂಡವರ ವರದೇವ
ಜಯ ಜಯ ಜಗತ್ಪ್ರಳಯಕರಗರಧರಗ್ರೀವ
ಜಯ ಜಯಾಚ್ಯುತದತ್ತ ಚಕ್ರರಕ್ಷಣಶೀಲ

ಚಲಪರ್ವತಶೃಂಗಗಳುಳ್ಳವನೇ ಜಯ ಜಯ ; ಹಿಮವಂತನ ಮಗಳಾದ ಪಾರ್ವತೀ ಪತಿಯೇ, ಸಮೀಚೀನವಾದ ಭಿಕ್ಷಾಟನದಿಂದ ದೇವೇಂದ್ರನ ಮನೆಯನ್ನೀಕ್ಷಿಸಿದವನೇ ಜಯ ಜಯ ; ಅಪ್ರತಿಹತರಾದ ದುಷ್ಟ ಮನ್ಮಥನ ಶರೀರವನ್ನು ನಾಶಮಾಡಿದವನೇ, ಗರ್ವಿಷ್ಠನಾದ ಯಮನೆಂಬ ಪರ್ವತವನ್ನು ಹರಣಮಾಡಿದವನೇ, ಜಯ ಜಯ; ಸ್ವರ್ಣ ನಗರಗಳಾದ ತ್ರಿಪುರಗಳನ್ನು ಸುಟ್ಟು ಬೂದಿಮಾಡಿದ ಸಮರ್ಥವಾದ ಅಗ್ನಿನೇತ್ರಗಳುಳ್ಳ ವನೇ, ಜಲಂಧರನೆಂಬ ಮದಿಸಿದ ಆನೆಗೆ ಸಿಂಹಪ್ರಾಯನಾದವನೇ ಜಯ ಜಯ ; ಬ್ರಹ್ಮನ ಕಪಾಲವೇ ಹಸ್ತದಲ್ಲಿ ಉಳ್ಳವನೇ, ದೇವತೆಗಳ ಪಕ್ಷನಾದ ದಕ್ಷನನ್ನು ಛೇದಿಸಿ ದವನೇ ಜಯ ಜಯ ; ನರಸಿಂಹನನ್ನು ಸಂಹರಿಸುವಲ್ಲಿ ಸಮರ್ಥವಾದ ಶರಭರೂಪ ತಾಳಿದವನೇ, ನಿನ್ನ ದೇಹಾರ್ಧದಲ್ಲಿ ಅಗಜೆಯ ಸಂಬಂಧವುಳ್ಳವನಾಗಿ ಅರ್ಧಾಂಗನೆನಿಸಿ ದವನೇ ಜಯ ಜಯ ; ತಾನು ಸೃಷ್ಟಿಸಿದ ಮಗಳನ್ನೇ ಇಚ್ಛಿಸಿದ ಬ್ರಹ್ಮನನ್ನು ಸಂಹರಿಸು ವುದರಲ್ಲಿ ಕಿರಾತೇಶನಾದ ಶಿವನೇ, ತ್ರಿವಿಕ್ರಮಾಕಾರಗೊಂಡ ವಾಮನಮೂರ್ತಿಯ ಪರಾಕ್ರಮವನ್ನು ಜಯಿಸಿದ ಮಹಾಮೂರ್ತಿಯೇ ಜಯ ಜಯ ; ಚಂಡೇಶ್ವರನ್ಗೆ ಇಷ್ಟಾರ್ಥಗಳನ್ನು ಕೊಟ್ಟ ಸ್ವಯಂಪ್ರಕಾಶನೇ, ಲೋಕಗಳ ಪ್ರಳಯವನ್ನು ಮಾಡತಕ್ಕ ವಿಷವನ್ನು ಧರಿಸಿದವನೇ ಜಯ ಜಯ ; ಲೋಕಸಂರಕ್ಷಣೆಗಾಗಿ ಅಚ್ಯುತನಿಗೆ ಚಕ್ರ

ಜಯ ಜಯ ಗಜೇಂದ್ರಮುಖ ಮುಖವಿಲೋಕನಲೋಲ
ಜಯ ಜಯ ಕುಮಾರಮಾರಿತ ದಿವಿಜರಿಪುಜಾಲ
ಜಯ ಜಯ ವಿಳಾಸಕೃತ ವಿದಿತೈಕಪದಲೀಲ
ಜಯ ಜಯ ಶುಭಾವಹ ಸುಖಾವಹ ಸದಾಲಾಪ
ಜಯ ಜಯ ಸುದಕ್ಷಿಣಾಮೂರ್ತಿ ವಿಳಸಿತರೂಪ
ಜಯ ಜಯ ಹರಿಬ್ರಹ್ಮಮೃಗ್ಯ ಪರತರಲಿಂಗ
ಜಯ ಜಯ ಸದಾಮ್ನಾಯಗೇಯ ಮಹಿಮೋತ್ತುಂಗ

ವ॥ ಜಯ ದೇವ ದೇವ ಮಹಾದೇವ ನಮಸ್ತೇ ನಮಃ ಎಂದಖಂಡವಿಭವ ಕೊಂಡಾಡುತ್ತಮಿರೆಯಿರೆ

ಕಂ॥ ಹರಭಕ್ತಿಸುಖಸುಧಾಸಾ
ಗರಮಗ್ನಂಗಣುತೃಣೋಪಮಂ ಹರಿಸುರಪಾ
ದ್ಯರ ಪದಪಲ್ವಲಮಮರ್ದುಂ
ಡರ ಬಾಯ್ಗಂಬಿಲದ ರಸಮದೇಂ ಸೊಗಯಿಕುಮೋ ೧೭೦

ಪ್ರಧಾನ ಮಾಡಿದವನೇ, ಗಣಪತಿಯೇ ಮೊದಲಾದವರನ್ನು ನೋಡುವುದರಲ್ಲಿ ಆಸಕ್ತನಾದ ಶಿವನೇ ಜಯ ಜಯ ; ಕುಮಾರಸ್ವಾಮಿಯಿಂದ ಸಂಹಾರಗೊಳಿಸಲ್ಪಟ್ಟ ದೇವತೆಗಳ ವೈರಿಗಳಾದ ರಾಕ್ಷಸರ ಸಮೂಹವುಳ್ಳವನೇ, ವಿನೋದದಿಂದ ಪ್ರಸಿದ್ಧವಾದ ಏಕಪಾದಲೀಲೆಯನ್ನು ಮಾಡಿದ ಶಿವನೇ ಜಯ ಜಯ ; ಮಂಗಳವನ್ನುಂಟುಮಾಡುವ ಸುಖಾವಹಲೀಲೆಯನ್ನು ವಹಿಸಿದ ಒಳ್ಳೆಯ ಆಲಾಪಗಳುಳ್ಳವನೇ, ದಕ್ಷಿಣಾಮೂರ್ತಿಯ ಲೀಲೆಯನ್ನು ಮಾಡಿ ಶೋಭಿಸುವ ಆಕಾರದಿಂದೊಪ್ಪಿದವನೇ ಜಯ ಜಯ ; ಹರಿಬ್ರಹ್ಮರಿಂದ ಹುಡುಕುವುದಕ್ಕೆ ಅಸಾಧ್ಯವಾದ ಅತಿಶ್ರೇಷ್ಠ ಲಿಂಗರೂಪನೇ, ಸದಾ ವೇದಗಳಿಂದ ಗಾನಮಾಡಲು ಯೋಗ್ಯವಾದ ಮಹತ್ತುಗಳಿಂದ ಶ್ರೇಷ್ಠನಾದ ಸ್ವಾಮಿಯೇ ಜಯ ಜಯ. ವ॥ ದೇವತೆಗಳಿಗೆ ದೇವನಾದ ಮಹಾದೇವನೇ ನಿನಗೆ ನಮಸ್ಕಾರಗಳು ಎಂದು ಸಂಪೂರ್ಣ ಸಾಮರ್ಥ್ಯದ ಸ್ತುತಿಪಾಠಕರು ಹೊಗಳುತ್ತಿರುತ್ತಿದ್ದರು. ೧೭೦. ಶಿವಭಕ್ತಿಯೆಂಬ ಕ್ಷೀರಸಮುದ್ರದಲ್ಲಿ ಮುಳುಗಿರುವ ಮನುಷ್ಯನಿಗೆ ಅಣು, ತೃಣಸಮಾನಗಳಾದ ವಿಷ್ಣು ಮತ್ತು ಇತರ ದೇವತೆಗಳ ಸ್ಥಾನವು ಚಿಕ್ಕಕೆರೆಯಲ್ಲಿ ಮುಳುಗಿದ ಹಾಗೆಯೇ. (ಹೇಗೆಂದರೆ) ಅಮೃತವನ್ನು ಪಾನಮಾಡಿದವರ ನಾಲಿಗೆಗೆ ಅಂಬಲಿಯು

ವ॥ ಎನಿಸಿ

ಮ॥ ಪರಮಾನಂದರಸಪ್ರಸನ್ನವದನಂ ಪಂಚಾಕ್ಷರಾಮೋದ ವಿ
ಸ್ಫುರಿತಸ್ವಾಂತಪಯೋರುಹಂ ಶಿವಪದಾಂಭೋಜಾತಭೃಂಗಂ ಗುಣಾ
ಕರಚೂಡಾಮಣಿ ರಾಜಶೇಖರಮಹೀಶಂ ತನ್ಮಹಾದೇವ ಭ
ಕ್ತಿರಸಾನಂದತೃಣೀಕೃತಾನ್ಯಸುಖಿನೊಪ್ಪಿರ್ದಂ ತದಾಸ್ಥಾನದೊಳ್ ೧೭೧

ಶಾ॥ ಇಂತೀ ಕಾವ್ಯಮನೊಲ್ದು ಕೇಳ್ದ ವಿಬುಧರ್ ಮೈವೆರ್ಚಿ ಕೊಂಡಾಡೆ ಪೇ
ಳ್ದಂ ತಾನೊರ್ವನೆ ಸಾಂಬಶಂಭುಕೃಪೆಯಿಂದೇಕಾಬ್ದದೊಳ್ ಪೂರ್ಣಮ
ಪ್ಪಂತೋರಂತೆ ಷಡಕ್ಷರಾರ್ಯನನಘಂ ಸಾಹಿತ್ಯಶಾಸ್ತ್ರಜ್ಞನ
ಶ್ರಾಂತಶ್ರೀ ಶಿವಲಿಂಗಸಂಗತ ಮಹಾಮಾಹೇಶ್ವರಂ ಭಕ್ತಿಯಿಂ ೧೭೨

ಮ॥ ಸರಸಾರ್ಥಂ ಸವಿಮಾತು ಜಾಣ್ಮೆಯೊಳವೆಂದಾಮ್ನಾಯ ಸಂಸ್ತುತ್ಯಶಂ
ಕರನಾಮಾಂಕಿತವಲ್ಲದನ್ಯಕೃತಿಯೊಳ್ ವಿದ್ವಜ್ಜನಂ ಮೋಹಿಪೊಂ
ದಿರವಲ್ತೆಂದಿದರ್ಚೊಳ್ಸದಾ ರಮಿಸುಗೆಂದೋರಂತೆ ಪೇಳ್ದಂ ಷಡ
ಕ್ಷರದೇವಂ ರಸಮರ್ಥಮೊಳ್ಪು ಮಿಸುಪೀ ಸತ್ಕಾವ್ಯಮಂ ಶ್ರಾವ್ಯಮಂ ೧೭೩

ಹೇಗೆ ರುಚಿಸುವುದಿಲ್ಲವೋ ಹಾಗೆ. ವ|| ಹೀಗೆನಿಸಿಕೊಂಡು, ೧೭೧. ಪರಮಾನಂದ ರಸದಿಂದ ನಿರ್ಮಲವಾದ ಮುಖವುಳ್ಳವನಾಗಿಯೂ, ಪಂಚಾಕ್ಷರೀಮಂತ್ರವನ್ನೇ ಹೃದಯ ಕಮಲದಲ್ಲಿ ಧ್ಯಾನಿಸುವವನಾಗಿಯೂ, ಶಿವನ ಪಾದವೆಂಬ ಕಮಲಕ್ಕೆ ಭೃಂಗಸ್ವರೂಪ ನಾಗಿಯೂ, ಗುಣಶಾಲಿಗಳಲ್ಲೆಲ್ಲ ಶ್ರೇಷ್ಠನಾದವನೆನಿಸಿಯೂ, ಶಿವಭಕ್ತಿಯಿಂದುಂಟಾದ ಆನಂದದಿಂದ ಅನ್ಯಸುಖಗಳನ್ನು ತಿರಸ್ಕರಿಸಿದವನಾಗಿಯೂ ಇರುವ ರಾಜಶೇಖರನು ಆ ಪರಶಿವನ ಆಸ್ಥಾನದಲ್ಲಿ ಪ್ರಕಾಶಿಸುತ್ತಿದ್ದನು. ೧೭೨. ಇದುವರೆಗೆ ಹೇಳಿದ ರೀತಿ ಯಲ್ಲಿರುವ ರಾಜಶೇಖರ ವಿಳಾಸವೆಂಬ ಚಂಪೂಕಾವ್ಯವನ್ನು ಪ್ರೀತಿಯಿಂದ ಕೇಳಿದ ವಿದ್ವಾಂಸರುಗಳು ಸಂತೋಷಾತಿಶಯದಿಂದ ಉತ್ಸಾಹಗೊಂಡು ಹೊಗಳುತ್ತಿರಲು, ನಿರ್ದುಷ್ಟನಾದಂಥ, ಸಾಹಿತ್ಯಶಾಸ್ತ್ರವನ್ನು ತಿಳಿದಂಥ, ನಿರಂತರವೂ ಮಂಗಳಕರವಾದ ಶಿವಲಿಂಗಸಂಗತನೂ ಶ್ರೇಷ್ಠಮಾಹೇಶ್ವರನೂ ಆದಂಥ ಷಡಕ್ಷರದೇವನು ತಾನು ಒಬ್ಬನೇ ಪಾರ್ವತೀಸಮೇತನಾದ ಶಂಭುವಿನ ಕೃಪೆಯಿಂದ ಒಂದೇ ವರ್ಷದಲ್ಲಿ ಈ ಕಾವ್ಯವು ಸಮಾಪ್ತಿಯಾಗುವ ಹಾಗೆ ಕ್ರಮವಾಗಿ ಹೇಳಿದನು. ೧೭೩. ವೇದಗಳಿಂದ ಸ್ತೋತ್ರ ಮಾಡಲ್ಪಟ್ಟ ಶಿವನ ನಾಮಾಂಕಿತವಲ್ಲದ ಅನ್ಯಕಾವ್ಯದಲ್ಲಿ ನವರಸವಿಶಿಷ್ಟವಾದ ಅರ್ಥವೂ, ಮಧುರವಾದ ಮಾತುಗಳೂ, ಜಾಣ್ಮೆಯೂ ಇರುವುವು. ಹೀಗೆಂದು ವಿದ್ವಾಂಸರಾದ ಜನರು ಅಪೇಕ್ಷಿಸುವ ಒಂದು ರೀತಿಯು ಯೋಗ್ಯವಲ್ಲ. ಈ ಕಾವ್ಯದಲ್ಲಿ ಅವರು ಸದಾ ಕ್ರೀಡಿಸಲಿ ಎಂದು ಭಾವಿಸಿ ಕ್ರಮವಾಗಿ ಷಡಕ್ಷರದೇವನು ನವರಸಭರಿತ ವಾದ ಅರ್ಥದಿಂದಲೂ, ಕೇಳುವುದಕ್ಕೆ ಇಂಪಾಗಿಯೂ ಶೋಭಿಸುವ ಈ ರಾಜಶೇಖರ

ಚಂ॥ ತ್ರಿದಶಜನರ್ಗದೀವುದೆಱೆದರ್ಥಮನೈದೆ ಸುರೋರ್ವಿಜಂ ಸಮಂ
ತಿದು ಬಿಡದೊಂದೆ ಕಾವ್ಯನವಕಲ್ಪಕುಜಂ ಸಕಳರ್ಗವಿಾವುದು
ರ್ವಿದ ಸುಪದಾರ್ಥಮಂ ಸವಿಕಳಧ್ವನಿ ಪಲ್ಲವಪೂರ್ಣಶೋಭಿ ತಾ
ನದಱಿನಿದಕ್ಕೆ ಸಧ್ವನಿಲಸತ್ಪದಪೂರ್ಣಕದಿಂ ಸಮಾನವೋ ೧೭೪

ಕಂ॥ ಪದಪಾಳಿಕ್ರಮಯುಕ್ತಂ
ಸದಮಳ ಮಂತ್ರಾರ್ಥವಾದ ಸಹಿತಂ ತಾನಾ
ದುದಱಿಂದೀ ಕಾವ್ಯಂ ವೇ
ದದವೊಲ್ಬುಧಜನಕೆ ಮಂಗಳಪ್ರದಮಲ್ತೇ ೧೭೫

ಶ್ರುತಿಗತಿಹಿತಮತಿ ವಿಬುಧ
ಪ್ರತತಿಗೆ ಶಿವಮಂತ್ರಮಹಿಮೆಯುತಮಿಾ ಕಾವ್ಯಂ
ಶ್ರುತಿಗತಿಹಿತಮತಿ ವಿಬುಧ
ಪ್ರತತಿಗೆ ತಾನೆನಿಪುದರರೆ ವಿಶ್ವಂಭರೆಯೊಳ್ ೧೭೬

ವಿಳಾಸವೆಂಬ ಕಾವ್ಯವನ್ನು ರಚಿಸಿದನು. ೧೭೪. ಆ ದೇವಲೋಕದ ಕಲ್ಪವೃಕ್ಷವು ಹದಿಮೂರು ಜನಕ್ಕೆ ಮಾತ್ರ (ತ್ರಿದಶ=ದೇವತೆಗಳು, ಹದಿಮೂರು) ಅಪೇಕ್ಷಿಸಿದ ವಸ್ತುವನ್ನು ಚೆನ್ನಾಗಿ ಕೊಡುವುದು. ಒಂದೇ ಒಂದಾದ ಈ ರಾಜಶೇಖರ ವಿಳಾಸವೆಂಬ ನೂತನ ಕಲ್ಪವೃಕ್ಷವು ಸಮಸ್ತ ಜನರಿಗೂ ಕೂಡ ಅಧಿಕವಾದ ಒಳ್ಳೆಯ ವಸ್ತುವನ್ನು (ಒಳ್ಳೆಯ ಶಬ್ದಾರ್ಥಗಳನ್ನು) ಕೊಡುವುದು. ಹೀನಧ್ವನಿಯಿಂದ ಕೂಡಿರುವುದಾಗಿಯೂ, ತುಂಡು ಪಾದಗಳಿಂದ (ಪತ್+ಲವ) ಕೂಡಿರುವುದಾಗಿಯೂ ಶೋಭಿಸುವ (ಪಕ್ಷಿಗಳ ಧ್ವನಿ ಮತ್ತು ಚಿಗುರುಗಳಿಂದಲೂ ಶೋಭಿಸುವ) ಆ ಕಲ್ಪವೃಕ್ಷವು ಒಳ್ಳೆಯ ವ್ಯಂಗ್ಯಾರ್ಥ ಪ್ರಧಾನವಾದ ಧ್ವನಿಯಿಂದಲೂ, ಶೋಭಿಸುವ (ಪದ್ಯಪಾದಗಳಿಂದಲೂ), ಅರ್ಥಪೂರ್ಣವಾದ ಶಬ್ದ (ರಮಣೀಯಾರ್ಥ ಪ್ರತಿಪಾದಕ ಶಬ್ದ)ಗಳಿಂದಲೂ ಕೂಡಿರುವ ಈ ಕಾವ್ಯವೆಂಬ ಕಲ್ಪವೃಕ್ಷಕ್ಕೆ ಹೇಗೆ ಸಮಾನವಾದೀತು ? ೧೭೫. ಪದಕ್ರಮ, ಘನ, ಜಟಕ್ರಮ, ಇತ್ಯಾದಿ ಲಕ್ಷಣಗಳಿಂದ ಕೂಡಿರುವುದಾಗಿಯೂ, ನಿರ್ಮಲವಾದ ಮಂತ್ರವಾದ, ಅರ್ಥವಾದ ಇವುಗಳಿಂದ ಕೂಡಿ ಇರುವ ವೇದದ ಹಾಗೆ ಶಬ್ದಗಳ ವಿನ್ಯಾಸಕ್ರಮದಿಂದಲೂ, ನಿರ್ಮಲವಾದ ಪಂಚಾಕ್ಷರೀಮಂತ್ರಾರ್ಥ ವಿಚಾರದಿಂದಲೂ ಕೂಡಿರುವುದಾಗಿಯೂ ಇರುವ ಈ ರಾಜಶೇಖರ ವಿಳಾಸವೆಂಬ ಕಾವ್ಯವು ವಿದ್ವಾಂಸರಿಗೆ ಮಂಗಳಗಳನ್ನುಂಟುಮಾಡುವುದಾಗುವುದಿಲ್ಲವೇ ? ೧೭೬. ಶಿವಮಂತ್ರ ಮಹಿಮೆಯಿಂದ ಕೂಡಿದ ಈ ಕಾವ್ಯವು, ವೇದಜ್ಞಾನ ಉಳ್ಳವರೂ ಹಿತವಾದ ಬುದ್ಧಿಯುಳ್ಳವರೂ ಅದ ವಿಬುಧರ ಕಿವಿಗೆ ಅತ್ಯಂತ ಹಿತಕರವಾದ ಮತಿಯನ್ನುಂಟುಮಾಡತಕ್ಕದ್ದಾಗಿದೆ. (ಆಶ್ಚರ್ಯ ! ಕಾವ್ಯಂ=ಶುಕ್ರಾಚಾರ್ಯನು ವಿಬುಧಪ್ರತತಿಗೆ=ದೇವತೆಗಳ ಸಮೂಹಕ್ಕೆ, ಶ್ರುತಿಗೆ=ಕೇಳಲು, ಅತಿಹಿತಮತಿ=ಅತ್ಯಂತ ಹಿತಕರವಾದ ಬುದ್ಧಿ

ಮ॥ ಸರಸಾಲಂಕೃತಿ ಜಾತಿ ರೀತಿ ಗಮಕಂ ಸೊಂಪಿಂಪು ನುಣ್ಪೊಳ್ಪು ಭಾ
ಸುರಭಾವಂ ನೆಲೆಗೊಂಡು ತೋಱೆ ರಸಗಾನಂಬೊಲ್ಮನಂಗೊಳ್ವ ವಿ
ಸ್ಫುರದಸ್ಮತ್ಕೃತಿಯಂ ಸದಾ ವಿಷಮದಾಟೋಪಂ ಜಗತ್ಪ್ರಾಣಸಂ
ಹರವಕ್ರಕ್ರಮವಿಕ್ರಮಂ ಖಳಭುಜಂಗಂ ಕೇಳದೇಂ ಪೋಕುಮೇ ೧೭೭

ಚಂ॥ ಇದು ಪೊಸತಿಂಪು ನೋಡಿದು ನವೀನಮನೂನ ಮೃದೂಕ್ತಿಭಾವಮಿಂ
ತಿದು ನವಮಿಂತಿದಲ್ತೆ ಸದಲಂಕೃತಿ ನವ್ಯಮುದಾತ್ತವೃತ್ತಿ ತಾ
ನಿದು ಮಿಗೆ ನೂತ್ನಮೆಂದಖಿಳ ಕಾವ್ಯಕಳಾವಿದರೊಲ್ದು ಕೇಳ್ದು ಮ
ಚ್ಚದೆ ನುತಿಗೆಯ್ಯದಿರ್ಪರೆ ಷಡಕ್ಷರಿದೇವಕೃತಪ್ರಬಂಧಮಂ ೧೭೮

ಯುಳ್ಳವನು) (ರಂ) ೧೭೭. ನವರಸದಿಂದ ಕೂಡಿರುವ, ಉಪಮಾದ್ಯಲಂಕಾರ ಸಮೂಹ, ವೈದರ್ಭೀ ಮೊದಲಾದ ರೀತಿ, ಗಮಕ, ಸೊಗಸು, ಮಾಧುರ್ಯ, ಮನೋಹರತ್ವ (ನುಣ್ಪು), ಸಮೀಚೀನತೆ (ಒಳ್ಪು), ಪ್ರಕಾಶಮಾನವಾದ ಭಾವಗಳು ನೆಲೆಗೊಂಡು ಕಾಣಿಸುತ್ತ ರಸವತ್ತಾದ ಗಾನದ ಹಾಗೆ (ರಸಾಸ್ವಾದನ ಪರಿಣತಮತಿಗಳಿಗೆ ಸಂಗೀತದ ಹಾಗೆ) ಮನೋಹರವಾಗಿ ಪ್ರಕಾಶಮಾನವಾದ ನನ್ನ ಈ ಕಾವ್ಯವನ್ನು, ಸದಾ ಕಷ್ಟವನ್ನು ಕೊಡತಕ್ಕ (ವಿಷಮ+ದ) ಕೋಪವುಳ್ಳಂಥ (ವಿಷದ ಮದದಿಂದ ಕೋಪವುಳ್ಳಂಥ) ಜನಗಳ ಪ್ರಾಣಗಳನ್ನು ಸಂಹಾರಮಾಡತಕ್ಕ ವಕ್ರವಾದ ವಿಧಾನದಲ್ಲಿ ಪರಾಕ್ರಮಶಾಲಿಗಳಾದಂಥ ವಾಯುವನ್ನು (ಜಗತ್ಪ್ರಾಣ) ಸಂಹಾರ ಮಾಡತಕ್ಕ (ಅಂದರೆ ವಾಯುಭಕ್ಷಕಗಳಾದಂಥ) ಕುಟಿಲ ಪದನ್ಯಾಸಕ್ರಮದಲ್ಲಿ ಶಕ್ತಿಯುಳ್ಳಂಥ ದುಷ್ಟನೆಂಬ ಸರ್ಪವು ಲಾಲಿಸದೆ ಹೋಗುವುದೇನು ? (ಈ ಪದ್ಯದಲ್ಲಿ ದುಷ್ಟನನ್ನು ಹಾವಿಗೆ ಹೋಲಿಸಿ ವರ್ಣಿಸಲಾಗಿದೆ. ದುಷ್ಟರು ವಕ್ರಮಾರ್ಗದಲ್ಲಿ ಹಾವಿನಂತೆ ಹೋಗಿ ಜಗತ್ತಿನ ಜನರ ಪ್ರಾಣಗಳನ್ನು ತಮ್ಮ ವಿಷಮದದ ಕೋಪದಿಂದ ಹರಣಮಾಡುತ್ತಾರೆ. ಅಂಥ ದುಷ್ಟರೂ ಈ ಕಾವ್ಯಗಳನ್ನು ಕೇಳಿ ಸಜ್ಜನರಾಗುತ್ತಾರೆಂದು ಧ್ವನಿತವಾಗುವುದು). ೧೭೮. (ಈ ರಾಜಶೇಖರ ವಿಳಾಸವೆಂಬ ಮಹಾಕಾವ್ಯದಲ್ಲಿ ಹೇಳಿರುವ) ಈ ಮಾಧುರ್ಯವು ಹೊಸದಾದುದು, ನೋಡು. ಈ ದೋಷರಹಿತವಾದ ಮೃದುವಾದ ಮಾತು ಹೊಸದು. ಇದೇ ರೀತಿ ಇಲ್ಲಿನ ಭಾವವೂ ನೂತನವಾದದ್ದು. ಅಂತೆಯೇ ಯೋಗ್ಯವಾದ ಉಪಮೋತ್ಪ್ರೇಕ್ಷಾದಿ ಅಲಂಕಾರವೂ ಕೂಡ ನೂತನವಾದುದೇ ಅಲ್ಲವೆ ? ಇದರಲ್ಲಿ ಹೇಳಿರುವ ಉದಾತ್ತಗಳಾದ ಕೈಶಿಕೀ ಇತ್ಯಾದಿ ವೃತ್ತಿಯೂ ಕೂಡ ತಾನು ಅತಿಶಯವಾಗಿ ಹೊಸದೇ ಆಗಿದೆ. ಹೀಗೆಂದು ಷಡಕ್ಷರಿದೇವನೆಂಬ ಮಹಾಕವಿಯಿಂದ ರಚಿಸಲ್ಪಟ್ಟ ಈ ಮಹಾಪ್ರಬಂಧವನ್ನು ಸಮಸ್ತವಾದ ಕಾವ್ಯಜ್ಞಾನವನ್ನು ಹೊಂದಿದಂಥ ವಿದ್ವಾಂಸರುಗಳು ಪ್ರೀತಿಸಿ ಕೇಳಿ, ಒಪ್ಪಿಕೊಳ್ಳದೆ, ಸ್ತೋತ್ರವನ್ನು

ಮ॥ಸ್ರ॥ ವಿತತಾಲಂಕಾರವಿಭ್ರಾಜಿತ ಗುಣಗಣಸಂಯುಕ್ತಿ ಶೃಂಗಾರಸಾರಾ
ನ್ವಿತೆ ಸದ್ವೃತ್ತಿಪ್ರಕಾಶೋದಯೆ ಮೃದುಪದವಿನ್ಯಾಸೆ ತದ್ಭಾವಶೋಭಾ
ವತಿ ಭಾಸ್ವದ್ರೀತಿರೇಖಾಲಸಿತೆ ಭೃತಸದಾಮೋದೆ ಭೂಚಕ್ರದೊಳ್
ತ್ಕೃತಿ ಚಂಚತ್ಕಾಂತೆ ಮತ್ಕೀರ್ತಿಯ ಸಖಿಯೆನೆ ಸಂತೋಷದಿಂದಿರ್ಕೆ ನಿಚ್ಚಂ ೧೭೯

ಮ॥ ಅಕಳಂಕಂ ವಿಬುಧಪ್ರಣೀತ ಸುಮನಸ್ಸಂಯುಕ್ತಮಿಷ್ಟಾರ್ಥದಂ
ಸುಕುಮಾರಸ್ಥಿತಿ ಸಾರಲಕ್ಷಣಯುತಂ ಸದ್ರಾಗಶೋಭಾಕರಂ
ಸಕಳಾಮ್ನಾಯ ಶಿರಃಸ್ಥಳಸ್ಥಗಿತಮೆಂದುಂ ನಿಂದವೊಲ್ಕಂಕರಾಂ
ಘ್ರಿ ಕರಂ ನಿಲ್ಕೆ ಮದೀಯ ಕಾವ್ಯಮನಿಶಂ ವಿಶ್ವಂಭರಾಚಕ್ರದೊಳ್ ೧೮೦

ಮಾಡದೆ ಇರುವರೇ ? ೧೭೯. (ಈ ಪದ್ಯದಲ್ಲಿ ಕಾವ್ಯಪರವಾಗಿಯೂ, ಸ್ತ್ರೀಪರ ವಾಗಿಯೂ ಎರಡರ್ಥವುಂಟು) ಪ್ರಸಿದ್ಧವಾದ (ವಿಸ್ತಾರವಾದ) ಉಪಮಾದ್ಯಲಂಕಾರ ಗಳಿಂದ ಪ್ರಕಾಶಿಸಲ್ಪಡುವಂತಹುದು (ಕಾವ್ಯ), ವಿಶಾಲವಾದ (ಅಧಿಕವಾದ) ವಸ್ತ್ರಾ ಭರಣಾದಿಗಳಿಂದ ಪ್ರಕಾಶಮಾನಳಾದವಳು (ಸ್ತ್ರೀ) ; ಪ್ರಸಾದಾದಿ ಗುಣಗಳ ಸಮೂಹ ದಿಂದ ಕೂಡಿರುವುದು (ಕಾವ್ಯ), ಸೌಂದರ್ಯ ಸೌಕುಮಾರ್ಯಾದಿ ಗುಣಗಳ ಸಮೂಹದಿಂದ ಕೂಡಿರುವಳು (ಸ್ತ್ರೀ) ; ಶ್ರೇಷ್ಠವಾದ ಶೃಂಗಾರ ರಸದಸಾರ ಅನ್ವಿತವಾದುದು (ಕಾವ್ಯ), ಶೃಂಗಾರರಸ ಸಾರವಾದ ಹಾವಭಾವ ವಿಶಿಷ್ಟ ನಡೆನುಡಿಯಿಂದ ಕೂಡಿದವಳು (ಸ್ತ್ರೀ) ; ಶ್ರೇಷ್ಠವಾದ ಕೈಶಿಕ್ಯಾದಿ ವೃತ್ತಿಗಳಿಂದ ಪ್ರಕಾಶದ ಆವಿರ್ಭಾವವುಳ್ಳುದು (ಕಾವ್ಯ), ಒಳ್ಳೆಯ ವರ್ತನಾ (ಸದ್ವೃತ್ತಿ) ಪ್ರಕಟನೆಯ ಪ್ರಾದುರ್ಭಾವವುಳ್ಳವಳು (ಸ್ತ್ರೀ); ಮೃದು ವಾದ ಶಬ್ದಪ್ರಯೋಗವುಳ್ಳುದು (ಕಾವ್ಯ), ಕೋಮಲವಾದ ಚರಣ (ಪದ)ಗಳ ಇಡುವಿಕೆ ಯುಳ್ಳವಳು (ಸ್ತ್ರೀ) ; ಒಳ್ಳೆಯ ಭಾವಗಳಿಂದ ಶೋಭೆಗೊಂಡಿರುವುದು (ಕಾವ್ಯ), ಯೋಗ್ಯವಾದ ಹಾವಭಾವಗಳ ಸೌಂದರ್ಯಾತಿಶಯಗಳಿಂದ ಶೋಭಾವತಿ (ಸ್ತ್ರೀ): ಪ್ರಕಾಶ ಮಾನವಾದ ವೈದರ್ಭಿಯೇ ಮೊದಲಾದ ರೀತಿಗಳ ಪಙ್ತಿ (ರೇಖಾ)ಯಿಂದ ಒಪ್ಪಲ್ಪಟ್ಟಿರು ವುದು (ಕಾವ್ಯ), ಶೋಭಾವಹ ನಡೆವಳಿಕೆ (ರೀತಿ), ರೂಪ (ರೇಖಾ) ಇವುಗಳಿಂದ ಪ್ರಕಾಶಮಾನಳಾದವಳು (ಸ್ತ್ರೀ) ; ಪೋಷಿಸಲ್ಪಡುವ ವಿದ್ವಾಂಸರಿಗೆ ಸದಾ ಸಂತೋಷ ವನ್ನುಂಟುಮಾಡುವಂತಹುದು (ಕಾವ್ಯ), ಸದಾ ತೊಡೆದುಕೊಂಡ ಪರಿಮಳದ್ರವ್ಯವುಳ್ಳ ವಳು (ಸ್ತ್ರೀ). (ಇಂಥ) ನನ್ನ ಕೃತಿಯೆಂಬ ಮಿನುಗುತ್ತಿರುವ ಸ್ತ್ರೀಯಳು ನನ್ನ ಯಶಸ್ಸಿನ ಗೆಳತಿಯು ಎನ್ನುವ ಹಾಗೆ ಆನಂದದಿಂದ ಭೂಮಂಡಲದಲ್ಲಿ ಯಾವಾಗಲೂ ಇರಲಿ. ೧೮೦. (ಈ ಶ್ಲೋಕದಲ್ಲಿ ಕಾವ್ಯದ ಪರವಾಗಿಯೂ ಈಶ್ವರನ ಪಾದಗಳ ಪರವಾಗಿಯೂ ಎರಡರ್ಥದಿಂದ ವರ್ಣಿಸಲಾಗಿದೆ). ಅಕಳಂಕ (ದೋಷರಹಿತ)ವಾದದ್ದು (ಕಾವ್ಯ), ಪಾಪರಹಿತವಾದುದು (ಪಾದ) ; ಸಹೃದಯನಾದ (ಸುಮನಸ್ ಸಂಯುಕ್ತ) ವಿದ್ವಾಂಸ ನಾದ ಷಡಕ್ಷರಿಯಿಂದ ಹೇಳಲ್ಪಟ್ಟದ್ದು (ಕಾವ್ಯ), ದೇವತೆಗಳಿಂದ ಏರಿಸಲ್ಪಟ್ಟ ಹೂವು

ಪರಮೈಶ್ವರ್ಯಮನೀಶ್ವರಂ ಪ್ರವಿಲಸತ್ಕಲ್ಯಾಣಿ ಕಲ್ಯಾಣಮಂ
ಕರಿವಕ್ತ್ರಂ ಕರಣೀಯ ಸಿದ್ಧಿಯನಮಂದಾನಂದಮಂ ನಂದಿ ಬ
ರ್ಹಿರಥಂ ಪೂರ್ಣಮನೋರಥಂಗಳನತಂದ್ರಂ ಶ್ರೀವೃಷೇಂದ್ರಂ ವೃಷೋ
ತ್ಕರಮಂ ಮತ್ಕೃತಿಗೇಳ್ವವರ್ಗಿಳೆಯೊಳೆಂದುಂ ಮಾಳ್ಕೆ ಸಂಪ್ರೀತಿಯಿಂ ೧೮೧

ಶಾ॥ ಶ್ರೀಮನ್ನಂದನಭಾಸಿಸಂಗತ ಮಹಾಪರ್ಣಾಶ್ರಿತಾಂಗಂ ಸದಾ
ಆಮೋದಪ್ರದ ಸೌಮನಸ್ಯಮಧಿಕಚ್ಛಾಯಂ ಶುಕಾದಿದ್ವಿಜ
ಸ್ತೋಮಪ್ರೇಮಕರಂ ಕುವೃತ್ತಿರಹಿತಂ ಸರ್ವಾಂಗವಶೌಭಸ್ತುತಂ
ಸ್ವಾಮಿ ಶ್ರೀಶಿವಲಿಂಗಮಾಗೆಮಾಗಮತ್ರ್ಯೋರ್ವೀಜಮಿಷ್ಟಾರ್ಥಮಂ ೧೮೨

ಗಳುಳ್ಳದ್ದು (ಪಾದ) ; ಇಷ್ಟವಾದ ಶಬ್ದಾರ್ಥಗಳನ್ನು ಕೊಡುವಂತಹುದು (ಕಾವ್ಯ), ಭಕ್ತರಾದವರ ಮನೋರಥಗಳನ್ನು ಕೊಡುವಂತಹುದು (ಪಾದ) ; ಸೌಕುಮಾರ್ಯಾದಿ ಗುಣಗಳಿಂದ ಕೂಡಿರುವುದು (ಕಾವ್ಯ), ಅತಿಮೃದುತ್ವದ ಸ್ಥಿತಿಯುಳ್ಳದ್ದು (ಪಾದ) ; ಶ್ರೇಷ್ಠವಾದ ಕಾವ್ಯಲಕ್ಷಣಾದಿಗಳಿಂದ ಕೂಡಿರುವುದು (ಕಾವ್ಯ), ಶ್ರೇಷ್ಠವಾದ ಪದ್ಮ ರೇಖೆಯೇ ಮೊದಲಾದ ಒಳ್ಳೆಯ ಲಕ್ಷಣಗಳಿಂದ ಕೂಡಿರುವುದು (ಪಾದ) ; ಒಳ್ಳೆಯ ವಿದ್ವಾಂಸರ ಪ್ರೀತಿಯ ಪ್ರಕಾಶಕ್ಕೆ ಆಶ್ರಯವಾಗಿರುವುದು (ಕಾವ್ಯ), ಶ್ರೇಷ್ಠರಾದ ಆರುಣ್ಯ ರಾಗದ ಶೋಭೆಗೆ ಸ್ಥಾನವಾಗಿರುವುದು (ಪಾದ); ಸಕಲ ವೇದಗಳ ಶಿರಃಪ್ರದೇಶವಾಗಿರುವ ಪಂಚಾಕ್ಷರೀಮಂತ್ರ ಮಹಿಮೆಯಿಂದ ವ್ಯಾಪ್ತಿಗೊಂಡದ್ದು, (ಕಾವ್ಯ), ಸಮಸ್ತವಾದ ವೇದಾಂತ (ಉಪನಿಷತ್ತು)ಗಳ ಪ್ರದೇಶಗಳಲ್ಲಿ ಸಂಘಟಿಸಿರುವಂತಹುದು (ಪಾದ) ; ಇಂತಹ ಪರಮೇಶ್ವರನ ಪಾದವು ಯಾವ ಕಾಲದಲ್ಲೂ (ಸದಾಕಾಲದಲ್ಲೂ) ನಿಂತು ಕೊಂಡ ಹಾಗೆ (ತ್ರಿಕಾಲಾಬಾಧಿತವಾಗಿ ಇರುವ ಹಾಗೆ) ನನ್ನಿಂದ ರಚಿಸಲ್ಪಟ್ಟ ಈ ರಾಜಶೇಖರ ವಿಳಾಸವೆಂಬ ಕಾವ್ಯವು ಭೂಮಂಡಲದಲ್ಲಿ ಯಾವ ಕಾಲದಲ್ಲೂ ಸ್ಥಿರವಾಗಿ ನಿಲ್ಲುವಂತಹುದಾಗಲಿ. ೧೮೧. ಭೂಮಿಯಲ್ಲಿ ನನ್ನಿಂದ ರಚಿಸಲ್ಪಟ್ಟ ಈ ರಾಜಶೇಖರ ವಿಳಾಸವನ್ನು ಕೇಳುವ ಜನರಿಗೆ ಶಿವನು ಅಷ್ಟೈಶ್ವರ್ಯವನ್ನೂ, ಪ್ರಕಾಶಮಾನಳಾದ ಪಾರ್ವತಿಯು ಮಂಗಳವನ್ನೂ, ಗಣಪತಿಯು ಕಾರ್ಯಸಿದ್ಧಿಯನ್ನೂ, ನಂದೀಶ್ವರನು ಅಧಿಕವಾದ ಆನಂದವನ್ನೂ, ಷಣ್ಮುಖನು ಪೂರ್ಣವಾದ ಇಷ್ಟಾರ್ಥಗಳನ್ನೂ, ಆಲಸ್ಯ ರಹಿತನಾದ ವೃಷಭನು ಶ್ರೇಷ್ಠವಾದ ಧರ್ಮಬುದ್ಧಿಯನ್ನೂ ಯಾವಾಗಲೂ ವಿಶೇಷ ಪ್ರೀತಿಯಿಂದ ಕೊಡಲಿ. ೧೮೨. (ಈ ಪದ್ಯದಲ್ಲಿ ಶಿವಲಿಂಗದ ಪರವಾಗಿ ಮತ್ತು ಕಲ್ಪ ವೃಕ್ಷದ ಪರವಾಗಿ ಎರಡರ್ಥವುಂಟು.) ಶೋಭಾಯುಕ್ತ ಮಕ್ಕಳಾದ ಗಣಪತಿ ಷಣ್ಮುಖ ರಿಂದ ಪ್ರಕಾಶಮಾನನಾಗಿರುವವನು (ಶಿವ), ಶೋಭಿಸುವ ಪುಷ್ಪಾದಿ ಸಂಪತ್ತಿನಿಂದ ಕೂಡಿದ ನಂದನವನದಲ್ಲಿ ಪ್ರಕಾಶಮಾನವಾಗಿರುವುದು (ಕಲ್ಪವೃಕ್ಷ); ಮಹಾಶ್ರೇಷ್ಠಳಾದ ಪಾರ್ವತಿ (ಅಪರ್ಣ)ಯಿಂದ ಸಂಗತನಾಗಿ ಶರೀರಾರ್ಧದಲ್ಲಿ ಆಶ್ರಯಕೊಟ್ಟವನು (ಶಿವ), ಅಧಿಕವಾದ ಎಲೆ (ಪರ್ಣ)ಗಳಿಂದ ಸಂಗತವಾಗಿ ಆಶ್ರಯಿಸಲ್ಪಟ್ಟ ಕೊಂಬೆಗಳುಳ್ಳದ್ದು

ಮ॥ ಅಮೃತಶ್ರೀವೃತೆ ಸತ್ಫಳಾನ್ವಿತೆ ಮರುತ್ಸಂಸೇವ್ಯೆ ಸಚ್ಛಾಯೆ ಸ
ಪ್ರಮದಾನೂನ ವಿನಾಯಕೋತ್ಸವೆ ಸದಾಮೋದ ಪ್ರಸನ್ನಸ್ಫುರ
ತ್ಸುಮನಸ್ಸಂಯುತೆ ನಿರ್ಜರಾರ್ಯಹಿತೆ ಹೈಮಕ್ಷ್ಮಾಧ್ರಸಂಜಾತೆಯಾ
ಕ್ರಮಿತಸ್ಥಾಣು ಮೃಡಾನಿ ಕಲ್ಪಲತೆಯಂತೀಗೆಮ್ಮಭೀಷ್ಟಾರ್ಥಮಂ ೧೮೩

(ಕಲ್ಪವೃಕ್ಷ) ; ಸತ್ಪುರುಷರ ಸಮೂಹಕ್ಕೆ ಸಂತೋಷವನ್ನು (ಸತ್+ಆಳಿ+ಆದಿ) ಕೊಡತಕ್ಕ ಸಾಧುತ್ವವುಳ್ಳವನು (ಶಿವ), ಸದಾ ಭ್ರಮರಗಳಿಗೆ ಪರಿಮಳವನ್ನು ಕೊಡತಕ್ಕ ಪುಷ್ಪಸಮೂಹ (ಸದಾ+ಆಳಿ+ಆದಿ+ಆಮೋದ) ವುಳ್ಳದ್ದು (ಕಲ್ಪವೃಕ್ಷ) ; ಹೆಚ್ಚಾದ ಕಾಂತಿಯುಳ್ಳವನು (ಶಿವ), ಅತಿಶಯ ನೆಳಲನ್ನುಳ್ಳದ್ದು (ಕಲ್ಪವೃಕ್ಷ) ; ಶುಕಋಷಿಯೇ ಮೊದಲಾದ ವಿಪ್ರರಗುಂಪಿಗೆ ಪ್ರೀತಿಯನ್ನುಂಟುಮಾಡುವವನು (ಶಿವ), ಗಿಳಿಗಳೇ ಮೊದ ಲಾದ ಪಕ್ಷಿಸ್ತೋಮಕ್ಕೆ ಪ್ರೀತಿಯನ್ನುಂಟುಮಾಡುವುದು (ಕಲ್ಪವೃಕ್ಷ) ; ಕುತ್ಸಿತವಾದ ನಡೆವಳಿಕೆಯಿಂದ ಹೊರತಾದವನು (ಶಿವ), ಭೂಮಿಯಲ್ಲಿ ಇರದೆ ಸ್ವರ್ಗದಲ್ಲಿ ಇರುವ ಸ್ಥಿತಿ ಯುಳ್ಳುದು (ಕಲ್ಪವೃಕ್ಷ) ; ಸಮಸ್ತ ಶಿವಾಗಮಗಳ ಸಮೂಹದಿಂದ ಸ್ತೋತ್ರ ಮಾಡಿಸಿ ಕೊಳ್ಳುವವನು (ಶಿವ), ಸಮಸ್ತವಾದ ವೃಕ್ಷ (ಆಗಮ)ಗಳ ಸಮೂಹದಲ್ಲಿ ಸ್ತೋತ್ರಾರ್ಹ ವಾದುದು (ಕಲ್ಪವೃಕ್ಷ). ಇಂತಹ ಸ್ವಾಮಿಯಾದ ಶಿವಲಿಂಗವೆಂಬ ಕಲ್ಪವೃಕ್ಷ (ಅಮರ್ತ್ಯೋರ್ವೀಜ)ವು ಮನೋರಥಗಳನ್ನು ಕೊಡಲಿ. ೧೮೩. (ಈ ಪದ್ಯದಲ್ಲಿ ಪಾರ್ವತಿಯ ಪರವಾಗಿಯೂ ಕಲ್ಪವೃಕ್ಷದ ಪರವಾಗಿಯೂ ಎರಡರ್ಥವುಂಟು). ಮೋಕ್ಷದ ಸಂಪತ್ತಿನಿಂದ ಕೂಡಿರುವವಳು (ಪಾರ್ವತಿ), ಸುಧಾಸಂಪತ್ತಿನಿಂದ ಕೂಡಿರುವುದು (ಕಲ್ಪವೃಕ್ಷ) ; ಭಕ್ತರಿಗೆ ಒಳ್ಳೆಯ ಫಲಗಳನ್ನು ಕೊಡುವುದರಲ್ಲಿ ಅನ್ವಿತಳಾದವಳು (ಪಾರ್ವತಿ), ಒಳ್ಳೆಯ ಹಣ್ಣುಗಳಿಂದ ಕೂಡಿರುವುದು (ಕಲ್ಪವೃಕ್ಷ) ; ದೇವತೆ (ಮರುತ್)ಗಳಿಂದ ಸೇವೆಮಾಡಿಸಿಕೊಳ್ಳುವುದಕ್ಕೆ ಯೋಗ್ಯಳಾಗಿರುವವಳು (ಪಾರ್ವತಿ), ವಾಯುವಿನಿಂದ ಸೇವಿಸುವುದಕ್ಕೆ ಯೋಗ್ಯವಾಗಿರುವುದು (ಕಲ್ಪವೃಕ್ಷ) ; ಯೋಗ್ಯ ಕಾಂತಿ (ಛಾಯೆ)ಯುಳ್ಳವಳು (ಪಾರ್ವತಿ), ಒಳ್ಳೆಯ ನೆಳಲುಳ್ಳದ್ದು (ಕಲ್ಪವೃಕ್ಷ) ; ಸಂತೋಷದಿಂದ ಕೂಡಿರುವ ಶ್ರೇಷ್ಠ ಗಣಪತಿಯಲ್ಲಿ ಉತ್ಸವವುಳ್ಳವಳು (ಪಾರ್ವತಿ), ಸಂತೋಷದಿಂದ ಕೂಡಿ (ಕಲಕಲಧ್ವನಿಮಾಡುವ) ಅಧಿಕವಾದ ಶ್ರೇಷ್ಠ ಪಕ್ಷಿಗಳಿಂದ ಕೂಡಿದುದು (ಕಲ್ಪವೃಕ್ಷ) ; ಯಾವಾಗಲೂ ಸಂತೋಷದಿಂದ (ಸದಾಮೋದ) ನಿರ್ಮಲವೂ, ಪ್ರಕಾಶಮಾನವೂ ಆದ ಮನಸ್ಸಿನಿಂದ ಕೂಡಿದವಳು (ಪಾರ್ವತಿ), ನಿರಂತರವೂ ಪರಿಮಳದಿಂದ ನಿರ್ಮಲವಾಗಿ ಪ್ರಕಾಶಿಸುತ್ತಿರುವ ಹೂವುಗಳಿಂದ ಕೂಡಿರು ವುದು (ಕಲ್ಪವೃಕ್ಷ) ; ದೇವತಾಸಾರ್ವಭೌಮ (ನಿರ್ಜರು+ಆರ್ಯ)ನಾದ ಶಿವನಿಂದ ಕೂಡಿದವಳು (ಪಾರ್ವತಿ). ರಾಕ್ಷಸರ ವೈರಿ (ನಿರ್ಜರ+ಅರಿ)ಯಾದ ದೇವೇಂದ್ರನ ನಂದನ ವನದಲ್ಲಿ ಕೂಡಿರುವುದು (ಕಲ್ಪವೃಕ್ಷ) ; ಹಿಮವಂತನಿಂದ ಜನಿಸಿದವಳು (ಪಾರ್ವತಿ), ಸುವರ್ಣಸಂಬಂಧದ ಮೇರು (ಕ್ಷ್ಮಾಧ್ರ) ಹುಟ್ಟಿರುವುದು (ಕಲ್ಪವೃಕ್ಷ) ; ಪರಮೇಶ್ವರ

ಚಂ॥ ಸುರುಚಿರ ಶಾಲಿವಾಹನಶಕಾನ್ವಿತ ರತ್ನಸಮುದ್ರಬಾಣ ಭೂ
ಪರಿಗಣನಾಂಕ ಬಂಧುರ ಜಯಾಬ್ದದ ಮಾಘದ ಶುದ್ಧಪಕ್ಷವಿ
ಸ್ಫುರಿತ ತೃತೀಯೆಯಲ್ಲಿ ಬುಧವಾರದೊಳೀಕೃತಿ ಪೂರ್ಣಮಾಯ್ತು ಶಂ
ಕರ ಶಿವಲಿಂಗದಂಘ್ರಿಕೃಪೆಯಿಂದೆ ಷಡಕ್ಷರದೇವನಿರ್ಮಿತಂ ೧೮೪

ಗದ್ಯ॥ ಇದು ವಿನಮದಮರವರ ಮಕುಟತಟಘಟಿತ ಮಣಿಗಣಮಹಾಪ್ರಭಾಪಟಲ ಪರಿವೃತ ಪರಶಿವಶ್ರೀಪಾದನಖಚಂದ್ರಸಾಂದ್ರರುಚಿರಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋಭಯಕವಿತಾವಿಶಾರದ ಶ್ರೀ ಷಡಕ್ಷರದೇವ ವಿರಚಿತಮಪ್ಪ ರಾಜಶೇಖರ ವಿಳಾಸ ವಿಪುಳಪ್ರಬಂಧವರ್ಣನಂ

ಅಂತು ಆಶ್ವಾಸ ೧೪ಕ್ಕಂ ಪದ ೧೮೭೧ಕ್ಕಂ ಮಂಗಳ ಮಹಾಶ್ರೀ

**ಚತುರ್ದಶಾಶ್ವಾಸಂ**

ಸಂಪೂರ್ಣಂ

---

ನನ್ನು (ಸ್ಥಾಣು) ಆಕ್ರಮಿಸಿದವಳು (ಪಾರ್ವತಿ), ಆಶ್ರಯಿಸಲ್ಪಟ್ಟ ಮೋಟುಮರದ ಬೊಡ್ಡೆಯುಳ್ಳದ್ದು (ಕಲ್ಪವೃಕ್ಷ). ಇಂಥ ಪಾರ್ವತಿಯು ಕಲ್ಪವೃಕ್ಷದ ಹಾಗೆ ನಮ್ಮ ಇಷ್ಟಾರ್ಥಗಳನ್ನು ಕೊಡಲಿ. ೧೮೪. ಮನೋಹರವಾದ ಶಾಲಿವಾಹನಶಕದಿಂದ ಕೂಡಿದ ೯, ೭, ೫, ೧ ಇವುಗಳ ಸಂಖ್ಯೆಯ ಗುರುತಿನಿಂದ ಬಂಧುರವಾದ ಜಯಸಂವತ್ಸರ ಮಾಘ ಶುದ್ಧಪಕ್ಷ ವಿಸ್ಫುರಿತ ತೃತೀಯೆಯ ಬುಧವಾರದ ದಿವಸದಲ್ಲಿ ಷಡಕ್ಷರದೇವಕವಿಯಿಂದ ನಿರ್ಮಿಸಲ್ಪಟ್ಟ ಈ ರಾಜಶೇಖರ ವಿಳಾಸವೆಂಬ ಕೃತಿಯು ಶಂಕರಶಿವಲಿಂಗದೇವನ ಪಾದಕೃಪೆಯಿಂದ ಸಂಪೂರ್ಣವಾಯಿತು. (ಅಂದರೆ ಅಂಕಾನಾಂ ವಾಮತೋ ಗತಿಃ ಎಂಬ ಸಂಕೇತದ ಪ್ರಕಾರ ಶಾಲೀವಾಹನ ಶಕ ೧೫೭೯ರ ಜಯಸಂವತ್ಸರದಲ್ಲಿ ಎಂದು ತಿಳಿಯಬೇಕು), ಗದ್ಯ॥ ಈ ಗದ್ಯಪದ್ಯ ರೂಪವಾದ ಪ್ರಬಂಧವು ವಂದಿಸುತ್ತಿರುವ ದೇವತೆಗಳೊಳಗೆ ಶ್ರೇಷ್ಠರಾದವರುಗಳ ಕಿರೀಟದ ತಟದಲ್ಲಿ ಕೆತ್ತಿರುವ ರತ್ನಸಮೂಹದ ಅಧಿಕಪ್ರಭೆಯ ಕಾಂತಿಯ ಸಮೂಹದಿಂದ ಬಳಸಿರುವ ಪರಮೇಶ್ವರನ ಸಂಪದ್ಯುಕ್ತವಾದ ಅಡಿಯ ಉಗುರುಗಳೆಂಬ ಚಂದ್ರನ ಘನವಾದ ಕಾಂತಿಯೆಂಬ ವಿಶಾಲವಾದ ಬೆಳದಿಂಗಳಿಗೆ ಶೋಭಿಸುವ ಚಕೋರಪಕ್ಷಿಯಂತಿರುವ ಶೃಂಗಾರಾದಿ ರಸಜ್ಞರಾದ ಜನರಿಂದ ಮರ್ಯಾದೆಯನ್ನು ಹೊಂದಿದವನಾದ ಉಭಯಭಾಷಾ ಕವಿತ್ವದಲ್ಲಿ ವಿಶಾರದನಾದ ಶ್ರೀ ಷಡಕ್ಷರಿದೇವ ಕವಿಯಿಂದ ಮಾಡಲ್ಪಟ್ಟದ್ದಾದ ರಾಜಶೇಖರ ವಿಳಾಸವೆಂಬ ವಿಸ್ತಾರವಾದ ಪ್ರಬಂಧ ವರ್ಣನೆ

**ಚತುರ್ದಶಾಶ್ವಾಸ**

ಮುಗಿದುದು

---

# ೧. ಪೂರ್ವಕಥೆಗಳು

೧. ಆಶ್ವಾಸ ೧. ಪದ್ಯ ೧. ಶಿಲಾದನಿಗೆ ನಂದಿಕೇಶ್ವರನು ಮಗನಾದ ಕಥೆ : ಈಶ್ವರನ ವಾಹನವಾದ ವೃಷಭ ಅಥವಾ ನಂದೀಶ್ವರನು ಶಿಲಾದನೆಂಬ ಋಷಿಯ ಮಗ. ಶಿಲಾದನು ಈಶ್ವರನನ್ನು ಕುರಿತು ತಪಸ್ಸುಮಾಡಿ, ಅಯೋನಿಜನಾದ ಈ ಪುತ್ರನನ್ನು ಪಡೆದನು. ಆದರೆ ತಪಸ್ಸಿನಿಂದ ಪಡೆದ ಈ ಮಗನು ಅಲ್ಪಾಯುಷಿಯೆಂದು ತಿಳಿದು ಪರಿತಾಪಪಟ್ಟು, ನಂದಿಯುನ್ನು ತಪಸ್ಸಿಗೆ ಕಳಿಸಿದನು. ನಂದಿಯು ತಪಸ್ಸಿನಿಂದ ಶಿವನನ್ನೊಲಿಸಿ, ಚಿರಾಯುವಾದನು. ನಂದೀಶ್ವರನ ತಂದೆಯಾದ ಶಿಲಾದನಿಗೆ ಈ ಹೆಸರು ಬರಲು ಕಾರಣವೇನೆಂದರೆ, ಶಿಲೆಯನ್ನು ಮೂಲಿಕಾಸಾಧನದಿಂದ ಪಕ್ವಗೊಳಿಸಿಕೊಂಡು, ಅದನ್ನು ಭಕ್ಷಿಸುತ್ತ ಪುತ್ರಕಾಮನಾಗಿ ತಪಸ್ಸುಮಾಡಿದನು. ಆದ್ದರಿಂದ 'ಶಿಲಾದ' (ಆದಭಕ್ಷಣೇ) ಎಂಬ ಹೆಸರಾಯಿತು.

ಲಿಂಗಧರ್ಮತತ್ತ್ವವನ್ನು ಭೂಲೋಕದಲ್ಲಿ ಈ ನಂದಿಯು ಪ್ರಚಾರಮಾಡಿದನೆಂದು ಪ್ರಖ್ಯಾತಿಯಿದೆ. ಆದ್ದರಿಂದ ವೀರಶೈವರಲ್ಲಿ ಅನೇಕರು ಪ್ರಾಚೀನಕಾಲದಲ್ಲಿ 'ನಂದಿಯೇ ಗುರು' ಎಂದು ಹೇಳುತ್ತಾರೆ. ಈ ನಂದಿಯು ಗೋತ್ರಪುರುಷನೂ ಹೌದು. ಈ ನಂದಿಯ ಅವತಾರವೇ ೧೨ನೆಯ ಶತಮಾನದಲ್ಲಿ ಆಗಿಹೋದ ಬಸವಣ್ಣನವರ ಅವತಾರವೆಂದು ನಂಬಿಕೆಯಿದೆ. ಆದ್ದರಿಂದ 'ನಂದೀಶ್ವರ' ಅಥವಾ 'ನಂದಿಕೇಶ್ವರ' ಬಸವೇಶ್ವರರುಗಳಲ್ಲಿ ಅಭೇದದಿಂದ ವರ್ಣಿಸುವುದು ವೀರಶೈವ ಕಾವ್ಯಗಳಲ್ಲೆಲ್ಲ ಕಂಡು ಬರುತ್ತದೆ. (".... ಶಿವಧರ್ಮಾಹಿ ನಂದಿನಾ ಪರಿಕೀರ್ತಿತಾಃ | ಶೈಲಾದೇನ ಮಹಾಭಾಗಾ ವಿಚಿತ್ರಾ ಲಿಂಗಧಾರಕಾಃ ||.... ಏಕೇ ಧರ್ಮಸ್ಸುಪ್ರತಿಷ್ಠಾಃ ಶೈಲಾದೇನ ಪ್ರತಿಷ್ಠಿತಾಃ|| .... ಲಿಂಗಸ್ಯ ಮಹಿಮಾನಂತು ನಂದಿಜಾನಾತಿ ತತ್ತ್ವತಃ"|| –ಇತ್ಯಾದಿ ಸ್ಕಾಂದ ಪುರಾಣದ ಮಾತುಗಳನ್ನು ಈ ಬಗೆಗೆ ಯೋಚಿಸಬಹುದು.) (ಸ್ಕಾಂ ಪು ಕೇದಾರಖಂ. ಅಧ್ಯಾಯ 7)

೨. ಆ ೧. ಪ. ೧. ಬಿಜ್ಜಳನಿಗೆ ನಿಧಿಯುನ್ನು ತೋರಿಸಿಕೊಟ್ಟ ಬಸವಣ್ಣನವರ ಪವಾಡದ ಕಥೆ : ಬಸವಣ್ಣನವರು ಬಿಜ್ಜಳನಲ್ಲಿ ಕರಣಿಕವೃತ್ತಿಯನ್ನು ಮಾಡಿಕೊಂಡಿದ್ದರು. ಒಂದು ದಿನ ಬಿಜ್ಜಳನು ಓಲಗಗೊಟ್ಟು ಕುಳಿತಿರುವಾಗ ಸಭೆಯಲ್ಲಿ ಒಂದು ಲಿಪಿಯು ಆಕಾಶದಿಂದ ಬಂದು ಬಿದ್ದಿತು. ಸಭೆಯಲ್ಲಿದ್ದ ಘಸವಿದ್ವಾಂಸರು, ಕಲಾವಿದರು, ರಾಯಸದವರು, ಸಕಲ ಲಿಪಿಶಾಸ್ತ್ರ ಬಲ್ಲಿದರು, ಗಣಕರೇ ಮೊದಲಾದ ಮಹಾ ಮಹಾ ವಿದ್ವಾಂಸರು ಆ ಲಿಪಿಯುನ್ನು ಓದದೆ ಹೋದರು. ಅದೇ ಸಮಯದಲ್ಲಿ ಕರಣಿಕನಾದ ಬಸವಣ್ಣನಿಗೆ, "ನೀನು ಬಿಜ್ಜಳನ ಸಭೆಯಲ್ಲಿ ಬಿದ್ದ ಮಾಯದ ಓಲೆಯನ್ನು ಓದು"

ಎಂಬ ವಾಣಿಯು ಕೇಳಿಸಿತು. ಬಸವಣ್ಣನು ಇದು ಸಂಗಮನಾಥನ ಆಜ್ಞೆಯೆಂದು ಭಾವಿಸಿ ಸಭೆಗೆ ಬಂದು ಆ ಓಲೆಯನ್ನು ಓದಿ, ಬಿಜ್ಜಳನಿಗೆ ಅವನ ಮನೆಯಲ್ಲಿಯೇ ನಿಧಿಯನ್ನು ತೋರಿಸಿಕೊಟ್ಟನು. ಈ ಕಾರಣದಿಂದಾಗಿ ಬಸವಣ್ಣನಿಗೆ ಪ್ರಧಾನಾಮಾತ್ಯಸ್ಥಾನವು ಸಿಕ್ಕಿತು.

೩. ಆ ೧. ಪದ್ಯ ೨. ಮೇರುಪರ್ವತವು ಶಿವನ ಬಿಲ್ಲಾಗಿ, ವಿಷ್ಣುವು ಬಾಣವಾದ ಕಥೆ: ತಾರಕಾಸುರನ ಮಕ್ಕಳಾದ ತಾರಕಾಕ್ಷ, ಮಕರಾಕ್ಷ, ವಿದ್ಯುನ್ಮಾಲಿಗಳೆಂಬುವರು ತಪಸ್ಸುಮಾಡಿ ಬ್ರಹ್ಮನಿಂದ ವರವನ್ನು ಪಡೆದು ಗರ್ವಿತರಾದರು. ಅವರು ಮಯನಿಂದ ಮೂರು ಪುರಗಳನ್ನು ನಿರ್ಮಾಣಮಾಡಿಸಿಕೊಂಡು, ಅವು ಅಂತರಿಕ್ಷದಲ್ಲಿ ತಿರುಗುತ್ತಿರಬೇಕೆಂದೂ, ದೇವತೆಗಳ ದಿವ್ಯಸಹಸ್ರವರ್ಷಕ್ಕೊಮ್ಮೆ ಅವು ನಿಂತಾಗ ಮಹಾತ್ಮನಾದ ಪುರುಷನಿಂದ ಒಂದೇ ಬಾಣದಿಂದ ನಾಶವಾಗಬೇಕಲ್ಲದೆ, ಮತ್ತೆ ಯಾವ ಕಾರಣದಿಂದಲೂ ನಾಶವಾಗದ ಹಾಗೆ ವರ ಪಡೆದಿದ್ದರು. ಈ ಬಲದಿಂದ ದೇವತೆಗಳನ್ನು ಪೀಡಿಸತೊಡಗಿದರು. ಈ ರಾಕ್ಷಸರ ಬಾಧೆಯನ್ನು ತಡೆಯಲಾರದೆ ದೇವತೆಗಳೆಲ್ಲ ಶಿವನ ಬೆನ್ನು ಬಿದ್ದರು. ಶಿವನು ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡನು. ನಾಲ್ಕು ವೇದಗಳನ್ನು ನಾಲ್ಕು ಕುದುರೆಗಳನ್ನಾಗಿ ಮಾಡಿ ಆ ರಥಕ್ಕೆ ಕಟ್ಟಿಕೊಂಡು ಬ್ರಹ್ಮನನ್ನು ಸಾರಥಿಯನ್ನಾಗಿ ಮಾಡಿಕೊಂಡನು. ಮೇರುಪರ್ವತವೇ ಬಿಲ್ಲಾಯಿತು. ಸಮುದ್ರವೇ ಬತ್ತಳಿಕೆಯಾಯಿತು. ವಿಷ್ಣುವೇ ಬಾಣವಾದನು. ಆದಿಶೇಷನು ಬಿಲ್ಲಿನ ಹೆದೆಯಾದನು. ಪುಷ್ಯನಕ್ಷತ್ರಯೋಗದಲ್ಲಿ ಆ ಮೂರು ಪುರಗಳು ಒಂದೆಡೆ ಸಂಧಿಸಿದ ಸಮಯವನ್ನರಿತು ಒಂದೇ ಬಾಣದಿಂದ ಅವನ್ನು ಸುಟ್ಟು ಹಾಳುಮಾಡಿ ಆ ರಾಕ್ಷಸರನ್ನು ಕೊಂದನು. ಅವರನ್ನು ಕೊಂದ ದಿನ ಕಾರ್ತಿಕ ಶುಕ್ಲ ೧೫. ಇದರ ಜ್ಞಾಪಕಾರ್ಥವಾಗಿಯೇ ಅಂದು ದೀಪೋತ್ಸವವೆಂಬ ನಂಬಿಕೆಯಿದೆ.

೪. ಆ ೧. ಪದ್ಯ ೫. ಮನೋಜನಂ ಕನಲ್ದುರುಪಿದ ಶಂಭುವಿನ ಕಥೆ: ಶಿವನು ತಪಃಫಲಗಳ ಸ್ವಯಂ ವಿಧಾತನಾದರೂ ಸ್ವಲೀಲಾನಂದನಾಗಿ ಹಿಮವತ್ಪರ್ವತದಲ್ಲಿ ತಪಸ್ಸನ್ನಾಚರಿಸುತ್ತಿದ್ದನು. (ಹಂಪೆಯ ಹರಿಹರದೇವನ ಮತದ ಪ್ರಕಾರ ಹಂಪೆಯ ಸಮೀಪದ ಹೇಮಕೂಟಾಚಲದಲ್ಲಿ ತಪಸ್ಸನ್ನಾಚರಿಸುತ್ತಿದ್ದನು.) ಹೀಗೆ ಸಮಾಧಿಸ್ಥನಾಗಿ ಕುಳಿತ ಶಿವನ ಸಮಾಧಿ ಭಂಗವಾಗಿ, ಅವನು ಪರ್ವತಪುತ್ರಿಯಾದ ಪಾರ್ವತಿಯೊಡನೆ ವಿವಾಹವಾಗಿ ಕುಮಾರಸ್ವಾಮಿಯನ್ನು ತಾರಕಾಸುರಸಂಹಾರಕಾರಣಕ್ಕಾಗಿ ಕರುಣಿಸಬೇಕಾಗಿತ್ತು. ಬ್ರಹ್ಮ ವಿಷ್ಣುಗಳೇ ಮೊದಲಾದ ದೇವತೆಗಳು ಶಿವನ ಸಮಾಧಿಭಂಗಗೊಳಿಸಲು ಮನ್ಮಥನೊಬ್ಬನೇ ಸಮರ್ಥನೆಂದು ಆತನನ್ನು ಕಳಿಸಿಕೊಡುವರು. ಮನ್ಮಥನು ಶಿವನ ಸಮಾಧಿಯನ್ನು ಭಂಗಗೊಳಿಸಲು ತನ್ನ

ಪಂಚಬಾಣಾನುಸಂಧಾನಮಾಡಿ ಬಿಡಲು, ಕೋಪಗೊಂಡ ಶಿವನು ತನ್ನ ಹಣೆಗಣ್ಣ ಬೆಂಕಿಯಿಂದ ಮನ್ಮಥನನ್ನು ಸುಟ್ಟು ಬೂದಿಯನ್ನಾಗಿ ಮಾಡಿದನು.

೫. ಆ.೧. ಪದ್ಯ ೧೫. **ಶಿವನೊಡನುಂಡ ಚೆನ್ನಯ್ಯನ ಕಥೆ :** ತಮಿಳು ನಾಡಿನಲ್ಲಿ ಕರಿಕಾಲಚೋಳನೆಂಬ ರಾಜನು ರಾಜ್ಯಭಾರ ಮಾಡುತ್ತಿದ್ದನು. ಅವನ ರಾಜಧಾನಿಯಲ್ಲಿ 'ಮಾದಾರ ಚೆನ್ನ' ನೆಂಬ ಶಿವಭಕ್ತನು ಆ ರಾಜನ ಮನೆಯ ಕುದುರೆಗಳಿಗೆ ಹುಲ್ಲು ತಂದುಹಾಕಿ ಜೀವಿಸುತ್ತಿದ್ದನು. ಬಡವನಾದ ಈತನು ಶಿವಾನು ಭಾವಿಯಾಗಿ ದಿನಾಲು ಪರಮಾತ್ಮನಿಗೆ ಅಂಬಲಿಯ ನೈವೇದ್ಯಮಾಡಿ ತಾನೂ ಸ್ವೀಕರಿಸಿ, ಮಡದಿಯೊಡನೆ ಗುಪ್ತವಾಗಿ ಭಕ್ತಿಜೀವನ ಸಾಗಿಸುತ್ತಿದ್ದನು. ಚೋಳ ಮಹಾರಾಜನೂ ಮಹಾಶಿವಭಕ್ತ. ಅವನೂ ದಿನಾಲು ಶಿವಾಲಯದಲ್ಲಿ ವೈಭವ ದಿಂದ ಶಿವಪೂಜೆ ಮಾಡಿ, ವಿವಿಧ ಭಕ್ಷ್ಯಭೋಜ್ಯಗಳಿಂದ ಶಿವನನ್ನು ತೃಪ್ತಿಪಡಿಸುತ್ತಿ ದ್ದನು. ಒಂದುದಿನ ಚೆನ್ನಯ್ಯನ ಮನೆಯ ಅಂಬಲಿಯನ್ನು ಶಿವನು ತೃಪ್ತಿಯಾಗುವಂತೆ ಊಟ ಮಾಡಿದನು. ಅದೇ ದಿನ ಚೋಳಮಹಾರಾಜನು ಮಾಡಿದ ವಿವಿಧ ಭಕ್ಷ್ಯ ಭೋಜ್ಯಗಳ ಎಡೆಯನ್ನು ಸ್ವೀಕರಿಸಲಿಲ್ಲ. ಚೋಳಮಹಾರಾಜನು ತನ್ನ ಭಕ್ತಿಯಲ್ಲಿ ಏನೋ ದೋಷವಿದೆಯೆಂದು ಪ್ರಾಣತ್ಯಾಗಕ್ಕೆ ಸಿದ್ಧನಾಗಲು, ಶಿವನು ಪ್ರತ್ಯಕ್ಷನಾಗಿ "ನಾವು ಮಾದಾರಚೆನ್ನನ ಮನೆಯಲ್ಲಿ ಹೊಟ್ಟೆತುಂಬ ಊಟಮಾಡಿದ ಕಾರಣ ಹಸಿ ವಿಲ್ಲದೆ ಊಟಮಾಡಲಿಲ್ಲ"ವೆನ್ನಲು ಚೋಳಮಹಾರಾಜನು ತನಗಿಂತಲೂ ಮಹಾಭಕ್ತ ತನ್ನ ಪಟ್ಟಣದಲ್ಲಿರುವುದನ್ನರಿತು ಸಂತೋಷದಿಂದ ಚೆನ್ನಯ್ಯನ ಮನೆಗೆ ನಡೆದುಬಂದು, ಅವನನ್ನು ಪಟ್ಟದಾನೆಯ ಮೇಲೆ ಕುಳ್ಳಿರಿಸಿ ಕರೆತಂದು ಶಿವಾಲಯವನ್ನು ಹೊಗಿಸಿದನು. ಚೆನ್ನಯ್ಯನು ತನ್ನ ಗುಪ್ತ ಭಕ್ತಿಯು ಬಹಿರಂಗಗೊಂಡುದಕ್ಕೆ ವ್ಯಥೆಗೊಂಡು ಪ್ರಾಣಾ ರ್ಪಣೆಗೆ ಸಿದ್ಧನಾಗಲು ಶಿವನು ಅವನನ್ನು ತಡೆದು ಅವನಿಗೆ ಗಣಪದವಿಯನ್ನಿತ್ತನು. ಚೆನ್ನಯ್ಯನು ವಚನಕಾರನಿದ್ದು "ಕಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ, ಅರಿ ನಿಜಾತ್ಮ ರಾಮ ರಾಮನಾ" ಎಂಬ ಅಂಕಿತದಲ್ಲಿ ಅನೇಕ ವಚನಗಳನ್ನು ಬರೆದಿದ್ದಾನೆ. ಇವನ ಕಾಲ ಸುಮಾರು ಕ್ರಿ. ಶ. ೧೦೮೦ ಅಥವಾ ೧೧೮೦. ಇವನು 'ಚಮ್ಮಾರ' ಕಾಯಕವನ್ನು ಅನುಸರಿಸಿಕೊಂಡಿದ್ದನೆಂದು ಇವನ ವಚನಗಳಿಂದ ಅರಿಯಬಹು ದಾಗಿದೆ.

೬. ಆ. ೧. ಪದ್ಯ ೧೫. **ಶಂಕರನನಂಗನೆಯಂಗಣಕಟ್ಟಿದ ಕಥೆ :** ಕಾವೇರಿ ಪುರದಲ್ಲಿದ್ದ ಸಿಂಧುಬಲ್ಲಾಳನೆಂಬ ಶಿವಭಕ್ತನನ್ನು ಪರೀಕ್ಷಿಸಲೋಸುಗ ಶಿವನು ಜಂಗಮ ರೂಪಿನಿಂದ ಬಂದು ಆತನ ಸತಿಯನ್ನೇ ಬೇಡಿದನು. ಆಗ ಅವನು ಹಿಂದು ಮುಂದು ನೋಡದೆ ತನ್ನ ಸತಿಯ ಅಂತಃಪುರಕ್ಕೆ ಜಂಗಮರೂಪಿಯ ಈ ಶಿವನನ್ನು ಕಳಿಸಿದನು. ಅವಳು ನಿದ್ರಿಸುತ್ತಿದ್ದು, ನಿದ್ರೆ ತಿಳಿದೆದ್ದಾಗ ಶಿವನು ಶಿಶುರೂಪದಿಂದ ಅವಳ ಸ್ತನ್ಯಪಾನ

ಮಾಡುತ್ತಿದ್ದನು. ಸಿಂಧುಬಲ್ಲಾಳ ದಂಪತಿಗಳು ಆಶ್ಚರ್ಯಚಕಿತರಾದರು. ಶಿವನು ಅವರೀರ್ವರನ್ನೂ ಕೈಲಾಸಕ್ಕೆ ಕರೆದೊಯ್ದನು.

೭. ಆ. ೧. ಪದ್ಯ ೧೫. ಶಂಭುವಿಂಗವಯುವವಿತ್ತ ಕಥೆ: ಸಿಂಧುದೇಶದಲ್ಲಿ ಸಿಂಧಮರಾಯ ಅಥವಾ ಸಿಂಧುಮರಾಳನೆಂಬುವನು ಇದ್ದನು. ಇವನು ತನ್ನ ತನುಮನಧನವೆಲ್ಲವೂ ಶಿವಾರ್ಪಿತವೆಂದು ಸಾರಿದ್ದನು. ಇದನ್ನರಿತ ಜಂಗಮನೊಬ್ಬನು ಈತನಲ್ಲಿಗೆ ಬಂದು ರಾಜ್ಯವನ್ನು ಕೇಳಿ ಪಡೆದುಕೊಂಡನು. ರಾಜ್ಯ ತ್ಯಾಗಮಾಡಿ ರಾಜನು ಹೊರಟನು. ಆಗ ಶಿವನು ಜಂಗಮರೂಪಿನಿಂದ ಈತನನ್ನು ಕಂಡು, ಈತನ ದೇಹದಲ್ಲಿ ಅರ್ಧಭಾಗವನ್ನು ಕೊಡೆಂದು ಕೇಳಿದನು. ರಾಜನು ಗರಗಸ ತರಿಸಿ ಬಲ ಭಾಗದ ಅರ್ಧ ದೇಹವನ್ನು ಕೊರೆಯಿಸಿ ಕೊಟ್ಟನು. ಆಗ ಎಡಗಣ್ಣಿನಲ್ಲಿ ನೀರು ಬರುತ್ತಿರಲು ಶಿವನು ಅಳುತ್ತ ಧರ್ಮವಮಾಡುವುದನ್ನು ಸ್ವೀಕರಿಸಲಾರೆನೆಂದು ಹೇಳುತ್ತಿದ್ದಂತೆ, ಭಕ್ತನಾದ ಸಿಂಧುಮರಾಳನು "ಸ್ವಾಮಿ, ಬಲಭಾಗ ಮಾತ್ರ ತಮಗೆ ಅರ್ಪಿತವಾಯಿತು. ಎಡಭಾಗ ಮಾತ್ರ ವ್ಯರ್ಥವಾಯಿತಲ್ಲಾ! ಎಂಬ ಸಂಕಟದಿಂದ ಕಣ್ಣೀರು ಬಂದಿತಲ್ಲದೆ ಇದು ದಾನಮಾಡುವಲ್ಲಿ ಆದ ವ್ಯಥೆಯಿಂದಲ್ಲ"ವೆಂದು ಉಸುರಲು, ಶಿವನು ಅವನ ಭಕ್ತಿಯ ಪರಾಕಾಷ್ಠಭಾವಕ್ಕೆ ಮೆಚ್ಚಿ ಕೈಲಾಸಕ್ಕೆ ಕರೆದೊಯ್ದನು.

೮. ಆ. ೧. ಪದ್ಯ ೧೫. ಶರ್ವನೊಡನಕ್ಷಮನಾಡಿದ ಕಥೆ: ಕ್ಷೀರನದೀತೀರದ ಅರಣ್ಯವೆಂಬ ಪಟ್ಟಣದಲ್ಲಿ ಮೂರ್ಖನೈನಾರೆಂಬ ಶಿವಭಕ್ತನಿದ್ದನು. ಜಂಗಮರಿಗೆ ನಿತ್ಯದಾನಮಾಡುತ್ತಿದ್ದ ಈತನಲ್ಲಿ ಭಿಕ್ಷೆ ಬೇಡಿವನು. ಅವನು ಅದನ್ನು ತರುವನಿತರೊಳಗೆ ಶಿವನು ಹೊರಟು ಕುಂಭಕೋಣಕ್ಕೆ ಹೋಗಿದ್ದನು. ಮೂರ್ಖನೈನಾರರು ಅಲ್ಲಿಗೆ ಅವನನ್ನು ಹುಡುಕುತ್ತ ಹೋಗಿ, ಮೂರು ದಿನಗಳವರೆಗೆ ಉಪವಾಸವಿದ್ದು, ಯಾವ ಉದ್ಯೋಗವೂ ದೊರೆಯದ್ದರಿಂದ ಜೂಜಾಡುವ ಉದ್ಯೋಗವನ್ನು ಕೈಕೊಂಡನು ಜೂಜಾಟವಾಡಿ ಜಂಗಮ ದಾಸೋಹವನ್ನು ಕೈಕೊಂಡನು. ಶಿವನೂ ಒಮ್ಮೆ ವೇಷಾಂತರದಿಂದ ಕಾಣಿಸಿಕೊಂಡು ಇವನೊಡನೆ ಜೂಜು ಆಡಿ ಸೋತನು. ಜೂಜಿನಲ್ಲಿ ಸೋತ ಹಣವನ್ನು ಕೊಡೆಂದು ನೈನಾರರು ಕೇಳಲಾಗಿ ಅವನು ಹಣ ಕೊಡದಿರಲು ಕೊಲ್ಲ ಹೋದನು. ಕೊರಳ ಲಿಂಗವನ್ನು ಕಂಡು ಪಶ್ಚಾತ್ತಾಪಪಟ್ಟು, ತನ್ನ ಪ್ರಾಣಹರಣಕ್ಕೆ ಪ್ರಯತ್ನಿಸುತ್ತಿರಲು ಶಿವನು ತನ್ನ ರೂಪುದೋರಿದನು.

೯. ಆ. ೧. ಪದ್ಯ ೧೫. ಭವಂಗಮರ್ಚಿ ಚಕ್ಷುವಂ ಎಂಬ ಕಥೆ: ಕಾಳಹಸ್ತಿಯೆಂಬ ಗಿರಿಯಲ್ಲಿ ಕಣ್ಣಪ್ಪನೆಂಬ ಬೇಡನು ಬೇಟೆಮಾಡಿ ಜೀವಿಸುತ್ತ ಶಿವಭಕ್ತಿಯನ್ನಾಚರಿಸುತ್ತಿದ್ದನು. ಒಮ್ಮೆ ಶಿವನು ಇವನಿಗೆ ಕಾಣಿಸಿಕೊಂಡು ಹಣೆಗೆ ವಿಭೂತಿಯನ್ನು ಧರಿಸಿ, ಪಂಚಾಕ್ಷರಿಯನ್ನುಪದೇಶಿಸಿ ತನ್ನನ್ನು ಪೂಜಿಸುವಂತೆ ತಿಳಿಸಿ

ದನು. ಹೀಗೆ ಇವನು ತನ್ನ ವೃತ್ತಿಯಂತೆ ಬೇಟೆಯಾಡಿತಂದ ಮೃಗದ ಮಾಂಸವನ್ನು ಶಿವನಿಗೆ ನೈವೇದ್ಯಮಾಡುತ್ತ, ತನಗೆ ತಿಳಿದ ರೀತಿಯಲ್ಲಿ ಶಿವನನ್ನು ಪೂಜಿಸುತ್ತಿದ್ದನು. ಒಮ್ಮೆ ಶಿವನು ಕಣ್ಣಪ್ಪನ ಭಕ್ತಿಯನ್ನು ಪ್ರಕಟಿಸಬೇಕೆಂದು ತನ್ನ ಒಂದು ಕಣ್ಣಿನಲ್ಲಿ ರಕ್ತ ಸುರಿಯುವಂತೆ ಮಾಡಿದನು. ಕಣ್ಣಪ್ಪ ಬಂದು ಶಿವನ ಕಣ್ಣಲ್ಲಿ ರಕ್ತ ಸುರಿಯುವುದನ್ನು ಕಂಡು, ಶಿವನ ಕಣ್ಣು ಕೆಟ್ಟಿರುವುದೆಂದು ಭಾವಿಸಿ ತನ್ನ ಒಂದು ಕಣ್ಣನ್ನು ಕಿತ್ತು ಶಿವನಿಗೆ ಅರ್ಪಿಸಿದನು. ಆಗ ಆ ಕಣ್ಣು ಸರಿಯಾಗಿ ಮತ್ತೊಂದು ಕಣ್ಣಿನಲ್ಲಿ ರಕ್ತ ಸುರಿಯ ತೊಡಗಿತು. ಪುನಃ ಕಣ್ಣಪ್ಪ ತನ್ನ ಮತ್ತೊಂದು ಕಣ್ಣನ್ನು ಕಿತ್ತು ಶಿವನಿಗೆ ಅರ್ಪಿಸಿದನು. ಈತನ ಭಕ್ತಿಗೆ ಮೆಚ್ಚಿದ ಶಿವನು ಇವನಿಗೆ ಗಣಪದವಿಯನ್ನಿತ್ತನು.

೧೦. ಆ. ೧. ಪದ್ಯ ೧೫. ಅಭವಂಗೆ ಪಾಲೆಱೆದ ಕಥೆ : ಕೋಳೂರೆಂಬ ಊರಿನಲ್ಲಿ ಶಿವದೇವನೆಂಬ ಶಿವಭಕ್ತನಿದ್ದನು. ಅವನು ದಿನಾಲು ತನ್ನೂರಿನ ಕಲ್ಲೇಶ್ವರ ಲಿಂಗಕ್ಕೆ ಬಳ್ಳ ಹಾಲನ್ನು ನೈವೇದ್ಯಮಾಡುವ ನಿಯಮವನ್ನು ಪಾಲಿಸಿಕೊಂಡು ಬರುತ್ತಿದ್ದನು. ಒಮ್ಮೆ ಅವನು ತನ್ನ ಮಡದಿಯೊಡನೆ ಬೇರೂರಿಗೆ ಹೋಗುವ ಸಂದರ್ಭ ವೊದಗಿತು. ಏಳು ವರ್ಷದ ಕೊಡಗೂಸು ಚೆನ್ನಲೆಗೆ (ಚೆನ್ನಕ್ಕನಿಗೆ) ತಾನು ದಿನಾಲು ಶಿವನಿಗೆ ಅರ್ಪಿಸುವ ಹಾಲಿನ ನೇಮದ ಕಟ್ಟಳೆ ಮೀರದಂತೆ ತಿಳಿಸಿ ಹೊರಟು ಹೋದನು. ಕೊಡಗೂಸು ಹಾಲನ್ನು ಶಿವಾಲಯಕ್ಕೆ ಒಯ್ದು, ತನ್ನ ಭಕ್ತಿ ಶಕ್ತಿಯಿಂದ ಶಿವನು ಹಾಲನ್ನು ಕುಡಿಯುವಂತೆ ಮಾಡಿ ಬರುತ್ತಿದ್ದಳು. ಒಂದು ದಿನ ಶಿವನಿಗೆ ಹಾಲು ಕುಡಿಸಿ ಬರಿಯ ಪಾತ್ರೆಯನ್ನು ಹಿಡಿದುಕೊಂಡು ಮನೆಗೆ ಬಂದಳು. ಅಷ್ಟರಲ್ಲಿ ಊರಿನಿಂದ ಅವಳ ಪಿತೃಗಳು ಬಂದಿದ್ದರು. ಅವರು ಬರಿಯ ಪಾತ್ರೆ ಕಂಡು 'ಹಾಲೆಲ್ಲಿ' ಎಂದು ಕೇಳಿದರು. ಕೊಡಗೂಸು "ಶಿವನು ಕುಡಿದನು" ಎಂದಳು. ಅವರು ನಂಬಲಿಲ್ಲ. ಮರುದಿನ ಪರೀಕ್ಷಿಸಬೇಕೆಂದು ಹಾಲನ್ನು ಕೊಡಗೂಸಿನ ಕಯ್ಯಲ್ಲಿ ಕೊಟ್ಟು ಕಳಿಸಿ ತಾವೂ ಹೋದರು. ಅವರ ಎದುರಿನಲ್ಲಿ ಶಿವನು ಹಾಲನ್ನು ಕುಡಿಯಲಿಲ್ಲ. ತಂದೆ ಮಗಳನ್ನು ಸುಳ್ಳು ಹೇಳಿದುದಕ್ಕಾಗಿ ಶಿಕ್ಷಿಸಹೋದನು. ಶಿವನು ಅವಳನ್ನೆತ್ತಿ ತನ್ನಲ್ಲಿ ಐಕ್ಯಮಾಡಿಕೊಳ್ಳುತ್ತಿರುವಷ್ಟರಲ್ಲಿ ಶಿವದೇವ ಅವಳ ತಲೆಗೂದಲನ್ನು ಹಿಡಿದನು. ಕೂದಲು ಹೊರಗುಳಿಯಿತು. ಕೊಡಗೂಸು ಶಿವನಲ್ಲಿ ಐಕ್ಯಳಾದಳು. ಈಗಲೂ ಕೋಳೂರಿನ ಕಲ್ಲಿನಾಥ ಶಿವಲಿಂಗದ ಮೇಲೆ ಕೂದಲಿನ ಗುರುತು ಇದೆಯಂತೆ.

೧೧. ಆ. ೧. ಪದ್ಯ ೧೫. ಭರ್ಗನೊಳರ್ಪಿಸಿ ಸರ್ವಮುಂ ಎಂಬುದಕ್ಕೆ ಕಥೆ : ಚೋಳಮಂಡಲದಲ್ಲಿ ಶಿವಕಂಚಿಯೆಂಬೂರು. ಅಲ್ಲಿ ದೀಪದಕಲಿಯಾರು ಎಂಬ ಶಿವಭಕ್ತನಿದ್ದನು. ಅವನು ೬೬ ಕೋಟಿ ದ್ರವ್ಯದ ಒಡೆಯನೆನಿಸಿ, ತನ್ನೂರಿನ ಶಿವಲಿಂಗಕ್ಕೆ ನಿತ್ಯವೂ ಖಂಡುಗದೆಣ್ಣೆಯ ದೀಪಾರತಿಯ ವ್ರತವನ್ನು ನಡೆಯಿಸಿಕೊಂಡು ಬರುತ್ತಿದ್ದನು. ಒಂದು ದಿನ ವ್ಯಾಪಾರಕ್ಕೆಂದು ಕಾಡಿನಲ್ಲಿ ಹೋಗುತ್ತಿದ್ದಾಗ ಕಳ್ಳರು

ಗರ್ಜನೆಗೆ ಹೆದರಿ ಅಡವಿಯ ಪಾಲಾದನು. ಅಲ್ಲಿ ಒಂದು ಹಾಳು ಶಿವಾಲಯವಿತ್ತು. ಕಲಿಯಾರನು ಆ ಶಿವಾಲಯದಲ್ಲಿಯೇ ನಿಂತುಬಿಟ್ಟನು. ಆತನ ಜೊತೆಯಲ್ಲಿದ್ದ ಆಳು ಆತನನ್ನು ಊರಿಗೆ ಹಿಂತಿರುಗಿಸಲು ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಯಿತು. ಅವನು ಊರಿಗೆ ಹಿಂತಿರುಗಿ ಕಲಿಯಾರನ ಹೆಂಡತಿಗೆ ನಡೆದ ಸಮಾಚಾರವನ್ನೆಲ್ಲ ತಿಳಿಸಿದನು. ಅವಳು ಗಂಡನಲ್ಲಿಗೆ ಬಂದು ಊರಿಗೆ ಹಿಂದಕ್ಕೆ ಬರಲು ಕೇಳಿಕೊಂಡಳು. ಕಲಿಯಾರನು ಒಪ್ಪದೆ ಶಿವಾಲಯವನ್ನು ಜೀರ್ಣೋದ್ಧಾರಮಾಡಿ, ಕ್ರೂರ ಮೃಗಗಳಿಂದ ಆ ಗುಡಿಯನ್ನು ರಕ್ಷಿಸುವುದಕ್ಕಾಗಿ ಕೋಟೆಯನ್ನು ಕಟ್ಟಿಸಿ ಕಾವಲುಗಾರರನ್ನು ನೇಮಿಸಿದನು. ಅವನ ಸಮಸ್ತ ದ್ರವ್ಯವೆಲ್ಲ ವೆಚ್ಚವಾಗಿ ಶಿವನಿಗೆ ದೀಪ ಮುಡಿಸುವುದಕ್ಕೂ ಗತಿಯಿಲ್ಲದಂತಾಗಲು ತನ್ನ ತಲೆಗೂದಲನ್ನೇ ಕಕ್ಕಡದಂತೆ ಹೊಸೆದು ಅದಕ್ಕೆ ಉರಿಯಿಡಲು, ಶಿವನು ಅವನ ಭಕ್ತಿಗೆ ಮೆಚ್ಚಿ ಆತನನ್ನು ಆತನ ಮಡದಿ, ಆ ಗುಡಿಸಹಿತ ಕೈಲಾಸಕ್ಕೆ ಕರೆದೊಯ್ದನು.

೧೨. ಆ. ೧. ಪದ್ಯ ೧೬. ನಿಜಗುಣಯೋಗಿ : ಕ್ರಿ. ಶ. ಸು. ೧೫೦೦ರಲ್ಲಿ. ಬಾಳಿದ್ದ ಕನ್ನಡದ ದೊಡ್ಡ ಕವಿ, ಶಾಸ್ತ್ರಜ್ಞ, ಶಿವಯೋಗಿ. ಇವನು ಒಟ್ಟು ಆರು ಗ್ರಂಥ ಗಳನ್ನು ರಚಿಸಿದ್ದು, ಅವನ್ನು ಷಟ್‌ಶಾಸ್ತ್ರಗಳೆಂದು ಕರೆಯುವ ವಾಡಿಕೆಯಿದೆ. ಕೈವಲ್ಯ ಪದ್ಧತಿ, ಪರಮಾರ್ಥಪ್ರಕಾಶ, ಅನುಭವಸಾರ, ಪರಮಾರ್ಥಗೀತೆ, ವಿವೇಕ ಚಿಂತಾಮಣಿ. ಪರಮಾನುಭವಬೋಧೆ—ಇವೇ ಆರು ಗ್ರಂಥಗಳು. ವಿವೇಕ ಚಿಂತಾಮಣಿ ಯೊಂದು ವಿಶ್ವಕೋಶದಂತಹ ಗ್ರಂಥ. ಇದು ಬೇರೆ ಬೇರೆ ಅನೇಕ ಭಾಷೆಗಳಿಗೆ ಪರಿವರ್ತನೆ ಗೊಂಡಿದೆ. ಶಿವಯೋಗಿಗಳು ಶಂಭುಲಿಂಗನ ಬೆಟ್ಟ (ಕೊಳ್ಳೆಗಾಲ ತಾಲ್ಲೂಕು) ದಲ್ಲಿ ಅನೇಕ ವರ್ಷಗಳು ತಪಸ್ಸನ್ನಾಚರಿಸಿದಂತೆ ತಿಳಿದುಬರುವುದು.

೧೩. ಆ. ೧. ಪದ್ಯ ೧೭. ರೇಣುಕ : ವೀರಶೈವ ಪಂಚ ಆಚಾರ್ಯಪುರುಷರ ಲ್ಲೊಬ್ಬ. ಕೊಲ್ಲಿಪಾಕಿ ಸೋಮೇಶ್ವರಲಿಂಗೋದ್ಭವರೆಂಬ ಗ್ರಹಿಕೆ. ಅನೇಕ ಪವಾಡಗಳನ್ನು ಮೆರೆದು ಅರಿತೇಳುನೂರು, ಅರಿಯದೇಳುನೂರುವರ್ಷವಿದ್ದನೆಂದು ವೀರಶೈವರ ನಂಬುಗೆ. ಬಸವಣ್ಣನವರಿಗಿಂತಲೂ ಪೂರ್ವದವ ಅಥವಾ ಹಿರಿಯ ಸಮಕಾಲಿಕ. ವೀರಶೈವರ ಪ್ರಸಿದ್ಧ ದಾರ್ಶನಿಕ ಗ್ರಂಥವಾದ 'ಸಿದ್ಧಾಂತ ಶಿಖಾಮಣಿ'ಯು ರೇಣುಕನು ಅಗಸ್ತ್ಯನಿಗೆ ಬೋಧಿಸಿದಂತೆ ರಚಿತವಾಗಿದೆ. ವೀರಶೈವರಲ್ಲಿ ಇವನು ಗೋತ್ರಪುರುಷನೆನಿಸಿದ್ದಾನೆ. ಇವನ ಮಗ ರುದ್ರಮುನಿ ಶಿವಾಚಾರ್ಯ. ಶ್ರೀಮದ್ರಂಭಾಪುರಿಯ ಪೀಠವನ್ನು ಇವನೇ ಸ್ಥಾಪಿಸಿದನೆಂದು ಗ್ರಹಿಕೆ. ಫಾಲ್ಗುಣ ಶುದ್ಧ ತ್ರಯೋದಶಿಯಂದು ಇವನ ಜಯಂತ್ಯುತ್ಸವ ವನ್ನು ಆಚರಿಸಲಾಗುತ್ತಿದೆ.

೧೪. ಆ. ೧. ಪದ್ಯ ೧೭. ರಾಮಪಂಡಿತ : ವೀರಶೈವರ ಐವರುಆಚಾರ್ಯ ಪುರುಷ ರಲ್ಲಿ ಖ್ಯಾತರಾದ ಏಕೋರಾಮಾರಾಧ್ಯರನ್ನು ರಾಮಪಂಡಿತನೆಂದು ಸಂಕ್ಷೇಪನಾಮದಿಂದ ಕವಿ ಕರೆದಿದ್ದಾನೆ. ಇವನಿಗೆ ಏಕೋರಾಮಿತಂದೆ ಎಂದೂ ಕರೆಯಲಾಗುತ್ತಿದೆ.

ವೀರಶೈವರಲ್ಲಿ ಇವನು ಗೋತ್ರಪುರುಷನೆನಿಸಿದ್ದಾನೆ. ದ್ರಾಕ್ಷಾ ರಾಮಕ್ಷೇತ್ರದ ರಾಮ ಲಿಂಗೋದ್ಭವನೆಂದು ವೀರಶೈವ ಪ್ರಾಚೀನಗ್ರಂಥಗಳಲ್ಲಿ ಹೇಳಿದೆ. ದ್ರಾಕ್ಷಾರಾಮದಲ್ಲಿ ಇವರ ಮೂಲಪೀಠವಿದೆ. ವೈಶಾಖ ಶುದ್ಧ ಪಾಡ್ಯದಂದು ಇವನ ಜಯಂತ್ಯುತ್ಸವ ವನ್ನು ಆಚರಿಸಲಾಗುತ್ತಿದೆ.

೧೫. ಆ. ೧. ಪದ್ಯ ೧೭. ಮರುಳಾರ್ಯ : ವೀರಶೈವಾಚಾರ್ಯ ಪಂಚಕದಲ್ಲಿ ಒಬ್ಬ ರಾದ ಮರುಳಸಿದ್ಧೇಶ್ವರರನ್ನು ಮರುಳಾರ್ಯರೆಂದು ಸಂಕ್ಷೇಪನಾಮದಿಂದ ಕರೆಯಲಾಗುತ್ತಿದೆ. ಉಜ್ಜಯಿನಿ ಪೀಠಾಚಾರ್ಯರಾದ ಇವರು ಗೋತ್ರಪುರುಷರೆನಿಸಿದ್ದಾರೆ. ಉತ್ತರ ಹಿಂದೂ ಸ್ಥಾನದ ಕಾಲಿಕಾ ಉಜ್ಜಯಿನಿ ವಟವೃಕ್ಷ ಸಿದ್ಧೇಶ್ವರಲಿಂಗದಿಂದ ಇವರು ಆವಿರ್ಭವಿಸಿ, ಅಲ್ಲಿ ಸಿದ್ಧಾಂತಪ್ರಚಾರಕ್ಕಾಗಿ ಸದ್ಧರ್ಮಸಿಂಹಾಸನದ ಪೀಠವನ್ನು ಸ್ಥಾಪಿಸಿದರು. ಅನಂತರ ಕಾರಣಾಂತರದಿಂದ ತಮ್ಮ ಪೀಠವನ್ನು ಕಲ್ಯಾಣದ ಸೋಮೇಶ್ವರನ ಸಹಾಯ ದಿಂದ ಬಳ್ಳಾರಿಜಿಲ್ಲಾ ಕೊಟ್ಟೂರಿನ ಬಳಿ ಉಜ್ಜಯಿನಿ ಎಂಬಲ್ಲಿಗೆ ಸ್ಥಳಾಂತರಿಸಿದರು. ನಂತರ ಈ ಸ್ಥಳವೇ ಸದ್ಧರ್ಮಸಿಂಹಾಸನದ ಮೂಲಪೀಠವಾಯಿತು. ಈ ವಿಚಾರದಲ್ಲಿ ಅನೇಕ ವಾದ ವಿವಾದಗಳಿವೆ. ಪ್ರಕೃತ ಅವು ನಮಗೆ ಗ್ರಾಹ್ಯಗಳಲ್ಲ.

೧೬. ಆ. ೧. ಪದ್ಯ ೧೭. ಮಾಯಿದೇವ : ಈ ಹೆಸರಿನವರು ವೀರಶೈವ ಸಾಹಿತ್ಯೇತಿಹಾಸದಲ್ಲಿ ಅನೇಕರಿದ್ದಾರೆ. ಪ್ರಕೃತ ಪ್ರಭುಗೀತೆ, ಏಕೋತ್ತರ ಶತಸ್ಥಲ ಷಟ್ಪದಿ, ಷಟ್‌ಸ್ಥಲಗದ್ಯ, ಶತಕತ್ರಯ, ಮೊಗ್ಗೆಯ ಮಾಯಿದೇವ ವಚನ, ಅನುಭವ ಸೂತ್ರ, ವಿಶೇಷಾರ್ಥ ಪ್ರಕಾಶಿಕೆಗಳ ಕರ್ತೃವಾದ, ಪ್ರಸಿದ್ಧ ದಾರ್ಶನಿಕನೆನಿಸಿದ ಮೊಗ್ಗೆಯ ಮಾಯಿದೇವರೆಂದೇ ಪರಿಗ್ರಹಿಸಬಹುದು. ಮಲಾಪಹಾರಿ ನದಿಯ ತೀರದಲ್ಲಿರುವ 'ಮಗ್ಗೆ' (ಮೊಗ್ಗೆ) ಎಂಬ ಊರಿನವನಾದ ಈ ಕವಿಯು ಐಪುರದ ಸೋಮನಾಥದೇವರ ಭಕ್ತನು. ಇವನಿಗೆ 'ಕುಮತ ವಿಭೇದಿ', 'ಷಟ್‌ಸ್ಥಲ ಬ್ರಹ್ಮವಾದಿ', 'ಪ್ರಭು' ಇತ್ಯಾದಿ ಬಿರುದುಗಳಿದ್ದಂತೆ ತೋರುತ್ತದೆ. ಕಾಲ ಕ್ರಿ. ಶ. ಸು ೧೪೩೦.

೧೭. ಆ. ೧. ಪದ್ಯ ೧೭. ಜಕ್ಕಣಾರ್ಯ : ಇವನನ್ನು ಭಕ್ತಿಭಾಂಡಾರಿ ಜಕ್ಕಣಾರ್ಯ, ದಂಡಾಧೀಶ ಜಕ್ಕಣಾರ್ಯ ಇತ್ಯಾದಿ ಹೆಸರುಗಳಿಂದಲೂ ಕರೆಯಲಾಗುತ್ತಿದೆ. ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಅವನ ದಂಡಾಧಿಪತಿಯಾಗಿದ್ದನೆಂದು ಹೇಳಲಾಗುತ್ತಿದೆ. ಕುಮಾರ ಬಂಕನಾಥನ ಶಿಷ್ಯನೆನಿಸಿದ ಈತನು 'ಏಕೋತ್ತರ ಶತಸ್ಥಲ' ಎಂಬ ಗ್ರಂಥರಚನೆ ಮಾಡಿದ್ದಾನೆ. ಚಾಮರಸನು ಪ್ರಭುಲಿಂಗಲೀಲೆಯನ್ನು ಬರೆಯಲು ಈತನೇ ಪ್ರೇರಕಶಕ್ತಿಯೆಂದು ಹೇಳಲಾಗುತ್ತಿದೆ.

೧೮. ಆ. ೧. ಪದ್ಯ ೧೭. ಮಲ್ಲಣ-ಮಲ್ಲಣಾರ್ಯರು : ತೋಂಟದ ಸಿದ್ಧ ಲಿಂಗಯತಿಯ ಶಿಷ್ಯಪರಂಪರೆಯಲ್ಲಿ ಒಬ್ಬನಾದ 'ಗುಬ್ಬಿಯ ಮಲ್ಲಣ'ನೇ 'ಮಲ್ಲಣ'ನು. ಈತನ ಕಾಲ ಕ್ರಿ. ಶ. ಸು. ೧೪೭೫. ಗಣಭಾಷಿತ ರತ್ನಮಾಲೆ, ವಾತುಲತಂತ್ರ

ಟೀಕೆಗಳು ಇವನು ಬರೆದ ಗ್ರಂಥಗಳು. ವೀರಶೈವಾಮೃತ ಮಹಾಪುರಾಣ, ಭಾವಚಿಂತಾ ರತ್ನಗಳನ್ನು ಗುಬ್ಬಿಯ ಮಲ್ಲಣಾರ್ಯನು (ಕ್ರಿ. ಶ. ಸು ೧೫೧೩) ಬರೆದಿದ್ದಾನೆ. ಈ ಗುಬ್ಬಿಯ ಮಲ್ಲಣಾರ್ಯನ ಪಿತಾಮಹನೇ ಗುಬ್ಬಿಯ ಮಲ್ಲಣ್ಣ. ಇವರಿಬ್ಬರೂ ಒಂದೇ ಮನೆತನದವರು. ಗುಬ್ಬಿಯೇ ಇವರಿಬ್ಬರ ಜನ್ಮಸ್ಥಳ.

೧೯. ಆ. ೧. ಪದ್ಯ ೧೭. ಶಂಕರ : 'ಕಂಚಿಯ ಶಂಕರಾರಾಧ್ಯ' ರೆಂಬ ತಮಿಳು ದೇಶದ ಕವಿಯನ್ನು 'ಶಂಕರ' ಎಂದು ಷಡಕ್ಷರಿ ಸಂಕ್ಷೇಪವಾಗಿ ಕರೆದಿದ್ದಾನೆ. ಈತನ ಕಾಲ ಕ್ರಿ. ಶ. ಸು ೧೩೨೦. ಇವನು ಸಂಸ್ಕೃತದಲ್ಲಿ ಬಸವೇಶ ವಿಜಯವೆಂಬ ಕಾವ್ಯ ಬರೆದಿದ್ದಾನೆ.

೨೦. ಆ. ೧. ಪದ್ಯ. ೧೭. "ಹರೀಶ್ವರ : ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಕ್ರಾಂತಿ ಕಾರಕ ಕವಿಯೆನಿಸಿದ ಹರಿಹರ ಮಹಾಕವಿಯೇ ಹರೀಶ್ವರನು. ಇವನಿಗೆ ಹರಿದೇವ, ಹರಿಗ, ಹರಿಹರದೇವ, ಇತ್ಯಾದಿ ನಾಮಾಂತರಗಳುಂಟು. ಚಂಪೂಶೈಲಿಯಲ್ಲಿ 'ಗಿರಿಜಾ ಕಲ್ಯಾಣ'ವೆಂಬ ಗ್ರಂಥವನ್ನೂ, ರಗಳೆಯಲ್ಲಿ ಶಿವಶರಣರ ನೂರಾರು ಗ್ರಂಥಗಳನ್ನೂ, ರಕ್ಷಾಶತಕ, ಪಂಪಾಶತಕ, ವಿರೂಪಾಕ್ಷ ಶತಕಗಳೆಂಬ ಶತಕಗ್ರಂಥಗಳನ್ನೂ ಬರೆದು ಪ್ರಸಿದ್ಧನಾದ ಈತನ ಕಾಲ ಕ್ರಿ. ಶ. ಸು. ೧೨೦೦. ಹಂಪೆಯವನಾದ ಈತನು ಕೆಲವು ಕಾಲ ದೋರಸಮುದ್ರದಲ್ಲೂ ಇದ್ದನು. ಮಾದರಸ-ಶರ್ವಾಣಿಯರು ತಂದೆ ತಾಯಿ ಯರು. ತಂಗಿ ರುದ್ರಾಣಿ.

೨೧. ಆ. ೧. ಪದ್ಯ ೧೭. ರಾಘವ: ಹರೀಶ್ವರ ಮಹಾಕವಿಯ ಶಿಷ್ಯನೂ, ಸೋದ ರಳಿಯನೂ ಆದ ರಾಘವಾಂಕನೇ 'ರಾಘವ' ಎಂದು ಕವಿಯಿಂದ ಕರೆಯಲ್ಪಟ್ಟದ್ದಾನೆ. ಹರಿಶ್ಚಂದ್ರಕಾವ್ಯ, ಸಿದ್ಧರಾಮಚಾರಿತ್ರ, ಸೋಮನಾಥ ಚರಿತೆ, ವೀರೇಶಚರಿತೆ, ಹಂಹರ ಮಹತ್ವ ಮೊದಲಾದ ಗ್ರಂಥಗಳನ್ನು ಷಟ್ಪದಿ ಛಂದಸ್ಸಿನಲ್ಲಿ ಬರೆದು ನೂತನ ಮಾರ್ಗ ವೊಂದನ್ನು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಬಳಕೆಗೆ ತಂದ ಈತನು ಕ್ರಾಂತಿಕಾರಕ ಕವಿ ಯೆನಿಸಿದ್ದಾನೆ. ಹರೀಶ್ವರನ ಸೋದರಿಯಾದ ರುದ್ರಾಣಿ ತಾಯಿ ; ಮಹಾದೇವಭಟ್ಟ ತಂದೆ. ಇವನ ಕಾಲವನ್ನು ಕ್ರಿ. ಶ. ಸು. ೧೨೦೦ ಎಂದು ಇಟ್ಟುಕೊಳ್ಳಬಹುದು. ಉಭಯಕವಿಕಮಲರವಿ, ಉಭಯಕವಿಶರಭಭೇರುಂಡ ಇತ್ಯಾದಿ ಬಿರುದುಗಳು ಈತನಿ ಗುಂಟು.

೨೨. ಆ. ೧. ಪದ್ಯ ೧೭. ಕೇಶಿರಾಜ : ಮಹಾಮಹಿಮಶಾಲಿಯಾದ ಈತನು ಈಗಿನ ಗುಲಬರ್ಗಾ (ಕಲಬುರ್ಗಿ) ಜಿಲ್ಲೆಯಲ್ಲಿರುವ ಕೊಂಡಗುಳಿಯವನು. ಆದ್ದರಿಂದಲೇ ಇವನನ್ನು ಕೊಂಡಗುಳಿಕೇಶಿರಾಜನೆಂದೂ ಕರೆಯಲಾಗುತ್ತಿದೆ. ಶಿಕಾರಿಪುರದ ೧೧೯ ಮತ್ತು ೧೨೩ ನೆಯ ಶಾಸನಗಳಲ್ಲಿ ಕೀರ್ತಿತನಾದ ಈತನು ಮಹಾಪರಾಕ್ರಮಶಾಲಿ ಯಾಗಿದ್ದನು. ಬಿಜ್ಜಳರಾಯನ ಕೈಕೆಳಗೆ ದಂಡನಾಯಕನಾಗಿ ಬನವಸೆ ಷಣ್ಣಿರ್ಛಾಸಿರ

ವನ್ನು ಆಳುತ್ತ ಬಲಿಪುರ (ಬಳ್ಳಿಗಾವೆ)ದಲ್ಲಿದ್ದನು. 'ಷಡಕ್ಷರ ಕಂದ' ಎಂಬ ಗ್ರಂಥ ಬರೆದಿದ್ದಾನೆ. ೧೧೧೦ ಕಂದ ಪದ್ಯಗಳುಳ್ಳ ಈ ಗ್ರಂಥಕ್ಕೆ 'ಮಂತ್ರಮಹತ್ವದ ಕಂದ' ಎಂಬ ಹೆಸರೂ ಉಂಟು. ಒಂದೊಂದು ಕಂದವೂ 'ಓಂ ನಮಶ್ಶಿವಾಯೆಂಬ ಪದಂ' ಎಂದು ಮುಗಿಯುತ್ತದೆ. ಇವನು ವಚನಕಾರನೂ ಹೌದೆಂದು ಹೇಳಲಾಗುತ್ತಿದೆ. ಆದರೆ ವಚನ ಗಳು ಉಪಲಬ್ಧವಿಲ್ಲ.

೨೩. ಆ. ೧. ಪದ್ಯ ೧೮. ಸೋಮ : ಆಂಧ್ರದೇಶದ ಪ್ರಸಿದ್ಧ ಕವಿಯಾದ ಪಾಲ್ಕುರಿಕೆ ಸೋಮನಾಥನನ್ನೇ ಕವಿ 'ಸೋಮ'ನೆಂಬ ಸಂಕ್ಷೇಪನಾಮದಿಂದ ಕರೆದಿದ್ದಾನೆ. ತೆಲುಗು, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಬಲ್ಲಿದನಾದ ಈ ಕವಿಯು ವೀರಶೈವಪ್ರಪಂಚದಲ್ಲಿ ಅತ್ಯಂತ ಪೂಜ್ಯನೆನಿಸಿದ್ದಾನೆ. ತೆಲುಗಿನಲ್ಲಿ ರಚಿಸಿದ ಪಂಡಿತಾರಾಧ್ಯ ಚಾರಿತ್ರ, ಬಸವ ಪುರಾಣ, ಅನುಭವಸಾರಮು, ವೃಷಾಧಿಪಶತಕಮು, ಸೋಮನಾಥಲಿಂಗ ಶತಕಮು ಮೊದಲಾದವು ಪ್ರಸಿದ್ಧವಾಗಿವೆ. ಸಂಸ್ಕೃತದಲ್ಲಿ ವೃಷಭಾಷ್ಟಕ, ಬಸವರಾಜೀಯ, ಬಸವೋದಾಹರಣ ಸ್ತೋತ್ರ ಮೊದಲಾದುವು ಮುಖ್ಯವಾಗಿವೆ. ಕನ್ನಡದಲ್ಲಿ ಅನೇಕ ಚಿಕ್ಕ ಚಿಕ್ಕ ರಗಳೆಗಳನ್ನು ಬರೆದಿದ್ದಾನೆ. ಬಸವಣ್ಣನ ಬಗೆಗೆ ಅಪಾರ ಭಕ್ತಿಭಾವವನ್ನು ಹೊಂದಿದ್ದ ಈ ಕವಿ ತನ್ನ ಕೊನೆಯ ಕಾಲವನ್ನು ಕನ್ನಡನಾಡಿನಲ್ಲಿರುವ ಬೆಂಗಳೂರು ಜಿಲ್ಲಾ ಮಾಗಡಿ ತಾಲೂಕು ಕಲ್ಲೆಯ (ಕಲ್ಯ)ದಲ್ಲಿ ಕಳೆದು ಅಲ್ಲಿಯೇ ಶಿವೈಕ್ಯನಾದನು. ಕಾಲ ಕ್ರಿ. ಶ. ಸು. ೧೧೯೫. ಇವನಿಗೆ ತತ್ತ್ವವಿದ್ಯಾಕಲಾಪ, ಅನ್ಯದೈವಕೋಲಾಹಲ", ಅಷ್ಟಭಾಷಾ ಸುಕವಿತ್ವರಚನಾ ಚತುರ ಮೊದಲಾದ ಅನೇಕ ಬಿರುದುಗಳುಂಟು.

೨೩. ಆ. ೧. ಪದ್ಯ. ೧೮. ಪದ್ಮ : ದೋರಸಮುದ್ರದ ಹೊಯ್ಸಳ ವೀರಬಲ್ಲಾಳ ನಲ್ಲಿ ದಂಡೇಶ ಪದವಿಯಲ್ಲಿದ್ದ 'ಕೆರೆಯ ಪದ್ಮರಸ'ನನ್ನೇ ಕವಿ 'ಪದ್ಮ' ಎಂಬ ಕಿರಿಯ ನಾಮದಿಂದ ಕರೆದಿದ್ದಾನೆ. ಹಂಪೆಯ ಹರಿಹರ, ರಾಘವಾಂಕ, ಕೆರೆಯ ಪದ್ಮರಸ ಇವರು ಮೂವರೂ ಸಮಕಾಲೀನರು. ಕಾಲ ಕ್ರಿ. ಶ. ಸು. ೧೨೦೦. ಈತನು ಸಂಸ್ಕೃತ ದಲ್ಲಿ ಶಿವಾದ್ವೈತಸಾಕಾರ ಸಿದ್ಧಾಂತ, ಸಾನಂದಚಾರಿತ್ರ ಗ್ರಂಥಗಳನ್ನೂ, ಕನ್ನಡದಲ್ಲಿ ಶಾಂಭವಜ್ಞಾನ ದೀಕ್ಷಾಬೋಧೆಯನ್ನೂ ಬರೆದಿದ್ದಾನೆ. ಈತನ ಮುತ್ತಜ್ಜ ಕಲ್ಲುಕುರಿಕೆ ದೊರೆಯಾದ ಮಲ್ಲರಸ ; ಅಜ್ಜ ಸಕಲೇಶ ಮಾದರಸ; ತಂದೆ ಮಾಯಿದೇವನೆಂಬುವನು ; ತಾಯಿ ನರಸಿಂಹಬಲ್ಲಾಳನ ದಂಡನಾಯಕನಾದ ಕಮ್ಮೆಕುಲವಲ್ಲಭ ಗೌರಪನ ಅಕ್ಕ 'ಮಂಗಲೆ' ಎಂಬುವಳು. ಹೆಂಡತಿ ಗೌರಪನೆಂಬ ದಂಡನಾಯಕನ ಮಗಳು 'ಮಾದೇವಿ' ಎಂಬುವಳು. ಇವನ ಬಗೆಗೆ ಇವನಿಂದ ಆರನೆಯ ತಲೆಯವನಾಗಿ ಇವನ ವಂಶೋದ್ಭೂತ ನಾದ ಪದ್ಮಣಾಂಕ (ಕಿ. ಶ. ೧೩೮೫) ನೆಂಬುವನು 'ಪದ್ಮರಾಜಪುರಾಣ' ಎಂಬ ಪುರಾಣ ರಚಿಸಿದನು. ಇವನಿಗೆ ಶ್ರೀ ಶಿವಾದ್ವೈತ ಸಾಕಾರಸಿದ್ಧಾಂತಪ್ರತಿಷ್ಠಾಪನಾ

ಚಾರ್ಯ, ಭವಿದೂರ, ಸಕಲಶಾಬ್ದಿಕ ಸಾರ್ವಭೌಮ, ತಾರ್ಕಿಕಚಕ್ರವರ್ತಿ, ಶರಣಕವಿ ಇತ್ಯಾದಿ ಬಿರುದುಗಳುಂಟು.

೫೫. ಆ. ೧. ಪದ್ಯ. ೧೮. ಭೀಮ : ೩೬೨೧ ಭಾಮಿನಿ ಷಟ್ಪದಿಗಳುಳ್ಳ ಬೃಹತ್ಕಾವ್ಯವಾದ ಬಸವಪುರಾಣವನ್ನು ರಚಿಸಿದ 'ಭೀಮಕವಿ' ಎಂಬುವನೇ ಪ್ರಕೃತ ಕೀರ್ತಿತನಾದ 'ಭೀಮ'ನು. 'ಬಡಮತಿಯಾದ ನಾನು ಬಸವಪುರಾಣವನ್ನು ಹೇಗೆ ರಚಿಸಲಿ' ಎಂದು ಕವಿ ಶಿವಯೋಗನಿದ್ರಾಮುದ್ರಿತನಾದಾಗ ಪಾಲ್ಕುರಿಕೆ ಸೋಮೇಶನು ಕನಸಿನೊಳು ಬಂದು 'ನಾವು ನಿನ್ನಾತ್ಮದೊಳಗಿದ್ದು ಬಸವ ಕಥೆಯನ್ನು ವಿರಚಿಸುವೆವು ಬರೆದುಕೊಳ್' ಎಂದನಂತೆ. ಅವರಾಜ್ಞೆಯನ್ನು ಶಿರಸಾವಹಿಸಿ 'ಅಸಮ ಲಿಂಗೈಕ್ಯಾನು ಭಾವ ಪ್ರಸರಮತಿ ಕವಿ ಸೋಮನಾಥಂ ರಸಮೊಸರೆ ಮುನ್ನುಸಿರ್ದುದನೆ ಕನ್ನಡಿಸಿ ಪೇಳ್ದೆಂ' ಎಂದು ತನ್ನ ಬಸವಪುರಾಣದ ಬಗೆಗೆ ಕವಿ ಹೇಳಿಕೊಂಡಿದ್ದಾನೆ. ಕಾಲ: ಕ್ರಿ. ಶ. ಸು. ೧೩೬೯. ಭೀಮಕವೀಶ್ವರ ರಗಳೆ, ಭೃಂಗಿದಂಡಕಗಳು ಇತರ ಕಾವ್ಯಗಳು.

೫೬. ಆ. ೧. ಪದ್ಯ. ೧೮ ಭೋಜ : ಶಿವಭಕ್ತಿಯಲ್ಲಿ ಪ್ರಸಿದ್ಧನಾದ ಧಾರಾಪುರದ ಭೋಜರಾಜನೇ ಕವಿ ಹೇಳಿರುವ 'ಭೋಜ' ನೆನಿಸಿದ್ದಾನೆ. ಒಮ್ಮೆ ಈ ಭೋಜರಾಜನು ಮ್ಲೇಚ್ಛರನ್ನು ಸೋಲಿಸಿ ಮಕ್ಕೆಯವರೆಗೆ ದಂಡೆತ್ತಿಹೋಗಿ ಮಕ್ಕೇಶ್ವರನನ್ನು ಸಂದರ್ಶಿಸಿದನು. ಆಗ ಶಿವಲಿಂಗವು ಅಲ್ಲಿಂದ ಹಿಂದಿರುಗಿ ಉಜ್ಜಯಿನಿಯಲ್ಲಿರುವ ಮಹಾಕಾಲೇಶ್ವರನಲ್ಲಿಗೆ ಹೋಗುವುದಾಗಿ ವಾಣಿಯಾಯಿತು, ಎಂದು ಶಿವತತ್ತ್ವ ಚಿಂತಾಮಣಿಯಲ್ಲಿ ಹೇಳಲಾಗಿದೆ. ಸುಟ್ಟುಹೋದ ಉದ್ಭಟಯ್ಯನ ಹೆಣದ ಅಳಿದುಳಿದ ಮೂಳೆಗಳ ಮೇಲೆ ಕಟ್ಟಿಗೆಗಳನ್ನೊಟ್ಟಿ ಬೆಂಕಿಯನ್ನು ಹೊತ್ತಿಸಿ ಮರದ ಮೇಲೆ ತನ್ನ ಬಂಧುಗಳೊಡನೆ ಕುಳಿತುಕೊಂಡು ಕೆಳಗಿನಿಂದ ಬಂದ ಹೊಗೆ ತಾಗುತ್ತಲೇ ಮರಸಹಿತ ಕೈಲಾಸಕ್ಕೆ ಹೋದ ಹಾಗೆ ಅನೇಕ ಗ್ರಂಥಗಳಲ್ಲಿ ಹೇಳಲಾಗಿದೆ. ಇವನ ಬಗೆಗೆ ಅನೇಕ ಪವಾಡದ ಕಥೆಗಳು ವೀರಶೈವ ಸಾಹಿತ್ಯಗ್ರಂಥಗಳಲ್ಲಿ ಬರುತ್ತವೆ. (೭೬ನೆಯ ಕಥೆ ನೋಡು ಆ. ೧೪. ಪ. ೧೬೬).

೫೭. ಆ. ೧. ಪದ್ಯ. ೫೩. ಕೊಲ್ಲಿಪಾಕೀಶನೊಳ್ ಸಂಭವಿಸುತ್ತುಂ-ಎಂಬುದಕ್ಕೆ ಕಥೆ : ಪಾರ್ವತಿಯು ಶಿವಗಣಂಗಳ ಪಾದರೇಣುವಿನಿಂದ ಗೊಂಬೆಯೊಂದನ್ನು ಮಾಡಿದಳು. ಅದಕ್ಕೆ ಶಿವನು ಜೀವ ಕಳೆಯನ್ನು ಕೊಟ್ಟನು. ಅವನಿಗೆ ರೇಣುಕಗಣೇಶ್ವರನೆಂದು ನಾಮಕರಣ ಮಾಡಿದನು. ಆ ರೇಣುಕಗಣೇಶ್ವರನು ಒಮ್ಮೆ ಸಭೆಯಲ್ಲಿ ಪರಮೇಶ್ವರನ ಬಾಯ್ದಂಬುಲವನ್ನು ಸ್ವೀಕರಿಸಲೆಂದು ಸಂಭ್ರಮದಿಂದ ಬರುತ್ತಿರುವಾಗ ದಾರುಕನೆಂಬ ಗಣೇಶ್ವರನನ್ನು ದಾಟಲಾಗಿ ಕೋಪಗೊಂಡ ದಾರುಕನು ಈ ಗಣೇಶ್ವರನನ್ನು ಭೂಲೋಕದಲ್ಲಿ ಜನಿಸುವಂತೆ ಶಾಪವೀಯಲು ಭೂಮಿಯಲ್ಲಿ ಈಗ ಆಂಧ್ರ ಕರ್ನಾಟಕಗಳ ಗಡಿಯಲ್ಲಿರುವ ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಿಂದ ಉದ್ಭವಿಸಿ 'ರೇಣುಕ' ನೆಂಬ ಹೆಸರಿನಿಂದ ಭೂಲೋಕದಲ್ಲಿ ಅರಿತು ಏಳುನೂರು ವರುಷ,

ಅರಿಯದೇಳುನೂರು ವರುಷ ಬಾಳಿದನೆಂಬ ಪುರಾಣಗಳ ಉಕ್ತಿಯುಂಟು. (ಉಳಿದ ವಿಷಯಕ್ಕೆ ಆ. ೧. ಪದ್ಯ ೧೭ರಲ್ಲಿ ಬಂದಿರುವ ೧೩ನೆಯ ಕಥೆಯ ವಿಷಯ ನೋಡಿ. ಇವನಿಗೆ ಪಿಣ್ಣಾಂಕ, ಪಿಣ್ಯಾಂಕ, ಪಿಣ್ಯಾಂಕಸಿದ್ಧ, ರೇವಣಸಿದ್ಧ–ಇತ್ಯಾದಿ ನಾಮಾಂತರಗಳು ಉಂಟು.)

೨೮. ಆ. ೧. ಪ. ೭೭. ವಾಗೀಶಾಹ್ವಯಮಾಂತು ಪುಟ್ಟಿದ ಕಥೆ: ಪರಮೇಶ್ವರನು ಕೈಲಾಸದಲ್ಲಿ ಸಭಾಸೀನನಾಗಿ ಕುಳಿತಾಗ ಚತುರ್ಮುಖಬ್ರಹ್ಮನು ಬಂದು 'ಪರಮೇಶ್ವರನೇ ನಿನ್ನ ಅಪ್ಪಣೆ ಪ್ರಕಾರ ಷಣ್ಮುಖಸ್ವಾಮಿಗೆ ವಿದ್ಯಾಭ್ಯಾಸಮಾಡಿಸಲು ನಾನು ಪ್ರಥಮತಃ ಓಂಕಾರವನ್ನು ಬರೆದು ಕೊಡಲು ಅವನು ಇದರರ್ಥವೇನೆಂದನು. ನಾನು ಇದರರ್ಥವನ್ನು ಮೊದಲೇ ಕೇಳಬಾರದೆಂದುದಕ್ಕೆ ಚಾಟಿಯಿಂದ ಹೊಡೆದನು. ಆಗ ನಾನು ಅವನೊಡನೆ ವಾದಿಸುವುದು ಸರಿಯಲ್ಲವೆಂದು ೧೨ ಲಕ್ಷ ಗ್ರಂಥಸಂಖ್ಯೆಯ ಪ್ರಣವಾರ್ಥ ಶ್ಲೋಕ ಹೇಳಲು, ಅವನು ೧೨ ಕೋಟಿ ಗ್ರಂಥಸಂಖ್ಯೆಯುಳ್ಳ ಶ್ಲೋಕಗಳ ಅರ್ಥವುಳ್ಳದ್ದೆಂದು ಹೇಳಿದನು' ಎಂದನು. ಶಿವನು ನಕ್ಕು 'ಹೌದು ಅದು ೧೨ ಕೋಟಿ ಗ್ರಂಥಗಳ ಅರ್ಥವುಳ್ಳದ್ದು ನಿಜ. ನೀನು ಚೋಳದೇಶದಲ್ಲಿ 'ವಾಗೀಶ' ಎಂಬ ಹೆಸರಿನಿಂದ ಹುಟ್ಟು. ಪಿಳ್ಳೈನೈನಾರರೆಂಬ ಹೆಸರಿನಿಂದ ಹುಟ್ಟಿದ ಕುಮಾರಸ್ವಾಮಿಯಿಂದ ೧೨ಕೋಟಿ ಗ್ರಂಥಸಂಖ್ಯೆಯ ಆ ಪ್ರಣವದ ಅರ್ಥವನ್ನು ತಿಳಿ' ಎಂದು ಭೂಲೋಕಕ್ಕೆ ಕಳಿಸಿದನು. ಆ ಬ್ರಹ್ಮನೇ 'ವಾಗೀಶ' ನೆಂಬ ಹೆಸರಿನಿಂದ ಹುಟ್ಟಿದನೆಂದು ಪುರಾಣಗಳ ಗ್ರಹಿಕೆ.

ವಾಗೀಶರೆಂಬುವರು ತಮಿಳುನಾಡಿನ ಶೈವಸಮಯಾಚಾರದಲ್ಲಿ ಪ್ರಸಿದ್ಧನಾದ ವ್ಯಕ್ತಿ. ತಿರುಮನೈಪ್ಪಾಡಿ ನಾಡಿನ ತಿರುವಾಮೂರಿನ ವೇಳಾಳರ್ ಎಂಬ ಹೆಸರಿನ ಕುಲದಲ್ಲಿ ಹುಟ್ಟಿದವನು. ಪುಗಳನಾರ್ ಮಾದಿನಿಯಾರ್ ಎಂಬುವರು ತಂದೆ ತಾಯಿಯರು. ತಿಲಕವದಿಯಾರ್ ಎಂಬ ಅಕ್ಕನೂ ಇದ್ದಳು. ಇವರ ಹುಟ್ಟು ಹೆಸರು ಮರುಣೀಕ್ಕಿಯಾರ್ ಎಂದು. ಬಾಲ್ಯದಲ್ಲಿಯೇ ಮಾತಾಪಿತೃಗಳು ತೀರಿಹೋದರು. ಮನೆಯ ಸರ್ವ ಐಶ್ವರ್ಯವನ್ನು ದಾನಮಾಡಿ, ಅಕ್ಕನನ್ನು ತೊರೆದು, ಪಾಟಲಿಪುತ್ರ (ತಿರುಪ್ಪಾದಿರಿಪ್ಪುಲಿಯಾರ್)ಕ್ಕೆ ಹೋಗಿ ಅಲ್ಲಿನ ಶ್ರಮಣ ಪ್ರಭಾವಕ್ಕೊಳಗಾಗಿ ಜೈನಮತಾವಲಂಬಿಗಳಾಗಿ, ಅನೇಕವರ್ಷ ಆ ಮತದ ಗ್ರಂಥಗಳನ್ನೆಲ್ಲ ಓದಿ ಪಾಂಡಿತ್ಯ ಸಂಪಾದಿಸಿದರು. ಇವರ ಪಾಂಡಿತ್ಯಕ್ಕೆ ಮೆಚ್ಚಿದ ಜೈನರು ಇವನಿಗೆ 'ಧರ್ಮಸೇನ' ಎಂಬ ಹೆಸರಿಟ್ಟರು. ಇತ್ತ ಅಕ್ಕ ತಿಲಕವತಿಗೆ ತಮ್ಮನು ಪಾಟಲಿಪುತ್ರದಲ್ಲಿರುವನೆಂದೂ ಮಹಾವಿದ್ವಾಂಸನಾಗಿರುವನೆಂದೂ ಜೈನಮತಾವಲಂಬಿಯಾಗಿರುವನೆಂದೂ ಗೊತ್ತಾಗಿ, ಶಿವನಲ್ಲಿ ನನ್ನ ತಮ್ಮನು ಶೈವಮತಾವಲಂಬಿಯಾಗುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡಳು. ಶಿವನು ಕನಸಿನಲ್ಲಿ ಬಂದು ಅಭಯಕೊಟ್ಟು ಮಾಯವಾದನು. ಕೆಲವೇ ದಿನಗಳಲ್ಲಿ ವಾಗೀಶರಿಗೆ ಭೀಕರ ಸ್ವರೂಪದ ಹೊಟ್ಟೆನೋವು ಕಾಣಿಸಿಕೊಂಡಿತು. ಶ್ರಮಣರೆಲ್ಲ ಸೇರಿ ಮಾಡಿದ ಔಷಧೋಪಚಾರ, ಮಂತ್ರ ತಂತ್ರಗಳು ಫಲಕಾರಿಯಾಗಲಿಲ್ಲ. ಕೊನೆಗೆ

ತನ್ನ ಅಕ್ಕ ತಿಲಕವತಿಯನ್ನು ಜ್ಞಾಪಿಸಿಕೊಂಡು ಊರಿಗೆ ಬಂದು ಮಹಾಶಿವಭಕ್ತೆ ಯಾದ ಅಕ್ಕನ ಮರೆಹೊಕ್ಕರು. ತಮ್ಮನಲ್ಲಿಯ ವಾತ್ಸಲ್ಯಾಧಿಕ್ಯದಿಂದ ತಿಲಕವತಿಯು ಶಿವನಲ್ಲಿ 'ಅರಿಯದೆ ಮಾಡಿದ ನನ್ನ ತಮ್ಮನ ತಪ್ಪನ್ನು ಮನ್ನಿಸಬೇಕೆಂ'ದು ಪ್ರಾರ್ಥಿಸಿದಳು. ಆ ಕೂಡಲೆ ಹೊಟ್ಟೆಯ ಕಡಿತ ಮಾಯವಾಯಿತು. ಪುನಃ ಈಗ ವಾಗೀಶರು ಶಿವಭಕ್ತ ರಾಗಿ ಶಿವಾರಾಧನೆಯಲ್ಲಿ ನಿರತರಾದರು.

ಜೈನನಾದ ಈತನು ಶೈವನಾದ ಸುದ್ದಿಯು, ಜೈನನಾದ ಪಲ್ಲವರಾಜ ಮಹೇಂದ್ರವರ್ಮನಿಗೆ ತಿಳಿಯಿತು. ಅವನು ಕಿಡಿಕಿಡಿಯಾಗಿ, ವಾಗೀಶರನ್ನು ಹಿಡಿದು ತರಿಸಿ, ಸುಣ್ಣದ ಗೂಡಿನೊಳಗೆ ನೂಕಿಸಿದನು. ವಾಗೀಶರಿಗೆ ಆ ಸುಣ್ಣದ ಗೂಡೇ ಈಶ್ವರನು ಕೊಟ್ಟ ನೆಳಲಿನಂತಾಯಿತು. ಅನಂತರ ವಿಷವನ್ನು ಕುಡಿಸಿದನು ; ಅದು ಅಮೃತವಾಯಿತು. ಮದಿಸಿದ ಆನೆಯನ್ನು ಮೈಮೇಲೆ ಬಿಟ್ಟರು. ಅದು ವಾಗೀಶರು ಹಾಡಿದ 'ತಿರುಪ್ಪಾಟು' ಕೇಳಿ ನಮಸ್ಕರಿಸಿ ಹಿಂದೆ ಸರಿಯಿತು. ಇಷ್ಟಾದರೂ ರಾಜನು ಸುಮ್ಮನಿರದೆ ಅವನಿಗೊಂದು ಕಲ್ಲುಕಟ್ಟಿಸಿ ಸಮುದ್ರಕ್ಕೆಸೆಯಿಸಿದನು. ಈ ಎಲ್ಲ ಕಷ್ಟ ಗಳನ್ನೂ ಶಿವಸ್ತೋತ್ರ ಗೀತೆ ಹಾಡಿ ವಾಗೀಶರು ದೂರಮಾಡಿಕೊಂಡರು. ಈತನ ಈ ರೀತಿಯ ಮಹಿಮೆಯನ್ನು ಕಂಡು, ಆ ಜೈನರಾಜನಾದ ಪಲ್ಲವದೊರೆ ಮಹೇಂದ್ರ ವರ್ಮನೂ ಶೈವಮತಾವಲಂಬನ ಮಾಡಿದನು. ಆ ರಾಜನೇ ಮುಂದೆ ತಿರುನಾಗೇಶ್ವರ ದಲ್ಲಿ ಶಿವಾಲಯ ಕಟ್ಟಿಸಿದನು.

ಶಿವಕ್ಷೇತ್ರ ಸಂದರ್ಶನಕ್ಕಾಗಿ ವಾಗೀಶರು ದೇಶಾಟನೆ ಕೈಗೊಂಡು ಶಿರ್‌ಕಾಳಿ (ಶೀಯಾಳಿ) ಗೆ ಬಂದಾಗ ತಿರುಜ್ಞಾನ ಸಂಬಂಧಿಯರು (ಪಿಳ್ಳೈನೈನಾರರು) ಅವರನ್ನು 'ಅಪ್ಪರೇ' ಎಂದು ಸಂಬೋಧಿಸಿದುದರಿಂದ 'ಅಪ್ಪರ್' ಎಂಬ ಹೆಸರೂ, ಅತ್ಯಂತ ವಾಗ್ಮಿಗಳಾದುದರಿಂದ 'ನಾವುಕ್ಕರಶರ್' ಎಂಬುದೂ, 'ತಾಂಡಕ' ಎಂಬ ಪದ್ಯಜಾತಿ ಯನ್ನು ಹಾಡಿದುದರಿಂದ 'ತಾಂಡಕರಾಜ' ಎಂದೂ ಅವರಿಗೆ ಹೆಸರಾದುವು. ಇವರು ಮಹಿಮಾಪುರುಷರೆನಿಸಿ, ಅನೇಕ ಪವಾಡಗಳನ್ನು ಮೆರೆದರು. ಇವರು ಹಾಡಿದ ತೇವಾರ ಗಳು ಇಂದಿಗೂ ಭಕ್ತಿರಸದ ಬುಗ್ಗೆಗಳಾಗಿವೆ. ಕೊನೆಯಲ್ಲಿ ತಿರುಪ್ಪುಗಲೂರಿನಲ್ಲಿ ಶಿವ ಸಮಾಧಿ ಹೊಂದಿದರು.

೫. ಆ. ೧. ಪ. ೭೭ ಪಿಳ್ಳೈನೈನಾರರು : ಇವರಿಗೆ 'ತಿರುಜ್ಞಾನ ಸಂಬಂಧಿ' ಎಂದೂ ಹೆಸರು. ಕಾವೇರೀ ತೀರದ ಶಿಯಾಳಿಪು ದಲ್ಲಿದ್ದ ಮಹೇಶ್ವರಭಟ್ಟ ಮಾದೇವಿಯರ ಮಗನಾಗಿ ಹುಟ್ಟಿದವನು. ಸ್ಕಂಧನೇ (ಕುಮಾರಸ್ವಾಮಿಯೇ) ಅವ ತಾರ ಮಾಡಿಬಂದ ಹಾಗೆ ಜನತೆಯ ಭಾವನೆ. ಬಾಲ್ಯದಲ್ಲಿ ಇವನ ತಂದೆ ಈತನನ್ನು ಬಾವಿಯ ದಡದಲ್ಲಿ ಕುಳ್ಳಿರಿಸಿ ಸ್ನಾನಮಾಡಲು ಹೋದಾಗ ಸಾಕ್ಷಾತ್ ಪಾರ್ವತಿಯೇ ಬಂದು ಇವನಿಗೆ ಮೊಲೆಯುಣಿಸಿ ದೀಕ್ಷೆಯಿತ್ತು ಹೊರಟುಹೋದಳಂತೆ. ಶೂದ್ರಳಿಂದ ಹಾಲನ್ನು ಕುಡಿದೆಯೆಂದು ತಂದೆ ಗದರಿ ಶಿಕ್ಷಿಸುವ ಸಮಯದಲ್ಲಿ ಹಾಲುಕುಡಿಸಿ ಹೋದ

ವಳು ಸಾಕ್ಷಾತ್ ಪಾರ್ವತಿಯೆಂದು ತೋರಿಸಿಕೊಟ್ಟನು. ಆಗ ತಂದೆಗೆ ತನ್ನ ಮಗ ಮಹಾಕಾರಣಿಕಪುರುಷನೆಂಬ ಅರಿವಾಯಿತು. ಮಗನಿಗೆ 'ತಿರುಜ್ಞಾನ ಸಂಬಂಧಿ' ಎಂದು ಆಮೇಲೆ ಹೆಸರಿಟ್ಟನು. ಶಿವಭಕ್ತರು 'ಪಿಳ್ಳೈನೈನಾರ್' ಎಂದು ಸ್ತೋತ್ರ ಮಾಡ. ತೊಡಗಿದರು. ಇವನು ಜೈನಮತದ ಉತ್ಕರ್ಷವನ್ನು ತಡೆದು ಶೈವಮತದ ಪ್ರಸಾರ ಮಾಡಿದ ಹಾಗೆ ತಿಳಿದುಬರುವುದು. ಅನೇಕ ಪವಾಡಗಳನ್ನು ಮೆರೆದ ಈತನು ರಾಜಾಧಿ ರಾಜರಿಂದ ಪೂಜೆ ಮಾಡಿಸಿಕೊಂಡನು. ವಾಗೀಶರಿಗೆ ಈತನು ಧರ್ಮಬೋಧಿಸಿದನು.

೩೦. ಆ. ೨. ಪ. ೫೮. ಹರನೊಳ್ಳುಪಿಸನುಡಿದ ಕೇದಗಿಯ ಕಥೆ : ವಿಷ್ಣು ಬ್ರಹ್ಮರಿಗೆ ಪರಸ್ಪರ ತಾ ಹೆಚ್ಚು ತಾ ಹೆಚ್ಚೆಂದು ಸ್ಪರ್ಧೆ ನಡೆದು ಯುದ್ಧವೇ ಆಯಿತು. ಆಗ ಶಿವನು ಅವರ ಮಧ್ಯದಲ್ಲಿ ಮಹಾಲಿಂಗವಾಗಿ ಉದಯಗೊಂಡನು. ಆ ಲಿಂಗದ ತುದಿ ಮೊದಲನ್ನು ಕಂಡವರೇ ಹೆಚ್ಚೆಂದು ಆಕಾಶವಾಣಿಯಾಯಿತು. ಆಗ ಅವರಿಬ್ಬರೂ ರಣಾವೇಶ ಮರೆತು ತಮ್ಮ ಮಧ್ಯದಲ್ಲಿ ಉದಯಗೊಂಡ ಆ ಮಹಾಲಿಂಗದ ತುದಿ ಮೊದಲನ್ನು ಕಾಣಲು ಇಚ್ಛಿಸಿ, ವಿಷ್ಣುವು ವರಾಹರೂಪದಿಂದ ಅದರ ಪಾದಗಳನ್ನು ಕಾಣುವೆನೆಂದೂ, ಬ್ರಹ್ಮನು ಹಂಸಾಕೃತಿಯನ್ನು ಹೊಂದಿ ಶಿರವನ್ನು ನೋಡುವೆನೆಂದೂ ಹೊರಟರು. ಬ್ರಹ್ಮನು ಹಂಸಾಕೃತಿ ತಾಳಿ ಹೊರಟಾಗ ಮಾರ್ಗದಲ್ಲಿ ಕೇತಕಿಯು ಎದುರಾಯಿತು. ಬ್ರಹ್ಮನು ಆ ಕೇತಕಿಯನ್ನು 'ಎಲ್ಲಿಂ ಬಂದೆ' ಎಂದನು. ಅದು 'ಪರ ಶಿವನ ಮಕುಟದಿಂದ' ಎಂದಿತು. ಅದಕ್ಕೆ ಬ್ರಹ್ಮನು 'ಅದು ಇಲ್ಲಿಂದ ಎಷ್ಟು ದೂರವಿದೆ' ಎಂದು ಪ್ರಶ್ನಿಸಿದನು. ಕೇತಕಿಯು 'ನೀನು ಹಲವು ಯುಗಗಳು ಪ್ರಯಾಣಮಾಡಿ ದರೂ ಆ ಮಕುಟವನ್ನು ಕಾಣುವುದು ಅಸಂಭವ'ವೆಂದಿತು. ಅದಕ್ಕೆ ಬ್ರಹ್ಮನು 'ಅಯ್ಯಾ ಕೇತಕಿಯೇ, ನಾನು ಪರಶಿವನ ಮಸ್ತಕವನ್ನು ಕಾಣುವೆನೆಂದು ಹರಿಗೆ ಭಾಷೆ ಕೊಟ್ಟು ಬಂದಿದ್ದೇನೆ. ಆದ್ದರಿಂದ ನನ್ನ ಮಾತು ಗೆಲ್ಲುವಂತೆ ನೀನು ಸಹಾಯ ಮಾಡಬೇಕೆಂ'ದು ಒಪ್ಪಿಸಿ, ಒಡಗೊಂಡು ಹಿಂದಿರುಗಿ ಮೊದಲಿನ ರಣರಂಗದ ಸ್ಥಳಕ್ಕೆ ಬಂದನು. ಇತ್ತ ವಿಷ್ಣುವು ಹರನ ಪಾದಗಳನ್ನು ಕಾಣದೆ ಹಿಂದಿರುಗಿಬಂದು, ತನಗಿಂತಲೂ ಮೊದಲೇ ಬಂದಿದ್ದ ಬ್ರಹ್ಮನನ್ನು ಕುರಿತು 'ನೀನು ಶಿವನ ಮಕುಟವನ್ನು ಕಂಡೆಯಾ' ಎಂದು ಪ್ರಶ್ನಿಸಿದನು. 'ಕಂಡೆನು' ಎಂದು ಬ್ರಹ್ಮನು ಹೇಳಲು, ವಿಷ್ಣುವು 'ಕಂಡೆನೆನ್ನುವುದಕ್ಕೆ ಗುರುತೇನು ?' ಎಂದನು. ಅದಕ್ಕೆ ಬ್ರಹ್ಮನು 'ಇಗೋ ಇಲ್ಲಿರುವ ಶಿವನ ಮಕುಟ ದಲ್ಲಿದ್ದ ಕೇತಕಿಯೇ ಸಾಕ್ಷಿ' ಎಂದು ಕೇತಕಿಯನ್ನು ತೋರಿಸಲಾಗಿ, ಕೇತಕಿಯು 'ಹೌದು ಬ್ರಹ್ಮನು ನುಡಿದುದು ಸರಿ' ಎಂದು ಸುಳ್ಳುಹೇಳಿತು. ವಿಷ್ಣುವು ಕೇತಕಿಯ ಸುಳ್ಳನ್ನು ತಿಳಿದವನಾಗಿ 'ಇನ್ನು ಮೇಲೆ ನೀನು ಶಿವನ ಮಸ್ತಕಕ್ಕೆ ಸಲ್ಲಬೇಡ' ಎಂದು ಶಪಿಸಿ ದನು. ವಿಷ್ಣುವು ಮಾತ್ರ ತಾನು ಶಿವನ ಪಾದಗಳನ್ನು ಕಾಣಲಾಗಲಿಲ್ಲವೆಂದು ಸತ್ಯ ವನ್ನೇ ನುಡಿದನು. ಅಂದಿನಿಂದ ಶಿವನು ಕೇತಕಿಯನ್ನು ಕಲುಷದಿಂದ ಕೂಡಿದುದೆಂದು

ತಿರಸ್ಕರಿಸಿದನು. ಇಂದಿಗೂ ಸಾಮಾನ್ಯವಾಗಿ ಕೇತಕಿಯನ್ನು ಶಿವಾಲಯಗಳಲ್ಲಿ ಪೂಜೆಗೆ ಸ್ವೀಕರಿಸುವುದಿಲ್ಲವೆಂಬುದನ್ನು ನೋಡಬಹುದಾಗಿದೆ.

೩೧. ಆ. ೨ ಪ. ೭ ಕಾವೇರಿಯು 'ಕವೇರಕನ್ಯೆ' ಎನಿಸಿದ ಕಥೆ : ಕೊಡಗಿನ ಭಾಗಮಂಡಲಕ್ಕೆ ಸೇರಿದ ಬ್ರಹ್ಮಗಿರಿಯಲ್ಲಿ ಹುಟ್ಟಿ, ಪಕ್ಕದಲ್ಲಿರುವ ತಲಕಾವೇರಿಯೆಂಬ ತೀರ್ಥಕ್ಷೇತ್ರದಲ್ಲಿ ಬಹಿರಂಗಗೊಂಡು ಪ್ರವಹಿಸಿ, ಅಲ್ಲಿಂದ ಮೂರುಮೈಲುಗಳ ದೂರ ಗುಪ್ತ ಗಾಮಿನಿಯಾಗಿ ಹರಿದು, ಅಲ್ಲಿಂದ ಮುಂದೆ ಕಾಡು ಗುಡ್ಡ ಕಣಿವೆಗಳಲ್ಲಿ ಪ್ರವಹಿಸಿ, ಲೋಕಪಾವನೆಯಾಗಿ ಸುಮಾರು ೪೭೫ ಮೈಲು ದೂರ ಹರಿದುಹೋಗಿ ಕಾವೇರಿಪಟ್ಟಣ ವೆಂಬ ಪ್ರಾಚೀನ ನಗರದ ಪಕ್ಕದಲ್ಲಿ ಸಮುದ್ರ ಸೇರುವ ಈ ನದಿಯ ಬಗೆಗೆ ಒಂದು ಪೌರಾಣಿಕ ಕಲ್ಪನೆಯನ್ನೇ ಹೆಣೆಯಲಾಗಿದೆ. ಅದಕ್ಕಾಗಿ 'ಕಾವೇರಿ ಮಹಾತ್ಮೆ' ಎಂಬ ಪುರಾಣವೂ, 'ಮೂಲ ಕಾವೇರೀಕ್ಷೇತ್ರ ಮಹಿಮೆ' ಎಂಬ ಗ್ರಂಥವೂ ಹುಟ್ಟಿಕೊಂಡಿವೆ.

ಪೂರ್ವಕಾಲದಲ್ಲಿ ಕವೇರನೆಂಬ ಬ್ರಾಹ್ಮಣೋತ್ತಮನು ಬ್ರಹ್ಮಗಿರಿಯಲ್ಲಿ ವಾಸಿಸು ತ್ತಿದ್ದು, ತನಗೆ ಸಂತತಿಯಾಗಬೇಕೆಂದು ಬ್ರಹ್ಮನನ್ನು ಕುರಿತು ತಪಸ್ಸನ್ನಾಚರಿಸಿದನು. ಬ್ರಹ್ಮನು ಪ್ರತ್ಯಕ್ಷನಾಗಿ 'ನಿನಗೆ ಪುತ್ರಸಂತಾನ ಪ್ರಾಪ್ತಿಯಾಗುವ ಭಾಗ್ಯವಿಲ್ಲ ಆದು ದರಿಂದ ಲೋಪಾಮುದ್ರೆ ಎಂಬ ನಾಮಾಂಕಿತವನ್ನೊಳಗೊಂಡ ನನ್ನ ಮಾನಸಪುತ್ರಿ ಯನ್ನು ನಿನಗೆ ನೀಡುವೆನು' ಎಂದನು. ಅದರಂತೆ ಕವೇರಋಷಿಯು ಅವಳನ್ನು ದತ್ತು ಪುತ್ರಿಯನ್ನಾಗಿ ಸ್ವೀಕರಿಸಿದನು. ಮುಂದೆ ಅವಳು ತನ್ನ ತಂದೆಯಾದ ಕವೇರನಿಗೆ 'ಅಪ್ಪಾ, ನಾನು ಲೋಕಕಲ್ಯಾಣವನ್ನು ಸಾಧಿಸಲು ನದೀರೂಪವಾಗಿ ಹರಿದು ಸಮುದ್ರ ವನ್ನು ಸೇರುವೆನು. ಜನರು ನನ್ನನ್ನು ಲೋಕದಲ್ಲಿ ಬ್ರಹ್ಮಮಾನಸಪುತ್ರಿಯೆಂದೂ, ಮಾಯೆಯೆಂದೂ, ಕಾವೇರಿ ಎಂದೂ ಕರೆಯುವರು. ಜನರ ಪಾಪಗಳನ್ನು ನಾನು ನಾಶಮಾಡುವವಳೆಂದು ಲೋಕಪ್ರಸಿದ್ಧಳಾಗುವೆನು.' ಎಂದು ಹೇಳುವಳು. ಈ ಕಾರಣ ದಿಂದ ಕವೇರಋಷಿಯ ಮಗಳಾದ್ದರಿಂದ ಅವಳಿಗೆ ಕಾವೇರಿಯೆಂದೂ ಕವೇರಕನ್ಯೆ ಯೆಂದೂ ಪ್ರಸಿದ್ಧಳಾದ ಹಾಗೆ ಹೇಳಲಾಗುತ್ತಿದೆ.

೩೨. ಆ. ೩. ಪ. ೪ ಇಂದ್ರನು ಕುಲೀನವೃತ್ತಿಯನ್ನು ತ್ಯಜಿಸಿದ ಕಥೆ : ಗೋತ್ರಪ್ರವರ್ತಕನೂ, 'ದೀರ್ಘತಮ'ನೆಂಬ ಋಷಿಯ ಮಗನೂ ಆದ ಗೌತಮ ಮಹರ್ಷಿಯ ಪತ್ನಿ: ಅಹಲ್ಯೆ. ಮಹಾಪತಿವ್ರತೆಯಾದ ಅಹಲ್ಯಾದೇವಿಯ ರೂಪಲಾವಣ್ಯ ಗಳಿಗೆ ಮರುಳುಗೊಂಡ ದೇವೇಂದ್ರನು ಗೌತಮರು ಆಶ್ರಮಬಿಟ್ಟು ಹೊರಗೆ ಹೋಗ ಲೆಂದು ನಡುರಾತ್ರಿಯಲ್ಲಿ ಕೋಳಿ ಕೂಗಿದಂತೆ ಕೂಗಿದನು. ಗೌತಮರು ಅದನ್ನು ಕೇಳಿ, ಬ್ರಾಹ್ಮೀಮುಹೂರ್ತ ಸಮೀಪಿಸಿತೆಂದು ಆಹ್ನಿಕಕ್ಕಾಗಿ ಹೊಳೆಯ ಕಡೆಗೆ ತೆರಳಿದರು. ಗೌತಮರಿಲ್ಲದಾಗ ಆಶ್ರಮವನ್ನು ಗೌತಮರ ವೇಷದಿಂದ ಹೊಕ್ಕ ದೇವೇಂದ್ರನು ಅಹಲ್ಯೆ ಯೊಡನೆ ಭೋಗಸೌಖ್ಯಪಡೆದು ಹೊರಬರುತ್ತಿದ್ದ ಹಾಗೆಯೇ, ಗೌತಮರೂ ಕೂಡ ಬ್ರಾಹ್ಮೀಮುಹೂರ್ತವಲ್ಲವೆಂದೂ, ಯಾಂದೋ ಮೋಸಕೃತ್ಯವೆಂದೂ ತಿಳಿದು ಆಶ್ರಮಕ್ಕೆ

ಬಂದರು. ಅಲ್ಲಿ ತಮ್ಮ ವೇಷದಿಂದಲೇ ಹೊರಬರುತ್ತಿರುವ ದೇವೇಂದ್ರನಿಗೆ ವೃಷಣಹೀನನಾಗೆಂದೂ, ಅಹಲ್ಯೆಗೆ ಶಿಲೆಯಾಗೆಂದೂ ಶಾಪವಿತ್ತು ತಪಸ್ಸಿಗೆ ತೆರಳಿದರು. ಹೀಗೆ ಇಂದ್ರನು ತನ್ನ ಕುಲೀನವೃತ್ತಿಯನ್ನು ಮಿಕ್ಕಿದವನೆನಿಸಿದನು. [ಸಹಸ್ರಯೋನಿ (ನೇತ್ರ) ಯುಳ್ಳವನಾಗೆಂದು ಶಾಪವಿತ್ತ ಹಾಗೆಯೂ ಕಥೆಯುಂಟು.]

೩೩. ಆ. ೩ ಪ. ೪. ಇಂದ್ರನು ಕುಲಾಚಲ ಪರ್ವತಗಳಿಗೆ ವೈರಿಯಾದ ಕಥೆ : ಪೂರ್ವದಲ್ಲಿ ಪರ್ವತಗಳಿಗೆ ರೆಕ್ಕೆಗಳಿದ್ದುವೆಂದೂ, ಅವು ಹಾರಾಡುತ್ತಿದ್ಧವೆಂದೂ, ಅವು ಹಾಗೆ ಹಾರಾಡುವುದರಿಂದ ಭೂಮಿಯು ನಾಶವಾಗಿ ಪ್ರಜಾಸೌಖ್ಯ ಹಾಳಾಗುವುದರ ಜೊತೆಗೆ ತನಗೆ ಹವಿಸ್ಸ ಕೊಡುವವರು ಇಲ್ಲದಂತಾಗಲು ಇಂದ್ರನು ಸಪ್ತಕುಲಾಚಲಗಳಾದ ಮಲಯ, ಮಹೇಂದ್ರ, ಸಹ್ಯ, ಸಾನುಮತ್, ಋಕ್ಷವಿಂಧ್ಯ, ಪಾರಿಯಾತ್ರ ಮೊದಲಾದವುಗಳ ರೆಕ್ಕೆಗಳನ್ನು ಕತ್ತರಿಸಿ ಭೂಮಿಯನ್ನು ಧಾರಣಮಾಡುವಂತೆ ಮಾಡಿದನು. ಈ ದೃಷ್ಟಿಯಿಂದ ಇಂದ್ರನು ಅವುಗಳ ವೈರಿಯೆನಿಸಿದನು.

೩೪. ಆ. ೩ ಪ. ೯. ಕೃತಶುಂಭದ್ವೇಷಿ-ಚಂಡ ಮುಂಡ ಪ್ರಹರಿಣಿ ಎಂಬುದಕ್ಕೆ ಕಥೆ : ಶುಂಭ, ನಿಶುಂಭರೆಂಬುವರಿಬ್ಬರು ರಾಕ್ಷಸರು ಸಹೋದರರು. ಇವರು ತಪಸ್ಸು ಮಾಡಿ ಬ್ರಹ್ಮನನ್ನು ಮೆಚ್ಚಿಸಿ ತಮಗೆ ಅಯೋನಿಜೆಯಾದ ಕನ್ಯೆಯಿಂದಲ್ಲದೆ ಮತ್ತಾರಿಂದಲೂ ಸಾವು ಸಂಭವಿಸಬಾರದೆಂದು ವರಪಡೆದು ಲೋಕಕಂಟಕರಾಗಿದ್ದರು. ದೇವತೆಗಳು ಇವರ ಬಾಧೆಯನ್ನು ಸಹಿಸಲಾರದೆ ಆದಿಶಕ್ತಿಯನ್ನು ಸ್ತೋತ್ರಮಾಡಲಾಗಿ ಆಕೆಯ ದೇಹದಿಂದ ಹೊರಬಂದ ಕೌಶಿಕೆಯೆಂಬ ಸ್ತ್ರೀವ್ಯಕ್ತಿ ದೇವತೆಗಳಿಗೆ ಅಭಯವಿತ್ತು, ತಾನು ದಿವ್ಯಸೌಂದರ್ಯದಿಂದ ಕೂಡಿದ ಬಾಲಿಕೆಯ ರೂಪ ಧರಿಸಿ, ಹಿಮಾಲಯದ ತಪ್ಪಲು ಪ್ರದೇಶದಲ್ಲಿ ಸಖಿಯೊಡನೆ ಕೂಡಿ ಉಯ್ಯಾಲೆಯಾಡುವ ವಿನೋದದಿಂದ ಕೂಡಿದ್ದಳು. ಅಷ್ಟರಲ್ಲಿ ಶುಂಭ ನಿಶುಂಭರ ಸೇನಾಪತಿಗಳಾದ ಚಂಡ ಮುಂಡರೆಂಬುವರು ಈಕೆಯ ರೂಪ ಲಾವಣ್ಯವನ್ನು ಕಂಡು ಬೆರಗಾಗಿ, ತಮ್ಮ ಪ್ರಭುವ ದ ಶ ಂಭರಲ್ಲಿ ಬಿನ್ನವಿಸಿಕೊಂಡರು. ಶುಂಭನು ಸುಗ್ರೀವನೆಂಬ ರಾಕ್ಷಸನನ್ನು ಈಕೆಯ ಬಳಿಗೆ ಕಳಿಸಿ, ತನ್ನನ್ನಾಗಲಿ ತನ್ನ ತಮ್ಮನಾದ ನಿಶುಂಭನನ್ನಾಗಲಿ ಮದುವೆಯಾಗಬೇಕೆಂದು ಕೇಳಲು ಕಳುಹಿಸಿದನು. ದೇವಿಯು "ನನ್ನನ್ನು ಯಾರು ಯುದ್ಧದಲ್ಲಿ ಸೋಲಿಸುವರೋ ಅವರನ್ನು ನಾನು ಮದುವೆಯಾಗುವವಳು. ಇತರರನ್ನು ಮದುವೆಯಾಗುವುದಿಲ್ಲ. ಇದು ನನ್ನ ಪ್ರತಿಜ್ಞೆ." ಎಂದು ಹೇಳಿ ಕಳುಹಿಸಿದಳು. ಈ ಮಾತನ್ನು ಕೇಳಿದ ಶುಂಭನು ದೇವಿಯನ್ನು ಹಿಡಿದುತರಲು ದೂತರನ್ನೂ ಸೇನೆಯನ್ನೂ ಕಳುಹಿದನು ಎಲ್ಲವೂ ವ್ಯರ್ಥವಾಯಿತು, ಕೊನೆಗೆ ತಾನೂ ತನ್ನ ತಮ್ಮನೂ ಅಪಾರಸೈನ್ಯಸಮೇತರಾಗಿ ಬಂದು ಯುದ್ಧಮಾಡಿ ಇಬ್ಬರೂ ಸತ್ತರು.

೩೫. ಆ. ೩. ಪ. ೯. ಶಿವನು ಅಂಧಕಾರಾತಿ ಎಂಬುದಕ್ಕೆ ಕಥೆ : ಅಂಧಕನೆಂಬ ದೈತ್ಯನು ತಪಸ್ಸಿನ ಬಲದಿಂದ ಬಹುಪರಾಕ್ರಮಶಾಲಿಯಾಗಿ ದೇವತೆಗಳನ್ನೆಲ್ಲ ಜಯಿಸಿ ಲೋಕಗಳನ್ನು ಬಾಧಿಸುತ್ತಿದ್ದನು. ಆಗ ಬ್ರಹ್ಮಾದಿ ದೇವತೆಗಳು ಅಂಜಿ ಸ್ತ್ರೀವೇಷಧಾರಿಗಳಾಗಿ ದಿಕ್ಕಾಪಾಲಾಗಿ ಓಡತೊಡಗಿದರು. ಅಂಧಕಾಸುರನು ತನಗೆ ಎದುರಾಗಿ ನಿಲ್ಲುವವರೇ ಯಾರೂ ಇಲ್ಲವೆಂದುಕೊಂಡು ತನ್ನ ತೋಳ ತೀಟೆಯನ್ನು ತೀರಿಸಿ ಕೊಳ್ಳಲು ಕೈಲಾಸಕ್ಕೇ ಹೋಗಿ ಶಿವನನ್ನೇ ಯುದ್ಧಕ್ಕೆ ಕರೆದನು. ಶಿವನು ಮದೋನ್ಮತ್ತ ನಾದ ಅಂಧಕಾಸುರನನ್ನು ಕೈಯಲ್ಲಿದ್ದ ತ್ರಿಶೂಲದಿಂದ ತಿವಿದು ಮೇಲಕ್ಕೆತ್ತಿದನು. ಆಗ ಶಿವನ ಮಸ್ತಕದರ್ಶನ ಮಾತ್ರದಿಂದ ಸಕಲಪಾಪಗಳಿಂದ ಮುಕ್ತನಾದ ಅಂಧಕಾಸುರನು ಬ್ರಹ್ಮನಿಗೆ ಕಾಣದ ಶಿವನ ಶಿರವನ್ನು ನೋಡಿದೆನೆಂದು ಸಂತುಷ್ಟಿಹೊಂದಿ, ಶಿವನನ್ನು ಸ್ತುತಿಸತೊಡಗಿದನು. ಅದಕ್ಕೆ ಶಿವನು ಮೆಚ್ಚಿ, ವರವನ್ನು ಬೇಡೆಂದನು. ಆಗ ರಾಕ್ಷಸನು "ಶಿವನೇ ನಿನ್ನ ಮಸ್ತಕವನ್ನು ನೋಡಿದೆನು. ಈಗ ನಿನ್ನ ಪಾದದರ್ಶನ ಮಾಡಬೇಕಾಗಿದೆ. ಆದ್ದರಿಂದ ನನ್ನ ಎದೆಯ ಮೇಲೆ ತಾಂಡವನೃತ್ಯವನ್ನು ಮಾಡುವ ವರವನ್ನೇ ಕೊಡೆಂದನು. ಆಗ ಶಿವನು ನೆಟ್ಟಿರುವ ಶೂಲವನ್ನು ಪಾದದಿಂದ ಮೆಟ್ಟಿಕಿತ್ತು, ಅವನ ಎದೆಯ ಮೇಲೆ ತಾಂಡವನೃತ್ಯವನ್ನು ಮಾಡಿದನು.

೩೬. ಆ. ೪. ಪ. ೮೫ ಸಾನಂದಯೋಗಿಯು ಪಂಚಾಕ್ಷರಿಯನ್ನು ಹೇಳಿ ನರಕಿ ಗಳನ್ನು ಉದ್ಧರಿಸಿದ ಕಥೆ : ಪೂರ್ಣವಿತ್ತನ ಮಗನಾದ ಸಾನಂದನು ಗರುಡಪುರಾಣ ದಲ್ಲಿಯ ನರಕಯಾತನೆಯ ವರ್ಣನೆಯನ್ನು ಕೇಳಿ ವ್ಯಸನವುಳ್ಳವನಾಗಿ, ನಾರಕಿಗಳ ನಿವೃತ್ತಿಗೋಸುಗ ಯಮನ ಪಟ್ಟಣಕ್ಕೆ ಹೋದನು. ಯಮನು ಅರ್ಘ್ಯಪಾದ್ಯಾದಿಗಳಿಂದ ಅವರನ್ನು ಸತ್ಕರಿಸಿ, ತಮ್ಮ ಆಗಮನದ ಉದ್ದೇಶವೇನೆಂದು ಕೇಳಿದನು. ಸಾನಂದಋಷಿಯು "ಯಮನೇ ನರಕಿಗಳನ್ನು ನೋಡುವ ನಿಮಿತ್ತವಾಗಿ ಬಂದಿದ್ದೇನೆ. ಅವರನ್ನು ನನಗೆ ತೋರಿಸು" ಎಂದನು. ಆಗ ಯಮನು "ಸ್ವಾಮಿ, ತಾವು ಅವರನ್ನು ನೋಡಬಾರದು" ಎಂದು ಎಷ್ಟು ಹೇಳಿದರೂ ಕೇಳಲಿಲ್ಲ. ಮುನಿಯ ಆಗ್ರಹಕ್ಕೆ ಮಣಿದು ಯಮನು ನರಕಕ್ಕೆ ಅವನನ್ನು ಕರೆದೊಯ್ದು ತೋರಿಸಿದನು. ಅಲ್ಲಿ ಮಹಾಯಾತನೆಯಿಂದ ಬಳಲು ತ್ತಿರುವ ನರಕಿಗಳನ್ನು ಕಂಡು ದಯಾಭರಿತನಾಗಿ ಅಲ್ಲಿದ್ದ ನಾರಕಿಗಳೆಲ್ಲ ಕೇಳುವಂತೆ ಶಿವ ಪಂಚಾಕ್ಷರೀಮಂತ್ರವನ್ನು ನುಡಿಯಲು ಅವರೆಲ್ಲರೂ ಅದನ್ನು ಕೇಳಿ, ತಾವೂ ನುಡಿ ಯುತ್ತ ನರಕದಿಂದ ನಿವೃತ್ತರಾದರು.

೩೭. ಆ ೪. ಪ ೮೯. ಉಪಮನ್ಯುಗೆ ಅಮೃತವನ್ನುಂಟುಮಾಡಿದ ಶಿವಮಂತ್ರದ ಕಥೆ : ವ್ಯಾಘ್ರಪಾದನೆಂಬ ಋಷಿಯ ಮಗನಾದ ಉಪಮನ್ಯುವು ಬಾಲ್ಯದಲ್ಲಿ ತಾಯಿ ಯಲ್ಲಿ ಹಾಲನ್ನು ಕೇಳಿದನು. ಕಡುಬಡವರಾದ ಅವರ ಮನೆಯಲ್ಲಿ ಹಾಲಿರಲಿಲ್ಲ. ಮಗನ ಹಟ ಹೆಚ್ಚಾಯಿತು. ಆಗ ತಾಯಿಯು ಅಕ್ಕಿಯಿಹಿಟ್ಟನ್ನೇ ನೀರಿನಲ್ಲಿ ಕದಡಿ ಹಾಲೆಂದು

ಕೊಟ್ಟಳು. ಅದನ್ನರಿತ ಉಪಮನ್ಯುವು ಅದನ್ನು ಹಾಲೆಂದು ಸ್ವೀಕರಿಸದೆ ಹಾಲಿಗಾಗಿ ಶಿವನನ್ನೇ ಕುರಿತು ತಪಸ್ಸುಮಾಡಲು ಹಿಮಾಲಯಕ್ಕೆ ತಾಯಿಯ ಸಮ್ಮತಿ ಪಡೆದು ಹೊರಟನು. ತಾಯಿ ಉಪದೇಶಿಸಿದ ಶಿವಮಂತ್ರೋಚ್ಚಾರಣೆಮಾಡಿ, ಶಿವನನ್ನೊಲಿಸಿ ಕೊಂಡು ಅವನಿಂದ ಹಾಲಿನ ಸಮುದ್ರದ ಆಧಿಪತ್ಯವನ್ನೇ ಪಡೆದನು.

೩೮. ಆ. ೪. ಪ. ೭೯. ಧೂರ್ಜಟಿಯ ಪುತ್ರಂ ಕ್ರೌಂಚಮಂ ಭೇದಿಸಿದ ಕಥೆ : ಹಿಮವಂತನ ಮಗನಾದ ಮೈನಾಕನಮಗನೇ ಕ್ರೌಂಚವೆಂಬ ಹೆಸರಿನ ಪರ್ವತ. ತಾರಕಾಸುರ ಸಂಹಾರಕ್ಕಾಗಿ ಷಣ್ಮುಖನು ದೇವಸೇನಾಧಿಪತ್ಯ ವಹಿಸಿ ಯುದ್ಧಭೂಮಿಗೆ ಬರಲಾಗಿ, ಭಯಂಕರವಾಗಿ ನಡೆದ ಆ ಯುದ್ಧದಲ್ಲಿ ತಾರಕಾಸುರನು ಮೂರ್ಛೆಹೋಗಿ ಸ್ವಲ್ಪಹೊತ್ತಿನಲ್ಲಿ ಎಚ್ಚರಗೊಂಡು ಯುದ್ಧಮಾಡಲು ಸಾಮರ್ಥ್ಯವಿಲ್ಲದೆ ಕ್ರೌಂಚ ಪರ್ವತದ ಮರೆಹೊಕ್ಕನು. ಕುಮಾರಸ್ವಾಮಿಯು ಅಡಗಿದ ತಾರಕನ ಸುದ್ದಿಯೇ ತಿಳಿ ಯದೆ ರಣರಂಗದ ಎಲ್ಲ ದಿಕ್ಕುಗಳಲ್ಲೂ ಹುಡುಕಿದರು. ಹರಿಯು ಕ್ರೌಂಚದ ಮರೆಯಲ್ಲಿ ರುವುದನ್ನು ತಿಳಿದು ಇಂದ್ರನಿಗೆ ತಿಳಿಸಿದನು. ಇಂದ್ರನು ಷಣ್ಮುಖನಿಗೆ ಈ ವಿಷಯವನ್ನು ಬಿನ್ನವಿಸಿಕೊಂಡನು. ಆಗ ಕುಮಾರಸ್ವಾಮಿಯು ಶಾಂಭವಾಸ್ತ್ರವನ್ನು ಬಿಟ್ಟು ಕ್ರೌಂಚ ಪರ್ವತವನ್ನು ಸೀಳಿ ಅದರ ಮರೆಯಲ್ಲಿದ್ದ ತಾರಕನನ್ನು ಕೊಂದುಹಾಕಿದನು.

೩೯. ಆ. ೧೩. ಪ. ೨೧. ಧರ್ಮರಾಜನು ನೀರು ಕುಡಿಯುವುದು ಬಿಟ್ಟು ತಮ್ಮಂದಿರ ಪ್ರಾಣ ಪಡೆದ ಕಥೆ : ಪಾಂಡವರು ದ್ವೈತವನದಲ್ಲಿದ್ದಾಗ ಅವರ ಬಳಿಗೆ ಒಬ್ಬ ಬ್ರಾಹ್ಮಣನು ಓಡಿಬಂದು "ಮರಕ್ಕೆ ತೂಗುಹಾಕಿದ್ದ ನನ್ನ ಅರಣಿಯ ಜೊತೆಯು, ಆ ಮರಕ್ಕೆ ಮೈತಿಕ್ಕುತ್ತಿದ್ದ ಜಿಂಕೆಯ ಕೊಂಬಿಗೆ ಸಿಕ್ಕು, ಆ ಅರಣಿ ಸಮೇತವಾಗಿ ಅದು ಓಡಿಹೋಯಿತು. ಅವನ್ನು ನನಗೆ ತಂದುಕೊಡಿರಿ. ಅವು ಇಲ್ಲ ದಿದ್ದರೆ ನನ್ನ ಅಗ್ನಿಹೋತ್ರಕ್ಕೆ ಭಂಗವುಂಟಾಗುತ್ತದೆ" ಎಂದನು. ಆಗ ಪಾಂಡವರೆಲ್ಲ ಧನುರ್ಧಾರಿಗಳಾಗಿ ಜಿಂಕೆಯ ಬೆನ್ನುಹತ್ತಿದರು. ಏನು ಮಾಡಿದರೂ, ಎಷ್ಟೇ ಬಾಣ ಪ್ರಯೋಗಮಾಡಿದರೂ ಜಿಂಕೆಯನ್ನು ಹೊಡೆಯಲಾಗಲಿಲ್ಲ. ಹಸಿವು, ನೀರಡಿಕೆಯಿಂದ ಎಲ್ಲರೂ ಬಳಲಿಹೋದರು ; ಒಂದು ಆಲದಮರದಡಿ ವಿಶ್ರಮಿಸಿದರು. ನಕುಲನು ಒಂದು ಗಿಡವನ್ನೇರಿ ಎಲ್ಲಿಯಾದರೂ ನೀರು ಇರುವುದೋ ಎಂದು ನೋಡುವಷ್ಟರಲ್ಲಿ ದೂರದಲ್ಲಿ ಒಂದು ಸರೋವರವು ಕಾಣುವುದನ್ನು ತಿಳಿಸಿದನು ಧರ್ಮರಾಯನು "ನೀನು ಹೋಗಿ ನೀರು ಕುಡಿದು ನಮಗೆಲ್ಲರಿಗೂ ನೀರು ತಂದುಕೊಡು"ಎಂದನು. ಅದರಂತೆ ನಕುಲನು ಅಲ್ಲಿಗೆ ಹೋಗಿ ನೀರು ಕುಡಿಯಬೇಕೆಂದು ಕೆರೆಗಿಳಿದನು. ಆಗ "ಬೇಡಪ್ಪ ಈ ಸರೋವರ ನನ್ನದು ; ನಾನು ಕೇಳುವ ಪ್ರಶ್ನೆಗಳಿಗೆ ಉತ್ತರಕೊಟ್ಟು ನೀರು ಕುಡಿ" ಎಂದು ಅಶರೀರವಾಣಿಯಾಯಿತು. ನೀರಡಿಸಿದ್ದ ನಕುಲನು ಆ ಮಾತನ್ನು ಲಕ್ಷಿಸದೆ ನೀರುಕುಡಿದು ನೆಲದಮೇಲೆ ಬಿದ್ದುಬಿಟ್ಟನು. ಎಷ್ಟು ಹೊತ್ತಾದರೂ ನಕುಲನು ಬಾರ ದಿರುವುದನ್ನು ಕಂಡು ಸಹದೇವನನ್ನು ಕಳಿಸಿದರು. ಅವನು ಅಲ್ಲಿ ಸತ್ತುಬಿದ್ದಿದ್ದ ಅಣ್ಣ

ನನ್ನು ಕಂಡನು. ಮೊದಲು ನೀರು ಕುಡಿದು ಆಮೇಲೆ ಏನೆಂಬುದನ್ನು ವಿಚಾರಿಸೋಣ ವೆಂದು ನೀರಿಗಿಳಿಯಲು ಅವನಿಗೂ ನಕುಲನಿಗಾದ ಹಾಗೆಯೇ ಆಕಾಶವಾಣಿಯಾಯಿತು. ಅವನೂ ಅಲಕ್ಷ್ಯಮಾಡಿ ನೀರು ಕುಡಿದು ಭೂಮಿಯ ಮೇಲೆ ಬಿದ್ದನು. ಅರ್ಜುನ ಬಂದನು. ಭೀಮ ಬಂದನು. ಅವರ ಗತಿಯೂ ಹೀಗೆಯೇ ಆಯಿತು. ಕೊನೆಗೆ ಧರ್ಮ ರಾಜ ಬಂದನು. ತಮ್ಮಂದಿರ ಈ ದಾರುಣಸ್ಥಿತಿಯನ್ನು ಕಂಡು ಅವನಿಗೆ ಅಪಾರ ದುಃಖವುಂಟಾಯಿತು. ಏನು ಕಾರಣ ಇವರ ಮರಣವಾಗಿರಬಹುದೆಂದು ಊಹಿಸುತ್ತ ನೀರೊಳಗಿಳಿದನು. ಆದರೆ ದುಡುಕಿ ನೀರನ್ನು ಕುಡಿಯಲು ಇಚ್ಛಿಸಲಿಲ್ಲ. ಅಷ್ಟರಲ್ಲಿ ಅಂತರಿಕ್ಷದಿಂದ "ಅಯ್ಯಾ, ನಾನು ಇಲ್ಲಿ ಮೀನುಗಳೇ ಮೊದಲಾದ ಜಲಚರಗಳನ್ನು ತಿಂದು ಜೀವಿಸುವ ಬಕಪಕ್ಷಿ. ನಿನ್ನ ತಮ್ಮಂದಿರನ್ನು ಸಾಯಿಸಿದ್ದು ನಾನೇ. ಅವರ ಹಾಗೆ ನನ್ನ ಪ್ರಶ್ನೆಗಳಿಗೆ ಅಲಕ್ಷ್ಯಮಾಡಿ ನೀರು ಕುಡಿದರೆ ನಿನ್ನ ಗತಿಯೂ ಹಾಗೇ ಆಗುವುದೆಂದು" ಹೇಳಿತು. ಧರ್ಮರಾಜನು ಇದು ಪಕ್ಷಿಯಲ್ಲವೆಂದು ಭಾವಿಸಿದನು. ಪಕ್ಷಿಯ ರೂಪ ತ್ಯಜಿಸಿ ಯಕ್ಷನು ಪ್ರಕಟವಾಗಿ ಅನೇಕ ಪ್ರಶ್ನೆಗಳನ್ನು ಕೇಳಿದನು. ಧರ್ಮ ರಾಯನು ಆ ಎಲ್ಲ ಪ್ರಶ್ನೆಗಳಿಗೆ ಧರ್ಮಸಮ್ಮತ ಉತ್ತರ ನೀಡಿದನು. ಯಕ್ಷನು ಸಂತು ಷ್ಟನಾಗಿ, ತಮ್ಮಂದಿರನ್ನೆಲ್ಲ ಬದುಕಿಸಿದನು. ಆಮೇಲೆ ಧರ್ಮರಾಯನು ನೀರು ಕುಡಿ ದನು. ಅನಂತರ ಜಿಂಕೆಯ ರೂಪದಿಂದ ಬ್ರಾಹ್ಮಣನ ಅರಣಿಗಳನ್ನು ಹೊತ್ತುತಂದ ಯಕ್ಷನು ಆ ಅರಣಿಗಳನ್ನು ಧರ್ಮರಾಯನಿಗೆ ಕೊಟ್ಟನು. ಧರ್ಮರಾಯನು ಅರಣಿ ಗಳನ್ನು ಬ್ರಾಹ್ಮಣನಿಗೆ ಕೊಟ್ಟು ಕಳಿಸಿದನು. ಈ ಯಕ್ಷನು ಸಾಕ್ಷಾತ್ ಯಮಧರ್ಮ ರಾಜನೇ ಆಗಿದ್ದನು.

೪೦. ಆ. ೧೩. ಪದ್ಯ ೨೪. ಪುರಹರನಿಟ್ಟ ಪುಲ್ಲಮುರಿಯ ಕಥೆ : ಬ್ರಹ್ಮ, ವಿಷ್ಣು, ಇಂದ್ರ, ಅಗ್ನಿ ಮೊದಲಾದ ದೇವತೆಗಳಿಗೆಲ್ಲ ತಮ್ಮಷ್ಟಕ್ಕೆ ತಾವೇ ಶಕ್ತಿವಂತರೆಂಬ ಅಹಂಕಾರವುಂಟಾಯಿತು. ಅವರ ಆ ಗರ್ವವನ್ನು ಹೋಗಲಾಡಿಸಲು ಶಿವನು ಒಬ್ಬ ಯಕ್ಷನ ರೂಪಧರಿಸಿ, ದೇವತೆಗಳ ಮಧ್ಯದಲ್ಲಿ ಪ್ರಕಟನಾದನು. ದೇವತೆಗಳು "ಎಲೋ ಯಕ್ಷನೇ, ನೀನು ನಮ್ಮಗಳ ಸಾಮರ್ಥ್ಯವನ್ನರಿಯದೆ ಏನು ಕಾರಣ ಬಂದಿರುವೆ?" ಎನ್ನಲು ಯಕ್ಷನು ಒಬ್ಬೊಬ್ಬರನ್ನೂ ಕುರಿತು–ನೀವು ಯಾರು? ನಿಮ್ಮ ಶಕ್ತಿ ಸಾಮರ್ಥ್ಯಗಳೇನು? ಇತ್ಯಾದಿಯಾಗಿ ಕೇಳಿದನು. ಅವರು ಒಬ್ಬೊಬ್ಬರೂ ಉಬ್ಬುಬ್ಬಿ.ತಮ್ಮ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಹೇಳಿಕೊಂಡರು. ಆಗ ಯಕ್ಷರೂಪದ ಶಿವನು ಅವರ ಮಧ್ಯದಲ್ಲಿ ಒಂದು ಚಿಕ್ಕ ಹುಲ್ಲಿನ ಸಿಂಬೆಯನ್ನು ಇಟ್ಟು, ನಿಮ್ಮ ನಿಮ್ಮ ಶಕ್ತಿಯನ್ನು ಇದರ ಮೇಲೆ ತೋರಿಸಿರೆಂದು ಹೇಳಿ, ಅವರಲ್ಲಿರುವ ತನ್ನ ಶಕ್ತಿಯನ್ನು ಸೆಳೆದುಕೊಂಡನು. ದೇವತೆ ಗಳು ಸ್ವಸಾಮರ್ಥ್ಯವಿಲ್ಲದೆ ಆ ಹುಲ್ಲುಸಿಂಬೆಯನ್ನು ಅಲ್ಲಾಡಿಸುವುದಕ್ಕೂ ಆಗದೆ ನಾಚಿಕೆಯಿಂದ ತಲೆತಗ್ಗಿಸಿದರು.

೪೧. ಆ. ೧೩. ಪ. ೧೦೦. ಮನುಚೋಳ : ಚೋಳದೇಶದ ಕಮಲಾಲಯವೆಂಬ ಪಟ್ಟಣದಲ್ಲಿ ರಾಜ್ಯಭಾರಮಾಡುತ್ತಿದ್ದ ಮನುಚೋಳನೆಂಬ ಈ ದೊರೆ ನ್ಯಾಯನಿಷ್ಠುರಿ ಎನಿಸಿದ್ದನು. ಈ ರಾಜನಮಗ 'ಚಂಚಲ' ಎಂಬುವನು. ಚಂಚಲನು ಒಂದು ದಿನ ರಥವನ್ನೇರಿ ಬರುತ್ತಿರುವಾಗ ಒಂದು ಹಸುವಿನ ಕರುವಿನ ಮೇಲೆ ರಥ ಹರಿದ ಪರಿಣಾಮವಾಗಿ ಆ ಕರುವು ಸುತ್ತುಹೋಯಿತು. ಅದರ ತಾಯಿಯು ರಾಜಾಸ್ಥಾನಕ್ಕೆ ಬಂದು ನ್ಯಾಯದ ಘಂಟೆಯನ್ನು ಬಾರಿಸಿತು. (ಅಂದರೆ ಯಾರಿಗೆ ಅನ್ಯಾಯವಾಗಿದೆಯೋ ಅವರು ರಾಜನಿಗೆ ದೂರುಕೊಡಲು ಒಂದು ಗಂಟೆಯನ್ನು ಅರಮನೆಯಲ್ಲಿ ಕಟ್ಟಿಸಿ ಅದರ ಹಗ್ಗವನ್ನು ಹೊರಭಾಗದಲ್ಲಿಟ್ಟಿದ್ದನು. ಹಗ್ಗವನ್ನು ಹಿಡಿದು ಜಗ್ಗಿದಾಗ ಗಂಟೆ ಬಾರಿಸುತ್ತಿತ್ತು.) ರಾಜನು ಗಂಟೆ ಬಾರಿಸಿದವರನ್ನು ಒಳಗೆ ಕರೆತರಲು ದೂತರಿಗೆ ಹೇಳಿದನು. ದೂತರು ಬಂದು ನೋಡಿ, ಬಾರಿಸಿದವರು ಮನುಷ್ಯರಲ್ಲವೆಂದೂ ಒಂದು ಹಸುವೆಂದೂ ತಿಳಿಸಿದರು. ರಾಜನು ಆಶ್ಚರ್ಯದಿಂದ ಹಸುವಿಗಾದ ಅನ್ಯಾಯವೇನೆಂದು ತಿಳಿದು ಅದರ ಕರುವನ್ನು ಕೊಂದ ತನ್ನ ಮಗನನ್ನೇ ತನ್ನ ರಥದ ಗಾಲಿಯ ಅಡಿಗೆ ಹಾಕಿಸಿ ಕೊಲ್ಲಿಸಿದನು. ಶಿವನು ಇವನ ನ್ಯಾಯಕ್ಕೆ ಮೆಚ್ಚಿ ಮಗನನ್ನು ಬದುಕಿಸಿದ್ದಲ್ಲದೆ ರಾಜನಿಗೆ ಗಣಪದವಿಯನ್ನಿತ್ತನು. (ರಾಜನನ್ನು ಪರೀಕ್ಷಿಸಲು ಶಿವನೇ ಹಸುವಾಗಿಯೂ, ಯಮನೇ ಕರುವಾಗಿಯೂ ಬಂದಿದ್ದರೆಂದು ನಂಬಿಕೆ)

೪೨. ಆ. ೧೩. ಪ. ೧೦೦. ಚಂಡೇಶ್ವರ: ಕಾವೇರೀತೀರದಲ್ಲಿ ಚೋಳಮಂಡಲಕ್ಕೆ ಸೇರಿದ ತಿರುಚ್ಚೇಯ್ಞಲೂರಲ್ಲಿ ಅಚ್ಯುತಭಟ್ಟ-ಸಾವಿತ್ರಿಯರೆಂಬ ದಂಪತಿಗಳಿದ್ದರು. ಅವರಲ್ಲಿ ಅನೇಕ ಹಸುಗಳಿದ್ದವು. ಅವರು ಆ ಹಸುಗಳನ್ನು ಕಾಯಲು ತಮ್ಮ ಮಗನಾದ ಚಂಡೇಶನೆಂಬುವನನ್ನು ನೇಮಿಸಿದ್ದರು. ಆ ಹುಡುಗನು ಗೋವುಗಳನ್ನು ಮೇಯಲು ಬಿಟ್ಟು ತಾನು ಮಳಲಲಿಂಗವನ್ನು ಪೂಜಿಸುತ್ತಿದ್ದನು. ಇವನ ಪೂಜೆ ಮುಗಿದ ಮೇಲೆ ಆ ಹಸುಗಳು ತಾವಾಗಿ ಬಂದು ಆ ಮಳಲಲಿಂಗದಮೇಲೆ ಹಾಲು ಸುರಿಸುತ್ತಿದ್ದವು. ಇದರಿಂದ ಗೋವುಗಳ ಮೊಲೆಯಲ್ಲಿ ಹಾಲು ಇರುತ್ತಿರಲಿಲ್ಲ. ಅಚ್ಯುತಭಟ್ಟನು ಹೀಗಾಗಲು ಕಾರಣವೇನೆಂದು ವಿಚಾರಿಸಿ ನಿಜವೃತ್ತಾಂತ ತಿಳಿದು, ಮಗನು ಮಾಡಿದ ಮಳಲಲಿಂಗವನ್ನು ತುಳಿದು ನಾಶಮಾಡಲು ಕಾಲನ್ನೆತ್ತಿದಾಗ ಚಂಡೇಶನು ತಂದೆಯ ಕಾಲುಗಳನ್ನೇ ಕತ್ತರಿಸಿ ಹಾಕಿದನು. ಚಂಡೇಶನ ಭಕ್ತಿಗೆ ಮೆಚ್ಚಿದ ಶಿವನು ಅವನಿಗೂ ಅವನ ತಂದೆಗೂ ಕೈಲಾಸ ಪದವಿಯನ್ನಿತ್ತನು.

೪೩. ಆ. ೧೪ ಪ. ೧೫೬. ತಿರುಮೂಲರು : ತಿರವೂರೆಂಬಲ್ಲಿ ಓರ್ವ ಗೋಪಾಲನು ಅನೇಕ ಗೋವುಗಳನ್ನಿಟ್ಟುಕೊಂಡು ಮೇಯಿಸಿಕೊಂಡು ಜೀವಿಸುತ್ತಿದ್ದನು. ಅವನು ಅಕಸ್ಮಾತ್ ಅಡವಿಯಲ್ಲಿದ್ದಾಗ ಸತ್ತನು. ಅವನ ಹೆಂಡತಿ ಗೋವುಗಳನ್ನೆಲ್ಲ ತಿರುಮೂಲ ದೇವರಿಗೆ ಕೊಟ್ಟುಬಿಟ್ಟಳು. ತಿರುಮೂಲರು ಆ ಗೋವುಗಳನ್ನಿಟ್ಟುಕೊಂಡು ತ್ರಿಕಾಲದಲ್ಲೂ ಶಿವಲಿಂಗಕ್ಕೆ ಹಾಲಿನ ಮಜ್ಜನ ಮಾಡಿಕೊಂಡು ಪೂಜಿಸುತ್ತ ಭಕ್ತಿಜೀವನ ನಡೆಸಿಕೊಂಡು

ಇದ್ದನು. ಹೀಗೆ ಕೆಲವು ದಿನ ಸಾಗಲು ಆಕಳುಗಳೆಲ್ಲ ಒಂದೊಂದಾಗಿ ಸತ್ತುಹೋದವು. ದೇವರಿಗೆ ತ್ರಿಕಾಲದಲ್ಲಿ ಹಾಲಿನ ಅಭಿಷೇಕದ ನೇಮ ತಪ್ಪಿತೆಂದು ಇಪ್ಪತ್ತೊಂದು ದಿನ ಉಪವಾಸವಿದ್ದನು. ಶಿವನು ಪಾರ್ವತಿಗೆ ಕಾಮಧೇನುವಿನ ರೂಪದಲ್ಲಿ ಹಾಲನ್ನು ಆ ಭಕ್ತನಿಗೆ ಕರೆಯಲು ತಿಳಿಸಿದನು. ಹಾಗೆಯೇ ಪಾರ್ವತಿ ಮಾಡಿದಳು. ಅವನ ಭಕ್ತಿಗೆ ಮೆಚ್ಚಿ ಶಿವನು ಅವನಿಗೆ ಗಣಪದವಿಯನ್ನಿತ್ತನು.

೪೪. ಆ ೧೪. ಪ ೧೫೬. ಚೇರಮಾಂಕ : ಚೇರಮರಾಯ, ಚಾರಮರಾಯ ಎಂಬ ನಾಮಾಂತರಗಳಿಂದ ಕರೆಯಿಸಿಕೊಳ್ಳುವ ಈ ಶರಣನು ಕೇರಳದೇಶದ ಕುಡುವಾಲೂ ರೆಂಬಲ್ಲಿ ರಾಜನಾಗಿದ್ದನು. ಪರಮಶಿವಭಕ್ತನಾದ ಈತನು ಶಿವಭಕ್ತೆಯಾದ ತನ್ನ ಹೆಂಡತಿ ಯಿಂದ ರುದ್ರಾಕ್ಷಿಯ ಮಹಿಮೆಯನ್ನು ತಿಳಿದವನಾಗಿ, ತಾನೂ ತನ್ನ ಪ್ರಜಾವರ್ಗ ಮತ್ತು ಆನೆ ಕುದುರೆ ಸಹಿತವಾಗಿ ರುದ್ರಾಕ್ಷಿಗಳನ್ನು ಧಾರಣಮಾಡುವಂತೆ ತಿಳಿಸಿದ್ದನು. ನಿತ್ಯವೂ ತಿರುವಂಚಿ ಕಾಳನಾಥನೆಂಬ ಹೆಸರಿನ ಶಿವಲಿಂಗವನ್ನು ಪೂಜಿಸುತ್ತ ನೃತ್ಯ ಗಾಯನ ವಾದ್ಯಾದಿಗಳಿಂದ ಸೇವೆ ಮಾಡುತ್ತಿದ್ದನು. ನಂಬಿಯಣ್ಣನಿಗೆ ಶಿವನು ಪ್ರತಿ ದಿನವೂ ಪಡಿಹೊನ್ನು ಕೊಡುತ್ತಿದ್ದನು. ಅದನ್ನು ಕೇಳಿದ ಚಾರಮರಾಯ ಅವನನ್ನು ಕಾಣಲು ಹೊರಟನು. ಇವನು ನಂಬಿಯಲ್ಲಿಗೆ ಹೋದಾಗ ನಂಬಿಯು ಪೂಜಿಸುತ್ತಿ ದ್ದನು. ಇದನ್ನು ಕಂಡ ಚಾರಮರಾಯ ಶಿವನಿಗೆ 'ನನ್ನ ಅಪ್ಪಣೆಯಿಲ್ಲದೆ ನಂಬಿಗೆ ಹೊನ್ನು ಕೊಟ್ಟರೆ ನನ್ನಾಣೆ ; ನಿನ್ನ ಭಕ್ತರಾಣೆ' ಎಂದು ಆಣೆಯಿಡಲಾಗಿ ನಂಬಿಗೆ ಶಿವ ನಿಂದ ಪ್ರತಿನಿತ್ಯ ದೊರೆಯುವ ಹೊನ್ನು ದೊರೆಯದಾಯಿತು. ಕಾರಣವನ್ನರಿತ ನಂಬಿಯು ಚೇರಮಾಂಕನನ್ನು ಶರಣುಹೊಕ್ಕನು. ಆಮೇಲೆ ತಾನಿಟ್ಟ ಆಣೆ ತೆಗೆದು ನಂಬಿಗೆ ಹೊನ್ನು ದೊರಕುವಂತೆ ಮಾಡಿದನು.

ನಂಬಿಯು ಕೈಲಾಸಕ್ಕೆ ಹೋದನೆಂಬ ಸುದ್ದಿಯನ್ನು ತಿಳಿದು ಅವನ ದರ್ಶನಕ್ಕೆ ತಾನೂ ಕೈಲಾಸಕ್ಕೆ ಹೊರಟನು. ಆದರೆ ಮಾರ್ಗ ಸಿಗದೆ ಸಂಜೀವಿನೀವನದಲ್ಲಿದ್ದ ಗೊಗ್ಗವ್ವೆಯಿಂದ ಉಪದೇಶ ಪಡೆದು, ಆಕೆ ಸೂಚಿಸಿದ ಧೂಪಧೂಮದ ಮಾರ್ಗವನ್ನು ಹಿಡಿದು ಕೈಲಾಸಕ್ಕೆ ಹೋದನು. ಇವನು ಕೈಲಾಸಕ್ಕೆ ಹೋದ ಬಗೆಗೆ ಅನೇಕ ರೀತಿಯ ಕಥೆಗಳನ್ನು ಬೇರೆ ಬೇರೆಯವರು ಅನೇಕ ರೀತಿಯಲ್ಲಿ ಹೇಳಿದ್ದಾರೆ. ಸಾಮಾನ್ಯವಾಗಿ ಅನೇಕ ವೀರಶೈವಕವಿಗಳು ಇವನ ಮಹಿಮೆಯನ್ನು ಕೊಂಡಾಡಿದ್ದಾರೆ.

೪೫. ಆ. ೧೪. ಪ. ೧೫೬. ಮುರುಘರು : ಇವರಿಗೆ ನಮಃಶಿವಾಯ ಮುರುಘ, ಮುರುಘದೇವ ಇತ್ಯಾದಿ ನಾಮಾಂತರಗಳೂ ಉಂಟು. ಚೋಳದೇಶದಲ್ಲಿ ಪ್ರಸಿದ್ಧವಾ ಗಿದ್ದ ತಿರುಪಗಲ್ಲೂರದಲ್ಲಿದ್ದ ಇವನು ಶಿವಪಂಚಾಕ್ಷರಿಯನ್ನಲ್ಲದೆ ಮತ್ತೇನನ್ನೂ ನುಡಿಯುತ್ತಿರಲಿಲ್ಲ. ಒಂದು ದಿನ ಚಂದ್ರಮೌಳೀಶ್ವರನೆಂಬ ಹೆಸರಿನ ಶಿವಲಿಂಗವನ್ನು ಪೂಜಿಸುತ್ತ ಆನಂದಪರವಶನಾಗಿ ಮೈಮರೆತನು. ಆ ಲಿಂಗಮುಖದಿಂದಲೇ ಶಿವನು ಮೈದೋರಿ ಅವನಿಗೆ ಗಣಪದವಿಯನ್ನು ದಯಪಾಲಿಸಿದನು.

೪೬. ಆ. ೧೪. ಪ. ೧೫೬. ಇರಿವದಾಂಡಾರಿ : ಇರಿತ್ತಾಂಡಿ ಎಂಬುದು ಇವರ ಹೆಸರು. ಚೋಳದೇಶದ 'ಚಲ್ಲವಿರುವಾವೂರ್' ಎಂಬಲ್ಲಿ ಇದ್ದನು. ಹುಟ್ಟುಗುರುಡ. ದಿನಾಲು ಶಿವನಿಗೆ ಮಜ್ಜನಮಾಡಲು ನೀರು ತರುವ ಬಾವಿಗೂ ಶಿವನಿಲಯಕ್ಕೂ ಸೂತ್ರವನ್ನು ಕಟ್ಟಿಕೊಂಡಿದ್ದನು. ಕೆಲವು ಕುಹಕಿಗಳು ಹಗ್ಗವನ್ನು ಕತ್ತರಿಸಿಹಾಕಿದರು. ಕೋಪಗೊಂಡ ಈ ಶರಣನು ತಾನು ಕಣ್ಣು ಪಡೆದು ಆ ಕುಹಕಿಗಳನ್ನು ಕಿವುಡರನ್ನಾಗಿ ಮಾಡಿದನು.

೪೭. ಆ. ೧೪. ಪ. ೧೫೬. ಸೌಂದರ : ಸೌಂದರನಂಬಿ, ನಂಬಿಯಣ್ಣ, ಇತ್ಯಾದಿ ನಾಮಾಂತರಗಳುಳ್ಳ ಈತನು ತಿರುವಾವಲೂರಿನಲ್ಲಿದ್ದ ದೊಡ್ಡ ಶಿವಭಕ್ತ. ಜಡೆಯನ್ನೈನಾರ್ ಮತ್ತು ಯಸ್ಯಜ್ಞಾನಿದೇವಿಯರ ಪುತ್ರ. ಬಾಲಕನಿದ್ದಾಗಲೇ ಅನೇಕ ಪವಾಡಗಳನ್ನು ಮೆರೆದನು. ಇವನಿಗೆ ೧೬ ವರ್ಷವಾದಾಗ ತಂದೆತಾಯಿಯರು ಲಗ್ನ ಮಾಡಲು ಸಿದ್ಧತೆ ಮಾಡಿದರು. ಲಗ್ನ ಪ್ರಾರಂಭವಾಯಿತು. ಶಿವನು ವೃದ್ಧನ ವೇಷದಿಂದ ಬಂದು ಮದುವೆಯಲ್ಲಿ ರಗಳೆಯನ್ನೇ ಎಬ್ಬಿಸಿದನು. ನಂಬಿಯು ಕೋಪಗೊಂಡು ಅವನನ್ನು ಹೊಡೆಯಲು ಬೆನ್ನಟ್ಟಿದನು. ವೃದ್ಧನು ಶಿವಲಿಂಗದಲ್ಲಿ ಐಕ್ಯಗೊಂಡನು. ಆಗ ನಂಬಿಗೆ ಅರಿವಾಗಿ ಕಣ್ಣೀರು ಸುರಿಸುತ್ತ ಶಿವನಲ್ಲಿ ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಬೇಡುತ್ತಿರಲು, ಶಿವನು ಪ್ರತ್ಯಕ್ಷನಾಗಿ ನಂಬಿಗೆ ಸುವರ್ಣತಾಳಗಳನ್ನು ಕೊಟ್ಟು ತನ್ನನ್ನು ಸ್ತೋತ್ರಮಾಡುವಂತೆ ತಿಳಿಸಿದನು. ಶಿವನು ಇವನಿಗೆ ದಿನಾಲು ಪಡಿ ಹೊನ್ನು ಕೊಡುತ್ತಿದ್ದ. ಆ ಹೊನ್ನಿನಿಂದ ಶಿವಭಕ್ತರನ್ನು ತಣಿಸುತ್ತಿದ್ದನು. ಮುಂದೆ ನಂಬಿಗೆ ಪರವೆನಾಚಿಯೆಂಬ ಕನ್ಯೆಯನ್ನು ತಂದು ಲಗ್ನಮಾಡುವ ಕಾರ್ಯದಲ್ಲಿ ಶಿವನೇ ಕುಂಟಣಿಯಾಗಿ ಹೋಗಿ ಪರವೆನಾಚಿಯ ತಾಯಿಗೆ ನಂದಿಯುಂಡಿಗೆ (ನಂದಿಯ ಮುದ್ರೆ)ಯ ಸಾವಿರ ಹೊನ್ನನ್ನು ಕೊಟ್ಟು ಪರವೆನಾಚಿಯು ನಂಬಿಯ ಹೆಂಡತಿಯಾಗುವಂತೆ ಮಾಡಿದನು. ಕೆಲದಿನಗಳ ಮೇಲೆ ಸಂಕಿಲಿನಾಚಿಯಲ್ಲಿ ಅನುರಕ್ತನಾಗಿ ಶಿವನಲ್ಲಿ ಬೇಡಿಕೊಂಡನು. ಶಿವನು ಸಂಕಿಲಿನಾಚಿಯರ ತಂದೆತಾಯಿಯಲ್ಲಿ ಜಂಗಮರೂಪದಿಂದ ಹೋಗಿ, ಅವಳನ್ನು ನಂಬಿಗೆ ಕೊಡುವಂತೆ ಹೇಳಿ ಲಗ್ನಮಾಡಿಸಿದನು. ಸಂಕಿಲಿನಾಚಿಯ ಮೋಹದಲ್ಲಿ ಮುಳುಗಿದ್ದ ಈತನು ಪರವೆನಾಚಿಯನ್ನು ಅನೇಕ ವರ್ಷ ಮರೆತನು. ವಿರಹ ವ್ಯಥೆಯಲ್ಲಿ ಮುಳುಗಿದ ಪರವೆಯ ವೈಗಂಪು ನಂಬಿಯ ಮೂಗಿಗೆ ತಾಗುವಂತೆ ಶಿವನು ಮಾಡಲು, ನಂಬಿಯು ಪರವೆಯಲ್ಲಿ ಅನುರಕ್ತನಾಗಿ ಸಂಕಿಲಿಯನ್ನು ತೊರೆದು ಹೋಗುವಾಗ ದಾರಿಯಲ್ಲಿ ಕಣ್ಣು ಇಂಗಿಹೋದುವು. ಕಂಚಿಯ ಕಾಮಾಕ್ಷಿ, ತಿರುವಾವಲೂರಿನ ವಲ್ಮೀಕನಾಥರುಗಳನ್ನು ಭಜಿಸಿ ಕಣ್ಣು ಪಡೆದನು. ಶಿವನು ಕುಂಟಣಿಯ ವೇಷದಿಂದ ಬಂದು ಸಂಕಿಲಿನಾಚಿ, ಪರವೆನಾಚಿಯರನ್ನು ನಂಬಿಯಲ್ಲಿ ಕೂಡಿಸಿದನು. ಕೊನೆಗೆ ಶಿವನು ನಂಬಿಗೆ ಕೈಲಾಸಕ್ಕೆ ಬರುವಂತೆ ಓಲೆಬರೆದು ಕರೆಸಿಕೊಂಡನು. ನಂಬಿಯ ಬಗ್ಗೆ

ಅನೇಕ ವೀರಶೈವಕವಿಗಳು ತಮ್ಮ ಕಾವ್ಯಗಳಲ್ಲಿ ಹಲವಾರು ರೀತಿಯ ಪವಾಡದ ಕಥೆಗಳನ್ನು ಹೆಣೆದಿದ್ದಾರೆ.

೪೮. ಆ. ೧೪. ಪ. ೧೫೬. ಆನ್ಯೆನಾರ್ : ಚೋಳಮಂಡಲದ ಮಂಗಳಪುರ ಎಂಬ ಊರಿನಲ್ಲಿದ್ದ 'ಆನ್ಯೆನಾರ್' ಎಂಬ ಭಕ್ತನು ಬಾಲ್ಯದಿಂದಲೂ ಶಿವಪಂಚಾಕ್ಷರಿಯನ್ನು ಜಪಿಸುತ್ತಿದ್ದು ಊರಿನ ಹಸುಗಳನ್ನು ಕಾಯುತ್ತಿದ್ದನು. ಈತನನ್ನು ಪರೀಕ್ಷಿಸಲು ಶಿವನು ಬಂದು ಒಂದು ಕಕ್ಕೆಯಮರದಲ್ಲಿ ಅಡಗಿ ಕುಳಿತನು. ಎಲ್ಲ ಸಮಯದಲ್ಲೂ ತದೇಕಧ್ಯಾನದಿಂದ ಶಿವಪಂಚಾಕ್ಷರಿಯನ್ನು ಜಪಿಸುತ್ತಿದ್ದ ಇವನಿಗೆ ಶಿವನು ಪ್ರತ್ಯಕ್ಷನಾದನು. ಗೋವುಗಳ ಜನ್ಮವು ಅಳಿದು ಅವಕ್ಕೆ ಋಷಿರೂಪ ಬಂದಿತು. ಆ ಋಷಿಗಳೊಡನೆ ಕೈಲಾಸಕ್ಕೆ ಶಿವನ ಆಜ್ಞೆಯ ಮೇರೆಗೆ ತೆರಳಿದನು. ಶಿವನು ಗಣಪದವಿಯನ್ನಿತ್ತನು.

೪೯. ಆ. ೧೪. ೧೫೬. ವೇಳ್ಳೂಕತ : ವೆಳ್ಳುಕಭಕ್ತ, ವೆಳ್ಳುಕತ್ತ, ವೆಳ್ಳುಕತ್ತರ-ಇತ್ಯಾದಿ ನಾಮಾಂತರಗಳಿಂದ ಕರೆಯಿಸಿಕೊಳ್ಳಲ್ಪಡುವ ಈತನು ಚೋಳಮಂಡಲದ ಮಣಿಮಂದ ಪುತ್ತೂರಿನಲ್ಲಿದ್ದನು. ಇವನು ಗುರುವೇ ಲಿಂಗವೆಂದು ನಂಬಿ, ಗುರುಪಾದವನ್ನಗಲಿ ಅರಗಳಿಗೆಯೂ ಜೀವಿಸದ ಹಾಗೆ ಕಾಲಕಳೆಯುತ್ತಿದ್ದನು. ಗುರುವು ಈತನಿಗೆ 'ಸದಾ ತನ್ನಲ್ಲಿಯೇ ಇರದೆ ಮನೆಯಲ್ಲಿದ್ದು ಸಂಸಾರ ನಡೆಸು' ಎಂದು ಬುದ್ಧಿ ಹೇಳಿದನು. ಗುರುಪಾದವನ್ನು ಬಿಟ್ಟು ಇರಲು ಒಪ್ಪದಿರಲು ಗುರುವು ತನ್ನ ಪಾದರಕ್ಷೆಗಳನ್ನು (ಆವುಗೆಗಳನ್ನು) ಅವನಿಗೆ ಕೊಟ್ಟು, ಇವನ್ನು ಗುರುಪಾದವೆಂದೇ ನಂಬಿ ಮನೆಯಲ್ಲಿದ್ದು ಸಂಸಾರ ನಡೆಸೆಂದು ಹೇಳಿಕಳಿಸಿಕೊಟ್ಟನು. ವೇಳ್ಳೂಕತನು ಅವನ್ನು ತೆಗೆದುಕೊಂಡು ಮನೆಗೆ ಬಂದು, ಅವನ್ನು ಪೂಜಿಸುತ್ತ ತಾನು ಎಲ್ಲಿಗಾದರೂ ಹೋಗುವಾಗ ತನ್ನ ಜೊತೆಯಲ್ಲಿಯೇ ತಲೆಯಮೇಲೆ ಇಟ್ಟುಕೊಂಡು ಅವನ್ನು ಒಯ್ಯುತ್ತಿದ್ದನು. ಒಮ್ಮೆ ಶಿವನೇ ಎದುರಿಗೆ ಬಂದನು. ಶಿವನಿಗೆ ಸಾಷ್ಟಾಂಗ ನಮಸ್ಕಾರಮಾಡದೆ ಹಾಗೇ ಮುಂದೆ ನಡೆದನು. ಆಗ ಶಿವನು 'ಎಲೈ ಭಕ್ತನೇ, ನನ್ನನ್ನು ಕಂಡೂ ನಮಸ್ಕಾರಮಾಡದೆ ಸುಮ್ಮನೆ ಹೋಗುವೆಯಲ್ಲಾ !' ಎಂದನು. ಆಗ 'ದೇವನೇ, ನಿಮ್ಮನ್ನು ಕಂಡು ಮನಸ್ಸಿನಲ್ಲಿಯೇ ನಮಸ್ಕರಿಸಿದೆನು. ದೇಹವು ಎರಗಿದರೇ ಎರಗಿದ ಹಾಗೆಯೇ ? ನನ್ನ ತಲೆಯ ಮೇಲಿರುವ ಪಾದುಕೆಯು ಗುರುವಿನದಲ್ಲವೇ ? ಗುರುವೇ ನೀವಲ್ಲವೆ ?' ಇತ್ಯಾದಿಯಾಗಿ ನುಡಿದನು. ಶಿವನು ಇವನ ಗುರುಭಕ್ತಿಗೆ ಮೆಚ್ಚಿ ಇವನಿಗೆ ಗಣಪದವಿಯನ್ನಿತ್ತನು.

೫೦. ಆ. ೧೪. ಪ. ೧೫೬. ಏಣಾಧಿನಾಥ : ಚೋಳದೇಶದ ಕರಿಯೂರಿನಲ್ಲಿ ಈ ಶಿವಭಕ್ತನಿದ್ದನು. ಇವನೊಬ್ಬ ವೀರಯೋಧ. ಶೌರ್ಯವನ್ನು ಪ್ರಕಟಮಾಡುವುದೇ ಕಾಯಕವಾಗಿ ಉಳ್ಳ ಇವನು ತನ್ನ ಕನಸಿನಲ್ಲಿ ಕಾಣಿಸಿಕೊಂಡ ವೀರಭದ್ರದೇವರ ಆಜ್ಞೆಯಂತೆ ಕಾಳಗದ ಕಾಯಕಮಾಡುತ್ತ, ಬಂದ ದ್ರವ್ಯದಿಂದ ಗುರು ಲಿಂಗ ಜಂಗಮ ಸೇವೆಮಾಡುತ್ತಿದ್ದನು. ರಾಜಗುರುವೆಂಬ ಭಂಟನು ಈತನ ಮೇಲಿನ ಮಾತ್ಸರ್ಯದಿಂದ ಸಾವಿರ ಹೊನ್ನು

ಗಳ ಜಿದ್ದು ಕಟ್ಟಿ (ಪಣಕಟ್ಟಿ) ಯುದ್ಧಮಾಡಿ ಸತ್ತನು. ಇದನ್ನರಿತ ರಾಜಗುರು ಭಂಟನ ಮಗನು, ಇವನನ್ನು ಮೋಸದಿಂದ ಕೊಲ್ಲಬೇಕೆಂದು ಜಂಗಮವೇಷ ಧರಿಸಿ ಬಂದನು. ಏಣಾಧಿನಾಥನು ಅವನನ್ನು ಕಂಡೊಡನೆ ಭಕ್ತಿಯಿಂದ ನಮಸ್ಕರಿಸಿದನು. ಕೂಡಲೇ ಆ ಕಪಟಿಯು ಖಡ್ಗದಿಂದ ಕುತ್ತಿಗೆಗೆ ಹೊಡೆದನು. ಆದರೆ ಆ ಕತ್ತಿ ಹೂಮಾಲೆ ಯಾದಂತಾಯಿತು. ಈತನ ಜಂಗಮಭಕ್ತಿಗೆ ಮೆಚ್ಚಿ ಶಿವನು ಇವನನ್ನು ಪುಷ್ಪಕದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತನು.

೫೧. ಆ. ೧೪. ಪ. ೧೫೬. ಸಿರಿಯಾಳ್ವ : ಇವರಿಗೆ ಚಿರುತೊಂಡ, ಶ್ರೀಯಾಳ ರಾಜ, ಸಿರಿಯಾಳಸೆಟ್ಟಿ, ಸಿರಿಯಾಳ್ವ-ಇತ್ಯಾದಿ ನಾಮಾಂತರಗಳುಂಟು. ಚೆಂಗಳೆ ಎಂಬುವಳು ಇವನ ಹೆಂಡತಿ. ಇವರ ಹೊಟ್ಟೆಯಲ್ಲಿ ಬಹುದಿನಗಳ ಮೇಲೆ ಚೀಲಾಳ ನೆಂಬ ಮಗನು ಹುಟ್ಟಿದನು. ನಿತ್ಯವೂ ಸಹಸ್ರ ಜಂಗಮರಿಗೆ ಇಚ್ಛಾಭೋಜನ ಮಾಡಿ ಸುತ್ತಿದ್ದ ಈ ಮಹಾಭಕ್ತನನ್ನು ಪರೀಕ್ಷಿಸಲೆಂದು ಶಿವನು ಒಮ್ಮೆ ಜಂಗಮರೂಪದಿಂದ ಬಂದು ಕಬ್ಬಿನಹಾಲು ಕೇಳಿದನು. ಘೋರವಾಗಿ ಮಳೆ ಸುರಿಯುತ್ತಿತ್ತಾದರೂ ಹೆದರದೆ ಕಬ್ಬು ತರಲುಹೋಗಿ, ಕಬ್ಬಿನ ಹೊರೆಯನ್ನು ಹೊತ್ತು ತರುವಾಗ ಉಂಟಾದ ಅನೇಕ ಸಂಕಟಗಳನ್ನು ಲೆಕ್ಕಿಸದೆ ಇರುವುದನ್ನು ಶಿವನು ಕಂಡು ಓರ್ವ ಒಕ್ಕಲಿಗನ ವೇಷದಿಂದ ಆ ಕಬ್ಬಿನ ಹೊರೆಯನ್ನು ತಾನೇ ಹೊತ್ತು ತಂದುಹಾಕಿದನು. ಮತ್ತೊಮ್ಮೆ ಶಿವನು ಇವರ ಭಕ್ತಿಯ ನಿರತಿಶಯವನ್ನು ಪರೀಕ್ಷಿಸಲು ಇವನಲ್ಲಿಗೆ ಬಂದು ಎಳೆಯ ನರಮಾಂಸ ಭಕ್ಷಣೆಯ ಇಚ್ಛೆಯನ್ನು ವ್ಯಕ್ತಪಡಿಸಿದನು. ಸಿರಿಯಾಳ ಚೆಂಗಳೆಯರೀರ್ವರೂ ತಮ್ಮ ಪ್ರೀತಿಯ ಮಗುವಾದ ಚೀಲಾಳನನ್ನೇ ಕೊಂದು ಅವನ ಮಾಂಸದಿಂದ ಶಿವನ ಬಯಕೆ ಯನ್ನೀಡೇರಿಸಲಾಗಿ, ಶಿವನು ಇವರ ಭಕ್ತಿಗೆ ಮೆಚ್ಚಿ ಈ ಮೂವರಿಗೂ ಗಣಪದವಿಯನ್ನಿ ತ್ತನು. ಅನೇಕ ವೀರಶೈವ ಗ್ರಂಥಗಳಲ್ಲಿ ಇವನ ಭಕ್ತಿಯನ್ನು ಕೊಂಡಾಡಲಾಗಿದೆ.

೫೨. ಆ. ೧೪. ಪ. ೧೫೬. ಸೇದಿರಾಜ : ಈತನಿಗೆ ಸಿಡಿರಾಜ ಎಂದೂ ಹೆಸರು. ಚೋಳದೇಶದ ತಿರುವಾವಲೂರಿನಲ್ಲಿದ್ದವನು. ತನ್ನ ರಾಜ್ಯವೆಲ್ಲವೂ ಜಂಗಮರದೆಂದು ನಂಬಿ ಜಂಗಮ ಸೇವೆಮಾಡಿಕೊಂಡಿದ್ದ ಈತನು ಇದೇ ಕಾರಣದಿಂದ ದಾಯಾದಿಗಳಿಗೆ ರಾಜ್ಯದಲ್ಲಿ ಪಾಲುಕೊಡದಿರಲು, ಅವರು ಯುದ್ಧಮಾಡಿ ಸೋತು ಓಡಿಹೋದರು. ಆಮೇಲೆ ಜಂಗಮವೇಷ ಧರಿಸಿ ಶೈವಾಗಮಗಳ ಅರ್ಥವನ್ನು ತಿಳಿಯಬೇಕೆಂಬ ನೆಪದಿಂದ ಬಂದು ಈತನನ್ನು ಇರಿದರು. ತನಗಾದ ಗಾಯಗಳನ್ನು ಲೆಕ್ಕಿಸದೆ ಮಂತ್ರಿಗೆ "ಆ ಜಂಗ ಮರನ್ನು ಗೌರವದಿಂದ ಕಳಿಸಿಕೊಡು" ಎಂದು ಅಪ್ಪಣೆಮಾಡಿದನು. ಆ ನೋವಿನಲ್ಲಿಯೇ ಧ್ಯಾನಮಾಡುತ್ತ ಕುಳಿತು ಓರ್ವ ಶಿವಭಕ್ತನನ್ನು ಕರೆದು ತನ್ನ ದೇಹದಲ್ಲಿ ನಾಟ ಕೊಂಡಿದ್ದ ಅಲಗನ್ನು ಹೊರತೆಗೆಯುವಂತೆ ಹೇಳಿದನು. ಆಗ ಶಿವನು ಇವನ ಜಂಗಮ ಭಕ್ತಿಗೆ ಮೆಚ್ಚಿ, ಅವನ ಗಾಯದ ಕೊನೆಯಿಂದಲೇ ಹೊರಗೆ ಬಂದು, ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತನು.

೫೩. ಆ. ೧೪. ಪ. ೧೫೬. ಮೊನೆಯಿಡುವವರು : ಇವರಿಗೆ ಮೊನೆವಿಡಿದ ನೈನಾರು, ಮೊನೆಯಿಡುನೈನಾರು, ಮೊನೆವಿಡುನೈನಾರು-ಇತ್ಯಾದಿ ನಾಮಾಂತರಗಳುಂಟು. 'ತ್ರಿಣಕಾವೇರಿ' ಎಂಬ ಪಟ್ಟಣದಲ್ಲಿದ್ದನು. ಶಿವಭಕ್ತನಾದ ಇವನು ತನ್ನ ಹೆಂಡತಿ ಮುಪ್ಪು ಹೊಂದಿದಳೆಂದು ಮತ್ತೊಬ್ಬ ಯುವತಿಯನ್ನು ಮದುವೆಯಾದನು. ಅವಳು ಒಂದು ದಿನ ಇವನ ತಲೆಗೆ ಎಣ್ಣೆಯನ್ನು ತಿಕ್ಕುತ್ತಿದ್ದಳು. ಆಗ ಗಂಡನ ತಲೆಯು ನರೆಗೂದಲಿನಿಂದ ಕೂಡಿದ್ದನ್ನು ಕಂಡು ವ್ಯಸನವನ್ನು ವ್ಯಕ್ತಪಡಿಸಿದಳು. ಇದನ್ನು ತಿಳಿದ ಮೊನೆಯಿಡುವವರು ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ, ನಿತ್ಯಯೌವನ ಕೊಡುವ ರತ್ನವೊಂದನ್ನು ಪಡೆದನು. ಆ ರತ್ನವನ್ನು ಮಸ್ತಕದ ಒಳಗಡೆಯಿಟ್ಟುಕೊಂಡು ನಿತ್ಯಯೌವನವಂತನಾಗಿಯೇ ಇದ್ದನು. ಒಂದು ಸಲ ಓರ್ವ ವಿಟನು ಜಂಗಮವೇಷದಿಂದ ಬಂದು ನಿತ್ಯಯೌವನವನ್ನು ಕೊಡುವ ರತ್ನವನ್ನು ಬೇಡಿದನು. ತಲೆಯಲ್ಲಿದ್ದ ಆ ರತ್ನವನ್ನು ತೆಗೆದುಕೊಡುವಾಗ ಶಿವನು ಪ್ರತ್ಯಕ್ಷನಾಗಿ ಈತನನ್ನು ಕೈಲಾಸಕ್ಕೆ ಕರೆದೊಯ್ದನು.

೫೪. ಆ. ೧೪. ಪ. ೧೫೬. ಅಪ್ಪೂತಿ : ಇವರಿಗೆ ಅಸ್ಫೂತಯ್ಯ, ಅಃಪೂತಿ, ಅಃಪೋತಿ, ಅಃಪೂತಿಯಡಿಗ-ಇತ್ಯಾದಿ ನಾಮಾಂತರಗಳುಂಟು. ಚೋಳದೇಶದ ತಿರುವಣ್ಣೂರಿನಲ್ಲಿದ್ದವನು. ಮಹಾಭಕ್ತನಾದ ಈತನು ವಾಗೀಶಯ್ಯನನ್ನು ನೋಡಬೇಕೆಂದು ಅವನ ಹೆಸರಿನಲ್ಲಿ ದಾಸೋಹವನ್ನು ಮಾಡುತ್ತಿದ್ದನು. ಇದನ್ನು ಕೇಳಿದ ವಾಗೀಶನು ವೇಷಾಂತರದಿಂದ ಅವನ ಹತ್ತಿರಕ್ಕೆ ಬಂದು 'ವಾಗೀಶನು ಜೈನ'ನೆಂದು ಆತನನ್ನು ತಿರಸ್ಕರಿಸುವವನಂತೆ ನಟಿಸಿದನು. ಅಪ್ಪೂತಿಯು 'ಗುರುನಿಂದೆಯನ್ನು ಕೇಳುವಂತಾಯಿತೇ' ಎಂದು ನೊಂದುಕೊಂಡು ಪ್ರಾಣತ್ಯಾಗ ಮಾಡಿಕೊಳ್ಳಲು ಸಿದ್ಧನಾದನು. ಆಗ ವಾಗೀಶನು ಅವನನ್ನು ಸಂತೈಸಿ ದೀಕ್ಷೆಯಿತ್ತು ಕೈಲಾಸಕ್ಕೆ ಹೋದನು. ಕೈಲಾಸದ ಶಿವನು ಅಸ್ಫೂತಯ್ಯನ ರಾಗಾಲಾಪನೆಯನ್ನು ಕೇಳಬೇಕೆಂದು ಓಲೆಯನ್ನು ಆಟ್ಟಿದನು. ಅದನ್ನು ತಿರಸ್ಕರಿಸಿದ ಅಪ್ಪೂತಿಯು ತನ್ನ ಗುರುವಾದ ವಾಗೀಶನು ಬರೆಸಿ ಕಳುಹಿಸಿದ ಓಲೆಯ ಪ್ರಕಾರವಾಗಿ ಕೈಲಾಸಕ್ಕೆ ಹೋಗಿ, ಶಿವನಿಗೆ ರಾಗವನ್ನು ಕೇಳಿಸಿ ನಿತ್ಯಸುಖ ಪಡೆದನು.

೫೫. ಆ. ೧೪. ಪ. ೧೫೬. ಕಣ್ಣಪ್ಪದೇವರು: ಕಾಳಹಸ್ತಿಯ ಸುತ್ತಲಿನ ಅರಣ್ಯದಲ್ಲಿ ಬೇಟೆಯಾಡಿಕೊಂಡು ಜೀವಿಸುತ್ತಿದ್ದ ಈತನಿಗೆ ಒಮ್ಮೆ ಶಿವನು ಕಾಣಿಸಿಕೊಂಡು, ಹಣೆಗೆ ವಿಭೂತಿ ಧರಿಸಿ, ಪಂಚಾಕ್ಷರಿಯನ್ನು ಉಪದೇಶಿಸಿ ವನಮಧ್ಯದಲ್ಲಿರುವ ತನ್ನ ಪೂಜೆ ಮಾಡಿಕೊಂಡಿರುವಂತೆ ಹೇಳಿದನು. ಅದರಂತೆ ಕಣ್ಣಪ್ಪನು ತನಗೆ ತಿಳಿದಹಾಗೆ ಕಾಡಿನಲ್ಲಿದ್ದ ಆ ಶಿವಲಿಂಗವನ್ನು ಪೂಜೆಮಾಡುತ್ತ ಕಾಲಕಳೆಯುತ್ತಿದ್ದನು. ಅರಣ್ಯದ ಮೃಗಗಳನ್ನು ಕೊಂದು ತಂದು ಶಿವನಿಗೆ ನೈವೇದ್ಯ ಮಾಡುತ್ತಿದ್ದನು. ಸೌಂದರ, ಮಹಾಕಾಯರೆಂಬ ರಕ್ಕಸರು ತಮಗೆ ಮೋಕ್ಷವಾಗಬೇಕೆಂದು ಶಿವನನ್ನು ಕುರಿತು ತಪಸ್ಸುಮಾಡಿದರು. ಶಿವನು

ಪ್ರತ್ಯಕ್ಷನಾದಾಗ ತಮ್ಮ ಶರೀರವನ್ನೇ ಅರ್ಪಿಸಿಕೊಳ್ಳಬೇಕೆಂದು ಕೇಳಿದರು. ಶಿವನು 'ನೀವು ಮೃಗಗಳಾಗಿ ಕಾಳಹಸ್ತಿಯ ಅರಣ್ಯದಲ್ಲಿರಿ. ಅಲ್ಲಿ ಕಣ್ಣಪ್ಪನೆಂಬ ಭಕ್ತನು ನಿಮ್ಮನ್ನು ಕೊಂದು ತನಗೆ ಅರ್ಪಿಸುವನೆಂದು ತಿಳಿಸಿದನು. ಆದರಂತೆ ಅವರು ಕಾಳಹಸ್ತಿ ಅರಣ್ಯದಲ್ಲಿ ಮೃಗಗಳಾಗಿ ಜನಿಸಿದರು. ಕಣ್ಣಪ್ಪನು ಹಾಗೆ ಮಾಡಿದನು. ಕಣ್ಣಪ್ಪನ ಪೂಜೆ ಗುಡಿಯ ಪೂಜಾರಿಗಳಿಗೆ ಅಸಹ್ಯವನ್ನುಂಟುಮಾಡಿತು. ಒಂದು ದಿನ ಶಿವನು ತನ್ನ ಕಣ್ಣಲ್ಲಿ ನೀರು ಬರುವ ಹಾಗೆ ಲೀಲೆ ತೋರಿಸಿದನು. ಕಣ್ಣಪ್ಪ ತನ್ನ ಕಣ್ಣನ್ನೇ ಅರ್ಪಿಸಿದನು. ಮತ್ತೊಂದು ಕಣ್ಣಲ್ಲಿ ನೀರು ಬಂತು. ಕಣ್ಣಪ್ಪ ತನ್ನ ಎರಡನೆಯ ಕಣ್ಣನ್ನೂ ಕಿತ್ತು ಅರ್ಪಿಸಿದನು. ಶಿವನು ಇವನ ಭಕ್ತಿಗೆ ಮೆಚ್ಚಿ ಗಣಪದವಿಯನ್ನು ಕೊಟ್ಟು ಕೈಲಾಸಕ್ಕೆ ಕರೆದೊಯ್ದನು.

೫೭. ಆ. ೧೪. ಪ. ೧೫೭. ಶುಕ : ಕೃಷ್ಣದ್ವೈಪಾಯನರ ಮಗನಾದ ಈತನು ಹೆಣ್ಣು ಗಿಳಿಯ ರೂಪದಿಂದ ಕೃಷ್ಣದ್ವೈಪಾಯನರ ಬಳಿಗೆ ಬಂದ ಘೃತಾಚಿ ಎಂಬುವಳ ಹೊಟ್ಟೆಯಿಂದ ಹುಟ್ಟಿದವನು. ಗಂಧರ್ವರಿಗೆ ಇವನು ಭಾರತದ ಕಥೆಯನ್ನು ಹೇಳಿದನು. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳ ಬಗೆಗೆ ತನ್ನ ತಂದೆಯೊಡನೆಯೇ ಸಂವಾದ ಮಾಡಿದನು. ತಂದೆಯು ಇವನಿಗೆ ಧರ್ಮರಹಸ್ಯಗಳನ್ನೆಲ್ಲ ತಿಳಿಸಿದನು. ತನ್ನ ತಂದೆಯ ಬಳಿ ಮಾಡಬೇಕಾದ ವಿದ್ಯಾಭ್ಯಾಸವೆಲ್ಲ ಮುಗಿದಮೇಲೆ ಶುಕ್ರಬ್ರಹ್ಮವಿದ್ಯಾರಹಸ್ಯಗಳನ್ನೆಲ್ಲ ತಿಳಿಯಲು ತಂದೆಯ ಆಜ್ಞೆಯ ಮೇರೆಗೆ ಜನಕಮಹಾರಾಜನಲ್ಲಿಗೆ ಬಂದು ಆ ರಹಸ್ಯಗಳನ್ನೆಲ್ಲ ಅರಿತನು. ನಾರದಮಹರ್ಷಿಗಳಿಂದ ಉಪದೇಶ ಪಡೆದು ವೈರಾಗ್ಯ ಹೊಂದಿದನು. ಪೀವರಿಯೆಂಬ ಶುಕಪಿತೃದೇವತೆಗಳ ಮಗಳನ್ನು ಲಗ್ನವಾಗಿ ಕೃಷ್ಣ, ಗೌರಪ್ರಭ, ಭೂರಿ, ದೇವಶ್ರುತರೆಂಬ ನಾಲ್ವರು ಮಕ್ಕಳನ್ನು ಪಡೆದನು. ಕೀರ್ತಿಯೆಂಬ ಒಬ್ಬ ಮಗಳೂ ಇದ್ದಳು. ಪರೀಕ್ಷಿತ್‌ರಾಜನಿಗೆ ಭಾಗವತವನ್ನು ಹೇಳಿದನು. ಕೊನೆಗೆ ದೇಹವುಕ್ತಿಯನ್ನು ಪಡೆದು ಕೈಲಾಸಕ್ಕೆ ಹೋದನು.

೫೭. ಆ. ೧೪. ಪ. ೧೫೭. ಕಣ್ವ: ಕಶ್ಯಪಗೋತ್ರದ ಓರ್ವ ಮಹರ್ಷಿ. ಅಯೋಧ್ಯೆಯ ಪಶ್ಚಿಮಕ್ಕೆ ಲಕ್ಷ್ಮಣಾವತಿ ಪಟ್ಟಣದ ಬಳಿಯಲ್ಲಿ ಇವನ ಆಶ್ರಮವಿತ್ತು. ಮೇನಕೆಯ ಗರ್ಭದಲ್ಲಿ ಕೌಶಿಕನಿಂದ ವ್ರತಭಂಗದಲ್ಲಿ ಹುಟ್ಟಿದ ಶಕುಂತಲೆಯನ್ನು ಸಾಕಿ ಸಲಹಿದನು. ದುರ್ಯೋಧನನಿಗೆ ಪಾಂಡವರೊಡನೆ ಸಂಧಿಮಾಡಿಕೊಳ್ಳುವುದು ಯುಕ್ತವೆಂದು ಹೇಳಿದನು. ಆಗ ದುರ್ಯೋಧನನು ಹೆಮ್ಮೆಯಿಂದ ತೊಡೆಗಳನ್ನು ತಟ್ಟಿಕೊಳ್ಳಲು 'ನಿನಗೆ ತೊಡೆಗಳಲ್ಲಿಯೆ ಸಾವು ಬರುವುದೆಂ'ದು ಶಾಪವನ್ನಿತ್ತವನು ಕಣ್ವನೇ. ಈತನ ತಂದೆಯ ಹೆಸರು ಮೇಧಾತಿಥಿ ಎಂದು. ಹೆಂಡತಿ ಗೌತಮಿ.

೫೮. ಆ. ೧೪. ೧೫೭. ಅಗಸ್ತ್ಯ : 'ಅಗಸ್ತ್ಯ' ಎಂದರೆ ಬೆಟ್ಟಗಳ ಬೆಳವಣಿಗೆಯನ್ನು ನಿಲ್ಲಿಸಿದವ ಎಂದು ಅರ್ಥ, ವೈವಸ್ವತಮನ್ವಂತರದಲ್ಲಿದ್ದವನು. ಮಿತ್ರಾವರುಣ ಋಷಿಗಳು ಒಮ್ಮೆ ಊರ್ವಶಿಯನ್ನು ಕಂಡು ಮೋಹಿತರಾದರು. ಅವರ ವೀರ್ಯವನ್ನು ಊರ್ವಶಿಯು ಒಂದು ಕುಂಭದಲ್ಲಿ ಇರಿಸಿದಳು. ಆ ಕುಂಭದಲ್ಲಿಯೇ ಅಗಸ್ತ್ಯ ಮತ್ತು ವಸಿಷ್ಠರಿಬ್ಬರೂ

ಜನಿಸಿದನು. ಇದೇ ಕಾರಣದಿಂದ ಇವರಿಬ್ಬರಿಗೂ 'ಮೈತಾವರುಣಿ'ಗಳೆಂದು ಕರೆಯುವುದುಂಟು. ಅಗಸ್ತ್ಯನು ವಿದರ್ಭರಾಜಕುಮಾರಿ ಲೋಪಾಮುದ್ರೆಯನ್ನು ಲಗ್ನವಾಗಿ 'ದೃಢಸ್ಯು' ಎಂಬ ಮಗನನ್ನು ಪಡೆದನು. (ಇದೇ ಹೆಸರಿನ ಇನ್ನೊಬ್ಬ ಮಹರ್ಷಿಯಿದ್ದಾನೆ. ಅವನು ಪುಲಸ್ತ್ಯನಿಂದ ಕರ್ದಮಬ್ರಹ್ಮನ ಮಗಳಾದ 'ಹವಿರ್ಭುಕ್' ಎಂಬುವಳಲ್ಲಿ ಜನಿಸಿದವನು. ಇವನು ಸ್ವಾಯಂಭುವ ಮನ್ವಂತರದವನು).

೫೯. ಆ. ೧೪. ಪ. ೧೫೭. ಭೃಗು : ಬ್ರಹ್ಮನ ಹೃದಯದಿಂದ ಜನಿಸಿದ ಒಬ್ಬ ಮಹರ್ಷಿ. ಸ್ವಾಯಂಭುವ ಮನ್ವಂತರದಲ್ಲಿದ್ದ ಈತನ ಮಕ್ಕಳು ಕವಿ ಮತ್ತು ಚ್ಯವನ ಎಂಬುವರು. ಈತನ ಖ್ಯಾತಿ ಎಂಬ ಹೆಂಡತಿಯ ಹೊಟ್ಟೆಯಲ್ಲಿ ಲಕ್ಷ್ಮಿ ಹುಟ್ಟಿದಳು. ಆದ್ದರಿಂದಲೇ ಲಕ್ಷ್ಮಿಗೆ ಭಾರ್ಗವಿಯೆಂಬ ಹೆಸರು ಬಂತು. ಬೇರೆಬೇರೆ ಗ್ರಂಥಗಳಲ್ಲಿ ಇವನ ಹೆಂಡಿರು ಮಕ್ಕಳುಗಳ ವಿಷಯವಾಗಿ ಬೇರೆಬೇರೆ ರೀತಿಯ ವಿವರಣೆಯಿದೆ. ಜಮದಗ್ನಿ ಪರಶುರಾಮಾದಿಗಳು ಇವನ ವಂಶದವರು. ನರ್ಮದೆಯು ಸಮುದ್ರಕ್ಕೆ ಸೇರುವ ಸ್ಥಳದಲ್ಲಿಯೇ ಇವನ ಆಶ್ರಮವಿತ್ತು. ಆ ಪ್ರದೇಶದಲ್ಲಿದ್ದ ನೀರಿನ ಮಡುವಿಗೆ ಭೃಗುಕಚ್ಛವೆಂದು ಹೆಸರಿತ್ತು. ಈಗ ಬ್ರೋಚ್ ಎಂದು ಆ ಸ್ಥಳ ಪ್ರಸಿದ್ಧವಾಗಿದೆ.

೬೦. ಆ. ೧೪. ಪ. ೧೫೭. ಆಂಗೀರಸ : ಅಂಗೀರಸನೆಂಬ ಋಷಿಯ ಮಗನಾದ್ದರಿಂದ ಆಂಗೀರಸ ಎಂದು ಹೆಸರು. ತಾಯಿಯ ಹೆಸರು ಶಿವಾ ಎಂದು. ಬೃಹಸ್ಪತಿಯು ಈ ಆಂಗೀರಸ ಋಷಿಯ ಮಗ. ಈತನ ಮಗಳು ಬ್ರಹ್ಮವಾದಿನಿ. ಅವಳು ಪ್ರಭಾಸನನ್ನು ಮದುವೆಯಾದಳು. ಈತನ ಹೆಸರಿನ ಸಂವತ್ಸರವುಂಟು.

೬೧. ಆ. ೧೪. ಪ. ೧೫೭. ಸನಕ–ಸನಂದನ : ಸನಕ, ಸನಂದನ, ಸನತ್ಸುಜಾತ, ಸನತ್ಕುಮಾರ ಈ ನಾಲ್ವರು ಸೃಷ್ಟಿಯ ಆದಿಯಲ್ಲಿ ಬ್ರಹ್ಮಮಾನಸ ಪುತ್ರರು. ಇವರು ಸದಾ ಕೌಮಾರಾವಸ್ಥೆಯಲ್ಲಿಯೇ ಇರುತ್ತಿರುವವರು. ಮಹಾತಪಸ್ವಿಗಳೂ ಜ್ಞಾನಿಗಳೂ ಆಗಿದ್ದರು. ಈ ಸನಕ ಸನಂದನಾದಿ ಋಷಿಗಳು ಒಮ್ಮೆ ವೈಕುಂಠಕ್ಕೆ ಶ್ರೀ ವಿಷ್ಣುವನ್ನು ಕಾಣಲು ಬಂದಾಗ ಬಾಗಿಲಲ್ಲಿದ್ದ ಜಯ ವಿಜಯರು ತಡೆದಾಗ ಅವರಿಗೆ ಭೂಲೋಕದಲ್ಲಿ ರಾಕ್ಷಸರಾಗಿ ಜನಿಸುನಂತೆ ಶಾಪವಿತ್ತವರು ಇವರೇ.

೬೨. ಆ. ೧೪. ಪ. ೧೫೭. ಸೂತ : ಸೂತಪುರಾಣಿಕರೆಂದು ಪ್ರಸಿದ್ಧರಾದ ಇವರು ನೈಮಿಷಾರಣ್ಯದಲ್ಲಿರುವ ಋಷಿಗಳಿಗೆ ಅನೇಕ ಇತಿಹಾಸ ಪುರಾಣಗಳನ್ನು ತಿಳಿಸಿದರು. ಇವರಿಗೆ 'ರೋಮಹರ್ಷಣ' ಎಂಬುದು ಇನ್ನೊಂದು ಹೆಸರು. ಇವರು ಭಾರತದ ತೀರ್ಥಯಾತ್ರೆಯನ್ನು ಮಾಡಿದುದು ಪ್ರಸಿದ್ಧ.

೬೩. ಆ. ೧೪. ಪ. ೧೫೭. ಅತ್ರಿ : ಬ್ರಹ್ಮಮಾನಸಪುತ್ರನಾದ ಈತನು ಸಪ್ತರ್ಷಿಗಳಲ್ಲಿ ಒಬ್ಬನಾಗಿದ್ದಾನೆ. ಕರ್ದಮನೆಂಬ ಬ್ರಹ್ಮನ ಕುಮಾರಿಯಾದ ಅನಸೂಯೆ ಇವನ ಹೆಂಡತಿ. ದತ್ತಾತ್ರೇಯ, ದೂರ್ವಾಸ, ಚಂದ್ರ- ಈ ಮೂವರೂ ಮಕ್ಕಳು. ಶ್ರೀರಾಮನು

ವನವಾಸದಲ್ಲಿದ್ದಾಗ ಇವರ ಆಶ್ರಮಕ್ಕೆ ಹೋಗಿದ್ದನು. ಆಗ ಅನೇಕ ಧರ್ಮರಹಸ್ಯಗಳನ್ನು ಇವನಿಗೆ ಹೇಳಿದರು. ಕೆಲವು ಕಾಲ ಇವನು ಬ್ರಹ್ಮನ ಅಧಿಕಾರಸ್ಥಾನದಲ್ಲಿದ್ದನು.

೬೪. ಆ. ೧೪. ಪ. ೧೫೭. ಕೌಶಿಕ : ವೇದಾಧ್ಯಯನಸಂಪನ್ನನಾದ ಓರ್ವ ಮಹರ್ಷಿ. ಧ್ಯಾನಾಸಕ್ತನಾಗಿ ಕುಳಿತಾಗ ಮರದ ಮೇಲಿನ ಹಕ್ಕಿಯು ಮೇಲೆ ಮಲವನ್ನು ಚೆಲ್ಲಿತೆಂದು ದುರುಗುಟ್ಟನೋಡಿದಾಗ ಅದು ಸುಟ್ಟುಬಿತ್ತು. ತಪಸ್ಸು ಸಿದ್ಧಿಯಾಗಿದೆಯೆಂದು ಹಿಗ್ಗಿ ಭಿಕ್ಷೆಗೆ ಹೊರಟು ಓರ್ವ ಸಾಧ್ವಿಯು ಭಿಕ್ಷೆ ತರುವುದು ತಡವಾಯಿತೆಂದು ದುರುಗುಟ್ಟಿ ನೋಡಿದುದು, ಅವಳು ಇವನ ಗರ್ವಭಂಗ ಮಾಡಿದುದು, ಆಕೆಯ ಆದೇಶದಂತೆ ಕಟುಕರವನಾದ ಧರ್ಮವ್ಯಾಧನಲ್ಲಿ ಧರ್ಮಸೂಕ್ಷ್ಮವನ್ನರಿತುದು ಪ್ರಸಿದ್ಧ.

೬೫. ಆ. ೧೪. ಪ. ೧೫೭. ಭಾರದ್ವಾಜ : ಭರದ್ವಾಜನೆಂಬ ಗೋತ್ರಪುರುಷನ ವಂಶದಲ್ಲಿ ಜನಿಸಿದ ಓರ್ವ ಮಹರ್ಷಿ. ಆಪತ್ಕಾಲದಲ್ಲಿ ಆಚರಿಸಬೇಕಾದ ಧರ್ಮಗಳನ್ನು ಕುರಿತು ಶತ್ರುಂತಪರಾಜನೊಂದಿಗೆ ಈತನು ಸಂವಾದಮಾಡಿದ್ದು ಪ್ರಸಿದ್ಧ. (ಇದೇ ಹೆಸರಿನ ಇನ್ನೊಬ್ಬ ಋಷಿ ಇದ್ದಾನೆ. ಅವನು ದ್ರೋಣಾಚಾರ್ಯರ ತಂದೆ. ಈ ಭರದ್ವಾಜನು ತಪಸ್ಸು ಮಾಡುತ್ತಿದ್ದಾಗ ಘೃತಾಚಿಯೆಂಬ ಅಪ್ಸರೆಯಿಂದ ಚಿತ್ತ ಚಂಚಲಗೊಂಡು ತನ್ನ ವೀರ್ಯವನ್ನು ಒಂದು ದೊನ್ನೆಯಲ್ಲಿ (ದ್ರೋಣದಲ್ಲಿ) ಹಿಡಿದಿಟ್ಟನು. ಅದೇ ಮಗುವಾಗಿ ಬೆಳೆದು ದ್ರೋಣಾಚಾರ್ಯನೆಂದು ಪ್ರಸಿದ್ಧಿ ಪಡೆಯಿತು.)

೬೬. ಆ. ೧೪. ಪ. ೧೫೭. ಕಪಿಲ : ಕರ್ದಮಮುನಿಯಿಂದ ಸ್ವಾಯಂಭುವ ಮನುವಿನ ಪುತ್ರಿಯಾದ ದೇವಹೂತಿಯ ಗರ್ಭದಲ್ಲಿ ಜನಿಸಿದ ಇವನ ತಂಗಿ ಅರುಂಧತೀ ದೇವಿ. ಇವನಿಗೆ ಅಗ್ನಿಯ ಅಧಿಕಾರವುಂಟು. ಈತನು ಸಾಂಖ್ಯಸೂತ್ರಗಳನ್ನು ಬರೆದನು. ತನ್ನ ತಾಯಿಯಾದ ದೇವಹೂತಿಗೆ ಸಾಂಖ್ಯತತ್ತ್ವವನ್ನು ಬೋಧೆಮಾಡಿದನು.

೬೭. ಆ. ೧೪. ಪ. ೧೫೭. ಬಕ : ಇವನೊಬ್ಬ ಪ್ರಖ್ಯಾತ ಋಷಿ. ದಾಲ್ಭ್ಯ ಮುನಿ ಇವನ ಸಹೋದರ. ಪ್ರಾಣಿಗಳಿಗೆ ಸುಖದುಃಖಗಳು ಸ್ಥಿರವಲ್ಲವೆಂಬ ವಿಷಯದಲ್ಲಿ ಇಂದ್ರನೊಡನೆ ಸಂವಾದ ಮಾಡಿದನು. ಪಾಂಚಾಲರಾಜರಲ್ಲಿ ಒಬ್ಬನಾದ ಧೃತರಾಷ್ಟ್ರನೆಂಬುವನ ರಾಜ್ಯವನ್ನು ಹಾಳುಮಾಡುವುದಕ್ಕಾಗಿ ಸತ್ತ ಪಶುಮಾಂಸದಿಂದ ಹೋಮ ಮಾಡಿದ್ದಾಗಿ ತಿಳಿದುಬರುವುದು. (ಇದೇ ಹೆಸರಿನ ಇನ್ನೊಬ್ಬ ಮಹರ್ಷಿ ಇದ್ದಾನೆ. ಪಾಂಡವರ ಅಶ್ವಮೇಧದ ಕುದುರೆ ಇವನ ಆಶ್ರಮಕ್ಕೆ ಹೋಗಿತ್ತು. ಕೃಷ್ಣನು ಈ ಮುನಿಯನ್ನು ಕಂಡು ಬೆರಗಾಗಿ ಆತನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಹಸ್ತಿನಾವತಿಯ ಯಜ್ಞಶಾಲೆಗೆ ಕರೆತಂದನು.)

೬೮. ಆ. ೧೪. ಪ. ೧೫೭. ಮಾರ್ಕಾಂಡೇಯ : ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಮಾನಸ ಪುತ್ರನಾದ ಭೃಗುಮಹರ್ಷಿಯ ಸಂತತಿಯಲ್ಲಿ ಜನಿಸಿದ 'ಮೃಕಂಡು' ಎಂಬ ಮುನಿಶ್ರೇಷ್ಠನ ಮಗ. ಅಲ್ಪಾಯುಷಿಯಾದ ಈತನು ಮರಣಸಮಯದಲ್ಲಿ

ಶಿವಧ್ಯಾನತತ್ಪರನಾಗಿ ಶಿವನನ್ನು ಒಲಿಸಿಕೊಂಡು ೧೪ ಕಲ್ಪಗಳವರೆಗಿನ ದೀರ್ಘಾಯುಷ್ಯವನ್ನು ಪಡೆದನು.

೬೯. ಆ. ೧೪. ಪ. ೧೫೭. ಮಾಂಡವ್ಯ : ಇವನೊಬ್ಬ ಮಹರ್ಷಿ. ಬಾಲ್ಯದಲ್ಲಿ ನೊಣಗಳನ್ನು ಕೊಲ್ಲುತ್ತಿದ್ದನು. ಮುಂದೆ ದೊಡ್ಡವನಾದ ಮೇಲೆ ಮುನಿಜೀವನ ನಡೆಸಿದನು. ಒಮ್ಮೆ ಇವನು ತಪೋನಿರತನಾಗಿ ಸಮಾಧಿಸ್ಥನಾಗಿದ್ದಾಗ ಕೆಲವುಜನ ಕಳ್ಳರು ಈತನ ಆಶ್ರಮದಲ್ಲಿ ಅವಿತುಕೊಂಡರು. ರಾಜಭಟರು ಬೆನ್ನಟ್ಟಿ ಬಂದು ಕಳ್ಳರ ಜಾಡನ್ನು ಕೇಳಿದರು. ಆಗ ಈ ಋಷಿ ಮೌನದಿಂದಲೇ ಇದ್ದನು. ರಾಜಭಟರು ಕಳ್ಳರೊಂದಿಗೆ ಇವನನ್ನು ಎಳೆದೊಯ್ದು ಶೂಲಕ್ಕೇರಿಸಿದರು. ಕಳ್ಳರೆಲ್ಲ ಸತ್ತರು. ಶೂಲಕ್ಕೇರಿಸಿದರೂ ಈ ಋಷಿಯು ಸಾಯಲಿಲ್ಲ. ಅರಸನು ಓಡಿಬಂದು ಈತನನ್ನು ಕಂಡು ಹೆದರಿ ಶೂಲದಿಂದ ಇಳಿಸಿ ಅಪರಾಧವನ್ನು ಮನ್ನಿಸುವಂತೆ ಬೇಡಿಕೊಂಡನು. ಮಾಂಡವ್ಯನು ಆ ಶೂಲವನ್ನು ಮುರಿದು ಕಯ್ಯಲ್ಲಿ ಹಿಡಿದು ಹೊರಟು ಕೊನೆಗೆ ದೇಹತ್ಯಾಗ ಮಾಡಿದನು. ಯಮದೂತರು ಎಳೆದೊಯ್ದರು. ಇವನಿಗೆ ನರಕವಾಯಿತು. ಆಗ ಋಷಿಯು ಯಮನಿಗೆ ನಾನು ಪಾಪ ಮಾಡದಿದ್ದರೂ ನನಗೇಕೆ ನರಕವೆಂದು ಪ್ರಶ್ನಿಸಿದನು. ಆಗ ಯಮನು 'ಬಾಲ್ಯದಲ್ಲಿ ನೀನು ನೊಣಗಳನ್ನು ಕೊಲ್ಲುತ್ತಿದ್ದೆ' ಎಂದನು. ಆಗ ಋಷಿಯು 'ಬಾಲ್ಯದಲ್ಲಿ ಮಾಡಿದ ಪಾಪ ನನಗಲ್ಲ ; ಅದು ಹೆತ್ತವರಿಗೆ' ಎಂದನು. ಇಷ್ಟು ಧರ್ಮಸೂಕ್ಷ್ಮವನ್ನು ತಿಳಿಯದೆ ನನಗೆ ನರಕಬಾಧೆಯನ್ನುಂಟುಮಾಡಿದುದರಿಂದ ನೀನು ಭೂಮಿಯಲ್ಲಿ ಶೂದ್ರನಾಗಿ ಹುಟ್ಟೆಂದು ಶಾಪವಿತ್ತನು. ಆ ಯಮನೇ ಭೂಲೋಕದಲ್ಲಿ ವಿದುರನಾಗಿ ಹುಟ್ಟಿದನು. ಇವನು ಶೂಲದಲ್ಲಿದ್ದಾಗ ಒಂದು ರಾತ್ರಿ ಅನಲಾಯಿಯು ತನ್ನ ಗಂಡನನ್ನು ವೇಶ್ಯಾಗೃಹಕ್ಕೆ ಹೊತ್ತು ಒಯ್ಯುತ್ತಿದ್ದಾಗ ಅವನ ಕಾಲುಗಳು ಈ ಮಾಂಡವ್ಯನಿಗೆ ತಗುಲಿದವು. ಕೋಪದಿಂದ ಮಾಂಡವ್ಯನು ನನಗೆ ಕಾಲು ತಾಗಿಸಿದವನು ಸೂರ್ಯೋದಯದೊಳಗಾಗಿ ಸಾಯಲೆಂದು ಶಾಪವಿತ್ತನು. ಅನಲಾಯಿಯು ಸೂರ್ಯೋದಯವೇ ಆಗದಂತೆ ಮಾಡಿದಳು. ತನ್ನ ಪಾಪಶೇಷವೆಲ್ಲ ಮುಗಿದ ಮೇಲೆ ಮಾಂಡವ್ಯ ಕೈಲಾಸಕ್ಕೆ ಹೋದನು.

೭೦. ಆ. ೧೪. ಪ. ೧೫೭. ರುರು : ಪ್ರಮತಿಯೆಂಬುವನಿಂದ ಅಪ್ಸರಸಿಯಾದ ಘೃತಾಚೆಯಿಂದ ಜನ್ಮವೆತ್ತಿದನನು. ವಿಶ್ವಾವಸು ಎಂಬ ಗಂಧರ್ವನಿಂದ ಮೇನಕೆಯ ಗರ್ಭದಲ್ಲಿ ಹುಟ್ಟಿದ ಪ್ರಮದ್ವರೆಯು ಈತನನ್ನು ಲಗ್ನಮಾಡಿಕೊಳ್ಳಬೇಕೆಂದು ಬಯಸಿದ್ದಳು. ಆದರೆ ಆವಳ ಬಯಕೆ ಈಡೇರುವ ಪೂರ್ವದಲ್ಲಿಯೇ ಅವಳು ಅರಣ್ಯದಲ್ಲಿ ಹಾವು ಕಚ್ಚಿ ಸತ್ತಳು. ಸುತ್ತಮುತ್ತಣ ಮುನಿಗಳು ಅವಳ ಶವವನ್ನು ಹೊತ್ತು ರುರುವಿನ ಬಳಿಗೆ ತಂದರು. ರುರುವು ತನ್ನ ಆಯುಷ್ಯದ ಅರ್ಧಭಾಗವನ್ನು ಅವಳಿಗೆ ಕೊಟ್ಟು ಬದುಕಿಸಿ ಅವಳನ್ನು ಲಗ್ನವಾದನು.

೭೧. ಆ. ೧೪. ಪ. ೧೫೭. ಜಾಬಾಲಿ: ದಶರಥನ ಆಸ್ಥಾನದಲ್ಲಿದ್ದ ಅಷ್ಟಪ್ರಧಾನ

ಋತ್ವಿಜರಲ್ಲಿ ಒಬ್ಬನಾಗಿದ್ದಾನೆ. ಶ್ರೀ ರಾಮನು ಸೀತಾ ಲಕ್ಷ್ಮಣರೊಡನೆ ಚಿತ್ರಕೂಟ ಪರ್ವತದಲ್ಲಿದ್ದಾಗ ಮರಳಿ ಅಯೋಧ್ಯೆಗೆ ಕರೆತರಲು ಭರತನು ಹೋಗಿದ್ದಾಗ ಭರತನ ಸಂಗಡ ಇವನೂ ಹೋಗಿದ್ದನು. 'ಪಿತೃವಾಕ್ಯ ಪರಿಪಾಲನಾ ದೃಷ್ಟಿಯಿಂದ ೧೪ ವರ್ಷ ವನವಾಸವನ್ನು ಮುಗಿಸಿದಲ್ಲದೆ ತಾನು ಅಯೋಧ್ಯೆಗೆ ಹಿಂದಿರುಗುವುದಿಲ್ಲವೆಂದು ಹೇಳಿದ ಶ್ರೀರಾಮನ ಮಾತನ್ನು ಆಲಿಸಿದ ಜಾಬಾಲಿಯು ರಾಮನನ್ನು ಹೇಗಾದರೂ ಮಾಡಿ ಅಯೋಧ್ಯೆಗೆ ಹಿಂದಿರುಗಿಸಲೇಬೇಕೆಂಬ ಉದ್ದೇಶದಿಂದ 'ಸತ್ತವನೂ, ಕಾಮುಕನೂ, ವೃದ್ಧನೂ ಆದ ದಶರಥನ ಮಾತಿಗೆ ಬೆಲೆ ಕೊಡಬಾರದು, ಪರಲೋಕ ಪುಣ್ಯ ಪಾಪ ಗಳೆಂದರೆ ಏನು ?' ಇತ್ಯಾದಿಯಾಗಿ ನಾಸ್ತಿಕ ಸಹಜವಾದ ಮಾತನ್ನೆತ್ತಿದಾಗ ಶ್ರೀ ರಾಮನು ಜಾಬಾಲಿಯ ಮಾತುಗಳನ್ನೆಲ್ಲ ಖಂಡಿಸಿದನು. ಆಮೇಲೆ ವಶಿಷ್ಠಮುನಿಯು 'ಜಾಬಾಲಿಯು ನಾಸ್ತಿಕನಲ್ಲ' ವೆಂದೂ, 'ಅವನ ಅಭಿಪ್ರಾಯವೇ ಬೇರೆ' ಎಂದೂ ವಿವರಿಸಿ ರಾಮನನ್ನು ಸಮಾಧಾನಗೊಳಿಸಿದನು. ಶ್ರೀರಾಮನ ಅಭಿಪ್ರಾಯ ಸಾಧುವೆಂದು ಎಲ್ಲರೂ ಒಪ್ಪಿದರು. ಅವನನ್ನು ಯಾವ ಉಪಾಯಗಳಿಂದಲೂ ಹಿಂದಿರುಗಿಸಲು ಅಸಮರ್ಥ ರಾಗಿ ಮರಳಿ ಪಟ್ಟಣಕ್ಕೆ ಬಂದರು. (ಬಹುಶಃ ಈ ಹೆಸರಿನ ಋಷಿಗಳು ಅನೇಕರಿರುವ ರೆಂದು ತೋರುತ್ತದೆ.)

೭೨. ಆ. ೧೪. ಪ. ೧೬೬. ಬಾಣಭಟ್ಟ ಮತ್ತು ಮಯೂರರಿಗೆ ಸಂಬಂಧಿಸಿದ ಕಥೆ : ಹರ್ಷನ ಆಸ್ಥಾನದಲ್ಲಿದ್ದ ಪ್ರಸಿದ್ಧ ಕವಿಯಾದ ಬಾಣಭಟ್ಟನು ಶಿವಕವಿಯೆಂದು ಶೈವಕವಿಗಳೆಲ್ಲ ಅವನನ್ನು ತಮ್ಮ ಕಾವ್ಯಗಳಲ್ಲಿ ಸ್ತೋತ್ರಮಾಡಿದ್ದಾರೆ. ಅವನ ಬಗೆಗೆ ಅನೇಕ ಪವಾಡದ ಕಥೆಗಳನ್ನೂ ಹೆಣೆದಿದ್ದಾರೆ. ಇವನ ಹಾಗೆ ಮಯೂರನ ಬಗೆಗೂ ಅನೇಕ ಪವಾಡಕಥೆ ಹೇಳಿದ್ದಾರೆ. ಭೋಜರಾಜನ ಓಲಗದಲ್ಲಿ ಇವರಿಬ್ಬರೂ ಇದ್ದ ಹಾಗೆಯೂ ವರ್ಣಿಸಿದ್ದಾರೆ. ಪ್ರೌಢರಾಯನ ಕಾವ್ಯದ ಪ್ರಕಾರ ಭೋಜರಾಜನ ಓಲಗ ದಲ್ಲಿದ್ದ ಬಾಣ ಮಯೂರರ ಸಂಬಂಧದ ಕಥೆ ಹೀಗೆ ;

ಬಾಣ ಮತ್ತು ಮಯೂರರು ಪರಸ್ಪರ ದ್ವೇಷದಿಂದ ಭೋಜರಾಜನ ಆಸ್ಥಾನದಲ್ಲಿ ಇದ್ದರು. ಬಾಣನು ಒಂದು ದಿನ ಏಕಾಂತದಲ್ಲಿ ಅರಸನಿಗೆ 'ಮಯೂರನ ದೇಹವು ಕುಷ್ಟರೋಗದಿಂದ ಕೂಡಿದೆ' ಎಂದನು. ಅರಸನು ನಂಬದೆ ಇರಲು ಬಾಣನು 'ಪರೀಕ್ಷಿಸಿ ನೋಡಬಹುದು' ಎಂದನು. ಅರಸನು ಪರೀಕ್ಷಿಸುವುದರ ಸಲುವಾಗಿ 'ನಾಳೆ ಸೂರ್ಯೋದ ಯಕ್ಕೆ ಸರಿಯಾಗಿ ಅರಸನು ಜಲಕೇಳಿಗೆ ಹೋಗುವ ಕಾರಣ ಪುರುಷರೆಲ್ಲರೂ ಬರಬೇಕು.' ಎಂದು ಡಂಗುರ ಸಾರಿಸಿದನು. ಮಯೂರನು ಇದು ಬಾಣನ ಉಪಟಳವೇ ಆಗಿರ ಬೇಕೆಂದು ಸೂರ್ಯನನ್ನು ಪ್ರಾರ್ಥಿಸಿದನು. ಸೂರ್ಯನು ಪ್ರಸನ್ನನಾಗಿ 'ನಿನ್ನ ಶರೀರವು ನಾಳೆ ಸುವರ್ಣಮಯವಾಗಿರಲೆಂದು' ವರವಿತ್ತನು.

ಜಲಕ್ರೀಡೆಗೆ ಮಯೂರ ಬಂದನು. ರಾಜನು ಮಯೂರನ ಮೈಗೆ ನೀರನ್ನು ಉಗ್ಗಿ, ಆತನ ಮೈಗೆ ಎಲ್ಲಿ ನೋವಾಯಿತೆಂದು ನೋಡುವ ನೆಪದಲ್ಲಿ ಶರೀರವನ್ನು ಪರೀಕ್ಷಿ

ಸಲು ದೇಹವೆಲ್ಲ ಸುವರ್ಣಮಯವಾಗಿರುವುದನ್ನು ಕಂಡು ಬಾಣನ ಬಗೆಗೆ ಕೋಪ ತಾಳಿದನು. ಅರಮನೆಗೆ ಬಂದು ಬಾಣನನ್ನು ಕರೆಸಿ 'ಎರಡನೆಯವರ ಬಗೆಗೆ ಸುಳ್ಳಾಡಿ ಹೊಟ್ಟೆ ಹೊರೆಯುವ ಈ ಸಣ್ಣಬುದ್ಧಿ ನಿನಗೆ ಏಕೆ ?' ಎಂದು ಕೋಪದಿಂದ ನುಡಿದನು. ಆಗ ಬಾಣನು 'ಮಯೂರನು ಸೂರ್ಯಸ್ತೋತ್ರಮಾಡಿ ಅವನನ್ನು ಒಲಿಸಿಕೊಂಡು ಒಂದು ದಿನ ಮಾತ್ರ ಹಾಗೆ ಸುವರ್ಣದೇಹವನ್ನು ಪಡೆದಿದ್ದಾನೆ' ಎನ್ನಲು ಮಯೂರನನ್ನು ಕರೆಸಿ ವಿಚಾರಿಸಿದನು. ಮಯೂರನು ಸತ್ಯವನ್ನೊಪ್ಪಿಕೊಂಡನು. ಅರಸನಿಗೆ ಆಶ್ಚರ್ಯವಾಗಿ ಮಯೂರನನ್ನು ಸ್ತುತಿಸಿದನು.

ಬಾಣನು ಕೋಪಗೊಂಡು ಜನರೆಲ್ಲ ನೋಡುವಂತೆ ತನ್ನ ಕೈಗಳನ್ನೇ ಕತ್ತರಿಸಿಕೊಂಡು ಶಿವಧ್ಯಾನವನ್ನಾರಂಭಿಸಿದನು. ಆಗ ಪಾರ್ವತಿಯು ಕರುಣಗೊಂಡು ಪರಮೇಶ್ವರನಿಗೆ 'ದೇವಾ, ಭೂಮಿಯಲ್ಲಿ ಹಾಸ್ಯವಾಡುವ ಬಾಣನಿಗೆ ವರವಿತ್ತು ಸಲಹು' ಎಂದು ಬಿನ್ನವಿಸಿದಳು. ಆಗ ಶಿವನು ಪ್ರತ್ಯಕ್ಷನಾಗಿ ಅವನಿಗೆ ಕರಗಳನ್ನು ಕೊಟ್ಟು 'ಇನ್ನೇನು ವರ ಬೇಕು ಬೇಡೆಂ'ದನು. ಬಾಣನು 'ಅಂಗಹೀನರಿಗೆ ಅವಯವಗಳನ್ನೀಯುವ ಶಕ್ತಿಯನ್ನು ಕೊಡು ; ಕೊನೆಗೆ ನನಗೆ ಸಾಯುಜ್ಯಪದವಿಯನ್ನು ಕೊಡು' ಎಂದು ಬೇಡಿವನು. ಶಿವನು ದಯಪಾಲಿಸಿದನು. ಇತ್ತ ಮಯೂರನು ಕಾಯಶುದ್ಧಿಗೋಸುಗ ಸೂರ್ಯನನ್ನು ಪ್ರಾರ್ಥಿಸಿದನು. ಸೂರ್ಯನು ಪ್ರತ್ಯಕ್ಷನಾಗಿ ನಿನ್ನ ಕಾಯಶುದ್ಧಿಯಾಗುವ ವರಕೊಡುವ ಸಾಮರ್ಥ್ಯ ತನ್ನಲ್ಲಿಲ್ಲವೆಂದು ಹೇಳಿದನು. ಮಯೂರನು ಶಿವಭಕ್ತನಾಗಿ ಭಸ್ಮರುದ್ರಾಕ್ಷಾಲಂಕೃತನಾಗಿ ಶಿವನನ್ನು ಒಂಬತ್ತು ಪದ್ಯಗಳಿಂದ ಸ್ತುತಿಸಿದನು. ಶಿವನು ಪ್ರತ್ಯಕ್ಷನಾಗಿ ಅವನ ರೋಗಪರಿಹಾರಕವಾದ ವರವಿತ್ತನು.

ಕಥೆ ಹೇಗೇ ಇರಲಿ. ಬಾಣ ಮಯೂರರು ಸಮಕಾಲೀನರು. ಇವರಿಬ್ಬರೂ ೭ನೆಯ ಶತಮಾನದಲ್ಲಿ ಹರ್ಷನ ಆಸ್ಥಾನದಲ್ಲಿದ್ದವರು. ಬಾಣನು ಸುಪ್ರಸಿದ್ಧ ಕಾದಂಬರಿ ಮತ್ತು ಹರ್ಷಚರಿತ್ರೆಗಳನ್ನು ಬರೆದಿದ್ದಾನೆ. ಚಂಡೀಶತಕವನ್ನೂ ಬರೆದ ಹಾಗೆ ತಿಳಿದು ಬರುತ್ತದೆ. ಮಯೂರನು ಮಯೂರಾಷ್ಟಕ ಸೂರ್ಯಶತಕಗಳನ್ನು ಬರೆದಿದ್ದಾನೆ ಸಂಸ್ಕೃತ ಸಾಹಿತ್ಯಚರಿತ್ರೆಯಲ್ಲಿ ಈ ಹೆಸರಿನವರು ಅನೇಕರಿದ್ದಾರೆ. ಈತನ ಸೂರ್ಯಶತಕ ಶ್ರೇಷ್ಠವಾದ ಶತಕಸಾಹಿತ್ಯ ಗ್ರಂಥವೆಂದು ಸಂಸ್ಕೃತ ಸಾಹಿತ್ಯಲೋಕದಲ್ಲಿ ಪ್ರಸಿದ್ಧವಾಗಿದೆ. ಅನೇಕ ಭಾಷೆಗಳಿಗೆ ಈ ಗ್ರಂಥ ಭಾಷಾಂತರಗೊಂಡಿದೆ. (ಷಡಕ್ಷರಿಯು ಬಾಣನು ಕೈಲಾಸದಲ್ಲಿ ಶಿವನ ಆಸ್ಥಾನದಲ್ಲಿದ್ದನೆಂದು ವರ್ಣಿಸಿದ್ದಾನೆ. ಮಯೂರನ ಹೆಸರನ್ನು ಹೇಳಿಲ್ಲ).

೭೩. ಆ. ೧೪. ಪ. ೧೬೬: ಕಾಳಿದಾಸ : ಸಂಸ್ಕೃತ ಸಾಹಿತ್ಯದಲ್ಲಿ ಜಗತ್ಪ್ರಸಿದ್ಧ ಕವಿಯಾದ ಕಾಳಿದಾಸನೇ ಇವನು. ಇವನ ಬಗೆಗೆ ವೀರಶೈವ ಪುರಾಣಗಳಲ್ಲಿ ಅನೇಕ ಪವಾಡದ ಕಥೆಗಳು ವರ್ಣಿತವಾಗಿವೆ. ಬಸವಣ್ಣನವರ ವಚನಗಳಲ್ಲೂ ಈತನ ಹೆಸರು ಬಂದಿದೆ. 'ಕಾಳಿದಾಸಂಗೆ ಕಣ್ಣನಿತ್ತೆ' ಇತ್ಯಾದಿಯಾಗಿ. ಅದೃಶ್ಯಕವಿಯು ಪ್ರೌಢರಾಯನ

ಕಾವ್ಯದ ೩ನೆಯ ಅಧ್ಯಾಯದಲ್ಲಿ ಕಾಳಿದಾಸನ ಕಥೆ ಬಂದಿದೆ. ಅದು ಪವಾಡ ರೂಪವಾಗಿದೆ.

ಧಾರಾನಗರದ ಭೋಜರಾಜನ ಮಗಳಾದ ಪದ್ಮಾವತಿ ಸಕಲವಿದ್ಯಾಪಾರಂಗತ ಳಾದ ಚತುರೆ. ಒಂದುದಿನ ಅರಸು ವರರುಚಿಯನ್ನು ಕುರಿತು 'ನಿನ್ನ ಕುಲವಾವುದು' ಎಂದನು. ಅವನು 'ನಿಮ್ಮ ಸಭೆಯಲ್ಲಿರುವ ಪ್ರೌಢರನ್ನು ವಿಚಾರಿಸಲು ತಾವೇ ಹೇಳು ವರು' ಎಂದನು. ಆದರೆ ವರರುಚಿಯ ಕುಲವಾವುದೆಂದು ಯಾರಿಗೂ ತಿಳಿಯಲೇ ಇಲ್ಲ. ಆಗ ಪದ್ಮಾವತಿಯು ಒಂದು ಪಕ್ಷದ ಗಡುವನ್ನು ಕೊಟ್ಟರೆ ನಾನು ತಿಳಿದು ಹೇಳುವೆನೆಂದು ಹೇಳಿದಳು. ಅದಕ್ಕಾಗಿ ಚಿಂತಿಸಿದಳು. ಒಂದು ದಿನ ವರರುಚಿಯು ಹಾಸಿಗೆಯಲ್ಲಿ ನಿದ್ರೆ ಹತ್ತಿ ಮಲಗಿದಾಗ ಅವನ ಮೇಲೆ ನೀರನ್ನೆರಚಿದಳು. ಆಗ ಅವನು 'ಅಡಪಚ್ಚಿ' ಎಂದು ದಡಬಡಿಸಿ ಎದ್ದನಂತೆ. ಆಗ ತಂದೆಗೆ ಇವನು 'ತಿಗುಳ' ನೆಂದು ತಿಳಿಸಿದಳಂತೆ. ಭೋಜನು ವರರುಚಿಗೆ ತನ್ನ ಮಗಳಾದ ಪದ್ಮಾವತಿಗೆ ಗುಣರೂಪಸಂಪನ್ನನಾದ ವರನನ್ನು ತರಲು ತಿಳಿಸಿದನು. ಕುರುಬನೊಬ್ಬನನ್ನು ತಂದು ಲಗ್ನಮಾಡಿಸಿದನಂತೆ. ಪದ್ಮಾವತಿಯು ಪಾತಿವ್ರತ್ಯ ಪ್ರಭಾವದಿಂದ ಆ ಕುರುಬ ಕಾಳಿದಾಸನೆಂಬ ಹೆಸರಿನ ಜಗ ತ್ಪ್ರಸಿದ್ಧ ಕವಿಯಾದನು ಎಂಬ ಕಥೆಯೊಂದು ಕಾಳಿದಾಸನ ಬಗೆಗೆ ಇರುವುದನ್ನು ಚಾರಿತ್ರಿಕವಾಗಿ ನಂಬುವುದು ಕಷ್ಟವಾದರೂ ಕಥೆಯೇನೋ ಜನಜನಿತ. ಮಹಾಭಕ್ತ ನಾದ ಈ ಕಾಳಿದಾಸನು ತನ್ನ ಕಣ್ಣುಗಳನ್ನು ಮೂರುಸಲ ಕಿತ್ತು ಈಶ್ವರಲಿಂಗಕ್ಕೆ ಅರ್ಪಿಸಿದನಂತೆ. ಈಶ್ವರನು ಇವನ ಭಕ್ತಿಗೆ ಮೆಚ್ಚಿ ಮೂರು ಕೊಳಗ ನವಣೆಯ ಕಾಳು ತುಂಬಿದರೆ ಆಗುವಷ್ಟು ಸಂಖ್ಯೆಯ ಪರಿಮಿತಿಯವರೆಗೆ ಜನರಿಗೆ ಕಣ್ಣು ಕೊಡುವ ಶಕ್ತಿಯನ್ನು ಕೊಟ್ಟನಂತೆ. ವರರುಚಿ, ಕಾಳಿದಾಸ, ಭೋಜ, ಬಾಣ, ಮಯೂರ ಇವರೆಲ್ಲ ಭೋಜನ ಆಸ್ಥಾನದಲ್ಲಿ ಇದ್ದರಂತೆ. ಆದರೆ ಇದೆಲ್ಲ ಚರಿತ್ರೆಯ ವಿಪರ್ಯಾಸವೇ. ಏಕೆಂದರೆ ಇತ್ತೀಚಿನ ಸಂಶೋಧನೆಯ ಪ್ರಕಾರ ಇವರೆಲ್ಲ ಭಿನ್ನ ಭಿನ್ನ ಕಾಲದವರಾಗಿ ದ್ದಾರೆ. ಕಥೆ ಅದೇನೇ ಇರಲಿ. ಪ್ರಸಿದ್ಧ ದಾರ್ಶನಿಕನಾದ ಕಾಳಿದಾಸನು ೪ನೆಯ ಶತಮಾನದಲ್ಲಿ ಜೀವಿಸಿದ್ದು, ಕುಮಾರಸಂಭವ, ರಘುವಂಶ, ಮೇಘದೂತ ಕಾವ್ಯಗಳನ್ನೂ, ಶಾಕುಂತಳ, ವಿಕ್ರಮೋರ್ವಶೀಯ, ಮಾಳವಿಕಾಗ್ನಿಮಿತ್ರಗಳೆಂಬ ಮೂರು ನಾಟಕ ಗಳನ್ನೂ ಬರೆದು ಜಗತ್ಪ್ರಸಿದ್ಧನಾದ ಮಹಾಕವಿ. ಸಾಮಾನ್ಯವಾಗಿ ವೀರಶೈವಕವಿಗಳೆಲ್ಲ ಕಾಳಿದಾಸನನ್ನು ಸ್ತುತಿಸುವುದು ವಾಡಿಕೆ. ಅವನು ಶೈವಕವಿಯೂ ಅದ್ವೈತಿಯೂ ಆಗಿದ್ದನೆನ್ನುವ ಕಾರಣವೊಂದಾದರೆ, ಅವನು ಮಹಾಭಕ್ತನಾಗಿ ಶಿವಕೃಪೆಗೆ ಪಾತ್ರನಾಗಿ ಅನೇಕ ಪವಾಡಗಳನ್ನೆಸಗಿದ ಜನಜನಿತ ಕಥೆಯೂ ಕಾರಣವಾಗಿರಬಹುದು.

೭೪. ಆ. ೧೪. ಪ.೧೬೬ : ಮಲಯರಾಜ : ಮಲಯಾಳದೇಶದಲ್ಲಿಯ ಮಲಯ ವತಿಯೆಂಬ ಪಟ್ಟಣದರಸನಾದ ದೇವರಾಜ ಮತ್ತು ಶಚೀದೇವಿಯರಿಗೆ ಶಿವನ ಪ್ರಸಾದ ಬಲದಿಂದ ಮಲಯರಾಜನೆಂಬ ಮಗನು ಹುಟ್ಟಿದನು. ಆದರೆ ಅವನ ಆಯುಷ್ಯ ಕೇವಲ

೧೬ ವರ್ಷ ಮಾತ್ರ. ರಾಜನು ಅವನಿಗೆ ೧೫ನೆಯ ವರ್ಷದಲ್ಲಿಯೇ ಪಟ್ಟಗಟ್ಟಿದನು. ಆದರೆ ಮಗನು ೧೬ನೆಯ ವಯಸ್ಸಿನಲ್ಲಿ ಮರಣವನ್ನಪ್ಪುವನಲ್ಲಾ ! ಎಂಬ ಚಿಂತೆ ಮಾತಾ ಪಿತೃಗಳಿಗೆ ತುಂಬಿತ್ತು. ಮಗನು ತಂದೆತಾಯಿಯರ ಈ ಚಿಂತೆಗೆ ಕಾರಣ ತಿಳಿದು ತಾನು ಶಿವಧ್ಯಾನದಲ್ಲಿ ಮಗ್ನನಾಗಿ ಶಿವನನ್ನು ಒಲಿಸಿ, ನೂರು ವರ್ಷ ಆಯುಷ್ಯ ಪಡೆದು ತನ್ನ ರಾಜ್ಯದ ಸಮಸ್ತ ಜನ ಪಶುಪಕ್ಷಿ ಕ್ರಿಮಿಕೀಟ ಸಹಿತವಾಗಿ ಶಿವಲೋಕಕ್ಕೆ ಹೋದನು.

೭೫. ಆ. ೧೪. ಪ. ೧೬೬. ಮಲ್ಹಣ : ಕಾಶ್ಮೀರದೇಶದ ಭಾರತೀಪೀಠವೆಂಬ ಪಟ್ಟಣದ ಮಾಣಿಕದೇವಿ ಸುವರ್ಣಭಟ್ಟರ ಮಗ. ಮೊದಮೊದಲು ಅತ್ಯಂತ ಕಾಮುಕ ನಾಗಿದ್ದವನು. ಪ್ರಸಿದ್ಧ ನರ್ತಕಿಯಾಗಿದ್ದ ಪದ್ಮಾವತಿಯ ಮಗಳು 'ಮಲುಹಣಿ' ಯೆಂಬ ವೇಶ್ಯಾಸಂಗವನ್ನು ಮಾಡಿ ತನ್ನ ಐಶ್ವರ್ಯವನ್ನೆಲ್ಲ ಹಾಳುಮಾಡಿಕೊಂಡನು. ಕೊನೆಗೆ ಪದ್ಮಾವತಿಯು ಈತನ ಐಶ್ವರ್ಯವೆಲ್ಲ ಹೋಗಿ ನಿರ್ಗತಿಕನಾದಮೇಲೆ ಮನೆಬಿಟ್ಟು ಓಡಿಸಿದಳು. ಆದರೆ ಮಲುಹಣಿಯನ್ನು ಅಗಲಿರಲಾರದೆ ಸಂಕಟಕ್ಕೊಳಗಾಗಿ, ಒಂದು ದಿನ ಬೆಳಗಿನ ಸಮಯದಲ್ಲಿ ಅವಳ ಧ್ವನಿಯನ್ನಾದರೂ ಕೇಳೋಣವೆಂದು ಅವಳ ಮನೆಯ ಹತ್ತಿರ ನಿಂತುಕೊಂಡಿರಲು, ಮಲುಹಣಿಯು 'ಈ ನನ್ನ ಮೇಲಿನ ನಿನ್ನ ತೀವ್ರಾಸಕ್ತಿ ಯನ್ನು ಶಿವನ ಕಡೆಗಾದರೂ ತಿರುಗಿಸು' ಎಂದು ಹೇಳಿದಮಾತೇ ಉಪದೇಶವಾಗಿ ಅವಳು ಸಮೇತವಾಗಿ 'ವಿಜಯೇಶ್ವರ' ಎಂಬ ಲಿಂಗದ ಬಳಿಗೆ ಹೋಗಿ ಆತನನ್ನು 'ಕಾಂತಾ ಕಚಪ್ರಚಯ ಪುಷ್ಪಸುಗಂಧಿಗಂಧ' ವೆಂದು ಪ್ರಾರಂಭಿಸಿ ಸ್ತೋತ್ರಪದ್ಯಗಳನ್ನು ಹಾಡುತ್ತ ಶಿವಕೃಪೆ ಪಡೆದನು. ಈ ಸ್ತೋತ್ರದಲ್ಲಿ ೩೯ ವೃತ್ತಗಳಿದ್ದು ಅವೆಲ್ಲ ಭಕ್ತಿಪ್ರಚೋದಕ ಳಾಗಿವೆ. ಸಾಮಾನ್ಯವಾಗಿ ವೀರಶೈವ ಗ್ರಂಥಗಳಲ್ಲೆಲ್ಲ ಇವನ ಭಕ್ತಿಯ ಉಲ್ಲೇಖವನ್ನು ಮಾಡಲಾಗಿದೆ.

೭೬. ಆ. ೧೪. ಪ. ೧೬೬. ಬಿಲ್ಹಣ : ಕನ್ನಡನಾಡಿನ ಸುಪ್ರಸಿದ್ಧ ದೊರೆಯಾದ ಕಲ್ಯಾಣದ ಚಾಲುಕ್ಯ ವಿಕ್ರಮನ ಆಸ್ಥಾನದಲ್ಲಿದ್ದ ದೊಡ್ಡ ಶಿವಕವಿ. ಈತನು ಸಂಸ್ಕೃ ತದಲ್ಲಿ 'ವಿಕ್ರಮಾಂಕ ಚರಿತೆ' ಎಂಬ ಶ್ರೇಷ್ಠಗ್ರಂಥವನ್ನು ಬರೆದಿದ್ದಾನೆ. ೧೧ನೆಯ ಶತ ಮಾನದಲ್ಲಿ ಕಲ್ಯಾಣ ಮಹಾನಗರದಲ್ಲಿ ಜೀವಿಸಿದ್ದನು. ಈತನ ವಂಶಜರು ಕಾಶ್ಮೀರ ದೇಶದ ಮಹಾವಿದ್ವಾಂಸರು.

೭೭. ಆ. ೧೪. ಪ. ೧೬೬. ಭೋಜ : ವರರುಚಿ, ಕಾಳಿದಾಸ, ಬಾಣ, ಮಯೂರ ಕವಿಗಳ ಗುಂಪಿನಲ್ಲಿ ಹೇಳಲ್ಪಡುವ ರಾಜನೇ ಈ ಭೋಜರಾಜ. ಈ ಅರಸನ ಬಗೆಗೆ ಅನೇಕ ಪವಾಡಗಳ ಕಥೆಗಳು ಹೇಳಲ್ಪಟ್ಟವೆ.

ಭಲ್ಲುಕಿಪಟ್ಟಣದ ಮಲ್ಲರಾಜಯ್ಯನ ಮಗ. ಜೋಯಿಸರ ಮಾತು ಕೇಳಿ ಹುಟ್ಟಿ ದೊಡನೆಯೇ ಈ ಕೂಸನ್ನು ತಂದೆ ತ್ಯಾಗಮಾಡುತ್ತಾನೆ. ಪುನಃ ವರರುಚಿಯು ಬರೆದಿದ್ದ ಒಂದು ವಾಕ್ಯವನ್ನು ಕಂಡು ತ್ಯಾಗಮಾಡಿದ ಈ ಶಿಶುವನ್ನೇ ಮರಳಿ ಪಡೆದನು. ಅವನು ದೊಡ್ಡವನಾದನು. ಅವನೇ ಭೋಜರಾಜ.

ಒಮ್ಮೆ ಈ ಭೋಜರಾಜ ವೈಹಾಳಿಯಿಂದ ಹಿಂತಿರುಗಿ ಬರುತ್ತಿರುವಾಗ ಓರ್ವ ಗಾಣಿಗರ ಹೆಣ್ಣುಮಗಳು ಏಳು ಉಪ್ಪರಿಗೆಗಳ ಮೇಲೆ ನಿಂತು ಕೆಳಗಿದ್ದವರಿಗೆ ಎಣ್ಣೆ ಮಾರುತ್ತಿದ್ದುದನ್ನು ನೋಡಿ, ರಾಜನು ಮೆಚ್ಚಿ ಆಕೆಯ ಬಯಕೆಗನುಗುಣವಾಗಿ ನಗರಕ್ಕೆ 'ಧಾರಾನಗರ' ಎಂದು ಹೆಸರಿಟ್ಟನಂತೆ. ಈ ರಾಜನು ಒಮ್ಮೆ ತನ್ನ ಆಸ್ಥಾನದಲ್ಲಿ ಕೇಳಿದ ಪ್ರಶ್ನೆಯೊಂದಕ್ಕೆ ಯಾರೂ ಉತ್ತರಿಸದೆ ಇರಲು, ಓರ್ವ ಸೂಳೆಯು ತನ್ನ ಮನೆಯಲ್ಲಿದ್ದ 'ಕಾಳಿದಾಸ' ನಿಂದ ಅದಕ್ಕೆ ಉತ್ತರ ಪಡೆದು, ಆ ಕಾಳಿದಾಸನನ್ನು ಕೊಲ್ಲಿಸಿ, ತಾನೇ ಇದಕ್ಕೆ ಉತ್ತರ ಕಂಡೆನೆಂದು ಹೇಳಿದಳು. ರಾಜನು ಸತ್ಯವನ್ನರಿತು, ಕಾಳಿದಾಸನಿಗಾಗಿ ತನ್ನ ಪ್ರಾಣವನ್ನೇ ಅರ್ಪಿಸಲು ಹೊರಟಾಗ ಯಜ್ಞಪುರುಷನು ಪ್ರತ್ಯಕ್ಷನಾಗಿ ಕಾಳಿದಾಸನನ್ನು ಬದುಕಿಸಿ, ಭೋಜನು ಪ್ರಾಣಾರ್ಪಣೆ ಮಾಡದಂತೆ ತಡೆದನು.

ಭೋಜನು ಒಂದು ಸಲ ವೈಹಾಳಿ ಮುಗಿಸಿಕೊಂಡು ಹಿಂತಿರುಗುವಾಗ ಒಂದು ಹೊಲದಲ್ಲಿ ಓರ್ವ ಬ್ರಾಹ್ಮಣನು ಮಂಚಿಕೆಯ ಮೇಲೆ ಇದ್ದಾಗ ಉದಾರಚರಿತನಾಗಿಯೂ, ಕೆಳಗೆ ಇಳಿದಾಗ ಕೀಳುಬುದ್ಧಿಯುಳ್ಳವನಾಗಿಯೂ ಇರುತ್ತಿರಲು, ರಾಜನು ಆ ಹೊಲವನ್ನು ಕೊಂಡು ಮಂಚಿಗೆಯಿದ್ದ ಕಡೆ ಭೂಮಿಯನ್ನಗಿಯಲು ಅಲ್ಲಿ ವಿಕ್ರಮಾದಿತ್ಯನ ಸಿಂಹಾಸನವು ಸಿಕ್ಕಿತು. ಆ ಸಿಂಹಾಸನದ ಬಲದಿಂದ ಭೋಜ ಅಪಾರ ಐಶ್ವರ್ಯ, ತೇಜಸ್ಸು, ಜ್ಞಾನಾದಿಗಳನ್ನು ಪಡೆದನು.

ಒಂದು ಆಲದಮರದಲ್ಲಿ ೭೦೦ ಭೂತಗಳು ಸೇರಿದ್ದವು. ಅವುಗಳಲ್ಲಿ ಒಂದು ಮಾರಿಯ ಹಬ್ಬಕ್ಕೆ ಆಹಾರವನ್ನು ತರಲು ಹೊರಗೆ ಹೋಯಿತು. ಅದೇ ಸಮಯಕ್ಕೆ ರಾಜಗುರುವಾದ ಉದ್ಭಟದೇವನು ಸತ್ತುಹೋಗಿರಲು, ಆ ಹೆಣವನ್ನು ದಹನ ಮಾಡಲು ಆ ಗಿಡದ ಪಕ್ಕದಲ್ಲಿ ಆತನ ಶಿಷ್ಯೆಯಾದ ಚಿನ್ನಮ್ಮವ್ವೆಯೆಂಬುವಳು ಚಿತೆಯನ್ನೇರ್ಪಡಿಸಿದಳು. ಆ ಹೊಗೆ ತಾಗಿ ಮರದಲ್ಲಿದ್ದ ೬೯೯ ಭೂತಗಳೂ ಸ್ವರ್ಗಕ್ಕೆ ಹೋದವು. ಮಾರಿಹಬ್ಬಕ್ಕೆ ಆಹಾರ ತರಲು ಹೋಗಿದ್ದ ಭೂತವು ಬಂದು ನಡೆದ ವೃತ್ತಾಂತವನ್ನು ತಿಳಿದು, ನನಗೆ ಮಹಾ ಅನ್ಯಾಯವಾಯಿತೆಂದು ಅಳತೊಡಗಿತು. ಭೋಜರಾಜನು ಭೂತದ ಈ ಅಳುವಿಕೆಯನ್ನು ಕಂಡು ಕಾರಣ ಕೇಳಲು ಆ ಭೂತವು "ನಾವು ಏಳುನೂರು ಜನರೂ ಗಂಧರ್ವರು. ದೂರ್ವಾಸಋಷಿಯ ಶಾಪದಿಂದ ಭೂತಗಳಾಗಿ ಹನ್ನೆರಡು ಸಾವಿರ ವರ್ಷಗಳಿಂದಲೂ ಈ ಆಲದಮರದಲ್ಲಿದ್ದೆವು. ಉದ್ಭಟದೇವನ ಹೆಣದ ಹೊಗೆ ತಾಗಿ ಎಲ್ಲರೂ ವಿಶಾಪ ಹೊಂದಿ ಸ್ವರ್ಗಕ್ಕೆ ಹೋದರು ; ನಾನೊಬ್ಬನು ಮಾತ್ರ ಉಳಿದೆ ; ಈ ನನ್ನ ದುರದೃಷ್ಟಕ್ಕಾಗಿ ಅಳುತ್ತಿದ್ದೇನೆ" ಎಂದಿತು. ಈ ರಹಸ್ಯವನ್ನರಿತ ಭೋಜನು ಆಕ್ಷಣವೇ ಅಲ್ಲಿ ಬಿದ್ದಿದ್ದ ಉದ್ಭಟಯ್ಯನ ಎಲುಬುಗಳನ್ನು ಕಲೆಹಾಕಿ, ಅವುಗಳ ಮೇಲೆ ಕಟ್ಟಿಗೆಗಳನ್ನೊಟ್ಟಿ ಬೆಂಕಿ ಹೊತ್ತಿಸಿ ತಾನು ತನ್ನ ಬಂಧುಗಳೊಡನೆ ಮರವನ್ನೇರಿ ಕುಳಿತನು. ಆ ಹೊಗೆ ತಾಗುತ್ತಲೇ ಆ ವೃಕ್ಷ ಸಹಿತ ಕೈಲಾಸಕ್ಕೆ ಹೋದನಂತೆ.

ಹೀಗೆ ಭೋಜನ ಬಗೆಗೆ ಅನೇಕ ಜಾನಪದ ಕಥೆಗಳು ಉಪಲಬ್ಧವಿವೆ. ಸಾಮಾನ್ಯವಾಗಿ ಅನೇಕ ವೀರಶೈವಕವಿಗಳು ಭೋಜನನ್ನು ಸ್ತುತಿಸುತ್ತಾರೆ.

ಷಡಕ್ಷರಕವಿಯಿಂದ ಸ್ತೋತ್ರಮಾಡಿಸಿಕೊಂಡ ಭೋಜನು ಈ ಮೇಲೆ ವಿವರಿಸಿದ ಭೋಜನೋ ಅಥವಾ ಬೇರೆಯೋ ಯೋಚಿಸುವ ಅಂಶವಾಗಿದೆ. "ಸಂಸ್ಕೃತದ ಭಾಷೆಯಲ್ಲಿ ವೀರಶೈವತತ್ತ್ವಪ್ರಕಾಶ ಮತ್ತು ಶತಸೂತ್ರರತ್ನ ಎಂಬ ಗ್ರಂಥಗಳನ್ನು ಬರೆದ 'ಭೋಜನೃಪತಿ'ಯೊಬ್ಬನಿದ್ದಾನೆ. ಈತನ ಕಾಲ ಗೊತ್ತಿಲ್ಲ. ಈತನ ಶತಸೂತ್ರರತ್ನಕ್ಕೆ ಪರ್ವತೇಶ್ವರ ಕೃತ ಟೀಕೆಯಿದೆ. ಈ ಗ್ರಂಥವನ್ನು ೧೯೧೧ರಲ್ಲಿ ಮೈಸೂರಿನಲ್ಲಿ ಕೈ. ಎಸ್. ಆರ್. ಕರಿಬಸವಶಾಸ್ತ್ರಿಗಳು ಪ್ರಕಟಿಸಿದ್ದಾರೆ. ತತ್ತ್ವಪ್ರಕಾಶಿಕೆಯ ಕರ್ತೃವೇ ಶತಸೂತ್ರರತ್ನದ ಕರ್ತೃ ಎಂದು ಊಹಿಸಿದ್ದಾರೆ. ತತ್ತ್ವಪ್ರಕಾಶಿಕೆಗೆ ಅಘೋರ ಶಿವಾಚಾರ್ಯರು ವ್ಯಾಖ್ಯಾನ ಬರೆದಿದ್ದಾರೆ. ಮಹಾವಿದ್ವಾಂಸನಾದ ಈ ಭೋಜನ ಬಗೆಗೇ ಅನೇಕ ಪವಾಡದ ಕಥೆಗಳು ಹುಟ್ಟಿರಬಹುದು. ಇವನ ಆಸ್ಥಾನದಲ್ಲಿಯೇ ಕಾಳಿದಾಸಾದಿ ನವಮಣಿಗಳು ಇದ್ದಿರಬಹುದು.

೭೮. ಆ. ೧೪. ಪ. ೧೬೭. ಉದ್ಭಟ : ವೀರಶೈವ ಕಾವ್ಯಗಳಲ್ಲಿ ಕೀರ್ತಿತನಾಗಿರುವ ಈತನಿಗೆ ಉದ್ಭಟಯ್ಯ, ಕುಮಾರಪಾಲಘೂರ್ಜರ, ಪಾಲಗೂರ್ಜರ, ಕುಮಾರಪಾಲ ಇತ್ಯಾದಿಯಾದ ನಾಮಾಂತರಗಳುಂಟು. ಸಂಸ್ಕೃತಕವಿಯಾದ ಈತನಿಗೆ ಉದ್ಭಟಾಚಾರ್ಯನೆಂದೂ ಕರೆಯಲಾಗಿದೆ. ಕಾಶ್ಮೀರದೇಶದವನಾದ ಇವನ ಗ್ರಂಥ ಕಾವ್ಯಾಲಂಕಾರ ಸಂಗ್ರಹ ಎಂಬುದು. ಇವನು ಕುಮಾರಸಂಭವವನ್ನು ಬರೆದಿರಬೇಕೆಂದೂ ಪ್ರತೀತಿಯಿದೆ. ವೀರಶೈವ ಸಾಹಿತ್ಯಗ್ರಂಥಗಳಾದ ಸೋಮರಾಜನ ಉದ್ಭಟಕಾವ್ಯಗಳೇ ಮೊದಲಾದುವುಗಳಲ್ಲಿ ವರ್ಣಿತನಾಗಿರುವ ಉದ್ಭಟದೇವನು ಇವನೆಯೋ ಅಥವಾ ಭಿನ್ನನೋ ಗೊತ್ತಿಲ್ಲ. ಎಲ್ಲರಂತೆ ಈತನ ಬಗೆಗೂ ಅನೇಕ ಪವಾಡ ಕಥೆಗಳು ಕಂಡು ಬರುತ್ತವೆ ; ಅವುಗಳ ಸೂಕ್ಷ್ಮಪರಿಚಯ ಹೀಗೆ :

ಭಲ್ಲಕೀನಗರದಲ್ಲಿ ಉದ್ಭಟದೇವನು ರಾಜ್ಯಭಾರ ಮಾಡುತ್ತಿದ್ದನು. ಒಮ್ಮೆ ದೇವಲಋಷಿಯ ಶಿಷ್ಯನು ಈ ರಾಜನಲ್ಲಿಗೆ ಬಂದು 'ನಿಘರ್ಜ'ನೆಂಬ ರಾಕ್ಷಸನಿಂದ ತನ್ನ ಗುರುವು ಮಾಡುತ್ತಿರುವ ಯಜ್ಞಕ್ಕೆ ಬಾಧೆ ಬಂದಿದೆಯೆಂದೂ ಅದನ್ನು ನೀನು ಪರಿಹರಿಸಬೇಕೆಂದೂ ಬೇಡಿದನಂತೆ. ಕೂಡಲೆ ರಾಜನು ಹಂಪೆಗೆ ಬಂದು ದೇವಲಋಷಿಯ ಆಶ್ರಮದಲ್ಲಿ ಕೆಲಕಾಲ ತಂಗಿದ್ದು, ರಾಕ್ಷಸನನ್ನು ಸಂಹರಿಸಿ ಯಜ್ಞವು ಸಾಂಗವಾಗುವ ಹಾಗೆ ಮಾಡಿದನಂತೆ. ಈ ಋಷಿಯ ಆಶ್ರಮದಲ್ಲಿರುವಾಗಲೇ ಒಮ್ಮೆ ಬೇಡನೊಬ್ಬನು ತೆಗೆದುಕೊಂಡು ಹೋಗುತ್ತಿದ್ದ ಗಿಳಿಯನ್ನು ಅವನ ಕೈಯಿಂದ ಬಿಡಿಸಿ ಪ್ರಾಣದಾನ ಮಾಡಿದನು. ಆ ಗಿಳಿ ಶಾಪಗ್ರಸ್ತ ಋಷಿಕುಮಾರನು. 'ಸೌಂದರಿ' ಎಂಬ ರಾಜಕುಮಾರಿಗೆ ವರಾನ್ವೇಷಣೆಗಾಗಿ ಹೊರಟು ದಾರಿಯಲ್ಲಿ ಬೇಡನ ಕೈಗೆ ಸಿಕ್ಕಿಬಿದ್ದಿತ್ತು. ಉದ್ಭಟದೇವನಿಂದ ಪ್ರಾಣದಾನ ಪಡೆದಮೇಲೆ ಗಿಳಿಯು ಈತನ ಲಕ್ಷಣಗಳನ್ನು ನೋಡಿ, ಈತನೆ

ಸೌಂದರಿಗೆ ತಕ್ಕ ವರನೆಂದು ನಿಷ್ಕರ್ಷಿಸಿ, ವಿವಾಹವೇರ್ಪಡುವಂತೆ ಮಾಡಿತು. ವಿವಾಹದ ಓಕುಳಿಯಾಡುವ ದಿನ ಓಕುಳಿಯ ನೀರಿನಲ್ಲಿ ನೆನೆದ ಗಿಳಿ ಶಾಪವಿಮೋಚನೆಗೊಂಡು ಪುನಃ ಋಷಿಕುಮಾರನಾಗಿ ತನ್ನ ಆಶ್ರಮಕ್ಕೆ ಹಿಂತಿರುಗಿತು.

ಉದ್ಭಟದೇವನೊಮ್ಮೆ ತನ್ನ ಸತಿಯೊಡನೆ ಉಂಡುಪವಾಸಿ, ಬಳಸಿ ಬ್ರಹ್ಮಚಾರಿಯಂತೆ ಇದ್ದನು. ಒಮ್ಮೆ ಇವಳೊಡನೆ ಪಗಡೆಯಾಡುವಾಗ ಆಕಾಶಮಾರ್ಗದಲ್ಲಿ ಕೈಲಾಸಕ್ಕೆ ಹೋಗುತ್ತಿದ್ದ ಓಹಿಲಯ್ಯನನ್ನು ನೋಡಿ ನಕ್ಕನು. ಸೌಂದರಿಯು ಆ ಓಹಿಲಯ್ಯನ ಕಥೆಯನ್ನು ಗಂಡನಿಂದ ಕೇಳಿದಳು. ಆಶ್ಚರ್ಯಗೊಂಡು ಅವನಿಗೆ ನಮಸ್ಕರಿಸಿದಳು. ಉದ್ಭಟಯ್ಯನು ಅದೇನು ಮಹಾಕಾರ್ಯ! ಎಂದು ಅನೇಕ ಶಿವಭಕ್ತರು ಕೈಲಾಸಕ್ಕೆ ಹೋದ ಕಥೆಗಳನ್ನು ವಿವರಿಸಿ, ಕೊನೆಗೆ ತಾನು ತನ್ನ ಪಟ್ಟಣ ಸಹಿತವಾಗಿ ಕೈಲಾಸಕ್ಕೆ ಹೋದನು. (ಈ ಕಥೆಯನ್ನೇ ಮನಸ್ಸಿನಲ್ಲಿಟ್ಟುಕೊಂಡು ಷಡಕ್ಷರ ಕವಿಯು ಕೈಲಾಸದ ಶಿವನ ಆಸ್ಥಾನದಲ್ಲಿ ಉದ್ಭಟದೇವನಿದ್ದಾನೆಂದು ಹೇಳುವನೆಂದು ಭಾವಿಸಬೇಕು).

## ೨. ಲೋಕೋಕ್ತಿಗಳು

೧. ಕಸನವರನುಂ ಕಳೆದು ಕಸಮುನಾಂತವೊಲಕ್ಕುಂ — ಆ ೧. ಪ. ೨೧

೨. ರನ್ನವೊಂದಂ ತಳೆದಹಿ ರತ್ನಾಕರಕ್ಕೆ ಸರಿವಂದಪುದೇ — ೧–೨೪

೩. ರತಿವಿಲಾಸ ರಮಣೀ ಸಮರತಿಯಂ ಕ್ಲೀಬರ್ಕಳೆಂತುಮೇನಱಿದಪರೇ — ೧–೨೬

೪. ಮಂದೇಹರ ಭಯದಿಂದರವಿಂದಸಖಂ ನಿಜಮಯೂಖನಂ ಪಸರಿಸನೇ — ೧–೩೧

೫. ಪೆಱರರ್ಥಕೆ ಕೈದುಡುಕದಿರೆ ಕಿಱಿಯುಸಿರಿ ಪಿರಿದೆನಿಕ್ಕುಂ — ೧–೩೨

೬. ಸ್ಥಿತಿಯೊಳ್ ಸುಜನಂ ಸುಖದಂ ; ಮೃತಿಯೊಳ್ ಕುಜನಂ ಸುಖದಂ — ೧–೨೯

೭. ರಮಣೀವಿಲಸಿತ ರತಿರಸ ರಸಿಕತೆ ತಲೆದೋರ್ಪುದು ತಾನೆ ಕಲಿಸಲೇಂ ಬಂದಪುವೇ ? — ೧–೩೦

೮. ಎರವಿನ ಪಚ್ಚಮುಂ ತಳೆದಿದಕ್ಕೆಣೆವಾರದಿದೆಂದು ಲೋಗರಾಭರಣಮ ನೇಳಿಪಂತೆ — ೧–೩೬

೯. ಅಬ್ಧಿಯೊಳಿಲ್ಲದ ವಿಷಮುಂ ಮಹಾಹಿಯೇಂ ತೋಱದೆ ಪೇಳ್ — ೧–೪೨

೧೦. ರವಿಯಂ ಮುಸುಳಿಪ ಜಳಧರನುದಱಂತೆ ಜಗಮನೇಂ ಬೆಳಗುಗುಮೇ ? — ೧–೪೮

೧೧. ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ ? — ೧–೯೭

೧೨ ಸತ್ವಶಾಲಿ ಪಗೆಗೇಂ ಮಱೆವೊಕ್ಕನನೀಯಲಾರ್ಪನೇ ? — ೧–೯೯

೧೩. ತನುಭವನಿಲ್ಲದ ಭಾಗ್ಯಂ ಎಂತುಮೇಂ ಮೆಱೆದಪುದೇ ? — ೩–೪೭

೧೪. ಅರ್ಭಕನಾಡದಂಗಳಂ ಮಂಜುಳಮೇ ? — ೩–೭೪

೧೫. ಪತಿಯಿಂ ಸುತನಲ್ತೆ ವೆಗ್ಗಳಂ ? — ೫–೬೫

೧೬. ವೃಥಾನ್ಯ ಪರಿಭಂಗಂ ಭಂಗಮಂ ಸಾರ್ಚದೇ ? — ೫–೭೩

೧೭. ಶುದ್ಧರಲ್ಲಿ ನಿಜದೋಷಮನೊಂದಿಸೆ ಕೆಟ್ಟುಪೋಗರೇ ? — ೫–೭೭

೧೮. ಪರನಿರ್ನಿಮಿತ್ತಹನನೋದ್ಯಮಮಾತ್ಮವಿನಾಶಕಾರಣಂ — ೫–೧೦೩

೧೯. ಸದ್ವಿಧಿಯುಕ್ತರನಾರೊ ಕೊಂದಪರ್ ? — ೫–೧೦೪

೨೦. ಅತಿಚಪಳರ್ಗಲ್ಲಿ ಗುಣಮುಱಿಸುವುದೇ ? — ೬–೪೮

೨೧ ಅನ್ಯರನೊಂದಿರೆ ಶದ್ಧರ್ಮಂ ಧರಿತ್ರಿಯೊಳ್ ದೊರೆಕೊಳದೇ ? — ೬–೪೯

೨೨. ಗತಮಿತ್ರ ತೇಜದೊಳಾದಾ ರಾಜಂಗಮೇಂ ಕ್ಷಯಂ ಸಮನಿಸದೇ ! — ೬–೧೨೮

೨೩. ಕಂತುವಿಗೆ ರತಿಕೃತಿ ಚತುರತೆಯನೊಸೆದು ಪೇಳ್ವವೊಲ್ — ೬–೧೩೦

೨೪. ಇಷ್ಟಮನಿಳೆಯೊಳ್ತ್ತಿಳಿ ದೀರ್ಘಸೂತ್ರನೇಂ ಪಡೆದಪನೇ ? — ೭–೪೧

೨೫. ಶಶಿನೌಳಿಯು ಮ್ಗಾಯೆಯುನದಾರೋ ಮಿಾರಲ್ಬಲ್ಲರ್ ! — ೬–೬೧

೨೬. ವಿಮಳರ್ಗಧೀನರಾಗದರೊಳರೇ ? ೮-೪೨

೨೭. ಮಲಿನತರಂ ಬರೆ ಶುಚಿ ಸುವೃತ್ತನೇನಿರ್ದಪನೇ ? ೮-೯೭

೨೮. ಆಶ್ರಯನಾಶನಾಶ್ರಯದಿನಿಷ್ಟಮೇಂ ಸಮನಿಪುದೇ ? ೯-೧೨

೨೯. ಕಾಲಮಹಿಮೆಯೊಳಂಗದೇನನೆಸಗದೊ ಜಗದೊಳ್ ? ೯-೧೩

೩೦. ಮರೆವುಗೆ ಸುವೃತ್ತರೇಗೆಯ್ಯರೋ ಪೇಳ್ ೯-೧೪

೩೧. ಮಹೀಜನಮಾತ್ಮಸಮಕೆ ಮಾಳ್ಪುದು ಹಿತಮಂ ೯-೨೦

೩೨. ಗತಶ್ರೀಕನಪ್ಪನಂ ಸೇವಿಸರಾರ್ ೯-೬೫

೩೩. ನಿರ್ಮಲರೆಡೆಗೈದಿದೊಡೆ ಮಾಡರೇ ಪರಹಿತಮಂ ೯-೬೮

೩೪. ಮಧುಪ್ರಿಯರುಜ್ವಲಸೇವ್ಯರಕ್ಕುಮೆ ? ೧೦-೩೦

೩೫. ಕಾಲವಶಮನಾರ್ಕಳಿದಪರೋ ! ೧೧-೧೨

೩೬. ಮುಡಿ ಕಡುಬಿಣ್ಪಿದೆಂದು ಸೆಡೆವಳ್ ಮುಡಿದಪ್ಪಳೆ ಪುಷ್ಪಮಾಲೆಯಂ? ೧೧-೧೧೧

೩೭. ಸದ್ಗುಣಹೀನರೊಳ್ ನೆರೆವ ಕೂಟಂ ನಂಜಿನೂಟಂ ೧೧-೧೫೦

೩೮. ಪೇರಂ ತೆತ್ತವರ್ ಸುಂಕಮೀವರೇ ? ೧೧-೧೫೮

೩೯. ಶೀರ್ಷಂಗುಡೆ ಕಣ್ಗಳೇಂ ಪೊಱಗೆ ? ೧೧-೧೫೮

೪೦. ಪರೀಕ್ಷಿಸರ್ ಗುಣಗಳಾಶ್ರಿತರೊಳ್ ಅವಗುಣಮಂ ೧೨-೨೦

೪೧. ವಸುವಿತ್ತೊಡೆ ಸರಿ ಮೃದು ಕಠಿಣರ್ಕಳಿರ್ವರುಂ ಗಣಿಕೆಯರೊಳ್ ೧೨-೨೭

೪೨. ಚಂದ್ರಧರಾರ್ಚಕರ್ ಸುತಸಹೋದರರೆಂಬರೆ ಸಾಪರಾಧರಂ ? ೧೩-೭

೪೩. ವಿನಯಮನಾಳ್ದು ಬಾಳ್ದವಂಗೆಣೆಯುಂಟೇ ? ೧೩-೧೦

೪೪. ಪರಗತಿ ವಿಲಯಾಸ್ಪದಮಂ ಕಾರ್ಯಮನುದಾರಮತಿ ನೆಗಳ್ದಪನೇ ? ೧೩-೧೨

೪೫. ಕರಣೀಯಮಿಷ್ಟಕರಮನಕರಣೀಯಮನಿಷ್ಟಕರಣಂ ೧೩-೧೩

೪೬. ಬಿಡದೆಸಪ ಕಜ್ಜಮಾವುದನಡಿನಡಿಗೆ ಆಪ್ತರ್ಕಳೊಳ್ ವಿಚಾರಿಸಿ ಮಾಳ್ಪವಂಗೆಡರುಂಟೇ? ೧೩-೧೪

೪೭. ಭುವನಾಕ್ಷಿಗಡಸುವ ಘನತಿಮಿರ ಭುವನದಕ್ಷಿಯಂ ಮುಸುಕುಗುಮೇ? ೧೩-೧೭

೪೮. ಆಪ್ತನೊಳ್ ವಿಚಾರಿಪುದಾತ್ಮಹಿತಾಹಿತಂಗಳಂ ೧೩-೨೧

೪೯. ಸಂದೆಗಮೆ ಸತ್ವರ ಕಾರ್ಯಕೆ ವಿಘ್ನಮಲ್ಲವೇ ? ೧೩-೧೩೨

೫೦. ಶಿವನೊಲವದೇನಂ ಕಳೆಯದು ? ೧೩-೧೫೧

೫೧. ಅಮರ್ದುಂಡರ ಬಾಯ್ಗಂಬಿಲದ ರಸಮದೇಂ ಸೊಗಯಿಕುಮೇ ? ೧೪-೧೭೨

## ೩. ಪಾರಿಭಾಷಿಕ ವಿಶೇಷಾರ್ಥಗಳು

೧. ಅಕ್ಷ : i) ತ್ವಕ್, ಚಕ್ಷು, ಶ್ರೋತ್ರ, ಜಿಹ್ವೆ, ಘ್ರಾಣಂಗಳೆಂಬ ಐದು ಜ್ಞಾನೇಂದ್ರಿಯಗಳು. ii) ವಾಕ್, ಕಾಲು, ಕೈ, ಗುದ, ಗುಹ್ಯಗಳೆಂಬ ಐದು ಕರ್ಮೇಂದ್ರಿಯಗಳು.

೨. ಅರಿಷಡ್ವರ್ಗ : ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ.

೩. ಅಷ್ಟದಿಗ್ಗಜ : ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ.

೪. ಅಷ್ಟದಿಗ್ಗಜ ಪತ್ನಿಯರು : ಅಭ್ರಮು, ಕಪಿಲೆ, ಪಿಂಗಲೆ, ಅನುಪಮೆ, ತಾಮ್ರಪರ್ಣಿ, ಶುಭ್ರದಂತಿ, ಅಂಗನೆ, ಅಂಜನಾವತಿ.

೫. ಅಷ್ಟದಿಕ್ಪಾಲ : ಪೂರ್ವದಿಕ್–ಇಂದ್ರ ; ಅಗ್ನಿದಿಕ್–ಅಗ್ನಿ, ದಕ್ಷಿಣದಿಕ್–ಯಮ ; ನೈಋತ್ಯದಿಕ್–ನಿಋತಿ; ಪಶ್ಚಿಮದಿಕ್–ವರುಣ; ವಾಯುವ್ಯದಿಕ್–ವಾಯು; ಉತ್ತರದಿಕ್–ಕುಬೇರ, ಈಶಾನ್ಯದಿಕ್–ಈಶಾನ.

೬. ಅಷ್ಟಮದ : ಧನಮದ, ರಾಜ್ಯಮದ, ತನುಜಮದ, ಯುವತಿಮದ, ಅನ್ನಮದ, ರೂಪಮದ, ಯೌವನಮದ, ಕುಲಮದ.

೭. ಅಷ್ಟಾಂಗಯೋಗ : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ.

೮. ಅಷ್ಟಾದಶವರ್ಣನೆ : ವಾರಿಧಿ (ಸಮುದ್ರ), ಪರ್ವತ, ಪಟ್ಟಣ, ಅಧೀಶ್ವರ (ರಾಜ), ಚಂದ್ರ, ಸೂರ್ಯ, ಉದ್ಯಾನ, ಜಲಕ್ರೀಡೆ, ಮಧುಪಾನ, ಪುತ್ರೋತ್ಸವ, ಸುರತಕ್ರೀಡೆ, ವಿಪ್ರಲಂಭ, ಲಲನೆ, ಕಲ್ಯಾಣ, ಮಂತ್ರ, ದೂತಾಗಮನ, ಯುದ್ಧ ಪ್ರಯಾಣ.

೯. ಆಗಮ : (ಮುಖ್ಯವಾಗಿ ಇಪ್ಪತ್ತೆಂಟು). ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮತ್, ಸುಪ್ರಬೋಧ, ವಿಜಯ, ನಿಶ್ವಾಸ, ಸ್ವಯಂಭು, ಅನಲ, ವೀರ, ರೌರವ, ಮುಕುಟ, ವಿಮಲ, ಚಂದ್ರ, ಬಿಂಬ, ಪ್ರೋದ್ಗೀತ, ಲಲಿತ, ಸಿದ್ಧಾಂತ, ಶಾಂತ, ಸರ್ವೋತ್ತರ, ಪಾರಮೇಶ್ವರ, ಕಿರಣ, ವಾತುಲ–ಇತ್ಯಾದಿಗಳು.

೧೦. ಈಷಣತ್ರಯ : ಪುತ್ರೇಷಣ, ವಿತ್ತೇಷಣ, ಧಾರೇಷಣ.

೧೧. ಉಪಾಯ : (ಚತುರೋಪಾಯಗಳು) ಸಾಮೋಪಾಯ, ದಾನೋಪಾಯ, ಭೇದೋಪಾಯ, ದಂಡೋಪಾಯ.

೧೨. ಗುಣಗಳು : (ಪಂಚಸಾದಾಖ್ಯಗಳು) ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು.

೧೩. ಗುಣತ್ರಯ : ಸತ್ವ, ರಜ, ತಮಗಳು.

೧೪. ಗುಣಗಳು : (ಷಡ್ಗುಣಗಳು). ಸತ್ಕುಲೀನತ್ವ, ಉಜ್ವಲತ್ವ, ಮಹಾಭಾಗ್ಯತ್ವ, ಉದಾರತೆ, ಧಾರ್ಮಿಕ, ತೇಜೋಗುಣಗಳು.

೧೫. ಗುಣಸಪ್ತಕ : ಮಹಾಕುಲೀನತ್ವ, ಔಜ್ವಲ್ಯ, ಮಹಾಭಾಗ್ಯ, ಉದಾರತೆ, ತೇಜಸ್ವಿತೆ, ವಿದಗ್ಧತ್ವ, ಧಾರ್ಮಿಕತ್ವಗಳು.

೧೬. ಚತುರಾಚಾರ್ಯರು : ರೇಣುಕಾಚಾರ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ಮರುಳಾರಾಧ್ಯ.

೧೭. ತ್ರಿತಾಪ (ತಾಪತ್ರಯ) : ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ (ಆಧ್ಯಾತ್ಮಿಕ–ತನ್ನಿಂದಾದ ಕೇಡು, ಆದಿಭೌತಿಕ–ಇತರ ಪ್ರಾಣಿಗಳಿಂದಾದ ಕೇಡು ; ಆದಿದೈವಿಕ—ದೇವತಾ ಸಂಬಂಧವಾದ ಕೇಡು.)

೧೮. ತಂತ್ರಗಳು : ವಾಮಕೇಶ್ವರತಂತ್ರ; ಮೇರುತಂತ್ರ, ಕಾತ್ಯಾಯಿನೀತಂತ್ರ–ಇವೇ ಮೊದಲಾದ ಅರವತ್ತುನಾಲ್ಕು ತಂತ್ರಗಳು.

೧೯. ದಶಮಾವಸ್ಥೆ (ಮನ್ಮಥದಶಮಾವಸ್ಥೆ) : ದೃಕ್, ಮನಸ್ಸಂಗ, ಸಂಕಲ್ಪ, ಜಾಗರ, ಕೃಶತ್ವ, ಅರತಿ, ಹ್ರೀ, ತ್ಯಾಗ, ಉನ್ಮಾದ, ಮೂರ್ಛೆ. (–ಇವು ಹತ್ತು ದಶಮಾವಸ್ಥೆ ; ಈ ಅವಸ್ಥೆಗಳು ಮೀರಿದಾಗ ಮರಣ.)

೨೦. ನವರತ್ನ : ವಜ್ರ, ವೈಡೂರ್ಯ, ಗೋಮೇಧಿಕ, ಹವಳ, ಮುತ್ತು, ಪಚ್ಚೆ, ಪದ್ಮರಾಗ, ಪುಷ್ಯರಾಗ, ನೀಲ–ಇತ್ಯಾದಿ.

೨೧. ನವನಿಧಿ : ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ವರ–ಇತ್ಯಾದಿ.

೨೨. ನವಗ್ರಹ : ಸೂರ್ಯ, ಚಂದ್ರ, ಬುಧ, ಅಂಗಾರಕ, ಗುರು, ಶುಕ್ರ, ಶನಿ, ರಾಹು, ಕೇತು–ಇತ್ಯಾದಿ.

೨೩. ನವರಸ : ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಬೀಭತ್ಸ, ರೌದ್ರ, ಶಾಂತ (ಶೃಂಗಾರವರ್ಣನೆಯಲ್ಲಿ ಬರುವ ಅನೇಕ ವಿಷಯಗಳು. ಆಶ್ವಾಸ–೧೧)

೨೪. ನಾಯಕಾದಿ ಭೇದ : i) ಮಹಾನಾಯಕರು : ಧೀರೋದಾತ್ತ, ಧೀರೋದ್ಧತ, ಧೀರಲಲಿತ, ಧೀರಶಾಂತ. ii) ಶೃಂಗಾರನಾಯಕರು : ಅನುಕೂಲ, ದಕ್ಷ, ಶಠ, ದುಷ್ಟ. iii) ಪ್ರಮಾಣ ಪುರುಷರು : ಶಶ, ವೃಷ, ಹಯ. vi) ರತಿಪರಿಣತರು : ಮಂದವೇಗ, ಮಧ್ಯವೇಗ, ಚಂಡವೇಗ. v) ಭೋಗಸಖರು : ವಿಟ, ವಿದೂಷಕ, ಪೀಠಮರ್ದನ, ನಾಗರಿಕ,

೩೫. ನಾಯಿಕಾಭೇದ : i) ಅವಸ್ಥಾಕಾಮಿನಿಯರು : ಸ್ವಾಧೀನಪತ್ನಿಕೆ, ಖಂಡಿತೆ, ವಿಪ್ರಲಂಭೆ, ಅಭಿಸಾರಿಕೆ, ವಾಸಕಸಜ್ಜಿಕೆ, ಗತಭರ್ತಾರಿಕೆ, ಅಭಿಸಂಧಿಕೆ, ಸಮುತ್ಕೈ-ಎಂಬ ಎಂಟು ರೀತಿಯ ಸ್ತ್ರೀಯರು ii) ದಶಕೇಳೀಭಾವ ವಿಲಾಸಿನಿಯರು : ಮೊಷ್ಟಾಯಿತೆ. ಬಿಬ್ಬೋಕೆ, ಲಲಿತೆ, ಲೀಲೆ, ಕಿಳಕಿಂಚಿತೆ, ವಿಚ್ಛಿತ್ತೆ, ವಿಳಾಸಿ, ವಿಹೃತೆ, ವಿಭ್ರಮೆ, ಕುಟ್ಟಮತೆ ಎಂಬ ಹತ್ತು ಪ್ರಕಾರದ ಸ್ತ್ರೀಯರು iii) ಜಾತಕಸ್ತ್ರೀಯರು : ಹಸ್ತಿನಿ, ಚಿತ್ತಿನಿ, ಶಂಖಿನಿ, ಪದ್ಮಿನಿಯರೆಂದು ನಾಲ್ಕು ಪ್ರಕಾರ. iv) ಪ್ರಮಾಣ ಪರಿಮಿತಪ್ರಮದೆಯರು : ಹರಿಣಿ, ಅಶ್ವಿನಿ, ಇಭಯಿತೆಯರು. v) ರತಿಭೇದಕಾಂತೆಯರು : ಮಂದವೇಗಿ, ಮಧ್ಯವೇಗಿ, ಚಂಡವೇಗಿನಿಯರು. vi) ದ್ವಾದಶಸತ್ವ ಸತಿಯರು : ದೇವಸತ್ವ, ಯಕ್ಷಸತ್ವ, ಗಂಧರ್ವಸತ್ವ, ನರಸತ್ವ, ಕಿನ್ನರಸತ್ವ, ಕಾಕಸತ್ವ, ವಾನರಸತ್ವ, ಮುನಿಸತ್ವ, ಪಿಶಾಚಸತ್ವ, ರಾಕ್ಷಸಸತ್ವ, ಕಿನ್ನರಸತ್ವ, ಖಚರಸತ್ವವುಳ್ಳವರು.

೩೬. ಸಖೀಪ್ರಮುಖ ಭೇದ : i) ಚತುರ್ವಿಧ ಸಖಿಯರು : ಅಭಿಸಾರಿಕೆ, ಚತುರಿಕೆ, ಸಹಸಂಚಾರಿಕೆ, ದೂತಿಕೆ. ii) ಪ್ರೀತಿತತ್ಪರ ಸಖಿಯರು : ಅಭಿಮಾನ ಪ್ರೀತಿ, ವಿಭವಪ್ರೀತಿ, ಸದೃಶಪ್ರೀತಿ, ವಿಷಯಪ್ರೀತಿ ಸಖಿಯರು iii) ಮೋಹಚತುಷ್ಟಯ ಸಖಿಯರು : ಲಜ್ಜಾಮೋಹ, ವಿಭವಮೋಹ, ಕರುಣಮೋಹ, ನಿಜಮೋಹ ಸಖಿಯರು iv) ಉತ್ತಮ ಮಧ್ಯಮಾಧಮ ಮಹಿಮೆಯರು : ಕೂರ್ಮಮೋಹ, ಮತ್ಸ್ಯಮೋಹ, ಮೃಗಮೋಹವುಳ್ಳವರು.

೩೭. ಆಲಿಂಗನ ಚುಂಬನಾದಿಗಳು : i) ಹನ್ನೆರಡು ಬಗೆಯ ಆಲಿಂಗನಗಳು : ಪುಷ್ಕರ, ವಿವಿಧಕ, ದೃಷ್ಟಕ, ಪೀಡನ, ವೃಕ್ಷಾರೋಹಣ, ಲತಾವೇಷ್ಟನ, ತಿಲಕಂಡು ಲಾಖ್ಯ, ಕ್ಷೀರನೀರ, ಊರೂಪಗೂಹ, ಜಘನೋಪಗೂಹ, ಸ್ತನಾಶ್ಲೇಷ, ಲಲಾಟಿಕಗಳು. ii) ಚುಂಬನ ಭೇದ : ನಿಮಿತ್ತಕ, ಸಂಘಟಿಕ, ಸ್ಫುರಿತಕ, ಭ್ರಾಂತಕ, ತಿರ್ಯಕ್ಕು, ಅತಿ ತೃಷ್ಟಕ, ಉತ್ತರ, ಸಂಘಟ್ಟಕ, ಜಿಹ್ವಾಮೇಳನ, ಜಿಹ್ವಿಕೆ, ಅಧಿಕ, ಜಿಹ್ವಾಯೋಗಗಳೆಂದು ಹನ್ನೆರಡು ಬಗೆಯ ಚುಂಬನ ಸಂಭ್ರಮಗಳು.

೩೮. ದಂತಕ್ಷತ ನಖಕ್ಷತ ಭೇದ : i) ದಂತಕ್ಷತಗಳು : ರಾಗೋಪಗೂಢ, ಅಂಕುಲಯಾನಕ, ಪ್ರವಾಳಮಣಿ, ಮಣಿಮಾಲೆ, ಖಂಡಾಭ್ರಕ, ಮಂಡಲಾಕೃತಿ, ಕ್ರೋಧ ಚರ್ವಿತ, ವರಾಹಚರ್ವಿತ ಎಂಬ ಎಂಟು ಬಗೆಯ ದಂತಕ್ಷತಗಳು. ii) ನಖಕ್ಷತಗಳು: ಪಂಚನಖಯೋಗ, ದ್ವಂದ್ವಯೋಗ, ಅರ್ಧಚಂದ್ರಕ, ಮಂಡಲ, ಮಯೂರಪಥ, ಶತಪ್ಲುತ, ಉತ್ಪಳಗಳೆಂಬ ಏಳುಬಗೆಯ ನಖಕ್ಷತಭೇದಗಳು iii) ನಾಡೀಮರ್ಮಜ್ಞತೆ: ಮದನಾಂದೋಳನ,ಮದನಛತ್ರ, ಪೂರ್ಣಚಂದ್ರಕ.

೩೯. ರತಿಚತುರರು : i) ರತಿಪರಿಣತರು : ಶಯ್ಯಾತೋರುಕರಣ, ವಿಕೃತೋರು ಕರಣ, ತಿರ್ಯಕ್ಕರಣ, ಸ್ಥಿತಿಕರಣ, ಉದಾನಕರೆಂಬವರು. ii) ರತಿಕಲಾಕೌಶಲರು :

